
ಋಗ್ವೇದಸಂಹಿತಾ
ಭಾಗ—೩೪
ನಿರುಕ್ತ ಪೂರ್ವಷಟ್ಕಂ
ಮೊದಲನೆಯ ಭಾಗವು

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೩೪

# RIG-VEDA

ಋಗ್ವೇದಕ್ಕೆ ಸಂಬಂಧಪಟ್ಟ ಷಡಂಗಗಳಲ್ಲಿ ಅತಿಮುಖ್ಯವೂ ಮತ್ತು ಪ್ರಾಚೀನವೂ ಆದ

ಯಾಸ್ಕಮಹರ್ಷಿವಿರಚಿತಂ

# ನಿರುಕ್ತಂ

(ಕರ್ಣಾಟಕ ಅರ್ಥಾನುವಾದವಿವರಣೆಗಳೊಡನೆ)

ಭಾಗ—೩೪

॥ ಪೂರ್ವಷಟ್ಕಂ ॥

ಮೊದಲನೆಯ ಭಾಗವು





*Translated with Exhaustive Critical Notes & Explanations*

*by*

Asthana Mahavidwan

**H. P. VENKATA RAO**

Editor



---

*Printed at*
SREE VINAYAK PRINTING WORKS, MYSORE.
1961

# ಪೀಠಿಕೆ

ನಿರುಕ್ತವೆಂಬ ಈ ಗ್ರಂಥವು ವೇದಗಳಿಗೆ ಸಂಬಂಧಪಟ್ಟ ಷಡಂಗಗಳಲ್ಲಿ ಮುಖ್ಯವಾದುದೂ, ಪ್ರಾಚೀನವಾದುದೂ ಎಂದು ಪರಿಗಣಿಸಲ್ಪಟ್ಟಿದೆ. ವೇದಗಳು ಅತಿಪ್ರಾಚೀನಗ್ರಂಥಗಳಾದ್ದರಿಂದ ಅವುಗಳನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧನಗ್ರಂಥಗಳು ಅವಶ್ಯಕವು. ವೇದಗಳು ಅನೇಕಸಾವಿರವರ್ಷಗಳ ಪ್ರಾಚೀನ ಗ್ರಂಥಗಳಾದ್ದರಿಂದ ಅವುಗಳಲ್ಲಿ–ಅದರಲ್ಲಿಯೂ ಋಗ್ವೇದದಲ್ಲಿ ಬಳಸಲಾಗಿರುವ ಭಾಷೆಯೂ, ವಿಷಯಗಳೂ ಬಹಳ ಕ್ಲಿಷ್ಟವೂ ಈಗಿನ ಎಂದರೆ ಆಧುನಿಕಸಂಸ್ಕೃತಭಾಷೆಯಲ್ಲಿ ಶಬ್ದಗಳ ಪ್ರಯೋಗದಿಂದ ಕೂಡಿರುವುದೂ ಆದುದರಿಂದ ಸಾಮಾನ್ಯಜನರಿಗೆ–ಆಧುನಿಕಸಂಸ್ಕೃತ ಭಾಷೆಯಲ್ಲಿ ಪರಿಣತರಾದ ವಿದ್ವಾಂಸರಿಗೂ ಸಹ–ತಿಳಿದುಕೊಳ್ಳಲು ಕಷ್ಟಸಾಧ್ಯವಾಗಿರುವುದು. ಆದುದರಿಂದ. ಕ್ರಿ.ಪೂ ೨೦೦೦ ವರ್ಷಗಳಿಗಿಂತಲೂ ಪೂರ್ವದಲ್ಲಿಯೇ ವೇದಾರ್ಥವಿಚಾರದಲ್ಲಿ ಭಿನ್ನಾಭಿಪ್ರಾಯಗಳೂ, ಸಂಶಯಗಳೂ ಉದ್ಭವಿಸಿದವು. ಆ ಹಿಂದಿನ ಕಾಲದಲ್ಲಿ ವೇದಗಳಲ್ಲಿ ಬಳಸಲಾಗಿರುವ ಶಬ್ದಗಳೂ ಭಾಷೆಯೂ ಜನರಿಗೆ ತಕ್ಕಮಟ್ಟಿಗೆ ತಿಳಿದುಕೊಳ್ಳಲು ಸಾಧ್ಯವಾಗಿದ್ದರೂ ಈಚೀಚಿಗೆ ಸಂಸ್ಕೃತಭಾಷೆಯು ದುರವಗಾಹನಾಗುತ್ತ ಬರುತ್ತಿರುವುದರಿಂದ ಯಾಸ್ಕರೆಂಬ ಮಹರ್ಷಿಗಳು ವೇದಗಳ ಸರಿಯಾದ ಅರ್ಥವನ್ನು ತಿಳಿಯಲು ಸಾಧಕವಾದ ನಿರುಕ್ತವೆಂಬ ಗ್ರಂಥವನ್ನು ರಚಿಸಿದರು. ಈ ಯಾಸ್ಕರಿಗಿಂತ ಹಿಂದೆ ಎಂದರೆ ಎಷ್ಟೋ ಶತಮಾನಗಳಲ್ಲಿ ಅನೇಕಮಹರ್ಷಿಗಳೂ ವೇದಪಾರಂಗತರೂ ನಿರುಕ್ತಗ್ರಂಥಕ್ಕೆ ಹೋಲುವ ಅನೇಕಗ್ರಂಥಗಳನ್ನು ರಚಿಸಿದಾರೆ. ಆದರೆ ಆ ಗ್ರಂಥಗಳು ಅತಿವಿಸ್ತಾರವಾಗಿರಲಿಲ್ಲ ಮತ್ತು ಈಗ ಸಂಪೂರ್ಣವಾಗಿ ಲುಪ್ತವಾಗಿವೆ ಎಂದರೆ ದೊರೆಯುವಂತಿಲ್ಲ. ಯಾಸ್ಕರೇ ತಮ್ಮ ಗ್ರಂಥಗಳಲ್ಲಿ ಈ ಗ್ರಂಥಕರ್ತರಲ್ಲಿ ಮುಖ್ಯರಾದವರ ಹೆಸರುಗಳನ್ನೂ ಅವರ ಅಭಿಪ್ರಾಯಗಳನ್ನೂ ಅಲ್ಲಲ್ಲಿ ಸೂಚಿಸಿದಾರೆ. ಈ ನಿರುಕ್ತಗ್ರಂಥದ ಸಹಾಯವಿಲ್ಲದೆ ವೇದಾರ್ಥವು ಸಾಧ್ಯವಿಲ್ಲವಾದ್ದರಿಂದ ವೇದಗಳಿಗೆ ಭಾಷ್ಯವನ್ನು ಬರೆದಿರುವ ವೆಂಕಟಮಾಧವರೂ, ಸ್ಕಂದಸ್ವಾಮಿಗಳೂ, ಸಾಯಣಾಚಾರ್ಯರೂ, ಮತ್ತು ಇತರರೂ ತಮ್ಮ ವೇದಾರ್ಥಸಂಬಂಧವಾದ ಗ್ರಂಥಗಳಲ್ಲಿ ಈ (ಯಾಸ್ಕರ) ನಿರುಕ್ತವನ್ನು ಧಾರಾಳವಾಗಿ ಪ್ರಮಾಣಗ್ರಂಥವನ್ನಾಗಿ ಉಪಯೋಗಿಸಿದ್ದಾರೆ. ಮತ್ತು ಈ ನಿರುಕ್ತವು ವೇದಗಳಷ್ಟೇ ಪ್ರಮಾಣವೆಂದು ಸರ್ವರಿಂದಲೂ ಎಂದರೆ ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರುಗಳಿಂದ ಅಂಗೀಕರಿಸಲ್ಪಟ್ಟಿದೆ. ಅದ್ದರಿಂದ ಈ ಗ್ರಂಥವು ಸಂಸ್ಕೃತ, ಇಂಗ್ಲೀಷ್, ಜರ್ಮನ್, ಮೊದಲಾದ ಪ್ರಪಂಚದ ಮುಖ್ಯವಾದ ಭಾಷೆಗಳಿಗೆ ಪರಿವರ್ತಿತವಾಗಿ ಸಕಲವಿದ್ವಜ್ಜನರ ಮನ್ನಣೆಗೂ ಪಾತ್ರವಾಗಿದೆ. ಆದರೆ ದೇಶೀಯ ಭಾಷೆಗಳಿಗೆ ಪ್ರೋತ್ಸಾಹವು ಕಡಿಮೆಯಾಗಿರುವುದರಿಂದ ಇಂಡಿಯಾದೇಶದ ಯಾವಭಾಷೆಗೂ ಭಾಷಾಂತರವಾಗಿರುವುದು ಕಂಡುಬರುವುದಿಲ್ಲ.

ಈ ನಿರುಕ್ತಗ್ರಂಥಕ್ಕೆ ಅನೇಕರು ಅರ್ಥವಿವರಣೆಮಾಡುವುದಕ್ಕಾಗಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ನಿರುಕ್ತ ಗ್ರಂಥದ ಭಾಷೆಯು ಪ್ರಾಚೀನವೂ ಕಠಿನವೂ ಆದುದರಿಂದ ಇದಕ್ಕೆ ವ್ಯಾಖ್ಯಾನವು ಅವಶ್ಯಕವು. ಈ ವ್ಯಾಖ್ಯಾನವನ್ನು ಬರೆದಿರುವವರಲ್ಲಿ, ದುರ್ಗಾಚಾರ್ಯರು, ದೇವರಾಜಯಜ್ವಾ, ಮಾಹೇಶ್ವರ, ಮೊದಲಾದವರು ಮುಖ್ಯರು. ಈ ಗ್ರಂಥವು ಸ್ವಲ್ಪ ಮಟ್ಟಿಗೆ ವ್ಯಾಕರಣವನ್ನು ಹೋಲುವುದಾದರೂ, ಇದು ವ್ಯಾಕರಣಗ್ರಂಥವೇನಲ್ಲ. ವೇದಾರ್ಥಕ್ಕೆ ಬೇಕಾದ ಸಮಸ್ತವಿಷಯಗಳನ್ನೂ ಒಳಗೊಂಡಿರುವುದರಿಂದ ಇದಕ್ಕೆ ವೇದದಷ್ಟೇ ಪ್ರಾಮುಖ್ಯತೆಯೂ ಪೂಜ್ಯತೆಯೂ ಇರುವುದಲ್ಲದೆ ಪ್ರಮಾಣ ಗ್ರಂಥವೂ ಆಗಿರುವುದು.

ನಿರುಕ್ತದ ಈ ಭಾಗದಲ್ಲಿ ಮೂರುಕಾಂಡಗಳೆಂಬ ಭಾಗಗಳಿವೆ. ಮೊದಲನೆಯದು ನೈಘಂಟುಕಕಾಂಡ, ಎರಡನೆಯದು ನೈಗಮಕಾಂಡ, ಮೂರನೆಯದು ದೈವತಕಾಂಡ. **ಗೌಃ** ಎಂಬ ಶಬ್ದದ ವಿವರಣೆಯಿಂದ ಆರಂಭವಾಗಿ **ಅಪಾರ** ಶಬ್ದದವರೆಗೂ ನೈಘಂಟುಕಕಾಂಡವು. ಈ ಕಾಂಡದ ಪ್ರಾರಂಭದಲ್ಲಿರುವ ಮೊದಲನೆಯ ಅಧ್ಯಾಯವು ಪೀಠಿಕಾರೂಪವಾಗಿದೆ. ಈ ಕಾಂಡದಲ್ಲಿ ಸಾಮಾನ್ಯ ಮತ್ತು ವೇದಗಳಲ್ಲಿರುವ ಶಬ್ದಗಳ ವಿವರಣೆ ಇರುವುದು. **ಜಹಾ** ಎಂದು ಪ್ರಾರಂಭವಾಗಿ **ಉಲ್ಬಂ ಋಬೀಷಂ** ಎನ್ನುವವರೆಗೆ ಇರುವುದು ನೈಗಮ ಕಾಂಡವು. ನಿಗಮವೆಂದರೆ ವೇದವು. ಈ ಭಾಗದಲ್ಲಿರುವ ಶಬ್ದಗಳು ಈಗಿನ ಕೋಶಗಳಲ್ಲಿ (Dictionary) ದೊರೆಯುವುದಿಲ್ಲ.; **ಅಗ್ನಿ** ಎಂದು ಆರಂಭವಾಗಿ **ದೇವಪತ್ನ್ಯಃ** ಎಂದು ಮುಗಿಯುವ ಮೂರನೆಯದೇ ದೈವತಕಾಂಡವು. ಈ ದೈವತಕಾಂಡದಲ್ಲಿ ಅಗ್ನಿಶಬ್ದದಿಂದ **ಊರ್ಜಾಹುತಿ** ಎನ್ನುವವರೆಗೆ ಇರುವಶಬ್ದಗಳು ಭೂಮಿಯ ಮೇಲೆ ಇರುವ ದೇವತೆಗಳ ಸಮೂಹವನ್ನು ಸೂಚಿಸುವವು ; ವಾಯುವಿನಿಂದ ಭಗದ ವರೆಗಿನ ಶಬ್ದಗಳು ಅಂತರಿಕ್ಷದಲ್ಲಿರುವ ದೇವತೆಗಳ ಹೆಸರುಗಳು. ಸೂರ್ಯನಿಂದ ಮೊದಲುಮಾಡಿ ದೇವಪತ್ನಿವರೆಗೆ ಇರುವ ಶಬ್ದಗಳು ಸ್ವರ್ಗದಲ್ಲಿರುವ ದೇವತೆಗಳ ಹೆಸರುಗಳು. ಈ ಪ್ರಕಾರವಾಗಿ **ಗೌಃ** ಎಂಬ ಶಬ್ದದಿಂದ ಮೊದಲುಮಾಡಿ **ದೇವಪತ್ನ್ಯಃ** ಎನ್ನುವವರೆಗಿನ ಶಬ್ದಗಳ ಅರ್ಥವಿವರಣೆಯು ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು.

ಏಕಾರ್ಥವಾಚಿಗಳಾದ ಎಂದರೆ ಒಂದೇ ಅರ್ಥವನ್ನು ಸೂಚಿಸುವ ಶಬ್ದಗಳ ಸಮೂಹವನ್ನು ಒಂದು ಕ್ರಮದಲ್ಲಿ ಹೇಳಿರುವ ಗ್ರಂಥವಿಭಾಗಕ್ಕೆ ನಿಘಂಟುವೆಂದು ಹೆಸರು. ಅಂತಹ ನಿಘಂಟುಗಳಲ್ಲಿ ಅಮರಸಿಂಹ, ವೈಜಯಂತಿ, ಹಲಾಯುಧ, ಮೊದಲಾದ ಹತ್ತು ನಿಘಂಟುಗ್ರಂಥಗಳು ಪ್ರಸಿದ್ಧವಾಗಿ ಬಳಕೆಯಲ್ಲಿವೆ. ಆದರೆ ಈ ನಿಘಂಟುಗಳೆಲ್ಲಾ ಆಧುನಿಕಸಂಸ್ಕೃತಭಾಷೆಯಲ್ಲಿರುವ ಶಬ್ದಗಳನ್ನೇ ವಿವರಿಸುತ್ತವೆ. ವೇದಶಬ್ದಗಳನ್ನು ವಿವರಿಸುವ.ಹವ್ಯಾಸಕ್ಕೆ ಹೋಗಿಲ್ಲ. ಹಾಗೆಯೇ ಈ ನಿರುಕ್ತ ಗ್ರಂಥದ ಮೊದಲನೆಯ ಕಾಂಡದಲ್ಲಿ ಏಕಾರ್ಥವಾಚಿಗಳಾದ ಪರ್ಯಾಯಶಬ್ದಸಮೂಹಗಳನ್ನು ಹೇಳಿರುವುದರಿಂದ ಅದಕ್ಕೆ ನೈಘಂಟುಕಕಾಂಡ ಅಥವಾ ನಿಘಂಟು ಎಂದು ಹೆಸರು. ನಿಘಂಟುಕಾಂಡದಲ್ಲಿ ಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಪೃಥಿವೀ ಮೊದಲಾದ ಲೋಕಗಳು, ದಿಕ್ಕುಗಳು, ಕಾಲ ಮೊದಲಾದವುಗಳ ಹೆಸರುಗಳಿವೆ. ಎರಡನೆಯ ಅಧ್ಯಾಯದಲ್ಲಿ ಮನುಷ್ಯಶರೀರದ ಅವಯವಾದಿಗಳು ಮುಂತಾದ ವಸ್ತುಗಳ ಹೆಸರುಗಳಿವೆ. ಮೂರನೆಯ ಅಧ್ಯಾಯದಲ್ಲಿ ಮೇಲೆ ಹೇಳಿದ ವಸ್ತುಗಳ ಗುಣಾವಗುಣಗಳೂ ಬಹುತ್ವ ಹ್ರಸ್ವತ್ವಮೊದಲಾದ ಧರ್ಮಗಳೂ ವಿವರಿಸಲ್ಪಟ್ಟಿವೆ.

ನಿಗಮವೆಂದರೆ ವೇದವು. ಏಕೆಂದರೆ ಯಾಸ್ಕರು ಅಲ್ಲಲ್ಲಿ ವೇದಗಳಿಂದ ಎತ್ತಿ ಉದಹರಿಸಿರುವ ವಾಕ್ಯಗಳನ್ನು ನಿಗಮವಾಕ್ಯಗಳೆಂದು ಕರೆದಿದ್ದಾರೆ. ನಾಲ್ಕನೆಯ ಅಧ್ಯಾಯವಾದ ಈ ಎರಡನೆಯ ಕಾಂಡದಲ್ಲಿ ಸಾಧಾರಣವಾಗಿ ವೇದದಲ್ಲಿರುವ ಶಬ್ದಗಳನ್ನೇ ವಿವರಿಸಿರುವುದರಿಂದ ಈ ಕಾಂಡಕ್ಕೆ ನೈಗಮಕಾಂಡವೆಂದು ಹೆಸರು ಬಂದಿರುವುದು. ಈ ಕಾಂಡದಲ್ಲಿ ವಿವರಿಸಿರುವ ಶಬ್ದಗಳಿಗೆಲ್ಲಾ ನಾವು ಸಾಧ್ಯವಾದಷ್ಟು ವ್ಯಾಕರಣನಿಷ್ಪತ್ತಿಯನ್ನು ಬರೆದಿದೇವೆ. ಅಲ್ಲಲ್ಲಿ ಯಾಸ್ಕಮಹರ್ಷಿಯಿಂದ ಉದಾಹರಣೆಗಾಗಿ ಅನೇಕ ಉಪಾಖ್ಯಾನಗಳೂ, ಪೂರ್ವೇತಿಹಾಸಗಳೂ ವಿವರಿಸಲ್ಪಟ್ಟಿವೆ. ಅವುಗಳಲ್ಲಿ ವಿಶ್ವಾಮಿತ್ರ ಋಷಿಗೂ ನದಿಗಳಿಗೂ ಆದ ಸಂವಾದವು, ದೇವಾಪಿ ಮತ್ತು ಶಂತನು ಎಂಬ ರಾಜರ ವೃತ್ತಾಂತ, ಉರ್ವಶೀ ಮತ್ತು ಪುರೂರುವ ಮೊದಲಾದ ಅನೇಕ ಪೂರ್ವೇತಿಹಾಸಗಳಿವೆ.

ಐದನೆಯ ಅಧ್ಯಾಯರೂಪವಾದ ಮೂರನೆಯ ಕಾಂಡದಲ್ಲಿ ದೇವತೆಗಳ ವಿಷಯವನ್ನೇ ಹೆಚ್ಚಾಗಿ ಹೇಳಿರುವುದರಿಂದ ಈ ಕಾಂಡಕ್ಕೆ ದೈವತಕಾಂಡವೆಂದು ಹೆಸರು. ಈ ಗ್ರಂಥವನ್ನು **ಸಮಾಮ್ನಾಯಃ ಸಮಾಮ್ನಾತಃ** ಎಂದು ಆರಂಭಿಸಿ **ತಸ್ಯಾಸ್ತಸ್ಯಾಢ್ಭವ್ಯಮನು ಭವತ್ಯನು ಭವತಿ** ಎನ್ನುವವರೆಗೆ ಒಟ್ಟು ಹನ್ನೆರಡು ಅಧ್ಯಾಯಗಳನ್ನು ರಚಿಸಿರುವರು. ಈ

ಅಧ್ಯಾಯಗಳಲ್ಲಿ ವಿವರಿಸಿರುವ ಪದಗಳಿಗೆ ಅನ್ವಯಾರ್ಥಗಳನ್ನು ನಿಃಶೇಷವಾಗಿ (ಪೂರ್ತಿಯಾಗಿ) ಹೇಳಿರುವುದರಿಂದ ಈ ಗ್ರಂಥಕ್ಕೆ ನಿರುಕ್ತವೆಂದು ಹೆಸರು, ವ್ಯುತ್ಪತ್ತಿಕ್ರಮದಿಂದ ಸಲ್ಲುವುದು. ಈ ಗ್ರಂಥದಲ್ಲಿ ನಾಮ, ಆಖ್ಯಾತ, ಉಪಸರ್ಗ, ನಿಪಾತ (ಅವ್ಯಯ) ಎಂಬ ನಾಲ್ಕುವಿಧವಾದ ಪದಸಮೂಹಗಳಿರುವವೆಂದು ಹೇಳಿ ಅವುಗಳಲ್ಲಿ ನಿಪಾತವೆಂಬ ಪದಗಳು ನಾನಾರ್ಥಗಳಲ್ಲಿ ಉಪಯೋಗಿಸಲ್ಪಡುವುದರಿಂದ, **ಉಚ್ಚಾವಚೇಷ್ವರ್ಥೇಷು ನಿಪತಂತೀತಿ ನಿಪಾತಾಃ**—ಪರಸ್ಪರ ವಿರೋಧಾರ್ಥಗಳಲ್ಲಿ ಇವುಗಳು ಉಪಯೋಗಿಸಲ್ಪಡುವುದರಿಂದ ಈ ಶಬ್ದಸಮೂಹಕ್ಕೆ ನಿಪಾತವೆಂದು ಹೆಸರು ಬಂದಿರುವುದು ಎಂದು ಹೇಳಿದ್ದಾರೆ.

ಈ ನಿರ್ವಚನಗಳಿಗೆ ಮೂಲವಿಲ್ಲ (ಆಧಾರ ಅಥವಾ ಪ್ರಮಾಣವಿಲ್ಲ) ಎಂದು ಹೇಳಬೇಕಾಗಿಲ್ಲ. ವೇದಗಳಲ್ಲಿ ಅಲ್ಲಲ್ಲಿರುವ ಈ ವ್ಯುತ್ಪತ್ತಿಯನ್ನು ಹಿಡಿದು ಕೆಲವು ಪದಗಳಿಗೆ ನಿರ್ವಚನವನ್ನು ಹೇಳಿರುವುದುಂಟು. ಉದಾಹರಣೆಗಾಗಿ—**ತದಾಹುತೀನಾಮಾಹುತಿತ್ವಂ** (ಐ. ಬ್ರಾ. ೧–೧–೨) ಈ ಕಾರಣದಿಂದ ಆಹುತಿಗಳಿಗೆ ಆಹುತಿಯೆಂಬ ಹೆಸರು ಬಂದಿದೆ. **ಯದಪ್ರಥಯತ್ । ತತ್ಪೃಥಿವ್ಯೈ ಪೃಥಿವಿತ್ವಂ ।** (ತೈ. ಬ್ರಾ. ೧–೧–೩–೭) ಅದನ್ನು ಹರಡಿದನು ಎಂದರೆ ತಗ್ಗುದಿಣ್ಣೆಗಳಿಲ್ಲದೆ ಸಮಪ್ರದೇಶವಾಗಿ ಹರಡಿಕೊಂಡಿರುವುದರಿಂದ ಭೂಮಿಗೆ (ಪೃಥಿವಿಗೆ) ಪೃಥಿವೀ ಎಂದು ಹೆಸರಾಯಿತು. ಇವೇ ಮೊದಲಾದ ಅನೇಕ ಮಂತ್ರಗಳನ್ನು ಉದಾಹರಿಸಿರುವರು. ನಿರುಕ್ತಗ್ರಂಥಕಾರರೂ ಕೂಡ ಅಲ್ಲಲ್ಲಿ ತಾವು ಹೇಳಿರುವ ನಿರ್ವಚನಗಳಿಗೆ ಆಧಾರವಾದ ವೇದವಾಕ್ಯಗಳನ್ನು ಉದಾಹರಿಸಿದ್ದಾರೆ. ಕೆಲವು ಪದಗಳಿಗೆ ವ್ಯಾಕರಣ ಬಲದಿಂದ ನಿರ್ವಚನಮಾಡಲು ಸಾಧ್ಯವಿದ್ದರೂ ಎಲ್ಲಾ ಪದಗಳಿಗೂ ವ್ಯಾಕರಣಬಲದಿಂದಲೇ ನಿರ್ವಚನವು ಸಿದ್ಧಿಸುವುದಿಲ್ಲ. ಆದುದರಿಂದ ಗ್ರಂಥಕಾರರು ಹೀಗೆ ಹೇಳಿದ್ದಾರೆ—**ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥಸಾಧಕಂ ಚ** (ನಿರುಕ್ತ. ೧–೧೫) ಆದುದರಿಂದ ಈ ಶಾಸ್ತ್ರವು ವ್ಯಾಕರಣಶಾಸ್ತ್ರಕ್ಕೆ ಸಾರಭೂತವಾಗಿರುವುದು. ಈ ಕಾರಣಗಳಿಂದ ವೇದಾರ್ಥವನ್ನು ತಿಳಿಯುವುದಕ್ಕಾಗಿ ನಿರುಕ್ತವು ಬೇಕೇಬೇಕು.

ವೇದಸಾಹಿತ್ಯದಲ್ಲಿ ಅತಿ ಮುಖ್ಯವೂ ಪ್ರಾಚೀನವೂ ಆದ ಋಗ್ವೇದ ಸಂಹಿತೆಯು ಮತ್ತು ಇದರ ಮುಂದಿನ ಗ್ರಂಥಗಳು ಕನ್ನಡ ಭಾಷೆಯಲ್ಲಿ ಇದೇ ಪ್ರಥಮವಾಗಿ ಅಚ್ಚಾಗಿ ಕನ್ನಡ ಸಾಹಿತ್ಯಾಭಿವೃದ್ಧಿಗೆ ಕಾರಣವಾಗಿವೆ. ಇಂತಹ ಗ್ರಂಥಗಳು ಇದುವರೆಗೆ ಯಾವ ದೇಶಭಾಷೆಯಲ್ಲಿಯೂ ಪ್ರಕಟವಾಗಿರುವುದಿಲ್ಲ. ಇದುವರೆಗೆ 30ಕ್ಕೂ ಹೆಚ್ಚಿನ ಗ್ರಂಥಗಳು ಪ್ರಕಟವಾಗಿವೆ. ಈ ಪುಸ್ತಕಗಳು ದೊಡ್ಡ ಸೈಜಿನ (ಡೆಮ್ಮಿ ಕಾಲುಭಾಗ) ಸುಮಾರು 30000 ಪೇಜುಗಳಿಗಿಂತಲೂ ಹೆಚ್ಚಾಗಿ ಒಳಗೊಂಡು ಕನ್ನಡ ಭಾಷೆಯಲ್ಲಿಯೇ (ಇತರ ಭಾಷೆಗಳಲ್ಲಿಯೂ ಸಹ) ಅತಿ ದೊಡ್ಡಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ನಮ್ಮ ಘನ ಸರ್ಕಾರದವರೂ, ಪ್ರಗತಿಪರವಾದ ಈಗಿನ ಮಂತ್ರಿ ಮಂಡಲವೂ ಈ ವಿಧವಾದ ಕನ್ನಡ ಸಾಹಿತ್ಯಾಭಿವೃದ್ಧಿಗೆ ನೆರವನ್ನು ನೀಡಿ ಉದಾರವಾಗಿ ಆಶ್ರಯವನ್ನೂ ಪ್ರೋತ್ಸಾಹವನ್ನೂ ನೀಡುತ್ತಿರುವುದು ಅಭಿನಂದನೀಯವಾಗಿದೆ.

ಅತಿ ಪ್ರಾಚೀನವೂ, ಅತಿ ಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನೂ, ವೇದಸಾಹಿತ್ಯಕ್ಕೆ ಸಂಬಂಧಪಟ್ಟ ಇತರ ಗ್ರಂಥಗಳನ್ನೂ ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದ ಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಬಿ., ಜಿ.ಸಿ. ಎಸ್.ಐ. ಮಹಾಪ್ರಭುವರ್ಯರೂ, ಘನ ಸರ್ಕಾರದವರೂ ಬಹುದ್ರವ್ಯ ಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ

ಉದಾರಾಶ್ರಯದಿಂದ ಪ್ರೋತ್ಸಾಹವನೀಡುತ್ತಿರುವುದು ಕರ್ನಾಟಕರಾಜ್ಯದ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ ಪ್ರಗತಿಪರರಾದ ಸಚಿವರಾದಿಯಾಗಿ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಆಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶಾರ್ವರಿನಾಮ ಸಂ। ಮಾರ್ಗಶಿರ ಶುಕ್ಲದ್ವಿತೀಯಾ
ಭಾನುವಾರ, ತಾ।। 20-11-60.

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.



ಯದುವಂಶಪಯಃಪಾರಾವಾರಸುಧಾಕರರೂ, ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ,
ಧರ್ಮಪರಾಯಣರೂ, ಮೈಸೂರು ದೇಶದ ರಾಜ್ಯಪಾಲರೂ ಆದ ಶ್ರೀಮನ್ಮಹಾರಾಜ

**ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ., ರವರು**

# ನಿರುಕ್ತಗ್ರಂಥದ ವಿಷಯಸೂಚಿಕೆ

## ಮೊದಲನೆಯ ಅಧ್ಯಾಯ

ಪುಟಸಂಖೆ





## ಎರಡನೆಯ ಅಧ್ಯಾಯ

## ಮೂರನೆಯ ಅಧ್ಯಾಯವು

---

## ನಾಲ್ಕನೆಯ ಅಧ್ಯಾಯವು



## ಐದನೆಯ ಅಧ್ಯಾಯವು

(೫೦) ವಾಜಗಂಧ್ಯಂ (೫೧) ಗಧ್ಯಂ (೫೨) ಗಧಿತಾ (೫೩) ಕೌರಯಾಣಃ (೫೪) ತೌರಯಾಣಃ (೫೫) ಆಪ್ರಯಾಣಃ (೫೬) ಹರಯಾಣಃ (೫೭) ಆರಿತಃ (೫೮) ವ್ರಂದೀ (೫೯) ಸಿಷ್ಣಪೀ (೬೦) ತೂರ್ಣಾಶಂ (೬೧) ಕ್ಷಂಪಂ (೬೨) ನಿಚುಂಪುಣಃ (೬೩) ಪದಿಂ (೬೪) ಪಾದುಃ (೬೫) ವೃಕಃ (೬೬) ಜೋಷವಾಕಂ (೬೭) ಕೃತ್ತಿಃ (೬೮) ಶ್ವಘ್ನೀ (೬೯) ಸಮಸ್ಯ (೭೦) ಕುಟಸ್ಯ (೭೧) ಚರ್ಷಣಿಃ (೭೨) ಶಂಬಃ (೭೩) ಕೇಪಯಃ (೭೪) ತೂತುಮಾಕೃಷೇ (೭೫) ಅಂಸತ್ರಂ (೭೬) ಕಾಕುದಂ (೭೭) ಬೀರಿಟೇ (೭೮) ಅಚ್ಛ (೭೯) ಪರಿ (೮೦) ಈಂ (೮೧) ಸೀಂ (೮೨) ಏನಂ (೮೩) ಏನಾಂ (೮೪) ಸೃಣಿಃ ॥ ಈ ೮೪ ಶಬ್ದಗಳಿಗೂ ನಾನಾರ್ಥಗಳೂ ಅವುಗಳ ಉದಾಹರಣೆ ಮತ್ತು ಅರ್ಥಸಹಿತವಾದ ಋಕ್ಕುಗಳೂ ವಿವರಣೆಗಳೂ ಈ ಅಧ್ಯಾಯದಲ್ಲಿವೆ. ೬೧೯—೭೭೧

## ಆರನೆಯ ಅಧ್ಯಾಯವು

(೧) ಆಶುಶುಕ್ಷಣಿಃ (೨) ಆಶಾಭ್ಯಃ (೩) ಕಾಶಿಃ (೪) ಕುಣಾರುಂ (೫) ಅಲಾತೃಣಃ (೬) ಸಲೂಲುಕಂ (೭) ಕತ್ಪಯಂ (೮) ವಿಸ್ರುಹಃ (೯) ವೀರುಧಃ (೧೦) ನಕ್ಷದ್ವಾಭಂ (೧೧) ಅಸ್ಕೃಧೋಯುಃ (೧೨) ನಿಶೃಂಭಾಃ (೧೩) ಬೃಬದುಕ್ಥಂ (೧೪) ಋದೂದರಃ (೧೫) ಋದೂಪೇ (೧೬) ಪುಲುಕಾಮಃ (೧೭) ಅಸಿನ್ವತೀ (೧೮) ಕಪನಾಃ (೧೯) ಭಾಋಜೀಕಃ (೨೦) ರುಜಾನಾಃ (೨೧) ಜೂರ್ಣಿಃ (೨೨) ಓಮನಾ (೨೩) ಉಪಲಪ್ರಕ್ಷಿಣೀ (೨೪) ಉಪಸಿ (೨೫) ಪ್ರಕಲವಿತ್ (೨೬) ಅಭ್ಯರ್ಧಯಜ್ವಾ (೨೭) ಈಕ್ಷೇ (೨೮) ಕ್ಷೋಣಸ್ಯ (೨೯) ಅಸ್ಮೇ (೩೦) ಪಾಥಃ (೩೧) ಸವೀಮನಿ (೩೨) ಸಪ್ರಥಾಃ (೩೩) ವಿದಥಾನಿ (೩೪) ಶ್ರಾಯಂತಃ (೩೫) ಆಶೀಃ (೩೬) ಅಜೀಗಃ (೩೭) ಆಮೂರಃ (೩೮) ಶಶಮಾನಃ (೩೯) ದೇವೋ ದೇಪಾಚ್ಯಾ ಕೃಪಾ (೪೦) ವಿಜಾಮಾತುಃ (೪೧) ಓಮಾಸಃ (೪೨) ಸೋಮಾನಂ (೪೩) ಅನವಾಯಂ (೪೪) ಕಿಮೀದಿನೇ (೪೫) ಅಮವಾನ್ (೪೬) ಅಮೀವಾ (೪೭) ದುರಿತಂ (೪೮) ಅಪ್ವೇ (೪೯) ಅಮತಿಃ (೫೦) ಶ್ರುಷ್ಟೀ (೫೧) ಪುರಂಧಿಃ (೫೨) ರುಶತ್ (೫೩) ರಿಶಾದಸಃ (೫೪) ಸುದತ್ರಃ (೫೫) ಸುವಿದ್ರತಃ (೫೬) ಆನುಷಕ್ (೫೭) ತುರ್ವಣಿಃ (೫೮) ಗಿರ್ವಣಾಃ (೫೯) ಅಸೂರ್ತೇ ಸೂರ್ತೇ (೬೦) ಅಮ್ಯಕ್ (೬೧) ಯಾದೃಶ್ಮಿನ್ (೬೨) ಜಾರಯಾಯಿ (೬೩) ಅಗ್ರಿಯಾ (೬೪) ಚನಃ (೬೫) ಪಚತಾ (೬೬) ಶುರುಧಃ (೬೭) ಅಮಿನಃ (೬೮) ಜಜ್ಝತೀಃ (೬೯) ಅಪ್ರತಿಷ್ಕುತಃ (೭೦) ಶಾಶದಾನಃ (೭೧) ಸೃಪಃ (೭೨) ಸುಶಿಪ್ರಃ (೭೩) ರಂಸುಃ (೭೪) ದ್ವಿಬರ್ಹಾ (೭೫) ಅಕ್ರಃ (೭೬) ಉರಾಣಃ (೭೭) ಸ್ತಿಯಾನಾಂ (೭೮) ಸ್ತಿಪಾಃ (೭೯) ಜಬಾರು (೮೦) ಜರೂಥಂ (೮೧) ಕುಲಿಶಃ (೮೨) ತುಂಜಃ (೮೩) ಬರ್ಹಣಾ (೮೪) ತತನುಷ್ಟಿಃ (೮೫) ಇಲೀಬಿಶಃ (೮೬) ಕಿಯೇಧಾಃ (೮೭) ಭೃಮಿಃ (೮೮) ವಿಷ್ಪಿತಃ (೮೯) ತುರೀಪಂ (೯೦) ರಾಸ್ಪಿನಃ (೯೧) ಋಂಜತಿಃ (೯೨) ಋಜುನೀತೀ (೯೩) ಪ್ರತದ್ವಸೂ (೯೪) ಹಿನೋತ (೯೫) ಚೋಷ್ಕೂಯಮಾಣಃ (೯೬) ಚೋಷ್ಕೂಯತೇ (೯೭) ಸುಮತ್ (೯೮) ದಿವಿಷ್ಟಿಷು (೯೯) ದೂತಃ (೧೦೦) ಜಿನ್ವತಿ (೧೦೧) ಅಮತ್ರಃ

---

ವಿಷಯಸೂಚಿಕಾ ಸಮಾಪ್ತಾ.



॥ ಶ್ರೀಃ ॥

ಶ್ರೀ ಗಣಾಧಿಪತಯೇ ನಮಃ

ಶ್ರೀ ಯಾಸ್ಕಮಹರ್ಷಿ ವಿರಚಿತಂ

# ॥ ನಿರುಕ್ತಂ ॥

ಕರ್ಣಾಟಕ ಭಾಷಾನುವಾದ ವಿವರಣೆ ಸಹಿತವಾದುದೂ

ವೇದದ ಷಡಂಗಗಳಲ್ಲಿ ಮುಖ್ಯವಾದುದೂ ಆದ

# ನಿರುಕ್ತ ಗ್ರಂಥವು

## ॥ ಪ್ರಥಮೋಽಧ್ಯಾಯಃ ॥

### ಮೊದಲನೆಯ ಅಧ್ಯಾಯವು

**ಆದಿತಃ ಪಾಣಿನೀಯಂ ತು ಶಿಕ್ಷಾ ಜ್ಯೋತಿಸ್ತತಶ್ಛಂದಃ ।**
**ಪಂಚಾಧ್ಯಾಯೀ ನಿಘಂಟೋಶ್ಚ ನಿರುಕ್ತಮುಪರಿ ಸ್ಥಿತಂ ॥**
**ಪ್ರಣಮ್ಯ ತತ್ಪ್ರವಕ್ಷ್ಯಾಮಿ ರುದ್ರಾಯಾಮಿತತೇಜಸೇ ॥**
**ಸ ಮೇ ದಿಶತು ಸುಪ್ರೀತೋ ವಾಗ್ಧಿಯೋಃ ಶಿಷ್ಟಸಂಮತಿಂ ॥**

ಈ ನಿರುಕ್ತವೆಂಬ ಮಹಾಗ್ರಂಥಕ್ಕೆ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರೆಂಬುವರು ಈ ಗ್ರಂಥದ ವ್ಯಾಖ್ಯಾನವನ್ನು ಬರೆಯುವುದಕ್ಕೆ ಪ್ರಾರಂಭದಲ್ಲಿ ಶ್ರೀಪರಮೇಶ್ವರನನ್ನು ಸ್ತುತಿಸಿ ಮಾಡಿರುವ ಮಂಗಳಾಚರಣೆಯು ಈ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವುದು. ಇದರ ಮುಖ್ಯ ತಾತ್ಪರ್ಯವು — ಈ ಗ್ರಂಥಾರಂಭಕ್ಕೆ ಪೂರ್ವದಲ್ಲಿ ವೇದಗಳ ಷಡಂಗಗಳೆನಿಸಿರುವ ಪಾಣಿನೀಯ ಶಿಕ್ಷಾ, ಜ್ಯೋತಿಷ, ಛಂದಶ್ಶಾಸ್ತ್ರ, (ಕಲ್ಪ), ಐದು ಅಧ್ಯಾಯಗಳಿಂದ ಕೂಡಿದ ನಿಘಂಟು (ಶಬ್ದ ಸಮುದಾಯದ ವಿವರಣೆ) ಅನಂತರ ನಿರುಕ್ತ ಎಂಬ ಗ್ರಂಥಗಳ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಿ ನಿರುಕ್ತಗ್ರಂಥವನ್ನು ಬರೆಯಲು

ಪ್ರಾರಂಭಿಸುವರು. ಅಪರಮಿತ ತೇಜಸ್ಸಿನಿಂದ ಬೆಳಗುವ ಶ್ರೀಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಆ ಮಹೇಶ್ವರನು ನನ್ನ ನಮಸ್ಕಾರಪೂರ್ವಕವಾದ ಸ್ತೋತ್ರದಿಂದ ಸುಪ್ರೀತನಾಗಿ ಈ ಗ್ರಂಥರಚನೆಯಲ್ಲಿ ತೊಡಗಿರುವ ನನಗೆ ವಾಕ್ಪಟುತ್ವವನ್ನೂ, ತೀವ್ರವಾದ ಬುದ್ಧಿಯನ್ನೂ ಆ ಗ್ರಂಥದ ವಿಷಯದಲ್ಲಿ ಶಿಷ್ಯರಾದ ಸಜ್ಜನರ ಮೆಚ್ಚುಗೆಯನ್ನು ಅನುಗ್ರಹಿಸಲಿ.

ವೇದಸಾಹಿತ್ಯವು ಅನೇಕ ಗ್ರಂಥಗಳನ್ನೊಳಗೊಂಡಿರುವುದು. ಇವೆಲ್ಲವೂ—ಅದರಲ್ಲಿಯೂ ಋಗ್ವೇದವು—ಬಹು ಪ್ರಾಚೀನವಾದುದರಿಂದ ಅವುಗಳಲ್ಲಿ ಹೇಳಿರುವ ಗಹನವಾದ ವಿಷಯಗಳು ಸಾಮಾನ್ಯ ಜನರಿಗೆ ದುರವಗಾಹವಾಗಿರುವುವು. ವೇದಗಳಲ್ಲಿರುವ ಎಂದರೆ ವೇದಗಳಲ್ಲಿ (ಮುಖ್ಯವಾಗಿ ಋಗ್ವೇದದಲ್ಲಿ) ಬಳಸಿರುವ ಶಬ್ದಗಳು ಈಗಿನ ಕಾಲದಲ್ಲಿ ಬಳಕೆಯಲ್ಲಿಲ್ಲದೆ ಇರುವುದರಿಂದ ಬಹು ಕ್ಲಿಷ್ಟವಾಗಿರುವುವು. ಈ ನಿರುಕ್ತ ಗ್ರಂಥದ ಕರ್ತೃವಾದ ಯಾಸ್ಕರ ಕಾಲದಲ್ಲಿಯೂ ಎಂದರೆ ಸುಮಾರು ಕ್ರಿ. ಪೂ. ೨೦೦೦ ವರ್ಷಗಳ ಕಾಲದಲ್ಲಿಯೂ ವೇದಾರ್ಥವಿಷಯದಲ್ಲಿ ಸಂಶಯಗಳೂ ಭಿನ್ನಾಭಿಪ್ರಾಯಗಳೂ ಇದ್ದುದರಿಂದಲೇ ಯಾಸ್ಕರಿಗೆ ಈ ಗ್ರಂಥವನ್ನು ರಚನೆಮಾಡುವ ಅವಶ್ಯಕತೆಯುಂಟಾಯಿತೆಂದು ಹೇಳಬಹುದು. ಯಾಸ್ಕರಿಗಿಂತಲೂ ಪೂರ್ವದಲ್ಲಿ ಕೆಲವರು ವೇದಶಬ್ದಗಳ ಬಗ್ಗೆ ವಿಧವಿಧವಾದ ಅಭಿಪ್ರಾಯಗಳನ್ನು ಹೊಂದಿದ್ದರೆಂದು ಯಾಸ್ಕರೇ ನಿರುಕ್ತ ಗ್ರಂಥದಲ್ಲಿ ಅಲ್ಲಲ್ಲಿ ಹೇಳಿದಾರೆ. ಆದ್ದರಿಂದ ಅಷ್ಟು ಹಿಂದಿನ ಕಾಲದಲ್ಲಿಯೇ ವೇದ ಶಬ್ದಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಪ್ರಯಾಸವು ಇತ್ತೆಂದು ಹೇಳಬಹುದಾಗಿದೆ. ಈ ಪ್ರಯಾಸವನ್ನು ಪರಿಹರಿಸುವುದಕ್ಕಾಗಿಯೇ ಯಾಸ್ಕರು ನಿರುಕ್ತವನ್ನು ರಚಿಸಬೇಕಾಯಿತು. ಈ ನಿರುಕ್ತವೂ ಸಹ ಪ್ರಮಾಣಗ್ರಂಥವೆಂದು ಸಮಸ್ತರಿಂದಲೂ ಪರಿಗಣಿಸಲ್ಪಟ್ಟು ವೇದದಷ್ಟೇ ಪೂಜ್ಯತೆಯನ್ನು ಪಡೆದಿದೆ. ಈ ಗ್ರಂಥದ ಸಹಾಯವಿಲ್ಲದೆ ವೇದದ ಅರ್ಥವನ್ನು ತಿಳಿದುಕೊಳ್ಳಲು ಸಾಧ್ಯವೇ ಇಲ್ಲವೆಂದು ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವು.

ವೇದಗಳಿಗೆ ಸೇರಿದಂತಿರುವ ಷಡಂಗಗಳು ಯಾವವೆಂದರೆ—ಶಿಕ್ಷಾ, ಛಂದಶ್ಶಾಸ್ತ್ರ, ಕಲ್ಪ, ಜ್ಯೋತಿಷ, ವ್ಯಾಕರಣ ಮತ್ತು ನಿರುಕ್ತ. ಈ ಆರು ಷಡಂಗಳಲ್ಲಿ ನಿರುಕ್ತವೇ ಅತಿ ಪ್ರಾಚೀನವಾದುದು ಮತ್ತು ಗೌರವವನ್ನು ಪಡೆದಿರುವುದು. ಈ ಆರು ಗ್ರಂಥಗಳಲ್ಲಿ ವೇದಾರ್ಥವನ್ನು ತಿಳಿದುಕೊಳ್ಳಲು ಉಪಯುಕ್ತವಾದ ಸಾಧನ ಸಾಮಗ್ರಿಗಳು ಎಂದರೆ ಅವಶ್ಯಕವಾದ ವಿಷಯಗಳು ಉಕ್ತವಾಗಿರುವುದರಿಂದಲೂ ಇವುಗಳ ಸಹಾಯವಿಲ್ಲದೆ ವೇದಾರ್ಥವನ್ನು ಮಾಡಲು ಸಾಧ್ಯವಿಲ್ಲದ್ದರಿಂದಲೂ ಈ ಆರು ಗ್ರಂಥಗಳಿಗೆ ವೇದಗಳ ಷಡಂಗಗಳೆಂಬ ಹೆಸರು ಬಂದಿದೆ. ಇವುಗಳ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಿ ನಿರುಕ್ತವನ್ನು ಪ್ರಾರಂಭಿಸುತ್ತೇನೆ—

॥ ಶಿಕ್ಷಾ ॥

ಅನೇಕ ಋಷಿಗಳಿಂದ ರಚಿತವಾದ ಅನೇಕ ಶಿಕ್ಷಾ ಗ್ರಂಥಗಳಿದ್ದರೂ ಋಗ್ವೇದಕ್ಕೆ **ಪಾಣಿನೀಯ ಶಿಕ್ಷಾ** ಎಂಬುದೂ ಸಾಮವೇದಕ್ಕೆ ನಾರದೀಯ **ಶಿಕ್ಷಾ** ಎಂಬುದೂ ಪ್ರಸಿದ್ಧವಾದುವು. ಈ ಗ್ರಂಥದಲ್ಲಿ ವೇದವನ್ನು ಪಠಿಸುವ ಕ್ರಮ, ಉದಾತ್ತಾದಿ ಸ್ವರಗಳನ್ನು ಉಚ್ಚರಿಸುವ ವಿಧಾನ, ಸ್ವರವ್ಯಂಜನಾದಿ ಅಕ್ಷರಗಳ ಲಕ್ಷಣ, ಪೂರ್ವಾಹ್ನ, ಮಧ್ಯಾಹ್ನ ಅಪರಾಹ್ನಗಳಲ್ಲಿ ಮಂತ್ರಗಳನ್ನು ಹೇಗೆ ಉಚ್ಚರಿಸಬೇಕು ಎಂಬ ವಿಧಾನ, ಯಜ್ಞಕರ್ಮದಲ್ಲಿ ಸ್ವರಸೌಕ್ಷ್ಮವದಿಂದ ಉಚ್ಚ, ನೀಚ, ಉಪಾಂಶು ಸ್ವರಗಳಿಂದ ಮಂತ್ರಗಳನ್ನು ಪಠಿಸಬೇಕಾದ ಕ್ರಮ ಇತ್ಯಾದಿ ವಿಷಯಗಳ ವಿವರಣೆ ಇದೆ. ವೇದಮಂತ್ರಗಳನ್ನು ಪಠಿಸುವಾಗ ಸ್ವರ ವ್ಯತ್ಯಾಸವಾದರೆ ಅರ್ಥವೂ ವ್ಯತ್ಯಾಸವಾಗಿ ಅದರ ಫಲವೂ ಹೆಚ್ಚು ಕಡಿಮೆಯಾಗುವುದು. ಹೇಗೆಂದರೆ—

**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥**

(ಪಾಣಿನೀಯ ಶಿಕ್ಷಾ . ೫೨)

ವೇದಮಂತ್ರಗಳನ್ನು ಉಚ್ಚರಿಸುವಾಗ ಅಕ್ಷರಗಳನ್ನಾಗಲೀ, ಸ್ವರಗಳನ್ನಾಗಲೀ ಸ್ವಲ್ಪವೂ ವ್ಯತ್ಯಾಸವಾಗದಂತೆ ಉಚ್ಚರಿಸಬೇಕು. ಹಾಗೇನಾದರೂ ವರ್ಣ (ಅಕ್ಷರ) ಅಥವಾ ಸ್ವರವ್ಯತ್ಯಾಸವಾದರೆ ಆ ಮಂತ್ರದ ಅರ್ಥವೇ ಬೇರೆಯಾಗುವುದು. ಈ ವಿಧವಾದ ವಿರುದ್ಧಾರ್ಥಯುಕ್ತವಾದ ಮಂತ್ರಪಠನವು ಯಜ್ಞಮಾಡುವ ಯಜಮಾನರಿಗೆ ಪ್ರಹರಿಸುವುದು (ಕೆಡಕನ್ನುಂಟುಮಾಡುವುದು) ಹೇಗೆಂದರೆ, ಹಿಂದೆ ತ್ವಷ್ಟೃಬ್ರಹ್ಮನು ಕಾರಣಾಂತರದಿಂದ ಇಂದ್ರನಲ್ಲಿ ವೈರತ್ವವನ್ನು ಹೊಂದಿ ಇಂದ್ರನನ್ನು ಸಂಹಾರಮಾಡಲು ಸಮರ್ಥನಾದ ಪುತ್ರನನ್ನು ಅಪೇಕ್ಷಿಸಿ ಅದಕ್ಕಾಗಿ ಅಗ್ನಿಯಲ್ಲಿ ಒಂದು ಆಹುತಿಯನ್ನು ಅರ್ಪಿಸಿದನು. ಮಂತ್ರೋಚ್ಚಾರಣ ಕಾಲದಲ್ಲಿ ಮಂತ್ರದಲ್ಲಿ ಉಪಯೋಗಿಸಿದ **ಇಂದ್ರಶತ್ರುಃ** ಎಂಬ ಶಬ್ದದ ಸ್ವರವು ಸರಿಯಾಗಿ ಉಚ್ಚರಿಸಲ್ಪಡಲಿಲ್ಲವಾಗಿ ಆ ಶಬ್ದವು ಯಜಮಾನನಿಗೆ ವಿರೋಧಾರ್ಥವನ್ನು ಸೂಚಿಸಿ ಅನಿಷ್ಟವಾದ ಫಲಪ್ರಾಪ್ತಿಗೆ ಕಾರಣವಾಯಿತು. ಎಂದರೆ ಇಂದ್ರನನ್ನು ಕೊಲ್ಲುವ ಮಗನೆಂಬುದಕ್ಕೆ ಬದಲಾಗಿ ಇಂದ್ರನಿಂದ ಕೊಲ್ಲಲ್ಪಡುವ ಮಗನು ಎಂದು ವ್ಯತ್ಯಸ್ತಸ್ವರವುಳ್ಳ ಮಂತ್ರದಿಂದ ಅರ್ಥವಾಗಿ ತ್ವಷ್ಟೃವಿನ ಮಗನಾದ ವೃತ್ರನು ಇಂದ್ರನಿಂದಲೇ ಹತನಾದನು ಇತ್ಯಾದಿ ವಿವರವು ತೈತ್ತಿರೀಯ ಸಂಹಿತೆಯ ೨-೪-೧೨-೧ ನೇ ಅನುವಾಕದಲ್ಲಿ ವಿಸ್ತಾರವಾಗಿ ಹೇಳಿದೆ.

## ॥ ಛಂದಃಶಾಸ್ತ್ರ ॥

ಛಂದಶ್ಶಾಸ್ತ್ರವನ್ನೂ ಅವಶ್ಯಕವಾಗಿ ತಿಳಿದುಕೊಳ್ಳಬೇಕು ಏಕೆಂದರೆ, ಯಜ್ಞಮಾಡುವಾಗ ಸಂದರ್ಭಾನುಸಾರವಾಗಿ ಬೇರೆ ಬೇರೆ ಛಂದಸ್ಸಿನ ಮಂತ್ರಗಳನ್ನು ಹೇಳಬೇಕೆಂದು ವಿಧಿ ಇರುವುದು. ಪ್ರಾತರನುವಾಕ ಮಂತ್ರಗಳನ್ನು ಪಠಿಸುವಾಗ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಎಂಬ ಏಳು ವಿಧವಾದ ಛಂದಸ್ಸಿನ ಮಂತ್ರಗಳನ್ನು ಹೇಳಬೇಕು. ಹಾಗೆಯೇ ಪ್ರಾತಸ್ಸವನಕಾಲ, ಮಾಧ್ಯಂದಿನ ತೃತೀಯ ಸವನಗಳಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಛಂದಸ್ಸಿನ ಮಂತ್ರಗಳನ್ನು ಕ್ರಮವಾಗಿ ಪಠಿಸಬೇಕೆಂಬ ವಿಧಿಯೂ ಇರುವುದು. ಗಾಯತ್ರೀಛಂದಸ್ಸಿನಲ್ಲಿ ೨೪ ಅಕ್ಷರಗಳಿರುವವು; ಉಷ್ಣಿಕ್ ಛಂದಸ್ಸಿನಲ್ಲಿ ಇಪ್ಪತ್ತೆಂಟು ಅಕ್ಷರಗಳಿರುವುವು. ಅನುಷ್ಟುಪ್ ಮೊದಲಾದ ಛಂದಸ್ಸುಗಳಲ್ಲಿ ಒಂದರಲ್ಲಿರುವುದಕ್ಕಿಂತ ಮತ್ತೊಂದರಲ್ಲಿ ಹೆಚ್ಚು ಹೆಚ್ಚು ಅಕ್ಷರಗಳಿರುವುವು. ಇದಲ್ಲದೆ ತೈತ್ತಿರಿಯಬ್ರಾಹ್ಮಣದಲ್ಲಿ ಹೀಗೆ ಹೇಳಿದೆ—

> **ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ಗಾಯತ್ರಛಂದಾ ವೈ ಬ್ರಾಹ್ಮಣಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ತ್ರಿಷ್ಟುಗ್ಭೀ ರಾಜನ್ಯಸ್ಯ । ತ್ರಿಷ್ಟುಪ್‌ಛಂದಾ ವೈ ರಾಜನ್ಯಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ಜಗತೀಭಿರ್ವೈಶ್ಯಸ್ಯ । ಜಗತೀಛಂದಾ ವೈ ವೈಶ್ಯಃ । ಸ್ವಸ್ಯ ಛಂದಸಃಪ್ರತ್ಯಯನಸ್ತ್ವಾಯ ॥**

ಎಂದರೆ ಆಧಾನ ಕರ್ಮದಲ್ಲಿ (ಅಗ್ನಿಪ್ರತಿಷ್ಠಾಪನದಲ್ಲಿ) ಬ್ರಾಹ್ಮಣನು ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಆಧಾನ ಮಾಡಬೇಕು. ಕ್ಷತ್ರಿಯನು ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ ವೈಶ್ಯನು ಜಗತೀಛಂದಸ್ಸಿನ ಮಂತ್ರಗಳಿಂದಲೂ ಆಧಾನ ಮಾಡಬೇಕು ಎಂದು ಗಾಯತ್ರೀ ಮೊದಲಾದ ಛಂದಸ್ಸುಗಳ ತಿಳುವಳಿಕೆಯಿಲ್ಲದೆ ಆಗುವುದಿಲ್ಲ. ಇದಲ್ಲದೆ ಕಾತ್ಯಾಯನ ಶ್ರೌತ ಸೂತ್ರದಲ್ಲಿ—**ಯೋ ಹ ವಾ ಅವಿದಿತಾರ್ಷೇಯಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾಧ್ಯಾಪಯತಿ ವಾ ಸ್ಥಾಣುಂ ವರ್ಛತಿ ಗರ್ತಂ ವಾಪದ್ಯತಿ ಪ್ರ ವಾ ಮೀಯತೇ ಪಾಪೀಯಾನ್ಭವತಿ** ಎಂದು ಹೇಳಿದೆ. ಎಂದರೆ, ಯಾವ ಪುರುಷನು ವೇದ ಮಂತ್ರಗಳಿಗೆ ಉಕ್ತವಾಗಿರುವ ಋಷಿ ದೇವತೆ ಛಂದಸ್ಸು ಇವುಗಳನ್ನು ತಿಳಿದುಕೊಳ್ಳದೆ ಗೊತ್ತಿಲ್ಲದ ಮಂತ್ರಗಳಿಂದ ಯಾಗ ಮಾಡಿಸುವನೋ ಅಥವಾ ಅಧ್ಯಯನ ಮಾಡಿಸುವನೋ ಅವನು ಕುರುಡನಂತೆ

ಕಂಭದ ಮೇಲೆ ಬೀಳುವನು, ಹಳ್ಳದಲ್ಲಿ ಬೀಳುವನು, ನಾಶವಾಗುವನು ಅಥವಾ ಅತಿ ಪಾಪಿಯಾಗುವನು ಎಂದಿರುವುದು. ಪ್ರತಿ ಮಂತ್ರಕ್ಕೂ ಇರುವ ಋಷಿದೇವತಾಛಂದಸ್ಸುಗಳನ್ನು ತಿಳಿದುಕೊಳ್ಳಬೇಕೆಂದು ಶ್ರುತಿಯಿದೆ. ಆದ್ದರಿಂದ ಛಂದೋಲಕ್ಷಣಗಳನ್ನು ತಿಳಿದುಕೊಳ್ಳುವುದಕ್ಕಾಗಿ ಛಂದಶ್ಶಾಸ್ತ್ರವನ್ನು ಕಲಿಯಲೇಬೇಕು.

## ॥ ಕಲ್ಪ ॥

ಕಲ್ಪವೆಂದರೆ ಯಜ್ಞಯಾಗಾದಿಗಳನ್ನು ಮಾಡುವ ವಿಧಾನಗಳನ್ನು ಕ್ರಮಪಡಿಸುವುದಕ್ಕಾಗಿ ವಿಧಿನಿಯಮಗಳನ್ನೂ ಮಂತ್ರಗಳ ವಿನಿಯೋಗವನ್ನೂ ಯಜ್ಞ ಮಾಡುವ ಕ್ರಮವನ್ನೂ ವಿವರಿಸುವ ಗ್ರಂಥಗಳು. ಇವು ಆಶ್ವಲಾಯನ ಆಪಸ್ತಂಬ, ಬೋಧಾಯನ, ಕಾತ್ಯಾಯನ, ಜೈಮಿನಿ ಮೊದಲಾದ ಮಹರ್ಷಿಗಳಿಂದ ಸೂತ್ರರೂಪದಲ್ಲಿ ರಚಿಸಲ್ಪಟ್ಟಿವೆ. ಋಗ್ವೇದಕ್ಕೆ ಆಶ್ವಲಾಯನರಿಂದ ರಚಿತವಾದ ಕಲ್ಪಸೂತ್ರಗಳೇ ಮುಖ್ಯವು. ಕೃಷ್ಣ ಯಜುರ್ವೇದಕ್ಕೆ ಆಪಸ್ತಂಬ, ಬೋಧಾಯನ ಮೊದಲಾದವರು ಕಲ್ಪಸೂತ್ರಗಳನ್ನು ರಚಿಸಿದಾರೆ. ಇದರಂತೆ ಇತರ ವೇದಗಳಿಗೂ ಇತರ ಶಾಖೆಗಳಿಗೂ ಬೇರೆ ಬೇರೆ ಋಷಿಗಳಿಂದ ರಚಿತವಾದ ಕಲ್ಪಸೂತ್ರಗಳಿವೆ. ಸೂತ್ರಗ್ರಂಥಗಳು ಕರ್ಮಾನುಸಾರವಾಗಿ ಅನೇಕ ವಿಧವಾಗಿರುವುವು. ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಪರಿಭಾಷಾಸೂತ್ರ ಇತ್ಯಾದಿ. ಇವುಗಳಲ್ಲಿ ಶ್ರೌತಸೂತ್ರವೇ ಮುಖ್ಯವಾದುದು. ಮಂತ್ರಕಾಂಡದಲ್ಲಿ ಹೇಳಿರುವ ಮಂತ್ರಗಳ ವಿನಿಯೋಗ ಕ್ರಮದಲ್ಲಿಯೂ ಪೂರ್ವದಿಂದಲೂ ಪರಂಪರಾಗತವಾದ ಸಂಪ್ರದಾಯ ಕ್ರಮವನ್ನು ಅನುಸರಿಸಬೇಕಾದಾಗಲೂ, ಕೆಲವು ಸಂದರ್ಭಗಳಲ್ಲಿ ವಿಶೇಷ ಮಂತ್ರಗಳ ವಿನಿಯೋಗ ಕ್ರಮವನ್ನು ಅನುಸರಿಸುವಾಗಲೂ ಕಲ್ಪಸೂತ್ರಗಳ ಅವಶ್ಯಕತೆ ಇರುವುದು. ಕೆಲವು ಸಂದರ್ಭಗಳಲ್ಲಿ ಎಂದರೆ ಮಂತ್ರಗಳಿಗೆ ಸರಿಯಾದ ಅರ್ಥವು ತಿಳಿಯದಿರುವ ಸಂದರ್ಭಗಳಲ್ಲಿ ಈ ಕಲ್ಪಸೂತ್ರಗಳ ಅವಶ್ಯಕತೆಯು ಹೆಚ್ಚಾಗಿರುವುದು. ಉದಾಹರಣೆಗಾಗಿ **ಇಷೇ ತ್ವಾ** ಎಂಬ ಮಂತ್ರದಿಂದ (ಇದು ಅಪೂರ್ಣವಾದ ವಾಕ್ಯ) ಏನೂ ತಿಳಿಯುವುದಿಲ್ಲ. ಆದರೆ **ಇಷೇ ತ್ವಾ ಛಿನದ್ಮಿ** ಎಂದು **ಛಿನದ್ಮಿ** ಶಬ್ದವನ್ನು ಅಧ್ಯಾಹಾರ ಮಾಡಿಕೊಂಡಲ್ಲಿ ಯಜ್ಞದಲ್ಲಿ ಮಾಡಬೇಕಾದ ವತ್ಸಾಪಾಕರಣ (ಕರುವನ್ನು ಅಟ್ಟಿಕೊಂಡು ಹೋಗುವುದು) ಕರ್ಮಕ್ಕಾಗಿ ಪಾಲಾಶವೃಕ್ಷದ ಒಂದು ಕೊನೆಯನ್ನು ಕತ್ತರಿಸುವಾಗ ಆ ವೃಕ್ಷವನ್ನು ಸಂಬೋಧಿಸಿ ಹೇಳುವ ಮಂತ್ರವಿದು. ಎಂದರೆ ಎಲೈ ಪಾಲಾಶವೃಕ್ಷವೇ, ಯಜ್ಞಕರ್ಮಕ್ಕಾಗಿ ನಿನ್ನಲ್ಲಿರುವ ಒಂದು ಶಾಖೆಯನ್ನು ಕತ್ತರಿಸುವೆನು ಎಂದು ಅಧ್ವರ್ಯುವು ವೃಕ್ಷವನ್ನು ಪ್ರಾರ್ಥಿಸುವನು. ಆದ್ದರಿಂದ ಯಜ್ಞಾದಿ ಕರ್ಮಾನುಷ್ಠಾನಗಳ ವಿವರಗಳನ್ನೂ ವಿಧಿನಿಯಮಗಳನ್ನೂ ತಿಳಿದುಕೊಳ್ಳುವುದಕ್ಕಾಗಿ ಕಲ್ಪಸೂತ್ರಗಳ ಅಧ್ಯಯನವು ಅತ್ಯಾವಶ್ಯಕವು.

## ॥ ಜ್ಯೋತಿಷ ॥

ಯಜ್ಞಯಾಗಾದಿಗಳನ್ನು ಇಂತಿಂತಹ ಕಾಲದಲ್ಲಿಯೇ ಮಾಡಬೇಕೆಂದು ವಿಧಿ ಇರುವುದರಿಂದ ಯಜ್ಞಾನುಷ್ಠಾನಕ್ಕಾಗಿ ಕಾಲನಿರ್ಣಯಮಾಡುವುದೇ ಜ್ಯೋತಿಷ್ಯದ ಮುಖ್ಯ ಪ್ರಯೋಜನವಾಗಿದೆ. ಕಾಲವಿಶೇಷಗಳನ್ನು ಸೂಚಿಸುವ ಮಂತ್ರಗಳು ವೇದದಲ್ಲಿ ಅನೇಕವಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿರುತ್ತೇ—

**ಸಂವತ್ಸರಮೇತದ್ವ್ರತಂ ಚರೇತ್** (ತೈ. ಆ. ೧–೩೨–೧) ಈ ವ್ರತವನ್ನು ಎಂದರೆ ಕರ್ಮವನ್ನು ಒಂದು ಸಂವತ್ಸರದ ವರೆಗೂ ಮಾಡಬೇಕು ಎಂದು ಸಂವತ್ಸರ ಕಾಲಪರಿಮಾಣವನ್ನು ಹೇಳುವ ವಿಧಿಯಿದು.

**ವಸಂತಾ ಬ್ರಾಹ್ಮಣೋಽಗ್ನಿಮಾದಧೀತ । ವಸಂತೋ ವೈ ಬ್ರಾಹ್ಮಣಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಬ್ರಹ್ಮವರ್ಚಸೀ ಭವತಿ । ಮುಖಂ ವಾ ಏತದೃತೂನಾಂ ।**

**ಯದ್ವಸಂತಃ । ಯೋ ವಸಂತಾಗ್ನಿಮಾಧತ್ತೆ । ಮುಖ್ಯ ಏವ ಭವತಿ । ಅಥೋ ಯೋನಿ-ಮಂತಮೇವೈನಂ ಪ್ರಜಾತಮಾಧತ್ತೇ । ಗ್ರೀಷ್ಮೇ ರಾಜನ್ಯ ಆದಧೀತ । ಗ್ರೀಷ್ಮೋ ವೈ ರಾಜನಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಇಂದ್ರಿಯಾವೀ ಭವತಿ । ಶರದಿ ವೈಶ್ಯ ಆದಧೀತ ಶರದ್ವೈ ವೈಶ್ಯಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಪಶುಮಾನ್ಭವತಿ ॥**

ಎಂದರೆ ವಸಂತಋತುವಿನಲ್ಲಿ ಬ್ರಾಹ್ಮಣನಾದವನು ಅಗ್ನ್ಯಾಧಾನವನ್ನು ಮಾಡಬೇಕು ವಸಂತಋತುವೇ ಬ್ರಾಹ್ಮಣನಿಗೆ ತನ್ನ ಋತುವೆಂದು ಹೇಳಲ್ಪಡುವುದು ಆದ್ದರಿಂದ ತನ್ನ ಋತುವಿನಲ್ಲಿ ಅಗ್ನ್ಯಾಧಾನ ಮಾಡಿದ ಬ್ರಾಹ್ಮಣನು ಬ್ರಹ್ಮವರ್ಚಸ್ಸಿಂದ ಬೆಳಗುವನು. ಈ ಋತುವಿನಲ್ಲಿ ಯಾಗ ಮಾಡಿದವನು ಜನರಲ್ಲಿ ಗಣ್ಯನೆನಿಸುವನು. ಹಾಗೆಯೇ ಗ್ರೀಷ್ಮಋತುವಿನಲ್ಲಿ ರಾಜನಾದವನು ಯಾಗ ಮಾಡಿದರೆ ಪರಾಕ್ರಮಶಾಲಿಯಾಗುವನು. ವೈಶ್ಯನು ಶರದೃತುವಿನಲ್ಲಿ ಅಗ್ನ್ಯಾಧಾನ ಮಾಡಬೇಕು. ಆದರಿಂದ ಅವನು ಪಶುಸಂಪತ್ತನ್ನು ಪಡೆಯುವನು.

**ಮಾಸಿ ಮಾಸಿ ಪೃಷ್ಠಾನ್ಯುಪಯಂತಿ ಮಾಸಿ ಮಾಸ್ಯತಿಗ್ರಾಹ್ಯಾ ಗೃಹ್ಯಂತೇ**

(ತೈ ಸಂ. ೭-೫-೧) ಸತ್ರಯಾಗಮಾಡುವಾಗ ಪ್ರತಿ ಮಾಸದಲ್ಲಿಯೂ ಪೃಷ್ಠವೆಂಬ ಯಜ್ಞವನ್ನು ಮಾಡಬೇಕು ಇತ್ಯಾದಿ ಇವೇ ಮೊದಲಾದ ಮಂತ್ರಗಳು ಮಾಸಪರಿಮಿತಿಯ ಕಾಲವನ್ನು ಸೂಚಿಸುವವು.

**ಯಂ ಕಾಮಯೇತ ವಸೀಯಾನ್ತ್ಸ್ಯಾದಿತಿ ತಂ ಪೂರ್ವಪಕ್ಷೇ ಯಾಜಯೇತ್** (ತೈ. ಸಂ. ೨-೨೩-೧) ಇವೇ ಮೊದಲಾದ ಮಂತ್ರಗಳು ಪಕ್ಷಪ್ರಮಾಣ ಕಾಲವನ್ನು ಹೇಳುವವು.

**ಏಕಾಷ್ಟಕಾಯಾಂ ದೀಕ್ಷೇರನ್—ಫಲ್ಗುನೀಪೂರ್ಣಮಾಸೇ ದೀಕ್ಷೇರನ್** (ತೈ. ಸಂ. ೭-೪-೮-೧) ಇವೇ ಮೊದಲಾದ ಮಂತ್ರಗಳು ತಿಥಿ, ದಿವಸ ಇವುಗಳ ವಿಚಾರವನ್ನು ತಿಳಿಸುವವು.

**ಪ್ರಾತರ್ಜುಹೋತಿ, ಸಾಯಂಜುಹೋತಿ** (ತೈ. ಬ್ರಾ. ೨-೧-೨-೭) ಮೊದಲಾದವು ಪ್ರಾತಃಕಾಲಾದಿ ವಿಧಿಗಳು.

**ಕೃತ್ತಿಕಾಸ್ವಗ್ನಿಮಾದಧೀತ । ಏತದ್ವಾ ಅಗ್ನೇರ್ನಕ್ಷತ್ರಂ** (ತೈ. ಬ್ರಾ. ೧-೧-೨-೧) ಇತ್ಯಾದಿ ವಿಧಿಗಳು ನಕ್ಷತ್ರ ವಿಧಿಗಳು.

ಆದುದರಿಂದ ಕಾಲ ವಿಶೇಷಗಳನ್ನು ತಿಳಿದುಕೊಂಡು ಯಜ್ಞಾನುಷ್ಠಾನ ಮಾಡುವುದಕ್ಕಾಗಿ ಜ್ಯೋತಿಷವು ಉಪಯುಕ್ತವಾಗಿರುವುದು.

**॥ ವ್ಯಾಕರಣ ॥**

ವ್ಯಾಕರಣವು ಪ್ರಕೃತಿ, ಪ್ರತ್ಯಯ, ವಿಭಕ್ತಿ ಮೊದಲಾದ ಶಬ್ದವಿಭಾಗಗಳ ರೂಪಗಳನ್ನು ತೋರಿಸಿ ಕೊಟ್ಟು ಪದಸ್ವರೂಪ, ಮತ್ತು ಅದರ ಅರ್ಥನಿಶ್ಚಯ ಮಾಡುವ ಸಂದರ್ಭಗಳಲ್ಲಿ ಉಪಯೋಗಿಸಲ್ಪಡುತ್ತದೆ. ಇಂತಹ ವ್ಯಾಕರಣದಿಂದ ಏನು ಪ್ರಯೋಜನ ಎಂಬುವುದನ್ನು ವರರುಚಿ ಎಂಬುವರು ತಮ್ಮ ವಾರ್ತಿಕ ಸೂತ್ರದಲ್ಲಿ ರಕ್ಷೋಹಾಗಮಲಘು ಸಂದೇಹಾಃ ಪ್ರಯೋಜನಮಿತಿ ಎಂದು ತೋರಿಸಿದ್ದಾರೆ. ರಕ್ಷಾ, ಊಹ, ಆಗಮ, ಲಘು, ಅಸಂದೇಹ ಮೊದಲಾದ ಪ್ರಯೋಜನಗಳನ್ನು ಕುರಿತು ಪತಂಜಲಿಮಹರ್ಷಿಯು ತಮ್ಮ ಮಹಾ ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ—

ರಕ್ಷಾ—ವೇದಗಳನ್ನು ಕಾಪಾಡುವುದಕ್ಕಾಗಿ ಎಂದರೆ ಉಚ್ಚಾರಣಾದಿಗಳಿಂದ ವೇದವಾಕ್ಯಗಳು ವ್ಯತ್ಯಾಸವಾಗ ದಂತೆಯೂ, ಪಾಠ ಭೇದಗಳು, ಲೋಪದೋಷಗಳು ಸಂಭವಿಸದಂತೆ ಇದ್ದುದು ಇದ್ದಂತೆ ಕಾಪಾಡಿಕೊಂಡು ಬರುವುದಕ್ಕಾಗಿಯೂ ವ್ಯಾಕರಣವನ್ನು ಓದಬೇಕು. ಲೋಪ, ಆಗಮ ಮೊದಲಾದವುಗಳಿಂದ ಉಂಟಾಗುವ ವರ್ಣವಿಕಾರಗಳನ್ನು ಬಲ್ಲವನು ವೇದ ಗಳನ್ನು ಅಚ್ಚಳಿಯದಂತೆ ಚೆನ್ನಾಗಿ ಕಾಪಾಡಿಕೊಂಡು ಹೋಗುವನು ಮತ್ತು ಇಂತಹ ವ್ಯಾಕರಣಜ್ಞನು ವೇದವನ್ನು ಚೆನ್ನಾಗಿ ತಿಳಿದುಕೊಳ್ಳಬಲ್ಲನು.

**ಊಹ** :— ವೇದಮಂತ್ರಗಳಲ್ಲಿ ಪುಲ್ಲಿಂಗಾದಿಲಿಂಗಗಳು, ವಚನಗಳು ವಿಭಕ್ತಿ ಮೊದಲಾದವುಗಳು ಇವುಗಳನ್ನು ಅಷ್ಟು ಕಟ್ಟುನಿಟ್ಟಾಗಿ ಉಪಯೋಗಿಸಿರುವುದಿಲ್ಲ. ಅದಲ್ಲದೆ ಯಜ್ಞಕಾಲದಲ್ಲಿ ಮಂತ್ರಗಳನ್ನು ಸಂದರ್ಭಾನುಸಾರವಾಗಿ ವಚನ, ವಿಭಕ್ತಿ ಮೊದಲಾದವುಗಳ ಬದಲಾವಣೆಯಿಂದ ಸ್ವಲ್ಪ ವ್ಯತ್ಯಾಸಮಾಡಿ ಉಪಯೋಗಿಸಬೇಕಾಗುವುದು. ಹಾಗೆ ಬದಲಾಯಿಸಲು ವ್ಯಾಕರಣವನ್ನು ತಿಳಿಯದವನಿಂದ ಸಾಧ್ಯವಿಲ್ಲ. ಆದುದರಿಂದ ಸಮಯೋಚಿತವಾಗಿ ಯಾವ ವಚನ ಯಾವ ವಿಭಕ್ತಿ ಮೊದಲಾದವುಗಳನ್ನು ಆಯಾ ಸಂದರ್ಭಕ್ಕೆ ಅನುಸಾರವಾಗಿ ಊಹಿಸಿ ಉಪಯೋಗಿಸಬೇಕು ಎಂಬುವುದನ್ನು ತಿಳಿಯಬೇಕಾಗಿರು ವುದರಿಂದ ವ್ಯಾಕರಣವನ್ನು ಕಲಿಯಲೇಬೇಕು.

**ಆಗಮ** :— ಬ್ರಾಹ್ಮಣನಾದವನು ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ಧರ್ಮಸ್ವರೂಪವಾದ ಷಡಂಗಸಹಿತ ವೇದವನ್ನು ಅಧ್ಯಯನ ಮಾಡಬೇಕು ಮತ್ತು ಅದರ ಅರ್ಥವನ್ನು ತಿಳಿದುಕೊಳ್ಳಬೇಕು ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಆರು ವೇದಾಂಗಗಳಲ್ಲಿ ವ್ಯಾಕರಣವೇ ಮುಖ್ಯವು. ಪ್ರಧಾನಾಂಗವಾದ ಇಂತಹ ವ್ಯಾಕರಣವನ್ನು ಓದುವುದಕ್ಕೆ ಪಟ್ಟ ಪ್ರಯತ್ನವು ಸಫಲವಾಗುವುದು. ಆದುದರಿಂದ ವ್ಯಾಕರಣವನ್ನು ಓದಲೇಬೇಕು.

**ಲಘು** :— ವೇದವನ್ನು ಸುಲಭವಾಗಿ ತಿಳಿದುಕೊಳ್ಳಲು ಸಹಾಯವಾಗಲೆಂದು ವ್ಯಾಕರಣವನ್ನು ಓದಬೇಕು. ಒಂದು ಸಮಯದಲ್ಲಿ ದೇವಗುರುವಾದ ಬೃಹಸ್ಪತಿಯು ಇಂದ್ರನಿಗೆ ಶಬ್ದಶಾಸ್ತ್ರವನ್ನು ಬೋಧಿಸಲು ಪ್ರಯತ್ನಮಾಡಿ ವೇದದಲ್ಲಿರುವ ಪ್ರತಿಯೊಂದು ಪದದ ರೂಪನಿಷ್ಪತ್ತಿ ಮೊದಲಾದ ವ್ಯಾಕರಣವಿಶೇಷವನ್ನು ದೇವಮಾನರೀತ್ಯಾ ಒಂದು ಸಾವಿರ ವರ್ಷಗಳವರೆಗೂ ಉಪದೇಶ ಮಾಡಿದನು. ಆದರೂ ಕೊನೆ ಮುಟ್ಟಲಿಲ್ಲ. ಹೇಳುವವನು ಬೃಹಸ್ಪತಿ; ಕೇಳುವವನು ಇಂದ್ರ; ಹೇಳಿದ ಕಾಲವು ಒಂದು ಸಹಸ್ರ ದಿವ್ಯವರ್ಷಗಳು. ಆದರೂ ಮುಗಿಯಲಿಲ್ಲ. ಹೀಗಿರುವಲ್ಲಿ ಈಗಿನ ಕಾಲದಲ್ಲಿ ಪುರುಷನ ಪರಮಾಯುಸ್ಸೆಂದರೆ ಒಂದು ನೂರು ವರ್ಷಗಳಾಗಬಹುದು. ಇದಷ್ಟರಲ್ಲಿ ಪ್ರತಿಪದವನ್ನು ಹಿಡಿದು ಶಬ್ದಶಾಸ್ತ್ರವನ್ನು ತಿಳಿಯುವುದೆಂತು ? ಆದುದರಿಂದ ಪದಪ್ರಯೋಗಗಳನ್ನು ಸುಲಭವಾಗಿ ಬೇಗನೆ ತಿಳಿದುಕೊಳ್ಳುವುದಕ್ಕಾಗಿ ವ್ಯಾಕರಣವನ್ನೂ ಕಲಿಯಬೇಕು.

**ಅಸಂದೇಹ** :— ಶಬ್ದಗಳಿಗೆ ಸರಿಯಾದ ಅರ್ಥವನ್ನು ಮಾಡುವಾಗ ಅನೇಕ ಸಂದೇಹಗಳು ಪ್ರಾಪ್ತವಾಗುವವು. ಅವುಗಳ ಪರಿಹಾರಕ್ಕಾಗಿ ವ್ಯಾಕರಣವನ್ನು ಅಧ್ಯಯನ ಮಾಡಬೇಕು. ಒಂದಾನೊಂದು ಕಾಲದಲ್ಲಿ ದೈತ್ಯರು ಯುದ್ಧಕಾಲದಲ್ಲಿ ಹೇSರಯಃ (ಹೇ ಅರಯಃ) ಎಂಬ ಶಬ್ದಕ್ಕೆ ಬದಲಾಗಿ ಹೇSಲಯ. ಎಂದು ಅಪಶಬ್ದವನ್ನು ಉಚ್ಚಾರಣೆ ಮಾಡಿದ್ದರಿಂದ ಲಯಶಬ್ದಕ್ಕೆ ನಾಶವೆಂದರ್ಥವಾಗಿ ಅವರು ಲಯಕ್ಕೀಡಾದರು ಎಂದರೆ ಅವರಿಗೆ ಯುದ್ಧದಲ್ಲಿ ಸೋಲುಂಟಾಯಿತು. ಆದ್ದರಿಂದ ಅಪಶಬ್ದವನ್ನು ನಿವಾರಿಸುವುದಕ್ಕಾಗಿ ವ್ಯಾಕರಣವನ್ನು ಓದಬೇಕು. ಇಷ್ಟೇ ಅಲ್ಲದೆ ಶಬ್ದಾನುಶಾಸನ ಅಥವಾ ವ್ಯಾಕರಣ ಶಾಸ್ತ್ರದಿಂದ ಇನ್ನೂ ಅನೇಕ ಪ್ರಯೋಜನಗಳುಂಟು. ಆದುದರಿಂದ ವೇದಾರ್ಥಜ್ಞಾನಕ್ಕೆ ವ್ಯಾಕರಣವು ಅವಶ್ಯಕವಾಗಿದೆ.

## ॥ ನಿರುಕ್ತ ॥

ಇದುವರೆಗೂ ವೇದಾರ್ಥಜ್ಞಾನಕ್ಕೆ ಬೇಕಾದ ಶಿಕ್ಷಾ, ಛಂದಶ್ಶಾಸ್ತ್ರ, ಕಲ್ಪ, ಜ್ಯೋತಿಷ, ವ್ಯಾಕರಣ ಎಂಬ ಐದು ವೇದಾಂಗಗಳ ವಿಷಯಗಳನ್ನು ಸೂಕ್ಷ್ಮವಾಗಿ ವಿವರಿಸಿದ್ದಾಯಿತು. ಈಗ ಆರನೆಯದೂ ಅತಿ ಮುಖ್ಯವೂ ಅತಿ ಪ್ರಾಚೀನವೂ ಆದ ನಿರುಕ್ತನೆಂಬ ವೇದಾಂಗವನ್ನೂ ವೇದಾರ್ಥ ಜ್ಞಾನಕ್ಕೆ ಅದರ ಅವಶ್ಯಕತೆಯನ್ನೂ ಅದರಲ್ಲಿರುವ ವಿಷಯಗಳ ಸೂಕ್ಷ್ಮ ವಿವರಣೆಯನ್ನೂ ಹೇಳಲಾಗುವುದು. ಇನ್ನೊಂದರ ಸಹಾಯವಿಲ್ಲದೆ ಪದಕ್ಕೆ ಅರ್ಥವಾಗುವಂತೆ ವಿವರಣೆಯನ್ನು ಹೇಳಿರುವ ಗ್ರಂಥಕ್ಕೆ ನಿರುಕ್ತವೆಂದು ಹೆಸರು

**ನಿಃ ಉಕ್ತಂ = ನಿರುಕ್ತಂ** :— ಎಂದರೆ ಆ ಪದದಿಂದ ಉಂಟಾಗುವ ಅರ್ಥವು ಬೇರೆ ಪದಗಳ ಸಹಾಯದಿಂದ ಆಗಬೇಕಾದುದಿಲ್ಲ ಎಂದರ್ಥವು. ಕೆಲವರು ಇಲ್ಲಿ **ನಿ.** ಎಂಬ ಉಪಸರ್ಗವು **ಸಂ** ಎಂಬ ಉಪಸರ್ಗದ ಅರ್ಥವನ್ನು ಹೇಳುವುದೆಂದು ಭಾವಿಸಿ ಅದರಂತೆ ಅರ್ಥ ಮಾಡಿರುವರು. **ಸಂ** ಎಂದರೆ ಚೆನ್ನಾಗಿ ಎಂದು. ನಿರುಕ್ತವೆಂದರೆ ಚೆನ್ನಾಗಿ ಅರ್ಥ ವಿವರಣೆ ಮಾಡಿರುವ ಶಬ್ದವು ಎಂದರ್ಥವು. ಈ ನಿರುಕ್ತ ಗ್ರಂಥದಲ್ಲಿ **ಗೌಃ ಗ್ಮಾ ಜ್ಮಾ ಕ್ಷ್ಮಾ ಕ್ಷಾ ಕ್ಷಮಾ** ಎಂದು ಆರಂಭಿಸಿ **ವಸವಃ ವಾಜಿನಃ ದೇವಪತ್ನ್ಯಃ** ಎಂದು ಮುಗಿದಿದೆ. ಈ ಗ್ರಂಥದಲ್ಲಿ ಪದಗಳ ಅರ್ಥವನ್ನು ತಿಳಿದುಕೊಳ್ಳಲು ಪರಾಪೇಕ್ಷೆ ಯು ಎಂದರೆ ಇನ್ನೊಂದರ ಸಹಾಯವು ಬೇಕಿಲ್ಲ. ಏಕೆಂದರೆ ಇಂತಿಂತಹ ಶಬ್ದಗಳು ಪೃಥಿವಿಯ ಹೆಸರುಗಳು; ಇಂತಹ ಶಬ್ದಗಳು ಹಿರಣ್ಯದ ಹೆಸರುಗಳು ಎಂದು ಅಲ್ಲಲ್ಲಿಯೇ ಸ್ಪಷ್ಟವಾಗಿ ಹೇಳಿದೆ. ಈ ನಿರುಕ್ತ ಗ್ರಂಥವು ಮೂರು ಕಾಂಡಗಳಾಗಿ ವಿಭಾಗಿಸಲ್ಪಟ್ಟಿದೆ. ಅದರ ವಿವರವನ್ನು ಅನುಕ್ರಮಣಿಕಾ ಭಾಷ್ಯದಲ್ಲಿ ಹೀಗೆ ಹೇಳಿದೆ —

**ಆದ್ಯಂ ನೈಘಂಟುಕಂ ಕಾಂಡಂ ದ್ವಿತೀಯಂ ನೈಗಮಂ ತಥಾ ।**
**ತೃತೀಯಂ ದೈವತಂ ಚೇತಿ ಸಮಾಮ್ನಾಯಸ್ತ್ರಿಧಾ ಸ್ಥಿತಃ ।**
**ಗೌರಾದ್ಯಪಾರಪರ್ಯಂತಮಾದ್ಯಂ ನೈಘಂಟುಕಂ ಮತಂ ।**
**ಜಹಾದ್ಯುಲ್ಬಮೃಬೀಸಾಂತಂ ನೈಗಮಂ ಸಂಪ್ರಚಕ್ಷತೇ ।**
**ಅಗ್ನ್ಯಾದಿದೇವಪತ್ನ್ಯಂತಂ ದೇವತಾಕಾಂಡಮುಚ್ಯತೇ ॥**
**ಅಗ್ನ್ಯಾದಿದೇವೀ ಊರ್ಜಾಹುತ್ಯಂತಃ ಕ್ಷಿತಿಗತೋ ಗಣಃ ॥**
**ವಾಯ್ವಾದಯೋ ಭಗಾಂತಾಃ ಸ್ಯುರಂತರಿಕ್ಷಸ್ಥದೇವತಾಃ ।**
**ಸೂರ್ಯಾದಿದೇವಪತ್ನ್ಯಂತಾ ದ್ಯುಸ್ಥಾನಾ ದೇವತಾ ಇತಿ ॥**
**ಗವಾದಿದೇವಪತ್ನ್ಯಂತಂ ಸಮಾಮ್ನಾಯಮಧೀಯತ ಇತಿ ॥**

ಎಂದರೆ — ಈ ನಿರುಕ್ತಗ್ರಂಥದಲ್ಲಿ ಮೂರು ಕಾಂಡಗಳಿವೆ. ಮೊದಲನೆಯದು ನೈಘಂಟುಕಕಾಂಡ, ಎರಡನೆಯದು ನೈಗಮಕಾಂಡ, ಮೂರನೆಯದು ದೈವತಕಾಂಡ ಎಂದು. **ಗೌಃ** ಎಂಬ ಶಬ್ದದ ವಿವರಣೆಯಿಂದ ಆರಂಭವಾಗಿ **ಅಪಾರ** ಎಂಬ ಶಬ್ದದವರೆಗೂ ನೈಘಂಟುಕಕಾಂಡವು; **ಜಹಾ** ಎಂದು ಆರಂಭವಾಗಿ **ಉಲ್ಬಂ ಋಬೀಷಂ** ಎನ್ನುವವರೆಗೆ ಇರುವುದು ಎರಡನೆಯ ನೈಗಮಕಾಂಡವು; **ಅಗ್ನಿ** ಎಂದು ಆರಂಭವಾಗಿ **ದೇವಪತ್ನ್ಯಃ** ಎಂದು ಮುಗಿಯುವ ಮೂರನೆಯದು ದೈವತಕಾಂಡವು. ಈ ದೈವತ ಕಾಂಡದಲ್ಲಿ ಅಗ್ನಿಶಬ್ದದಿಂದ ಊರ್ಜಾಹುತಿ ಎನ್ನುವವರೆಗೆ ಇರುವ ಶಬ್ದಗಳು ಭೂಮಿಯ ಮೇಲೆ ಇರುವ ದೇವತೆಗಳ ಸಮೂಹವನ್ನು ಸೂಚಿಸುವುವು; ವಾಯುವಿನಿಂದ ಭಗದವರೆಗಿರುವ ಶಬ್ದಗಳು ಅಂತರಿಕ್ಷದಲ್ಲಿರುವ

ದೇವತೆಗಳ ಹೆಸರುಗಳು. ಸೂರ್ಯನಿಂದ ಮೊದಲುಮಾಡಿ ದೇವಪತ್ನಿವರೆಗೆ ಇರುವ ಶಬ್ದಗಳು ಸ್ವರ್ಗದಲ್ಲಿರುವ ದೇವತೆಗಳ ಹೆಸರುಗಳು. ಈ ಪ್ರಕಾರವಾಗಿ **ಗೌಃ** ಎಂಬ ಶಬ್ದದಿಂದ ಮೊದಲುಮಾಡಿ ದೇವಪತ್ನ್ಯಃ ಎನ್ನುವವರೆಗಿನ ಶಬ್ದಗಳ ಅರ್ಥವಿವರಣೆ ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು.

ಏಕಾರ್ಥವಾಚಿಗಳಾದ ಎಂದರೆ ಒಂದೇ ಅರ್ಥವನ್ನು ಸೂಚಿಸುವ ಶಬ್ದಗಳ ಸಮೂಹವನ್ನು ಒಂದು ಕ್ರಮದಲ್ಲಿ ಹೇಳುವ ಗ್ರಂಥಗಳಿಗೆ ನಿಘಂಟುವೆಂದು ಹೆಸರು. ಅಂತಹ ನಿಘಂಟುಗಳಲ್ಲಿ ಅಮರಸಿಂಹ, ವೈಜಯಂತೀ, ಹಲಾಯುಧ ಮೊದಲಾದ ಹತ್ತು ನಿಘಂಟುಗ್ರಂಥಗಳು ಪ್ರಸಿದ್ಧವಾಗಿ ಬಳಕೆಯಲ್ಲಿವೆ. ಆದರೆ ಈ ನಿಘಂಟುಗಳೆಲ್ಲಾ ಆಧುನಿಕ ಸಂಸ್ಕೃತ ಭಾಷೆಯಲ್ಲಿರುವ ಶಬ್ದಗಳನ್ನೇ ವಿವರಿಸುತ್ತವೆ. ವೇದಶಬ್ದಗಳನ್ನು ವಿವರಿಸುವ ಹವ್ಯಾಸಕ್ಕೆ ಹೋಗಿಲ್ಲ ಹಾಗೆಯೇ ಈ ನಿರುಕ್ತಗ್ರಂಥದ ಮೊದಲನೆಯ ಕಾಂಡದಲ್ಲಿ ಏಕಾರ್ಥವಾಚಿಗಳಾದ ಪರ್ಯಾಯಶಬ್ದಸಮೂಹಗಳನ್ನು ಹೇಳಿರುವುದರಿಂದ ಅದಕ್ಕೆ ನೈಘಂಟಕ ಕಾಂಡ ಅಥವಾ ನಿಘಂಟು ಎಂದು ಹೆಸರು. ಈ ನಿಘಂಟು ಕಾಂಡದಲ್ಲಿ ಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಪೃಥಿವೀ ಮೊದಲಾದ ಲೋಕಗಳು, ದಿಕ್ಕುಗಳು, ಕಾಲ ಮೊದಲಾದುವುಗಳ ಹೆಸರುಗಳೂ ಇವೆ. ಎರಡನೆಯ ಅಧ್ಯಾಯದಲ್ಲಿ ಮನುಷ್ಯಶರೀರದ ಅವಯವಾದಿಗಳು ಮುಂತಾದ ವಸ್ತುಗಳ ಹೆಸರುಗಳಿವೆ. ಮೂರನೆಯ ಅಧ್ಯಾಯದಲ್ಲಿ ಮೇಲೆ ಹೇಳಿದ ವಸ್ತುಗಳ ಗುಣಾವಗುಣಗಳೂ ಬಹುತ್ವ ಹ್ರಸ್ವತ್ವ ಮೊದಲಾದ ಧರ್ಮಗಳೂ ವಿವರಿಸಲ್ಪಟ್ಟಿವೆ.

ನಿಗಮವೆಂದರೆ ವೇದವು. ಏಕೆಂದರೆ ಯಾಸ್ಕರು ಅಲ್ಲಲ್ಲಿ ವೇದಗಳಿಂದ ಎತ್ತಿ ಉದಹರಿಸಿರುವ ವಾಕ್ಯಗಳನ್ನು ನಿಗಮ ವಾಕ್ಯಗಳೆಂದು ಕರೆದಿದ್ದಾರೆ. ನಾಲ್ಕನೆಯೆ ಅಧ್ಯಾಯವಾದ ಈ ಎರಡನೆಯ ಕಾಂಡದಲ್ಲಿ ಸಾಧಾರಣವಾಗಿ ವೇದದಲ್ಲಿರುವ ಶಬ್ದಗಳನ್ನೇ ವಿವರಿಸಿರುವುದರಿಂದ ಈ ಕಾಂಡಕ್ಕೆ ನೈಗಮಕಾಂಡವೆಂದು ಹೆಸರು ಬಂದಿರುವುದು.

ಐದನೆಯ ಅಧ್ಯಾಯ ರೂಪವಾದ ಮೂರನೆಯ ಕಾಂಡದಲ್ಲಿ ದೇವತೆಗಳ ವಿಷಯವನ್ನೇ ಹೆಚ್ಚಾಗಿ ಹೇಳಿರುವುದರಿಂದ ಈ ಕಾಂಡಕ್ಕೆ ದೈವತಕಾಂಡವೆಂದು ಹೆಸರು. ಯಾಸ್ಕರು ಈ ಗ್ರಂಥವನ್ನು **ಸಮಾಮ್ನಾಯಃ ಸಮಾಮ್ನಾತಃ** ಎಂದು ಆರಂಭಿಸಿ **ತಸ್ಯಾಸ್ತಸ್ಯಾಸ್ತಾದ್ಭಾವ್ಯಮನು ಭವ್ಯತನು ಭವತಿ** ಎನ್ನುವವರೆಗೆ ಒಟ್ಟು ಹನ್ನೆರಡು (೧೨) ಅಧ್ಯಾಯಗಳನ್ನು ರಚಿಸಿರುವರು ಈ ಅಧ್ಯಾಯಗಳಲ್ಲಿ ವಿವರಿಸಿರುವ ಪದಗಳಿಗೆ ಅನ್ವಯಾರ್ಥಗಳನ್ನು ನಿ-ಶೇಷವಾಗಿ ಹೇಳಿರುವುದರಿಂದ ಈ ಗ್ರಂಥಕ್ಕೆ ನಿರುಕ್ತ ಎಂಬ ಹೆಸರು. ವ್ಯುತ್ಪತ್ತಿ ಕ್ರಮದಿಂದ ಸಲ್ಲುವುದು. ಈ ಗ್ರಂಥದಲ್ಲಿ ನಾಮ, ಆಖ್ಯಾತ, ಉಪಸರ್ಗ, ನಿಪಾತ (ಅವ್ಯಯ) ಎಂಬ ನಾಲ್ಕು ವಿಧವಾದ ಪದಸಮೂಹಗಳಿರುವವೆಂದು ಹೇಳಿ ಅವುಗಳಲ್ಲಿ ನಿಪಾತವೆಂಬ ಪದಗಳು ನಾನಾರ್ಥಗಳಲ್ಲಿ ಉಪಯೋಗಿಸಲ್ಪಡುವುದರಿಂದ- **ಉಚ್ಚಾವಚೇಷ್ವರ್ಥೇಷು ನಿಪತಂತೀತಿ ನಿಪಾತಾಃ**:–ಪರಸ್ಪರ ವಿರೋಧಾರ್ಥಗಳಲ್ಲಿ ಇವುಗಳು ಉಪಯೋಗಿಸಲ್ಪಡುವುದರಿಂದ ಈ ಶಬ್ದಸಮೂಹಕ್ಕೆ ನಿಪಾತವೆಂದು ಹೆಸರು ಬಂದಿರುವುದು ಎಂದು ಹೇಳಿದ್ದಾರೆ.

ಈ ನಿರ್ವಚನಗಳಿಗೆ ಮೂಲವಿಲ್ಲ (ಆಧಾರ ಅಥವಾ ಪ್ರಮಾಣವಿಲ್ಲ) ಎಂದು ಶಂಕಿಸಬೇಕಾಗಿಲ್ಲ. ಬ್ರಾಹ್ಮಣ ಗ್ರಂಥಗಳಲ್ಲಿ ಅಲ್ಲಲ್ಲಿ ಈ ವ್ಯುತ್ಪತ್ತಿಯನ್ನು ಹಿಡಿದು ಕೆಲವು ಪದಗಳಿಗೆ ನಿರ್ವಚನವನ್ನು ಹೇಳಿರುವುದುಂಟು. ಉದಾಹರಣೆಗಾಗಿ **ತದಾಹುತೀನಾಮಾಹುತಿತ್ವಂ** (ಐ. ಬ್ರಾ. ೧–೧–೨) ಈ ಕಾರಣದಿಂದ ಆಹುತಿಗಳಿಗೆ ಆಹುತಿಯೆಂಬ ಹೆಸರು ಬಂದಿದೆ. **ಯದಪ್ರಥಯುತ್ । ತತ್ಪೃಥಿವ್ಯೈ ಪೃಥಿವಿತ್ವಂ** (ತೈ. ಬ್ರಾ. ೧–೧–೩–೭) ಅದನ್ನು ಹರಡಿದನು ಎಂದರೆ ತಗ್ಗುದಿಣ್ಣೆಗಳಿಲ್ಲದ ಸಮಪ್ರದೇಶವನ್ನಾಗಿ ಮಾಡಿದನು. ಸಮಪ್ರದೇಶವಾಗಿ ಹರಡಿಕೊಂಡಿರುವುದರಿಂದ ಭೂಮಿಗೆ (ಪೃಥಿವಿಗೆ) ಪೃಥಿವೀ ಎಂದು

ಹೆಸರಾಯಿತು. ಇವೇ ಮೊದಲಾದ ಅನೇಕ ಮಂತ್ರಗಳನ್ನು ಉದಾಹರಿಸಬಹುದು. ನಿರುಕ್ತಗ್ರಂಥಕಾರರೂ ಕೂಡ ಅಲ್ಲಲ್ಲಿ ತಾವು ಹೇಳಿರುವ ನಿರ್ವಚನಗಳಿಗೆ ಆಧಾರವಾದ ಬ್ರಾಹ್ಮಣವಾಕ್ಯಗಳನ್ನು ಉದಾಹರಿಸಿದ್ದಾರೆ. ಕೆಲವು ಪದಗಳಿಗೆ ವ್ಯಾಕರಣ ಬಲದಿಂದ ನಿರ್ವಚನಮಾಡಲು ಸಾಧ್ಯವಿದ್ದರೂ ಎಲ್ಲಾ ಪದಗಳಿಗೂ ವ್ಯಾಕರಣ ಬಲದಿಂದಲೇ ನಿರ್ವಚನವು ಸಿದ್ಧಿಸುವುದಿಲ್ಲ. ಆದುದರಿಂದ ಗ್ರಂಥಕಾರರು ಹೀಗೆ ಹೇಳಿದ್ದಾರೆ— **ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥ-ಸಾಧಕಂ ಚ** (ನಿ. ೧–೧೫) ಆದುದರಿಂದ ಈ ಶಾಸ್ತ್ರವು (ನಿರುಕ್ತವು) ವ್ಯಾಕರಣ ಶಾಸ್ತ್ರದ ಸಾರಭೂತವಾಗಿರುವುದು. ಆದುದರಿಂದ ವೇದಾರ್ಥವನ್ನು ತಿಳಿಯುವುದಕ್ಕಾಗಿ ನಿರುಕ್ತವು ಬೇಕೇಬೇಕು. ಈಗ ನಿರುಕ್ತ ಗ್ರಂಥದ ಪ್ರಥಮಾಧ್ಯಾಯವನ್ನು ಪ್ರಾರಂಭಿಸಿ ಮೊದಲನೆಯ ಖಂಡವನ್ನು ಹೇಳಿ ಅನಂತರ ಆ ಖಂಡದಲ್ಲಿರುವ ಬೇರೆ ಬೇರೆ ವಾಕ್ಯಗಳನ್ನು ವಿಂಗಡಿಸಿ ಅರ್ಥಾನುವಾದ ಮಾಡುತ್ತೇನೆ.

### ತತ್ರ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

ಓಂ ಸಮಾಮ್ನಾಯಃ ಸಮಾಮ್ನಾತಃ ಸ ವ್ಯಾಖ್ಯಾತವ್ಯಸ್ತಮಿಮಂ ಸಮಾಮ್ನಾಯೇ ನಿಘಂಟವ ಇತ್ಯಾಚಕ್ಷತೇ ನಿಘಂಟವಃ ಕಸ್ಮಾ-ನ್ನಿಗಮಾ ಇಮೇ ಭವಂತಿ ಛಂದೋಭ್ಯಃ ಸಮಾಹೃತ್ಯ ಸಮಾಹೃತ್ಯ ಸಮಾಮ್ನಾತಾಸ್ತೇ ನಿಗಂತವ ಏವ ಸಂತೋ ನಿಗಮನಾನ್ನಿಘಂಟವ ಉಚ್ಯಂತ ಇತ್ಯೌಪಮನ್ಯವೋಽಪಿ ವಾಹನನಾದೇವ ಸ್ಯುಃ ಸಮಾಹತಾ ಭವಂತಿ ಯದ್ವಾ ಸಮಾಹೃತಾ ಭವಂತಿ ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತಾನೀಮಾನಿ ಭವಂತಿ ತತ್ರೈತನ್ನಾಮಾಖ್ಯಾತಯೋರ್ಲಕ್ಷಣಂ ಪ್ರದಿಶಂತಿ ಭಾವಪ್ರಧಾನಮಾಖ್ಯಾತಂ ಸತ್ತ್ವಪ್ರಧಾನಾನಿ ನಾಮಾನಿ ತದ್ಯತ್ರೋಭೇ ಭಾವಪ್ರಧಾನೇ ಭವತಃ ಪೂರ್ವಾ-ಪರೀಭೂತಂ ಭಾವಮಾಖ್ಯಾತೇನಾಚಷ್ಟೇ ವ್ರಜತಿ ಪಚತೀತ್ಯುಪ-ಕ್ರಮಪ್ರಭೃತ್ಯಪವರ್ಗಪರ್ಯಂತಂ ಮೂರ್ತಂ ಸತ್ತ್ವಭೂತಂ ಸತ್ತ್ವನಾಮಭಿರ್ವ್ರಜ್ಯಾ ಪಕ್ತಿರಿತ್ಯದ ಇತಿ ಸತ್ತ್ವಾನಾಮುಪದೇಶೋ ಗೌರಶ್ವಃ ಪುರುಷೋ ಹಸ್ತೀತಿ ಭವತೀತಿ ಭಾವಸ್ಯಾಸ್ತೇ ಶೇತೇ ವ್ರಜತಿ ತಿಷ್ಠತೀತೀಂದ್ರಿಯನಿತ್ಯಂ ವಚನಮೌದುಂಬರಾಯಣಃ ॥೧॥

ಇದು ಪ್ರಥಮಾಧ್ಯಾಯದ ಪ್ರಥಮಖಂಡವು. ಇದಕ್ಕೆ ಅರ್ಥವನ್ನು ವಿವರಿಸುವಾಗ ಒಟ್ಟಾಗಿ ವಿವರಿಸಿದರೆ ಸಂಶಯಕ್ಕೆ ಆಸ್ಪದವಾಗುವುದರಿಂದ ಈ ಖಂಡದಲ್ಲಿರುವ ವಾಕ್ಯಗಳನ್ನು ವಿಂಗಡಿಸಿ ಅವುಗಳನ್ನು ಪ್ರತ್ಯೇಕವಾಗಿ ವಿವರಿಸುತ್ತೇನೆ—

ಓಂ ॥ ಸಮಾಮ್ನಾಯಃ ಸಮಾಮ್ನಾತಃ ಸ ವ್ಯಾಖ್ಯಾತವ್ಯಃ ॥

ಸಂಪ್ರದಾಯಾನುಸಾರವಾಗಿ ಬಂದಿರುವ ವೈದಿಕಶಬ್ದಸಮೂಹವು ಋಷಿಗಳಿಂದ ಗ್ರಂಥರೂಪವಾಗಿ ಸಂಗ್ರಹಿಸಲ್ಪಟ್ಟಿದೆ. **ಗೌಃ** ಎಂಬ ಶಬ್ದದಿಂದ ಮೊದಲಾಗುವ **ದೇವಪತ್ನ್ಯಃ** ಎಂಬ ಶಬ್ದದವರೆಗಿರುವ ಕ್ಲಿಷ್ಟವಾದ ಈ ವೈದಿಕ ಶಬ್ದಸಮೂಹಕ್ಕೆ ಸಮಾಮ್ನಾಯವೆಂದು ಹೆಸರು. **ಸಂ** ಮತ್ತು **ಆಙ್** ಎಂಬ ಉಪಸರ್ಗಗಳಿಂದ ಕೂಡಿದ **ಮ್ನಾ** ಎಂಬ ಧಾತುವಿನಿಂದ ಈ ಸಮಾಮ್ನಾಯಶಬ್ದವು ವ್ಯುತ್ಪನ್ನವಾಗಿದೆ. ಅಲ್ಲದೆ ಯಾವ ಶಬ್ದಗಳನ್ನು ಚೆನ್ನಾಗಿ ಅಭ್ಯಾಸಮಾಡಿದರೆ ವೇದಗಳ ಅರ್ಥವನ್ನು ತಿಳಿಯುವುದಕ್ಕೆ ಅನುಕೂಲವಾಗುವುದೋ ಆ ಪದಗಳ ಗುಂಪಿಗೆ ಸಮಾಮ್ನಾಯವೆನ್ನುತ್ತಾರೆ. ಈ ಸಮಾಮ್ನಾಯವು (ವೇದಗಳಲ್ಲಿ ರುವ ಶಬ್ದ ಸಮೂಹವು) ಸಮಾಮ್ನಾತವಾಗಿದೆ ಎಂದರೆ ಒಂದೆಡೆ ಕ್ರೋಡೀಕರಿಸಲ್ಪಟ್ಟಿದೆ. ಈಗ ಈ ಶಬ್ದ ಸಮೂಹವು ವಿವರಿಸಲ್ಪಡಬೇಕಾಗಿದೆ. ಇಲ್ಲಿ ವಿವರಣೆಗೆ ಒಳಗಾಗುವುದು ಈ ಗ್ರಂಥದಲ್ಲಿ ಕ್ರೋಡೀಕೃತವಾದ ಶಬ್ದ ಸಮೂಹ ಮಾತ್ರವೇ ಅಲ್ಲ. ಈ ಪದಸಮೂಹಕ್ಕೆ ಸೇರದಿರುವ ಇತರ ಅನೇಕ ಶಬ್ದಗಳೂ ವಿವರಣೆಗೆ ಒಳಗಾಗುತ್ತವೆ. ವಿವರಣೆಗೆ ಒಳಗಾಗದಿರುವ ಪದಗಳನ್ನು ಇಲ್ಲಿ ಏಕೆ ಸೇರಿಸಲಿಲ್ಲ ಎಂದರೆ ಗ್ರಂಥವು ಅತಿಯಾಗಿ ವಿಸ್ತಾರವಾಗುವುದು ಎಂಬ ದೃಷ್ಟಿಯಿಂದ ಎಲ್ಲಾ ಪದಗಳನ್ನೂ ಸೇರಿಸಲಿಲ್ಲವೆಂದೇ ಹೇಳಬೇಕಾಗುತ್ತದೆ. ಗ್ರಂಥದ ಶೈಲಿಯಿಂದ ಸಂಗ್ರಹದಲ್ಲಿ ಇಲ್ಲದ ಪದಗಳೂ ವ್ಯಾಖ್ಯಾನಕ್ಕೆ ಉದ್ದಿಷ್ಟ ವಾಗುವುವೆಂದು ಸೂಚಿತವಾಗುತ್ತದೆ.

ತಮಿಮಂ ಸಮಾಮ್ನಾಯಂ ನಿಘಂಟವ ಇತ್ಯಾಚಕ್ಷತೇ ।

ಸಮಾಮ್ನಾತ ಮತ್ತು ಅಸಮಾಮ್ನಾತ ಎಂಬ ಎರಡು ಗುಂಪುಗಳಿಗೂ ಸೇರಿರುವ ಶಬ್ದಸಮುದಾಯವನ್ನು ಅನೇಕ ಆಚಾರ್ಯರು, ಋಷಿಗಳು ಮತ್ತು ಪಂಡಿತರು **ನಿಘಂಟು** ಎಂಬ ಶಬ್ದದಿಂದ ವ್ಯವಹರಿಸುತ್ತಾರೆ.

ನಿಘಂಟವಃ ಕಸ್ಮಾನ್ನಿಗಮಾ ಇಮೇ ಭವಂತಿ

ಈ ಸಮೂಹಕ್ಕೆ **ನಿಘಂಟವಃ** ಎಂಬ ಹೆಸರು ಏಕೆ ಬಂದಿತು ? ಎಂದರೆ **ನಿಗಮಾ ಇಮೇ ಭವಂತಿ** ಈ ಶಬ್ದಗಳೆಲ್ಲಾ ವೇದಗಳಲ್ಲಿರುವುದೇ ಆಗಿವೆ. ಮತ್ತು ನಿಶ್ಚಯವಾಗಿ, ನಿರ್ದಿಷ್ಟವಾಗಿ ಅಥವಾ ಅಧಿಕವಾಗಿ ರಹಸ್ಯ ಅಥವಾ ನಿಗೂಢವಾದ ಅರ್ಥವನ್ನು ಈ ಪದಗಳು ಸೂಚಿಸುವುದರಿಂದ ಇವುಗಳ ಸಹಾಯದಿಂದ ಮಂತ್ರಗಳ ಗೂಢಾರ್ಥಗಳನ್ನು ತಿಳಿಯಲು ಸಹಾಯ ವಾಗುವುದು. ಆದ್ದರಿಂದ **ನಿಘಂಟವಃ** ಎಂದರೆ **ನಿಗಮಾಃ** ಎಂಬ ಹೆಸರೂ ಅನ್ವರ್ಥವಾಗಿದೆ.

ಛಂದೋಭ್ಯಃ ಸಮಾಹೃತ್ಯ ಸಮಾಮ್ನಾತಾಃ ॥

ಈ ಶಬ್ದಗಳನ್ನು ಒಟ್ಟಿಗೆ ಗುಂಪು ಗುಂಪಾಗಿ ಹೇಗೆ ಸೇರಿಸಲಾಯಿತು ಎಂದರೆ, ಛಂದಸ್ಸುಗಳಿಂದ, ಛಂದೋಬದ್ಧವಾದ ಋಗ್ವೇದದ ಋಕ್ಕುಗಳಿಂದ ಆರಿಸಿ ಆರಿಸಿ ಏಕಾರ್ಥವನ್ನು ಸೂಚಿಸುವ ಪದಗಳನ್ನೆಲ್ಲಾ ಒಂದೆಡೆ ಸೇರಿಸಲಾಗಿದೆ. ಹಾಗೆ ಏಕೆ ಮಾಡಬೇಕು ? ಇದರಿಂದ ಪ್ರಯೋಜನವೇನು ? ಎಂದರೆ ಅನೇಕ ಶಬ್ದಗಳು ಋಕ್ಕುಗಳಲ್ಲಿ ಪೂರ್ವಪದ ಸಂದರ್ಭಗಳಿಗನು ಸಾರವಾಗಿ ನಾನಾರ್ಥಗಳನ್ನು ಅಥವಾ ವಿಶೇಷಾರ್ಥಗಳನ್ನು ಸೂಚಿಸುವವು. ಎಷ್ಟೇ ಬುದ್ಧಿವಂತರಾದರೂ ಕೂಡ ಅವುಗಳ ಅರ್ಥವನ್ನು ತಿಳಿಯಲು ಪೂರ್ವಾಪರ ಸಂದರ್ಭಗಳನ್ನು ವಿವೇಚಿಸಬೇಕು. ಅದಕ್ಕೆಲ್ಲಾ ಕಾಲವು ಬೇಕಾಗುವುದು. ಈ

ಪ್ರಯಾಸವನ್ನು ಪರಿಹಾರ ಮಾಡುವುದಕ್ಕೂ ಮತ್ತು ನಿಶ್ಚಯವಾದ ಅರ್ಥ ಜ್ಞಾನಕ್ಕಾಗಿಯೂ ಒಂದೇ ವಿಧವಾದ ಅರ್ಥವುಳ್ಳ ಪದಗಳನ್ನು ಛಂಧೋಬದ್ಧವಾದ ಋಙ್ಮಂತ್ರಗಳಿಂದ ಆರಿಸಿ ತೆಗೆದು ಒಂದೆಡೆ ಸೇರಿಸಿ ಅವುಗಳಿಗೆ ಸಾಮಾನ್ಯ ಮತ್ತು ವಿಶೇಷಾರ್ಥ ಗಳನ್ನು ವಿವರಿಸಲಾಗಿದೆ.

ತೇ ನಿಗಂತವ ಏವ ಸಂತೋ ನಿಗಮನಾನ್ನಿಘಂಟವ ಉಚ್ಯಂತ ಇತ್ಯೌಪಮನ್ಯವಃ ।

ಈಗ ನಿಘಂಟುಶಬ್ದದ ನಿಷ್ಪತ್ತಿಯನ್ನು ಹೇಳುತ್ತಾರೆ. ಇದನ್ನು ಇಲ್ಲಿ ಮೂರು ವಿಧವಾಗಿ ಹೇಳಲಾಗಿದೆ. ಈ ಶಬ್ದ ಸಮುದಾಯಗಳಿಗೆ ನಿಗಂತವ ಎಂದೂ ಹೆಸರು. ಆ ನಿಗಂತವ ಶಬ್ದವೇ ನಿಘಂಟವಃ ಎಂಬ ಶಬ್ದವಾಗಿದೆ ಏಕೆಂದರೆ. ನಿಗಮಗಳಲ್ಲಿ ಎಂದರೆ ವೇದಗಳಲ್ಲಿ ಈ ಶಬ್ದಗಳ ಪ್ರಯೋಗವಿರುವುದರಿಂದ ಇವುಗಳಿಗೆ ನಿಗಮಗಳ (ವೇದಗಳ) ಸಂಬಂಧವಿದ್ದಂತಾಯಿತು. ನಿಗಂತವಃ ಎಂಬಲ್ಲಿ ಗಕಾರಸ್ಥಾನದಲ್ಲಿ ವಿಪರ್ಯಯವಾಗಿ ಘಕಾರವು ಬಂದಿರುವುದು. ತಕಾರ ಸ್ಥಾನದಲ್ಲಿ ಟಕಾರವು ಬಂದಿರುವುದು ಆದ್ದರಿಂದ ನಿಗಂತವಃ ಎಂಬ ಶಬ್ದವೇ ನಿಘಂಟವಃ ಎಂಬ ಶಬ್ದವಾಗಿ ಪರಿಣಮಿಸಿರುವುದು ಎಂದು ಔಪಮನ್ಯು ಎಂಬುವರ ಅಭಿಪ್ರಾಯವು. ಶಬ್ದಗಳಲ್ಲಿ ಉಂಟಾಗುವ ನಿಷ್ಪತ್ತಿಯನ್ನು ವಿವರಿಸುವಾಗ ಮೂರು ವಿಧವಿದೆಯೆಂದು ಬಲ್ಲವರು ಹೇಳುವರು— ಪ್ರತ್ಯಕ್ಷವೃತ್ತಿ, ಪರೋಕ್ಷವೃತ್ತಿ ಮತ್ತು ಅತಿಪರೋಕ್ಷವೃತ್ತಿ ಎಂದು ಮೂರು ವಿಧವು. ಸಾಮಾನ್ಯವಾಗಿ ಏನೊಂದೂ ತೊಡಕಿಲ್ಲದೆ ನೇರವಾದ ನಿರ್ವಚನಕ್ಕೆ ಅನುಸಾರವಾಗಿ ಅರ್ಥವನ್ನು ಸೂಚಿಸುವ ಶಬ್ದಗಳು ಪ್ರತ್ಯಕ್ಷವೃತ್ತಿಯೆನಿಸುವವು. ಭಾವಾರ್ಥವನ್ನು ಸೂಚಿಸುವ ನಿರ್ವಚನಕ್ಕೆ ಅನುಸಾರವಾಗಿ ಅರ್ಥವುಳ್ಳ ಶಬ್ದಗಳಿಗೆ ಪರೋಕ್ಷವೃತ್ತಿ ಎಂದು ಹೆಸರು. ನಿರ್ವಚನ ವನ್ನು ಹೇಳುವಾಗ ಶಬ್ದದಲ್ಲಿರುವ ಅಕ್ಷರಗಳು ವಿಶೇಷವಾಗಿ ವ್ಯತ್ಯಸ್ತವಾಗುವಾಗ ಆ ಶಬ್ದಗಳಿಗೆ ಅತಿಪರೋಕ್ಷವೃತ್ತಿಯೆಂದು ಹೆಸರು. ಪ್ರಕೃತ ಸಂದರ್ಭದಲ್ಲಿ ವಿಮರ್ಶೆಗೆ ಒಳಗಾದ ನಿಘಂಟವಃ ಎಂಬ ಶಬ್ದವು ವಿಶೇಷವಾದ ವರ್ಣವ್ಯತ್ಯಯವನ್ನು ಹೊಂದಿ ರುವುದರಿಂದ ಈ ಶಬ್ದವು ಅತಿಪರೋಕ್ಷವೆಂಬ ಗುಂಪಿಗೆ ಸೇರಿದುದು. ಏಕೆಂದರೆ ನಿಗಂತವಃ ಎಂಬ ಶಬ್ದವು ನಿಘಂಟವಃ ಎಂದಾಗುವಾಗ ವರ್ಣ ವ್ಯತ್ಯಯವಾಗಿರುವುದು ಸ್ಪಷ್ಟವಾಗಿದೆ.

**ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ ।**
**ಧಾತೋಸ್ತದರ್ಥಾತಿ ಶಯೇನ ಯೋಗಸ್ತದುಚ್ಯತೇ ಪಂಚವಿಧಂ ನಿರುಕ್ತಂ ॥**

ಎಂದು ಲಕ್ಷಣವನ್ನು ಹೇಳಿದ್ದಾರೆ. ಒಂದು ಶಬ್ದಕ್ಕೆ ನಿರ್ವಚನವನ್ನು ಹೇಳುವಾಗ ಆ ಶಬ್ದಕ್ಕೆ ವರ್ಣಾಗಮ (ಒಂದು ಅಕ್ಷರವು ಹೊಸದಾಗಿ ಬಂದು ಸೇರುವುದು); ವರ್ಣವಿಪರ್ಯಯ (ಶಬ್ದದಲ್ಲಿರುವ ಅಕ್ಷರವು ವ್ಯತ್ಯಾಸವಾಗುವುದು) ವರ್ಣವಿಕಾರ (ಒಂದು ಅಕ್ಷರವು ವಿಕಾರ ಎಂದರೆ ಬೇರೆ ರೂಪವನ್ನು ತಾಳುವುದು.) ನಾಶ (ಒಂದು ಅಕ್ಷರವು ಲೋಪವಾಗುವುದು) ಧಾತೋಸ್ತದರ್ಥಾ-ತಿಶಯೇನ, ಯೋಗಃ (ಒಂದು ಧಾತುವಿನ ಅರ್ಥಕ್ಕೆ ಅತಿಶಯವಾಗಿ ಹೊಂದಿಕೊಂಡಿರುವುದು) ಎಂಬ ಐದು ವಿಧವಾದ ನಿಷ್ಪತ್ತಿ ಯನ್ನು ನಿರುಕ್ತಕಾರರು ಹೇಳುವರು. ಆದ್ದರಿಂದ ಇಲ್ಲಿ ಹೇಳಿರುವ **ನಿಗಂತವಃ**–ಎಂಬ ಶಬ್ದವೇ **ನಿಘಂಟವಃ** ಎಂದು ಅತಿಪರೋಕ್ಷವೃತ್ತಿಯ ಲಕ್ಷಣವಂತೆ ಔಪಮನ್ಯವಃ ಎಂಬ ಆಚಾರ್ಯರು ಹೇಳಿರುವರು. **ಉಪರತ–ಮನ್ಯುರುಪಮನ್ಯುಸ್ತಸ್ಯಾಪತ್ಯಮೌಪಮನ್ಯವಃ** — **ಮನ್ಯು**ವೆಂದರೆ ಕೋಪ. **ಉಪರತಮನ್ಯು**ವೆಂದರೆ ಕೋಪ ವಿಲ್ಲದವನು. ಇಂತಹ ಋಷಿಯ ಪುತ್ರನಿಗೆ ಔಪಮನ್ಯವ ಎಂದು ಹೆಸರು ಎಂದು ವ್ಯಾಖ್ಯಾನಕಾರರು ಔಪಮನ್ಯವಃ ಎಂಬ ಶಬ್ದದ ರೂಪನಿಷ್ಪತ್ತಿಯನ್ನು ಹೇಳಿರುವರು.

ಅಪಿ ವಾಹನನಾದೇವ ಸ್ಯುಃ ಸಮಾಹತಾ ಭವಂತಿ ||

ವೇದಗಳಲ್ಲಿ ಅನೇಕ ಕಡೆ ಹೇಳಿರುವುದರಿಂದ ಈ ಶಬ್ದ ಸಮೂಹಗಳಿಗೆ (ನಿಘಂಟುವಿಗೆ) **ಸಮಾಹತಾಃ** ಎಂದೂ ಹೆಸರು. ಇಲ್ಲಿ ನಿ ಎಂಬ ಉಪಸರ್ಗಕ್ಕೆ ಸಂ ಎಂಬ ಉಪಸರ್ಗವು ಬಂದಿರುವುದು ಘ ಎಂಬ ವರ್ಣಕ್ಕೆ ಹಕಾರವು ಇರುವುದು ಟ ಎಂಬ ಅಕ್ಷರಕ್ಕೆ ತ ಎಂಬ ಅಕ್ಷರವು ಬಂದಿರುವುದು ಆದ್ದರಿಂದ ನಿ + ಘಂ + ಟು ಎಂಬುದಕ್ಕೆ ಬದಲಾಗಿ ಸಂ (ಆ ಎಂಬುದು ಉಪಸರ್ಗ) + ಹ + ತ ಎಂಬ ವಿಪರ್ಯಯವು (ವ್ಯತ್ಯಾಸವು) ಉಂಟಾಗಿರುವುದು. ನಿಘಂಟವಃ ಎಂಬ ಶಬ್ದದ ಅರ್ಥವನ್ನೇ ಸಮಾಹತಾಃ ಎಂಬ ಶಬ್ದವೂ ಸೂಚಿಸುವುದು. ಮಂತ್ರಾದಿಗಳಲ್ಲಿಯೂ—**ಬ್ರಾಹ್ಮಣೇ ಇದಮಾಹತಂ ಸೂತ್ರೇ ಇದಮಾಹತಂ** ಎಂದು ಹೇಳಿರುವುದು. ಬ್ರಾಹ್ಮಣ ಗ್ರಂಥದಲ್ಲಿ ಇದನ್ನು ಹೇಳಲಾಗಿದೆ ಎಂದರೆ **ಆಹತ** ಶಬ್ದಕ್ಕೆ ಹೇಳಲಾಗಿದೆ ಎಂಬರ್ಥವಿರುವುದನ್ನು ತೋರಿಸಿದ್ದಾರೆ. **ಆಹತ** ಎಂದರೂ **ಆಹನನ** ಎಂದರೂ ಒಂದೇ ಅರ್ಥವು, **ಸುತ, ಸವನ** ಎಂಬ ಶಬ್ದಗಳಿದ್ದಂತೆ. ಇದು ನಿಘಂಟವಃ ಎಂಬ ಶಬ್ದಕ್ಕೆ ಹೇಳಿರುವ ಎರಡನೆಯ ನಿರ್ವಚನವು ಈಗ ಮೂರನೆಯದನ್ನು ಹೇಳುತ್ತಾರೆ—

ಯದ್ವಾ ಸಮಾಹೃತಾ ಭವಂತಿ ||

ಇಲ್ಲಿ ಹರತಿ (ಹೃ) ಧಾತುವಿನ ಪ್ರಯೋಗವಿದೆ. ಮಿಕ್ಕ ವಿಷಯಗಳೆಲ್ಲಾ ಹಿಂದೆ ಹೇಳಿದಂತೆ–ಛಂದಸ್ಸು ಅಥವಾ ಋಙ್ಮಂತ್ರಗಳಲ್ಲಿರುವ ಶಬ್ದಗಳನ್ನು **ಆಹೃತ್ಯ**– ತಂದು ಸೇರಿಸಿ ಎಂದು **ಸಮಾಹೃತಾಃ** ಎಂಬ ಶಬ್ದಕ್ಕೆ ಅರ್ಥ ಮಾಡಲಾಗಿದೆ. ಸಂ + ಆ + ಹೃ ಎಂಬ ಉಪಸರ್ಗಯುಕ್ತವಾದ ಧಾತುವಿನಿಂದ **ಸಮಾಹೃತಾಃ** ಎಂಬ ಶಬ್ದವು ನಿಷ್ಪನ್ನವಾಗಿದೆ. ಅರ್ಥದಲ್ಲಿ ಏನೂ ವ್ಯತ್ಯಾಸವಿಲ್ಲ. ಹಿಂದಿನಂತೆಯೇ ಇದೆ. ಇದು ನಿಘಂಟವಃ ಎಂಬ ಶಬ್ದಕ್ಕೆ ಮೂರನೆಯ ನಿರ್ವಚನವು. ಇಲ್ಲಿಗೆ ನಿಘಂಟು ಪದನಿರ್ವಚನವು ಮುಗಿದುದು.

ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗ
ನಿಪಾತಾಶ್ಚ ತಾನೀಮಾನಿ ಭವಂತಿ ||

ಇದುವರೆಗೂ ಸಮಾಮ್ನಾಯ, ನಿಘಂಟು ಎಂಬ ಶಬ್ದಗಳ ನಿಷ್ಪತ್ತಿಯನ್ನು ಮತ್ತು ನಿರ್ವಚನವನ್ನು ಮಾತ್ರ ಹೇಳಿದ್ದಾಯಿತು. ಆದರೆ ಆ ಸಮಾಮ್ನಾಯ ಶಬ್ದಗಳ ಸ್ವರೂಪವೇನು, ಅವುಗಳಲ್ಲಿ ಎಷ್ಟು ವಿಧ ಇತ್ಯಾದಿ ವಿವರಗಳನ್ನು ಹೇಳಲಿಲ್ಲವಾದ್ದರಿಂದ ಅವುಗಳನ್ನು ಈಗ ಹೇಳಲಾಗುವುದು. ಭಾಷೆಯಲ್ಲಿರುವ ಶಬ್ದಗಳೆಲ್ಲವನ್ನೂ ನಾಲ್ಕು ವಿಧ ಎಂದರೆ, ನಾಲ್ಕು ಗುಂಪುಗಳನ್ನಾಗಿ ವಿಂಗಡಿಸಬಹುದು. ಹೇಗೆಂದರೆ–ನಾಮ, ಆಖ್ಯಾತ, ಉಪಸರ್ಗ, ನಿಪಾತ ಎಂಬಿವೇ ಆ ನಾಲ್ಕು ಗುಂಪುಗಳು. ಈ ಕ್ರಮವು ವೇದಗಳಲ್ಲಿ ಮಾತ್ರವಿರುವುದೆಂದು ತಿಳಿಯಬಾರದು. ಲೋಕವ್ಯವಹಾರದಲ್ಲಿ ಬಳಸುವ ಭಾಷೆಗಳಲ್ಲಿಯೂ ಇರುವುದು. ಈ ನಾಲ್ಕು ಜಾತಿ ಶಬ್ದಗಳಲ್ಲಿ ನಾಮಪದ ಮತ್ತು ಆಖ್ಯಾತ ಇವೆರಡೂ ಮುಖ್ಯವಾದವು. ಆದ್ದರಿಂದ ಅವುಗಳನ್ನು ಇಲ್ಲಿ ಮೊದಲು ಸೂಚಿಸಲಾಗಿದೆ. ನಾಮಪದವೆಂದರೆ ಒಂದು ವಸ್ತು ಅಥವಾ ಕಾರ್ಯದ ಸ್ಥಿತಿಯ ಹೆಸರು ; ಆಖ್ಯಾತವೆಂದರೆ – ಕ್ರಿಯಾಪದವು ಒಂದು ಕ್ರಿಯೆ (ಕಾರ್ಯ) ನಡೆಯುತ್ತಿರುವುದನ್ನು ಹೇಳುವ ಪದವು. ವ್ಯಾಕರಣದಲ್ಲಿ ಇವುಗಳನ್ನು ಸುಬಂತ, ತಿಙಂತವೆಂದು ಕರೆಯುವರು. ನಾಮಪದವು ಒಂದು ವಸ್ತುವಿನ ಹೆಸರನ್ನಾಗಲೀ (ಧನ) ಒಬ್ಬ ಪುರುಷನ ಅಥವಾ ಸ್ತ್ರೀಯ ಅಥವಾ ಪ್ರಾಣಿಯ (ದೇವದತ್ತ, ಊರ್ವಶೀ, ಗಜ) ಹೆಸರನ್ನಾಗಲೀ ಸೂಚಿಸಬಹುದು ಇದಲ್ಲದೆ ಒಂದೇ ವಿಧವಾದ ವಸ್ತುಗಳ ಅಥವಾ ಪ್ರಾಣಿಗಳ ಗುಂಪನ್ನು ಉದ್ದೇಶಿಸಿ ಒಂದೇ ಹೆಸರನ್ನು ಹೇಳಬಹುದು (ಆಹಾರ ವಸ್ತುಗಳು, ಅಶ್ವ, ಗೋವು ಇತ್ಯಾದಿ). ಈ ನಾಮಪದವು

ಲಿಂಗಭೇದಗಳನ್ನು ತಿಳಿಸುವುದು. ಪುರುಷ ಎಂದರೆ ಪುಲ್ಲಿಂಗವಾಯಿತು. ಸ್ತ್ರೀ ಎಂದರೆ ಸ್ತ್ರೀಲಿಂಗವಾಯಿತು, ರಥ ಎಂದರೆ ನಪುಂಸಕಲಿಂಗವಾಯಿತು. ಇದಲ್ಲದೆ ನಾಮಪದವು ಕೆಲವು ಭಾವಗಳನ್ನು ಅಥವಾ ಸ್ಥಿತಿಯನ್ನೂ ಸೂಚಿಸಬಹುದು — ಗಮನ, ಪ್ರಯತ್ನ, ನಿದ್ರೆ, ಇತ್ಯಾದಿ–ಆಖ್ಯಾತವೆಂಬ ಕ್ರಿಯಾಪದವು ಒಂದು ಕಾರ್ಯವು ನಡೆಯುತ್ತಿರುವುದನ್ನು ತಿಳಿಸುವುದು – ಪಚತಿ ವ್ರಜತಿ – ಪಕ್ವಮಾಡುತ್ತಾನೆ, ಹೋಗುತ್ತಾನೆ ಇತ್ಯಾದಿ ಕ್ರಿಯೆಯನ್ನು ಸೂಚಿಸುವುದು. ಈ ಆಖ್ಯಾತಪದಗಳಿಗೂ ನಾಮಪದಗಳಿಗೂ ವಿಭಕ್ತಿ ವಚನಗಳುಂಟು. ನಾಮಪದದ ವಚನಕ್ಕನುಸಾರವಾಗಿ ಆಖ್ಯಾತ (ಕ್ರಿಯಾಪದ) ದ ವಚನವು ಇರಬೇಕು. ಉಪಸರ್ಗವೆಂದರೆ ಒಂದು ಅಥವಾ ಎರಡು ಅಕ್ಷರಗಳಿರುವ ಶಬ್ದವಿಶೇಷಗಳು. ಇವುಗಳನ್ನು ಸ್ವತಂತ್ರವಾಗಿ ಉಪಯೋಗಿಸುವುದು ಅಪರೂಪ. ಕ್ರಿಯಾಪದ ಎಂದರೆ ಆಖ್ಯಾತ ಶಬ್ದಗಳಿಗೆ ಅಥವಾ ಆಖ್ಯಾತ ಶಬ್ದದಿಂದ ನಿಷ್ಪನ್ನವಾದ ನಾಮಪದಗಳಿಗೆ ಇವುಗಳನ್ನು ಸೇರಿಸಿ ಪ್ರಯೋಗಿಸುವುದೇ ರೂಢಿಯಲ್ಲಿರುವುದು. ಉಪಸರ್ಗವನ್ನು ಆಖ್ಯಾತಗಳಿಗೆ ಸೇರಿಸಿರುವುದರಿಂದ ಆ ಧಾತುಗಳ ಅರ್ಥವು ಬೇರೆ ಬೇರೆಯಾಗುವುದು. ಉದಾ — ಹೃಧಾತುವಿಗೆ ಕೆಲವು ಉಪಸರ್ಗಗಳನ್ನು ಸೇರಿಸಿದರೆ ಅಪಹರತಿ, ಉಪಹರತಿ, ಸಂಹರತಿ, ಆಹರತಿ ಇತ್ಯಾದಿ ಶಬ್ದಗಳಾಗಿ ಬೇರೆ ಬೇರೆ ಅರ್ಥಗಳನ್ನು ಸೂಚಿಸುವ ಶಬ್ದಗಳಾಗುವುವು. ವೇದಗಳಲ್ಲಿ ಈ ಉಪಸರ್ಗಗಳನ್ನು ಪ್ರತ್ಯೇಕ ಪದಗಳೆಂದೇ ಭಾವಿಸಲಾಗಿದೆ. ಆದರೆ ಲೋಕವ್ಯವಹಾರಭಾಷೆಯಲ್ಲಿ ಈ ಉಪಸರ್ಗಗಳಿಗೆ ಸ್ವತಂತ್ರವಾದ ಪ್ರಯೋಗವಿಲ್ಲ. **ನಿಪಾತ** ವೆಂದರೆ **ಇವ ಅಸಿ** ಇತ್ಯಾದಿ. ಇವುಗಳಿಗೆ ಅವ್ಯಯಗಳೆಂದೂ ಹೆಸರು. ನಾಮಾಖ್ಯಾತ ಪದಗಳಂತೆ ನಿಪಾತಗಳು ವಚನ ವಿಭಕ್ತಿ ಸಂಬಂಧವಾದ ವ್ಯತ್ಯಾಸಗಳಿಗೆ ಒಳಪಡುವುದಿಲ್ಲ, ಪ್ರತ್ಯಯ ಸಂಬಂಧವೂ ಇರುವುದಿಲ್ಲ. ಈ ಶಬ್ದಗಳು ಇದ್ದಂತೆಯೇ ಇರುವವು ಯಾವ ವಿಕಾರಗಳಿಗೂ ಒಳಗಾಗುವುದಿಲ್ಲ. ಅರ್ಥವು ಮಾತ್ರ ಸಂದರ್ಭಾನುಸಾರ ವ್ಯತ್ಯಾಸವಾಗುವುದುಂಟು. ಇಲ್ಲಿ ಎಂದರೆ ಮೇಲಿನ ವಾಕ್ಯದಲ್ಲಿ ನಾಮಾಖ್ಯಾತಗಳಿಗೆ ಪ್ರಾಧಾನ್ಯತೆಯನ್ನು ಹೇಳಿದೆ. ಏಕೆಂದರೆ ಈ ಎರಡು ಶಬ್ದಗಳಿಂದ ಒಂದು ಅರ್ಥವತ್ತಾದ ವಾಕ್ಯವನ್ನು ನಿರ್ಮಿಸಬಹುದಾಗಿದೆ — **ಯಜ್ಞದತ್ತಃ ಪಚತಿ** ಯಜ್ಞದತ್ತನೆಂಬ ಪುರುಷನು (ಅನ್ನವನ್ನು) ಬೇಯಿಸುತ್ತಾನೆ. ಅಥವಾ **ದೇವದತ್ತಃ ಗಚ್ಛತಿ** ದೇವದತ್ತನು ಹೋಗುತ್ತಾನೆ ಇತ್ಯಾದಿ. ಉಪಸರ್ಗನಿಪಾತಗಳಿಗೆ ನಾಮಾಖ್ಯಾತಗಳ ಸಹಾಯವಿಲ್ಲದೆ ವಾಕ್ಯರಚನೆಯಲ್ಲಿ ಪಾತ್ರವಿಲ್ಲ ಎಂದರೆ ಕೇವಲ ಉಪಸರ್ಗ ನಿಪಾತಗಳಿಂದ ವಾಕ್ಯರಚನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದಲೇ ಈ ಪದ ಸಮೂಹವನ್ನು ವಿಂಗಡಿಸುವಾಗ ನಾಮಾಖ್ಯಾತಗಳಿಗೆ ಆದ್ಯತೆಯನ್ನೂ ಉಪಸರ್ಗನಿಪಾತಗಳಿಗೆ ಆನಂತರ್ಯವನ್ನೂ ಕೊಡಲಾಗಿದೆ.

ತತ್ರೈತನ್ನಾಮಾಖ್ಯಾತಯೋರ್ಲಕ್ಷಣಂ ಪ್ರದಿಶಂತಿ ಭಾವಪ್ರಧಾನ-
ಮಾಖ್ಯಾತಂ ಸತ್ತ್ವಪ್ರಧಾನಾನಿ ನಾಮಾನಿ ॥

ಈಗ ಹಿಂದೆ ಹೇಳಿದ ನಾಮಾಖ್ಯಾತಗಳ ಎಂದರೆ ನಾಮಪದ ಮತ್ತು ಕ್ರಿಯಾಪದಗಳ ಲಕ್ಷಣವನ್ನು ವಿವರಿಸಿ ಹೇಳುತ್ತಾರೆ. ಇಲ್ಲಿ ನಾಮಶಬ್ದಕ್ಕೆ ಒಂದು ವಸ್ತುವಿನ ಅಥವಾ ಅದು ಇರುವ ಸ್ಥಿತಿಯ (ಭಾವದ) ಹೆಸರು ಎಂದರ್ಥವು. ಪ್ರತ್ಯಕ್ಷ ಅಥವಾ ಇಂದ್ರಿಯಗಳಿಗೆ ಗೋಚರವಾಗುವ ವಸ್ತುಗಳನ್ನು ನಾಮಪದದಿಂದ ನಿರ್ದೇಶಿಸಿ ಹೇಳುವರು. ಇಂದ್ರಿಯ ಗೋಚರವಲ್ಲವೆ ಆದರೆ ಮನಸ್ಸಿನಿಂದ ತಿಳಿಯಬಹುದಾದ ಧ್ಯಾನಿಸಬಹುದಾದ ಕೆಲವು ಭಾವಗಳಿರುವವು. ಉದಾಹರಣೆಗಾಗಿ–ಮನ್ಯು ಅಥವಾ ಕೋಪವೆಂಬುದು ಒಂದು ಭಾವವು. ಕೋಪವನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ. ಕೋಪಾವಿಷ್ಟನಾದ ಪುರುಷನನ್ನು ನೋಡಬಹುದೇ ಹೊರತು ಪ್ರತ್ಯಕ್ಷ ಕೋಪವನ್ನಲ್ಲ. ಆದರೂ ಇಂತಹ ಭಾವಗಳ ಹೆಸರುಗಳೂ ನಾಮಪದಗಳಿಂದಲೇ ನಿರ್ದೇಶಿಸಲ್ಪಡುವವು. ಎಂದರೆ ನಾಮಪದಗಳಲ್ಲಿ ಪ್ರತ್ಯಕ್ಷ ಗೋಚರವಾಗುವ ವಸ್ತುಗಳ ಹೆಸರುಗಳು (Concrete Nouns) ಪ್ರತ್ಯಕ್ಷ ಗೋಚರವಲ್ಲದೆ ಆದರೆ ಮನಸ್ಸಿನಿಂದ ಊಹಿಸಿ ತಿಳಿಯಬಹುದಾದ ಭಾವಗಳ ಹೆಸರು (Abstract

Nouns) ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಈ ವಿಧಗಳಾದ ನಾಮಪದಗಳನ್ನು ಇಲ್ಲಿ **ಸತ್ತ್ವಪ್ರಧಾನಾನಿ ನಾಮಾನಿ** ಎಂದು ಹೇಳಿದೆ. ಸತ್ತ್ವ ಎಂದರೆ ಒಂದು ನಿರ್ದಿಷ್ಟವಾದ ವಸ್ತುವು ಅಥವಾ ಭಾವವು (ವಸ್ತು ಸ್ಥಿತಿಯು) ಇದೆ ಎಂದರ್ಥವು ಇಂತಹ ಅರ್ಥವನ್ನು ಸೂಚಿಸುವುದಕ್ಕಾಗಿ ನಾಮಪದದ ಪ್ರಯೋಗವಿದೆ. ಆಖ್ಯಾತ ಅಥವಾ ಕ್ರಿಯಾಪದದ ವಿಷಯದಲ್ಲಿ **ಭಾವಪ್ರಧಾನಮಾಖ್ಯಾತಂ** ಎಂದು ಹೇಳಲಾಗಿದೆ. ಆಖ್ಯಾತಶಬ್ದವು **ಖ್ಯಾ** ಹೇಳು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಏನನ್ನು ಹೇಳುವುದು ಎಂದರೆ ನಾಮಪದಗಳ ಅಥವಾ ವಸ್ತುಗಳ ವಿಷಯವಾಗಿ ಹೇಳುವುದು ಎಂದರ್ಥವು. ಆದ್ದರಿಂದ ಈ ಆಖ್ಯಾತವನ್ನು ನಾಮದ (ವಸ್ತುವಿನ) ಗುಣವನ್ನು ಹೇಳುವ ಎಂದರೆ ಗುಣವಾಚಕ ಪದವನ್ನು ಎಂದು ಸ್ಥೂಲವಾಗಿ ಹೇಳಬಹುದು. **ದೇವದತ್ತಃ ಪಚತಿ**-ದೇವದತ್ತನು ಬೇಯಿಸುತ್ತಾನೆ **ಯಜ್ಞದತ್ತಃ ಗಚ್ಛತಿ** ಯಜ್ಞದತ್ತನು ಹೋಗುತ್ತಾನೆ. ಎಂಬ ವಾಕ್ಯಗಳಲ್ಲಿ **ದೇವದತ್ತಃ** ಮತ್ತು **ಯಜ್ಞದತ್ತಃ** ಎಂಬ ಪದಗಳು ನಾಮಪದಗಳು, **ಪಚತಿ** ಮತ್ತು **ಗಚ್ಛತಿ** ಎಂಬ ಪದಗಳು ಆಖ್ಯಾತಗಳು. ಇಲ್ಲಿ **ಪಚತಿ** ಎಂಬ ಆಖ್ಯಾತವು ದೇವದತ್ತನ ವಿಷಯವನ್ನು ಹೇಳುವುದು ಎಂದರೆ ದೇವದತ್ತನು ಏನು ಮಾಡುತ್ತಿರುವನು ಎಂಬುದನ್ನು ವರ್ಣಿಸುವುದು, ನಾಮಪದದ ವರ್ಣನೆಯೇ ಗುಣವಾಚಕವು. ಅದನ್ನೇ ಈ **ಪಚತಿ** ಎಂಬ ಆಖ್ಯಾತವು ಹೇಳುವುದು. ಆದ್ದರಿಂದ ಕ್ರಿಯಾಪದವು ಅಥವಾ ಆಖ್ಯಾತವು ಒಂದು ವಿಧದಲ್ಲಿ ಎಂದರೆ ಪರೋಕ್ಷದೃಷ್ಟಿಯಿಂದ ಗುಣವಾಚಕವು, ಪ್ರತ್ಯಕ್ಷ ದೃಷ್ಟಿಯಿಂದಲ್ಲ. ಆಖ್ಯಾತವು ಯಾವಾಗಲೂ ಒಂದು ಕ್ರಿಯೆಯನ್ನು ಹೇಳುವುದರಿಂದ ಆಖ್ಯಾತವು ಭಾವಪ್ರಧಾನವೆಂದು ಹೇಳಿರುವುದು. ಇಲ್ಲಿ ಹೇಳಿರುವ ನಾಮಾಖ್ಯಾತಗಳಿಗೆ ವಚನ ವಿಭಕ್ತಿಗಳಿರುವವು. ಸಂಸ್ಕೃತಭಾಷೆಯಲ್ಲಿ ನಾಮಪದಗಳಿಗೆ ಮಾತ್ರ ಲಿಂಗಭೇದಗಳಿರುವವು. ಆಖ್ಯಾತಗಳಿಗೆ ಇಲ್ಲ. ಈ ವಚನ ವಿಭಕ್ತಿಗಳಿಗನುಸಾರವಾಗಿ ನಾಮಾಖ್ಯಾತಗಳು ಪ್ರತ್ಯಯ ಸಂಬಂಧದಿಂದ ರೂಪ ಭೇದಗಳನ್ನು ಹೊಂದುವವು. ನಾಮಪದಗಳಿಗೆ ಲಿಂಗ ಭೇದಗಳಿದ್ದರೆ, ಆಖ್ಯಾತಗಳಿಗೆ ವರ್ತಮಾನ ಮೊದಲಾದ ಕಾಲ ಭೇದಗಳು, ಕರ್ತರಿ, ಕರ್ಮಣಿ, ಭಾವೇ, ಕರ್ಮಕರ್ತರಿ ಎಂಬ ಪ್ರಭೇದಗಳೂ ಇರುವವು. ಇವುಗಳಿಗನುಸಾರವಾಗಿ ಆಖ್ಯಾತಗಳು ರೂಪಾಂತರಗಳನ್ನು ಹೊಂದುವವು. ಕೆಲವರು ಈ ರೀತಿ ಹೇಳುವರು. ಆಖ್ಯಾತಗಳು ಭಾವ, ಕಾಲ, ಕಾರಕ, ಸಂಖ್ಯಾ ಇವುಗಳಿಗನುಸಾರವಾಗಿ ನಾಲ್ಕು ವಿಧಗಳಾಗಿರುವವು. ಇವುಗಳಲ್ಲಿ ಭಾವವೇ ಮುಖ್ಯವು ಆದ್ದರಿಂದ ಆಖ್ಯಾತವು ಭಾವಪ್ರಧಾನವೆಂದು ಹೇಳಲ್ಪಟ್ಟಿರುವುದು. ಅದರಂತೆಯೇ ನಾಮಪದಗಳೂ ದ್ರವ್ಯ, ಸಂಖ್ಯಾ, ಲಿಂಗ ಎಂದು ಮೂರು ವಿಧವಾಗಿರುವುದು. ಇವುಗಳಲ್ಲಿ ದ್ರವ್ಯ ಅಥವಾ ಸತ್ತ್ವವು ಪ್ರಧಾನವಾಗಿರುವುದರಿಂದ ನಾಮವು ಸತ್ತ್ವ ಪ್ರಧಾನವೆನಿಸುವುದು. ಮತ್ತು ಆಖ್ಯಾತ ವಿಚಾರದಲ್ಲಿ

**ಕ್ರಿಯಾವಾಚಕಮಾಖ್ಯಾತಂ ಲಿಂಗತೋ ನ ವಿಶಿಷ್ಯತೇ ।**
**ತ್ರೀನತ್ರ ಪುರುಷಾನ್ವಿದ್ಯಾತ್ಕಾಲತಸ್ತು ವಿಶಿಷ್ಯತೇ ॥**

ಎಂದು ಹೇಳಿರುವರು. ಆಖ್ಯಾತವೆಂದರೆ ಒಂದು ಕ್ರಿಯೆಯನ್ನು ಹೇಳುವುದು ಎಂದರ್ಥವು. ಆಖ್ಯಾತಕ್ಕೆ ಲಿಂಗಭೇದವಿಲ್ಲ ಎಂದರೆ ಪುನ್ನಪುಂಸಕ ಲಿಂಗಗಳನ್ನು ನಿರ್ದೇಶಿಸುವಾಗ ಬೇರೆ ಬೇರೆ (ಆಖ್ಯಾತದ) ರೂಪಗಳನ್ನು ಉಪಯೋಗಿಸುವುದಿಲ್ಲ. ಎಲ್ಲಾ ಲಿಂಗಗಳಿಗೂ ಒಂದೇ ರೂಪವನ್ನು ಬಳಸಲಾಗುವುದು. ಆದರೆ ವರ್ತಮಾನಾದಿಕಾಲವಿಭಾಗಗಳನ್ನು ಸೂಚಿಸುವಾಗ ಈ ಆಖ್ಯಾತವು ರೂಪಾಂತರವನ್ನು ಎಂದರೆ ಪ್ರತ್ಯಯಗಳಿಂದ ಕೂಡಿ ಬೇರೆ ಬೇರೆ ರೂಪಗಳನ್ನು ಹೊಂದುವುದು. ಇದಲ್ಲದೆ ಏಕವಚನ, ದ್ವಿವಚನ, ಬಹುವಚನ ಎಂಬ ಮೂರು ವಚನಗಳೂ ಪ್ರಥಮಪುರುಷ, ಮಧ್ಯಮಪುರುಷ ಉತ್ತಮಪುರುಷ ಎಂಬ ಮೂರು ಪುರುಷಗಳೂ ಇರುವವು. ಇವುಗಳೂ ಆಖ್ಯಾತಗಳ ರೂಪವನ್ನು ಬದಲಾಯಿಸುವವು. ಇವುಗಳಲ್ಲದೆ, ಆಖ್ಯಾತದಲ್ಲಿ ಕರ್ತರಿ, ಕರ್ಮಣಿ, ಭಾವೇ ಕರ್ಮಕರ್ತರಿ ಎಂದು ನಾಲ್ಕು ವಿಧ ಪ್ರಯೋಗಗಳಿರುವವು—ಉದಾ— **ಪಚತಿ** ಎಂಬುದು **ಕರ್ತರಿ**

ಪ್ರಯೋಗ; **ಭೂಯಷೇ** ಎಂಬುದು ಭಾವೇ ಪ್ರಯೋಗ, **ಪಚ್ಯತೇ** ಎಂಬುದು ಕರ್ಮಣಿ ಪ್ರಯೋಗ, **ಪಚ್ಯತೇ ಸ್ವಯಂ** ಎಂಬುದು ಕರ್ಮಕರ್ತರಿ—ಈ ನಾಲ್ಕು ವಿಧ ಪ್ರಯೋಗಗಳಿಂದಲೂ ಆಖ್ಯಾತವು ರೂಪಾಂತರಗಳನ್ನು ಹೊಂದುವುದು

**ಶಬ್ದೇನೋಚ್ಚಾರಿತೇನೇಹ ಯೇನ ದ್ರವ್ಯಂ ಪ್ರತೀಯತೇ ।**
**ತ ದಕ್ಷರವಿಧೌಯುಕ್ತಂನಾಮೇತ್ಯಾಹುರ್ಮನೀಷಿಣಃ ॥**

ಈಗ ನಾಮಪದದ ವಿಷಯದಲ್ಲಿ ಮೇಲಿನ ಶ್ಲೋಕವನ್ನು ಹೇಳಲಾಗಿದೆ. ಒಂದು ವಸ್ತುವನ್ನು ನಿರ್ದೇಶಿಸಿ ಇತರರಿಗೆ ತಿಳಿಯ ಪಡಿಸಬೇಕಾದರೆ ಒಂದು ಶಬ್ದದಿಂದ (ಧ್ವನಿಯಿಂದ) ಉಚ್ಚರಿಸಿ ಹೇಳಲಾಗುವುದು. ಆ ಶಬ್ದವನ್ನೇ ಅಕ್ಷರಗಳಿಂದ ಸೇರಿಸಿ (ಉಚ್ಚರಿಸಿ ಅಥವಾ ಬರೆದು) ಹೇಳಿದರೆ ಅದು ನಾಮಪದವೆನಿಸುವುದು ಎಂದು ಪ್ರಾಜ್ಞರು ಹೇಳುವರು. ಆದ್ದರಿಂದ ವಸ್ತು ನಿರ್ದೇಶವೇ ನಾಮಪದದ ಮುಖ್ಯ ಪ್ರಯೋಜನವು. ಈ ನಾಮಪದವನ್ನು ಅಕ್ಷರಗಳಿಂದ ಸಹಿತವಾದ ಶಬ್ದೋಚ್ಚಾರಣೆಯಿಂದ ಮಾತ್ರ ಇತರರ ಗಮನಕ್ಕೆ ತರಬಹುದು ಇದನ್ನು ಮನುಷ್ಯರು ಮಾತ್ರ ಮಾಡಬಲ್ಲರು. ಇತರ ಪ್ರಾಣಿಗಳು ಅವ್ಯಕ್ತವಾದ ಶಬ್ದಗಳನ್ನು ಅಥವಾ ಧ್ವನಿಯನ್ನು ಮಾಡಲು ಸಮರ್ಥವಾದರೂ ಅವುಗಳು ಸ್ಪಷ್ಟವಾದ ಅಕ್ಷರ ಸಂಯೋಜನವನ್ನು ಮಾಡಲು ಅಸಮರ್ಥವಾದ್ದರಿಂದ ಅವು ಮಾಡುವ ಶಬ್ದಗಳು ನಾಮಪದವೆನಿಸಿಕೊಳ್ಳಲಾರವು. ಈ ನಾಮಪದದ ಮುಖ್ಯ ಸ್ವರೂಪವು ವಸ್ತುವನ್ನು ನಿರ್ದೇಶಿಸುವುದೇ ಆದ್ದರಿಂದ ಇದು ಎಂದರೆ ನಾಮವು ಸತ್ತ್ವ ಪ್ರಧಾನವೆನಿಸುವುದು. ಈ ನಾಮಪದಗಳಿಗೂ ರೂಪಭೇದಗಳುಂಟು

**ಅಷ್ಟೌ ಯತ್ರ ಪ್ರಯುಜ್ಯಂತೇ ನಾನಾರ್ಥೇಷು ವಿಭಕ್ತಯಃ ।**
**ತನ್ನಾಮಕವಯಃಪ್ರಾಹುರ್ಭೇದೇ ವಚನಲಿಂಗಯೋಃ ।**
**ನಿರ್ದೇಶಃ ಕರ್ಮ ಕರಣಂಪ್ರದಾನಮಪಕರ್ಷಣಂ ।**
**ಸ್ವಾಮ್ಯರ್ಥೋಽಥಾಧಿಕಾರಣಂ ವಿಭಕ್ತ್ಯರ್ಥಾಃ ಪ್ರಕೀರ್ತಿತಾಃ ॥**

ಈ ನಾಮಪದಗಳಿಗೆ ಏಕವಚನ, ದ್ವಿವಚನ, ಬಹುವಚನಗಳೆಂಬ ಮೂರು ವಚನಗಳಿರುವವು. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳೆಂಬ ಮೂರು ಲಿಂಗಗಳಿರುವುದು. ಇವುಗಳಲ್ಲದೆ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಏಳು ವಿಭಕ್ತಿಗಳಿರುವವು, ಇವುಗಳಿಗೆ ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ, ಸಪ್ತಮೀ ವಿಭಕ್ತಿಗಳೆಂದು ಹೆಸರು. ಪ್ರಥಮಾ ವಿಭಕ್ತಿಯು ವಸ್ತು ನಿರ್ದೇಶವನ್ನೂ, ದ್ವಿತೀಯಾ ವಿಭಕ್ತಿಯು ಕರ್ಮವನ್ನೂ, ತೃತೀಯಾ ವಿಭಕ್ತಿಯು ಕರ್ಮ ಮಾಡುವ ಕರ್ತೃವನ್ನೂ, ಚತುರ್ಥೀ ವಿಭಕ್ತಿಯು ಪ್ರದಾನವನ್ನೂ, ಪಂಚಮೀ ವಿಭಕ್ತಿಯು ಅಪಕರ್ಷಣವನ್ನೂ, ಷಷ್ಠೀ ವಿಭಕ್ತಿಯು ಸ್ವಾಮಿತ್ವವನ್ನೂ, ಸಪ್ತಮೀ ವಿಭಕ್ತಿಯು ಅಧಿಷ್ಠಾತೃವನ್ನೂ ಸೂಚಿಸುವವು. ನಾಮಪದದ ಈ ಏಳು ವಿಭಕ್ತಿಗಳೂ ಮೂರು ವಚನಗಳೂ ಪ್ರತ್ಯಯ ಸಂಸರ್ಗದಿಂದ ರೂಪಾಂತರಗಳನ್ನು ಹೊಂದುವವು.

**ಋಷಯೋಽಪ್ಯುಪದೇಶಸ್ಯ ನಾಂತಂ ಯಾಂತಿ ಪೃಥಕ್ತ್ವಶಃ ।**
**ಲಕ್ಷಣೇನ ತು ಸಿದ್ಧಾ ನಾಮಂತಂ ಯಾಂತಿ ವಿಪಶ್ಚಿತಃ ॥**

ಭಾಷೆಯಲ್ಲಿರುವ ಶಬ್ದಗಳೆಲ್ಲವನ್ನೂ ಒಂದೊಂದಾಗಿ ವರ್ಣಿಸಿ ಮುಗಿಸಲು ಸರ್ವಜ್ಞರಾದ ಋಷಿಗಳಿಗೂ ಸಾಧ್ಯವಿಲ್ಲ. ಆದ್ದರಿಂದ ಪ್ರಾಜ್ಞರಾದವರು ಶಬ್ದಗಳನ್ನು ಕೆಲವು ಗುಂಪುಗಳನ್ನಾಗಿ ವಿಂಗಡಿಸಿ ಅವುಗಳಿಗೆ ನಿರ್ದಿಷ್ಟವಾದ ಲಕ್ಷಣವನ್ನು ಹೇಳಿ ಈ ವ್ಯಾಕರಣ ಶಾಸ್ತ್ರವನ್ನು ಮುಗಿಸಿರುವರು. ಇವುಗಳೇ ಮೇಲೆ ಹೇಳಿದ ನಾಮಾಖ್ಯಾತ ಉಪಸರ್ಗ ನಿಪಾತಗಳು. ಇವುಗಳಲ್ಲಿಯೂ ಭೇದ ಪ್ರಭೇದಗಳಿರುವವು.

ತದ್ಯತ್ರೋಭೇ ಭಾವಪ್ರಧಾನೇ ಭವತಃ ||

ಹಿಂದೆ ಹೇಳಿದ ನಾಮ ಮತ್ತು ಆಖ್ಯಾತಗಳಲ್ಲಿ ಯಾವುದು ವಾಕ್ಯದಲ್ಲಿ ಪ್ರಾಧಾನ್ಯತೆಯನ್ನು ಪಡೆದಿದೆ ಎಂದರೆ ವಾಕ್ಯದಲ್ಲಿರುವ ಈ ಎರಡು ಶಬ್ದಗಳಿಗೂ ಪ್ರಾಧಾನ್ಯತೆ ಉಂಟೆಂದು ಕೆಲವರು ಹೇಳುತ್ತಾರೆ. ಹಿಂದೆ ಹೇಳಿರುವಂತೆ ನಾಮಪದಕ್ಕೆ ಸತ್ತ್ವಪ್ರಾಧಾನ್ಯತೆ ಆಖ್ಯಾತಕ್ಕೆ ಭಾವಪ್ರಾಧಾನ್ಯತೆಯೂ ಇರುವುದೆಂದು ಇದ್ದರೂ ವಾಕ್ಯಗಳಲ್ಲಿ ಈ ಎರಡು ಪದಗಳಿಗೂ ಪ್ರಾಧಾನ್ಯತೆ ಇರುವುದು. ಏಕೆಂದರೆ ವಾಕ್ಯದಲ್ಲಿ ಇವೆರಡು ಪದಗಳೂ (ಕರ್ತೃ ಮತ್ತು ಕ್ರಿಯೆ) ಪರಸ್ಪರ ಆಶ್ರಯವನ್ನು ಪಡೆದಿವೆ. ನಾಮಪದ ಮಾತ್ರದಿಂದಲೇ ವಾಕ್ಯವು ಪೂರ್ಣವಾಗುವುದಿಲ್ಲ. ಹಾಗೆಯೇ ಆಖ್ಯಾತ ಅಥವಾ ಕ್ರಿಯಾಪದದಿಂದಲೂ ಪೂರ್ಣವಾಗುವುದಿಲ್ಲ. ವಾಕ್ಯದಲ್ಲಿ ಇವೆರಡು ಪದಗಳೂ ಇದ್ದು ಇವುಗಳಿಗೆ ಅನ್ಯೋನ್ಯಾಶ್ರಯವಿದ್ದಲ್ಲಿ ಆಗ ವಾಕ್ಯವು ಪೂರ್ಣವಾದ ಅರ್ಥವನ್ನುಂಟು ಮಾಡುವುದು. ಆದ್ದರಿಂದ ವಾಕ್ಯದಲ್ಲಿ ಆಖ್ಯಾತವು ಪ್ರಾಧಾನ್ಯತೆಯನ್ನು ಪಡೆದಿರುವುದು.

ಪೂರ್ವಾಪರೀಭೂತಂ ಭಾವಮಾಖ್ಯಾತೇನಾಚಷ್ಟೇ ವ್ರಜತಿ – ಪಚತೀ-
ತ್ಯುಪಕ್ರಮಪ್ರಭೃತ್ಯಪವರ್ಗಪರ್ಯಂತಂ ||

ಆಖ್ಯಾತದ ಪ್ರಾಧಾನ್ಯತೆಯನ್ನು ಸಮರ್ಥಿಸುವುದಕ್ಕಾಗಿ ಉದಾಹರಣೆಯನ್ನು ಕೊಟ್ಟು ವಿಷಯವನ್ನು ವಿಶದಪಡಿಸುವರು. ವಾಕ್ಯದಲ್ಲಿ ಆಖ್ಯಾತದ (ಕ್ರಿಯಾಪದದ) ಪಾತ್ರವೇನು ? ಎಂದರೆ ಈ ಆಖ್ಯಾತವು ವಾಕ್ಯದಲ್ಲಿ ಹಿಂದಿನ ಮತ್ತು ಮುಂದಿನ ಸಂದರ್ಭಗಳಿಗನುಸಾರವಾಗಿ ಒಂದು ನಿರ್ದಿಷ್ಟ ಭಾವವನ್ನು (ಅಭಿಪ್ರಾಯವನ್ನು) ವ್ಯಕ್ತಪಡಿಸುವುದು. **ವ್ರಜತಿ**–ಹೋಗುತ್ತಾನೆ, **ಪಚತಿ** – ಬೇಯಿಸುತ್ತಾನೆ ಇತ್ಯಾದಿ ವಾಕ್ಯಗಳಲ್ಲಿ ಈಗ ಪ್ರಾರಂಭಿಸಿ ಕೊನೆಯವರೆಗೂ ನಡೆಯುವ ಅಥವಾ ನಡೆದಿರುವ ಭಾವವನ್ನು ಈ ಆಖ್ಯಾತವು ಹೇಳುತ್ತದೆ. **ವ್ರಜತಿ** – ಹೋಗುತ್ತಾನೆ ಎಂಬಲ್ಲಿ ಅವನು ಹಿಂದೆ ಹೋಗುತ್ತಿರಲಿಲ್ಲವೆಂದು ಈಗ ಹೋಗುತ್ತಾನೆಂದೂ ಪೂರ್ವಾಪರ ಸಂಗತಿಗಳನ್ನು ಆಖ್ಯಾತವು ತಿಳಿಸುವುದಲ್ಲದೆ ಒಂದು ಕ್ರಿಯೆಯ ಆರಂಭವನ್ನೂ ಕೊನೆಯನ್ನೂ ಸಹ ತಿಳಿಸುತ್ತದೆ. ಆದ್ದರಿಂದಲೇ ಇಲ್ಲಿ ಉಪಕ್ರಮ – ಮೊದಲು, ಅಪವರ್ಗ – ಕೊನೆ ಎಂಬ ಶಬ್ದಗಳಿಂದ ನಿರ್ದಿಷ್ಟವಾದ ಅಭಿಪ್ರಾಯವನ್ನು ಆಖ್ಯಾತವು ತಿಳಿಸುವುದೆಂದು ಇಲ್ಲಿ ಹೇಳಿದೆ.

ಮೂರ್ತಂ ಸತ್ತ್ವಭೂತಂ ಸತ್ತ್ವನಾಮಭಿರ್ವ್ರಜ್ಯಾ ಪಕ್ತಿರಿತಿ |

ಕೆಲವುಸಮಯದಲ್ಲಿ ಉಪಕ್ರಮಾವಸಾನಗಳಿಂದ ನಿರ್ದಿಷ್ಟವಾದ ಒಂದು ಅಭಿಪ್ರಾಯವನ್ನು ಸತ್ತ್ವಪ್ರಧಾನವಾದ ನಾಮಗಳು ಲಿಂಗ ವಚನಗಳಿಂದ ತಿಳಿಸಲು ಸಾಧ್ಯವಾಗುವುದು. ಹೇಗೆಂದರೆ – ವ್ರಜ್ಯಾ, ಪಕ್ತಿಃ ಎಂದರೆ ಹಿಂದೆ ಹೇಳಿದಂತೆ ವ್ರಜತಿ, ಪಚತಿ ಎಂಬ ಶಬ್ದಗಳು, ಹೋಗುವುದು ಬೇಯಿಸುವುದು ಎಂಬ ಅರ್ಥವನ್ನು ಸೂಚಿಸುವುದಲ್ಲದೆ ವ್ರಜತಿ – ಒಬ್ಬ ಪುರುಷನು ಹೋಗುತ್ತಾನೆ, ಪಚತಿ – ಒಬ್ಬ ಪುರುಷನ (ಓದನಂ – ಅನ್ನವನ್ನು) ಬೇಯಿಸುತ್ತಾನೆ ಎಂದು ಮೊದಲಾಗಿ ಕ್ರಿಯೆಯನ್ನು ಸೂಚಿಸುವುದು. ಆ ಕ್ರಿಯೆಯಲ್ಲಿ ಭಾಗವಹಿಸುವವನು ಒಬ್ಬನೇ, ಇಬ್ಬರೇ ಅಥವಾ ಅನೇಕರೇ ಎಂಬ ವಿಷಯವನ್ನು ಆಖ್ಯಾತವು ತಿಳಿಸುವುದು. **ವ್ರಜತಿ** ಎಂಬಲ್ಲಿ ಏಕವಚನವಿರುವುದರಿಂದ ಒಬ್ಬ ಮನುಷ್ಯನು ಎಂಬ ಅರ್ಥವೂ ಸ್ಪಷ್ಟವಾಗಿರುವುದು. ಅದರಂತೆ **ಪಚತಿ** ಬೇಯಿಸುತ್ತಾನೆ ಎಂಬಲ್ಲಿ ಏನನ್ನು ಬೇಯಿಸುತ್ತಾನೆ ಎಂದರೆ ಅನ್ನವನ್ನು ಬೇಯಿಸುತ್ತಾನೆ ಎಂಬ ಅರ್ಥವೂ ಭಾಸವಾಗುವುದು. ಈ ಅರ್ಥಗಳೆಲ್ಲವೂ ಆಖ್ಯಾತಗಳಿಂದ ಮಾತ್ರವಲ್ಲದೆ **ಸತ್ತ್ವ** ಪ್ರಧಾನವಾದ ನಾಮಪದಗಳಿಂದಲೂ

ವ್ಯಕ್ತವಾಗುವುದು. ಹೇಗೆಂದರೆ **ವ್ರಜ್ಯಾ** ಎಂದರೆ ಹೋಗುವುದು, **ಪಕ್ತಿಃ** ಎಂದರೆ ಬೇಯಿಸುವುದು. ಆದ್ದರಿಂದ ನಾಮಪದಗಳಾದ ವ್ರಜ್ಯಾ ಮತ್ತು ಪಕ್ತಿಃ ಎಂಬ ಪದಗಳೂ ಆಖ್ಯಾತಗಳಂತೆ ಪೂರ್ವಾಪರೀಭೂತಗಳಾದ ಕ್ರಿಯೆಗಳನ್ನು ತಿಳಿಸುವವು ಎಂದಭಿಪ್ರಾಯವು.

ಅದ ಇತಿ ಸತ್ತ್ವಾನಾಮುಪದೇಶಃ ॥

ಮೇಲೆ ಹೇಳಿದ ವಿಷಯಗಳನ್ನು ನಾಮಪದಗಳು ಮಾತ್ರವೇ ತಿಳಿಸುವವು ಎಂದು ತಿಳಿಯಕೂಡದು. ಅದಃ ಎಂದರೆ ಸರ್ವನಾಮವೂ (Pronoun) ಸಹ ನಾಮಪದದಂತೆ ಸತ್ತ್ವಪ್ರಧಾನವಾಗಿಯೇ ಇರುವುದು ಎಂದರೆ ನಾಮಪದಕ್ಕೆ ಅನ್ವಯಿಸುವ ವಿಷಯಗಳೆಲ್ಲಾ ಸರ್ವನಾಮಕ್ಕೂ ಅನ್ವಯಿಸುವುವು.

ಗೌರಶ್ವಃ ಪುರುಷೋ ಹಸ್ತೀತಿ ॥

**ಗೌಃ ಅಶ್ವಃ ಪುರುಷಃ ಹಸ್ತೀ** – ಎಂದರೆ ಗೋವು, ಕುದುರೆ, ಪುರುಷ, ಆನೆ ಇತ್ಯಾದಿ ಪದಗಳು ಸರ್ವನಾಮ ಪದಗಳಂತೆಯೇ (ಜಾತಿವಾಚಕಗಳಾದುದರಿಂದ) ವ್ಯವಹರಿಸಲ್ಪಡುವವು. ಅವುಗಳೂ ಸತ್ತ್ವಪ್ರಧಾನವಾದ ನಾಮಪದದ ನಿಯಮವನ್ನೇ ಅನುಸರಿಸುವವು.

ಭವತೀತಿ ಭಾವಸ್ಯ ॥

ಭವತಿ ಧಾತುವಿನಿಂದ ಅಥವಾ ಶಬ್ದದಿಂದ ಭಾವಶಬ್ದವು ನಿಷ್ಪನ್ನವಾಗಿದೆ. ಭವತಿ ಧಾತುವಿಗೆ ಎಂದರೆ ಆಖ್ಯಾತರೂಪದಿಂದಿರುವ ಭವತಿ ಶಬ್ದಕ್ಕೆ ಯಾವ ಅರ್ಥವಿರುವುದೋ ಅದೇ ಅರ್ಥವು ಭಾವಶಬ್ದಕ್ಕೂ ಇರುವುದು. ಆದರೆ ಭವತಿ ಎಂಬ ರೂಪವು ಆಖ್ಯಾತ ವಾಗಿಯೂ ಭಾವಃ ಎಂಬ ರೂಪವು ನಾಮಪದರೂಪದ ರೂಪವಾಗಿಯೂ ವ್ಯವಹರಿಸಲ್ಪಡುವವು.

ಆಸ್ತೇ ಶೇತೇ ವ್ರಜತಿ ತಿಷ್ಠತೀತಿ ॥

ಮೇಲೆ ಹೇಳಿದಂತೆ ಇನ್ನೂ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ— **ಆಸ್ತೇ** ಕುಳಿತುಕೊಳ್ಳುತ್ತಾನೆ, **ಶೇತೇ**–ಮಲಗುತ್ತಾನೆ (ಅಥವಾ ನಿದ್ರಿಸುತ್ತಾನೆ) **ವ್ರಜತಿ**–ಹೋಗುತ್ತಾನೆ, **ತಿಷ್ಠತಿ**–ನಿಲ್ಲುತ್ತಾನೆ ಇತ್ಯಾದಿ.

ಇಂದ್ರಿಯನಿತ್ಯಂ ವಚನಮೌದುಂಬರಾಯಣಃ ॥

ಇಲ್ಲಿ ಇಂದ್ರಿಯ ಶಬ್ದಕ್ಕೆ ಈ ರೀತಿ ಅರ್ಥಮಾಡಿರುವರು–ಇಂದ್ರ ಎಂದರೆ ಇಲ್ಲಿ ಆತ್ಮಾ. ಇಂದ್ರಿಯವೆಂದರೆ ಆತ್ಮನಿಗೆ ಸಂಬಂಧವಾದ ಎಂದರೆ ಆತ್ಮನಿಂದ ಪ್ರಚೋದಿತವಾದ ಎಂದಭಿಪ್ರಾಯವು. ವಚನವೆಂದರೆ ನಾಮ ಆಖ್ಯಾತ, ಉಪಸರ್ಗ ಮತ್ತು ನಿಪಾತ ಗಳೆಂಬ ನಾಲ್ಕು ವಿಧಗಳಾದ ಪದ ಸಮೂಹಗಳಿಂದ ಕೂಡಿದ್ದ ವಾಕ್ಯವೆಂದರ್ಥವು. ಈ ವಚನವು ಇಂದ್ರಿಯ ಸಂಬಂಧವಾದುದು ಎಂದರೆ ಅನಿತ್ಯವಾದುದು ಆತ್ಮನು ನಾಶರಹಿತನು ಆದರೆ, ಶರೀರಾಂತರ್ಗತಗಳಾದ ಇಂದ್ರಿಯಗಳು ನಾಶವಾಗತಕ್ಕವುಗಳು. ಆದ್ದರಿಂದ ವಾಗಿಂದ್ರಿಯ ಶೋತ್ರೇಂದ್ರಿಯಗಳೂ ಸಹ ನಾಶವಾಗುವವೇ. ಆದ್ದರಿಂದ ಅವುಗಳೂ ಅನಿತ್ಯಗಳು. ಈ ಕಾರಣ ದಿಂದಲೇ ವಾಗಿಂದ್ರಿಯದ ಪರಿಣಾಮಗಳಾದ ಶಬ್ದೋಚ್ಚಾರಣವು ಎಂದರೆ ನಾಮಾಖ್ಯಾತೋಪಸರ್ಗ ನಿಪಾತಾತ್ಮಕವಾದ ಶಬ್ದ

ಗಳ ಸಮುದಾಯದಿಂದ ಕೂಡಿದ ವಾಕ್ಯ ಅಥವಾ ವಚನವೂ ಅನಿತ್ಯವು. ಇಂದ್ರಿಯಾದಿಗಳು ಇರುವವರೆಗೂ ವಚನವು ನಿತ್ಯವು ಎಂದರೆ ವಾಗಾದೀಂದ್ರಿಯಗಳಿರುವವರೆಗೆ ಮಾತ್ರ ವಚನಗಳೂ ಇರುವವು. ಅಲ್ಲಿಯವರೆಗೆ ಮಾತ್ರ ವಚನಗಳನ್ನು ನಿತ್ಯವೆಂದು ಭಾವಿಸಬಹುದು. ಇಂದ್ರಿಯಗಳು ನಾಶವಾದ ಕೂಡಲೇ ವಚನವೂ ತಾನಾಗಿಯೇ ನಾಶವಾಗುವುದು. ಇದು ಔದುಂಬ ರಾಯಣರೆಂಬ ಆಚಾರ್ಯರ ಅಭಿಪ್ರಾಯವು. ಈ ಔದುಂಬರಾಯಣರು ಯಾರು ಎಂದರೆ ಉದುಂಬರೆಂಬುವರ ಪುತ್ರನಿಗೆ ಔದುಂಬರಿ ಎಂದು ಹೆಸರು. ಇವರ ಪುತ್ರನಿಗೆ ಔದುಂಬರಾಯಣ ಎಂದು ಹೆಸರು.

**ಇತಿ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ**

ಇಲ್ಲಿಗೆ ಪ್ರಥಮಾಧ್ಯಾಯದಲ್ಲಿ ಪ್ರಥಮ ಖಂಡವು ಸಮಾಪ್ತವು



**ಅಥ ದ್ವಿತೀಯಃ ಖಂಡಃ**

ಎರಡನೆಯ ಖಂಡವು

ತತ್ರ ಚತುಷ್ಟ್ವಂ ನೋಪಪದ್ಯತೇ ಯುಗಪದುತ್ಪನ್ನಾನಾಂ ವಾ ಶಬ್ದಾನಾಮಿತರೇತರೋಪದೇಶಃ ಶಾಸ್ತ್ರಕೃತೋ ಯೋಗಶ್ಚ ವ್ಯಾಪ್ತಿಮತ್ತ್ವಾತ್ತು ಶಬ್ದಸ್ಯಾಣೀಯಸ್ತ್ವಾಚ್ಚ ಶಬ್ದೇನ ಸಂಜ್ಞಾ–ಕರಣಂ ವ್ಯವಹಾರಾರ್ಥಂ ಲೋಕೇ ತೇಷಾಂ ಮನುಷ್ಯವದ್ದೇ–ವತಾಭಿಧಾನಂ ಪುರುಷವಿದ್ಯಾನಿತ್ಯತ್ವಾತ್ಕರ್ಮಸಂಪತ್ತಿರ್ಮಂತ್ರೋ ವೇದೇ। ಷಡ್ಭಾವವಿಕಾರಾ ಭವಂತೀತಿ ವಾರ್ಷ್ಯಾಯಣಿರ್ಜಾಯ–ತೇಽಸ್ತಿ ವಿಪರಿಣಮತೇ ವರ್ಧತೇಽಪಕ್ಷೀಯತೇ ವಿನಶ್ಯತೀತಿ ಜಾಯತ ಇತಿ ಪೂರ್ವಭಾವಸ್ಯಾದಿಮಾಚಷ್ಟೇ ನಾಪರಭಾವಮಾ-ಚಷ್ಟೇ ನ ಪ್ರತಿಷೇಧತ್ಯಸ್ತೀತ್ಯುತ್ಪನ್ನಸ್ಯ ಸತ್ತ್ವಸ್ಯಾವಧಾರಣಂ ವಿಪರಿಣಮತ ಇತ್ಯಪ್ರಚ್ಯವಮಾನಸ್ಯ ತತ್ತ್ವಾದ್ವಿಕಾರಂ ವರ್ಧತ ಇತಿ ಸ್ವಾಂಗಾಭ್ಯುಚ್ಚಯಂ ಸಾಂಯೌಗಿಕಾನಾಂ ವಾರ್ಥಾನಾಂ ವರ್ಧತೇ

ವಿಜಯೇನೇತಿ ವಾ ವರ್ಧತೇ ಶರೀರೇಣೇತಿ ವಾಪಕ್ಷೀಯತ
ಇತ್ಯೇತೇನೈವ ವ್ಯಾಖ್ಯಾತಃ ಪ್ರತಿಲೋಮಂ ವಿನಶ್ಯತೀತ್ಯಪರಭಾವ-
ಸ್ಯಾದಿಮಾಚಷ್ಟೇ ನ ಪೂರ್ವಭಾವಮಾಚಷ್ಟೇ ನ ಪ್ರತಿಷೇಧತಿ ॥೨॥

---

ತತ್ರ ಚತುಷ್ಟ್ವಂ ನೋಪಪದ್ಯತೇ ॥

ಮೇಲೆ ಹೇಳಿದ ಸಂದರ್ಭದಲ್ಲಿ ಎಂದರೆ ಇಂದ್ರಿಯಗಳಿರುವವರೆಗೂ ವಚನವಿರುವುದೆಂದೂ ಅಲ್ಲಿಯವರೆಗೆ ಮಾತ್ರ ಅವು ನಿತ್ಯವೆಂದು ಭಾವಿಸಬಹುದೆಂದೂ ಔದುಂಬರಾಯಣರೆಂಬ ಆಚಾರ್ಯರು ಅಭಿಪ್ರಾಯಪಟ್ಟಿರುವರೆಂದು ಹಿಂದೆ ಹೇಳಿದೆಯಷ್ಟೆ. ಆ ಸಂದರ್ಭದಲ್ಲಿ ನಾಲ್ಕುವಿಧವಾದ ಎಂದರೆ ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂಬ ನಾಲ್ಕು ವಿಧವಾದ ಪದವರ್ಗಗಳಿಂದಲೂ ಕೂಡಿದ ಭಾವವಚನ ದ್ರವ್ಯವಚನ, ಗುಣಭಾವ, ಪೂರ್ವಾಪರೀಭಾವ, ಸಾಮಾನ್ಯವಾಚಿತ್ವ ವಿಶೇಷವಾಚಿತ್ವ ಎಂಬ ನಾನಾವಿಧ ರೂಪಗಳಿಂದ ವಚನಗಳಿಗೆಲ್ಲಾ ಅಸ್ತಿತ್ವವೇ ಇಲ್ಲವೆನ್ನಬೇಕಾಗುವುದು. ಏಕೆಂದರೆ, ಮಾತನಾಡುವವನಿಗೆ ವಾಗಿಂದ್ರಿಯವೂ ಕೇಳು ವವನಿಗೆ ಶ್ರೋತ್ರೇಂದ್ರಿಯವೂ ಇದ್ದಲ್ಲಿ ಮಾತ್ರ ವಚನಕ್ಕೆ ಅಸ್ತಿತ್ವವಿರುವುದು. ಮಾತನಾಡುವ ಮತ್ತು ಕೇಳುವ ಪುರುಷರಿಗೆ ಇಂದ್ರಿಯಗಳೇ ಇಲ್ಲದಿದ್ದಲ್ಲಿ (ಎಂದರೆ ಪುರುಷರಾಗಲಿ ಇಂದ್ರಿಯಗಳಾಗಲಿ ಇಲ್ಲದಿದ್ದ ಪಕ್ಷದಲ್ಲಿ) ವಚನಕ್ಕೆ ಅಸ್ತಿತ್ವವೆಲ್ಲಿ? ಆದ್ದರಿಂದ ವಚನವು ಇಂದ್ರಿಯಾನಿತ್ಯವೆನಿಸಿದರೆ ಪದಚತುಷ್ಟಯದ ಸಂಭವವೂ ಇರುವುದಿಲ್ಲ.

ಅಯುಗಪದುತ್ಪನ್ನಾನಾಂ ವಾ ಶಬ್ದಾನಾಮಿತರೇತರೋಪದೇಶಃ ॥

ಇಲ್ಲಿ **ವಾ** ಎಂಬ ಶಬ್ದಕ್ಕೆ ಮತ್ತು ಎಂದು ಸಮುಚ್ಚಯಾರ್ಥವನ್ನು ಹೇಳಿರುವರು. ಮತ್ತು ಮೇಲಿನ ಸಂದರ್ಭದಲ್ಲಿ ಎಂದರೆ ಔದುಂಬರಾಯಣರ ಅಭಿಪ್ರಾಯದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಅನೇಕರಿಂದ ಉದ್ದೇಶಿಸಲ್ಪಟ್ಟ ವಾಕ್ಯ ನಿಯಮಗಳು ಎಂದರೆ ನಾಮಪದಕ್ಕೆ ಆಖ್ಯಾತದ ಗುಣವನ್ನು ಆಖ್ಯಾತ ಪದಕ್ಕೆ ನಾಮಪದದ ಗುಣವನ್ನು ಹೇಳುವ ನಾನಾವಿಧ ವಾಕ್ಯಗಳ ಅಸ್ತಿತ್ವವೇ ಅಸಂಭವವೆನ್ನಬೇಕಾಗುವುದು.

ಶಾಸ್ತ್ರಕೃತೋ ಯೋಗಶ್ಚ ॥

ಶಾಸ್ತ್ರಸಂಬಂಧವಾದ ಯೋಗ ಎಂದರೆ ವ್ಯಾಕರಣಾದಿ ಶಬ್ದಶಾಸ್ತ್ರನಿಯಮಾನುಸಾರವಾಗಿ ಶಬ್ದಗಳ ಸಂಯೋಗ ಎಂದರೆ ಸೇರಿಸುವಿಕೆಯೂ ಸಾಧ್ಯವಾಗುವುದಿಲ್ಲ. ಇಲ್ಲಿ ಸಂಯೋಗವೆಂದರೆ ಧಾತುಗಳಿಗೆ ಉಪಸರ್ಗವನ್ನು ಸೇರಿಸುವುದು. ಧಾತುಗಳಿಗೆ ವಿಭಕ್ತಿ ಅಥವಾ ಇತರ ಪ್ರತ್ಯಯಗಳನ್ನು ಸೇರಿಸುವುದು ಮತ್ತು ಶಬ್ದಗಳಿಗೆ ಪ್ರತ್ಯಯಾದಿಗಳನ್ನು ಸೇರಿಸುವಾಗ ಸಂಭವಿಸುವ ಲೋಪಾಗಮಾದಿ ವಿಕಾರಗಳು. ಇವುಗಳಿಗೆ ಯೋಗ ಅಥವಾ ಸಂಯೋಗವೆಂದು ಹೆಸರು. ಔದುಂಬರಾಯಣರ ಅಭಿಪ್ರಾಯದಲ್ಲಿ ಈ ವಿಧವಾದ ಯೋಗಕ್ಕೂ ಅವಕಾಶವಿಲ್ಲ.

ವ್ಯಾಪ್ತಿಮತ್ತ್ವಾತ್ತು ಶಬ್ದಸ್ಯ ॥

ಇದುವರೆಗೂ ಹೇಳಿದುದೆಲ್ಲಾ ಔದುಂಬರಾಯಣರ ಮತವು. ಅದರಲ್ಲಿ ಅನೇಕ ವಿರೋಧಗಳಿರುವುದರಿಂದ ಅವರ ಅಭಿಪ್ರಾಯಗಳನ್ನು ಒಪ್ಪುವುದಕ್ಕಾಗುವುದಿಲ್ಲವೆಂದು ಯಾಸ್ಕರು ಹೇಳಿ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ನಾಮಾಖ್ಯಾತ

ಉಪಸರ್ಗನಿಪಾತಾತ್ಮಕವಾದ ವಾಕ್ಯಗಳು ಯಾವಾಗಲೂ ನಿತ್ಯವು. ಏಕೆಂದರೆ ಇವು ಎಲ್ಲೆಲ್ಲಿಯೂ ವ್ಯಾಪಿಸಿರುವವು. ಲೋಕದಲ್ಲಿ ವಸ್ತುಗಳನ್ನು ನಿರ್ದೇಶಿಸುವುದಕ್ಕಾಗಿ ಶಬ್ದಗಳ (ಅಕ್ಷರಸಹಿತವಾದ ಪದಗಳ) ಉಪಯೋಗವನ್ನು ಬಳಸಲಾಗಿದೆ. ಲೋಕ ವ್ಯವಹಾರದಲ್ಲಿಯೂ ಸಹ ವಸ್ತುಗಳನ್ನು ಮತ್ತು ಅಭಿಪ್ರಾಯಗಳನ್ನು ಒಬ್ಬರು ಮತ್ತೊಬ್ಬರಿಗೆ ತಿಳಿಯಪಡಿಸುವಾಗ ನಾಮಾಖ್ಯಾತಾದಿ ಪದಗಳನ್ನೇ ಉಪಯೋಗಿಸುವರು. ಆದ್ದರಿಂದ ಶಬ್ದಗಳು ಅಥವಾ ವಚನಗಳು ನಾಮಾಖ್ಯಾತೋಪಸರ್ಗ ನಿಪಾತಗಳು, ವಾಕ್ಯಗಳು ಇವೆಲ್ಲವೂ ನಷ್ಟವಾದವೆಂದು ಭಾವಿಸಬೇಕಾಗಿಲ್ಲ. ಇತರ ಪುರುಷರೂ ಅವರ ಇಂದ್ರಿಯಗಳೂ ಇದ್ದೇ ಇರುವವು. ಆದ್ದರಿಂದ ಶಬ್ದಗಳು ಸರ್ವವ್ಯಾಪ್ತಿಯಾಗಿರುವುದರಿಂದ ಇವನ್ನೂ ಅನಿತ್ಯವೆಂದು ಹೇಳಬೇಕಾಗಿಲ್ಲ.

ಅಣೀಯಸ್ತ್ವಾಚ್ಚ ಶಬ್ದೇನ ಸಂಜ್ಞಾಕರಣಂ ವ್ಯವಹಾರಾರ್ಥಂ ಲೋಕೇ

ಶಬ್ದಗಳು ಸರ್ವವ್ಯಾಪಿಯೆಂದು ಹೇಳಿದೆಯಷ್ಟೆ. ಸರ್ವವ್ಯಾಪಿಯಾದ್ದರಿಂದ ಶಬ್ದಗಳು ಬಹಳ ಪ್ರಮಾಣದ್ದಾಗಿರಬೇಕೆಂಬ ನಿಯಮವೇನೂ ಇರುವುದಿಲ್ಲ. ಶಬ್ದಗಳಲ್ಲಿ ಸಣ್ಣದು ದೊಡ್ಡವು ಎಲ್ಲವೂ ಇವೆ. ಲೋಕವ್ಯವಹಾರದಲ್ಲಿ ಕೇವಲ ಒಂದು ಸಣ್ಣ ಶಬ್ದದ ಉಚ್ಚಾರಣೆಯಿಂದಲೇ ಒಬ್ಬನು ಮತ್ತೊಬ್ಬನಿಗೆ ತನ್ನ ಅಭಿಪ್ರಾಯವನ್ನು ತಿಳಿಸಲು ಶಕ್ತನಾಗುತ್ತಾನೆ.

ತೇಷಾಂ ಮನುಷ್ಯವದ್ದೇವತಾಭಿಧಾನಂ

ನಾಮಾಖ್ಯಾತಾದಿ ಚತುರ್ವಿಧ ಶಬ್ದಗಳಿಂದ ಕೂಡಿದ ವಾಕ್ಯಗಳು ಲೋಕವ್ಯವಹಾರದಲ್ಲಿ ಮನುಷ್ಯರ ಹೆಸರುಗಳನ್ನು ಮಾತ್ರವೇ ಹೇಳುವುದಿಲ್ಲ. ದೇವತೆಗಳ ಹೆಸರುಗಳನ್ನೂ ಹೇಳುತ್ತವೆ. ಆದ್ದರಿಂದ ಆ ವಾಕ್ಯಗಳು ಮನುಷ್ಯರಿಂದ ಮಾತ್ರವೇ ವ್ಯವಹರಿಸಲ್ಪಡುವುವು ಎಂದು ಭಾವಿಸಬೇಕಾಗಿಲ್ಲ. ಮನುಷ್ಯರು ಯಜ್ಞಯಾಗಾದಿಗಳಲ್ಲಿ ದೇವತೆಗಳನ್ನು ಪ್ರಾರ್ಥಿಸುವಾಗಲೂ ಮತ್ತು ದೇವತೆಗಳು ಇತರ ದೇವತೆಗಳನ್ನು ಅಥವಾ ಮನುಷ್ಯರನ್ನು ಸಂಬೋಧಿಸಿ ಮಾತನಾಡುವಾಗಲೂ ಈ ವಾಕ್ಯಗಳನ್ನು ಉಪಯೋಗಿಸುತ್ತಾರೆ. ಎಂದರೆ ಮನುಷ್ಯರಂತೆ ದೇವತೆಗಳೂ ಸಹ ಈ ವಾಕ್ಯಗಳನ್ನು ಉಪಯೋಗಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆಂದಭಿಪ್ರಾಯವು.

ಪುರುಷವಿದ್ಯಾನಿತ್ಯತ್ವಾತ್ ಕರ್ಮಸಂಪತ್ತಿರ್ಮಂತ್ರೋ ವೇದೇ ॥

ಪುರುಷರು ಎಂದರೆ ಮನುಷ್ಯರಿಗಿರುವ ಜ್ಞಾನಕ್ಕೆ ಪರಿಮಿತಿಯುಂಟು ಮತ್ತು ಅದು ಯಾವಾಗಲೂ ಶಾಶ್ವತವಾಗಿರುವುದಿಲ್ಲ. ಎಂದರೆ ಪುರುಷರಿಗಿರುವ ವಿದ್ಯೆಯು ಪರಿಮಿತಿಯಾಗಿರುವುದರಿಂದ ಅವರು ಎಲ್ಲವನ್ನೂ ತಿಳಿಯಲು ಸಮರ್ಥರಲ್ಲ. ಮತ್ತು ಯಜ್ಞಾದಿ ಕರ್ಮಗಳನ್ನು ಹೇಗೆ ಮಾಡಬೇಕು ಯಜ್ಞಾದಿಗಳನ್ನು ಮಾಡಿದರೆ ಯಾವ ಫಲವು ಲಭಿಸುವುದು ಮುಂತಾದ ವಿಷಯ ಗಳಲ್ಲಿಯೂ ಮನುಷ್ಯರಿಗಿರುವ ಜ್ಞಾನವು ಅಲ್ಪವಾದುದು. ಯಜ್ಞಾದಿಕರ್ಮಗಳ ವಿಷಯಗಳನ್ನು ಚೆನ್ನಾಗಿ ತಿಳಿದುಕೊಂಡು ನಿರ್ದಿಷ್ಟಫಲವನ್ನು ಅನುಭವಿಸಲು ಮಂತ್ರಗಳ ಅವಶ್ಯಕತೆ ಇರುವುದು. ಈ ಮಂತ್ರಗಳು ವೇದದಲ್ಲಿ ಮಾತ್ರ ಇರುವುವು ಮತ್ತು ಮಂತ್ರಗಳು ಭಾವಾಖ್ಯಾತೋಪಸರ್ಗನಿಪಾತಗಳೆಂಬ ಪದಚತುಷ್ಟಯಸಮೂಹದಿಂದಲೇ ಕೂಡಿರುವವು. ಈ ಮಂತ್ರಗಳ ಅರ್ಥವನ್ನೂ ಸ್ವರೂಪವನ್ನೂ ತಿಳಿದುಕೊಳ್ಳಬೇಕಾದರೆ ನಾಮಾಖ್ಯಾತೋಪಸರ್ಗನಿಪಾತಗಳೆಂಬ ನಾಲ್ಕು ವಿಧ ಪದಗಳ ವಿಷಯ ಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕಾದುದು ಅವಶ್ಯಕವು.

ಷಡ್ಭಾವವಿಕಾರಾ ಭವಂತೀತಿ ವಾರ್ಷ್ಯಾಯಣಿರ್ಜಾಯತೇಽಸ್ತಿ
ವಿಪರಿಣಮತೇ ವರ್ಧತೇಽಪಕ್ಷೀಯತೇ ವಿನಶ್ಯತೀತಿ ॥

ಭಾವಗಳು ಆರು ವಿಧ ವಿಕಾರಗಳನ್ನು ಹೊಂದುವುವು ಎಂದು ವಾರ್ಷ್ಯಾಯಣಿ ಎಂಬ ಆಚಾರ್ಯರು ಹೇಳುವರು. **ಭವತೀತಿ ಭಾವಃ** ಭಾವವೆಂದರೆ ಉಂಟಾಗುವುದು ಎಂದು ಅರ್ಥವು. (ಇಲ್ಲಿ ಭಾವಶಬ್ದಕ್ಕೆ ಎರಡರ್ಥವನ್ನು ಮಾಡಬಹುದು. ಕಾರ್ಯಕಾರಣಭಾವವನ್ನು ವಿವೇಚಿಸಿದರೆ ಅದು ಒಂದು ಕ್ರಿಯೆಯೆಂದೂ, ಮನಸ್ಸಿನಲ್ಲಿ ಉದ್ಭವವಾಗುವ ಅಭಿಪ್ರಾಯಗಳನ್ನು ವಿವೇಚಿಸಿದರೆ ಭಾವ ಎಂದೂ ಭಾವವು ಎರಡು ವಿಧ ಅರ್ಥವನ್ನೂ ಸೂಚಿಸುವುದು. ಈ ಎರಡು ವಿಧ ಭಾವಗಳೂ ಮೇಲೆ ಬೇಳಿದಂತೆ ಆರು ವಿಧ ವಿಕಾರಗಳಿಗೆ ಒಳಗಾಗುವವು). ಈ ಆರು ವಿಧ ವಿಕಾರಗಳಾವುವೆಂದರೆ **ಜಾಯತೇ** – ಉತ್ಪನ್ನವಾಗುವುದು, **ಅಸ್ತಿ** – ಇರುವುದು, **ವಿಪರಿಣಮತೇ** – ವ್ಯತ್ಯಸ್ತವಾಗುವುದು, **ವರ್ಧತೇ** – ವೃದ್ಧಿಯಾಗುವುದು ಎಂದರೆ ಹೆಚ್ಚುವುದು, **ಅಪಕ್ಷೀಯತೇ** – ಕೃಶ ಅಥವಾ ಕಮ್ಮಿಯಾಗುವುದು ಮತ್ತು **ವಿನಶ್ಯತಿ** – ನಾಶವಾಗುವುದು. ಈ ಆರು ವಿಧ ವಿಕಾರಗಳು (ಅಥವಾ ಬದಲಾವಣೆಗಳು) ಮನಸ್ಸಿನಲ್ಲಿ ಉಂಟಾಗುವ ಭಾವಗಳಿಗೂ ಲೋಕವ್ಯವಹಾರದಲ್ಲಿ ನಡೆಯುವ ಸಮಸ್ತ ಕಾರ್ಯಗಳಿಗೂ ಉಂಟಾಗುವವು.

ಜಾಯತ ಇತಿ ಪೂರ್ವಭಾವಸ್ಯಾದಿಮಾಚಷ್ಟೇ ನಾಪರಭಾವಮಾಚಷ್ಟೇ
ನ ಪ್ರತಿಷೇಧತಿ ॥

ಈಗ ಮೇಲೆ ಹೇಳಿದ ಆರುವಿಧ ವಿಕಾರಗಳನ್ನು ಒಂದೊಂದಾಗಿ ವಿವೇಚಿಸುವರು– ಇವುಗಳಲ್ಲಿ **ಜಾಯತೇ**–ಉತ್ಪನ್ನವಾಗುವುದು ಎಂಬುದು ಭಾವಕ್ಕೆ ಮೊದಲನೆಯ ಅವಸ್ಥೆಯು. ಈ ಭಾವವು ಮುಂದೆ ಹೇಗೆ ಆಗುವುದೆಂಬುದನ್ನು ಜಾಯತೇ ಎಂಬ ಶಬ್ದದಿಂದ ಹೇಳಿಲ್ಲ. ಮತ್ತು **ನ ಪ್ರತಿಷೇಧತಿ** ಎಂದರೆ ಆ ಭಾವವು ಇಲ್ಲವೆಂಬುದನ್ನು ಸಮರ್ಥಿಸುವುದಿಲ್ಲ. ಆದ್ದರಿಂದ ಮೊದಲು ಇಲ್ಲದಿದ್ದ ಭಾವವು ಈಗ ಉತ್ಪನ್ನವಾಗಿದೆ ಎಂಬುದನ್ನು ಮಾತ್ರ ಈ ಮೊದಲನೆಯ ವಿಕಾರವು ತಿಳಿಸುವುದು.

ಅಸ್ತೀತ್ಯುತ್ಪನ್ನಸ್ಯ ಸತ್ತ್ವಸ್ಯಾವಧಾರಣಂ ॥

ಉತ್ಪನ್ನವಾದ ಭಾವವು ಅಸ್ತಿ–ಇದೆ ಎಂಬುದನ್ನು ಮಾತ್ರ ಹೇಳುವುದು. ಇದು ಎರಡನೆಯ ವಿಕಾರವು.

ವಿಪರಿಣಮತ ಇತ್ಯಪ್ರಚ್ಯವಮಾನಸ್ಯ ತತ್ತ್ವಾದ್ವಿಕಾರಂ ॥

ಭಾವವು ವಿಪರಿಣಮತೆ—ವ್ಯತ್ಯಸ್ತವಾಗುವುದು ಎಂಬುದು ಮೂರನೆಯ ವಿಕಾರವು ಎಂದರೆ ಉತ್ಪನ್ನವಾದ ವಿಕಾರವು ಮುಂಚಿನಂತೆಯೇ ಇರದೆ ವ್ಯತ್ಯಾಸವನ್ನು ಹೊಂದುವುದು. ಈ ಸ್ಥಿತಿಯನ್ನು ವಿಪರಿಣಾಮ—ಬದಲಾವಣೆ, ವ್ಯತ್ಯಾಸ ಎಂದು ಕರೆಯಲಾಗಿದೆ.

ವರ್ಧತ ಇತಿ ಸ್ವಾಂಗಾಭ್ಯುಚ್ಚಯಂ ಸಾಂಯೋಗಿಕಾನಾಂ ವಾರ್ಥಾನಾಂ
ವರ್ಧತ ವಿಜಯೇನೇತಿ ವಾ ವರ್ಧತೇ ಶರೀರೇಣೇತಿ ವಾ ॥

**ವರ್ಧತೆ**—ವೃದ್ಧಿಯಾಗುವುದು, ಹೆಚ್ಚುವುದು, ಬೆಳೆಯುವುದು ಎಂಬುದು ನಾಲ್ಕನೆಯ ವಿಕಾರವು. ಒಂದು ಭಾವವು ಅಥವಾ ವಸ್ತುವು ಇತರ ಭಾವದ ಅಥವಾ ವಸ್ತುವಿನ ಸಂಯೋಗದಿಂದ ಹೆಚ್ಚುವುದು, ಹುಟ್ಟಿದ ಸ್ಥಿತಿಯಲ್ಲಿಯೇ ಇರುವುದಿಲ್ಲ. ಶರೀರವು ಹುಟ್ಟುವಾಗ ಇರುವ ಸ್ಥಿತಿಯಲ್ಲಿಯೇ ಇರದೆ ಆಹಾರಾದಿ ಸಂಯೋಗದಿಂದ ಬೆಳೆಯುವುದು ಅಥವಾ ವೃದ್ಧಿಯನ್ನೈದುವುದು.

ಅಪಕ್ಷೀಯತ ಇತ್ಯೇತೇನೈವ ವ್ಯಾಖ್ಯಾತಃ ಪ್ರತಿಲೋಮಂ ||

**ಅಪಕ್ಷೀಯತೇ**—ಕ್ಷೀಣಿಸುವುದು, ಕೃಶವಾಗುವುದು ಎಂಬ ವಿಕಾರವು ಐದನೆಯದು. ಒಂದು ವಸ್ತುವು ಹುಟ್ಟುವಾಗ ಅಥವಾ ಅನಂತರ ಇದ್ದ ಸ್ಥಿತಿಯಲ್ಲಿಯೇ ಇರದೆ ತನ್ನ ಸ್ವರೂಪದಲ್ಲಿ ಅಥವಾ ಆಕಾರದಲ್ಲಿ ನಷ್ಟವನ್ನು ಹೊಂದುವುದು. ಮೊದಲು ಇದ್ದದ್ದಕ್ಕಿಂತ ಕಮ್ಮಿಯಾಗುವುದು. ಇದು **ವರ್ಧತೆ**–ವೃದ್ಧಿಯಾಗುವುದು ಎಂಬ ವಿಕಾರಕ್ಕೆ ವಿರುದ್ಧವಾಗಿರುವುದು.

ವಿನಶ್ಯತೀತ್ಯಪರಭಾವಸ್ಯಾದಿಮಾಚಷ್ಟೇ ನ ಪೂರ್ವಭಾವಮಾಚಷ್ಟೇ
ನ ಪ್ರತಿಷೇಧತಿ ||

**ವಿನಶ್ಯತಿ**—ನಷ್ಟವಾಗುವುದು, ಇಲ್ಲದೇ ಹೋಗುವುದು ಎಂಬ ಸ್ಥಿತಿಯು ಆರನೆಯ ವಿಕಾರವು. ಹಿಂದೆ ಇದ್ದ ಅಥವಾ ಉತ್ಪನ್ನವಾಗಿದ್ದ ವಸ್ತುವು ನಷ್ಟವಾಗಿ ಈಗ ಏನೂ ಇಲ್ಲದಿರುವ ಸ್ಥಿತಿಗೆ ನಷ್ಟವೆಂದು ಹೆಸರು. ಇದು **ಜಾಯತೇ**—ಉತ್ಪನ್ನವಾಗುವುದು ಎಂಬ ಮೊದಲನೆಯ ವಿಕಾರಕ್ಕೆ ವಿರುದ್ಧವಾಗಿರುವುದು. ಇದರಿಂದ ಜಾಯತೇ ಎಂಬ ಉಪಕ್ರಮ (ಪ್ರಾರಂಭ) ವ್ಯಕ್ತವಾದ ಇತರ ಅವಸ್ಥೆಗಳೆಲ್ಲವೂ ಎಂದರೆ ಕೊನೆಯವರೆಗೆ ತಿಳಿಸಿದ ಅವಸ್ಥೆಗಳೆಲ್ಲವೂ ನಷ್ಟವಾಗಿ ಈಗ ಏನೂ ಇಲ್ಲದಿರುವ ಸ್ಥಿತಿ ಅಥವಾ ಅವಸ್ಥೆಯು ಉಂಟಾಗಿರುವುದು ಎಂದಭಿಪ್ರಾಯವು.

**ಇತಿ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ**

ಇಲ್ಲಿಗೆ ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವು



**ಅಥ ತೃತೀಯಃ ಖಂಡಃ**

ಅತೋಽನ್ಯೇ ಭಾವವಿಕಾರಾ ಏತೇಷಾಮೇವ ವಿಕಾರಾ ಭವಂತೀತಿ ಹ ಸ್ಮಾಹ ತೇ ಯಥಾವಚನಮಭ್ಯೂಹಿತವ್ಯಾ ನ ನಿರ್ಬದ್ಧಾ ಉಪಸರ್ಗಾ ಅರ್ಥಾನ್ನಿರಾಹುರಿತಿ ಶಾಕಟಾಯನೋ ನಾಮಾ–ಖ್ಯಾತಯೋಸ್ತು ಕರ್ಮೋಪಸಂಯೋಗದ್ಯೋತಕಾ ಭವಂತ್ಯು–ಚ್ಚಾವಚಾಃ ಪದಾರ್ಥಾ ಭವಂತೀತಿ ಗಾರ್ಗ್ಯಸ್ತದ್ಯ ಏಷು ಪದಾರ್ಥಃ ಪ್ರಾಹುರಿಮೇ ತನ್ನಾಮಾಖ್ಯಾತಯೋರರ್ಥ–ವಿಕರಣಮಾ ಇತ್ಯರ್ವಾಗರ್ಥೇ ಪ್ರಪರೇತ್ಯೇತಸ್ಯ ಪ್ರಾತಿಲೋಮ್ಯಮಭೀತ್ಯಾಭಿಮುಖ್ಯಂ ಪ್ರತೀತ್ಯೇತಸ್ಯ ಪ್ರಾತಿಲೋಮ್ಯ–

ಮತಿ ಸು ಇತ್ಯಭಿಪೂಜಿತಾರ್ಥೇ ನಿರ್ದುರಿತ್ಯೇತಯೋಃ ಪ್ರಾತಿಲೋಮ್ಯಂ ನ್ಯವೇತಿ ವಿನಿಗ್ರಹಾರ್ಥೀಯಾ ಉದಿತ್ಯೇ-ತಯೋಃ ಪ್ರಾತಿಲೋಮ್ಯಂ ಸಮಿತ್ಯೇಕೀಭಾವಂ ವ್ಯಪೇತ್ಯೇತಸ್ಯ ಪ್ರಾತಿಲೋಮ್ಯಮನ್ವಿತಿ ಸಾದೃಶ್ಯಾಪರಭಾವಮಪೀತಿ ಸಂಸರ್ಗ-ಮುಪೇತ್ಯುಪಜನಂ ಪರೀತಿ ಸರ್ವತೋಭಾವಮಧೀತ್ಯುಪರಿ-ಭಾವಮೈಶ್ವರ್ಯಂ ಏವಮುಚ್ಚಾವಚಾನರ್ಥಾನ್ಪ್ರಾಹುಸ್ತ ಉಪೇಕ್ಷಿತವ್ಯಾಃ ॥ ೩ ॥

---

ಅತೋಽನ್ಯೇ ಭಾವವಿಕಾರಾ ಏತೇಷಾಮೇವ ವಿಕಾರಾ ಭವಂತೀತಿ ಹ ಸ್ಮಾಹ ॥

ಶಬ್ದಗಳ ಮೇಲೆ ಹೇಳಿದ ಆರು ವಿಧ ಭಾವವಿಕಾರಗಳಲ್ಲದೆ ಇತರ ವಿಕಾರಗಳೂ ಉಂಟಾಗುವವು. ಆದ್ದರಿಂದ ಶಬ್ದಗಳು ಸಂದರ್ಭಾನುಸಾರವಾಗಿ ಅನೇಕ ರೂಪಗಳನ್ನು ಹೊಂದುವವು. ಉದಾಹರಣೆಗಾಗಿ ಕೆಲವು ಶಬ್ದಗಳನ್ನು ತೆಗೆದುಕೊಳ್ಳೋಣ. ಜನಿಶಬ್ದ ವಾಚ್ಯವಾದ ಅನೇಕ ಶಬ್ದಗಳಿರುವವು ಎಂದರೆ **ಜಾಯತೇ** ಎಂಬ ಶಬ್ದದಂತೆ ಅದೇ ಅರ್ಥವನ್ನು ಸೂಚಿಸುವ ಅನೇಕಪದಗಳಿರುವವು. ನಿಷ್ಪದ್ಯತೇ, ಅಭಿವ್ಯಜ್ಯತೇ ತಿಷ್ಠತಿ ಇತ್ಯಾದಿ. ಅಸ್ತಿಶಬ್ದಕ್ಕೆ – ವಿದ್ಯತೇ, ಭವತಿ ಇತ್ಯಾದಿ. ವಿಪರಿಣಮತಿಶಬ್ದಕ್ಕೆ – ವಿಪರಿಣಮತೇ, ಜೀರ್ಯತಿ, ಭಾವಾಂತರಮಾಪದ್ಯತೆ ಇತ್ಯಾದಿ. ವರ್ಧತಿಶಬ್ದಕ್ಕೆ, ವರ್ಧತೇ, ಪುಷ್ಯತಿ, ಉಪಚೀಯತೇ, ಅರ್ಧಾಯತೆ ಇತ್ಯಾದಿ. ಅಪಕ್ಷೀಯತಿಶಬ್ದಕ್ಕೆ – ಧ್ವಸ್ಯತಿ, ಭ್ರಶ್ಯತಿ ಇತ್ಯಾದಿ. ವಿನಶ್ಯತಿಶಬ್ದಕ್ಕೆ – ಮ್ರಿಯತೇ ವಿಲೀಯತೆ ಇತ್ಯಾದಿ. ಈ ರೀತಿಯಾಗಿ ಒಂದೇ ಭಾವವನ್ನು ವ್ಯಕ್ತಪಡಿಸುವುದಕ್ಕೆ ನಾನಾ ಶಬ್ದಗಳನ್ನು ಉಪಯೋಗಿಸಬಹುದು. ಆದ್ದರಿಂದ ಮೇಲೆ ಹೇಳಿದ ಆರು ಭಾವವಿಕಾರಗಳ ಜತೆಗೆ ಅನೇಕ ಭಾವವಿಕಾರಗಳಿರುವವು.

ತೇ ಯಥಾವಚನಮಭ್ಯೂಹಿತವ್ಯಾಃ ॥

ಶಬ್ದಗಳ ಈ ವಿಧವಾದ ವಿಕಾರಗಳನ್ನೆಲ್ಲಾ ಸಂದರ್ಭಾನುಸಾರವಾಗಿ ಊಹಿಸಿ ತಿಳಿದುಕೊಳ್ಳಬೇಕು. ಒಂದೇ ಶಬ್ದವು ಉಪಸರ್ಗ ಅಥವಾ ಪ್ರತ್ಯಯಸಂಬಂಧದಿಂದ ನಾನಾರ್ಥಗಳನ್ನು ಸೂಚಿಸುವ ಶಬ್ದಗಳಾಗಬಹುದು. ಉದಾ – ಉದ್ದೇಶಃ ನಿರ್ದೇಶಃ ಪ್ರತಿನಿರ್ದೇಶಃ ಉಪದೇಶಃ ಸಂದೇಶಃ ಇತ್ಯಾದಿ. ಆದ್ದರಿಂದ ವಚನದಲ್ಲಿರುವ ಅರ್ಥಕ್ಕನುಸಾರವಾಗಿ ಶಬ್ದಗಳು ಭಾವವಿಕಾರವನ್ನು ಹೊಂದುವವು.

ನ ನಿರ್ಬದ್ಧಾ ಉಪಸರ್ಗಾ ಅರ್ಥಾನ್ನಿರಾಹುರಿತಿ ಶಾಕಟಾಯನಃ ।

ಇದುವರೆಗೂ ನಾಮ ಆಖ್ಯಾತ ಎಂಬ ಎರಡು ವಿಧ ಶಬ್ದಗಳ ವಿಷಯವನ್ನು ಹೇಳಿ ಈಗ ಉಪಸರ್ಗವೆಂಬ ಜಾತಿಯ ಶಬ್ದಸಮೂಹದ ವಿಷಯವನ್ನು ಹೇಳುವರು. **ಆಖ್ಯಾತಮುಪಸ್ಗೃಹ್ಯಾರ್ಥವಿಶೇಷಮಿಮೇ ತಸ್ಮೈವ ಸೃಜಂತೀತ್ಯುಪ-**

**ಸರ್ಗಾಃ**—ಆಖ್ಯಾತ ಎಂದರೆ ಕ್ರಿಯಾಪದದೊಡನೆ ಸೇರಿ ಆ ಕ್ರಿಯೆಯ ಅರ್ಥವಲ್ಲವೆ ಬೇರೊಂದರ್ಥವನ್ನು ಹೇಳುವುದರಿಂದ ಇವುಗಳಿಗೆ ಉಪಸರ್ಗಗಳೆಂಬ ಹೆಸರು ಬಂದಿರುವುದು. ಹೇಗೆಂದರೆ ದಿಶತಿಧಾತುವಿಗೆ ಉತ್, ಸಂ, ನಿಃ ಇತ್ಯಾದಿ ಉಪಸರ್ಗಗಳ ಸಂಯೋಗದಿಂದ ನಾನಾರ್ಥಗಳನ್ನು ಸೂಚಿಸುವ,ಉದ್ದೇಶ, ಸಂದೇಶ, ನಿರ್ದೇಶ ಇತ್ಯಾದಿ ಪದಗಳಾಗುವವು ಆದರೆ ಈ ಉಪಸರ್ಗ ಗಳನ್ನು ಪ್ರತ್ಯೇಕವಾಗಿ ತೆಗೆದುಕೊಂಡರೆ ಎಂದರೆ ಇತರ ನಾಮಾಖ್ಯಾತಪದಗಳ ಸಂಬಂಧವಿಲ್ಲದಿದ್ದರೆ ಇವುಗಳಿಗೆ ಏನೂ ಅರ್ಥ ವಿರುವುದಿಲ್ಲ. ಒಂದು ಶಬ್ದದಲ್ಲಿರುವ—ಭವತಿ ಎಂಬ ಶಬ್ದದಲ್ಲಿರುವ—ಭ ಎಂಬ ಒಂದು ಅಕ್ಷರ ಮಾತ್ರ ತೆಗೆದುಕೊಂಡರೆ ಆ ಅಕ್ಷರಕ್ಕೆ ಹೇಗೆ ಅರ್ಥವಿರುವುದಿಲ್ಲವೋ ಅದರಂತೆ ನಾಮಾಖ್ಯಾತ ಪದಗಳ ಸಂಬಂಧವಿಲ್ಲದ ಉಪಸರ್ಗಗಳಿಗೆ ಯಾವ ಸ್ವತಂತ್ರಾರ್ಥವೂ ಇರುವುದಿಲ್ಲ, ಈ ವಿಧವಾದ ಅಭಿಪ್ರಾಯವನ್ನು ಶಾಕಟಾಯನರೆಂಬ ಆಚಾರ್ಯರು ವ್ಯಕ್ತಪಡಿಸಿರುವರು.

ನಾಮಾಖ್ಯಾತಯೋಸ್ತು ಕರ್ಮೋಪಸಂಯೋಗದ್ಯೋತಕಾ ಭವಂತಿ ।

ನಾಮ ಮತ್ತು ಆಖ್ಯಾತಪದಗಳಿಂದ ವ್ಯಕ್ತವಾಗುವ ಕರ್ಮಕ್ಕೆ ಈ ಉಪಸರ್ಗಗಳು ಪ್ರಕರ್ಷವನ್ನು ಹೆಚ್ಚು ಪ್ರಾಶಸ್ತ್ಯವನ್ನುಂಟುಮಾಡುತ್ತವೆ. ಎಂದರೆ ಆ ಕರ್ಮವನ್ನು ಚೆನ್ನಾಗಿ ವಿಶದಪಡಿಸುತ್ತವೆ. ಹೇಗೆಂದರೆ **ವಾದ** ಎಂಬ ಶಬ್ದಕ್ಕೆ **ಸಂ** ಎಂಬ ಉಪಸರ್ಗವನ್ನು ಸೇರಿಸಿದರೆ **ಸಂವಾದ** ವೆಂಬ ಶಬ್ದವಾಗುವುದು. ಈ ಸಂವಾದವೆಂಬ ಶಬ್ದವು ವಾದ ಎಂಬ ಶಬ್ದದ ಅರ್ಥವನ್ನು ಹೆಚ್ಚಾಗಿ ವಿವರಿಸುವುದು ಎಂದರ್ಥವು. ಕತ್ತಲೆಯಲ್ಲಿ ಇರುವ ವಸ್ತುಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ. ದೀಪ ಹಚ್ಚಿದರೆ ಚೆನ್ನಾಗಿ ಕಾಣಿಸುವವು. ಆದರೆ ವಸ್ತುಗಳು ಇದ್ದಂತೆಯೇ ಇದ್ದರೂ ದೀಪ ಪ್ರಕಾಶದಿಂದ ಹೆಚ್ಚು ಸ್ಪಷ್ಟ ವಾಗಿ ಕಾಣಿಸುವವು. ದೀಪ ಪ್ರಕಾಶದಿಂದ ವಸ್ತುಗಳಲ್ಲಿ ಹೊಸ ಗುಣಗಳಾವವೂ ಬರುವುದಿಲ್ಲ. ಮುಂಚೆ ಇದ್ದುದನ್ನೇ ಸ್ಪಷ್ಟವಾಗಿ ತಿಳಿಸಲು ದೀಪವು ಸಹಾಯಕವಾಗುವುದು, ಅದರಂತೆ ನಾಮ ಮತ್ತು ಆಖ್ಯಾತಪದಗಳು ವಿವರಿಸುವ ಕರ್ಮಕ್ಕೆ ಒಂದು ಅರ್ಥವಿದ್ದರೂ ಉಪಸರ್ಗ ಸಂಯೋಗದಿಂದ ಆ ಅರ್ಥವು ಹೆಚ್ಚು ಸ್ಪಷ್ಟವಾಗಿ ತಿಳಿದುಬರುವುದು. ಇದೂ ಸಹ ಶಾಕಟಾಯನರ ಮತವು.

ಉಚ್ಚಾವಚಾಃ ಪದಾರ್ಥಾ ಭವಂತೀತಿ ಗಾರ್ಗ್ಯಃ ॥

ಉಪಸರ್ಗಗಳಿಗೆ ಬಹು ಪ್ರಕಾರವಾದ ಅರ್ಥಗಳಿವೆ. ನಾಮಾಖ್ಯಾತಗಳಿಂದ ಪ್ರತ್ಯೇಕವಾಗಿದ್ದಾಗಲೂ ಉಪಸರ್ಗಗಳಿಗೆ ಅರ್ಥವುಂಟು ವರ್ಣ (ಅಕ್ಷರ) ಗಳಂತೆ ಉಪಸರ್ಗಗಳಿಗೂ ಅರ್ಥಾಭಿಧಾನಶಕ್ತಿಯಿಲ್ಲವೆಂಬುದು ಸರಿಯಲ್ಲ. ವರ್ಣಗಳಲ್ಲಿಯೂ ಸಾಮಾನ್ಯವಾದ ಅಭಿಧಾನಶಕ್ತಿ ಇದ್ದೇ ಇದೆ. ಮಣ್ಣಿನ ಭಾಗಗಳಲ್ಲಿ ಘಟಾರಂಭಕಶಕ್ತಿಯಿರುವಂತೆ ವರ್ಣಗಳಿಗೆ ಅರ್ಥವೇ ಇಲ್ಲವೆನ್ನುವುದಾದರೆ ವರ್ಣಗಳಿಂದ ಉಂಟಾಗುವ ಪದಗಳೂ ಅರ್ಥರಹಿತಗಳಾಗಬೇಕು. ಅರ್ಥರಹಿತಪದಗಳಿಂದ ಕೂಡಿರುವ ವಾಕ್ಯಗಳೂ ಅನರ್ಥಗಳೆಂದು ಹೇಳಬೇಕಾಗುವುದು. ಹೀಗೆ ಶಾಸ್ತ್ರವೇ ನಿರರ್ಥಕವಾಗಬೇಕಾದೀತು. ಇದಕ್ಕೆ ಮತ್ತೊಂದು ಉದಾಹರಣೆಯನ್ನು ಕೊಡಬಹುದು ದಾರದಲ್ಲಿ ಶುಕ್ಲ (ಬಿಳಿಯ) ವರ್ಣವಿಲ್ಲದಿದ್ದರೆ ಆ ದಾರದಿಂದ ನೇಯಿದ ಬಟ್ಟೆಯಲ್ಲಿ ಬಿಳಿಯ ಬಣ್ಣವು ಹೇಗೆ ಬಂದೀತು ? ದೀಪ ಪ್ರಕಾಶವು ಪದಾರ್ಥಗಳನ್ನು ಸ್ಪಷ್ಟಪಡಿಸುವಂತೆ ಉಪಸರ್ಗಗಳೂ ನಾಮಾಖ್ಯಾತ ಗಳಲ್ಲಿರುವ ಅರ್ಥವಿಶೇಷಗಳನ್ನು ವಿಶದಗೊಳಿಸುತ್ತವೆ. ದೀಪದಲ್ಲಿರುವ ಗುಣವಿಶೇಷಗಳು ಯಾವುವೂ ಪ್ರಕಟವಾಗುವುದಿಲ್ಲ ಎಂಬುದು ಸರಿಯಲ್ಲ. ಪದಾರ್ಥಗಳನ್ನು ಪ್ರಕಾಶಗೊಳಿಸುವ ಸಾಧನ ಸಂಪತ್ತಿಯು ದೀಪದಲ್ಲಿದೆ ಎಂಬ ಅಂಶವನ್ನು ಒಪ್ಪಲೇಬೇಕು. ಇದರಂತೆಯೇ ಉಪಸರ್ಗಗಳೂ ತಮ್ಮ ತಮ್ಮ ನಾನಾರ್ಥಗಳಲ್ಲಿ ಪ್ರಕೃತ ಯಾವುದು ನಾಮಾಖ್ಯಾತಗಳಿಗೆ ಉಪಯೋಗವಾಗುತ್ತದೆಯೋ ಅದನ್ನು ಆ ನಾಮಾಖ್ಯಾತಗಳಲ್ಲಿ ಜೋಡಿಸಿ ಅಭಿವ್ಯಕ್ತಪಡಿಸುತ್ತದೆ ಮತ್ತು ನಾಮಾಖ್ಯಾತ

ಗಳಲ್ಲಿಯೇ ಇರುವ ಅರ್ಥವನ್ನೇ ಹೊರಗೆಡವುತ್ತವೆಯೇ ಹೊರತು ಹೊಸದಾದ ಅರ್ಥವನ್ನೇನೂ ಪ್ರಕಟಿಸುವುದಿಲ್ಲ ಎನ್ನುವುದಾದರೆ ಅದು ಲೋಕವ್ಯವಹಾರಕ್ಕೆ ವಿರುದ್ಧವಾದುದು. ಉದಾ – ಹೃ ಎಂಬ ಧಾತುವಿನಿಂದ ನಿಷ್ಪನ್ನವಾದ ನಾಮಪದಕ್ಕೆ ಉಪಸರ್ಗಗಳನ್ನು ಸೇರಿಸಿದರೆ ಆಹಾರ, ವಿಹಾರ, ಸಂಹಾರ, ಪರಿಹಾರ ಎಂಬ ಪದಗಳಾಗುವವು. ಇವುಗಳ ಅರ್ಥವು ಒಂದೇ ವಿಧವಾಗಿರದೆ ನಾನಾ ವಿಧಗಳಾಗಿರುವವು. ಸ್ವತಃ ಸಾಮರ್ಥ್ಯವಿರುವವರು ಯಾರೂ ಪರರ ಸಹಾಯಾಪೇಕ್ಷೆ ಮಾಡುವುದಿಲ್ಲ. ಆದುದರಿಂದ ನಾಮಾಖ್ಯಾತಗಳಿಗೆ ಸಂಬಂದವಿಲ್ಲದಿರುವಾಗಲೂ ಅರ್ಥಗಳಿವೆ ಎಂಬುದನ್ನು ಅಂಗೀಕರಿಸಲೇ ಬೇಕು. ಇದು ಗಾರ್ಗ್ಯ ಎಂಬುವರ ಮತವು.

ತದ್ಯ ಏಷು ಪದಾರ್ಥಃ ಪ್ರಾಹುರಿಮೇ ತಂ ನಾಮಾಖ್ಯಾತಯೋ–
ರ್ಥವಿಕರಣಂ ॥

ಉಪಸರ್ಗಗಳ ಸಂಬಂಧವಿರುವ ನಾಮಾಖ್ಯಾತಪದಗಳಲ್ಲಿ ಉಂಟಾಗುವ ಅರ್ಥವ್ಯತ್ಯಾಸಗಳು ಏನೇನು ಇರುವವೋ ಅವೆಲ್ಲವೂ ಪ್ರತ್ಯೇಕವಾಗಿದ್ದಾಗಲೂ ಈ ಉಪಸರ್ಗಗಳಿಗೆ ಉಂಟು ಎಂಬುದಾಗಿ ಗಾರ್ಗ್ಯರು ಹೇಳುವರು. ಈಗ ಕೆಲವು ಉಪಸರ್ಗಗಳಿಗೆ ಅರ್ಥವಿವರಣೆಮಾಡುವರು —

ಆ ಇತ್ಯರ್ವಾಗರ್ಥೇ ॥

ಉಪಸರ್ಗಗಳಿಗೆ ನಾನಾರ್ಥಗಳಿದ್ದಾಗ್ಯೂ ಇಲ್ಲಿ ಉದಾಹರಣೆಗಾಗಿ ಒಂದೊಂದು ಅರ್ಥವನ್ನು ತಿಳಿಸಲಾಗಿದೆ. **ಆ** ಎಂಬುದು ಅರ್ವಾಕ್, ಸನ್ನಿಕೃಷ್ಟ ಸಮೀಪವೆಂಬ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. **ಆ ಪರ್ವತಾತ್** ಎಂಬಲ್ಲಿ ಪರ್ವತದಿಂದ ಇಲ್ಲಿಗೆ, ಸಮೀಪಕ್ಕೆ ಎಂಬ ಅರ್ಥವು ಸೂಚಿತವಾಗುವುದು.

ಪ್ರಪರೇತ್ಯೇತಸ್ಯ ಪ್ರಾತಿಲೋಮ್ಯಂ ॥

**ಪ್ರ** ಮತ್ತು **ಪರಾ** ಎಂಬ ಉಪಸರ್ಗಗಳು ಮೇಲೆ ಹೇಳಿದ ಆ ಎಂಬ ಉಪಸರ್ಗಕ್ಕೆ ವಿರುದ್ಧಾರ್ಥವನ್ನು ಎಂದರೆ ದೂರ ಎಂಬರ್ಥವನ್ನು ಸೂಚಿಸುವವು. ಹೇಗೆಂದರೆ **ಪ್ರಗತಃ, ಪರಾಗತಃ** – ಮುಂದಕ್ಕೆ ಅಥವಾ ದೂರಕ್ಕೆ ಹೊರಟು ಹೋಗುವನು.

ಅಭೀತ್ಯಾಭಿಮುಖ್ಯಂ

**ಅಭಿ** ಎಂದರೆ ಎದುರಾಗಿ, ಆ ಕಡೆಗೆ, ಆ ದಿಕ್ಕಿನಲ್ಲಿ ಎಂದಾಗುತ್ತದೆ. **ಅಭಿತ್ವಾದೇವ ಸವಿತಃ** ಎಂಬಲ್ಲಿ ಎಲೈ ಸೂರ್ಯದೇವನೇ ನಾನು ನಿನ್ನ ಎದುರಿಗೆ ನಿಂತು (ಪ್ರಾರ್ಥಿಸುತ್ತೇನೆ) ಎಂದರ್ಥವು.

ಪ್ರತೀತೇತಸ್ಯ ಪ್ರಾತಿಲೋಮ್ಯಂ ॥

**ಪ್ರತಿ** ಎಂಬ ಉಪಸರ್ಗವು **ಅಭಿ** ಎಂಬ ಉಪಸರ್ಗಕ್ಕೆ ವಿರುದ್ಧಾರ್ಥವನ್ನು ಎಂದರೆ ಬೇರೆಕಡೆಗೆ ಎಂಬ ಅರ್ಥವನ್ನು ಸೂಚಿಸುವುದು. ಉದಾ – ಪ್ರತಿಗತಃ ಹಿಂತಿರುಗಿದನು. ಹೊರಟುಹೋದನು.

ಅತಿ ಸು ಇತ್ಯಭಿಪೂಜಿತಾರ್ಥೇ ॥

ಅತಿ ಮತ್ತು ಸು ಎಂಬ ಎರಡು ಉಪಸರ್ಗಗಳೂ, ಶ್ರೇಷ್ಠವಾದ, ಉತ್ತಮವಾದ ಎಂದು ಪೂಜಿತಾರ್ಥ (ಗೌರವಾರ್ಥ)ವನ್ನೂ ಸೂಚಿಸುತ್ತವೆ. **ಅತಿಬ್ರಾಹ್ಮಣ** ಶ್ರೇಷ್ಠನಾದ ಬ್ರಾಹ್ಮಣನು : ಸುರಾಜಾ-ರಾಜರಲ್ಲಿ ಅಗ್ರಗಣ್ಯನು ಶ್ರೇಷ್ಠನು; **ಅತಿ ತ್ರೀ ಸೋಮ ರೋಚನಾ ರೋಹನ್ನ ಭ್ರಾಜಸೇ ದಿವಂ** (ಋ. ಸಂ. ೯-೧೭-೫) ಎಲೈ ಸೋಮರಾಜನೇ ನೀನು ನಿನ್ನ ಶ್ರೇಷ್ಠವಾದ ಪ್ರಕಾಶದಿಂದ ಸ್ವರ್ಗಲೋಕವನ್ನೆಲ್ಲಾ ವಿಶೇಷವಾಗಿ ಬೆಳಗುತ್ತೀಯೆ. **ಸುದೇವೋ ಅಸಿ ವರುಣ** (ಋ. ಸಂ. ೮-೬೯-೧೨) ಎಲೈ ವರುಣ ದೇವನೇ ನೀನು ದೇವತೆಗಳಲ್ಲಿ ಅತಿ ಶ್ರೇಷ್ಠನಾಗಿರುವೆ, ಗಣ್ಯನಾಗಿರುವೆ. ಇತ್ಯಾದಿ.

ನಿರ್ದುರಿತ್ಯೇತಯೋಃ ಪ್ರಾತಿಲೋಮ್ಯಂ ॥

**ನಿಃ** ಮತ್ತು **ದುಃ** ಎಂಬ ಎರಡು ಉಪಸರ್ಗಗಳೂ ಮೇಲೆ ಹೇಳಿದ **ಅತಿ ಸು** ಎಂಬ ಉಪಸರ್ಗಗಳಿಗೆ ವಿರುದ್ಧಾರ್ಥವನ್ನು ಸೂಚಿಸುವವು. ಕುತ್ಸಿತ, ನೀಚ ಎಂದರ್ಥವು. ಉದಾ—**ನಿರಾಕೃತಃ, ನಿರ್ಧನಃ, ದುರ್ಬ್ರಾಹ್ಮಣಃ** ಇತ್ಯಾದಿ.

ನ್ಯವೇತಿ ವಿನಿಗ್ರಹಾರ್ಥೀಯೌ ॥

**ನಿ** ಮತ್ತು **ಅವ** ಎಂಬ ಉಪಸರ್ಗಗಳು ನಿಕೃಷ್ಟ, ನಿಯಮಕ್ಕೆ ಒಳಪಡಿಸು ಎಂಬರ್ಥದಲ್ಲಿ ಉಪಯೋಗಿಸಲ್ಪಡುತ್ತವೆ. ಉದಾ— **ನಿಗೃಹೀತಃ** —ಹಿಡಿಯಲ್ಪಟ್ಟ, ಬಂಧಿಸಲ್ಪಟ್ಟ; **ಅವರುದ್ಧಃ** —ಅಡ್ಡಿಪಡಿಸಲ್ಪಟ್ಟ ಇತ್ಯಾದಿ.

ಉದಿತ್ಯೇತಯೋಃ ಪ್ರಾತಿಲೋಮ್ಯಂ ॥

**ಉತ್** ಎಂಬ ಉಪಸರ್ಗವು ಮೇಲೆ ಹೇಳಿದ **ನಿ** ಮತ್ತು **ಅವ** ಎಂಬ ಉಪಸರ್ಗಗಳಿಗೆ ವಿರುದ್ಧಾರ್ಥವನ್ನು ಸೂಚಿಸುವುದು. ಉತ್ಕೃಷ್ಟ, ಮೇಲೆ ಇರುವಿಕೆ ಎಂದರ್ಥವು. ಉದಾ—ಉಚ್ಛ್ರಯಸ್ವ ವನಸ್ಪತೇ (ಋ. ಸಂ. ೩-೮-೩) ಎಲೈ ಯೂಪಸ್ತಂಭವೇ ಮೇಲೆ ಎದ್ದು ನಿಲ್ಲು ಇತ್ಯಾದಿ.

ಸಮಿತ್ಯೇಕೀ ಭಾವಂ ॥

**ಸಂ** ಎಂಬ ಉಪಸರ್ಗವು ಒಟ್ಟಾಗಿ ಸೇರಿಸುವುದು, ಏಕೀಭಾವ ಎಂಬ ಅರ್ಥವನ್ನು ಸೂಚಿಸುವುದು. ಉದಾ—**ಸಂಗಚ್ಛಧ್ವಂ ಸಂವದಧ್ವಂ** (ಋ. ಸಂ. ೧೦-೧೯೧-೨) ನಾವಿಬ್ಬರೂ ಒಟ್ಟಿಗೆ (ಜತೆಯಾಗಿ) ಹೋಗೋಣ, ಇಬ್ಬರೂ ಒಂದಾಗಿ, ಒಟ್ಟಾಗಿ ಹೇಳೋಣ ಇತ್ಯಾದಿ

ವ್ಯಪೇತ್ಯೇತಸ್ಯ ಪ್ರಾತಿಲೋಮ್ಯಂ ॥

**ವಿ** ಮತ್ತು **ಅಪ** ಎಂಬ ಉಪಸರ್ಗಗಳು **ಸಂ** ಎಂಬ ಉಪಸರ್ಗದ ವಿರುದ್ಧಾರ್ಥವನ್ನು ಹೇಳುವವು. ಪ್ರತ್ಯೇಕವಾಗಿ, ಬೇರೆ ಬೇರೆ ಎಂದರ್ಥವು—ಉದಾ—**ಹತ್ವಾಯ ಶತ್ರೂನ್ ವಿ ಭಜಸ್ವ ವೇದ ಓಜೋ ಮಿಮಾನೋ ವಿ ಮೃಧೋ ನುದಸ್ವ** (ಋ. ಸಂ. ೧೦-೮೪-೨); **ಅರಾಚ್ಛತ್ರುಮಪ ಬಾಧಸ್ವ ದೂರಂ** (ಋ. ಸಂ. ೧೦-೪೨-೭) ಇತ್ಯಾದಿ.

ಅನ್ವಿತಿ ಸಾದೃಶ್ಯಾಪರಭಾವಂ ||

**ಅನು** ಎಂಬ ಉಪಸರ್ಗಕ್ಕೆ ಸಾದೃಶ್ಯ, ಹೋಲಿಕೆ ಹಿಂಬಾಲಿಸುವುದು ಇತ್ಯಾದ್ಯರ್ಥವಿರುವುದು **ಅನುರೂಪಸ್ಯೇದಂ**— ಇದು ಇವನನ್ನೇ ಹೋಲುತ್ತದೆ; **ಅನುಗಚ್ಛತಿ** ಹಿಂಬಾಲಿಸಿ ಹೋಗುತ್ತಾನೆ. ಇತ್ಯಾದ್ಯುದಾಹರಣೆಗಳು.

ಅಪೀತಿ ಸಂಸರ್ಗಂ ||

**ಅಪಿ** ಎಂಬ ಉಪಸರ್ಗವು ಒಂದೇ ವಿಧವಾದ ಎರಡು ಶಬ್ದಗಳನ್ನು ಸೇರಿಸುತ್ತದೆ. ಮತ್ತು ಎಂಬ ಅರ್ಥವಿರುವುದು.

ಉಪೇತ್ಯುಪಜನಂ ||

**ಉಪ** ಎಂಬ ಉಪಸರ್ಗವು ಸಮೀಪ, ಆಶ್ರಯ ಇತ್ಯಾದ್ಯರ್ಥಗಳನ್ನು ಸೂಚಿಸುವುದು. **ಉಪ ನಃ ಸವನಾಗಹಿ** (ಋ. ಸಂ. ೧-೪-೨) ಎಲೈ ಇಂದ್ರನೇ, ನಾವು ಸಿದ್ಧಪಡಿಸಿರುವ ಸೋಮರಸದ ಸಮೀಪಕ್ಕೆ ಬಾ; ಉಪ ತ್ವಾಗ್ನೇ (ಋ. ಸಂ. ೧-೧-೭) ಎಲೈ ಅಗ್ನಿಯೇ ನಾವು ನಿನ್ನ ಸಮೀಪಕ್ಕೆ ಇತ್ಯಾದಿ.

ಪರೀತಿ ಸರ್ವತೋಭಾವಂ ||

**ಪರಿ** ಎಂಬ ಉಪಸರ್ಗವು ಸುತ್ತಲೂ, ಎಲ್ಲಾ ಕಡೆಯೂ ಎಂಬರ್ಥವನ್ನು ಸೂಚಿಸುವುದು. **ಪರಿ ಪ್ರ ಸೋಮ ತೇ ರಸಃ** (ಋ. ಸಂ. ೯-೬೭-೧೫); **ಪರಿ ತ್ವಾಗ್ನೇ ಪುರಂ ವಯಂ** (ಋ. ಸಂ. ೧೦-೮೭-೨೨) ಇತ್ಯಾದಿ.

ಅಧೀತ್ಯುಪರಿಭಾವಮೈಶ್ವರ್ಯಂ ವಾ ||

**ಅಧಿ** ಎಂಬ ಉಪಸರ್ಗವು, ಮೇಲೆ, ಅಧಿಕವಾಗಿ, ಅಥವಾ ಐಶ್ವರ್ಯ, ಹೆಚ್ಚುಗಾರಿಕೆ ಎಂಬ ಅರ್ಥಗಳನ್ನು ಸೂಚಿಸುವುದು **ಅಧಿಪತಿ**—ಎಲ್ಲರಿಗೂ ಯಜಮಾನನು; ಅಧಿತಿಷ್ಠತಿ ಎಲ್ಲರಿಗಿಂತಲೂ ಗಣ್ಯನಾಗಿರುತ್ತಾನೆ.

ಏವಮುಚ್ಚಾವಚಾನರ್ಥಾನ್ ಪ್ರಾಹುಸ್ತ ಉಪೇಕ್ಷಿತವ್ಯಾಃ ||

ಮೇಲೆ ವಿವರಿಸಿ ಹೇಳಿರುವ ಉಪಸರ್ಗಗಳು ನಾನಾ ವಿಧವಾದ ಅರ್ಥಗಳನ್ನು ಹೇಳುವವು. ಅವುಗಳನ್ನು ಅವಶ್ಯಕವಾಗಿ ಗಮನಿಸಬೇಕು.

**ಇತಿ ಪ್ರಥಮಾಧ್ಯಾಯೇ ತೃತೀಯಃ ಖಂಡಃ**

ಇಲ್ಲಿಗೆ ಪ್ರಥಮಾಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು

———

## ಅಥ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

### ನಾಲ್ಕನೆಯ ಖಂಡವು

ಅಥ ನಿಪಾತಾ ಉಚ್ಚಾವಚೇಷ್ವರ್ಥೇಷು ನಿಪತನ್ತ್ಯಪ್ಯುಪಮಾ-
ರ್ಥೇಽಪಿ ಕರ್ಮೋಪಸಂಗ್ರಹಾರ್ಥೇಽಪಿ ಪದಪೂರಣಾಸ್ತೇಷಾ-
ಮೇತೇ ಚತ್ವಾರ ಉಪಮಾರ್ಥೇ ಭವನ್ತೀವೇತಿ ಭಾಷಾಯಾಂ
ಚಾನ್ವಧ್ಯಾಯಚ್ಚಾಗ್ನಿರಿವೇಂದ್ರ ಇವೇತಿ ನೇತಿ ಪ್ರತಿಷೇಧಾ-
ರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ ನೇಂದ್ರಂ
ದೇವಮಮಂಸತೇತಿ ಪ್ರತಿಷೇಧಾರ್ಥೀಯಃ ಪುರಸ್ತಾದುಪ-
ಚಾರಸ್ತಸ್ಯ ಯತ್ಪ್ರತಿಷೇಧತಿ ದುರ್ಮದಾಸೋ ನ ಸುರಾಯಾ-
ಮಿತ್ಯುಪಮಾರ್ಥೀಯ ಉಪರಿಷ್ಟಾದುಪಾಚಾರಸ್ತಸ್ಯ ಯೋ-
ನೋಪಮಿಮೀತೇ ॥ ಚಿದಿತ್ಯೇಷೋಽನೇಕಕರ್ಮಾಚಾರ್ಯಶ್ಚಿದಿದಂ
ಬ್ರೂಯಾದಿತಿ ಪೂಜಾಯಾಮಾಚಾರ್ಯಃ ಕಸ್ಮಾದಾಚಾರ್ಯ
ಆಚಾರಂ ಗ್ರಾಹಯತ್ಯಾಚಿನೋತ್ಯರ್ಥಾನಾಚಿನೋತಿ ಬುದ್ಧಿಮಿತಿ
ವಾ ದಧಿಚಿದಿತ್ಯುಪಮಾರ್ಥೇ ಕುಲ್ಮಾಷಾಂಶ್ಚಿದಾಹರೇತ್ಯವ-
ಕುತ್ಸಿತೇ ಕುಲ್ಮಾಷಾಃ ಕುಲೇಷು ಸೀದನ್ತಿ ನು ಇತ್ಯೇಷೋಽನೇಕ-
ಕರ್ಮೇದಂ ನು ಕರಿಷ್ಯತೀತಿ ಹೇತ್ವಪದೇಶೇ ಕಥಂ ನು ಕರಿಷ್ಯತೀ-
ತ್ಯನುಪೃಷ್ಟೇ ನನ್ವೇತದಕಾರ್ಷೀದಿತಿ ಚಾಥಾಪ್ಯುಪಮಾರ್ಥೇ
ಭವತಿ ॥ ವೃಕ್ಷಸ್ಯ ನು ತೇ ಪುರುಹೂತ ವಯಾಃ । ವೃಕ್ಷಸ್ಯೇವ
ತೇ ಪುರುಹೂತ ಶಾಖಾ ವಯಾಃ ಶಾಖಾ ವೇತೇರ್ವಾತಾಯನಾ
ಭವನ್ತಿ ಶಾಖಾಃ ಖಶಯಾಃ ಶಕ್ನೋತೇರ್ವಾಥ ಯಸ್ಯಾ-
ಗಮಾದರ್ಥ ಪೃಥಕ್ತ್ವಮಹ ವಿಜ್ಞಾಯತೇ ನ ತ್ವೌದ್ದೇಶಿಕಮಿವ
ವಿಗ್ರಹೇಣ ಪೃಥಕ್ತ್ವಾತ್ಸ ಕರ್ಮೋಪಸಂಗ್ರಹಶ್ಚೇತಿ ಸಮುಚ್ಚ-
ಯಾರ್ಥ ಉಭಾಭ್ಯಾಂ ಸಂಪ್ರಯುಜ್ಯತೇಽಹಂ ಚ ತ್ವಂ ಚ
ವೃತ್ರಹನ್ನಿತ್ಯೇತಸ್ಮಿನ್ನೇವಾರ್ಥೇ ದೇವೇಭ್ಯಶ್ಚ ಪಿತೃಭ್ಯ ಏತ್ಯಾ-
ಕಾರೋ ವೇತಿ ವಿಚಾರಣಾರ್ಥೇ ಹನ್ತಾಹಂ ಪೃಥಿವೀಮಿಮಾಂ
ನಿದಧಾನೀಹ ವೇಹವೇತ್ಯಥಾಪಿ ಸಮುಚ್ಚಯಾರ್ಥೇ ಭವತಿ॥೪॥

———

ನಾಮಪದಗಳು, ಆಖ್ಯಾತಗಳು ಮತ್ತು ಉಪಸರ್ಗಗಳ ಲಕ್ಷಣಗಳನ್ನು ಹೇಳಿ, ಕ್ರಮಪ್ರಾಪ್ತವಾದ ನಿಪಾತಗಳು ಈಗ ವಿವರಿಸಲ್ಪಡುತ್ತವೆ.

ಅಥ ನಿಪಾತಾ ಉಚ್ಚಾವಚೇಷ್ವರ್ಥೇಷು ನಿಪತನ್ತ್ಯಪ್ಯುಪಮಾರ್ಥೇऽಪಿ
ಕರ್ಮೋಪ ಸಂಗ್ರಹಾರ್ಥೇऽಪಿ ಪದಪೂರಣಾಃ ।

ವಾಕ್ಯಗಳಲ್ಲಿ ನಾನಾವಿಧವಾದ ಅರ್ಥಗಳನ್ನು ಹೇಳುವುದಕ್ಕೆ ಉಪಯುಕ್ತವಾಗುವುದರಿಂದ, ಇವುಗಳಿಗೆ **ನಿಪಾತಗಳೆನ್ನುತ್ತಾರೆ. ನಿಪತನ್ತಿ ಇತಿ (ನಿಪಾತಾಃ),** ಇವುಗಳನ್ನು ಸಾಮಾನ್ಯವಾಗಿ ಮೂರು ಸಂದರ್ಭಗಳಲ್ಲಿ ಉಪಯೋಗಿಸುತ್ತಾರೆ. (೧) **ಉಪಮಾರ್ಥೇ** — ಉಪಮಾನ, ಹೋಲಿಕೆಯನ್ನು ಸೂಚಿಸಬೇಕಾದಾಗ (೨) **ಕರ್ಮೋಪ-ಸಂಗ್ರಹಾರ್ಥೇ** — ಅರ್ಥಸಮುಚ್ಚಯವನ್ನು ಹೇಳುವಾಗ (ಈ ಗ್ರಂಥದಲ್ಲಿ, ಸಾಧಾರಣವಾಗಿ, ಕರ್ಮ ಎಂಬುದನ್ನು ಅರ್ಥ ಪದಕ್ಕೆ ಪರ್ಯಾಯವಾಗಿ ಉಪಯೋಗಿಸುತ್ತಾರೆ. ಗತಿಕರ್ಮಾಣ ಉತ್ತರೇ ಧಾತವಃ ೩-೨-೩ ಗತ್ಯರ್ಥಾಃ ಗತಿಗಮನವೆಂಬ ಅರ್ಥಕೊಡುವವು ಮುಂದೆ ಬರುವ ಧಾತುಗಳು) ೩. **ಪದಪೂರಣಾಃ** ವಾಕ್ಯಪೂರಕಗಳಾಗಿ—ಹೀಗೆ, ಉಪಮಾನ, ಸಮುಚ್ಚಯ ಮತ್ತು ಪದಪೂರಣ, ಈ ಮೂರು ನಿಪಾತಗಳ ಪ್ರಯೋಜನಗಳು.

ಮೂರು ಪ್ರಯೋಜನಗಳೆಂದು ಹೇಳಿದರೆ, ಎಲ್ಲಾ ನಿಪಾತಗಳಿಗೂ ಈ ಮೂರು ಪ್ರಯೋಜನಗಳು ಉಂಟೇ? ಎಂದರೆ, ಇಲ್ಲ.

ತೇಷಾಮೇತೇ ಚತ್ವಾರ ಉಪಮಾರ್ಥೇ ಭವನ್ತಿ ।

ಅವುಗಳಲ್ಲಿ ಏತೇ ಚತ್ವಾರಃ—ಈ ಮುಂದೆ ಹೇಳುವ ನಾಲ್ಕು ನಿಪಾತಗಳು ಉಪಮಾರ್ಥೇ ಭವನ್ತಿ—ಉಪಮಾನಾರ್ಥದಲ್ಲಿ ಉಪಯೋಗವಾಗುತ್ತವೆ. **ಇವ, ನ, ಚಿತ್** ಮತ್ತು **ನು,** ಇವುಗಳೇ ಆ ನಾಲ್ಕು,

ಇವೇತಿ ಭಾಷಾಯಾಂ ಚ ॥

**ಇವ** ಎಂಬುದು ಲೌಕಿಕ ಭಾಷೆಯಲ್ಲಿಯೂ ಉಪಮಾರ್ಥದಲ್ಲಿ ಉಪಯೋಗಿಸಲ್ಪಡುತ್ತದೆ.

ಅನ್ವಧ್ಯಾಯಂ ಚ ಅಗ್ನಿರಿವೇಂದ್ರ ಇವೇತಿ ।

ವೇದಾದಿಗಳಲ್ಲಿಯೂ **ಇವ** ಎಂಬುದು ಉಪಮಾರ್ಥದಲ್ಲಿರುವುದು ಕಂಡುಬರುತ್ತದೆ. ಉದಾಹರಣೆಗಳು ಅನೇಕವಾಗಿವೆ. ಅಗ್ನಿರಿವ, ಇಂದ್ರ ಇವ ಅಗ್ನಿಯಂತೆ, ಇಂದ್ರನಂತೆ, ಈ ಉದಾಹರಣೆಗಳು ಲೌಕಿಕ ವೈದಿಕ ಭಾಷೆಗಳೆರಡಕ್ಕೂ ಸಾಧಾರಣ.

ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ ॥

**ನ** ಇದು ಲೌಕಿಕ ಭಾಷೆಯಲ್ಲಿ ಪ್ರತಿಷೇಧವೆಂಬ ಒಂದೇ ಅರ್ಥವನ್ನು ಕೊಡುತ್ತದೆ. ಈ ವಿಧದ ಉಪಯೋಗವು ಸಾಧಾರಣವಾಗಿದೆ.

ಉಭಯಮನ್ವಧ್ಯಾಯಂ ॥

ವೈದಿಕ ಪ್ರಯೋಗವು ಎರಡೂ ಅರ್ಥದಲ್ಲಿರುತ್ತದೆ ಅಂದರೆ, ಉಪಮಾ ಮತ್ತು ಪ್ರತಿಷೇಧಾರ್ಥಗಳಲ್ಲಿ.

ನೇಂದ್ರಂ ದೇವ ಮಮಂಸತೇತಿ ಪ್ರತಿಷೇಧಾರ್ಥೀಯಃ ಪುರಸ್ತಾದು-
ಪಚಾರಸ್ತಸ್ಯ ಯತ್ಪ್ರತಿಷೇಧತಿ ।

ವಿಹಿ **ಸೋತೋರಸೃಕ್ಷತ ನೇಂದ್ರಂ ದೇವ ಮಮಂಸತ**—(ಋ. ಸಂ. ೧೦-೮೬-೧) ಆದಿತ್ಯ ರಶ್ಮಿಗಳು ಇಂದ್ರನನ್ನ ತಮಗೆ ಪ್ರಕಾಶ ದಾತೃವನ್ನಾಗಿ ಭಾವಿಸಲಿಲ್ಲ. ಇಲ್ಲಿ **ನ** ಪ್ರತಿಷೇಧಾರ್ಥಕವು. ಪ್ರತಿಷೇಧಾರ್ಥಕವಾದ **ನ** ಕಾರವು ಯಾವುದನ್ನು ಪ್ರತಿಷೇಧಿಸುತ್ತದೆಯೋ, ಆ ಪದಕ್ಕೆ ಅವ್ಯವಹಿತ ಪೂರ್ವದಲ್ಲಿಯೇ ಅದರ ಸ್ಥಾನವು (ನ ಇಂದ್ರಂ).

ದುರ್ಮದಾಸೋ ನ ಸುರಾಯಾಮಿತ್ಯುಪಮಾರ್ಥೀಯ ಉಪರಿಷ್ಟಾ-
ದುಪಚಾರಸ್ತಸ್ಯ ಯೇನೋಪಮಿಮೀತೇ ।

**ಹೃತ್ಸು ಪೀತಾಸೋ ಯುಧ್ಯನ್ತೇ ದುರ್ಮಪಾಸೋ ನ ಸುರಾಯಾಂ। ಊಧರ್ನ ನಗ್ನಾ ಜರನ್ತೇ** (ಋ. ಸಂ. ೮-೨-೧೨)—ಪಾನ ಮಾಡಲ್ಪಟ್ಟ ಸೋಮರಸದ ಭಾಗಗಳು, ನಾನು ಹೆಚ್ಚು ತಾನು ಹೆಚ್ಚು, ಎಂದು ಸ್ಪರ್ಧಿಸುತ್ತಾ, ಸೋಮಯಾಗದ ಯಜಮಾನನನ್ನು ಸ್ತುತಿಸುತ್ತವೆ. ಹೇಗೆಂದರೆ, ಸುರಾಪಾನದ ಪರಿಣಾಮವಾಗಿ ಕುತ್ಸಿತವಾದ ಮದಮತ್ತರಾದ ಪುರುಷರು, ನಗ್ನರಾಗಿ, ಉಸಭೋಗಕಾಲವಾದುದರಿಂದ, ತಮ್ಮ ಕಾರ್ಯಕ್ಕೆ ಅನುಕೂಲವಾದ ರಾತ್ರಿಯನ್ನು ಸ್ತುತಿಸುವಂತೆ. ದುರ್ಮದಾಸಃ ನ—ಕುತ್ಸಿತ ಮದಮತ್ತರಾದ ಪುರುಷರಂತೆ, ಊಧಃ ನ—ರಾತ್ರಿಯನ್ನು (ಸ್ತುತಿಸು) ವಂತೆ. ಎರಡು ಸಂದರ್ಭಗಳಲ್ಲಿಯೂ, **ನ** ಎಂಬುದು ಉಪಮಾರ್ಥದಲ್ಲಿ ಇದೆ. ಪ್ರತಿಷೇಧಾರ್ಥದಲ್ಲಿ ಪ್ರತಿಷಿದ್ಧಾರ್ಥದ ಪೂರ್ವದಲ್ಲಿ **ನ** ಪದವನ್ನು ಉಪಯೋಗಿಸಿದರೆ, ಉಪಮಾರ್ಥದಲ್ಲಿ, ಅದೇ **ನ** ಕಾರವು ಉಪಮಿತಾರ್ಥದ ಅವ್ಯವಹಿತ ಉತ್ತರದಲ್ಲಿ ಸ್ಥಾನ ಪಡೆಯುತ್ತದೆ. ಹೀಗೆ ಸ್ಥಾನ ವ್ಯತ್ಯಾಸದಿಂದ ಅರ್ಥ ಭೇದವನ್ನೂಹಿಸಬಹುದು.

ಚಿದಿತ್ಯೇಷೋನೇಕಕರ್ಮಾ ।

**ಚಿತ್**—ಇದಕ್ಕೆ ನಾನಾರ್ಥಗಳಿದ್ದರೂ, ಉಪಮಾರ್ಥಕವಾದ ಇವ, ನ, **ಚಿತ್**, ನು, ಇವುಗಳ ಜೊತೆಯಲ್ಲಿ ಪಠಿತವಾಗಿರುವುದರಿಂದ, ಇಲ್ಲಿಯೇ ಅದರ ವಿವರಣೆ ಕೊಡಲಾಗಿದೆ.

ಆಚಾರ್ಯಶ್ಚಿದಿದಂ ಬ್ರೂಯಾದಿತಿ ಪೂಜಾಯಾಮಾಚಾರ್ಯಃ ಕಸ್ಮಾದಾ-
ಚಾರ್ಯ ಆಚಾರಂ ಗ್ರಾಹಯತ್ಯಾಚಿನೋತ್ಯರ್ಥಾನಾಚಿನೋತಿ
ಬುದ್ಧಿಮಿತಿ ವಾ ॥

**ಆಚಾರ್ಯಶ್ಚಿದಿದಂ ಬ್ರೂಯಾತ್** — ಆಚಾರ್ಯರಾದರೆ, ಇದನ್ನು ಹೇಳಿಯಾರು ಎಂದು ಹೇಳುವವನಿಗೆ ಆಚಾರ್ಯರ ಸಾಮರ್ಥ್ಯದ ವಿಷಯದಲ್ಲಿ ಗೌರವವಿದೆ. ಹೀಗೆ **ಚಿತ್** ಎಂಬುದನ್ನು ಗೌರವಸೂಚಕವಾಗಿ ಉಪಯೋಗಿಸ

ಬಹುದು. ಪ್ರಾಸಂಗಿಕವಾಗಿ **ಆಚಾರ್ಯ** ಪದದ ನಿಷ್ಪತ್ತಿಯು ಉಕ್ತವಾಗಿದೆ. **ಆಚಾರಂ ಗ್ರಾಹಯತಿ** — ಸಂಪ್ರದಾಯ ಸಿದ್ಧವಾದ ಆಚಾರ (ನಡೆವಳಿಕೆ) ವನ್ನು ಗ್ರಹಿಸುವಂತೆ ಮಾಡುವವನು ಆಚಾರ್ಯನು : **ಆಚಿನೋತಿ ಅರ್ಥಾನ್**— ಜ್ಞಾನಕ್ಕೆ ವಿಷಯವಾಗುವ ಅರ್ಥಗಳನ್ನು ಕ್ರಮವಾಗಿ, ಚೆನ್ನಾಗಿ ಜೋಡಿಸುವವನು ಆಚಾರ್ಯನು : **ಆಚಿನೋತಿ ಬುದ್ಧಿಂ**—ಬುದ್ಧಿಶಕ್ತಿಯನ್ನು ಕ್ರಮವಾಗಿ ಅಭಿವೃದ್ಧಿಗೊಳಿಸುವವನು ಆಚಾರ್ಯನು– ಹೀಗೆ ಮೂರು ರೀತಿಯಲ್ಲಿ ಆಚಾರ್ಯ ಪದವನ್ನು ನಿಷ್ಪತ್ತಿ ಮಾಡಬಹುದು.

ದಧಿಚಿದಿತ್ಯುಪಮಾರ್ಥೇ ।

ದಧಿಚಿತ್ ತಕ್ರಂ—ಮೊಸರಿನಂತೆ (ಮೊಸರಿಗೆ ಸದೃಶವು) ಇರುವ ಮಜ್ಜಿಗೆಯನ್ನು–ಇಲ್ಲಿ **ಚಿತ್** ಉಪಮಾರ್ಥಕವು.

ಕುಲ್ಮಾಷಾಂಶ್ಚಿದಾಹರೇತ್ಯವಕುತ್ಸಿತೇ ಕುಲ್ಮಾಷಾಃ ಕುಲೇಷು ಸೀದನ್ತಿ ।

ಕುಲ್ಮಾಷಾಃ—ಕುಲ್ಮಾಷವೆಂಬಿವು **ಕುಲೇಷು ಸೀದನ್ತಿ**–ಮನೆಗಳಲ್ಲಿ ವ್ಯರ್ಥವಾಗುತ್ತವೆ. ಸಾಧಾರಣವಾಗಿ ಹಳಸಿದ ಪದಾರ್ಥಗಳನ್ನು ಹೊರಗೆ ಚೆಲ್ಲುತ್ತಾರೆ, ಅವುಗಳಿಗೆ ಕುಲ್ಮಾಷಗಳೆನ್ನಬಹುದು. ಚೆನ್ನಾಗಿ ಹಸಿದು ಬಂದಿರುವವನೊಬ್ಬನಿಗೆ ಬಿಸಿ ಅಡಿಗೆಯಾಗುವವರೆಗೆ ತಡೆಯಲಾಗುವುದಿಲ್ಲ. ಅಂತಹವನು, ಹಸಿವನ್ನು ತಡೆಯಲಾರೆ, ಹಳಸಿದ್ದಾದರೂ ಪರವಾಗಿಲ್ಲ, ಅದನ್ನೇ ತೆಗೆದುಕೊಂಡುಬಾ, ಎನ್ನುತ್ತಾನೆ. ಆಗ ಅವನು ಉಪಯೋಗಿಸಬಹುದಾದ ಪದಗಳು–**ಕುಲ್ಮಾಷಾಂಶ್ಚಿತ್ ಆಹರ–ಚಿತ್** ಎಂಬ ಪದದಿಂದ ನಿಕೃಷ್ಟ, ಕುತ್ಸಿತ, ಎಂಬ ಅರ್ಥವು ಬರುತ್ತದೆ.

ನು ಇತ್ಯೇಷೋಽನೇಕಕರ್ಮಾ ।

**ನು**—ಇದೂ ಅನೇಕಾರ್ಥಗಳುಳ್ಳ ಪದವು.

ಇದಂ ನು ಕರಿಷ್ಯತೀತಿ ಹೇತ್ವಪದೇಶೇ ।

ನು—ಇದು ಹೇತು, ಕಾರಣವನ್ನು ಸೂಚಿಸುತ್ತದೆ. ಕಸ್ಮಾದದ್ಯ ದೇವದತ್ತಃ ಪ್ರಾತರೇವ ಭುಂಕ್ತೇ ? ಈ ದಿವಸ ದೇವದತ್ತನು ಬೆಳಿಗ್ಗೆಯೇ ಊಟಮಾಡಲು ಕಾರಣವೇನು ? ಎಂದರೆ, ಉತ್ತರವಾಗಿ, ಗ್ರಾಮಂ **ನು** ಗಮಿಷ್ಯತಿ–ಊರಿಗೆ ಹೋಗುವವನಿದ್ದಾನೆ **ಅದನುಸರಿಂದ,** ಎಂದು ಹೇಳಬಹುದು. ಇಲ್ಲಿ ನು ಎಂಬುದು ದೇವದತ್ತನ ಪ್ರಾತರ್ಭೋಜನಕ್ಕೆ ಹೇತುವನ್ನು ಹೇಳುತ್ತದೆ.

ಕಥಂ ನು ಕರಿಷ್ಯತೀತ್ಯನುಪೃಷ್ಟೇ ನನ್ವೇತದಕಾರ್ಷೀದಿತಿ ಚ ।

**ನು** ಇದು ಪ್ರಶ್ನೆಯನ್ನು ಸೂಚಿಸುತ್ತದೆ. ಕಥಂನುಕರಿಷ್ಯತಿ ? ಸಂದರ್ಭವು ಈ ರೀತಿ ಇರಬಹುದು. ಊರಿಗೆ ಹೊರಡುವ ಸಂದರ್ಭ. ಹೊರಡುತ್ತಾನೆಯೋ ಇಲ್ಲವೋ ಎಂದು ಸಂದೇಹವೂ ಇದೆ. ಆಗ ಕೇಳುವ ಪ್ರಶ್ನೆಯಿದು. ಹೇಗೆ ಮಾಡುವನೋ ? ಈ ಪ್ರಶ್ನಾರ್ಥವು ನು ಇಂದ ಬರುತ್ತದೆ. ಮತ್ತೊಂದು ಉದಾಹರಣೆ :— ನ ನು ಏತದಕಾರ್ಷೀತ್ ? ಒಬ್ಬನು ಊರಿಗೆ ಹೋಗಿದ್ದಾನೆಂದು ಸಮಾಚಾರವಿದೆ. ನಿರೀಕ್ಷಿಸಿದ್ದಕ್ಕಿಂತ ಮುಂಚಿತವಾಗಿ ಅವನ ಭೇಟಿಯಾದಾಗ ಕೇಳಬಹುದಾದುದು ಈ ಪ್ರಶ್ನೆಯು ಇದನ್ನು ಮಾಡಲೇ ಇಲ್ಲವೋ ? ಎಂದರೆ ಊರಿಗೆ ಹೋಗಲೇ ಇಲ್ಲವೋ ? ಎಂದಭಿಪ್ರಾಯವು. ಇಲ್ಲಿಯೂ ನು ಇಂದಲೇ ಈ ಪ್ರಶ್ನಾರ್ಥವು.

ಅಥಾಪ್ಯುಪಮಾರ್ಥೇ ಭವತಿ ।

**ನು** ಇದು ಉಪಮಾರ್ಥದಲ್ಲಿಯೂ ಪ್ರಯೋಗಾರ್ಹವಾಗಿದೆ.

ವೃಕ್ಷಸ್ಯ ನು ತೇ ಪುರುಹೂತ **ವಯಾಃ** ವೃಕ್ಷಸ್ಯೇವ ತೇ
ಪುರುಹೂತ ಶಾಖಾಃ ।

**ವೃಕ್ಷಸ್ಯ ವಯಾಃ ನು**—ಗಿಡದ ಕೊಂಬೆಗಳಂತೆ, **ಪೂರ್ವೀಃ** ತೇ ಊತಯಃ ಹಿಂದೆ (ನಮ್ಮ ಯಜ್ಞಕ್ಕೆ ಬರುವಾಗ **ಅ**ನುಸರಿಸುತ್ತಿದ್ದ) ನಿನ್ನ ಮಾರ್ಗಗಳು, **ವಿರುರುಹುಃ** (ಹುಲ್ಲು ಮೊದಲಾದವುಗಳಿಂದ) ಆವೃತವಾಗಿವೆ. ಇಲ್ಲಿ **ನು** ಎಂಬುದು ಉಪಮಾರ್ಥಕವು.

ವಯಾಃ ಶಾಖಾ ವೇತೇರ್ವಾತಾಯನಾ ಭವನ್ತಿ **ಶಾಖಾಃ**
ಖಶಯಾಃ ಶಕ್ನೋತೇರ್ವಾ ।

**ಶಾಖಾಃ** ಕೊಂಬೆಗಳು **ವೇತೇಃ** ವೃಕ್ಷದ ಸ್ಕಂದಗಳಿಂದ ಹೊರಟು ಅಂತರಿಕ್ಷದಲ್ಲಿ ನಾನಾ ದಿಕ್ಕುಗಳಿಗೆ (ವಿಯನ್ತಿ) ಹೋಗುತ್ತವೆ, ಹರಡಿಕೊಳ್ಳುತ್ತವೆ ಮತ್ತು ಗಾಳಿಯಲ್ಲಿಯೇ **ಚಲಿಸುತ್ತವೆ** (**ವಾತಾಯನಾಃ ವಾತ+ಆಯನಾಃ** , ಆದುದರಿಂದ **ವಯಾಃ** ಎಂತಲೂ, **ಖಶಯಾಃ** (ಖೇ ಶೇರತೇ) **ಆ**ಕಾಶದಲ್ಲಿಯೇ ಇರುತ್ತವೆ (ಆಕಾಶವನ್ನು ಆಶ್ರಯಿಸಿವೆ) ಅಥವಾ ಶಕ್ನೋತೇಃ ಪಕ್ಷಿಗಳು ಮತ್ತು ತಮ್ಮ ಹಣ್ಣು ಹೂಗಳನ್ನು ಧರಿಸಲು ಶಕ್ತಿ ಹೊಂದಿವೆಯಾದುದರಿಂದ **ಶಾಖಾಃ** ಎಂತಲೂ ಎನಿಸಿಕೊಳ್ಳುತ್ತವೆ, ಪ್ರಾಸಂಗಿಕವಾಗಿ **ವಯಾಃ, ಶಾಖಾಃ** ಇವುಗಳ ನಿಷ್ಪತ್ತಿ. ಇಲ್ಲಿಗೆ ಉಪಮಾರ್ಥಕವಾದ ಇವ, ನು, ನ ಮತ್ತು **ಚಿತ್** ಇವುಗಳ ವಿವರಣೆಯು ಮುಗಿಯಿತು.

ಅಥಯಸ್ಯಾಗಮಾದರ್ಥಪೃಥಕ್ತ್ವಮಹ **ವಿಜ್ಞಾ**ಯತೇ ನ ತ್ವಾದ್ದೇಶಿಕಮಿವ
ವಿಗ್ರಹೇಣ ಪೃಥಕ್ತ್ವಾತ್ಸ ಕರ್ಮೋಪಸಂಗ್ರಹಃ ।

ಇಲ್ಲಿಂದ ಮುಂದೆ ಕರ್ಮೋಪಸಂಗ್ರಹಾವ್ಯಯ (ಸಂಯೋಜಕಾವ್ಯಯ) ಗಳ ಲಕ್ಷಣ ಮತ್ತು ನಿರೂಪಣೆ. ಸಂಯೋಜಕ (ಸಮುಚ್ಚಯ) ಗಳನ್ನು ವಾಕ್ಯದಲ್ಲಿ ಉಪಯೋಗಿಸಿದರೆ, ಅವುಗಳು ತಿಳಿಸುವ ಅರ್ಥವೇನೆಂಬುದನ್ನು ವಿಮರ್ಶಿಸೋಣ. ದೇವದತ್ತಯಜ್ಞದತ್ತಾ ಪಚೇತೇ — ದೇವದತ್ತ ಮತ್ತು ಯಜ್ಞದತ್ತರು ಅಡಿಗೆ ಮಾಡುತ್ತಾರೆ. **ದೇವದತ್ತಯಜ್ಞದತ್ತಾ – ದೇವದತ್ತಶ್ಚ ಯಜ್ಞದತ್ತಶ್ಚ** – ಇಲ್ಲಿ ಮೊದಲನೆಯದರಲ್ಲಿ ಸಮುಚ್ಚಯಾರ್ಥ ಕೊಡುವ ಅವ್ಯಯವು ಅಧ್ಯಾಹೃತವಾಗಿದೆ, ಎರಡನೆಯದರಲ್ಲಿ **ಚ** ಎಂಬ ಸಮುಚ್ಚಯಾರ್ಥಕಪದವು ಉಪಯೋಗಿಸಲ್ಪಟ್ಟಿದೆ. ಈ ಎರಡು ಪ್ರಯೋಗಗಳಲ್ಲಿಯೂ, ದೇವದತ್ತ ಮತ್ತು ಯಜ್ಞದತ್ತರೆಂಬ ಇಬ್ಬರು ಪುರುಷರು ಒಟ್ಟಿಗೆ ಸೇರಿ ಪಚನಕಾರ್ಯದಲ್ಲಿ ನಿರತರಾಗಿದ್ದಾರೆ ಎಂದರೂ, ಇವರಿಬ್ಬರೂ ಪ್ರತ್ಯೇಕವಾಗಿ ಕಾರ್ಯನಿರತರಾಗಿದ್ದಾರೆ ಎಂಬ ಅಭಿಪ್ರಾಯವು ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಸ್ವರೂಪತಃ ಪ್ರತ್ಯೇಕರಾದವರು ಏಕಕರ್ಮದಲ್ಲಿ ಪ್ರಸಕ್ತರಾಗಿದ್ದಾರೆ. ವಾಕ್ಯವನ್ನು ಉಚ್ಚರಿಸಿದವನ ಮನಸ್ಸಿನಲ್ಲಿ ಕಾರ್ಯನಿರತರಾದವರ ಪ್ರತ್ಯೇಕತೆಯನ್ನು ತಿಳಿಸಬೇಕೆಂಬ ಉದ್ದೇಶವಿಲ್ಲದಿದ್ದರೂ, ಸಮುಚ್ಚಯಾರ್ಥಕ ಪದವನ್ನು ಉಪಯೋಗಿ

ಸಿದ್ದರಿಂದ **ಪ್ರತ್ಯೇಕತೆಯನ್ನು** ಗ್ರಹಿಸಿಯೇ ಗ್ರಹಿಸುತ್ತೇವೆ. ಗಾಃ (ಹಸುಗಳನ್ನು), ಅಶ್ವಾನ್ (ಕುದುರೆಗಳನ್ನು), ಪುರುಷಾನ್ (ಮನುಷ್ಯರನ್ನು) ಆನಯ (ಕರೆದು ತಾ) ಎಂಬ ವಾಕ್ಯದಲ್ಲಿ ಆನಯನ ಕರ್ಮದಲ್ಲಿ ಆ ವಸ್ತುಗಳ ಪ್ರತ್ಯೇಕ ಜ್ಞಾನವು ಅನವಶ್ಯಕವು. ಯಾವ ಪದವನ್ನು ಉಪಯೋಗಿಸಿದರೆ, ವಕ್ತೃವಿನ ಉದ್ದೇಶವಿಲ್ಲದಿದ್ದರೂ, ಕ್ರಿಯಾಪದದಿಂದ ಸೂಚಿತವಾದ ಕಾರ್ಯದಲ್ಲಿ ನಿರತರಾದವರ ಪ್ರತ್ಯೇಕತೆ ತಾನಾಗಿಯೇ ತಿಳಿಯುತ್ತದೆಯೋ, ಆ ಪದಕ್ಕೆ ಕರ್ಮೋಪಸಂಗ್ರಹ, ಸಮುಚ್ಚಯ, ಸಂಯೋಜಕ, ಅವ್ಯಯವೆಂದು ಹೆಸರು.

ಚೇತಿ ಸಮುಚ್ಚಯಾರ್ಥ ಉಭಾಭ್ಯಾಂ ಸಂಪ್ರಯುಜ್ಯತೇಽಹಂ ಚ
ತ್ವಂ ಚ ವೃತ್ರಹನ್ನಿತಿ ।

**ಚ** ಇದು ಸಮುಚ್ಚಯಾರ್ಥಕವಾದುದು ಅಂದರೆ, ಪ್ರತ್ಯೇಕರಾಗಿರುವವರು ಏಕಕರ್ಮದಲ್ಲಿ ನಿರತರಾಗಿದ್ದಾರೆ ಎಂದು ಸೂಚಿಸುವುದು. ಎರಡು ಶಬ್ದಗಳನ್ನು ಒಟ್ಟಿಗೆ ಸೇರಿಸುವುದು.

**ಅಹಂ ಚ ತ್ವಂಚ ವೃತ್ರಹನ್**—(ಋ. ಸಂ. ೮-೬೨-೧೧)-ಎಲೈ ವೃತ್ರ ಸಂಹಾರಕನೇ ನಾನೂ ನೀನೂ ಇಬ್ಬರೂ ಇಲ್ಲಿ **ಚ** ಶಬ್ದವು, ಎರಡೂ ಪದಗಳೊಡನೆ (ಉಭಾಭ್ಯಾಂ) ಉಪಯೋಗಿಸಲ್ಪಟ್ಟಿದೆ.

ಏತಸ್ಮಿನ್ನೇವಾರ್ಥೇ ದೇವೇಭ್ಯಶ್ಚ ಪಿತೃಭ್ಯ ಆ ಇತ್ಯಾಕಾರಃ ।

**ಚ** ಕಾರದಂತೆ ಆ ಕಾರವೂ ಕರ್ಮೋಪ ಸಂಗ್ರಹಾವ್ಯಯವಾಗುತ್ತದೆ. ಈ ಕೆಳಗಿನ ಮಂತ್ರದಲ್ಲಿ

**ಯೋ ಅಗ್ನಿಃ ಕವ್ಯವಾಹನಃ ಪಿತೄನ್ಯಕ್ಷದೃತಾವೃಧಃ ।**
**ಪ್ರೇದು ಹವ್ಯಾನಿ ವೋಚತಿ ದೇವೇಭ್ಯಶ್ಚ ಪಿತೃಭ್ಯ ಆ ॥**

(ಋ. ಸಂ. ೧೦-೧೬-೧೧).

**ದೇವೇಭ್ಯಶ್ಚ ಪಿತೃಭ್ಯಶ್ಚ**—ಎಂಬುದರ ಬದಲು, **ದೇವೇಭ್ಯಶ್ಚ ಪಿತೃಭ್ಯ** ಆ ಎಂದು ಪ್ರಯೋಗವಿದೆ. ಆ ಕಾರಕ್ಕೆ ಚಕಾರಾರ್ಥವನ್ನು ಹೇಳಬೇಕು.

ವೇತಿ ವಿಚಾರಣಾರ್ಥೇ ಹನ್ತಾಹಂ ಪೃಥಿವೀಮಿಮಾಂ ನಿದಧಾ-
ನೀಹ ವೇಹವೇತಿ ।

**ವಾ** ಇದು ವಿಚಾರಣಾರ್ಥಕವಾದುದು.

ಹನ್ತಾಹಂ ಪೃಥಿವೀಮಿಮಾಂ ನಿದಧಾನೀಹ ವೇಹವಾ ।

ಸೋಮಪಾನಮಾಡಿ, ಇಂದ್ರನಿಗೆ ಅಪಾರಸಾಮರ್ಥ್ಯವು ಬಂದಿದೆ. ಅವನಿಗೆ ಭೂಮಿಯನ್ನೇ ಕಿತ್ತು ಬೇರೆಕಡೆ ಇಡುವ ಸಾಮರ್ಥ್ಯ, ಮನಸ್ಸೂ ಇರುವಂತಿವೆ. ಆಗ ಅವನ ಮನಸ್ಸಿನಲ್ಲಿ ತರ್ಕವು ಹುಟ್ಟಿದೆ. ಇಹವಾ—ಇಲ್ಲಿಯೋ ಅಲ್ಲಿಯೋ ಎಲ್ಲಿ ಇಡಲಿ ? ಎಂಬುದಾಗಿ. **ವಾ** ಪದದಿಂದ ಈ ತರ್ಕವೆಂಬ ಅರ್ಥವು.

**ಇತಿ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ**

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು.

**ಅಥ ಪ್ರಥಮಾಧ್ಯಾಯೇ ಪಂಚಮಃ ಖಂಡಃ**

ಪ್ರಥಮಾಧ್ಯಾಯದಲ್ಲಿ ಐದನೆಯ ಖಂಡವು

---

ವಾಯುರ್ವಾ ತ್ವಾ ಮನುರ್ವಾ ತ್ವೇತಿ ಅಹ ಇತಿ ಚ ಹ ಇತಿ ಚ ವಿನಿಗ್ರಹಾರ್ಥೀಯೌ ಪೂರ್ವೇಣ ಸಂಪ್ರಯುಜ್ಯೇತೇ ಅಯಮಹೇದಂ ಕರೋತ್ವಯಮಿದಮಿದಂ ಹ ಕರಿಷ್ಯತೀದಂ ನ ಕರಿಷ್ಯತೀತ್ಯಥಾಪ್ಯುಕಾರ ಏತಸ್ಮಿನ್ನೇವಾರ್ಥ ಉತ್ತರೇಣ ಮೃಷೇಮೇ ವದಂತಿ ಸತ್ಯಮು ತೇ ವದಂತೀತ್ಯಥಾಪಿ ಪದಪೂರಣ ಇದಮು ತದು ಹೀತ್ಯೇಷೋಽನೇಕಕರ್ಮೇದಂ ಹಿ ಕರಿಷ್ಯತೀತಿ ಹೇತ್ವಪದೇಶೇ ಕಥಂ ಹಿ ಕರಿಷ್ಯತೀತ್ಯನುಪೃಷ್ಟೇ ಕಥಂ ಹಿ ವ್ಯಾಕರಿಷ್ಯತೀತ್ಯ ಸೂಯಾಯಾಂ ಕಿಲೇತಿ ವಿದ್ಯಾಪ್ರಕರ್ಷ ಏವಂ ಕಿಲೇತ್ಯಥಾಪಿ ನ ನನು ಇತ್ಯೇತಾಭ್ಯಾಂ ಸಂಪ್ರಯುಜ್ಯತೇಽನುಪೃಷ್ಟೇ ನ ಕಿಲೈವಂ ನನು ಕಿಲೈವಂ ಮೇತಿ ಪ್ರತಿಷೇಧೇ ಮಾ ಕಾರ್ಷೀರ್ಮಾ ಹಾರ್ಷೀರಿತಿ ಚ ಖಲ್ವಿತಿ ಚ ಖಲು ಕೃತ್ವಾ ಖಲು ಕೃತಮಥಾಪಿ ಪದಪೂರಣ ಏವಂ ಖಲು ತದ್ಬಭೂವೇತಿ ಶಶ್ವದಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಂ ಶಶ್ವದೇವಮಿತ್ಯನುಪೃಷ್ಟ ಏವಂ ಶಶ್ವದಿತ್ಯಸ್ವಯಂಪೃಷ್ಟೇ ನೂನಮಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ ವಿಚಿಕಿತ್ಸಾರ್ಥೀಯಶ್ಚ ಪದಪೂರಣಶ್ಚಾಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ ಸ ಇಂದ್ರ ಏತ್ಯ ಪರಿದೇವಯಾಂ ಚಕ್ರೇ ॥ ೫ ॥

---

ಅಥಾಪಿ ಸಮುಚ್ಚಯಾರ್ಥೇ ಭವತಿ—ವಾಯುರ್ವಾ ತ್ವಾ ಮನುರ್ವಾ ತ್ವೇತಿ ॥

ಹಿಂದಿನ ಖಂಡದಲ್ಲಿ ವಾ ಎಂಬ ನಿಪಾತದ ವಿಷಯವನ್ನು ಹೇಳಲಾರಂಭಿಸಿ ಈ ಖಂಡದ ಪ್ರಾರಂಭದಲ್ಲಿ ಅದನ್ನು ಮುಂದುವರಿಸಲಾಗಿದೆ. ಇಲ್ಲಿ ವಾ ಎಂಬ ನಿಪಾತ ಶಬ್ದಪ್ರಯೋಗವಿರುವ ಒಂದು ಉದಾಹರಣಾರ್ಥವಾಗಿ ಕೊಟ್ಟಿದ್ದಾರೆ—

**ವಾಯುರ್ವಾ ತ್ವಾ ಮನುರ್ವಾ ತ್ವಾ ಗಂಧರ್ವಾಃ ಸಪ್ತವಿಂಶತಿಃ ।**
**ತೇ ಅಗ್ರೇ ಅಶ್ವಮಯುಜಂಸ್ತೇ ಅಸ್ಮಿಞ್ಜವಮಾಧಧುಃ ॥**

(ತೈ. ಸಂ. ೧-೭-೭ ; ಕಾಠಕ. ೧೩-೧೪ ; ಮೈ. ಸಂ. ೧-೧೧-೧.)

ಮೇಲಿನ ಮಂತ್ರದಲ್ಲಿರುವ– **ವಾಯುರ್ವಾ ತ್ವಾ ಮನುರ್ವಾ ತ್ವಾ ಗಂಧರ್ವಾಃ** ಎಂಬ **ವಾ** ಎಂಬ ನಿಪಾತವು ಅಪಿಶಬ್ದಾರ್ಥವನ್ನು ಎಂದರೆ ಮತ್ತು ಎಂಬ ಅರ್ಥವನ್ನು ನಿರ್ದೇಶಿಸುವುದು. ವಾಯುವೂ ಮತ್ತು ಗಂಧರ್ವರೂ ಎಂದು ಈ ವಾಕ್ಯದ ಅರ್ಥವು.

ಅಹ ಇತಿ ಚ ಹ ಇತಿ ಚ ವಿನಿಗ್ರಹಾರ್ಥೀಯೌ ಪೂರ್ವೇಣ ಸಂ ಪ್ರಯುಜ್ಯೇತೇ ಅಯಮಹೇದಂ ಕರೋತ್ವಯಮಿದಮಿದಂ ಹ ಕರಿಷ್ಯತೀದಂ ನ ಕರಿಷ್ಯತೀತಿ ॥

**ಅಹ ಮತ್ತು** ಹ ಎಂಬ ಎರಡು ನಿಪಾತಗಳೂ ಒಂದು ವಾಕ್ಯದಲ್ಲಿ ಪರಸ್ಪರ ವಿರೋಧಾರ್ಥವನ್ನು ಸೂಚಿಸುವವು. ಹೇಗೆಂದರೆ – **ಅಯಮಹೇದಂ ಕರೋತ್ವಯಮಿದಂ** – ಎಂಬ ವಾಕ್ಯದಲ್ಲಿ ಇವನು (ಯಜ್ಞದತ್ತನು) ಈ ಕೆಲಸವನ್ನು ಮಾಡಲಿ, ಅವನು (ದೇವದತ್ತನು) ಈ (ಅಥವಾ ಆ) ಕೆಲಸವನ್ನು ಮಾಡಲಿ ಎಂಬ ಅರ್ಥವಿರುವುದು. ಈ ಕೆಲಸ ಆ ಕೆಲಸ ಎಂದು ಹೇಳುವಾಗ ಆ ಎರಡು ಕೆಲಸಗಳೂ ಬೇರೆ ಬೇರೆ ಎಂದು ಸ್ಪಷ್ಟವಾಗಿರುವುದು. ಆದುದರಿಂದ ಪರಸ್ಪರ ವಿರುದ್ಧ ಎಂದರೆ ಒಂದೇ ವಿಧವಲ್ಲದ ಎರಡು ಕೆಲಸಗಳನ್ನು ನಿರ್ದೇಶಿಸುವಾಗ ಅಹ ಎಂಬ ನಿಪಾತದ ಪ್ರಯೋಗವಿರುವುದು. ಅದರಂತೆಯೇ ಇದಂ ಹಕರಿಷ್ಯತೀದಂ ನ ಕರಿಷ್ಯತೀತಿ–ಈ ಕೆಲಸವನ್ನು ಮಾಡುತ್ತಾನೆ, ಆ ಕೆಲಸವನ್ನು ಮಾಡುವುದಿಲ್ಲ ಎಂಬಲ್ಲಿಯೂ ಹ ಎಂಬ ನಿಪಾತವು ಪರಸ್ಪರ ಬೇರೆ ಬೇರೆ ಕೆಲಸಗಳನ್ನು ಸೂಚಿಸುವುದು.

ಅಥಾಪ್ಯುಕಾರ ಏತಸ್ಮಿನ್ನೇವಾರ್ಥ ಉತ್ತರೇಣ ಮೃಷೇಮೇ ವದಂತಿ ಸತ್ಯಮುತೇ ವದಂತೀತಿ ॥

**ಉ** ಎಂಬ ನಿಪಾತವೂ ಸಹ ಮೇಲೆ ಹೇಳಿದ ವಿನಿಗ್ರಹಾರ್ಥದಲ್ಲಿಯೇ (ಪರಸ್ಪರ ವಿರೋಧ) ಉಪಯೋಗಿಸಲ್ಪಡುವುದು. ಮೊದಲನೇ ವಾಕ್ಯದಲ್ಲಿರುವ ಅರ್ಥಕ್ಕೆ ವಿರುದ್ಧವಾಗಿ ಎರಡನೆಯ ವಾಕ್ಯವಿರುವ ಸಂದರ್ಭದಲ್ಲಿ ಈ **ಉ** ಎಂಬ ನಿಪಾತದ ಪ್ರಯೋಗವಿರುವುದು ಹೇಗೆಂದರೆ—**ಮೃಷೇಮೇ ವದಂತಿ ಸತ್ಯಮು ತೇ ವದಂತಿ**—ಇವರು ಸುಳ್ಳು ಹೇಳುತ್ತಾರೆ, ಅವರು ಸತ್ಯವನ್ನೇ ಹೇಳುತ್ತಾರೆ.

ಅಥಾಪಿ ಪದಪೂರಣ ಇದಮು ತದು ॥

ಮೇಲೆ ಹೇಳಿದ ಅರ್ಥದಲ್ಲಿಲ್ಲದೆ **ಉ** ಎಂಬ ನಿಪಾತವು ಪದಪೂರಣಕ್ಕಾಗಿ ಎಂದರೆ ಛಂದೋಬದ್ಧವಾದ ಋಕ್ಕುಗಳಲ್ಲಿ ಒಂದಕ್ಷರವು ಕಮ್ಮಿಯಾಗಿದ್ದರೆ ಈ **ಉ** ಎಂಬುದನ್ನು ಸೇರಿಸಿ ಪಾದಪೂರಣಮಾಡುವುದಕ್ಕಾಗಿ ಉಪಯೋಗಿಸಲ್ಪಡುವುದು. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಈ **ಉ** ಎಂಬ ನಿಪಾತಕ್ಕೆ ಯಾವ ವಿಶೇಷಾರ್ಥವೂ ಇರುವುದಿಲ್ಲ. ಉದಾಹರಣೆಗಾಗಿ—

ಇದಮು ತ್ಯತ್ಪುರುತಮಂ ಪುರಸ್ತಾಜ್ಜ್ಯೋತಿಸ್ತಮಸೋ ವಯುನಾವದಸ್ಥಾತ್ ।
ನೂನಂ ದಿವೋ ದುಹಿತರೋವಿಭಾತೀರ್ಗಾತುಂ ಕೃಣವನ್ನುಷಸೋ ಜನಾಯ ॥

(ಋ. ಸಂ. ೪–೫೧–೧)

ತದು ಪ್ರಯಕ್ಷತಮಮಸ್ಯ ಕರ್ಮದಸ್ಮಸ್ಯ ಚಾರುತಮಮಸ್ತಿ ದಂಸಃ ।
ಉಪಹ್ವರೇ ಯದುಪರಾ ಅಪಿನ್ವನ್ಮಧ್ವರ್ಣಸೋ ನದ್ಯ ೧ ಶ್ಚತಸ್ರಃ ॥

(ಋ. ಸಂ. ೧–೬೨–೬)

ಈ ಎರಡು ಋಕ್ಕುಗಳಲ್ಲಿಯೂ ಇರುವ ಉ ಎಂಬ ನಿಪಾತಕ್ಕೆ ವಿಶೇಷಾರ್ಥವೇನೂ ಇರುವುದಿಲ್ಲ.

ಹೀತ್ಯೇಷೋಽನೇಕಕರ್ಮೇದಂ ಹಿ ಕರಿಷ್ಯತೀತಿ ಹೇತ್ವಪದೇಶೇ ಕಥಂ
ಹಿ ಕರಿಷ್ಯತೀತ್ಯನುಪೃಷ್ಟೇ ಕಥಂ ಹಿ ವ್ಯಾಕರಿಷ್ಯತೀತ್ಯಸೂಯಾಯಾಂ॥

ಹಿ ಎಂಬ ನಿಪಾತವು ಅನೇಕವಿಧ ಕರ್ಮಗಳನ್ನು ಹೇಳುವಾಗ ಉಪಯೋಗಿಸಲ್ಪಡುವುದು **ಇದಂ ಹಿ ಕರಿಷ್ಯತಿ** ಅವನು ಅದನ್ನು ಮಾಡುವನು ಎಂಬಲ್ಲಿ ಹಿ ಎಂಬುದು ಕಾರಣವನ್ನು ಸೂಚಿಸುವುದಕ್ಕಾಗಿ ಉಪಯೋಗಿಸಲ್ಪಡುವುದು. **ಕಥಂ ಹಿ ವ್ಯಾಕರಿಷ್ಯತೀತ್ಯನುಪೃಷ್ಟೇ**—ಅವನು ಅದನ್ನು ಹೇಗೆ ಮಾಡುವನು ? ಎಂದು ಪ್ರಶ್ನೆಯನ್ನು ಕೇಳುವಾಗಲೂ **ಕಥಂ ಹಿ ವ್ಯಾಕರಿಷ್ಯತೀತ್ಯಸೂಯಾಯಾಂ**—ಅವನು ಅದನ್ನು ಹೇಗೆ ವ್ಯಾಖ್ಯಾನ (ಅರ್ಥವಿವರಣೆ) ಮಾಡಬಲ್ಲನು ಎಂಬುದನ್ನು ಅಸೂಯೆಯಿಂದ ಕೇಳುವಾಗಲೂ ಹಿ ಎಂಬುದು ಉಪಯೋಗಿಸಲ್ಪಡುವುದು. ಅಸೂಯೆಯೆಂದರೆ—ಪರಿವಾದ, ಇತರರ ಗುಣಗಳಲ್ಲಿ ಅಸಹನೆ ಎಂದರ್ಥವು.

ಕಿಲೇತಿ ವಿದ್ಯಾಪ್ರಕರ್ಷ ಏವಂ ಕಿಲೇತಿ ॥

**ಕಿಲ** ಎಂಬ ನಿಪಾತವು ಹೆಚ್ಚು ತಿಳುವಳಿಕೆ ಅಥವಾ ಜ್ಞಾನವನ್ನು ಸೂಚಿಸುವಾಗ ಉಪಯೋಗಿಸಲ್ಪಡುವುದು **ಏವಂ ಕಿಲ** ವಾಕ್ಯಾನಂತರದಲ್ಲಿ **ಏವಂ ಕಿಲ** ಎಂದು ಹೇಳಿದರೆ ಅವನು ಅದನ್ನು ಚೆನ್ನಾಗಿ ಹೇಳಿದನಲ್ಲವೇ ಇತ್ಯಾದ್ಯರ್ಥವು ಭಾಸಿತವಾಗುವುದು.

ಅಥಾಪಿ ನ ನನು ಇತ್ಯೇತಾಭ್ಯಾಂ ಸಂಪ್ರಯುಜ್ಯತೇಽನುಪೃಷ್ಟೇ ನ ಕಿಲ್ವೈವಂ
ನನು ಕಿಲ್ವೈವಂ ॥

ಇದಲ್ಲದೆ **ಕಿಲ** ಎಂಬ ಶಬ್ದವು **ನ** ಮತ್ತು **ನನು** ಎಂಬ ಶಬ್ದಗಳೊಡನೆ ಸೇರಿ ಉಪಯೋಗಿಸಲ್ಪಡುವುದು. **ನ ಕಿಲ್ವೈವಂ**—ಹಾಗಲ್ಲವೇ ? **ನನು ಕಿಲ್ವೈವಂ**—ಒಳ್ಳೇದು ಹಾಗೆಯೇ ತಾನೇ ? ಎಂಬರ್ಥಗಳಲ್ಲಿ ಇದರ ಪ್ರಯೋಗವಿರುವುದು.

ಮೇತಿ ಪ್ರತಿಷೇಧೇ ಮಾ ಕಾರ್ಷೀರ್ಮಾ ಹಾರ್ಷೀರಿತಿ ಚ ॥

**ಮಾ** ಎಂಬ ನಿಪಾತವು ಬೇಡ, ಕೂಡದು ಎಂಬ ನಿಷೇಧಾರ್ಥವನ್ನು ಸೂಚಿಸುವುದು **ಮಾ ಕಾರ್ಷೀಃ**—ಅದನ್ನು ಮಾಡಬೇಡ, **ಮಾ ಹಾರ್ಷೀಃ**—ಅದನ್ನು ಅಪಹರಿಸಬಾರದು ಇತ್ಯಾದಿ.

ಖಲ್ವಿತಿ ಚ ಖಲು ಕೃತ್ವಾ ಖಲು ಕೃತಂ ।

**ಖಲು** ಎಂಬ ನಿಪಾತವೂ ಸಹ ಮೇಲೆ ಹೇಳಿದ **ಮಾ** ಎಂಬ ಪದದಂತೆ ನಿಷೇಧಾರ್ಥವನ್ನು ಹೇಳುವುದು. **ಖಲು ಕೃತ್ವಾ**—ಮಾಡಿದ್ದು ಸಾಕು, **ಖಲು ಕೃತಂ**—ಮಾಡಿದ್ದಾಯಿತು, ಇನ್ನು ಬೇಡ ಇತ್ಯಾದ್ಯರ್ಥವನ್ನು ಸೂಚಿಸುವುದು.

ಅಥಾಪಿ ಪದಪೂರಣ ಏವಂ ಖಲು ತದ್ಬಭೂವೇತಿ ।

ಮೇಲೆ ಹೇಳಿದ ಅರ್ಥವಲ್ಲದೆ **ಖಲು** ಎಂಬ ಶಬ್ದವು ಪದಪೂರಣಕ್ಕಾಗಿ ಎಂದರೆ ಸಾಲದಿರುವ ಒಂದು ಅಕ್ಷರವನ್ನು ಭರ್ತಿಮಾಡುವುದಕ್ಕಾಗಿ ಉಪಯೋಗಿಸಲ್ಪಡುವುದು ಇಂತಹ ಸಂದರ್ಭದಲ್ಲಿ ಅದಕ್ಕೆ ವಿಶೇಷಾರ್ಥವಿಲ್ಲ **ಖಲು ತದ್ಬಭೂವ**— ಹೀಗೆ ಅದು ಸಂಭವಿಸಿತು ಇತ್ಯಾದಿ.

ಶಶ್ವದಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಂ ಶಶ್ವದೇವಮಿತ್ಯನುಪೃಷ್ಟ
ಏವಂ ಶಶ್ವದಿತ್ಯಸ್ವಯಂ ಪೃಷ್ಟೇ ॥

**ಶಶ್ವತ್** ಎಂಬ ಪದವು ಆಧುನಿಕಸಂಸ್ಕೃತಭಾಷೆಯಲ್ಲಿ (ಹೌದೋ ಅಲ್ಲವೋ ಎಂಬ) ಸಂಶಯವನ್ನು ವ್ಯಕ್ತ ಪಡಿಸುವುದು. **ಶಶ್ವದೇವಂ**—ಅದು ಹಾಗೆಯೇ ಆಯಿತೇ? ಇಲ್ಲಿ **ಶಶ್ವತ್** ಎಂಬ ಪದವು ಪ್ರಶ್ನಾರ್ಥಕ ವಾಕ್ಯದಲ್ಲಿ ಇನ್ನೊಬ್ಬರನ್ನು ಪ್ರಶ್ನಿಸುವಾಗ ಮಾತ್ರ ಉಪಯೋಗಿಸಲ್ಪಡುವುದು. ತನ್ನ ವಿಷಯದಲ್ಲಿ ಹೇಳುವಾಗ ಇದರ ಪ್ರಯೋಗವಿಲ್ಲ.

ನೂನಮಿತಿ ವಿಚಿಕಿತ್ಸಾರ್ಥೀಯೋ ಭಾಷಾಯಾಮುಭಯಮನ್ವಧ್ಯಾಯಂ
ವಿಚಿಕಿತ್ಸಾರ್ಥೀಯಶ್ಚ ಪದಪೂರಣಶ್ಚ ।

**ನೂನಂ** ಎಂಬ ಶಬ್ದವು ಆಧುನಿಕ ಭಾಷೆಯಲ್ಲಿ ಸಂಶಯವನ್ನು ವ್ಯಕ್ತಪಡಿಸುವುದು. ಆದರೆ ವೇದವಾಕ್ಯಗಳಲ್ಲಿ ಬಳಸುವಾಗ ಇದು ಸಂಶಯವನ್ನು ವ್ಯಕ್ತಪಡಿಸುವಾಗಲೂ ಪದಪೂರಣಕ್ಕಾಗಿಯೂ (ಯಾವ ವಿಶೇಷಾರ್ಥವೂ ಇಲ್ಲದೆ) ಎರಡು ವಿಧವಾಗಿಯೂ ಉಪಯೋಗಿಸಲ್ಪಡುವುದು.

ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ
ಸ ಇಂದ್ರ ಏತ್ಯ ಪರಿದೇವಯಾಂಚಕ್ರೇ ॥

ಮೇಲೆ ಹೇಳಿದ **ನೂನಂ** ಶಬ್ದದ ಪ್ರಯೋಗವನ್ನು ಉದಾಹರಣಪೂರ್ವಕವಾಗಿ ವಿವರಿಸುವುದಕ್ಕಾಗಿ (**ನ ನೂನಮಸ್ತಿ** ಎಂಬ ಮುಂದಿನ ಖಂಡದ ಮಂತ್ರವನ್ನೂ) ಅಗಸ್ತ್ಯ ಋಷಿಯು ಮಾಡಿದ ತಪ್ಪನ್ನೂ ಅದರಿಂದ ಇಂದ್ರನಿಗೆ ಉಂಟಾದ ಕೋಪವನ್ನೂ ಇಲ್ಲಿ ವಿವರಿಸಿರುವರು. ಒಂದಾನೊಂದು ಕಾಲದಲ್ಲಿ ಅಗಸ್ತ್ಯ ಋಷಿಯು ಇಂದ್ರನಿಗೆ ಅರ್ಪಿಸಬೇಕೆಂಬ ಉದ್ದೇಶದಿಂದ ತೆಗೆದಿಟ್ಟಿದ್ದ ಹವಿಸ್ಸನ್ನು ಕಾರಣಾಂತರದಿಂದ ಮರುದ್ದೇವತೆಗಳಿಗೆ ಅರ್ಪಿಸಿದನು. ಆಗ ಇಂದ್ರನು ಅಲ್ಲಿಗೆ ಬಂದು ಕೋಪ ಸಂತಾಪಗಳಿಂದ ಕೂಡಿ ಅಗಸ್ತ್ಯ ಋಷಿಯನ್ನು ನಿಂದಿಸಿದನು, ಮತ್ತು ತನಗಾಗಿ ಉದ್ದೇಶಮಾಡಿ ಇಟ್ಟಿದ್ದ ಹವಿಸ್ಸನ್ನು ಮರುದ್ದೇವತೆಗಳಿಗೆ ಅರ್ಪಿಸಿದ್ದು ಅಗಸ್ತ್ಯ ಋಷಿಯ ತಪ್ಪೆಂದು ಅವನನ್ನು ಕೋಪಾವಿಷ್ಟನಾಗಿ ದೂಷಿಸಿದನು.

**ಇತಿ ಪ್ರಥಮಾಧ್ಯಾಯೇ ಪಂಚಮಃ ಖಂಡಃ**

ಇಲ್ಲಿಗೆ ಪ್ರಥಮಾಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು

———

## ಪ್ರಥಮಾಧ್ಯಾಯೇ ಷಷ್ಠಃ ಖಂಡಃ

### ಆರನೆಯ ಖಂಡವು

---

ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ । ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿ ನಶ್ಯತಿ ॥ (ಋ. ಸಂ. ೧–೧೭೦–೧) ನ ನೂನಮಸ್ತ್ಯದ್ಯತನಂ ನೋ ಏವ ಶ್ವಸ್ತನಮದ್ಯಾಸ್ಮಿನ್ದ್ಯವಿ ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ ಶ್ವ ಉಪಾಶಂಸನೀಯಃ ಕಾಲೋ ಹ್ಯೋ ಹೀನಃ ಕಾಲಃ ಕಸ್ತದ್ವೇದ ಯದದ್ಭುತಂ । ಕಸ್ತದ್ವೇದ ಯದಭೂತಮಿದಮಪೀತರದದ್ಭುತಮಭೂತಮಿವಾನ್ಯಸ್ಯ ಚಿತ್ತಮಭಿಸಂಚರ್ಯೈಣ್ಯಮಭಿಸಂಚಾರ್ಯನ್ಯೋ ನಾನೇಯಶ್ಚಿತ್ತಂ ಚೇತತೇರುತಾಧೀತಂ ವಿನಶ್ಯತೀತ್ಯಪ್ಯಾಧ್ಯಾತಂ ವಿನಶ್ಯತ್ಯಾಧ್ಯಾತಮಭಿಪ್ರೇತಮಥಾಪಿ ಪದಪೂರಣಃ ॥೬॥

ಈಗ ನೂನಂ ಎಂಬ ಶಬ್ದವು ಛಂದಸ್ಸುಗಳಲ್ಲಲ್ಲದೆ ಬೇರೆ ಕಡೆಗಳಲ್ಲಿಯೂ ವಿಚಿಕಿತ್ಸಾರ್ಥದಲ್ಲಿ (ಸಂಶಯವನ್ನು ವ್ಯಕ್ತಪಡಿಸುವಾಗ) ಪ್ರಯುಕ್ತವಾಗಿರುವುದು. ಛಂದಸ್ಸಿನಲ್ಲಿ (ವೇದದಲ್ಲಿ) ವಿಚಿಕಿತ್ಸಿತಾರ್ಥದಲ್ಲಿಯೂ, ಪದಪೂರಣಾರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ ಎಂದು ವರ್ಣಿಸಿದ್ದಾರೆ. ನಿರುಕ್ತವ್ಯಾಖ್ಯಾನಕಾರರಾದ ದುರ್ಗಾಚಾರ್ಯರು **ವಿಚಿಕಿತ್ಸಾ ನಾಮ ವಿವೇಕಪೂರ್ವಕೋ ಅವಧಾರಣಾಭಿಪ್ರಾಯಃ** – ಸಂಶಯವು ಉಂಟಾಗಿರುವ ಸನ್ನಿವೇಶಗಳಲ್ಲಿ ವಿಮರ್ಶೆಯಿಂದ ನಿಶ್ಚಯ ಮಾಡುವುದಕ್ಕೆ ವಿಚಿಕಿತ್ಸಾಪದ ಬೋಧ್ಯವಾಗಿರುವುದು ಎಂದು ಅರ್ಥವನ್ನು ವಿವರಿಸಿದ್ದಾರೆ. **ನ ನೂನಂ** ಎಂಬ ಮೇಲಿನ ಋಕ್ಕಿನಲ್ಲಿ **ನೂನಂ** ಎಂಬ ಶಬ್ದವು ವಿಚಿಕಿತ್ಸಾ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂಬುದನ್ನು ತೋರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿನ ನಿರ್ವಚನವನ್ನು ಹೇಳಿದ್ದಾರೆ.

ಅಗಸ್ತ್ಯ ಋಷಿಯು ಇಂದ್ರನಿಗಾಗಿ ಹವಿಸ್ಸನ್ನು ಸಿದ್ಧಪಡಿಸಿ ಅದನ್ನು ಇಂದ್ರನಿಗೆ ಅರ್ಪಿಸದೆ ಮರುದ್ದೇವತೆಗಳಿಗೆ ಅರ್ಪಿಸಲು ಇಚ್ಛಿಸಿದಾಗ ಇಂದ್ರನು ತನಗೆ ಅರ್ಪಿತವಾಗಬೇಕಾದ ಹವಿಸ್ಸು ಬೇರೆ ವಿಧವಾಗಿ ಅರ್ಪಿತವಾಗುವ ಕಾರಣ ತನ್ನ ಮನಸ್ಸಿನ ಖೇದವನ್ನು ಈ ಮಂತ್ರದಿಂದ ಸೂಚಿಸಿರುವನು. ಈಗ ನನಗಾಗಿ ಸಿದ್ಧಮಾಡಿದ ಹವಿಸ್ಸು ನನಗೆ ಸಿಕ್ಕದಿರುವಾಗ ನಾಳೆಯಾದರೂ ನಾವು ಹವಿಸ್ಸನ್ನು ಹೊಂದುತ್ತೇವೆ ಎಂದು ನಿಶ್ಚಯವಾಗಿ ನಂಬಿಕೆಯನ್ನು ಹೊಂದುವುದು ಹೇಗೆ? ಎಂದು ಇಂದ್ರನ ಖೇದವು ಮತ್ತು ಒಬ್ಬರ ಉದ್ದೇಶದಿಂದ ಹವಿಸ್ಸನ್ನು ಸಿದ್ಧಮಾಡಿ ಅದನ್ನು ಇನ್ನೊಬ್ಬರಿಗೆ ಅರ್ಪಿಸುವ ಕಾರ್ಯವು ಉಂಟಾಗುವುದೆಂದು ತಿಳಿದವರು ಯಾರೂ ಇಲ್ಲ. ಭವಿಷ್ಯತ್ಕಾಲದಲ್ಲಿ ಯಾವ ಕಾರ್ಯವು ಸಂಭವಿಸುವುದು ಎಂಬುವನ್ನು ಯಾರೂ ತಿಳಿಯದಿರುವ ಕಾರಣ ಈಗಲಾದರೂ ಅಥವಾ ನಾಳೆಯಾದರೂ ನನಗೆ ಸಿದ್ಧವಾದ ಹವಿಸ್ಸು ದೊರಕುವ ವಿಷಯದಲ್ಲಿ ಆಸೆಯನ್ನು ಹೊಂದ

ಲಾಗುವುದಿಲ್ಲ, ಇತರರ ಮನಸ್ಸು ಯಾವಾಗಲೂ ಸಂಚರಿಸುವ (ಬದಲಾಯಿಸುವ) ಸ್ವಭಾವವುಳ್ಳದ್ದಾಗಿರುವುದೇ ಹೊರತು ಸ್ಥಿರವಾಗಿರುವುದಿಲ್ಲ. ಆದಾಗ್ಯೂ ಇಂದ್ರನಾದ ನನಗೋಸ್ಕರ ಸಿದ್ಧಪಡಿಸಿರುವ ಹವಿಸ್ಸು ನನಗೆ ದೊರಕುವುದು ಎಂದು ನಿಶ್ಚಯವಾಗಿ ತಿಳಿದುಕೊಂಡಿದ್ದರೂ ಅದು ನನಗೆ ದೊರಕಲಿಲ್ಲ. ಈ ಹವಿಸ್ಸಿನ ಅಪ್ರಾಪ್ತಿಯನ್ನು ಯಾರು ತಾನೇ ತಿಳಿಯಬಲ್ಲರು ? ಎಂದು ಇಂದ್ರನು ವಿಷಾದವನ್ನೂ ಆಗ್ರಹವನ್ನೂ ವ್ಯಕ್ತಪಡಿಸಿದ್ದಾನೆ.

**ನೂನಂ** ಎಂಬ ಪದವು ವಿವೇಕಪೂರ್ವಕವಾಗಿ ವಿಮರ್ಶೆಮಾಡಿ ನಿಶ್ಚಯವನ್ನು ಬೋಧಿಸುವುದು. ಪ್ರಕಾಶ ಅಥವಾ ಬೆಳಕಿನಿಂದ ಬೆಳಗುತ್ತಿರುವುದು ಎಂಬ ಅರ್ಥವನ್ನು ಬೋಧಿಸುವ ದ್ಯುತ್ ಧಾತುವಿನಿಂದ ನಿಷ್ಪನ್ನವಾದ ದ್ಯವಿ ಶಬ್ದವು ಅಹಸ್ಸಿನ (ಹಗಲಿನ) ವಾಚಕವಾಗಿ ಇಲ್ಲಿ ಅದ್ಯತನ ಶಬ್ದದಿಂದ ನಿರ್ದಿಷ್ಟವಾಗಿದೆ. ಈ ಹಗಲಿನಲ್ಲಿ ದೊರಕುವುದೆಂಬುದಾಗಿ ನಿಶ್ಚಯ ವಿಷಯವಾದುದು ದೊರಕದೆ ಇರುತ್ತದೆ. ಇದೇ ಇಲ್ಲದಿರುವಾಗ (ಮುಂದೆ) ಆಶೆಯು ವ್ಯರ್ಥವಾಗಬಹುದೆಂದು ಸಂಭಾವನಾವಿಷಯವಾದ ಕಾಲದಲ್ಲಿಯೂ ಹವಿಸ್ಸು ನನಗೆ ದೊರಕುವುದಿಲ್ಲವೆಂಬ ನಿಶ್ಚಯವೂ ಇಲ್ಲ ಎಂದು ಅರ್ಥವನ್ನು ವರ್ಣಿಸಿ ಶ್ವಃ ಎಂಬ ಪದವು ಆಶಂಸೆಯನ್ನು ಪೂರ್ಣವಾಗಬಹುದಾದ ಆಶಂಸನೀಯ ಕಾಲವಾಚಕನೆಂದೂ ಹ್ಯಃ ಎಂಬ ಪದವು ಕಳೆದುಹೋದ ಕಾಲವಾಚಕವೆಂದೂ ವಿವೃತವಾಗಿದೆ. ಅದ್ಭುತ ಶಬ್ದಕ್ಕೆ ಅಭೂತ್ (ಆಯಿತು) ಎಂದು ಭೂತಕಾಲದ ಅರ್ಥವನ್ನು ವಿವರಿಸಿ ಈಗ ನನಗೋಸ್ಕರ ಸಿದ್ಧವಾದುದು ನನಗೇ ಇಲ್ಲದಿರುವಾಗ ಮುಂದೆ ಯಾರಾದರೂ ನನಗಾಗಲಿ ಇನ್ನೊಬ್ಬನಿಗಾಗಲಿ ದೊರಕುವುದೆಂಬ ನಿಶ್ಚಯವು (ಭರವಸೆ) ಯಾರಿಗೆ ತಾನೇ ಉಂಟಾಗುವುದು ಎಂಬ ಅರ್ಥವನ್ನು ಹೇಳಿದೆ. **ಅನ್ಯಸ್ಯ ಚಿತ್ತಂ** ಇತರರ ಮನಸ್ಸು **ಅಭಿಸಂಚರೇಣ್ಯಂ** ಸಂಚಾರಶೀಲವಾಗಿ ಎಂದರೆ ಚಂಚಲಸ್ವಭಾವದಿಂದ ಇರುವುದು ಆದಕಾರಣ ಈಗ ಸಿದ್ಧವಾದುದು ನನಗೆ ದೊರಕುವುದಿಲ್ಲನೆಂದು ಅರ್ಥಮಾಡಿದೆ ಮತ್ತು ಉತ, ಅಪಿ, ಅಥ ಎಂಬ ಪದಗಳು ವೇದದಲ್ಲಿ ಒಂದೆ ವಿಧವಾದ ಅರ್ಥವನ್ನು ಬೋಧಿಸುವ ಪರ್ಯಾಯಪದಗಳಾಗಿರುತ್ತವೆ ಎಂದು ಉಕ್ತವಾಗಿದೆ. ಚಿತ್ತಂ ಎಂಬ ಶಬ್ದವು ಚಿತ್–ತಿಳಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಚಿತ್ತಂ ಎಂದರೆ ತಿಳಿದುಕೊಳ್ಳಲು ಶಕ್ತಿ ಇರುವ ಮನಸ್ಸು.

**ಇತಿ ಪ್ರಥಮಾಧ್ಯಾಯೇ ಷಷ್ಠಃ ಖಂಡಃ**
ಇಲ್ಲಿಗೆ ಆರನೆಯ ಖಂಡವು ಸಮಾಪ್ತವು



ಅಥ ಸಪ್ತಮಃ ಖಂಡಃ
**ಏಳನೆಯ ಖಂಡವು**

---

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ
ದಕ್ಷಿಣಾ ಮಘೋನೀ। ಶಿಕ್ಷಾ ಸ್ತೋತೃಭ್ಯೋ ಮಾತಿ
ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥
(ಋ. ಸಂ. ೨–೧೬–೯) ಸಾ ತೇ ಪ್ರತಿದುಗ್ಧಾಂ ವರಂ ಜರಿತ್ರೇ
ವರೋ ವರಯಿತವ್ಯೋ ಭವತಿ ಜರಿತಾ ಗರಿತಾ ದಕ್ಷಿಣಾ

ಮಘೋನೀ ಮಘವತೀ ಮಘಮಿತಿ ಧನನಾಮಧೇಯಂ ಮಹಂತೇರ್ದಾನಕರ್ಮಣೋ ದಕ್ಷಿಣಾ ದಕ್ಷತೇಃ ಸಮರ್ಧಯತಿಕರ್ಮಣೋ ವ್ಯೃದ್ಧಂ ಸಮರ್ಧಯತೀತ್ಯಪಿ ವಾ ಪ್ರದಕ್ಷಿಣಾಗಮನಾದ್ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿರ್ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣೋ ದಾಶತೇರ್ವಾ ಸ್ಯಾದ್ದಾನಕರ್ಮಣೋ ಹಸ್ತೋ ಹಂತೇಃ ಪ್ರಾಶುರ್ಹನನೇ ದೇಹಿ ಸ್ತೋತೃಭ್ಯಃ ಕಾಮಾನ್ಮಾಸ್ಮಾನತಿದಂಹೀರ್ಮಾಸ್ಮಾನತಿಹಾಯ ದಾ ಭಗೋ ನೋ ಅಸ್ತು ಬೃಹದ್ವದೇಮ ಸ್ವೇ ವೇದನೇ ಭಗೋ ಭಜತೇರ್ಬೃಹದಿತಿ ಮಹತೋ ನಾಮಧೇಯಂ ಪರಿವೃಢಂ ಭವತಿ ವೀರವಂತಃ ಕಲ್ಯಾಣವೀರಾ ವಾ ವೀರೋ ವೀರಯತ್ಯಮಿತ್ರಾನ್ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವಾ ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ। ಪ್ರ ಸೀಮಾದಿತ್ಯೋ ಅಸೃಜತ್। ಪ್ರಾಸೃಜದಿತಿ ವಾ ಪ್ರಾಸೃಜತ್ಸರ್ವತ ಇತಿ ವಾ ವಿಸೀಮತಃ ಸುರುಚೋ ವೇನ ಆವರಿತಿ ಚ ವ್ಯವೃಣೋತ್ಸರ್ವತ ಆದಿತ್ಯಃ ಸುರುಚ ಆದಿತ್ಯರಶ್ಮಯಃ ಸುರೋಚನಾದಪಿ ವಾ ಸೀಮೇತ್ಯೇತದನರ್ಥಕಮುಪಬಂಧಮಾದದೀತ ಪಂಚಮೀಕರ್ಮಾಣಂ ಸೀಮ್ನಃ ಸೀಮತಃ ಸೀಮಾತೋ ಮರ್ಯಾದಾತಃ ಸೀಮಾ ಮರ್ಯಾದಾ ವಿಷೀವ್ಯತಿ ದೇಶಾವಿತಿ ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಮರ್ಧನಾಮೇತ್ಯೇಕೇ ॥ ೭ ॥

ನೂನಂ ಎಂಬ ಪದವು ವಿಶೇಷಾರ್ಥವನ್ನೇನೂ ಉಂಟುಮಾಡದೆ ಪದ (ವಾಕ್ಯ) ಪೂರಣಕ್ಕಾಗಿ ಉಪಯೋಗಿಸಲ್ಪಡುವುದೆಂಬುದನ್ನು **ನೂನಂ ಸಾತೇ** ಎಂಬ ಋಕ್ಕಿನ ನಿರ್ವಚನಪೂರ್ವಕವಾದ ಉದಾಹರಣೆಯಿಂದ ವಿವರಿಸುವರು—

ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ
ಮಘೋನೀ। ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ
ಬೃಹದ್ವದೇಮ ವಿದಥೇ ಸುವೀರಾಃ ॥

ಎಲೈ ಇಂದ್ರನೇ ನಿನ್ನಿಂದ ದತ್ತವಾಗತಕ್ಕದ್ದೂ ಪ್ರಭೂತವಾದ ಸಂಪತ್ತುಳ್ಳದ್ದೂ ಆದ ಆ ದಕ್ಷಿಣೆಯು (ಸಂಭಾವನೆಯು) ಸ್ತುತಿಕರ್ತನಾದ ಯಜಮಾನನಿಗೆ ಖಂಡಿತವಾಗಿಯೂ ಇಷ್ಟಾರ್ಥವನ್ನು ಶ್ರೇಷ್ಠವಾದ ರೀತಿಯಲ್ಲಿ ಪೂರೈಸುತ್ತದೆ. ಅಂತಹ ದಕ್ಷಿಣೆಯನ್ನು ಸ್ತುತಿಕರ್ತರಾದ ನಮಗೂಕೂಡ ಪೂಜ್ಯನಾದ ನೀನು ನಮ್ಮನ್ನು ತಿರಸ್ಕರಿಸಬೇಡ—ಶ್ರೇಷ್ಠರಾದ ಅಥವಾ ವೀರರಾದ ಪುತ್ರರಿಂದೊಡಗೂಡಿದ ನಾವು ಈ ಯಜ್ಞದಲ್ಲಿ ಪ್ರಭೂತವಾದ ಸ್ತೋತ್ರವನ್ನು ಪಠಿಸುತ್ತೇವೆ. ಇದು ಈ ಋಕ್ಕಿನ ಸಾಮಾನ್ಯಾರ್ಥವು. ಈಗ ಇದರಲ್ಲಿರುವ ಪದಗಳ ನಿರ್ವಚನವನ್ನು ವಿವರಿಸುತ್ತೇವೆ—

ಸಾ ತೇ ಪ್ರತಿದುಗ್ಧಾಂ ವರಂ ಜರಿತ್ರೇ ವರೋ ವರಯಿತವ್ಯೋ ಭವತಿ ಜರಿತಾ ಗರಿತಾ ದಕ್ಷಿಣಾ ಮಘೋನೀ ಮಘವತೀ ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣೋ ದಕ್ಷಿಣಾ ದಕ್ಷತೇಃ ಸಮರ್ಧಯತಿಕರ್ಮಣೋ ವ್ಯೃದ್ಧಂ ಸಮರ್ಧಯತೀತ್ಯಪಿ ವಾ ಪ್ರದಕ್ಷಿಣಾಗಮನಾದ್ದಿಶಮಭಿಪ್ರೇತ್ಯ ದಿಗ್ಘಸ್ತಪ್ರಕೃತಿರ್ದಕ್ಷಿಣೋ ಹಸ್ತೋ ದಕ್ಷತೇರುತ್ಸಾಹಕರ್ಮಣೋ ದಾಶತೇರ್ವಾ ಸ್ಯಾದ್ದಾನಕರ್ಮಣೋ ಹಸ್ತೋ ಹಂತೇಃ ಪ್ರಾಶುರ್ಹನನೇ ದೇಹಿ ಸ್ತೋತೃಭ್ಯಃ ಕಾಮಾನ್ಮಾಸ್ಮಾನತಿದಂಹೀರ್ಮಾಸ್ಮಾನತಿಹಾಯ ದಾಃ ಭಗೋ ನೋ ಅಸ್ತು ಬೃಹದ್ವದೇಮ ಸ್ವೇ ವೇದನೇ ಭಗೋ ಭಜತೇರ್ಬೃಹದಿತಿ ಮಹತೋ ನಾಮಧೇಯಂ ಪರಿವೃಢಂ ಭವತಿ ವೀರವಂತಃ ಕಲ್ಯಾಣ ವೀರಾ ವಾ ವೀರೋ ವೀರಯತ್ಯಮಿತ್ರಾನ್ವೇತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವಾ



**ವರೋ ವರಯಿತವ್ಯೋ ಭವತಿ** ವರ ಎಂದರೆ ತನಗೆ ಬೇಕಾದ ಇಷ್ಟಾರ್ಥವನ್ನು ಬೇಡಿಕೊಳ್ಳುವುದು, ಆರಿಸಿಕೊಳ್ಳುವುದು, ಎಂದರ್ಥವು **ಜರಿತಾ** ಎಂದರೆ **ಗರಿತಾ** ಈ ಶಬ್ದವು ಸ್ತುತಿಸು ಎಂಬರ್ಥವುಳ್ಳ ಗಿರತಿಧಾತುವಿನಿಂದ ನಿಷ್ಪನ್ನವಾಗಿದೆ. **ಮಘ**ವೆಂದರೆ ಧನ, ಐಶ್ವರ್ಯವೆಂದರ್ಥವು. ಮಘ ಶಬ್ದವು ಕೊಡು, ದಾನಮಾಡು ಎಂಬರ್ಥವಿರುವ **ಮಂಹತಿ** ಧಾತುವಿನಿಂದ ನಿಷ್ಪನ್ನವಾಗಿದೆ. **ದಕ್ಷಿಣಾ** ಶಬ್ದವು ದಕ್ಷತಿ ಧಾತುವಿನಿಂಧ ನಿಷ್ಪನ್ನವಾಗಿದೆ. ಸರಿಯಾಗಿ ಮಾಡಿಲ್ಲದಿರುವ ಕೆಲಸವನ್ನು ಚೆನ್ನಾಗಿ ಮಾಡುವುದು ಎಂದು ಅರ್ಥವು ; ಮತ್ತು ಯಜ್ಞಕ್ಕೆ ಸಾಧನವಾದ ಋತ್ವಿಜರಿಗೆ ಕೊಡಬೇಕಾದ **ದಕ್ಷಿಣೆ** ಅಥವಾ ಸಂಭಾವನೆಯು ; ಮತ್ತು **ಅಪಿ ವಾ ಪ್ರದಕ್ಷಿಣಾಗಮನಾತ್** ಪೂರ್ವದಿಕ್ಕಿನಿಂದ ಹೊರಟು ಪ್ರದಕ್ಷಿಣಾಕಾರವಾಗಿ ಬಂದರೆ ಸಿಕ್ಕುವ ಒಂದು ದಿಕ್ಕು ಇದಕ್ಕೆ ದಕ್ಷಿಣದಿಕ್ಕೆಂದು ಹೇಳುವರು. **ದಕ್ಷಿಣಾ**ಶಬ್ದವು ಅಥವಾ **ದಕ್ಷ** ಶಬ್ದವು ಚೆನ್ನಾಗಿ ಕೆಲಸಮಾಡು ಎಂಬರ್ಥವಿರುವ **ದಕ್ಷತಿ** ಧಾತುವಿನಿಂದ ಉತ್ಪನ್ನವಾಗಿ ಚೆನ್ನಾಗಿ ಕೆಲಸಮಾಡುವ ಬಲಗೈ ಎಂದೂ ಅರ್ಥವಾಗುವುದು. ಅಥವಾ ದಕ್ಷಿಣಾ ಶಬ್ದವು ದಾನಮಾಡು ಎಂಬರ್ಥವುಳ್ಳ **ದಾಶತಿ** ಧಾತುವಿನಿಂದಲೂ ನಿಷ್ಪನ್ನವಾಗಬಹುದು. **ಹಸ್ತ** ಶಬ್ದವು,

ಹೊಡಿ ಕತ್ತರಿಸು (ಎಂದರೆ ಕೈಯಿಂದ ಹೊಡಿ) ಎಂಬ ಅರ್ಥವುಳ್ಳ **ಹಂತಿ** ಧಾತುವಿನಿಂದ ನಿಷ್ಪನ್ನವಾಗಿ ಕೈ ಎಂಬರ್ಥವನ್ನು ಸೂಚಿಸುವುದು. **ಪ್ರಾಶುಃ** ಎಂದರೆ ಶೀಘ್ರವಾಗಿ ಎಂದರ್ಥವು. ಭಗಶಬ್ದವು ಹಂಚು (ಕೊಡು) ಎಂಬರ್ಥವುಳ್ಳ **ಭಜತಿ** ಧಾತುವಿನಿಂದ ನಿಷ್ಪನ್ನವಾಗಿದೆ. **ಬೃಹದಿತಿ ಮಹತೋ ನಾಮಧೇಯಂ ಪರಿವೃಢ್ಣಂ ಭವತಿ-ಬೃಹತ್** ಎಂಬ ಶಬ್ದವು ಬಹಳ ದೊಡ್ಡದು ಎಂಬ ಅರ್ಥವನ್ನು ಸೂಚಿಸುವುದು. **ವೀರವಂತಃ ಕಲ್ಯಾಣವೀರಾ ವಾ**—ಕಲ್ಯಾಣ ಅಥವಾ ಒಳ್ಳೇ ಗುಣವಾದ ವೀರತ್ವ ಅಥವಾ ಪರಾಕ್ರಮದಿಂದ ಕೂಡಿದ ವೀರರು, ಯುದ್ಧಭಟರು ಎಂದರ್ಥವು. **ವೀರಯತ್ಯಮಿತ್ರಾನ್**—ವಿ + **ಈರಯತಿ** + **ಅಮಿತ್ರಾನ್ (ಶತ್ರೂನ್)**—ಶತ್ರುಗಳನ್ನು ಸದೆಬಡಿಯುವ ಪರಾಕ್ರಮಶಾಲಿಯು ; ಅಥವಾ ಗತ್ಯರ್ಥಕವಾದ ವೀತಿ ಧಾತುವಿನಿಂದ ವೀರಶಬ್ದವು ನಿಷ್ಪನ್ನವಾಗಬಹುದು ; ಅಥವಾ ಶಕ್ತಿಯನ್ನು ವ್ಯಕ್ತಪಡಿಸು ಎಂಬರ್ಥವುಳ್ಳ **ವೀರಯತಿ** ಧಾತುವಿನಿಂದಲಾದರೂ **ವೀರ** (ಶಕ್ತಿಯುಳ್ಳವನು) ಎಂಬ ಶಬ್ದವು ನಿಷ್ಪನ್ನವಾಗಬಹುದು.

ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ

**ಸೀಂ** ಎಂಬ ಪದವು ಪರಿಗ್ರಹಾರ್ಥದಲ್ಲಿ (ಎಲ್ಲವನ್ನೂ ಎಂಬರ್ಥದಲ್ಲಿ) ಅಥವಾ ಪದಪೂರಣಕ್ಕಾಗಿ (ಈ ಸಂದರ್ಭದಲ್ಲಿ **ಸೀಂ** ಎಂಬ ಪದಕ್ಕೆ ಯಾವ ಅರ್ಥವೂ ಇಲ್ಲ) ಉಪಯೋಗಿಸಲ್ಪಡುವುದು. ಇವನ್ನು ಸ್ಪಷ್ಟಪಡಿಸುವುದಕ್ಕಾಗಿ ಎರಡು ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವರು.

ಪ್ರಸೀಮಾದಿತ್ಯೋ ಅಸೃಜತ್ ಪ್ರಾಸೃಜದಿತಿ ವಾ ಪ್ರಾಸೃಜತ್ಸರ್ವತ ಇತಿ ವಾ । ವಿಸೀಮತಃ ಸುರುಚೋ ವೇನ ಆವಃ ಇತಿ ಚ । ವ್ಯವೃಣೋತ್ ಸರ್ವತ ಆದಿತ್ಯಃಸುರುಚ ಆದಿತ್ಯರಶ್ಮಯಃ ಸುರೋಚನಾತ್ । ಅಪಿ ವಾ ಸೀಮೇತ್ಯೇತದನರ್ಥಕಮುಪ-ಬಂಧಮಾದದೀತ ಪಂಚಮೀಕರ್ಮಾಣಂ ಸೀಮ್ನಃ ಸೀಮತಃ ಸೀಮಾತೋ ಮರ್ಯಾದಾತಃ । ಸೀಮಾ ಮರ್ಯಾದಾ ವಿಸೀವ್ಯತಿ ದೇಶಾವಿತಿ ।

**ಪ್ರಸೀಮಾದಿತ್ಯೋ ಅಸೃಜತ್ ವಿಧರ್ತಾ ಋತಂ ಸಿಂಧವೋ ವರುಣಸ್ಯಯಂತಿ । ನ ಶ್ರಾಮ್ಯಂತಿ ನ ವಿಮುಂಚಂತ್ಯೇತೇ ವಯೋ ನ ಪಪ್ತೂ ರಘುಯಾ ಪರಿಜ್ಮನ್ ॥** (ಋ. ಸಂ. ೨-೨೮-೪) ಮತ್ತು **ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ । ಸ ಬುಧ್ನ್ಯಾ ಉಪಮಾ ಅಸ್ಯ ವಿಷ್ಠಾ ಸತಶ್ಚ ಯೋನಿಮಸತಶ್ಚ ವಿವಃ ॥** (ವಾ. ಸಂ. ೧೩-೩). ಈ ಎರಡು ಋಕ್ಕುಗಳೂ ಎರಡು ಉದಾಹರಣೆಗಳು. ಇವುಗಳಲ್ಲಿ ಕಂಡು ಬರುವ **ಸೀಂ** ಮತ್ತು **ಸೀಮತಃ** ಎಂಬ ಪದಗಳಿಗೆ **ಸರ್ವತಃ** – ಎಲ್ಲಾ ಕಡೆಗಳಿಗೂ ಎಂದು ಅರ್ಥವನ್ನು ಹೇಳಬಹುದು ಅಥವಾ ಇವುಗಳಿಗೆ ಯಾವ ವಿಶೇಷಾರ್ಥವೂ ಇಲ್ಲವೆಂದು ಪರಿಗಣಿಸಬಹುದು. ಇಲ್ಲಿ **ಪ್ರಸೀಮಾದಿತ್ಯೋ ಅಸೃಜತ್** ಎಂಬ ವಾಕ್ಯಕ್ಕೆ ಆದಿತ್ಯನು ತನ್ನ ರಶ್ಮಿಗಳನ್ನು ಸೃಷ್ಟಿಸಿದನು ಅಥವಾ ವಿಸ್ತಾರವಾಗಿ ಹರಡಿದನು ಎಂದು ಒಂದು ಅರ್ಥವು. ಇಲ್ಲಿ **ಸೀಂ** ಎಂಬ ಪದಕ್ಕೆ ಯಾವ ಅರ್ಥವೂ ಇಲ್ಲ. ಕೇವಲ ಪದಪೂರಣಾರ್ಥವಾಗಿ ಉಪಯೋಗಿಸಲ್ಪಟ್ಟಿರುವುದು. ಮತ್ತು **ಪ್ರಾಸೃಜತ್ ಸರ್ವತ ಇತಿ ವಾ**—ಆದಿತ್ಯನು ತನ್ನ ರಶ್ಮಿಗಳನ್ನು ಸರ್ವತಃ – ಎಲ್ಲಾ ಕಡೆಗಳಲ್ಲಿಯೂ ಹರಡಿದನು ಎಂದು ಅರ್ಥ ಮಾಡಿದರೆ

**ಸೀಂ** ಎಂಬ ಪದಕ್ಕೆ ಎಲ್ಲಾ ಕಡೆಗಳಲ್ಲಿಯೂ ಎಂಬ ಅರ್ಥವಿರುವುದು. ಎರಡನೆಯ ಉದಾಹರಣೆಯಾದ **ಬ್ರಹ್ಮ ಜಜ್ಞಾನಂ** ಎಂಬ ಋಕ್ಕಿನಲ್ಲಿ **ವಿಸೀಮತಃ ಸುರುಚೋ ವೇನ ಆವಃ** ಎಂಬ ವಾಕ್ಯದಲ್ಲಿ **ವ್ಯವೃಣೋತ್ ಸರ್ವತ ಆದಿತ್ಯಃ ಸುರುಚಃ** ಆದಿತ್ಯನು ತನ್ನ ಕಿರಣಗಳನ್ನು **ಸೀಮತಃ–ಸರ್ವತಃ** ಎಲ್ಲಾ ಕಡೆಗಳಲ್ಲಿಯೂ ಹರಡಿದನು ಎಂಬ ಅರ್ಥವನ್ನು ಸ್ಪಷ್ಟವಾಗಿ ಹೇಳಿದೆ. ಇಲ್ಲಿ ಪದಪೂರಣದ ವಿಚಾರವೇ ಇಲ್ಲ. ಅರ್ಥವೇ ಸ್ಪಷ್ಟವಾಗಿರುವುದು. **ಸುರುಚಃ** ಎಂದರೆ ಪ್ರಕಾಶಮಾನವಾಗಿ ಬೆಳಗುತ್ತಿರುವ ಆದಿತ್ಯನ ರಶ್ಮಿಗಳು ಎಂದರ್ಥವು. ಮತ್ತು ಪಂಚಮೀ ವಿಭಕ್ತಿ ರೂಪಗಳಾದ **ಸೀಮ್ನಃ ಸೀಮತಃ ಸೀಮಾತಃ ಮರ್ಯಾದಾತಃ** ಎಂಬ ಪದಗಳು ಅನೇಕ ಸಂದರ್ಭಗಳಲ್ಲಿ ಯಾವ ವಿಶೇಷಾರ್ಥವೂ ಇಲ್ಲದೆ ಉಪಯೋಗಿಸಲ್ಪಡುವುದುಂಟು. ಸೀಮಾ ಎಂದರೆ ಮರ್ಯಾದೆ, ಮಿತಿ, ಗಡಿ ಎರಡುಪ್ರದೇಶಗಳನ್ನು ಪ್ರತ್ಯೇಕಿಸುವ ಗಡಿ ಎಂದರ್ಥವು.

ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ ॥

ತ್ವಃ ಎಂಬ ಪದವು ವಿನಿಗ್ರಹಾರ್ಥದಲ್ಲಿ ಸರ್ವನಾಮಪದವಾಗಿ ಉಪಯೋಗಿಸಲ್ಪಡುವುದು. ಕೆಲವರು ಇದನ್ನು ನಿಪಾತವೆಂದೂ ಹೇಳುವರು. ಈ ಪದವು ಅನುದಾತ್ತಸ್ವರವುಳ್ಳದ್ದಾಗಿರುವುದು.

ಅರ್ಧನಾಮೇತ್ಯೇಕೇ ।

ಕೆಲವರು **ತ್ವಃ** ಎಂಬ ಪದಕ್ಕೆ ಅರ್ಧವೆಂಬ ಅರ್ಥವಿರುವುದೆಂದು ಹೇಳುವರು ॥

**ಇತಿ ಪ್ರಥಮಾಧ್ಯಾಯೇ ಸಪ್ತಮಃ ಖಂಡಃ**

**ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು.**

## ಅಥ ಪ್ರಥಮಾಧ್ಯಾಯೇಽಷ್ಟಮಃ ಖಂಡಃ

### ಎಂಟನೆಯ ಖಂಡವು

---

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ಗಾಯತ್ರಂ ತ್ವೋ ಗಾಯತಿ ಶಕ್ವರೀಷು । ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉತ್ವಃ ॥ (ಋ. ಸಂ. ೧೦–೭೧–೧೧) ಇತ್ಯೃತ್ವಿಕ್ಕರ್ಮಣಾಂ ವಿನಿಯೋಗಮಾಚಷ್ಟ ಋಚಾಮೇಕಃ ಪೋಷಮಾಸ್ತೇ ಪುಪುಷ್ವಾನ್ ಹೋತರ್ಗರ್ಚನೀ ಗಾಯತ್ರಮೇಕೋ ಗಾಯತಿ ಶಕ್ವರೀ–

ಷೂದ್ಗಾತಾ ಗಾಯತ್ರಂ ಗಾಯತೇಃ ಸ್ತುತಿಕರ್ಮಣಃ ಶಕ್ವರ್ಯ ಋಚಃ ಶಕ್ನೋತೇಸ್ತದ್ಯದಾಭಿರ್ವೃತ್ರಮಶಕದ್ಧಂತುಂ ತಚ್ಛಕ್ವರೀಣಾಂ ಶಕ್ವರೀತ್ವಮಿತಿ ವಿಜಾಯತೇ ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ ಬ್ರಹ್ಮಾ ಪರಿವೃಢಃ ಶ್ರುತತೋ ಬ್ರಹ್ಮ ಪರಿವೃಢಂ ಸರ್ವತೋ ಯಜ್ಞಸ್ಯ ಮಾತ್ರಾಂ ವಿಮಿಮೀತ ಏಕೋಽಧ್ವರ್ಯುರಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾಪಿ ವಾಧೀಯಾನೇ ಯುರುಪಬಂಧೋಽಧ್ವರ ಇತಿ ಯಜ್ಞನಾಮ ಧ್ವರತಿರ್ಹಿಂಸಾ ಕರ್ಮಾ ತತ್ಪ್ರತಿಷೇಧೋ ನಿಪಾತ ಇತ್ಯೇಕೇ ತತ್ಕಥಮನುದಾತ್ತ ಪ್ರಕೃತಿ ನಾಮ ಸ್ಯಾದ್ದೃಷ್ಟವ್ಯಯಂ ತು ಭವತ್ಯುತ ತ್ವಂ ಸಖ್ಯೇ ಸ್ಥಿರಪೀತಮಾಹುರಿತಿ ದ್ವಿತೀಯಾಯಾಮುತೋ ತ್ವಸ್ಮೈ ತನ್ವಂ ವಿಸಸ್ರ ಇತಿ ಚತುರ್ಥ್ಯಾಮಥಾಪಿ ಪ್ರಥಮಾಬಹುವಚನೇ ||೮||



**ಋಚಾಂ ತ್ವಃ** ಎಂಬ ಋಕ್ಕಿನಲ್ಲಿ ಋತ್ವಿಕ್ಕುಗಳು ಯಜ್ಞದಲ್ಲಿ ನಿರ್ವಹಿಸಬೇಕಾದ ಕರ್ತವ್ಯವನ್ನು ನಿರ್ದೇಶಿಸಲಾಗಿದೆ–

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ<br>
ಗಾಯತಿ ಶಕ್ವರೀಷು। ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ<br>
ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ||<br>
(ಋ. ಸಂ. ೧೦–೭೧–೧೧)

ಈ ಋಕ್ಕಿನಲ್ಲಿರುವ ನಾಲ್ಕು ಪಾದಗಳಲ್ಲಿಯೂ ನಾಲ್ಕು ಮಂದಿ ಋತ್ವಿಜರ ಕರ್ತವ್ಯವನ್ನು ನಿರ್ದೇಶಿಸಲಾಗಿದೆ. ಹೇಗೆಂದರೆ—ಮೊದಲನೆಯ ಪಾದದಲ್ಲಿ ಹೋತೃವಿನ ಕರ್ತವ್ಯವನ್ನೂ, ಎರಡನೆಯ ಪಾದದಲ್ಲಿ ಉದ್ಗಾತೃವಿನ ಕರ್ತವ್ಯವನ್ನೂ, ಮೂರನೆಯ ಪಾದದಲ್ಲಿ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವನ್ನೂ, ನಾಲ್ಕನೆಯ ಪಾದದಲ್ಲಿ ಅಧ್ವರ್ಯುವೆಂಬ ಋತ್ವಿಜನ ಕರ್ತವ್ಯವನ್ನೂ ಹೇಳಲಾಗಿದೆ. ಈಗ ಅವುಗಳನ್ನು ಒಂದೊಂದಾಗಿ ವಿವರಿಸಲಾಗುವುದು:—

ಇತ್ಯೃತ್ವಿಕ್ಕರ್ಮಣಾಂ ವಿನಿಯೋಗಮಾಚಷ್ಟೇ ॥

ಮೇಲೆ ಹೇಳಿದಂತೆ, ನಾಲ್ಕು ಜನ ಋತ್ವಿಕ್ಕುಗಳ ಎಂದರೆ, ಹೋತೃ (ಋಗ್ವೇದ) ಉದ್ಗಾತೃ (ಸಾಮವೇದ), ಬ್ರಹ್ಮಾ (ಎಲ್ಲಾ ವೇದಗಳು) ಮತ್ತು ಅಧ್ವರ್ಯು (ಯಜುರ್ವೇದ) ಎಂಬ ನಾಲ್ಕು ಮಂದಿ ಋತ್ವಿಕ್ಕುಗಳು ಮಾಡಬೇಕಾದ ಕರ್ತವ್ಯ ಕರ್ಮಗಳನ್ನು ವಿವರಿಸಲಾಗಿದೆ—

ಋಚಾಂ ತ್ವಃ ಪೋಷಮಾಸ್ತೇ–ಋಚಾಮೇಕಂ ಪೋಷಮಾಸ್ತೇ
ಪುಪುಷ್ವಾನ್ ಹೋತರ್ಗಚತರ್ಾನೀ ॥

ಇಲ್ಲಿ ತ್ವಃ ಎಂದರೆ ಒಬ್ಬನು (ಹೋತೃವು). ಯಜ್ಞಕರ್ಮವು ನೆರವೇರುತ್ತಿರುವಾಗ (ಹೋತೃವೆಂಬ) ಒಬ್ಬ ಋತ್ವಿಜನು ಋಕ್ಕುಗಳ ಪೋಷಣೆಮಾಡುವನು. ಎಂದರೆ, ಆಯಾ ಕರ್ಮಗಳಿಗೆ ಅನುಸಾರವಾದ ಋಙ್ಮಂತ್ರಗಳನ್ನು ಪಠಿಸಿ ಯಜ್ಞಕರ್ಮವು ಮುಂದುವರಿಯುವಂತೆ ಮಾಡುವನು. ಋಙ್ಮಂತ್ರಗಳು ಯಜ್ಞಾದಿಗಳನ್ನು ಮಾಡುವಾಗ ಉಪಯೋಗಿಸಲ್ಪಡಬೇಕು. ಎಂದರೆ, ದೇವತೆಗಳನ್ನು ಆಹ್ವಾನಮಾಡುವಾಗಲೂ, ಸ್ತುತಿಸುವಾಗಲೂ, ಇತರ ಕರ್ಮಗಳನ್ನು ಮಾಡುವಾಗಲೂ ಯಾವಾಗಲೂ ಋಗ್ವೇದದ ಋಕ್ಕುಗಳನ್ನೇ ಪಠಿಸಬೇಕು. ಈ ಋಕ್ಕುಗಳನ್ನು ಪಠಿಸಬೇಕಾದುದು **ಹೋತೃ**ವೆಂಬ ಋತ್ವಿಕ್ಕಿನ ಕರ್ತವ್ಯವು. ಇವನು ಋಗ್ವೇದವನ್ನು ಸಾಂಗವಾಗಿ ಅಧ್ಯಯನಮಾಡಿ ಆ ಮಂತ್ರಗಳ ಅರ್ಥವನ್ನೂ ವಿನಿಯೋಗವನ್ನೂ, ಆ ಮಂತ್ರಗಳನ್ನು ಯಜ್ಞದ ನಾನಾ ಕರ್ಮಗಳಲ್ಲಿ ಯಾವಾಗ ಹೇಗೆ ಉಪಯೋಗಿಸಬೇಕೆಂಬುದನ್ನೂ ಚೆನ್ನಾಗಿ ತಿಳಿದವನಾಗಿರಬೇಕು. ಇದು ಹೋತೃವಿನ ಕರ್ತವ್ಯವು. ಇದನ್ನೇ ಇಲ್ಲಿ ಹೇಳಿದೆ.

(ಗಾಯತ್ರಂ ತ್ವೋ ಗಾಯತಿ ಶಕ್ವರೀಷು) ಗಾಯತ್ರಮೇಕೋ
ಗಾಯತಿ ಶಕ್ವರೀಷೂದ್ಗಾತಾ । ಗಾಯತ್ರಂ ಗಾಯತೇಸ್ತುತಿ-
ಕರ್ಮಣಃ । ಶಕ್ವರ್ಯ ಋಚಃ ಶಕ್ನೋತೇಃ । ತದ್ಯದಾಭಿರ್ವೃ-
ತ್ರಮಶಕದ್ಧಂತುಂ ತಚ್ಛಕ್ವರೀಣಾಂ ಶಕ್ವರೀತ್ವಮಿತಿ ವಿಜ್ಞಾಯತೇ

ಇನ್ನೊಬ್ಬ ಋತ್ವಿಜನು ಗಾಯತ್ರವೆಂಬ ಸಾಮಮಂತ್ರವನ್ನು ಶಕ್ವರೀಛಂದಸ್ಸಿನ ಮಂತ್ರಗಳಿಂದ ಗಾನಮಾಡುತ್ತಿರುವನು. ಈ ರೀತಿ ಸಾಮಮಂತ್ರಗಳನ್ನು ಗಾನಮಾಡುವ ಋತ್ವಿಜನಿಗೆ **ಉದ್ಗಾತಾ** ಎಂದು ಹೆಸರು. ಇವನು ಸಾಮವೇದವನ್ನು ಚೆನ್ನಾಗಿ ಅಧ್ಯಯನಮಾಡಿ ತ್ರಿವೃದಾದಿ ಸ್ತೋಮಗಳ ಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿರಬೇಕು. ಯಜ್ಞದಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಸಾಮಗಾನಮಾಡುವುದೇ ಈ ಉದ್ಗಾತೃವೆಂಬ ಋತ್ವಿಜನ ಕರ್ತವ್ಯವು. ಇಲ್ಲಿ **ಗಾಯತ್ರಂ** ಎಂಬ ಶಬ್ದವು ಸ್ತುತಿಸು, ಗಾನಮಾಡು ಎಂಬ ಅರ್ಥವುಳ್ಳ **ಗೈ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. **ಶಕ್ವರ್ಯಃ** ಎಂದರೆ ಶಕ್ವರೀಛಂದಸ್ಸಿನ ಋಕ್ಕುಗಳು. ಶಕ್ವರೀಶಬ್ದವು ಶಕ್–ಶಕ್ತನಾಗು, ಸಮರ್ಥನಾಗು ಎಂಬರ್ಥವುಳ್ಳ ಶಕ್ನೋತಿ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಶಕ್ವರೀಛಂದಸ್ಸಿನ ಋಕ್ಕುಗಳಿಂದ ಸ್ತುತನಾಗಿ ಇಂದ್ರನು ವೃತ್ರನನ್ನು ಸಂಹಾರಮಾಡಲು ಸಮರ್ಥನಾದನು. ಆದ್ದರಿಂದ ಈ ಛಂದಸ್ಸಿನ ಋಕ್ಕುಗಳಿಗೆ ಶಕ್ವರೀಛಂದಸ್ಸುಗಳು ಎಂದು ಹೆಸರಾಯಿತು ಎಂದು ಶ್ರುತಿವಾಕ್ಯದಿಂದ ತಿಳಿದುಬರುತ್ತದೆ.

(ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ) ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ । ಬ್ರಹ್ಮಾ ಪರಿವೃಢಃ ಶ್ರುತತೋ ಬ್ರಹ್ಮ ಪರಿವೃಢಂ ಸರ್ವತಃ ॥

ಯಜ್ಞವು ನಡೆಯುತ್ತಿರುವಾಗ ಇನ್ನೊಬ್ಬ (ತ್ವಃ) ಋತ್ವಿಜನಾದ ಬ್ರಹ್ಮನೆಂಬುವನು ಯಜ್ಞಕರ್ಮವು ಸರಿಯಾಗಿ ನಡೆಯುತ್ತಿರುವುದೇ, ಇಲ್ಲವೇ ಎಂಬುವುದನ್ನು ಗಮನಿಸುತ್ತಿರುವನು ಮತ್ತು ಯಜ್ಞಾಂಗಕರ್ಮಗಳಲ್ಲಿ ಏನಾದರೂ ವ್ಯತ್ಯಾಸಗಳಾಗಲಿ, ಲೋಪದೋಷಗಳಾಗಲಿ ಸಂಭವಿಸಿದಲ್ಲಿ ಅವುಗಳಿಗೆ ಸರಿಯಾದ ಪ್ರಾಯಶ್ಚಿತ್ತಾದಿಗಳನ್ನು ನಿರ್ದೇಶಿಸಿ ಯಜ್ಞಕರ್ಮವು ಸಾಂಗವಾಗಿ ಸಮಾಪ್ತಿಯಾಗುವಂತೆ ಮಾಡುವನು. ಯಜ್ಞದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದೇ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವು. ಇವನು ಮೂರು ವೇದಗಳನ್ನು ಅಧ್ಯಯನಮಾಡಿ ಸರ್ವವಿದ್ಯಾಪಾರಂಗತನಾಗಿರಬೇಕು. ವಿದ್ಯೆಗಳಲ್ಲಿ ಮಾತ್ರವೇ ಇವನಿಗೆ ಪಾಂಡಿತ್ಯವಿದ್ದರೆ ಸಾಲದು. ಯಜ್ಞಾಂಗಕರ್ಮಗಳಲ್ಲಿಯೂ ಅವುಗಳ ನಿರ್ವಹಣೆಯಲ್ಲಿಯೂ ಸರ್ವತೋಮುಖವಾದ ಪರಿಶ್ರಮವಿರಬೇಕು. ಇಂತಹ ಸಾಮರ್ಥ್ಯವುಳ್ಳ ಸರ್ವವಿದ್ಯಾಪಾರಂಗತನಾದ ಬ್ರಹ್ಮನೆಂಬ ಋತ್ವಿಜನು ಹೋತೃ ಮೊದಲಾದ ಋತ್ವಿಕ್ಕುಗಳಿಗೆ ಆಯಾ ಸಂದರ್ಭಗಳಲ್ಲಿ ಇಂತಿಂತಹ ಮಂತ್ರಗಳನ್ನು ಪಠಿಸಬೇಕೆಂದೂ, ಉದ್ಗಾತೃವಿಗೆ ಇಂತಹ ಸಾಮಮಂತ್ರವನ್ನು ಗಾನಮಾಡಬೇಕೆಂದೂ, ಅಧ್ವರ್ಯು ಮೊದಲಾದ ಋತ್ವಿಜರಿಗೆ ಯಜ್ಞದ ಕಾರ್ಯಕಲಾಪಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನೂ (ವದತಿ) ಹೇಳುತ್ತಿರುವನು.

(ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ) ಯಜ್ಞಸ್ಯ ಮಾತ್ರಾಂ ವಿ ಮಿಮೀತ ಏಕೋಽಧ್ವರ್ಯುಃ ॥ ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಅಪಿ ವಾಧೀಯಾನೇ ಯುರುಪಬಂಧಃ । ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ॥

ಮತ್ತೊಬ್ಬ ಋತ್ವಿಜನಾದ ಅಧ್ವರ್ಯುವೆಂಬುವನು ಯಜ್ಞದ ನಾನಾ ಕಾರ್ಯಕಲಾಪಗಳಲ್ಲಿ ತೊಡಗಿ ಯಜ್ಞಕ್ಕೆ ಒಂದು ರೂಪವನ್ನು ಕೊಟ್ಟು ಅದು ಒಂದು ಕ್ರಮದಲ್ಲಿ ನಡೆಯುವಂತೆ ಮಾಡುವನು. ಎಂದರೆ, ಯಜ್ಞದಲ್ಲಿ ಒಂದು ಕರ್ಮವಾದನಂತರ ಮತ್ತೆ ಯಾವ ಕರ್ಮವನ್ನು ಮಾಡಬೇಕು ಅದನ್ನು, ಯಾರು, ಹೇಗೆ, ಯಾವ ಕಾಲದಲ್ಲಿ ಮಾಡಬೇಕು ಎಂಬ ಸಮಸ್ತ ಕಾರ್ಯಕಲಾಪಗಳಲ್ಲಿಯೂ ಆಸಕ್ತಿಯನ್ನು ವಹಿಸಿ ನಾನಾ ಋತ್ವಿಕ್ಕುಗಳಿಂದ ಅವರವರ ಕರ್ಮಗಳನ್ನು ಮಾಡಿಸಬೇಕು. ತಾನು ಮಾಡುವ ಕರ್ತವ್ಯಕರ್ಮಗಳನ್ನು ನಿರ್ವಹಿಸಬೇಕು ಇವೆಲ್ಲವೂ ಎಂದರೆ ಕಾರ್ಯ ನಿರ್ವಹಣೆಗೆ ಸಂಬಂಧಪಟ್ಟ ಕರ್ತವ್ಯವೆಲ್ಲವೂ ಅಧ್ವರ್ಯುವಿಗೆ ಸೇರಿದ್ದು. ಇವನು ಯಜುರ್ವೇದವನ್ನು ಸಾಂಗವಾಗಿ ಅಧ್ಯಯನಮಾಡಿ ಯಜ್ಞಕರ್ಮಗಳ ಸ್ವರೂಪವನ್ನೂ ಅವುಗಳನ್ನು ಹೇಗೆ ಮಾಡಬೇಕೆಂಬ ವಿಷಯದಲ್ಲಿ ಅನುಭವವನ್ನೂ ಪಡೆದವನಾಗಿರಬೇಕು. ಇಂತಹ ಅಧ್ವರ್ಯುವೆಂಬ ಋತ್ವಿಜನು ಯಜ್ಞದಲ್ಲಿ ನಿರ್ವಹಿಸಬೇಕಾದ ಸಣ್ಣ. ಸಣ್ಣ ಕರ್ಮಗಳನ್ನೂ ದೊಡ್ಡ ಕರ್ಮಗಳನ್ನೂ ಒಂದಾಗುತ್ತಲೊಂದು ಕ್ರಮವಾಗಿ ನಡೆಯುವಂತೆ ಮಾಡುತ್ತಲೂ ಇತರ ಋತ್ವಿಕ್ಕುಗಳಿಂದ ಮಾಡಿಸುತ್ತಲೂ ಯಜ್ಞಕ್ಕೆ ಒಂದು ನಿರ್ದಿಷ್ಟವಾದ

ರೂಪವನ್ನು ಕೊಟ್ಟು ಯಥಾಕ್ರಮದಲ್ಲಿ ನಡೆಯುವಂತೆ ಮಾಡುವನು. ಇದೇ ಇವನ ಕರ್ತವ್ಯವು—**ಅಧ್ವರ್ಯುಃ** ಎಂದರೆ **ಅಧ್ವರಯುಃ** ಎಂದರ್ಥವು. ಅಧ್ವರಯುವೆಂದರೆ ಯಜ್ಞವನ್ನು ಇಚ್ಛಿಸುವವನು ಅಥವಾ **ಅಧ್ವರಸ್ಯ ನೇತಾ**—ಯಜ್ಞವನ್ನು ಹೀಗೆ ನಡೆಯಬೇಕೆಂದು ನಿರ್ದೇಶಿಸುವವನು, ಯಜ್ಞದ ಮಾರ್ಗದರ್ಶಿಯು (Leader.) **ಅಧ್ವರ** ಶಬ್ದಕ್ಕೆ ಯಜ್ಞವೆಂದರ್ಥವು. ಧ್ವರತಿಃ ಹಿಂಸಾಕರ್ಮಾ ತತ್ಪ್ರತಿಷೇಧಃ – ಧ್ವರವೆಂದರೆ ಹಿಂಸೆ. ಅಂತಹ ಹಿಂಸೆಯಿಲ್ಲದಿರುವ ಕರ್ಮಕ್ಕೆ ಅಧ್ವರ (ಯಜ್ಞ) ವೆಂದು ಹೆಸರು ಎಂದು ಅಧ್ವರಶಬ್ದದ ರೂಪನಿಷ್ಪತ್ತಿಯನ್ನು ಹೇಳಲಾಗಿದೆ.

ನಿಪಾತ ಇತ್ಯೇಕೇ ॥

ಈ ತ್ವಃ ಎಂಬ ಶಬ್ದವನ್ನು ನಿಪಾತವೆಂದು (ಅವ್ಯಯ) ಕೆಲವರು ಹೇಳುವರು.

ತತ್ಕಥಮನುದಾತ್ತಪ್ರಕೃತಿ ನಾಮ ಸ್ಯಾತ್ । ದೃಷ್ಟವ್ಯಯಂ ತು
ಭವತಿ । ಉತ ತ್ವಂ ಸಖ್ಯೇ ಸ್ಥಿರಪೀತಮಾಹುಃ ಇತಿ ದ್ವಿತೀ-
ಯಾಯಾಂ ಉತೋತ್ವಸ್ಮೈ ತನ್ವಂ೧ ವಿಸಸ್ರೇ ಇತಿ ಚತುರ್ಥ್ಯಾಂ।
ಅಥಾಪಿ ಪ್ರಥಮಾಬಹುವಚನೇ ॥

ಅದು ಸರಿಯಲ್ಲ. ಏಕೆಂದರೆ ಸರ್ವಾನುದಾತ್ತವಾದ ಪದವು ಹೇಗಾಗುವುದು? ನಾಮಪದದಂತೆ ಇದಕ್ಕೆ ವಿಭಕ್ತಿ ವಚನಗಳಲ್ಲಿ ಪ್ರತ್ಯಯಗಳನ್ನು ಸೇರಿಸಲಾಗುವುದು ಉದಾ– **ಉತ ತ್ವಂ ಸಖ್ಯೇ ಸ್ಥಿರಪೀತಮಾಹುಃ** (ಋ. ಸಂ. ೧೦–೭೧–೫) ಎಂಬ ವಾಕ್ಯದಲ್ಲಿ **ತ್ವಂ** ಎಂದು ದ್ವಿತೀಯಾ ವಿಭಕ್ತಿ ಪ್ರಯೋಗವಿದೆ. ಮತ್ತು **ಉತೋ ತ್ವಸ್ಮೈ ತನ್ವಂ೧ ವಿಸಸ್ರೇ** (ಋ. ಸಂ. ೧೦–೭೧–೪) ಎಂಬ ವಾಕ್ಯದಲ್ಲಿ **ತ್ವಸ್ಮೈ** ಎಂದು ಚತುರ್ಥೀ ವಿಭಕ್ತಿ ಪ್ರಯೋಗವಿದೆ—ಮತ್ತು **ಆದಘ್ನಾಸ ಉಪಕಕ್ಷಾಸ ಉ ತ್ವೇ** (ಋ. ಸಂ. ೧೦–೭೧–೭) ಎಂಬ ವಾಕ್ಯದಲ್ಲಿ **ತ್ವೇ** ಎಂದು ಪ್ರಥಮಾ ಬಹುವಚನದಲ್ಲಿ ಈ ಶಬ್ದದ ಪ್ರಯೋಗವಿರುವುದು.

**ಇತಿ ಪ್ರಥಮಾಧ್ಯಾಯೇಽಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

## ಅಥ ನವಮಃ ಖಂಡಃ

### ಒಂಭತ್ತನೆಯ ಖಂಡವು.

---

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ-
ಬಭೂವುಃ । ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ
ಸ್ನಾತ್ವಾ ಉ ತ್ವೇ ದದೃಶ್ರೇ ॥ (ಋ. ಸಂ. ೧೦–೭೧–೭) ಅಕ್ಷಿ-
ಮಂತಃ ಕರ್ಣವಂತಃ ಸಖಾಯೋಽಕ್ಷಿ ಚಷ್ಟೇರನಕ್ತೇರಿತ್ಯಾ-
ಗ್ರಾಯಣಸ್ತಸ್ಮಾದೇತೇ ವ್ಯಕ್ತತರೇ ಇವ ಭವತ ಇತಿ ಹ
ವಿಜ್ಞಾಯತೇ ಕರ್ಣಃ ಕೃಂತತೇರ್ನಿಕೃತ್ತದ್ವಾರೋ ಭವತ್ಯೃ-
ಚ್ಛತೇರಿತ್ಯಾಗ್ರಾಯಣ ಋಚ್ಛಂತೀವ ಖೇ ಉದಗಂತಾಮಿತಿ ಹ
ವಿಜ್ಞಾಯತೇ ಮನಸಾಂ ಪ್ರಜವೇಷ್ವಸಮಾ ಬಭೂವಃ।
ಆಸ್ಯದಘ್ನಾ ಅಪರೇ ಉಪಕಕ್ಷದಘ್ನಾ ಅಪರೇ। ಆಸ್ಯಮಸ್ಯತೇಃ।
ಆಸ್ಯಂದತ ಏತದನ್ನಮಿತಿ ವಾ। ದಘ್ನಂ ದಘ್ಯತೇಃ ಪ್ರವತಿ-
ಕರ್ಮಣಃ । ದಸ್ಯತೇರ್ವಾ ಸ್ಯಾದ್ವಿದಸ್ತತರಂ ಭವತಿ ।
ಪ್ರಸ್ನೇಯಾ ಹ್ರದಾ ಇವೈಕೇ। ಪ್ರಸ್ನೇಯಾ ದದೃಶಿರೇ
ಸ್ನಾನಾರ್ಹಾಃ ಹ್ರದೋ ಹ್ರಾದತೇಃ ಶಬ್ದಕರ್ಮಣಃ ಹ್ಲಾದ-
ತೇರ್ವಾ ಸ್ಯಾಚ್ಛೀತೀಭಾವಕರ್ಮಣೋಽಥಾಪಿ ಸಮುಚ್ಚಯಾ-
ರ್ಥೇ ಭವತಿ ಪರ್ಯಾಯಾ ಇವ ತ್ವದಾಶ್ವಿನಮಾಶ್ವಿನಂ ಚ
ಪರ್ಯಾಯಾಶ್ಚೇತ್ಯಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು
ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ
ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ॥ ೯ ॥

---

ಹಿಂದೆ ಹೇಳಿದ ತ್ವಃ ಎಂಬ ಸರ್ವನಾಮದ ಪ್ರಥಮಾ ಬಹುವಚನದ ಪ್ರಯೋಗವನ್ನು ತಿಳಿಸುವುದಕ್ಕಾಗಿ **ಅಕ್ಷಣ್ವಂತಃ** ಎಂಬ ಮೇಲಿನ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು ಅದರ ಅರ್ಥ ವಿವರಣೆ ಮಾಡಿರುವರು—

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ । ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥ ಅಕ್ಷಿಮಂತಃ ಕರ್ಣವಂತಃ ಸಖಾಯಃ । ಅಕ್ಷಿ ಚಷ್ಟೇಃ ಅನಕ್ತೇರಿತ್ಯಾಗ್ರಾಯಣಃ । ತಸ್ಮಾದೇತೇ ವ್ಯಕ್ತತರೇ ಇವ ಭವತ ಇತಿ ಹ ವಿಜ್ಞಾಯತೇ । ಕರ್ಣಃ ಕೃಂತತೇರ್ನಿಕೃತ್ತದ್ವಾರೋ ಭವತಿ । ಋಚ್ಛತೇರಿತ್ಯಾಗ್ರಾಯಣಃ । ಋಚ್ಛಂತೀವ ಖೇ ಉದಗಂತಾಮಿತಿ ಹ ವಿಜ್ಞಾಯತೇ ಮನಸಾಂ ಪ್ರಜವೇಷ್ವಸಮಾ ಬಭೂವುಃ । ಆಸ್ಯದಘ್ನಾ ಅಪರೇ ಉಪಕಕ್ಷದಘ್ನಾ ಅಪರೇ । ಆಸ್ಯಮಸ್ಯತೇಃ । ಆಸ್ಯಂದತ ಏತದನ್ನಮಿತಿ ವಾ । ದಘ್ನಂ ದಘ್ಯತೇಃ ಸ್ರವತಿಕರ್ಮಣಃ । ದಸ್ಯತೇರ್ವಾ ಸ್ಯಾದ್ವಿದಸ್ತತರಂ ಭವತಿ । ಪ್ರಸ್ನೇಯಾ ಹ್ರದಾ ಇವೈಕೇ । ಪ್ರಸ್ನೇಯಾ ದದೃಶಿರೇ ಸ್ನಾನಾರ್ಹಾಃ । ಹ್ರದೋ ಹ್ರಾದತೇಃ ಶಬ್ದಕರ್ಮಣಃ । ಹ್ಲಾದತೇರ್ವಾ ಸ್ಯಾಚ್ಛೀತೀಭಾವಕರ್ಮಣಃ ॥

ಈ ಋಕ್ಕಿನಲ್ಲಿ **ತ್ವಃ** ಎಂಬ ಸರ್ವನಾಮಪದದ ಪ್ರಥಮಾ ಬಹುವಚನವಾದ **ತ್ವೇ** ಎಂಬ ಪದದ ಪ್ರಯೋಗವಿರುವುದನ್ನು ಹೇಳುವುದಕ್ಕಾಗಿ ಈ ಋಕ್ಕಿನ ಅರ್ಥ ವಿವರಣೆ ಮಾಡಿರುವರು. ಎಲೈ ಸ್ನೇಹಿತರೇ, ಎಲ್ಲಾ ಮನುಷ್ಯರಿಗೂ ಕಣ್ಣುಗಳಿರುವವು, ಕಿವಿಗಳಿರುವವು (ಅದರಂತೆ ಇತರ ಅವಯವಗಳೂ ಎಲ್ಲರಿಗೂ ಇರುವವು. ಅಥವಾ ಸರ್ವರಿಗೂ ಸಮನಾದ ಅವಯವಗಳಿದ್ದಂತೆ ಅನೇಕರು ಸಮಾನಶಾಸ್ತ್ರಾಭ್ಯಾಸವನ್ನು ಮಾಡಿರುವರು) ಆದರೆ ಅವರ ಬುದ್ಧಿ ವಿಕಾಸವು ಬೇರೆಬೇರೆಯಾಗಿರುವುದು. ಕೆಲವರಿಗೆ ಬುದ್ಧಿಯು ಹೆಚ್ಚಾಗಿಯೂ, ಕೆಲವರಿಗೆ ಸಾಧಾರಣವಾಗಿಯೂ, ಮತ್ತೆ ಕೆಲವರಿಗೆ ಅತ್ಯಲ್ಪವಾಗಿಯೂ ಇರುವವು. ಎಂದರೆ ಬಾಹ್ಯಾವಯವಗಳಾದ ಕಣ್ಣು ಕಿವಿ ಕೈಕಾಲುಗಳು ಎಲ್ಲರಿಗೂ ಒಂದೇಸಮನಾಗಿದ್ದರೂ ಬುದ್ಧಿಶಕ್ತಿಯಲ್ಲಿ ಮಾತ್ರ ವ್ಯತ್ಯಾಸವು ಕಂಡುಬರುವುದು. ಹೇಗೆಂದರೆ ಕೊಳಗಳಲ್ಲಿ ಕೆಲವು ಒಂದಾಳುದ್ದದ ವರೆಗೆ ಎಂದರೆ ನೀರಿನಲ್ಲಿ ನಿಂತುಕೊಂಡರೆ ಮುಖದ (ಕತ್ತಿನ) ವರೆಗೂ ಆಳವಾಗಿರುವವು. ಮತ್ತೆ ಕೆಲವು ಕೊಳಗಳಲ್ಲಿ ನೀರು ಸೊಂಟಮಟ್ಟಕ್ಕೆ ಇರುವುದು. ಇವು ನೋಡುವುದಕ್ಕೆ ಮಾತ್ರ ಉಪಯೋಗವಾಗಿರುವವು. ಇವುಗಳಲ್ಲಿ ಸ್ನಾನಮಾಡಲು ಆಗುವುದಿಲ್ಲ ಮತ್ತೆ ಕೆಲವು ಸ್ನಾನಮಾಡುವುದಕ್ಕೆ ಅರ್ಹವಾಗಿರುವವು ಎಂದು ನಿರ್ವಚನಾಭಿಪ್ರಾಯವು.

ಈ ಋಕ್ಕಿನಲ್ಲಿರುವ **ಅಕ್ಷಣ್ವಂತಃ** ಮೊದಲಾದ ಶಬ್ದಗಳಿಗೆ ರೂಪನಿಷ್ಪತ್ತಿಯನ್ನು ಇಲ್ಲಿ ಹೇಳಿರುವರು. **ಅಕ್ಷಣ್ವಂತಃ–ಅಕ್ಷಿಮಂತಃ–ಅಕ್ಷಿ** ಶಬ್ದವು ನೋಡು ಎಂಬರ್ಥವುಳ್ಳ **ಚಕ್ಷ್** ಧಾತುವಿನಿಂದ ನಿಷ್ಪನ್ನವಾಗಿದೆ. ಅಲಂಕರಿಸು ಅಥವಾ ಅಲಂಕಾರಾರ್ಥವಾಗಿ ಅಂಜನವನ್ನು (ಕಾಡಿಗೆ ಅಥವಾ ಕಪ್ಪು) ಕಣ್ಣಿಗೆ ಹಚ್ಚು ಎಂಬ ಅರ್ಥವುಳ್ಳ **ಅನಕ್ತಿ** ಧಾತುವಿನಿಂದ ಅಕ್ಷಿ

ಶಬ್ದವು ನಿಷ್ಪನ್ನವಾಗಿದೆಯೆಂದು ಆಗ್ರಾಯಣರ ಮತವು. ಇವು (ಕಣ್ಣುಗಳು) ಮುಖದಲ್ಲಿ ಸುಂದರನಾಗಿಯೂ, ವ್ಯಕ್ತವಾಗಿಯೂ ಕಾಣುವವು ಎಂಬರ್ಥವುಳ್ಳ **ತಸ್ಮಾದೇತೇ ವ್ಯಕ್ತತರೇ ಇವ ಭವತಃ** ಎಂಬ ಶ್ರುತಿವಾಕ್ಯವೂ ಉದಾಹರಣೆಯಾಗಿರುವುದು ; **ಕರ್ಣ** ಶಬ್ದವು ಕತ್ತರಿಸು, ರಂಧ್ರಮಾಡು ಎಂಬರ್ಥವಿರುವ **ಕೃಂತತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಏಕೆಂದರೆ ಕರ್ಣವು (ಕಿವಿಯು) ಶರೀರಮೊಳಕ್ಕೆ ಕತ್ತರಿಸಿ ಕೊರೆದಿರುವ ದ್ವಾರದಂತಿದೆ. ಮತ್ತು ಕರ್ಣಶಬ್ದವು ಹೋಗು ಎಂಬರ್ಥವುಳ್ಳ **ಋ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಆಗ್ರಾಯಣರ ಮತವು. ಕಿವಿಗಳು ಶರೀರದಿಂದ ಮೇಲೆದ್ದು ಹೊರಟಿರುವಂತೆ ಕಾಣುವುದರಿಂದ ಈ ಹೆಸರು ಬಂದಿದೆಯೆಂದು ಅವರ ಅಭಿಮತವು. ಈ ವಿಷಯದಲ್ಲಿ **ಋಚ್ಛಂತೀವ ಹೇ ಉದಗಂತಾಂ** ಎಂಬ ಶ್ರುತಿವಾಕ್ಯದ ಉದಾಹರಣೆಯೂ ಇದೆ.

**ಆಸ್ಯ** (ಮುಖ) ಶಬ್ದವು ಅಸು ಪ್ರಕ್ಷೇಪಣೆ(ಎಸೆ) ಎಂಬ ಧಾತುವಿನಿಂದಾಗಲಿ ಹರಿ, ಸ್ರವಿಸು ಎಂಬರ್ಥವುಳ್ಳ **ಆಸ್ಯಂದ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಏಕೆಂದರೆ ಆಹಾರವು ಮುಖದ (ಬಾಯಿಯ) ಮೂಲಕ, ಉದರಕ್ಕೆ ಹರಿದು ಹೋಗುವುದು ಮತ್ತು ಬಾಯಿಯಲ್ಲಿ ರಸವು ದ್ರವಿಸುವುದು. **ದಘ್ನಂ** ಎಂಬ ಶಬ್ದವು ಹರಿಯುವುದು ಎಂಬರ್ಥವುಳ್ಳ **ದಘ್** ಧಾತುವಿನಿಂದ ನಿಷ್ಪನ್ನವಾಗಿದೆ ಅಥವಾ ಕ್ಷೀಣವಾಗು ಎಂಬರ್ಥವುಳ್ಳ **ದಸ್ಯತಿ** ಧಾತುವಿನಿಂದಲೂ ನಿಷ್ಪನ್ನವಾಗಬಹುದು. **ಸ್ನಾತ್ವಾಃ ಪ್ರಸ್ನೇಯಾಃ** ಎಂದರೆ ಸ್ನಾನಮಾಡಲು ಯೋಗ್ಯವಾದವು ಎಂದರ್ಥವು. **ಹ್ರದಃ** ಎಂಬ ಶಬ್ದವು ಶಬ್ದಮಾಡು ಎಂಬರ್ಥವುಳ್ಳ **ಹ್ರದ್** ಧಾತುವಿನಿಂದಾಗಲಿ, ತಣ್ಣೀರು ಶೈತ್ಯವನ್ನುಂಟುಮಾಡು ಎಂಬರ್ಥವುಳ್ಳ **ಹ್ಲಾದ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಬೇಸಿಗೆಯಲ್ಲಿಯೂ ಸಹ ಈ ಕೊಳದ ನೀರು ತಣ್ಣಗಿರುವುದರಿಂದ ಇದಕ್ಕೆ ಹ್ರದನೆಂದು ಹೆಸರು.

ಅಥಾಪಿ ಸಮುಚ್ಚಯಾರ್ಥೇ ಭವತಿ ॥

ಮತ್ತು **ತ್ವತ್** ಎಂಬ ನಿಪಾತವು ಸಮುಚ್ಚಯಾರ್ಥದಲ್ಲಿ ಎಂದರೆ ಮತ್ತು ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದು. ಉದಾ—**ಪರ್ಯಾಯಾ ಇವ ತ್ವದಾಶ್ವಿನಂ** ಎಂಬ ವಾಕ್ಯದಲ್ಲಿ **ಆಶ್ವಿನಂ ಚ ಪರ್ಯಾಯಾಶ್ಚೇತಿ** ಎಂಬರ್ಥವು ಉಕ್ತವಾಗಿರುವುದು. ಎಂದರೆ ತ್ವತ್ ಎಂಬ ಶಬ್ದಕ್ಕೆ **ಚ** ಎಂಬ ನಿಪಾತದ ಅರ್ಥವನ್ನು ಹೇಳಿರುವರು.

ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯ-
ಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ
ಕಮೀಮಿದ್ವಿತಿ । (ನಿಷ್ಟ್ವಕ್ರಾಸಶ್ಚಿದಿನ್ನರೋ ಭೂರಿತೋಕಾ
ವೃಕಾದಿವ । ಬಿಭ್ಯಸ್ಯಂತೋ ವವಾಶಿರೇ) ॥

ಕೆಲವು ಸಂದರ್ಭಗಳಲ್ಲಿ ಕೆಲವು ನಿಪಾತಗಳಿಗೆ (ಅವ್ಯಯಗಳಿಗೆ) ಯಾವ ಅರ್ಥವೂ ಇಲ್ಲದೆ ಛಂದಸ್ಸಿನಲ್ಲಿರಬೇಕಾದ ಅಕ್ಷರಗಳನ್ನು ಹೊಂದಿಸುವುದಕ್ಕಾಗಿ ಎಂದರೆ ಪದಪೂರಣಕ್ಕಾಗಿ ಉಪಯೋಗಿಸಲ್ಪಡುವವು. ಉದಾ—**ಕಂ ಈಂ ಇತ್ ಉ** ಎಂಬ ನಿಪಾತಗಳು ಛಂದೋಬದ್ಧವಲ್ಲದ ಗದ್ಯರೂಪವಾದ ಗ್ರಂಥಗಳಲ್ಲಿ ವಾಕ್ಯಪೂರಣಾರ್ಥವಾಗಿಯೂ, ಮಿತಾಕ್ಷರ ಗ್ರಂಥಗಳಲ್ಲಿ ಎಂದರೆ ನಿರ್ದಿಷ್ಟ ಸಂಖ್ಯೆಯ ಅಕ್ಷರಗಳನ್ನೊಳಗೊಂಡಿರುವ ಛಂದಸ್ಸುಗಳಲ್ಲಿ ಪದಪೂರಣಾರ್ಥವಾಗಿಯೂ ಉಪಯೋಗಿಸಲ್ಪಡುವವು—ಇಂತಹ ಸಂದರ್ಭಗಳಲ್ಲಿ ಈ ನಿಪಾತಗಳಿಗೆ ನಿರ್ದಿಷ್ಟವಾದ ಯಾವ ಅರ್ಥವೂ ಇರುವುದಿಲ್ಲ ಎಂದು ಹೇಳಿದ್ದಾರೆ ಆದರೂ

ಸಂದರ್ಭಾನುಸಾರವಾಗಿ ಈ ಶಬ್ದಗಳಿಗೆ ನಾನಾವಿಧ ಅರ್ಥಗಳನ್ನು ಹೇಳಿರುವುದು ಕಂಡುಬಂದಿರುವುದು. ಸಾಧಾರಣವಾಗಿ **ಇತ್** ಎಂಬ ಶಬ್ದಕ್ಕೆ ಏವ ಎಂಬ ಶಬ್ದದ ಅರ್ಥವೇ ಸಾಧಾರಣವಾಗಿ ಬಳಕೆಯಲ್ಲಿರುವುದು ಇತ್ಯಾದಿ.

**ಇತಿ ಪ್ರಥಮಾಧ್ಯಾಯೇ ನವಮಃ ಖಂಡಃ**

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು.

---

## ಅಥ ಪ್ರಥಮಾಧ್ಯಾಯೇ ದಶಮಃ ಖಂಡಃ

**ಹತ್ತನೆಯ ಖಂಡವು.**

---

ನಿಷ್ಷ್ವಕ್ರಾಸಶ್ಚಿದಿನ್ನರೋ ಭೂರಿತೋಕಾ ವೃತಾದಿವ । ಬಿಭ್ಯಸ್ಯಂತೋ **ವವಾಶಿರೇ ಶಿಶಿರಂ ಜೀವನಾಯ** ಕಂ । ಶಿಶಿರಂ ಜೀವನಾಯ ಶಿಶಿರಂ ಶೃಣಾತೇಃ ಶಮ್ನಾತೇರ್ವಾ । ಏಮೇನಂ ಸೃಜತಾ ಸುತೇ । ಆಸೃಜತೈನಂ ಸುತೇ । ತಮಿದ್ವರ್ಧಂತು ನೋ ಗಿರಃ ತಂ ವರ್ಧಯಂತ ನೋ ಗಿರಃ ಸ್ತುತಯೋ ಗಿರೋ ಗೃಣಾತೇಃ । ಅಯಮು ತೇ ಸಮತಸಿ । ಅಯಂ ತೇ ಸಮತಸೀವೋಽಪಿ ದೃಶ್ಯತೇ । ಸುವಿದುರಿವ (ಕಾಠಕ. ಸಂ. ೮–೩ ತಥಾ ೮–೧೩) ಸು ವಿಜ್ಞಾಯೇತೇ ಇವಾಥಾಪಿ ನೇತ್ಯೇಷ ಇದಿತ್ಯೇತೇನ ಸಂಪ್ರಯುಜ್ಯತೇ ಪರಿಭಯೇ ॥ ೧೦ ॥

ಹಿಂದೆ ಹೇಳಿದ **ಕಂ ಈಂ ಇತ್ ಉ** ಎಂಬ ನಿಪಾತಗಳಿಗೆ ಕೆಲವು ಉದಾಹರಣೆಗಳನ್ನು ಕೊಡುವರು ಮತ್ತು ನಿಪಾತಗಳಿಗೆ ಕೆಲವು ಸಂದರ್ಭಗಳಲ್ಲಿ ಅರ್ಥವಿಲ್ಲವೆಂಬ ವಿಚಾರವು-**ಕ್ರಿಯಾವಾಚಕಮಾಖ್ಯಾತಮುಪಸರ್ಗೋ ವಿಶೇಷಕೃತ್ । ಸತ್ತ್ವಾಭಿಧಾಯಕಂ ನಾಮ ನಿಪಾತಃ ಪದಪೂರಣಃ** ॥ ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟಿರುವುದು.

ನಿಷ್ಷ್ವಕ್ರಾಸಶ್ಚಿದಿನ್ನರೋ ಭೂರಿತೋಕಾ ವೃಕಾದಿವ । ಬಿಭ್ಯಸ್ಯಂತೋ ವವಾಶಿರೇ ಶಿಶಿರಂ ಜೀವನಾಯ ಕಂ । ಶಿಶಿರಂ ಜೀವನಾಯ ಶಿಶಿರಂ ಶೃಣಾತೇಃ ಶಮ್ನಾತೇರ್ವಾ ॥

ಮೇಲೆ ಹೇಳಿದ **ನಿಷ್ಟ್ವಕ್ತ್ರಾಸಃ** ಎಂಬ ಮಂತ್ರವು ಯಾವ ವೇದದಲ್ಲಿರುವುದೆಂದು ತಿಳಿಯಲಾಗುವುದಿಲ್ಲ. ವಸ್ತ್ರ ರಹಿತರಾದ ಮನುಷ್ಯರು ತಮ್ಮ ಅನೇಕ ಮಕ್ಕಳೊಡನೆ ವಾಸಮಾಡಲು ತೋಳದ ದೆಸೆಯಿಂದ ಭಯಭೀತರಾಗಿ (ತೋಳದ ಹಾವಳಿ ಇಲ್ಲದಿರುವ) ವಾಸಮಾಡಲು ಅನುಕೂಲವಾದ (ಚಳಿಯಿಲ್ಲದ) ಬೇಸಿಗೆ ಕಾಲಕ್ಕಾಗಿ ಹಾರೈಸುವರು. ಎಂದು ಇವರ ಅರ್ಥವು. ಇಲ್ಲಿ **ಜೀವನಾಯ ಕಂ** ಎಂಬ ಶಬ್ದಗಳ ಪ್ರಯೋಗವಿದೆ. ಈ ಶಬ್ದಗಳು **ಮುಂಚಾಮಿ ತ್ವಾ ಹವಿಷಾ ಜೀವನಾಯ ಕಂ** (ಋ. ಸಂ. ೧೦-೧೬೧-೧) ಎಂಬ ಋಕ್ಕಿನಲ್ಲಿಯೂ ಇರುವವು. ಅಲ್ಲಿ ಕಂ ಎಂಬ ನಿಪಾತಕ್ಕೆ ಯಾವ ಅರ್ಥವೂ ಇಲ್ಲದೆ ಕೇವಲ ಪದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವುದು. **ಶಿಶಿರಂ** ಎಂಬ ಪದವು ಶೃ-ಜಜ್ಜು ಎಂಬರ್ಥವುಳ್ಳ ಶೃಣಾತಿ ಧಾತುವಿನಿಂದಾಗಲೀ ಅಥವಾ **ಶಶ್** ಎಂಬ ಹಿಂಸಿಸು ನಾಶಮಾಡು ಎಂಬರ್ಥವಿರುವ ಶಮ್ನಾತಿ ಧಾತುವಿನಿಂದ ನಿಷ್ಪನ್ನ ವಾಗಬಹುದು. ಈ ಋಕ್ಕು **ಕಂ** ಎಂಬ ನಿಪಾತವು ಪದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವುದಕ್ಕೆ ಉದಾಹರಣವು.

ಏಮೇನಂ ಸೃಜತಾ ಸುತೇ । ಆಸೃಜತೈನಂ ಸುತೇ ।

ಇಲ್ಲಿ—**ಏಮೇನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ। ಚಕ್ರಿಂ ವಿಶ್ವಾನಿ ಚಕ್ರಯೇ** (ಋ. ಸಂ. ೧-೯-೨) ಎಂಬ ಋಕ್ಕನ್ನು **ಈಂ** ಎಂಬ ನಿಪಾತದ ಪ್ರಯೋಗವನ್ನು ಹೇಳುವುದಕ್ಕಾಗಿ ಕೊಟ್ಟಿರುತ್ತೆ. ಎಲೈ ಅಧ್ವರ್ಯು ಮೊದಲಾದ ಋತ್ವಿಜರೇ, ಈಗ ಸೋಮರಸವು ಲತೆಯಿಂದ ಹಿಂಡಲ್ಪಟ್ಟು ಪಾನಯೋಗ್ಯವಾಗುವಂತೆ ಸಿದ್ಧಪಡಿಸಿರುವುದು. ಈ ಸೋಮರಸವು ಪಾನಮಾಡುವವರಿಗೆ ಹರ್ಷವನ್ನುಂಟುಮಾಡುವುದು. ಒಳ್ಳೆಯ ಕರ್ಮಗಳನ್ನು ಮಾಡಲು ಕಾರಣಭೂತವಾಗಿರುವುದು. ಇಂತಹ ಈ ಸೋಮರಸವನ್ನು ಹರ್ಷಯುಕ್ತನೂ ಸಮಸ್ತ ಕಾರ್ಯಗಳನ್ನು ಮಾಡುವವನೂ ಆದ ಇಂದ್ರನಿಗೆ ಅರ್ಪಿಸಿರಿ ಎಂದು ಈ ಋಕ್ಕಿನ ಅಭಿಪ್ರಾಯವು. ಇಲ್ಲಿ **ಆ+ಈಂ+ಏವಂ=ಏಮೇನಂ** ಎಂದಿರುವುದು ಈಂ ಎಂಬ ನಿಪಾತವು ಪದಪೂರಣವಾಗಿರುವುದು ಇದು **ಈಂ** ಎಂಬ ನಿಪಾತಕ್ಕೆ ಉದಾಹರಣೆಯು.

ತಮಿದ್ವರ್ಧಂತು ನೋ ಗಿರಃ । ತಂ ವರ್ಧಯಂತು ನೋ ಗಿರಃ ।
ಸ್ತುತಯೋ ಗಿರೋ ಗೃಣಾತೇಃ ॥

ಇಲ್ಲಿ ಇತ್ ಎಂಬ ನಿಪಾತಪ್ರಯೋಗಕ್ಕಾಗಿ – **ತಮಿದ್ವರ್ಧಂತು ನೋ ಗಿರೋ ವತ್ಸಂ ಸಂಶಿಶ್ವತೀರಿವ । ಯ ಇಂದ್ರಸ್ಯ ಹೃದಂಸನಿಃ** (ಋ. ಸಂ. ೮-೬೧-೧೪) ಎಂಬ ಋಕ್ಕನ್ನು ಉದಾಹರಿಸಿರುವರು – ಕ್ಷೀರಸಂಪತ್ತುಳ್ಳ ಗೋವುಗಳು ತಮ್ಮ ಕರುಗಳನ್ನು ಆದರದಿಂದ ನೆಕ್ಕಿ ಪುಷ್ಟಿಗೊಳಿಸುವಂತೆ ಯಾವ ಸೋಮವು ಇಂದ್ರನ ಹೃದಯಕ್ಕೆ ತೃಪ್ತಿಯನ್ನುಂಟು ಮಾಡುವುದೋ ಆ ಸೋಮರಸವನ್ನೇ ನಮ್ಮ ಸ್ತುತಿವಾಕ್ಯಗಳು ವೃದ್ಧಿಗೊಳಿಸಲಿ ಎಂದು ಋಕ್ಕಿನ ಅಭಿಪ್ರಾಯವು ಇಲ್ಲಿ ಪ್ರಯೋಗಿಸಿರುವ **ಇತ್** ಎಂಬ ನಿಪಾತವು ಪಾದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವುದು ಅಥವಾ **ಇತ್** ಎಂದರೆ **ಏವ** ಎಂಬರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿರುವುದೆಂದು ಭಾವಿಸಬಹುದು **ಗಿರಃ** ಎಂದರೆ ಸ್ತುತಿಗಳು ಸ್ತುತಿರೂಪವಾದ ವಾಕ್ಯಗಳು ಎಂದರ್ಥವು, **ಗೃ** ಮಾತನಾಡು ಎಂಬರ್ಥವುಳ್ಳ ಧಾತುವಿನಿಂದ **ಗಿರಃ** ಎಂಬ ಶಬ್ದವು ನಿಷ್ಪನ್ನವಾಗಿದೆ.

ಅಯಮು ತೇ ಸಮತಸಿ । ಅಯಂ ತೇ ಸಮತಸಿ ॥

ಇಲ್ಲಿ ಉ ಎಂಬ ನಿಪಾತಪ್ರಯೋಗವಿರುವ ಋಕ್ಕನ್ನು ಉದಾಹರಿಸಿರುವರು – **ಅಯಮು ತೇ ಸಮತಸಿ ಕಪೋತ ಇವ ಗರ್ಭಧಿಂ । ವಚಸ್ತಚ್ಚಿನ್ನ ಓಹಸೇ ॥** (ಋ ಸಂ. ೧೦-೩೦-೪) ಎಲೈ ಇಂದ್ರನೇ ಈ ಸೋಮರಸವೂ ಸತ

ನಿನಗಾಗಿಯೇ ಸಂಪಾದಿತವಾಗಿದೆ. ಪಾರಿವಾಳಪಕ್ಷಿಯು ಗರ್ಭವನ್ನು ಧರಿಸಿರುವ ತನ್ನ ಪ್ರಿಯೆಯನ್ನು ಸೇರುವಂತೆ ನೀನೂ ಸಹ ಈ ಸೋಮರಸವನ್ನು ಸೇರಿ ಅದನ್ನು ಹೊಂದುತ್ತೀಯೆ. ಆದ್ದರಿಂದಲೇ ನಮ್ಮ ಈ ಸ್ತೋತ್ರರೂಪವಾದ ವಾಕ್ಕನ್ನು ಸ್ವೀಕರಿಸುತ್ತೀಯೆ ಎಂದು ಈ ಋಕ್ಕಿನ ಅರ್ಥವು. ಈಲ್ಲಿರುವ **ಉ** ಎಂಬ ನಿಪಾತಕ್ಕೆ ಯಾವ ನಿರ್ದಿಷ್ಟಾರ್ಥವೂ ಇಲ್ಲದೆ ಕೇವಲ ಪದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿದೆ.

ಇವೋಽಪಿ ದೃಶ್ಯತೇ ಸುವಿದುರಿವ ಸುವಿಜ್ಞಾಯೇತೇ ಇವ ॥

ಮೇಲೆ ಹೇಳಿದಂತೆಯೇ **ಇವ** ಎಂಬ ನಿಪಾತವೂ ಸಹ ಪದಪೂರಣಕ್ಕಾಗಿ ಉಪಯೋಗಿಸಲ್ಪಡುವುದುಂಟು. ಆ ಸಂದರ್ಭದಲ್ಲಿ ಇವ ಎಂಬ ಪದಕ್ಕೆ ಯಾವ ಅರ್ಥವೂ ಇರುವುದಿಲ್ಲ. ಸುವಿದುರಿವ—(ಬ್ರಾಹ್ಮಣರು ಯಜ್ಞಕರ್ಮವನ್ನು ಚೆನ್ನಾಗಿ) ತಿಳಿದಿರುವರು ಮತ್ತು **ಸುವಿಜ್ಞಾಯೇತೇ ಇವ**—ಇವರಿಬ್ಬರೂ ಚೆನ್ನಾಗಿ ತಿಳಿದಿರುವರು ಎಂಬ ಎರಡು ವಾಕ್ಯಗಳಲ್ಲಿಯೂ ಇರುವ **ಇವ** ಶಬ್ದವು ಪದಪೂರಣಕ್ಕಾಗಿಯೇ ಉಪಯೋಗಿಸಲ್ಪಟ್ಟಿರುವುದು ಇದಕ್ಕೆ ಯಾವ ಅರ್ಥವೂ ಇರುವುದಿಲ್ಲ.

ಅಥಾಪಿನೇತ್ಯೇಷ ಇದಿತ್ಯೇತೇನ ಸಂಪ್ರಯುಜ್ಯತೇ ಪರಿಭಯೇ ।

ಹಿಂದೆ ಹೇಳಿದಂತೆ **ಇತ್** ಎಂಬ ನಿಪಾತಕ್ಕೆ ಯಾವ ಅರ್ಥವೂ ಇಲ್ಲ. ಕೇವಲ ಪದಪೂರಣಕ್ಕಾಗಿ ಉಪಯೋಗಿಸಲ್ಪಡುವುದು. ಕೆಲವು ಸಂದರ್ಭಗಳಲ್ಲಿ **ನ** ಎಂಬ ನಿಪಾತದೊಡನೆ ಭಯವನ್ನು ಸೂಚಿಸುವ ಸಂದರ್ಭದಲ್ಲಿ ಉಪಯೋಗಿಸಲ್ಪಡುವುದು. ಉದಾ—**ನೇಜ್ಜಿಹ್ಮಾಯಂತ್ಯೋ ನರಕಂ ಪತಾಮೇತಿ** ಇಲ್ಲಿ **ನ** ಮತ್ತು **ಇತ್** ಎಂಬ ಎರಡು ಶಬ್ದಗಳ ಒಟ್ಟಿನ ಪ್ರಯೋಗವು ಭಯವನ್ನು ಸೂಚಿಸುವುದಾಗಿದೆ.

**ಇತಿ ಪ್ರಥಮಾಧ್ಯಾಯೇ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು

---

## ಅಥ ಪ್ರಥಮಾಧ್ಯಾಯೇ ಏಕಾದಶಃ ಖಂಡಃ

### ಹನ್ನೊಂದನೆಯ ಖಂಡವು

---

ಹವಿರ್ಭಿರೇಕೇ ಸ್ವರಿತಃ ಸಚಂತೇ ಸುನ್ವಂತ ಏಕೇ ಸವನೇಷು
ಸೋಮಾನ್ । ಪ್ರಾಚೀರ್ಮದಂತ ಉತ ದಕ್ಷಿಣಾಭಿರ್ನೇಜ್ಜಿ-
ಹ್ಮಾಯಂತ್ಯೋ ನರಕಂ ಪತಾಮೇತಿ ನರಕಂ ನ್ಯರಕಂ

ನೀಚೈರ್ಗಮನಂ ನಾಸ್ಮಿನ್ರಮಣಂ ಸ್ಥಾನಮಲ್ಪಮಪ್ಯಸ್ತೀತಿ
ವಾಥಾಪಿ ನ ಚೇತ್ಯೇಷ ಇದಿತ್ಯೇತೇನ ಸಂಪ್ರಯುಜ್ಯತೇಽನು
ಪೃಷ್ಟೇ ನ ಚೇತ್ಸುರಾಂ ಪಿಬಂತೀತಿ ಸುರಾ ಸುನೋತೇರೇವ-
ಮುಚ್ಚಾವಚೇಷ್ವರ್ಥೇಷು ನಿಪತಂತಿ ತ ಉಪೇಕ್ಷಿತವ್ಯಾಃ ||೧೧||

---

ಮೇಲೆ ಹೇಳಿದ ನ+ಇತ್ ಎಂಬ ಶಬ್ದಗಳ ಪ್ರಯೋಗವನ್ನು ಉದಾಹರಿಸುವುದಕ್ಕಾಗಿ ಹವಿರ್ಭಿರೇಕೇ ಎಂಬ ಮಂತ್ರವನ್ನು ವಿವರಿಸಿರುವರು.

ಹವಿರ್ಭಿರೇಕೇ ಸ್ವರಿತಃ ಸಚಂತೇ ಸುನ್ವಂತ ಏಕೇ ಸವನೇಷು
ಸೋಮಾನ್ ಶಚೀರ್ಮದಂತ ಉತ ದಕ್ಷಿಣಾಭಿರ್ನೇಜ್ಜಿಹ್ಮಾ-
ಯಂತ್ಯೋ ನರಕಂ ಪತಾಮೇತಿ || ನರಕಂ ನ್ಯರಕಂ ನೀಚೈರ್ಗ-
ಮನಂ | ನಾಸ್ಮಿನ್ರಮಣಂ ಸ್ಥಾನಮಲ್ಪಮಪ್ಯಸ್ತೀತಿ ವಾ ||

ಯಜ್ಞಗಳಲ್ಲಿ ಆಹುತಿಗಳನ್ನೂ ಹೋಮಮಾಡುವುದರಿಂದ ಕೆಲವರು ಸ್ವರ್ಗಲೋಕಕ್ಕೆ ಹೋಗಲು ಬಯಸುತ್ತಾರೆ. ಮತ್ತೆ ಕೆಲವರು ಯಜ್ಞದಲ್ಲಿ ಸೋಮರಸವನ್ನು ಹಿಂಡಿ ದೇವತೆಗಳಿಗೆ ಅರ್ಪಿಸಲು ಬಯಸಿ ಅದರಿಂದ ಸ್ವರ್ಗಲೋಕವನ್ನು ಇಚ್ಛಿಸುತ್ತಾರೆ. ಮತ್ತೆ ಕೆಲವರು ದೇವತೆಗಳನ್ನು ವಾಕ್ಯಗಳಿಂದ ಸ್ತುತಿಸುವುದರಿಂದಲೂ ಮತ್ತೆ ಕೆಲವರು ಋತ್ವಿಜರಿಗೆ ದಕ್ಷಿಣೆಗಳನ್ನು ಕೊಡುವುದರಿಂದಲೂ ಸ್ವರ್ಗವನ್ನು ಬಯಸುತ್ತಾರೆ. ಆದರೆ ಸ್ತ್ರೀಯರಾದ ನಾವು ಮೇಲೆ ಹೇಳಿದ ಯಾವ ಕಾರ್ಯವನ್ನೂ ಮಾಡಲಾರದೆ ನರಕದಲ್ಲಿ ಬೀಳುತ್ತೇವೆ. ಇದು ಈ ಮಂತ್ರದ ಮುಖ್ಯಾಭಿಪ್ರಾಯವು, ಇಲ್ಲಿ ನ+ ಇತ್ = ನೇತ್ ಎಂಬ ಪದಗಳಿಗೆ ಯಾವ ಅರ್ಥವೂ ಇರುವುದಿಲ್ಲ. ಪದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿರುವವು, **ನರಕವೆಂದರೆ** ನಿ+ಅರಕಂ **ನ್ಯರಕಂ** ನೀಚರಿಂದ ಪಾಪಿಗಳಿಂದ ಹೋಗುವುದಕ್ಕೆ ಅರ್ಹವಾದ ಸ್ಥಾನವು ಅಥವಾ **ತಸ್ಮಿನ್ರಮಣಂ ಸ್ಥಾನಮಲ್ಪಮಪಿ ನಾಸ್ತೀತಿವಾ**–ಈ ನರಕದಲ್ಲಿ ಸುಖಪಡಲು ಸ್ವಲ್ಪವಾದರೂ ಸ್ಥಳವಿಲ್ಲದ್ದರಿಂದ ಇದಕ್ಕೆ ನರಕವೆಂಬ ಹೆಸರಾಗಿದೆ. ಎಂದು ನರಕ ಶಬ್ದದ ನಿರ್ವಚನವು.

ಅಥಾಪಿ ನ ಚೇತ್ಯೇಷ ಇದಿತ್ಯೇತೇನ ಸಂಪ್ರಯುಜ್ಯತೇಽನುಪೃಷ್ಟೇ
ನ ಚೇತ್ ಸುರಾಂ ಪಿಬಂತೀತಿ | ಸುರಾ ಸುನೋತೇಃ ||

ಮತ್ತೆ ಕೆಲವು ಸಂದರ್ಭಗಳಲ್ಲಿ **ನ ಚ** ಎಂಬ ಶಬ್ದಗಳು **ಇತ್** ಎಂಬ ನಿಪಾತದೊಡನೆ ಸೇರಿ ಪ್ರಶ್ನೆ ಮಾಡುವಾಗ ಉಪಯೋಗಿಸಲ್ಪಡುವುದು. **ನ ಚೇತ್ ಸುರಾಂ ಪಿಬಂತೀತಿ**–ಅವರು ಹೆಂಡವನ್ನು ಕುಡಿಯುವುದಿಲ್ಲವೇ ? ಎಂದು ಕೇಳುವರು.

**ಸುರಾ** ಎಂಬ ಪದವು ಹಿಂಡು ಎಂಬರ್ಥವುಳ್ಳ ಸುನೋತಿ ಧಾತುವಿನಿಂದ ನಿಷ್ಪನ್ನವಾಗಿದೆ. **ಸುರಾ** ಎಂಬ ಹೆಂಡವು ಹಿಟ್ಟು ಮೊದಲಾದ ನಾನಾ ವಸ್ತುಗಳಿಂದ ಭಟ್ಟಿ ಇಳಿಸಲ್ಪಡುವುದು ಇದು ಮಾದಕ ದ್ರವ್ಯವಾಗಿ ದ್ರವರೂಪದಲ್ಲಿರುವುದು.

ಏವಮುಚ್ಚಾವಚೇಷ್ವರ್ಥೇಷು ನಿಪತಂತಿ ತ ಉಪೇಕ್ಷಿತವ್ಯಾಃ ॥

ಈರೀತಿ ನಿಪಾತಪದಗಳು ನಾನಾ ವಿಧವಾದ ಅರ್ಥಗಳಲ್ಲಿ ಉಪಯೋಗಿಸಲ್ಪಡುವವು. ಆದ್ದರಿಂದ ಅವುಗಳ ಬಹುವಿಧ ಅರ್ಥಗಳನ್ನೂ ಪ್ರಯೋಗಗಳನ್ನೂ ಗಮನಿಸಬೇಕು.

**ಇತಿ ಪ್ರಥಮಾಧ್ಯಾಯೇ ಏಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು.

---

## ಅಥ ಪ್ರಥಮ್ಯಾಧಾಯೇ ದ್ವಾದಶಃ ಖಂಡಃ

**ಮೊದಲನೇ ಅಧ್ಯಾಯದಲ್ಲಿ ಹನ್ನೆರಡನೆಯ ಖಂಡವು**

---

ಇತೀಮಾನಿ ಚತ್ವಾರಿ ಪದಜಾತಾನ್ಯನುಕ್ರಾಂತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತತ್ರ ನಾಮಾನ್ಯಾಖ್ಯಾತಜಾನೀತಿ ಶಾಕಟಾಯನೋ ನೈರುಕ್ತಸಮಯಶ್ಚ ನ ಸರ್ವಾಣೀತಿ ಗಾರ್ಗ್ಯೋ ವೈಯಾಕರಣಾನಾಂ ಚೈಕೇ ತದ್ಯತ್ರ ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ಸಂವಿಜ್ಞಾತಾನಿ ತಾನಿ । ಯಥಾ ಗೌರಶ್ವಃ ಪುರುಷೋ ಹಸ್ತೀತ್ಯಥ ಚೇತ್ಸರ್ವಾಣ್ಯಾಖ್ಯಾತಜಾನಿ ನಾಮಾನಿ ಸ್ಯುರ್ಯಃ ಕಶ್ಚ ತತ್ಕರ್ಮ ಕುರ್ಯಾತ್ಸರ್ವಂ ತತ್ಸತ್ತ್ವಂ ತಥಾಚಕ್ಷೀರನ್ಯಃ ಕಶ್ಚಾಧ್ವಾನಮಶ್ನುವೀತಾಶ್ವಃ ಸ ವಚನೀಯಃ ಸ್ಯಾದ್ಯತ್ಕಿಂಚಿತ್ತೃಂದ್ಯಾತ್ತೃಣಂ ತದಥಾಪಿ ಚೇತ್ಸರ್ವಾಣ್ಯಾಖ್ಯಾತಜಾನಿ ನಾಮಾನಿ ಸ್ಯುರ್ಯಾವದ್ಭಿರ್ಭಾವೈಃ ಸಂಪ್ರಯುಜ್ಯೇತ ತಾವದ್ಭ್ಯೋ ನಾಮಧೇಯಪ್ರತಿಲಂಭಃ ಸ್ಯಾತ್ತತ್ರೈವಂ ಸ್ಥೂಣಾ ದರಶಯಾ ವಾ ಸಂಜನೀ ಚ ಸ್ಯಾತ್ ॥ ೧೨ ॥

ಇತೀಮಾನಿ ಚತ್ವಾರಿ ಪದಜಾತಾನ್ಯನುಕ್ರಾಂತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ॥

ಈ ಪ್ರಕಾರವಾಗಿ ನಾಲ್ಕುವಿಧ ಪದಗಳನ್ನು ಎಂದರೆ, ನಾಮ, ಆಖ್ಯಾತ, ಉಪಸರ್ಗ ನಿಪಾತಗಳೆಂಬ ನಾಲ್ಕು ಜಾತಿಯ ಪದಗಳನ್ನು ವಿವರಿಸಿದ್ದಾಯಿತು.

ತತ್ರ ನಾಮಾನ್ಯಾಖ್ಯಾತಜಾನೀತಿ ಶಾಕಟಾಯನೋ ನೈರುಕ್ತಸ-ಮಯಶ್ಚ ॥

ಈ ನಾಲ್ಕುವಿಧ ಪದಸಮೂಹದಲ್ಲಿ ನಾಮಪದಗಳೆಲ್ಲವೂ ಆಖ್ಯಾತ (ಕ್ರಿಯಾಪದ)ಗಳಿಂದ ಉತ್ಪನ್ನವಾದವುಗಳು ಎಂದು ಶಾಕಟಾಯನವರು ಹೇಳುವರು. ನೈರುಕ್ತಕಾರರ ಮತವು ಅದೇ ವಿಧವಾಗಿರುವುದು.

ನ ಸರ್ವಾಣೀತಿ ಗಾರ್ಗ್ಯೋ ವೈಯಾಕರಣಾನಾಂ ಚೈಕೇ ॥

ಮೇಲೆ ಹೇಳಿದಂತೆ ಎಲ್ಲಾ ನಾಮ ಪದಗಳೂ ಆಖ್ಯಾತಗಳಿಂದ ಉತ್ಪನ್ನವಾಗಿಲ್ಲ. ಕೆಲವು ಆಗಿರಬಹುದು ಕೆಲವು ಆಗಿಲ್ಲ ಎಂದು ಗಾರ್ಗ್ಯರು ಹೇಳುವರು. ವ್ಯಾಕರಣಶಾಸ್ತ್ರಜ್ಞರಲ್ಲೂ ಕೆಲವರು ಗಾರ್ಗ್ಯರ ಮತವನ್ನೇ (ಅಭಿಪ್ರಾಯವನ್ನೇ) ಸಮರ್ಥಿಸುವರು.

ತದ್ಯತ್ರ ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ಸಂವಿಜ್ಞಾತಾನಿ ತಾನಿ । ಯಥಾ ಗೌರಶ್ವಃ ಪುರುಷೋ ಹಸ್ತೀತಿ ॥

ಆಖ್ಯಾತ (ಕ್ರಿಯಾಪದ)ಗಳಿಂದ ಉತ್ಪನ್ನವಾದ ನಾಮಪದಗಳು ಎರಡು ವಿಧಗಳಾಗಿರುವವು. ಕೆಲವು ಶಬ್ದಗಳು ಉದಾತ್ತಾನುದಾತ್ತಾದಿ ಸ್ವರಸಂಜ್ಞೆಗಳಿಂದ ನಿರ್ದಿಷ್ಟವಾಗಿ ಧಾತುವಿನ ಪ್ರತ್ಯಕ್ಷಾರ್ಥ (ನೇರವಾದ) ಅರ್ಥವನ್ನು ಬೋಧಿಸುವವು. **ಕಾರಕ** (ಕೃಞ್-ಕರಣೇ) ಶಬ್ದವು ಮತ್ತು **ಪಾಚಕ** ಎಂಬ ಶಬ್ದಗಳು ಧಾತುಗಳಿಂದ ನೇರವಾಗಿ ಉತ್ಪನ್ನವಾಗಿರುವವು. ಮತ್ತೆ ಕೆಲವು ಶಬ್ದಗಳು ವ್ಯಾಕರಣ ಸೂತ್ರಾನುಸಾರವಾಗಿ ಮಾರ್ಪಟ್ಟು ಎಂದರೆ ಬದಲಾವಣೆಯನ್ನು ಹೊಂದಿಸುವವು. ಆದರೂ ಈ ವಿಧವಾದ ಶಬ್ದಗಳು ಸಂಸ್ಕಾರದಿಂದ (ಬದಲಾವಣೆಯಿಂದ) ವ್ಯತ್ಯಸ್ತವಾಗಿ ಕಂಡರೂ ಅವು ಆಖ್ಯಾತಗಳಿಂದ ಅಪ್ರತ್ಯಕ್ಷವಾಗಿ (ನೇರವಲ್ಲದ) ಉತ್ಪನ್ನವಾಗಿರುವವು. ಇವೆರಡು ಜಾತಿಯ ನಾಮಪದಗಳು ಅಖ್ಯಾತಜಗಳೆನಿಸುವವು. ಮತ್ತೆ ಕೆಲವು ನಾಮಪದಗಳಿಗೆ ಯಾವವಿಧದಿಂದಲೂ ಆಖ್ಯಾತಜಗಳೆಂದು ಹೇಳಲಾಗುವುದಿಲ್ಲ. ಏಕೆಂದರೆ ಅವುಗಳಿಗೆ ಆಖ್ಯಾತಸಂಬಂಧವಿರುವುದಿಲ್ಲ. ಮತ್ತು ಆಯಾಪ್ರದೇಶಗಳಲ್ಲಿ ಆ ಶಬ್ದಗಳು ಒಂದು ನಿರ್ದಿಷ್ಟಾರ್ಥದಲ್ಲಿ ಬಳಕೆಯಲ್ಲಿವೆ. ಅವುಗಳನ್ನು ಎಲ್ಲರೂ ಸಾಮಾನ್ಯವಾಗಿ ತಿಳಿದಿರುವರು ಹೇಗೆಂದರೆ-**ಗೌ : ಅಶ್ವ: ಪುರುಷ : ಹಸ್ತೀ** ಎಂಬ ಪದಗಳಿಗೆ ಆಖ್ಯಾತದ ನೇರವಾದ ಅಥವಾ ನೇರವಲ್ಲದ ಯಾವ ಸಂಬಂಧವೂ ಇರುವುದಿಲ್ಲ. ಆಯಾ ಪ್ರದೇಶಗಳಲ್ಲಿ ರೂಢಿಯಲ್ಲಿರುವಂತೆ ಆ ಪದಗಳು ನಿರ್ದಿಷ್ಟ ವಸ್ತುಗಳನ್ನು ಸೂಚಿಸುತ್ತವೆ. ಈರೀತಿ ನಾಮಪದಗಳು ಮೂರು ವಿಧವಾಗಿರುವವು.

ಅಥ ಚೇತ್ ಸರ್ವಾಣ್ಯಾಖ್ಯಾತಜಾನಿ ನಾಮಾನಿ ಸ್ಯುರ್ಯಃ ಕಶ್ಚ ತತ್ಕರ್ಮ ಕುರ್ಯಾತ್ಸರ್ವಂ ತತ್ ಸತ್ತ್ವಂ ತಥಾಽಽಚಕ್ಷೀರನ್ ಯಃ ಕಶ್ಚಾಧ್ವಾನಮಶ್ನುವೀತಾಶ್ವಃ ಸ ವಚನೀಯಃ ಸ್ಯಾತ್ ಯತ್ಕಿಂಚಿತ್ ತೃಂದ್ಯಾತ್ತೃಣಂ ತತ್ ॥

ಒಂದು ವೇಳೆ ಸಮಸ್ತ ನಾಮಪದಗಳೂ ಆಖ್ಯಾತಗಳಿಂದ ಉತ್ಪನ್ನವಾದವು ಎಂದೂ ಆ ಆಖ್ಯಾತಪದಗಳ ಅರ್ಥಗಳನ್ನೊಳಗೊಂಡಿರುವುವು ಎಂದೂ ಹೇಳಿದಲ್ಲಿ ಆಗ ಆಯಾ ಕರ್ಮಗಳನ್ನು ಮಾಡುವ ಪುರುಷನು ಆ ಕರ್ಮದ ಸ್ವಭಾವವನ್ನೇ ಅನುಸರಿಸಿ ಕರೆಯಲ್ಪಡಬೇಕಾಗುವುದು ಹೇಗೆಂದರೆ—ಒಬ್ಬ ಪುರುಷನು ವೇಗವಾಗಿ ಮಾರ್ಗವನ್ನತಿಕ್ರಮಿಸಿದರೆ ಅವನನ್ನು ಅಶ್ವವೆಂದು ಕರೆಯಬೇಕಾಗುವುದು. ಏಕೆಂದರೆ ವೇಗವಾಗಿ ಮಾರ್ಗವನ್ನತಿಕ್ರಮಿಸುವ ಗುಣವು ಅಥವಾ ಸಾಮರ್ಥ್ಯವು ಅಶ್ವಕ್ಕಿರುವುದು ಮತ್ತು ಯಾವುದು (ಮುಳ್ಳಿನಂತೆ) ಚುಚ್ಚುವುದೋ ಅದನ್ನು ತೃಣವೆಂದು ಹೇಳಬೇಕಾಗುವುದು ಎಂದರೆ ಹುಲ್ಲನ್ನು ಮುಳ್ಳೆಂದು ಹೇಳಬೇಕಾಗುವುದು. ಆದ್ದರಿಂದ ಎಲ್ಲಾ ನಾಮಪದಗಳಿಗೂ ಯಾವುದಾದರೂ ಒಂದು ವಿಧದಿಂದ ಆಖ್ಯಾತ ಸಂಬಂಧವನ್ನು ಹೇಳಿದಲ್ಲಿ ಆ ಶಬ್ದಗಳ ಅರ್ಥಗಳು ಬಳಕೆಗೆ ಸರಿಹೊಂದುವುದಿಲ್ಲ. ಈ ಕಾರಣದಿಂದ ಅನೇಕ ಶಬ್ದಗಳು ಆಖ್ಯಾತಜಗಳಲ್ಲವೆಂದೂ ಸ್ವತಂತ್ರ ಶಬ್ದಗಳೆಂದೂ ಹೇಳಬೇಕಾಗುವುದು.

ಅಥಾಪಿ ಚೇತ್ಸರ್ವಾಣ್ಯಾಖ್ಯಾತಜಾನಿ ನಾಮಾನಿ ಸ್ಯುರ್ಯಾವದ್ಭಿರ್ಭಾವೈಃ ಸಂಪ್ರಯುಜ್ಯೇತ ತಾವದ್ಭ್ಯೋ ನಾಮಧೇಯಪ್ರತಿಲಂಭಃ ಸ್ಯಾತ್ ತತ್ರೈವಂ ಸ್ಥೂಣಾ ದರಶಯಾ ಸಂಜನೀ ಚ ಸ್ಯಾತ್ ॥

ಸಮಸ್ತ ನಾಮಪದಗಳೂ ಆಖ್ಯಾತಗಳಿಂದಲೇ ಉತ್ಪನ್ನವಾದವುಗಳು ಎಂದು ಹೇಳಿದರೆ ಆಗ ಎಷ್ಟು ಆಖ್ಯಾತಗಳಿರುವವೋ ಅಥವಾ ಆಖ್ಯಾತಗಳು ಎಷ್ಟು ವಿಧ ಭಾವಗಳನ್ನು ಸೂಚಿಸುವವೋ ಅಷ್ಟು ಅಥವಾ ಆ ವಿಧವಾದ ನಾಮಪದಗಳಿರಬೇಕಾಗುತ್ತವೆ. ಉದಾಹರಣೆಗಾಗಿ **ಸ್ಥಾಣು** ಎಂಬ ಶಬ್ದಕ್ಕೆ ಕಂಬವೆಂದು ಅರ್ಥವು ರೂಢಿಯಲ್ಲಿದ್ದರೂ ಆಖ್ಯಾತಜವೆಂದು ಪರಿಗಣಿಸಿ ಅದರಂತೆ ಅರ್ಥವನ್ನು ಹೇಳುವುದಾದರೆ **ದರಶಯ** ತೊಲೆಯನ್ನು ಹೊರುವ ವಸ್ತುವು ಅಥವಾ **ಸಂಜನೀ** ಹಳ್ಳದಲ್ಲಿ ಹೂಳಲ್ಪಟ್ಟಿರುವ ವಸ್ತುವು ಎಂದು ಹೇಳಬೇಕಾಗುತ್ತದೆ. ಇದು ರೂಢಿಯಲ್ಲಿರುವ ಅರ್ಥಕ್ಕೆ ವಿರೋಧವಾಗಿರುವುದು ಆದ್ದರಿಂದ ಎಲ್ಲಾ ನಾಮಪದಗಳೂ ಆಖ್ಯಾತಗಳಿಂದ ಉತ್ಪನ್ನವಾಗಿಲ್ಲವೆಂಬ ಮತವೇ ಸಮಂಜಸವಾದುದು.

**ಇತಿ ಪ್ರಥಮಾಧ್ಯಾಯೇ ದ್ವಾದಶಃ ಖಂಡಃ**

ಹನ್ನೆರಡನೆಯ ಖಂಡವು ಸಮಾಪ್ತವು

## ಅಥ ಪ್ರಥಮಾಧ್ಯಾಯೇ ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ಅಥಾಪಿ ಯ ಏಷಾಂ ನ್ಯಾಯವಾನ್ಕಾರ್ಮನಾಮಿಕಃ ಸಂಸ್ಕಾರೋ ಯಥಾ ಚಾಪಿ ಪ್ರತೀತಾರ್ಥಾನಿ ಸ್ಯುಸ್ತಥೈನಾನ್ಯಾಚಕ್ಷೀರನ್ಪು-ರುಷಂ ಪುರಿಶಯ ಇತ್ಯಾಚಕ್ಷೀರನ್ನಷ್ಟೇತ್ಯಶ್ವಂ ತರ್ದನಮಿತಿ ತೃಣಮಥಾಪಿ ನಿಷ್ಪನ್ನೇಽಭಿವ್ಯಾಹಾರೇಽಭಿವಿಚಾರಯಂತಿ ಪ್ರಥ-ನಾತ್ಪೃಥಿವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ಕಿಮಾಧಾರ-ಶ್ಚೇತ್ಯಥಾನನ್ವಿತೇಽರ್ಥೇಽಪ್ರಾದೇಶಿಕೇ ವಿಕಾರೇ ಪದೇಭ್ಯಃ ಪದೇತ-ರಾರ್ಧಾನ್ತ್ಸಂಚಸ್ಕಾರ ಶಾಕಟಾಯನ ಏತೇಃ ಕಾರಿತಂ ಚ ಯಕಾರಾದಿಂ ಚಾಂತಕರಣಮಸ್ತೇಃ ಶುದ್ಧಂ ಚ ಸಕಾರಾದಿಂ ಚಾಥಾಪಿ ಸತ್ತ್ವಪೂರ್ವೋ ಭಾವ ಇತ್ಯಾಹುರಪರಸ್ಮಾದ್ಭಾ-ವಾತ್ಪೂರ್ವಸ್ಯಪ್ರದೇಶೋ ನೋಪಪದ್ಯತ ಇತಿ ತದೇತನ್ನೋ-ಪಪದ್ಯತೇ ॥೧೩॥

ಎಲ್ಲಾ ನಾಮಪದಗಳೂ ಆಖ್ಯಾತಜಗಳೆಂದು ಹೇಳುವ ಸಂದರ್ಭದಲ್ಲಿ ಉಂಟಾಗುವ ಬಾಧಕಗಳನ್ನು ಹೇಳುವರು.

ಅಥಾಪಿ ಯ ಏಷಾಂ ನ್ಯಾಯವಾನ್ ಕಾರ್ಮನಾಮಿಕಃ ಸಂಸ್ಕಾರೋ
ಯಥಾ ಚಾಪಿ ಪ್ರತೀತಾರ್ಥಾನಿ ಸ್ಯುಸ್ತಥೈನಾನ್ಯಾಚಕ್ಷೀರನ್ ಪುರುಷಂ
ಪುರಿಶಯ ಇತ್ಯಾಚಕ್ಷೀರನ್ನಷ್ಟೇತ್ಯಶ್ವಂ ತರ್ದನಮಿತಿ ತೃಣಂ ॥

ಎಲ್ಲಾ ನಾಮಗಳೂ ಆಖ್ಯಾತಗಳಿಂದಲೇ ಉತ್ಪನ್ನವಾದವು ಆದ್ದರಿಂದ ನಾಮಪದಗಳಿಗೆ ಆಖ್ಯಾತಗಳ ಅರ್ಥವನ್ನೇ ಹೇಳಬೇಕು, ಅಥವಾ ಆಖ್ಯಾತವು ಯಾವ ಕರ್ಮ (ಕ್ರಿಯೆ)ವನ್ನು ಹೇಳುವುದೋ ಆ ಕರ್ಮಸಂಸ್ಕಾರದಿಂದ ಕೂಡಿದ ಅರ್ಥವನ್ನೇ ಆ ನಾಮಪದಕ್ಕೆ ಹೇಳಬೇಕಾಗುವುದು, ಎಂದರೆ ನಾಮಪದ ಶಬ್ದದಲ್ಲಿರುವ ಆಖ್ಯಾತ ಪದಾರ್ಥವನ್ನು ಹೇಳಬೇಕಾಗುವುದು ಉದಾಹರಣೆಗಾಗಿ **ಪುರುಷ ಶಬ್ದಕ್ಕೆ ಪುರಿಶಯ :** ಎಂದರೆ ಪುರದಲ್ಲಿ (ನಗರದಲ್ಲಿ) ವಾಸಮಾಡುವವನು ಎಂದರ್ಥವನ್ನು ಹೇಳ ಬೇಕಾಗುವುದು. ಆದರೆ ಎಲ್ಲಾ ಪುರಷರೂ ನಗರಗಳಲ್ಲಿ ವಾಸಮಾಡುವುದಿಲ್ಲ. ಹಾಗೆಯೇ, ಅಶ್ನೋತೀತ್ಯಷ್ಟಾ–ಅಶ್ವ : (ತೃಣಾದಿಗಳನ್ನೂ) ತಿನ್ನುವುದರಿಂದ ಇದಕ್ಕೆ ಅಶ್ವವೆಂದು ಹೇಳಿದರೆ ಅಶ್ವಮಾತ್ರವೇ ಹುಲ್ಲನ್ನು ತಿನ್ನುವುಲ್ಲ. ಇತರ ಪ್ರಾಣಿಗಳೂ ತಿನ್ನುವವು. ಮತ್ತು ತರ್ದನಮಿತಿ ತೃಣಂ–ಚುಚ್ಚುವುದರಿಂದ ತೃಣವೆನ್ನುವುದಾದರೆ ತೃಣ–ಹುಲ್ಲಿಗೂ ತರ್ದನ (ಚುಚ್ಚು

ವುದು) ಎಂದು ಹೇಳಬೇಕಾಗುವುದು ಈ ತರ್ದನ (ಚುಚ್ಚುವಿಕೆಯೆಂಬ) ಗುಣವು ಹುಲ್ಲಿನಲ್ಲಿರುವುದಿಲ್ಲ. ಆದ್ದರಿಂದ ಯಾವು ದಾದರೂ ಒಂದು ಧಾತುವಿನಿಂದ ನಿಷ್ಪತ್ತಿಯು ಸಿದ್ಧವಾಗುವುದರಿಂದ ಮಾತ್ರ ಆ ಶಬ್ದಕ್ಕೆ ಆ ನಿಷ್ಪತ್ತಿಯನ್ನು ಹೇಳಲಾಗುವದಿಲ್ಲ. ಹಾಗೆ ಹೇಳುವುದಾದರೆ ಆ ಶಬ್ದಕ್ಕೆ ಬಳಕೆಯಲ್ಲಿರುವ ಅರ್ಥಕ್ಕೆ ವಿಪರೀತಾರ್ಥವು ಉಂಟಾಗುವದು ಇದು ಸರಿಯಲ್ಲ. ಆದುದರಿಂದ ಅನವಶ್ಯಕವಾದ ನಿಷ್ಪತ್ತಿಯನ್ನು ಹೇಳಬೇಕಾಗಿಲ್ಲ ಈ ಕಾರಣದಿಂದ ಎಲ್ಲಾ ನಾಮಪದಗಳೂ ಆಖ್ಯಾತದಿಂದ ಉತ್ಪನ್ನವಾದ ವುಗಳಲ್ಲ ಎಂಬ ವಾದವೇ ಸಮಂಜಸವು.

ಅಥಾಪಿ ನಿಷ್ಪನ್ನೇಽಭಿವ್ಯಾಹಾರೇಽಭಿವಿಚಾರಯಂತಿ ಪ್ರಥನಾತ್ ಪೃಥಿ-
ವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ ಕಿಮಾಧಾರಶ್ಚೇತಿ ||

ಈ ವಿಷಯದಲ್ಲಿ ಮತ್ತೊಂದು ಬಾಧಕವಿರುವುದು. ಒಂದು ವೇಳೆ ಲೋಕರೂಢಿಯಲ್ಲಿ ಅಥವಾ ವ್ಯವಹಾರದಲ್ಲಿ ಬಳಕೆಯಲ್ಲಿರುವ ಅರ್ಥವನ್ನು ಒಂದು ಶಬ್ದಕ್ಕೆ ಹೇಳಬಹುದು ಅದಕ್ಕೆ ಆಖ್ಯಾತ ಸಂಬಂಧವಾದ ನಿಷ್ಪತ್ತಿಯೂ ಸರಿಹೊಂದಬಹುದು ಅಂತಹ ಸಂದರ್ಭದಲ್ಲಿ ಆಖ್ಯಾತದ ಅರ್ಥಾನುಸಾರವಾಗಿ ನಿಷ್ಪತ್ತಿಯನ್ನು ಹೇಳಿ ಆಖ್ಯಾತದಿಂದ ಆ ಪದವು ನಿಷ್ಪನ್ನವಾಗಿದೆಯೆಂದು ಹೇಳಿದರೆ ಬಾಧಕವೇನು ? ಎಂದರೆ, ಆದಕ್ಕೂ ಬಾಧಕವಿದ್ದೇ ಇದೆ. ಹೇಗೆಂದರೆ **ಪ್ರಥನಾತ್ ಪೃಥಿವೀತ್ಯಾಹುಃ** ಭೂಮಿಯು ಹರಡಿರುವುದರಿಂದ ಇದಕ್ಕೆ ಪೃಥಿವೀ ಎಂಬ ಹೆಸರು ಬಂದಿದೆ. ಇದಕ್ಕೆ ಮಾಡಿರುವ ಆಖ್ಯಾತ ಸಂಬಂಧವಾದ ನಿಷ್ಪತ್ತಿಯೂ ಸರಿಯಾಗಿದೆ. ಆದ್ದರಿಂದ ಹೀಗೆ ಹೇಳುವುದರಲ್ಲಿ ಬಾಧಕವೇನು ? ಎಂದರೆ ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬೇಕಾಗುವುದು– ಈ ವಿಧವಾದ ರೂಪನಿಷ್ಪತ್ತಿಯೂ ಕ್ರಮಬದ್ಧವಾಗಿಯೂ ವ್ಯಾಕರಣ ನಿಯಮಗಳಿಗೆ ಅನುಸಾರವಾಗಿಯೂ, ಲೋಕ ವ್ಯವ ಹಾರಗಳಿಗೆ ಹೊಂದಿಕೊಂಡಂತೆಯೂ ಇರುವುದು. ಆದರೆ ಇವರಲ್ಲಿ ಗಮನಾರ್ಹವಾದ ಒಂದಂಶವಿರುವುದು. **ಪ್ರಥನಾತ್ ಪೃಥಿವೀ**–ಇದು ಹರಡಲ್ಪಟ್ಟಿರುವುದರಿಂದ ಇದಕ್ಕೆ ಪೃಥಿವೀ ಎಂದು ಹೆಸರು ಬಂದಿದೆ ಎಂದು ಹೇಳುವಾಗ ಇದನ್ನು ಯಾರು ಹರಡಿದರು ? ಸಮಸ್ತ ಪ್ರಾಣಿಗಳಿಗೂ ಪೃಥಿವಿಯೇ ಆಧಾರವಾಗಿರುವುದರಿಂದ ಅದನು ಯಾರು ಹರಡಿದರು ? ಹರಡಲು ಸಾಧ್ಯವೇ? ಇದಕ್ಕೆ ಆಧಾರವೇನು ? ಇತ್ಯಾದಿ ಪ್ರಶ್ನೆಗಳು ಏಳುವವು. ಈ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಕೊಡಲು ಯಾರಿಂದಲೂ ಸಾಧ್ಯವಿಲ್ಲ ಆದ್ದರಿಂದ ಈ ವಿಧವಾದ ನಿಷ್ಪತ್ತಿಯಿಂದ ಬಾಧಕವಿದ್ದೇ ಇರುವುದು.

ಅಥಾನನ್ವಿತೇಽರ್ಥೇ ಪ್ರಾದೇಶಿಕೇ ವಿಕಾರೇ ಪದೇಭ್ಯಃ ಪದೇ–
ತರಾರ್ಧಾನ್ ಸಂಚಸ್ಕಾರ ಶಾಕಟಾಯನ ಏತೇಃ ಕಾರಿತಂ ಚ
ಯಕಾರಾದಿಂ ಚಾಂತಕರಣಮಸ್ತೇಃ ಶುದ್ಧಂ ಚ ಸಕಾರಾದಿಂ ಚ||

ಇದಲ್ಲದೆ ಶಾಕಟಾಯನರೆಂಬ ಆಚಾರ್ಯರು ಕೆಲವು ಶಬ್ದಗಳಿಗೆ ನಿಷ್ಪತ್ತಿಯನ್ನು ಹೇಳುವಾಗ ಒಂದೇ ಧಾತುವನ್ನು ಬಳಸುವರು. ಕೆಲವು ಶಬ್ದಗಳಿಗೆ ನಿಷ್ಪತ್ತಿಯನ್ನು ಹೇಳುವಾಗ ಬೇರೆ ಬೇರೆ ಅರ್ಥಗಳುಳ್ಳ ಎರಡು, ಮೂರು ಧಾತುಗಳನ್ನು ಬಳಸುವರು. ಹೇಗೆಂದರೆ ಸತ್ಯಶಬ್ದಕ್ಕೆ ರೂಪನಿಷ್ಪತ್ತಿಯನ್ನು ಹೇಳುವಾಗ **ಸತ್** ಎಂಬುದು **ಅಸ–ಭುವಿ** ಎಂಬ ಧಾತುವಿನಿಂದಲೂ **ಯ** ಎಂಬುದು **ಇಣ್–ಗತೌ** ಎಂಬ ಧಾತುವಿನಿಂದಲೂ ಈ ರೀತಿ ಎರಡು ಧಾತುಗಳ ಸಮುಚ್ಚಯಾರ್ಥವೂ ಸೇರಿ **ಸತ್ಯ** ಎಂಬ ಶಬ್ದವಾಗುವುದು ಎಂದು ಹೇಳುವರು. ಈ ವಿಧವಾದ ನಿಷ್ಪತ್ತಿಯು ಕಾರಣಸಹಿತವಾಗಿರುವುದಿಲ್ಲ ಮತ್ತು ವ್ಯಾಕರಣಕ್ಕೆ ವಿರೋಧವಾಗಿರುವುದು. ಶುದ್ಧವಾದ ಮತ್ತು ಸರಿಯಾದ ಅಸ–ಭುವಿ ಧಾತುವಿನಿಂದ ಉತ್ಪನ್ನವಾಗಿರುವ ಈ

ಶಬ್ದಕ್ಕೆ ಬೇರೆಯಾವ ಮತ್ತು ಸಂಬಂಧವಿಲ್ಲದ ಇಣ್-ಗತೌ ಎಂಬ ಧಾತುವಿನ ರೂಪಾಂತರವನ್ನು ಸೇರಿಸಬೇಕಾದುದು ಅನವಶ್ಯಕವಾಗಿರುವುದು ಮತ್ತು ಪ್ರಾದೇಶಿಕವಾದ ಎಂದರೆ ಸಂದರ್ಭೋಚಿತವಾದ ಅರ್ಥಕ್ಕೂ ವಿರೋಧವಾಗಿರುವುದು. ಆದ್ದರಿಂದ ಈ ವಿಧವಾದ ರೂಪನಿಷ್ಪತ್ತಿಯು ಸರಿಯಲ್ಲ.

ಅಥಾಪಿ ಸತ್ತ್ವಪೂರ್ವೋ ಭಾವ ಇತ್ಯಾಹುರಪರಸ್ಮಾದ್ಭಾವಾತ್
ಪೂರ್ವಸ್ಯ ಪ್ರದೇಶೋ ನೋಪಪದ್ಯತ ಇತಿ ತದೇತನ್ನೋಪಪದ್ಯತೇ॥

ಶಾಕಟಾಯನ ಮತದಲ್ಲಿ ಇನ್ನೂ ಒಂದು ದೋಷವಿದೆ. **ಸತ್ಯ** ಶಬ್ದದ ನಿರ್ವಚನವನ್ನು ಹೇಳುವಾಗ ನಾಮಪದವು ಸತ್ತ್ವಪ್ರಧಾನ ಬೇಕು. ಸತ್ತ್ವವೆಂದರೆ ಇರುವುದು ಎಂದರ್ಥವಿರುವಾಗ ಸತ್ಯಶಬ್ದವು ಅಸ-ಭುವಿ ಎಂದು ಧಾತುವಿನಿಂದ ನಿಷ್ಪನ್ನವಾಗಿ ಒಂದೇ ಅರ್ಥವು ಎರಡಾವರ್ತಿ ಪ್ರತಿಪಾದಿತವಾಗುವುವು. ಇದು ಅಸಂಭವವು. ಆದುದರಿಂದ ಎಲ್ಲಾ ನಾಮಪದಗಳೂ ಆಖ್ಯಾತಗಳಿಂದಲೇ ಉತ್ಪನ್ನವಾಗುವವು ಎಂಬ ಶಾಕಟಾಯನರ ಮತವು ಸಿದ್ಧಿಸುವುದಿಲ್ಲ. ಕೆಲವು ಶಬ್ದಗಳು ಆಖ್ಯಾತಗಳಿಂದ ನಿಷ್ಪನ್ನವಾಗುವವು, ಕೆಲವು ಶಬ್ದಗಳು ಆಖ್ಯಾತಗಳಿಂದ ನಿಷ್ಪನ್ನವಾಗುವುದಿಲ್ಲ. ಅವು ಸ್ವತಂತ್ರ ಶಬ್ದಗಳು ಎಂಬ ಗಾರ್ಗ್ಯರ ಮತವೇ ಆದರಣೀಯವೆನಿಸುವುದು.

**ಇತಿ ಪ್ರಥಮಾಧ್ಯಾಯೇ ತ್ರಯೋದಶಃ ಖಂಡಃ ॥**

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು

---

## ಅಥ ಪ್ರಥಮಾಧ್ಯಾಯೇ ಚತುರ್ದಶಃ ಖಂಡಃ

### ಹದಿನಾಲ್ಕನೆಯ ಖಂಡವು

ಯಥೋ ಹಿ ನು ವಾ ಏತತ್ತದ್ಯತ್ರ ಸ್ವರಸಂಸ್ಕಾರೌ ಸಮರ್ಥೌ
ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ಸರ್ವಂ ಪ್ರಾದೇಶಿಕ-
ಮಿತ್ಯೇವಂ ಸತ್ಯನುಪಾಲಂಭ ಏಷಭವತಿ ಯಥೋ ಏತದ್ಯಃ
ಕಶ್ಚ ತತ್ಕರ್ಮ ಕುರ್ಯಾತ್ಸರ್ವಂ ತತ್ಸತ್ತ್ವಂ ತಥಾಚಕ್ಷೀರನ್ನಿತಿ
ಪಶ್ಯಾಮಃ ಸಮಾನಕರ್ಮಣಾಂ ನಾಮಧೇಯಪ್ರತಿಲಂಭಮೇ-
ಕೇಷಾಂ ನೈಕೇಷಾಂ ಯಥಾ ತಕ್ಷಾ ಪರಿವ್ರಾಜಕೋ ಜೀವನೋ

ಭೂಮಿಜ ಇತ್ಯೇತೇನೈವೋತ್ತರಃ ಪ್ರತ್ಯುಕ್ತೋ ಯಥೋ ಏತದ್ಯಥಾ ಚಾಪಿ ಪ್ರತೀತಾರ್ಥಾನಿ ಸ್ಯುಸ್ತಥೈನಾನ್ಯಾಚಕ್ಷೀರನ್ನಿತಿ ಸನ್ತ್ಯಲ್ಪಪ್ರಯೋಗಾಃ ಕೃತೋಽಪ್ಯೈಕಪದಿಕಾ ಯಥಾ ವ್ರತತಿರ್ದಮೂನಾ ಜಾಟ್ಯ ಆಟ್ಣಾರೋ ಜಾಗರೂಕೋ ದರ್ವಿಹೋಮೀತಿ ಯಥೋ ಏತನ್ನಿಷ್ಪನ್ನೇಽಭಿವ್ಯಾಹಾರೇಽಭಿವಿಚಾರಯನ್ತೀತಿ ಭವತಿ ಹಿ ನಿಷ್ಪನ್ನೇಽಭಿವ್ಯಾಹಾರೇ ಯೋಗಪರೀಷ್ಟಿಃ ಪ್ರಥನಾತ್ ಪೃಥಿವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ ಕಿಮಾಧಾರಶ್ಚೇತ್ಯಥ ವೈ ದರ್ಶನೇನ ಪೃಥುರಪ್ರಥಿತಾ ಚೇದಪ್ಯನ್ಯೈಃ ತಥಾಪ್ಯೇವಂ ಸರ್ವ ಏವ ದೃಷ್ಟಪ್ರವಾದಾ ಉಪಾಲಭ್ಯನ್ತೇ ॥ ಯಥೋ ಏತತ್ಪದೇಭ್ಯಃ ಪದೇತರಾರ್ಧಾನ್ತ್ಸಂಚಸ್ಕಾರೇತಿ ಯೋಽನನ್ವಿತೇಽರ್ಥೇ ಸಂಚಸ್ಕಾರ ಸ ತೇನ ಗರ್ಹ್ಯಃ ಸೈಷಾ ಪುರುಷಗರ್ಹಾ ನ ಶಾಸ್ತ್ರಗರ್ಹಾ ಇತಿ ಯಥೋ ಏತದಪರಸ್ಮಾದ್ಭಾವಾತ್ಪೂರ್ವಸ್ಯ ಪ್ರದೇಶೋ ನೋಪಪದ್ಯತ ಇತಿ ಪಶ್ಯಾಮಃ ಪೂರ್ವೋತ್ಪನ್ನಾನಾಂ ಸತ್ತ್ವಾನಾಮಪರಸ್ಮಾದ್ಭಾವಾನ್ನಾಮಧೇಯಪ್ರತಿಲಂಭಮೇಕೇಷಾಂ ನೈಕೇಷಾಂ ಯಥಾ ಬಿಲ್ವಾದೋ ಲಂಬಚೂಡಕ ಇತಿ ಬಿಲ್ವಂ ಭರಣಾದ್ವಾ ಭೇದನಾದ್ವಾ ॥೧೪॥

ಎಲ್ಲಾ ನಾಮಪದಗಳೂ ಧಾತುಸಾಧಿತಗಳು ಎಂದು ಶಾಕಟಾಯನರ ಮತವು. ಆದರೆ ಗಾರ್ಗ್ಯರು ಮತ್ತು ಇತರ ಕೆಲವು ವೈಯಾಕರಣರು, ಎಲ್ಲಾ ನಾಮಪದಗಳೂ ಧಾತುಸಾಧಿತಗಳಲ್ಲ; ಯಾವಯಾವ ನಾಮಪದಗಳು ಮೂಲಧಾತುವಿನ ಅರ್ಥವನ್ನು ಸ್ಪಷ್ಟವಾಗಿ ಸೂಚಿಸುತ್ತವೆಯೋ ಮತ್ತು ಯಾವ ಪದಗಳು ನಿಷ್ಪತ್ತಿ ನಿಯಮಗಳಿಗನುಗುಣವಾಗಿ ನಿಷ್ಪಾದಿತವೋ ಅವುಗಳು ಮಾತ್ರ ಧಾತುಸಾಧಿತಗಳಾಗಬಹುದು ; ಇತರ ಪದಗಳು ರೂಢನಾಮಗಳು ; ಎಲ್ಲಾ ಪದಗಳೂ ಸಾಧಿತಗಳೇ ಆದರೆ, ಪ್ರತಿವಸ್ತುವಿಗೂ ಅದು ಎಷ್ಟು ಕ್ರಿಯೆಗಳಿಗೆ ಸಂಬಂಧಿಸಿದೆಯೋ ಅಷ್ಟು ಹೆಸರುಗಳಿರಬೇಕಾಗುತ್ತದೆ; ಮತ್ತು ಒಂದು ವಿಧವಾದ ಕರ್ಮ ಮಾಡುವ ಎಲ್ಲಾ ವಸ್ತುಗಳಿಗೂ ಒಂದೇ ಹೆಸರೂ ಇರಬೇಕಾಗುತ್ತದೆ; ಎಂದು ಆಕ್ಷೇಪಿಸುತ್ತಾರೆ. ಇವುಗಳಲ್ಲಿ ಮೊದಲನೆಯದಕ್ಕೆ ಸಮಾಧಾನವನ್ನು ಹೇಳುತ್ತಾರೆ.

ಯಥೋ ಹಿ ನು ವಾ ಏತತ್ತದ್ಯತ್ರ ಸ್ವರಸಂಸ್ಕಾರೌ ಸಮರ್ಥೌ

ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ಸರ್ವಂ ಪ್ರಾದೇಶಿಕಮಿತ್ಯೇವಂ
ಸತ್ಯನುಪಾಲಂಭ ಏಷ ಭವತಿ ||

ಯಥಾ, **ಉ, ಹಿ, ಸು, ವಾ** (ಆ) ಇವುಗಳೆಲ್ಲಾ ನಿಪಾತಗಳು. ಇವುಗಳಲ್ಲಿ ಎರಡುಮಾತ್ರ **ಯತ್, ತಾವತ್** ಎಂಬರ್ಥ ಕೊಡತಕ್ಕವುಗಳು ಉಳಿದ ಮೂರು ವಾಕ್ಯಪೂರಕಗಳು. **ಯತ್ರ ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಮ್ ತತ್‌ಸರ್ವಂ ಪ್ರಾದೇಶಿಕಮ್ ಇತಿ**–ಯಾವಯಾವ ಸಂದರ್ಭಗಳಲ್ಲಿ ಸ್ವರ ಮತ್ತು ವ್ಯಾಕರಣ ಸಂಸ್ಕಾರಗಳು ಶಾಸ್ತ್ರಾನುಸಾರವಾಗಿದ್ದು, ಮೂಲಭೂತ ಧಾತುವಿನಿಂದ ಹೇಳಲ್ಪಡುವ ಕ್ರಿಯೆಯನ್ನು ಸೂಚಿಸುವ ಶಕ್ತಿಯು ಕಂಡುಬರುತ್ತದೆಯೋ, ಆಯಾಪದಗಳೆಲ್ಲವೂ ಧಾತುಸಾಧಿತಗಳು, **ಏವಂಸತಿ,** ಹೀಗೆ ಹೇಳುವುದಾದರೆ, **ಏಷ ಅನುಪಾಲಂಭಃ ಭವತಿ,** ಅದು ನಿರ್ದುಷ್ಟವಾಯಿತು, ಸಮ್ಮತವಾದುದು ಆಯಿತು. ಈ ಅಂಶದಲ್ಲಿ ವಿವಾದವೇ ಇಲ್ಲ.

ಯಥೋ ಏತದ್ಯಃ ಕಶ್ಚ ತತ್ಕರ್ಮ ಕುರ್ಯಾತ್ ಸರ್ವಂ ತತ್ಸತ್ತ್ವಂ
ತಥಾಚಕ್ಷೀರನ್ನಿತಿ ಪಶ್ಯಾಮಃ ಸಮಾನಕರ್ಮಣಾಂ ನಾಮಧೇಯ
ಪ್ರತಿಲಂಭಮೇಕೇಷಾಂ ನೈಕೇಷಾಂ ಯಥಾ ತಕ್ಷಾ ಪರಿವ್ರಾಜಕೋ
ಜೀವನೋ ಭೂಮಿಜ ಇತಿ ||

ಮತ್ತು, ಯಾರು ಯಾರು ಒಂದೇ ಕೆಲಸವನ್ನು ಮಾಡುತ್ತಾರೆಯೋ ಅಂದರೆ ಮೂಲಭೂತವಾದ ಧಾತುಗಳಿಂದ ಉಕ್ತವಾದ ಕ್ರಿಯಾಸಂಬಂಧವಿರುತ್ತದೆಯೋ ಆ ವಸ್ತುಗಳಿಗೆಲ್ಲವೂ ಒಂದೇ ಹೆಸರು ಇರಬೇಕಾಗುತ್ತದೆಯೆಂಬ ಆಕ್ಷೇಪಣೆಗೆ ಸಮಾಧಾನವನ್ನು ಈ ರೀತಿ ಕೊಡಬಹುದು.(**ಏತದ್ಯಃ ಕಶ್ಚ ತತ್ಕರ್ಮ ಕುರ್ಯಾತ್ ಸರ್ವಂ ತತ್ಸತ್ತ್ವಂ ತಥಾಽಽಚಕ್ಷೀ–ರನ್ನಿತಿ**). **ಪಶ್ಯಾಮಃ** ನಾವೇ ಲೋಕದಲ್ಲಿ ಕಾಣುತ್ತಿದ್ದೇವೆ. **ಸಮಾನಕರ್ಮಣಾಂ ನಾಮಧೇಯಪ್ರತಿಲಂಭ–ಮೇಕೇಷಾಂ ನೈಕೇಷಾಂ** ಒಂದೇ ವಿಧವಾದ ಕ್ರಿಯಾಸಂಬಂಧವಿದ್ದರೂ, (**ಏಕೇಷಾಂ ನಾಮಧೇಯಪ್ರತಿಲಂಭಂ**) ಕೆಲವರಿಗೆ ಮಾತ್ರ ಸಮಾನವಾದ ಹೆಸರು ಲಭಿಸಿದೆ. (**ಏಕೇಷಾಂ ನ**) ಕೆಲವರಿಗೆ ಸಮಾನವಾದ ಹೆಸರು ಇಲ್ಲ. ಉದಾಹರಣೆಗಾಗಿ, **ತಕ್ಷಾ , ಪರಿವ್ರಾಜಕಃ, ಜೀವನಃ, ಭೂಮಿಜಃ** ಈ ಪದಗಳನ್ನು ತೆಗೆದುಕೊಳ್ಳೋಣ. ಮರಗೆಲಸವನ್ನು ಜೀವಿಕೆಯಾಗಿ ಇಟ್ಟುಕೊಂಡಿರುವವನಿಗೆ ಮಾತ್ರ **ತಕ್ಷಾ** ಎನ್ನುತ್ತಾರೆ. ಇದರಂತೆಯೇ **ಪರಿವ್ರಾಜಕಃ** ಎನ್ನುವುದು ಕೂಡ ಜೀವನದಲ್ಲಿ ಜಿಹಾಸೆ ಹುಟ್ಟಿ, ಸರ್ವಸಂಗತ್ಯಾಗಮಾಡಿ ಹೊರಡುವವರಿಗೆಲ್ಲಾ **ಪರಿವ್ರಾಜಕ** ಎಂಬ ಹೆಸರು. ಆದರೆ, **ಜೀವನ** ವೆನ್ನುವುದು ಇಕ್ಷುರಸಕ್ಕೆ ಮಾತ್ರ ಅನ್ವಯಿಸುತ್ತದೆ. ಜೀವನಕಾರಕವಾದ ಎಲ್ಲ ವಸ್ತುಗಳಿಗೂ ಆ ಹೆಸರು ಇಲ್ಲ. ಇದರಂತೆ **ಭೂಮಿಜ** ಎಂದರೆ ಭೂಮಿಯಲ್ಲಿ ಹುಟ್ಟುವ ಎಲ್ಲಾ ವಸ್ತುಗಳೂ ಅಲ್ಲ, ಅಂಗಾರಕ ಅಥವಾ ವೃಕ್ಷ ಎಂದು ರೂಢಿ ಬಂದಿದೆ.

ಏತೇನೈವೋತ್ತರಃ ಪ್ರತ್ಯುಕ್ತಃ

ಒಂದೊಂದು ವಸ್ತುವೂ ಎಷ್ಟು ಕ್ರಿಯೆಗಳೊಡನೆ ಸಂಬಂಧ ಪಡೆದಿರುತ್ತದೆಯೋ, ಅಷ್ಟು ಹೆಸರುಗಳನ್ನು ಹೊಂದ ಬೇಕಾದೀತು (ಯಾವದ್ಭಿರ್ಭಾವೈಃ ಸಂಪ್ರಯುಜ್ಯೇತ ತಾವದ್ಭ್ಯೋ ನಾಮಧೇಯ ಪ್ರತಿಲಂಭಃ ಸ್ಯಾತ್) ಎಂಬುದೂ ಹಿಂದೆ ಹೇಳಿದುದರಿಂದಲೇ ನಿರಾಕರಿಸಿದಂತಾಯಿತು—ಒಂದೊಂದು ವಸ್ತುವಿಗೆ ಎಷ್ಟೇ ಕ್ರಿಯಾ ಸಂಬಂಧವಿದ್ದರೂ, ಲೋಕದಲ್ಲಿ

ಸ್ವಭಾವವಾಗಿ ಒಂದೇ ಹೆಸರು ವ್ಯವಸ್ಥಿತವಾಗಿರುತ್ತದೆ. ಹಾಗಲ್ಲದೆ ಪ್ರತಿಪಕ್ಷಿಯಿಂದ ಸೂಚಿಸಲ್ಪಟ್ಟಂತೆ, ಒಂದೊಂದು ವಸ್ತುವಿಗೂ ಪ್ರಾಣಿಗೂ ಅನೇಕ ನಾಮಧೇಯಗಳಿರುವುದಾದರೆ, ವ್ಯವಹಾರವೇ ಸಾಧ್ಯವಾಗುವುದಿಲ್ಲ. ಆದುದರಿಂದ ಲೋಕವು ಒಂದೊಂದೇ ಹೆಸರಿನಿಂದ ಒಂದೊಂದು ವಸ್ತುವನ್ನೂ ಕರೆಯುವುದನ್ನು ಬಳಕೆಗೆ ತಂದಿದೆ. ಮೇಲೆ ಉದಹರಿಸಿರುವ ಪರಿವ್ರಾಜಕ, ತಕ್ಷಾ, ಮುಂತಾದುವುಗಳೇ ಇಲ್ಲಿಯೂ ದಿಕ್ಸೂಚಕಗಳಾಗುತ್ತವೆ. ಆದುದರಿಂದ ನಾಮಪದಗಳು **ಆಖ್ಯಾತಜ**ಗಳಲ್ಲವೆಂಬುದು ಸರಿಯಲ್ಲ.

ಯಥೋ ಏತದ್ಯಥಾ ಚಾಪಿ ಪ್ರತೀತಾರ್ಥಾನಿ ಸ್ಯುಸ್ತಥೈನಾನ್ಯಾಚ-
ಕ್ಷೀರನ್ನಿತಿ ॥ ಸನ್ತ್ಯಲ್ಪಪ್ರಯೋಗಾಃ ಕೃತೋಽಪ್ಯೈಕಪದಿಕಾ ಯಥಾ
ವ್ರತತಿರ್ದಮೂನಾ ಜಾಟ್ಯ ಆಟ್ಣಾರೋ ಜಾಗರೂಕೋ ದರ್ವಿ-
ಹೋಮೀತಿ ॥

ಇನ್ನು, ನಾಮಪದಗಳಿಗೆ ನಿಷ್ಕೃಷ್ಟವಾದ, ಸಂದೇಹಕ್ಕವಕಾಶವೇ ಇಲ್ಲದ ಅರ್ಥವನ್ನು ಕೊಡುವ ಹೆಸರುಗಳಿರಬೇಕು ಎಂಬುದು. ಲೋಕದಲ್ಲಿ ಈ ರೀತಿ ನಿಸ್ಸಂದೇಹವಾದ ಪ್ರಯೋಗಗಳು ಅಪರೂಪ. ಇದನ್ನು ಶಾಸ್ತ್ರದ ದೋಷವೆನ್ನಬಾರದು. ಲೋಕದಲ್ಲಿ ರೂಢಿಯಲ್ಲಿರುವ ಪದಗಳನ್ನು ಅನುಸರಿಸಿ ಶಾಸ್ತ್ರವು ಪ್ರವರ್ತಿಸುತ್ತದೆಯೇ ಹೊರತು, ಅನ್ಯಥಾ ಅಲ್ಲ. ಬಹಳ ಅಪರೂಪವಾಗಿ, ಒಂದೇ ಪದದಿಂದ ನಿಷ್ಪನ್ನವಾಗಿ, ಕೃತ್ಪ್ರತ್ಯಯಾಂತವಾಗಿ, ಶುದ್ಧವಾದ ಸ್ಪಷ್ಟವಾದ ಅರ್ಥವನ್ನು ತಿಳಿಸುವ ಪದಗಳೂ ಪ್ರಯೋಗದಲ್ಲಿವೆ. **ವ್ರತತಿಃ**-ಆವರಿಸಿಕೊಳ್ಳುವ ಸ್ವಭಾವವುಳ್ಳ ಬಳ್ಳಿ, **ದಮೂನಾಃ**-ದಮನ ಶಕ್ತಿಯುಳ್ಳ **ಅಗ್ನಿ** ಅಥವಾ **ಅತಿಥಿ, ಜಾಟ್ಯಃ** ಜಟಾಧಾರಿಯೂ, **ಆಟ್ಣಾರಃ** ಅಲೆಯುವ ಸ್ವಭಾವವುಳ್ಳವನು, **ಜಾಗರೂಕಃ**-ಎಚ್ಚರವಾಗಿರುವವನು, **ದರ್ವಿಹೋಮೀ**-ದರ್ವಿಯಿಂದ ಹೋಮಮಾಡುವವನು. ಆದುದರಿಂದ, ಲೋಕ ವ್ಯವಹಾರವನ್ನನುಸರಿಸಿ ಶಾಸ್ತ್ರ ಪ್ರವೃತ್ತಿಯಾದುದರಿಂದ, ಎಲ್ಲಾ ನಾಮಪದಗಳೂ ನಿಷ್ಕೃಷ್ಟಾರ್ಥದ್ಯೋತಕಗಳಲ್ಲನೆಂಬುವ ಕಾರಣದಿಂದ, ನಾಮಪದಗಳು ಆಖ್ಯಾತಗಳಿಂದ ನಿಷ್ಪನ್ನವೆಂಬ ಶಾಸ್ತ್ರನಿಯಮವನ್ನೇ ದೂಷಿಸುವುದು ಅಸಾಧು.

ಯಥೋ ಏತನ್ನಿಷ್ಪನ್ನೇಽಭಿವ್ಯಾಹಾರೇಽಭಿವಿಚಾರಯನ್ತೀತಿ,
ಭವತಿ ಹಿ ನಿಷ್ಪನ್ನೇಽಭಿವ್ಯಾಹಾರೇ ಯೋಗಪರೀಷ್ಟಿಃ-ಪ್ರಥನಾತ್
ಪೃಥಿವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ ಕಿಮಾಧಾರ-
ಶ್ಚೇತ್ಯಥ ವೈ ದರ್ಶನೇನ ಪೃಥುರಪ್ರಥಿತಾ ಚೇದಪ್ಯನ್ಯೈಃ ॥
ಅಥಾಪ್ಯೇವಂ ಸರ್ವ ಏವ ದೃಷ್ಟಪ್ರವಾದಾ ಉಪಾಲಭ್ಯಂತೇ—

ಶಾಕಟಾಯನರ ಮೇಲಿನ ಮತ್ತೊಂದು ಆಪಾದವಿದು—**ಯಥೋ ಏತನ್ನಿಷ್ಪನ್ನೇ ಅಭಿವ್ಯಾಹಾರೇ ಅಭಿವಿಚಾರಯನ್ತಿ**—ಪ್ರಸಿದ್ಧವಾದ ನಾಮಪದಗಳ ವಿಷಯಗಳಲ್ಲೂ ವೃಥಾ ಚರ್ಚೆ, ವಿಮರ್ಶೆ ಮಾಡುತ್ತಾರೆ ಎಂಬುದು. ಅದಕ್ಕೆ ಸಮಾಧಾನವು ಈ ರೀತಿಯದಾಗಬಹುದು. ಪ್ರಸಿದ್ಧವಾದ ಪದಗಳಿಗೇ ನಿಷ್ಪತ್ತಿಯನ್ನು ತಿಳಿಸಬೇಕಾದುದು ಶಾಸ್ತ್ರಧರ್ಮವು. ರೂಢಿಗೆ ಬರದೇ ಇರುವ ಪದದ ಪರೀಕ್ಷೆಯು ನಿರರ್ಥಕವಾದೀತು, ಆದುದರಿಂದ ಪ್ರಚಲಿತವಾದ ಪದಗಳನ್ನು ಪರೀಕ್ಷೆ

ಮಾಡುವುದು ಯುಕ್ತವೇ ಸರಿ. ಪ್ರತಿಪಕ್ಷಿಯು ಹೇಳುತ್ತಾನೆ—ಹಾಗಾದರೆ, ಪೃಥಿವೀ ಪದಕ್ಕೆ **ಪ್ರಥನಾತ್ಪೃಥಿವೀತ್ಯಾಹುಃ** ಎಂದು ನಿಷ್ಪತ್ತಿಯನ್ನು ಹೇಳಿದ್ದೀರಿ, ಪ್ರಥನವನ್ನು (ಹರಡುವಿಕೆ) ಮಾಡಿದವರು ಯಾರು? (**ಕ ಏನಾಮಪ್ರಥಯಿಷ್ಯತ್, ಕಿಮಾಧಾರಶ್ಚ**) ಮತ್ತು ಆ ರೀತಿ ಭೂಮಿಯನ್ನೇ ಹರಡಬೇಕಾದರೆ, ಆತನು ಭೂಮಿಯಿಂದ ಹೊರಗೆ ಇರಬೇಕಾಗುತ್ತದೆ, ಅಂತಹವನಿಗೆ ಆಧಾರವಾದರೂ ಯಾವುದು? ಅಥವಾ ಪೃಥುತ್ವಕ್ಕೆ ಆಧಾರವು ಯಾವುದು? ಭೂಮಿಯು ಪೃಥು (ಅಗಲ) ವಾಗಿರುವುದರಿಂದ ಅದಕ್ಕೆ (ಪ್ರಥನಾತ್) ಪೃಥಿವೀ ಎಂಬುದಾಗಿ ಹೇಳಬಹುದು. ಭೂಮಿಯು ಅಗಲವಾಗಿವೆಯೆಂಬುದು ನಮಗೆ ದೃಷ್ಟಿಗೋಚರವಾಗಿದೆ, ಇದೇ ಪೃಥುತ್ವಕ್ಕೆ ಆಧಾರ. ಈ ರೀತಿ ನಮ್ಮ ಅನುಭವವು (ದೃಷ್ಟಿ, ಮುಂತಾದುವು) ಜ್ಞಾನಸಾಧನ ಗಳೆಂಬುದು ನಿರ್ವಿವಾದವಾದುದು. ಉದಾ—ಬೆಂಕಿಯು ಸುಡುತ್ತದೆ, ಉದಕವು ದ್ರವರೂಪವಾಗಿದೆ, ಮುಂತಾದ ಅನುಭವ ಗಳೂ, ದೃಷ್ಟ್ಯಾದಿಗಳಿಗೆ ನಿರ್ದುಷ್ಟಜ್ಞಾನ ಸಾಧನತ್ವವನ್ನು ಅಂಗೀಕರಿಸದಿದ್ದರೆ, ದುಷ್ಟವಾಗಬೇಕಾದೀತು.

ಇನ್ನೂ ಎರಡು ಆಕ್ಷೇಪಗಳಿವೆ ಶಾಕಟಾಯನರ ಮೇಲೆ, ಅವುಗಳಲ್ಲಿ ಮೊದಲನೆಯದು,

ಯಥೋ ಏತತ್ಪದೇಭ್ಯಃ ಪದೇತರಾರ್ಧಾನ್ ಸಂಚಸ್ಕಾರೇತಿ
ಯೋಽನನ್ವಿತೇಽರ್ಥೇ ಸಂಚಸ್ಕಾರ ಸ ತೇನ ಗರ್ಹ್ಯಃ ಸೈಷಾ ಪುರುಷ
ಗರ್ಹಾ ನ ಶಾಸ್ತ್ರಗರ್ಹಾ ಇತಿ ॥

ಒಂದು ಪದದ ಭಾಗಗಳನ್ನು ಬೇರೆ ಬೇರೆ ಪದಗಳಿಂದ ತೆಗೆದುಕೊಂಡು ಜೋಡಿಸಿದನು ಎಂಬುದು ಆಯಾ ವ್ಯಕ್ತಿಗೆ ಸಂಬಂಧಿಸಿದುದು. ಒಂದಕ್ಕೊಂದು ಹೊಂದದೇ ಇರುವ ಪದಭಾಗಗಳನ್ನು ಜೋಡಿಸಿದ್ದಾರೆ. ಅದು ಶಾಸ್ತ್ರಪದ್ಧತಿಯನ್ನು ಪದಗಳ ಅರ್ಥವನ್ನು ತಿಳಿಯದವನು ಮಾಡಿದ ತಪ್ಪು. ಅಂತಹ ಪುರುಷನನ್ನು ನಿಂದಿಸಬೇಕಾದುದು ಉಚಿತವೇ. ಆದರೆ ಒಬ್ಬ ವ್ಯಕ್ತಿಯ ದೋಷವನ್ನೇ ದೃಷ್ಟಿಯಲ್ಲಿಟ್ಟು ಶಾಸ್ತ್ರವೇ ದೂಷ್ಯವೆನ್ನುವುದು ಅನುಚಿತವು. ಅನನ್ವಿತವಾದ ಭಾಗಗಳನ್ನು ಶಾಕಟಾಯನರು ಜೋಡಿಸಿದ್ದಾರೆ ಎಂಬುದೂ ಸರಿಯಲ್ಲ. ಅನುಗತವಾದ ಧಾತುಗಳಿಂದಲೇ ಒಂದು ನಾಮಪದವನ್ನು ನಿಷ್ಪತ್ತಿ ಮಾಡಿದ್ದಾರೆ. ಈ ನಿಷ್ಪಾದನ ಕ್ರಮವು ಅರ್ಥವಾಗದಿದ್ದರೆ, ಅದು ಓದುವವನ ಮೌಢ್ಯವೇ ಹೊರತು ಆಚಾರ್ಯರ ಅಜ್ಞಾನವಲ್ಲ. (ಈ ಸಂದರ್ಭದಲ್ಲಿ ಪೂರ್ವಪಕ್ಷಿಯು ತೆಗೆದುಕೊಂಡಿರುವ ಉದಾಹರಣೆಯು **ಸತ್ಯಂ** ಎಂಬ ಪದ. ಎರಡನೆಯ ಆಕ್ಷೇಪವಿದು.

ಯಥೋ ಏತದಪರಸ್ಮಾದ್ಭಾವಾತ್ ಪೂರ್ವಸ್ಯ ಪ್ರದೇಶೋ ನೋಪಪದ್ಯತೇ
ಇತಿ ಪಶ್ಯಾಮಃ ಪೂರ್ವೋತ್ಪನ್ನಾನಾಂ ಸತ್ತ್ವಾನಾಮಪರಸ್ಮಾದ್ಭಾವಾ-
ನ್ನಾಮಧೇಯಪ್ರತಿಲಂಭಮೇಕೇಷಾಂ ನೈಕೇಷಾಂ ಯಥಾ
ಬಿಲ್ವಾದೋ ಲಂಬಚೂಡಕ ಇತಿ ॥ ಬಿಲ್ವಂ ಭರಣಾದ್ವಾ-
ಭೇದನಾದ್ವಾ ॥ ೧೪. ॥

ಅಪರಸ್ಮಾತ್ ಭಾವಾತ್—ಭವಿಷ್ಯತ್ಕಾಲದಲ್ಲಿ ಕಾಲದಲ್ಲಿ ಸಂಭವಿಸುವ ಕ್ರಿಯೆಯಿಂದ ಪೂರ್ವಸ್ಯ ಪ್ರದೇಶಃ—ಹಿಂದಿನ (ಅಂದರೆ ಆ ಕ್ರಿಯೆಯು ನಡೆಯುವುದಕ್ಕಿಂತ ಮುಂಚೆ) ಹೆಸರನ್ನು ನಿರ್ಣಯಿಸುವುದು ಸಾಧುವಲ್ಲ ಎಂದರೆ, ನಮ್ಮ ಅನುಭವ ವನ್ನು, ಲೋಕರೂಢಿಯನ್ನು ವಿಮರ್ಶಿಸೋಣವೆನ್ನುತ್ತಾರೆ ಸಿದ್ಧಾಂತಿಗಳು. ಪ್ರಪಂಚದಲ್ಲಿ, ಹುಟ್ಟಿದ ಕೂಡಲೇ, ಆ ಪ್ರಾಣಿ

ಗಳಿಗೆ, ಅಥವಾ ಫಲ ಪುಷ್ಪಗಳಿಗೆ, ಮುಂದೆ ಅವುಗಳು ಮಾಡಬಹುದಾದ ಕೆಲಸದ (ಪೂರ್ವಾನುಭವವೇ ಇದಕ್ಕೆ ಆಧಾರ) ಅಥವಾ ಅವುಗಳಿಂದಾಗುವ ಉಪಯೋಗದ (ಇಲ್ಲಿಯೂ ಪೂರ್ವಾನುಭವವು ಸಾಧಕ) ಆಧಾರದ ಮೇಲೆ, ಹೆಸರುಗಳನ್ನಿಡುವುದು ರೂಢಿಯಲ್ಲಿದೆ. ಇದು ಎಲ್ಲಾ ವಸ್ತುಗಳಿಗೂ ಪ್ರಾಣಿಗಳಿಗೂ ಅನ್ವಯಿಸುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಭವಿಷ್ಯತ್ಕಾಲದ ಕ್ರಿಯೆಗಳು ನಾಮಸೂಚಕಗಳಾಗುತ್ತವೆ, ಕೆಲವು ಸಂದರ್ಭಗಳಲ್ಲಿ ಇಲ್ಲ. ಬಿಲ್ವಾದಃ ಎಂಬುದು ಮರಕುಟಿಗ ಪಕ್ಷಿಯ ಹೆಸರು. ಇದು ದೊಡ್ಡದಾದ ಮೇಲೆಯೇ (ಮರವನ್ನು ಕುಟ್ಟಬಲ್ಲದು) ಬಿಲ್ವವನ್ನು ತಿನ್ನಬಲ್ಲದು, ಹಾಗೆಯೇ **ಲಂಬಚೂಡಕಃ** ಎಂಬುದು ಒಬ್ಬ ಹುಡುಗನ ಹೆಸರು. ದೊಡ್ಡವನಾದ ಮೇಲೆ, ಮನೆಯ ಇತರರಂತೆ, ಅವನಿಗೂ ಉದ್ದವಾದ ಕೂದಲು ಬೆಳೆಯುವುದರಿಂದ ಆ ಹೆಸರು ಇಟ್ಟಿರುತ್ತಾರೆ. ಹೀಗೆ 'ಬಿಲ್ವ' ಎಂಬುದೂ **ಭರಣಾತ್**, ಕ್ಷಾಮಾದಿಕಾಲಗಳಲ್ಲಿ ಜನಗಳ ಉದರಭರಣಕ್ಕೆ ಸಹಾಯಕವಾದುದರಿಂದಲೋ **ಭೇದನಾದ್ವಾ**, ಅದನ್ನು ಉಪಯೋಗಿಸುವ ಮುಂಚೆ ಭೇದಿಸಿ (ಒಡೆಯ) ಬೇಕಾದುದರಿಂದಲೋ, ಆ ಹೆಸರನ್ನು ಪಡೆದಿದೆ.

ಆದುದರಿಂದ ಪೂರ್ವಪಕ್ಷಿಯು ನಿರೂಪಿಸಿದ ಆಕ್ಷೇಪಗಳು ಯಾವುವೂ, ಎಲ್ಲಾ ನಾಮಪದಗಳು ಆಖ್ಯಾತಗಳಿಂದ ಸಾಧಿತವಲ್ಲವೆಂಬ ಅಭಿಪ್ರಾಯವನ್ನು ಸಮರ್ಥಿಸಲಾರವು. ಶಾಕಟಾಯನರ 'ನಾಮಾನ್ಯಾಖ್ಯಾತಜಾನಿ' ಎಂಬ ಮತವು ಸಾಧುವೆಂಬುದು ಸಿದ್ಧವಾಯಿತು.

**ಇತಿ ಪ್ರಥಮಾಧ್ಯಾಯೇ ಚತುರ್ದಶಃ ಖಂಡಃ**

ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು.





## ಅಥ ಪ್ರಥಮಾಧ್ಯಾಯೇ ಪಂಚದಶಃ ಖಂಡಃ

### ಹದಿನೈದನೆಯ ಖಂಡವು

---

ಅಥಾಪೀದಮನ್ತರೇಣ ಮನ್ತ್ರೇಷ್ವರ್ಥಪ್ರತ್ಯಯೋ ನವಿದ್ಯತೇಽರ್ಥಮಪ್ರತಿಯತೋ ನಾತ್ಯನ್ತಂ ಸ್ವರಸಂಸ್ಕಾರೋದ್ದೇಶಸ್ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥಸಾಧಕಂ ಚ ಯದಿ ಮನ್ತ್ರಾರ್ಥಪ್ರತ್ಯಯಾಯಾನರ್ಥಕಂ ಭವತೀತಿ ಕೌತ್ಸೋಽನರ್ಥಕಾ ಹಿ ಮನ್ತ್ರಾಸ್ತದೇತೇನೋಪೇಕ್ಷಿತವ್ಯಂ ನಿಯತವಾಚೋಯುಕ್ತಯೋ ನಿಯತಾನುಪೂರ್ವ್ಯಾ ಭವನ್ತ್ಯತ್ರಾಪಿ ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯನ್ತೇ ।

ಉರುಪ್ರಥಸ್ವೇತಿ ಪ್ರಥಯತಿ । ಪ್ರೋಹಾಣೀತಿ ಪ್ರೋಹತ್ಯ-
ಥಾಪ್ಯನುಪಪನ್ನಾರ್ಥಾ ಭವನ್ತಿ । ಓಷಧೇ ತ್ರಾಯಸ್ವೈನಂ
ಸ್ವಧಿತೇ ಮೈನಂ ಹಿಂಸೀರಿತ್ಯಾಹ ಹಿಂಸನ್ನಥಾಪಿ ವಿಪ್ರತಿ-
ಷಿದ್ಧಾರ್ಥಾ ಭವನ್ತಿ । ಏಕ ಏವ ರುದ್ರೋಽವತಸ್ಥೇ ನ
ದ್ವಿತೀಯಃ । ಅಸಂಖ್ಯಾತಾ ಸಹಸ್ರಾಣಿ ಯೇ ರುದ್ರಾ ಅಧಿ
ಭೂಮ್ಯಾಂ । ಅಶತ್ರುರಿಂದ್ರ ಜಜ್ಞಿಷೇ ಶತಂಸೇನಾ ಅಜಯ-
ತ್ಸಾಕಮಿಂದ್ರ ಇತ್ಯಥಾಪಿ ಜಾನನ್ತಂ ಸಂಪ್ರೇಷ್ಯತ್ಯಗ್ನಯೇ
ಸಮಿಧ್ಯಮಾನಾಯಾನುಬ್ರೂಹೀತ್ಯಥಾಪ್ಯಾಹಾದಿತಿಃ ಸರ್ವಮಿತಿ ।
ಅದಿತಿರ್ದ್ಯೌರದಿತಿರಂತರಿಕ್ಷಮಿತಿ । ತದುಪರಿಷ್ಟಾದ್ವ್ಯಾಖ್ಯಾಸ್ಯಾ-
ಮೋಽಥಾಪ್ಯವಿಸ್ಪಷ್ಟಾರ್ಥಾ ಭವನ್ತ್ಯಮ್ಯಗ್ಯಾದೃಶ್ಮಿಞ್ಜಾರ-
ಯಾಯಿ ಕಾಣುಕೇತಿ ॥ ೧೫.

ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಲಕ್ಷಣಗಳನ್ನು ಹೇಳಿ, ನಾಮಪದಗಳು ಆಖ್ಯಾತಗಳಿಂದ ನಿಷ್ಪನ್ನವಾಗುತ್ತವೆಯೆಂದು ಸಮರ್ಥಿಸಿ, ಈಗ ನಿರುಕ್ತ ಶಾಸ್ತ್ರದ ಪ್ರಯೋಜನಗಳನ್ನು ಹೇಳಲು ಹೊರಟಿದ್ದಾರೆ. ಈ ಪಾದದಲ್ಲಿ ಎರಡನ್ನೂ ಮುಂದಿನ ಪಾದದಲ್ಲಿ ಮೂರನ್ನೂ ಪ್ರತಿಪಾದಿಸುತ್ತಾರೆ.

ಅಥಾಪೀದಮನ್ತರೇಣ ಮನ್ತ್ರೇಷ್ವರ್ಥಪ್ರತ್ಯಯೋ ನ ವಿದ್ಯತೇ ॥ ಅರ್ಥ-
ಮಪ್ರತಿಯತೋ ನಾತ್ಯನ್ತಂ ಸ್ವರಸಂಸ್ಕಾರೋದ್ದೇಶಃ ॥ ತದಿದಂ
ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥಸಾಧಕಂ ಚ ॥

ಮತ್ತೂ, ಈ ಶಾಸ್ತ್ರವಿಲ್ಲದೇ ಮಂತ್ರಗಳ ಅರ್ಥಜ್ಞಾನವು ನಿಸ್ಸಂದಿಗ್ಧವಾದ ರೀತಿಯಲ್ಲಿ ಉಂಟಾಗುವುದಿಲ್ಲ. ಈ ರೀತಿ ನಿಸ್ಸಂದೇಹವಾದ ಅರ್ಥಜ್ಞಾನವಿಲ್ಲದಿದ್ದ ಮೇಲೆ, ವ್ಯಾಕರಣಶಾಸ್ತ್ರದಿಂದ ಲಭ್ಯವಾಗುವ ಸ್ವರ ಮತ್ತು ಪ್ರಕೃತಿಪ್ರತ್ಯಯಾದಿಗಳ ಉಪದೇಶವು ಚೆನ್ನಾಗಿ ಆಗುವುದಿಲ್ಲ. ಅರ್ಥಜ್ಞಾನವಿಲ್ಲದಿದ್ದವನಿಗೆ ವ್ಯಾಕರಣಶಾಸ್ತ್ರಜ್ಞಾನವು ಸಾರ್ಥಕವಾಗುವುದಿಲ್ಲ. ಆದುದರಿಂದ ಈ ನಿರುಕ್ತವೆಂಬಶಾಸ್ತ್ರವು ವ್ಯಾಕರಣಕ್ಕೆ ಪೂರಕವಾಗುತ್ತದೆ. ವ್ಯಾಕರಣ ಮತ್ತು ನಿರುಕ್ತಗಳು ಎರಡೂ ಸೇರಿದರೆ ಪೂರ್ಣ ಜ್ಞಾನವುಂಟಾಗುತ್ತದೆ. ವ್ಯಾಕರಣಪೂರಕವು ನಿರುಕ್ತವು ಎನ್ನುವುದಾದರೆ, ವ್ಯಾಕರಣದ ಒಂದು ಭಾಗವಾಗಲಿ, ಇದಕೆ ಪ್ರತ್ಯೇಕವಾದ ಶಾಸ್ತ್ರತ್ವವು ಹೇಗೆ ? ಎಂದರೆ, ನಿರುಕ್ತವು (ಸ್ವಾರ್ಥಸಾಧಕಂಚ) ತನ್ನ ಸ್ಥಾನವನ್ನು ಉಳಿಸಿಕೊಂಡು ವ್ಯಾಕರಣ ಶಾಸ್ತ್ರಕ್ಕೆ ಉಪಕಾರವಾಗುತ್ತದೆ. ಲೋಕದಲ್ಲಿ, ಸ್ವಪ್ರಯೋಜನವನ್ನು ಬಿಡದೇ, ಇತರರಿಗೆ ಸಹಾಯಕವಾಗುವುದು ಅನುಭವ ಸಿದ್ಧವಾಗಿದೆ. ಇದರಂತೆಯೇ ಈ ಶಾಸ್ತ್ರಗಳೂ ಕೂಡ ನಿರುಕ್ತದಲ್ಲಿ ಅರ್ಥನಿರ್ವಚನವಾದರೆ, ವ್ಯಾಕರಣದಲ್ಲಿ ಲಕ್ಷಣವು ಲಬ್ಧವಾಗುತ್ತದೆ.

ನಿರುಕ್ತವು ಅರ್ಥಜ್ಞಾನಕ್ಕೆ ಸಾಧಕನೆಂದು ಹೇಳಲು ಆಕ್ಷೇಪಗಳಿವೆಯೆಂದು ಕೌತ್ಸರು ಎಂಬುವರು ಅಭಿಪ್ರಾಯಪಡುತ್ತಾರೆ

ಯದಿ ಮಂತ್ರಾರ್ಥಪ್ರತ್ಯಯಾರ್ಥಯಾನರ್ಥಕಂ ಭವತೀತಿ ಕೌತ್ಸಃ ।
ಅನರ್ಥಕಾ ಹಿ ಮನ್ತ್ರಾಃ ॥

ಈ ಶಾಸ್ತ್ರವು ಮಂತ್ರಗಳ ಸರಿಯಾದ ಅರ್ಥವನ್ನು ತಿಳಿಯುವುದಕ್ಕೆ ಸಹಾಯಕನೆಂದು ನೀವು ಹೇಳಿದರೆ, ಅದು ಅರ್ಥವಿಲ್ಲದ ಮಾತಾಗುತ್ತದೆ ಎಂದು ಕೌತ್ಸರು ಹೇಳುತ್ತಾರೆ, ಏಕೆಂದರೆ, ಮನ್ತ್ರಗಳು ಅರ್ಥವಿಲ್ಲದವುಗಳು, ಇದು ಸ್ಪಷ್ಟವಾಗಿಯೇ ಇದೆ.

ತದೇತೇನೋಪೇಕ್ಷಿತವ್ಯಮ್ ॥

ಮನ್ತ್ರಗಳು ಅರ್ಥವಿಲ್ಲದವು ಎಂಬುದು ಈ ಮುಂದೆ ಹೇಳುವುದರಿಂದ ಸಮರ್ಥಿತವಾಗುತ್ತದೆ. ಅಥವಾ, ಈ ಅಭಿಪ್ರಾಯವು ಸರಿಯೇ ಎಂಬುದಾಗಿ, ಏತೇನ– ಈ ನಿರುಕ್ತಪಕ್ಷವನ್ನಿಂದ ಉಪೇಕ್ಷಿತವ್ಯಮ್–ವಿಮರ್ಶಿಸಲ್ಪಡಬೇಕು. ಮಂತ್ರಗಳು ಅರ್ಥರಹಿತವೆಂಬ ಈ ಮತವನ್ನು ತಿಳಿದಮೇಲೆ, ಮಂತ್ರಗಳು ಅರ್ಥಯುಕ್ತವಾದವು ಎಂಬ ತನ್ನ ಮತವನ್ನು ಮತ್ತೆ ಪರೀಕ್ಷಿಸಬೇಕು.

ನಿಯತವಾಚೋಯುಕ್ತಯೋ ನಿಯತಾನುಪೂರ್ವ್ಯಾ ಭವನ್ತಿ ॥

ಮಂತ್ರಗಳು ಅರ್ಥರಹಿತವೆಂದು ಹೇಳಲು ಆಧಾರವೇನು ? ಎಂದರೆ, ವೇದಗಳಲ್ಲಿ ಬರುವ ನಿರ್ದೇಶಗಳೆಲ್ಲವೂ (ನಿಯತವಾಚಃ) ಪದಗಳೂ ನಿಯತ, (ನಿಯತಾನುಪೂರ್ವ್ಯಾಯ ಭವನ್ತಿ) ಅವುಗಳ ಕ್ರಮವೂ ವ್ಯವಸ್ಥಿತವಾಗಿರುತ್ತವೆ. "ಅಗ್ನಿರ್ಮೂರ್ಧಾ........'' ಎಂದು ಇದೆ. ಇದನ್ನು ಅಗ್ನಿರ್ಮೂರ್ಧಾ ಎಂದೇ ಪ್ರಯೋಗಿಸಬೇಕು. ವಹ್ನಿರ್ಮೂರ್ಧಾ ಅಥವಾ ಮೂರ್ಧಾಗ್ನಿಃ ಎಂಬುದಾಗಿ ಪ್ರಯೋಗಿಸುವ ಹಾಗಿಲ್ಲ. ಅದರಿಂದ ಅನರ್ಥವುಂಟಾಗುತ್ತದೆ. ಆದುದರಿಂದ ಮಂತ್ರಗಳು ಉಚ್ಚಾರಣೆಗೋಸ್ಕರವೇ ಇವೆಯೇ ಹೊರತು, ಅರ್ಥವನ್ನು ತಿಳಿಯಲಿ ಎಂದಲ್ಲ. ಮಂತ್ರಗಳ ಅರ್ಥವೇ ಅನವಶ್ಯಕವಾದಮೇಲೆ ಅರ್ಥತಿಳಿಸುವ ಶಾಸ್ತ್ರಕ್ಕೆ ಸಾರ್ಥಕತೆ ಎಲ್ಲಿ ಬರಬೇಕು ?

ಅಥಾಪಿ ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯನ್ತೇ—ಉರು
ಪ್ರಥಸ್ವೇತಿ ಪ್ರಥಯತಿ। ಪ್ರೋಹಾಣೀತಿ ಪ್ರೋಹತಿ ॥

ಅಥಾಪಿ—ಇದೂ ಅಲ್ಲದೆ, **ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯನ್ತೇ**.—ಬ್ರಾಹ್ಮಣಗಳಲ್ಲಿ ಈ ಮಂತ್ರಗಳ ವಿನಿಯೋಗವನ್ನು ಹೇಳುವಾಗ, ಇಂಥಾ ಕರ್ಮವನ್ನು, ಈ ಮಂತ್ರವನ್ನು ಉಚ್ಚರಿಸುತ್ತಾ, ಮಾಡಬೇಕು, ಎಂದು ಹೇಳಿವೆ. ನಿಮ್ಮ ಮತದಲ್ಲಿ, ಮಂತ್ರಗಳೇ ಸ್ವತಃ ಅರ್ಥವಿಶಿಷ್ಟವಾದವು. ಆದುದರಿಂದ ಅವುಗಳ ವಿನಿಯೋಗವು ಅವುಗಳಿಂದಲೇ ತಿಳಿಯಬೇಕು. ಹಾಗೆ ತಿಳಿಯುವಾಗ ಬ್ರಾಹ್ಮಣಗಳಲ್ಲಿ ವಿನಿಯೋಗವನ್ನು ಏಕೆ ಹೇಳಿದ್ದಾರೆ ? ಬ್ರಾಹ್ಮಣಗಳಲ್ಲಿ ಸ್ಪಷ್ಟವಾಗಿ ವಿನಿಯೋಗಗಳನ್ನು ಹೇಳುವುದರಿಂದ ಮಂತ್ರಗಳು ಕೇವಲ ಉಚ್ಚಾರಣಸಾಮರ್ಥ್ಯವನ್ನು ಪಡೆದಿವೆಯೋ ಹೊರತು ಅರ್ಥ ತಿಳಿಸುವ ಸಾಮರ್ಥ್ಯವನ್ನಲ್ಲ. ಉದಾಹರಣೆಗಳು— **ಉರು ಪ್ರಥಸ್ವೇತಿ ಪ್ರಥಯತಿ** (ಶ. ಬ್ರಾ. ೧–೩–೬–೮). **ಉರು ಪ್ರಥಾ ಉರು**

**ಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಮ್** (ವಾ. ಸಂ. ೧-೨೨) ಪುರೋಡಾಶವನ್ನುದ್ದೇಶಿಸಿ ಹೇಳುವ ಮಂತ್ರವಿದು. "ಎಲೈ ಪುರೋಡಾಶವೇ, ನೀನು ಹರಡಿಕೊಂಡವನಾಗಿ, ಇನ್ನೂ ಹೆಚ್ಚಾಗಿ ನಿನ್ನನ್ನು ವಿಸ್ತರಿಸಿಕೋ. ಹಾಗೆಯೇ ನಿನ್ನ ಈ ಯಜಮಾನನನ್ನೂ ಪ್ರಜಾಪಶು ಹಿರಣ್ಯಾದಿಗಳಿಂದ ವಿಸ್ತರಿಸಿಕೊಳ್ಳಲಿ'' ಎಂದು ಉಚ್ಚರಿಸಿ, ಪುರೋಡಾಶವನ್ನು **ಪ್ರಥಯತಿ**— ಹರಡುತ್ತಾನೆ; ಪ್ರೋಹಾಣೀತಿ ಪ್ರೋಹತಿ—ಇಲ್ಲಿಯೂ "ಪ್ರೋಹಾಣಿ..........'' ಎಂಬ ಮಂತ್ರವನ್ನುಚ್ಚರಿಸುತ್ತಾ ದ್ರೋಣ ಕಲಶವನ್ನು ಪ್ರೇರಿಸುತ್ತಾನೆ; ಈ ರೀತಿಯಾಗಿ ಬ್ರಾಹ್ಮಣವಾಕ್ಯಗಳು ಕರ್ತವ್ಯ ಕರ್ಮಗಳನ್ನು ಸ್ಪಷ್ಟವಾಗಿ ತಿಳಿಸುವುದರಿಂದ ಮಂತ್ರಗಳು ಅರ್ಥರಹಿತಗಳು.

ಅಥಾಪ್ಯನುಪಪನ್ನಾರ್ಥಾ ಭವನ್ತಿ–"ಓಷಧೇ ತ್ರಾಯಸ್ವೈನಮ್"
ಸ್ವಧಿತೇ ಮೈನಂ ಹಿಂಸೀಃ ಇತ್ಯಾಹ ಹಿಂಸನ್ ॥

ಮಂತ್ರಗಳು ಅರ್ಥವಿಲ್ಲದವು ಎನ್ನಲು ಇದೂ ಒಂದು ಕಾರಣ. ಅವುಗಳ ಅರ್ಥವೇನು ಎಂಬುದೇ ಗ್ರಹಿಸಲಾಗುವುದಿಲ್ಲ. **ಓಷಧೇ ತ್ರಾಯಸ್ವ ಏನಮ್**, ಎಲೈ ಗಿಡವೇ, ಇವನನ್ನು ರಕ್ಷಿಸು'', (ತೈ. ಸಂ. ೧-೨-೧-೧), **ಸ್ವಧಿತೇ ಮೈನಂ ಹಿಂಸೀಃ** (ವಾ. ಸಂ. ೪-೧) ಎಲೈ, ಆಯುಧವೇ, ಇವನನ್ನು ಹಿಂಸಿಸಬೇಡ ಎಂದು ಹೇಳುತ್ತಾನೆ. ಉನ್ಮತ್ತರ ಪ್ರಲಾಪದಂತಿವೆ. ಇಂತಹವು ಅರ್ಥದ್ಯೋತನ ಸಾಮರ್ಥ್ಯವು ಎಲ್ಲಿಂದ ಬರಬೇಕು ?

ಅಥಾಪಿ ವಿಪ್ರತಿಷಿದ್ಧಾರ್ಥಾ ಭವನ್ತಿ–" ಏಕ ಏವ ರುದ್ರೋಽವತಸ್ಥೇ
ನ ದ್ವಿತೀಯಃ " । ಅಸಂಖ್ಯಾತಾ ಸಹಸ್ರಾಣಿ ಯೇ
ರುದ್ರಾ ಅಧಿಭೂಮ್ಯಾಮ್ ॥ " ಅಶತ್ರುರಿಂದ್ರ ಜಜ್ಞಿಷೇ " " ಶತಂ
ಸೇನಾ ಅಜಯತ್ಸಾಕಮಿಂದ್ರಃ " ಇತಿ ॥

ಮತ್ತೂ ಒಂದು ಕಾರಣವಿದೆ. ಕೆಲವು ಮಂತ್ರಗಳು ಪರಸ್ಪರ ವಿರುದ್ಧವಾದ ಅರ್ಥಗಳನ್ನ ಕೊಡುತ್ತವೆ.

**ನ ದ್ವಿತೀಯಃ**—ಎರಡನೆಯವನು ಮತ್ತೊಬ್ಬನು ಅಲ್ಲದೇ, **ಏಕ ಏವ ರುದ್ರಃ**—ಒಬ್ಬನೇ ರುದ್ರನು, **ಪೃತನಾಸು**— ಹೋರಾಟಗಳಲ್ಲಿ **ಶತ್ರೂನ್**-ಶತ್ರುಗಳನ್ನು **ನಿ**-ನಿಶ್ಚಯವಾಗಿ, **ಘ್ನನ್**-ಸಂಹಾರಮಾಡುತ್ತಾ, **ರಣೇ**—ಯುದ್ಧಕ್ಕೋಸ್ಕರ **ಅವತಸ್ಥೇ**—ಇದ್ದನು ; **ಸಂಸೃಜ್ಯ**—ಸೃಜಿಸಿ, **ವಿಶ್ವಾ ಭುವಾನಿ**—ಸಮಸ್ತ ಲೋಕಗಳನ್ನೂ, **ಗೋಪ್ತಾ**—ಪಾಲಿಸುವವನಾಗಿ, **ಪ್ರತ್ಯಙ್**—ಎಲ್ಲಿಂದ ಬಂದರೋ ಅಲ್ಲಿಗೇ ಕಳುಹಿಸುವವನಾಗಿ, **ಅಂತಕಾಲೇ**—ಪ್ರಳಯಕಾಲದಲ್ಲಿ, **ಜನಾನ್**— ಮನುಷ್ಯಾದಿಗಳನ್ನು, **ಸಂಚುಕೋಚ**—ಸಂಕೋಚವನ್ನುಂಟುಮಾಡಿದನು (ಲಯಗೊಳಿಸಿದನು), ಈ ಸಾಮರ್ಥ್ಯವುಳ್ಳ ರುದ್ರನನ್ನು ಸ್ತುತಿಸುತ್ತೇನೆ—ಇಲ್ಲಿ **ಏಕ, ವ, ನ ದ್ವಿತೀಯಃ**-ಒಬ್ಬನೇ, ಎರಡನೆಯವನಿಲ್ಲ ಎಂದು ರುದ್ರನು ಒಬ್ಬನೆಂದು ಸ್ಪಷ್ಟವಾಗಿ ಹೇಳಿದೆ—ಈ ಮಂತ್ರವನ್ನು ತೆಗೆದುಕೊಳ್ಳೋಣ.

**ಅಸಂಖ್ಯಾತಾಃ ಸಹಸ್ರಾಣಿ ಯೇ ರುದ್ರಾ ಅಧಿ ಭೂಮ್ಯಾಮ್ ।**
**ತೇಷಾಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ ॥**

(ವಾ. ಸಂ. ೧೬-೫೪)

**ಅಧಿ ಭೂಮ್ಯಾಮ್**—ಭೂಮಿಗೆ ಮೇಲುಗಡೆ **ಅಸಂಖ್ಯಾತಾಃ ಸಹಸ್ರಾಣಿ**—ಸಂಖ್ಯೆಯೇ ಇಲ್ಲದಷ್ಟು ಸಾವಿರಗಟ್ಲೆ **ಯೇ ರುದ್ರಾಃ** - ಯಾವ ರುದ್ರರುಗಳು ಇದ್ದಾರೆಯೋ, **ಸಹಸ್ರ ಯೋಜನೇ**—ಸಾವಿರ ಯೋಜನಗಳಷ್ಟು ದೂರದಲ್ಲಿರುವ **ತೇಷಾಂ**-ಅವರುಗಳ **ಧನ್ವಾನಿ**—(ರೋಷದಿಂದ ಹೆದೆಯೇರಿಸುತ್ತಿರುವ) ಧನುಸ್ಸುಗಳನ್ನು **ಅವತನ್ಮಸಿ**—(ಸ್ತುತ್ಯಾದಿಗಳಿಂದ ಅವರನ್ನು ಸಂತೋಷಗೊಳಿಸಿ) ಹೆದೆಯೇರಿಸದಂತೆ ಮಾಡೋಣ ಇಲ್ಲಿ ರುದ್ರರ ಸಂಖ್ಯೆಯಿಷ್ಟೆಂಬುದು ಬುದ್ಧಿಗೆ ಮೀರಿದುದು. ಹೀಗೆಯೇ

**ತ್ವಂ ಸಿಂಧೂರವಾಸೃಜೋಽಧರಾಚೋ ಅಹನ್ನಹಿಮ್ ।**
**ಅಶತ್ರುರಿಂದ್ರ ಜಜ್ಞಿಷೇ ವಿಶ್ವಂ ಪುಷ್ಯಸಿ ವಾರ್ಯಂ ।**
**ತಂ ತ್ವಾ ಪರಿ ಷ್ವಜಾಮಹೇ ನಭನ್ತಾಮನ್ಯಕೇಷಾಂ ಜ್ಯಾಕಾ ಅಧಿ ಧನ್ವಸು ॥**

(ಋ. ಸಂ. ೧೦-೧೩೩-೨)

**ಇಂದ್ರ**-ಎಲೈ ಇಂದ್ರನೇ, **ಅಹಿಮ್ ಅಹನ್**-ಮೇಘವನ್ನು ಧ್ವಂಸಮಾಡಿದ್ದೀಯೇ; (ಆದುದರಿಂದಲೇ) **ತ್ವಂ**-ನೀನು **ಸಿಂಧೂನ್**-ಮಧ್ಯಲೋಕದ ಉದಕರಾಶಿಗಳನ್ನು **ಅಧರಾಚಃ**-ಅಧೋಗಾಮಿನಿಗಳನ್ನಾಗಿ **ಅವಾಸೃಜಃ**-ಮಾಡಿದೆ; (ಮೇಘ ಧ್ವಂಸಮಾಡಿದುದರಿಂದ) ಅಶತ್ರುಃ-ಶತ್ರುಗಳು ಇಲ್ಲದವನು **ಜಜ್ಞಿಷೇ**-ಆಗಿದ್ದಿಯೇ! **ವಿಶ್ವಂ**-ಪ್ರಪಂಚವೆಲ್ಲವನ್ನೂ **ಪುಷ್ಯಸಿ** ಪೋಷಿಸುತ್ತಿದ್ದೀಯೆ; **ವಾರ್ಯಂ**-ನೀರಿನಿಂದ ಬೆಳೆಯುವ ಸಸ್ಯಾದಿಗಳನ್ನೂ (ಪೋಷಿಸುತ್ತಿದ್ದೀಯೆ); **ತಂ**-ಅಂತಹ ತ್ವಾ-ನಿನ್ನನ್ನು **ಪರಿಷ್ವಜಾಮಹೇ**-ಸುತ್ತುವರೆದು ಆಶ್ರಯಿಸುತ್ತೇವೆ; **ಅನ್ಯಕೇಷಾಮ್**-ನಮಗಿಂತ ಬೇರೆಯವರ (ನಮ ಶತ್ರುಗಳ **ಜ್ಯಾಕಾಃ** - ಹುರಿಗಳೂ **ಅಧಿ ಧನ್ವಸು**-ಬಿಲ್ಲುಗಳ ಮೇಲೆ **ನಭನ್ತಾಮ್**-ಇರದೇ ಹೋಗಲಿ—ಇಲ್ಲಿ ಇಂದ್ರನು ಶತ್ರುರಹಿತನು ಎಂದಿದೆ. ಈ ಮಂತ್ರವನ್ನು ನೋಡೋಣ

ಆಶುಃ ಶಿಶಾನೋ ವೃಷಭೋ ನ ಭೀಮೋ ಘನಾಘನಃ ಕ್ಷೋಭಣಶ್ಚ-
ರ್ಷಣೀನಾಮ್ । ಸಂಕ್ರಂದನೋಽ ನಿಮಿಷ ಏಕವೀರಃ ಶತಂ ಸೇನಾ
ಅಜಯತ್ಸಾಕಮಿಂದ್ರಃ ॥ (ಋ. ಸಂ. ೧೦-೧೦೩-೧)

**ಆಶುಃ** ಕ್ಷಿಪ್ರವಾಗಿ **ಶಿಶಾನಃ** ಆಯುಧವನ್ನು ಹರಿತಮಾಡಿಕೊಂಡು (ಆಯುಧಧಾರಿಯಾಗಿ) **ವೃಷಭೋ ನ**-ವೃಷಭದಂತೆ **ಭೀಮಃ** :-ಭಯಂಕರನೂ **ಕ್ಷೋಭಣಃ** (ಶತ್ರುಗಳಲ್ಲಿ) ಕ್ಷೋಭೆಯನ್ನುಂಟುಮಾಡುವವನೂ **ಚರ್ಷಣೀನಾಂ** ಎದುರುಪಕ್ಷದಲ್ಲಿರುವ ಅಸುರಾದಿಗಳನ್ನು **ಸಂಕ್ರಂದನಃ** ಯುದ್ಧಕ್ಕೆ ಆಹ್ವಾನಿಸುವವನೂ, **ಅನಿಮಿಷಃ** ರೆಪ್ಪೆಯನ್ನು ಬಡಿಯದೆ ಜಾಗರೂಕನೂ, ಏಕವೀರಃ ಏಕೈಕವೀರನೂ ಆಗಿ, **ಇಂದ್ರಃ** ಯಾವ ಇಂದ್ರನು **ಶತಂಸೇನಾಃ** ಅಸಂಖ್ಯಾತವಾದ ಶತ್ರುಸೇನೆಯನ್ನು **ಸಾಕಂ** ಏಕಕಾಲದಲ್ಲಿ **ಅಜಯತ್** ಜಯಿಸಿದನೋ (ಆ ಇಂದ್ರನನ್ನು ಸ್ತುತಿಸೋಣ). ಇಲ್ಲಿ ಇಂದ್ರನಿಗೆ ಇರುವ ಅಸಂಖ್ಯಾತ ಶತ್ರುಗಳ ಪ್ರಸ್ತಾಪವಿದೆ.

ಹೀಗೆ ಒಂದೊಂದಕ್ಕೂ ವಿರೋಧವಿರುವ ವಾಕ್ಯಗಳುಳ್ಳ ಈ ಮಂತ್ರಗಳು ಉಚ್ಚಾರಣೆಗೆ ಮಾತ್ರ ಯೋಗ್ಯವಾಗಿವೆ.

ಅಥಾಪಿ ಜಾನಂತಂ ಸಂಪ್ರೇಷ್ಯತ್ಯಗ್ನಯೇ ಸಮಿಧ್ಯಮಾನಾಯಾನುಬ್ರೂಹೀತಿ ॥

ತಿಳಿದವರಿಗೆ ತಿಳಿದ ವಿಷಯವನ್ನು ಪುನಃ ಪುನಃ ಹೇಳುವುದೂ ಒಂದು ದೋಷವಿದೆ ಈ ಮಂತ್ರಗಳಲ್ಲಿ. ಸದು **ಹ್ಯೈಕಆಹುಃ ಅಗ್ನಯೇ ಸಮಿಧ್ಯಮಾನಾಯಹೋತಾರಮನುಬ್ರೂಹೀತಿ ॥** (೧-೩-೨-೩). ಯಾಗದ ಅನುಷ್ಠಾನ ವಿಧಿಗಳೆಲ್ಲವನ್ನೂ ತಿಳಿದವನನ್ನೇ ಋತ್ವಿಜನನ್ನಾಗಿ ಆರಿಸುವುದು. ಹೋತೃವಿಗೆ ಯಾವ ಯಾವ ಕಾಲದಲ್ಲಿ ತಾನು ಏನು ಏನು ಮಾಡಬೇಕೆಂಬುದು ತಿಳಿದೇ ಇರುತ್ತದೆ. ಅಂತಹವನಿಗೆ "ಅಧ್ವರ್ಯುವು ಅಗ್ನಿಯನ್ನು ಉದ್ದೇಶಿಸಿ ಹೋಮಮಾಡುತ್ತಿದ್ದೇನೆ ; ಅವನನ್ನು ಸ್ತುತಿಸು'' ಎಂಬುದಾಗಿ ಆದೇಶಿಸುತ್ತಾನೆ. ಇದು ಅನವಶ್ಯಕವಾದುದರಿಂದ, ಇಂತಹ ಭಾಗಗಳುಳ್ಳ ವೇದವು ಉಚ್ಚಾರಣೆಗೆ ಮಾತ್ರ ಉಪಯುಕ್ತವು.

ಅಥಾಪ್ಯಾಹ–" ಅದಿತಿಃ ಸರ್ವಮ್ " ಇತಿ । " ಅದಿತಿರ್ದ್ಯೌರದಿತಿ-
ರಂತರಿಕ್ಷಮ್" ಇತಿ । ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥

**" ಅದಿತಿರ್ದ್ಯೌರದಿತಿರಂತರಿಕ್ಷಮ್ ಅದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇದೇವಾ ಅದಿತಿಃ ಪಂಚ ಜನಾ ಅದಿತಿರ್ಜಾತಮದಿತಿ ರ್ಜನಿತ್ವಮ್ ॥**

(ಋ. ಸಂ. ೧-೮೯-೧೦)

ಈ ಮಂತ್ರದಲ್ಲಿ, ಅದಿತಿಯು, ಆಕಾಶ, ಅಂತರಿಕ್ಷ, ತಾಯಿ, ತಂದೆ, ಮಗ, ಎಲ್ಲಾ ದೇವತೆಗಳು, ಮುಂತಾಗಿ ವರ್ಣನೆಯಿದೆ. ಒಬ್ಬಳೇ ಅದಿತಿಯು, ತಂದೆ ತಾಯಿ ಮಗ ಎಲ್ಲರೂ ಹೇಗಾದಾಳು ? ಅರ್ಥವು ಮುಖ್ಯವಾಗಿದ್ದರೆ, ಇಂತಹ ವರ್ಣನೆಗಳು ಸಾಧ್ಯವೇ ಆಗುವುದಿಲ್ಲ. ಆದುದರಿಂದ ಮಂತ್ರಗಳು ಅರ್ಥರಹಿತಗಳು.

ಅಥಾಪ್ಯವಿಸ್ಪಷ್ಟಾರ್ಥಾ ಭವನ್ತಿ–ಅಮ್ಯಗ್ಯಾದೃಶ್ಮಿನ್ ಜಾರಯಾಯಿ
ಕಾಣುಕೇತಿ ॥ ೧–೧೫.

ಕೆಲವು ಪದಗಳಿಗಂತೂ, ಅರ್ಥವನ್ನು ತಿಳಿಯುವುದು ದುಸ್ಸಾಧ್ಯವಾಗಿದೆ. ಅಮ್ಯಕ್, ಯಾದೃಶ್ಮಿನ್, ಜಾರಯಾಯಿ ಕಾಣುಕಾ ಮುಂತಾದ ಪದಗಳಿಗೆ ಅರ್ಥವನ್ನು ತಿಳಿಯುವುದು ತಾನೇ ಹೇಗೆ?

ಕೆಲವುಭಾಗಗಳಿಗೆ ಅರ್ಥವಿದೆ, ಕೆಲವುಭಾಗಗಳಿಗೆ ಅರ್ಥವಿಲ್ಲ ಎಂದು ಹೇಳುವುದೂ ಆಗುವುದಿಲ್ಲ. ಆದುದರಿಂದ ಮಂತ್ರಗಳು ಅರ್ಥೋದ್ದೇಶಕಗಳಲ್ಲ, ಕೇವಲ ಉಚ್ಚಾರಣೋದ್ದೇಶಕಗಳು ಎಂದು ಒಪ್ಪಲೇಬೇಕಾಗುತ್ತದೆ ಎಂಬುದು ಕೌತ್ಸ ಮುಂತಾದವರ ವಾದವು.

**ಇತಿ ಪ್ರಥಮಾಧ್ಯಾಯೇ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು.

## ಅಥ ಪ್ರಥಮಾಧ್ಯಾಯೇ ಷೋಡಶಃ ಖಂಡಃ

### ಹದಿನಾರನೆಯ ಖಂಡವು.

---

ಅರ್ಥವನ್ತಃ ಶಬ್ದಸಾಮಾನ್ಯಾದೇತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ ಕರ್ಮ ಕ್ರಿಯಮಾಣಮೃಗ್ಯಜು-ರ್ವಾಭಿವದತೀತಿ ಚ ಬ್ರಾಹ್ಮಣಂ ಕ್ರೀಳನ್ತೌ ಪುತ್ರೈರ್ನಪ್ತೃಭಿರಿತಿ ಯಥೋ ಏತನ್ನಿಯತವಾಚೋಯುಕ್ತಯೋ ನಿಯ-ತಾನುಪೂರ್ವ್ಯಾ ಭವನ್ತೀತಿ ಲೌಕಿಕೇಷ್ವಪ್ಯೇತದ್ಯಥೇಂದ್ರಾಗ್ನೀ ಪಿತಾಪುತ್ರಾವಿತಿ ಯತೋ ಏತದ್ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯಂತ ಇತ್ಯುದಿತಾನುವಾದಃ ಸ ಭವತಿ ಯಥೋ ಏತ-ದನುಪಪನ್ನಾರ್ಥಾ ಭವನ್ತೀತ್ಯಾಮ್ನಾಯವಚನಾದಹಿಂಸಾ ಪ್ರತೀಯೇತ ಯಥೋ ಏತದ್ವಿಪ್ರತಿಷಿದ್ಧಾರ್ಥಾ ಭವನ್ತೀತಿ ಲೌಕಿಕೇಷ್ವಪೇತದ್ಯಥಾಽಸಪತ್ನೋಽಯಂ ಬ್ರಾಹ್ಮಣೋಽನ-ಮಿತ್ರೋ ರಾಜೇತಿ ಯಥೋ ಏತಜ್ಜಾನಂತಂ ಸಂಪ್ರೇಷ್ಯತೀತಿ ಜಾನನ್ತಮಭಿವಾದಯತೇ ಜಾನತೇ ಮಧುಪರ್ಕಂ ಪ್ರಾಹೇತ್ಯಥೋ ಏತದದಿತಿಃ ಸರ್ವಮಿತಿ ಲೌಕಿಕೇಷ್ವಪ್ಯೇತದ್ಯಥಾ ಸರ್ವರಸಾ ಅನುಪ್ರಾಪ್ತಾಃ ಪಾನೀಯಮಿತಿ ಯಥೋ ಏತದವಿಸ್ಪಷ್ಟಾರ್ಥಾ ಭವನ್ತೀತಿ ನೈಷ ಸ್ಥಾಣೋರಪರಾಧೋ ಯದೇನಮಂಧೋ ನ ಪಶ್ಯತಿ ಪುರುಷಾಪರಾಧಃ ಸ ಭವತಿ ಯಥಾ ಜಾನಪದೀಷು ವಿದ್ಯಾತಃಪುರುಷ ವಿಶೇಷೋ ಭವತಿ ಪಾರೋಪರ್ಯವಿತ್ಸು ತು ಖಲು ವೇದಿತೃಷು ಭೂಯೋವಿದ್ಯಃ ಪ್ರಶಸ್ಯೋ ಭವತಿ ॥ ೧೬ ॥

ಅರ್ಥಜ್ಞಾನಕ್ಕೋಸ್ಕರಲೇ ಈ ನಿರುಕ್ತವು ಶಾಸ್ತ್ರಪ್ರವೃತ್ತಿಸುತ್ತದೆ ಎಂಬುದನ್ನು ಈ ಪ್ರಯತ್ನವು ವ್ಯರ್ಥವು. ಏಕೆಂದರೆ ಮಂತ್ರಗಳು ಅರ್ಥದ ದೃಷ್ಟಿಯಿಂದ ಹೊರಟಿಲ್ಲ, ಕೇವಲ ಉಚ್ಚಾರಣ ಮಾತ್ರ ಅವುಗಳ ಉದ್ದೇಶವೆಂದು ತನ್ನ ಅಭಿಪ್ರಾಯಕ್ಕೆ ಪೋಷಕವಾಗಿ ನಾನಾಕಾರಣಗಳನ್ನು ಪ್ರತಿಪಾದಿಸಿದ ಕೌತ್ಸಾದಿ ಪ್ರತಿಪಕ್ಷಿಗಳಿಗೆ ಈಗ ಸಮಾಧಾನವನ್ನು ಹೇಳಿ ಸ್ವಮತವನ್ನು ಸ್ಥಾಪಿಸುತ್ತಾರೆ, ಈ ಖಂಡದಲ್ಲಿ.

ಅರ್ಥವನ್ತಃ ಶಬ್ದಸಾಮಾನ್ಯಾತ್ ।

ಮಂತ್ರಗಳು ಅರ್ಥಯುಕ್ತವಾದವು. ಲೋಕದಲ್ಲಿ ಉಪಯೋಗಿಸುವ ಶಬ್ದಗಳೇ ಮಂತ್ರಗಳಲ್ಲಿಯೂ ಉಪಯೋಗಿಸುವುದರಿಂದ ಲೋಕದಲ್ಲಿ ಅವುಗಳಿಗೆ ಅರ್ಥವುಂಟು. ಮಂತ್ರಗಳಲ್ಲಿ ಇಲ್ಲಿ ಎನ್ನುವುದು ಒಪ್ಪುವ ಮಾತಲ್ಲ. ಅರ್ಥವಿರುವುದಕ್ಕೆ ಬೇರೆ ಏನಾದರೂ ಕಾರಣವಿರಬೇಕು. ಅಂತಹ ವಿಶೇಷ ಕಾರಣವೇನೂ ಇಲ್ಲದಿರುವಾಗ ಮಂತ್ರಗಳು ಅರ್ಥಸಹಿತವಾಗಿವೆ ಎಂದು ಅಂಗೀಕರಿಸುವುದು ವಿಹಿತವಾಗಿದೆ.

ಏತದ್ವೈಯಜ್ಞಸಮೃದ್ಧಂ ಯದ್ರೂಪಸಮೃದ್ಧಂ ಯತ್ ಕರ್ಮ ಕ್ರಿಯ-
ಮಾಣಮೃಗ್ಯಜುರ್ವಾಭಿವದತೀತಿ ಚ ಬ್ರಾಹ್ಮಣಮಂ ॥

ಬ್ರಾಹ್ಮಣಗಳಿಗೆ ಅರ್ಥವತ್ತ್ವವನ್ನು-**ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯನ್ತೇ** ಎಂಬ ವಾಕ್ಯದಿಂದ ಒಪ್ಪಿದ್ದಾಗಿದೆ. ಆ ಬ್ರಾಹ್ಮಣ ಭಾಗದಲ್ಲಿಯೇ, **ಏತದ್ವೈ ಯಜ್ಞಸ ಸಮೃದ್ಧಂ ಯದ್ರೂಪಸ ಮೃದ್ಧಂಯತ್ ಕರ್ಮಕ್ರಿಯಮಾಣ ಮೃಗ್ಯಜುರ್ವಾಭಿ ವದತಿ** ಎಂಬ ವಾಕ್ಯವಿದೆ. ಯಾವ ಯಜ್ಞದ ಕರ್ಮವು ಮಂತ್ರಲಿಂಗಾದಿಗಳಿಂದ ಉಕ್ತವಾಗಿದೆಯೋ ಅಂದರೆ, ಉಚ್ಚರಿಸಲ್ಪಡುತ್ತಿರುವ ಮಂತ್ರವು ಆಚರಿಸಲ್ಪಡುತ್ತಿರುವ ಕರ್ಮಕ್ಕೆ ಸಂಬಂಧಿಸಿದ್ದಾಗಲೇ, ಆ ಕರ್ಮವು ಸಮೃದ್ಧ (ಸಂಪೂರ್ಣ) ವಾಗುತ್ತದೆ. ನೀನು (ಪ್ರತಿಪಕ್ಷಿಯು) ಪ್ರಮಾಣವೆಂದು ಒಪ್ಪಿರುವ ಬ್ರಾಹ್ಮಣದಲ್ಲಿಯೇ ಉಕ್ತವಾಗಿರುವುದರಿಂದ, ಮಂತ್ರಗಳು ಅರ್ಥವುಳ್ಳವು. (ಈ ವಾಕ್ಯವು ಗೋ. ಬ್ರಾಹ್ಮಣದಲ್ಲಿದೆ. ಗೋ. ಬ್ರಾ. ೨-೨--೬., ೨-೪-೨., **ಯಜುರ್ವಾ** ಎಂಬಿಷ್ಟುಬಿಟ್ಟು ಉಳಿದ ವಾಕ್ಯವು, ಐ. ಬ್ರಾ. ೧-೪., ೧-೧೩., ೧-೧೬., ೧-೧೭)

ಕ್ರೀಳನ್ತೌ ಪುತ್ರೈರ್ನಪ್ತೃಭಿರಿತಿ ॥

**ಇಹೈವ ಸ್ತಂ ಮಾ ವಿಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್ ।**
**ಕ್ರೀಳನ್ತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇಗೃಹೇ ॥**

(ಋ. ಸಂ. ೧೦-೮೫-೪೨.)

ವಿವಾಹಕಾಲದಲ್ಲಿ ದಂಪತಿಗಳನ್ನುದ್ದೇಶಿಸಿ ಆಶೀರ್ವಾದ ಮಾಡುವ ಮಂತ್ರವು. ಇಲ್ಲಿಯೆ ಇರಿ ; ಎಂದಿಗೂ ವಿಯೋಗವನ್ನು ಹೊಂದಬೇಡಿ; ಸಂಪೂರ್ಣ ಆಯುಷ್ಯವನ್ನು ಅನುಭವಿಸಿ; ನಿಮ್ಮದೇ ಮನೆಯಲ್ಲಿ ಮಕ್ಕಳು, ಮೊಮ್ಮಕ್ಕಳೊಡನೆ ಆಟವಾಡುತ್ತಾ, ಸಂತೋಷವಾಗಿ (ಇರಿ) ಎಂಬುದಾಗಿ, ಆಶೀರ್ವಾದಕ್ಕೆ ಅನುಗುಣವಾದ ಅರ್ಥವನ್ನೇ ಮಂತ್ರವೂ ಹೇಳುತ್ತದೆ.

ಯಥೋ ಏತನ್ನಿಯತವಾಚೋಯುಕ್ತಯೋ ನಿಯತಾನುಪೂರ್ವ್ಯಾ
ಭವನ್ತೀತಿ ಲೌಕಿಕೇಷ್ವಪೇತದ್ಯಥೇಂದ್ರಾಗ್ನೀ ಪಿತಾಪುತ್ರಾವಿತಿ ।

ವೇದದಲ್ಲಿನ ವಾಕ್ಯಗಳಲ್ಲಿ ಪದಗಳ ಸಂಖ್ಯಾ ಮತ್ತು ಕ್ರಮಗಳಲ್ಲಿ ನಿಯಮವಿರುವುದರಿಂದ; ಅರ್ಥ ಮುಖ್ಯವಲ್ಲ. ಉಚ್ಚಾರಣೆಯೇ ಮುಖ್ಯವೆಂಬ ಆಕ್ಷೇಪಕ್ಕೆ ಈರೀತಿ ಉತ್ತರವನ್ನು ಕೊಡಬಹುದು. ಪ್ರಪಂಚದಲ್ಲಿ, ಸಾಧಾರಣವಾಗಿ ಮಾತನಾಡುವಾಗಲೂ, ಪದಗಳ ಸಂಖ್ಯಾಕ್ರಮ ನಿಯಮಗಳಿವೆ. ಅವುಗಳಲ್ಲಿ ವ್ಯತ್ಯಾಸವಾದರೆ, ವ್ಯವಹಾರವೂ ವ್ಯತ್ಯಸ್ತವಾಗುತ್ತದೆ.

ಇಂದ್ರಾಗ್ನಿಗಳು, ಪಿತಾಪುತ್ರರು ಎಂದು ಹೇಳುತ್ತೇವೆಯೋ ಹೊರತು,ಅಗ್ನಿ ಇಂದ್ರರು ಪುತ್ರ ಪಿತೃಗಳು ಎಂದಾಗಿ ಹೇಳುವುದಿಲ್ಲ. ಹೀಗೆ ಹೇಳದೇ ಇರುವುದಕ್ಕೆ ಕಾರಣವನ್ನು, ಹೇಳುವುದು ಕಷ್ಟವಾದರೂ, ರೂಢಿಯು ಹಾಗೆಯೇ ಇದೆ. ಲೌಕಿಕ ವ್ಯವಹಾರ ದಲ್ಲಿಯೂ ಈ ನಿಯಮಗಳಿರುವಲ್ಲಿ, ವೈದಿಕ ಭಾಷೆಯಲ್ಲಿ ಏಕೆ-ಇರಬಾರದು ? ಆದುದರಿಂದ ಮಂತ್ರಗಳು ಅರ್ಥವಂತವೆಂದು ಒಪ್ಪಲೇ ಬೇಕು.

ಯಥೋ ಏತದ್ಬ್ರಾಹ್ಮಣೇನ ರೂಪಸಂಪನ್ನಾ ವಿಧೀಯನ್ತ ಇತ್ಯು-
ದಿತಾನುವಾದಃ ಸ ಭವತಿ ।

ಬ್ರಾಹ್ಮಣದಲ್ಲಿ ಈ ಮಂತ್ರದಿಂದ ಹೀಗೆ ಮಾಡಬೇಕೆಂದು ವಿಹಿತವಾಗಿರುತ್ತದೆ ; ಆಯಾ ಮಂತ್ರಗಳಲ್ಲಿ ಆ ಅಂಶಗಳು ಉಕ್ತವಾಗಿರುವಲ್ಲಿ, ಬ್ರಾಹ್ಮಣಗಳ ಅವಶ್ಯಕತೆಯೇ ಇರುತ್ತಿರಲಿಲ್ಲ ; ಬ್ರಾಹ್ಮಣ ವಾಕ್ಯಗಳು ಇರುವುದರಿಂದ ಮಂತ್ರಗಳು ಅರ್ಥ ಶೂನ್ಯಗಳು ಎಂದರೆ, ಮಂತ್ರದಲ್ಲಿ ಹೇಳಿರುವ ಅರ್ಥವನ್ನು ಬ್ರಾಹ್ಮಣಗಳು ಅನುವಾದ ಮಾಡುತ್ತವೆ ; ಇದರಿಂದ ಮಂತ್ರಗಳು ಸ್ವಯಂಕರ್ತವ್ಯ ಕರ್ಮವನ್ನು ತಿಳಿಸುವ ಸಾಮರ್ಥ್ಯವನ್ನು ಪಡೆದಿಲ್ಲವೆನ್ನಬಾರದು. ವಿಸ್ತಾರವಾಗಿ, ಇನ್ನೂ ಹೆಚ್ಚು ಸ್ಪಷ್ಟವಾಗಿ ತಿಳಿಸುವುದಕ್ಕೋಸ್ಕರ ಬ್ರಾಹ್ಮಣಗಳು ಪ್ರವರ್ತಿಸಿವೆ. ಮತ್ತೂ, ಒಂದೇ ಸಂದರ್ಭದಲ್ಲಿ ಉಪಯೋಗಿಸಬಹುದಾದ ಮಂತ್ರಗಳು ಅನೇಕ ಇರಬಹುದು. ಹೀಗೆ ಅನೇಕ ಮಂತ್ರಗಳು ಉಪಯೋಗಾರ್ಹಗಳು ಅಥವಾ ಎರಡರಲ್ಲಿ ಯಾವುದನ್ನು ಉಚ್ಚರಿಸಬೇಕು ಎಂದು ವಿಕಲ್ಪ ಹುಟ್ಟಿದಾಗ, ಬ್ರಾಹ್ಮಣವಾಕ್ಯವು ಆ ಸಂದರ್ಭದಲ್ಲಿ ಹೆಚ್ಚು ಯೋಗ್ಯವಾದುದು ಯಾವುದೋ ಆ ಮಂತ್ರವನ್ನು ವಿಧಿಸುತ್ತದೆ. ಇದರಿಂದ ಬ್ರಾಹ್ಮಣ ಮತ್ತು ಮಂತ್ರಗಳು ಎರಡೂ ಸಾರ್ಥಕವೆಂದಾಗುತ್ತದೆ.

ಯಥೋ ಏತದನುಪಪನ್ನಾರ್ಥಾ ಭವನ್ತೀತ್ಯಾಮ್ನಾಯವಚನಾದ-
ಹಿಂಸಾ ಪ್ರತೀಯೇತ ।

**ಓಷಧೇ ತ್ರಾಯಸ್ವೈನಂ, ಸ್ವಧಿತೇ ಮೈನಂ ಹಿಂಸೀರಿತಿ ಹಿಂಸನ್,** ಮುಂತಾದ ಅಸಾಧ್ಯವಾದ, ಉನ್ಮತ್ತ ಪ್ರಲಾಪದಂತಹ ಮಾತುಗಳು ಇರುವುದರಿಂದ ಮಂತ್ರಗಳು ಅನರ್ಥಕಗಳು ಎಂಬ ಆಕ್ಷೇಪವೂ ಯುಕ್ತವಲ್ಲ. ವೇದಪ್ರಾಮಾಣ್ಯ ವನ್ನು ಅಂಗೀಕರಿಸಿದ ಮೇಲೆ, ಅದರಲ್ಲಿ ಹೇಳಿರುವ ವಾಕ್ಯಗಳಿಗೆ ಅರ್ಥವನ್ನು ಸಂದರ್ಭಾನುಸಾರವಾಗಿ ಊಹಿಸಿ ಹೊಂದಿಕೊಳ್ಳ ಬೇಕು. ಓಷಧೇವತ್ರಾಯಸ್ವೈನಂ–ಎಂಬಲ್ಲಿ ಆ ಗಿಡವನ್ನು ರಕ್ಷಣೆಗಾಗಿ ಪ್ರಾರ್ಥನೆ ಮಾಡುತ್ತಿಲ್ಲ, ಆ ವೃಕ್ಷಾಭಿಮಾನಿದೇವತೆಯನ್ನು, ದೇವತೆಯಾದುದರಿಂದ ರಕ್ಷಣಸಾಮರ್ಥ್ಯವಿದೆ, ಹೋಮಕ್ಕಾಗಿ ಈ ಪಶುವನ್ನು ವಧಿಸುತ್ತಿದ್ದೇವೆ, ಇದನ್ನು ರಕ್ಷಣೆಮಾಡು, ಸ್ವರ್ಗ ಲೋಕಕ್ಕೆ ಕರೆದುಕೊಂಡು ಹೋಗು, ಎಂಬ ಅಭಿಪ್ರಾಯದಲ್ಲಿ ಓಷಧಿ ಪ್ರಾರ್ಥನೆ. ಬ್ರಾಹ್ಮಣದಲ್ಲಿ– **ಪಶುರ್ವೈ ನೀಯಮಾನಃ ಸ ಮೃತ್ಯುಂ ಪ್ರಾಪಶ್ಯತ್ಸ ದೇವಾನ್ನಾನ್ವಕಾಮಯತೈತುಂ ತಂ ದೇವಾ ಅಬ್ರುವನ್ನೇಹಿ ಸ್ವರ್ಗಂ ವೈತ್ವಾ ಲೋಕಂ ಗಮಯಿಷ್ಯಾಮ ಇತಿ** – (ಐ. ಬ್ರಾ. ೨-೬) ಪಶುವು ಸ್ವರ್ಗಕ್ಕೆ ದೇವತೆಗಳಿಂದ ಆಹ್ವಾನಿತವಾಗಿದೆ ಎಂಬ ಅಭಿಪ್ರಾಯವು ಉಕ್ತವಾಗಿದೆ. ಅನ್ನು ಸ್ವಧಿತೇ ಮೈನಂ·ಹಿಂಸೀರಿತ್ಯಾಹ **ಹಿಂಸನ್** ಎಂಬ ವಾಕ್ಯವು. ಇಲ್ಲಿ ಹಿಂಸೆ ಯಾವುದು, ಯಾವುದು ಹಿಂಸೆಯಲ್ಲ ಎಂಬುದರ ನಿರ್ಣಯವು ಆಗಮದ (ವೇದದ) ಆಧಾರದ ಮೇಲೆ ಆಗಬೇಕು. ಯಾಗ ಗಳಲ್ಲಿ ಓಷಧಿ, ವನಸ್ಪತಿ, ಪಶುಗಳ ಹಿಂಸೆಯಾಗುತ್ತದೆ. ಈ ಲೌಕಿಕದೃಷ್ಟ್ಯಾ ಹಿಂಸೆಯೆನಿಸಿಕೊಳ್ಳುವ ಕರ್ಮದಿಂದ

ಆ ಪಶ್ವಾದಿಗಳ ಅನುಗ್ರಹವೇ ಉದ್ದಿಷ್ಟವಾದುದರಿಂದ, ಆ ಹಿಂಸೆಯೂ ಅಂತತಃ ಅಹಿಂಸೆಯೆಂದೇ ಭಾವನೆ. ಆದುದರಿಂದಲೇ ಯಜಮಾನನನ್ನು ವೇದವು ಅಂಥಾಕಾರ್ಯಗಳಲ್ಲಿ ವಿನಿಯೋಗಿಸುವುದು. ಆದ್ದರಿಂದ ಈ ಆಕ್ಷೇಪವು ನಿರಾಧಾರವಾದುದು.

ಯಥೋ ಏತದ್ವಿಪ್ರತಿಷಿದ್ಧಾರ್ಥಾ ಭವನ್ತೀತಿ ಲೌಕಿಕೇಷ್ವಪ್ಯೇತದ್ಯಥಾ-
ಸಪತ್ನೋಽಯಂ ಬ್ರಾಹ್ಮಣೋಽನಮಿತ್ರೋ ರಾಜೇತಿ ॥

**ಏಕ ಏವ ರುದ್ರೋಽವತಸ್ಥೇ**–ಒಬ್ಬನೇ ರುದ್ರನಿದ್ದನು, **ಅಸಂಖ್ಯಾತಾ ಸಹಸ್ರಾಣಿ ಯೇಽ** ರುದ್ರಾ,-ಅಸಂಖ್ಯರಾದ ರುದ್ರರಿದ್ದರು, **ಅಶತ್ರುರಿಂದ್ರಜಜ್ಞಿಷೇ**–ಶತ್ರುಗಳೇ ಇಲ್ಲದವನಾದ ಎಲೈ ಇಂದ್ರನೇ, **ಶತಂ ಸೇನಾ ಅಜಯತ್ ಸಾಕಮಿಂದ್ರಃ** ನೂರಾರು ಶತ್ರುಸೈನಿಕರನ್ನು ಇಂದ್ರನು ಸಂಹಾರ ಮಾಡಿದನು, ಮುಂತಾದ ಪರಸ್ಪರ ವಿರುದ್ಧಾರ್ಥಕವಾದ ವಾಕ್ಯಗಳಿವೆ ಯಾದುದರಿಂದ, ಮಂತ್ರಗಳು ಅನರ್ಥವೆಂಬ ವಾದಕ್ಕೆ, ಲೌಕಿಕವಾದ ಇಂತಹ ಪ್ರಯೋಗಗಳೇ ಉತ್ತರವಾಗುತ್ತವೆ. **ಅಸಪತ್ನಃ ಅಯಂ ಬ್ರಾಹ್ಮಣಃ** ಎಂದರೆ ಪ್ರತಿಸ್ಪರ್ಧಿಯೇ ಇಲ್ಲದವನು ಈ ಬ್ರಾಹ್ಮಣನು, **ಅನಮಿತ್ರೋಽಯಂ ರಾಜಾ** ಈ ರಾಜನು ಶತ್ರುರಹಿತನು ಎಂಬ ಪ್ರಯೋಗಗಳು ಸಾಧಾರಣವಾಗಿ ಕಂಡುಬರುತ್ತವೆ. ಆದರೂ, ಆ ಬ್ರಾಹ್ಮಣನಿಗೆ ಪ್ರತಿಯಾಗಲೀ, ರಾಜನಿಗೆ ಶತ್ರುವಾಗಲೀ ಇಲ್ಲವೇ ಇಲ್ಲವೆಂದು ಅಭಿಪ್ರಾಯವಲ್ಲ. ಗಣನೆಗೆ ಬರುವಂತಹವರು ಯಾರೂ ಇಲ್ಲವೆಂದರ್ಥ. ಹಾಗೆಯೇ ವೇದದಲ್ಲಿಯೂ ಪ್ರಯೋಗಗಳಿವೆ. ರುದ್ರನು ಒಬ್ಬನೇ ಆದರೂ, (ಮುಂದೆ, ದೈ. ಕಾಂ. ೭-೧-೪ ವ್ಯಾಖ್ಯಾತವಾಗುವ **ಮಾಹಾಭಾಗ್ಯಾದ್ದೇವತಾಯಾಃ** ಎಂಬ ವಾಕ್ಯದಂತೆ) ದೇವತೆಗಳ ವಿಶೇಷ ಮಹಿಮೆಯಿಂದ, ಅನೇಕ ರೂಪಯುಕ್ತರಾಗಿ ಕಾಣಬಹುದು. ಇಂದ್ರನಿಗೆ ಶತ್ರುಗಳೇ ಇಲ್ಲದಂತಾಯಿತು ಎಂಬುವಲ್ಲಿಯೂ, ಮುಖ್ಯ ಶತ್ರುವಾದ ಮೇಘವನ್ನು ಪರಾಜಯಗೊಳಿಸುದುದರಿಂದ, ಇನ್ನುಳಿದವರು ಅಲ್ಪರಾದುದರಿಂದ, ಈ ವರ್ಣನೆ ಮಂತ್ರಗಳು ವಿರುದ್ಧಾರ್ಥಕಗಳಲ್ಲವೆಂಬುದನ್ನು ತಿಳಿಯಬಹುದು.

ಯಥೋ ಏತಜ್ಜಾನನ್ತಮಭಿಪ್ರೇಷ್ಯನ್ತೀತಿ ಜಾನನ್ತಮಭಿವಾದಯತೇ
ಜಾನತೇ ಮಧುಪರ್ಕಂ ಪ್ರಾಹೇತಿ ॥

ಯಾಗದ ವಿಷಯಗಳನ್ನು ಚೆನ್ನಾಗಿ ಅರಿತ ಹೋತೃವಿಗೆ, ಅಧ್ವರ್ಯುವು, **ಅಗ್ನಯೇ ಸ ಮಿಧ್ಯಮಾನಾಯಾನು ಬ್ರೂಹಿ** ಎಂದು ಆದೇಶವನ್ನೀಯುವುದರಿಂದ, ಕೇವಲ ಉಚ್ಚಾರಣ ಸಾಮರ್ಥ್ಯವು ಮಂತ್ರಗಳಿಗೆ ಎಂದರೆ, ಹಾಗಲ್ಲ. ಯಾಗ ದಲ್ಲಿ ಪ್ರೈಷವಿಲ್ಲದೇ ಯಾವುದನ್ನೂ ಮಾಡಬಾರದು, ಹಾಗೆ ಮಾಡಿದರೆ, ಅದು ಕರ್ಮಾಂಗವೇ ಆಗುವುದಿಲ್ಲವೆಂಬ ನಿಯಮವಿದೆ. ಆದುದರಿಂದ ಹೋತೃವಿಗೆ ಈ ಆದೇಶ. ಮತ್ತು ಲೋಕದಲ್ಲಿ, ಗುರುವಿಗೆ ನಮಸ್ಕಾರ ಮಾಡುವಾಗ, ಶಿಷ್ಯನು ನಾಮಗೋತ್ರ ಗಳನ್ನುಚ್ಚರಿಸಿಯೇ ನಮಸ್ಕರಿಸುವುದು, ಆದರೆ, ಗುರುವಿಗೆ ಶಿಷ್ಯನ ನಾಮಗೋತ್ರಗಳು ತಿಳಿದಿಲ್ಲವೆಂಬ ಅಭಿಪ್ರಾಯವಲ್ಲ, ಅಥವಾ ಅತಿಥಿಗೆ ಮಧುಪರ್ಕವನ್ನು ಕೊಡುವಾಗ, ಮೂರುಸಲ **ಮಧುಪರ್ಕಃ ಮಧುಪರ್ಕಃ, ಮಧುಪರ್ಕಃ,** ಎಂದು ಹೇಳುತ್ತಾರೆ. ಎದುರಿಗೆ ಇಟ್ಟಿರುವ ಮಧುಪರ್ಕದ ಅರಿವು ಆಗಿರುವುದಿಲ್ಲವೆಂದು ಯಾರೂ ಅಭಿಪ್ರಾಯಪಡುವುದಿಲ್ಲ. ಅದರಂತೆ ವೇದದಲ್ಲಿಯೂ ಇದೇರೀತಿ ಪ್ರಯೋಗಗಳು ಇವೆ. ಅದು ದೋಷವಾಗಿ ಪರಿಗಣಿತವಾಗಬಾರದು.

ಯಥೋ ಏತದದಿತಿಃ ಸರ್ವಮಿತಿ ಲೌಕಿಕೇಽಷ್ವಪ್ಯೇತದ್ಯಥಾ ಸರ್ವರಸಾ
ಅನುಪ್ರಾಪ್ತಾಃ ಪಾನೀಯಮಿತಿ ॥

ಅದಿತಿಯೇ ಅಂತರಿಕ್ಷವು, ಅದಿತಿಯೇ ಸ್ವರ್ಗವು, ಅವಳೇ ತಂದೆ, ತಾಯಿ, ಮಗ ಎಂಬ ವಾಕ್ಯವು ಪರಸ್ಪರ ಅಸಂಬದ್ಧವಾದ ವಿಷಯವನ್ನು ಹೇಳುತ್ತದೆ. ಇಂತಹ ವಾಕ್ಯಗಳಿರುವ ಮಂತ್ರಭಾಗಕ್ಕೆ ಅರ್ಥವತ್ತ್ವವು ಹೇಗೆ? ಎಂದರೆ, ಲೋಕದಲ್ಲಿಯೂ ಇಂತಹ ಮಾತು ಸಾಮಾನ್ಯವಾಗಿರುತ್ತದೆ. ನಮಗೆ ಹೆಚ್ಚಾಗಿ ಉಪಕಾರಮಾಡಿದವರನ್ನು ನೀವೇ ತಂದೆ, ತಾಯಿ ಎಲ್ಲವೂ ಎನ್ನುವುದು ಅನುಭವವಲ್ಲವೆ. ಅವರಲ್ಲಿರುವ ಗುಣವನ್ನು ಆಧಾರಮಾಡಿಕೊಂಡು ಆರೀತಿ ಹೇಳುವುದುಂಟು. ಪಾನೀಯಂ ಸರ್ವರಸಾ ಅನುಪ್ರಾಪ್ತಾಃ – ನೀರಿನಲ್ಲಿ ಎಲ್ಲಾ ರಸಗಳೂ ಇವೆ ಎನ್ನುವವನಿಗೆ, ಎಲ್ಲಾರಸಗಳಿಂದಲೂ ಬರಬಹುದಾದ ಆನಂದವು ಇದೊಂದರಿಂದಲೇ ಉಂಟಾಗಿದೆ ಎಂದು ಅಭಿಪ್ರಾಯ. ಹೀಗೆಯೇ, ಈ ವಾಕ್ಯದಲ್ಲಿಯೂ, ಅದಿತಿಯಲ್ಲಿರುವ ಗುಣವೊಂದರಿಂದ ಆಕೆಯೇ ಎಲ್ಲವೂ ಆಗಿದಾಳೆ ಎಂದು ಹೇಳಿದೆ. ಇದರಿಂದ ಮಂತ್ರಗಳ ಅರ್ಥವತ್ತ್ವಕ್ಕೆ ಹಾನಿಯೇನೂ ಇಲ್ಲ.

ಯಥೋ ಏತದವಿಸ್ಪಷ್ಟಾರ್ಥಾ ಭವನ್ತೀತಿ ನೈಷ ಸ್ಥಾಣೋರಪರಾಧೋ
ಯದೇನಮಂಧೋ ನ ಪಶ್ಯತಿ ಪುರುಷಾಪರಾಧಸ್ಸ ಭವತಿ । ಯಥಾ
ಜಾನಪದೀಷು ವಿದ್ಯಾತಃ ಪುರುಷವಿಶೇಷೋ ಭವತಿ । ಪಾರೋವರ್ಯ-
ವಿತ್ಸು ಖಲು ವೇದಿತೃಷು ಭೂಯೋ ವಿದ್ಯಃ ಪ್ರಶಸ್ಯೋ ಭವತಿ ॥

ಮಂತ್ರಗಳ ಅರ್ಥವು ಸ್ಪಷ್ಟವಾಗಿಲ್ಲವಾದುದರಿಂದ ಅವುಗಳಿಗೆ ಅರ್ಥವತ್ತ್ವವು ಅಸಾಧ್ಯವೆನ್ನುವುದು ಕುರುಡನು ಕಂಭವನ್ನು ದೂಷಿಸಿದಂತೆ ಆಗುತ್ತದೆ. ಎಲ್ಲರಿಗೂ ಚೆನ್ನಾಗಿ ಕಾಣುವ ಕಂಭವನ್ನು ಕುರುಡನು ಒಬ್ಬನು ಕಾಣದೇ ತೊಂದರೆಗೀಡಾಗಿ ಕಂಭವನ್ನು ಬೈದರೆ, ಹಾಸ್ಯಕ್ಕೀಡಾಗುವಂತೆ, ಮಂತ್ರಾರ್ಥವನ್ನು ತಿಳಿಯುವಷ್ಟು ಭಾಷಾಸಂಸ್ಕಾರವಿಲ್ಲದೇ ಮಂತ್ರವು ಸ್ಪಷ್ಟವಾಗಿಲ್ಲವೆನ್ನುವುದೂ ಹಾಸ್ಯಾಸ್ಪದವು ಅಥವಾ ತಲೆ ಒಡೆದುಕೊಂಡ ಕುರುಡನನ್ನು ನೋಡಿದವರು ಮರುಗುವಂತೆ ಮರುಕಕ್ಕೆ ಪಾತ್ರನಾಗುವನು, **ಜಾನಪದೀಷು ವಿದ್ಯಾತಃ ಪುರುಷವಿಶೇಷೋ ಯಥಾ ಭವತಿ**—ಸಾಧಾರಣವಾಗಿ ಜೀವನೋಪಯೋಗಿಯಾದ ಕಸಬುಗಳಲ್ಲಿ, ನುರಿತವನಿಗೆ, ಒಂದು ವಿಶೇಷ ಗಣನೆಯಿರುತ್ತದೆ. ಮಾನ್ಯತೆ ಇರುತ್ತದೆ. ಅದರಂತೆ ಪರಂಪರಾಗತವಾದ ವೈದಿಕ ವಿದ್ಯೆಗಳಲ್ಲಿಯೂ ಕೂಡ ಯಾವನು ಬಹುಶ್ರುತಃ–ಹೆಚ್ಚು ಕಲಿತವನೋ ಅವನೇ ಪ್ರಶಂಸಾರ್ಹನಾಗುತ್ತಾನೆ. ವೇದಾಂಗಗಳೆಲ್ಲವನ್ನೂ ಅಭ್ಯಾಸ ಮಾಡಿದವನಿಗೆ ಮಂತ್ರಾರ್ಥವನ್ನು ತಿಳಿದುಕೊಳ್ಳುವುದರಲ್ಲಿ ಕಷ್ಟವೇನೂ ಇರುವುದಿಲ್ಲ. ಅದಲ್ಲದೆ ಪ್ರಯತ್ನಿಸಿ ಅರ್ಥವಾಗದಿದ್ದರೆ, ಮಂತ್ರವನ್ನು ದೂಷಿಸುವುದು ಪುರುಷಾಪರಾಧವೇ ಹೊರತು ಮಂತ್ರದೋಷವಲ್ಲ.

ನೀನು ಹೇಳುವ ಯಾವ ಒಂದು ದೋಷವೂ ಮಂತ್ರಗಳಲ್ಲಿ ಕಂಡುಬರುವುದಿಲ್ಲವಾದುದರಿಂದ, ಮಂತ್ರಗಳು ಅನರ್ಥಕಗಳೆಂದು ಹೇಳುವುದು ತಪ್ಪು. ಆ ಅರ್ಥಸಹಿತವಾದ ಮಂತ್ರಗಳ ಅರ್ಥವನ್ನು ತಿಳಿಸಲು ಹೊರಟಿರುವ ಈ ಶಾಸ್ತ್ರಪ್ರವೃತ್ತಿಯೂ ಸಾರ್ಥಕವೇ ಆಗುತ್ತದೆ.

**ಇತಿ ಪ್ರಥಮಾಧ್ಯಾಯೇ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು

———

## ಅಥ ಸಪ್ತದಶಃ ಖಂಡಃ

## **ಹದಿನೇಳನೆಯ ಖಂಡವು**

---

ಅಥಾಪೀದಮಂತರೇಣ ಪದವಿಭಾಗೋ ನ ವಿದ್ಯತೇ । ಅವಸಾಯ ಪದ್ವತೇ ರುದ್ರ ಮೃಳೇತಿ ಪದ್ವದವಸಂ ಗಾವಃ ಪಥ್ಯದನಮುವತೇರ್ಗತ್ಯರ್ಥಸ್ಯಾಸೌ ನಾಮಕರಣಸ್ತಸ್ಮಾನ್ನಾವ-ಗೃಹ್ಣಂತ್ಯವಸಾಯಾಶ್ವಾನಿತಿ ಸ್ಯತಿರುಪಸೃಷ್ಟೋ ವಿಮೋಚನೇ ತಸ್ಮಾದವಗೃಹ್ಣಂತಿ ದೂತೋ ನಿರ್ಋತ್ಯಾ ಇದಮಾಜಗಾಮೇತಿ ಪಂಚಮ್ಯರ್ಥಪ್ರೇಕ್ಷಾ ವಾ ಷಷ್ಠ್ಯರ್ಥಪ್ರೇಕ್ಷಾವಾಃ ಕಾರಾಂತಂ ಪರೋನಿರ್ಋತ್ಯಾ ಆಚಕ್ಷ್ವೇತಿ ಚತುರ್ಥ್ಯರ್ಥಪ್ರೇಕ್ಷೈಕಾರಂತಂ ಪರಃಸಂನಿಕರ್ಷಃ ಸಂಹಿತಾ ಪದಪ್ರಕೃತಿಃ ಸಂಹಿತಾ ಪದಪ್ರಕೃತೀಃಸಿ ಸರ್ವಚರಣಾನಾಂ ಪಾರ್ಷದಾನ್ಯಥಾಪಿ ಯಾಜ್ಞೇ ದೈವತೇನ ಬಹವಃ ಪ್ರದೇಶಾ ಭವಂತಿ ತದೇತೇನೋಪೇಕ್ಷಿತವ್ಯಂತೇ ಚೇದ್ಬ್ರೂ-ಯುರ್ಲಿಂಗಜ್ಞಾ ಅತ್ರ ಸ್ಮ ಇತಿ। ಇಂದ್ರಂ ನತ್ವಾ ಶವಸಾ ದೇವತಾ ವಾಯುಂ ಪೃಣಂತೀತಿ ವಾಯುಲಿಂಗಂ ಚೇಂದ್ರಲಿಂಗಂ ಚಾಗ್ನೇಯೇ ಮಂತ್ರೇಽಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವೇತಿ ತಥಾಗ್ನಿರ್ಮಾನ್ಯವೇ ಮಂತ್ರೇ ತ್ವಿಷಿತೋ ಜ್ವಲಿತಸ್ತ್ವಿಷಿರಿತ್ಯಪ್ಯಸ್ಯ ದೀಪ್ತಿನಾಮ ಭವತ್ಯಥಾಪಿ ಜ್ಞಾನಪ್ರಶಂಸಾ ಭವತ್ಯಜ್ಞಾನ-ನಿಂದಾ ಚ ॥೧೭॥

---

ಅಥಾಪೀದಮಂತರೇಣ ಪದವಿಭಾಗೋ ನ ವಿದ್ಯತೇ ॥

ಮಂತ್ರಗಳಿಗೆ ಅರ್ಥವಿಲ್ಲದಿರುವ ಸಂದರ್ಭದಲ್ಲಿ ಅಥವಾ ಅರ್ಥಪರಿಜ್ಞಾನವಿಲ್ಲದಿರುವ ಸಂದರ್ಭದಲ್ಲಿ ಪದವಿಭಾಗದಿಂದ ಏನೂ ಪ್ರಯೋಜನವಿಲ್ಲ. ಆದ್ದರಿಂದ ಮಂತ್ರಗಳಿಗೆ ಪದವಿಭಾಗವನ್ನು ಮಾಡಬೇಕಾದರೆ ಅದು ಮಂತ್ರದ ಅರ್ಥವನ್ನು ಅವಲಂಬಿಸಿರುವುದು ಎಂದರೆ ಅರ್ಥಕ್ಕೆ ಅನುಸಾರವಾಗಿ ಪದವಿಭಾಗವನ್ನು ಮಾಡಬೇಕಾಗಿರುವುದು. ಪದವಿಭಾಗವು ನಿರುಕ್ತದಲ್ಲಿ

ಹೇಳಿರುವ ಪ್ರಕಾರ ಅರ್ಥವನ್ನು ಅವಲಂಬಿಸಿರುವುದು. ಆದ್ದರಿಂದ ಪದವಿಭಾಗವನ್ನು ನಿರುಕ್ತ ಶಾಸ್ತ್ರಜ್ಞಾನವಿಲ್ಲದೆ ಮಾಡಲಾಗುವುದಿಲ್ಲ.

ಅವಸಾಯ ಪದ್ವತೇ ರುದ್ರ ಮೃಳ । ಯದ್ವದವಸಂ ಗಾವಃ ಪಥ್ಯದನಂ ಅವತೇರ್ಗತ್ಯರ್ಥಸ್ಯಾಸೌ ನಾಮಕರಣಃ ॥ ತಸ್ಮಾನ್ನಾವಗೃಹ್ಣಂತಿ ಅವಸಾನಾಯಾಶ್ವಾನ್ ಇತಿ ಸ್ಯತಿರುಪಸೃಷ್ಟೋ ವಿಮೋಚನೇ ತಸ್ಮಾದವಗೃಹ್ಣಂತಿ ॥

ಮಂತ್ರಗಳಿಗೆ ಪದವಿಭಾಗಮಾಡಬೇಕಾದ ಸಂದರ್ಭಗಳಲ್ಲಿ ಹಿಂದೆ ಹೇಳಿದಂತೆ ಅರ್ಥಕ್ಕೆ ಅನುಸಾರವಾಗಿ ಮಾಡಬೇಕು. ಅದಕ್ಕಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿರುವರು—

ಮಯೋಭೂರ್ವಾತೋ ಅಭಿ ವಾತೂಸ್ರಾ ಊರ್ಜಸ್ವತೀರೋಷಧೀರಾ ರಿಶಂತಾಂ । ಪೀವಸ್ವತೀರ್ಜೀವಧನ್ಯಾಃ ಪಿಬಂತ್ವಸಾಯ ಪದ್ವತೇ ರುದ್ರ ಮೃಳ ।

(ಋ. ಸಂ. ೧೦-೧೬೯-೧)

ಇದರ ಅರ್ಥವು—ವಾಯುವು ಗೋವುಗಳ ಸಮೀಪದಲ್ಲಿ ಹಿತಕರವಾಗಿ ಬೀಸಲಿ, ರಸವತ್ತಾದ ಮತ್ತು ಪುಷ್ಟಿಪ್ರದವಾದ ಹುಲ್ಲನ್ನು ಗೋವುಗಳು ತಿನ್ನಲಿ. ಪ್ರಾಣಾಧಾರಭೂತವಾದ ನೀರನ್ನು ಯಥೇಚ್ಛವಾಗಿ ಕುಡಿಯಲಿ, ಎಲೈ ರುದ್ರನೇ, ನಮಗೆ ಹಾಲಿನ ರೂಪದಲ್ಲಿ ಆಹಾರವನ್ನು ಒದಗಿಸುವವೂ ಸಂಚಾರಶೀಲವೂ ಆದ ಈ ಗೋವುಗಳಿಗೆ ಸುಖವನ್ನುಂಟುಮಾಡು (ತೊಂದರೆ ಮಾಡಬೇಡ)

ಈ ಋಕ್ಕಿನಲ್ಲಿರುವ ಅವಸಾಯ ಮತ್ತು ಪದ್ವತೇ ಎಂಬ ಶಬ್ದಗಳಿಗೆ ಯಾವರೀತಿ ಅರ್ಥಾನುಸಾರವಾಗಿ ಪದವಿಭಾಗ ಮಾಡಬಹುದೆಂಬುದನ್ನು ಇಲ್ಲಿ ತೋರಿಸಿದ್ದಾರೆ—**ಅವಸಾಯ** ಎಂಬ ಶಬ್ದವು, ಸಂಚರಿಸು, ಹೋಗು ಎಂಬರ್ಥವುಳ್ಳ **ಅವತಿ** ಧಾತುವಿಗೆ **ಅಸ** ಎಂಬ ಉಪಸರ್ಗವು (ಅವ್ + ಅಸ) ಸೇರಿ ಅವಸ ಶಬ್ದವು ನಿಷ್ಪನ್ನವಾಗಿರುವುದು. ಅವಸಾಯ ಎಂಬುದು ಚತುರ್ಥ್ಯೇಕವಚನಾಂತ ಶಬ್ದವು. ಅಸ ಎಂಬ ಉಪಸರ್ಗವು ಕ್ರಿಯೆಯ ಹಿಂದಿರದೆ ಮುಂದಿರುವುದು ಆದ್ದರಿಂದ ಪದಪಾಠದಲ್ಲಿ ಈ ಶಬ್ದಕ್ಕೆ ಪದವಿಭಾಗ ಅಥವಾ ಪದಚ್ಛೇದ ಮಾಡಿಲ್ಲ. ಎಂದರೆ ಅವ ಮತ್ತು ಸಾಯ ಎಂಬ ಪದಗಳ ಮಧ್ಯೆ ऽ ಎಂಬ ಅವಗ್ರಹ ಚಿಹ್ನೆಯನ್ನು ಹಾಕಿ ಸಮಾಸಪದವೆಂದು ಪರಿಗಣಿಸಿಲ್ಲ. **ಅವಸಾಯ ಪದ್ವತೇ** ಎಂದರೆ ಕಾಲುಗಳುಳ್ಳದ್ದೂ (ಆಹಾರಾರ್ಥವಾಗಿ) ಸಂಚರಿಸುವುದೂ ಆದ ಎಂದರ್ಥವು. ಹುಲ್ಲು ಮೇಯುವುದಕ್ಕಾಗಿ ಅಲ್ಲಲ್ಲಿ ತಿರುಗುತ್ತಿರುವ ಕಾಲುಗಳುಳ್ಳ ಈ ಗೋವಿಗೆ ಸುಖವನ್ನುಂಟುಮಾಡಬೇಕೆಂದು ರುದ್ರ ದೇವನನ್ನು ಪ್ರಾರ್ಥಿಸಲಾಗಿದೆ.

**ಅವಸಾಯ ಪದ್ವತೇ** ಎಂದರೆ ಆಹಾರಾರ್ಥವಾಗಿ ಸಂಚರಿಸುವ ಕಾಲುಗಳುಳ್ಳ ಎಂದರ್ಥವೆಂದು ಹೇಳಿಪೆಯುಷ್ಟೆ.

ಈ ರೀತಿ ಸಂಚರಿಸುವ ಪ್ರಾಣಿಯು ಗೋವು ಮಾತ್ರವಲ್ಲ, ಅಶ್ವಕ್ಕೂ ಇತರ ಪ್ರಾಣಿಗೂ ಸಹ ಇದು ಅನ್ವಯಿಸುವುದೆಂಬುದನು ತೋರಿಸುವುದಕ್ಕಾಗಿ ಅಶ್ವಶಬ್ದ ಪ್ರಯೋಗವಿರುವ ಈ ಕೆಳಗಿನ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ—

ಯೋನಿಷ್ಟ ಇಂದ್ರ ನಿಷದೇ ಅಕಾರಿ ತಮಾ ನಿ ಷೀದ ಸ್ವಾನೋ
ನಾರ್ವಾ । ವಿಮುಚ್ಯಾವಯೋಽವಸಾಯಾಶ್ವಾನ್ದೋಷಾ ವಸ್ತೋ-
ರ್ವಹೀಯಸಃ ಪ್ರಪಿತ್ವೇ ॥

(ಋ. ಸಂ. ೧-೧೦೪-೧)

ಇದರ ಅರ್ಥವು—ಎಲೈ ಇಂದ್ರನೇ, ನಿನಗೆ ಕುಳಿತುಕೊಳ್ಳುವುದಕ್ಕಾಗಿ ಯಜ್ಞವೇದಿರೂಪವಾದ ಸ್ಥಾನವು ನಿರ್ಮಿತವಾಗಿ ಸಿದ್ಧವಾಗಿದೆ. ನೀನು ಜಾಗ್ರತೆಯಾಗಿ ನಿನ್ನ ರಥದಿಂದ ಕಡಿವಾಣವನ್ನು ಸಡಿಲಿಸಿ, ಯಜ್ಞಕಾಲದಲ್ಲಿ ಹಗಲೂ ರಾತ್ರಿಯೂ ಅಭಿಮಾನದಿಂದ ನಿನ್ನನ್ನು ಯಜ್ಞಗೃಹಕ್ಕೆ ಹೊತ್ತುಕೊಂಡು ಬರುವ ಅಶ್ವಗಳನ್ನು ಸಹ ರಥದಿಂದ ಬಿಚ್ಚಿ, ಕುದುರೆಯು ಬಿಚ್ಚಿದ ಕೂಡಲೇ ಹೇಷಾರವವನ್ನು ಮಾಡುತ್ತಾ ತನ್ನ ಸ್ವಸ್ಥಾನಕ್ಕೆ ವೇಗವಾಗಿ ಹೋಗಿ ಸೇರುವಂತೆ ನೀನೂ ಸಹ ಯಜ್ಞವೇದಿಯಲ್ಲಿ ಬಂದು ಕುಳಿತುಕೊ.

ಆದರೆ ಈ ಋಕ್ಕಿನಲ್ಲಿರುವ **ಅವಸಾಯ** ಎಂಬ ಶಬ್ದದ ರೂಪನಿಷ್ಪತ್ತಿಯು ಬೇರೆ ವಿಧವಾಗಿದೆ, ಹೇಗೆಂದರೆ-ಇಲ್ಲಿ **ಅವ** ಎಂಬುದು ಉಪಸರ್ಗವು ವಿಮೋಚನಾರ್ಥವನ್ನು ಸೂಚಿಸುವ **ಸ್ಯತಿ** ಧಾತುವಿನೊಡನೆ ಸೇರಿ **ಅವಸಾಯ**-ವಿಮೋಚನಾರ್ಥವಾಗಿ ಎಂಬ ಶಬ್ದವು ನಿಷ್ಪತ್ತಿಯಾಗಿದೆ. ಮತ್ತು ಇಲ್ಲಿ ಅವ+ಸಾಯ ಎಂದು ಬೇರೆಬೇರೆ ಎರಡು ಪದಗಳ ಜೋಡಣೆಯು ಇಲ್ಲಿ ಇರುವುದರಿಂದ ಇದನ್ನು ಸಮಾಸಪದವೆಂದು ಪರಿಗಣಿಸಿ ಈ ಪದಗಳ ಮಧ್ಯೇ ऽ ಎಂಬ ಅವಗ್ರಹ ಚಿಹ್ನೆಯನ್ನು ಹಾಕಿ **ಅವಽಸಾಯ** ಎಂದು ಪಠಿಸಲಾಗಿದೆ.

ದೂತೋ ನಿರ್ಋತ್ಯಾ ಇದಮಾಜಗಾಮ ಇತಿ ಪಂಚಮ್ಯರ್ಥಪ್ರೇಕ್ಷಾ
ವಾ ಷಷ್ಠ್ಯರ್ಥಪ್ರೇಕ್ಷಾ ವಾಃಕಾರಾಂತಂ । ಪರೋ ನಿರ್ಋತ್ಯಾ
ಆಚಕ್ಷ್ವ ಇತಿ । ಚತುರ್ಥ್ಯರ್ಥಪ್ರೇಕ್ಷ್ಯೈಕಾರಾಂತಂ ॥

ಸಂಹಿತೆಯಲ್ಲಿ ಕೆಲವು ಪದಗಳು ಒಂದೇ ಸಮನಾಗಿ ಇರುವುದು ಕಂಡು ಬರುತ್ತೆ. ಆದರೆ ಪದವಿಭಾಗಮಾಡುವಾಗ ಅಲ್ಲಿನ ಸಂದರ್ಭವನ್ನೂ ಅರ್ಥವಿಶೇಷವನ್ನೂ ಗಮನಿಸಿ ಅದಕ್ಕನುಸಾರವಾಗಿ ಪದವಿಭಾಗಮಾಡಬೇಕು. **ದೂತೋ ನಿರ್ಋತ್ಯಾ ಇದಮಾಜಗಾಮ** ಎಂಬ ವಾಕ್ಯದಲ್ಲಿ ನಿರ್ಋತ್ಯಾ ಎಂಬ ಶಬ್ದವು ಮೂರು ವಿಧವಾದ ವಿಭಕ್ತಿಯನ್ನು ತೋರಿಸುವುದು. ಹೇಗೆಂದರೆ **ನಿರ್ಋತ್ಯಾ**-ತೃತೀಯಾ ವಿಭಕ್ತಿ : **ನಿರ್ಋತ್ಯಾಃ** - ಪಂಚಮೀವಿಭಕ್ತಿ **ನಿರ್ಋತ್ಯಾಃ**- ಷಷ್ಠೀವಿಭಕ್ತಿ : ಮತ್ತು **ನಿರ್ಋತ್ಯೈ**-ಚತುರ್ಥೀವಿಭಕ್ತಿ ಇತ್ಯಾದಿ. ಹೀಗಿರುವಾಗ ಈ ವಾಕ್ಯದ—ನಿರ್ಋತಿಯ ಕಡೆಯಿಂದ ಅಥವಾ ನಿರ್ಋತಿ ಎಂಬ ದೇವತೆಯ ದೂತನು ಇಲ್ಲಿಗೆ ಬಂದಿರುವನು—ಎಂಬ ಅರ್ಥಕ್ಕೆ ಅನುಸಾರವಾಗಿ ಪದವಿಭಾಗವನ್ನು ಮಾಡಬೇಕಾಗಿರುವುದು. ಎಂದರೆ **ನಿರ್ಋತಿ** ಎಂಬ ದೇವತೆಯ ಕಡೆಯಿಂದ ಎಂದು ಅರ್ಥಮಾಡಿದರೆ **ನಿರ್ಋತ್ಯಾ** ಎಂಬುದು ಪಂಚಮೀವಿಭಕ್ತಿಯಾಗುವುದು; ಮತ್ತು **ನಿರ್ಋತ್ಯಾಃ** ನಿರ್ಋತಿ ಎಂಬ ದೇವತೆಯ ಎಂದು ಅರ್ಥಮಾಡಿದರೆ ಆಗ **ನಿರ್ಋತ್ಯಾಃ** ಎಂಬುದು

ಷಷ್ಠೀವಿಭಕ್ತಿಯಾಗುವುದು. ಈ ಎರಡು ಅರ್ಥಗಳೂ ಇಲ್ಲಿ ಹೊಂದಿಕೊಳ್ಳುವವು. ಹಾಗಲ್ಲದೆ **ನಿರ್ಋತ್ಯಾ** - ನಿರ್ಋತಿ ಎಂಬ ದೇವತೆಯಿಂದ ಎಂಬ ಅರ್ಥವು ಇಲ್ಲಿ ಹೊಂದುವುದಿಲ್ಲ. ಅದರಂತೆಯೇ **ನಿರ್ಋತ್ಯೈ** ಎಂದು ಪದವಿಭಾಗ ಮಾಡಿದರೂ (ಇದು ಚತುರ್ಥೀವಿಭಕ್ತಿಯು) ಅರ್ಥವು ಸರಿಯಾಗಿ ಹೊಂದುವುದಿಲ್ಲ. ಆದ್ದರಿಂದ ಪಂಚಮೀ ಅಥವಾ ಷಷ್ಠೀವಿಭಕ್ತಿಯಾದ **ನಿರ್ಋತ್ಯಾಃ** ಎಂಬ ಪದವೇ ಇಲ್ಲಿ ಸಮಂಜಸವಾಗಿದೆ. ನಿರ್ಋತಿ ಎಂಬ ದೇವತೆಯ ಕಡೆಯಿಂದ (ಎಂದರೆ ನಿರ್ಋತಿಯು ಕಳುಹಿಸಿದ್ದ) ಅಥವಾ ನಿರ್ಋತಿ ಎಂಬ ದೇವತೆಯ ದೂತನು ಬಂದಿರುವನು ಎಂಬ ಅರ್ಥವು ಸರಿಯಾಗಿ ಹೊಂದಿಕೊಳ್ಳುವುದರಿಂದ ಇಲ್ಲಿ **ನಿರ್ಋತ್ಯಾಃ** ಎಂದೇ ಪದವಿಭಾಗಮಾಡಬೇಕು.

ಉದಾಹರಣೆಯು ಋಕ್ಕು—

ದೇವಾಃ ಕಪೋತ ಇಷಿತೋ ಯದಿಚ್ಛನ್ದೂತೋ ನಿರ್ಋತ್ಯಾ
ಇದಮಾಜಗಾಮ । ತಸ್ಮಾ ಅರ್ಚಾಮ ಕೃಣವಾಮ ನಿಷ್ಕೃತಿಂ
ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥

(ಋ. ಸಂ. ೧೦–೧೬೫-೧)

ಇದರ ಅರ್ಥವು—ಎಲೈ ದೇವತೆಗಳೇ, ಈಗ ಇಲ್ಲಿಗೆ ಬಂದಿರುವ ನಿರ್ಋತಿಯ ದೂತನೆನಿಸಿದ ಈ ಪಾರಿವಾಳವು ನಮಗೆ ಯಾವ ಬಾಧೆಯನ್ನು ಮಾಡಲಿಚ್ಛಿಸಿ ನಮ್ಮ ಗೃಹಕ್ಕೆ ಬಂದಿದೆಯೋ ಆ ಬಾಧೆಯನಿವೃತ್ತಿಗಾಗಿ ನಿಮ್ಮನ್ನು ಹವಿರಾದಿಗಳಿಂದ ಪೂಜಿಸುತ್ತೇವೆ. ಮತ್ತು ಆ ಕಪೋತ (ಪಾರಿವಾಳ) ಪ್ರವೇಶದಿಂದ ಉಂಟಾದ ದೋಷಪರಿಹಾರಾರ್ಥವಾಗಿ ಹವಿರಾದಿಗಳಿಂದ ಪ್ರಾಯಶ್ಚಿತ್ತವನ್ನು ಆಚರಿಸುತ್ತೇವೆ. ಆದರಿಂದ ನಮ್ಮ ಪುತ್ರಾದಿಗಳಿಗೂ ಗವಾಶ್ವಾದಿಪಶುಗಳಿಗೂ ಯಾವವಿಧವಾದ ಕೆಡಕೂ ಸಂಭವಿಸದಂತೆ ಸುಖವುಂಟಾಗಲಿ.

ಈ ಋಕ್ಕಿನಲ್ಲಿ ನಿರ್ಋತ್ಯಾಃ ಎಂದು ಆಃಕಾರಾಂತಪದವಾಗಿ ಪದಚ್ಛೇದ ಮಾಡಿರುವುದರಿಂದ ಇದು ಪಂಚಮೀ ಅಥವಾ ಷಷ್ಠೀವಿಭಕ್ತಿಯು. ಚತುರ್ಥೀವಿಭಕ್ತಿಯಾದರೆ ಐಕಾರಾಂತ ಪದವಾಗುವುದು ಎಂದರೆ ನಿರ್ಋತ್ಯೈ ಎಂದು. ಅದಕ್ಕೆ ಇನ್ನೊಂದು ಉದಾಹರಣೆಯನ್ನು ಕೊಡುವುದು—

ಅಪೇಹಿ ಮನಸಸ್ಪತೇಽಪಕ್ರಾಮ ಪರಶ್ಚರ । ಪರೋ ನಿರ್ಋತ್ಯಾ
ಆಚಕ್ಷ್ವ ಬಹುಧಾ ಜೀವತೋ ಮನಃ ॥

(ಋ. ಸಂ. ೧೦–೧೬೪–೧)

ಇದರ ಅರ್ಥವು-ಎಲೈ ದುಃಸ್ವಪ್ನದೇವತೆಯೇ, ಸ್ವಪ್ನಾವಸ್ಥೆಯಲ್ಲಿರುವ ನನ್ನನ್ನು ಬಿಟ್ಟು ದೂರ ಸರಿ- ದೂರದೇಶಕ್ಕೆ ನಿನ್ನಿಷ್ಟಬಂದೆಡೆಗೆ ಹೊರಟುಹೋಗು. ನಮ್ಮನ್ನು ಹಿಂಸಿಸಬಾರದೆಂದು ಪಾಪದೇವತೆಯಾದ ನಿರ್ಋತಿಗೆ ಹೇಳು. ಜೀವಿಸುತ್ತಿರುವ ನನ್ನ ಮನಸ್ಸು ಅನೇಕ ವಿಷಯಾದಿಗಳಲ್ಲಿ ಆಸಕ್ತವಾಗಿರುತ್ತದೆ.

ಇಲ್ಲಿ **ನಿರ್ಋತಾ ಆ ಚಕ್ಷ್ವ** - ನಿರ್ಋತಿಗೆ ಹೇಳು ಎಂಬ ವಾಕ್ಯದ ಅರ್ಥವು ಸರಿಯಾಗಿ ಹೊಂದುವುದಕ್ಕಾಗಿ **ನಿರ್ಋತ್ಯೈ** ಎಂದು ಚತುರ್ಥೀವಿಭಕ್ತ್ಯಂತವಾದ ಪದವಿಭಾಗವನ್ನು ಮಾಡಬೇಕು ಮತ್ತು ಈ ಪದವು ಐಕಾರಾಂತವಾಗಿರುವುದು.

ಪರಃ ಸನ್ನಿಕರ್ಷಃ ಸಂಹಿತಾ । ಪದಪ್ರಕೃತಿಃ । ಪದಪ್ರಕೃತೀನಿ
ಸರ್ವಚರಣಾನಾಂ ಪಾರ್ಷದಾನಿ ॥

ಪದವಿಭಾಗವನ್ನೂ ಅದರ ಕ್ರಮವನ್ನೂ ನಾವು ಪ್ರಸ್ತಾಪಮಾಡುತ್ತಿರುವಾಗ ಸಂಹಿತೆಯ ಲಕ್ಷಣವನ್ನೂ ಸ್ವಲ್ಪಮಟ್ಟಿಗೆ ಹೇಳುವುದು ಉಚಿತವು. **ಪರಃ ಸಂನಿಕರ್ಷಃ ಸಂಹಿತಾ** ಎಂದು ಸಂಹಿತೆಯ ಲಕ್ಷಣವು. ಮಂತ್ರದಲ್ಲಿರುವ ಪದಗಳನ್ನು ಪರಸ್ಪರ ಒಟ್ಟಿಗೆ ಸೇರಿಸಿ ಪಠಿಸುವುದು ಸಂಹಿತೆಯೆನಿಸುವುದು. ಹಾಗೆ ಸೇರಿಸುವಾಗ ಸಂಧಿ ನಿಯಮಗಳಿಗೂ ಸ್ವರನಿಯಮಗಳಿಗೂ ವಿಶೇಷಗಮನವನ್ನು ಕೊಡಬೇಕು. ಮಂತ್ರದಲ್ಲಿರುವ ಪದಗಳನ್ನು ನಿಯಮಾನುಸಾರವಾಗಿ ಒಟ್ಟಿಗೆ ಸೇರಿಸುವಾಗ ಎರಡು ಪದಗಳ ಮಧ್ಯೆ ಇರುವ ಸ್ವರಗಳು, ವ್ಯಂಜನಗಳು ಅರ್ಥಕ್ಕೆ ಲೋಪಬಾರದಂತೆ ನಿಯಮಬದ್ಧವಾಗಿ ಎಂದರೆ ಸಂಧಿ ನಿಯಮಪ್ರಕಾರವಾಗಿ ಸೇರಿಸಲ್ಪಡಬೇಕು. ಹೀಗೆ ಸೇರಿಸಿದ ಮೇಲೆ ಮಂತ್ರದ ಅರ್ಥವು ವ್ಯತ್ಯಾಸವಾಗಬಾರದು. ಈ ಕ್ರಮದಿಂದ ಮಂತ್ರದ ಪದಗಳನ್ನು ಜೋಡಿಸಿ ಪಠಿಸುವ ಕ್ರಮಕ್ಕೆ ಸಂಹಿತೆಯೆಂದು ಹೆಸರು.

ಇಲ್ಲಿ ಒಂದು ಸಂಶಯವು ತಲೆದೋರುವುದು **ಪದಪ್ರಕೃತಿಃ ಸಂಹಿತಾ** ಎಂದರೆ ಸಂಹಿತೆಯು ಪದಗಳ ಜೋಡಣೆಯಿಂದ ಉಂಟಾಯಿತೆಂದು ಹೇಳುವಾಗ ಮಂತ್ರದಲ್ಲಿರುವ ಪದಗಳು ಮಂತ್ರಕ್ಕೆ ಪ್ರಕೃತಿಸ್ವರೂಪವಾಗಿರುವವೇ (ಮೂಲ) ಅಥವಾ ಸಂಹಿತೆಯು ಪ್ರಕೃತಿಯೇ ? ಪದಗಳು ಮೊದಲು ಇರುವುದನ್ನು ಸಂಧಿನಿಯಮಪ್ರಕಾರ ಜೋಡಿಸುವ ಸಂಹಿತೆಯು ವಿಕಾರವನ್ನು ಹೊಂದುವುದರಿಂದ ಸಂಹಿತೆಯು ಪದಗಳ ವಿಕೃತಿಯಲ್ಲವೇ ? ಇದರಲ್ಲಿ ಯಾವುದು ಪ್ರಕೃತಿ, ಯಾವುದು ವಿಕೃತಿ ? ಎಂದರೆ ಸಂಹಿತೆ ಮತ್ತು ಪದಗಳು ಎಂಬಲ್ಲಿ ಮೂಲ (ಪ್ರಕೃತಿ) ಯಾವುದು ? ವಿಕೃತಿಯಾವುದು ? ಎಂದರೆ ಕೆಲವರು ಈರೀತಿ ಹೇಳುವರು--ಪದಗಳು ಮೊದಲಿನಿಂದ ಎಂದರೆ ಸಂಹಿತೆಗಿಂತ ಮೊದಲು ಇರುವವು. ಇವುಗಳನ್ನು ಜೋಡಿಸಿದ ಮೇಲೆ ಸಂಹಿತೆ ಯಾಗುವುದು. ಆದ್ದರಿಂದ ಪದಗಳು ಪ್ರಕೃತಿ (ಮೂಲ). ಸಂಹಿತೆಯು ವಿಕೃತಿ ಎಂದು ; ಮತ್ತೆ ಕೆಲವರು ಇನ್ನೊಂದು ವಿಧವಾಗಿ ಹೇಳುವರು - ಪದಗಳು ಪ್ರಕೃತಿಯಾಗಿ ಕಂಡರೂ ಅವು ಮಂತ್ರಗಳಿಗೆ ಮೂಲವಲ್ಲ. ಬರೀ ಕೆಲವು ಶಬ್ದಗಳಿಂದ ಯಾವ ಅರ್ಥವೂ ಭಾಸವಾಗುವುದಿಲ್ಲ. ಋಷಿಗಳು ಮಂತ್ರಗಳನ್ನು ಪ್ರತ್ಯಕ್ಷೀಕರಿಸಿಕೊಂಡಾಗ ಅವರಿಗೆ ಮಂತ್ರಗಳು ಸಂಹಿತಾರೂಪದಲ್ಲಿಯೇ ಗೋಚರಿಸಿದವು: (ಎಂದರೆ ಋಷಿಗಳು ಮಂತ್ರಗಳನ್ನು ಸಂಹಿತಾರೂಪದಲ್ಲಿಯೇ ರಚಿಸಿದರು) ಮತ್ತು ಮಂತ್ರಗಳನ್ನು ಅಧ್ಯಯನ ಮಾಡುವಾಗ, ಶಿಷ್ಯರಿಗೆ ಬೋಧಿಸುವಾಗ ಮಂತ್ರಗಳನ್ನು ಸಂಹಿತಾರೂಪದಲ್ಲಿಯೇ ಪಠಿಸುವುದು ರೂಢಿಯಲ್ಲಿದೆ. ಇದಲ್ಲದೆ, ಯಜ್ಞಯಾಗಾದಿ ಕರ್ಮಗಳನ್ನು ಸಂಹಿತಾರೂಪದಲ್ಲಿಯೇ ಪಠಿಸಿ ಕಾರ್ಯವನ್ನು ನಿರ್ವಹಿಸುವುದು ಮೊದಲಿನಿಂದಲೂ ಬಂದ ಸಂಪ್ರದಾಯವು. ಅಂತಹ ಸಂದರ್ಭಗಳಲ್ಲಿ ಕೇವಲ ಪದಗಳನ್ನು ವಿಂಗಡಿಸಿ ಉಚ್ಚರಿಸುವುದಿಲ್ಲ. ಆದ್ದರಿಂದ ಸಂಹಿತೆಯೇ ಪ್ರಕೃತಿಯು (ಮೂಲವು) ಪದವಿಭಾಗವು ವಿಕೃತಿಯು ಎಂದು ಹೇಳಬೇಕು. ಆದರೆ ಇತರ ಶಾಖೆಗಳಲ್ಲಿಯೂ ಋಗ್ವೇದದಲ್ಲಿಯೂ ಹೇಳಿರುವ ಮಂತ್ರದ ಚರಣಗಳನ್ನು ಎಂದರೆ ವಿಭಾಗಗಳನ್ನು ಪ್ರಾತಿಶಾಖ್ಯವೆಂಬ (**ಪ್ರಾತಿಶಾಖ್ಯ** ಎಂದರೆ **ಪ್ರತಿಶಾಖೆಗೂ** ಅಥವಾ ಪ್ರತಿವೇದಕ್ಕೂ ಸಂಬಂಧಪಟ್ಟಂತೆ ಇರುವ, ಉಚ್ಚಾರಾದಿಕ್ರಮವನ್ನು ಸಂಧಿಮುಂತಾದ ನಿಯಮಗಳನ್ನು ಬೋಧಿಸುವ ಲಕ್ಷಣ ಗ್ರಂಥ) ಗ್ರಂಥದ ಪ್ರಕಾರ ವಿವೇಚಿಸುವಾಗ ಮಂತ್ರದಲ್ಲಿರುವ ಪದಗಳನ್ನೇ **ಪ್ರಕೃತಿಯೆಂದು** ಪರಿಗಣಿಸಲಾಗುವುದು. ಇದು

ವಿಶೇಷಸಂದರ್ಭದಲ್ಲಿ ಮಾತ್ರ. ಸಾಧಾರಣಸಂದರ್ಭಗಳಲ್ಲೆಲ್ಲಾ ಸಂಹಿತೆಯೇ ಪ್ರಕೃತಿ ಅಥವಾ ಮೂಲಸ್ವರೂಪವು. ಆ ಸಂಹಿತೆಯ ಅರ್ಥವನ್ನನುಸರಿಸಿ ಪದವಿಭಾಗವನ್ನು ಮಾಡಬೇಕಾಗಿರುವುದರಿಂದ ಪದಗಳು ವಿಕೃತಿ ಎಂದು ಹೇಳುವುದು ಸಮಂಜಸವಾಗಿರುವುದು ಎಂದಭಿಪ್ರಾಯವು.

ಅಥಾಪಿ ಯಾಜ್ಞೇ ದೈವತೇನ ಬಹವಃ ಪ್ರದೇಶಾ ಭವಂತಿ ತದೇ–
ತೇನೋಪೇಕ್ಷಿತವ್ಯಂ । ತೇ ಚೇದ್ಬ್ರೂಯುರ್ಲಿಂಗಜ್ಞಾ ಅತ್ರ ಸ್ಮ ಇತಿ ।
ಇಂದ್ರಂ ನ ತ್ವಾ ಶವಸಾ ದೇವತಾ ವಾಯುಂ ಪೃಣಂತಿ ಇತಿ
ವಾಯುಲಿಂಗಂ ಚೇಂದ್ರಲಿಂಗಂ ಚಾಗ್ನೇಯೇ ಮಂತ್ರೇ । ಅಗ್ನಿರವ
ಮನ್ಯೋ ತ್ವಿಷಿತಃ ಸಹಸ್ವ ಇತಿ ತಥಾಗ್ನಿರ್ಮಾನ್ಯವೇ ಮಂತ್ರೇ ।
ತ್ವಿಷಿತೋ ಜ್ವಲಿತಃ । ತ್ವಿಷಿರಿತ್ಯಪ್ಯಸ್ಯ ದೀಪ್ತಿನಾಮ ಭವತಿ ॥

ಇದುವರೆಗೆ ಮಂತ್ರಗಳ ಪದವಿಭಾಗದಲ್ಲಿ ಅರ್ಥಕ್ಕನುಸಾರವಾಗಿ ಪದವಿಭಾಗಮಾಡಬೇಕೆಂಬುದನ್ನೂ, ಸಂಹಿತಾಪಾಠದ ಪ್ರಕೃತಿಸ್ವರೂಪವನ್ನೂ ವಿವರಿಸಿದ್ದಾಯಿತು. ಈ ವಿಷಯಗಳನ್ನು ತಿಳಿದುಕೊಳ್ಳಬೇಕಾದರೆ ನಿರುಕ್ತಶಾಸ್ತ್ರಜ್ಞಾನವು ಅವಶ್ಯಕವಾಗಿ ಬೇಕೆಂಬುದೂ ಸ್ಪಷ್ಟವಾಗಿಯೇ ಇದೆ. ಇಷ್ಟೇ ಅಲ್ಲದೆ ನಿರುಕ್ತಶಾಸ್ತ್ರದ ಜ್ಞಾನವು ಮಂತ್ರಗಳಲ್ಲಿರುವ ದೇವತೆಗಳ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೂ ಸಹಾಯಕವಾಗಿದೆ ಎಂಬ ವಿಷಯವನ್ನು ವಿಶದಪಡಿಸುತ್ತಾರೆ.

ಯಜ್ಞಕರ್ಮಗಳಲ್ಲಿ ಋತ್ವಿಗ್ಜನರೂ ಯಜಮಾನರೂ ಅನೇಕಮಂತ್ರಗಳನ್ನು ಪಠಿಸಬೇಕಾಗುತ್ತದೆ. ಮಂತ್ರಪಠನ ಕಾಲದಲ್ಲಿ ಯಾವ ದೇವತೆಯನ್ನು ಉದ್ದೇಶಿಸಿ ಆಹ್ವಾನಾದಿಗಳಿಂದ ಪ್ರಾರ್ಥಿಸುವರೋ ಅದಕ್ಕೆ ಅನುಸಾರವಾದ ಅರ್ಥವುಳ್ಳ ಮಂತ್ರಗಳನ್ನು ಪಠಿಸಬೇಕಾಗುತ್ತದೆ. ಎಂದರೆ ಇಂದ್ರನನ್ನು ಸ್ತುತಿಸುವಾಗ ಇಂದ್ರದೇವತಾಕವಾದ ಮಂತ್ರವನ್ನೂ, ವಾಯುವನ್ನು ಸ್ತುತಿಸಬೇಕಾದಾಗ ವಾಯುದೇವತಾಕವಾದ ಮಂತ್ರವನ್ನೂ ಪಠಿಸಬೇಕಾಗುವುದು. ಇಂತಹ ಸಂದರ್ಭಗಳಲ್ಲಿ ಇಂದ್ರನ ಪರವಾದ ಮಂತ್ರವು ಯಾವುದು? ವಾಯುವಿನ ಪರವಾದ ಮಂತ್ರವು ಯಾವುದು? ಅಗ್ನಿಪರವಾದ ಮಂತ್ರವು ಯಾವುದು ಎಂಬುದನ್ನು ತಿಳಿದುಕೊಳ್ಳುವ ಬಗೆ ಹೇಗೆ? ಎಂದರೆ ಅದಕ್ಕೆ ಉತ್ತರವಾಗಿ ಕೆಲವರು ಹೀಗೆ ಹೇಳಬಹುದು—ಮಂತ್ರದಲ್ಲಿ ಇಂದ್ರನ ಹೆಸರು ಸೂಚಿತವಾಗಿದ್ದರೆ ಅದು ಇಂದ್ರಪರವಾದ ಮಂತ್ರವು; ವಾಯುವಿನ ಹೆಸರು ಸೂಚಿತವಾಗಿದ್ದರೆ ಅದು ವಾಯುಪರವಾದ ಮಂತ್ರವು. ಆದ್ದರಿಂದ ಆಯಾ ದೇವತೆಯ ಹೆಸರಿರುವ ಮಂತ್ರವನ್ನು ಆಯಾ ದೇವತೆಯನ್ನುದ್ದೇಶಿಸಿ ಪಠಿಸಬಹುದು ಎಂದು. ಆದರೆ ಈ ಕ್ರಮದಲ್ಲಿ ಅನೇಕ ತೊಂದರೆಗಳಿವೆ. ಮಂತ್ರದಲ್ಲಿ ಒಂದು ದೇವತೆಯ ಹೆಸರಿದ್ದ ಮಾತ್ರಕ್ಕೆ ಆ ಮಂತ್ರವು ಆ ದೇವತೆಯನ್ನು ಸ್ತುತಿಸುವುದೆಂದು ಎಲ್ಲಾ ಸಂದರ್ಭಗಳಲ್ಲಿಯೂ ಹೇಳಲಾಗುವುದಿಲ್ಲ. ಇದಲ್ಲದೆ ಒಂದು ಮಂತ್ರದಲ್ಲಿ ಒಂದಕ್ಕಿಂತ ಹೆಚ್ಚು ಎಂದರೆ ಇಬ್ಬರು ಮೂವರು ಅಥವಾ ಅನೇಕ ದೇವತೆಗಳ ಹೆಸರುಗಳು ಉಕ್ತವಾಗಿರಬಹುದು. ಇಂತಹ ಸಂದರ್ಭದಲ್ಲಿ ಆ ಮಂತ್ರಕ್ಕೆ ದೇವತೆ ಯಾರು ಎಂಬುದನ್ನು ನಿರ್ಧರಿಸಬೇಕಾಗಿರುವುದು. ಕೇವಲ ಹೆಸರುಗಳಿದ್ದರೆ ಅಥವಾ ಮಂತ್ರದಲ್ಲಿರುವ ದೇವತೆಗಳ ಹೆಸರನ್ನು ತಿಳಿದುಕೊಂಡರೆ ಮಂತ್ರದ ಮುಖ್ಯದೇವತೆಯನ್ನು ತಿಳಿದಂತಾಗಲಿಲ್ಲ. ಇದನ್ನು ನಿರುಕ್ತಶಾಸ್ತ್ರದ ಪರಿಜ್ಞಾನದಿಂದ ಮಾತ್ರ ತಿಳಿದುಕೊಳ್ಳಬಹುದು. ಹಾಗೆ ಮಾಡದೆ ಮಂತ್ರದಲ್ಲಿ ಉಕ್ತವಾಗಿರುವ ದೇವತೆ ಅಥವಾ ದೇವತೆಗಳ ಹೆಸರುಗಳನ್ನು ತಿಳಿದು ಆ ಹೆಸರಿನ ದೇವತೆಯೇ ಆ ಮಂತ್ರಕ್ಕೆ ದೇವತೆಯೆಂದು

ಭಾವಿಸಿ ಕರ್ಮಮಾಡಿದರೆ, ಆ ಕರ್ಮದಿಂದ ಉದ್ದಿಷ್ಟಫಲವು ಪ್ರಾಪ್ತವಾಗುವುದಿಲ್ಲ. ಅಷ್ಟೇ ಅಲ್ಲ. ಆದರಿಂದ ಆ ಕರ್ಮವು ಕೆಟ್ಟುಹೋಗಿ ಕೆಡಕಾಗುವ ಸಂಭವವೂ ಉಂಟು. ಹೀಗಾಗದಿರುವುದಕ್ಕಾಗಿ ಮಂತ್ರದ ಸರಿಯಾದ ದೇವತಾಪರಿಜ್ಞಾನ ವುಂಟಾಗಬೇಕು. ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ಹೇಳುತ್ತೇವೆ—

**ತ್ವಾಂ ಹಿ ಮಂದ್ರತಮಮರ್ಕಶೋಕೈರ್ವವೃಮಹೇ ಮಹಿ ನಃ ಶ್ರೋಷ್ಯಗ್ನೇ ।**
**ಇಂದ್ರಂ ನ ತ್ವಾ ಶವಸಾ ದೇವತಾ ವಾಯುಂ ಪೃಣಂತಿ ರಾಧಸಾ ನೃತಮಾಃ ॥**

(ಋ. ಸಂ. ೬-೪-೭)

ಇದರ ಅರ್ಥವು—ಎಲೈ ಅಗ್ನಿಯೆ, ಅತ್ಯಂತ ಸ್ತುತ್ಯನಾದ ನಿನ್ನನ್ನು ಪೂಜ್ಯವಾದ ಸ್ತೋತ್ರಗಳಿಂದ ಆರಾಧಿಸುತ್ತೇವೆ. ಮಹತ್ತಾದ ನಮ್ಮ ಸ್ತೋತ್ರವನ್ನು ಕೇಳು. ಶಕ್ತಿಯುತನಾದ ವಾಯುವಿನಂತೆಯೂ, ಇಂದ್ರನಂತೆಯೂ ದೇವತಾತ್ಮನಾದ ನಿನ್ನನ್ನು ನರರಲ್ಲಿ ಶ್ರೇಷ್ಠರಾದ ಋತ್ವಿಗ್ಜನರು ಹವಿಸ್ಸಿನ ರೂಪದ ಅನ್ನದಿಂದ ತೃಪ್ತಿಗೊಳಿಸುತ್ತಾರೆ.

ಈ ಋಕ್ಕಿನಲ್ಲಿ ಇಂದ್ರ, ವಾಯು ಮತ್ತು ಅಗ್ನಿ ಎಂಬ ದೇವತೆಗಳ ಹೆಸರಿರುವ ಮಂತ್ರಗಳಿಗೆ ಆಯಾ ದೇವತೆಗಳೇ ಮುಖ್ಯದೇವತೆಗಳೆಂದು ಭಾವಿಸಿದಲ್ಲಿ ಈ ಋಕ್ಕಿಗೆ ಇಂದ್ರ, ವಾಯು, ಅಗ್ನಿ ಎಂಬ ಮೂವರಲ್ಲಿ ಯಾರನ್ನಾದರೂ ದೇವತೆಯೆಂದು ಹೇಳಬಹುದಲ್ಲವೇ ? ಎಂದರೆ ಹಾಗಲ್ಲ. ಪ್ರಕೃತ ಋಕ್ಕಿನಲ್ಲಿ ಇಂದ್ರ, ವಾಯುಗಳನ್ನು ಸ್ತುತಿಸಲಾಗಿದ್ದರೂ ಅವರು ಈ ಋಕ್ಕಿಗೆ ದೇವತೆಗಳಲ್ಲ. ಪ್ರಸಂಗವಶದಿಂದ ಇಂದ್ರವಾಯುಗಳ ಶಕ್ತಿಸಾಮರ್ಥ್ಯಗಳು ಅಗ್ನಿದೇವತೆಗೂ ಇರುವುವೆಂದು ತಿಳಿಸುವುದಕ್ಕಾಗಿ ಇಂದ್ರವಾಯುಗಳ ಉಪಮಾನವನ್ನು ಕೊಟ್ಟಿದೆ. ಇಂದ್ರ ಮತ್ತು ವಾಯುಗಳು ಹೇಗೆ ಶಕ್ತಿಯುತರೋ ಹಾಗೆ ನೀನೂ (ಅಗ್ನಿಯೂ) ಶಕ್ತಿಯುತನಾಗಿದ್ದೀಯೇ ಎಂದು ಅಗ್ನಿಯನ್ನು ಸ್ತುತಿಸಲಾಗಿದೆ ಮತ್ತು ಜನರು ಸಹ ಇಂದ್ರ ವಾಯುಗಳನ್ನು ಹವಿಸ್ಸಿನಿಂದ ತೃಪ್ತಿಪಡಿಸುವಂತೆ ಅಗ್ನಿಯಾದ ನಿನ್ನನ್ನೂ ತೃಪ್ತಿಪಡಿಸುತ್ತಾರೆ ಎಂದು ಅಗ್ನಿಯನ್ನು ಇಲ್ಲಿ ಸ್ತುತಿಸಲಾಗಿದೆ. ಅಗ್ನಿಯ ಶಕ್ತಿಸಾಮರ್ಥ್ಯಗಳು ಅತ್ಯಧಿಕವಾದವುಗಳೆಂದು ತಿಳಿಸುವುದಕ್ಕಾಗಿ ಇಂದ್ರವಾಯುಗಳ ಶಕ್ತಿಸಾಮರ್ಥ್ಯಗಳನ್ನು ವರ್ಣಿಸಿ ಹೋಲಿಸಲಾಗಿದೆ. ಆದ್ದರಿಂದ ಈ ಮಂತ್ರಕ್ಕೆ ಇಂದ್ರವಾಯುಗಳು ದೇವತೆಗಳಲ್ಲ. ಅಗ್ನಿಯೇ ಮುಖ್ಯದೇವತೆಯು. ಈ ವಿಷಯದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡುವರು.

**ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ** (ಋ. ಸಂ. ೧೦-೮೪-೨) ಎಂಬ ಋಕ್ಕಿನಲ್ಲಿ ಅಗ್ನಿ ಎಂಬ ದೇವತೆಯ ಹೆಸರಿದೆ. ಆದರೆ ಈ ಮಂತ್ರಕ್ಕೆ ಅಗ್ನಿಯು ದೇವತೆಯಲ್ಲ ಮನ್ಯುವು (ಕೋಪವೆಂಬ ಭಾವವು) ದೇವತೆಯು. ಅಗ್ನಿಯು ಯಾವ ರೀತಿ ತನ್ನ ಪ್ರಕಾಶದಿಂದ ಬೆಳಗುವನೋ ಅದರಂತೆ ಎಲೈ ಮನ್ಯುದೇವತೆಯೇ, ನೀನೂ ನಿನ್ನ ತೇಜಸ್ಸಿನಿಂದ (ಪ್ರಕಾಶದಿಂದ) ಬೆಳಗುವೆ ಎಂದು ಇಲ್ಲಿ ಅಗ್ನಿಶಬ್ದವನ್ನು ಉಪಮಾನಾರ್ಥವಾಗಿ ಉಪಯೋಗಿಸಲಾಗಿದೆ. ಅಗ್ನಿದೇವತೆಗೆ ಇಲ್ಲಿ ಪ್ರಾಧಾನ್ಯತೆ ಇಲ್ಲ. **ತ್ವಿಷಿ** ಎಂದರೆ ದೀಪ್ತಿ ತೇಜಸ್ಸು ಎಂದು ಅರ್ಥವು.

ಆದ್ದರಿಂದ ಮಂತ್ರಗಳಲ್ಲಿ ಉಕ್ತವಾಗಿರುವ ಕೇವಲ ದೇವತೆಗಳ ಹೆಸರುಗಳಿಂದ ಮಾತ್ರವೇ ಮಂತ್ರದ ಮುಖ್ಯದೇವತೆಯನ್ನು ತಿಳಿಯಲು ಸಾಧ್ಯವಿಲ್ಲ. ಮಂತ್ರದಲ್ಲಿರುವ ಅರ್ಥಾನುಸಾರವಾಗಿ ಮಂತ್ರದಲ್ಲಿ ಯಾವ ದೇವತೆಯು ಮುಖ್ಯನಾಗಿ ಸ್ತುತನಾಗಿರುವನು ಎಂಬುದನ್ನು ನಿರುಕ್ತಶಾಸ್ತ್ರಾನುಸಾರವಾಗಿ ತಿಳಿದುಕೊಳ್ಳಬೇಕು. ಆದ್ದರಿಂದ ಮಂತ್ರಗಳ ನಿಜವಾದ

ದೇವತೆಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವ ವಿಷಯದಲ್ಲಿಯೂ ನಿರುಕ್ತಗ್ರಂಥದ ಪರಿಜ್ಞಾನವು ಅತ್ಯವಶ್ಯಕವೆಂಬುದನ್ನು ಅರಿಯಬೇಕು. ಲೋಕವ್ಯವಹಾರದಲ್ಲಿಯೂ ಸಹ ಯಾವ ಪುರುಷನು ಈ ನಿರುಕ್ತಶಾಸ್ತ್ರವನ್ನು ತಿಳಿದು ಅದರಂತೆ ಯಜ್ಞ ಕರ್ಮಾದಿಗಳಲ್ಲಿ ವಿವೇಚನೆಯಿಂದ ಮಂತ್ರಾದಿಗಳನ್ನು ಸಂದರ್ಭಾನುಸಾರ ಪಠಿಸುವನೋ ಅವನು ಜನರಲ್ಲಿ ಗೌರವಿಸಲ್ಪಡುತ್ತಾನೆ. ಇದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

**ಇತಿ ಪ್ರಥಮಾಧ್ಯಾಯೇ ಸಪ್ತದಶಃ ಖಂಡಃ**

ಇಲ್ಲಿಗೆ ನಿರುಕ್ತದ ಮೊದಲನೆಯ ಅಧ್ಯಾಯದಲ್ಲಿ ಹದಿನೇಳನೆಯ ಖಂಡವು ಸಮಾಪ್ತವು



## ಅಥ ಅಷ್ಟಾದಶಃ ಖಂಡಃ

ಹದಿನೆಂಟನೆಯ ಖಂಡವು



ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ
ವಿಜಾನಾತಿ ಯೋಽರ್ಥಂ। ಯೋಽರ್ಥಜ್ಞ ಇತ್ಸಕಲಂ
ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ।
ಯದ್ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ। ಅನಗ್ನಾವಿವ
ಶುಷ್ಕೈಧೋ ನ ತಜ್ಜ್ವಲತಿ ಕರ್ಹಿಚಿತ್। ಸ್ಥಾಣುಸ್ತಿಷ್ಠತೇ–
ರರ್ಥೋಽರ್ತೇರರಣಸ್ಥೋ ವಾ ॥೧೮॥

ಇಲ್ಲಿ ಸ್ಥಾಣುಶಬ್ದಕ್ಕೆ ವ್ಯಾಖ್ಯಾನಕಾರರು ವೃಕ್ಷವೆಂದು ಅರ್ಥಮಾಡಿದ್ದಾರೆ. ವೃಕ್ಷವು ತನ್ನಲ್ಲಿರುವ ಫಲಪುಷ್ಪಾದಿಗಳ ಭಾರವನ್ನು ಹೊರಬಲ್ಲದೇ ವಿನಹ ಅವುಗಳ ಪ್ರಯೋಜನವೇನೂ ಅದಕ್ಕಿರುವುದಿಲ್ಲ. ಅದರಂತೆ ವೇದಾಧ್ಯಯನವನ್ನು ಬಾಯಿ ಪಾಠಮಾಡಿದ ಪುರುಷನು ಅದರ ಅರ್ಥವನ್ನು ತಿಳಿದುಕೊಳ್ಳದಿದ್ದರೆ, ಭಾರವನ್ನು ಮಾತ್ರ ಹೊತ್ತಿರುವ ವೃಕ್ಷವಂತಿರುವನು ಎಂದರೆ ಅರ್ಥಜ್ಞಾನವಿಲ್ಲದೆ ವೇದಾಧ್ಯಯನವನ್ನು ಮಾಡಿರುವ ಪುರುಷನು ಕೇವಲ ಭಾರವನ್ನು ಹೊತ್ತಿರುವ ವೃಕ್ಷದಂತಿರುವನು. ವೇದಾರ್ಥಜ್ಞಾನದಿಂದ ಲಭಿಸಬೇಕಾದ ಫಲವು ಅವನಿಗಿರುವುದಿಲ್ಲ. ಆದರೆ ವೇದಾಧ್ಯಯನವನ್ನು ಅರ್ಥವತ್ತಾಗಿ ಮಾಡುವ ಪುರುಷನು ಸಕಲ ಶ್ರೇಯಸ್ಸನ್ನು ಪಡೆದು ಸುಖಿಸುವನು ಸ್ವಜನರಲ್ಲಿ ಗಣ್ಯನೆನಿಸುವನು. ಮತ್ತು ವೇದಾರ್ಥಜ್ಞಾನದಿಂದ ಸಕಲ ಪಾಪಗಳಿಂದ ನಿವೃತ್ತನಾಗಿ ಸುಖದಿಂದ ಜೀವಿಸುತ್ತಿದ್ದು ಅಂತ್ಯದಲ್ಲಿ ಸ್ವರ್ಗಲೋಕಕ್ಕೆ ಹೋಗುವನು. ಈ ವಿಷಯದಲ್ಲಿ—

**ಯದ್ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ ।**
**ಅನಗ್ನಾವಿವ ಶುಷ್ಕೈಧೋ ನ ತಜ್ಜ್ವಲತಿ ಕರ್ಹಿಚಿತ್ ॥**

ಎಂದು ಪ್ರಾಜ್ಞರು ಹೇಳುವರು ಎಂದರೆ, ಅರ್ಥಜ್ಞಾನವಿಲ್ಲದೆ ಕೇವಲ ಬಾಯಿಪಾಠದಿಂದ ವೇದವನ್ನು ಕಲಿತರೆ ಅದರಿಂದ ಏನೂ ಪ್ರಯೋಜನವಿರುವುದಿಲ್ಲ. ಆರಿಹೋದ ಬೆಂಕಿಯ ಮೇಲೆ ಎಷ್ಟು ಒಣಗಿದ ಕಟ್ಟಿಗೆಯನ್ನು ಹಾಕಿ ಬೀಸಿದರೂ ಅದು ಹತ್ತಿಕೊಂಡು ಉರಿಯುವುದಿಲ್ಲ. ಅದರಂತೆ ಅರ್ಥಜ್ಞಾನವಿಲ್ಲದ ವೇದಾಧ್ಯಯನವೂ ವ್ಯರ್ಥವು ಎಂದಭಿಪ್ರಾಯವು. **ಸ್ಥಾಣು** ಶಬ್ದವು ನಿಲ್ಲು ಎಂಬರ್ಥವಿರುವ ಸ್ಥಾ (ತಿಷ್ಠತಿ) ಧಾತುವಿನಿಂದ ನಿಷ್ಪನ್ನವಾಗಿದೆ. **ಅರ್ಥಃ** ಎಂಬ ಶಬ್ದವು **ಋ ಗತೌ** ಹೋಗು ಎಂಬ ಗತ್ಯರ್ಥಕ ಧಾತುವಿನಿಂದಾಗಲಿ, **ಅರಣಸ್ಥೋ ವಾ** ಗತ್ಯರ್ಥಕ್ಕೆ ವಿರುದ್ಧವಾದ ಹೋಗದಿರುವುದು ಎಂಬರ್ಥವಿರುವ **ಅರಣಸ್ಥಃ** ಎಂಬ ಶಬ್ದದಿಂದಲಾದರೂ ನಿಷ್ಪನ್ನವಾಗಬಹುದು.

**ಇತಿ ಅಷ್ಟಾದಶಃ ಖಂಡಃ**

ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು

---

## ಅಥೈಕೋನವಿಂಶಃ ಖಂಡಃ

### ಹತ್ತೊಂಭತ್ತನೆಯ ಖಂಡವು

---

ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ । ಉತೋ ತ್ವಸ್ಮೈ ತನ್ವಂ ೧ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥ (ಋ. ಸಂ. ೧೦-೭೧-೪) ಅಪ್ಯೇಕಃ ಪಶ್ಯನ್ನ ಪಶ್ಯತಿ ವಾಚಮಪಿ ಚ ಶೃಣ್ವನ್ನ ಶೃಣೋತ್ಯೇನಾಮಿತ್ಯವಿದ್ವಾಂಸಮಾಹಾರ್ಧಮಪ್ಯೇಕಸ್ಮೈ ತನ್ವಂ ವಿಸಸ್ರ ಇತಿ ಸ್ವಮಾತ್ಮಾನಂ ವಿವೃಣುತೇ ಜ್ಞಾನಂ ಪ್ರಕಾಶನಮರ್ಥಸ್ಯಾಹಾನಯಾ ವಾಚೋಪಮೋತ್ತಮಯಾ ವಾಚಾ ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷು ಸುವಾಸಾಃ ಕಲ್ಯಾಣವಾಸಾಃ ಕಾಮಯಮಾನಾ ಋತುಕಾಲೇಷು । ಯಥಾ ಸ ಏನಾಂ ಪಶ್ಯತಿ ಸ ಶೃಣೋ-

ತೀರ್ತ್ಯರ್ಥಜ್ಞಪ್ರಶಂಸಾ । ತಸ್ಯೋತ್ತರಾ ಭೂಯಸೇ
ನಿರ್ವಚನಾಯ ॥ ೧೯ ॥

———

ವೇದಾರ್ಥವನ್ನು ತಿಳಿದ ಪುರುಷನ ಪ್ರಶಂಸೆಯೂ, ಅರ್ಥಜ್ಞಾನವಿಲ್ಲದವನ ನಿಂದೆಯೂ ಶಾಸ್ತ್ರಾದಿಗಳಲ್ಲಿ ಮಾತ್ರ ಹೇಳಲ್ಪಟ್ಟಿರುವುದಿಲ್ಲ. ವೇದದಲ್ಲಿಯೇ ಈ ವಿಷಯದ ವಿಮರ್ಶೆ ಇದೆ. ಇದನ್ನು ಮೇಲಿನ **ಉತ ತ್ವಃ** ಎಂಬ ಋಕ್ಕಿನಲ್ಲಿಯೂ ಇದರ ಮುಂದಿನ ಋಕ್ಕಿನಲ್ಲಿಯೂ ವಿವರಿಸಲಾಗಿದೆ.

ಒಬ್ಬನು ಕಣ್ಣಿನಿಂದ ನೋಡಿದರೂ ನೋಡದವಂತೆ ಇರುವನು. ಎಂದರೆ, ನೋಡಿದರೂ ಅವನಿಗೆ ಏನೂ ಕಾಣಿಸುವುದಿಲ್ಲ; ವಾಕ್ಯವನ್ನು ಕಿವಿಯಿಂದ ಕೇಳಿದರೂ ಅವನಿಗೆ ಏನೂ ಕೇಳಿಸುವುದಿಲ್ಲ. ಇದು ವಿದ್ವಾಂಸನಲ್ಲದವನ ವಿಚಾರವಾಗಿ ಹೇಳಿದ ಮಾತು. ಇದರ ಅರ್ಥವಿದು—ವೇದದ ಅರ್ಥವನ್ನು ಅರಿಯದ ಪುರುಷನನ್ನು ಕುರಿತು ಮಂತ್ರದ ಪೂರ್ವಾರ್ಧವು ಹೀಗೆ ಹೇಳುತ್ತದೆ.—ವೇದಾಧ್ಯಯನವನ್ನು ಮಾತ್ರ (ಅರ್ಥವಿಲ್ಲದ ಕಂಠಪಾಠ ಮಾತ್ರ) ಮಾಡಿರುವ ಒಬ್ಬ ಪುರುಷನು ವೇದವಾಕ್ಯಗಳ ಸ್ವರೂಪವನ್ನು ನೋಡಲಾರನು (ತಿಳಿಯಲಾರನು). ಎಂದರೆ ವೇದಾರ್ಥರೂಪವಾದ ಜ್ಞಾನವನ್ನು ಪಡೆಯಲಾರನು. ಅವನಿಗೆ ವೇದವಾಕ್ಯಗಳ ಅರ್ಥವು ಸರಿಯಾಗಿ ಗೊತ್ತಾಗುವುದಿಲ್ಲ. ಅನೇಕ ಸಂಶಯಗಳು ಪ್ರಾಪ್ತವಾಗುವವು ಅವನು ಪಠಿಸುವ ವೇದವಾಕ್ಯವು ಶುದ್ಧವಾಗಿದ್ದರೂ ಏಕವಚನವಾವುದು, ಬಹುವಚನವಾವುದು ಎಂಬುವುದನ್ನು ತಿಳಿಯದೆ ಸಂಶಯಗ್ರಸ್ತನಾಗುವನು. ಆದುದರಿಂದ ವ್ಯಾಕರಣ, ಮೀಮಾಂಸಾ ನಿರುಕ್ತ ಇತ್ಯಾದಿ ಶಾಸ್ತ್ರಗಳ ಸಹಾಯವಿಲ್ಲದೆ ವೇದಕ್ಕೆ ಸರಿಯಾಗಿ ಅರ್ಥಮಾಡಲು ಸಾಧ್ಯವಿಲ್ಲ. **ಶೃಣ್ವನ್ನ ಶೃಣೋತಿ** ಎಂಬ ವಾಕ್ಯಕ್ಕೆ ಇದೇ ಅಭಿಪ್ರಾಯವು. ಮಂತ್ರದ ಎರಡು ಪಾದಗಳೂ ಎಂದರೆ **ಉತ ತ್ವಃ ಪಶ್ಯನ್ನ ದದರ್ಶ ವಾಚಂ** ಮತ್ತು **ಉತ ತ್ವಃ ಶೃಣ್ವನ್ನ ಶೃಣೋತ್ಯೇನಾಂ** ಎಂಬ ಎರಡು ಪಾದಗಳೂ ವೇದಾರ್ಥಜ್ಞಾನವಿಲ್ಲದ ಪುರುಷನನ್ನುದ್ದೇಶಿಸಿ ಹೇಳಿದ ವಾಕ್ಯಗಳು.

**ಉತೋ ತ್ವಸ್ಮೈ ತನ್ವಂ** ೧ **ವಿ ಸಸ್ರೇ** ಎಂಬ ಮೂರನೆಯ ಪಾದದ ಅರ್ಥವಿದು—ತನ್ನನ್ನು ತಾನೇ ಸ್ಪಷ್ಟಪಡಿಸಿಕೊಳ್ಳುವುದು. ಇನ್ನೊಬ್ಬನು ತನ್ನನ್ನು (ತನ್ನ ಸ್ವರೂಪವನ್ನು). ಚೆನ್ನಾಗಿ ತಿಳಿದುಕೊಳ್ಳುವಂತೆ ಸ್ಪಷ್ಟವಾಗಿ ತೋರ್ಪಡಿಸಿಕೊಳ್ಳುವುದು. ಇಲ್ಲಿ ವೇದವು ತನ್ನನ್ನು ಸ್ಪಷ್ಟಪಡಿಸಿಕೊಳ್ಳುವುದು. ಇಲ್ಲಿ ವೇದವು ತನ್ನನ್ನು ಸ್ಪಷ್ಟಪಡಿಸಿಕೊಳ್ಳುವುದು ಎಂದರೆ, ವೇದಾರ್ಥವನ್ನು ತಿಳಿಯಬೇಕೆಂದು ಅಪೇಕ್ಷಿಸುವ ಪುರುಷನಿಗೆ ವೇದವು ಸಂಶಯವಿಲ್ಲದಂತೆ ಅರ್ಥವಾಗುವುದು ಎಂದಭಿಪ್ರಾಯವು. ಇಲ್ಲಿ **ಉತ** ಶಬ್ದವು **ಅಪಿ** (ಮತ್ತು) ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಇನ್ನೊಬ್ಬನು ನಿರುಕ್ತಾದಿಸಾಧನಗ್ರಂಥಗಳ ಸಹಾಯದಿಂದ ವೇದಾರ್ಥವನ್ನು ತಿಳಿಯಲು ಪ್ರಯತ್ನಪಡುವನೋ ಅವನಿಗೆ ವೇದವು ತನ್ನ ತನುವನ್ನು (ಶರೀರವನ್ನು) ಪದವ್ಯಾಖ್ಯಾನಗಳನ್ನೂ ಜ್ಞಾನತಾತ್ಪರ್ಯಗಳನ್ನೂ (ವೇದಾರ್ಥವನ್ನೂ) ಉತ್ತಮವಾದ ಜ್ಞಾನವನ್ನು ಕೊಡಬಲ್ಲುದು ಎಂಬುದನ್ನು ಈ ಮೂರನೆಯ ಪಾದದಿಂದ ಹೇಳಿದೆ. ಆದುದರಿಂದ ವೇದಾರ್ಥವನ್ನೂ ನಿರುಕ್ತಾದಿಗ್ರಂಥಗಳ ಸಹಾಯದಿಂದ ತಿಳಿಯಲು ಪ್ರಯತ್ನಪಡುವ ಪುರುಷನಿಗೆ ವೇದವೇ ತನ್ನ ಅರ್ಥವನ್ನು ತಿಳಿಯುವಂತೆ ಪ್ರಕಾಶಪಡಿಸುವುದು ಎಂದಭಿಪ್ರಾಯವು.

**ಜಾಯೇವ ಪತ್ಯ ಉಶತೀ ಸುವಾಸಾಃ** ಎಂಬ ನಾಲ್ಕನೆಯ ಪಾದದ ಅರ್ಥವಿದು. ಮೇಲೆ ಹೇಳಿದ ಅರ್ಥವನ್ನೇ ಉಪಮಾನ (ದೃಷ್ಟಾಂತ, ಉದಾಹರಣೆ) ಪೂರ್ವಕವಾಗಿ ವಿವರಿಸುವರು. ಪತಿಯ ಸಂಗವನ್ನು ಬಯಸುವ ಪತ್ನಿಯು ಋತು

ಕಾಲದಲ್ಲಿ ಮಂಗಳಕರವಾದ ವಸ್ತ್ರವನ್ನು ಧರಿಸಿ ಚೆನ್ನಾಗಿ ಅಲಂಕರಿಸಿಕೊಂಡು ಪತಿಯ ಸಮೀಪಕ್ಕೆ ಬರುವಂತೆ ವೇದವೂ ಸಹ ವೇದಾರ್ಥವನ್ನು ತಿಳಿಯಲು ಪ್ರಯತ್ನಪಡುವ ಪುರುಷನ ಬಳಿಗೆ ಬರುವುದು ಎಂದರೆ ಅವನಿಗೆ ವೇದಾರ್ಥವು ಸುಲಭವಾಗಿ ತಿಳಿಯುವಂತೆ ಮಾಡಲು ವೇದವೇ ಸಹಾಯಮಾಡುವುದು. ಪೂರ್ವದ ಪಾದದಲ್ಲಿ ಹೇಳಿರುವ ಅರ್ಥವನ್ನೇ ವಿಶದ ಪಡಿಸುವುದಕ್ಕಾಗಿ ಪತಿಪತ್ನೀ ಸಂಬಂಧವಾದ ಉಪಮಾನವನ್ನು ಕೊಟ್ಟು ಮಂತ್ರಾರ್ಥವನ್ನು ಚೆನ್ನಾಗಿ ವಿವರಿಸಿದ್ದಾರೆ. ಇಲ್ಲಿ **ಉಶತೀ** ಎಂದರೆ ಸತಿಯನ್ನು ಅಥವಾ ಪತಿಯ ಸಮಾಗಮವನ್ನು ಅಪೇಕ್ಷಿಸುವ ಸ್ತ್ರೀ ಎಂದರ್ಥವು. ಹಗಲು ಹೊತ್ತಿನಲ್ಲಿ ಗೃಹಿಣಿಯಾದವಳು ಗೃಹಕೃತ್ಯದಲ್ಲಿ (ಮನೆಯ ಕೆಲಸಕಾರ್ಯಗಳಲ್ಲಿ) ತೊಡಗಿರುವಾಗ ಉಟ್ಟಿರುವ ವಸ್ತ್ರವು ಮಲಿನವಾಗಿ ರುವುದರಿಂದ ಆ ಸ್ತ್ರೀಯು ಪತಿಗೆ ಆಕರ್ಷಣೀಯವಾಗಿ ಕಾಣಿಸುವುದಿಲ್ಲ. ಆದರೆ ಅದೇ ಸ್ತ್ರೀಯು ಋತುಕಾಲದಲ್ಲಿ ಪತಿಯ ಸಂಗವನ್ನು ಬಯಸಿ ಅದಕ್ಕಾಗಿ ಉತ್ತಮವಾದ ವಸ್ತ್ರಾದಿಗಳನ್ನು ಧರಿಸಿ ವಿಧವಿಧವಾಗಿ ಅಲಂಕರಿಸಿಕೊಂಡು ಪತಿಯ ಸಮೀಪವನ್ನು ಸೇರಿದಲ್ಲಿ ಪತಿಯು ವಸ್ತ್ರಾದ್ಯಲಂಕಾರಗಳಿಂದ ಮನೋಹರಳಾಗಿ ಎದುರಿಗೆ ಬಂದು ನಿಂತಿರುವ ಪತ್ನಿಯನ್ನು ಆದರಪೂರ್ವಕವಾಗಿ ನೋಡುವನು. ಅವಳು ಆಡುವ ಹಿತವಚನಗಳನ್ನು ಮನಸ್ಸಿಟ್ಟು ಕೇಳುವನು. ಅದರಂತೆಯೇ ಹದಿನಾಲ್ಕು ವಿದ್ಯೆಗಳಲ್ಲಿಯೂ ಪರಿಣತನಾದ ಪುರುಷನು ವೇದಾರ್ಥವನ್ನು ಗ್ರಹಿಸಲು ಪ್ರಯತ್ನಪಟ್ಟರೆ ಅದು ಅವನಿಗೆ ಸುಲಭವಾಗಿ ಎಂದರೆ ಸಂಶಯವಿಲ್ಲದಂತೆ ಅರ್ಥವು ಸ್ಪಷ್ಟವಾಗಿ ತಿಳಿಯುವುದು. ವೇದದಲ್ಲಿ ಹೇಳಿರುವ ಧರ್ಮರೂಪವೂ, ಬ್ರಹ್ಮರೂಪವೂ (ಎಂದರೆ ಪರಬ್ರಹ್ಮಸ್ವರೂಪವೂ) ಆದ ಅರ್ಥವನ್ನು ಅವನು ಅತ್ಯಾಸಕ್ತಿಯಿಂದ ಗ್ರಹಿಸಬಲ್ಲನು. ಇದೇ ಈ ನಾಲ್ಕನೆಯ ಪಾದದಲ್ಲಿ ಹೇಳಿರುವ ಮುಖ್ಯಾಭಿಪ್ರಾಯವು. ಇದು ಒಂದು ವಿಧದಲ್ಲಿ ವೇದಾರ್ಥಾಭಿಜ್ಞನಾದ ಪುರುಷನನ್ನು ಪ್ರಶಂಸೆ ಮಾಡುವ ವಾಕ್ಯವಾಗಿದೆ. ಈ ವಿಚಾರದಲ್ಲಿ ನಿರುಕ್ತಕಾರರು ಇನ್ನೂ ಒಂದು ಋಕ್ಕನ್ನೂ ಉದಾಹರಿಸಿರುತ್ತಾರೆ. ಅದು ಹಿಂದೆ ಹೇಳಿರುವ ಅರ್ಥವನ್ನು ಮತ್ತೂ ಪುಷ್ಟೀಕರಿಸುತ್ತದೆ—

**ಇತಿ ಪ್ರಥಮಾಧ್ಯಾಯೇ ಏಕೋನವಿಂಶತಿಃ ಖಂಡಃ**

ಇಲ್ಲಿಗೆ ಹತ್ತೊಂಭತ್ತನೆಯ ಖಂಡವು ಸಮಾಪ್ತವು

———

## ಅಥ ವಿಂಶಃ ಖಂಡಃ

**ಇಪ್ಪತ್ತನೆಯ ಖಂಡವು**

———

ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿ-
ನೇಷು । ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾꣳನ್
ಅಫಲಾಮಪುಷ್ಪಾಂ ॥ (ಋ. ಸಂ. ೧೦–೭೧–೫) ಅಪ್ಯೇಕಂ
ವಾಕ್ಸಖ್ಯೇ ಸ್ಥಿರಪೀತಮಾಹೂ ರಮಮಾಣಂ ವಿಪೀತಾರ್ಥಂ

ದೇವಸಖ್ಯೇ ರಮಣೀಯೇ ಸ್ಥಾನ ಇತಿ ವಾ ವಿಜ್ಞಾತಾರ್ಥಂ ಯಂ ನಾಪ್ನುವಂತಿ ವಾಗ್ಜ್ಞೇಯೇಷು ಬಲವತ್ಸ್ವಪ್ಯಧೀನ್ಯಾ ಹ್ಯೇಷ ಚರತಿ ಮಾಯಯಾ ವಾಕ್ಪ್ರತಿರೂಪಯಾ ನಾಸ್ಮೈ ಕಾಮಾನ್ದುಗ್ಧೇ ವಾಗ್ದೋಹ್ಯಾನ್ದೇವಮನುಷ್ಯಸ್ಥಾನೇಷು ಯೋ ವಾಚಂ ಶ್ರುತವಾನ್ಭವತ್ಯಫಲಾಮಪುಷ್ಪಾಮಿತ್ಯಫಲಾಸ್ಮಾ ಅಪುಷ್ಪಾ ವಾಗ್ಭವತೀತಿ ವಾ ಕಿಂಚಿತ್ಪುಷ್ಪಫಲೇತಿ ವಾರ್ಥಂ ವಾಚಃ ಪುಷ್ಪಫಲಮಾಹ ಯಾಜ್ಞದೈವತೇ ಪುಷ್ಪಫಲೇ ದೇವತಾಧ್ಯಾತ್ಮೇ ವಾ ಸಾಕ್ಷಾತ್ಕೃತಧರ್ಮಾಣ ಋಷಯೋ ಬಭೂವುಸ್ತೇಽವರೇಭ್ಯೋಽಸಾಕ್ಷಾತ್ಕೃತಧರ್ಮಭ್ಯ ಉಪದೇಶೇನ ಮಂತ್ರಾನ್ಸಂಪ್ರಾದುರುಪದೇಶಾಯ ಗ್ಲಾಯಂತೋಽವರೇ ಬಿಲ್ಮಗ್ರಹಣಾಯೇಮಂ ಗ್ರಂಥಂ ಸಮಾಮ್ನಾಸಿಷುರ್ವೇದಂ ಚ ವೇದಾಂಗಾನಿ ಚ ಬಿಲ್ಮಂ ಭಿಲ್ಮಂ ಭಾಸನಮಿತಿ ವೈತಾವಂತಃ ಸಮಾನಕರ್ಮಾಣೋ ಧಾತವೋ ಧಾತುರ್ದಧಾತೇರೇತಾವಂತ್ಯಸ್ಯ ಸತ್ತ್ವಸ್ಯ ನಾಮಧೇಯಾನ್ಯೇತಾವತಾಮರ್ಥಾನಾಮಿದಮಭಿಧಾನಂ ನೈಘಂಟುಕಮಿದಂ ದೇವತಾನಾಮಪ್ರಧಾನ್ಯೇನೇದಮಿತಿ ತದ್ಯದನ್ಯದೇವತೇ ಮಂತ್ರೇ ನಿಪತತಿ ನೈಘಂಟುಕಂ ತತ್ । ಅಶ್ವಂ ನ ತ್ವಾ ವಾರವಂತಂ । ಅಶ್ವಮಿವ ತ್ವಾ ವಾಲವಂತಂ ವಾಲಾ ದಂಶವಾರಣಾರ್ಥಾ ಭವಂತಿ ದಂಶೋ ದಶತೇಃ । ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಮೃಗ ಇವ ಭೀಮಃ ಕುಚರೋ ಗಿರಿಷ್ಠಾ ಮೃಗೋ ಮಾರ್ಷ್ಟೇರ್ಗತಿಕರ್ಮಣೋ ಭೀಮೋ ಬಿಭ್ಯತ್ಯಸ್ಮಾದ್ಭೀಷ್ಮೋಽಪ್ಯೇತಸ್ಮಾದೇವ । ಕುಚರ ಇತಿ ಚರತಿಕರ್ಮ ಕುತ್ಸಿತಮಥ ಚೇದ್ದೇವತಾಭಿಧಾನಂ ಕ್ವಾಯಂ ನ ಚರತೀತಿ ಗಿರಿಷ್ಠಾ ಗಿರಿಸ್ಥಾಯೀ ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ ಪರ್ವವಾನ್ ಪರ್ವತಃ ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾರ್ಧಮಾಸಪರ್ವ ದೇವಾನಸ್ಮಿನ್

ಪ್ರೀಣಂತೀತಿ ತತ್ಪ್ರಕೃತೀತರತ್ಸಂಧಿಸಾಮಾನ್ಯಾನ್ಮೇಘಸ್ಥಾಯಿಮೇಘೋಽಪಿ ಗಿರಿರೇತಸ್ಮಾದೇವ ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ ತದುಪರಿಷ್ಟಾದ್ವ್ಯಾಖ್ಯಾಸ್ಯಾಮೋ ನೈಘಂಟುಕಾನಿ ನೈಗಮಾನೀಹೇಹ ॥ ೨೦ ॥

ಹಿಂದೆ ನಾವು ಉದಾಹರಿಸಿದ **ಉತ ತ್ವಃ ಪಶ್ಯನ್** ಎಂದು ಪ್ರಾರಂಭವಾಗಿರುವ ಋಕ್ಕಿನ ಅರ್ಥವನ್ನೇ ಈ ಕೆಳಗಿನ ಋಕ್ಕೂ ಸಹ ಪುಷ್ಟೀಕರಿಸುವುದು. ಎಂದರೆ ಹಿಂದೆ ಹೇಳಿದ ಋಕ್ಕಿನ ಅರ್ಥವನ್ನು ಈಗ ಹೇಳುವ ಋಕ್ಕು ಚೆನ್ನಾಗಿ ವಿಶದಪಡಿಸುವುದು. ಹೇಗೆಂದರೆ—

ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು । ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾँ ಅಫಲಾಮಪುಷ್ಪಾಂ ॥

(ಋ. ಸಂ. ೧೦-೭೧-೫)

ಅಪ್ಯೇಕಂ ವಾಕ್ ಸಖ್ಯೇ ಸ್ಥಿರಪೀತಮಾಹೂ ರಮಮಾಣಂ ವಿಪೀಶಾರ್ಥಂ ದೇವಸಖ್ಯೇ ರಮಣೀಯೇ ಸ್ಥಾನ ಇತಿ ವಾ ವಿಜ್ಞಾತಾರ್ಥಂ ಯನಾಪ್ನುವಂತಿ ವಾಗ್ಜ್ಞೇಯೇಷು ಬಲವತ್ಸ್ವಪಿ । ಅಧೇನ್ವಾ ಹ್ಯೇಷ ಚರತಿ ಮಾಯಯಾ ವಾಕ್ಪ್ರತಿರೂಪಯಾ ನಾಸ್ಮೈ ಕಾಮಾನ್ದುಗ್ಧೇ ವಾಗ್ದೋಹ್ಯಾನ್ ದೇವಮನುಷ್ಯಸ್ಥಾನೇಷು ಯೋ ವಾಚಂ ಶ್ರುತವಾನ್ ಭವತ್ಯಫಲಾಮಪುಷ್ಪಾಮಿತ್ಯಫಲಾಸ್ಮಾ ಅಪುಷ್ಪಾ ವಾಗ್ಭವತೀತಿ ವಾ ಕಿಂಚಿತ್ಪುಷ್ಪಫಲೇತಿ ವಾ ಅರ್ಥಂ ವಾಚಃ ಪುಷ್ಪಫಲಮಾಹ । ಯಾಜ್ಞದೈವತೇ ಪುಷ್ಪಫಲೇ ದೇವತಾಧ್ಯಾತ್ಮೇ ವಾ ॥

ವಿದ್ಯಾಪಾರಂಗತನಾದ ಪುರುಷನನ್ನು ವೇದದ ಸ್ನೇಹಿತನೆಂದೂ ವೇದಾರ್ಥವನ್ನು ತಿಳಿಯುವುದರಲ್ಲಿಯೇ ಆಸಕ್ತನಾಗಿರುವುದರಿಂದ ವೇದಾರ್ಥವೆಂಬ ಅಮೃತಪಾನದಲ್ಲಿಯೇ ಸ್ಥಿರಚಿತ್ತನಾಗಿರುವನೆಂದೂ ತಿಳಿದವರು ಹೇಳುವರು. ತಿಳಿದವರು ಎಂದರೆ ಸಕಲಶಾಸ್ತ್ರಗಳಲ್ಲಿಯೂ ಕುಶಲರಾದವರು ಎಂದು. ವೇದಾರ್ಥವನ್ನು ತಿಳಿದವನು ವೇದಕ್ಕೆ ಸ್ನೇಹಿತನೆಂದು ಮಂತ್ರವು ಹೇಳುವುದು. ಪ್ರಸಕ್ತವಾದ ಈ ಋಕ್ಕಿನಲ್ಲಿರುವ **ಸಖ್ಯೇ** ಎಂಬ ಪದಕ್ಕೂ ಅದೇ ಅರ್ಥವು. ಎಂದರೆ ವೇದಾರ್ಥಾಭಿಜ್ಞನು

ವೇದದ ವಿಷಯದಲ್ಲಿ ಸ್ನೇಹಭಾವದಿಂದ ಪ್ರವರ್ತಿಸುತ್ತಿರುವನು ಎಂದರ್ಥವು. ಇಂತಹ ವೇದಾರ್ಥಕುಶಲನು ಸದಾಕಾಲದಲ್ಲಿಯೂ ವೇದಾರ್ಥವನ್ನು ತಿಳಿದು ಅದರಲ್ಲಿ ಹೇಳಿರುವ ವಿಧಿನಿಯಮಗಳನ್ನು ಪಾಲಿಸುವುದರಲ್ಲಿಯೇ ತೊಡಗಿರುವುದರಿಂದ ಅವನನ್ನು ವೇದಾರ್ಥವೆಂಬ ಅಮೃತಪಾನದಲ್ಲಿ ಸ್ಥಿರವಾದ ಆಸಕ್ತಿಯುಳ್ಳವನಾಗಿರುವನೆಂದು ಹೇಳುವುದು ಸಹಜವೇ ಆಗಿದೆ. ಅಥವಾ **ಸಖ್ಯೇ ಸ್ಥಿರಪೀತಮಾಹುಃ** ಎಂಬ ಶಬ್ದಗಳಿಗೆ ಸ್ವರ್ಗಲೋಕದಲ್ಲಿ ದೇವತೆಗಳ ಮಧ್ಯದಲ್ಲಿ ವಾಸಮಾಡುತ್ತಾ ಅವರ ಸ್ನೇಹಿತನಾಗಿ ಅತಿಶಯವಾದ ಅಮೃತವನ್ನು ಪಾನಮಾಡುವನು ಎಂದಾದರೂ ಅರ್ಥಮಾಡಬಹುದು.

ಎರಡನೆಯ ಪಾದದ ಅರ್ಥವು—ಮಂತ್ರದಲ್ಲಿ ಉಪಯೋಗಿಸುವ **ವಾಜಿನೇಷು** ಎಂಬ ಶಬ್ದದ ವ್ಯುತ್ಪತ್ತಿಯು ಈ ರೀತಿ ಇದೆ. **ವಾಚಾಂ ಇನಾಃ = ವಾಜಿನಾಃ** ಋಕ್ಕುಗಳಿಗೆ ಒಡೆಯರಾದವರು ಎಂದರೆ ಸಾಮರ್ಥ್ಯವುಳ್ಳವರು ಚೆನ್ನಾಗಿ ಮಾತನಾಡುವವರು. ಇಂತಹ ಸಾಮರ್ಥ್ಯವುಳ್ಳವರೂ ಕೂಡ ವಿದ್ವತ್ಸಭೆಯಲ್ಲಿ ವೇದಾರ್ಥ ಕುಶಲನಾದವನನ್ನು ವಾದದಲ್ಲಿ ಗೆಲ್ಲಲು ಅಸಮರ್ಥರು ಎಂದರೆ ವೇದಾರ್ಥಕುಶಲನಾದವನೂ ಕೂಡ ಎಂತಹ ವಾಕ್ಚತುರನೂ ವಾದಮಾಡಿ ಗೆಲ್ಲಲಾರನು ಎಂದಭಿಪ್ರಾಯವು.

ಮೂರನೆಯ ಪಾದದ ಅರ್ಥವು— ಒಂದೆರಡನೆಯ ಪಾದಗಳಲ್ಲಿ ವೇದಾರ್ಥಜ್ಞಾನ ಪ್ರಶಂಸೆಯನ್ನು ಮಾಡಿ ಮೂರು ನಾಲ್ಕನೆಯ ಪಾದಗಳಲ್ಲಿ ವೇದಾರ್ಥವನ್ನು ತಿಳಿಯದೆ ಸುಮ್ಮನೆ ವೇದವನ್ನು ಕಂಠಪಾಠಮಾಡಿದವನ ಸ್ಥಿತಿಯನ್ನು ಹೇಳುವರು. ಅರ್ಥಜ್ಞಾನವಿಲ್ಲದೆ ಸುಮ್ಮನೆ ವೇದವನ್ನು ಕಲಿತವನು. ಪುಷ್ಪಫಲರಹಿತವಾದ ವಾಕ್ಯವನ್ನು ಉಚ್ಚರಿಸುವನು ಎಂದರೆ ಪುಷ್ಪಫಲಾದಿಗಳಿಲ್ಲದ ವೃಕ್ಷವು ಹೇಗೆ ಉಪಯೋಗವಿಲ್ಲವೋ ಹಾಗೆ ಅರ್ಥಜ್ಞಾನವಿಲ್ಲದ ವೇದಾಧ್ಯಯನವು ಪ್ರಯೋಜನರಹಿತವಾಗಿರುವುದು. ಮಂತ್ರದಲ್ಲಿ ಹೇಳಿರುವ ಪುಷ್ಪಫಲಶಬ್ದಗಳ ಉಪಮಾನವು ಲೋಕವ್ಯವಹಾರದಲ್ಲಿ ಪ್ರಸಿದ್ಧ ವಾಗಿರುವ ವಿಷಯವನ್ನು ವಿವರಿಸುವುದರ ಮೂಲಕ ಮಂತ್ರಾರ್ಥವನ್ನು ವಿಶದಪಡಿಸುವುದು. ವೇದದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳಲ್ಲಿ ಕರ್ಮಕಾಂಡ, ಜ್ಞಾನಕಾಂಡ ಎಂಬುದಾಗಿ ಎರಡು ವಿಧ. ಅದರಲ್ಲಿ ಮೊದಲನೆಯದಾದ ಕರ್ಮಕಾಂಡದಲ್ಲಿ ಹೇಳಿರುವ ಧರ್ಮಗಳನ್ನು ತಿಳಿದುಕೊಳ್ಳುವುದೇ ಪುಷ್ಪವು. ಎರಡನೆಯದಾದ ಜ್ಞಾನಕಾಂಡದಲ್ಲಿ ಹೇಳಿರುವ ಬ್ರಹ್ಮಜ್ಞಾನವೇ ಫಲವು. ಲೋಕವ್ಯವಹಾರದಲ್ಲಿ ಪುಷ್ಪದಿಂದ ಫಲವುಂಟಾಗುವಂತೆ ಇಲ್ಲಿಯೂ ಸಹ ಕರ್ಮಕಾಂಡೋಕ್ತವಾದ ಧರ್ಮ ಗಳನ್ನು ತಿಳಿಯುವುದರಿಂದ ಉತ್ತರಕಾಂಡೋಕ್ತವಾದ ಬ್ರಹ್ಮಜ್ಞಾನವೆಂಬ ಫಲವು ಲಭಿಸುವುದು. ಎಂದರೆ ಕರ್ಮಕಾಂಡದಂತೆ ಯಜ್ಞಯಾಗಾದಿಗಳನ್ನು ಅನುಷ್ಠಾನಮಾಡುವುದರಿಂದ ಉತ್ತಮವಾದ ಬ್ರಹ್ಮಜ್ಞಾನವೆಂಬ ಫಲದಲ್ಲಿ ಇಚ್ಛೆಯು ಉತ್ಪನ್ನವಾಗು ವುದು. ಇಂತಹ ಫಲಪುಷ್ಪರಹಿತವಾದ ಎಂದರೆ ವೇದಾರ್ಥಜ್ಞಾನವಿಲ್ಲದ ಬರಿಯ ಕಂಠಪಾಠವನ್ನು ಮಾತ್ರ ಅಭ್ಯಾಸಮಾಡಿ ತಿರುಗಾಡುವ ಪುರುಷನು ಮಾಯಾರೂಪವಾದ ಅಧೇನುವಿನೊಡನೆ ಸಂಚರಿಸುವವನಂತಿರುವನು. ಹೊಸದಾಗಿ ಕರುಹಾಕಿ ಹಾಲುಕರೆಯುವ ಹಸುವು ಎಲ್ಲರಿಗೂ ಪ್ರೀತಿಪಾತ್ರನಾದುದು. ಆದುದರಿಂದ ಅದಕ್ಕೆ (ಧಿನೋತೀತಿ ಧೇನುಃ) ಧೇನು ಎನ್ನುವರು. ಅರ್ಥಜ್ಞಾನವಿಲ್ಲದವನಿಗೆ ವೇದವು (ಅಥವಾ ವೇದವಾಕ್ಯವು) ಬ್ರಹ್ಮಜ್ಞಾನಸ್ವರೂಪವಾದ ಹಾಲನ್ನು ಕರೆಯುವುದಿಲ್ಲವಾದ್ದರಿಂದ (ಅವನಿಗೆ ವೇದಾರ್ಥವು ತಿಳಿಯುವುದಿಲ್ಲ ವಾದುದರಿಂದ) ಅವನ ವಿಷಯದಲ್ಲಿ ವೇದವು ಅಧೇನುವೆನಿಸುವುದು. ಆದುದರಿಂದಲೇ ಅದು ಮಾಯಾ ಎಂದರೆ ಕಪಟರೂಪವು. ಅಂತಹ ಮಾಯಾಧೇನುವಿನಿಂದ ಹಾಲು ದೊರೆಯುವುದಿಲ್ಲವಷ್ಟೆ. ಅದರಂತೆ ಅರ್ಥಜ್ಞಾನವಿಲ್ಲದ ಬರಿಯ ವೇದಪಾಠದಿಂದ ಪುರುಷನಿಗೆ ಯಾವ ಪ್ರಯೋಜನವೂ ಲಭಿಸುವುದಿಲ್ಲ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

ಸಾಕ್ಷಾತ್ಕೃತಧರ್ಮಾಣ ಋಷಯೋ ಬಭೂವುಃ ।ತೇಽವರೇಭ್ಯೋಽ
ಸಾಕ್ಷಾತ್ಕೃತಧರ್ಮಭ್ಯ ಉಪದೇಶೇನ ಮಂತ್ರಾನ್ಸಂಪ್ರಾದುಃ। ಉಪ-
ದೇಶಾಯ ಗ್ಲಾಯಂತೋಽವರೇ ಬಿಲ್ಮಗ್ರಹಣಾಯೇಮಂ ಗ್ರಂಥಂ
ಸಮಾಮ್ನಾಸಿಷುರ್ವೇದಂ ಚ ವೇದಾಂಗಾನಿ ಚ । ಬಿಲ್ಮಂ ಭಿಲ್ಮಂ
ಭಾಸನಮಿತಿ ವಾ ॥

ಪೂರ್ವದಲ್ಲಿ ಋಷಿಗಳಿಗೆ ವೇದಗಳೂ, ವೇದೋಕ್ತಧರ್ಮಗಳೂ ದಿವ್ಯದೃಷ್ಟಿಯಿಂದ ಅಥವಾ ತಪೋದೃಷ್ಟಿಯಿಂದ ಸಾಕ್ಷಾತ್ಕೃತವಾದವು ಎಂದರೆ ದೃಷ್ಟವಾದುವು, ದಿವ್ಯಜ್ಞಾನದಿಂದ ಲಬ್ಧವಾದವು. ಋಷಿಗಳು ವೇದಧರ್ಮಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಅಶಕ್ತರಾದ ತಮ್ಮ ಶಿಷ್ಯಾದಿಗಳಿಗೆ ಉಪದೇಶಮಾಡಿದರು. ಈ ಉಪದೇಶವು ಪರಂಪರಾಗತವಾಗಿ ನಡೆದು ಬಂದಿತು. ಉಪದೇಶವನ್ನು ಪಡೆದವರೂ ಸಹ ಬರಬರುತ್ತಾ ವೇದಾರ್ಥವನ್ನೂ ವೇದಧರ್ಮಗಳನ್ನೂ ಚೆನ್ನಾಗಿ ತಿಳಿದುಕೊಳ್ಳಲು ಬಹಳ ಪ್ರಯಾಸಪಡಬೇಕಾಯಿತು. ಆದುದರಿಂದ ಋಷಿಗಳಿಂದ ಮಂತ್ರೋಪದೇಶವನ್ನು ಪಡೆದವರಲ್ಲಿ ಕೆಲವರು ಮುಂದಿನ ಜನಾಂಗದವರ ಅನುಕೂಲಕ್ಕಾಗಿ ವೇದಗಳನ್ನೂ ನಿರುಕ್ತಾದಿ ವೇದಾಂಗಗಳನ್ನೂ ವಿಭಾಗಮಾಡಿ ಕ್ರಮಪಡಿಸಿಟ್ಟರು. ಆ ಕ್ರಮಸಹಿತವಾದ ವಿಭಾಗವೇ ಈಗಲೂ ನಡೆದು ಬರುತ್ತಿರುವುದು. ಹೇಗೆಂದರೆ ವೇದಗಳಲ್ಲಿ ಅನೇಕಶಾಖೆಗಳು ಇರುವವು. ಋಗ್ವೇದದಲ್ಲಿ ೨೧ ಶಾಖೆಗಳೂ, ಯಜುರ್ವೇದವಲ್ಲಿ ೧೦೧ ಶಾಖೆಗಳೂ, ಸಾಮವೇದದಲ್ಲಿ ೧೦೦೦ ಶಾಖೆಗಳೂ ಅಥರ್ವವೇದದಲ್ಲಿ ೯ ಶಾಖೆಗಳೂ ಇರುವವು. ಇವುಗಳನ್ನು ವ್ಯಾಸಮಹರ್ಷಿಯೇ ಮಾಡಿದರೆಂದು ಹೇಳುವರು. ಇದರಂತೆ ವ್ಯಾಕರಣವು ಎಂಟು ವಿಧವಾಗಿಯೂ ನಿರುಕ್ತವು ೧೪ ವಿಧವಾಗಿಯೂ ಕ್ರಮಪಡಿಸಲ್ಪಟ್ಟಿರುವುದು. ಇತರ ವೇದಾಂಗಗಳೂ ಇದರಂತೆಯೇ ವಿಭಾಗಿಸಲ್ಪಟ್ಟಿರುವವು. ಈ ವಿಭಾಗಗಳೆಲ್ಲವೂ ಸಾಕ್ಷಾತ್ಕಾರರಹಿತರಾದ ಸಾಮಾನ್ಯಜನರ ಅನುಕೂಲಕ್ಕಾಗಿಯೇ ಮಾಡಲ್ಪಟ್ಟಿರುವವು. ಇದನ್ನೇ ಇಲ್ಲಿ ಬಿಲ್ಮ ಅಥವಾ ಭಿಲ್ಮಶಬ್ದದಿಂದ ಹೇಳಿರುವರು. **ಬಿಲ್ಮಂ ಅಥವಾ ಭಿಲ್ಮಂ** ಎಂದರೆ **ವೇದಾನಾಂ ಭೇದನಂ** ವೇದಗಳ ವಿಭಾಗವು ಎಂದರ್ಥವು. ಅಥವಾ **ಭಾಸನಮಿತಿ ವಾ** ಎಂದೂ ಹೇಳಬಹುದು. ಎಂದರೆ **ವೇದಾಂಗವಿಜ್ಞಾನೇನ ಭಾಸತೇ ಪ್ರಕಾಶತೇ ವೇದಾರ್ಥ ಇತ್ಯತ ಇದಮುಕ್ತಂ ಬಿಲ್ಮಮಿತಿ** । ನಿರುಕ್ತಾದಿ ವೇದಾಂಗಗಳ ಸಹಾಯದಿಂದ ವೇದಾರ್ಥವು ಸುಲಭವಾಗಿ ತಿಳಿಯಲ್ಪಡುವುದರಿಂದ ವೇದಾಂಗಗಳ ವಿಭಾಗವನ್ನು ಬಿಲ್ಮ ಅಥವಾ ಭಿಲ್ಮವೆಂದು ಹೇಳುವುದು ರೂಢಿಯಾಗಿದೆ. **ಭಿದೇರ್ಭಾಸತೇರ್ವಾ ಬಿಲ್ಮಶಬ್ದಃ** । ವಿಭಾಗಿಸು ಅಥವಾ ಪ್ರಕಾಶಪಡಿಸು ಎಂಬರ್ಥವುಳ್ಳ ಭಿದಿ ಅಥವಾ ಭಾಸತಿಧಾತುಗಳಿಂದ ಬಿಲ್ಮಶಬ್ದವು ನಿಷ್ಪನ್ನವಾಗಿದೆ.

ಏತಾವಂತಃ ಸಮಾನಕರ್ಮಾಣೋ ಧಾತವಃ । ಧಾತುರ್ದಧಾತೇಃ ।
ಏತಾವಂತ್ಯಸ್ಯ ಸತ್ತ್ವಸ್ಯ ನಾಮಧೇಯಾನಿ ಏತಾವತಾಮರ್ಥಾ-
ನಾಮಿದಮಭಿಧಾನಂ । ನೈಘಂಟುಕಮಿದಂ ದೇವತಾನಾಮಪ್ರಾ-
ಧಾನ್ಯೇನೇದಮಿತಿ ತದ್ಯದನ್ಯದೈವತೇ ಮಂತ್ರೇ ನಿಪತತಿ ನೈಘಂ-
ಟುಕಂ ತತ್ ।

ವೇದವೇದಾಂಗಗಳ ವಿಭಾಗವು ಹಿಂದೆ ಕ್ರಮಪಡಿಸಲ್ಪಟ್ಟಿತೆಂದು ಹೇಳಿದೆಯಷ್ಟೆ. ಅದನ್ನು ಇನ್ನೂ ವಿಶದವಾಗಿ ತಿಳಿಯಪಡಿಸುವರು. ಮುಖ್ಯವಾಗಿ ಇಲ್ಲಿ ನಿರುಕ್ತಗ್ರಂಥದ ವಿಭಾಗಕ್ರಮವು ಹೇಳಲ್ಪಟ್ಟಿದೆ. ಧಾತುಗಳಿಗೆ ಅನೇಕವಿಧ ಅರ್ಥಗಳಿರುವವು. ಇಡು (ಹೆಸರಿಡು) ಎಂಬರ್ಥವುಳ್ಳ ದದಾತಿಧಾತುವಿನಿಂದ ಧಾತುಶಬ್ದವು ನಿಷ್ಪನ್ನವಾಗಿದೆ. ಈ ಧಾತುಗಳಲ್ಲಿ ಸಮಾನಾರ್ಥವನ್ನು ನಿರೂಪಿಸುವ ಧಾತುಗಳು ಅನೇಕವಿವೆ. ಹೇಗೆಂದರೆ **ಗತಿಕರ್ಮಾಣ ಉತ್ತರೇ ಧಾತವೋ ದ್ವಾವಿಂಶಂ ಶತಂ** – ಈ ೧೨೨ ಧಾತುಗಳು ಗತ್ಯರ್ಥವನ್ನು ಹೇಳುವವು (ನಿ. ೩-೯) **ಕಾಂತಿಕರ್ಮಾಣ ಉತ್ತರೇ ಧಾತವೋಽಷ್ಟಾದಶ**– ಕಾಂತಿ ಎಂಬರ್ಥವನ್ನು (ಅಪೇಕ್ಷಿಸು) ಸೂಚಿಸುವ ಧಾತುಗಳ ಸಂಖ್ಯೆ ೧೮ ಇತ್ಯಾದಿ- ಹೀಗೆಯೇ ನಾಮಪದಗಳ ಸಂಖ್ಯೆಯನ್ನೂ ನಿರ್ದೇಶಿಸಲಾಗಿದೆ – **ಪೃಥಿವೀನಾಮಧೇಯಾನ್ಯೇಕವಿಂಶತಿಃ** ಪೃಥಿವೀ ಎಂಬ ಹೆಸರನ್ನು ಸೂಚಿಸುವ ಶಬ್ದಗಳ ಸಂಖ್ಯೆ ೨೧ (ನಿ. ೨-೭) ; **ಹಿರಣ್ಯನಾಮಾನ್ಯುತ್ತರಾಣಿ ಪಂಚದಶ** – ಹಿರಣ್ಯ ; ಅಥವಾ ಸುವರ್ಣ ಎಂಬ ಹೆಸರನ್ನು ಸೂಚಿಸುವ ಶಬ್ದಗಳ ಸಂಖ್ಯೆ ೧೫ (ನಿ. ೨-೧೦) ; ಇತ್ಯಾದಿ ಈರೀತಿ ಒಂದೇವಿಧವಾದ ಅರ್ಥವನ್ನು ಸೂಚಿಸುವ ಪದಗಳನ್ನು ಒಂದೊಂದು ಗುಂಪಾಗಿ ವಿಂಗಡಿಸಿ ಅವುಗಳ ವಿವರಣೆಯನ್ನೂ ಈ ಗ್ರಂಥದ ೧-೩ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಈ ೧-೩ ಅಧ್ಯಾಯಗಳಿಗೆ ಗೌಃ ಎಂಬ ಪದದಿಂದ ಜಹಾ ಎಂಬ ಪದವರೆಗೆ ಇರುವ ಶಬ್ದಗಳನ್ನೊಳಗೊಂಡ ವಿಭಾಗಕ್ಕೆ (೧-೩ ಅಧ್ಯಾಯಗಳಿಗೆ) ನಿಘಂಟುವಿನ ಏಕಾರ್ಥಮನೇಕಶಬ್ದಂ ಎಂಬ ಹೆಸರು ರೂಢಿಯಲ್ಲಿದೆ.

ಮತ್ತು ಕೆಲವು ಶಬ್ದಗಳಿಗೆ ಎಂದರೆ ಒಂದೇ ಶಬ್ದಕ್ಕೆ ಅನೇಕ ಅರ್ಥಗಳಿರುವವು. **ಆದಿತ್ಯೋಽಪ್ಯಕೂಪಾರಃ । ಸಮುದ್ರೋಽಪ್ಯಕೂಪಾರಃ । ಇತ್ಯಾದಿ** (ನಿ. ೪-೧೮) ಇಂತಹ ಶಬ್ದಗಳು ಅನೇಕವಿವೆ. ಇದಲ್ಲದೆ ಅನವಗತಸಂಸ್ಕಾರ ಎಂದರೆ ವ್ಯಾಕರಣನಿಯಮಗಳಿಗೆ ಒಳಪಡದ ರೂಢಿಯಲ್ಲಿ ಬಂದಿರುವ **ಜಹಾ** ಮೊದಲಾದ ಅನೇಕ ನೈಗಮಶಬ್ದಗಳೂ ಇರುವವು. ಇಂತಹ ಶಬ್ದಗಳನ್ನೆಲ್ಲಾ ಈ ಗ್ರಂಥದ ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ವಿಭಾಗಕ್ಕೆ ನಿಘಂಟುವಿನ **ಐಕಪದಿಕಂ ನಾಮ ಪ್ರಕರಣಂ** ಎಂಬ ಹೆಸರಿನಿಂದ ಕರೆಯಲಾಗಿದೆ.

ಮತ್ತು ಮಂತ್ರಗಳಲ್ಲಿ ಉಕ್ತವಾಗಿರುವ ದೇವತೆಗಳಿಗೆ ಸಂಬಂಧಪಟ್ಟ ಶಬ್ದಗಳು ಈ ಗ್ರಂಥದ ೫ ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ವಿಭಾಗಕ್ಕೆ ನಿಘಂಟುವಿನ ದೈವತಂ ಪ್ರಕರಣಂ ಎಂದು ಹೆಸರು.

ಈ ನಿಘಂಟು ಅಥವಾ ನೈಘಂಟುಕ ಕಾಂಡದಲ್ಲಿ ಹೇಳಿರುವ ದೇವತೆಗಳು ಮಂತ್ರಗಳಲ್ಲಿ ಉಕ್ತವಾದಾಗ ಆ ಮಂತ್ರಕ್ಕೆ ದೇವತೆ ಯಾರು ಎಂಬುದನ್ನು ಈ ನೈಘಂಟುಕ ಕಾಂಡದಲ್ಲಿ ಹೇಳಿರುವಂತೆ ಊಹಿಸಬೇಕು. ಕೆಲವು ಸಂದರ್ಭಗಳಲ್ಲಿ ಒಂದು ದೇವತೆಗೆ ಸಂಬಂಧಪಟ್ಟ ಮಂತ್ರದಲ್ಲಿ ಕಾರಣಾಂತರದಿಂದ ಅಥವಾ ಗುಣವಾಚಕವಾಗಿ ಇತರ ದೇವತೆಯ ಹೆಸರೂ ಇರಬಹುದು ಅಂತಹ ಸಂದರ್ಭದಲ್ಲಿ ಆ ಮಂತ್ರದ ಪ್ರಧಾನ ದೇವತೆ ಯಾರು, ಕಾರಣಾಂತರದಿಂದ ಪ್ರಸ್ತಾಪಿಸಲ್ಪಟ್ಟ ಇತರ ದೇವತೆ ಯಾರು ಎಂಬುದನ್ನು ಊಹಿಸಿ ತಿಳಿದು (ಅರ್ಥದಿಂದ) ಅದರಂತೆ ತಿಳಿದುಕೊಳ್ಳಬೇಕು. ಉದಾಹರಣೆಗೆ—

ಅಶ್ವಂ ನ ತ್ವಾ ವಾರವಂತಂ । ಅಶ್ವಮಿವಾ ತ್ವಾ ವಾಲವಂತಃ ।
ವಾಲಾ ದಂಶವಾರಣಾರ್ಥಾ ಭವಂತಿ । ದಂಶೋ ದಶತೇಃ ॥

ಉದಾಹರಣೆಗಾಗಿ ಈ ಋಕ್ಕನ್ನು ಕೊಟ್ಟಿರುವರು—

**ಅಶ್ವಂ ನ ತ್ವಾ ವಾರವಂತಂ । ವಂದಧ್ಯಾ ಅಗ್ನಿಂ ನಮೋಭಿಃ ।**
**ಸಂರಾಜಂತಮಧ್ವರಾಣಾಂ ॥**

(ಋ. ಸಂ. ೧-೨೭-೧)

ಇದರ ಅರ್ಥವು—ಯಜ್ಞಗಳಿಗೆಲ್ಲಾ ಸಾರ್ವಭೌಮನಾಗಿಯೂ ಮತ್ತು ಕುದುರೆಯು ತನ್ನ ಬಾಲದಿಂದ ಸೊಳ್ಳೆಗಳನೆಲ್ಲಾ ಚಮರಿಸಿ ಓಡಿಸುವಂತೆ ಶತ್ರುಗಳನ್ನು ನಾನಾ ದಿಕ್ಕುಗಳಿಗೆ ಓಡಿಸುವವನೂ ಆದ ಅಗ್ನಿದೇವನಾದ ನಿನ್ನನ್ನು ಸ್ತೋತ್ರಪೂರ್ವಕವಾಗಿ ವಂದಿಸುತ್ತೇನೆ.

ಈ ಋಕ್ಕಿನಲ್ಲಿ ಅಶ್ವಶಬ್ದವು ನೈಘಂಟುಕ ಪದವು. ಅದು ದೇವತೆಯಲ್ಲಿ ಪ್ರಾಸಂಗಿಕವಾಗಿ ಎಂದರೆ ಉಪಮಾನಾರ್ಥವಾಗಿ ಅಶ್ವಶಬ್ದವನ್ನು ಉಪಯೋಗಿಸಲಾಗಿದೆ. ಈ ಋಕ್ಕಿಗೆ ಅಗ್ನಿಯೇ ಪ್ರಧಾನದೇವತೆಯು. ವಾಲಾ ಎಂದರೆ ಬಾಲವು. ಆ ಬಾಲದ ಉಪಯೋಗವೇನು ಎಂದರೆ 'ದಂಶನಿವಾರಣಾರ್ಥಾ ಭವಂತಿ' ಬಾಲಗಳು ಅಶ್ವದ ದೇಹದ ಮೇಲೆ ಕುಳಿತು ಅಶ್ವಕ್ಕೆ ತೊಂದರೆಯನ್ನುಂಟುಮಾಡುತ್ತಿರುವ ಸೊಳ್ಳೆ ಮೊದಲಾದ ಕ್ರಿಮಿಗಳನ್ನು ಕುದುರೆಗಳು ತಮ್ಮ ಬಾಲಗಳನ್ನು ಬೀಸುವುದರಿಂದ ಸೊಳ್ಳೆಗಳ ಕಾಟವನ್ನು ನಿವಾರಿಸಿಕೊಳ್ಳುತ್ತವೆ. ಇದೇ ಬಾಲದ ಉಪಯೋಗವು ಎಂದು ಹೇಳಿದ್ದಾರೆ. ಇಲ್ಲಿ ಸೊಳ್ಳೆಗಳು ಕುದುರೆಯ ಶರೀರವನ್ನು ಕಚ್ಚುತ್ತವೆ ಎಂಬುದನ್ನು **ದಂಶ** ಶಬ್ದದಿಂದ ತಿಳಿಸಿದ್ದಾರೆ. ದಂಶ ಶಬ್ದವು ಕಚ್ಚು ಎಂಬರ್ಥವಿರುವ **ದಶತಿ** ಧಾತುವಿನಿಂದ ನಿಷ್ಪನ್ನವಾಗಿದೆ.

ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಮೃಗ ಇವ ಭೀಮಃ
ಕುಚರೋ ಗಿರಿಷ್ಠಾಃ । ಮೃಗೋ ಮಾರ್ಷ್ಟೇರ್ಗತಿಕರ್ಮಣಃ ।
ಭೀಮೋ ಬಿಭ್ಯತ್ಯಸ್ಮಾತ್ । ಭೀಷ್ಮೋಽಪ್ಯೇತಸ್ಮಾದೇವ । ಕುಚರ
ಇತಿ ಚರತಿ ಕರ್ಮ ಕುತ್ಸಿತಂ । ಅಥ ಚೇದ್ದೇವತಾಭಿಧಾನಂ ಕ್ವಾಯಂ
ನ ಚರತೀತಿ । ಗಿರಿಷ್ಠಾ ಗಿರಿಸ್ಥಾಯೀ । ಗಿರಿಃ ಪರ್ವತಃ
ಸಮುದ್ಗೀರ್ಣೋ ಭವತಿ ಪರ್ವವಾನ್ ಪರ್ವತಃ । ಪರ್ವ ಪುನಃ
ಪೃಣಾತೇಃ ಪ್ರೀಣಾತೇರ್ವಾ । ಅರ್ಧಮಾಸಪರ್ವ–ದೇವಾನಸ್ಮಿನ್
ಪ್ರೀಣಂತೀತಿ । ತತ್ ಪ್ರಕೃತೀತರತ್ಸಂಬಂಧಿಸಾಮಾನ್ಯಾತ್ ।
ಮೇಘಸ್ಥಾಯೀ । ಮೇಘೋಽಪಿ ಗಿರಿರೇತಸ್ಮಾದೇವ ॥

ಈ ವಿಷಯದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡುವರು.

**ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ಪರಾವತ ಆ ಜಗಂಥಾ ಪರಸ್ಯಾಃ ।**
**ಸೃಕಂ ಸಂಶಾಯ ಪವಿಮಿಂದ್ರ ತಿಗ್ಮಂ ವಿ ಶತ್ರೂನ್ತಾಳ್ಹಿ ವಿ ಮೃಧೋ ನುದಸ್ವ ॥**

(ಋ. ಸಂ. ೧೦-೧೮೦-೨)

ಇದರ ಅರ್ಥವು—ಎಲೈ ಇಂದ್ರನೇ ಪರ್ವತಗುಹೆಯಲ್ಲಿ ವಾಸಿಸುವುದೂ ಆಹಾರಕ್ಕಾಗಿ ಹೊಂಚುಹಾಕುತ್ತಾ ಸಂಚರಿಸುತ್ತಿರುವುದೂ ಆದ ಸಿಂಹದಂತೆ ನೀನು ಭಯಂಕರನಾಗಿದ್ದೀಯೆ. ಇಂತಹ ನೀನು ಅತ್ಯಂತ ದೂರಪ್ರದೇಶವಾದ ದ್ಯುಲೋಕದಿಂದ ಇಲ್ಲಿಗೆ ದಯಮಾಡು. ಎಲೈ ಇಂದ್ರನೇ, ಯುದ್ಧಾದಿಗಳಲ್ಲಿ ಉಪಯೋಗಿಸುವುದೂ ಹರಿತವೂ ಆದ ನಿನ್ನ ವಜ್ರಾಯುಧವನ್ನು

ಚೆನ್ನಾಗಿ ಹರಿತಮಾಡಿ ಆ ಆಯುಧದಿಂದ ನಮ್ಮ ಶತ್ರುಗಳನ್ನು ವಿಶೇಷವಾಗಿ ಪ್ರಹರಿಸು (ನಾಶಮಾಡು) ಮತ್ತು ಯುದ್ಧದಲ್ಲಿ ಹೋರಾಡುತ್ತಿರುವ ಶತ್ರುಗಳನ್ನು ಹೊಡೆದೋಡಿಸು.

ಈ ಋಕ್ಕಿನಲ್ಲಿ ಮೃಗಶಬ್ದವು ನೈಘಂಟುಕಪದವು. ಇಂದ್ರನು ಪ್ರಧಾನ ದೇವತೆಯು. ಇಲ್ಲಿ ಉದಾಹರಿಸಿರುವ **ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** ಎಂಬ ಮಂತ್ರವು ಋ. ಸಂ. ೧-೧೫೪-೨ ನೇ ಋಕ್ಕಿನಲ್ಲಿ (ಪ್ರತದ್ವಿಷ್ಣುಃ ಸ್ತವತೇ) ಎರಡನೆಯ ಪಾದವಾಗಿಯೂ, ಪ್ರಕೃತ ಋಕ್ಕಿನಲ್ಲಿ ಎಂದರೆ ಋ. ಸಂ. ೧೦-೧೮೦-೨ ನೇ ಋಕ್ಕಿನಲ್ಲಿ ಮೊದಲನೆಯ ಪಾದವಾಗಿಯೂ ಪಠಿತವಾಗಿದೆ. ಅರ್ಥದಲ್ಲಿ ವ್ಯತ್ಯಾಸವೇನೂ ಇಲ್ಲ.

**ಮೃಗೋ ನ ಭೀಮಃ — ಮೃಗ ಇವ ಭೀಮಃ । ಮೃಗೋ ಮಾರ್ಷ್ಟೇರ್ಗತಿಕರ್ಮಣಃ । ಭೀಮೋ ಬಿಭ್ಯತ್ಯಸ್ಮಾತ್ । ಭೀಷ್ಮೋಽಪ್ಯೇತಸ್ಮಾದೇವ ॥** (ಇಂದ್ರನು) ಮೃಗದಂತೆ ಭಯಂಕರನಾದವನು. ಮೃಗವೆಂದರೆ ಇಲ್ಲಿ ದುಷ್ಟಮೃಗವು, ವ್ಯಾಘ್ರ ಅಥವಾ ಸಿಂಹವು. ಮೃಗಶಬ್ದವು ಗತ್ಯರ್ಥವನ್ನು ಸೂಚಿಸುವ ಮೃಜ್ ಧಾತುವಿನಿಂದ ನಿಷ್ಪನ್ನವಾಗಿದೆ. ಮೃಗವು ಯಾವಾಗಲೂ ಆಹಾರಾರ್ಥವಾಗಿ ಸಂಚರಿಸುತ್ತಿರುವುದರಿಂದ ಇದಕ್ಕೆ ಮೃಗವೆಂದು ಹೆಸರು ಬಂದಿದೆ. ಇದನ್ನು ಅಥವಾ ಇಂದ್ರನನ್ನು ಕಂಡು ಜನರು ಹೆದರುವುದರಿಂದ ಇಂದ್ರನನ್ನು ಭೀಮ (ಭಯಂಕರ) ಶಬ್ದದಿಂದ ಕರೆಯಲಾಗಿದೆ. ಹೆದರು ಎಂಬರ್ಥವಿರುವ ಬಿಭ್ಯತಿಧಾತುವಿನಿಂದ ಭೀಮಶಬ್ದವು ನಿಷ್ಪನ್ನವಾಗಿದೆ. ಭೀಷ್ಮ ಶಬ್ದವೂ ಈ ಬಿಭ್ಯತಿಧಾತುವಿನಿಂದಲೇ ನಿಷ್ಪನ್ನವಾಗಿದೆ. ಭೀಷ್ಮಶಬ್ದದ ಅರ್ಥವೂ ಭೀಮಶಬ್ದದಂತೆಯೇ ಇರುವುದು.

**ಕುಚರೋ ಗಿರಿಷ್ಠಾಃ— ಕುಚರ ಇತಿ ಚರತಿಕರ್ಮ ಕುತ್ಸಿತಂ । ಅಥ ಚೇದ್ದೇವತಾಭಿಧಾನಂ ಕ್ವಾಯಂ ನ ಚರತೀತಿ । ಗಿರಿಷ್ಠಾ ಗಿರಿಸ್ಥಾಯೀ ॥** ಕುಚರವೆಂದರೆ ಕುತ್ಸಿತಗಮನ ಅಥವಾ ಸಂಚಾರ. ದುಷ್ಟಪ್ರಾಣಿಗಳು ಯಥಾರ್ಥವಾಗಿ ಎಂದರೆ ತಮ್ಮ ಆಹಾರವನ್ನು ಪಡೆಯುವುದಕ್ಕಾಗಿ (ಸಿಂಹ ಅಥವಾ ವ್ಯಾಘ್ರವು) ಕುತ್ಸಿತಗಮನದಿಂದ ಸಂಚರಿಸುವವು. ಎಂದರೆ ನೇರವಾಗಿ ಎದುರಿಗೆ ಹೋಗದೆ ಪೊದೆಗಳಲ್ಲಿ ಕಾಣದಂತೆ ಅಡಗಿದ್ದು ಹೊಂಚುಹಾಕುತ್ತಾ ಸಂಚರಿಸುವುವು. ಇದೇ ಕುತ್ಸಿತ ಸಂಚಾರವು ದೇವತೆಯ (ಇಂದ್ರನ) ವಿಷಯದಲ್ಲಿ ಈ ಶಬ್ದಕ್ಕೆ ಅರ್ಥವೇನೆಂದರೆ– **ಕ್ವ ಅಯಂ ನ ಚರತೀತಿ** — ಈ ಇಂದ್ರನು ಎಲ್ಲಿತಾನೇ ಸಂಚರಿಸುವುದಿಲ್ಲ ? ಎಲ್ಲಾ ಕಡೆಗಳಲ್ಲಿಯೂ ಸಂಚರಿಸುವವನು ಎಂದರ್ಥವು. ಆದ್ದರಿಂದ **ಕ್ವ ಅಯಂ ನ ಚರತೀತಿ ಕುಚರಃ** ಎಂದು ವಿಗ್ರಹವು. **ಗಿರಿಷ್ಠಾ** ಎಂದರೆ ಸಿಂಹವು. ಗಿರಿಯಲ್ಲಿ ಅಥವಾ ಪರ್ವತದಲ್ಲಿ (ಗುಹೆಯಲ್ಲಿ) ವಾಸಮಾಡುವುದು ಅಥವಾ ಸಂಚರಿಸುವುದು. ಸಿಂಹ, ವ್ಯಾಘ್ರ ಮೊದಲಾದ ಹಿಂಸ್ರಜಂತುಗಳು ಸಾಧಾರಣವಾಗಿ ಪರ್ವತಗುಹೆಗಳಲ್ಲಿ ವಾಸಮಾಡುವವು. ಆದ್ದರಿಂದ ಮೃಗಶಬ್ದಕ್ಕೆ ಗಿರಿಷ್ಠಾಃ ಎಂಬ ವಿಶೇಷಣವಿದೆ. ದೇವತಾಪರವಾದ ಅರ್ಥದಲ್ಲಿ **ಗಿರಿಷ್ಠಾಃ** ಎಂದರೆ **ಮೇಘಸ್ಥಾಯೀ** ಗಿರಿಶಬ್ದಕ್ಕೆ ಮೇಘವೆಂದೂ ಅರ್ಥವು. ಮೇಘಸ್ಥನಾಗಿರುವವನು ಎಂದರೆ ಅಂತರಿಕ್ಷದಲ್ಲಿರುವವನು ಎಂದರ್ಥವು.

**ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ । ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ॥** ಗಿರಿ ಎಂದರೆ ಪರ್ವತವು (ಬೆಟ್ಟವು) ಇದು ಸುತ್ತಮುತ್ತಲ ಪ್ರದೇಶಗಳಿಗಿಂತಲೂ ಎಂದರೆ (ಸಮುದ್ಗೀರ್ಣ) ವಾಗಿರುವುದರಿಂದ ಪರ್ವತಕ್ಕೆ ಗಿರಿಯೆಂದು ಹೆಸರು. ಪರ್ವತವೆಂದರೆ—**ಪರ್ವವಾನ್ ಪರ್ವತಃ** ಗುಂಪು ಅಥವಾ ರಾಶಿಗಳಿಂದ ಕೂಡಿರುವುದು ಎಂದರ್ಥವು. ಪರ್ವತದಲ್ಲಿ ಕಲ್ಲುಗಳೂ ಬಂಡೆಗಳೂ ರಾಶಿರಾಶಿಗಳಾಗಿ ಬಿದ್ದಿರುವುದರಿಂದ ಇದಕ್ಕೆ ಪರ್ವತವೆಂದು ಹೆಸರು. ಪರ್ವತಶಬ್ದಕ್ಕೆ ಮೇಘವೆಂಬ ಅರ್ಥದಲ್ಲಿಯೂ ಇದೇರೀತಿ ಅರ್ಥವಿರುವುದು. ಮೇಘಗಳು ಅಂತರಿಕ್ಷದಲ್ಲಿ ಗುಂಪು ಗುಂಪಾಗಿರುವುದರಿಂದ ಮೇಘಕ್ಕೆ ಪರ್ವತವೆಂದೂ ಹೆಸರು.

**ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ಅರ್ಧಮಾಸಪರ್ವ—ದೇವಾನಸ್ಮಿನ್ ಪ್ರೀಣಂತೀತಿ ತತ್ ಪ್ರಕೃತೀತರತ್ಸಂಧಿಸಾಮಾನ್ಯಾತ್ । ಮೇಘಸ್ಥಾಯಿಾ । ಮೇಘೋಽಪಿ ಗಿರಿರೇತಸ್ಮಾದೇವ ।** ಪರ್ವಶಬ್ದವು ತುಂಬು ಎಂಬರ್ಥವುಳ್ಳ ಪೃಣಾತಿಧಾತುವಿನಿಂದಾಗಲಿ ಸಂತೋಷಪಡಿಸು ಎಂಬರ್ಥವುಳ್ಳ ಪ್ರೀಣಾತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಪರ್ವತಗಳಲ್ಲಿ ಬಂಡೆಗಳು ತುಂಬಿರುತ್ತವೆ. ಮೇಘಗಳಲ್ಲಿ ಉದಕಗಳು ತುಂಬಿರುತ್ತವೆ. ಆದ್ದರಿಂದ ಇಂತಹ ಪರ್ವತಗಳನ್ನುಳ್ಳ ಪರ್ವತವು ಪೃಣಾತಿಧಾತುವಿನಿಂದ ನಿಷ್ಪನ್ನವಾಗಿವೆ ಎಂದರ್ಥವು. ಪ್ರೀಣಾತಿಧಾತುವಿನಿಂದ ನಿಷ್ಪನ್ನವಾದ ಪರ್ವಶಬ್ದಕ್ಕೆ ಅರ್ಧಮಾಸ (ಪಕ್ಷ–ಹದಿನೈದು ದಿನಗಳು) ಎಂದರ್ಥವು. ಹದಿನೈದು ದಿನಗಳಿಗೊಂದಾವರ್ತಿ ಪೌರ್ಣಮಾಸೀ ಅಥವಾ ಅಮಾವಾಸ್ಯೆಯು ಬರುವುದು. ಈ ಸಂಧಿಕಾಲವನ್ನು ಪರ್ವವೆಂದು ಕರೆಯುವರು. ಈ ಕಾಲದಲ್ಲಿ ದರ್ಶಪೂರ್ಣಮಾಸ ಮೊದಲಾದ ಇಷ್ಟಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವುದರಿಂದ ಈ ಅರ್ಥವಿರುವ ಪ್ರೀಣಾತಿಧಾತುವಿನಿಂದ ಪರ್ವಶಬ್ದವು ನಿಷ್ಪನ್ನವಾಗಿದೆ ಎಂದು ಹೇಳಬಹುದು. ಇವೆರಡು ಅರ್ಥಗಳಲ್ಲಿಯೂ ಸಂಧಿಯು (ಪರ್ವವು) ಸಾಮಾನ್ಯವಾಗಿದೆ ಎಂದರೆ ಒಂದರಲ್ಲಿ ಶಿಲೆಗಳ (ಬಂಡೆಗಳ) ಸಂಧಿಯೂ ಇನ್ನೊಂದರಲ್ಲಿ ಕಾಲಸಂಧಿಯೂ (೧೫ ದಿನಗಳ ಪರಿಮಿತಿ) ಇರುವುದರಿಂದ ಈ ಸಂಧಿಸೂಚಕವಾದ ಪರ್ವಶಬ್ದವು ಎರಡು ಅರ್ಥಗಳನ್ನು ಸೂಚಿಸುವ ಸಾಮಾನ್ಯಪದವಾಗಿದೆ. ಮೇಘವೂ ಗಿರಿಶಬ್ದದಿಂದ ವ್ಯವಹರಿಸಲ್ಪಡುವುದು. ಏಕೆಂದರೆ (ಬೆಟ್ಟವು) ಗಿರಿಯು ಅಂತರಿಕ್ಷದಲ್ಲಿ ಎತ್ತರವಾಗಿ ಹಬ್ಬಿರುವಂತೆ ಮೇಘವೂ ಅಂತರಿಕ್ಷದಲ್ಲಿ ಬಹು ಎತ್ತರದಲ್ಲಿ ವ್ಯಾಪಿಸಿರುವುದು ಎಂದಭಿಪ್ರಾಯವು.

ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತ-
ಮಿತ್ಯಾಚಕ್ಷತೇ । ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ । ನೈಘಂಟುಕಾನಿ
ನೈಗಮಾನೀಹೇಹ ॥

ಮಂತ್ರಗಳಲ್ಲಿ ಯಾವ ದೇವತೆಗಳನ್ನು ಮುಖ್ಯವಾಗಿ ಎಂದರೆ ಪ್ರಾಧಾನ್ಯತೆಯಿಂದ ಸ್ತುತಿಸಲಾಗಿದೆಯೋ ಆ ಭಾಗವು ಈ ಗ್ರಂಥದಲ್ಲಿ ದೈವತ ಅಥವಾ ದೈವತಕಾಂಡವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆ ದೈವತಕಾಂಡದಲ್ಲಿ ಅಗ್ನಿ ಮೊದಲಾದ ನಾನಾ ದೇವತೆಗಳ ಹೆಸರುಗಳನ್ನೂ ಅವರ ಸ್ವರೂಪ, ಲಕ್ಷಣ ಮೊದಲಾದವನ್ನೂ ಮುಂದೆ ವಿವರಿಸಲಾಗುವುದು. ಈ ಕಾಂಡವು **ದೇವಪತ್ನ್ಯಃ** ಎಂಬ ಶಬ್ದದ ವಿವರಣೆಯೊಂದಿಗೆ ಸಮಾಪ್ತವಾಗಿರುವುದು. ಈಗ ಎಂದರೆ ನಿಘಂಟು ಪ್ರಕರಣದಲ್ಲಿ ಗವಾದಿ ಶಬ್ದಗಳನ್ನೂ ನೈಗಮ ಪ್ರಕರಣದಲ್ಲಿ ಜಹಾದಿ ಏಕಪದಿಕ ಶಬ್ದಗಳ ವಿವರಣೆಯನ್ನೂ ಹೇಳಲಾಗುವುದು.

---

**ಇತಿ ವಿಂಶಃ ಖಂಡಃ ಸಮಾಪ್ತಃ**

ಇಲ್ಲಿಗೆ ಇಪ್ಪತ್ತನೆಯ ಖಂಡವು ಸಮಾಪ್ತವು.

---

**ಇತಿ ನಿರುಕ್ತೇ ಪ್ರಥಮಷಟ್ಕೇ ಪ್ರಥಮೋಽಧ್ಯಾಯಃ**

ಇಲ್ಲಿಗೆ ನಿರುಕ್ತ ಗ್ರಂಥದಲ್ಲಿ ಮೊದಲಿನ ಆರು ಅಧ್ಯಾಯಗಳನ್ನೊಳಗೊಂಡಿರುವ
ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವು.

---

# ಅಥ ದ್ವಿತೀಯೋಽಧ್ಯಾಯಃ

## ಪ್ರಥಮಃ ಖಂಡಃ

**ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು**

ಓಂ ಅಥ ನಿರ್ವಚನಂ ತದ್ಯೇಷು ಪದೇಷು ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ತಥಾ ತಾನಿ ನಿಬ್ರೂಯಾದಥಾನನ್ವಿತೇಽರ್ಥೇಽಪ್ರಾದೇಶಿಕೇ ವಿಕಾರೇಽರ್ಥನಿತ್ಯಃ ಪರೀಕ್ಷೇತ ಕೇನಚಿದ್ವೃತ್ತಿಸಾಮಾನ್ಯೇನಾವಿದ್ಯಮಾನೇ ಸಾಮಾನ್ಯೇಽಪ್ಯಕ್ಷರವರ್ಣಸಾಮಾನ್ಯಾನ್ನಿರ್ಬ್ರೂಯಾನ್ನ ತ್ವೇವ ನ ನಿಬ್ರೂಯಾನ್ನ ಸಂಸ್ಕಾರಮಾದ್ರಿಯೇತ ವಿಶಯವತ್ಯೋ ಹಿ ವೃತ್ತಯೋ ಭವಂತಿ ಯಥಾರ್ಥಂ ವಿಭಕ್ತೀಃ ಸಂನಮಯೇತ್ಪ್ರತ್ತಮವತ್ತಮಿತಿ ಧಾತ್ವಾದೀ ಏವ ಶಿಷ್ಯೇತೇ ಅಥಾಪ್ಯಸ್ತೇರ್ನಿವೃತ್ತಿಸ್ಥಾನೇಷ್ವಾದಿಲೋಪೋ ಭವತಿ ಸ್ತಃ ಸಂತೀತ್ಯಥಾಪ್ಯಂತಲೋಪೋ ಭವತಿ ಗತ್ವಾ ಗತಮಿತ್ಯಥಾಪ್ಯುಪಧಾಲೋಪೋ ಭವತಿ ಜಗ್ಮತುರ್ಜಗ್ಮುರಿತ್ಯಥಾಪ್ಯುಪಧಾವಿಕಾರೋ ಭವತಿ ರಾಜಾ ದಂಡೀತ್ಯಥಾಪಿ ವರ್ಣಲೋಪೋ ಭವತಿ ತತ್ವಾ ಯಾಮೀತ್ಯಥಾಪಿ ದ್ವಿವರ್ಣಲೋಪಸ್ತೃಚ ಇತ್ಯಥಾಪ್ಯಾದಿವಿಪರ್ಯಯೋ ಜ್ಯೋತಿರ್ಘನೋ ಬಿಂದುರ್ವಾಟ್ಯ ಇತ್ಯಥಾಪ್ಯಾದ್ಯಂತವಿಪರ್ಯಯೋ ಭವತಿ ಸ್ತೋಕಾ ರಜ್ಜುಃ ಸಿಕತಾಸ್ತರ್ಕಿತ್ಯಥಾಪ್ಯಂತವ್ಯಾಪತ್ತಿರ್ಭವತಿ ॥ ೧ ॥

**ಓಂ ಅಥ ನಿರ್ವಚನಂ**

ನಾಮಪದ, ಧಾತುಗಳು, ಪ್ರತ್ಯಯಗಳು, ಅವ್ಯಯಗಳು, ಇವುಗಳ ಲಕ್ಷಣವನ್ನು ವಿವರಣೆಮಾಡಿ ಹೇಳಿದನಂತರ ಶಾಸ್ತ್ರದ ಪ್ರಾರಂಭಪ್ರಯೋಜನವೂ ಮತ್ತು ಶಿಕ್ಷೆಯೇ ಮೊದಲಾದ ಆರು ವೇದಾಂಗಗಳ ಪ್ರಯೋಜನಗಳೂ ಹಿಂದಿನ ಮೂರು

ಅಧ್ಯಾಯಗಳಿಂದ ಉಕ್ತವಾಗಿದೆ. ಇದೇ ರೀತಿಯಲ್ಲಿ ವೇದದಲ್ಲಿ ಅಲ್ಲಲ್ಲಿ ಪ್ರಯುಕ್ತವಾಗಿರುವ ಪರ್ಯಾಯ ಪದಗಳನ್ನೂ, ಅವುಗಳ ಅರ್ಥವನ್ನೂ ತಿಳಿಯುವ ಕ್ರಮವನ್ನೂ ವಿವರಿಸಬೇಕಾಗಿ ಇರುವ ಆವಶ್ಯಕತೆಯೂ ಹಿಂದಿನ ಅಧ್ಯಾಯದ ಕೊನೆಯ ವಾಕ್ಯದಿಂದ **ನೈಘಂಟುಕಾನಿ, ನೈಗಮಾನಿ, ಇಹೇಹ** ಎಂದು ಉಕ್ತವಾಗಿರುತ್ತದೆ. ಈ ವಾಕ್ಯವನ್ನು **" ನೈಘಂಟುಕಾನಿ ಪದಾನಿ, ನೈಗಮಾನಿ ಪದಾನಿ '' ವ್ಯಾಖ್ಯಾಸ್ಯಾಮಃ** ಎಂಬ ಶಬ್ದದಿಂದ ಪೂರ್ಣಮಾಡಿಕೊಳ್ಳಬೇಕು.

ವೇದಗಳಲ್ಲಿ ಪ್ರಯುಕ್ತವಾಗಿರುವ ಪರ್ಯಾಯ ಪದಗಳ ಅರ್ಥವನ್ನು ಆಯಾಯ ಶಬ್ದಗಳ ರೂಪನಿಷ್ಪತ್ತಿಕ್ರಮ ಮತ್ತು ಸ್ವರಗಳ ವಿವರಣೆ ಇವುಗಳಿಲ್ಲದೆ ತಿಳಿಯಲಶಕ್ಯವಾಗಿರುವ ಕಾರಣ **ಅಥ ನಿರ್ವಚನಂ** ಎಂದು ಈ ಅಧ್ಯಾಯದ ಮೊದಲಿನಲ್ಲಿ ಪ್ರಾರಂಭ ಮಾಡಿರುತ್ತದೆ, ಪರ್ಯಾಪದಗಳ ಅರ್ಥವು ಚೆನ್ನಾಗಿ ತಿಳಿಯುವಂತೆ ವಿವರಿಸುತ್ತೇನೆ ಎಂದು ಪ್ರತಿಜ್ಞೆಮಾಡಿರುತ್ತದೆ. ಈ ಶಬ್ದಗಳ ಅರ್ಥ ವಿವರಣೆಯ ಕ್ರಮವನ್ನು ಸರಿಯಾದ ಉದಾಹರಣೆಯನ್ನು ಹೇಳಿ ವಿವರಿಸಿರುವ ಕ್ರಮವೇ ನಿರ್ವಚನ ವೆನಿಸುವುದು. (೨-೧-೧)

ತದ್ಯೇಷು ಪದೇಷು ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ
ಗುಣೇನಾನ್ವಿತೌ ಸ್ಯಾತಾಂ ತಥಾ ತಾನಿ ನಿಬ್ರೂಯಾತ್

ಶಬ್ದಗಳು ಅನೇಕ ವಿಧವಾಗಿರುವುವು. ಕೆಲವು ಪದಗಳಿಗೆ ಉದಾತ್ತಾದಿ ಸ್ವರಗಳಿಗೆ ಅನುಗುಣವಾದ ಅರ್ಥವು ಪ್ರಯೋಗದಲ್ಲಿರುವುದರಿಂದ ಸಮರ್ಥೌ ಎಂದು ಉಕ್ತವಾಗಿದೆ.

ಅವುಗಳಲ್ಲಿ ಕೆಲವು ಶಬ್ದಗಳ ಸ್ವರಗಳು ಮತ್ತು ಅವುಗಳ ಉಚ್ಚಾರಣೆಯ ಕ್ರಮಗಳು ಸ್ಪಷ್ಟವಾಗಿ ಇರುತ್ತವೆ. ಇನ್ನು ಕೆಲವು ಶಬ್ದಗಳಿಗೆ ಉದಾತ್ತದ ಸ್ವರಗಳೂ, ಅವುಗಳನ್ನು ಉಚ್ಚರಿಸುವ ಕ್ರಮಗಳೂ ಸ್ಪಷ್ಟವಾಗಿರುವುದಿಲ್ಲ. ಆದ್ದರಿಂದ ಈ ಪದಗಳಿಗೆ ಸ್ವರಗಳು ಮತ್ತು ಧಾತುರೂಪಗಳ ವಿವರಣೆಯು ತಿಳಿಯುವಂತೆ ಸ್ಪಷ್ಟವಾಗಿ ಸಮೀಪದಲ್ಲಿರುವ ಮಂತ್ರಭಾಗಗಳಿಂದ ಕೂಡಿರುವುದನ್ನು ಸಮರ್ಥ ಎಂಬ ಶಬ್ದದಿಂದಲೂ ವಿವರಿಸಿದೆ. ಧಾತುರೂಪಗಳ ಮತ್ತು ಸ್ವರಗಳ ವಿವರಣೆಯೂ ಈ ನಿರುಕ್ತದಲ್ಲಿ ವಿವರಿಸಿ ಹೇಳತಕ್ಕದ್ದಾಗಿದೆ. ಪದಗಳ ಅರ್ಥವು ಮುಖ್ಯವಾಗಿರುವುದರಿಂದ ಈ ಪದಗಳ ಲಕ್ಷಣವನ್ನು ವಿವರಣೆ ಮಾಡದೇ ಹೇಳಲಾಗದಿರುವುದರಿಂದ ನಿರುಕ್ತವೆಂಬ ಈ ಗ್ರಂಥದಲ್ಲಿ ಸ್ಪಷ್ಟವಾಗಿ ತಿಳಿಯುವಂತೆ ವಿವರಿಸಿದೆ.

ಶಬ್ದಗಳು ಅನೇಕ ವಿಧವಾಗಿರುವುವು. "**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ**'' ಎಂಬಂತೆ **ಉದಾತ್ತ ಅನುದಾತ್ತ, ಸ್ವರಿತ, ಪ್ರಚಯ** ಎಂಬ ನಾಲ್ಕು ವಿಧವಾದ ಸ್ವರಗಳಿಂದ ಕೂಡಿರುವ ಕೆಲವು ಪದಗಳು ಸಮರ್ಥ ಸ್ವರಗಳೆನಿಸುವವು. ಇದನ್ನೇ ಸಮರ್ಥ ಸ್ವರಸಂಸ್ಕಾರಗಳೆಂದು ಹೇಳುತ್ತಾರೆ. ಈ ಪದಗಳು ಉಚ್ಚಾರಣೆ ಮಾಡುವ ಕಾಲದಲ್ಲಿ ಆಯಾಯ ಸ್ವರಗಳಿಂದ ಸರಿಯಾಗಿ ವರ್ಣೋಚ್ಚಾರಣೆಯು ನಡೆದಲ್ಲಿ ಸರಿಯಾದ ಅರ್ಥವನ್ನು ಕೊಡುವುದರಿಂದ **ಗುಣೇನ ಅನ್ವಿತೌ** ಎಂಬ ಪದದಿಂದ ಹೇಳಿರುತ್ತದೆ. ಮತ್ತು ಆಯಾಯ ಪದಗಳ ರೂಪನಿಷ್ಪತ್ತಿಯಲ್ಲಿ ಆಯಾಯ ಧಾತುವಿನ ಪ್ರಕೃತಿ ಪ್ರತ್ಯಯ ಮತ್ತು ಉಪಸರ್ಗ ಇವುಗಳಿಂದ ಕೂಡಿರುವ ವಿವರಣೆಯನ್ನು ತಿಳಿದು ಆಯಾಯ ಕರ್ಮಗಳಲ್ಲಿ ಉಪಯೋಗಿಸುವುದರಿಂದ ಸರಿಯಾದ ಅರ್ಥವನ್ನು ಆಯಾಯ ಪದಗಳು ಕೊಡುತ್ತವೆ. ಇದನ್ನೇ **'' ಪ್ರಾದೇಶಿಕೇನ ಗುಣೇನ ಅನ್ವಿತೌ ''** ಎಂದು ಹೇಳಿರುತ್ತದೆ. ಈ ಎರಡು ವಿಧವಾದ ಸಂಸ್ಕಾರಗಳಿಂದ ಅಂದರೆ ಸ್ವರಸಂಸ್ಕಾರ, ಧಾತು ಪ್ರಕೃತಿ ಪ್ರತ್ಯಯಗಳ ಸಂಬಂಧ ಇವುಗಳಿಂದ ಕೂಡಿದ್ದರೂ ಆಯಾಯ ಪದಗಳನ್ನು ಸರಿಯಾಗಿ ಉಚ್ಚಾರಣೆಯನ್ನು ಮಾಡದೇ ಇದ್ದಲ್ಲಿ ಅರ್ಥವು ಬದಲಾಯಿಸು

ವುದರಿಂದ "ಅರ್ಥ ವೈಪರೀತ್ಯ"ವೆಂದು ಹೇಳಿದೆ. ಇದರಿಂದಲೇ ಅರ್ಥವೇ ಮುಖ್ಯವಾಗಿರುವ ಕಾರಣ ಆಯಾಯ ಅರ್ಥವು ಸರಿಯಾಗಿ ಬರುವಂತೆ ಈ ಪದಗಳ ಲಕ್ಷಣವನ್ನು ವಿವರಿಸಿ ಈ ನಿರುಕ್ತದಲ್ಲಿ ಹೇಳಿರುತ್ತದೆ. ಇದಕ್ಕಾಗಿಯೇ ಆಯಾಯ ಪದಗಳ ಶಕ್ತಿಯನ್ನು ವಿವರಿಸಿರುವುದರಿಂದ ಇದಕ್ಕೆ "ನೈಘಂಟುಕ ಕಾಂಡ"ವೆಂದು ಹೆಸರು ಬಂದಿದೆ. (೨-೧-೨)

ಅಥ ಅನನ್ವಿತೇಽರ್ಥೇ ಅಪ್ರಾದೇಶಿಕೇ ವಿಕಾರೇ ಅರ್ಥನಿತ್ಯಃ ಪರೀಕ್ಷೇತ।
ಕೇನಚಿತ್ ವೃತ್ತಿಸಾಮಾನ್ಯೇನ। (೨-೧-೩)

ಆಯಾಯ ಸ್ವರಗಳು ಅರ್ಥಕ್ಕೆ ಅನುಸಾರವಾಗಿ ಇರುವುದರಿಂದ ಆಯಾಯ ಪದಗಳಲ್ಲಿ ಸ್ವರಗಳು ಇದ್ದರೂ ಅರ್ಥವನ್ನು ಸರಿಯಾಗಿ ಹೇಳಲು ಆಯಾಯ ಪ್ರಕರಣದಿಂದ ಅವಕಾಶವು ದೊರೆಯುವುದಿಲ್ಲ. ಶಬ್ದವು ಧಾತು ಪ್ರಕೃತಿ ಪ್ರತ್ಯಯ ಮತ್ತು ಸ್ವರ ಇವುಗಳಿಂದ ಸರಿಯಾದ ಸಂಸ್ಕಾರದಿಂದಿದ್ದರೂ ಅರ್ಥವು ವ್ಯತ್ಯಾಸವಾಗುವ ಕಾರಣ ಶಬ್ದಗಳಲ್ಲಿ ಉಂಟಾಗುವ ಶಬ್ದಶಕ್ತಿಯ ವೈಪರೀತ್ಯವನ್ನು ಹೊಂದುವುದರಿಂದ ಮಂತ್ರಜ್ಞರು ಇದನ್ನು ಸರಿಯಾಗಿ ಗಮನಿಸಬೇಕು.

ಆಯಾಯ ಪದಗಳು ಆಯಾಯ ಅರ್ಥವನ್ನು ಸರಿಯಾಗಿ ಕೊಡುತ್ತವೆಯೋ ಇಲ್ಲವೋ ಎಂಬುದನ್ನು ಆಯಾಯ ಪ್ರಕರಣಗಳಲ್ಲಿ ಸಾಮಾನ್ಯ ವಿಶೇಷ ಭಾವದಿಂದ ಇರುವಿಕೆಯನ್ನು ತಿಳಿದುಕೊಳ್ಳಬೇಕು. ಅರ್ಥವು ಯಾವಾಗಲೂ ಮುಖ್ಯವಾಗಿರುವುದರಿಂದ ಶಬ್ದಕ್ಕೆ ಮಾತ್ರವೇ ಮುಖ್ಯವಾಗಿರುವಿಕೆಯನ್ನು ತಿಳಿಯಬಾರದು. ಈ ವಿಷಯದಲ್ಲಿ "ಮುದ್ಗಂ ನಿತ್ಯಮೇವ ಪ್ರಧಾನಂ ಭೋಜನಂ" ಎಂದರೆ ಊಟಮಾಡುವಾಗ ಎಲ್ಲಾ ಪದಾರ್ಥಗಳಿದ್ದರೂ ಹೆಸರುಬೇಳೆಯು ಹೆಚ್ಚಾಗಿರುವುದರಿಂದ ಅದಕ್ಕೆ ಪ್ರಾಧಾನ್ಯವುಂಟಾಗುತ್ತದೆ. ಇದರಂತೆಯೇ ಆಯಾಯ ಶಬ್ದಗಳಲ್ಲಿಯೂ ಅರ್ಥವು ಮುಖ್ಯವಾಗಿದ್ದರೂ ಸ್ವರಗಳ ವಿಷಯದಲ್ಲಿ ಹೆಚ್ಚಾದ ಗಮನವನ್ನು ಕೊಡಬೇಕು. ಈ ಸ್ವರದ ಉಚ್ಚಾರಣೆಯನ್ನು ಗಮನಿಸುವಂತೆ ಆಯಾಯ ಪದಗಳಿಗೆ ಆಯಾಯ ಅರ್ಥವನ್ನು ಕೊಡುವ ಶಕ್ತಿಯು ಸ್ವರಕ್ಕನುಸಾರವಾಗಿ ಇದೆಯೋ ಇಲ್ಲವೋ ಎಂಬುದನ್ನು ತಿಳಿಯಬೇಕು.

ಸ್ವರದ ವಿಷಯದಲ್ಲಿ ಗಮನವೂ, ಸ್ವರಗಳಿಗೆ ಅನುಸಾರವಾಗಿ ಅರ್ಥವನ್ನು ಕೊಡುವ ಶಬ್ದಶಕ್ತಿಯೂ, ಇವೆರಡೂ ಮುಖ್ಯವಾಗಿರುವುದರಿಂದ ಇವೆರಡನ್ನೂ ತಿಳಿದುಕೊಳ್ಳಬೇಕು. ಅರ್ಥವು ಮುಖ್ಯವಾಗಿರುವಲ್ಲಿ ಶಬ್ದವು ಗೌಣವಾಗುತ್ತದೆ. ಆದ್ದರಿಂದ ಆಯಾಯ ಶಬ್ದಗಳ ವಿವರಣೆಗಿಂತ ಅರ್ಥ ವಿವರಣೆಯು ಮುಖ್ಯವಾದುದೆಂದು ವಿವರಿಸಿದೆ. (೨-೧-೩).

ಅವಿದ್ಯಮಾನೇ ಸಾಮಾನ್ಯೇಪಿ ಅಕ್ಷರವರ್ಣಸಾಮಾನ್ಯಾನ್ನಿರ್ಬ್ರೂ-
ಯಾತ್। ನ ತ್ವೇವ ನ ನಿರ್ಬ್ರೂಯಾತ್। ನ ಸಂಸ್ಕಾರಮಾದ್ರಿಯೇತ
ವಿಶಯವತ್ಯೋ ಹಿ ವೃತ್ತಯೋ ಭವಂತಿ ಯಥಾರ್ಥಂ ವಿಭಕ್ತೀಃ
ಸನ್ನಮಯೇತ್ ।

(೨-೧-೪)

ವಿಶೇಷವಾದ ಅರ್ಥವು ಆಯಾಯ ಶಬ್ದದಿಂದ ಬರದಿರುವ ಕಡೆಯಲ್ಲಿ ಆಯಾಯ ಪದದಲ್ಲಿ ಅಕ್ಷರ ಸಾಮಾನ್ಯವನ್ನು ತಿಳಿಯಬೇಕು. ಅರ್ಥವೇ ಆಯಾಯ ಪದದಿಂದ ಬರುವುದಿಲ್ಲವೆಂದು ತಿಳಿಯಬಾರದು. ಆಯಾಯ ಪದಗಳಲ್ಲಿರುವ ಅಕ್ಷರಗಳಲ್ಲಿಯೂ ಅರ್ಥವನ್ನು ಕೊಡುವ ಶಕ್ತಿಯು ಸಾಮಾನ್ಯವಾಗಿರುತ್ತದೆಂದು ತಿಳಿಯಬೇಕು. ಅರ್ಥವನ್ನು ಕೊಡುವ ಶಕ್ತಿಗಳು ಪ್ರಾಯಕವಾಗಿ ಸಂದೇಹವನ್ನು ಉಂಟುಮಾಡುವವುಗಳಾಗಿರುತ್ತವೆ. ಆದುದರಿಂದ ವಿಶೇಷವಾದ ವಿವರಣೆಯನ್ನು ಗಮನಿಸಬೇಕು.

ಇದರಂತೆಯೇ ಆಯಾಯ ಅಕ್ಷರಗಳು ಆಯಾಯ ಸ್ವರಗಳಿಂದ ಕೂಡಿರುವ ಮಾತ್ರದಿಂದಲೇ ಹೇಳಲಾಗುವುದಿಲ್ಲ. ಧಾತುವಿನಲ್ಲಿ ಸ್ವರವೂ ಆಯಾಯ ಅಕ್ಷರವೂ ಕೂಡಿ ಆಯಾಯ ಅರ್ಥವನ್ನು ಕೊಡುವುದರಲ್ಲಿ ಶಕ್ತಿಯುಳ್ಳದ್ದಾಗಿರುತ್ತದೆಂದು ಊಹೆಮಾಡಿ ಸ್ಪಷ್ಟವಾಗಿರುವಂತೆ ತಿಳಿಯಬೇಕು. ಹೀಗೆ ಸ್ವರ, ಅಕ್ಷರಗಳು ಇವುಗಳ ಉಚ್ಚಾರಣೆ ಮಾತ್ರದಿಂದಲೇ ಯಾವ ಅರ್ಥವೂ ಇಲ್ಲವೆಂದು ತಿಳಿಯಬಾರದು. ಇದಕ್ಕಾಗಿಯೇ ಸ್ವರವರ್ಣ ಸಂಸ್ಕಾರಗಳನ್ನು ಈ ನಿರುಕ್ತವೆಂಬ ಶಾಸ್ತ್ರದಲ್ಲಿ ವಿವರಿಸಿವೆ. ಆಯಾಯ ಲಕ್ಷಣಗಳಿಂದಲೂ ಆಯಾಯ ಧಾತು ಪ್ರಕೃತಿ ಪ್ರತ್ಯಯಗಳಿಂದಲೂ ಕೂಡದೇ ಇರುವ ಶಬ್ದಗಳ ವಿಷಯದಲ್ಲಿ ಗಮನವನ್ನು ಕೊಡಬಾರದು.

ಅರ್ಥ ಸಾಮಾನ್ಯವು ಅಥವಾ ಶಬ್ದಸಾಮಾನ್ಯವು ಗಮನಿಸಬೇಕಾದ್ದೆಂಬ ವಿಷಯದಲ್ಲಿ ಪ್ರವೀಣ, ಉದಾರ, ನಿಸ್ತ್ರಿಂಶ ಎಂಬ ಶಬ್ದಗಳೂ, ಉತ್ಕೃಷ್ಟವಾದ ಆಯಾಯ ಅರ್ಥವಲ್ಲಿ ಪ್ರಯುಕ್ತವಾಗಿವೆ. ಪ್ರವೀಣ ಎಂಬ ಶಬ್ದವು ವೀಣೆಯನ್ನು ನುಡಿಸುವುದರಲ್ಲಿ ಬುದ್ಧಿವಂತನೆಂಬ ಅರ್ಥವನ್ನು ಉಪಸರ್ಗ ಸಹಾಯದಿಂದ ಕೊಡುತ್ತದೆ. ಇದರಲ್ಲಿ ಯೌಗಿಕಾರ್ಥವನ್ನು ಅನುಸರಿಸಿದಲ್ಲಿ ಲೋಕದಲ್ಲಿರುವ ರೂಢಿಯು ತಪ್ಪಿಹೋಗುತ್ತದೆ. ಇದರಿಂದ ಪ್ರವೀಣ ಶಬ್ದವನ್ನು ಪ್ರಯೋಗ ಮಾಡಿದಕಡೆಯೆಲ್ಲವೂ ಎಲ್ಲರೂ ರೂಢಿಯನ್ನು ಅನುಸರಿಸುತ್ತಾರೆ. ಪ್ರವೀಣನೆಂದರೆ ಬುದ್ಧಿವಂತನೆಂದು ಅರ್ಥ. ವೀಣೆಯನ್ನು ನುಡಿಸುವವನೆಂಬ ವಿಶೇಷಾರ್ಥವನ್ನು ಯಾರೂ ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ಈ ಶಬ್ದದಲ್ಲಿ ಸಾಮಾನ್ಯವಾದ ವೃತ್ತಿಯನ್ನು ಆಶ್ರಯಿಸಿವೆ. " ಯೋಗಾತ್ ರೂಢಿಃ ಬಲೀಯಸೀ '' ಎಂಬ ನ್ಯಾಯವನ್ನು ಆಶ್ರಯಿಸಿದೆ.

ಇದರಂತೆಯೇ ಉದಾರ ಎಂಬ ಶಬ್ದದಿಂದ ಗಟ್ಟಿಯಾಗಿ (ಸ್ವರವನ್ನು) ಧ್ವನಿಯನ್ನು ಒಂದು ಅಭಿಪ್ರಾಯದಿಂದ ಉಚ್ಚರಿಸುವ ಕಾರಣ ಕುದುರೆ ಅಥವಾ ಗೂಳಿ ಎಂಬ ಅರ್ಥವು ಬರುತ್ತದೆ. ಇದಕ್ಕೆ ಅನುಸಾರವಾಗಿ ಈ ಶಬ್ದದ ಅವಯವಾರ್ಥವು ಹೊಂದುತ್ತದೆ. ಆದರೆ ಅವಯವಾರ್ಥವನ್ನು ಬಿಟ್ಟು ಸಾಮಾನ್ಯವಾದ ಅರ್ಥವನ್ನು ಹೇಳುವ ಶಬ್ದದ ಶಕ್ತಿಯನ್ನನುಸರಿಸಿ ಈ ಶಬ್ದಕ್ಕೆ ಉದಾರ ಎಂದರೆ " ಯೋಚನೆಮಾಡುವುದಕ್ಕಿಂತಲೂ ಮುಂಚಿತವಾಗಿ ಕೊಡುವವನು '' ಎಂಬ ಅರ್ಥವು ಲೋಕದಲ್ಲಿ ರೂಢಿಯಲ್ಲಿರುವುದು. ಇದರಿಂದ ಅರ್ಥ ಸಾಮಾನ್ಯಕ್ಕೆ ಇದು ಉದಾಹರಣೆಯಾಗಿರುತ್ತದೆ.

ನಿಸ್ತ್ರಿಂಶ ಎಂಬ ಶಬ್ದವು ಕತ್ತಿ ಎಂಬ ಅರ್ಥವನ್ನು ಕೊಡುವುದರಲ್ಲಿ ಲೋಕದಲ್ಲಿ ರೂಢಿಯಲ್ಲಿರುತ್ತದೆ. ಈ ಅರ್ಥವನ್ನು ಈ ಶಬ್ದದಿಂದ ತಿಳಿಯುವಾಗ ಮೂರು ಪ್ರದೇಶಗಳಿಂದಲೂ, ಎರಡು ಕಡೆಯಿಂದಲೂ ಮತ್ತು ತುದಿಯಿಂದಲೂ ಹರಿತವಾಗಿರುವ ಕಾರಣ ಎಲ್ಲವನ್ನೂ ಕತ್ತರಿಸುತ್ತದೆ ಎಂಬ ಅರ್ಥವನ್ನು ತಿಳಿಯುತ್ತಾರೆ. ಈ ಅರ್ಥವು ಈ ಶಬ್ದದಿಂದ ಬರುವುದಕ್ಕೆ ಈ ಶಬ್ದದ ಅವಯವಾರ್ಥವು ಕ್ರಿಯಾಕ್ಕೆ ಅನುಸಾರವಾಗಿರುತ್ತದೆ. ಆದರೆ ಲೋಕದಲ್ಲಿ ಮಾತ್ರ ನಿಸ್ತ್ರಿಂಶ ಎಂದರೆ ಕತ್ತಿಯಲ್ಲಿರುವ " ಕ್ರೂರ " ಎಂಬ ಸಾಮಾನ್ಯವಾದ ಅರ್ಥವನ್ನು ಆಶ್ರಯಿಸಿ ಕ್ರೂರನಾಗಿರುವ ಮನುಷ್ಯನಲ್ಲಿಯೂ ನಿಸ್ತ್ರಿಂಶ ಎಂಬ ಶಬ್ದವನ್ನು ಉಪಯೋಗಿಸುತ್ತಾರೆ. ಇದು ಕ್ರಿಯಾಗುಣ ಸಾಮಾನ್ಯಕ್ಕೆ ಉದಾಹರಣೆಯಾಗಿದೆ.

ಹೀಗೆಯೇ ಅವಯವಾರ್ಥವನ್ನು ಅನುಸರಿಸಿ ಶಬ್ದಸಾಮಾನ್ಯ, ಅರ್ಥಸಾಮಾನ್ಯ–ಇವುಗಳನ್ನು ತಿಳಿಯಬೇಕು. ವೇದದಲ್ಲಿ ಸ್ವರ ಮತ್ತು ವರ್ಣ ಇವುಗಳ ಸಾಮಾನ್ಯ ವಿಷಯಕ್ಕೆ ಉದಾಹರಣೆಗಳು ಬಹಳವಾಗಿರುತ್ತವೆ. ವೇದದಲ್ಲಿ ಬರುವ ಶಬ್ದಗಳೆಲ್ಲವೂ ಪ್ರಾಯಕವಾಗಿ ಸ್ವರವರ್ಣ ಸಾಮಾನ್ಯವನ್ನು ಆಶ್ರಯಿಸಿರುವುವು.

ಕಾರಕ, ಹಾರಕ, ಲಾವಕ ಎಂಬ ಶಬ್ದಗಳಿಗೆ ಶಬ್ದನಿಷ್ಪತ್ತಿ ಕ್ರಮವು ಈ ನಿರುಕ್ತದಲ್ಲಿ ಹೇಳಿಲ್ಲ. ಇದರ ಅರ್ಥಗಳು ಸುಲಭವಾಗಿ ವ್ಯಾಕರಣದಿಂದ .ತಿಳಿಯುತ್ತನೆಂಬ ಅಂಶದಿಂದ ಬಿಟ್ಟಿರುತ್ತದೆ. ಇದರಂತೆಯೇ ಕೆಲವು ಶಬ್ದಗಳು ಯಾವುದೋ ಒಂದು ಅರ್ಥವನ್ನು ಕೊಡುವ ಕಾರಣ ಇವುಗಳಿಗೆ "**ಪರೋಕ್ಷವೃತ್ತಿ ಶಬ್ದ, ಅಪರೋಕ್ಷವೃತ್ತಿ ಶಬ್ದ**" ಎಂದು ವಿಭಾಗ ಮಾಡಿವೆ. ಅರ್ಥವನ್ನು ವಿವರಿಸಲು ಕಷ್ಟವಾಗಿರುವ ಶಬ್ದವು ಪರೋಕ್ಷವೃತ್ತಿ ಎನಿಸಿಕೊಳ್ಳುತ್ತವೆ **ಬಿಲ್ಮ, ಕೃದರ, ಉದಾರ, ವೈತಸ.** ಪರ್ವ ಎಂಬ ಇವೇ ಮೊದಲಾದ ಶಬ್ದಗಳು ಈ ಶಾಸ್ತ್ರದಲ್ಲಿ ಪ್ರಕೃತಿ ಪ್ರತ್ಯಯ ವಿವರಣೆಯಿಂದ ವಿವರಿಸಲ್ಪಡುತ್ತವೆ. ಈ ಶಬ್ದಗಳಲ್ಲಿ ಹೆಚ್ಚಾದ ಅರ್ಥವಿರುವಿಕೆಯು ಈ ನಿರುಕ್ತದಲ್ಲಿ ಪ್ರಕಟಿಸಿದೆ. ಆದ್ದರಿಂದ ಈ ಶಬ್ದಗಳಲ್ಲಿ **ಅರ್ಥಸಾಮಾನ್ಯ, ಶಬ್ದ ಸಾಮಾನ್ಯ ಇವು**ಗಳನ್ನು ಆಶ್ರಯಿಸಿ ಹೇಳಿದೆಯೆಂದು ತಿಳಿಯಬೇಕು.

ಹೀಗೆ ತಿಳಿಯಲು ಶಬ್ದದಲ್ಲಿ ಅರ್ಥವನ್ನು ಕೊಡುವ ಶಕ್ತಿಯು ಸಂದೇಹಾಸ್ಪದವಾಗಿ ಇರುವುದೇ ಕಾರಣವಾಗಿದೆ. ಶಬ್ದದಲ್ಲಿ ಶಕ್ತಿಯು ಗೂಢವಾಗಿ ಇದೆಯೋ ಇಲ್ಲವೋ ಎಂಬ ಸಂಶಯವು ಉಂಟಾಗಿ ವಿಚಾರಕ್ಕೆ ಆಸ್ಪದವಾಗಿರುತ್ತದೆ. ಇದರಿಂದಲೇ "**ವಿಶಯವತ್ಯೋ ಹಿ ವೃತ್ತಯೋ ಭವಂತಿ**" ಎಂದು ಹೇಳಿದೆ.

ಅರ್ಥ ಸಾಮಾನ್ಯದಿಂದ ಕೆಲವು ಶಬ್ದಗಳು ಇರುತ್ತವೆ, ಅಂದರೆ ಆಯಾಯ ಶಬ್ದದಿಂದ ಬರುವ ಸಾಮಾನ್ಯವಾದ ಅರ್ಥವನ್ನು ಕೆಲವು ಶಬ್ದಗಳಿಂದ ತಿಳಿಯಬೇಕು. ಮತ್ತೆ ಕೆಲವು ಶಬ್ದಗಳಿಂದ ಸ್ವರಸಾಮಾನ್ಯದಿಂದ ಬರುವ ಅರ್ಥವನ್ನು ತಿಳಿಯಬೇಕು. ಕೆಲವು ಶಬ್ದಗಳಲ್ಲಿ ವರ್ಣಸಾಮಾನ್ಯದಿಂದಲೇ ತಿಳಿಯಬೇಕು. ಇದರಂತೆಯೇ ಅರ್ಥಕ್ಕನುಸಾರವಾಗಿ ಕೆಲವು ಶಬ್ದಗಳಲ್ಲಿ ವಿಭಕ್ತಿಗಳನ್ನು ಬದಲಾಯಿಸಿಕೊಳ್ಳಬೇಕು. ವಿಭಕ್ತಿಗಳನ್ನು ಬದಲಾಯಿಸುವಾಗ ಹಿಂದಿರುವ ಪದ, ಮುಂದಿರುವ ಪದ ಮತ್ತು ಆಯಾಯ ಪ್ರಕರಣ ಇವುಗಳನ್ನು ಗಮನಿಸಬೇಕು. ವಿಭಕ್ತಿಯನ್ನು ಬದಲಾಯಿಸಲು ವ್ಯಾಕರಣದಲ್ಲಿ ಅರ್ಥಕ್ಕನುಸಾರವಾಗಿ ಪ್ರತ್ಯಯಗಳು ಬರುತ್ತವೆ ಎಂದು ಹೇಳಿದೆ. "ಹೃತ್ಸುಃ ಶೋಕೈಃ" ಎಂಬುದಕ್ಕೆ "ಹೃದಯಾನಿ ಶೋಕೈಃ" (ವೈ, ಕಾ, ೯-೩-೩೩) ಈ ಉದಾಹರಣೆಯಲ್ಲಿ "ಹೃತ್ಸು" ಎಂಬ ಶಬ್ದಕ್ಕೆ ಸಪ್ತಮಿಾ ವಿಭಕ್ತಿಗೆ ಅರ್ಥಕ್ಕನುಸರಿಸಿ ದ್ವಿತೀಯವನ್ನು ಹೇಳಿದೆ. ಹೃದಯವನ್ನು ಎಂಬ ಅರ್ಥವನ್ನು ವಿವರಿಸಿದೆ. ಇವೇ ಮೊದಲಾಗಿ ಬೇರೆ ಬೇರೆ ಉದಾಹರಣೆಗಳನ್ನು ಈ ನಿರುಕ್ತದಲ್ಲಿ ವಿವರಿಸಿದೆ.

## ಪ್ರತ್ತಮವತ್ತಮಿತೀ ಧಾತ್ವಾದೀ ಏವ ಶಿಷ್ಯೇತೇ

ಶಬ್ದರೂಪಗಳು ಧಾತುಗಳಿಗೆ ಉಪಸರ್ಗಗಳು ಸೇರುವುದರಿಂದ ಆಯಾಯ ಧಾತುಗಳಿಂದ ಉಂಟಾದ ಶಬ್ದರೂಪದ ವಿಶಯದಲ್ಲಿ ಸಂದೇಹ ಉಂಟಾಗುವುದು ಎಂಬುದಕ್ಕೆ "ಪ್ರತ್ತಂ ಅವತ್ತಂ" ಎಂಬ ಎರಡು ಶಬ್ದಗಳನ್ನು ಕೊಟ್ಟಿದೆ. ಈ ಶಬ್ದಗಳಲ್ಲಿ ಧಾತುವಿನ ಆದಿಭಾಗವು ಉಳಿದುಕೊಳ್ಳುತ್ತದೆ. "ಡು ದಾಞ್ ದಾನೇ" ಈ ಧಾತುವಿಗೆ "ಪ್ರ" ಎಂಬ ಉಪಸರ್ಗವು ಸೇರಿದಾಗ "ಪ್ರತ್ತಂ" ಎಂಬ ರೂಪವಾಗುವುದು. ಇದರಲ್ಲಿ ಧಾತುವಿನ "ದಾ" ಎಂಬುದು ಧಾತುವು ಧಾತುವಿನ ಮುಂದಿರತಕ ತಕಾರವು "ನಿಷ್ಠಾ" ಪ್ರತ್ಯಯದಿಂದ ಬಂದಿರುವುದು. ''ದೋ ದದ್ ಘೋಃ'' ಎಂಬ ಸೂತ್ರದಿಂದ "ಅಚ ಉಪಸರ್ಗಾತ್ ತಃ" ಎಂಬ ಸೂತ್ರದಿಂದ "ದದ್" ಎಂಬ ರೂಪಕ್ಕೆ ಆಕಾರವುಳಿದು ತಕಾರವು ಬರುತ್ತವೆ. "ಝುರೋ ಝುರಿ ಸವರ್ಣೇ" ಎಂಬ ಸೂತ್ರದಿಂದ ಧಾತುವಿನ ಕೊನೆಯಲ್ಲಿರುವ ತಕಾರಕ್ಕೆ ಲೋಪವು ಬರುತ್ತದೆ. "ಖರಿಚ" ಎಂಬ ಸೂತ್ರದಿಂದ ಧಾತುವಿನ ಉಳಿದಿರುವ ದಕಾರಕ್ಕೆ ಬದಲಾಗಿ ತಕಾರವು ಬರುತ್ತದೆ. "ಪರಃ ಸನ್ನಿಕರ್ಷಃ" ಸಂಹಿತಾ ಎಂಬ ಸೂತ್ರದಿಂದ ಧಾತುವಿನ ತಕಾರವು ಪ್ರತ್ಯಯ ಸಂಬಂಧಿಯಾದ ತಕಾರದೊಡನೆ ಸೇರುತ್ತದೆ. ಅನಂತರದಲ್ಲಿ "ಹಲೋಽನಂತರಾಃ ಸಂಯೋಗಃ" ಎಂಬ

ಸೂತ್ರದಿಂದ ಪ್ರಾದಿ ಸಮಾಸವು ಬಂದು "ಪ್ರತ್ತಂ'' ಎಂಬ ರೂಪವಾಗಿದೆ. ಪ್ರಕೃಷ್ಟಂ ದತ್ತಂ = ಪ್ರತ್ತಂ ಬಹಳವಾಗಿ ಕೊಡುವುದೆಂದರ್ಥ.

ಹೀಗೆಯೇ "ದೋ ಅವಖಂಡನೇ'' ಎಂಬ ದೋ ಎಂಬ ಧಾತುವಿಗೆ ಅವ ಎಂಬ ಉಪಸರ್ಗವು ಸೇರಿದಾಗ ಅವತ್ತಂ ಎಂಬ ರೂಪವಾಗುವುದು. ಇಲ್ಲಿಯೂ ಕೂಡ ದ ಮತ್ತು ಓ ಎಂಬೆರಡು ಅಕ್ಷರಗಳು ಸೇರಿ ಧಾತುವಾಗಿರುವುದು. ಅದರ ಮುಂದಿನ ತಕಾರವು ಪ್ರತ್ಯಯಕ್ಕೆ ಸೇರಿದ್ದು "ಆದೇಚ ಉಪದೇಶೇಽಶಿತಿ'' ಎಂಬ ಸೂತ್ರದಿಂದ ಓ ಕಾರಕ್ಕೆ ಅಕಾರವು ಬಂದು ತಕಾರ, ಲೋಪ, ತಕಾರಕ್ಕೆ ದ್ವಿತ್ವ, ಅನಂತರದಲ್ಲಿ ಪ್ರಾದಿ ಸಮಾಸವೂ ಬರುವುದರಿಂದ ಹಿಂದಿನ ಶಬ್ದದಂತೆಯೇ ಅವತ್ತಂ ಎಂದು ರೂಪವಾಗುತ್ತದೆ. ಹೀಗೆಯೇ ಅನೇಕ ಕಡೆಯಲ್ಲಿ ಧಾತುವಿನ ಮೊದಲನೆಯ ವರ್ಣವು ಮಾತ್ರವೇ ಪ್ರತ್ಯಯ ಸಂಬಂಧದಿಂದ ಉಳಿಯುತ್ತದೆ. ಇದರಂತೆಯೇ ಬೇರೆ ಬೇರೆ ಕಡೆಗಳಲ್ಲಿಯೂ ಉದಾಹರಣೆಗಾಗಿ ಊಹಿಸಿಕೊಳ್ಳಬಹುದು. (೨-೧-೫)

## ಅಥ ಅಪ್ಯಸ್ತೇಃ ನಿವೃತ್ತಿಸ್ಥಾನೇ ಷ್ವಾದಿಲೋಪೋ ಭವತಿ ಸ್ತಃ ಸಂತೀತಿ । (೨-೧-೬)

ಹಿಂದೆ ಹೇಳಿರುವ ಧಾತುವಿನ ಆದಿಭಾಗವು ಉಳಿಯುವುದು ಎಂಬುದಕ್ಕೆ ಉದಾಹರಣೆಯು ಈ ಸೂತ್ರದಲ್ಲಿ ಕೊಟ್ಟಿದೆ. "ಸ್ತಃ, ಸಂತಿ'' ಈ ಎರಡು ಶಬ್ದರೂಪಗಳು "ಅಸ ಭುವಿ'' ಎಂಬ ಧಾತುವಿನಿಂದ ಉಂಟಾಗಿರುವುದು. "ಅಸ್'' ಎಂಬ ಧಾತುವು ಈ ಧಾತುವಿನ ಆದಿಯಲ್ಲಿರುವ ಅಕಾರವು ಗುಣ ಮತ್ತು ವೃದ್ಧಿ ಇವುಗಳನ್ನು ಹೊಂದದೆ "ಶ್ನ ಸೋರಲ್ಲೋಪಃ'' ಎಂಬ ಸೂತ್ರದಿಂದ ಲೋಪವನ್ನು ಹೊಂದುತ್ತದೆ. ಅದು ಲೋಪವಾದನಂತರದಲ್ಲಿ ಪ್ರತ್ಯಯವು ಸೇರಿ "ಸ್ತಃ, ಸಂತಿ'' ಎಂದು ಆಗುವುದು. ಹೀಗೆಯೇ ಬೇರೆ ಶಬ್ದರೂಪಗಳನ್ನು ಊಹಿಸಬಹುದು. (೨-೧-೬)

## ಅಥ ಅಪ್ಯಂತಲೋಪೋ ಭವತಿ ಗತ್ವಾ ಗತಮಿತಿ (೨-೧-೭)

ಧಾತುವಿನ ಆದಿಭಾಗವು ಪ್ರತ್ಯಯಗಳು ಸೇರಿದಾಗ ಲೋಪವಾಗಿರಲು ಉದಾಹರಣೆಯನ್ನು "ಸ್ತಃ ಸಂತಿ'' ಎಂಬಿದೇ ಮೊದಲಾಗಿ ಕೊಟ್ಟಿರುವಂತೆ ಪ್ರತ್ಯಯಗಳು ಸೇರಿದಾಗ ಧಾತುವಿನ ಕೊನೆಯು, ಅಕ್ಷರವು ಲೋಪವಾಗಿರುವುದನ್ನು "ಗತ್ವಾ ಗತಂ'' ಎಂಬ ಉದಾಹರಣೆಯಲ್ಲಿ ತೋರಿಸಿದೆ. ಇಲ್ಲಿ "ಗಮ್'' ಎಂಬ ಧಾತುವು. ಇದಕ್ಕೆ "ಗತ್ವಾ'' ಪ್ರತ್ಯಯವು ಬಂದಾಗ ಧಾತುವಿನ ಕೊನೆಯ ಮ ಕಾರವು ಲೋಪವಾಗುವುದು. "ಗತ್ವಾ'' ಎಂದಾಯಿತು. ಪ್ರತ್ಯಯ ಸಂಬಂಧಿಯಾದ ಕ ಕಾರವು "ಅನುದಾತ್ತೋಪದೇಶ'' ಎಂಬ ಸೂತ್ರದಿಂದ ಲೋಪವನ್ನು ಹೊಂದುವುದು. ಇದರಿಂದ "ಗತಂ'' "ಗತ್ವಾ'' ಎಂಬ ರೂಪವಾಗುತ್ತದೆ. ಹೀಗೆಯೇ ಆಯಾಯ ಉದಾಹರಣೆಯಲ್ಲಿ ಧಾತುವಿನ ಕೊನೆಯಲ್ಲಿರುವ ವರ್ಣಗಳು ಲೋಪವನ್ನು ಹೊಂದಿರುವ ವಿಷಯವನ್ನು ತಿಳಿದುಕೊಳ್ಳುವುದು. (೨-೧-೭)

## ಅಥಾಪ್ಯುಪಧಾ ಲೋಪೋ ಭವತಿ ಜಗ್ಮತುಃ ಜಗ್ಮುಃ ಇತಿ। (೨-೧-೮)

ಧಾತುವಿನ ಆದ್ಯಕ್ಷರವೂ, ಕಡೆಯ ಅಕ್ಷರವೂ ಆಯಾಯ ಉದಾಹರಣೆಯಲ್ಲಿ ಲೋಪವಾಗಿರುವವನ್ನು ಹೇಳಿದಂತೆ ಧಾತುವಿನ ಕೊನೆಯ ಅಕ್ಷರದ ಹಿಂದಿನ ಅಕ್ಷರವು ಲೋಪವನ್ನು ಹೊಂದಿರುವ ಉದಾಹರಣೆಗಾಗಿ "ಜಗ್ಮತುಃ ಜಗ್ಮುಃ'' ಎಂಬ ಎರಡು ಶಬ್ದ ರೂಪಗಳನ್ನು ಇಲ್ಲಿ ಹೇಳುತ್ತದೆ. "ಗಮ್'' ಧಾತುವಿನ ಅಕಾರವು "ಅಲೋಂತ್ಯಾತ್ ಪೂರ್ವ ಉಪಧಾ''

ಎಂಬ ಸೂತ್ರದಿಂದ ಕೊನೆಯ ಅಕ್ಷರಕ್ಕಿಂತಲೂ ಹಿಂದಿನದು " ಉಪಧಾ '' ಎಂಬ ಹೆಸರುಳ್ಳದ್ದಾಗಿದೆ. ಇದಕ್ಕೆ " ಗಮಹನ ಜನಖನಘಸಾಂ '' ಎಂಬ ಸೂತ್ರದಿಂದ ಉಪಧಾ ವರ್ಣವು ಲೋಪ ಹೊಂದುತ್ತದೆ. ಹೀಗೆಯೇ ಆಯಾಯ ಉದಾಹರಣೆಗಳಲ್ಲಿ ಉಪಧಾ ಲೋಪಗಳನ್ನು ತಿಳಿದುಕೊಳ್ಳುವುದು.

ಅಥಾಪ್ಯುಪಧಾವಿಕಾರೋ ಭವತಿ ರಾಜಾ ದಂಡೀತಿ । (೨-೧-೯)

ಹಿಂದಿನಂತೆಯೇ ಕೆಲವು ಶಬ್ದಗಳಲ್ಲಿ ಉಪಧಾ ವರ್ಣವು ಅಂದರೆ, ಕಡೆಯ ಅಕ್ಷರಕ್ಕಿಂತ ಹಿಂದಿನ ಅಕ್ಷರವು ಬದಲಾವಣೆಯನ್ನು ಹೊಂದುತ್ತದೆ. ರಾಜ್ನ, ದಂಡಿನ್ ಎಂಬ ಶಬ್ದರೂಪವು ಇರುವಾಗ " ನೋಪಧಾಯಾಃ " " ಸರ್ವನಾಮಸ್ಥಾನೇ ಚಾಸಂಬುದ್ಧೌ '' ಎಂಬ ಸೂತ್ರಗಳಿಂದ ನಕಾರವು ಲೋಪವನ್ನು ಹೊಂದಿ ಹಿಂದಿನ ಅಕಾರವು ದೀರ್ಘವನ್ನು ಹೊಂದುತ್ತದೆ. ದಂಡಿನ್ ಎಂಬ ಕಡೆಯಲ್ಲಿ "ಇನ್ಹನ್ ಪೂಷಾರ್ಯಮ್ಣಾಂ ಶೌ " ಎಂಬ ಸೂತ್ರದಿಂದ ನಕಾರವು ಲೋಪವನ್ನು ಹೊಂದಿದನಂತರ "ಸೌ ಚ" ಎಂಬ ಸೂತ್ರದಿಂದ ದೀರ್ಘವು ಬರುತ್ತದೆ. ಎರಡು ಶಬ್ದಗಳಲ್ಲಿಯೂ "ನ ಲೋಪಃ ಪ್ರಾತಿಪದಿಕಾಂತಸ್ಯ " ಎಂಬ ಸೂತ್ರದಿಂದ ನಕಾರವು ಲುಪ್ತವಾದನಂತರ ದೀರ್ಘವು ಬಂದು ರಾಜಾ, ದಂಡೀ ಎಂಬ ರೂಪಗಳಾಗುತ್ತವೆ. ಹೀಗೆಯೇ ಆಯಾಯ ಉದಾಹರಣೆಗಳಲ್ಲಿ ತಿಳಿದುಕೊಳ್ಳುವುದು. (೨-೧-೯)

ಅಥಾಪಿ ವರ್ಣಲೋಪೋ ಭವತಿ ತತ್ವಾ ಯಾಮೀತಿ ॥ (೨-೧-೧೦)

ಈ ಋಕ್ಕಿನಲ್ಲಿ ಧಾತುವಿನ ಅಕ್ಷರವು ಲೋಪವನ್ನು ಹೊಂದಿರುತ್ತದೆ. "ಯಾಚಾಮಿ'' ಎಂಬುವುದಕ್ಕೆ ಬದಲಾಗಿ "ಯಾಮಿ'' ಎಂದಿರುತ್ತದೆ. ಇದನ್ನು ವೈದಿಕ ಪ್ರಕರಣವಲ್ಲಿ ವ್ಯಾಕರಣದಲ್ಲಿ ಹೇಳಿರುತ್ತದೆ. ಪರಸ್ಮೈಪದವಾಗಿ ಈ ಧಾತುವನ್ನು ಉಪಯೋಗಿಸಿದೆ. ಲೋಕ ಮತ್ತು ಕಾವ್ಯಗಳಲ್ಲಿಯೂ ಈ ಧಾತುವು ಆತ್ಮನೇ ಪದವಲ್ಲಿರತಕ್ಕದ್ದು. " ತತ್ವಾ ಯಾಮಿ ಬ್ರಹ್ಮಣಾ ವಂದಮಾನಾಃ " " ತತ್ವಾ ಯಾಮಿ ಸುವೀರ್ಯಂ " ಎಂಬ ಈ ಎರಡು ಮಂತ್ರಗಳಲ್ಲಿಯೂ "ಯಾಮಿ " ಎಂಬ ಕ್ರಿಯಾಪದವು ''ಯಾಚಾಮಿ " ಬೇಡುತ್ತೇನೆ ಎಂಬ ಅರ್ಥದಲ್ಲಿ ಉಪಯೋಗಿಸಿವೆ, ಆದರೆ ಚಕಾರವು ಮಾತ್ರ ಲೋಪವನ್ನು ಹೊಂದಿರುವುದು. ಈ ಮಂತ್ರದಿಂದ ವರುಣನನ್ನು ಶುನಶ್ಶೇಫನು ಸ್ತುತಿಸಿದ್ದಾನೆ. ಇದರಲ್ಲಿ ಧಾತುವಿನ ಅರ್ಥವು ಪ್ರಾರ್ಥನಾ ರೂಪವಾಗಿದ್ದಲ್ಲಿ ಪ್ರಕರಣವು ಸರಿಯಾಗುತ್ತದೆ. ಆದ್ದರಿಂದ ''ಯಾಚ್ ಯಾಚ್ಞ್" ಎಂಬ ಧಾತುವನ್ನು ಇಲ್ಲಿ ಪ್ರಯೋಗಮಾಡಿದೆ ಎಂದು ತಿಳಿಯಬೇಕು. (೨-೧-೧೦)

ಅಥಾಪಿ ದ್ವಿವರ್ಣಲೋಪಃ ತೃಚಇತಿ ॥ (೨-೧-೧೧)

''ತೃಚಃ'' ಎಂಬ ಕಡೆಯಲ್ಲಿ ಋ ವರ್ಣ ಮತ್ತು ರ ಎಂಬ ಅಕ್ಷರ ಎರಡೂ ಲೋಪವನ್ನು ಹೊಂದಿರುತ್ತವೆ. ''ಋಚಿ ತ್ರೇಃ ಸಂಪ್ರಸಾರಣಂ ಉತ್ತರಪದಾದಿಲೋಪಶ್ಚ ಛಂದಸಿ" ಎಂಬ ಸೂತ್ರದಿಂದ ಋಚ್ ಶಬ್ದಕ್ಕೆ ಆದಿಯಾಗಿರತಕ್ಕ ಋ ವರ್ಣವು ಲುಪ್ತವಾಗಿರುತ್ತದೆ. ಋ್ ಎಂಬ ಅಕ್ಷರದಲ್ಲಿ ಒಂದು ಭಾಗವು ರ ಎಂಬ ಅಕ್ಷರವಾಗಿರುವುದರಿಂದ ಎರಡಕ್ಷರಗಳು ಲೋಪವನ್ನು ಹೊಂದಿರುತ್ತವೆ. ಲೋಕದಲ್ಲಿ ಗರ್ಭಿಣಿಯಾದ ಹೆಂಗಸು ಮೃತಳಾದರೆ ಗರ್ಭವು ಮೃತವಾಗುವುದರಿಂದ ಎರಡು ಪ್ರಾಣಿಗಳು ಹೋಗುವುದು ಉದಾಹರಣೆಯಾಗಿದೆ. ಇದರಂತೆಯೇ ಇಲ್ಲಿಯೇ ಎರಡಕ್ಷರಗಳ ಲೋಪವನ್ನು ಊಹಿಸಬೇಕಾಗಿದೆ. (೨-೧-೧೧)

ಅಥಾಪ್ಯಾದಿ ವಿಪರ್ಯಯೋ ಭವತಿ ಜ್ಯೋತಿರ್ಘನೋ
ಬಿಂದುರ್ಬಾಟ್ಯ ಇತಿ ॥ (೨-೧-೧೨)

ಕೆಲವು ಶಬ್ದಗಳಿಗೆ ಆಯಾಯ ಧಾತುವಿನ ಮೊದಲನೆಯ ಅಕ್ಷರಕ್ಕೆ ಬದಲಾಗಿ ಬೇರೆಯ ಅಕ್ಷರವು ಬಂದು ಶಬ್ದರೂಪವು ಸಿದ್ಧವಾಗುತ್ತದೆ. ''ದ್ಯುತದೀಪ್ತೌ'' ಇಲ್ಲಿ ''ದ್ಯುತ'' ಧಾತುವಿನ ಆದಿಯಲ್ಲಿರುವ ದ ಕಾರಕ್ಕೆ ಬದಲಾಗಿ ಜ ಎಂಬ ಅಕ್ಷರವು ಬಂದು ''ಜ್ಯೋತಿಃ'' ಆಗಿದೆ.

" ಹನ ಹಿಂಸಾಗತ್ಯೋಃ '' ಹನ ಧಾತುವಿನ ಹ ಕಾರಕ್ಕೆ ಬದಲಾಗಿ ಘ ಎಂಬ ಅಕ್ಷರವು ಬಂದು ಘನ ಎಂದಾಗಿರುತ್ತದೆ.

" ಭಿದಿರ್ ವಿದಾರಣೇ '' ಈ ಧಾತುವಿನ ಭ ಕಾರಕ್ಕೆ ಬದಲಾಗಿ ಬ ಎಂಬ ಅಕ್ಷರವು ಬಂದು " ಬಿಂದುಃ '' ಎಂದಾಗಿರುತ್ತದೆ. ಇದರಂತೇ " ಭಟ ಭೃತೌ '' ಭಟ ಧಾತುವಿನ ಮೊದಲನೆಯದಾದ ಭ ಕಾರಕ್ಕೆ ಬ ಎಂಬ ಅಕ್ಷರವು ಬಂದು " ಬಾಟ್ಯಃ '' ಎಂದಾಗಿರುತ್ತದೆ. (೨-೧-೧೨)

ಅಥಾಪ್ಯಾದ್ಯಂತವಿಪರ್ಯಯೋ ಭವತಿ ಸ್ತೋಕಾ ರಜ್ಜುಃ ಸಿಕತಾ-
ಸ್ತರ್ಕ್ವಿತಿ ॥ (೨-೧-೧೩)

ಕೆಲವು ಧಾತುಗಳಿಗೆ ಮೊದಲನೆಯ ಅಕ್ಷರವೂ ಕೊನೆಯ ಅಕ್ಷರವೂ ಸಹ ಬದಲಾವಣೆಯನ್ನು ಹೊಂದಿರುತ್ತದೆ. " ಶ್ಚುತಿರ್ ಕ್ಷರಣೇ '' ಎಂಬ ಧಾತುವಿನಲ್ಲಿ ಮೊದಲನೆಯ " ಶ್ಚು ' ಎಂಬಕ್ಷರಕ್ಕೂ ಎರಡನೆಯ ತ ಎಂಬ ಅಕ್ಷರಕ್ಕೂ ಬದಲಾಗಿ ಬೇರೆಯ ಅಕ್ಷರಗಳು ಬಂದು " ಸ್ತೋಕಾಃ " ಎಂಬ ಶಬ್ದವು ಆಗಿರುತ್ತದೆ. ರಜ್ಜು ಎಂಬ ಶಬ್ದವು " ಸೃಜ ವಿಸರ್ಗೇ ಎಂಬ ಧಾತುವಿನ " ಸೃಜ " ಎಂಬ ಎರಡಕ್ಷರಗಳಿಗೆ ಬದಲಾಗಿ ಬೇರೆಯಕ್ಷರಗಳು ಬಂದಿರುವುದರಿಂದ ಈ ಶಬ್ದವು ನಿಷ್ಪನ್ನವಾಗಿವೆ.

" ಸಿಕತಾ " ಎಂಬ ಶಬ್ದವು " ಕಸ ವಿಕಸನೇ" ಎಂಬ ಧಾತುವಿನ ಎರಡಕ್ಷರಗಳು ವ್ಯತ್ಯಾಸವಾಗಿ ಇರುವುದರಿಂದ ಈ ಶಬ್ದವು ಸಿದ್ಧವಾಗಿದೆ. ಇದರಂತೆಯೇ ' ಕೃತೀ ಛೇದನೇ ' ಎಂಬ ಧಾತುವಿನಲ್ಲಿ ವರ್ಣವು ವ್ಯತ್ಯಾಸವಾಗಿ ' ತರ್ಕು ' ಎಂಬ ಶಬ್ದವು ಸಿದ್ಧವಾಗಿರುತ್ತದೆ. (೨-೧-೧೩)

**ಇತಿ ದ್ವಿತೀಯಾಧ್ಯಾಯೇ ಪ್ರಥಮಖಂಡಃ ಸಮಾಪ್ತಃ**

ಇಲ್ಲಿಗೆ ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

**ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು**

---

ಓಘೋ ಮೇಘೋ ನಾಧೋ ಗಾಧೋ ವಧೂರ್ಮಧ್ವಿತ್ಯಥಾಪಿ
ವರ್ಣೋಪಜನ ಆಸ್ಥದ್ದ್ವಾರೋ ಭರೂಜೇತಿ ತದ್ಯತ್ರ ಸ್ವರಾ-

ದನಂತರಾಂತಸ್ಥಾಂತರ್ಧಾತು ಭವತಿ ತದ್ದ್ವಿಪ್ರಕೃತೀನಾಂ ಸ್ಥಾನಮಿತಿ ಪ್ರದಿಶಂತಿ। ತತ್ರ ಸಿದ್ಧಾಯಾಮನುಪಪದ್ಯಮಾನಾಯಾಮಿತರಯೋಪಪಿಪಾದಯಿಷೇತ್ತತ್ರಾಪ್ಯೇಕೇಽಲ್ಪನಿಷ್ಪತ್ತಯೋ ಭವಂತಿ ತದ್ಯಥೈತದೂತಿರ್ಮೃದುಃ ಪೃಥುಃ ಪೃಷತಃ ಕುಣಾರುಮಿತ್ಯಥಾಪಿ ಭಾಷಿಕೇಭ್ಯೋ ಧಾತುಭ್ಯೋ ನೈಗಮಾಃ ಕೃತೋ ಭಾಷ್ಯಂತೇ। ದಮೂನಾಃ ಕ್ಷೇತ್ರಸಾಧಾ ಇತ್ಯಥಾಪಿ ನೈಗಮೇಭ್ಯೋ ಭಾಷಿಕಾ। ಉಷ್ಣಂ ಘೃತಮಿತ್ಯಥಾಪಿ ಪ್ರಕೃತಯ ಏವೈಕೇಷು ಭಾಷ್ಯಂತೇ ವಿಕೃತಯ ಏಕೇಷು। ಶವತಿರ್ಗತಿಕರ್ಮಾ। ಕಂಬೋಜೇಷ್ವೇವ ಭಾಷ್ಯತೇ ಕಂಬೋಜಾಃ ಕಂಬಲಭೋಜಾಃ ಕಮನೀಯಭೋಜಾ ವಾ ಕಂಬಲಃ ಕಮನೀಯೋ ಭವತಿ। ವಿಕಾರಮಸ್ಯಾರ್ಯೇಷು ಭಾಷಂತೇ ಶವ ಇತಿ ದಾತಿರ್ಲವನಾರ್ಥೇ ಪ್ರಾಚ್ಯೇಷು। ದಾತ್ರಮುದೀಚ್ಯೇಷ್ವೇವಮೇಕಪದಾನಿ ನಿಬ್ರೂಯಾದಥ ತದ್ಧಿತಸಮಾಸೇಷ್ವೇಕಪರ್ವಸು ಚಾನೇಕಪರ್ವಸು ಚ ಪೂರ್ವಂ ಪೂರ್ವಮಪರಮಪರಂ ಪ್ರವಿಭಜ್ಯ ನಿಬ್ರೂಯಾದ್ದಂಡ್ಯಃ ಪುರುಷೋ ದಂಡಪುರುಷೋ ದಂಡಮರ್ಹತೀತಿ ವಾ ದಂಡೇನ ಸಂಪದ್ಯತ ಇತಿ ವಾ ದಂಡೋ ದದತೇರ್ಧಾರಯತಿಕರ್ಮಣೋಽಕ್ರೂರೋ ದದತೇ ಮಣಿಮಿತ್ಯಭಿಭಾಷಂತೇ ದಮನಾದಿತ್ಯೌಪಮನ್ಯವೋ ದಂಡಮಸ್ಯಾಕರ್ಷತೇತಿ ಗರ್ಹಾಯಾಂ। ಕಕ್ಷ್ಯಾ ರಜ್ಜುರಶ್ವಸ್ಯ ಕಕ್ಷಂ ಸೇವತೇ। ಕಕ್ಷೋ ಗಾಹತೇಃ। ಕ್ಸ ಇತಿ ನಾಮಕರಣಃ। ಖ್ಯಾತೇರ್ವಾನರ್ಥಕೋಽಭ್ಯಾಸಃ। ಕಿಮಸ್ಮಿನ್ಖ್ಯಾನಮಿತಿ ಕಷತೇರ್ವಾ। ತತ್ಸಾಮಾನ್ಯಾನ್ಮನುಷ್ಯಕಕ್ಷೋ ಬಾಹುಮೂಲಸಾಮಾನ್ಯಾದಶ್ವಸ್ಯ ॥೨॥

ಅಥಾಪ್ಯಂತವ್ಯಾಪತ್ತಿರ್ಭವತಿ ಓಘೋ ಮೇಘೋ ನಾಧೋ ಗಾಧೋ ವಧೂರ್ಮಧ್ವಿತಿ

ಕೆಲವು ಶಬ್ದಗಳಿಗೆ ಕೊನೆಯ ಅಕ್ಷರವು ಬದಲಾಯಿಸಿಕೊಂಡಿರುವುದರಿಂದ ಆಯಾಯ ಶಬ್ದಗಳ ರೂಪನಿಷ್ಪತ್ತಿಯು

ಉಂಟಾಗಿರುತ್ತದೆ. ಇವಕ್ಕೆ ಉದಾಹರಣೆಗಾಗಿ 'ಓಘ' ಎಂಬಿವೇ ಮೊದಲಾದ ಆರು ಶಬ್ದಗಳಿಲ್ಲಿ ಕೊಟ್ಟಿದೆ. "ವಹಪ್ರಾಪಣೇ" 'ವಹ' ಎಂಬ ಧಾತುವಿನ ಹ ಕಾರಕ್ಕೆ ಬದಲಾಗಿ ಘ ಎಂಬಕ್ಷರವು ಬಂದು 'ಓಘ' ಎಂದಾಗಿದೆ. (ಇಲ್ಲಿ 'ವಹ' ಧಾತುವಿಗೆ ಬದಲಾಗಿ 'ಓಖ' ಎಂಬ ಧಾತುವನ್ನು ತೆಗೆದುಕೊಳ್ಳಬೇಕೆಂದು ವ್ಯಾಖ್ಯಾನದಲ್ಲಿ ಹೇಳಿದೆ.)

"ಮಿಹ ಸೇಚನೇ" "ಣಹ ಬಂಧನೇ" "ಗಾಹೂವಿಲೋಡನೇ" "ವಹ ಪ್ರಾಪಣೇ" "ಮದ ತೃಪ್ತೌ" ಎಂಬೀ ಧಾತುಗಳ ಕೊನೆಯಕ್ಷರಕ್ಕೆ ಬದಲಾಗಿ ಆಯಾಯ ವರ್ಣಗಳು ಬಂದು 'ಮೇಘ, ನಾಥ, ಗಾಧ, ವಧೂ, ಮಧು' ಎಂಬ ಶಬ್ದಗಳು ಆಗಿರುತ್ತವೆ. (೨-೨-೧)

ಅಥಾಪಿ ವರ್ಣೋಪಜನ ಆಸ್ಥತ್ ದ್ವಾರೋ ಭರೂಜೇತಿ ।

ಕೆಲವು ಶಬ್ದಗಳಲ್ಲಿ ಆಯಾಯ ಧಾತುವಿನ ವರ್ಣಗಳ ಮಧ್ಯದಲ್ಲಿ ಬೇರೆಯ ವರ್ಣಗಳು ಬಂದಿರುವುದರಿಂದ ಆಯಾಯ ಶಬ್ದಗಳು ಸಿದ್ಧವಾಗಿರುತ್ತವೆ. "ಅಸು ಕ್ಷೇಪಣೇ" ಈ 'ಅಸು' ಧಾತುವಿನ ಎರಡಕ್ಷರಗಳ ಮಧ್ಯದಲ್ಲಿ ಥ ಎಂಬಕ್ಷರವು ಬಂದು "ಆಸ್ಥತ್" ಎಂಬ ರೂಪವಾಗಿದೆ.

"ವೃಜ್ ಸಂಭಕ್ತೌ" ಈ ಧಾತುವಿನ ವಕಾರಕ್ಕೆ ಬದಲಾಗಿ ದ ಕಾರವು ಬಂದು ದ್ವಾರ ಎಂದಾಗಿದೆ. 'ಭ್ರಸ್ಜ ಪಾಕೇ' ಎಂಬ ಧಾತುವಿನ ಭ ಕಾರಕ್ಕೆ 'ಸ್ಜ' ಎಂಬ ವರ್ಣಕ್ಕೂ ಬದಲಾಗಿ ಬೇರೆ ಅಕ್ಷರಗಳು ಆದೇಶವಾಗಿ ಬಾರದಿರುವುದರಿಂದ "ಭರೂಜ" ಎಂಬ ರೂಪವು ಆಗಿರುತ್ತದೆ.

ಹೀಗೆಯೇ ವ್ಯಾಕರಣವಲ್ಲಿಯೂ ಕೂಡ ಲೋಕವ್ಯವಹಾರದಲ್ಲಿ ಪ್ರಯುಕ್ತವಾಗಿರುವ ಶಬ್ದಗಳಿಗೆ ಉಂಟಾದ ವ್ಯತ್ಯಾಸವನ್ನು ಅಲ್ಲಲ್ಲಿ ಹೇಳಿರುತ್ತದೆ. ಲಕ್ಷಣವು ಮುಖ್ಯವಾಗಿದ್ದಾಗ್ಯೂ ಅರ್ಥಕ್ಕನುಸಾರವಾಗಿ ಆಯಾಯ ಪ್ರಯೋಗಕ್ಕನುಗುಣವಾಗಿ ಶಬ್ದಗಳಲ್ಲಿರುವ ವರ್ಣಗಳ ಲೋಪವೂ, ಆಗಮವೂ, ಪರಿಣಾಮವೂ ಉಂಟಾಗಿರುತ್ತದೆ. ಹೀಗೆ ಇರುವಾಗ ವೇದದಲ್ಲಿ ಹೇಳಿರುವ ಶಬ್ದಗಳಿಗೆ ಅರ್ಥವನ್ನೇ ಮುಖ್ಯವಾಗಿ ಇರಬೇಕೆಂಬ ನಿಯಮವನ್ನು ಅಂಗೀಕರಿಸುವುದರಿಂದ ಈ ನಿರುಕ್ತದಲ್ಲಿ ಲೋಪಾಗಮವಿಪರಿಣಾಮಗಳನ್ನು ಆಯಾಯ ಉದಾಹರಣೆಗಳಲ್ಲಿ ವಿವರಿಸಿದೆ.

(1) ಆದಿ, ಮಧ್ಯ, ಅಂತ್ಯ ಇವುಗಳಲ್ಲಿ ವರ್ಣ ಲೋಪಗಳು ಬಂದಿರುವ ಶಬ್ದಗಳನ್ನು ಕೆಲವು ಉದಾಹರಣೆಗಳಲ್ಲಿ ಹಿಂದೆ ತೋರಿಸಿದೆ.

(2) ಕೆಲವು ಶಬ್ದಗಳ ಮೊದಲನೆಯವರ್ಣ, ಎರಡನೆಯವರ್ಣ, ಕೊನೆಯವರ್ಣ ಇವುಗಳಲ್ಲಿರುವ ವ್ಯತ್ಯಾಸವನ್ನು ಕೆಲವು ಉದಾಹರಣೆಗಳಲ್ಲಿ ತೋರಿಸಿದೆ.

(3) ಕೆಲವು ಶಬ್ದಗಳಲ್ಲಿ ಒಂದಕ್ಷರವು ಲೋಪವಾಗಿರುವುದು ಉದಾಹರಣೆಯಾಗಿದೆ.

(4) ಕೆಲವು ಶಬ್ದದಲ್ಲಿ ಎರಡಕ್ಷರಗಳು ಲೋಪವಾಗಿರುವ ಉದಾಹರಣೆಯನ್ನು ಕೊಟ್ಟಿದೆ.

(5) ಕೆಲವು ಶಬ್ದಗಳಲ್ಲಿ ಮೊದಲನೆಯ ಅಕ್ಷರದ ಬದಲಾವಣೆಯು ಉಕ್ತವಾಗಿದೆ.

(6) ಕೆಲವು ಶಬ್ದಗಳಲ್ಲಿ ಮೊದಲು ಮತ್ತು ಕೊನೆಯ ಅಕ್ಷರಗಳ ಬದಲಾವಣೆಯು ನಿರೂಪಿತವಾಗಿದೆ.

(7) ಕೆಲವು ಶಬ್ದಗಳಲ್ಲಿ ಮಧ್ಯದಲ್ಲಿ ಬೇರೆಯ ಅಕ್ಷರವು ಬಂದಿರುವುದೂ ಇವೇ ಮೊದಲಾದವುಗಳು ಛಂದಸ್ಸ ವೈದಿಕ ಪ್ರಯೋಗದಲ್ಲಿಯೂ ಲೋಕಪ್ರಯೋಗದಲ್ಲಿಯೂ ಸಹ ಉದಾಹರಣೆಯಾಗಿ ಊಹಿಸಿಕೊಳ್ಳತಕ್ಕದ್ದಾಗಿರುತ್ತದೆ. (೨-೨-೨)

ತದ್ಯತ್ರ ಸ್ವರಾದನಂತರ ಅಂತಸ್ಥಾಂತರ್ಧಾತು ಭವತಿ ತತ್ ದ್ವಿಪ್ರಕೃತೀ-
ನಾಂ ಸ್ಥಾನಮಿತಿ ಪ್ರದಿಶಂತಿ। (೨-೨-೩)

ಇನ್ನು ಮುಂದೆ ಧಾತುವಿನ ಯ, ರ, ಲ, ವ ಎಂಬಕ್ಷರಗಳಿಗೆ ಬದಲಾಗಿ ಇ, ಉ ಇವೇ ಮೊದಲಾದ ಮಧ್ಯಭಾಗ ದಲ್ಲಿರುವ ವರ್ಣಗಳಿಗೆ ಆದೇಶವಾಗಿ ಬರುತ್ತವೆ. ಇದನ್ನು 'ಸಂಪ್ರಸಾರಣ'ವೆಂದು ಹೇಳುತ್ತಾರೆ. ಹೀಗೆ ಸಂಪ್ರಸಾರಣವು ಬರುವುದು, ಬಾರದಿರುವುದು ಎಂದು ಎರಡು ವಿಧವಿರುವುದರಿಂದ ಈ ಧಾತುಗಳನ್ನು 'ದ್ವಿಪ್ರಕೃತಿ'ಗಳೆಂದು ಹೇಳಿದೆ. ಇವುಗಳಿಗೆ ಈ ಎರಡು ವಿಧವಾದ ಪ್ರಕೃತಿಗಳು ಎಂಬ ವಿಧವಂತೆ ಉಭಯ ಪ್ರಕೃತಿ ಎಂದೂ ಮೂರನೆಯ ವಿಧವನ್ನು ಹೇಳಿರುತ್ತದೆ. "ಯಜ ದೇವಪೂಜಾ ಸಂಗತಿ ಕರಣ ದಾನೇಷು" ಎಂಬ ಧಾತುವಿನಲ್ಲಿ ಎರಡು ವಿಧವಾದ ಶಬ್ದಪ್ರಕೃತಿಗಳೂ ಇರುತ್ತವೆ. ಸಂಪ್ರಸಾರಣ ಬಂದಾಗ ಇಷ್ಟವಾನ್, ಇಷ್ಟಿಃ, ಇಷ್ಟ್ವಾ ಎಂಬ ರೂಪಗಳು ಆಗುತ್ತವೆ. ಸಂಪ್ರಸಾರಣವು ಬರದಿದ್ದರೆ ಯಷ್ಟ್ವಾ, ಯಷ್ಟುಂ, ಯಷ್ಟವ್ಯಂ, ಎಂಬುದಾಗಿ ರೂಪಗಳಾಗುತ್ತವೆ. (೨-೨-೩)

ತತ್ರ ಸಿದ್ಧಾಯಾಮನುಪಪದ್ಯಮಾನಾಯಾಮಿತರಯೋಪಪಿಪಾದ-
ಯಿಷೇತ್ ॥

ಹೀಗೆ ಸಂಪ್ರಸಾರಣವೇ ಮೊದಲಾದ ಮೂರುವಿಧವಾದ ಬದಲಾವಣೆಯಿಂದಲೂ ಅರ್ಥಕ್ಕನುಸಾರವಾಗಿ ಶಬ್ದಗಳು ಸರಿಯಾಗದಿದ್ದಲ್ಲಿ ಬೇರೆಯ ಕ್ರಮದಿಂದಲಾದರೂ ರೂಪಸಿದ್ಧಿಯು ಸರಿಯಾಗಿ ಆಗುವಂತೆ ಊಹಿಸಿಕೊಳ್ಳಬೇಕು. ಸಂಪ್ರಸಾರಣ ವಿಲ್ಲದಿರುವುದು ಎಂಬ ಶಬ್ದಪ್ರಕೃತಿಗಳಲ್ಲಿ ಅರ್ಥವು ಸರಿಯಾಗಿ ಬರುವಂತೆ ಶಬ್ದ ಸಿದ್ಧಿಯನ್ನು ನೋಡಿಕೊಳ್ಳತಕ್ಕದ್ದು. ಒಟ್ಟಿನಲ್ಲಿ ಆಯಾಯ ಪ್ರಕರಣಗಳಿಗನುಗುಣವಾದ ಅರ್ಥವು ಬರುವಂತೆ ಶಬ್ದರೂಪಗಳ ಪ್ರಕ್ರಿಯೆಯನ್ನು ಊಹಿಸಿಕೊಳ್ಳತಕ್ಕದ್ದು.

ತತ್ರಾಪ್ಯೇಕೇ ಅಲ್ಪನಿಷ್ಪತ್ತಯೋ ಭವಂತಿ ತದ್ಯಥೈತದೂತಿರ್ಮೃದುಃ
ಪೃಥುಃ ಪೃಷತಃ ಕುಣಾರುಮಿತಿ।

ಕೆಲವು ಶಬ್ದಗಳು ಅವುಗಳ ರೂಪನಿಷ್ಪತ್ತಿಯಾಗುವಾಗ ಸಂಪ್ರಸಾರಣವು ಬಂದು ಕೊಂಚಮಟ್ಟಿನ ವ್ಯತ್ಯಾಸವನ್ನು ಹೊಂದುತ್ತವೆ. ಇವುಗಳಿಗೆ ಉದಾಹರಣೆಯಾಗಿ "ಊತಿ ಮೃದು, ಪೃಥು, ಪೃಷತ್, ಕುಣಾರು" ಎಂಬ ಶಬ್ದಗಳು ಇವೆ. 'ಅವ' ಎಂಬ ಧಾತುವಿನ ಮುಂದೆ 'ಕೃತ್' ಪ್ರತ್ಯಯವು ಬಂದಾಗ "ಜ್ವರತ್ವರ" ಎಂಬ ಸೂತ್ರದಿಂದ ಸಂಪ್ರಸಾರಣವು ಬಂದು 'ಊತಿ' ಎಂಬ ರೂಪವಾಗುತ್ತದೆ. "ಮೃದ ಮರ್ದನೇ" ಎಂಬ ಧಾತುವಿನಿಂದ ರ ಎಂಬಕ್ಷರಕ್ಕೆ ಬದಲಾಗಿ ಋ ಎಂಬ ಸ್ವರವರ್ಣವು ಬಂದು "ಮೃದು" ಎಂದಾಗಿದೆ. ಹೀಗೆಯೇ "ಪ್ರಥ ಪ್ರಖ್ಯಾನೇ" ಎಂಬ ಧಾತುವಿನಲ್ಲಿ ರ ಎಂಬಕ್ಷರಕ್ಕೆ ಬದಲಾಗಿ ಋ ಎಂಬ ಸ್ವರವರ್ಣವು ಬಂದು ಪೃಥು ಎಂಬುದಾಗಿಯೂ, 'ಪೃಷ ದಾಹೇ' ಎಂಬ ಧಾತುವಿನಿಂದ ಸಂಪ್ರಸಾರಣವು

ಬಂದಾಗ 'ಪೃಷತಃ' ಎಂಬೂ ರೂಪವು ಸಿದ್ಧವಾಗುವಂತೆ 'ಕ್ವಣಃ ಶಬ್ದಾರ್ಥಃ' ಎಂಬ ಧಾತುವಿನಿಂದ 'ಕುಣಾರು' ಎಂಬ ಶಬ್ದರೂಪವಾಗಿದೆ. (೨-೨-೫)

ಅಥಾಪಿ ಭಾಷಿಕೇಭ್ಯೋ ಧಾತುಭ್ಯೋ ನೈಗಮಾಃ ಕೃತೋ ಭಾಷ್ಯಂತೇ
ದಮೂನಾಃ ಕ್ಷೇತ್ರಸಾಧಾ ಇತಿ ॥

ಧಾತುಗಳಲ್ಲಿ ಸಂಪ್ರಸಾರ್ಯ, ಅಸಂಪ್ರಸಾರ್ಯ ಎಂಬ ಎರಡು ವಿಧಗಳನ್ನು ತಿಳಿದು ವೈದಿಕ ಶಬ್ದಗಳಲ್ಲಿರುವ ವಿಶೇಷವನು ತಿಳಿಯಬೇಕು. ಮತ್ತು ಲೋಕದಲ್ಲಿ ಪ್ರಯೋಗದಲ್ಲಿರುವ ಶಬ್ದಗಳ ರೂಪನಿಷ್ಪತ್ತಿಯನ್ನು ಪ್ರಯುಕ್ತಿಸುವಾಗ ಈ ಧಾತುಗಳಿಗೆ ವೈದಿಕ ಶಬ್ದಪ್ರಯೋಗದ ಬದಲಾವಣೆಯು ಬಂದಾಗ ಈ ಎರಡು ವಿಧವಾದ ಪ್ರಯೋಗಗಳಿಗೂ ವ್ಯತ್ಯಾಸವನ್ನು ಊಹಿಸಿ ಕೊಳ್ಳಬೇಕು. 'ಕೃತ್' ಪ್ರತ್ಯಯಗಳು ಧಾತುವಿನ ಮೇಲೆ ಬಂದಿರುವಾಗ ವೇದದಲ್ಲಿ ಉಪಯುಕ್ತವಾಗಿರುವ ಶಬ್ದಗಳು ಲೋಕ ಪ್ರಯೋಗದಲ್ಲಿರುವ ಶಬ್ದಗಳಂತೆ ಇರುವುದಿಲ್ಲ. ಇವುಗಳಿಗಿರುವ ವ್ಯತ್ಯಾಸವನ್ನು ಈ ಸೂತ್ರದಲ್ಲಿ ತೋರಿಸಿವೆ. 'ದಮುನಾಃ ಕ್ಷೇತ್ರ ಸಾಧಾಃ' ಎಂಬುದು ಒಂದು ಉದಾಹರಣೆಯು. ಇದರಲ್ಲಿ 'ದಮು ಉಪಶಮೇ' ಎಂಬ ಧಾತುವಿನ ಮೇಲೆ ಪ್ರತ್ಯಯವು ಬಂದಾಗ 'ದಾಂತಃ' ಎಂಬಿವೇ ಮೊದಲಾದ ಪ್ರಯೋಗಗಳು ಲೋಕದಲ್ಲಿ ಇರುತ್ತವೆ. ವೇದದಲ್ಲಿ ಮಾತ್ರ 'ದಮೂನಾಃ' ಎಂದು ಪ್ರಯೋಗವಿವೆ. ಆದರೆ 'ದಮೂನಾಃ ಎಂಬ ಶಬ್ದವು ವೇದಪ್ರಯೋಗದಲ್ಲಿರುವಂತೆ ಲೋಕಭಾಷೆಯಲ್ಲಿ 'ದಮುನಾ' ಎಂಬಿವೆ. ಮೊದಲಾಗಿ ಇರುತ್ತವೆ. ಹೀಗೆಯೇ 'ಸಾಧ್ಯತೇ' ಎಂಬ ಲೋಕಪ್ರಯೋಗಕ್ಕೆ ಬದಲಾಗಿ ವೇದದಲ್ಲಿ 'ಸಾಧಾ' ಎಂದಿರುತ್ತದೆ ಇವರಂತೆಯೇ ಅರ್ಥವು ಈ ಶಬ್ದಗಳಿಗೆ ಬೇರೆ ಬೇರೆಯಾಗಿರುತ್ತವೆ ಎಂಬುದನ್ನು ಆಯಾಯ ಪ್ರಕರಣಗಳಿಂದ ತಿಳಿಯಬೇಕು.

(೨-೨-೬)

ಅಥಾಪಿ ನೈಗಮೇಭ್ಯೋ ಭಾಷಿಕಾ ಉಷ್ಣಂ ಘೃತಮಿತಿ ॥

ವೇದ ಪ್ರಯೋಗದಲ್ಲಿ ಪ್ರಾಯಕವಾಗಿ ಪ್ರಸಿದ್ಧವಾಗಿರುವ ಶಬ್ದಗಳನ್ನು ಲೋಕದಲ್ಲಿ ಪ್ರಯೋಗವನ್ನು ತಿಳಿದಿರುವವರು 'ಕೃತ್' ಪ್ರತ್ಯಯ ಎಂದು ಹೇಳುತ್ತಾರೆ. 'ಉಷ ದಾಹೇ' ಎಂಬ ಧಾತುವಿನಿಂದ ಹುಟ್ಟಿದ ಶಬ್ದವು ಲೋಕದಲ್ಲಿ 'ಉಷ್ಣ' ಎಂದು ಪ್ರಸಿದ್ಧವಾಗಿದೆ. ಇದನ್ನು ವೈದಿಕದ ಪ್ರಯೋಗದಲ್ಲಿ ಸಂಪ್ರಸಾರಣದಿಂದ ಪ್ರಯೋಗಿಸಿದೆ. 'ಉಷ್ಣ' ಎಂಬುದಕ್ಕೆ ಬದಲಾಗಿ 'ಉಷ್ಟ' ಎಂದು ಹೇಳಿದೆ. ಇದನ್ನು ವೈದಿಕ ಪ್ರಯೋಗದಲ್ಲಿ ತಿಳಿಯಬೇಕು. ಹೀಗೆಯೇ 'ಘೃ ಕ್ಷರಣದೀಪ್ತ್ಯೋಃ" ಎಂಬ ಧಾತುವಿಗೆ ಅಭ್ಯಾಸವು ಬಂದಾಗ "ಜಿಘರ್ತಿ" ಎಂಬ ರೂಪವು ಆಗುವಂತೆ ಲೋಕಪ್ರಯೋಗದಲ್ಲಿಯೂ 'ಘೃತಂ" ಎಂದು ಶಬ್ದವು ಸಿದ್ಧವಾಗಿದೆ. ಹೀಗೆಯೇ ಲೋಕದಲ್ಲಿರುವ ಪ್ರಯೋಗಕ್ಕೂ ವೈದಿಕ ಪ್ರಯೋಗಕ್ಕೂ ಇರುವ ವಿಶೇಷವನ್ನು ಊಹಿಸಿ ಕೊಳ್ಳಬೇಕು. (೨-೨-೭)

ಅಥಾಪಿ ಪ್ರಕೃತಯ. ಏವೈಕೇಷು ಭಾಷ್ಯಂತೇ ವಿಕೃತಯ
ಏಕೇಷು। ಶವತಿರ್ಗತಿಕರ್ಮಾ ಕಂಬೋಜೇಷ್ವೇವ ಭಾಷ್ಯತೇ।
ಕಂಬೋಜಾಃ ಕಂಬಲಭೋಜಾಃ ಕಮನೀಯಭೋಜಾ ವಾ।
ಕಂಬಲಃ ಕಮನೀಯೋ ಭವತಿ। ವಿಕಾರಮಸ್ಯಾರ್ಯೇಷು

ಭಾಷ್ಯಂತೇ ಶವ ಇತಿ। ದಾತಿರ್ಲವನಾರ್ಥೇ ಪ್ರಾಚ್ಯೇಷು
ದಾತ್ರಮುದೀಚ್ಯೇಷು ॥

ದೇಶಭೇದದಿಂದ ಶಬ್ದಗಳ ರೂಢಿಯನ್ನು ಅನುಸರಿಸಿ ಅರ್ಥ ನಿರ್ಣಯಕ್ರಮವು ಉಕ್ತವಾಗಿದೆ.

ಕೆಲವು ದೇಶಗಳಲ್ಲಿ ಧಾತುವಿನ ಮತ್ತು ಶಬ್ದಗಳ ಪ್ರಕೃತಿಯನ್ನೇ ಪ್ರಯೋಗಮಾಡುತ್ತಾರೆ. ಕೆಲವು ದೇಶಗಳಲ್ಲಿ ಪ್ರತ್ಯಯದಿಂದ ಕೂಡಿರುವ ಧಾತುವಿಗೆ ಪ್ರತ್ಯಯವಿಲ್ಲದೇ ಇರುವ ರೂಪವು ಪ್ರಕೃತಿ ಎಂತಲೂ, ಧಾತುವಿಗೆ ಪ್ರತ್ಯಯವು ಸೇರಿದ್ದರಿಂದ ಉಂಟಾಗಿರುವ ರೂಪಕ್ಕೆ ವಿಕೃತಿ ಎಂತಲೂ ಹೆಸರು. ' ಶೋ ' ಎಂಬ ಧಾತುವು ' ಗಮನ ' ಅಂದರೆ ಹೋಗುವಿಕೆ ಎಂಬರ್ಥದಲ್ಲಿ ಪ್ರಸಿದ್ಧವಾಗಿರುವುದು. ಕಂಬೋಜ ದೇಶದಲ್ಲಿ ಮ್ಲೇಚ್ಛರು ಕ್ರಿಯಾಪದದ ಮೂಲರೂಪವಾದ ಧಾತುವನ್ನೇ ಮಾತನಾಡುವಾಗ ಉಪಯೋಗಿಸುತ್ತಾರೆ. (ಶವತಿಃ ಗಚ್ಛತಿ) ಹೋಗುತ್ತಾನೆ ಎಂದರ್ಥವು. ಈ ಉದಾಹರಣೆಯನ್ನು ಹೇಳುವ ಪ್ರಸಂಗದಿಂದ ಕಂಬೋಜ ಶಬ್ದವನ್ನು ಅವಯವಾರ್ಥ ಸಹಿತವಾಗಿ " ಕಂಬಲಭೋಜಾಃ " " ಕಂಬೋಜಾಃ " ಎಂದು ವಿವರಿಸಿದೆ. ಪ್ರಾಯಕವಾಗಿ ಆ ದೇಶವು ತುಂಬಾ ಛಳಿದೇಶವಾದದ್ದರಿಂದ ಕಂಬಳಿಯನ್ನು ಬಹಳ ಮಟ್ಟಿಗೆ ಅವರು ಉಪಯೋಗಿಸುವರು ಅಥವಾ ಆ ದೇಶವು ಬಹಳ ಐಶ್ವರ್ಯದಿಂದ ತುಂಬಿರುವ ಕಾರಣ ಅಲ್ಲಿ ವಾಸಮಾಡುವವರು ಇತರ ದೇಶಗಳಲ್ಲಿ ಇರುವವರು ಪ್ರಾರ್ಥನೆಮಾಡುವ ಪದಾರ್ಥಗಳನ್ನೇ ಬಹಳವಾಗಿ ಉಪಯೋಗಿಸುವರಾದ್ದರಿಂದ " ಕಂಬೋಜ " ಎಂದು ಹೆಸರು ಬಂದಿದೆ. " ಕಂಬಲ " ಎಂಬುವುದು ಶೀತದಿಂದ ನಡಗತಕ್ಕವರು ಬಹಳವಾಗಿ ಅಪೇಕ್ಷಿಸುವ ವಸ್ತುವಾಗಿರುತ್ತದೆ. ಇದರಿಂದಲೇ " ಕಂಬಲಃ ಕಮನೀಯೋ ಭವತಿ " ಎಂದು ಹೇಳಿರುತ್ತದೆ. ಕೆಲವು ದೇಶಗಳಲ್ಲಿ " ಶವತಿ " ಎಂಬ ಧಾತುವಿನ ಅರ್ಥವನ್ನು ವಿಕಾರವಾದ ಪದಾರ್ಥವನ್ನು ಬೋಧಿಸುವಾಗ ಉಪಯೋಗಿಸುವರು. ಜೀವವಿಲ್ಲದಿರುವ ಅಥವ ಪ್ರಾಣವಿಲ್ಲದಿರುವ ಶರೀರಕ್ಕೆ ಶವ ಎಂದು ಹೇಳುತ್ತಾರೆ. ಕೆಲವರು ಬದುಕಿರುವ ಪ್ರಾಣಿಗಳು ನಡೆಯುವಿಕೆಯನ್ನು ಹೇಳುವಾಗ ಪ್ರಕೃತಿ ಎಂತಲೂ, ಕೆಲವರು ಬದುಕಿಲ್ಲದಿರುವಾಗ ಆ ಪ್ರಾಣಿಯ ಶರೀರವನ್ನು ಬೋಧಿಸುವಾಗ ಈ ಶಬ್ದವು ವಿಕೃತಿ ಎಂತಲೂ ಹೇಳುತ್ತಾರೆ.

ಎರಡನೆಯ ಉದಾಹರಣೆಯು ದ ಎಂಬ ಧಾತುವು ಕೊಯ್ಯುವುದು ಎಂಬರ್ಥದಲ್ಲಿ ಪೂರ್ವ ದಿಕ್ಕಿನ ದೇಶಗಳಲ್ಲಿ ಉಪಯೋಗಿಸಲ್ಪಡುತ್ತದೆ. ವ್ರೀಹೀ ದಾತಿ= ಬತ್ತಗಳನ್ನು ಕೊಯ್ಯುತ್ತಾರೆ, ಯರ್ವಾ ದಾತಿ = ಗೋಧಿಗಳನ್ನು ಕೊಯ್ಯುತ್ತಾರೆ ಎಂಬ ಇವೆರಡು ಉದಾಹರಣೆಯಾಗಿರುತ್ತನೆ. ಇದು ' ದೋ ' ಎಂಬ ಧಾತುವಿನ ಪ್ರಕೃತಿಯ ಪ್ರಯೋಗಕ್ಕೆ ಉದಾಹರಣೆಯು. ಉತ್ತರ ದಿಕ್ಕಿನ ದೇಶಗಳಲ್ಲಿ ' ದಾತ್ರಂ ' ಕುಡುಗೋಲು ಎಂಬುವುದು ಉದಾರಣೆಯಾಗಿದೆ. ಈ ಉದಾಹರಣೆಯಲ್ಲಿ ಧಾತುವಿನ ಮುಂದೆ ಪ್ರತ್ಯಯವು ಸೇರಿರುವುದರಿಂದ ವಿಕೃತಿಗೆ ಉದಾಹರಣೆಯಾಗಿರುತ್ತದೆ. (೨-೨-೮)

ಏವಂ ಏಕಪದಾನಿ ನಿಬ್ರೂಯಾತ್ (೨-೨-೯)

ಹಿಂದಿನ ಸೂತ್ರದಲ್ಲಿ ಹೇಳಿರುವ ಕ್ರಮದಿಂದಲೇ ಆಯಾಯ ದೇಶಭಾಷೆಯನ್ನೂ, ವೇದ ಪ್ರಯೋಗವನ್ನು ಅನುಸರಿಸಿ ಒಂದೊಂದು ಪದಗಳು ಇರುವ ಕಡೆಯಲ್ಲಿ ಆಯಾಯ ವಿವರಣೆಯನ್ನು ಊಹಿಸಿಕೊಳ್ಳತಕ್ಕದ್ದು. (೨-೨-೯)

ಅಥ ತದ್ಧಿತ ಸಮಾಸೇಷ್ವೇಕಪರ್ವಸು ಚಾನೇಕಪರ್ವಸು ಚ ಪೂರ್ವಂ
ಪೂರ್ವಮಪರಮಪರಂ ಪ್ರವಿಭಜ್ಯ ನಿರ್ಬ್ರೂಯಾತ್ (೨-೨-೧೦)

"ತದ್ಧಿತ" ಪ್ರತ್ಯಯಗಳಿಂದ ಕೂಡಿರುವ ಪದಗಳ ವಿಷಯದಲ್ಲಿಯೂ, ಸಮಾಸವು ಇಲ್ಲದಿರುವ ಪದಗಳಲ್ಲಿಯೂ ಕೂಡ ಅರ್ಥ ವಿವರಣಾ ಕ್ರಮವನ್ನು ಹಿಂದೆಯೇ ನಿರೂಪಿಸಿದೆ. ಇನ್ನು ಮುಂದೆ ತದ್ಧಿತ ಪ್ರತ್ಯಯಗಳಿಂದ ಕೂಡಿರುವ ಶಬ್ದಾರ್ಥಗಳನ್ನು ಸಮಾಸವನ್ನು ಹೊಂದಿರುವ ಪದಗಳ ಅರ್ಥವನ್ನೂ ಸಹ ವಿವರಿಸುವ ಕ್ರಮವು ನಿರೂಪಿತವಾಗುತ್ತದೆ. ತದ್ಧಿತ ಪ್ರತ್ಯಯಗಳು ಇರುವ ಕಡೆಗಳಲ್ಲಿ ಮೊದಲು ಆ ಪ್ರತ್ಯಯಗಳು ನಾಮಪದದ ಮೇಲೆ ಬಂದಿರುವ ಅರ್ಥವಿವರಣೆಯು ವಿವೃತವಾಗುತ್ತದೆ. ಸಮಾಸದ ವಿಷಯದಲ್ಲಿಯೂ ಇದೇ ರೀತಿಯಾಗಿ ಅರ್ಥವಿವರಣೆಯನ್ನು ಇಲ್ಲಿ ಹೇಳಿದೆ. ತದ್ಧಿತ ಪ್ರತ್ಯಯಗಳುಳ್ಳ ಪದಗಳು ಒಂದು ಪದವಾಗಿಯೂ ಇರಬಹುದು, ಅನೇಕ ಪದಗಳಾಗಿಯೂ ಇರಬಹುದು. "ದಂಡ್ಯ" ಎಂಬುವುದು ಒಂದು ಪ್ರತ್ಯಯದಿಂದ ಕೂಡಿರುವ ಒಂದು ಪದವು. "ವಾರ್ಷ್ಯಾಯಣಿ" ಎಂಬುವುದು ಅನೇಕ ಪ್ರತ್ಯಯಗಳಿಂದ ಕೂಡಿರುವ ಅನೇಕ ಪದವು. ವೃಷವೆಂಬುವನ ಮಗನು ವಾರ್ಷ್ಯ ಎನ್ನಿಸಿಕೊಳ್ಳುವನು. ಈ ವಾರ್ಷ್ಯನ ಮಗನು ವಾರ್ಷ್ಯಾಯಣನೆನಿಸಿಕೊಳ್ಳುವನು. ವಾರ್ಷ್ಯಾಯಣನ ಮಗನು ವಾರ್ಷ್ಯಾಯಣಿ ಎನಿಸಿಕೊಳ್ಳುವನು. ಈ ಉದಾಹರಣೆಯಲ್ಲಿ ಅನೇಕ ಪದಗಳು ಒಟ್ಟಾಗಿ ಸೇರಿರುವುದರಿಂದ ಅನೇಕ ತದ್ಧಿತಪದವೆನಿಸಿಕೊಳ್ಳುತ್ತದೆ.

ಸಮಾಸಗಳ ವಿಷಯದಲ್ಲಿಯೂ ಒಂದೇ ಪದವುಳ್ಳ ಸಮಾಸ ವಿಷಯದಲ್ಲಿ ಹೀಗೆಯೇ ವಿವರಣೆಯನ್ನು ಹೇಳಬೇಕು "ಏಕ ಶೇಷ" ಎಂಬ ಸಮಾಸವು "ಸರೂಪಾಣಾಮೇಕಶೇಷ ಏಕವಿಭಕ್ತೌ" ವೆಂಬ ಸೂತ್ರದಿಂದ ಉಕ್ತವಾಗಿದೆ. ಪುರುಷೌ ಎಂಬ ಶಬ್ದದಲ್ಲಿ ಈ ಏಕಶೇಷ ಸಮಾಸವು ಬಂದು ಇಬ್ಬರು ಪುರುಷರು ಎಂದು ಅರ್ಥವಿವರಣೆಯಾಗುತ್ತದೆ. (ಪುರುಷಶ್ಚ + ಪುರುಷಶ್ಚ = ಪುರುಷೌ). ಇದು ಏಕಶೇಷಕ್ಕೆ ಉದಾಹರಣೆಯು. (ಪುರುಷಶ್ಚ + ಪುರುಷಶ್ಚ + ಪುರುಷಶ್ಚ = ಪುರುಷಾಃ) ಈ ಉದಾಹರಣೆಯು ಅನೇಕ ಪದ ಏಕಶೇಷವನ್ನು ತೋರಿಸತಕ್ಕದ್ದಾಗಿದೆ. ಇದರಲ್ಲಿ ಅನೇಕ ಮನುಷ್ಯರೆಂದು ಅರ್ಥವು, ತಿಳಿಯಬೇಕಾಗಿರುತ್ತದೆ.

ದ್ವಿಗು ಸಮಾಸ, ದ್ವಂದ್ವ ಸಮಾಸ, ಅವ್ಯಯೀಭಾವ ಸಮಾಸ, ಕರ್ಮಧಾರಯ ಸಮಾಸ, ಬಹುವ್ರೀಹಿ ಸಮಾಸ ತತ್ಪುರುಷ ಸಮಾಸ, ಎಂದು ಸಮಾಸಗಳು ಆರು ವಿಧಗಳಾಗಿರುತ್ತವೆ. ಇವುಗಳು ಬಹಳ ಪದಗಳಿಂದ ಕೂಡಿರುವುವು. "ಪಂಚಮೂಲೀ, ಪಂಚರಥೀ, ದಶರಥೀ" ಈ ಮೂರು ಶಬ್ದಗಳು ಸಂಖ್ಯಾವಾಚಕವಾದ ಪದಗಳನ್ನು ಮೊದಲು ಒಳಗೊಂಡಿರುವುದರಿಂದ ದ್ವಿಗು ಸಮಾಸವೆನಿಸುತ್ತವೆ. (ಪಂಚ ಮೂಲಾನಾಂ ಸಮಾಹಾರಃ ಪಂಚಮೂಲೀ). ಐದು ಮೂಲದ್ರವ್ಯಗಳ ಸಂಘವು ಪಂಚಮೂಲೀ ಎನಿಸುವುದು. ಹೀಗೆಯೇ ಐದು ರಥಗಳ ಸಮೂಹವು ಪಂಚರಥೀ ಎನಿಸುತ್ತದೆ. ಹತ್ತು ರಥಗಳ ಸಮೂಹವು ದಶರಥೀ ಎನಿಸುತ್ತದೆ. ಇದೇ ರೀತಿಯಲ್ಲಿ ದ್ವಿಗು ಸಮಾಸದ ಪದಗಳ ಅರ್ಥವಿವರಣೆಯನ್ನು ತಿಳಿಯಬೇಕು.

ಪ್ಲಕ್ಷನ್ಯಗ್ರೋಧೌ, ಅಹಿನಕುಲಂ, ಭೀಮಾರ್ಜುನವಾಸುದೇವಾಃ, ಎಂಬ ಪದಗಳು "ಚಾರ್ಥೇ ದ್ವಂದ್ವಃ" ಎಂಬ ಸೂತ್ರದಿಂದ ವಿಹಿತವಾಗಿರುವ ದ್ವಂದ್ವಸಮಾಸಕ್ಕೆ ಉದಾಹರಣೆಗಳಾಗಿರುತ್ತವೆ. ಈ ಸಮಾಸದಲ್ಲಿ ವಿಕಲ್ಪದಿಂದ ಏಕವದ್ಭಾವವು ಬಂದಿರುತ್ತದೆ. ಆಯಾಯ ಉದಾಹರಣೆಗಳಲ್ಲಿ ಬರುವುದು. "ಅಹಿನಕುಲಂ" ಎಂಬ ಉದಾಹರಣೆಯಲ್ಲಿ ಎರಡು ಪದಗಳಿದ್ದರೂ ಏಕವದ್ಭಾವವು ಬಂದಿರುತ್ತದೆ. ಒಂದಕ್ಕಿಂತ ಹೆಚ್ಚಾಗಿ ಎರಡು, ಮೂರು ಪದಗಳು ಸೇರಿ ಈ ಸಮಾಸವು ಪ್ರಾಯಕವಾಗಿ ಆಗುವುದರಿಂದಲೇ ದ್ವಂದ್ವಸಮಾಸವೆಂದು ಹೆಸರನ್ನು ಈ ಸಮಾಸಕ್ಕೆ ಹೇಳುತ್ತಾರೆ. ಭೀಮ, ಅರ್ಜುನ, ವಾಸುದೇವ ಎಂಬ ಇವು ಮೂರು ಪದಗಳೂ ಸೇರಿದ ದ್ವಂದ್ವಸಮಾಸದ ಪದಕ್ಕೆ "ಭೀಮಾರ್ಜುನವಾಸುದೇವ" ಎಂಬುದು ಉದಾಹರಣೆಯು.

ಉಪಸರ್ಗ, ಅವ್ಯಯ ಇವುಗಳು ನಾಮಪದದ ಮೊದಲಿನಲ್ಲಿ ಬಂದು ಸಮಾಸವಾದಾಗ ಅವ್ಯಯೀಭಾವವೆನಿಸುತ್ತದೆ. ಉಪಮಣಿಕಂ, ಅನುಸಮುದ್ರಂ, ವೃಕ್ಷಂ ಎಂಬವೇ ಮೊದಲಾದುವುಗಳು ಈ ವಿಧವಾದ ಸಮಾಸಪದಕ್ಕೆ ಉದಾಹರಣೆಯು.

ಕರ್ಮಧಾರಯ ಎಂಬ ಸಮಾಸವು ಒಂದೇ ವಿಭಕ್ತಿ, ಲಿಂಗ ಇವುಗಳನ್ನು ಹೊಂದಿರುವ ಎರಡು ಪದಗಳಿಗೆ ಬಂದಿರುವುದರಿಂದ "ಸಮಾನಾಧಿಕರಣ ಕರ್ಮಧಾರಯ" ಎಂದು ಹೆಸರನ್ನು ಹೊಂದಿರುತ್ತದೆ. " ಕೃಷ್ಣಮೃಗಕಿ, ರಕ್ತಾಶ್ವಕಿ, ಶ್ವೇತಪತಾಕಾ" ಈ ಮೂರು ಶಬ್ದಗಳೂ ವಿಶೇಷಗಳಾದ ಪದಗಳಿಂದ ಕೂಡಿರುವ ನಾಮಪದಗಳು ಈ ಸಮಾಸದಲ್ಲಿ ಸೇರಿ ಇರುವ ಕಾರಣ ಈ ಸಮಾಸದಲ್ಲಿ ವಿಶೇಷಣ ಪೂರ್ವಪದ ಉತ್ತರಪದ ಇತ್ಯಾದಿ ಅನೇಕ ಭೇದಗಳು ಕಂಡುಬರುತ್ತವೆ. ಈ ಸಮಾಸಗಳಲ್ಲಿ ಅನೇಕ ಪದಗಳು ಇರುವಾಗ "ಅನೇಕಪರ್ವ" ಎಂಬುದಾಗಿಯೂ, ಒಂದೇ ಪದವು ಇರುವಾಗ "ಏಕಪರ್ವ" ಎಂಬುದಾಗಿಯೂ, ವಿಭಾಗ ಮಾಡಿಕೊಂಡು ಅರ್ಥವನ್ನು ತಿಳಿಯಬೇಕು. ತದ್ಧಿತ ಪ್ರತ್ಯಯಗಳ ವಿಷಯದಲ್ಲಿಯೂ, ಈ ಸಮಾಸಗಳ ಅರ್ಥವಿವರಣೆಯ ವಿಷಯದಲ್ಲಿಯೂ, ಮೊದಲು ತದ್ಧಿತ ಪ್ರತ್ಯಯಗಳ ಅರ್ಥವನ್ನು ತಿಳಿದುಕೊಂಡನಂತರ ತದ್ಧಿತ ಪ್ರತ್ಯಯವು ಬಂದಿರುವ ಪದದ ಅರ್ಥವನ್ನು ತಿಳಿಯತಕ್ಕದ್ದು. ಸಮಸ್ತ ಪದಗಳ ವಿಷಯದಲ್ಲಿಯೂ ಮೊದಲು ಸಮಾಸದ ಅರ್ಥವನ್ನು ತಿಳಿಯಬೇಕು. ಆಮೇಲೆ ಆಯಾಯ ಅರ್ಥವನ್ನು ತಿಳಿಯಬೇಕು.

> " ದಂಡ್ಯಃ ಪುರುಷೋ " ದಣ್ಡಮರ್ಹತೀತಿ ವಾ ದಂಡೇನ ಸಂಪದ್ಯತ
> ಇತಿ ವಾ । ದಂಡೋ ದದತೇಃ ಧಾರಯತಿಕರ್ಮಣಃ " ಅಕ್ರೂರೋ
> ದದತೇ ಮಣಿಂ " ಇತ್ಯಭಿ ಭಾಷಂತೇ । ದಮನಾದಿತ್ಯೌ ಪಮನ್ಯವಃ ।
> ದಂಡಮಸ್ಯಾ ಕರ್ಷತೇತಿ ಗರ್ಹಾಯಾಂ ॥

ತದ್ಧಿತ ಪ್ರತ್ಯಯದಿಂದ ಕೂಡಿದ ಏಕಪರ್ವ ಪದದ ಉದಾಹರಣೆಯು 'ದಂಡ್ಯ' ಎಂಬ ಪದವು. 'ದಂಡ್ಯ' ಎಂಬ ಈ ಪದವು 'ದಂಡ' ಎಂಬ ಶಬ್ದದಮೇಲೆ ತದ್ಧಿತ ಪ್ರತ್ಯಯವು ಬಂದಿರುವುದಾಗಿ, ಈ ಶಬ್ದವು ದಂಡವನ್ನು ಹೊಂದಿರುವ ಮನುಷ್ಯನು ಅಥವ ಶಿಕ್ಷೆಗೆ ಅರ್ಹನಾದವನು ಎಂಬರ್ಥವನ್ನು ತಿಳಿಯಬೇಕು. ಮೊದಲು ತದ್ಧಿತ ಪ್ರತ್ಯಯಾರ್ಥವನ್ನು ತಿಳಿದುಕೊಂಡು ಅನಂತರ ಪದಾರ್ಥವನ್ನು ತಿಳಿಯಬೇಕಾಗಿರುವುದರಿಂದ 'ದಂಡಮರ್ಹತಿ ಇತಿ ದಂಡ್ಯಃ" ಎಂಬ ವಿಗ್ರಹವಾಕ್ಯವನ್ನು ತಿಳಿದುಕೊಳ್ಳಬೇಕು. ಇದರಿಂದ ಈ ಶಿಕ್ಷೆಗೆ ಅರ್ಹನಾದವನು ಯಾವುದಾದರೂ ಒಂದು ಅಪರಾಧವನ್ನು ಮಾಡಿರುವನು ಎಂಬರ್ಥವು ತಿಳಿಯತಕ್ಕದಾಗಿದೆ. ಪ್ರತ್ಯಯದ ಅರ್ಥವನ್ನು ಹಿಂದೆ ಹೇಳಿದಂತೆ ವಿವರಿಸಿ 'ದಂಡ' ಎಂಬ ಪದದ ಅರ್ಥವು "ದದ" ಧಾತುವಿನ ಮೇಲೆ ಪ್ರತ್ಯಯವು ಬಂದಿರುವುದರಿಂದ "ಧಾರ್ಯತೇ" ಎಂಬ ಅರ್ಥವನ್ನು ಕೊಡತಕ್ಕದ್ದಾಗಿದೆ ಎಂದು ವಿವರಿಸಿದೆ. "ಧಾರ್ಯತೇ ಹ್ಯೇಷೋ ಹಿ ಅಪರಾಧೇ ರಾಜಭಿಃ " ದೊರೆಗಳಿಂದ ತಪ್ಪು ಕಂಡುಬಂದಾಗ ಶಿಕ್ಷೆಯು ವಿಧಿಸಲ್ಪಡುವುದು ಎಂದು ದಂಡ ಶಬ್ದಕ್ಕೆ ವಿವರಣೆಯಾಗಿದೆ.

"ದದ" ಧಾತುವಿಗೆ ಧರಿಸುವುದು ಎಂಬರ್ಥದಲ್ಲಿ ಪ್ರಯೋಗವು ಕೆಲವು ಕಡೆಯಲ್ಲಿರುತ್ತದೆ. ವೇದದಲ್ಲಿರುವ ಪ್ರಯೋಗವು "ವಿಶ್ವೇದೇವಾಃ" ಎಂಬ ಮಂತ್ರದಲ್ಲಿ ಪ್ರಯೋಗವು ಉದಾಹರಣೆಯಾಗಿದೆ. ಲೋಕ ವ್ಯವಹಾರದಲ್ಲಿ " ಅಕ್ರೂರೋ ದದತೇ ಮಣಿಂ " ಎಂಬಲ್ಲಿ ಅಕ್ರೂರನೆಂಬುವವನು ವೃಷ್ಣಿ, ಅಂಧಕ ಇವರುಗಳಿಗೆ ಯಜಮಾನನಾಗಿ ಸ್ಯಮಂತಕ ಎಂಬ ರತ್ನವನ್ನು ಕಿರೀಟದಲ್ಲಿ ಧರಿಸಿರುತ್ತಾನೆ ಎಂದು ಇರುವ ಪ್ರಯೋಗವು ಉದಾಹರಣೆಯಾಗಿದೆ.

"ದಂಡ" ಎಂಬ ಶಬ್ದಕ್ಕೆ ಹತೋಟಿಯಲ್ಲಿಡುವುದು ಎಂಬರ್ಥವು ವ್ಯವಹಾರದಲ್ಲಿರುತ್ತದೆ ಎಂದು ಔಪಮನ್ಯಃ ಎಂಬ ಆಚಾರ್ಯನು ಹೇಳುತ್ತಾನೆ. ಇದರಿಂದ ತುಂಟನಾದವನನ್ನು ರಾಜರು ಹತೋಟಿಯಲ್ಲಿಡುತ್ತಾರೆ ಎಂದು ಲೋಕವ್ಯವಹಾರವು

ಇರುವುದರಿಂದ ತುಂಟರಾದವರನ್ನು ನಿರ್ಬಂಧದಲ್ಲಿ ಇಡಬೇಕು. ಎಂಬ ವ್ಯವಹಾರವು ಲೋಕದಲ್ಲಿರುತ್ತದೆ. ಹೀಗೆ ಇರುವ "ದಂಡ" ಎಂಬ ಶಬ್ದದ ಪ್ರಯೋಗವನ್ನು "ನಿಂದೆ" ಎಂಬರ್ಥದಲ್ಲಿ ಹೇಳಿದೆ. ಉದಾಹರಣೆಯು "ದಂಡಮಸ್ಯಾಕರ್ಷತಸಭಾಸದಃ" ಈ ಮನುಷ್ಯನಿಗೆ ಕೊಟ್ಟಿರುವ ಶಿಕ್ಷೆಯನ್ನು ಇವನಿಗೆ ಅನುಭವಿಸುವಂತೆ ಮಾಡಿರಿ ಎಂದು ಈ ವಾಕ್ಯಕ್ಕೆ ಅರ್ಥವು. ಇದರಲ್ಲಿ ದಂಡ ವೆಂಬ ಶಬ್ದವು ಈ ಆಚಾರ್ಯರ ಅಭಿಪ್ರಾಯದಂತೆ ನಿಂದೆಯ ವಿಷಯದಲ್ಲಿ ಪ್ರಯುಕ್ತವಾಗಿದೆ. ಇದು ತದ್ಧಿತಪ್ರತ್ಯಯಕ್ಕೆ ಉದಾಹರಣೆಯಾಗಿದೆ.

"ಕಕ್ಷ್ಯಾ ರಜ್ಜುರಶ್ವಸ್ಯ" । ಕಕ್ಷಂ ಸೇವತೇ । ಕಕ್ಷೋ ಗಾಹತೇಃ ಕ್ಸ ಇತಿ
ನಾಮಕರಣಃ । ಖ್ಯಾತೇರ್ವಾನರ್ಥಕೋಽಭ್ಯಾಸಃ । ಕಿಮಸ್ಮಿನ್
ಖ್ಯಾನಮಿತಿ । ಕಷತೇರ್ವಾ ॥ ತತ್ಸಾಮಾನ್ಯಾನ್ ಮನುಷ್ಯ ಕಕ್ಷೋ
ಬಾಹುಮೂಲಸಾಮಾನ್ಯಾದಶ್ವಸ್ಯ ॥

ಇಲ್ಲಿ ತದ್ಧಿತಪ್ರತ್ಯಯಗಳ ವಿಷಯದಲ್ಲಿ ಬೇರೆಯ ಉದಾಹರಣೆಯನ್ನು ಹೇಳಿದೆ. " ಕಕ್ಷ್ಯಾ" ಎಂಬ ಶಬ್ದವು ಕುದುರೆಗೆ ಕಟ್ಟುವ ಹಗ್ಗ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. " ಕಕ್ಷಂ ಸೇವತೇ " ಕಂಕುಳನ್ನು ಸಂಬಂಧಿಸಿರುತ್ತದೆ ಎಂಬುದಾಗಿಯೂ, ಕಂಕುಳಿನಲ್ಲಿ ಇರುವುದು ಎಂಬರ್ಥದಲ್ಲಿಯೂ ಕೂಡ ತದ್ಧಿತ ಪ್ರತ್ಯಯವು ಬಂದಿದೆ. "ಗಾಹೂವಿಲೋಡನೆ" ಎಂಬ ಧಾತುವಿನಿಂದ ಉಂಟಾಗಿರುವ "ಕಕ್ಷ" ಶಬ್ದವು ಲೋಕವ್ಯವಹಾರದಲ್ಲಿ ಮೊಸರು, ಇವೇ ಮೊದಲಾದವುಗಳನ್ನು ಕಡೆಯುವುದಕ್ಕೆ ಮುಖ್ಯವಾದ ಬಲವನ್ನು ಕೊಡುವ ಬಾಹುಮೂಲ ಎಂಬರ್ಥದಲ್ಲಿ ಲೋಕದಲ್ಲಿ ಪ್ರಯೋಗವಿದೆ. ಇದಕ್ಕನುಸಾರವಾದ ಕ ಮತ್ತು ಸ ಎಂಬ ವರ್ಣಗಳ ಸಂಬಂಧದಿಂದ ಕ್ಷ ಎಂಬ ವರ್ಣವಾಗಿದೆ. ಇವರಂತೆಯೇ ಆಯಾಯ ಉದಾಹರಣೆಗಳಲ್ಲಿರತಕ್ಕ ವರ್ಣ ವ್ಯತ್ಯಾಸವನ್ನು ಊಹಿಸಿಕೊಳ್ಳತಕ್ಕದ್ದು.

" ಖ್ಯಾಪ್ರಕಥನೇ " ಎಂಬ " ಖ್ಯಾ " ಧಾತುವಿನ ಮೇಲೆ ಅಭ್ಯಾಸವು ಬಂದು "ಕಖ್ಯಃ" ಎಂದಾಗಿ ಅನಂತರ "ಕಕ್ಷ" ಎಂಬ ಶಬ್ದವಾಗಿರುತ್ತದೆ. ಈ ಉದಾಹರಣೆಯಲ್ಲಿ ಮೊದಲನೆಯ 'ಕ'ಕಾರಕ್ಕೆ ಮುಚ್ಚಿಡುವುದು ಅಥವ ಗೂಢವಾಗಿರುವುದು ಎಂಬರ್ಥವಿರುವುದರಿಂದ ಇದನ್ನು ಕಕ್ಷಃ ಕಂಕುಳು ಎಂದು ಅರ್ಥವನ್ನು ಹೇಳುತ್ತಾರೆ. 'ಕಕ್ಷ' ಎಂಬ ಅವಯವವು ಶರೀರದಲ್ಲಿ ಇತರರಿಗೆ ತೋರಿಸತಕ್ಕದ್ದಲ್ಲವು ಎಂದು ಈ ವಿಧವಾದ ಪ್ರಕ್ರಿಯೆಯು ಇಲ್ಲಿ ವಿವೃತವಾಗಿದೆ.

" ಕಷತೇರ್ವಾ " "ಕಷ" ಎಂಬ ಧಾತುವಿನಿಂದ ಕಕ್ಷ ಎಂಬ ಶಬ್ದವು ಉಂಟಾಗಿರುತ್ತದೆ. ಯಾವಾಗಲೂ ಬಹಳ ಮಟ್ಟಿಗೆ ಬೆವರುವ ಸ್ವಭಾವವುಳ್ಳ ಕಾರಣ ಈ ಪ್ರದೇಶದಲ್ಲಿ ಕಡಿತವುಂಟಾಗುತ್ತದೆ. ಇದರಿಂದ ಉಗುರಿನಿಂದ ಕೆರೆಯತಕ್ಕದ್ದಾದ ಕಾರಣ ಈ ಪ್ರದೇಶಕ್ಕೆ "ಕಕ್ಷ" ಎಂದು ಹೇಳುತ್ತಾರೆ. ಹೀಗೆ ಮೂರುವಿಧವಾದ ಪ್ರತಿಕ್ರಿಯೆಗಳಿಂದ ಉಂಟಾದ ಕಕ್ಷ ಶಬ್ದವು ಸ್ತ್ರೀ ಕಕ್ಷದಲ್ಲಿಯೇ ಸಾಮಾನ್ಯವಾಗಿ ಪ್ರಯುಕ್ತವಾಗಿರುವಂತೆ ಮನುಷ್ಯ ಕಕ್ಷದಲ್ಲಿಯೂ ಪ್ರಯುಕ್ತವಾಗಿದೆ. ಇದೇ ನ್ಯಾಯವನ್ನನುಸರಿಸಿ ಕುದುರೆಯಲ್ಲಿಯೂ, ಬಾಹುಮೂಲ ಪ್ರದೇಶವನ್ನು ಕಕ್ಷ ಎಂಬ ಶಬ್ದದಿಂದ ಇಲ್ಲಿ ಹೇಳಿದೆ.

ತದ್ಧಿತಪ್ರತ್ಯಯಗಳು ಆಯಾಯ ಶಬ್ದಗಳ ಮೇಲಿರುವಾಗ ಆಯಾಯ ಅರ್ಥಗಳನ್ನು ವಿವರಿಸಬೇಕು. ಹೀಗೆ ಹೇಳುವಾಗ ಮೊದಲು ಪದಗಳಿಗೆ ಅರ್ಥವನ್ನೂ ಅನಂತರದಲ್ಲಿ ಆಯಾಯ ಪ್ರತ್ಯಯಗಳಿಗೆ ಅರ್ಥವನ್ನು ಹೇಳಬೇಕೆಂಬ ನಿಯಮವು ಇರುವುದಿಲ್ಲ.

ಸಮಾಸನಿರತಕ್ಕ ಸ್ಥಳದಲ್ಲಿಯೂ (ಪ್ರಕೃತಿ ಮತ್ತು ಪ್ರತ್ಯಯ) ಅರ್ಥ ವಿವರಣೆಯಲ್ಲಿ ಪೌರ್ವಾಪರ್ಯಭಾವವು ಇರುವುದಿಲ್ಲವೆಂದು ಕೆಲವು ಆಚಾರ್ಯರು ಹೇಳುತ್ತಾರೆ. ಮೊದಲನೆಯ ಪದಕ್ಕೆ ಅರ್ಥವನ್ನು ವಿವರಿಸುವುದು ಎಂಬ ನ್ಯಾಯವು ಚೆನ್ನಾಗಿರುತ್ತದೆ.

**ಇತಿ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ**

ಇಲ್ಲಿಗೆ ಎರಡನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾಧ್ಯಾಯೇ ತೃತೀಯ ಖಂಡಃ

**ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು**

ರಾಜ್ಞಃ ಪುರುಷೋ ರಾಜಪುರುಷೋ ರಾಜಾ ರಾಜತೇಃ ಪುರುಷಃ ಪುರಿಷಾದಃ ಪುರಿಶಯಃ ಪೂರಯತೇರ್ವಾ ಪೂರಯತ್ಯಂತರಿತ್ಯಂತರಪುರುಷಮಭಿಪ್ರೇತ್ಯ । ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಿಂಚಿತ್ । ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ ಸರ್ವಮಿತ್ಯಪಿ ನಿಗಮೋ ಭವತಿ । ವಿಶ್ವಕದ್ರಾಕರ್ಷೋ ವೀತಿ ಚಕದ್ರ ಇತಿ ಶ್ವಗತೌ ಭಾಷ್ಯತೇ ದ್ರಾತೀತಿ ಗತಿಕುತ್ಸನಾ ಕದ್ರಾತೀತಿ ದ್ರಾತಿಕುತ್ಸನಾ ಚಕದ್ರಾತಿ ಕದ್ರಾತೀತಿ ಸತೋಽನರ್ಥಕೋಽಭ್ಯಾಸಸ್ತದಸ್ಮಿನ್ನಸ್ತೀತಿವಿಶ್ವಕದ್ರಃ ಕಲ್ಯಾಣವರ್ಣರೂಪಃ ಕಲ್ಯಾಣವರ್ಣಸ್ಯೇವಾಸ್ಯರೂಪಂ ಕಲ್ಯಾಣಂ ಕಮನೀಯಂ ಭವತಿ ವರ್ಣೋ ವೃಣೋತೇರೂಪಂ ರೋಚತೇರೇವಂ ತದ್ಧಿತಸಮಾಸಾನ್ನಿರ್ಬ್ರೂಯಾನ್ನೈಕಪದಾನಿ ನಿರ್ಬ್ರೂಯಾನ್ನಾವೈಯಾಕರಣಾಯ ನಾನುಪಸನ್ನಾಯಾ ನಿದಂವಿದೇ ವಾ ನಿತ್ಯಂ ಹ್ಯವಿಜ್ಞಾತುರ್ವಿಜ್ಞಾನೇಽಸೂಯೋಪಸನ್ನಾಯ ತು ನಿರ್ಬ್ರೂಯಾದ್ಯೋವಾಲಂವಿಜ್ಞಾತುಂ ಸ್ಯಾನ್ಮೇಧಾವಿನೇ ತಪಸ್ವಿನೇ ವಾ ॥೩॥

ರಾಜ್ಞಃ ಪುರುಷೋ ರಾಜಪುರುಷಃ ರಾಜಾ ರಾಜತೇಃ । ಪುರುಷಃ ಪುರಿಷಾದಃ ಪುರಿಶಯಃ ಪೂರಯತೇರ್ವಾ ಪೂರಯತ್ಯಂತರಿತ್ಯಂತರಪುರುಷಮಭಿಪ್ರೇತ್ಯ ॥

ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನ
ಜ್ಯಾಯೋಽಸ್ತಿ ಕಿಞ್ಚಿತ್ । ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕ-
ಸ್ತೇನೇದಂ ಪೂರ್ಣಂ ಪುರುಷೇಣ ಸರ್ವಂ ಇತ್ಯಪಿ ನಿಗಮೋ ಭವತಿ ।

ಸಮಾಸಗತವಾದ ಪದಗಳ ವಿಷಯದಲ್ಲಿ ಮೊದಲು ಪದಗಳ ಅರ್ಥವನ್ನು ವಿವರಿಸಿ ಅನಂತರ ಸಮಾಸದ ಅರ್ಥವನ್ನು ವಿವರಿಸಬೇಕೆಂಬುದಕ್ಕೆ "ರಾಜ ಪುರುಷಃ" ಎಂಬುದು ಉದಾಹರಣೆಯಾಗಿದೆ. ರಾಜನಿಗೆ ಸಂಬಂಧಪಟ್ಟ ಪುರುಷನೆಂದು ಈ ಸಮಸ್ತಪದದ ಅರ್ಥವಾಗಿದೆ. ರಾಜಾ + ಪುರುಷಃ ಎರಡುಪದಗಳು ಈ ಸಮಾಸದಲ್ಲಿ ಸೇರಿವೆ. ರಾಜ್ಞಃ ಪುರುಷಃ ಎಂದು ವಿಗ್ರಹ ವಾಕ್ಯವು. ರಾಜ್ಞಃ ಎಂಬ ರೂಪವು ರಾಜನ್ ಎಂಬ ಶಬ್ದದ ಷಷ್ಠಿ ವಿಭಕ್ತಿಯಾಗಿದೆ. ಈ ಷಷ್ಠಿವಿಭಕ್ತಿಯು ಸಂಬಂಧ ಎಂಬರ್ಥದಲ್ಲಿ ಬಂದಿದೆ. ಈಸಂಬಂಧವೆಂಬುವುದು ರಾಜನೆಂಬ ಪದಾರ್ಥಕ್ಕೂ ಪುರುಷ ಪದಾರ್ಥಕ್ಕೂ ಸಹ ಸ್ವತ್ವವನ್ನು ಬೋಧಿಸುತ್ತದೆ. ಹಾಗೆಯೇ • ರಾಜ ಎಂಬ ಪದವು ಎಲ್ಲಾ ಪದಾರ್ಥಗಳಿಗೂ ಯಜಮಾನ ಅಥವಾ ಅಧಿಪತಿ ಎಂಬರ್ಥವನ್ನು ತೋರಿಸುತ್ತದೆ. ಇದರಿಂದ ರಾಜಪುರುಷನೆಂಬ ಶಬ್ದದಿಂದ ರಾಜಪುರುಷನು ಎಂಬ ಶಬ್ದವು ಯಜಮಾನನೆಂಬ ಅರ್ಥವನ್ನು ಬೋಧಿಸದೆ ಪುರುಷನ ವಿಷಯದಲ್ಲಿ ಎಂಬರ್ಥವನ್ನು ಬೋಧಿಸುತ್ತದೆ. ಅಂದರೆ ಈ ಪುರುಷನು ರಾಜನಿಗೆ ಸಂಬಂಧಪಟ್ಟವನೆಂದು ಹೇಳುತ್ತದೆ. ಇದರಂತೆಯೇ ಪುರುಷಾ ಪುರುಷಎಂಬ ಶಬ್ದವು ರಾಜನನ್ನು ಇತರ ಪದಾರ್ಥಗಳಿಂದ ಪ್ರತ್ಯೇಕಮಾಡಿ ಪುರುಷಪದದ ಅರ್ಥಕ್ಕೆಸೇರಿಸುವುದು. ಈಎರಡು ಪದದ ಅರ್ಥಗಳು ಒಂದನ್ನೊಂದು ಹೊಂದಿಕೊಂಡು ಒಟ್ಟನಲ್ಲಿ ಒಂದರ್ಥವನ್ನು ಕೊಡುತ್ತವೆ. 'ರಾಜಪುರುಷಃ ಆನೀಯತಾಂ' ಎಂದು ಹೇಳಿದರೆ ಈ ವಾಕ್ಯದ ಅರ್ಥವನ್ನು ತಿಳಿದವನು ರಾಜನನ್ನು ಕರೆತರುವುದಿಲ್ಲ. ರಾಜ ಮತ್ತು ಪುರುಷ ಇವರಿಬ್ಬರನ್ನೂ ಬೇರೆ ಬೇರೆಯಾಗಿ ಕರೆತರುವುದಿಲ್ಲ. ಆದರೆ ರಾಜಸಂಬಂಧಿಯಾದ ರಾಜನನ್ನೇ ಯಜಮಾನನೆಂದು ತಿಳಿದಿರುವ ಪುರುಷನನ್ನು ಕರೆದುಕೊಂಡು ಬರುತ್ತಾನೆ. ಸಮಾಸದ ಅರ್ಥವನ್ನು ಹೀಗೆ ವಿವರಿಸತಕ್ಕದ್ದು. ಹೀಗೆಯೇ ಆಯಾಯ ಸಮಾಸಪದಗಳಲ್ಲಿರುವ ವಿಶೇಷಣ ವಿಶೇಷ್ಯ ಭಾವವನ್ನು ವಿವರಿಸುವುದಲ್ಲದೇ ವಿಶೇಷಣ ವಿಶೇಷ್ಯ ಭಾವದಿಂದ ಉಂಟಾದ ಮುಖ್ಯಾರ್ಥವನ್ನು ವಿವರಿಸಬೇಕು.

ರಾಜಪುರುಷ ಎಂಬ ಸಮಸ್ತಪದದ ಅರ್ಥವನ್ನು ವಿವರಿಸಿದನಂತರ ಈಗ ವಿಗ್ರಹವಾಕ್ಯದಲ್ಲಿರುವ ಎರಡು ಪದಗಳಿಗೂ ಬೇರೆ ಬೇರೆಯಾಗಿ ಅರ್ಥವನ್ನು ವಿವರಿಸಲಾಗುತ್ತದೆ. "ರಾಜೃದೀಪ್ತೌ"ನೆಂಬ ಧಾತುವಿನ ಮೇಲೆ ಐದು ಜನ ಲೋಕಪಾಲಕರ ಅಂಶದಿಂದ ಈ ಲೋಕದಲ್ಲಿ ಪ್ರಕಾಶಿಸುವನು ಎಂದು ರಾಜಪುರುಷದ ಅರ್ಥವು "ರಾಜಾ ರಾಜತೀತಿ" ಎಂಬ ವಾಕ್ಯದಿಂದ ವಿವೃತವಾಗಿದೆ.

ಪೂಃ ಶರೀರವು ಅಥವಾ ಬುದ್ಧಿಯು ಎಂದು ಪೂಃ ಶಬ್ದಕ್ಕೆ ಅರ್ಥವು. ಶರೀರ ಮತ್ತು ಬುದ್ಧಿಗೆ ವಿಷಯವಾದ ಪದಾರ್ಥ ಇವುಗಳನ್ನು ಅನುಭವಿಸಲು ಆಧಾರವಾದವನು ಎಂಬರ್ಥವನ್ನು ಪುರುಷ ಶಬ್ದಕ್ಕೆ ಹೇಳಿದೆ. ಅಥವಾ ಶರೀರ ಮತ್ತು ಬುದ್ಧಿ ಇವೆರಡರಲ್ಲಿ ಬಹಳವಾದ ನಂಬಿಕೆಯನ್ನಿಟ್ಟುಕೊಂಡು ಸಂತೋಷದಿಂದಿರುವನು ಎಂಬರ್ಥವನ್ನು ಹೇಳಿದೆ. ಪೃಷಯಃ = ಪುರುಷನೆಂದು ಈ ಅರ್ಥದಲ್ಲಿ ವಿವರಣೆಯಾಗಿದೆ. ಅಥವಾ ಈ ಪ್ರಪಂಚವೆಲ್ಲವನ್ನೂ ತನ್ನ ಮಹಿಮೆಯಿಂದ ತುಂಬಿರುವವನು ಅಥವಾ ವ್ಯಾಪಿಸಿರುವವನು ಎಂಬರ್ಥವೂಕೂಡ ಪುರುಷ ಶಬ್ದಕ್ಕೆ ಹೇಳಿದೆ. ಪುರುಷ ಶಬ್ದಕ್ಕೆ "ಪೂರಯತೇ ಇದಂ ಜಗತ್" ಎಂಬ ಈ ಅರ್ಥವನ್ನು ಹೇಳುವ ಮಂತ್ರವನ್ನು "ಯಸ್ಮಾತ್ಪರಂ ನಾಪರಮಸ್ತಿ"ಎಂದು ಉದಾಹರಣೆಯಾಗಿ ಹೇಳಿದೆ.

"ವಿಶ್ವಕದ್ರಾಕರ್ಷಃ" ವೀತಿ ಚಕದ್ರ ಇತಿ ಶ್ವಗತೌ ಭಾಷ್ಯತೇ ॥
ದ್ರಾತೀತಿ ಗತಿಕುತ್ಸನಾ । ಕದ್ರಾತೀತಿ ದ್ರಾತಿಕುತ್ಸನಾ । ಚಕದ್ರಾತಿ

ಕದ್ರಾತೀತಿ ಸತೋಽನರ್ಥಕೋಽಭ್ಯಾಸಃ । ತದಸ್ಮಿನ್ನಸ್ತೀತಿ
ವಿಶ್ವಕದ್ರುಃ । (೨-೩-೨)

ವಿಶ್ವಕದ್ರುಂ ಆಕರ್ಷತಿ – ವಿಶ್ವಕದ್ರಾಕರ್ಷಃ ಎಂಬ ಪದವು ಸಮಾಸ ಪದವನ್ನು ವಿವರಿಸುವ ವಿಷಯದಲ್ಲಿ ಯರಡನೆಯ ಉದಾಹರಣೆಯಾಗಿರುವುದು. "ವಿ ಚಕದ್ರ" ಈ ಎರಡು ಶಬ್ದಗಳು ನಾಯಿಗಳ ನಡಿಗೆ ಎಂಬರ್ಥದಲ್ಲಿ ಪ್ರಸಿದ್ಧವಾಗಿದೆ. ನಾಯಿಗಳ ಜೊತೆಯಲ್ಲಿ ನಡಿಯುವವನು ವಿಶ್ವಕದ್ರನೆನಿಸುವನು. ನಾಯಿಗಳ ನಡಿಗೆ ಎಂಬುವುದರಿಂದ ನಿಂದೆಯು ತಿಳಿದು ಬರುತ್ತದೆ. ದ್ರ ಎಂಬ ಧಾತುವಿಗೆ ನಿಂದೆ ಎಂಬರ್ಥವನ್ನು ಬೋಧಿಸುವುದರಲ್ಲಿ ಪ್ರಸಿದ್ಧಿ ಇದೆ. ನಾಯಿಗಳ ಜೊತೆಯಲ್ಲಿಯೇ ನಡಿಯುವವನು ನಾಯಿಗಳಂತೆಯೇ ಪ್ರಾಣಿಗಳನ್ನು ಹಿಂಸೆಮಾಡುವನು ಎಂಬರ್ಥವು ಬರುವುದರಿಂದ ಬಹಳ ನಿಂದೆಯು ತೋರಿಬರುವುದು.

"ಕದ್ರಾತಿ" ಎಂಬ ಶಬ್ದದಿಂದಲೇ ಈ ಅರ್ಥವು ಬರುವಾಗ 'ಚ' ಎಂಬ ಅವ್ಯಯವು ಅರ್ಥವಿಲ್ಲದೇ ಇರುತ್ತದೆ. ಇವಕ್ಕೋಸ್ಕರವಾಗಿ ನಾಯಿನ ಜೊತೆಯಲ್ಲಿಯೇ ಓಡಾಡುವ ಮನುಷ್ಯನಲ್ಲಿ ನಿಂದೆ ಇರುವಿಕೆಯೂ, ಬಹಳ ನಿಂದೆಗೆ ಅಸ್ಪದ ವಾಗಿರುವ ಜೀವನವೂ, ಇವೆರಡೂ ಕಂಡುಬರುವುದರಿಂದ ವಿಶ್ವಕದ್ರ ಎಂಬ ಶಬ್ದಕ್ಕೆ ನಾಯಿಗಳಿಂದ ಜೀವಿಸುವವನು ಎಂದರ್ಥ.

ವಿಶ್ವಕದ್ರುನೆಂದರೆ ಹಿಂಸೆಮಾಡುವ ಸ್ವಭಾವವುಳ್ಳ ಪ್ರಾಣಿಯು ಎಂಬರ್ಥವು. ಈ ಪ್ರಾಣಿಯ ನಡಿಗೆಯು ಕಾಲು ಕುಂಟಾದ್ದರಿಂದ ನಿಂದಾಸ್ಪದವಾಗಿರುತ್ತದೆ. ಕುತ್ಸಿತವಾದ ಮತ್ತು ಹಿಂಸಾಕರವಾದ ಎಂಬೆರಡರ್ಥವನ್ನು "ವಿ" ಎಂಬ ಉಪ ಸರ್ಗವು ತೋರಿಸುತ್ತದೆ. ಈ ಪ್ರಾಣಿಯನ್ನು ಎಳೆದುಕೊಂಡು ಹೋಗುವವನಿಗೆ "ವಿಶ್ವಕದ್ರಾಕರ್ಷ" ಎಂದು ಹೇಳಿದೆ. ಈ ಅರ್ಥವು ಕೆಲವರ ಮತದಿಂದ ಉಕ್ತವಾಗಿರುವುದು.

ಕಲ್ಯಾಣವರ್ಣರೂಪಃ ಕಲ್ಯಾಣವರ್ಣಸ್ಯೇವಾಸ್ಯ ರೂಪಂ । ಕಲ್ಯಾಣಂ
ಕಮನೀಯಂ ಭವತಿ । ವರ್ಣೋ ವೃಣೋತೇಃ । ರೂಪಂ
ರೋಚತೇಃ । ಏವಂ ತದ್ಧಿತಸಮಾಸಾನ್ನಿರ್ಬ್ರೂಯಾತ್ ॥

ಪ್ರತ್ಯಯಾಂತವಾಗಿರುವ ಪದಗಳ ಸಮಾಸಗಳಲ್ಲಿ ಅರ್ಥ ವಿವರಣೆಯು ಈಗ ವಿವರಿಸಲಾಗಿದೆ. "ಕಲ್ಯಾಣವರ್ಣ ರೂಪಃ"ನೆಂಬ ಶಬ್ದದಿಂದ ಅಗ್ನಿಯು ಅಥವ ಕಾಂತಿಯುಳ್ಳವನಾದ ಯಾವನಾದರೂ ಒಬ್ಬನು ಎಂಬರ್ಥವು ವಿಗ್ರಹವಾಕ್ಯದಿಂದ ಹೇಳತಕ್ಕದ್ದಾಗಿದೆ. 'ಕಲ್ಯಾಣ' ಶಬ್ದಕ್ಕೆ ಸುಂದರ ಅಥವಾ ಮನೋಹರ ಎಂಬರ್ಥವು; 'ವರ್ಣ' ಎಂಬ ಶಬ್ದವು ಆಶ್ರಯ ಎಂಬರ್ಥದಲ್ಲಿದೆ. ಸುಂದರವಾದ ಮತ್ತು "ರೋಚತೇ" ಎಂಬ ಶಬ್ದದಿಂದ ಕಾಂತಿಯುಳ್ಳದ್ದಾದ ಎಂಬ ಅರ್ಥವು ಬಂದು ಸೌಂದರ್ಯಕ್ಕೆ ಆಶ್ರಯವಾದುದು ಎಂಬರ್ಥವು "ಕಲ್ಯಾಣವರ್ಣ ರೂಪಃ" ಎಂಬ ಶಬ್ದದಿಂದ ಹೇಳತಕ್ಕದ್ದಾಗಿದೆ. ಈ ಸಮಾಸದ ವಿಗ್ರಹವಾಕ್ಯದಲ್ಲಿ ರೂಪ ಎಂಬ ಶಬ್ದವು ಕಲ್ಯಾಣವರ್ಣದ ರೂಪದಂತಿರುವ ರೂಪವುಳ್ಳದ್ದು ಎಂಬುವುದಾಗಿದೆ. ಇದರಿಂದ ಈ ಪದವನ್ನು ಪ್ರತ್ಯಯಾಂತ ಸಮಸ್ತ ಪದವೆಂದು ಹೇಳುತ್ತಾರೆ. ಹೀಗೆಯೇ ತದ್ಧಿತ ಪ್ರತ್ಯಯಗಳು ಬಂದಿರುವ ಸಮಾಸ ಪದಗಳಲ್ಲಿ ಅರ್ಥವನ್ನು ವಿವರಿಸಬೇಕು.

ನೈಕಪದಾನಿ ನಿರ್ಬ್ರೂಯಾತ್ ।

ಪ್ರಕರಣವೂ ಮತ್ತು ಪ್ರತ್ಯಯಗಳೂ ಇವುಗಳು ಯಾವುವೂ ಇಲ್ಲದೆ ಪ್ರತ್ಯೇಕವಾಗಿರುವ ಒಂದು ಪದದ ಅರ್ಥವನ್ನು ವಿವರಿಸಬಾರದು. ''ಜಃ" ಎಂಬ ಪದವು ಪ್ರಕರಣಕ್ಕೂ ಸಂಬಂಧಿಸಿಲ್ಲ. ಉಪಪದದಿಂದಲೂ ಕೂಡಿಲ್ಲ. ಈ ಪದದ ಅರ್ಥವನ್ನು ತಿಳಿಯಲು ಪ್ರಶ್ನೆಮಾಡುವವನು ಸರಿಯಾದ ಅಭಿಪ್ರಾಯದವನಾಗಿ ಇರುವುದಿಲ್ಲ. ಈ ಪದವು ''ಹ"ವೆಂಬ ಧಾತುವಿನಿಂದ ಆಗಿದೆಯೋ ಅಥವ ''ಓಹಾಕ್ ತ್ಯಾಗೇ" ಎಂಬ ಧಾತುವಿನಿಂದ ಆಗಿದೆಯೋ ಎಂದು ಸಂದೇಹವಾಗುತ್ತದೆ. ಆದುದರಿಂದ ಇಂತಹ ಕಡೆಯಲ್ಲಿ ಅರ್ಥವನ್ನು ವಿವರಣೆಮಾಡುವಾಗ ಚೆನ್ನಾಗಿ ಯೋಚಿಸಿ ಹೇಳಬೇಕು.

('ಮಾ ನ ಏಕಸ್ಮಿನ್ನಾಗಸೀ') ಈ ಮಂತ್ರದಲ್ಲಿ 'ಮಾ ವಧೀಃ' ಎಂಬ ಪದವು ಕ್ರಿಯಾಪದವಾಗಿರುತ್ತದೆ. ಇದರಲ್ಲಿ 'ಮಾ'ವೆಂಬ ಉಪಪದವು ಸೇರಿರುವುದರಿಂದ ಪ್ರಕರಣಕ್ಕನುಸಾರವಾಗಿ 'ವಧೀ'ಯೆಂಬ ಪದವು ಹನ ಧಾತುವಿನಿಂದ ಆಗಿದೆಯೆಂದು ತಿಳಿಯಬೇಕು. ಹೀಗೆಯೇ ಶಬ್ದಗಳಿಗೆ ಅರ್ಥವನ್ನು ವಿವರಣೆಮಾಡಲು ತಿಳಿಯದಿರುವವರಿಗೆ ಆಯಾಯ ಪ್ರಕರಣವೂ, ಆಯಾಯ ಉಪಪದವೂ ಅರ್ಥವನ್ನು ತಿಳಿಸಲು ಸಹಾಯಕವಾಗಿರುವುದರಿಂದ ಒಂದೇ ಪದವಿರುವ ಕಡೆಯಲ್ಲಿ ಅರ್ಥವನ್ನು ಹೇಳತಕ್ಕದ್ದಲ್ಲ.

ನಾವೈಯಾಕರಣಾಯ ।

ಇನ್ನು ಮುಂದೆ ಪದಗಳ ಅರ್ಥವನ್ನು ತಿಳಿಸಲು ಅನರ್ಹರೆಂಬುದನ್ನು ಹೇಳುತ್ತಾರೆ. ವ್ಯಾಕರಣ ಶಾಸ್ತ್ರವನ್ನು ಅಭ್ಯಾಸ ಮಾಡದೇ ಇರುವವನಿಗೆ ಹಿಂದೆ ಹೇಳಿರುವ ಕ್ರಮದಿಂದ ಪದಪ್ರಕೃತಿ, ಪ್ರತ್ಯಯ, ಸಮಾಸ, ವಿಗ್ರಹವಾಕ್ಯ ಮತ್ತು ಇವುಗಳಿಂದ ಬರುವ ಅರ್ಥ ವಿವರಣೆ ಇವುಗಳನ್ನು ಹೇಳಬಾರದು. ಇವನಿಗೆ ಈ ಲಕ್ಷಣಗಳು ಯಾವುವೂ ತಿಳಿಯದ ಕಾರಣ ಇವನಿಗೆ ಹೇಳಿದರೂ ವ್ಯರ್ಥವಾಗುವುದರಿಂದ ಹೀಗೆ ಹೇಳಿದೆ. (೨-೩-೫)

ನಾನುಪಸನ್ನಾಯ ।

ವ್ಯಾಕರಣವನ್ನು ಅಭ್ಯಾಸಮಾಡಿದವನಿಗೇ ಹೇಳಬೇಕೆಂಬ ನಿಯಮವೂಕೂಡ ಸರ್ವಥಾ ಗ್ರಾಹ್ಯವಾದುದಲ್ಲವು. ವ್ಯಾಕರಣವನ್ನು ಓದಿದವನಾದರೂ ಕೂಡ ಶಿಷ್ಯನಾಗಿಲ್ಲದೇ ಇದ್ದರೆ ಅವನಿಗೂ ಹೇಳಬಾರದು. ಶಿಷ್ಯನಾಗಿ ಹೇಳಿದುದನ್ನು ತಿಳಿದುಕೊಳ್ಳತಕ್ಕವನಿಗೆ ಇವುಗಳನ್ನೆಲ್ಲವನ್ನೂ ಚೆನ್ನಾಗಿ ತಿಳಿಸಬೇಕು. (೨-೩-೬)

ಅನಿದಂವಿದೇ ವಾ ।

ವ್ಯಾಕರಣಶಾಸ್ತ್ರವನ್ನು ಅಭ್ಯಾಸಮಾಡಿದವನಾದರೂ ಈ ಶಾಸ್ತ್ರದಲ್ಲಿ ಹೇಳಿರುವ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳದಿರುವವನಿಗೆ ಹೇಳಬಾರದು. ವ್ಯಾಕರಣವನ್ನು ಓದಿದ ಮಾತ್ರಕ್ಕೆ ಅವನು ಬಹಳ ಸೂಕ್ಷ್ಮವಾದ ಅರ್ಥವನ್ನು ತಿಳಿಯಲು ತಕ್ಕ ಬುದ್ಧಿ ಇಲ್ಲದವನಾಗಿ ಇರುವ ಕಾರಣ ಇವನು ಅಯೋಗ್ಯನಾಗಿರುತ್ತಾನೆ. ಆದರೆ ವ್ಯಾಕರಣ ಶಾಸ್ತ್ರವನ್ನು ಓದದೆ ಬಹಳ ಬುದ್ಧಿಯುಳ್ಳವನಾಗಿರುವವನು ಅಂದರೆ ಆತ್ಮತತ್ವ ಸಾಕ್ಷಾತ್ಕಾರವನ್ನು ಹೊಂದಿರುವ ಯೋಗಿಗೆ ಈ ಅರ್ಥವೆಲ್ಲವನ್ನೂ ಚೆನ್ನಾಗಿ ವಿವರಿಸಿ ಹೇಳಬೇಕು. ಆತ್ಮಜ್ಞಾನದಿಂದ ಬುದ್ಧಿಯಲ್ಲಿರುವ ದೋಷಗಳೆಲ್ಲವನ್ನೂ ನಾಶಮಾಡಿಕೊಂಡಿರುವ ಯೋಗಿಯು ಪದಪದಾರ್ಥಗಳ ವಿಷಯಕವಾದ ಜ್ಞಾನದ ವಿಷಯದಲ್ಲಿ ಸೂಕ್ಷ್ಮವಾದ ಅರ್ಥವನ್ನು ಗ್ರಹಿಸಲು ಶಕ್ತನಾಗಿರುವನು. ಆದ್ದರಿಂದ ಇವನಿಗೆ ಹೇಳತಕ್ಕದ್ದು. ಯಾವುದೋ ಒಂದು ಶಾಸ್ತ್ರವನ್ನು ಹೇಳುತ್ತಾರೆ ಎಂಬುದಾಗಿ ಅಲಕ್ಷ್ಯದಿಂದ ಇರುವವನಿಗೆ ಇದನ್ನು ಹೇಳಬಾರದು. (೨-೩-೭)

ನಿತ್ಯಂ ಹ್ಯವಿಜ್ಞಾತುರ್ವಿಜ್ಞಾನೇಽಸೂಯಾ ।

ದಡ್ಡನಾಗಿರುವವನು ಹೇಳಿದ ಅರ್ಥವನ್ನು ತಿಳಿಯಲಾರನು. ಮತ್ತು ತನ್ನಲ್ಲಿರತಕ್ಕ ಬುದ್ಧಿಮಾಂದ್ಯ ದೋಷವನ್ನು ತಿಳಿದುಕೊಳ್ಳದೆ ಗುರುವಿನಲ್ಲಿ ಅಸೂಯೆಯನ್ನೂ ಪ್ರಕಟಿಸುತ್ತಾನೆ. ಗುರುವು ಸರಿಯಾಗಿ ಹೇಳಲಾರನು ಎಂಬುದಾಗಿ ಗುರುವಿಗೇ ಅಪವಾದವನ್ನು ಇವನು ತರುವ ಕಾರಣ ಇಂತಹವನಿಗೆ ಯಾವುವನ್ನೂ ಹೇಳಬಾರದು. ಇವನು ಯಾವ ಶಾಸ್ತ್ರವನ್ನೂ ಅಭ್ಯಾಸಮಾಡಿರುವುದಿಲ್ಲ. ಇವನಿಗೆ ಪಾಠವು ತಿಳಿಯಲಿಲ್ಲ ಎಂಬ ವ್ಯಸನವೂ ಇರುವುದಿಲ್ಲ. ಆದುದರಿಂದ ಇವನನ್ನು ಶಿಷ್ಯ ಎಂಬುದಾಗಿ ತಿಳಿಯಬಾರದು. ಈ ನಾಲ್ಕು ಸೂತ್ರಗಳಿಂದ ಪಾಠವನ್ನು ಹೇಳಿಕೊಡಲು ಅಯೋಗ್ಯರಾದವರನ್ನು ವಿಂಗಡಿಸಿ ಹೇಳಿದೆ. (೨-೩-೮)

ಉಪಸನ್ನಾಯ ತು ನಿರ್ಬ್ರೂಯಾತ್ ಯೋ ವಾಽಲಂ ವಿಜ್ಞಾತುಂ
ಸ್ಯಾನ್ಮೇಧಾವಿನೇ ತಪಸ್ವಿನೇ ವಾ ।

ಉಪದೇಶಕ್ಕೆ ಅರ್ಹರಾಗಿರುವವರನ್ನು ವಿವರಿಸಲಾಗಿದೆ. ಹಿಂದಿನ ಜನ್ಮದಲ್ಲಿ ಶ್ರಮಪಟ್ಟು ಬುದ್ಧಿಶಕ್ತಿಯನ್ನು ಹೊಂದಿರುವವನಿಗೂ ಇವನಂತೆಯೇ ಇಂದ್ರಿಯ ಜಯವನ್ನು ಹೊಂದಿ ತಪಸ್ಸನ್ನು ಮಾಡುವವನಿಗೂ ಕೂಡ ಬಲವಂತವಾಗಿ ಯಾದರೂ ಉಪದೇಶಮಾಡಬೇಕು. ಇವರಿಗೆ ಅಸಾಧ್ಯವಾದ ವಿಷಯವು ಯಾವುದೂ ಇರುವುದಿಲ್ಲ. ತಪಸ್ಸಿನಿಂದಲೇ ವೇದಾರ್ಥ ವನ್ನು ತಿಳಿಯುವ ಶಕ್ತಿಯುಂಟಾಗುತ್ತದೆ. ಹಿಂದಿನ ಕಾಲದಲ್ಲಿದ್ದ ಋಷಿಗಳು ಮಂತ್ರಗಳನ್ನು ತಪಸ್ಸಿನ ಸಿದ್ಧಿಯಿಂದ ಪ್ರತ್ಯಕ್ಷ ಮಾಡಿಕೊಂಡು ಪ್ರಕಟಮಾಡಿದರೆಂಬುವುದು ತಪಸ್ಸಿನಿಂದ ಉಂಟಾದ ಸಿದ್ಧಿಯನ್ನು ಹೊಂದಿರುವವರ ವಿಷಯವಾಗಿರುತ್ತದೆ. ಬುದ್ಧಿವಂತನಾಗಿರುವವನು ಗುರುವಿನಿಂದ ಉಪದಿಷ್ಟವಾದ ಸ್ವಲ್ಪಮಟ್ಟಿನ ಅಂಶವನ್ನು ತಿಳಿದುಕೊಂಡು ಅದಕ್ಕೆ ಅನುಗುಣವಾಗಿರು ವಂತೆ ಇನ್ನೂ ಇತರ ವಿಷಯಗಳನ್ನು ಊಹಿಸಬಲ್ಲನು. ಆದುದರಿಂದ ಇಂತಹವನಿಗೆ ಎಲ್ಲವನ್ನೂ ಉಪದೇಶಮಾಡಿದಲ್ಲಿ ಬಹಳ ಮಟ್ಟಿನ ಜ್ಞಾನ ಪ್ರಸಾರವು ಹೆಚ್ಚುತ್ತದೆ. ವೇದಾಂಗಗಳನ್ನು ಚೆನ್ನಾಗಿ ತಿಳಿದುಕೊಂಡು ಮನಶ್ಶುದ್ಧಿಯಿಂದಿರುವ ಬ್ರಾಹ್ಮಣನಿಗೆ ಇವೆಲ್ಲವನ್ನೂ ಚೆನ್ನಾಗಿ ತಿಳಿಯಬೇಕೆಂಬ ಇಚ್ಛೆಯಿಂದಿರುವವನಿಗೆ ತಿಳಿಸಬೇಕು. ಇವನಿಗೆ ತಿಳಿಸಿದಲ್ಲಿ ಇವನು ಬಹಳ ಮಟ್ಟಿಗೆ ಜ್ಞಾಪಕದಲ್ಲಿಟ್ಟುಕೊಂಡು ಸ್ಥಿರವಾದ ತಿಳುವಳಿಕೆಯುಳ್ಳವನಾಗಿ ವಿದ್ಯೆಯನ್ನು ಪ್ರಚಾರಕ್ಕೆ ತರುವನು.

ತಪಸ್ಸಿದ್ಧಿಯುಳ್ಳವನು ಬಹಳ ಬುದ್ಧಿವಂತನು. ಜಾಗ್ರತೆಯಾಗಿ ಕಲಿತುಕೊಳ್ಳುವವನಾದರೂ ಶಿಷ್ಯ ವೃತ್ತಿಯಿಂದ ಗುರುವಿನ ಹತ್ತಿರಕ್ಕೆ ಬರದಿದ್ದರೆ ಅಂತಹವನಿಗೆ ಉಪದೇಶಮಾಡಬಾರದು.

ಸರಿಯಾದ ರೀತಿಯಲ್ಲಿ ಗುರುವಿನ ವಿಷಯದಲ್ಲಿ ತಿಳಿದುಕೊಂಡಿಲ್ಲದೇ ಇರುವವನು ಪ್ರಶ್ನೆಯನ್ನು ಕೇಳಿ ತಿಳಿದು ಕೊಳ್ಳುವುದು ಅನ್ಯಾಯವಾಗಿಯೇ ಇರುತ್ತದೆ. ಇನ್ನು ಕೆಲವರು ಸರಿಯಾದ ರೀತಿಯಿಂದ ವಿಷಯವನ್ನು ಶಿಷ್ಯರಿಗೆ ಹೇಳುವುದೇ ಇಲ್ಲ. ಈ ಎರಡು ವಿಧವಾದ ನಡೆವಳಿಕೆಗಳಲ್ಲಿ ಗುರುಶಿಷ್ಯರ ಪೈಕಿ ಯಾವನಾದರೂ ಒಬ್ಬನು ಶತ್ರುವಾಗಿ ಪರಿಣಮಿಸುವನು ಅಥವಾ ಮರಣವನ್ನಾದರೂ ಹೊಂದುತ್ತಾನೆಂದು ಶಾಸ್ತ್ರಸಮ್ಮತಿ ಇರುವುದರಿಂದ ಹಿಂದೆ ಹೇಳಿದೆ. ಈ ವಿಷಯದಲ್ಲಿ ವೇದ ಮಂತ್ರದ ಸಮ್ಮತಿಯು ಮುಂದಿನ ಮಂತ್ರದಿಂದ ಉಕ್ತವಾಗಿದೆ. (೨-೩-೯)

**ಇತಿ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ**

**ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು**

## ಅಥ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

### ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು

ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾ ಶೇವಧಿಷ್ಟೇಽಹಮಸ್ಮಿ। ಅಸೂಯಕಾಯಾನೃಜವೇಽಯತಾಯ ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಂ। ಆತೃಣತ್ತ್ಯವಿತಥೇನ ಕರ್ಣಾವದುಃಖಂ ಕುರ್ವನ್ನಮೃತಂ ಸಂಪ್ರಯಚ್ಛನ್। ತಂ ಮನ್ಯೇತ ಪಿತರಂ ಮಾತರಂ ಚ ತಸ್ಮೈ ನ ದ್ರುಹ್ಯೇತ್ಕತಮಚ್ಚನಾಹ। ಅಧ್ಯಾಪಿತಾ ಯೇ ಗುರುಂ ನಾದ್ರಿಯಂತೇ ವಿಪ್ರಾ ವಾಚಾ ಮನಸಾ ಕರ್ಮಣಾ ವಾ। ಯಥೈವ ತೇ ನ ಗುರೋರ್ಭೋಜನೀಯಾಸ್ತಥೈವ ತಾನ್ನ ಭುನಕ್ತಿ ಶ್ರುತಂ ತತ್। ಯಮೇವ ವಿದ್ಯಾಃ ಶುಚಿಮಪ್ರಮತ್ತಂ ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ। ಯಸ್ತೇ ನ ದ್ರುಹ್ಯೇತ್ಕತಮಚ್ಚನಾಹ ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ನಿತಿ ನಿಧಿಃ ಶೇವಧಿರಿತಿ ॥೪॥

———

ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾ
ಶೇವಧಿಷ್ಟೇಽಹಮಸ್ಮಿ । ಅಸೂಯಕಾಯಾನೃಜವೇಽಯತಾಯ
ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಂ।

ವಿದ್ಯೆಯು ತನಗೆ ಮನಸ್ಸಿಗೆ ಬಂದಂತಿರುವ ಆಕಾರವನ್ನು ಹೊಂದಿ ವಿದ್ಯಾಧಿದೇವತೆ ಎನಿಸಿಕೊಂಡು ವೇದ ವೇದಾಂಗಗಳನ್ನೂ ವೇದಗಳ ಅರ್ಥವನ್ನೂ ತಿಳಿದಿರುವ ಬ್ರಾಹ್ಮಣನ ಹತ್ತಿರಕ್ಕೆ ಬಂದು ವಿನಯದಿಂದ ಹೇಳುತ್ತದೆ. "ಎಲೈ ಬ್ರಾಹ್ಮಣನೇ, ನೀನು ನನ್ನನ್ನು ರಕ್ಷಿಸು. ನಾನು ಗೂಢವಾಗಿ ಇರುವ ನಿಧಿಯಾಗಿ ನಿನಗೆ ಸುಖವನ್ನುಂಟುಮಾಡಲು ಕಾರಣವಾಗಿ ಇರುವೆನು. ನೀನು ಇನ್ನೊಬ್ಬರನ್ನು ನಿಂದೆಮಾಡುವ ಸ್ವಭಾವದವನಿಗೂ ಮನಸ್ಸು, ಮಾತು ಮತ್ತು ಶರೀರ ಈ ಮೂರರಲ್ಲಿಯೂ ಸರಿಯಾದ ನಡವಳಿಕೆ ಇಲ್ಲದವನಲ್ಲಿಯೂ ಸಹ ನನ್ನನ್ನು ಕೊಡಬೇಡ. ಅಂದರೆ ಉಪದೇಶಮಾಡಬೇಡ. ಮತ್ತು ಇಂದ್ರಿಯ ಜಯವು ಇಲ್ಲದಿರುವ ವ್ಯಭಿಚಾರಿಯಾದ ಅಥವಾ ಅಶುದ್ಧನಾದವನಿಗೆ ವಿದ್ಯಾ ಉಪದೇಶವನ್ನು ಮಾಡದಿದ್ದರೆ ನಿನ್ನಲ್ಲಿ ನಾನು ಬಹಳ ಸಾಮರ್ಥ್ಯವನ್ನು ಉಂಟುಮಾಡುವವಳಾಗಿ ಇರುವೆನು" ಎಂದು ಅರ್ಥವನ್ನು ಹೇಳುವ ಮಂತ್ರವು ಈ ವಿಷಯದಲ್ಲಿ ಉದಾಹರಣೆಯಾಗಿರುತ್ತದೆ. (೨-೪-೧)

ಯ ಆತೃಣತ್ತ್ಯವಿತಥೇನ ಕರ್ಣಾವದುಃಖಂ ಕುವನ್ನಮೃತಂ ಸಂಪ್ರಯಚ್ಛ್ । ತಂ ಮನ್ಯೇತ ಪಿತರಂ ಮಾತರಂ ಚ ತಸ್ಮೈ ನ ದ್ರುಹ್ಯೇತ್ಕತಮಚ್ಚನಾಹ ॥

ಶಿಷ್ಯನಿಗೆ ಉಪದೇಶ ಮಾಡುವ ಕ್ರಮವು ಮತ್ತು ಗುರುವಿನ ವಿಷಯದಲ್ಲಿ ಶಿಷ್ಯನು ನಡೆದುಕೊಳ್ಳಬೇಕಾದ ಕ್ರಮವೂ ಕೂಡ ಈ ಮಂತ್ರದಿಂದ ಉಕ್ತವಾಗಿವೆ. ಉಪದೇಶ ಮಾಡುವಾಗ ಶಿಷ್ಯನ ಕಿವಿಗಳಿಗೆ ಹಿತವಾಗಿರುವಂತೆ ಪಾಠಹೇಳಬೇಕು. ವೇದಪಾಠದಿಂದ ಅವನ ಮನಸ್ಸಿಗೆ ತೊಂದರೆಯುಂಟಾಗಬಾರದು. ಆ ರೀತಿಯಾಗಿ ವಿದ್ಯಾ ಉಪದೇಶವನ್ನು ಮಾಡತಕ್ಕದ್ದು. ಲೋಕದಲ್ಲಿ ವಿದ್ಯೋಪದೇಶವನ್ನು ಮಾಡುವಾಗ ಅಥವ ಕಲಿಯುವಾಗ ಕಷ್ಟವುಂಟಾಗುತ್ತದೆ. ಹೀಗಿದ್ದಾಗ್ಯೂ ವೇದ ಎಂಬುವುದು ಯಾವಾಗಲೂ ಯಜ್ಞವೇ ಮೊದಲಾದ ಕರ್ಮಗಳಲ್ಲಿ ಉಪಯುಕ್ತವಾಗಿ ಸುಖವನ್ನುಂಟುಮಾಡುವುದರಿಂದ ಅಮೃತವನ್ನುಂಟು ಮಾಡುವುದಕ್ಕೆ ಕಾರಣವಾಗುತ್ತದೆ. ಮತ್ತು ಜ್ಞಾನವನ್ನು ಹೆಚ್ಚಿಸಿ ಕೊಡುತ್ತದಾಗಿ ಉಪದೇಶಮಾಡಿದ ಗುರುವಿನ ವಿಷಯದಲ್ಲಿ ಯಾವಾಗಲೂ ಕೆಟ್ಟ ಬುದ್ಧಿಯನ್ನು ಶಿಷ್ಯನು ಯೋಚಿಸಬಾರದು. ಜನ್ಮವನ್ನು ಕೊಟ್ಟವನು ಜ್ಞಾನವನ್ನು ಉಪದೇಶಮಾಡಿವನನು ಎಂಬ ಇವರಿಬ್ಬರಲ್ಲಿ ಜನಕನಿಗಿಂತಲೂ ಜ್ಞಾನವನ್ನು ಕೊಟ್ಟ ಗುರುವು ಶ್ರೇಷ್ಠನಾಗಿರುತ್ತಾನೆ. ಇವನನ್ನೇ ತಂದೆ ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಬ್ರಾಹ್ಮಣನಾದವನಿಗೆ ಜ್ಞಾನವೆಂಬುವುದು ಇಹಪರಗಳೆರಡರಲ್ಲಿಯೂ ಸುಖ ಜನಕವಾದುದರಿಂದ ಗುರುವಿಗೆ ಪ್ರಾಶಸ್ತ್ಯವು ಈ ಮಂತ್ರದಿಂದ ಹೇಳಿದೆ. (೨-೪-೨)

ಅಧ್ಯಾಪಿತಾ ಯೇ ಗುರುಂ ನಾದ್ರಿಯಂತೇ ವಿಪ್ರಾ ವಾಚಾ ಮನಸಾ ಕರ್ಮಣಾ ವಾ ।

ಯಥೈವ ತೇ ನ ಗುರೋರ್ಭೋಜನೀಯಾಸ್ತಥೈವ ತಾನ್ನ ಭುನಕ್ತಿ ಶ್ರುತಂ ತತ್ ॥

ಗುರುವಿನಿಂದ ವೇದ ವೇದಾಂಗಗಳ ಮತ್ತು ಅವುಗಳ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡವರು ತಮಗೆ ಜ್ಞಾನವನ್ನು ಉಪದೇಶಮಾಡಿದ ಗುರುವಿನ ವಿಷಯದಲ್ಲಿ ಅನಾದರವನ್ನು ತೋರಿಸುವರೋ ಅಥವ ಗುರುವಿಗೆ ಅವಮಾನ ಮಾಡುವರೋ ಅವರ ವಿಷಯದಲ್ಲಿ ನಡೆಯಬೇಕಾದ ಶಾಸ್ತ್ರ ಸಮ್ಮತಿಯು ಇಲ್ಲಿ ಉಕ್ತವಾಗಿವೆ. ಗುರುವಿಗೆ ಅವಮಾನವನ್ನು ಮಾಡಿದವನಿಗೆ ಗುರುವು ಸುಖವನ್ನು ಉಂಟುಮಾಡದಿರುವನು. ಇದರಂತೆಯೇ ಗುರುವಿನಿಂದ ಕಲಿತುಕೊಂಡ ವಿದ್ಯೆಯೂ ಕೂಡ ಸುಖವನ್ನುಂಟು ಮಾಡುವುದಿಲ್ಲ. ಆದುದರಿಂದ ಶಿಷ್ಯನಾದವನು ಗುರುವಿನಿಂದ ವಿದ್ಯೆಯನ್ನು ಕಲಿತುಕೊಂಡನಂತರ ಗುರುವಿಗೆ ಮನಸ್ಸು, ಶರೀರ ಮತ್ತು ಕೆಲಸ ಈ ಮೂರರಿಂದಲೂ ಅವಮಾನವನ್ನು ಯಾವ ತರಹದಿಂದಲೂ ಮಾಡಬಾರದು. (೨-೪-೩)

"ಯಮೇವ ವಿದ್ಯಾಃ ಶುಚಿಮಪ್ರಮತ್ತಂ ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ । ಯಸ್ತೇ ನ ದ್ರುಹ್ಯೇತ್ ಕತಮಚ್ಚ ನಾಹ ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ನಿತಿ"॥ ನಿಧಿಃ ಶೇವಧಿರಿತಿ ॥

ವಿದ್ಯೆಯು "ಪಾಠವನ್ನು ಹೇಳಿಸಿಕೊಳ್ಳುವವನು ಚೆನ್ನಾಗಿ ತಿಳಿದುಕೊಳ್ಳುವವನಾದರೆ ಅವನಿಗೆ ಹೇಳತಕ್ಕದ್ದು. ಯಮ, ನಿಯಮ ಇವೇ ಮೊದಲಾದ ಯೋಗಾಂಗಗಳಿಂದ ಕೂಡಿದವನಿಗೂ, ಬ್ರಹ್ಮಚರ್ಯದಿಂದ ಇರುವವನಿಗೂ, ಗುರುವಿಗೆ ದ್ರೋಹ ಮಾಡದಿರುವವನಿಗೂ ಪಾಠವನ್ನು ಹೇಳಿಕೊಟ್ಟ ಜ್ಞಾನವನ್ನು ಉಪದೇಶಮಾಡು" ಎಂದು ಗುರುವಿಗೆ ಹೇಳುತ್ತದೆ. ಯಾವಾಗಲೂ ನಿಧಿಯಂತಿರುವ ನನ್ನನ್ನು ಅಂದರೆ ವಿದ್ಯೆಯನ್ನು ಸರಿಯಾದ ರೀತಿಯಿಂದ ಕಾಪಾಡುವವನಿಗೆ ಉಪದೇಶ ಮಾಡತಕ್ಕದ್ದು ಎಂದು ವಿವರಿಸಿದೆ.

'ನಿಧಿಃ' ಎಂದರೆ ಸುಖಗಳನ್ನುಂಟುಮಾಡುವ ಜ್ಞಾನವನ್ನು ಬೋಧಿಸುವುದಕ್ಕೆ 'ಶೇವಧಿ' ಎಂದು ಹೇಳಿರುತ್ತದೆ. ಲೋಕದಲ್ಲಿ ಹಣದ ಬಹಳವಾದ ರಾಶಿಯು ನಿಧಿ ಎನಿಸಿಕೊಂಡು ಸುಖಸಾಧನವೆನಿಸುವಂತೆ ಈ ವೇದಾಂಗಗಳ ಅರ್ಥ ವಿವರಣೆಯನ್ನು ತಿಳಿಯುವ ಜ್ಞಾನವು ನಿಧಿ ಅಥವ ಶೇವಧಿ ಎಂಬ ಪದಗಳಿಂದ ವ್ಯವಹರಿಸತಕ್ಕದ್ದಾಗಿದೆ.

ಇಲ್ಲಿಗೆ ವಿಶೇಷ ವ್ಯಾಖ್ಯಾನದಿಂದ ತತ್ವಾರ್ಥಗಳನ್ನು ತಿಳಿಸುವ ಸಂದಿಗ್ಧವಾದ ಉದಾಹರಣೆಗಳ ವಿಭಾಗವು ಮುಗಿದಿರುತ್ತದೆ. (೨-೪-೪)

**ಇತಿ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ**

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

**ಎರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು**

---

ಅಥಾತೋಽನುಕ್ರಮಿಷ್ಯಾಮೋ ಗೌರಿತಿ ಪೃಥಿವ್ಯಾ ನಾಮಧೇಯಂ ಯದ್ದೂರಂ ಗತಾ ಭವತಿ ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ ಗಾತೇರ್ವೌಕಾರೋ ನಾಮಕರಣೋಽಥಾಪಿ ಪಶುನಾಮೇಹ ಭವತ್ಯೇತಸ್ಮಾದೇವಾಥಾಪ್ಯಸ್ಯಾಂ ತಾದ್ಧಿತೇನ ಕೃತ್ಸ್ನವನ್ನಿಗಮಾ ಭವಂತಿ ಗೋಭಿಃ ಶ್ರೀಣೀತ ಮತ್ಸರಮಿತಿ ಪಯಸೋ ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣೋ ಮತ್ಸರ ಇತಿ ಲೋಭನಾಮಾಭಿಮತ್ತ ಏತೇನ ಧನಂ ಭವತಿ ಪಯಃ ಪಿಬತೇರ್ವಾ ಪ್ಯಾಯತೇರ್ವಾ ಕ್ಷೀರಂ ಕ್ಷರತೇರ್ಘಸೇರ್ವೇರೋ ನಾಮಕರಣ ಉಶೀರಮಿತಿ ಯಥಾಂಶುಂ ದುಹಂತೋ ಅಧ್ಯಾ-

ಸತೇ ಗವೀತ್ಯಧಿಷವಣಚರ್ಮಣೋಽಂಶುಃ ಶಮುಷ್ಟಮಾತ್ರೋ ಭವತ್ಯನನಾಯ ಶಂ ಭವತೀತಿ ವಾ ಚರ್ಮ ಚರತೇರ್ವೋಚ್ಚೃತಂ ಭವತೀತಿ ವಾಥಾಪಿ ಚರ್ಮ ಚ ಶ್ಲೇಷ್ಮಾ ಚ । ಗೋಭಿಃ ಸಂನದ್ಧೋ ಅಸಿ ವೀಳಯಸ್ವೇತಿ ರಥಸ್ತುತಾವಥಾಪಿ ಸ್ನಾವ ಚ ಶ್ಲೇಷ್ಮಾ ಚ ಗೋಭಿಃ ಸಂನದ್ಧಾ ಪತತಿ ಪ್ರಸೂತೇತೀಷುಸ್ತುತೌ ಜ್ಯಾಪಿ ಗೌರುಚ್ಯತೇ ಗವ್ಯಾ ಚೇತ್ತಾದ್ಧಿತಮಥ ಚೇನ್ನ ಗವ್ಯಾ ಗಮಯತೀಷೂನಿತಿ ॥ ೫ ॥



———

ಅಥಾಥೋಽನುಕ್ರಮಿಷ್ಯಾಮಃ ॥

ಶಿಕ್ಷೆಯೇ ಮೊದಲಾದ ವೇದಾಂಗಗಳ ಸಮೂಹವನ್ನು ಈ ಶಾಸ್ತ್ರದಲ್ಲಿ "ಸಮಾಮ್ನಾಯ" ಎಂದು ಹೇಳಿ ಈಡೆ. ಸಮಾಮ್ನಾಯಕ್ಕೆ ವ್ಯಾಖ್ಯಾನವನ್ನು ಹೇಳಬೇಕೆಂದು ಪ್ರತಿಜ್ಞೆ ಮಾಡಿದೆ. ಈ ವ್ಯಾಖ್ಯಾನವು ಸಾಮಾನ್ಯ, ವಿಶೇಷ ಎಂದು ಎರಡು ವಿಧವಾಗಿವೆ. ಇದರಲ್ಲಿ ಎಲ್ಲಾ ಶಬ್ದಗಳಿಗೂ ಇದು ಸಾಮಾನ್ಯ ಲಕ್ಷಣವು ಎಂಬುದಾಗಿಯೂ, ಇದು ಧಾತುವಿನಿಂದ ಹುಟ್ಟಿದ ಕ್ರಿಯಾಪದಗಳಿಗೆ ಸಾಮಾನ್ಯವಾದ ಲಕ್ಷಣವು ಎಂದೂ, ಇದು ಉಪಸರ್ಗಗಳಿಗೆ ಸಾಮಾನ್ಯ ಲಕ್ಷಣವೂ, ಇದು ಅವ್ಯಯಗಳಿಗೆ ಸಾಮಾನ್ಯ ಲಕ್ಷಣವು ಎಂಬುದಾಗಿ ನಾಲ್ಕು ವಿಧವಾದ ಶಬ್ದಗಳಿಗೂ ಸಾಮಾನ್ಯವಾದ ಲಕ್ಷಣ ವಿವರಣ ಪೂರ್ವಕವಾಗಿ ಎಲ್ಲಾ ಶಬ್ದಗಳ ಅರ್ಥವನ್ನೂ ವಿವರಿಸಬೇಕು. ಎಂದು ಹೇಳಿ ಸಾಮಾನ್ಯವಾದ ರೀತಿಯಿಂದ ವಿವರಣೆಯನ್ನು ಇದುವರೆವಿಗೆ ಹೇಳಿರುತ್ತದೆ. ಈ ಶಾಸ್ತ್ರವನ್ನು ಪ್ರಾರಂಭಮಾಡುವುದರಿಂದ ವೇದಾರ್ಥಗಳನ್ನು ತಿಳಿಯಬಹುದಾದ್ದು ಪ್ರಯೋಜನವನ್ನೂ ಹೇಳಿದೆ. ಅಲ್ಲಲ್ಲಿ ವ್ಯಾಕರಣ ಶಾಸ್ತ್ರಕ್ಕನುಸಾರವಾಗಿ ಶಬ್ದಗಳ ರೂಪನಿಷ್ಪತ್ತಿಯ ಪ್ರಕಾರವನ್ನು ವಿಂಗಡಿಸಿ ಇರುತ್ತದೆ. ವೇದ ಮತ್ತು ವೇದಾಂಗಗಳು ಇವುಗಳ ಸಮೂಹಗಳ ಪ್ರಯೋಜನವೂ ಉಕ್ತವಾಗಿದೆ. ನಿಘಂಟು ಎಂಬ ಪ್ರಕರಣವನ್ನು ಪ್ರತ್ಯೇಕಮಾಡಿರುವುದಕ್ಕೆ ಲಕ್ಷಣವನ್ನು ಹೇಳಿದೆ. ಮೂರು ಪ್ರಕರಣಗಳಿಂದ ನಿಘಂಟುವಿನ ಪದಗಳ ಲಕ್ಷಣವು ವಿಸ್ತಾರವಾಗಿ ಉಕ್ತವಾಗಿದೆ.

ನಿಘಂಟುವಿಗೆ ಸಂಬಂಧಪಟ್ಟ ಪ್ರತಿಯೊಂದು ಪದಕ್ಕೂ ಶಬ್ದರೂಪನಿಷ್ಪತ್ತಿ ಮತ್ತು ಅರ್ಥ ವಿವರಣಾಕ್ರಮ ಇವುಗಳ ವಿಶೇಷಾಂಶವು ಹೇಳತಕ್ಕದ್ದಾಗಿದೆ. ಇದಕ್ಕಾಗಿಯೇ 'ಅಥ, ಅಥಃ' ಎಂಬೆರಡು ಶಬ್ದಗಳನ್ನು ಹೇಳಿ ಸಾಮಾನ್ಯ ವ್ಯಾಖ್ಯಾನದನಂತರ ವಿಶೇಷ ವ್ಯಾಖ್ಯಾನವು ವಿವರಿಸಲಾಗುತ್ತದೆ ಎಂದು ಹೇಳಿದೆ. ಅಥವಾ ಸಾಮಾನ್ಯದ ರೀತಿಯಿಂದ ಶಬ್ದರೂಪ, ನಿಷ್ಪತ್ತಿಕ್ರಮ, ಅರ್ಥ ವಿವರಣೆ ಇವುಗಳನ್ನು ಹೇಳಿರುವ ಕಾರಣ ಇನ್ನು ಮುಂದೆ ಆಯಾಯ ಪದಗಳಿಗೆ ಕ್ರಮವಾಗಿ ವಿಶೇಷವಾಗಿರುವ ಪ್ರಕ್ರಿಯೆಯನ್ನು ವಿವರಿಸುವೆವು·ಎಂದು ಪ್ರತಿಜ್ಞೆ ಮಾಡಿದೆ.

ತತ್ವಭೇದ, ಪರ್ಯಾಯಭೇದ, ಸಂಖ್ಯಾ, ಸಂದಿಗ್ಧ, ಅಸಂದಿಗ್ಧವಾಗಿರುವ ಪದಗಳಿಗೆ ಅನುಗುಣವಾದ ಉದಾಹರಣೆಗಳನ್ನು ಅಲ್ಲಲ್ಲಿ ವಿಭಾಗಮಾಡಿ ತೋರಿಸಿ ಈ ನೈಘಂಟುಕ ಪ್ರಕರಣದಲ್ಲಿ ವ್ಯಾಖ್ಯಾನವು ಉಕ್ತವಾಗಿದೆ. ಈ ವಿಷಯದಲ್ಲಿ 'ಗೌಃ ಇತಿ ಪೃಥಿವ್ಯಾ ನಾಮಧೇಯಂ' ಎಂಬ ವಾಕ್ಯದಲ್ಲಿರುವ ಅರ್ಥ ವಿವರಣೆಯು ತತ್ವಭೇದವನ್ನು ತೋರಿಸುವುದು. 'ಪೃಥ್ವೀ' ಎಂಬರ್ಥದಲ್ಲಿ ಪ್ರಸಿದ್ಧವಾಗಿರುವ ಹೆಸರುಗಳನ್ನು ಹೇಳಿ ಅವುಗಳ ಅರ್ಥವನ್ನು ವಿವರಿಸುವುದಕ್ಕೆ ಪರ್ಯಾಯ ವಚನವೆಂದು ಹೇಳಿದೆ.

ಆಯಾಯ ಶಬ್ದಗಳ ರೂಪನಿಷ್ಪತ್ತಿಯಲ್ಲಿ ಹೇಳಬೇಕಾಗಿರುವ ಸಮಾಸಗಳನ್ನೂ, ವಿಗ್ರಹವಾಕ್ಯಗಳನ್ನೂ ಹೇಳಿರುವುದು ಭೇದ ಎನಿಸಿಕೊಳ್ಳುವುದು. ಇದಕ್ಕಾಗಿಯೇ 'ಯತ್ ದೂರಂ ಗತಾ ಭವತೀ' ಎಂದು 'ಗೌಃ' ಎಂಬ ಶಬ್ದಕ್ಕೆ ಅರ್ಥವು ವಿವೃತವಾಗಿದೆ. ಒಂದೇ ಅರ್ಥವನ್ನು ಕೊಡುವ ಪದಗಳಿಲ್ಲವನ್ನೂ ಹೇಳುವುದರಿಂದ ಆ ಪದಗಳ ಸಂಖ್ಯೆಯು ಹೇಳಿದ್ದಾಗಿರುತ್ತದೆ. 'ಋ' ಎಂಬ ಧಾತುವಿನಿಂದ ಹುಟ್ಟಿದ 'ನಿ' ಎಂಬ ಉಪಸರ್ಗದಿಂದ ಕೂಡಿರುವ 'ನಿಋತಿ' ಎಂಬ ಶಬ್ದವು ಕಷ್ಟವನ್ನುಂಟುಮಾಡುವುದು ಅರ್ಥವನ್ನು ಹೇಳುವ ಕಾರಣ ಇದನ್ನು 'ಪೃಥಿವೀ' ಎಂಬ ಶಬ್ದಕ್ಕೆ ಸಂಬಂಧಪಟ್ಟಿದ್ದೋ ಅಲ್ಲವೋ ಎಂಬ ಅರ್ಥದ ವಿವರಣೆಯು ನಿಶ್ಚಯ ಜ್ಞಾನವನ್ನುಂಟುಮಾಡದಿರುವುದರಿಂದ ಸಂದಿಗ್ಧವೆನಿಸುವುದು. 'ಯ ಈಂಚಕಾರ' ಎಂಬಿವೇ ಮೊದಲಾದುವುಗಳು ಸಂದಿಗ್ಧೋದಾಹರಣೆಗಳೆನಿಸುವವು. ಈ ಪದಕ್ಕೆ ಬಹಳ ಮಕ್ಕಳು ಉಳ್ಳವನು ಕಷ್ಟವನ್ನು ಅನುಭವಿಸುತ್ತಾನೆ ಎಂದು ಯತಿಗಳು ಹೇಳುತ್ತಾರೆ. ಇವೇ ಮೊದಲಾಗಿರುವ ಅರ್ಥ ವಿವರಣೆಯು ಸಂದಿಗ್ಧೋದಾಹರಣೆಗಳ ಅರ್ಥ ವಿವರಣೆಯಾಗಿರುವುದು. ಹೀಗೆ ಹೇಳಿರುವ ಕ್ರಮದಿಂದ ನಿಘಂಟು ಪದಗಳಲ್ಲಿ ಅರ್ಥವನ್ನು ನಿಶ್ಚಯಮಾಡಬೇಕೆಂಬುದು ವಿಶೇಷ ವ್ಯಾಖ್ಯಾನದ ಕ್ರಮವಾಗಿರುತ್ತದೆ. (೨-೫-೧)

## ಅಥ ನಿಘಂಟವಃ

[ಸೂಚನೆ—ನಿರುಕ್ತದಲ್ಲಿ ಗೌಃ ಮೊದಲಾದ ಕೆಲವು ಶಬ್ದಗಳ ನಿಷ್ಪತ್ತಿ ಮಾತ್ರ ಇದೆ. ಇಲ್ಲಿ ನಾವು ವ್ಯಾಕರಣ ನಿಯಮಾನುಸಾರವಾಗಿ ಪ್ರತಿಯೊಂದು ಶಬ್ದಕ್ಕೂ ವ್ಯಾಕರಣ ಸೂತ್ರಾನುಸಾರವಾಗಿ ರೂಪನಿಷ್ಪತ್ತಿಯನ್ನು ಬರೆದು, ಬಳಿಕ ಯಾಸ್ಕರು ಹೇಳಿರುವ ಅರ್ಥ ಮತ್ತು ರೂಪನಿಷ್ಪತ್ತಿಯನ್ನೂ ವಿವರಿಸಿದ್ದೇವೆ].

**ಓಂ ಗೌಃ (೧) ಗ್ಮಾ (೨) ಜ್ಮಾ (೩) ಕ್ಷ್ಮಾ (೪) ಕ್ಷಾ (೫) ಕ್ಷಮಾ**
**(೬) ಕ್ಷೋಣೀಃ (೭) ಕ್ಷಿತಿಃ (೮) ಅವನಿಃ (೯) ಉರ್ವೀ (೧೦) ಪೃಥ್ವೀ**
**(೧೧) ಮಹೀ (೧೨) ರಿಪಃ (೧೩) ಅದಿತಿಃ (೧೪) ಇಲಾ (೧೫) ನಿರ್ಋತಿಃ**
**(೧೬) ಭೂಃ (೧೭) ಭೂಮಿಃ (೧೮) ಪೂಷಾ (೧೯) ಗಾತುಃ (೨೦) ಗೋತ್ರಾ**
**(೨೧) ಇತ್ಯೇಕವಿಂಶತಿಃ ಪೃಥಿವೀನಾಮಧೇಯಾನಿ ॥೧॥**

**(೧) ಗೌಃ । ಗಮ್ಲೃ-ಗತೌ (ಭೂ-ಪ) ಅಸ್ಮಾತ್ 'ಗಮೇರ್ಡೋಸ್' (ಉ. ೨-೬೩)-ಇತಿ ಕರ್ತರಿ ಕಾರಕೇ ಅಧಿಕರಣೇ ವಾ ಡೋಃ ಪ್ರತ್ಯಯಃ ॥**

ಗಮ್ಲೃ ಧಾತು. ಇದರಲ್ಲಿ ಲೃಕಾರ ಇತ್ತಾಗಿ ಗಮ್ ಉಳಿಯುತ್ತದೆ. ಗಮನಾರ್ಥ ಭೂವಾದಿಗಣವಲ್ಲಿ ಪರಸ್ಮೈಪದಿಯಾಗಿ ಪಠಿತವಾಗಿದೆ. ಕರ್ತ್ರರ್ಥದಲ್ಲಿ ಅಥವಾ ಅಧಿಕರಣಾರ್ಥದಲ್ಲಿ "ಗಮೇರ್ಡೋಸ್" ಎಂಬ ಉಣಾದಿ ಸೂತ್ರದಿಂದ ಇದಕ್ಕೆ ಡೋಸ್ ಪ್ರತ್ಯಯ ಅಥವಾ ಸ್ತುತ್ಯರ್ಥವನ್ನು ಕೊಡುವ ಗಾ ಧಾತುವಿಗೆ ಬಹುಲಗ್ರಹಣದಿಂದ ಕರ್ಮಾರ್ಥವಲ್ಲಿ ಅಥವಾ ಅಧಿಕರಣಾರ್ಥವಲ್ಲಿ ಡೋಸ್ ಪ್ರತ್ಯಯ. ಡೋಸ್ ಪ್ರತ್ಯಯದಲ್ಲಿ ಡಕಾರ ಇತ್ಸಂಜ್ಞೆಯಿಂದ ಲೋಪವಾಗಿ ಓಸ್ ಉಳಿಯುತ್ತದೆ. ಗಮ್+ಓಸ್ (ಗಾ+ಓಸ್) ಎಂದಿರುವಾಗ ಡಿತ್ತಾದುದರಿಂದ ಧಾತುವಿನ (ಅಮ್) ಲೋಪ ಬರುತ್ತದೆ. ಸಕಾರ "ಹಲಂತ್ಯಮ್" ಸೂತ್ರದಿಂದ ಇತ್ಸಂಜ್ಞೆ ಹೊಂದಿ ಲೋಪವಾದರೆ, 'ಗೋ' ಎಂದು ಓಕಾರಾಂತ ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾವಿಭಕ್ತಿ ಸು ಪರವಾದಾಗ "ಗೋತೋಣಿತ್" (ಪಾ. ಸೂ. ೭-೧-೯೦) ಸೂತ್ರದಿಂದ ಣಿದ್ವದ್ಭಾವ ಬರುವುದರಿಂದ "ಅಚೋಞ್ಣಿತಿ" ಸೂತ್ರದಿಂದ ವೃದ್ಧಿ ಬರುತ್ತದೆ. ಗೌ+ಸ್. ರುತ್ವ, ವಿಸರ್ಗ ಗೌಃ. ಕರ್ತ್ರರ್ಥದಲ್ಲಿ ಪ್ರತ್ಯಯ ಬಂದಿದೆ ಎಂದು ಅಂಗೀಕರಿಸಿದಾಗ ಹೀಗೆ ಅರ್ಥವಾಗುತ್ತದೆ. "ದೂರಂ ಗತಾ ಇತಿ ಗೌಃ" ಬಹುದೂರ ಹೋಗುತ್ತದೆ. ಯದ್ಯಪಿ ಭೂಮಿ ಹೋಗುವುದಿಲ್ಲ. ಅದರೂ ಆಕಾಶಾದಿಗಳಂತೆ ನಾವು ಎಷ್ಟುದೂರ ಹೋದರೂ ಇದು ಸಿಗುತ್ತದೆ. ಲಕ್ಷಣೆಯಿಂದ ನಮ್ಮ

ಗಮನವನ್ನು ಇದು ಹೊಂದಿದೆಯೆಂದರ್ಥ. ಪಾರವಿಲ್ಲದಿರುವುದು ಭೂಮಿ. ಅಧಿಕರಣಾರ್ಥದಲ್ಲಿ ಪ್ರತ್ಯಯ ಬಂದಿದೆಯೆಂದು ಅಂಗೀಕರಿಸಿದರೆ ಆಗ **" ಅಸ್ಯಾಂ ಭೂತಾನಿ ಗಚ್ಛಂತಿ ಇತಿ ಗೌಃ "** ಎಂದು ವ್ಯುತ್ಪತ್ತಿ. ಇದರಲ್ಲಿ (ಮೇಲೆ) ಪ್ರಾಣಿಗಳು ನಡೆಯುವುದರಿಂದ ಗೌಃ ಎಂಬ ಹೆಸರು ಬಂದಿದೆ. ಗಾ ಧಾತುವಿಗೆ ಕರ್ಮಣಿಯಲ್ಲಿ ಡೋಸ್ ಪ್ರತ್ಯಯ ಬಂದಿದೆ ಎಂದರೆ ಆಗ ಹೀಗೆ ಅರ್ಥವಾಗುತ್ತದೆ. **' ಗೀಯತೇಽಸೌ ಗೌಃ '** ಸ್ತುತಿಸಲ್ಪಡುವುದು ಎಂದರ್ಥ. ಈ ಧಾತುವಿಗೇ ಅಧಿಕರಣಾರ್ಥದಲ್ಲಿ ಪ್ರತ್ಯಯ ಹೇಳಿದರೆ **" ಗಾಯಂತಿ ಅಸ್ಯಾಂ ಸ್ಥಿತಾಃ ಇತಿ ಗೌಃ "** ಇದರ ಮೇಲೆ ಇದ್ದು ಸ್ತೋತ್ರಮಾಡುತ್ತಾರೆ ಎಂದರ್ಥವಾಗುತ್ತದೆ. ಮಂತ್ರವಾಕ್ಯಾರ್ಥದಿಂದ ಈ ಅರ್ಥಗಳು ನಿಶ್ಚಿತವಾಗುತ್ತವೆ. **' ಗೋಷದಸಿ '** ಈ ಮಂತ್ರಕ್ಕೆ ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ. ಗಾರ್ಹಪತ್ಯಾಗ್ನಿಗೆ ಭೂಮಿಯೇ ಆಶ್ರಯವಾದುದರಿಂದ ಅಧಿಕರಣಾರ್ಥದಲ್ಲಿ ಪ್ರತ್ಯಯ ಹೇಳಿರುವುದು ಸಮಂಜಸವಾಗಿದೆ. ಹೀಗೆಯೇ ಇತರ ಶಬ್ದಗಳಿಗೂ ಆಯಾಯ ಮಂತ್ರವಾಕ್ಯಾರ್ಥದಿಂದ ಅರ್ಥ ನಿಶ್ಚಯ ಮಾಡಬೇಕು, ಈ ಶಬ್ದದ ವಿಷಯದಲ್ಲಿ ಮಂತ್ರವಾಕ್ಯಗಳು.

**ವ್ರಜಂ ಗಚ್ಛ ಗೋಷ್ಠಾನವ್** (ಯ. ವಾ. ಸ. ೧–೨೫–೨೬)—**ಗೌರ್ಜಗಾರ ಯದ್ಧ ಪೃಚ್ಛಾನ್** (ಋ. ಸ. ೧೦–೩೧–೧೦) **ಅಭೀವತ್ ಪೂರ್ವಾಗ್ಯ ಭೂಮನಾ ಗೌಃ** ' (ಋ. ಸಂ. ೧೦–೩೧–೬)

(೨) ಗ್ಮಾ । **ಗಮೇಃ ಪೂರ್ವಸ್ಮಿನ್ನೇವ ಕಾರಕದ್ವಯೇ "ಕನಿನ್ಯುವೃಷಿತಕ್ಷಿ-"** (ಉ-೧-೧೫೪) **ಇತ್ಯಾದಿನಾ ವಿಹಿತಃ ಕನಿನ್‌ಪ್ರತ್ಯಯೋ ಬಾಹುಲಕಾತ್ ಭವತಿ** ಹಿಂದೆ ಹೇಳಿದ ಗಮ್ ಧಾತುವಿಗೆ ಕರ್ತ್ರರ್ಥದಲ್ಲಿ ಅಥವಾ ಅಧಿಕರಣಾರ್ಥದಲ್ಲಿ ' ಕನನ್ಯ—' ಎಂಬ ಉಣಾದಿ ಸೂತ್ರದಿಂದ ಕನಿನ್ ಪ್ರತ್ಯಯ. ಆ ಸೂತ್ರದಲ್ಲಿ ಪ್ರತ್ಯಯವನ್ನು ಬೇರೆ ಅರ್ಥದಲ್ಲಿ ಹೇಳಿದ್ದರೂ ' ಉಣಾದಯೋ ಬಹುಲಮ್ ' ಎಂದು ಪಾಣಿನಿಯು ಹೇಳಿರುವುದರಿಂದ ಬಹುಲಗ್ರಹಣದಿಂದ ಯಾವ ಅರ್ಥದಲ್ಲಿ ಯಾದರೂ ಹೇಳಬಹುದು. ಎಲ್ಲಿ ' ಬಹುಲಂ ' ಎಂದು ಹೇಳುವರೋ ಅಲ್ಲಿ ನಾನಾರ್ಥಗಳನ್ನು ಕಲ್ಪಿಸಬಹುದು. ಕನಿನ್ ಪ್ರತ್ಯಯದಲ್ಲಿ ಕಕಾರಾದಿಗಳಿಗೆ ಇತ್ಸಂಜ್ಞೆ ಬಂದು ಲೋಪವಾಗಿ ಅನ್ ಉಳಿಯುತ್ತದೆ. ಗಮ್+ಅನ್ ಎಂದಿರುವಾಗ ' ಗಮಹನಜನಖನಘಸಾಂಲೋಪಃ ಕ್ಜಿತ್ಯನಙಿ ' (ಪಾ. ಸೂ, ೬–೪–೯೮) ಸೂತ್ರದಿಂದ ಉಪಧಾಲೋಪ (ಗಕಾರದ ಮೇಲಿರುವ ಅ ಕಾರ) ಗ್+ಮ್+ಅನ್. ' ಮನಿನ್ ' (ಉ. ೪–೧೪೦) ಸೂತ್ರದಿಂದ ಗಮ್ ಧಾತುವಿಗೆ ಮನಿನ್ ಬಂದರೂ ಇದೇ ರೂಪವಾಗುತ್ತದೆ. ಗಮ್+ಅನ್ ಎಂದಿರುವಾಗ ಬಹುಲಗ್ರಹಣದಿಂದ ಧಾತುವಿನ ಟಿಗೆ (ಅಮ್) ಲೋಪ. ಗ್ಮನ್ ಎಂದಾಗುತ್ತದೆ. ಇದಕ್ಕೆ ಸ್ತ್ರೀ ಲಿಂಗದಲ್ಲಿ **' ಡಾಬುಭಾಭ್ಯಾಮನ್ಯತರಸ್ಯಾಮ್ '** (ಪಾ. ಸೂ. ೪–೧–೧೩) ಸೂತ್ರದಿಂದ ಡಾಪ್ ಪ್ರತ್ಯಯ, ಡಾಪ್‌ನಲ್ಲಿ ಡಕಾರಾದಿಗಳು ಇತ್ತಾಗಿ ಆ ಉಳಿಯುತ್ತದೆ. ಡಿತ್ತಾದುದರಿಂದ ಟಿ ಲೋಪ. (ಅನ್) ಗ್+ಆ. ಗ್ಮಾ ದೂರ ಹೋಗುತ್ತವೆ ಅಥವಾ ಇದರ ಮೇಲೆ ಹೋಗುತ್ತಾರೆ ಎಂಬ ಅರ್ಥ ಹಿಂದಿನಂತೆಯೇ ತಿಳಿಯಬೇಕು. ಉದಾಹರಣೆ—**" ದಿವಶ್ಚ ಗ್ಮಶ್ಚಾಪಾಶ್ಚ ಜಂತವಃ "** (ಋ. ಸಂ. ೧೦–೪೯–೨)—**" ದಿವಶ್ಚ ಗ್ಮಶ್ಚ ಮರ್ತ್ಯೋನಾಮ್ "** (ಋ. ಸಂ. ೧೦–೧೨–೬) ಛಾಂದಸವಾದುದರಿಂದ ಗ್ಮ ಎಂದು ಹ್ರಸ್ವ ಬಂದಿದೆ.

(೩) **ಜ್ಮಾ ॥ ಜಮತಿರ್ಗತಿಕರ್ಮಾ** (ನಿಘ. ೨–೧೦) **ಜಮು–ಅದನೇ (ಭೂ–ಪ) ಜನೀಪ್ರಾದುರ್ಭಾವೇ** (ದಿ. ಆ.) **ಅಞ್ಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು** (ರು. ಪ.) **ಮ್ರುಕ್ಷಣಂ ಸೇಚನಮಿತಿತದ್ವೃತ್ತಿಃ । ಏತೇಭ್ಯಃ ಶ್ವನ್ನುಕ್ಷನ್ ಪೂಷನ್ ಪ್ಲೀಹನ್** (ಉ ೧–೧–೧೫೫) **ಇತ್ಯಾದಿನಾ ಪರಿಜ್ಮನ್ನಿತಿ ಕನ್ನಿನಂತಂ ಸೋಪಸರ್ಗಂ ನಿಪಾತಿತಮ್, ಬಾಹುಲಕಾತ್** (**ಪಾ. ಸೂ. ೩–೩–೧ ನಿರುಪಸರ್ಗಮಪಿ ಭವತಿ ॥**

ಜಮು ಧಾತು ಭೂವಾದಿಯಲ್ಲಿ ಪರಸ್ಮೈಪದಿಯಾಗಿ ಹೇಳಿದೆ. ತಿನ್ನುವುದು ಎಂಬ ಅರ್ಥದಲ್ಲಿ ಹೇಳಿದರೂ ನಿಘಂಟುಕಾರರು ಗತ್ಯರ್ಥವನ್ನು ಹೇಳಿರುತ್ತಾರೆ. ಪ್ರಾದುರ್ಭಾವ ಹುಟ್ಟುವುದು ಎಂಬರ್ಥದಲ್ಲಿ ಜನೀ ಧಾತುವು ದಿವಾದಿಗಣದಲ್ಲಿ ಹೇಳಿದೆ.

ಆತ್ಮನೇ ಪದೀ. ಅಞ್ಜೂ ಧಾತು ರುಧಾದಿಯಲ್ಲಿ ಪರಸ್ಮೈಪದಿಯಾಗಿ ಹೇಳಿದೆ. ವ್ಯಕ್ತಿ, ಮ್ರಕ್ಷಣ, ಕಾಂತಿ, ಗತಿ ಈ ನಾಲ್ಕು ಅರ್ಥಗಳಲ್ಲಿದೆ. ಮ್ರಕ್ಷಣವೆಂದರೆ ಸೇಚನ (ತೊಯಿಸುವುದು)ವೆಂದು ಅದರ ವೃತ್ತಿಯಲ್ಲಿ ವಿವರಿಸಿದೆ. ಹೀಗೆ ಈ ಮೂರು (ಜಮು, ಜನೀ, ಅಞ್ಜೂ) ಧಾತುಗಳಲ್ಲಿ ಯಾವುದಾದರೂ ಆಗಬಹುದು; ಅದರ ಮೇಲೆ 'ಕ್ವನ್ಯಕ್ವನ್'—ಎಂಬ ಉಣಾದಿ ಸೂತ್ರದಿಂದ ಕನಿನ್‌ಪ್ರತ್ಯಯ ಸೇರಿಸಿ 'ಪರಿಜ್ಮನ್' ಎಂದು ಉಪಸರ್ಗಸಹಿತವಾಗಿ ನಿಪಾತಿತವಾಗಿದೆ. ನಿಪಾತವಾದದ್ದೆಂದರೆ ಸೂತ್ರಕಾರರೇ ಕಾರ್ಯಗಳನ್ನೆಲ್ಲಾ ಮಾಡಿ ಸಿದ್ಧರೂಪವನ್ನು ನಿರ್ದೇಶಿಸುವುದು. ಸೂತ್ರಗಳಿಂದ ಕ್ರಮವಾಗಿ ನಾವು ರೂಪಮಾಡುತ್ತೇವೆ ಎಂದರೆ ಆ ರೂಪ ಸಿದ್ಧಿಸಲಾರದು. ಅಲ್ಲಿ ಉಪಸರ್ಗ ಸಹಿತವಾಗಿ ನಿಪಾತ ಮಾಡಿದ್ದರೂ ಉಣಾದಿಯಲ್ಲಿ 'ಬಹುಲಗ್ರಹಣ'ವಿರುವುದರಿಂದ ಉಪಸರ್ಗವಿಲ್ಲದಿದ್ದರೂ 'ಜ್ಮನ್' ಎಂದು ರೂಪವಾಗುತ್ತದೆ. ನಿಪಾತ ಮಾಡಿರುವುದರಿಂದಲೇ ಬೇಕಾದ ಕಾರಕವನ್ನಂಗೀಕರಿಸಿ ಅರ್ಥ ಹೇಳಬಹುದು. ಅನಂತವಾದುದರಿಂದ ಸ್ತ್ರೀಲಿಂಗದಲ್ಲಿ 'ಡಾಬುಭಾಭ್ಯಾಮನ್ಯತರಸ್ಯಾಮ್' ಸೂತ್ರದಿಂದ ಡಾಪ್ ಬಂದರೆ ಟಿ ಲೋಪ ಬಂದು ಜ್ಮಾ ಎಂದು ರೂಪವಾಗುತ್ತದೆ. ಗತ್ಯರ್ಥದಲ್ಲಿ ಅಥವಾ ಅಧಿಕರಣಾರ್ಥದಲ್ಲಿ ಪ್ರತ್ಯಯ ಹೇಳಬೇಕು. ಅದನಃ ತಿನ್ನುವುದು ಎಂಬ ಅರ್ಥದಲ್ಲಿ 'ಅದಂತಿ ಅಸ್ಯಾಂ ಭೂತಾನಿ' ಇದರಲ್ಲಿದ್ದು ತಿನ್ನುತ್ತಾರೆ ಎಂದ ವ್ಯುತ್ಪತ್ತಿಯಿಂದ ಅಧಿಕರಣಾರ್ಥದಲ್ಲಿ ಪ್ರತ್ಯಯ. ಪ್ರಾದುರ್ಭಾವಾರ್ಥದಲ್ಲಿ—'**ಜಾತಾನಿ ವಾ ಸ್ವಕಾರಣಾತ್**' '**ಜಾಯಂತೇ ವಾಸ್ಯಾ ಓಷಧಯಃ**' ಇದರಿಂದ ಓಷಧಿ ಮುಂತಾದುವುಗಳು ಹುಟ್ಟುತ್ತವೆ ಎಂಬ ವ್ಯುತ್ಪತ್ತಿಯಿಂದ ಅಪಾದಾನಾರ್ಥದಲ್ಲಿ ಪ್ರತ್ಯಯ ಇದಕ್ಕೆ ಉದಾಹರಣೆ—"**ಅದ್ಭ್ಯಃ ಪೃಥಿವೀ, ಪೃಥಿವ್ಯಾ ಓಷಧಯಃ**" (ತೈ. ಉ. ೨-೧). ವ್ಯಕ್ತಿ, ಪ್ರಕಾಶ ಎಂಬರ್ಥದಲ್ಲಿ 'ವ್ಯಕ್ತಾಃ ಸರ್ವೇಷಾಂ ಪ್ರತ್ಯಕ್ಷಾ' ಎಲ್ಲರಿಗೂ ಪ್ರತ್ಯಕ್ಷವಾಗಿ ತೋರುವುದು, ಆಕಾಶಾದಿಗಳಂತೆ ಪೃಥಿವಿಯು ಅವ್ಯಕ್ತವಲ್ಲವೆಂಬರ್ಥವಾಗುತ್ತದೆ. ಇದಕ್ಕೆ ಉದಾಹರಣೆ. "**ತಿಸ್ರೋ ಮಹೀರುಪರಾಸ್ತಸ್ಥುರತ್ಯಾ ಗುಹಾ ದ್ವೇ ನಿಹಿತೇ ದರ್ಶ್ಯೇಕಾ**" (ಋ. ಸಂ. ೩-೫೬-೨). ಮ್ರಕ್ಷಣಃ ಸೇಚನ ಎಂಬರ್ಥದಲ್ಲಿ 'ಅಕ್ತಾಃ ಸಿಕ್ತಾ ಭವತಿ ವೃಷ್ಟೇನ' ಮಳೆಯಿಂದ ತೊಯಿಸಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—"**ತಸ್ಮಾದಸಾವಿಮಾಂ ವೃಷ್ಟ್ಯಾಭ್ಯುನಕ್ತ್ಯಭಿಜಿಘ್ರತಿ**" (ಐ. ಬ್ರಾ. ೧-೨-೧) ಎಂದು ಬ್ರಾಹ್ಮಣದಲ್ಲಿ ಹೇಳಿದೆ. ಈ ಎಲ್ಲಾ ಅರ್ಥಗಳಲ್ಲಿ ಶ್ರುತ್ಯುದಾಹರಣೆ—

'**ಯೇ ಕೇ ಚ ಜ್ಮಾ ಮಹಿನೋ ಅಹಿಮಾಯಾಃ**' (ಋ. ಸಂ. ೬-೫೨-೧೫). "**ಅಭಿಕ್ರನ್ದೇಂಪ್ರ-ಭೂರ್ಜ್ಮ**" (ಋ. ಸಂ. ೭-೨೧-೬). '**ಜ್ಮಯಾ ಅತ್ರ ವಸವೋರಂತ ದೇವಾಃ**' (ಋ. ಸಂ. ೮-೧-೧೮).

(೪) **ಕ್ಷ್ಮಾ** ॥ '**ಕ್ಷಿ ಕ್ಷಯೇ**' **ಭ್ವಾದಿಃ** (ಪ), '**ಕ್ಷಿ – ನಿವಾಸಗತ್ಯೋಃ**' **ತುದಾದಿಃ** (ಪ), **ಕ್ಷಿ ಹಿಂಸಾಯಾಂ ಕ್ರ್ಯಾದಿಃ** (ಪ), **ಕ್ಷೈ, ಜ್ಯೈ, ಸ್ಯೈ, ಕ್ಷಯೇ** (ಭ್ವಾ-ಪ) '**ಕ್ಷ್ಣುಷ್ ಸಹನೇ**' (ದಿ-ಪ) '**ಕ್ಷ್ಮಾಯೀ-ವಿಧೂನನೇ**' (ಭ್ವಾ-ಆ)—**ಏತೇಭ್ಯಃ ಔಣಾದಿಕೇ ಮನಿನಿ** (ಉ-೪-೧೪೦) **ಬಾಹುಲಕಾತ್ ರೂಪಸಿದ್ಧಿಃ**।

ನಾಶಾರ್ಥಕವಾದ ಭ್ವಾದಿಪಠಿತ ಕ್ಷಿಧಾತು, ನಿವಾಸಗತ್ಯರ್ಥಕವಾದ ತುದಾದಿಪಠಿತ ಕ್ಷಿಧಾತು, ಹಿಂಸಾರ್ಥಕವಾದ ಕ್ರ್ಯಾದಿಪಠಿತ ಕ್ಷಿಧಾತು. ನಾಶಾರ್ಥಕವಾದ ಕ್ಷೈ ಧಾತು, ಸಹನಾರ್ಥಕವಾದ ದಿವಾದಿಗಣಪಠಿತ ಕ್ಷ್ಣುಷ್ ಧಾತು, ಕಂಪನಾರ್ಥಕವಾದ ಕ್ಷ್ಮಾಯೀಧಾತು, ಹೀಗೆ ಇವುಗಳ ಮೇಲೆ ಬಹುಲಗ್ರಹಣದಿಂದ ಉಣಾದಿಸೂತ್ರದಿಂದ ವಿಹಿತವಾದ ಮನಿನ್ ಪ್ರತ್ಯಯ. ಬಹುಲಗ್ರಹಣದಿಂದಲೇ ಮನಿನ್ ಪರವಾದಾಗ ಧಾತುವಿನ ಇತರಾಕ್ಷರಗಳು ಲೋಪ ಹೊಂದಿ ಕ್ಷ್ ಮಾತ್ರ ಉಳಿಯುತ್ತದೆ. ಕ್ಷ್ಮನ್ ಎಂದು ರೂಪವಾದಾಗ ಸ್ತ್ರೀತ್ವದಲ್ಲಿ ಹಿಂದಿನಂತೆ ಡಾಪ್‌ಪ್ರತ್ಯಯ ಟಿ ಲೋಪ. ಕ್ಷ್ಮಾ ರೂಪವಾಗುತ್ತದೆ. ಕ್ಷಿಯುಪದಕ್ಕೆ ನಿವಾಸ, ನಾಶ ಎಂದು ಎರಡರ್ಥಗಳಿವೆ. ಈ ಅರ್ಥದಲ್ಲಿ 'ಕ್ಷಿಯಂತಿ ನಿವಸಂತಿ ಅಸ್ಯಾಂ ಪ್ರಾಣಿನಃ' ಇದರಲ್ಲಿ ಪ್ರಾಣಿಗಳು ವಾಸಮಾಡುತ್ತವೆ ಎಂದರ್ಥವಾಗುತ್ತದೆ. ಗತ್ಯರ್ಥದಲ್ಲಿ 'ಕ್ಷಿಯಂತಿ ಅವಯವಾ ಗಚ್ಛಂತಿ

ಅಸ್ಯಾಂ ಪದಾರ್ಥಾಃ' ಎಂಬ ವ್ಯುತ್ಪತ್ತಿಯಿಂದ ಇದರಲ್ಲಿ ಪದಾರ್ಥಗಳು ಅವಯವವನ್ನು ಹೊಂದುತ್ತವೆ ಎಂದರ್ಥವಾಗುತ್ತದೆ. ಹಿಂಸಾರ್ಥದಲ್ಲಿ 'ಹಿಂಸ್ಯಂತೇ ಅಸ್ಯಾಂ ಪಾಪಕೃತಃ' ಎಂಬ ವ್ಯುತ್ಪತ್ತಿಯಿಂದ ಇದರಲ್ಲಿ ಪಾಪಿಷ್ಠರು ಹಿಂಸಿಸಲ್ಪಡುತ್ತಾರೆ ಎಂದರ್ಥ ಸಹನಾರ್ಥದಲ್ಲಿ "ಕ್ಷಮತೇ ಪ್ರಾಣಿಜಾತರೂಪಂ" ಎಂಬ ವ್ಯುತ್ಪತ್ತಿಯಿಂದ ಸಕಲ ಪ್ರಾಣಿಸಮುದಾಯವನ್ನು ಸಹಿಸುತ್ತದೆ ಎಂದರ್ಥವಾಗುತ್ತದೆ. ವಿಧೂನನಾರ್ಥದಲ್ಲಿ "ಪ್ರಾಣಿನಃ ಭಾರಂ ವಿಧೂನಯತಿ ಸ್ವಕೀಯಕಾಲೇ" ಎಂಬ ನಿರ್ವಚನದಿಂದ ತಾನು ಇರುವವರೆಗೂ ಪ್ರಾಣಿಭಾರವನ್ನು ಹೊರುತ್ತದೆ ಎಂದರ್ಥವಾಗುತ್ತದೆ. ಇವುಗಳಿಗೆ ಉದಾಹರಣೆ.

**'ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ** (ಋ. ಸಂ. ೧೦-೬೧-೨) **ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ'** (ಋ. ಸಂ. ೭-೪೬-೩)

(೫) **ಕ್ಷ್ಮಾ । ನಿರೂಪಿತಾ ಏವ ಧಾತವಃ ॥ "ಅನ್ಯೇಷ್ವಪಿ ದೃಶ್ಯತೇ"** (ಪಾ. ಸೂ. ೩-೨-೧೦೧) **ಇತಿ ಸೋಪಪದಾತ್ ಜನೇರ್ವಿಧೀಯಮಾನೋ ಡಃ ಪ್ರತ್ಯಯಃ "ಅಪಿಶಬ್ದಃ ಸರ್ವೋಪಾಧಿವ್ಯಭಿಚಾರಾರ್ಥಃ" ಇತ್ಯುಕ್ತೇರ್ನಿರುಪಪದೇಭ್ಯೋಽಪಿ ಭವತಿ ॥**

ಹಿಂದೆ ಹೇಳಿದ ಧಾತುಗಳಿಗೇ 'ಅನ್ಯೇಷ್ವಪಿ—' ಸೂತ್ರದಿಂದ ಡ ಪ್ರತ್ಯಯ. ಯದ್ಯಪಿ ಆ ಸೂತ್ರದಲ್ಲಿ ಉಪಪದದಿಂದ ಕೂಡಿರುವ ಜನ್ ಧಾತುವಿಗೆ ಡ ಪ್ರತ್ಯಯ ಹೇಳಿದೆ. ಇಲ್ಲಿ ಕೇವಲ ಧಾತು ಇದೆ. ಆದರೂ ಆ ಸೂತ್ರದಲ್ಲಿರುವ ಅಪಿಶಬ್ದವು ಸರ್ವೋಪಾಧಿವ್ಯಭಿಚಾರಾರ್ಥವನ್ನು ಅಂದರೆ ಯಾವ ಯಾವ ಕಾರಣ ಹೇಳಿದೆಯೋ ಅದು ಯಾವುದೂ ಇಲ್ಲದಿದ್ದರೂ ಪ್ರತ್ಯಯ ಬರುತ್ತದೆಂದು ಸೂಚಿಸುವುದರಿಂದ ಇಲ್ಲಿ ಉಪಪದವಿಲ್ಲದಿದ್ದರೂ ಕ್ಷಿ ಧಾತುವಿಗೆ ಡ ಪ್ರತ್ಯಯ ಬಂದಿದೆ. ಡಿತ್ತಾದುದರಿಂದ ಭಸಂಜ್ಞೆ ಇಲ್ಲದಿದ್ದರೂ ಧಾತುಪದ ಟಿಗೆ (ಇ) ಲೋಪ ಬರುತ್ತದೆ. ಕ್ಷ ಎಂದಿರುವಾಗ ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್ ಪ್ರತ್ಯಯ. ಕ್ಷಾ ಎಂದಾಗುತ್ತದೆ. ಕ್ಷಮೂಷ್, ಕ್ಷ್ಮಾಯೀ ಧಾತುಗಳಿಗೆ ಡ ಪ್ರತ್ಯಯ ಬಂದಾಗ ಛಾಂದಸವಾದುದರಿಂದ ಮಕಾರಕ್ಕೂ ಲೋಪ ಬಂದು ಹಿಂದೆ ಹೇಳಿದ ರೂಪವೇ ಆಗುತ್ತದೆ. 'ಛಂದಸಿ ಬಹುಲಂ' ಎಂದುದರಿಂದ ಇಷ್ಟವಾದ ಕಾರ್ಯವೆಲ್ಲಾ ಛಂದಸ್ಸಿನಲ್ಲಿ ಬರುತ್ತದೆ. ಅರ್ಥವನ್ನು ಹಿಂದಿನಂತೆಯೇ ತಿಳಿಯಬೇಕು. ಉದಾಹರಣೆ— **'ಜಾತಸ್ಯ ಚ ಜಾಯಮಾನಸ್ಯ ಚ ಕ್ಷಾಮ್'** (ಋ. ಸಂ. ೧-೯೬-೭)

(೬) **ಕ್ಷಮಾ ॥ ನಿರೂಪಿತಾ ಏವ ಧಾತುಭಾವಾಃ । ಔಣಾದಿಕೇ ಮನಿನಿ** (ಉ-೪-೧೪೦) **ಬಾಹುಲಕಾತ್ ರೂಪಸಿದ್ಧಿಃ ।**

ಕ್ಷಿ ಮುಂತಾದ ಧಾತು ಸ್ವರೂಪಗಳನ್ನು ಹಿಂದಿನಂತೆಯೇ ತಿಳಿಯಬೇಕು. ಉಣಾದಿ ಸೂತ್ರದಿಂದ ಮನಿನ್‌ಪ್ರತ್ಯಯ. ಬಹುಲಗ್ರಹಣದಿಂದ ಧಾತುವಿನ ಸ್ವರಕ್ಕೆ ಅಕಾರಾದೇಶ. ಕ್ಷಮೂಷ್ ಇತ್ಯಾದಿಗಳಲ್ಲಿ ಕ್ಷ ಮಾತ್ರ ಉಳಿಯುತ್ತದೆ. ಕ್ಷ+ ಮನ್ ಎಂದಿರುವಾಗ ಸ್ತ್ರೀತ್ವದಲ್ಲಿ ಹಿಂದಿನಂತೆ ಡಾಪ್, ಟಿಲೋಪ (ಅನ್) ಕ್ಷಮಾ ರೂಪವಾಗುತ್ತದೆ. ಇದರಲ್ಲಿ ಪ್ರಾಣಿಗಳು ವಾಸ ಮಾಡುತ್ತವೆ ಇತ್ಯಾದಿ ಅರ್ಥಗಳು ಹಿಂದಿನಂತೆಯೇ ತಿಳಿಯಬೇಕು. ಉದಾಹರಣೆ– **"ಯಃ ಪಾರ್ಥಿವಸ್ಯ ಕ್ಷಮ್ಯಸ್ಯ ರಾಜಾ"** (ಋ. ಸಂ. ೨-೧೪-೧೧) ಛಾಂದಸವಾದುದರಿಂದ ಹ್ರಸ್ವ, ಪುಲ್ಲಿಂಗ ಬಂದಿದೆ.

(೭) **ಕ್ಷೋಣೀಃ ॥ "ಟುಕ್ಷು ರುಕ್ಷು ಶಬ್ದೇ"** ಅದಾದಿಃ (ಪ.) **"ವೀಜ್ಯಾ ಜ್ವರಿಭ್ಯೋ ನಿಃ** (ಉ. ೪-೪೮)**" ಇತಿ ವಿಹಿತೋ ನಿಪ್ರತ್ಯಯೋ ಬಾಹುಲಕಾದ್ ಭವತಿ, ಗುಣಃ, ಣತ್ವಮ್ ।**

ಟು ಕ್ಷು ಧಾತುವು ಶಬ್ದಾರ್ಥದಲ್ಲಿ ಪರಸ್ಮೈಪದಿಯಾಗಿ ಅದಾದಿಯಲ್ಲಿ ಪಠಿತವಾಗಿದೆ. 'ಆದಿರ್ಞಿ ಟು ಡವಃ' ಸೂತ್ರದಿಂದ ಧಾತುವಿನ ಆದಿಯಾದ ಟು ಶಬ್ದಕ್ಕೆ ಲೋಪ. "ವೀಜ್ಯಾ"—ಸೂತ್ರದಿಂದ ವೀ ಮುಂತಾದ ಧಾತುಗಳಿಗೆ ಮಾತ್ರ ನಿಪ್ರತ್ಯಯ ಹೇಳಿದ್ದರೂ ಬಹುಲಗ್ರಹಣದಿಂದ ಈ ಕ್ಷು ಧಾತುವಿಗೂ ಬರುತ್ತದೆ. ಕ್ಷು + ನಿ ಎಂದಿರುವಾಗ "ಸಾರ್ವಧಾತುಕಾರ್ಧ ಧಾತುಕಯೋಃ" ಸೂತ್ರದಿಂದ ಧಾತುವಿನ ಉಕಾರಕ್ಕೆ ಗುಣ (ಓಕಾರ) ಕ್ಷೋ + ನಿ. 'ಅಟ್‌ಕುಪ್ವಾಙ್‌ನುಮ್ ವ್ಯವಾಯೇಽಪಿ' ಸೂತ್ರದಿಂದ ಷಕಾರವಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಕ್ಷೋಣಿಃ ರೂಪವಾಗುತ್ತದೆ. "ಕ್ಷೂಯತೇಃ ಶಬ್ದ್ಯತೇ= ಸ್ತೂಯತೇ ಸ್ತೋತೃಭಿಃ ಇತಿ ಕ್ಷೋಣಿಃ" ಸ್ತುತಿಸುವವರಿಂದ ಇದು ಸ್ತುತಿಸಲ್ಪಡುತ್ತದೆ ಎಂದರ್ಥವಾಗುವುದರಿಂದ ಕರ್ಮಣಿ ಯಲ್ಲಿ ಪ್ರತ್ಯಯ. 'ಕ್ಷುವಂತಿ ಅಸ್ಯಾಂ ಭೂತಾನಿ' ಇದರಲ್ಲಿ ಪ್ರಾಣಿಸಮುದಾಯವು ಶಬ್ದಮಾಡುತ್ತದೆ ಎಂಬ ಅರ್ಥವನ್ನು ಅಂಗೀಕರಿಸಿದರೆ ಅಧಿಕರಣಾರ್ಥದಲ್ಲಿ ನಿಪ್ರತ್ಯಯ ಹೇಳಬೇಕು. 'ಕ್ಷೋಣೀ' ಎಂದು ಕೆಲವರು ಈಕಾರಾಂತವಾಗಿಯೂ ಪಾಠ ಮಾಡುತ್ತಾರೆ. ಆಗ 'ಕೃದಿಕಾರಾದಕ್ತಿನೋ ವಾ ಙೀಷ್ ವಕ್ತವ್ಯಃ' (ಪಾ. ಸೂ. ೪-೧-೪೫ ವಾ.) ಎಂಬ ವಾರ್ತಿಕದಿಂದ ಇಕಾರಾಂತಕ ಕೃದಂತ ಶಬ್ದವಾದುದರಿಂದ ಙೀಷ್ ಪ್ರತ್ಯಯ ಬರುತ್ತ. "ಯಸ್ಯೇತಿಚ" ಸೂತ್ರದಿಂದ ಇಕಾರ ಲೋಪ. ಕ್ಷೋಣೀ ಎಂದಾಗುತ್ತದೆ. ಉದಾಹರಣೆ—**ನವಂತ ಕ್ಷೋಣಯೋಃ ಯಥಾ** (ಋ. ಸಂ. ೧೦-೨೨-೯) "**—ಯಂ ಕ್ಷೋಣೀರನು ಚಕ್ರದೇ** (ಋ. ಸಂ. ೮-೩-೧೦)"

(೮) **ಕ್ಷಿತಿಃ । "ಕ್ಷಿ ನಿವಾಸಗತ್ಯೋಃ" (ತು. ಪ). "ಕ್ಷಿ ಕ್ಷಯೇ" (ಭೂ. ಪ) "ಕ್ಷಿ ಹಿಂಸಾಯಾಮ್" (ಸ್ವಾಕ್ರ್ಯಾ= ಪ.) ಏತೇಭ್ಯೋಽಪಿ "ವಸೇಸ್ತಿಃ" (ಉ. ೪-೧೭೫) ಇತಿ ವಿಹಿತಸ್ತಿಪ್ರತ್ಯಯೋ ಬಾಹುಲಕಾತ್ (ಪಾ. ಸೂ. ೩-೩-೧) ಭವತಿ, ಗುಣಾಭಾವಶ್ಚ ॥ ಅಥವಾ ಸ್ತ್ರೀಯಾಂ ಕ್ತಿನ್ (ಪಾ. ಸೂ, ೩-೩-೯೪) 'ಕರ್ಮಣ್ಯಧಿ ಕರಣೇ' [ಪಾ. ಸೂ. ೩-೩-೯೩] ವಾ ಭವತಿ ॥**

ಕ್ಷಿ ಧಾತು ನಾಲ್ಕುಗಣಗಳಲ್ಲಿ ಹೇಳಿದೆ. ನಿವಾಸ, ಗತಿ, ಕ್ಷಯ, ಹಿಂಸಾ ನಾಲ್ಕು ಅರ್ಥಗಳಿವೆ. 'ವಸೇಸ್ತಿಃ' ಎಂದು ವಸಧಾತುವಿಗೆ ತಿ ಪ್ರತ್ಯಯ ಹೇಳಿದ್ದರೂ ಬಹುಲಗ್ರಹಣದಿಂದ ಕ್ಷಿ ಧಾತುವಿಗೂ ಬರುತ್ತದೆ. ತಿ ಪರದಲ್ಲಿರುವಾಗ 'ಸಾರ್ವ ಧಾತುಕಾ'-ಸೂತ್ರದಿಂದ ಗುಣ ಪ್ರಾಪ್ತವಾದರೂ ಬಹುಲಗ್ರಹಣದಿಂದಲೇ ಇಲ್ಲಿ ಬರುವುದಿಲ್ಲ. ಅಥವಾ 'ಸ್ತ್ರಿಯಾಂ ಕ್ತಿನ್' ಸೂತ್ರದಿಂದ ಧಾತುಸಾಮಾನ್ಯಕ್ಕೆ ಭಾವಾರ್ಥದಲ್ಲಿ ಹೇಳಿದ ಕ್ತಿನ್ ಪ್ರತ್ಯಯವು 'ಕರ್ಮಣ್ಯಧಿಕರಣೇ ಚ' ಸೂತ್ರದಿಂದ ಕರ್ಮಣಿ ಯಲ್ಲಿಯೂ ಅಧಿಕರಣಾರ್ಥದಲ್ಲಿಯೂ ಬರುತ್ತದೆ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಇಕಾರಕ್ಕೆ ಗುಣ ಬರುವುದಿಲ್ಲ. 'ಕ್ಷಿಯಂತಿ ಅಸ್ಯಾಂ ಪ್ರಾಣಿನಃ' ಇದರಲ್ಲಿ ಪ್ರಾಣಿಗಳು ವಾಸಮಾಡುತ್ತವೆ ಅಥವಾ ನಾಶಹೊಂದುತ್ತವೆ ಇತ್ಯಾದ್ಯರ್ಥಗಳನ್ನು ಕ್ಷ್ಮಾ ಶಬ್ದದಲ್ಲಿ ಹೇಳಿದಂತೆಯೇ ತಿಳಿಯಬೇಕು. ಉದಾಹರಣೆ—

'ಕ್ಷೇತಿ ಕ್ಷಿತಿಃ ಸುಭಗೋ ನಾಮ ಪುಷ್ಯನ್' (ಋ. ಸಂ. ೫-೩-೭,೪)—"ನೀಹಿ ಸ್ವಸ್ತಿ ಸುಕ್ಷಿತಿಂ ದಿವಃ" (ಋ. ಸಂ. ೬-೨-೧೧)

(೯) **ಅವನಿಃ । ಅವ-ರಕ್ಷಣಗತಿ ತೃಪ್ತಿ ಭೀತ್ಯವಗಮ ಪ್ರವೇಶ ಶ್ರವಣ ಸಾಮರ್ಥ್ಯ ಯಾಚನಕ್ರಿಯೇಚ್ಛಾ ದೀಪ್ತ್ಯವಾಪ್ತ್ಯಾಲಿಂಗನ ಹಿಂಸಾ, ದಾನ ಭಾಗವೃದ್ಧಿಷು (ಭೂ-ಪ) ಅಸ್ಮಾತ್ ಅರ್ತಿ ಸೃಧೃಧಮ್ಯಮ್ಯಶ್ಯವಿತೃಂ- ಭ್ಯೋಽನಿಃ" (ಉ-೨-೯೫) ಇತ್ಯನಿ ಪ್ರತ್ಯಯಃ ।**

ಭ್ವಾದಿ ಗಣದಲ್ಲಿ ಪರಸ್ಮೈಪದಿಯಾಗಿ ಹೇಳಿದ ಅವ ಧಾತುವಿಗೆ ರಕ್ಷಣ ಮುಂತಾದ ಹದಿನೆಂಟು ಅರ್ಥಗಳಿವೆ. ಇದಕ್ಕೆ 'ಅರ್ತಿಸೃ'-ಎಂಬ ಉಣಾದಿ ಸೂತ್ರದಿಂದ ಅನಿಪ್ರತ್ಯಯ ಅವನಿ ಎಂದಾಗುತ್ತದೆ. 'ಅವತಿ ಪ್ರಜಾಃ' ಪ್ರಜೆಗಳನ್ನು ರಕ್ಷಿಸುತ್ತದೆ,

'ಅವ್ಯಂತೇ ವಾ ವಾ ಭೂಪೈಃ' ರಾಜರಿಂದ ಇದು ರಕ್ಷಿಸಲ್ಪಡುತ್ತದೆ. ಹೀಗೆ ಯಾವ ಅರ್ಥಸಂಗತವಾಗುವುದೋ ಆ ಅರ್ಥವನ್ನು ಕಲ್ಪಿಸಬೇಕು. ಉದಾಹರಣೆ—

**" ಆ ವಾಂ ರಕ್ಷೋಽವನಿರ್ನ ಪ್ರವತ್ಸ್ವಾನ್ "** (ಋ. ಸಂ. ೧-೧೮೧-೩) **'ಯತ್ಸೀಂ ಮಹೀಮವನಿಂ ಪ್ರಾಭಿ ಮರ್ಮೃಶತ್** (ಋ. ಸಂ. ೧-೧೪೦-೫)

**(೧೦) ಉರ್ವೀ ॥ "ಊರ್ಣುಞ್-ಆಚ್ಛಾದನೇ" (ಅದಾ-ಉ) ಅಸ್ಮಾತ್ ' ಮಹತಿ ಹ್ರಸ್ವಶ್ಚ ' (ಉ-೧-೩೦) ಇತಿ ಉಪ್ರತ್ಯಯೋ ಣ ಲೋಪೋ ಹ್ರಸ್ವಶ್ಚ, ಉರುಃ । 'ಓತೋ ಗುಣವಚನಾತ್' (ಪಾ-ಸೂ-೪-೧-೪೪) ಇತಿ ಙೀಷ್ ॥**

ಮುಚ್ಚುವುದು ಎಂಬರ್ಥದಲ್ಲಿ ಊರ್ಣುಞ್ ಧಾತುವು ಅದಾದಿಯಲ್ಲಿ ಹೇಳಿದೆ. ಞಿತ್ತಾದುದರಿಂದ ಇದು ಉಭಯ ಪದಿಯಾಗುತ್ತದೆ. ಇದಕ್ಕೆ ' ಮಹತಿ ಹ್ರಸ್ವಶ್ಚ ' ಸೂತ್ರದಿಂದ ದೊಡ್ಡದು ಎಂಬರ್ಥದಲ್ಲಿ ಉ ಪ್ರತ್ಯಯ ಬರುತ್ತದೆ. ಚಕಾರ ದಿಂದ ಹಿಂದಿನ ಸೂತ್ರದಲ್ಲಿ ಹೇಳಿದ ನು ಲೋಪವೂ ಇಲ್ಲಿ ಅನುವೃತ್ತವಾಗುತ್ತದೆ. ನು ಲೋಪವಾ + ಪ್ರಸ್ವ ಬಂದರೆ ಉರ್ ಉ ಉರು ಎಂದಾಗುತ್ತದೆ. ಗುಣವಾಚಕವಾದುದರಿಂದ ' ವೋತೋಗು— ' ಸೂತ್ರದಿಂದ ಉಕಾರಾಂತವಾದ ಈ ಶಬ್ದಕ್ಕೆ ಸ್ತ್ರೀಲಿಂಗದಲ್ಲಿ ಙೀಷ್ ಪ್ರತ್ಯಯ. ಉರು + ಈ ಯಣ್. ಉರ್ವೀ. ' ಊರ್ಣೋತಿ= ಆಚ್ಛಾದಯತಿ ಇತಿ ಉರ್ವೀ ' ದೊಡ್ಡದಾದುದರಿಂದ ಭೂಮಿಯು ಎಲ್ಲವನ್ನೂ ಮುಚ್ಚುತ್ತದೆ. ತನ್ನಲ್ಲಿ ಬೇಕಾದ ಪದಾರ್ಥಗಳನ್ನು ಮುಚ್ಚಿಕೊಳ್ಳುತ್ತದೆಂದು ಅವಯವಾರ್ಥ ನಿಶ್ಚಿತವಾಗುತ್ತದೆ.

**ವೃಣೋತೇರ್ವಾ (ಸ್ವಾ-ಪ) ಷೋದರಾದಿತ್ವಾತ್ [ಪಾ. ಸೂ. ೬-೩-೧೦೯] ರೂಪಸಿದ್ಧಿಃ ।** ಅಥವಾ ಸ್ವಾದಿಗಣ ಪಠಿತವಾದ ವರಣಾರ್ಥಕವೃಞಿಧಾತುವಿನಿಂದ ಈ ಉರ್ವೀಶಬ್ದ ನಿಷ್ಪನ್ನವಾಗಿದೆ. ಪೃಷೋದರಾದೀನಿ ಯಥೋಪದಿಷ್ಟಮ್ ' ಎಂದು ಪಾಣಿನಿಸೂತ್ರ. ಪೃಷೋದರ ಮುಂತಾದ ಪದಗಳು ಈ ಗಣದಲ್ಲಿ ಹೇಳಿವೆ. ಇತರ ಸೂತ್ರಗಳಿಂದ ಸಿದ್ಧಿಯಾಗವ ಆದರೆ ಆಯಾಯಕಾರ್ಯಗಳಿಂದ ಲೋಕದಲ್ಲಿ ಪ್ರಸಿದ್ಧವಾದ ಪದಗಳು ಈ ಗಣದಲ್ಲಿ ಸೇರಿರುವುದರಿಂದಲೇ ಸಿದ್ಧವಾಗುತ್ತವೆ. ಪ್ರಕೃತ ಪೃಷೋದರಾದಿಗಣದಲ್ಲಿ ಉರ್ವೀಶಬ್ದವು ಪಠಿತವಾದುದರಿಂದ ವೃಞಿಧಾತುವಿಗೆ ಆಯಾಯಕಾರ್ಯಗಳು ಬಂದು ಉರ್ವೀ ಎಂದಾಗು ತ್ತದೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಆಚ್ಛಾದನಾರ್ಥವೂ ವೃಞಿ ಧಾತುವಿಗೆ ಹೇಳಬಹುದು. ಉದಾಹರಣೆ—

**ಮಾ ಮೀ ಮಮದ್ಯ ಆ ಭಾಗುರ್ವೀ ಕಾಷ್ಠಾ (ಋ. ಸಂ. ೮-೪೦-೮)**

**(೧೧) ಪೃಥ್ವೀ ॥ ಪ್ರಥ-ಪ್ರಖ್ಯಾನೇ (ಭೂ-ಆ) ' ಪ್ರಥಿಮ್ರದಿ ಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ ' (ಉ-೧-೨೭) ಇತಿ ಕುಪ್ರತ್ಯಯಃ ಸಂಪ್ರಸಾರಣಂ ಚ ॥**

ಪ್ರಸಿದ್ಧಾರ್ಥದಲ್ಲಿ ಪ್ರಥ ಧಾತುವು ಆತ್ಮನೇಪದಿಯಾಗಿ ಭ್ವಾದಿಯಲ್ಲಿ ಹೇಳಿದೆ. ಇದಕ್ಕೆ ' ಪ್ರಥಿಮ್ರದಿ— ' ಸೂತ್ರದಿಂದ ಕುಪ್ರತ್ಯಯ. ' ಲಶಕ್ವತದ್ಧಿತೇ ' ಸೂತ್ರದಿಂದ ಕಕಾರ ಇತ್ಸಂಜ್ಞೆ ಹೊಂದಿ ಲೋಪವಾದರೆ ಉ ಉಳಿಯುತ್ತದೆ. ಧಾತುವಿನ ರೇಫಕ್ಕೆ ಸಂಪ್ರಸಾರಣ. [ಋ ಕಾರ] ಪೃಥ್ + ಉ = ಪೃಥು ಎಂದಾಗುತ್ತದೆ. ಗುಣವಾಚಕವಾದುದರಿಂದ ಹಿಂದಿನಂತೆ ' ವೋತೋಗುಣವಚನಾತ್ ' ಸೂತ್ರದಿಂದ ಸ್ತ್ರೀತ್ವದಲ್ಲಿ ಙೀಷ್. ಪೃಥು + ಈ. ಯಣ್. ಪೃಥ್ವೀ. ' ಪ್ರಥತೇ ಅಸೌ ಇತಿ

ಪೃಥುಃ ' ದೊಡ್ಡದಾಗಿ ಪ್ರಸಿದ್ಧವಾಗಿದೆ ಎಂದರ್ಥ. ಅತಿ ವಿಸ್ತಾರದಿಂದ ಕೂಡಿರುವುದು ಪೃಥ್ವೀ. ಐವತ್ತು ಕೋಟಿಯೋಜನ ವಿಸ್ತೀರ್ಣವಾಗಿದೆಯೆಂದು ಶಾಸ್ತ್ರಕಾರರು ನಿರ್ಣಯಿಸಿರುತ್ತಾರೆ. ಅಥವಾ ಪ್ರಥಧಾತುವು ಣಿಜರ್ಥವನ್ನು ಹೇಳುತ್ತಿರುವಾಗ (ಧಾತ್ವರ್ಥದಿಂದಲೇ ಪ್ರೇರಣೆಯೂ ತೋರುತ್ತಿದ್ದರೆ ಅದಕ್ಕೆ ಅಂತರ್ಭಾವಿತಣ್ಯರ್ಥವೆನ್ನುತ್ತಾರೆ). ಬಹುಲಗ್ರಹಣದಿಂದ ಕು ಪ್ರತ್ಯಯ, ' ಭೂತೇಽಪಿದೃಶ್ಯಂತೇ ' (ಪಾ. ಸೂ. ೩-೩-೨) ಎಂದು ಭೂತಕಾಲಾರ್ಥದಲ್ಲಿಯೂ ಉಣಾದಿಪ್ರತ್ಯಯಗಳು ಬರುತ್ತವೆಯೆಂದು ಪಾಣಿನಿಯು ಹೇಳಿರುವುದರಿಂದ ಇಲ್ಲಿ ಕು ಪ್ರತ್ಯಯವು ಭೂತಕಾಲಾರ್ಥದಲ್ಲಿ ಬಂದಿದೆ. ಪ್ರಕ್ರಿಯೆ ಹಿಂದಿ ನಂತೆಯೇ ತಿಳಿಯಬೇಕು. ಣಿಚ್ ಪ್ರತ್ಯಯದ ಅರ್ಥವನ್ನು ಮಾತ್ರ ಹೆಚ್ಚಾಗಿ ಹೇಳಬೇಕು. ' ಬ್ರಹ್ಮಣಾ ಪೂರ್ವಮೇವ ವಿಸ್ತಾರಿತಾ ' ಬ್ರಹ್ಮದಿಂದ ಮೊದಲೇ ಅಂದರೆ ಸೃಷ್ಟಿಯಕಾಲದಲ್ಲಿಯೇ ವಿಸ್ತರಿಸಲ್ಪಟ್ಟಿದೆಯೆಂದರ್ಥ. ಇದೇ ಅರ್ಥ ಬ್ರಾಹ್ಮಣ ದಲ್ಲಿ ಹೇಳಿದೆ—" ತತ್ಪುಷ್ಕರಪರ್ಣೇಽಪ್ರಥಯತ್ ಪೃಥಿವ್ಯೈ ಪೃಥಿವೀತ್ವಮ್ " (ಯ. ಶ. ೧೧-೧೯-೧೩-೨) ಕ್ಷೀರಸ್ವಾಮಿಯು ' ಪೃಥು ಎಂಬ ರಾಜನಿಂದ ಪ್ರಸಿದ್ಧಹೊಂದಲ್ಪಟ್ಟದ್ದು ' ಎಂದು ಅರ್ಥ ವಿವರಣೆ ಮಾಡಿರುತ್ತಾನೆ.

ಉದಾಹರಣೆ—"**ಸ್ತೇ ಗೋ ನ ಕ್ಷಾಮತ್ಯೇತಿ ಪೃಥ್ವೀಮ್**" (ಋ. ಸಂ. ೧೦-೩೧-೯) ಈ ಮಂತ್ರದಲ್ಲಿ ಕ್ಷಾಂ, ಪೃಥ್ವೀಂ ಎಂದು ಎರಡು ಪದಗಳು ಹೇಳಿವೆ. ಇಲ್ಲಿ ಭೂಮಿವಾಚಕಪದ ಯಾವುದು ? ಎಂಬ ಸಂಶಯ ಬರುತ್ತದೆ. ಆಗ ನಿರುಕ್ತಕಾರರು ಹೀಗೆ ನಿರ್ಣಯಿಸಿರುತ್ತಾರೆ. ಎಲ್ಲಿ ಒಂದೇ ಅರ್ಥವನ್ನು ಹೇಳುವ ನಾನಾ ಪದಗಳು ಬಂದಿರುತ್ತವೆಯೋ ಅಲ್ಲಿ ಒಂದು ಪದ ಮಾತ್ರ ಆ ವಸ್ತುವಾಚಕವೆಂದೂ ಇತರ ಪದಗಳು ಅವಯವಾರ್ಥವನ್ನು ಹೇಳುವುದರ ಮೂಲಕ ಅದಕ್ಕೆ ವಿಶೇಷಣ ಗಳೆಂದೂ ತಿಳಿಯಬೇಕು. ಆದುದರಿಂದ ಇಲ್ಲಿ ಪೃಥ್ವೀ ಶಬ್ದವು ಭೂಮಿವಾಚಕವಾದುದರಿಂದ ಕ್ಷಾ ಶಬ್ದ ಅದಕ್ಕೆ ವಿಶೇಷ ವಾಗುತ್ತದೆ.

**(೧೨) ಮಹೀ ॥ ' ಮಹ.ಪೂಜಾಯಾಮ್ ' ಭೂವಾದಿಃ (ಪ) " ಇನ್ ಸರ್ವಧಾತುಭ್ಯಃ " (ಉ-೪-೧೧೮) ಇತೀನ್ ಪ್ರತ್ಯಯಃ । 'ಕೃದಿಕಾರಾತ್—' (ಪಾ. ಸೂ-೪-೧-೪೫) ಇತಿ ಙೀಷ್ ॥**

ಎಲ್ಲಾ ಧಾತುಗಳಿಗೂ ಇನ್ ಪ್ರತ್ಯಯ ಬರುತ್ತದೆಂದು ಹೇಳಿರುವುದರಿಂದ ಪೂಜಾರ್ಥಕವಾದ ಮಹ ಧಾತುವಿಗೂ ಇನ್ ಬರುತ್ತದೆ. 'ಹಲಂತ್ಯಮ್ ' ಸೂತ್ರದಿಂದ ನ ಕಾರಕ್ಕೆ ಇತ್ಸಂಜ್ಞೆ ಬಂದು ಲೋಪವಾದರೆ ಮಹಿ ಎಂದಾಗುತ್ತದೆ. ಇಕಾರಾಂತವಾದ ಕೃದಂತ ಪದವಾದುದರಿಂದ ಸ್ತ್ರೀಲಿಂಗದಲ್ಲಿ 'ಕೃದಿಕಾ'—ವಾರ್ತಿಕದಿಂದ ಙೀಷ್ ಮಹಿ+ಈ. 'ಯಸ್ಯೇತಿ ಚ' ಸೂತ್ರದಿಂದ ಪೂರ್ವದ ಇಕಾರಕ್ಕೆ ಲೋಪ. ಮಹೀ. 'ಮಹ್ಯತೇ ಪ್ರಜಾಭಿಃ ಇತಿ ಮಹೀ' ಜನರಿಂದ ಪೂಜಿಸಲ್ಪಡುವುದು ಎಂದರ್ಥ. ದೊಡ್ಡದಾದುದರಿಂದ ಇದರ ಭಾರವನ್ನು ಹೊರಲು ದೇವತೆಗಳೂ ಉದ್ಯುಕ್ತರಾಗಿರುತ್ತಾರೆ. ಅಥವಾ ತನ್ನ ಮಾನ ದಿಂದ ಅದರ ಪರಿಮಾಣದಿಂದ ತನಗಿಂತ ಕಡಿಮೆಯಾದ ಪರಿಮಾಣವುಳ್ಳ ಪಾತಾಲವನ್ನು (ಜಹಾತಿ) ಉಪಕ್ರಮಿಸಿರುತ್ತದೆ ಎಂದ ರ್ಥವಾಗುತ್ತದೆ. ಮಾನಶಬ್ದದಿಂದ ಕೂಡಿದ ಹಾಕ್ ಧಾತುವಿನಿಂದ ಮಹೀ ಶಬ್ದವಾಗಿದೆಯೆಂದು ಹೇಳಿದರೆ ಮಾತ್ರ ಈ ಅರ್ಥ ಹೇಳಲು ಸಾಧ್ಯ ' ಓಹಾಕ್.ತ್ಯಾಗೇ ' ಧಾತು. ಮಾನಂ ಜಹಾತಿ ಇತಿ ಮಹೀ. ಮಾನಹಾ ಎಂಬುದು ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಆಯಾಯ ಕಾರ್ಯಗಳು ಬಂದು ಮಹೀ ಎಂದಾಗಿದೆ. ಪಾತಾಲಕ್ಕಿಂತ ಅಧಿಕ ಪ್ರಮಾಣವುಳ್ಳದ್ದು ಎಂದರ್ಥ. ಉದಾಹರಣೆ—

"**ಆ ನೋ ಮಹೀಮರಮತಿಂ ಸಜೋಷಾ**" (ಋ. ಸಂ. ೫-೪೩-೬)

(೧೩) ರಿಪಃ। ರೇಪೃ-ಗತೌ। (ಭೂ. ಆ) "ಕ್ವಿಬ್ವಚಿಪ್ರಚ್ಛ್ಯಾಯತಸ್ತುಕಟಪ್ರು ಜುಶ್ರೀಣಾಮ್" (ಪಾ. ಸೂ. ೩-೩-೧೭೮ ವಾ.) ಇತ್ಯತ್ರ "ಪ್ರಾಕ್‌ಪ್ರತ್ಯಯ ನಿರ್ದೇಶಾತ್ ಇಷ್ಟಸಿದ್ಧಿಃ''—ಇತಿ ವಚನಾತ್ ಹ್ರಸ್ವೇ ರಿಪಃ॥

ಗಮನಾರ್ಥಕನಾದ ರೇಪೃ ಧಾತುವಿಗೆ ಕ್ವಿಪ್ ಬರಬೇಕಾದರೆ ಮೊದಲು ಇಷ್ಟಸಿದ್ಧಿ ಮಾಡಿಕೊಳ್ಳಬೇಕೆಂದುದರಿಂದ ಕ್ವಿಪ್ ಬರಬೇಕಾದರೆ ಮೊದಲು ಧಾತುವಿನ ಏಕಾರಕ್ಕೆ ಹ್ರಸ್ವ. 'ಏಚ ಇಕ್ ಹ್ರಸ್ವಾದೇಶೇ' ಸೂತ್ರದಿಂದ ಏಕಾರಕ್ಕೆ ಇಕಾರ ಹ್ರಸ್ವ ಬಂದರೆ ರಿಪ್ ಎಂದಾಗುತ್ತದೆ. ಕ್ವಿಪ್ ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. ಬಹುವಚನದಲ್ಲಿ ಜಸ್‌ಪ್ರತ್ಯಯ ಬಂದಾಗ ರಿಪಃ ಎಂದಾಗುತ್ತದೆ. ರೇಪತೇ ಇತಿ ರಿಪ್. ಬಹುದೂರ ಹೋಗುವುದು ಅಥವಾ ಇದರಲ್ಲಿ ಪ್ರಾಣಿಗಳು ಸಂಚರಿಸುತ್ತವೆ ಇತ್ಯಾದ್ಯರ್ಥಗಳನ್ನು ಗೋ ಶಬ್ದದಲ್ಲಿ ವಿವರಿಸಿದಂತೆಯೇ ತಿಳಿಯಬೇಕು. ಅಥವಾ ರಿಫ ಧಾತುವಿನಿಂದ ಈ ಶಬ್ದ ನಿಷ್ಪನ್ನವಾಗುತ್ತದೆ. "ರಿಫ-ಕತ್ಥನಯುದ್ಧನಿಂದಾ ಹಿಂಸಾದಾನೇಷು" ತುದಾದಿಃ ಪರಸ್ಮೈಪದೀ. ಈ ಧಾತುವಿಗೆ ಧಾತುಸಾಮಾನ್ಯಕ್ಕೆ ಹೇಳಿದ ಕ್ವಿಪ್‌ಪ್ರತ್ಯಯ ಬಂದಾಗ "ವ್ಯತ್ಯಯೋ ಬಹುಲಮ್" (ಪಾ. ಸೂ. ೩-೧-೮೫) ಸೂತ್ರದಿಂದ ಫಕಾರಕ್ಕೆ ಪಕಾರಾದೇಶ ಬಂದರೆ ರಿಪ್ ಎಂದಾಗುತ್ತದೆ. ಛಂದಸ್ಸಿನಲ್ಲಿ ವಿಕರಣಪ್ರತ್ಯಯಗಳೂ ವ್ಯತ್ಯಾಸವಾಗಿ ಬರುತ್ತವೆಯೆಂದು ಸೂತ್ರಾರ್ಥ. 'ಕತ್ಥನ ಯುದ್ಧಾದೀನ್ ಅಸ್ಯಾಂ ಕುರ್ವಂತಿ ತತ್ಕಾರಿಣಃ' ಭೂಮಿಯಲ್ಲಿ ಜನರು ಯುದ್ಧಾದಿಗಳನ್ನು ಮಾಡುತ್ತಾರೆ, ಶ್ಲಾಘನ ಮಾಡುತ್ತಾರೆ ಎಂದರ್ಥವಾಗುತ್ತದೆ. ಅಥವಾ "ಲಿಪ ಉಪದೇಹೇ (ತು. ಉ) ಲಿಪ್।" ಬಳಿಯುವುದು ಎಂಬ ಅರ್ಥವನ್ನು ಕೊಡುವ ಲಿಪಧಾತುವಿಗೆ ಕ್ವಿಪ್ ಬಂದರೆ ಲಿಪ್ ಎಂದಾಗುತ್ತದೆ. "ರಲಯೋರಭೇದಃ" ಎಂಬ ನ್ಯಾಯದಿಂದ ರೇಫಲಕಾರಗಳಿಗೆ ಭೇದವಿಲ್ಲವೆಂದುದರಿಂದ ಲಕಾರಕ್ಕೆ ರೇಫ ಬಂದರೆ ರಿಪ್ ಎಂದಾಗುತ್ತದೆ. "ಗೋಮಯಾದಿನಾ ಆಲಿಪ್ಯತೇ ಇತಿ ರಿಪ್" ಸಗಣಿ ಮುಂತಾದುವುಗಳಿಂದ ಇದು ಬಳಿಯಲ್ಪಡುತ್ತದೆ. ಮಾಧವಾಚಾರ್ಯರೂ ಕೂಡಾ 'ಲೇಪನಾದ್ರೇಪಣಾತ್ ರಿಪ್' ಎಂದು ನಿರ್ವಚನ ಮಾಡಿರುತ್ತಾರೆ. ಹೋಗುವುದರಿಂದ ಅಥವಾ ಲೇಪಿಸಲ್ಪಡುವುದರಿಂದ ರಿಪ್ ಆಗುತ್ತದೆಯೆಂದರ್ಥ. ರಪ-ಲಪ-ವ್ಯಕ್ತಾಯಾಂ ವಾಚಿ [ಭೂ. ಪ.], "ರಪೇರಿಚ್ಚೋಪಧಾಯಾಃ'' (ಉ. ೧-೨೫) ಇತ್ಯುಪ್ರತ್ಯಯೋ ವಿಧೀಯಮಾನಮಿತ್ತ್ವಂ ಬಾಹುಲಕಾದನ್ಯತ್ರಾಪಿ ಭವತಿ. ಇನ್ನೊಂದು ರೀತಿಯಿಂದ ರಿಪ್‌ಶಬ್ದದ ಉತ್ಪತ್ತಿಯನ್ನು ತೋರಿಸುತ್ತಾನೆ. ಮಾತನಾಡುವುದು ಎಂಬರ್ಥವನ್ನು ಕೊಡುವ ರಪಧಾತುವಿಗೆ ಕ್ವಿಪ್. ರಪ್‌ಧಾತುವಿಗೆ ವ್ಯುಪ್ರತ್ಯಯಪದವಲ್ಲಿರುವಾಗಲೂ ಬರುತ್ತದೆ. ರೇಫದ ಪದದಲ್ಲಿರುವ ಅಕಾರರೂಪ ಉಪಧೆಗೆ ಇಕಾರಾದೇಶ ಬಂದರೆ ರಿಪ್ ಎಂದಾಗುತ್ತದೆ. "ರಪಂತಿ ಅಸ್ಯಾಂ ಪ್ರಾಣಿನಃ' ಇತಿ ರಿಪ್. ಇದರಲ್ಲಿ ಪ್ರಾಣಿಗಳು ಮಾತನಾಡುತ್ತವೆ ಎಂದರ್ಥವಾಗುತ್ತದೆ. ಇದು ವೇದಮಂತ್ರಗಳಲ್ಲಿ ಹೆಚ್ಚಾಗಿ ಬಹುವಚನವಾಗಿಯೇ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆ—

ರಿರಿಹ್ವಾಂಸಃ ರಿಪ ಉಪಸ್ಥೇ ಅಂತಃ (ಋ. ಸಂ. ೧೦-೭೯-೩) "—ಪಾತಿ ಪ್ರಿಯಂ ರಿಪೋ ಅಗ್ರಂ ಪದಂ ವೇಃ (ಋ. ಸಂ. ೩, ೫)

[೧೪] ಅದಿತಿಃ॥ ದೀಙ್-ಕ್ಷಯೇ (ದಿ-ಆ) "ಕೃತ್ಯಲ್ಯುಟೋ ಬಹುಲಮ್ '' (ಪಾ. ಸೂ. ೩-೩-೧೧೩) ಇತಿ ಕರ್ತರಿ ಕ್ತಿನಿ ಛಾಂದಸಂ ಹ್ರಸ್ವತ್ವಂ, ನಞ್‌ಸಮಾಸಃ।

ಕ್ಷಯಾರ್ಥವನ್ನು ಕೊಡುವ ದೀಙ್‌ಧಾತುವು ದಿವಾದಿಯಲ್ಲಿ ಹೇಳಿದೆ. ಙಿತ್ತಾಗುವುದರಿಂದ ಇದು ಆತ್ಮನೇ ಪದೀ. ಇದಕ್ಕೆ 'ಕೃತ್ಯಲ್ಯುಟಃ'-ಸೂತ್ರದಿಂದ ಕರ್ತ್ರರ್ಥದಲ್ಲಿ ಕ್ತಿನ್‌ಪ್ರತ್ಯಯ. 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರ ಇತ್ತಾಗಿ ತಿಮಾತ್ರ

ಉಳಿಯುತ್ತದೆ. ದೀ+ತಿ ಎಂದಿರುವಾಗ ಛಾಂದಸವಾಗಿ ಹ್ರಸ್ವ. ನ ದಿತಿಃ=ಅದಿತಿಃ ನಞ್‌ತತ್ಪುರುಷ ಸಮಾಸ 'ನ ದೀನಾ ಭವತಿ' ಸಕಲ ಪ್ರಪಂಚವನ್ನು ಧರಿಸಿವರೂ ಸ್ವಲ್ಪವೂ ವ್ಯಥೆಹೊಂದುವುದಿಲ್ಲವೆಂದರ್ಥ. "ಅದಿತಿರದೀನಾ" (ನಿ. ೪-೨೨) ಎಂಬ ಭಾಷ್ಯದಲ್ಲಿ ಸ್ಕಂದಸ್ವಾಮಿಯು— ಅದಿತಿ ಎಂಬ ರೂಪವು 'ದೋ-ಅವಖಂಡನೇ', ಎಂಬ ಧಾತುವಿನಿಂದಲೂ ನಿಷ್ಪನ್ನವಾಗ ಬಹುದು. ಕ್ತಿನ್ ಪರವಾದಾಗ "ದ್ಯತಿ ಸ್ಯತಿ ಮಾ ಸ್ಥಾ—" (ಪಾ. ಸೂ. ೭-೪-೪೦) ಸೂತ್ರದಿಂದ ಇತ್ವ ಬರುವುದರಿಂದ ದಿತಿಃ ಎಂದಾಗುತ್ತದೆ. ಆದರೂ ಇಲ್ಲಿ ಯಾವಾಗಲೂ ಅಕಾರಪೂರ್ವದಲ್ಲಿರುವುದರಿಂದ ನಞ್ ಸಮಾಸಮಾಡಬೇಕು. ಆಗ ಅರ್ಥ ಸಮಂಜಸವಾಗುವುದಿಲ್ಲ. ಆದುದರಿಂದ ದೀಙ್ ಧಾತುವಿನಿಂದಲೇ ಛಾಂದಸವಾಗಿ ಈ ರೂಪವನ್ನು ಹೇಳಬೇಕು' ಎಂದಿರು ತ್ತಾನೆ. "ನ ಸಂಸ್ಕಾರಮಾದ್ರಿಯೇತ ಅರ್ಥೋ ನಿತ್ಯಃ ಪರೀಕ್ಷೇತ" (ಮಹಾಭಾಷ್ಯ) ಕೇವಲ ಸೂತ್ರಗಳಿಂದ ಕಾರ್ಯವಾಗುತ್ತ ದೆಂದು ನೋಡಬಾರದು. ಅರ್ಥ ಸಾಮಂಜಸ್ಯವನ್ನೂ ಚೆನ್ನಾಗಿ ನೋಡಬೇಕೆಂದು ಭಾಷ್ಯಕಾರರು (ಪತಂಜಲಿ) ಹೇಳಿರುತ್ತಾರೆ. ಉದಾಹರಣೆ—

**ದೇವೇಭ್ಯೋ ಅದಿತಯೇ ಸ್ಯೋನಮ್** (ಋ. ಸಂ. ೧೦-೧೧೦-೪) **' ತನೂಮೃಕ್ಷಂತ ವಾಜಿನಮುಪಸ್ಥೇ ಅದಿತೇರಧಿ** (ಋ. ಸಂ. ೯-೨೬-೧)

(೧೫) **ಇಲಾ ‖ ಈಡ-ಸ್ತುತೌ (ಅದಾ-ಆ) ಞಿ ಇನ್ಧೀ-ದೀಪ್ತೌ (ರು-ಆ) ಅನಯೋಃ "ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' (ಪಾ: ಸೂ. ೩-೩-೧೯) ಇತಿ ಘಞ್. ಪೃಷೋದರಾದಿತ್ವಾತ್ (ಪಾ. ಸೂ. ೬-೩-೧೦೯) ಈಡೋ ಹ್ರಸ್ವತ್ವಮ್, ಇಂಧೇರ್ನಕಾರಲೋಪೋ ಧಕಾರಸ್ಯ ಡಕಾರೋ ಗುಣಾಭಾವಶ್ಚ ‖**

ಸ್ತುತ್ಯರ್ಥಕವಾದ ಈಡ ಧಾತು. ಆತ್ಮನೇಪದೀ. ಅಥವಾ ದೀಪ್ತ್ಯರ್ಥಕವಾದ ಇನ್ಧೀಧಾತು. ಇದರಲ್ಲಿ ಆದಿ ಯಲ್ಲಿರುವ ಇಕಾರವು 'ಆದಿರ್ಞಿಟುಡವಃ' ಸೂತ್ರದಿಂದ ಲೋಪ ಹೊಂದುತ್ತದೆ. ಇವುಗಳಿಗೆ 'ಅಕರ್ತರಿ—' ಸೂತ್ರದಿಂದ ಕರ್ತೃಭಿನ್ನಕಾರಕಾರ್ಥದಲ್ಲಿ ಒಂದು ಸಂಜ್ಞೆ ತೋರುವಾಗ ಘಞ್ ಪ್ರತ್ಯಯ. ಘಞ್ ನಲ್ಲಿ ಅ ಕಾರ ಉಳಿಯುತ್ತದೆ. ಪೃಷೋ ದರಾದಿ ಗಣದಲ್ಲಿ ಸೇರಿರುವುದರಿಂದ ಈ ಡ ಧಾತುವಿಗೆ ಹ್ರಸ್ವ ಲ ಡಗಳಿಗೆ ಅ ಭೇದವಿರುವುದರಿಂದ ಇ ಲ ಎಂದಾಗ ಸ್ತ್ರೀತ್ವದಲ್ಲಿ ಅದಂತ ನಿಮಿತ್ತವಾಗಿ ಟಾಪ್ ಇಲಾ. ಇಂಧೀ ಧಾತುವಿನಲ್ಲಿ ಉಪಧಾನಕಾರಕ್ಕೆ ಲೋಪಬಂದರೆ ಧ ಕಾರಕ್ಕೆ ಡಕಾರಾದೇಶ ಪೃಷೋದರಾದಿಯಲ್ಲಿ ಸೇರಿರುವುದರಿಂದಲೇ ಘಞ್ ನಿಮಿತ್ತವಾಗಿ ಗುಣಬರಬೇಕಾಗಿದ್ದದ್ದು ಬರುವುದಿಲ್ಲ. 'ಈಡ್ಯತೇ= ಸ್ತೂಯತೇ ಅಸ್ಯಾಂ ದೇವಾನ್ ಯಜಮಾನಃ' ಭೂಮಿಯಲ್ಲಿ ಯಜಮಾನನು ದೇವತೆಗಳನ್ನು ಸ್ತೋತ್ರಮಾಡುತ್ತಾನೆ, ಅಥವಾ ಇಲ್ಲಿ ಯಜಮಾನನು ಸಂಪತ್ತಿನಿಂದ ಪ್ರಕಾಶಿಸುತ್ತಾನೆ ಎಂದರ್ಥವಾಗುತ್ತದೆ. ಅಥವಾ—ಗತ್ಯರ್ಥದಲ್ಲಿ ಇಣ್‌ಧಾತುವು ಅದಾದಿ ಯಲ್ಲಿ ಪರಸ್ಮೈಪದಿಯಾಗಿ ಹೇಳಿದೆ. ಇದಕ್ಕೆ 'ಕ್ವಾದಿಭ್ಯಃ ಕಿತ್' (ಉ ೧-೧೦೨) ಉಣಾದಿ ಸೂತ್ರದಿಂದ ಕಿತ್ತಾದ ಡ ಪ್ರತ್ಯಯ. ಬಹುಲಗ್ರಹಣಾನುವೃತ್ತಿ ಇರುವುದರಿಂದ ಕವರ್ಗಾದಿ, ಞಮಂತವಾಗದಿದ್ದರೂ ಇದಕ್ಕೆ ಡ ಪ್ರತ್ಯಯ ಬರುತ್ತದೆ. ಇದಕ್ಕೆ ಕಿತ್ತ್ವ ಅತಿದೇಶವಾಗಿರುವುದರಿಂದ ಗುಣ ಬರುವುದಿಲ್ಲ. ಡ ಕಾರಕ್ಕೆ ಲಕಾರಾದೇಶ. ಹಿಂದಿನಂತೆ ಟಾಪ್ 'ಏತಿ ಬಹುಮೂರಮ್' ಬಹುಮೂರ ಹೋಗುತ್ತದೆ ಇತ್ಯಾದಿ ನಿರ್ವಚನವನ್ನು ಗೋ ಶಬ್ದದಲ್ಲಿ ಹೇಳಿದಂತೆಯೇ ತಿಳಿಯಬೇಕು. ಅಥವಾ- ಇಲ—ಸ್ವಪ್ನ ಕ್ಷೇಪಣಯೋಃ (ತು. ಪ) ಕ್ಷೇಪಣಾರ್ಥಕವಾದ ಈ ಇಲಧಾತುವಿಗೆ' ಇಗುಪಧಜ್ಞಾಪ್ರೀಕಿರಃ ಕಃ (ಪಾ. ಸೂ. ೩-೧-೧೩೫) ಸೂತ್ರದಿಂದ ಇಗುಪಧವಾದುದರಿಂದ ಕ ಪ್ರತ್ಯಯ. 'ಲಶಕ್ವ—' ಸೂತ್ರದಿಂದ ಕಕಾರ ಇತ್ತಾಗಿ ಅಕಾರ ಉಳಿಯುತ್ತದೆ. 'ಕೃತ್ಯಲ್ಯುಟೋ ಬಹುಲಮ್ (ಪಾ. ಸೂ. ೩-೩-೧೧೩) ಸೂತ್ರದಿಂದ ಬಹುಲಗ್ರಹಣಾನುವೃತ್ತಿ

ಇರುವುದರಿಂದ ಈ ಪ್ರತ್ಯಯವು ಅಧಿಕರಣಾರ್ಥದಲ್ಲಿ ಬರುತ್ತದೆಂದು ತಿಳಿಯಬೇಕು. ಪ್ರತ್ಯಯ ಕಿತ್ತಾದುದರಿಂದ ಲಘೂಪದ ಗುಣ ಬರುವುದಿಲ್ಲ. ಸ್ತ್ರೀತ್ವದಲ್ಲಿ ಟಾಪ್. ಡಕಾರ ಲಕಾರಗಳಿಗೆ ಅಭೇದವನ್ನಂಗೀಕರಿಸಿದುದರಿಂದ ಡಕಾರವೂ ಬರುತ್ತದೆ. ಇಡಾ ಕ್ಷಿಪ್ಯಂತೇ ಅಸ್ಯಾಂ ಭಾವಃ ' ಪದಾರ್ಥಗಳು ಇವರಲ್ಲಿ ಇಡಲ್ಪಡುತ್ತವೆ [ಎಸೆಯಲ್ಪಡುತ್ತವೆ] ಎಂದರ್ಥವಾಗುತ್ತದೆ. ಸ್ವಪ್ನಾರ್ಥವನ್ನಂಗೀಕರಿಸಿದರೆ ' ಸ್ವಪಂತೇಽಸ್ಯಾಮ್ ' ಇದರಲ್ಲಿ ಪ್ರಾಣಿಗಳು ಮಲಗುತ್ತವೆ ಎಂದರ್ಥ ಅಥವಾ—ಇಲಾ ಎಂಬುದು ಅನ್ನದ ಹೆಸರು, ಗೋವಿನ ಹೆಸರು ನಿಘಂಟುವಿನಲ್ಲಿ [ನಿಘ-೨, ೭-೨-೧೧] ಹೇಳಿವೆ. ಇಲಾ ಅನ್ನಂ ಗೌರ್ವಾ ಅಸ್ಯಾಮಸ್ತಿ ಇತಿ ಇಲಾ ' ಅನ್ನದಿಂದ ಕೂಡಿರುವುದು ಅಥವಾ ಹಸುಗಳಿಂದ ಕೂಡಿರುವುದು ಎಂಬರ್ಥದಲ್ಲಿ ' ಅರ್ಶ ಆದಿಭ್ಯೋಽಚ್ ' (ಪಾ. ಸೂ. ೫-೨-೧೨೭) ಸೂತ್ರದಿಂದ ಅಚ್ ಪ್ರತ್ಯಯ. ಇಲಾ + ಅ ಎಂದಿರುವಾಗ 'ಅರ್ಶ ಅದಿಭ್ಯೋಽಚ್' (ನಿಘ-೨,೭-೨,೧೧) ಸೂತ್ರದಿಂದ ಆಕಾರಲೋಪ. ಇಲ್ಲಿ ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಇಲಾ ಅನ್ನವುಳ್ಳದ್ದು ಅಥವಾ ಹಸುವುಳ್ಳದ್ದು ಭೂಮಿ. ಋಗ್ವೇದಪ್ರಾತಿಶಾಖ್ಯೆಯಲ್ಲಿ ಡಕಾರಕ್ಕೆ ಸ್ವರಮಧ್ಯದಲ್ಲಿರುವಾಗ ಲಕಾರವನ್ನು ವಿಧಿಸಿರುವುದರಿಂದ ಲತ್ವವೇ ಅಧಿಕವಾಗಿರುತ್ತದೆ. ಋಕ್ಕುಗಳಲ್ಲಿ ಲಕಾರವೇ ಉಪಲಬ್ಧವಾಗಿರುವುದರಿಂದ ಇಲಾ ಎಂಬುದು ಋಗ್ವೇದದೃಷ್ಟಪಾಠವೇ ಆಗಿರುತ್ತದೆ. ಉದಾಹರಣೆ—

**'ಇಲಾಯಾಸ್ತ್ವಾ ಪದೇ ವಯಂ** (ಋ. ಸಂ. ೩–೨೯–೪)'—**ಅಥಾ ಹೋತಾ ನ್ಯಸೀದೋ ಯಜೀಯಾನಿಲಸ್ಪದ—'** (ಋ. ಸಂ. ೬–೧–೨)—**ಇಲಸ್ಪದೇ ಸಮಿಧ್ಯಸೇ '** (ಋ. ಸಂ–೧೦–೧೯೧–೧) ಇಲಃ ಎಂಬಲ್ಲಿ ಛಾಂದಸವಾದುದರಿಂದ ಆಕಾರ ಲೋಪಬಂದಿದೆಯೆಂದು ಸ್ಕಂದಸ್ವಾಮಿಯು ಹೇಳಿರುತ್ತಾನೆ ॥

(೧೬) **ನಿರ್ಋತಿಃ ॥ ನಿರ್‌ಪೂರ್ವಾತ್ ರಮೇಃ** (ಭೂ-ಆ)**"ಕೃತ್ಯಲ್ಯುಟೋ ಬಹುಲಮ್"** (ಪಾ. ಸೂ-೩-೩-೧೧೩) **ಇತಿ ಕರ್ತರ್ಯಧಿಕರಣೇ ಚ ಕ್ತಿನಿ** [೩-೩-೯೪] **ಅನುನಾಸಿಕಲೋಪಃ । 'ರಮೇರ್ಋತೌ ಬಹುಲಮ್ '** (ಪಾ. ಸೂ. ೬-೨-೩೪ ವಾ) **ಇತ್ಯತ್ರ ಬಹುಲವಚನಾತ್ ಸಂಪ್ರಸಾರಣಮ್ ॥**

**ರಮು–ಕ್ರೀಡಾಯಾಮ್ ಧಾತು ಭ್ವಾದಿ ಆತ್ಮನೇಪದೀ.** ನಿರ್ ಉಪಸರ್ಗ ಪೂರ್ವಪದದಲ್ಲಿರುವಾಗ, ಸ್ತ್ರೀಯಾಂ-ಕ್ತಿನ್' ಸೂತ್ರದಿಂದ ಕ್ತಿನ್‌ಪ್ರತ್ಯಯ. ಆ ಸೂತ್ರದಲ್ಲಿ ಭಾವಾರ್ಥದಲ್ಲಿ ಪ್ರತ್ಯಯ ಹೇಳಿದ್ದರೂ ಬಹುಲಗ್ರಹಣದಿಂದ ಇಲ್ಲಿ ಕರ್ತೃರ್ಥದಲ್ಲಿ ಅಥವಾ ಅಧಿಕರಣಾರ್ಥದಲ್ಲಿ ಬರುತ್ತದೆ. ನಿರ್ + ರಮ್ + ತಿ ಎಂದಿರುವಾಗ ಪ್ರತ್ಯಯಕಿತ್ತಾದುದುದರಿಂದ 'ಅನುದಾತ್ತೋಪದೇಶ—' ಸೂತ್ರದಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. " ರಮೇರ್ಋತೌ ಬಹುಲಮ್ " ಎಂಬಲ್ಲಿ ಋತಿಪರವಾದಾಗ ಹೇಳಿದ್ದರೂ ಬಹುಲಗ್ರಹಣವಿರುವುದರಿಂದ ತಿಪರವಾದಾಗಲೂ ಧಾತುವಿನ ರೇಫಕ್ಕೆ ಸಂಪ್ರಸಾರಣ [ಋ] 'ಸಂಪ್ರಸಾರಣಾಚ್ಚ.' ಸೂತ್ರದಿಂದ ಪೂರ್ವರೂಪ ಬಂದರೆ ನಿರ್ಋತಿ ಎಂದಾಗುತ್ತದೆ. "ನಿರ್ಋತಿರ್ನಿರಮಣಾತ್'' [೨-೭] ಎಂದು ನಿರುಕ್ತ. ಇದಕ್ಕೆ ಸ್ಕಂದಸ್ವಾಮಿಯು ಹೀಗೆ ಅರ್ಥ ವಿವರಣೆ ಮಾಡಿರುತ್ತಾನೆ: "ನಿರಮಣಾತ್ =ನಿಶ್ಚಲತ್ವೇನಾವಸ್ಥಾನಾತ್" ಎಷ್ಟು ಭಾರವಿದ್ದರೂ ನಿಶ್ಚಲವಾಗಿ ಭೂಮಿ ಇರುವುದರಿಂದ ನಿರ್ಋತಿ ಎಂಬ ಹೆಸರು ಬಂದಿದೆ. "ರಮಂತೇ ವಾಸ್ಯಾಂ ಭೂತಾನಿ" ಅಥವಾ ಇದರಲ್ಲಿ ಪ್ರಾಣಿಸಮುದಾಯವು ಕ್ರೀಡಿಸುತ್ತದೆ; ಆರಾಮವಾಗಿ ಇರುತ್ತದೆ ಎಂದರ್ಥವಾಗುತ್ತದೆ. ನಿಶ್ಚಲಭಾವ ಅರ್ಥವನ್ನು ಹೇಳುವುದಾದರೆ ಆಗ ನಿರ್ ಉಪಸರ್ಗಕ್ಕೇ ಆ ಅರ್ಥ ಹೇಳಬೇಕು. ಎರಡನೆಯ ಅರ್ಥದಲ್ಲಿ ನಿರ್ ಉಪಸರ್ಗ ಧಾತ್ವರ್ಥವನ್ನೇ ಅನುವಾದಮಾಡುತ್ತದೆಂದು ತಿಳಿಯಬೇಕು. ವೈಯಾಕರಣರ ಮಾರ್ಗವನ್ನು ಅನುಸರಿಸುವುದಾದರೆ ನಿರ್ಋತಿ ಶಬ್ದವ್ಯುತ್ಪತ್ತಿ ಬೇರೆಯಾಗುತ್ತದೆ. ನಿರ್ ಉಪಸರ್ಗದಿಂದ ಕೂಡಿದ ಋ + ಗತೌ ಧಾತುವಿಗೆ 'ಸ್ತ್ರಿಯಾಂ ಕ್ತಿನ್' ಎಂಬ ಸೂತ್ರದಿಂದ

ಕ್ತಿನ್‌ಪ್ರತ್ಯಯ. ಪ್ರತ್ಯಯಕಿತ್ತ್ವಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ನಿರ್ಋತಿಃ 'ನಿಃ = ಕ್ರಾಂತಾಕೃತೇ. ಗಮನಾತ್ ನಿಶ್ಚಲವದವತಿಷ್ಠತೇ' ಎಷ್ಟು ಅತಿಕ್ರಮಿಸಿ ಹೋದರೂ ಒಂದೇ ರೀತಿಯಿಂದ ನಿಶ್ಚಲವಾಗಿರುತ್ತದೆ ಎಂದರ್ಥ. ಉದಾಹರಣೆ

**" ಬಹುಪ್ರಜಾ ನಿರ್ಋತಿಮಾವಿವೇಶ "** [ಋ. ಸಂ. ೧-೧೬೪-೩೨]—**" ಅಧಾ ಶಯೀತ ನಿರ್ಋತೇರುಪಸ್ಥೇ"** [ಋ. ಸಂ. ೧೦-೯೫-೧೪]

**೧೭] ಭೂಃ 'ಭೂ-ಸತ್ತಾಯಾಮ್ [ಭೂ.ಪ] ಸಂಪದಾದಿತ್ವಾತ್ ಭಾವೇ ಕ್ವಿಪ್ [ಪಾ.ಸೂ. ೩-೩-೯೪] ಭವತಸ್ಯಾಂ ಸರ್ವಮಿತಿ ಭೂಃ ॥**

ಭೂ ಧಾತು. ಇರುವುದು ಎಂದರ್ಥ. "ಸ್ತ್ರಿಯಾಂ ಕ್ತಿನ್'' ಎಂಬ'ಅಧಿಕಾರದಲ್ಲಿ "ಸಂಪದಾದಿಭ್ಯಃ ಕ್ವಿಪ್" ಎಂದು ವಾರ್ತಿಕ ಹೇಳಿದೆ. ಈ ಧಾತುವು ಸಂಪದಾದಿಗಣದಲ್ಲಿ ಸೇರಿರುವುದರಿಂದ ಇದಕ್ಕೂ ಭಾವಾರ್ಥದಲ್ಲಿ ಕ್ವಿಪ್ ಬರುತ್ತದೆ. ಕ್ವಿಪ್‌ನಲ್ಲಿ ಸರ್ವಲೋಪ. ಕಿತ್ತ್ವಾದುದರಿಂದ ಗುಣ ಬರುವುದಿಲ್ಲ, ಎಲ್ಲವೂ ಇದರಲ್ಲಿ ಇರುತ್ತದೆ ಎಂದರ್ಥವಾಗುತ್ತದೆ. ಭೂಃ ಪ್ರಥಮಾ ಏಕವಚನ. ಉದಾಹರಣೆ—

" ಮೂರ್ಧಾ ಭುವೋ ಭವತಿ ನಕ್ತಮಗ್ನಿಃ '' [ಋ. ಸಂ. ೧೦-೮೮-೬] "ವ್ಯತ್ಯಯೋ ಬಹುಲಮ್" ಸೂತ್ರದಲ್ಲಿ ವರ್ಣವ್ಯತ್ಯಯ ಬರುತ್ತದೆಂದು ಹೇಳಿರುವುದರಿಂದ ಕೆಲವು ಮಂತ್ರಗಳಲ್ಲಿ ಇದು ರೇಫಾಂತವಾಗಿರುತ್ತದೆ. ಉದಾ— **"ಭೂರ್ಭುವಃ ಸ್ವಃ'' [ಯ. ವಾ. ಸ. ೩೬-೩].**

**(೧೮) ಭೂಮಿಃ ॥ ' ಭುವಃ ಕಿತ್ ' [ಉ. ೪-೪೫] ಇತಿ ಭವತೇಃ ಮಿಪ್ರತ್ಯಯಃ । ಅಥವಾ ಭೂತೇಽಪಿ ದೃಶ್ಯಂತೇ (ಪಾ. ಸೂ. ೩.೩-೨) ಇತಿ ವಚನಾತ್ ಭೂತೇ ಮಿಪ್ರತ್ಯಯಃ ॥**

ಸತ್ತಾರ್ಥಕವಾದ ಭೂಧಾತು. ' ಭುವಃ ಕಿತ್ ' ಉಣಾದಿಸೂತ್ರದಿಂದ ಮಿಪ್ರತ್ಯಯ. ಇದಕ್ಕೆ ಕಿತ್ತ್ವ ಅತಿದೇಶ ಮಾಡಿರುವುದರಿಂದ ' ಕಿಙತಿಚ ' ಸೂತ್ರದಿಂದ ಗುಣನಿಷೇಧ ಬರುತ್ತದೆ. ಭೂಮಿಃ ಎಂದಾಗುತ್ತದೆ. ಅಥವಾ ' ಭೂತೇಽಪಿ ದೃಶ್ಯಂತೇ ' ಉಣಾದಿಪ್ರತ್ಯಯಗಳು ಭೂತಕಾಲಾರ್ಥದಲ್ಲಿಯೂ ಬರುತ್ತವೆಯೆಂದುದರಿಂದ ಭೂಧಾತುವಿಗೆ ಭೂತಾರ್ಥದಲ್ಲಿ ಮಿಪ್ರತ್ಯಯ ಬಂದು ಹಿಂದಿನಂತೆ ರೂಪವಾಗುತ್ತದೆ. ಇದರಲ್ಲಿ ಎಲ್ಲವೂ ಇರುತ್ತವೆ- ಇತ್ಯಾದ್ಯರ್ಥಗಳನ್ನು ಭೂಶಬ್ದದಂತೆಯೇ ತಿಳಿಯಬೇಕು. ಇದು ಪುರಾತನವಾದದ್ದು ಎಂದು ಶ್ರುತಿಯಲ್ಲಿಯೂ ಹೇಳಿದೆ. ಉದಾಹರಣೆ—

**' ನ್ಯಙ್ಙುತ್ತಾನಾಮನ್ವೇತಿ ಭೂಮಿಮ್ ' [ಋ. ಸಂ. ೧೦-೨೭-೧೩] '---ಭೂಮಿರ್ಭೂಮಿಮಗಾತ್".**

**(೧೯) ಪೂಷಾ॥ ಪುಷ-ಪುಷ್ಟೌ । (ಭೂ, ದಿ, ಕ್ರ್ಯಾ - ಪ) ' ಶ್ವನ್ನುಕ್ಷನ್‌ಪೂಷನ್ ' (ಉ-೧-೧೫೫) ಇತ್ಯಾದಿನಾ ಕನಿನ್‌ಪ್ರತ್ಯಯಾಂತೋ ನಿಪಾತ್ಯತೇ, ನಿಪಾತನಾದುಪಧಾಯಾದೀರ್ಘಃ ।**

ಭ್ವಾದಿ, ದಿವಾದಿ, ಕ್ರ್ಯಾದಿಗಳಲ್ಲಿ ಪುಷ್ಟಿಹೊಂದುವುದು ಎಂಬರ್ಥದಲ್ಲಿ ಪುಷ ಧಾತು ಹೇಳಿದೆ. ' ಶ್ವನ್ನುಕ್ಷನ್ ' ಉಣಾದಿಸೂತ್ರದಿಂದ ಕನಿನ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಸಿದ್ಧಪ್ರಕ್ರಿಯೆಯುಳ್ಳ ಶಬ್ದನಿರ್ದೇಶವೇ ನಿಪಾತ. ಸೂತ್ರಕಾರರೇ ಆಯಾಯಕಾರ್ಯಗಳನ್ನು ಮಾಡಿ ಪರಿಷ್ಕೃತಶಬ್ದಸ್ವರೂಪವನ್ನು ನಿರ್ದೇಶಿಸಿರುವರು. ಹೀಗೆ ನಿಪಾತಮಾಡಿರುವುದ

ರಿಂದಲೇ ಧಾತುವಿನ ಉಪಧೆಗೆ (ಉಕಾರ) ದೀರ್ಘ ಬಂದಿದೆ. ಪೂಷನ್ ಎಂದು ನಾಂತಶಬ್ದವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಸುವಿಭಕ್ತಿ ಬಂದಾಗ 'ಹಲ್‌ಙ್ಯಾಭ್ಯೋ'—ಸೂತ್ರದಿಂದ ಅದಕ್ಕೆ ಲೋಪ. 'ಸರ್ವನಾಮಸ್ಥಾನೇ ಚಾಽಸಂಬುದ್ಧೌ' ಸೂತ್ರದಿಂದ ಉಪಧೆಗೆ [ಅಕಾರ] ದೀರ್ಘ. 'ನ ಲೋಪಃ ಪ್ರಾತಿಪದಿಕಾಂತಸ್ಯ' ಸೂತ್ರದಿಂದ ಅಂತ್ಯದ ನಕಾರಕ್ಕೆ ಲೋಪ, ಪೂಷಾ "ಪುಷ್ಯತಿ= ಧಾನ್ಯಾದಿಭಿಃ ಸಮೃದ್ಧಾ ಭವತಿ' ಧಾನ್ಯಾದಿಗಳಿಂದ ಸಮೃದ್ಧವಾದುದರಿಂದ ಭೂಮಿಯು ಪೂಷಾ ಎಂಬ ನಾಮಧೇಯವನ್ನು ಹೊಂದುತ್ತದೆ. ಪ್ರೇರಣಾರ್ಥವನ್ನು ಸ್ವೀಕರಿಸಿದರೆ 'ಪೋಷಯತಿ ವಾನ್ನೈಃ ಪ್ರಜಾಃ' ಭೂಮಿಯು ಅನ್ನಾದಿಗಳಿಂದ ಪ್ರಾಣಿಗಳನ್ನು ಸಂರಕ್ಷಿಸುತ್ತದೆ ಎಂದರ್ಥವಾಗುತ್ತದೆ. 'ಸರ್ವಾರ್ಥ ಪೋಷಣಾತ್ ಪೂಷಾ' ಎಲ್ಲಾ ವಸ್ತುಗಳನ್ನು ರಕ್ಷಿಸುವುದರಿಂದ ಪೂಷಾ ಎಂದಾಗುತ್ತದೆಂದು ಭಟ್ಟಭಾಸ್ಕರಮಿಶ್ರರೂ ನಿರ್ವಚನಮಾಡಿರುತ್ತಾರೆ. ಈ ಅರ್ಥವನ್ನು ಶ್ರುತಿಯೂ ಹೇಳುತ್ತಿದೆ—"ಪೃಥಿವೀ ನ್ಯವರ್ತಯತ್ ಸೋಷಧೀಭಿರ್ವನಸ್ಪತಿಭಿರಪುಷ್ಯತ್" ಅಥವಾ ಪುಷ-ಧಾರಣೇ ಚುರಾದಿ. ಪರಸ್ಮೈಪದೀ. ಇವಕ್ಕೆ ಹಿಂದಿನಂತೆ ಕನಿನ್‌ಪ್ರತ್ಯಯ. ದೀರ್ಘಾದಿ. 'ಧಾರಯತಿ ಸರ್ವಾಣಿ ಭೂತಾನಿ' ಎಲ್ಲಾ ಪ್ರಾಣಿಜಾತಗಳನ್ನೂ ಧರಿಸಿರುತ್ತದೆ ಎಂದರ್ಥವಾಗುತ್ತದೆ. "ಆ ಪೂಷಞ್ಚಿತ್ರಬರ್ಹಿಷಮ್' (ಋ. ಸಂ. ೧-೨೩-೧೩) ಎಂಬ ಮಂತ್ರವ್ಯಾಖ್ಯಾನವನ್ನು ಮಾಡುವಾಗ ಮಾಧವಾಚಾರ್ಯರೂ—"ಎಲ್ಲವನ್ನೂ ಇದು ಪೋಷಣೆಮಾಡುವುದರಿಂದ ಪೂಷಾ ಎಂಬ ಹೆಸರು ಪ್ರತ್ಯಕ್ಷಪ್ರಮಾಣದಿಂದಲೇ ಸಿದ್ಧವಾಗಿದೆ" ಎಂದು ನಿರ್ವಚನಮಾಡಿರುತ್ತಾರೆ. ಉದಾಹರಣೆ—"**ಪೂಷಾ ತ್ವೇ ತೋ ನಯತು ಹಸ್ತಗೃಹ್ಯ**' (**ಋ ಸಂ. ೧೦-೮೫-೬**) ಇತಿ, '**ಸರಸ್ವತ್ಯೈ ಪೂಷ್ಣೇಽಗ್ನಯೇ ಸ್ವಾಹಾ** ॥ (**ಯ. ವಾ. ಸಂ. ೪-೭**) ॥

**(೨೦) ಗಾತುಃ ॥ ಗಾ-ಸ್ತುತೌ. ಛಂದಸಿ ಜುಹೋತ್ಯಾದಿಃ (ಪ) ಗಾಙ್-ಗತೌ (ಭೂ-ಆ.) ಕೈ, ಗೈ-ಶಬ್ದೇ ಭೂವಾದಿಃ (ಪ.) "ಕಮಿ ಮನಿಜನಿಗಾಭಾಯಾಹಿಭ್ಯಶ್ಚ (ಉ. ೧-೭೦) ಇತಿ ತು ಪ್ರತ್ಯಯಃ ॥**

ಸ್ತುತ್ಯರ್ಥದಲ್ಲಿ ಗಾಧಾತು ಜುಹೋತ್ಯಾದಿಗಣದಲ್ಲಿ ಹೇಳಿದೆ. ಇದು ಛಂದಸ್ಸಿನಲ್ಲಿ ಮಾತ್ರ ಪ್ರಯೋಗ ಹೊಂದುತ್ತದೆ. "ದೇವಾನ್ ಜಿಗಾತಿ ಸುಮ್ನಯುಃ" ಇತ್ಯಾದಿ ಮಂತ್ರಗಳಲ್ಲಿ ಉದಾಹೃತವಾಗಿದೆ. ಗತ್ಯರ್ಥದಲ್ಲಿ ಗಾಙ್‌ಧಾತು ಭ್ವಾದಿಯಲ್ಲಿ ಹೇಳಿದೆ. ಙಿತ್ತಾದುದರಿಂದ ಆತ್ಮನೇ ಪದಿಯಾಗುತ್ತದೆ. ಅಥವಾ ಶಬ್ದಾರ್ಥದಲ್ಲಿ ಗೈ ಧಾತುವು ಭ್ವಾದಿಯಲ್ಲಿ ಪರಸ್ಮೈಪದಿಯಾಗಿ ಹೇಳಿದೆ. ಇವುಗಳಿಗೆ 'ಕಮಿಮನಿ'—ಇತ್ಯಾದಿ ಉಣಾದಿ ಸೂತ್ರದಿಂದ ತುಪ್ರತ್ಯಯ. ಗಾತುಃ ಎಂದಾಗುತ್ತದೆ. ಗೈ ಧಾತುವಿಗೆ ತು ಬಂದಾಗ 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ಧಾತುವಿನ ಐ ಕಾರಕ್ಕೆ ಆಕಾರಾದೇಶ ಬಂದು ಗಾತುಃ ಎಂದೇ ರೂಪವಾಗುತ್ತದೆ. ಸ್ತುತ್ಯರ್ಥಕ ಗಾ ಧಾತುವಿನ ರೂಪವೆಂದರೆ—'ಗೀಯತೇ = ಸ್ತೂಯತೇಽಸೌ' ಇದು ಜನರಿಂದ ಸ್ತುತಿಸಲ್ಪಡುತ್ತದೆ, ಅಥವಾ ಇದರಲ್ಲಿ ಇದ್ದು ಜನರು ಇಂದ್ರಾದಿ ದೇವತೆಗಳನ್ನು ಸ್ತುತಿಸುತ್ತಾರೆ ಎಂದರ್ಥವಾಗುತ್ತದೆ. ಗತ್ಯರ್ಥದಲ್ಲಿ—"ಗಚ್ಛಂತ್ಯಸ್ಯಾಂ ಭೂತಾನಿ" ಇದರಲ್ಲಿ ಪ್ರಾಣಿಗಳು ಸಂಚರಿಸುತ್ತವೆ ಎಂದರ್ಥವಾಗುತ್ತದೆ. ಶಬ್ದಾರ್ಥದಲ್ಲಿ—"ಗಾಯಂತಿ ಅಸ್ಯಾಂ ಸ್ಥಿತಾ ಗಾಯಕಾಃ" ಇದರಲ್ಲಿ ಇದ್ದು ಸಂಗೀತಕಾರರು ಗಾನಮಾಡುತ್ತಾರೆ ಎಂದರ್ಥವಾಗುತ್ತದೆ. ಅಥವಾ ಗಾತುಃ ಅಂದರೆ ಮಾರ್ಗ. 'ಗಮ್ಯತೇ ಅನೇನ ಇತಿ ಗಾತುಃ' ಇದರಿಂದ ಜನರು ಹೋಗುತ್ತಾರೆ ಎಂಬ ಕರಣವ್ಯುತ್ಪತ್ತಿಯಿಂದ ದಾರಿಯಾಗುತ್ತದೆ. ಗಾತುಉಳ್ಳದ್ದೂ ಗಾತುವಾಗುತ್ತದೆ. ಮತ್ವರ್ಥದಲ್ಲಿ 'ಅರ್ಶಆದಿಭ್ಯಃ - ಸೂತ್ರದಿಂದ ಅಚ್‌ಪ್ರತ್ಯಯ ಬಂದರೆ "ಲುಗಕಾರೇಕಾರರೇಫಾಶ್ಚೇತಿ ವಕ್ತವ್ಯಮ್" (ಪಾ. ಸೂ. ೪-೪-೧೨೮ ವಾ-) ಎಂಬ ವಾರ್ತಿಕದಿಂದ ಅಚಿಗೆ ಲುಕ್. (ಲೋಪವಾಗುತ್ತದೆ.) ಮಾರ್ಗದಿಂದ ಕೂಡಿರುವುದು ಗಾತುಃ = ಭೂಮಿ. ಉದಾಹರಣೆ—

"**ಇಂದ್ರಾಯ ಗಾತುರುಶತೀವ ಯೇ ಮೇ**" (**ಋ. ಸಂ. ೫-೩೩-೧೦**) "—**ಅದರ್ಶಿ ಗಾತುರುರವೇ ವರೀಯಸೀ** (**ಋ-ಸಂ-೧-೧೩೬-೨**) ॥

(೨೧) **ಗೋತ್ರಾ** ॥ **' ಗುಜ್–ಅವ್ಯಕ್ತೇ ಶಬ್ದೇ'** (ಭ್ವಾ-ಆ) **' ಗುಧೃವೀ ಪಚಿ ವಚಿ ಯಮಿ (ಮನಿತನಿ) ಸದಿಕ್ಷದಿಭ್ಯಸ್ತ್ರಃ** (ಉ-೪-೧೬೨) **ಇತಿ ತ್ರ ಪ್ರತ್ಯಯಃ । ಗುಣಃ** ॥

ಅವ್ಯಕ್ತ ಶಬ್ದಾರ್ಥವನ್ನು ಕೊಡುವ ಗುಜ್ ಧಾತುವು ಭ್ವಾದಿಯಲ್ಲಿ ಹೇಳಿದೆ. ಜಿತ್ತಾದುದರಿಂದ ಆತ್ಮನೇಪದೀ. ಇದಕ್ಕೆ ' ಗುಧೃ—' ಇತ್ಯಾದಿ ಉಣಾದಿ ಸೂತ್ರದಿಂದ ತ್ರ ಪ್ರತ್ಯಯ. ಗು+ತ್ರ ಎಂದಿರುವಾಗ ' ಸಾರ್ವಧಾತುಕಾರ್ಧಧಾತುಕಯೋಃ ' ಸೂತ್ರದಿಂದ ಧಾತುವಿನ ಉಕಾರಕ್ಕೆ ಗುಣ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಗೋತ್ರಾ ಎಂದಾಗುತ್ತದೆ. ಮೃಗಪಕ್ಷ್ಯಾದಿಗಳು ಇದರಲ್ಲಿ ಅವ್ಯಕ್ತ ಶಬ್ದವನ್ನು ಮಾಡುವುದರಿಂದ ಗೋತ್ರಾ ಎಂಬ ಹೆಸರು ಬಂದಿದೆ. ಅಥವಾ ಗೋತ್ರಗಳೆಂದರೆ ಪರ್ವತಗಳು. 'ಗೋತ್ರಾಃ ಅಸ್ಯಾಂ ಸಂತಿ ಇತಿ ಗೋತ್ರಾಃ ' ಪರ್ವತಗಳು ಇದರಲ್ಲಿ ಇರುತ್ತವೆ ಎಂಬ ಮತ್ವರ್ಥದಲ್ಲಿ ಅರ್ಶಆದಿಗಣದಲ್ಲಿ ಸೇರಿರುವುದರಿಂದ ಗೋತ್ರ ಶಬ್ದದ ಮೇಲೆ ಅಚ್ ಪ್ರತ್ಯಯ. ' ಯಸ್ಯೇತಿ ಚ ' ಪೂರ್ವದ ಅಕಾರಕ್ಕೆ ಲೋಪ. ಅದಂತವಾದುದರಿಂದ ಟಾಪ್. ಗೋತ್ರಾ ಪರ್ವತಗಳಿಂದ ಕೂಡಿರುವುದು ಎಂದರ್ಥ. ಅಥವಾ–ತ್ರೈಜ್–ಪಾಲನೇ ಧಾತು. ಕರ್ಮವಾಚಕವಾದ ಗೋ ಶಬ್ದ ಉಪಪದವಾಗಿರುವಾಗ ಈ ಧಾತುವಿಗೆ ' ಆತೋಽನುಪಸರ್ಗೇ ಕಃ ' ಸೂತ್ರದಿಂದ ಕ ಪ್ರತ್ಯಯ ' ಆದೇಚಉಪದೇಶೇಽಶಿತಿ ' ಸೂತ್ರದಿಂದ ಧಾತುವಿನ ಐಕಾರಕ್ಕೆ ಆತ್ವ. ಗೋತ್ರಾ ಅ ಎಂದಿರುವಾಗ ಪ್ರತ್ಯಯ ಕಿತ್ತಾದುದರಿಂದ ' ಆತೋಲೋಪ ಇಟಿ ಚ ' ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ ಅದಂತವಾದುದರಿಂದ ಹಿಂದಿನಂತೆ ಟಾಪ್ ' ಗಾಸ್ತ್ರಾಯತೇ ರಕ್ಷತಿ ಯವಸೋದಕಪತ್ತಜಾ ' ಹುಲ್ಲು ನೀರಿನಿಂದ ಕೂಡಿದ್ದು ಹಸುಗಳನ್ನು ರಕ್ಷಿಸುತ್ತದೆ ಎಂದರ್ಥ. ಅಥವಾ ಗೋ ಎಂದರೆ ಸೂರ್ಯನ ಕಿರಣ. ಇದರಿಂದ ಮಳೆನೀರು ರಕ್ಷಿಸಲ್ಪಡುವುದರಿಂದ ಗೋತ್ರಾ ಎಂದಾಗುತ್ತದೆ. ಸೂರ್ಯನು ಕಿರಣಗಳಿಂದ ನೀರನ್ನು ಸೆಳೆದು ಮಳೆಯ ರೂಪದಿಂದ ತಿರುಗಿ ಕೊಡುತ್ತಾನೆ. ಈ ಅರ್ಥವನ್ನು ಅಂಗೀಕರಿಸಿದರೆ ಬಹುಲಗ್ರಹಣದಿಂದ 'ಆತೋಽನುಪಸರ್ಗೇಕಃ' ಸೂತ್ರದಿಂದಲೇ ಬಂದಿರುವ ಕ ಪ್ರತ್ಯಯವು ಕರ್ಮಣಿಯಲ್ಲಿ ಬಂದಿದೆಯೆಂದು ಹೇಳಬೇಕು. ಅಥವಾ ಗೋತ್ರಾ ಎಂದರೆ ಗೋಸಮುದಾಯನೆಂದರ್ಥವಾಗುತ್ತದೆ. ' ತಸ್ಯ ಸಮೂಹಃ ' (ಪಾ-ಸೂ-೪-೨-೩೭) ಎಂಬ ಅಧಿಕಾರದಲ್ಲಿ 'ಖಲ ಗೋರಥಾತ್ ' (ಪಾ-ಸೂ-೪-೨-೫೦) ಸೂತ್ರದಿಂದ ಗೋ ಶಬ್ದವು ಅನುವೃತ್ತವಾಗುವಾಗ, ' ಇನಿ ತ್ರ ಕಟ್ಯಚಶ್ಚ ' (ಪಾ-ಸೂ-೪-೨-೫೧) ಎಂಬ ಸೂತ್ರದಿಂದ ಸಮೂಹಾರ್ಥದಲ್ಲಿ ಗೋ ಶಬ್ದದ ಮೇಲೆ ತ್ರ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್ ಗೋತ್ರಾ. ಗೋಸಮುದಾಯವೆಂದರ್ಥ. ಅದು ಉಳ್ಳದ್ದು ಎಂಬ ಮತ್ವರ್ಥದಲ್ಲಿ ಹಿಂದಿನಂತೆ ಅಚ್ ಪ್ರತ್ಯಯ. ಗೋಸಮುದಾಯವುಳ್ಳದ್ದೂ ಗೋತ್ರಾ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು. ಹೀಗೆ ಭೂಮಿಗೆ ಇಪ್ಪತ್ತೊಂದು ಹೆಸರುಗಳಿವೆ.

**ಉವಾಚ ಮೇ ವರುಣೋ ಮೇಧಿರಾಯ** (ಋ-ಸಂ-೭-೮೭-೪) ಎಂಬ ಮಂತ್ರವ್ಯಾಖ್ಯಾನದಲ್ಲಿ ಮಾಧವರು– **' ಉವಾಚ ಮಹ್ಯಂ ವರುಣೋ ಮೇಧಾವಿನೇ '** ಎಂಬ ವಚನದಿಂದ ವರುಣನು ಭೂಮಿಯು ಇಪ್ಪತ್ತೊಂದು ಹೆಸರನ್ನು ಹೊಂದಿದೆಯೆಂದು ಹೇಳಿರುವನೆಂದು ವಿವರಿಸುತ್ತಾರೆ. ಅವೇ ಈ ನಾಮಗಳು.

ಈ ಇಪ್ಪತ್ತೊಂದು ಶಬ್ದಗಳು ಭೂಮಿ ಎಂಬ ಅರ್ಥವನ್ನು ಕೊಡುವ ಪದಗಳಾಗಿರುತ್ತವೆ.

ಗೌರಿತಿ ಪೃಥಿವ್ಯಾ ನಾಮಧೇಯಮ್ । ಯದ್ ದೂರಙ್ಗತಾ ಭವತಿ ।
ಯಚ್ಚಾಸ್ಯಾಂ ಭೂತಾನಿ ಗಚ್ಛಂತಿ । ಗಾತೇರ್ವೈಕಾರೋ ನಾಮ
ಕರಣಃ ।

" ಗೌಃ " ಎಂಬ ಶಬ್ದವು ಭೂಮಿ ಎಂಬರ್ಥವನ್ನು ಕೊಡತಕ್ಕದ್ದಾಗಿದೆ. ಈ ನಿರುಕ್ತ ಶಾಸ್ತ್ರದಲ್ಲಿ ದ್ರವ್ಯವಾಚಕ ಶಬ್ದಗಳಿಗೆ ಆಯಾಯ ವಸ್ತುಗಳೆಂಬ ಅರ್ಥಗಳನ್ನು ಆಯಾಯ ಪದಗಳಿಂದ ಗೊತ್ತು ಮಾಡಲು ಧಾತು ಅದರ ಮೇಲೆ ಬಂದಿರುವ ಪ್ರತ್ಯಯ ಇವುಗಳನ್ನು ಹೇಳಬೇಕಾಗಿರುತ್ತದೆ. ಬಹಳ ದೂರದವರೆವಿಗೂ ವ್ಯಾಪಿಸಿರುವ ಪದಾರ್ಥವು ಭೂಮಿ ಎಂದಾಗಿರುವುದು. ಇದನ್ನು ಗೋ ಎಂಬ ಶಬ್ದದಿಂದ ಉಂಟಾಗಿರುವ " ಗತಾ ಭವತಿ ದೂರಂ " ಎಂಬ ಅರ್ಥವಿವರಣೆಯಿಂದ ವಿವರಿಸಿರುವುದು ಮತ್ತು ದೂರ ಎಂಬ ಶಬ್ದಕ್ಕೆ ಕೊನೆಯೇ ಗೊತ್ತಿಲ್ಲ ಎಂಬ ಅರ್ಥವು ಹೇಳಿದೆ. ಈ ಆಧಾರವಾಗಿರುವ ಭೂಮಿಯಲ್ಲಿಯೇ ಎಲ್ಲಾ ಪ್ರಾಣಿಗಳು ಸಂಚಾರ ಮಾಡುತ್ತವೆ ಎಂಬರ್ಥದಿಂದಲೂ ಭೂಮಿಯೆಂದು ಗೋ ಶಬ್ದಕ್ಕೆ ಅರ್ಥವುಂಟಾಗಿರುವುದು. ' ಗಾಙ್ ಗತೌ ' ಎಂಬ ಧಾತುವಿನಿಂದ ಬಂದಿರುವ ' ಗಾ' ಎಂಬ ಶಬ್ದದ ಮೇಲೆ ಓ ಕಾರವು ಬಂದು ' ಗೋ' ಎಂದಾಗಿದೆ. (೨-೫-೨)

ಅಥಾಪಿ ಪಶುನಾಮೇಹ ಭವತ್ಯೇತಸ್ಮಾದೇವ ।

ಈ 'ಗೋ' ಎಂಬ ಶಬ್ದದಿಂದಲೇ ಹಸು ಎಂಬ ಅರ್ಥವು ಉಂಟಾಗಿರುವುದು. 'ಗಂ' ಧಾತು ಅಥವ 'ಗಾ' ಎಂಬ ಧಾತು, ಇವೆರಡು ಧಾತುವಿನಿಂದಲೂ ಉಂಟಾಗಿರುವ ಗೋ ಶಬ್ದಕ್ಕೆ ಗೋವು ಎಂಬ ಅರ್ಥವನ್ನಿಲ್ಲಿ ಹೇಳಿದೆ.

ಅಥಾಪ್ಯಸ್ಯಾಂ ತಾದ್ಧಿತೇನ ಕೃತ್ಸ್ನವನ್ನಿಗಮಾ ಭವಂತಿ ಗೋಭಿಃ ಶ್ರೀಣೀತ ಮತ್ಸರಂ" ಇತಿ ಪಯಸಃ । ಮತ್ಸರಃ ಸೋಮೋ ಮಂದತೇ- ಸ್ತೃಪ್ತಿಕರ್ಮಣಃ । ಮತ್ಸರ ಇತಿ ಲೋಭನಾಮಾಭಿಮತ್ತ ಏನೇನ ಧನಂ ಭವತಿ। ಪಯಃ ಪಿಬತೇರ್ವಾ ಪ್ಯಾಯತೇರ್ವಾ। ಕ್ಷೀರಂ ಕ್ಷರತೇಃ। ಘಸೇರ್ವೇರೋ ನಾಮಕರಣ ಉಶೀರಮಿತಿ ಯಥಾ।

ತದ್ಧಿತ ಪ್ರತ್ಯಯಾಂತವಾದ ಪ್ರಯೋಗದಿಂದ ಒಂಟೇ ಪ್ರತ್ಯಯ ಮಾತ್ರ ವಿವರಣೆಯನ್ನು ಹೇಳುವಂತೆ ಪ್ರತ್ಯಯದಿಂದ ಕೂಡಿರುವ ಶಬ್ದಕ್ಕೂ ಅರ್ಥ ವಿವರಣೆಯು ಇಲ್ಲಿ ಕೊಡಲಾಗಿದೆ. ಗೋಃ = ಹಸಿವಿನ ದೆಸೆಯಿಂದುಂಟಾದ ಹಾಲು ಎಂದು ಮಾತ್ರಕ್ಕೆ ಶಬ್ದಾರ್ಥವು ಪೂರ್ತಿಯಾಗುವುದಿಲ್ಲನೆಂದು ಈ ಶಾಸ್ತ್ರದಲ್ಲಿ 'ಗೋಭಿಃ ಶ್ರೀಣೀತ ಮತ್ಸರಂ' ಎಂಬ ವಾಕ್ಯದ ಅರ್ಥವು ಈ ಮೂರು ಶಬ್ದಗಳ ಅರ್ಥ ವಿವರಣೆಯಿಂದ ಪೂರ್ಣವಾಗುವುದೆಂದು ತಿಳಿಯಬೇಕು. ಇದರಿಂದ ಶಿಷ್ಯನಾದವನಿಗೆ ಅವನ ಬುದ್ಧಿಯಿಂದ ಶಬ್ದ ಉತ್ಪಾದನೆಯ ಕ್ರಮವು ತಿಳಿಯಲಾಗುವಂತೆ ಈ ಶಬ್ದವು ಈ ಅರ್ಥವನ್ನು ಹೇಳುವುದರಲ್ಲಿ ಶಕ್ತಿಯುಳ್ಳದ್ದಾಗಿರುವುದು. ಎಂಬುದಾಗಿ ತಿಳಿಯಲಾಗುತ್ತದೆ.

'ಅಧಾವತಾ' ಎಂಬ ಮಂತ್ರದಲ್ಲಿ 'ಗೋಭಿಃ ಶ್ರೀಣೀತ ಮತ್ಸರಂ' ಎಂಬ ವಾಕ್ಯವು ಪ್ರಯುಕ್ತವಾಗಿದೆ. ಯಜ್ಞದಲ್ಲಿ ಗ್ರಾವ ಸ್ತೋತ್ರದಲ್ಲಿ ವಿನಿಯುಕ್ತವಾಗಿದೆ. ಯಜಮಾನನು 'ಈ ಕಲ್ಲುಗಳಿಂದ ಸೋಮರಸವನ್ನು ಸಿದ್ಧಗೊಳಿಸಿದೆ. ಋತ್ವಿಜರಾದ ನೀವೆಲ್ಲರೂ ಚಿನ್ನದಿಂದ ಅಲಂಕೃತವಾದ ಕೈಗಳುಳ್ಳವರಾಗಿ ಬೇಗ ಬನ್ನಿರಿ. ಈ ಗ್ರಹಗಳಿಂದ ಜಾಗ್ರತೆಯಾಗಿ ಈ ರಸವನ್ನು ಸ್ವೀಕರಿಸಿರಿ. ಮತ್ತು ಗೋವುಗಳಿಂದುಂಟಾಗಿರುವ ಹಾಲಿನಿಂದ ಮದವನ್ನುಂಟುಮಾಡುವ ಸೋಮರಸವನ್ನು ಕಾದಾರಿದ ನೀರಿನಿಂದ ಸೇರಿಸಿ ಹೋಮಕಾಲಕ್ಕನುಗುಣವಾಗಿ ಹೋಮಮಾಡಿರಿ' ಎಂದು ಹೇಳುವನು. ಈ ಮಂತ್ರಾರ್ಥದಲ್ಲಿ ಗೋ ಶಬ್ದಕ್ಕೆ 'ಗವ್ಯ' ಎಂದರ್ಥವನ್ನು ಮಾಡಿದೆ.

'ಮತ್ಸರ' ಎಂಬ ಶಬ್ದವು ತೃಪ್ತಿಯನ್ನುಂಟುಮಾಡುವುದು. ದೇವತೆಗಳು ಈ ಸೋಮರಸದಿಂದ ತೃಪ್ತರಾಗುವರು ಎಂಬರ್ಥದಲ್ಲಿ ಮತ್ಸರ ಶಬ್ದವು ನಿಯುಕ್ತವಾಗಿದೆ. ಮತ್ಸರ ಎಂದರೆ ಅತಿಯಾಸೆ, ಲೋಭ ಎಂದು ಅರ್ಥವಾಗುತ್ತದೆ. ಈ ಲೋಭದಿಂದ ಕೂಡಿದವನು ಹಣಗಾರನಾಗಿರುವನು ಮತ್ತು ಮದಿಸಿರುವನು ಎಂಬರ್ಥವನ್ನು ಹೇಳುವ ಕಾರಣ ಸೋಮರಸದ ಪಾನವಿಷಯದಲ್ಲಿಯೂ ಇದೇ ಅರ್ಥವನ್ನೇ ಹೇಳಿದೆ.

'ಪಯಃ' ಎಂಬ ಶಬ್ದವು 'ಪಿಬ' ಧಾತುವಿನಿಂದಾಗಲೀ ವೃದ್ಧಿ ಎಂಬರ್ಥವನ್ನು ಕೊಡುವ 'ಪ್ಯಾಯ' ಎಂಬ ಧಾತುವಿನಿಂದಲಾಗಲೀ ಉಂಟಾಗಿ ವೃದ್ಧಿಯನ್ನು ಕೊಡುವುದು ಎಂಬರ್ಥವನ್ನು ಹೇಳುತ್ತದೆ. ಪ್ರಾಣಿಗಳು ಪಾನಮಾಡಿ ವೃದ್ಧಿಯನ್ನು ಹೊಂದಲು ಸಾಧನವಾದ ಪದಾರ್ಥವು 'ಪಯಸ್ಸು' ಎಂದು ಪ್ರಸಿದ್ಧವಾಗಿದೆ.

'ಕ್ಷ್ಣೋತನ' ಎಂಬ ಅರ್ಥವನ್ನು ಕೊಡುವ ಕೆಚ್ಚಲಿನಿಂದ ಸುರಿಯುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿರುವ ಕ್ಷೀರ ಶಬ್ದವು ಶಬ್ದ ನಿಷ್ಪತ್ತಿಕ್ರಮದಿಂದ ಇಲ್ಲಿ ನಿರ್ದಿಷ್ಟವಾಗಿದೆ. 'ಉಶೀರ' ಎಂಬ ಶಬ್ದವು 'ಘಸರು' ಎಂಬ ಆದೇಶವನ್ನು ಹೊಂದಿರುವ 'ಅಧ' ಧಾತುವಿನಿಂದ ಸಿದ್ಧವಾಗಿರುತ್ತದೆ. ಇನ್ನು ಕೆಲವರು "ವಶ ಕಾಂತೌ" ಎಂಬ ಧಾತುವಿಗೆ ಸಂಪ್ರಸಾರಣವೂ 'ಈರ' ಎಂಬ ಪ್ರತ್ಯಯವೂ ಬಂದು ಆಗಿದೆ ಎಂದು ಹೇಳುತ್ತಾರೆ. 'ಉ ಶೀರ' ಎಂಬ ಶಬ್ದಕ್ಕೆ ಬಹಳ ಸುವಾಸನೆಯನ್ನು ಕೊಡುವ ಗಂಧದಚಕ್ಕೆ ಎಂದು ಅರ್ಥ. [೨-೫-೪]

"ಅಂಶುಂ ದುಹಂತೋ ಅಧ್ಯಾ ಸತೇ ಗವಿ" ಇತ್ಯಧಿಷವಣ ಚರ್ಮಣಃ। ಅಂಶುಃ ಶಮಷ್ಟಮಾತ್ರೋ ಭವತಿ। ಅನನಾಯ ಶಂಭವತೀತಿ ವಾ। ಚರ್ಮ ಚರತೇರ್ವೋಚ್ಚೃತಂ ಭವತೀತಿ ವಾ॥

"ಅಂಶುಂ ದುಹಂತೋ ಅಭ್ಯಾಸತೇ ಗವಿ" ಎಂಬುದಾಗಿ 'ಗೋ' ಶಬ್ದಕ್ಕೆ ಚರ್ಮವೆಂದು ಅರ್ಥವನ್ನು ಹೇಳಿದ್ದಾರೆ. "ತೇ ಸೋಮಾಸೋ ಹರೀಇಂದ್ರಸ್ಯ" ಎಂಬ ಮಂತ್ರದಲ್ಲಿ ಇರುವ ಅಂಶುಪದಕ್ಕೂ, ಗವಿ ಎಂಬ ಸಪ್ತಮೀ ವಿಭಕ್ತಿಯಲ್ಲಿರುವ 'ಗೋ' ಪದಕ್ಕೂ ಕೂಡ ಪೂರ್ತಿಯಾಗಿ ಅರ್ಥವನ್ನು ವಿವರಿಸಿದೆ, ಈ ಮಂತ್ರವು ಗ್ರಾವಸೋತ್ರದಲ್ಲಿ ವಿನಿಯುಕ್ತವಾಗಿದೆ. ಸೋಮರಸವನ್ನು ತೆಗೆಯುವುದಕ್ಕಾಗಿ ಸೋಮಲತೆಯನ್ನು ಜಜ್ಜಿ ರಸವನ್ನು ಹಿಂಡುವರು. ಆಗ ರಸವಿಲ್ಲದಿರುವ ಸೋಮಲತೆಯ ಕಡ್ಡಿಗಳನ್ನು ಯಜ್ಞಕ್ಕೆ ಇಂದ್ರನನ್ನು ಕರೆದುಕೊಂಡು ಬರುವ ಕುದುರೆಗಳು ತಿನ್ನುವವುಗಳಿಗಾಗಿ ಇಂದ್ರನಿಗೂ ಸೋಮರಸವನ್ನು ಪಾನಮಾಡಿಸುವವುಗಳಾಗಿ ಇರುತ್ತವೆ. ಮತ್ತು ಈ ಕುದುರೆಗಳು ಇಂದ್ರನಿಗೆ ಯಜ್ಞಕ್ಕೆ ಹೋಗುವ ಸಮಯವನ್ನು ಸೂಚನೆ ಮಾಡಿ ತಿಳಿಸಿ ಋತ್ವಿಕರನ್ನು ಹೋಮಕ್ಕಾಗಿ ಪ್ರೇರಿಸುವುವು ಎಂದು ಅರ್ಥವನ್ನು ಕೊಡುವ ಈ ಮಂತ್ರದಲ್ಲಿ ಅಂಶು ಎಂಬ ಶಬ್ದಕ್ಕೆ ಸೋಮಲತೆಯ ಅಂಶ ಎಂಬರ್ಥವನ್ನು ಮಾಡಿದೆ. ಗವಿ ಎಂಬ ಪದಕ್ಕೆ ಗೋವಿನ ಅವಯವವಾಗಿರುವ ಚರ್ಮವೆಂದು ಅರ್ಥವನ್ನು ಹೇಳಿದೆ. ಇಂದ್ರನು ಯಜ್ಞಕ್ಕಾಗಿ ಬಂದು ಗೋವಿನ ಚರ್ಮದ ಮೇಲೆ ಇರಿಸಿ ಸೋಮರಸವನ್ನು ತುಂಬಿರುವ ಪಾತ್ರೆಗಳನ್ನು ಹಿಡಿದುಕೊಂಡು ಋತ್ವಿಜರು ಇಂದ್ರನನ್ನು ನಿರೀಕ್ಷಿಸುವರು. ಇಂದ್ರನು ಈ ಸೋಮಪಾನದಿಂದ ತೃಪ್ತನಾಗಿ ಹೃಷ್ಟಪುಷ್ಟವಾಗಿ ಮಳೆಯನ್ನು ಹುಯ್ಯಿಸುವನು. ಆದುದರಿಂದ ಈ ಕರ್ಮವು ಲೋಕಾನುಗ್ರಹವಾಗಿ ಇರುತ್ತದೆ.

"ಅಂಶುಃ" ಎಂಬ ಶಬ್ದಕ್ಕೆ ಎಲ್ಲಾ ಕಡೆಯಲ್ಲಿಯೂ ಯಜಮಾನನಿಂದ ವ್ಯಾಪಿಸಿರುವಂತೆ ಮಾಡಿರುವುದು, 'ಶಂ' ಎಂದರೆ ಸುಖವೆಂದು ಅರ್ಥ. ಜೀವನಕ್ಕಾಗಿ ಎಲ್ಲಾ ಪ್ರಾಣಿಗಳಿಗೂ ಸುಖವನ್ನು ಉಂಟುಮಾಡುವ ಯಜ್ಞವೆಂಬ ಕರ್ಮವನ್ನು ಹೇಳುವಾಗ ಅಂಶು ಶಬ್ದಕ್ಕೆ ಸುಖಜನಕವೆಂದು ಅರ್ಥಮಾಡಿದೆ.

'ಚರ್ಮ' ಎಂಬ ಶಬ್ದವು ಎಲ್ಲಾ ಪ್ರಾಣಿಗಳ ಶರೀರವನ್ನು ಹೊಂದಿರುವುದು ಮತ್ತು ಕೀಳಲು ಸಾಧ್ಯವಾಗಿರುವುದು, ಆದುದರಿಂದ 'ಚರ' ಧಾತುವಿನಿಂದಲೂ ನಿಷ್ಪನ್ನವಾಗುತ್ತದೆ [೨-೫-೫]

ಅಥಾಪಿ ಚರ್ಮ ಚ ಶ್ಲೇಷ್ಮಾ ಚ। "ಗೋಭಿಃ ಸನ್ನದ್ಧೋ ಅಸಿ
ವೀಳಯಸ್ವ" ಇತಿ ರಥಸ್ತುತೌ ॥

'ಗೋ' ಎಂಬ ಶಬ್ದದಿಂದ ಚರ್ಮ ಎಂಬ ಅರ್ಥವೂ ಶ್ಲೇಷ್ಮ ಎಂಬರ್ಥವೂ ಸಹ ಉಕ್ತವಾಗಿದೆ. "ವನಸ್ಪತೇ ವೇಶ್ವಂಗೋ" ಎಂಬ ಮಂತ್ರದಲ್ಲಿರುವ "ಗೋಭಿಃ" ಎಂಬ ಪದಕ್ಕೆ ರಥವು ಚರ್ಮದಿಂದ ಮುಚ್ಚಲ್ಪಟ್ಟಿದೆ ಮತ್ತು ಚಕ್ರದ ಪಟ್ಟಿಗಳು ಕೆಸರಿನಿಂದ ಕೂಡಿರುತ್ತವೆ ಎಂದು ಅರ್ಥಮಾಡಿದೆ. [೨-೫-೫]

ಅಥಾಪಿ ಸ್ನಾವ ಚ ಶ್ಲೇಷ್ಮಾ ಚ। ಗೋಭಿಃ ಸನ್ನದ್ಧಾ ಪತತಿ
ಪ್ರಸೂತ" ಇತೀಷುಸ್ತುತೌ ॥

'ಗೋ' ಎಂಬ ಶಬ್ದದಿಂದ ಶ್ಲೇಷ್ಮ ಎಂಬುವುದೂ, ಗರ್ಭದ ಮೇಲಿರುವ ಚೀಲ ಎಂಬುವುದೂ ಸಹ ಉಕ್ತವಾಗಿದೆ. ಚೆನ್ನಾಗಿ ನರಗಳಿಂದಲೂ, ಶ್ಲೇಷ್ಮದಿಂದಲೂ ಸುತ್ತುವರಿದಿರುವ ಗರ್ಭವು ಹೆರಿಗೆಕಾಲದಲ್ಲಿ ಭೂಮಿಯಲ್ಲಿ ಬೀಳುತ್ತದೆ. ಎಂಬ ಈ ಉದಾಹರಣೆಯಲ್ಲಿ ಹಿಂದೆ ಹೇಳಿದ ಅರ್ಥವು ಹೇಳಿದೆ.

ಜ್ಯಾಪಿ ಗೌರುಚ್ಯತೇ ಗವ್ಯಾ ಚೇತ್ತಾದ್ಧಿತಮಥ ಚೇನ್ನ ಗವ್ಯಾ ಗಮ
ಯತೀಷೂನಿತಿ ॥

ಧನುಸ್ಸಿಗೆ ಕಟ್ಟುವ ಮೌರ್ವಿ ಅಥವ ಜ್ಯಾ ಎಂಬುವುದು ಗೋ ಶಬ್ದಕ್ಕೆ ಅರ್ಥವಾಗಿದೆ. ಗೋವಿನ ಸಂಬಂಧವಾಗಿ ಇಲ್ಲದಿರುವ ಹಗ್ಗವು ಧನುಸ್ಸಿಗೆ ಮೌರ್ವಿಯಾಗಿ ಸೇರಿದಾಗ ಬಾಣಗಳನ್ನು ಅಂತಹ ಧನುಸ್ಸಿನಿಂದ ಚೆನ್ನಾಗಿ ಬಿಡಲಾಗುವುದಿಲ್ಲ. ಆದ್ದರಿಂದ ಗೋ ಎಂಬ ಶಬ್ದವು ರೂಢಿಯಾದ ಅರ್ಥಕ್ಕಿಂತಲೂ ಬೇರೆ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಇತಿ ಪಂಚಮಃ ಖಂಡಃ**

ಇಲ್ಲಿಗೆ ಐದನೆಯ ಖಂಡವು ಸಮಾಪ್ತವು.

---

## ಅಥ ಷಷ್ಠಃ ಖಂಡಃ

**ಆರನೆಯ ಖಂಡವು**

---

ವೃಕ್ಷೇ ವೃಕ್ಷೇ ನಿಯತಾ ಮೀಮಯದ್ಗೌಸ್ತತೋ ವಯಃ ಪ್ರಪತಾ-
ನ್ಪೂರುಷಾದಃ। ವೃಕ್ಷೇ ವೃಕ್ಷೇ ಧನುಷಿ ಧನುಷಿ ವೃಕ್ಷೋ ವೃಶ್ಚನಾದ್ವೃತ್ವಾ

ಕ್ಷಾಂ ತಿಷ್ಠತೀತಿ ವಾ ಕ್ಷಾ ಕ್ಷಿಯತೇರ್ನಿವಾಸಕರ್ಮಣೋ ನಿಯತಾ ಮೀಮಯದ್ಗೌಃ ಶಬ್ದಂ ಕರೋತಿ ಮೀಮಯತಿಃ ಶಬ್ದ ಕರ್ಮಾ ಕತೋ ವಯಃ ಪ್ರಪತಂತಿ ಪುರುಷಾನದನಾಯ ವಿರಿತಿ ಶಕುನಿನಾಮ ವೇತೇರ್ಗತಿ-ಕರ್ಮಣೋಽ ಥಾಪೀಷುನಾಮೇಹ ಭವತ್ಯೇತಸ್ಮಾದೇವಾದಿತ್ಯೋಽ ಪಿ ಗೌರುಚ್ಯತೇ। ಉತಾದಃ ಪರುಷೇ ಗವಿ। ಪರ್ವವತಿ ಭಾಸ್ವತೀತ್ಯೌ-ಪಮನ್ಯವೋಽಥಾಪ್ಯಸ್ಯೈಕೋರಶ್ಮಿಶ್ಚಂದ್ರಮಸಂ ಪ್ರತಿ ದೀಪ್ಯತೇ ತದೇತೇನೋಪೇಕ್ಷಿತವ್ಯಮಾದಿತ್ಯತೋಽಸ್ಯ ದೀಪ್ತಿರ್ಭವತೀತಿ। ಸುಷುಮ್ನಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವ ಇತ್ಯಪಿ ನಿಗಮೋ ಭವತಿ। ಸೋಽಪಿ ಗೌರುಚ್ಯತೇ। ಅತ್ರಾಹ ಗೋರಮನ್ವತೇತಿ ತದುಪರಿಷ್ಟಾದ್ವ್ಯಾಖ್ಯಾ-ಸ್ಯಾಮಃ। ಸರ್ವೇಪಿ ರಶ್ಮಯೋ ಗಾವ ಉಚ್ಯಂತೇ ॥೬॥

———

"ವೃಕ್ಷೇ ವೃಕ್ಷೇ ನಿಯತಾಮೀಮಯದ್ಗೌಸ್ತತೋ ವಯಃ ಪ್ರಪತಾ-ನ್ಪೂರುಷಾದಃ। " ವೃಕ್ಷೇ ವೃಕ್ಷೇ ಧನುಷಿ ಧನುಷಿ। ವೃಕ್ಷೋ ವ್ರಶ್ಚನಾತ್।

ವೃತ್ವಾ ಕ್ಷಾಂ ತಿಷ್ಠತೀತಿ ವಾ। ಕ್ಷಾ ಕ್ಷಿಯತೇರ್ನಿವಾಸಕರ್ಮಣಃ। ನಿಯತಾಮೀಮಯದ್ಗೌಃ ಶಬ್ದಂ ಕರೋತಿ। ಮೀಮಯತಿಃ ಶಬ್ದಕರ್ಮಾ

ತತೋ ವಯಃ ಪ್ರಪತಂತಿ ಪುರುಷಾನದನಾಯ। ವಿರಿತಿ ಶಕುನಿ-ನಾಮ ವೇತೇರ್ಗತಿಕರ್ಮಣಃ॥ ಅಥಾಪೀಷುನಾಮೇಹ ಭವತ್ಯೇ-ತಸ್ಮಾದೇವ ॥

ವಸುಕ್ರನೆಂಬ ಇಂದ್ರನ ಮಗನು ಈ ಋಕ್ಕನ್ನು ಹೇಳಿದ್ದಾನೆ. ಈ ಋಕ್ಕಿನಲ್ಲಿ "ಇಂದ್ರನು ಷಡ್ಗುಣೈಶ್ವರ್ಯ ಸಂಪನ್ನನಾಗಿ ಯುದ್ಧಕಾಲಗಳಲ್ಲಿ ಬಹಳ ತೋಳುಗಳನ್ನು ಹೊಂದಿರುವವನಾಗಿ ಬಹಳ ಧನಸ್ಸುಗಳನ್ನು ತೆಗೆದುಕೊಳ್ಳುತ್ತಾನೆ." ಎಂಬುವುದನ್ನು ಈ ಮಂತ್ರವನ್ನು ಕಂಡುಹಿಡಿದ ಋಷಿಯು ಇಂದ್ರನು ಹಿಡಿದಿರುವ ಧನಸ್ಸುಗಳೆಲ್ಲದರಲ್ಲಿಯೂ ಬೇರೆ ಬೇರೆಯಾಗಿ ಬಾಣಗಳು ಹೊರಡುತ್ತವೆ. ಅವುಗಳು ಬಹಳವುಟ್ಟಿಗೆ ಧ್ವನಿಯನ್ನು ಮಾಡುವವುಗಳಾಗಿ ಗುರಿಯನ್ನು ಕತ್ತರಿಸುತ್ತವೆ. ಹೀಗೆ ಈ ಬಾಣಗಳು ಎಂಬರ್ಥವನ್ನು 'ವಯಂ' ಎಂಬರ್ಥದಿಂದ ಹೇಳಿದೆ. ಪಕ್ಷಿಗಳ ರೆಕ್ಕೆಗಳು ಆಕಾಶದಿಂದ ಹಾರಿಹೋಗಲು ಅನುಕೂಲವಾಗಿ ಇರುವ ಹಾಗೆ ಎಂಬರ್ಥವನ್ನು ಅನುಸರಿಸಿ ಈ ಅರ್ಥವನ್ನು ಹೇಳಿದೆ. ಇಲ್ಲಿ ಬಾಣಗಳು ಎಂಬರ್ಥವನು ಗೌಣವೃತ್ತಿಯಿಂದಲೂ ಹೇಳಿರುತ್ತವೆ. ಶತ್ರುಗಳ ಪ್ರಾಣಗಳನ್ನು ತಿನ್ನುವುದರಿಂದ ಇವುಗಳಿಗೆ ಈ ಹೆಸರು ಬಂದಿದೆ. ಬೀಳತಕ್ಕ

ವರನ್ನು ಬೀಳಿಸಿ ಅವರ ಪ್ರಾಣಗಳನ್ನು ಬಾಣಗಳು ಹಕ್ಕಿಗಳು ಬಲೆಗಳಲ್ಲಿ ಬಾಣಗಳಿಂದ ನಾಶವಾಗುವವು ಎಂಬರ್ಥಕ್ಕೆ ಬೇರೆಯಾದ ರೀತಿಯಿಂದ ಹೀಗೆ ಅರ್ಥಮಾಡಿದೆ. ಇಂದ್ರನು ಈ ತರಹದಿಂದಿರುವ ಬಹಳ ಮಹಿಮೆಯುಳ್ಳವನು ಎಂದು ತಿಳಿದು ಈ ಭುವನ ಎಂಬ ಶಬ್ದಕ್ಕೆ ಪ್ರಾಣಿ ಸಮೂಹ ಎಂಬರ್ಥವನ್ನು ಹೇಳಿದೆ. ಪ್ರಾಣಿಗಳೆಲ್ಲವೂ ಇಂದ್ರನಿಗೆ ಹೆದರಿಕೊಂಡು ಅವನಿಗಾಗಿ ಆಯಾಯ ಕಾಲದಲ್ಲಿ ಯಜ್ಞಗಳಿಂದ ಸಂತೋಷಪಡಿಸಿ ಋತ್ವಿಜರಿಗೆ ದಕ್ಷಿಣೆಯನ್ನು ಕೊಡುತ್ತವೆ. ಇದಕ್ಕಾಗಿ ಇಂದ್ರನ ಸ್ತೋತ್ರವು ಉಕ್ತವಾಗಿದೆ.

ವೃಕ್ಷ ಎಂಬ ಶಬ್ದಕ್ಕೆ ಕತ್ತರಿಸುವುದು ಎಂದು ಇಲ್ಲಿ ಹೇಳಿದೆ. ಸೌದೆಗಾಗಿ ಕತ್ತರಿಸಲು ಯೋಗ್ಯವಾದುದು ಎಂದು ಅರ್ಥ.

ಆದಿತ್ಯೋಽಪಿ ಗೌರುಚ್ಯತೇ । " ಉತಾದಃ ಪರುಷೇ ಗವಿ। "ಪರ್ವತಿ
ಭಾಸ್ವತೀತ್ಯೌಪಮನ್ಯ ವಃ ॥

ಗೋ ಶಬ್ದದ ಅವಯವಾರ್ಥವನ್ನು ಅಂಗೀಕರಿಸಿ ಸಂಪೂರ್ಣವಾದ ಅರ್ಥವನ್ನು ಹೇಳುವಂತೆ ಇದುವರೆವಿಗೆ ಅರ್ಥವಿವರಣೆಯನ್ನು ಕೊಡಲಾಗಿದೆ. ಈಗ ಅನೇಕ ಉದಾಹರಣೆಗಳಲ್ಲಿ ಗೋ ಶಬ್ದವು ಬೇರೆ ಬೇರೆ ಅರ್ಥದಲ್ಲಿ ಪ್ರಯುಕ್ತವಾಗಿರುವುದನ್ನು ಉದಾಹರಿಸಿದೆ. ಸೂರ್ಯನೂ ಕೂಡ ಗೋ ಎಂಬ ಶಬ್ದದಿಂದ ಉಕ್ತವಾಗಿದೆ ಎಂದು "ಉತಾದಃ ಪರುಷೇ ಗವಿ" ಎಂಬ ಮಂತ್ರದಲ್ಲಿ ಹೇಳಿದೆ. ಈ ಮಂತ್ರವು ಗಾಯತ್ರಿ ಛಂದಸ್ಸಿಗೆ ಸಂಬಂಧ ಪಟ್ಟುದು. ಭರದ್ವಾಜ ಋಷಿಯು ಇದನ್ನು ಹೇಳಿರುವರು. ಪೂಷ ಎಂಬ ದೇವತೆಯು ಈ ಶಬ್ದದಲ್ಲಿ ಸೂರ್ಯ ಎಂಬುದಾಗಿ ಉಕ್ತವಾಗಿದೆ. ಬೇರೆ ಕಡೆಯಲ್ಲಿ ಪೂಷ = ಭೂಮಿ ಎಂದರ್ಥವು ಆದಿತ್ಯ ಎಂಬ ಶಬ್ದಕ್ಕೆ ಅದಃ ಅಮುಷ್ಮಿನ್ ಪರ್ವತಿ ಅಥವಾ ಭಾಸ್ವತೀ ಎಂಬುದಾಗಿ ಉಪಮನ್ಯು ಎಂಬ ಆಚಾರ್ಯರು ಪ್ರಯೋಗವನ್ನು ತೋರಿಸಿದ್ದಾರೆ. ಸೂರ್ಯಮಂಡಲದಲ್ಲಿರುವ ಮನುಷ್ಯನು ಆಯಾಯ ಕಾಲಗಳಲ್ಲಿ ಕಾಲಚಕ್ರವನ್ನು ನಡೆಸುತ್ತಾನೆ, ಭೂಮಿಯಲ್ಲಿರುವ ನೀರನ್ನು ಹೀರುತ್ತಾನೆ, ಕತ್ತಲೆಗಳನ್ನು ನಾಶಮಾಡುತ್ತಾನೆ, ಎಂಬರ್ಥವು ಉಕ್ತವಾಗಿವೆ. ಇದರಂತೆಯೇ ಬಹಳ ಪ್ರಕಾಶದಿಂದ ಕೂಡಿದವನಾಗಿ ಹಗಲು ರಾತ್ರಿಗಳನ್ನು ಸರಿಯಾಗಿ ನಡೆಸುವವನು ಎಂದೂ 'ಭಾಸ್ವತ್' ಶಬ್ದಕ್ಕೆ ಅರ್ಥಮಾಡಿದೆ. 'ಗವಿ' ಎಂಬ ಶಬ್ದಕ್ಕೆ ಒಂದು ಕ್ಷಣವೂ ಕೂಡ ಒಂದು ಕಡೆಯಲ್ಲಿಯೂ ನಿಲ್ಲದೆ ಸಂಚಾರಮಾಡುವವನು ಎಂದು ಅರ್ಥಮಾಡಿದೆ. ಪೂಷಾ ಎಂಬ ಶಬ್ದವು ಪರ್ವತ್ ಭಾಸ್ವತ್ ಎಂಬ ಶಬ್ದಗಳ ಅರ್ಥವು ವಿವೃತವಾದಂತೆ ಇರುವ ಲಕ್ಷಣದಿಂದ ಕೂಡಿ, ಸೂರ್ಯಮಂಡಲದಲ್ಲಿರುವ ಪುರುಷನು ಸರ್ವದಾ ಸುತ್ತುತ್ತಿರುವ ಹಿರಣ್ಮಯವಾದ ರಥವನ್ನು ಸರ್ವಕಾಲದಲ್ಲಿಯೂ ಚಕ್ರವು ತಿರುಗುವಂತೆ ಒಂದೇ ಸಮನಾದ ನಡಿಗೆಯಿಂದ ನಡೆಸುತ್ತಿರುವನು ಎಂಬರ್ಥವನ್ನು ಕೊಡುತ್ತದೆ. ಉದಯ, ಅಸ್ತ, ದಿನದ ಮಧ್ಯಕಾಲ ಇವುಗಳನ್ನು ತೋರಿಸುವುದಕ್ಕಾಗಿ ಪರ್ವ ಎಂಬ ಪದವು ಪ್ರಯುಕ್ತವಾಗಿದೆ. ಅಥವ ಸೂರ್ಯಮಂಡಲದಲ್ಲಿ ಇರುವ ಪುರುಷನು ಪರ್ವವುಳ್ಳ (ಅಲ್ಲಲ್ಲಿ ರಹಸ್ಯ ಸ್ಥಾನಗಳಿಂದ ಕೂಡಿರುವ) ಚಕ್ರದಲ್ಲಿ ಇರುವ ಕಾರಣ ಸುತ್ತುವನೆಂದೂ ಸೂರ್ಯನೆಂದು ಹೇಳಿವೆ. ಕಾಲಚಕ್ರವು ಲವ, ಕ್ಷಣ, ನಿಮಿಷ, ಘಳಿಗೆ, ಮುಹೂರ್ತ, ಅಹಸ್ಸು, ರಾತ್ರ, ಅರ್ಧಮಾಸ, ಮಾಸ, ಋತು, ಅಯನ, ವತ್ಸರ ಎಂಬ ಲಕ್ಷಣವನ್ನು ಹೊಂದಿ ಬರುತ್ತದೆ. ಸರ್ವದಾ ಈ ವಿಧವಾದ ಕಾಲಗಳು ಸುತ್ತಿಕೊಂಡು ಬರುವುದರಿಂದಲೇ ಚಕ್ರದಂತಿರುವುವು. ಎಲ್ಲಾ ಪ್ರಾಣಿಗಳನ್ನೂ ನಾಶಮಾಡುವುದರಲ್ಲಿ ಈ ಕಾಲಚಕ್ರವು ಕಾರಣವಾಗಿದೆ ಎಂದು ಇಲ್ಲಿ ಹೇಳಿವೆ. ರಥವನ್ನು ಹತ್ತಿಕೊಂಡು ಸಂಚಾರಮಾಡುವವರು ಬಹಳ ಜನ ಇರುತ್ತಾರೆ. ಆದರೆ ಈ ಸೂರ್ಯನಂತೆ ಒಂದು ಮುಹೂರ್ತವಾದರೂ ರಥವಲ್ಲಿ ಇಲ್ಲದಿರುವವನು ಯಾವನೂ ಇಲ್ಲ. ಆದ್ದರಿಂದಲೇ ರಥೀತಮಃ = ರಥಿಕರಲ್ಲಿ ಶ್ರೇಷ್ಠನು

ಎಂದು ಹೇಳಿದೆ. ಸೂರ್ಯರಲ್ಲಿ ಭೇದವನ್ನು ಹೇಳಿರುವ ಪೂಷಾ ಎಂಬ ದೇವತೆಯ ಮಹಿಮೆಯು ಹೀಗಿರುವುದು ಎಂದು ನಿವರಿಸಿದೆ. [೨-೬-೨]

ಅಥಾಪ್ಯ ಸ್ಯೈಕೋ ರಶ್ಮಿಶ್ಚಂದ್ರಮಸಂ ಪ್ರತಿ ದೀಪ್ಯತೇ ತದೇತೇನೋ
ಪೇಕ್ಷಿತವ್ಯಮ್—ಆದಿತ್ಯತೋಽಸ್ಯ ದೀಪ್ತಿರ್ಭವತೀತಿ । "ಸುಷುಮ್ಣಃ
ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ" ಇತ್ಯಪಿ ನಿಗಮೋ ಭವತಿ ॥

ಈ ಪೂಷಾನೆಂಬ ದೇವತೆಯ ಒಂದು ಕಿರಣವು ಚಂದ್ರನ ರೂಪದಲ್ಲಿ ಪ್ರಕಾಶಿಸುತ್ತಿರುವುದು. ಆದುದರಿಂದ ಗೋ ಶಬ್ದಕ್ಕೆ ಚಂದ್ರನ ಕಿರಣನೆಂದು ಅರ್ಥಮಾಡಿದೆ. ಈ ವಿಷಯದಲ್ಲಿ "ಸುಷುಮ್ಣಃ ಸೂರ್ಯರಶ್ಮಿಃ" ಎಂಬ ಮಂತ್ರವು ಉದಾಹರಣೆಯಾಗಿರುತ್ತದೆ. ಮಂತ್ರಜ್ಞರು ಮಂತ್ರವನ್ನು ಚೆನ್ನಾಗಿ ಅರ್ಥವನ್ನು ತಿಳಿಯಬೇಕು. "ಸುಷುಮ್ಣ" ಎಂದರೆ ಸೂರ್ಯನ ರಶ್ಮಿಯು ಈ ಹೆಸರಿನಿಂದ ಇರುವುದಾಗಿ ಚಂದ್ರನಿಂದ ತನ್ನ ಪ್ರಕಾಶವು ಹೊರಹೊಮ್ಮುವಂತೆ ಮಾಡಿದೆ. ಇದನ್ನೇ ಬೆಳದಿಂಗಳು ಎನ್ನುತ್ತಾರೆ. ಈ ಬೆಳದಿಂಗಳೆಂಬುವುದು ಸೂರ್ಯಕಿರಣದಿಂದ ಉಂಟಾದ ಪ್ರಕಾಶವೇ ಅಗಿರುತ್ತದೆ. ಚಂದ್ರಮಂಡಲವೆಂಬುವುದು ನೀರಿನ ರಾಶಿಯಾಗಿರುವುದರಿಂದ ಈ ರಾಶಿಗೆ ಎದುರಾಗಿ ಇರುವ ಸೂರ್ಯಕಿರಣದ ಪ್ರಕಾಶವು ಈ ರೂಪದಿಂದಿದೆ ಎಂದು ಹೇಳಿದೆ. ಹಗಲಿನಲ್ಲಿ ಬರುತ್ತಿರುವ ಸೂರ್ಯಕಿರಣ ಪ್ರಕಾಶವು ನೇರವಾಗಿ ಸೂರ್ಯಮಂಡಲದಿಂದಲೇ ಬರುವ ಕಾರಣ ಬೆಳದಿಂಗಳಿಗೂ ಬಿಸಿಲಿಗೂ ಗುಣದಲ್ಲಿ ವ್ಯತ್ಯಾಸವು ಎಲ್ಲರಿಗೂ ತಿಳಿದಿರುತ್ತದೆ. (ಸುಷ್ಟು ಸುಮ್ನಃ ಸುಖ ಇತ್ಯರ್ಥಃ) ಸುಷುಮ್ಣ ಶಬ್ದಕ್ಕೆ ಚೆನ್ನಾದ ಸುಖನೆಂದರ್ಥ. ಎಲ್ಲಾ ಪ್ರಾಣಿಗಳನ್ನೂ ಯಾವಾಗಲೂ ಸುಖವಾಗಿರಿಸುವುದರಿಂದ ಈ ಸೂರ್ಯ ಕಿರಣಕ್ಕೆ ಸುಷುಮ್ಣ ಎಂದು ಹೆಸರು ಬಂದಿದೆ. ಸೂರ್ಯನಿಂದ ಹೊರಟ ಈ ಕಿರಣವು ಚಂದ್ರನನ್ನು ಹೊಂದುವಾಗ ಗೌಃ ಎಂಬ ಹೆಸರಿನಿಂದ ಕರೆಯಲ್ಪಡುವುದು. ಈ ಕಿರಣವನ್ನು ಧರಿಸಿರುವ ಚಂದ್ರನು ಗಂಧರ್ವನಾಗಿರುವನು. ಇವನು ನಮ್ಮೆಲ್ಲರನ್ನು ರಕ್ಷಿಸಲಿ. ಸುಷುಮ್ಣ ಎಂಬ ಹೆಸರಿನ ಸೂರ್ಯರಶ್ಮಿಯನ್ನು ಉದ್ದೇಶಮಾಡಿ ಈ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುತ್ತೇನೆ. ಎಂದು ಅರ್ಥವನ್ನು ಕೊಡುವ ಮಂತ್ರವನ್ನು ಉದಾಹರಣೆಯಾಗಿ ಹೆಳಿದೆ. (೨-೬-೩)

ಸೋಽಪಿ ಗೌರುಚ್ಯತೇ—"ಅತ್ರಾಹ ಗೋರಮನ್ವತ" ಇತಿ । ತದು-
ಪರಿಷ್ಟಾದ್ ವ್ಯಾಖ್ಯಾಸ್ಯಾಮಃ । ಸರ್ವೇಽಪಿ ರಶ್ಮಿಯೋ ಗಾವ ಉಚ್ಯಂತೇ

ಸುಷಮ್ಣ ಎಂಬ ಸೂರ್ಯರಶ್ಮಿಯನ್ನು ಒಂದನ್ನೇ ಗೌಃ ಎಂದು ಹೇಳುವಂತೆ ಎಲ್ಲಾ ಕಿರಣಗಳನ್ನು ಗೌಃ ಎಂಬ ಶಬ್ದದಿಂದ ಹೇಳುವರು. [೨-೬-೪]

**ಇತಿ ಷಷ್ಟಃ ಖಂಡಃ ಸಮಾಪ್ತಃ**

ಇಲ್ಲಿಗೆ ಆರನೆಯ ಖಂಡವು ಸಮಾಪ್ತವು



## ಅಥ ಸಪ್ತಮಃ ಖಂಡಃ

### ಏಳನೆಯ ಖಂಡವು

---

ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ। ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ ಪದಮವ ಭಾತಿ ಭೂರಿ (ಋ. ಸಂ. ೧-೧೫೪-೬) ತಾನಿ ವಾಂ ವಾಸ್ತೂನಿ ಕಾಮಯಾಮಹೇ ಗಮನಾಯ ಯತ್ರ ಗಾವೋ ಭೂರಿಶೃಂಗಾ ಬಹುಶೃಂಗಾ ಭೂರೀತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ ಶೃಂಗಂ ಶ್ರಯತೇರ್ವಾ ಶಮ್ನಾತೇರ್ವಾ ಶರಣಾಯೋದ್ಗತಮಿತಿ ವಾ ಶಿರಸೋ ನಿರ್ಗತಮಿತಿ ವಾಯಾಸೋಽಯನಾಸ್ತತ್ರ ತದುರುಗಾಯಸ್ಯ ವಿಷ್ಣೋರ್ಮಹಾಗತೇಃ ಪರಮಂ ಪದಂ ಪರಾರ್ಧ್ಯಸ್ಥಮವಭಾತಿ ಭೂರಿ ಪಾದಃ ಪದ್ಯತೇಸ್ತನ್ನಿಧಾನಾತ್ಪದಂ ಪಶುಪಾದಪ್ರಕೃತಿಃ ಪ್ರಭಾಗಪಾದಃ ಪ್ರಭಾಗಪಾದಸಾಮಾನ್ಯಾದಿತರಾಣಿ ಚೇನ್ನಾನಾನಿರ್ವಚನಾನಿ ಯಥಾರ್ಥಂ ನಿರ್ವಕ್ತವ್ಯಾನೀತೀಮಾನ್ಯೇಕವಿಶಂತಿಃ ಪೃಥಿವೀನಾಮಧೇಯಾನ್ಯನುಕ್ರಾಂತಾನಿ ತತ್ರ ನಿರ್ಋತಿರ್ನಿ ರಮಣಾದೃಚ್ಛತೇಃ ಕೃಚ್ಛ್ರಾಪತಿರಿತರಾ ಸಾ ಪೃಥಿವ್ಯಾ ಸಂದಿಹ್ಯತೇ ತಯೋರ್ವಿಭಾಗಸ್ತಸ್ಯಾ ಏಷಾ ಭವತಿ ॥೭॥

"ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿ ಶೃಙ್ಗ ಅಯಾಸಃ। ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಂ ಪದಮವ ಭಾತಿ ಭೂರಿ।" ತಾನಿ ವಾಂ ವಾಸ್ತೂನಿ ಕಾವಯಾಮಹೇ ಗಮನಾಯ ಯತ್ರ ಗಾವೋ ಬಹುಶೃಂಗಾಃ ಭೂರೀತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ॥ ಶೃಙ್ಗಂ ಶ್ರಯತೇರ್ವಾ ಶೃಣಾತೇರ್ವಾ ಶಮ್ನಾತೇರ್ವಾ ಶರಣಾಯೋದ್ಗತಮಿತಿ ವಾ ಶಿರಸೋ ನಿರ್ಗತಮಿತಿ ವಾ॥ ಅಯಾಸೋಽಯನಾಃ ತತ್ರ ತದುರುಗಾಯಸ್ಯ ವಿಷ್ಣೋರ್ಮಹಾಗತೇಃ

ಪರಮಂ ಪದಂ ಪರಾರ್ಧ್ಯಸ್ಥಮವಭಾತಿಭೂರಿ ॥ ಪಾದಃ ಪದ್ಯತೇಃ
ತತ್ಸನ್ನಿಧಾನಾತ್ ಪದಮ್ ॥ ಪಶುಪಾದಪ್ರಕೃತಿಃ ಪ್ರಭಾಗಪಾದಃ
ಪ್ರಭಾಗಪಾದಃ ಸಾಮಾನ್ಯಾದಿತರಾಣಿ ಪದಾನಿ ॥

ಗೋ ಶಬ್ದಕ್ಕೆ ಕಿರಣ ಎಂಬರ್ಥದಲ್ಲಿ 'ತಾ ವಾಂ ವಾಸ್ತೂನಿ' ಎಂಬ ಮಂತ್ರವು ಉದಾಹರಣೆಯಾಗಿರುತ್ತದೆ. ಈ ಮಂತ್ರದ ಅರ್ಥವು ವಿಷ್ಣು ಎಂಬ ದೇವತೆಯನ್ನು ಬೋಧಿಸುವುದಾಗಿದೆ. ಬಹಳವಾದ ಬೆಳಕನ್ನುಂಟುಮಾಡುವ ಅಯನ, ಮುಹೂರ್ತ ಎಂಬ ಭೇದಗಳು ಈ ಬೆಳಕಿನ ಪ್ರಕಾಶದ ವ್ಯತ್ಯಾಸದಿಂದ ಉಂಟಾಗಿರುವುವು. ಈ ವ್ಯತ್ಯಾಸಕ್ಕೆ ಕಾರಣವಾಗಿರುವ ಕಿರಣಗಳು ಮತ್ತು ಪ್ರಕಾಶ ಎಂಬ ಎರಡು ಪದಾರ್ಥಗಳು ಆಶ್ರಯ ಸ್ಥಾನವಾಗಿ ಇರುವ ಸೂರ್ಯಮಂಡಲವನ್ನು ಸಂಚಾರಕ್ಕಾಗಿ ಹೊಂದಿರುತ್ತದೆ. ಈ ಸ್ಥಾನದಲ್ಲಿ ಬಹಳಮಟ್ಟಿನ ಸಂಚಾರವನ್ನು ಹೊಂದಿರುವ ಪೂಜ್ಯನಾದ ವಿಷ್ಣುವಿನ ಸ್ಥಾನವು ಆದಿತ್ಯ ಮಂಡಲವೆಂದು ಹೆಸರನ್ನು ಹೊಂದಿದೆ. ಸ್ಥಾನ ಎಂಬ ಪದವನ್ನು 'ಪದ' ಎಂಬ ಶಬ್ದದಿಂದ ಲೋಕದಲ್ಲಿ ಹೇಳುತ್ತಾರೆ. ಹೊಂದ ತಕ್ಕ ಆಶ್ರಯವನ್ನೇ ಪದವೆಂದು ಹೇಳುವರು. ತನಗಿಂತ ಕಡಮೆಯಾಗಿ ಮಾಡಿ ಎಲ್ಲವನ್ನೂ ಮೀರಿ ಇರುವ ಬಹಳ ಹೆಚ್ಚಾದ ಪ್ರಕಾಶವನ್ನು ಅವಭಾಸವೆಂದೂ, ಹೀಗೆ ಪ್ರಕಾಶಿಸುವಿಕೆಯನ್ನು ಅವಭಾತಿ ಎಂಬ ಕ್ರಿಯಾಪದದಿಂದಲೂ ಹೇಳುವರು.

'ಭೂರಿ' ಎಂಬ ಪದವು ಬಹಳ ಎಂಬ ಪ್ರಯುಕ್ತದಲ್ಲಿ ಪ್ರಯೋಗವಾಗಿದೆ. ಲೋಕದಲ್ಲಿ ಭೂರಿದಕ್ಷಿಣೆ ಎಂಬ ಪ್ರಯೋಗವು ಇದರಿಂದಲೇ ಉಂಟಾಗಿದೆ.

'ಶೃಂಗಾ' ಎಂಬ ಶಬ್ದವು ಎರಡನ್ನು ಆಶ್ರಯಿಸಿದ್ದರಿಂದ ಉಂಟಾಗಿದೆ. ಕೊಂಬುಗಳು ತಲೆಯ ಮೇಲೆ ಎರಡಾಗಿರುವುದು ಲೋಕದಲ್ಲಿ ಎಲ್ಲರಿಗೂ ತಿಳಿದಿರುತ್ತದೆ. ಅಥವ ಇನ್ನೊಬ್ಬರಿಗೆ ಹಿಂಸೆ ಮಾಡುವುದು ಶೃಂಗವೆನಿಸುವುದು. ತಲೆಯಿಂದ ಹೊರಕ್ಕೆ ಹೊರಟು ಬಂದಿರುವುದನ್ನು ಶೃಂಗವೆಂದು ಹೇಳುತ್ತಾರೆ. ಉತ್ತಮವಾದ ಅರ್ಧ ಭಾಗದಲ್ಲಿ ಇರತಕ್ಕದ್ದು ಪರಾರ್ಧ್ಯವೆನಿಸುವುದು.

'ಪದ' ಎಂಬ ಶಬ್ದವು ಪಾದವನ್ನಿಡಲು ಸ್ಥಾನವಾದುದರಿಂದ 'ಸ್ಥಾನ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. (ಪಶುವಿನ) ಪಶುವಿನ ಅಥವಾ ಮನುಷ್ಯನ ಪಾದವನ್ನು ಇಡತಕ್ಕ ಸ್ಥಾನಕ್ಕೆ ಪದವೆಂದು ಹೆಸರು. ನಾಲ್ಕನೇ ಒಂದು ಭಾಗವನ್ನು ಪಾದವೆಂದು ಕರೆಯುತ್ತಾರೆ. ನಾಲ್ಕನೇ ಒಂದು ಎಂಬುವುದು ನಾಣ್ಯದಲ್ಲಿಯೂ ಲೋಕ ವ್ಯವಹಾರದಲ್ಲಿ (ಕಾಲು ರೂಪಾಯಿ) ಎಂದು ಪ್ರಸಿದ್ಧವಾಗಿದೆ. ಇದರಂತೆಯೇ ಭೂಮಿಯ ಅಳತೆಯಲ್ಲಿಯೂ ಪದ ಎಂಬ ಶಬ್ದವು ವಿಭಾಗದಲ್ಲಿ ಪ್ರಯುಕ್ತವಾಗಿರುತ್ತದೆ. (೨-೭-೧)

ಏವಮನ್ಯೇಷಾಮಪಿ ಸತ್ತ್ವಾನಾಂ ಸಂದೇಹಾ ವಿದ್ಯಂತೇ ತಾನಿ
ಚೇತ್ ಸಮಾನಕರ್ಮಾಣಿ ಸಮಾನನಿರ್ವಚನಾನಿ ನಾನಾನಿಕರ್ಮಾಣಿ
ಚೇನ್ನಾನಾ ನಿರ್ವಚನಾನಿ ಯಥಾರ್ಥಂ ನಿರ್ವಕ್ತವ್ಯಾನೀತಿ ।

ಗೋ ಎಂಬ ಶಬ್ದಕ್ಕೆ ಅನೇಕ ವಿಧವಾದ ಅರ್ಥಗಳು ಇರುವುದನ್ನು ಉದಾಹರಣೆಯಾಗಿ ತೋರಿಸಿದ್ದುತ್ತದೆ. ಹೀಗೆಯೇ ಬೇರೆ ಬೇರೆಯಾದ ಅರ್ಥದಲ್ಲಿರುವ ಒಂದೇ ಶಬ್ದಗಳನ್ನು ಅಲ್ಲಲ್ಲಿ ಗಮನಿಸಬೇಕು ಆ ಶಬ್ದಾರ್ಥಗಳು ಒಂದೇ ವಿಧವಾದ ಕ್ರಿಯೆ

ಯಿನ್ನು ಬೋಧಿಸುವುದಾದರೆ ಅವುಗಳನ್ನು ಆಯಾಯ ಅರ್ಥಗಳು ಬರುವ ಕ್ರಮಗಳನ್ನು ವಿವರಿಸಬೇಕು. ಅನೇಕ ಕರ್ಮಗಳನ್ನು ಬೋಧಿಸುವುದಾದರೆ ಅವುಗಳ ವ್ಯುತ್ಪತ್ತಿ ಕ್ರಮವನ್ನು ತಿಳಿಸಬೇಕು. [೨-೭-೨]

ಇಮಾನ್ಯೇಕವಿಂಶತಿಃ ಪೃಥಿವೀನಾಮಧೇಯಾನ್ಯನುಕ್ರಾಂತಾನಿ ।
ತತ್ರ ನಿರ್ಋತಿರ್ನಿರಮಣಾದೃಚ್ಛತೇಃ ಕೃಚ್ಛ್ರಾಪತ್ತಿರಿತರಾ ।
ಸಾ ಪೃಥಿವ್ಯಾ ಸಂದಿಹ್ಯತೇ । ತಯೋರ್ವಿಭಾಗಃ ॥

ಈ ಇಪ್ಪತ್ತೊಂದು ಹೆಸರುಗಳು ಸಂದೇಹಪರವಾಗಿ ಇರುವುದರಿಂದ ಆಯಾಯ ಮಂತ್ರಗಳಲ್ಲಿಯೇ ಸಂದೇಹವುಂಟಾಗುವ ಕ್ರಮವನ್ನು ವಿವರಿಸಿ ಹೇಳಲಾಗುತ್ತದೆ. ಮೊದಲು ಗೋ ಎಂಬ ಶಬ್ದಕ್ಕೆ ಇರುವ ಅರ್ಥ ಸಂದೇಹವನ್ನು ಉದಾಹರಣೆಯೊಡನೆ ಹೇಳಿಯಾಗಿದೆ. ಲೋಕದಲ್ಲಿ ಎಲ್ಲಾ ಪ್ರಾಣಿಗಳೂ ಭೂಮಿಯಲ್ಲಿ ಅಡಕವಾಗಿವೆ. ಇವುಗಳನ್ನು ಹೇಳುವ ಶಬ್ದಗಳೆಲ್ಲವನ್ನೂ ವಿವರಿಸುವ ಗ್ರಂಥವನ್ನು ಮತ್ತು ಆ ಶಬ್ದಗಳ ರೂಪನಿಷ್ಪತ್ತಿ ಕ್ರಮಗಳನ್ನು ಹೇಳುವ ಶಬ್ದಗಳನ್ನುಳ್ಳ ಗ್ರಂಥವನ್ನು ನಿಘಂಟು ಎಂದು ಹೇಳುತ್ತಾರೆ. ಇದಕ್ಕಾಗಿಯೇ ಮೊದಲನೆಯ ಶಬ್ದವು ಪೃಥಿವೀ ಎಂದು ನಿಘಂಟುವಿನಲ್ಲಿ ಪ್ರಾರಂಭವಾಗಿರುತ್ತದೆ. ಈ ಪೃಥಿವೀ ಎಂಬ ವಸ್ತುವನ್ನು ಹೇಳುವ ಪದಗಳು ಇಪ್ಪತ್ತೊಂದು ಎಂದು ಉಕ್ತವಾಗಿವೆ. ಇವುಗಳನ್ನೆಲ್ಲವನ್ನೂ ಇಲ್ಲಿ ಹೇಳಿದ ನಂತರ ಇವುಗಳಿಗಿಂತಲೂ ಬೇರೆಯಾಗಿರುವ ಪದಾರ್ಥಗಳನ್ನು ಬೋಧಿಸುವ ಶಬ್ದಗಳನ್ನು ಹೇಳಬೇಕಾಗಿರುವುದು. ಇದರಲ್ಲಿ ಭೂ ವಾಚಕವಾದ 'ಕು' ಎಂಬ ಶಬ್ದವು ಬಿಟ್ಟು ಹೋಗಿದೆ. ಇದಕ್ಕಾಗಿಯೇ ಇದರ ವಿವರಣೆಯನ್ನು ತೋರಿಸಲು ನಿರ್ಋತಿ ಎಂಬ ಶಬ್ದವನ್ನು ಈ ಪದಗಳ ಜೊತೆಯಲ್ಲಿ ಹೇಳಿದೆ. ಈ ನಿರ್ಋತಿ ಎಂಬ ಪದದಿಂದ ಪ್ರಾಣಿಗಳು ಸುಖವಾಗಿ ವಾಸಮಾಡುವ ಸ್ಥಾನವು ಭೂಮಿಯಾಗಿರುವುದು ಎಂಬರ್ಥವು ಉಕ್ತವಾಗಿದೆ. ಹೀಗೆ ಅರ್ಥವನ್ನು ಹೇಳುವಾಗ 'ರಮು' ಎಂಬ ಧಾತುವಿಗೆ 'ನಿ' ಎಂಬ ಉಪಸರ್ಗವು ಸೇರಿದಾಗ 'ನಿರ್ಋತಿ' ಎಂಬ ಶಬ್ದವಾಗುತ್ತದೆ ಎಂದು ಹೇಳಿದೆ. ದುಃಖವನ್ನು ಹೊಂದಿಸುವುದು ಎಂಬರ್ಥವನ್ನು ಈ ನಿರ್ಋತಿ ಶಬ್ದದಿಂದ ಹೇಳುವಾಗ ಎರಡು ವಿಧವಾದ ಅರ್ಥಕ್ಕೂ ಭೂಮಿಯು ಆಶ್ರಯವಾಗಿರುವ ವಿಷಯದಲ್ಲಿ ಸಂದೇಹವು ಬರುವ ಕಾರಣ ಈ ಅರ್ಥಗಳು ಬರುವ ಕ್ರಮವನ್ನು ವಿವರಿಸಬೇಕು. ಎರಡು ವಿಧವಾದ ಅರ್ಥಗಳಿಗೂ ಒಂದೇ ಶಬ್ದವು ಆಶ್ರಯವಾಗಿ ಇದ್ದರೂ ಒಂದು ಅರ್ಥದಲ್ಲಿ ಪ್ರಾಣಿಗಳಿಗೆ ಸಂತೋಷವನ್ನುಂಟುಮಾಡುವುದು ಎಂಬುದಾಗಿಯೂ, ಇನ್ನೊಂದು ಅರ್ಥದಲ್ಲಿ ಪ್ರಾಣಿಗಳಿಗೆ ಕಷ್ಟವನ್ನುಂಟುಮಾಡುವುದು ಎಂಬುದಾಗಿಯೂ ಅರ್ಥ ವಿವರಣೆಯು ಬರುವಂತೆ ಇರುವ ಶಬ್ದವ್ಯುತ್ಪತ್ತಿ ಕ್ರಮವನ್ನು ವಿವರಿಸಿ ಹೇಳಬೇಕು. ಇದರಲ್ಲಿ ಭೂಮಿಯು ಕಷ್ಟವನ್ನುಂಟುಮಾಡುವುದು ಎಂಬರ್ಥಕ್ಕೆ ವಿವರಣೆಯನ್ನು ತೋರಿಸುವ ಭೂಮಿಯ ವಾಚಕವಾದ ನಿರ್ಋತಿ ಶಬ್ದವನ್ನು ಒಳಗೊಂಡಿರುವ ಮಂತ್ರವನ್ನು ಉದಾಹರಣೆಯಾಗಿ ಹೇಳಿದೆ. [೨-೭-೩]

**ಇತಿ ಸಪ್ತಮಃ ಖಂಡಃ**

ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು

---

ಅಥ ಅಷ್ಟಮಃ ಖಂಡಃ

**ಎಂಟನೆಯ ಖಂಡವು**

———

ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ ದದರ್ಶ ಹಿರುಗಿನ್ನು ತಸ್ಮಾತ್ । ಸ ಮಾತುರ್ಯೋನಾ ಪರಿವೀತೋ ಅಂತರ್ಬಹು-ಪ್ರಜಾ ನಿರ್ಋತಿಮಾವಿವೇಶ ॥ (ಋ. ಸಂ. ೧-೧೬೪-೩೨) ಬಹುಪ್ರಜಾಃ ಕೃಚ್ಛ್ರಮಾಪದ್ಯತ ಇತಿ ಪರಿವ್ರಾಜಕಾ ವರ್ಷಕರ್ಮೇತಿ ನೈರುಕ್ತಾ ಯ ಈಂ ಚಕಾರೇತಿ ಕರೋತಿಕಿರತೀ ಸಂದಿಗ್ಧೌ ವರ್ಷಕರ್ಮಣಾ ನ ಸೋಽಸ್ಯ ವೇದ ಮಧ್ಯಮಃ ಸ ಏವಾಸ್ಯ ವೇದ ಮಧ್ಯಮೋ ಯೋ ದದರ್ಶಾದಿತ್ಯೋಪಹಿತಂ ಸಾ ಮಾತುರ್ಯೋನೌ ಮಾತಾಂತರಿಕ್ಷಂ ನಿರ್ಮೀಯಂತೇಽಸ್ಮಿನ್ ಭೂತಾನಿ ಯೋನಿರಂತರಿಕ್ಷಂ ಮಹಾನವಯವಃ ಪರಿವೀತೋ ವಾಯುನಾಯಮಪೀತರೋ ಯೋನಿರೇತಸ್ಮಾದೇವ ಪರಿಯುತೋ ಭವತಿ ಬಹುಪ್ರಜಾ ಭೂಮಿಮಾಪದ್ಯತೇ ವರ್ಷ-ಕರ್ಮಣಾ ಶಾಕಪೂಣಿಃ ಸಂಕಲ್ಪಯಾಂಚಕ್ರೇ ಸರ್ವಾ ದೇವತಾ ಜಾನಾಮೀತಿ ತಸ್ಮೈ ದೇವತೋಭಯಲಿಂಗಾ ಪ್ರಾದುರ್ಬಭೂವ ತಾಂ ನ ಜಜ್ಞೇ ತಾಂ ಪಪ್ರಚ್ಛ ವಿವಿದಿಷಾಣಿ ತ್ವೇತಿ ಸಾಸ್ಮಾ ಏತಾಮೃಚ ಮಾದಿದೇಶೈಷಾ ಮದ್ದೇವತೇತಿ ॥೮॥

“ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ ದದರ್ಶ ಹಿರುಗಿನ್ನು ತಸ್ಮಾತ್ । ಸ ಮಾತುರ್ಯೋನಾ ಪರಿವೀತೋ ಅಂತ-ರ್ಬಹುಪ್ರಜಾ ನಿರ್ಋತಿಮಾವಿವೇಶ॥” ಬಹುಪ್ರಜಾಃ ಕೃಚ್ಛ್ರಮಾಪದ್ಯತ ಇತಿ ಪರಿವ್ರಾಜಕಾಃ। ವರ್ಷಕರ್ಮೇತಿ ನೈರುಕ್ತಾಃ॥ ಯ ಈಂ ಚಕಾರೇತಿ ಕರೋತಿಕಿರತೀ ಸಂದಿಗ್ಧೌ ವರ್ಷಕರ್ಮಣಾ ‘ನ ಸೋ ಅಸ್ಯ ವೇದ’ ಮಧ್ಯಮಃ ಸ ಏವಾಸ್ಯ ವೇದ ಮಧ್ಯಮೋ ಯೋ ದದರ್ಶಾದಿತ್ಯೋಪಹಿತಮ್। ‘ಸ ಮಾತುರ್ಯೋನೌ ’ಮಾತಾಂ-

ತರಿಕ್ಷವನ್–ನಿರ್ಮೀಯಂತೇಽಸ್ಮಿನ್ ಭೂತಾನಿ ॥ ಯೋನಿರಂತರಿಕ್ಷಂ
ಮಹಾನವಯವಃ ಪರಿವೀತೋ ವಾಯುನಾ ॥
ಅಯಮಪೀತರೋ ಯೋನಿರೇತಸ್ಮಾದೇವ, ಪರಿಯುತೋ ಭವತಿ ॥
ಬಹುಪ್ರಜಾ ಭೂಮಿಮಾಪದ್ಯತೇ ವರ್ಷಕರ್ಮಣಾ ॥

'ದೀರ್ಘತಮಸ್' ಎಂಬ ಋಷಿಯು ಹೇಳಿರುವ ತ್ರಿಷ್ಟುಪ್ ಛಂದಸ್ಸಿನ ಮಂತ್ರವು 'ಮಹಾವ್ರತ' ಎಂಬ ಯಜ್ಞದಲ್ಲಿ ವಿಶ್ವೇದೇವರನ್ನು ಆಹ್ವಾನಮಾಡಲು ವಿನಿಯುಕ್ತವಾಗಿದೆ. ಮುಂದೆ ಉದಾಹರಣೆಯಾಗಿ ಬರುವ "ಅಯಂ ಸಶಿಂಕ್ತೇ" ಎಂಬ ಮಂತ್ರವೂ, ಈ ಮಂತ್ರವೂ ಒಂದೇ ದೇವತೆಯನ್ನೇ ಬೋಧಿಸುವುದಾಗಿವೆ. ಒಬ್ಬ ಮನುಷ್ಯನು ಬಹಳ ಮಕ್ಕಳುಳ್ಳವನಾಗಿ ಅವುಗಳನ್ನು ಪೋಷಣೆಮಾಡಲು ಅಶಕ್ತನಾಗಿರುವುದರಿಂದ ಕಷ್ಟವನ್ನು ಅನುಭವಿಸುವನು. ಅವನಿಗೆ ಕಷ್ಟವನ್ನು ಉಂಟುಮಾಡುತ್ತದೆ ಎಂಬ ಅರ್ಥವು ಈ ಋಕ್ಕಿನಲ್ಲಿ ನಿರ್ಋತಿ ಎಂಬ ಶಬ್ದದಿಂದ ಉಕ್ತವಾಗಿದೆ ಎಂದು ಸನ್ಯಾಸಿಗಳು ಈ ಋಕ್ಕಿನ ಅರ್ಥವೆಂದು ಹೇಳುತ್ತಾರೆ. ಮಕ್ಕಳನ್ನು ಹೊಂದಲು ಆಸೆಯುಳ್ಳವನು ಗರ್ಭವನ್ನು ಧರಿಸುವಂತೆ ಮಾಡಿ ಶರೀರದಲ್ಲಿ ಗರ್ಭವುಂಟಾಯಿತು ಎಂದು ತಿಳಿಯುವನು. ಅನಂತರ ಈ ಗರ್ಭವು ತಾಯಿಯ ಆಹಾರಗಳ ಪರಿಣಾಮದಿಂದ ಕಾಲಕ್ಕನುಸಾರವಾಗಿ ವೃದ್ಧಿಯನ್ನು ಹೊಂದುವುದು. ಗರ್ಭವು ಆವರಣವಾಗಿರುವ 'ಜರಾಯು' ಎಂಬ ಹೊದ್ದಿಕೆಯಿಂದ ಕೂಡಿರುವುದು. ಹೀಗೆ ಗರ್ಭವುಂಟಾಗುವ ಕ್ರಮವನ್ನು ತಿಳಿದಿರುವವನು ಅಂದರೆ ಗರ್ಭಕ್ಕೆ ಕಾರಣವಾದವನು ತಾನು ಎಂಬುವುದನು ತಿಳಿದಿರುವವನು ಬಹಳ ಮಕ್ಕಳನ್ನು ಹೊಂದಿ ದುಃಖವನ್ನು ಅನುಭವಿಸುವನು. ಇದನ್ನು ತಿಳಿಯದಿರುವುದೇ ಇವನಿಗೆ ದುಃಖಕ್ಕೆ ಕಾರಣವು. ಪರಮಾತ್ಮನ ತತ್ವರೂಪವನ್ನು ಚೆನ್ನಾಗಿ ತಿಳಿದವನು ಮಕ್ಕಳ ವಿಷಯದಲ್ಲಿ ಆಸೆಯಿಲ್ಲದವನಾಗಿ ಆ ಕೆಲಸದಿಂದ ಹಿಂತಿರುಗುವನು ಎಂಬುವುದು ಅವನ ಸುಖಕ್ಕೆ ಕಾರಣವು. ಈ ಎರಡು ವಿಧವಾದ ಅರ್ಥವು ಇಲ್ಲಿ ನಿರ್ಋತಿ ಶಬ್ದದಿಂದ ಹೇಳಿದೆ ಎಂದು ಬ್ರಹ್ಮಪರವಾದ ಅರ್ಥವು. ಯಾವನು ಗರ್ಭವನ್ನು ಮಾಡುವನೋ ಅವನೇ ಗರ್ಭಕ್ಕೆ ಸೇರುವವನಾಗಿ ಅನೇಕ ಜನ್ಮಗಳಲ್ಲಿ ಬಹಳಸಾರಿ ಹುಟ್ಟುವವನಾಗಿ ಜನ್ಮ ಮರಣಗಳಲ್ಲಿ ಉಂಟಾದ ದುಃಖವನ್ನು ಅನುಭವಿಸುವನು ಎಂದು ಹೇಳಿರುತ್ತದೆ ಎಂದು ಕೆಲವರು ಹೇಳುತ್ತಾರೆ.

ವ್ಯವಸಾಯ ಮಾಡತಕ್ಕವರು ನಿರ್ಋತಿ ಶಬ್ದಕ್ಕೆ "ವರ್ಷಕರ್ಮ"ವೆಂದು ಹೇಳುವರು. ಭೂಮಿಯನ್ನು ಹದಮಾಡುವುದು, ಭೂಮಿಯಲ್ಲಿ ಬೀಜವನ್ನು ಹಾಕುವುದು ಎಂಬರ್ಥವನ್ನು ಹೇಳಿ ಮೇಘವು ಮಳೆಯನ್ನು ಸುರಿಸುವುದು ಮತ್ತು ಭೂಮಿಯಲ್ಲಿ ಬೀಜವನ್ನು ಬಿತ್ತಿಸುವುದು, ಇವೆಲ್ಲವನ್ನೂ ವರ್ಷಕರ್ಮವೆನ್ನುತ್ತಾರೆ. ಆದ್ದರಿಂದ ಇವೆಲ್ಲವೂ ನೀರಿನ ತತ್ವವೇ ಅಥವಾ ನನ್ನ ಕೆಲಸವೇ ಎಂದು ಮೇಘಕ್ಕೆ ಸಂದೇಹವುಂಟಾಗಲು ಕಾರಣವು. ಇದನ್ನು ಆಲೋಚಿಸಿದರೆ ಇವೆರಡರ ಕೆಲಸವೂ ಅಲ್ಲದೆ ಬೇರೆ ಮತ್ತೊಬ್ಬನ ಕೆಲಸವೆಂದು ಊಹಿಸಲು ಅವಕಾಶವುಂಟಾಗುತ್ತದೆ. ಇಂದ್ರನು ಉದಕತತ್ವ, ಮೇಘ ಇವುಗಳ ಪಕ್ಕೂ ಬೇರೆಯವನಾಗಿ ಸೂರ್ಯಮಂಡಲದ ಕಿರಣದಲ್ಲಿ ಅಡಗಿರುವ ನೀರನ್ನು ಹಿಂಡಿ ವರ್ಷಾಕಾಲದಲ್ಲಿ ಮಳೆಯನ್ನು ಸುರಿಸುವನು. ಮಳೆಗಾಲದಲ್ಲಿ ಈ ಇಂದ್ರನು ಅಂತರಿಕ್ಷದಲ್ಲಿ ನೀರು ಚೆನ್ನಾಗಿ ಎಲ್ಲರಿಗೂ ತಿಳಿಯಲು ಅವಕಾಶವಾಗಿರುವಂತೆ ಸೂರ್ಯಕಿರಣದಿಂದಲೂ, ಗಾಳಿಯಿಂದಲೂ ಕೂಡಿ ಮೇಘದ ಮಧ್ಯದಲ್ಲಿದ್ದುಕೊಂಡು ನಾನಾ ವಿಧವಾದ ಬೆಳೆಗಳಿಗೆ ಅವಕಾಶವನ್ನು ಕಲ್ಪಿಸುವವನಾಗಿ ಭೂಲೋಕದಲ್ಲಿ ವ್ಯಾಪಿಸಿರುವನು ಎಂಬರ್ಥವನ್ನು ಲೋಕವ್ಯವಹಾರವನ್ನು ತಿಳಿದವರು ಹೇಳುತ್ತಾರೆ. ಈ ಅರ್ಥವು ಬಹುಪ್ರಜಾಃ ಭೂಮಿಮಾವಿಶತಿ ಎಂಬ ಅರ್ಥಕ್ಕೆ ಸರಿಹೋಗುತ್ತದೆ.

ವರ್ಷಕರ್ಮಣಾ ಮಳೆ ಹುಯ್ಯುವುದು ಎಂಬ ಅರ್ಥವನ್ನು ಕೊಡುವುದಕ್ಕೆ ಅನುಗುಣವಾಗಿ ಮಳೆಯನ್ನು ಉಂಟು ಮಾಡುವುದು, ನೀರನ್ನು ಎರಚುವುದು ಎಂಬರ್ಥವನ್ನು ಕೊಡುವ 'ಕರೋತಿಕಿರತಿ' ಎಂಬೆರಡು ಅನುಗುಣವಾಗಿರುತ್ತವೆ. ಪ್ರಾಣಿಗಳು ಉತ್ಪತ್ತಿಯನ್ನು ಹೊಂದಲು ಅವಕಾಶವಾಗಿರುವುದು ಎಂಬರ್ಥವನ್ನು ಕೊಡುವ ಮಾತ್ರ ಶಬ್ದಕ್ಕೆ ಅಂತರಿಕ್ಷವೆಂದು ಅರ್ಥವನ್ನು ಹೇಳಿದೆ. ಅವಕಾಶವನ್ನು ಕೊಡುವುದು ಅಥವ ಉತ್ಪತ್ತಿಗೆ ಕಾರಣವಾದ ಪ್ರದೇಶವು ವಾಯುವಿನಿಂದ ಕೂಡಿರುವುದಾಗಿ ಮತ್ತು ನೀರಿನಿಂದ ಒದ್ದೆಯಾಗಿರುವಂತೆ ಅಂತರಿಕ್ಷವು ಇರುತ್ತದೆ. ಹೀಗೆಯೇ ಪ್ರಾಣಿಯು ಹುಟ್ಟಲು ಮುಖ್ಯ ಕಾರಣವಾದ ಉದಕ ಮತ್ತು ವಾಯು ಇವುಗಳಿಂದ ಕೂಡಿರುವ ಸ್ತ್ರೀ ಅವಯವವು ಇಲ್ಲಿ ಯೋನಿ ಶಬ್ದದಿಂದ ಉಕ್ತವಾಗಿದೆ. ಹೀಗೆಯೇ ಈ ಮಂತ್ರದಲ್ಲಿ ಕರ್ಮಕಾಂಡವನ್ನು ಹೇಳತಕ್ಕವರು ಭೂಮಿ ಎಂಬುದಾಗಿಯೂ. ಜ್ಞಾನಕಾಂಡವನ್ನು ಹೇಳತಕ್ಕವರು ಕಷ್ಟವನ್ನು ಕೊಡುವುದು ಎಂಬುದಾಗಿಯೂ ನಿರ್ಋತಿ ಶಬ್ದಾರ್ಥ ವಿವರಣೆಯನ್ನು ಮಾಡಿರುವರು. ಒಂದು ಮಂತ್ರದಲ್ಲಿರುವ ಎರಡುವಿಧವಾದ ಅರ್ಥಗಳಿಗೂ ಆಯಾಯ ಶಬ್ದಗಳ ವ್ಯುತ್ಪತ್ತಿಯು ಅನುಗುಣವಾಗಿ ಇರುವುದರಿಂದ ಎರಡುವಿಧವಾದ ಅರ್ಥವೂ ಸರಿಯಾಗಿರುತ್ತದೆ. ಈ ವಿಷಯದಲ್ಲಿ ಇನ್ನೊಂದು ಉದಾಹರಣೆಯು ಉಕ್ತವಾಗಿದೆ. "ದಧಿಕ್ರಾವ್ಣೋ" ಎಂಬ ಮಂತ್ರದಲ್ಲಿ ಶಬ್ದಗಳ ಅರ್ಥವು ಆಯಾಯ ಮಂತ್ರವನ್ನು ಹೇಳುವವನ ಅರ್ಥಕ್ಕೆ ಅನುಗುಣವಾಗಿ ಬೇರೆಬೇರೆಯಾಗಿರುತ್ತವೆ ಎಂಬ ನ್ಯಾಯಕ್ಕನುಗುಣವಾಗಿದೆ. ಈ ಶಬ್ದಗಳಲ್ಲಿ ಶಬ್ದದ ಅರ್ಥವು ನಿಶ್ಚಯಮಾಡಲು ಸಾಧ್ಯವಿಲ್ಲದ್ದಾಗಿವೆ. ಮಂತ್ರಾರ್ಥಗಳು ತಿಳಿಯಲು ಅವಶ್ಯಕವಾಗಿಯೂ, ಬಹಳವಾಗಿಯೂ ಇರುತ್ತವೆ. ಕುದುರೆಯು ಸವಾರಿ ಮಾಡುವವನಲ್ಲಿ ಇರುವ ಯೋಗ್ಯತೆಗೆ ಅನುಸಾರವಾಗಿ ಉತ್ತಮ, ಬಹಳ ಉತ್ತಮ ಎಂದೆನಿಸುವುದು. ಇದರಂತೆಯೇ ಮಂತ್ರದಲ್ಲಿರುವ ಶಬ್ದಗಳು ಅವುಗಳನ್ನು ಉಪಯೋಗಿಸುವವನ ಅಭಿಪ್ರಾಯಕ್ಕನುಸಾರವಾಗಿ ಬಹಳವಾಗಿ ಅರ್ಥವನ್ನು ಕೊಡುತ್ತವೆ. ಇದರಿಂದ ಆಯಾಯ ಮಂತ್ರಗಳನ್ನು ಎಷ್ಟುವಿಧವಾದ ಅರ್ಥಗಳನ್ನು ಹೇಳಲು ಸಾಧ್ಯವಾಗಿರುವುದು ಎಂಬುವುದನ್ನು ಊಹಿಸಿ ತಿಳಿಯಬೇಕು. ಇದರಿಂದಲೇ ಲೋಕದಲ್ಲಿ ಮಂತ್ರಾರ್ಥಗಳು ಅಧಿದೇವತ, ಅಧಿಯಜ್ಞ, ಅಧ್ಯಾತ್ಮ, ಎಂಬ ಕ್ರಮದಿಂದ ಮೂರುವಿಧವಾಗಿ ಇರುತ್ತವೆ. ಪ್ರಾಯಕವಾಗಿ ಈ ಮೂರುವಿಧವಾದ ಅರ್ಥಗಳನ್ನೂ ವೇದಮಂತ್ರಗಳಲ್ಲಿರುವ ಶಬ್ದಗಳಿಂದ ಹೇಳಬಹುದಾಗಿದೆ. ಇದರಿಂದ ಯಾವವಿಧವಾದ ಲೋಪವೂ ಉಂಟಾಗುವುದಿಲ್ಲ.

ಶಾಕಪೂಣಿಃ ಸಂಕಲ್ಪಯಾಂಚಕ್ರೇ—ಸರ್ವಾ ದೇವತಾ ಜಾನಾಮೀತಿ
ತಸ್ಮೈ ದೇವತೋಭಯಲಿಂಗಾ ಪ್ರಾದುರ್ಬಭೂವ । ತಾಂ ನ ಜಜ್ಞೇ
ತಾಂ ಪಪ್ರಚ್ಛ ವಿವಿದಿಷಾಣಿ ತ್ವೇತಿ ॥ ಸಾಸ್ಮಾ ಏಕಾಮೃಚಮಾದಿದೇ
ಶೈಷಾ ಮದ್ದೇವತೇತಿ

ಒಂದೇ ಮಂತ್ರವು ಮೂರು ವಿಧವಾದ ಅರ್ಥವನ್ನು ಕೊಡುತ್ತದೆ ಎಂಬ ವಿಷಯದಲ್ಲಿ ಉದಾಹರಣೆಯನ್ನು ಹೇಳಿದ ನಂತರ ಬೇರೆ ಉದಾಹರಣೆಯನ್ನು ಹೇಳುವುದಕ್ಕಾಗಿ 'ಶಾಕಪೂಣಿ' ಎಂಬ ಆಚಾರ್ಯರ ಅಭಿಪ್ರಾಯವನ್ನು ಇಲ್ಲಿ ಕೊಡಲಾಗಿದೆ. ಶಾಕಪೂಣಿ ಎಂಬ ಆಚಾರ್ಯನು ಎಲ್ಲಾ ದೇವತೆಗಳನ್ನೂ ನಾನು ಮಂತ್ರಗಳ ಅರ್ಥದಿಂದಲೇ ತಿಳಿದಿರುತ್ತೇನೆ ಎಂದು ನಿಶ್ಚಯಿಸಿಕೊಂಡನು. ಆಗ ಆಯಾಯ ಮಂತ್ರ ದೇವತೆಗಳ ಪೈಕಿ ಒಂದು ದೇವತೆಯು ಇವನ ಎದುರಿಗೆ ಸ್ತ್ರೀ ಮತ್ತು ಪುರುಷ ಶರೀರಗಳ ಎರಡರ ಆಕಾರವನ್ನು ಹೊಂದಿ ಕಾಣಿಸಿಕೊಂಡಿತು. ಆಗ ಅವನಿಗೆ ಸಂದೇಹವಾಗಿ ಆ ದೇವತೆಯನ್ನು ಪ್ರಶ್ನೆಮಾಡಿದನು. "ನೀನು ಪುರುಷನೇ ? ಅಥವ ಸ್ತ್ರೀಯೋ ?" ಎಂದೂ, "ಅಂತರಿಕ್ಷದಲ್ಲಿ ವಾಸಮಾಡತಕ್ಕ ಪ್ರಾಣಿಯೋ ? ಸೂರ್ಯನ ಆಕಾರ

ದಿಂದಿರುವುದಾಗಿ ಅಂತರಿಕ್ಷಕ್ಕಿಂತಲೂ ಮೇಲು ಭಾಗದಲ್ಲಿ ಇರುವ ಪ್ರಾಣಿಯೇ? ಎಂದೂ ಕೇಳಿದನು. ಆಗ ಆ ದೇವತೆಯು "ನಾನು ಈಗ ಹೇಳುವ ಅಯಂ ಸಶಿಙ್ಕ್ತೆ ಎಂಬ ಮಂತ್ರದಿಂದ ಪ್ರತಿಪಾದ್ಯವಾಗಿರುವ ದೇವತೆಯಾಗಿರುತ್ತೇನೆ. ನೀನು ಈ ಮಂತ್ರಾರ್ಥವನ್ನು ತಿಳಿದು ನನ್ನ ತತ್ವ ಸ್ಥಿತಿಯನ್ನು ತಿಳಿದುಕೊಳ್ಳಬಹುದು" ಎಂದು ಹೇಳಿತು.

**ಇತಿ ಅಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

---

## ಅಥ ನವಮಃ ಖಂಡಃ

**ಒಂಬತ್ತನೆಯ ಖಂಡವು**

---

ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ ಮಾಯುಂ ಧ್ವಸನಾವಧಿ ಶ್ರಿತಾ। ಸಾ ಚಿತ್ತಿಭಿರ್ನಿ ಹಿ ಚಕಾರ ಮರ್ತ್ಯಂ ವಿದ್ಯುದ್ಭವಂತೀ ಪ್ರತಿ ವವ್ರಿಮೌಹತ (ಋ. ಸಂ. ೧-೧೬೪-೨೯) ಅಯಂ ಸ ಶಬ್ದಾಯತೇ ಯೇನ ಗೌರಭಿಪ್ರವೃತ್ತಾ ಮಿಮಾತಿ ವಾಯುಂ ಶಬ್ದಂ ಕರೋತಿ ಮಾಯುಮಿವಾದಿತ್ಯಮಿತಿ ವಾ ವಾಗೇಷಾ ಮಾಧ್ಯಮಿಕಾ ಧ್ವಂಸನೇ ಮೇಘೇಽಧಿಶ್ರಿತಾ ಸಾ ಚಿತ್ತಿಭಿಃ ಕರ್ಮಭಿರ್ನೀಚೈರ್ನಿಕರೋತಿ ಮರ್ತ್ಯಂ ವಿದ್ಯುದ್ಭವಂತೀ ಪ್ರತ್ಯೂಹತೇ ವವ್ರಿಂ ವವ್ರಿರಿತಿ ರೂಪನಾಮ ವೃಣೋತೀತಿ ಸತೋ ವರ್ಷೇಣ ಪ್ರಚ್ಛಾದ್ಯ ಪೃಥಿವೀಂ ತತ್ಪುನರಾದತ್ತೇ ॥೯॥

"ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ ಮಾಯುಂ ಧ್ವಂಸನಾವಧಿಶ್ರಿತಾ। ಸಾ ಚಿತ್ತಿಭಿರ್ನಿಹಿ ಚಕಾರ ಮರ್ತ್ಯಂ ವಿದ್ಯುದ್ಭವಂತೀ ಪ್ರತಿ ವವ್ರಿಮೌಹತ॥" ಅಯಂ ಸ ಶಬ್ದಾಯತೇ 'ಯೇನ ಗೌರಭಿಪ್ರವೃತ್ತಾ ಮಿಮಾತಿ ಮಾಯುಂ' ಶಬ್ದಂ ಕರೋತಿ ಮಾಯುಮಿವಾದಿತ್ಯಮಿತಿ ವಾ। ವಾಗೇಷಾ ಮಾಧ್ಯಮಿಕಾ ಧ್ವಂಸನೇ ಮೇಘೇಽಧಿಶ್ರಿತಾ। ಸಾ ಚಿತ್ತಿಭಿಃ ಕರ್ಮಭಿರ್ನೀಚೈರ್ನಿಕರೋತಿ

ಮರ್ತ್ಯಂ ವಿದ್ಯುದ್ಭವಂತೀ ಪ್ರತ್ಯಾಹತೇ ವವ್ರಿಮ್ ॥ ವವ್ರಿರಿತಿ ರೂಪನಾಮ ವೃಣೋತೀತಿ ಸತಃ । ವರ್ಷೇಣ ಪ್ರಚ್ಛಾದ್ಯ ಪೃಥಿವೀಂ ತತ್ ಪುನರಾದತ್ತೇ ॥

ಎರಡು ವಿಧವಾದ ಸಂದೇಹವನ್ನು ಕೊಡತಕ್ಕ ಅರ್ಥವನ್ನು ಕೊಡುವ ಮಂತ್ರವು ಶಾಕಪೂಣಿ ಎಂಬ ಆಚಾರ್ಯರ ಅಭಿಪ್ರಾಯವೆಂದು ವಿವೃತವಾಗಿದೆ. ಈ ಮಂತ್ರದಲ್ಲಿ ಗೌಃ ಎಂಬ ಶಬ್ದವು ಮೇಘ ಅಥವ ಆದಿತ್ಯ ಎಂಬ ಎರಡು ವಿಧವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮೇಘ ಎಂಬುವುದು ಧ್ವನಿಯನ್ನು ಮಾಡುವುದು ಎಂದು ಲೋಕದಲ್ಲಿ ಪ್ರಸಿದ್ಧಿಯಾಗಿದೆ. ಮೇಘದಿಂದ ಬರುವ ಶಬ್ದವು ಅಕ್ಷರಗಳು ಯಾವುದೂ ಇಲ್ಲದಿರುವುದರಿಂದ ಕೇವಲ ಸದ್ದು ಎನಿಸುವುದು. ಭೂಮಿಗೂ ಸ್ವರ್ಗಕ್ಕೂ ಮಧ್ಯದಲ್ಲಿ ಇರುವ ಅವಕಾಶದಲ್ಲಿದ್ದುಕೊಂಡು ಈ ಮೇಘವು ಮಧ್ಯಸ್ಥಾ ಅಥವ ಮಾಧ್ಯಮಿಕಾ ಎಂಬ ಹೆಸರನ್ನು ಹೊಂದಿ ತನ್ನಿಂದ ಶಬ್ದವು ಉಂಟಾಗುವಂತೆ ಮಾಡುತ್ತದೆ. ಈ ಶಬ್ದವು ಲೋಕದಲ್ಲಿ ನೀಚರು ಹೇಳುವ ಕ್ರೂರವಾದ ಅಥವಾ ಭಯಂಕರವಾದ ಶಬ್ದದಂತೆ ಇರುವುದು. ಈ ಶಬ್ದವು ಉಂಟಾಗುವುದಕ್ಕೆ ಮೊದಲು ಮಿಂಚಿನ ಆಕಾರವುಳ್ಳ ಬೆಳಕು ಕಂಡು ಬರುವುದು. ಭಯಂಕರವಾದ ಶಬ್ದವನ್ನು ಕೇಳಿ ಮನುಷ್ಯರು ಹೆದರುವಂತೆ ಈ ಮೇಘದಿಂದ ಬರುವ ಸಿಡಿಲು, ಗುಡುಗು ಎಂಬ ಹೆಸರುಳ್ಳ ಶಬ್ದಗಳಿಂದ ಜನರು ಇದರಿಂದ ತಿರಸ್ಕಾರವನ್ನು ಹೊಂದುವರು. ಮಿಂಚಿನ ಪ್ರಕಾಶವಿಲ್ಲದಿರುವ ಶಬ್ದವನ್ನು ಕೇಳುವುದರಿಂದ ಭಯಪಡುವುದಿಲ್ಲ. ಇದರಿಂದ ಮನುಷ್ಯ ಲೋಕವನ್ನು ಮಿಂಚಿನ ರೂಪದಿಂದ ಮೇಘವು ಭಯಪಡಿಸುವುದು. ಹೀಗೆ ಹೆದರಿಸಿದನಂತರ ಈ ಮೇಘವು ಮಳೆಯ ರೂಪವನ್ನು ಹೊಂದಿ ಭೂಮಿಯೆಲ್ಲವನ್ನೂ ಆಕ್ರಮಿಸುವುದು. ಹೀಗೆ ಮೇಘರೂಪವಾದ ಅರ್ಥವನ್ನು ಗೋ ಶಬ್ದಕ್ಕೆ ವಿವರಿಸಿ ಮಧ್ಯಸ್ಥಾನ ಎಂಬ ಅರ್ಥವು ವಿವೃತವಾಗಿದೆ.

ಗೋ ಶಬ್ದಕ್ಕೆ ದ್ಯುಸ್ಥಾನವಾದ ಆದಿತ್ಯನೆಂಬ ಅರ್ಥವೂ ವಿವೃತವಾಗಿದೆ. ಈ ಆದಿತ್ಯನೆಂಬ ಅರ್ಥದಲ್ಲಿ ಒಬ್ಬ ಪುರುಷನು ಸೂರ್ಯಮಂಡಲದಲ್ಲಿ ತಿರುಗುವವನಾಗಿ ಅನೇಕ ವಿಧವಾದ ಇತರರಿಗೆ ತಿಳಿಯಲಾಗದಿರುವಂತೆ ಶಬ್ದವನ್ನು ಮಾಡುವವನಾಗಿ ಆಯಾಯ ಜಲಾಶಯಗಳಿಂದ ನೀರನ್ನು ಹೀರುವವನು ಎಂಬ ಅರ್ಥವೂ ಊಹೆಮಾಡತಕ್ಕದ್ದಾಗಿದೆ. ಹೀಗೆ ಎರಡುವಿಧವಾದ ಅರ್ಥವನ್ನು ಹೇಳುವುದರಿಂದ ಈ ಶಬ್ದದ ಅರ್ಥವು ಉಭಯಲಿಂಗವೆನಿಸಿರುವುದು, [ಲಿಂಗ= ಗಮಕ ಅಥವ ಸೂಚಕ ಎಂದು ಅರ್ಥ]. ಗೋ ಶಬ್ದದಿಂದ ಒಂದು ವಿಧವಾದ ಅರ್ಥದಲ್ಲಿ ಮೇಘವೆಂದೂ, ಭೂಮಿಗೆ ಬೇಕಾದ ಮಳೆಯನ್ನು ಸುರಿಸುವುದೆಂದೂ ಅರ್ಥವನ್ನು ಹೇಳಿರುವಂತೆ ಅಂತರಿಕ್ಷದಲ್ಲಿರುವ ಸೂರ್ಯನ ರೂಪದಿಂದ ಭೂಮಿಯಲ್ಲಿರುವ ನೀರನ್ನು ಹೀರುವವನೆಂದೂ ಸೃಷ್ಟಿ ಸ್ಥಿತಿನಾಶ ಎಂಬ ಮೂರು ವಿಧವಾದ ಕರ್ಮಗಳನ್ನು ಮಾಡುವ ದೇವತಾ ಪರವಾದ ಅರ್ಥವು ಊಹಿಸಲು ಶಕ್ಯವಾಗಿದೆ. ಇದಕ್ಕಾಗಿಯೇ ದೈವತಕಾಂಡದಲ್ಲಿ ಮಂತ್ರಾರ್ಥವು ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕದಲ್ಲಿರುವ ದೇವತಾ ಎಂಬ ಅರ್ಥವನ್ನು ವಿವರಿಸಿದೆ.

ಮಂತ್ರ ಪ್ರತಿಪಾದ್ಯವಾದ ಒಂದೇ ದೇವತೆಯು ಮಿಂಚಿನ ರೂಪದಿಂದ ಮಧ್ಯಸ್ಥಾನ ಎನಿಸಿಕೊಳ್ಳುವುದು; ಆದಿತ್ಯ ಎಂಬ ರೂಪದಿಂದ ದ್ಯು ಸ್ಥಾನ ಎನ್ನಿಸಿಕೊಳ್ಳುವುದು. ಈ ರೂಪವಾಗಿರುವ ಎರಡು ವಿಧವಾದ ದೇವತಾ ತತ್ವದ ಸಂದೇಹಕ್ಕೆ ಈ ರೀತಿಯಲ್ಲಿರುವ ಮಂತ್ರಗಳು ಆಶ್ರಯವಾಗಿರುತ್ತವೆ. ಇವುಗಳನ್ನು ನೋಡಿ ಈ ಗ್ರಂಥಕಾರರು ಶಾಕಪೂಣಿ ಆಚಾರ್ಯರ ಮತದಿಂದ ಈ ಅರ್ಥವು ಉಂಟಾಗಿದೆ ಎಂದು ಹೇಳುತ್ತಾರೆ.

ಭೂ ಅಥವಾ ಪೃಥಿವಿಯೇ ಮೊದಲಾದ ಇಪ್ಪತ್ತೊಂದು ಶಬ್ದಗಳಲ್ಲಿ ಅರ್ಥವಿವರಣೆಯನ್ನು ಸಾಮಾನ್ಯವಾಗಿ ವಿವರಿಸುವ ಕ್ರಮವನ್ನು ತೋರಿಸಿದೆ. ಗೋ ಎಂಬ ಶಬ್ದಕ್ಕೆ ಇರುವ ಅನೇಕ ವಿಧವಾದ ಅರ್ಥಗಳನ್ನು ವಿವರಿಸಿದೆ. ಉಳಿದಿರುವ ಶಬ್ದಗಳ ಅರ್ಥಗಳನ್ನು ಹೀಗೆಯೇ ಊಹಿಸಬಹುದು. 'ಗ್ಮಾ' ಎಂಬ ಶಬ್ದಕ್ಕೆ ಪ್ರಾಣಿಗಳು ಸಂಚರಿಸಲು ಆಧಾರವಾದದ್ದು ಎಂಬುದಾಗಿಯೂ, 'ಜ್ಮಾ' ಎಂಬ ಶಬ್ದಕ್ಕೆ ಸಂಚರಿಸುವರು ಎಂದು ಅರ್ಥವನ್ನು ಹೇಳಿದೆ.

ಈ ನಿಘಂಟುವಿನ ಕಾಂಡದಲ್ಲಿ ಹೇಳಿರುವ ಶಬ್ದಗಳೆಲ್ಲವೂ ಆಯಾಯ ಅರ್ಥವನ್ನು ಒಳಗೊಂಡಿರುವ ಶಬ್ದಗಳುಳ್ಳ ಗುಂಪುಗುಂಪುಗಳಾಗಿವೆ. ಇವುಗಳನ್ನು ಆಯಾಯ ಮಂತ್ರಗಳಲ್ಲಿ ಹುಡುಕಿ ಅವುಗಳ ಅರ್ಥವನ್ನು ತಿಳಿಯಬೇಕು. ಅರ್ಥವನ್ನು ತಿಳಿಯುವಾಗ ಅಪಯುಕ್ತಾರ್ಥಗಳನ್ನೂ, ತತ್ವಾರ್ಥಗಳನ್ನೂ ಬೇರೆಬೇರೆಯಾಗಿ ವಿಂಗಡಿಸಿ ತಿಳಿಯತಕ್ಕದ್ದು. (೨-೯-೧)

## ಅಥ ಹಿರಣ್ಯನಾಮಾನಿ

ಹೇಮ (೧) ಚಂದ್ರಮ್ (೨) ರುಕ್ಮಮ್ (೩) ಅಯಃ (೪) ಹಿರಣ್ಯಮ್ (೫) ಪೇಶಃ (೬) ಕೃಶನಮ್ (೭) ಲೋಹಮ್ (೮) ಕನಕಮ್ (೯) ಕಾಂಚನಮ್ (೧೦) ಭರ್ಮ (೧೧) ಅಮೃತಮ್ (೧೨) ಮರುತ್ (೧೩) ದತ್ರಮ್ (೧೪) ಜಾತರೂಪಮ್ (೧೫)

ಇವು ಹದಿನೈದು ಚಿನ್ನದ ಹೆಸರು

---

(೧) ಹೇಮ ॥ 'ಹಿ ಗತೌ ವೃದ್ಧೌ ಚ' (ಸ್ವಾದಿ-ಪ) ಅಸ್ಮಾದ್ಧಾತೋಃ "ನಾಮನ್ ಸೀಮನ್ ವ್ಯೋಮನ್ ಹೇಮನ್ ರೋಮನ್ ಲೋಮನ್ ವಿಧರ್ಮನ್ ಪಾಪನ್ (ಉ-೪-೧೫೦) ಇತಿ ಮನಿನ್ನಂತಂ ನಿಪಾತ್ಯತೇ । ಹಿ ನೋತಿ ಗಚ್ಛತಿ ಅನೇನ ಸುಖಂ ಪುರುಷಃ ॥

ಗಮನ, ವೃದ್ಧಿ ಈ ಎರಡು ಅರ್ಥಗಳಲ್ಲಿ ಹಿ ಧಾತುವು ಪರಸ್ಮೈಪದಿಯಾಗಿ ಸ್ವಾದಿಗಣದಲ್ಲಿ ಹೇಳಿದೆ. 'ನಾಮನ್—' ಇತ್ಯಾದಿ ಉಣಾದಿ ಸೂತ್ರದಿಂದ 'ಹೇಮನ್' ಎಂದು ಮನಿನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಇದರಿಂದ ಜನರು ಸುಖ ಹೊಂದುತ್ತಾರೆ ಎಂದರ್ಥವಾಗುತ್ತದೆ. ಅಥವಾ ಕರ್ಮಣಿಯಲ್ಲಿ ಪ್ರತ್ಯಯ. ಧನಾಪೇ ಇರುವವರಿಂದ ಇದು ಹೊಂದಲ್ಪಡುತ್ತದೆ. ಅಥವಾ ಕರ್ತರಿಯಲ್ಲಿಯೇ ಪ್ರತ್ಯಯ ಹೇಳಬಹುದು. ಗಚ್ಛತಿ ವಾ ಸ್ವಯಂ ಕಟಕಾದಿರೂಪಾಂ ವಿಕೃತಿಮ್ 'ಬಳೆ ಮುಂತಾದ ವಿಕಾರವನ್ನು ತಾನು ಹೊಂದುತ್ತದೆ. ವೃದ್ಧ್ಯರ್ಥವನ್ನು ಅಂಗೀಕರಿಸಿದರೆ 'ಹಿನೋತಿ ಇತಿ ಹೇಮ' ವಾಣಿಜ್ಯಾದಿಗಳಿಂದ ಇದು ಪ್ರತಿದಿನವೂ ಅಭಿವೃದ್ಧಿ ಹೊಂದುತ್ತದೆ. ಸುಬೋಧಿನೀಕಾರರು 'ತಾಮ್ರಾದಿಗಳಿಂದ ಮಿಶ್ರಿತವಾಗುವುದರಿಂದ ಅಭಿವೃದ್ಧವಾಗುತ್ತದೆ'ಂದು ಹೇಳುತ್ತಾರೆ. ತಾಮ್ರದಿಂದ ಇದರ ಕಾಂತಿಯೂ ಹೆಚ್ಚಾಗುವುದು ಲೋಕಪ್ರಸಿದ್ಧವಾಗಿದೆ. ಅಥವಾ ಬಹುಲಗ್ರಹಣದಿಂದ 'ಡುಧಾಞ್–ಧಾರಣ ಪೋಷಣಯೋಃ' ಧಾತುವಿಗೆ ಮನಿನ್ ಬಂದು ಹೇಮ ಎಂದಾಗಿದೆ. ನಿಪಾತದಿಂದ ಧಾ ಧಾತುವಿಗೆ ಹಿ ಆದೇಶ. ಆಪತ್ತಿನಲ್ಲಿ ಹಿತವಾಗಿರುತ್ತದೆ. ಅಥವಾ ಕಳ್ಳಕಾಕರ ಭಯದಿಂದ ಭೂಮಿಯಲ್ಲಿ ಹೂತಿಡಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಅಸ್ಯ ಪ್ರೇಷಾ ಹೇಮನಾ ಪೂಯಮಾನಃ** (ಋ. ಸಂ. ೯-೯೭-೧) **'-ಅಶ್ವೋ ನ ಸ್ವೇ ದಮ ಆ ಹೇಮ್ಯಾವಾನ್** (ಋ. ಸಂ. ೪-೨-೮) ಹೇಮ್ಯಾವಾನ್ = ಹಿರಣ್ಮಯ ಹಿಡಿಯಿಂದ ಕೂಡಿರುವುದು.

(೨) **ಚಂದ್ರಮ್ ॥ ' ಚದಿ-ಆಹ್ಲಾದನೇ ದೀಪ್ತೌ ಚ '** (ಭೂ-ಪ) **ಅಸ್ಮಾತ್ 'ಸ್ಫಾಯಿ ತಞ್ಚಿವಞ್ಚಿ ಶಕಿ ಕ್ಷಿಪಿ ಕ್ಷುದಿ-'(ಉ-೨-೧೨) ಇತ್ಯಾದಿನಾ ರಕ್ ॥**

ಸಂತೋಷಪಡಿಸುವುದು ಅಥವಾ ಪ್ರಕಾಶಿಸುವುದು ಎಂಬ ಅರ್ಥದಲ್ಲಿ ಚದಿ ಧಾತುವು ಭ್ವಾದಿ ಗಣದಲ್ಲಿ ಹೇಳಿದೆ. ಇದಿತ್ತಾಗುವುದರಿಂದ ' ಇದಿತೋನುಮ್ ಧಾತೋಃ ' ಸೂತ್ರದಿಂದ ನುಮಾಗಮ. " ಸ್ಫಾಯಿತಂಚಿ—" ಇತ್ಯಾದಿ ಉಣಾದಿ ಸೂತ್ರದಿಂದ ರಕ್ ಪ್ರತ್ಯಯ ಚಂದ್ರ ಎಂದಾಗುತ್ತದೆ. " ಚಂದಯತಿಃ ಆಹ್ಲಾದಯತಿ ತದ್ವತ್ ದೀಪ್ಯತೇ ವಾ ಸ್ವಯಂ ತೈಜಸತ್ವಾತ್ " ಜನರನ್ನು ಸಂತೋಷಗೊಳಿಸುತ್ತದೆ. ದೀಪ್ತ್ಯರ್ಥದಲ್ಲಿ—ಸುವರ್ಣವೂ ತೈಜಿಸುವಂತೆ ಶಾಸ್ತ್ರಕಾರರು ಅಂಗೀಕರಿಸುವುದರಿಂದ ಪ್ರಕಾಶಿಸುತ್ತದೆ. ಅಥವಾ ಣಿಜಂತವಾದ ಚದಿ ಧಾತುವಿಗೆ ರಕ್ ಪ್ರತ್ಯಯ ಬಹುಲಗ್ರಹಣದಿಂದ ಣಿಚಿಗೆ ಲೋಪ ಚಂದ್ರ ಎಂದೇ ರೂಪ ಪ್ರೇರಣಾರ್ಥ. ತೋರುವುದರಿಂದ "ದೀಪಯತಿ ಧಾರಯಿತ್ಯಾನ್" ಚಿನ್ನ ಧರಿಸಿದವರನ್ನು ಚಿನ್ನವು ಬೆಳಗಿಸುತ್ತದೆ ಎಂದರ್ಥ. ಅಥವಾ ಚಿನ್ನದಿಂದ ಧರಿಸಿದವನು ಬೆಳಗಿಸಲ್ಪಡುತ್ತಾನೆ ಎಂದು ಕರಣಾರ್ಥ ಹೇಳಬಹುದು. " ಚಂದ್ರಃ ಚಂದತೇಃ ಕಾಂತಿಕರ್ಮಣಃ " (ನಿರು-೧೧-೫) ಎಂಬ ನಿರುಕ್ತವನ್ನನುಸರಿಸಿದರೆ ಚದಿ ಧಾತುವಿಗೆ ಕಾಂತಿ ಎಂದರ್ಥವಾಗುತ್ತದೆ. ' ಕಾಂತಿಃ ಇಚ್ಛಾ ' ಎಂದು ವಿವರಿಸುತ್ತಾರೆ. ಇಚ್ಛಾರ್ಥಕ ಚದಿ ಧಾತುವಿಗೆ ಹಿಂದಿನಂತೆ ರಕ್ ಪ್ರತ್ಯಯ. ಎಲ್ಲರಿಂದಲೂ ಚಿನ್ನವು ಅಪೇಕ್ಷಿಸಲ್ಪಡುವುದೆಂದರ್ಥವಾಗುತ್ತದೆ. ಉದಾಹರಣೆ—**ಯೋ ವಧ್ವಶ್ಚಂದ್ರಂ ವಹನ್ತು** (ಋ. ಸಂ. ೧೧-೮೫-೩೧) **ದಕ್ಷಿಣಾ ಚಂದ್ರಮುತ ಯದ್ಧಿರಣ್ಯಮ್** (ಋ. ಸಂ. ೧೦-೧೦೭-೭)

೩ **ರುಕ್ಮಮ್** ॥ **" ರುಚ ದೀಪ್ತೌ '** (ಭೂ-ಆ) **' ಯುಜಿರುಚಿತಿಜಾಂ ಕುಶ್ಚ '** (ಉ-೧-೧೪೩) **ಇತಿ ಮಕ್ ಪ್ರತ್ಯಯಃ ಕುತ್ವಂ ಚ ।**

ಪ್ರಕಾಶಾರ್ಥದಲ್ಲಿ ರುಚಧಾತುವು ಆತ್ಮನೇ ಪದಿಯಾಗಿ ಭ್ವಾದಿಯಲ್ಲಿ ಹೇಳಿದೆ. ಇದಕ್ಕೆ ' ಯುಜರುಚಿ—' ಎಂಬ ಉಣಾದಿಸೂತ್ರದಿಂದ ಮಕ್‌ಪ್ರತ್ಯಯ ; ಧಾತುವಿನ ಚಕಾರಕ್ಕೆ ಕುತ್ವ, ಅಂದರೆ ಕಕಾರಾದೇಶ. ರುಕ್ಮಮ್. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಉಪಧೆಗೆ ಗುಣ ಬರುವುದಿಲ್ಲ. ತೇಜಸ್ಸಾದುದರಿಂದ ಪ್ರಕಾಶಿಸುತ್ತದೆ ಎಂದರ್ಥ. ಅಥವಾ ಹಿಂದಿನಂತೆ ಕರಣಾರ್ಥ ಹೇಳಿದರೆ ಇದರಿಂದ ಪ್ರಕಾಶಿಸಲ್ಪಡುತ್ತಾನೆ ಎಂದರ್ಥವಾಗುತ್ತದೆ. ಚಿನ್ನದ ಆಭರಣಗಳಿಂದ ಅಲಂಕೃತನಾದರೆ ಬೆಳಗುತ್ತಾನೆ. ಉದಾಹರಣೆ—

**" ಆ ರುಕ್ಮೈರಾಯುಧಾ ನರಃ—"** (ಋ. ಸಂ- ೫-೫೨-೬) **" ಏಷ ರುಕ್ಮಿಭಿರೀಯತೇ "** (ಋ. ಸಂ. ೯-೧೫-೫)

(೪) **ಅಯಃ** ॥ **' ಇಣ್ ಗತೌ '** (ಅದಾದಿ ಪರ) **' ಅಸನ್ '** (ಉ-೪-೧೯೪) **ಏತ ಅಂಗುಲಿಯಕಾದಿರೂಪೇಣ ಶರೀರಮ್.**

ಇಣ್ ಧಾತು. ಗಮನಾರ್ಥ. ಅದಾದಿಯಲ್ಲಿ ಪರಸ್ಮೈಪದಿಯಾಗಿ ಹೇಳಿದೆ. ಇದಕ್ಕೆ 'ಅಸುನ್' ಉಣಾದಿ ಸೂತ್ರದಿಂದ ಅಸುನ್‌ಪ್ರತ್ಯಯ. ಅಸ್ ಉಳಿಯುತ್ತದೆ. ಇ + ಅಸ್ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಧಾತುವಿನ ಇಕಾರಕ್ಕೆ ಗುಣ [ಏ] ಏ + ಅಸ್. ' ಏಚೋಽಯವಾ ' ಸೂತ್ರದಿಂದ ಏಕಾರಕ್ಕೆ ಅಯಾದೇಶ. ಅಯಸ್ ಸಾಂತವ

ದವಾಗುತ್ತದೆ. ಉಂಗುರ ಮುಂತಾದ ಆಭರಣ ರೂಪದಿಂದ ಪುರುಷ ಶರೀರವನ್ನು ಹೊಂದುತ್ತದೆ. ಅಥವಾ ಹಣದ ರೂಪದಿಂದ ಜನರನ್ನು ಹೊಂದುತ್ತದೆ. ಅಥವಾ ದಾನಾದಿ ಧರ್ಮಕಾರ್ಯ ಸಂದರ್ಭದಲ್ಲಿ ಒಬ್ಬನ ಕೈಯಿಂದ ಇನ್ನೊಬ್ಬನ ಕೈಯನ್ನು ಹೊಂದುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**" ಅಯಃ ಶೀರ್ಷಾ ಮದೇರಘುಃ "** (ಋ. ಸಂ. ೮–೧೦೧–೩)

**(೫) ಹಿರಣ್ಯಮ್ ॥ " ಹೃಞ್–ಹರಣೇ "** (ಭ್ವಾ. ಉ.) **ಅಸ್ಮಾತ್ " ಹರ್ಯತೇಃ ಕನ್ಯನ್ ಹಿರ್ ಚ "** (ಉ. ೫–೪೫) **ಇತಿ ವಿಧೀಯಮಾನಃ ಕನ್ಯನ್ ಪ್ರತ್ಯಯೋ ಹಿರಾದೇಶಶ್ಚ ಬಾಹುಲಕಾದ್ ಭವತಃ ॥ ತಥಾ ಚ ಅನ್ಯನ್ನಿತ್ಯಧಿಕೃತ್ಯ 'ಹೃಞ ಇಚ್ಚ' – ಇತಿ ಭೋಜಸೂತ್ರಮ್ ॥**

ಹೃಞ್ ಞಿತ್ತಾದುದರಿಂದ ಉಭಯಪದಿಯಾಗುತ್ತದೆ. ಇದಕ್ಕೆ "ಹರ್ಯತೇಃ"—ಸೂತ್ರದಿಂದ ಕನ್ಯನ್‌ಪ್ರತ್ಯಯ ದಲ್ಲಿ ಅನ್ಯ ಉಳಿಯುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ರೇಫಪರದಲ್ಲಿ ನಕಾರ ಬಂದುದರಿಂದ "ಅಟ್‌ಕುಪ್ವಾಙ್ನು"– ಸೂತ್ರದಿಂದ ಣತ್ವ. ಹಿರಣ್ಯವೆಂದಾಗುತ್ತದೆ. ಭೋಜಸೂತ್ರದಲ್ಲಿ 'ಹೃಞ ಇಚ್ಚ' ಎಂದು ಧಾತುವಿನ ಋಕಾರಕ್ಕೆ ಇತ್ತ್ವ ಹೇಳಿ ಅನ್ಯನ್‌ಪ್ರತ್ಯಯ ಹೇಳಿದೆ. ಋಕಾರದ ಸ್ಥಾನಕ್ಕೆ ಇಕಾರ ಬರುವುದರಿಂದ "ಉರಣ್ರಪರಃ" ಸೂತ್ರದಿಂದ ರ ಪರವಾಗಿ ಬಂದರೆ ಹಿಂದಿನಂತೆಯೇ ರೂಪವಾಗುತ್ತದೆ. " ಹ್ರಿಯತೇ ಇತಿ ಹಿರಣ್ಯಮ್ " ವ್ಯವಹಾರಕ್ಕೋಸ್ಕರ ಜನರಿಂದ ಜನರ ಕೈಗೆ ಒಯ್ಯಲ್ಪಡುತ್ತದೆ. ಅಥವಾ ದ್ರವ್ಯವಾದುದರಿಂದ ಒಂದು ಕಡೆ ನಿಲ್ಲುವ ಸ್ವಭಾವವುಳ್ಳದ್ದಲ್ಲ, ಕೈಯಿಂದ ಕೈಗೆ ಹೋಗುತ್ತಿರುತ್ತದೆ ಎಂದರ್ಥ. ಅಥವಾ ಎರಡು ಧಾತುಗಳಿಂದ ಈ ರೂಪವಾಗಿದೆ. ಹಿ-ಗತೌವೃದ್ಧೌ ಚ, ರಮು-ಕ್ರೀಡಾಯಾಮ್. ಹಿಮತ್ತುರಮ್ ಧಾತುಸಮುದಾಯಕ್ಕೆ ಬಹುಲಗ್ರಹಣದಿಂದ ಕನ್ಯನ್‌ಪ್ರತ್ಯಯ. ಬಹುಲಗ್ರಹಣದಿಂದಲೇ ಮಕಾರಕ್ಕೆ ಲೋಪ. ಆಪತ್ತಿನಲ್ಲಿ ಅಥವಾ ದುರ್ಭಿಕ್ಷದಲ್ಲಿ ಹಿತವಾದದ್ದು, ಮತ್ತು ಯಾವಾಗಲೂ ಎಲ್ಲರನ್ನೂ ಸಂತೋಷಪಡಿಸುತ್ತದೆ ಎಂದರ್ಥ. " ಹರ್ಯತೇಃ ಪ್ರೇಪ್ಸಾಕರ್ಮಣಃ '' (ನಿರು. ೨–೧೦) ಎಂದು ನಿರುಕ್ತ. ಹೊಂದಲು ಬಯಸುವುದು ಎಂಬರ್ಥವನ್ನು ಕೊಡುವ ಹೃ ಧಾತುವಿಗೆ ಹಿಂದಿನಂತೆ ಕನ್ಯನ್‌ಪ್ರತ್ಯಯ, ಹಿರಾದೇಶ. ರೂಪ ಹಿಂದಿನಂತೆಯೇ ಆದರೂ ಅರ್ಥ ವ್ಯತ್ಯಾಸವಾಗುತ್ತದೆ. " ಸರ್ವದಾ ಪ್ರಾಪ್ತುಂ ಇಷ್ಯತೇ " ಯಾವಾಗಲೂ ಇದನ್ನು ಎಲ್ಲರೂ ಹೊಂದಲು ಬಯಸುತ್ತಾರೆ ಎಂದರ್ಥ. ಸುಬೋಧಿನೀ ಕಾರರು 'ಹರ್ಯತೇ ಸ್ವಭಯಾ ದೀಪ್ಯತೇ' = ಇದು ತನ್ನ ಕಾಂತಿಯಿಂದ ಪ್ರಕಾಶಿಸುತ್ತದೆ ಎಂದು ವ್ಯಾಖ್ಯಾನಮಾಡಿರುತ್ತಾರೆ. ಉದಾಹರಣೆ—

**" ಹಿರಣ್ಯರೂಪಃ ಸ ಹಿರಣ್ಯಸಂದೃಗ್—"** (ಋ. ಸಂ. ೨–೩೫–೧೦)

**(೬) ಪೇಶಃ ॥ ' ಪಿಶ ಗತೌ "** (ತು-ಪ) **ಅಸುನ್ । ಅಯ ಇತ್ಯನೇನ ಸಮಾನಾರ್ಥಮ್.**

ಗತ್ಯರ್ಥಕವಾದ ಪಿಶ ಧಾತುವಿಗೆ ' ಅಸುನ್ ' ಎಂಬ ಉಣಾದಿ ಸೂತ್ರದಿಂದ ಅಸುನ್‌ಪ್ರತ್ಯಯ ' ಪುಗಂತಲಘೂಪಧ ಸ್ಯ ಚ' ಸೂತ್ರದಿಂದ ಧಾತುವಿನ ಉಪಧೆಗೆ ಗುಣ. ಪೇಶಸ್ ಸಾಂತಪದವಾಗುತ್ತದೆ. ಆಭರಣರೂಪದಿಂದ ಪುರುಷ ಶರೀರವನ್ನು ಹೊಂದುತ್ತದೆಂದು ಹಿಂದಿನಂತೆಯೇ ತಿಳಿಯಬೇಕು. ಉದಾಹರಣೆ :—

**ತ್ರಿವಂಧುರೇಣ ತ್ರಿವೃತಾ ಸುಪೇಶಸಾ ॥** (ಋ. ಸಂ. ೧–೪೭–೨) ' ಹಿರಣ್ಯಯೇನ ರಥೇನ ' (ಋ. ಸಂ. ೮–೫–೩೫)—ಹಿರಣ್ಯಯೀ ವಾಂ ರಭಿಃ [ಋ. ಸಂ. ೮–೫–೨೯] ಇತ್ಯಾದಿ ಮಂತ್ರಗಳಲ್ಲಿ ಹಿರಣ್ಯಕೇಶಿಯವಚನದಂತೆ ಹಿರಣ್ಯ

ಪರ್ಯಾಯವಾಗಿದುದರಿಂದ ಪೇಶಃ ಎಂದರೆ ಚಿನ್ನವಾಗುತ್ತದೆ. ಬೃಹದಾರಣ್ಯಕದಲ್ಲಿಯೂ ಚಿನ್ನವೆಂಬ ಅರ್ಥದಲ್ಲಿಯೇ ಪೇಶ ಶಬ್ದವನ್ನು ಉದಾಹರಿಸಿರುತ್ತಾರೆ. 'ತದ್ಯಥಾ ಪೇಶಸ್ಕಾರೀ ಪೇಶಸೋಮಾತ್ರಾ ಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತೇ' (೪-೪-೪) ಸರಸ್ವತೀ ಮನಸಾ ಪೇಶಲಮ್ (೧೯-೮೩) ಎಂಬ ವಾಜಸನೇಯಕದ ಮಂತ್ರವ್ಯಾಖ್ಯಾನ ಸಂದರ್ಭದಲ್ಲಿ ಉವಟಾಚಾರ್ಯರೂ 'ಪೇಶವೆಂದರೆ ಚಿನ್ನದ ಹೆಸರು,ರೂಪದ ಹೆಸರು' ಎಂದಿರುತ್ತಾರೆ.

**(೭) ಕೃಶನಮ್ । "ಕೃಶ ತನೂಕರಣೇ" (ದಿ-ಪ) "ಕ್ಯಾ ಪ್ಯಾ ಪೃಜಿ ಮಂದಿ ನಿಧಾಞ್ಭ್ಯಃ ಕ್ಯುಃ" (ಉ—೨-೭೬) ಇತಿ ವಿಧೀಯಮಾನಃ ಕ್ಯುಃ ಬಾಹುಲಕಾದ್ ಭವತಿ ॥**

ಕೃಶಧಾತುವಿಗೆ "ಕ್ಯಾಪ್ಯಾ—" ಇತ್ಯಾದಿ ಉಣಾದಿ ಸೂತ್ರದಿಂದ ವಿಧಿಸಲ್ಪಡುವ ಕ್ಯು ಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಕಕಾರ ಇತ್ತಾಗಿ ಯು ಉಳಿದಾಗ ಅದಕ್ಕೆ 'ಯುವೋರನಾಕೌ' ಸೂತ್ರದಿಂದ ಅನಾದೇಶ. ಕಿತ್ತಾದುದರಿಂದ ಧಾತುವಿನ ಉಪಧೆಗೆ ಗುಣ ಬರುವುದಿಲ್ಲ. ಕೃಶ್ + ಅನ ಕೃಶನಮ್. ಯಾವುದನ್ನು ಕೃಶವನ್ನಾಗಿ ಮಾಡುವುದೋ ಅದು ಕೃಶನ. ಚಿನ್ನವು ತನ್ನೊಡನೆ ಸೇರಿದವುಗಳನ್ನು ಕೃಶವಾಗಿ ಮಾಡುತ್ತದೆ ಅಥವಾ ಬೆಳ್ಳಿಯೊಡನೆ ಸೇರಿದಾಗ ತಾನೇ ಆಕಾರದಿಂದ ಕಶವಾಗುತ್ತದೆ. ಮಾಧವಾಚಾರ್ಯರು "ಕೃಶಿರ್ದೀಪ್ತ್ಯರ್ಥಃ" ಎಂದಿರುತ್ತಾರೆ. ಧಾತುಗಳಿಗೆ ಅನೇಕಾರ್ಥಗಳೆಂದು ವೈಯಾಕರಣಸಿದ್ಧಾಂತದಂತೆ ಕಾರ್ಶ್ಯಾರ್ಥವನ್ನು ಕೊಡುವ ಕೃಶಧಾತುವಿಗೆ ಇಲ್ಲಿ ದೀಪ್ತ್ಯರ್ಥವನ್ನು ಹೇಳಬೇಕೆಂದರ್ಥ. ಆಗ ತನ್ನ ಪ್ರಭೆಯಿಂದ ಪ್ರಕಾಶಿಸುವುದು ಎಂದರ್ಥವಾಗುತ್ತದೆ. ಉದಾಹರಣೆ—

**ಸ್ವಧ್ವಿಷ್ಮಯಃ ಕೃಶನಿನೋ ನಿರೇಕೇ (ಋ. ಸಂ. ೭-೧೮-೨೩) "—ಅಭಿಶ್ಯಾವಂ ನ ಕೃಶನೇ—ಭಿರಶ್ವಮ್ (ಋ. ಸಂ. ೧೦-೬೮-೧೧) "—ಅಭಿವೃತಂ ಕೃಶನೈರ್ವಿಶ್ವರೂಪಮ್" (ಋ. ಸಂ. ೧-೩೫-೪)**

**(೮) ಲೋಹಮ್ । "ಲುಹ-ಕರ್ಷನಾದೌ" (ಭೂ-ಪ) 'ಘಞ್' (ಪಾ. ಸೂ. ೩-೩-೨೧) ಕರ್ಷತೇ ಶ್ಲಾಘತೇಽನೇನಾತ್ಮಾ, ತ್ರಿವರ್ಗಸಾಧನತ್ವಾತ್ ಪುರುಷೈಃ ಸಂಪ್ರಾರ್ಥ್ಯತೇ ವಾ ॥ "ಲೂಞ್ಲೋಹಃ" ಇತಿ ಶ್ರೀಭೋಜದೇವಃ ॥**

ಶ್ಲಾಘಿಸುವುದು ಇತ್ಯಾದ್ಯರ್ಥಗಳನ್ನು ಕೊಡುವ ಲುಹ ಧಾತುವಿಗೆ 'ಘಞ್' ಸೂತ್ರದಿಂದ ಘಞ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ, ಲೋಹ್+ಅ. ಲೋಹಮ್. ಇದರಿಂದ ಜನರು ಶ್ಲಾಘಿಸುತ್ತಾರೆ. ಧರ್ಮ, ಅರ್ಥಕಾಮರೂಪ ತ್ರಿವರ್ಗವನ್ನು ಹೊಂದಲು ಸಾಧನವಾದುದರಿಂದ ಜನರಿಂದ ಬಯಸಲ್ಪಡುತ್ತದೆ. ಭೋಜದೇವನು 'ಲೂಞ್ ಛೇದನೇ' ಧಾತುವಿಗೆ ಹ ಪ್ರತ್ಯಯ ಬಂದು ಲೋಹರೂಪವಾಗಿದೆಯೆಂದು ಹೇಳುತ್ತಾನೆ. ಆಗ ಸತ್ಪಾತ್ರದಲ್ಲಿ ಇದನ್ನು ದಾನ ಮಾಡಿದರೆ ಪಾಪಸಂಬಂಧವನ್ನು ಕಡಿದು ಹಾಕುತ್ತದೆ ಎಂದರ್ಥವಾಗುತ್ತದೆ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

**(೯) ಕನಕಮ್ । ಕನೀ-ದೀಪ್ತಿಕಾಂತಿಗತಿಷು (ಭೂ-ಪ) "ವೃಞಾದಿಭ್ಯಃ ಸಂಜ್ಞಾಯಾಮ್ (ಉ. ೫-೩೬) ಇತಿ ವುನ್‌ಪ್ರತ್ಯಯೋ ಧಾತ್ವರ್ಥೇಽಸ್ತಿಪಿ ॥**

ದೀಪ್ತಿ ಕಾಂತಿ ಗತಿ ಅರ್ಥವನ್ನು ಕೊಡುವ ಕನ್ ಧಾತುವಿಗೆ ಧಾತ್ವರ್ಥ ತೋರುವಾಗ ವುನ್‌ಪ್ರತ್ಯಯ. "ಯುವೋರನಾಕೌ" ಸೂತ್ರದಿಂದ ವುವಿಗೆ ಅಕಾದೇಶ. ಕನ್+ಅಕ. ಕನಕಂ ಎಂದಾಗುತ್ತದೆ. ತನ್ನ ಕಾಂತಿಯಿಂದ ಪ್ರಕಾಶಿಸುವುದು, ಎಲ್ಲರಿಂದಲೂ ಬಯಸಲ್ಪಡುವುದು, ವ್ಯವಹಾರ ಕಾಲದಲ್ಲಿ ಜನರಿಂದ ಜನರನ್ನು ಸೇರುವುದು ಎಂದರ್ಥವಾಗುತ್ತದೆ. ಇದಕ್ಕೂ ಉದಾಹರಣೆ ಶ್ರುತಿ ಹುಡುಕಬೇಕು.

**(೧೦) ಕಾಂಚನಮ್ ॥ ಕಚಿ-ದೀಪ್ತಿ ಬಂಧನಯೋಃ (ಭೂ-ಆ) "ಯುಚ್-ಬಹುಲಮ್" (ಪಾ. ಸೂ. ೩-೩-೧೩೦) ಇತಿ ಯುಚ್‌ಪ್ರತ್ಯಯಃ ॥**

ದೀಪ್ತಿ, ಬಂಧನವೆಂಬ ಅರ್ಥ ಹೇಳುವ ಕಚಿ ಧಾತುವಿಗೆ ಬಹುಲಗ್ರಹಣದಿಂದ ಯುಚ್ ಪ್ರತ್ಯಯ. ಧಾತುವಿನಲ್ಲಿ ಇಕಾರ ಇತ್. ಇದಿತ್ತಾದುದರಿಂದ '' ಇದಿತೋ ನುಮ್‌ಧಾತೋಃ '' ಸೂತ್ರದಿಂದ ನುಮಾಗಮ. "ಯುವೋರನಾಕೌ'' ಸೂತ್ರದಿಂದ ಪ್ರತ್ಯಯಕ್ಕೆ ಅನಾದೇಶ ಬಹುಲಗ್ರಹಣದಿಂದಲೇ ಧಾತುವಿನ ಅಕಾರಕ್ಕೆ ದೀರ್ಘ. ಕಾಂಚ್ + ಅನ ಕಾಂಚನಮ್. ಸುಂದರವರ್ಣದಿಂದ ಶೋಭಿಸುವುದು ಅಥವಾ ಕುಂಡಲಬಳೆ ಮುಂತಾದ ರೂಪಗಳಿಂದ ಜನರ ಅವಯವಗಳಲ್ಲಿ ಕಟ್ಟಲ್ಪಡುವುದು ಎಂದರ್ಥ. ಶ್ರುತಿ ಹುಡುಕಬೇಕು.

**[೧೧] ಭರ್ಮ । "ಡು ಭೃಞ್-ಧಾರಣಪೋಷಣಯೋಃ' [ಜು-ಉ] "ಮನಿನ್' [ಪಾ. ಸೂ. ೩-೨-೭೫] । ಭ್ರಿಯತೇ ಧಾರ್ಯತೇ ಅಂಗುಲ್ಯಾದಿಭಿಃ ॥**

ಧಾರಣ, ಪೋಷಣ ಅರ್ಥವನ್ನು ಕೊಡುವ ಭೃಞ್ ಧಾತುವಿಗೆ ಮನಿನ್ ಪ್ರತ್ಯಯ. ಞಕಾರ ಇತ್ತಾಗುವುದರಿಂದ ಉಭಯಪದೀ ಭೃ + ಮನ್. ' ಸಾರ್ವಧಾತುಕಾರ್ಧಧಾತುಕಯೋಃ ' ಧಾತುವಿನ ಋಕಾರಕ್ಕೆ ಗುಣ. ಭರ್ಮನ್ ನಾಂತಪದವಾಗುತ್ತದೆ. ಬೆರಳು ಮುಂತಾದವುಗಳಿಂದ ಧರಿಸಲ್ಪಡುತ್ತದೆ, ಆಪತ್ತಿನಿವಾರಣೆಗೋಸ್ಕರ ಧರಿಸಲ್ಪಡುತ್ತದೆ ಅಥವಾ ಇದರಿಂದ ಕುಟುಂಬಪೋಷಣೆ ಮಾಡುತ್ತಾನೆ ಎಂದರ್ಥ. ಹೃಞ್-ಹರಣೇ. ಈ ಧಾತುವಿಗೂ ಮನಿನ್ ಪ್ರತ್ಯಯ ಬಂದರೆ " ಹೃಗ್ರಹೋ-ರ್ಭಶ್ಛಂದಸಿ " ಸೂತ್ರದಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಹಿಂದಿನಂತೆ ಗುಣ. ವ್ಯವಹಾರ ಕಾಲದಲ್ಲಿ ಒಬ್ಬನಿಂದ ಒಬ್ಬನು ಅಪಹರಿಸುತ್ತಾನೆ ಎಂದರ್ಥ. ಉದಾಹರಣೆ—

**ಸುವೀರಾಭಿಸ್ತಿರತೇ ವಾಜಭರ್ಮಭಿಃ** (ಋ-ಸಂ-೮-೧೯-೩೦) **'ಅರಿಷ್ಟ ಭರ್ಮನ್ನಾಗಹಿ** (ಋ-ಸಂ.೮-೧೮-೪)

**(೧೨) ಅಮೃತಮ್ । ನಞ್‌ಪೂರ್ವಾತ್ ಮ್ರಿಯತೇಃ (ತು-ಆ) ತನಿಮೃಙ್‌ಭ್ಯಾಂ ಕಿಚ್ಚ ( ಉ-೩-೮೫) ಇತಿ ತನ್‌ಪ್ರತ್ಯಯೇ ರೂಪಮ್ ॥**

ಮೃಙ್-ಪ್ರಾಣತ್ಯಾಗೇ ಧಾತು ನಞ್ ಪೂರ್ವದಲ್ಲಿರುವಾಗ ಇದಕ್ಕೆ ತನ್‌ಪ್ರತ್ಯಯ ಅಮೃ + ತ ಎಂದಿರುವಾಗ ಪ್ರತ್ಯಯಕ್ಕೆ ಕಿತ್ತ್ವ ಹೇಳಿರುವುದರಿಂದ ಧಾತು. ಋ ಕಾರಕ್ಕೆ ಗುಣ ಬರುವುದಿಲ್ಲ. ಅಮೃತಮ್. ದುರ್ಭಿಕ್ಷಾದಿ ಕಾಲದಲ್ಲಿ ಇದು ಇದ್ದರೆ ಇದರಿಂದ ಯಾರೂ ಮರಣ ಹೊಂದುವುದಿಲ್ಲ ಅಥವಾ ಇದಕ್ಕೆ ಎಂದೂ ಮರಣ (ನಾಶ) ವಿಲ್ಲ. ಯಾವ ಅವಸ್ಥೆಯಲ್ಲಿದ್ದರೂ ಸಾವಿರಾರು ವರ್ಷ ಕರಗಿಸಿದರೂ ಇದು ನಾಶವಾಗುವುದಿಲ್ಲ. ವೈದಿಕ ಮಂತ್ರದಲ್ಲಿ (ಅಥ-ಸಂ-೧೯-೨೬-೧) ಇದು ಅಗ್ನಿಯಿಂದ ಹುಟ್ಟಿದುದರಿಂದ ನಾಶರಹಿತವಾಗಿರುತ್ತದೆಂದು ಹೇಳಿದೆ. ಚಿನ್ನವನ್ನು ಸತ್ಪಾತ್ರದಲ್ಲಿ ದಾನಮಾಡುವುದರಿಂದ ಮರಣ ಹೊಂದುವುದಿಲ್ಲ ಅಥವಾ ದೇಹದಲ್ಲಿ ಧರಿಸುವುದರಿಂದ ಮೃತನಾಗುವುದಿಲ್ಲ. " **ಆಯುರ್ವೈ ಹಿರಣ್ಯಮ್** " ಎಂದುದರಿಂದ ಮರಣವಿಲ್ಲವೆಂದರೆ ದೀರ್ಘಾಯುವಾಗುತ್ತಾನೆ ಎಂದರ್ಥ. ಇದನ್ನು ಶ್ರುತಿಯೂ ಸ್ಪಷ್ಟಪಡಿಸುತ್ತದೆ—

**ಯೋ ಬಿಭರ್ತಿ ದಾಕ್ಷಾಯಣಂ ಹಿರಣ್ಯಂ ಸ ದೇವೇಷು ಕೃಣುತೇ ದೀರ್ಘಮಾಯುಃ ಸ ಮನುಷ್ಯೇಷು ಕೃಣುತೇ ದೀರ್ಘಮಾಯುಃ ॥** (ಯು-ವಾ-ಸಂ-೩೪-೫೧) ಇತಿ ಮತ್ರಾ **ಚಕ್ರಾಣೋ ಅಮೃತಾನಿ ವಿಶ್ವಾ** (ಋ. ಸಂ. ೧-೭೨-೧) " **ಶುಕ್ರಂ ತ್ವಾಶುಕ್ರೇಣ ಕ್ರೀಣಾಮಿ ಚಂದ್ರಂ ಚಂದ್ರೇಣಾಮೃತಮಮೃತೇನ** ಯು-ವಾ-ಸಂ-೪-೨೬)

(೧೩) **ಮರುತ್ । ಮಿತಮಮಿತಂ ವಾ ರೋಚತೇ, ಮಿತಮಮಿತಂ ವಾ ರೋಚಯತಿ, ಮಾತೇಃ ಪೂರ್ವಾರ್ಧಂ, ರೌತೇರ್ವೋತ್ತರಾರ್ಧಂ, ಪೃಷೋದರಾದಿತ್ವಾತ್ (ಪಾ. ಸೂ. ೬-೩-೧೦೯) ಸಾಧುಃ ॥**

ಮಾಜ್, ಮತ್ತು ರುಚಧಾತುಗಳಿಂದ ಮರುತ್‌ರೂಪವಾಗಿದೆ. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಶಾಸ್ತ್ರಾಂತರದಿಂದ ಸಿದ್ಧವಾಗದ ಕಾರ್ಯಗಳೆಲ್ಲಾ ಬರುತ್ತವೆ. ಚಿನ್ನವು ತೈಜಸವಾದುದರಿಂದ ಅಗ್ನ್ಯಾದಿತೇಜಸ್ಸಿಪದಾರ್ಥಗಳಿಂದ ಮಿತವಾಗಿ ಪ್ರಕಾಶಿಸುತ್ತದೆ ಅಥವಾ ಭೋಗಾದಿಗಳಿಂದ ಎಣಿಕೆಯಿಲ್ಲದಷ್ಟು ಪ್ರಕಾಶಿಸುತ್ತದೆ. ಸತ್ಪಾತ್ರಗಳಿಗೆ ಕೊಡುವುದರಿಂದ ಇಹಪರ ಎರಡು ಲೋಕಗಳಲ್ಲಿಯೂ ಪ್ರಕಾಶಿಸುವಂತೆ ಮಾಡುತ್ತದೆ. " ಚಿನ್ನವು ನಿನ್ನಲ್ಲಿಯೇ ಇದ್ದರೆ ದುಃಖಗೊಳಿಸುತ್ತದೆ. ಯೋಗ್ಯರ ಹಸ್ತಕ್ಕೆ ಸಮರ್ಪಿಸಿದರೆ, ದಾನಮಾಡಿದರೆ ನಿನ್ನನ್ನು ಉಜ್ವಲಗೊಳಿಸುತ್ತದೆ " ಎಂಬರ್ಥಕೊಡುವ ಸುಭಾಷಿತವೂ ಪ್ರಸಿದ್ಧವಾಗಿದೆ.

ಅಥವಾ ಮೃಜ್—ಪ್ರಾಣತ್ಯಾಗೇ. ಈ ಧಾತುವಿಗೆ ಬಹುಲಗ್ರಹದಿಂದ ರುತಿಪ್ರತ್ಯಯ. ಇಕಾರ ಇತ್, ಧಾತುವಿನ ಋಕಾರಕ್ಕೆ ಪ್ರತ್ಯಯನಿಮಿತ್ತವಾಗಿ ಗುಣ. ಮರುತ್, ರೇಫಲೋಪ ಬಂದಿದ್ದರೂ ಛಾಂದಸವಾಗಿ ದೀರ್ಘ ಬರುವುದಿಲ್ಲ. ಇದರಿಂದ ಜನರು ಸಾಯುತ್ತಾರೆ ಎಂದರ್ಥ. ಚಿನ್ನವುಳ್ಳವನನ್ನು ಕಳ್ಳರು ಕೊಂದು ಅಪಹರಿಸುವುದರಿಂದ ಚಿನ್ನದ ಮೂಲಕ ಮರಣವಾಗುತ್ತದೆ. ಇದಕ್ಕೆ ನಿಗಮ ಹುಡುಕಬೇಕು.

(೧೪) **ದತ್ರಮ್ " ಡು ಞ್ ದಾದಾನೇ " '(ಜು-ಉ) ಅಮಿ ಚಿಮಿ ಮಿದಿ ಶಂಸಿಭ್ಯಃ ಕ್ತ್ರಃ' (ಉ-೪-೧೬೪) ಇತಿ ವಿಧೀಯಮಾನಃ ಕ್ತ್ರೋಬಾಹುಲಕಾತ್ ಭವತಿ ॥**

ದಾನಾರ್ಥವನ್ನು ಕೊಡುವ ದಾ ಧಾತುವಿಗೆ ' ಅಮಿ—' ಇತ್ಯಾದಿ ಉಣಾದಿ ಸೂತ್ರದಿಂದ ಕ್ತ್ರ ಪ್ರತ್ಯಯ. ' ಲಶಕ್ವತದ್ಧಿತೇ ' ಸೂತ್ರದಿಂದ ಕಕಾರಲೋಪ. ಪ್ರತ್ಯಯ ಪರದಲ್ಲಿರುವಾಗ " ದೋದದ್‌ಘೋಃ " (ಪಾ. ಸೂ. ೭-೪-೪೬) ಸೂತ್ರದಿಂದ ಧಾತುವಿಗೆ ದದ್ ಆದೇಶ. ದದ್ + ತ್ರ ಎಂದಿರುವಾಗ ' ಖರಿ ಚ ' ಸೂತ್ರದಿಂದ ದಕಾರಕ್ಕೆ ತಕಾರಾದೇಶ. ದತ್ರಮ್ ಸತ್ಪಾತ್ರದಲ್ಲಿ ಕೊಡಲ್ಪಡುತ್ತದೆ. ದಾನ ಮಾಡಲ್ಪಡುತ್ತದೆ ಎಂದರ್ಥ. ಉದಾಹರಣೆ—

" **ಇಂದ್ರಂ ಯತ್ತೇ ಮಾಹಿನಂ ದತ್ರಮಸ್ತ್ಯ** " (ಋ. ಸಂ. ೩-೩೬-೯)

(೧೫) **ಜಾತರೂಪಮ್ ॥ ಜನೀ ಪ್ರಾದುರ್ಭಾವೇ (ದಿ-ಆ) ನಿಷ್ಠಾತಕಾರಃ । ಜನಸನಖನಾಮ್— (ಪಾ. ಸೂ. ೬-೪-೪೨) ಇತ್ಯಾತ್ವಮ್ । ಜಾತಃ ॥ ರುಚ ದೀಪ್ತೌ (ಭೂ-ಆ) ಖಷ್ಪ ಶಿಲ್ಪ ವಾಷ್ಪ ರೂಪ ಪರ್ಪತಲ್ಪಾಃ (ಉ-೩-೨೬) ಇತಿ ಪಪ್ರತ್ಯಯಾಂತೋ ನಿಪಾತಿತಃ ॥**

ಎರಡು ಧಾತುಗಳಿಂದ ಈ ರೂಪವಾಗಿದೆ. ಹುಟ್ಟುವುದು ಎಂಬರ್ಥ ಕೊಡುವ ಜನ್ ಧಾತುವಿಗೆ ಕ್ತ ಪ್ರತ್ಯಯ ಜನ್+ತ ಎಂದಿರುವಾಗ 'ಜನಸನ'–ಸೂತ್ರದಿಂದ ಕಿತ್ತಾದಪ್ರತ್ಯಯ ಪರದಲ್ಲಿರುವುದರಿಂದ ಧಾತುವಿಗೆ ಆಕಾರದೇಶ. ಅಂತ್ಯ ನಕಾರಕ್ಕೆ ಆತ್ವ ಬಂದರೆ ಜಾತ ಎಂದಾಗುತ್ತದೆ. ದೀಪ್ತ್ಯರ್ಥಕವಾದ ರುಚ ಧಾತುವಿಗೆ ಉಣಾದಿ ಪ ಪ್ರತ್ಯಯ ಬಂದು ರೂಪ ಎಂದು ನಿಪಾತಿತವಾಗಿದೆ. ನಿಪಾತ ಎಂದುದರಿಂದಲೇ ಧಾತುವಿನ ಉಕಾರಕ್ಕೆ ದೀರ್ಘ, ಚಕಾರಕ್ಕೆ ಲೋಪ ಬಂದಿದೆ. ಯಾವ ಕೃತಿಮ ಸಹಾಯವಿಲ್ಲದೆ ಅಂದರೆ ಸ್ವಾಭಾವಿಕವಾದ ರೂಪವುಳ್ಳದ್ದು ಜಾತರೂಪ. ರೂಪಪದಕ್ಕೆ ಪ್ರಕಾಶವೆಂದರ್ಥ.

ಚಿನ್ನದ ವಿಷಯದಲ್ಲಿ ಇದು ಸ್ವಾಭಾವಿಕ ಪ್ರಭೆಯುಳ್ಳದ್ದೆಂದು ರಾಮಾಯಣದಲ್ಲಿ ಹೇಳಿದೆ. "ಇಹ ಹೈಮವತೇ ಭಾಗೇ ಗರ್ಭೋಽಯಂ ಸನ್ನಿವೇಶ್ಯತಾಮ್ ॥ ನಿಕ್ಷಿಪ್ತಮಾನೇ ಗರ್ಭೇ ತು ತೇಜೋಭಿರಭಿರಂಜಿತಮ್ । ಸರ್ವಂ ಪರ್ವತಸನ್ನದ್ಧಂ ಸೌವರ್ಣಮಭವದ್ವನಮ್ । ಜಾತರೂಪಮಿತಿ ಖ್ಯಾತಂ ತದಾಪ್ರಭೃತಿ ರಾಘವ । ಸುವರ್ಣಂ ಪುರುಷವ್ಯಾಘ್ರ ಹುತಾಶನಸಮಪ್ರಭಮ್ ॥" (ಉ. ಕಾಂ.) ಅಥವಾ ಚಿನ್ನವನ್ನು ಧರಿಸಿದವರಿಗೆ ಇದರ ಮೂಲಕ ಸುಂದರ ರೂಪವುಂಟಾಗುತ್ತದೆ ಎಂದರ್ಥ. ಉದಾಹರಣೆ—

**"ಜಾತರೂಪಮಯೇನ ಚ ಪವಿತ್ರೇಣಾಂತರ್ಧಾಯಾಭ್ಯಷಿಞ್ಚತಿ"** (ಐ. ಬ್ರಾ. ೮–೧೮).

ಹೀಗೆ ಹದಿನೈದು ಚಿನ್ನದ ಹೆಸರು ಪ್ರಸಿದ್ಧವಾಗಿದೆ.

---

**ಇತಿ ನವಮಃ ಖಂಡಃ**

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು

---

## ಅಥ ದಶಮಃ ಖಂಡಃ

### ಹತ್ತನೆಯ ಖಂಡವು

---

ಹಿರಣ್ಯನಾಮಾನ್ಯುತ್ತರಾಣಿ ಪಂಚದಶ ಹಿರಣ್ಯಂ ಕಸ್ಮಾದ್ಧ್ರಿಯತ ಆಯಮ್ಯಮಾನಮಿತಿ ವಾ ಹ್ರಿಯತೇ ಜನಾಜ್ಜನಮಿತಿ ವಾ ಹಿತರಮಣಂ ಭವತೀತಿ ವಾ ಹೃದಯರಮಣಂ ಭವತೀತಿ ವಾ ಹರ್ಯತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣೋಽನ್ತರಿಕ್ಷನಾಮಾನ್ಯುತ್ತರಾಣಿ ಷೋಳಶಾಂತರಿಕ್ಷಂ ಕಸ್ಮಾದಂತರಾ ಕ್ಷಾಂತಂ ಭವತ್ಯಂತರೇಮೇ ಇತಿ ವಾ ಶರೀರೇಷ್ವಂತರೇಕ್ಷಯಮಿತಿ ವಾ ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ

ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ ದೇವಾಪಿಸ್ತಪಃ ಪ್ರತಿಪೇದೇ ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ತಸ್ಯೈತದ್ವರ್ಷಕಾಮ-ಸೂಕ್ತಂ ತಸ್ಯೈಷಾ ಭವತಿ ॥೧೦॥

---

ಹೇಮ ಎಂಬ ಇವೇ ಮೊದಲಾದ ಹದಿನೈದು ಚಿನ್ನದ ಹೆಸರುಗಳಲ್ಲಿ ಪೃಥಿವೀ ನಾಮಗಳಿಗಿಂತಲೂ ಬೇರೆಯವುಗಳೆಂಬುದಾಗಿ ಹೇಳಿದೆ. ಭೂಮಿಯಿಂದಲೇ ಚಿನ್ನವು ಉತ್ಪನ್ನವಾಗುವುದರಿಂದ ಭೂಮಿಗಿಂತ ಇದು ಬೇರೆಯಾಗಿದೆ. ಇವುಗಳಲ್ಲದೇ ಸುವರ್ಣ, ಚಾಮೀಕರ, ಶಾತಕುಂಭ ಎಂಬ ಇವೇ ಮೊದಲಾದ ಚಿನ್ನದ ಹೆಸರುಗಳನ್ನು ಹೇಳುವ ಶಬ್ದಗಳು ಹೇಳದೇ ಇರುವವುಗಳು ಬಹಳವಾಗಿವೆ. ಮತ್ತೆ ಕೆಲವು ಶಬ್ದಗಳು ಉಕ್ತವಾಗಿರುತ್ತವೆ. ಇದರಲ್ಲಿ ಹೇಮ ಎಂಬ ಶಬ್ದವು ಇದನ್ನು ಹೊಂದಿದವನು ಹಿತನೆಂದು ತಿಳಿಯುತ್ತಾನೆ ಎಂಬ ಅರ್ಥವನ್ನು ಕೊಡುವುದು. ಬಹಳ ಕಾಂತಿಯುಳ್ಳದ್ದೆಂಬ ಮತ್ತು ಬಹಳ ಸಂತೋಷ ಜನಕವೆಂಬ ಮತ್ತು ಎಲ್ಲರ ಆಸೆಗೂ ಆಶ್ರಯವಾದದ್ದೆಂಬ ಅಭಿಪ್ರಾಯದಿಂದ ಚಂದ್ರನೆಂದು ಉಕ್ತವಾಗಿದೆ. ಸಂಕಟವನ್ನು ಉಂಟುಮಾಡುವುದು, ಬೆಂಕಿಯಂತೆ ಪ್ರಕಾಶಿಸುತ್ತಿರುವುದು ಎಂಬ ಅರ್ಥಗಳಿಂದ ರುಕ್ಮ ಎಂಬುದಾಗಿಯೂ ಹೆಸರನ್ನು ಹೊಂದಿರುತ್ತದೆ. (೨-೧೦-೧)

ಹಿರಣ್ಯಂ ಕಸ್ಮಾತ್ ಧ್ರಿಯತ ಆಯಮ್ಯಮಾನಮಿತಿ ವಾ ॥ ಹ್ರಿಯತೇ ಜನಾಜ್ಜನಮಿತಿ ವಾ ॥ ಹಿತರಮಣಂ ಭವತೀತಿ ವಾ ॥ ಹೃದಯರಮಣಂ ಭವತೀತಿ ವಾ ॥ ಹರ್ಯ್ಯತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣಃ ॥

ಉಂಗುರ, ಕಡಗ, ಹಾರ ಎಂಬ ಅನೇಕ ವಿಧವಾದ ಆಭರಣಗಳನ್ನು ಮಾಡುವವರು ಅವುಗಳಿಗನುಸಾರವಾಗಿ ಇರುವಂತೆ ಮಾಡಲು ತಕ್ಕದಾದುದರಿಂದ ಹಿರಣ್ಯವೆಂತ ಕರೆಯುವರು. ಜನಗಳು ಪರಸ್ಪರವಾಗಿ ಆಯಾಯ ಪ್ರದೇಶಗಳಿಗೆ ತೆಗೆದುಕೊಂಡು ಹೋಗುವ ವ್ಯವಹಾರಕ್ಕೆ ಅನುಗುಣವಾದುದರಿಂದಲೂ ಹಿರಣ್ಯವೆನ್ನುವರು. ಈ ದ್ರವ್ಯವು ಕ್ಷಾಮವೇ ಮೊದಲಾದ ಕಾಲಗಳಲ್ಲಿ ಜನಗಳಿಗೆ ಹಿತವನ್ನು ಉಂಟುಮಾಡಿ ಸಂತೋಷಪಡಿಸುವುದರಿಂದಲೂ ಹಿರಣ್ಯವೆನಿಸುವುದು. ವಸ್ತುಜ್ಞಾನವಿಲ್ಲದಿರುವ ಮೂಢಿಕರೂ ಕೂಡ ಇದನ್ನು ತೆಗೆದುಕೊಂಡು ಹೋಗಿ ಸಂತೋಷಪಡುವುದು. ಜನಗಳು ಎಲ್ಲರೂ ಕೂಡ ಹೊಂದಬೇಕೆಂದು ಪ್ರಾರ್ಥನೆ ಮಾಡಲು ಆಸ್ಪದವಾಗಿರುವುದರಿಂದಲೂ ಹಿರಣ್ಯವೆನಿಸುತ್ತದೆ. ಹಿತರಮಣ, ಹೃದಯರಮಣ ಎಂಬ ಎರಡು ವಿಧವಾದ ಕಾರ್ಯವನ್ನು ಉಂಟುಮಾಡುವುದರಿಂದ ಹಿರಣ್ಯವೆಂದು ಹೆಸರು ಬಂದಿರುವಂತೆ ಹರ್ಯ್ಯತೇ, ಹ್ರಿಯತೇ ಎಂಬರ್ಥಗಳಿಂದಲೂ ಹಿರಣ್ಯವೆಂದೆನಿಸುತ್ತದೆ. (೨-೧೦-೨)

# ಅಥ ಅಂತರಿಕ್ಷ ನಾಮಾನಿ

ಅಂಬರಮ್ ಎಂಬಿವೇ ಮೊದಲಾದ ಹದಿನಾರು ಶಬ್ದಗಳು ಅಂತರಿಕ್ಷವನ್ನು ಬೋಧಿಸುವ ಶಬ್ದಗಳಾಗಿವೆ.

(೧) ಅಂಬರಮ್. (೨) ವಿಯತ್. (೩) ವ್ಯೋಮ. (೪) ಬರ್ಹಿಃ (೫) ಧನ್ವ. (೬) ಅಂತರಿಕ್ಷಮ್. (೭) ಆಕಾಶಮ್. (೮) ಆಪಃ. (೯) ಪೃಥಿವೀ. (೧೦) ಭೂಃ. (೧೧) ಸ್ವಯಂ ಭೂಃ. (೧೨) ಅಧ್ವಾ. (೧೩) ಪುಷ್ಕರಮ್. (೧೪) ಸಗರಃ. (೧೫) ಸಮುದ್ರಃ. (೧೬) ಅಧ್ವರಮ್. ||

ಹೀಗೆ ಹದಿನಾರು ಆಕಾಶದ ಹೆಸರುಗಳು.

**ಅಂಬರಮ್** || ಅ ಬಿಜ್-ಶಬ್ದೇ. (ಭೂ-ಆ.) "ಕೃದರಾಪಯಶ್ಚ" (ಉ. ೫-೪೨) ಇತಿ ಅರಚ್‌ಪ್ರತ್ಯ ಯಂತೋ ನಿಪಾತ್ಯತೇ ।

ಶಬ್ದಾರ್ಥಕವಾದ ಅಬಿಜ್ ಧಾತುವಿಗೆ ಅರಚ್‌ಪ್ರತ್ಯಯು ಬಂದು ನಿಪಾತಿತವಾಗಿದೆ. ಧಾತು ಇದಿತ್ತಾದುದರಿಂದ ನುಮಾಗನು ಅಂಬರಮ್, ಶಬ್ದವು ಆಕಾಶದ ಗುಣ. ಇದರಲ್ಲಿ ಮೇಘಾದಿಗಳು ಶಬ್ದಮಾಡುತ್ತವೆ; ಅಥವಾ ಗಾಳಿ ಮೋಡಗಳ ಸಂಬಂಧದಿಂದ ಇದು ತಾನಾಗಿ ಶಬ್ದಮಾಡುತ್ತದೆ ಎಂದರ್ಥ.

ಅಥವಾ ' ಅರ್ಜಿದೃಶಿಕಮ್ಯಮಿಪಸಿಬಾಧಾಮೃಜಿಪತಿತುಕ್‌ಧುಕ್‌ದೀರ್ಘಹಕಾರಾಶ್ಚ ' (ಉ.೧-೨೬) ಸೂತ್ರದಿಂದ ಅಮ ಧಾತುವಿಗೆ ಹೇಳುವ ಉಪ್ರತ್ಯಯುವೂ ಬುಕ್ ಆಗಮವೂ ಬಹುಲಗ್ರಹಣದಿಂದ, ಗತ್ಯರ್ಥಕವಾದ ಋ ಧಾತುವಿಗೂ ಬರುತ್ತವೆ. ಪ್ರತ್ಯಯ ಪರದಲ್ಲಿರುವಾಗ ಋ ಧಾತುವಿಗೆ ಗುಣ. ರ ಪರವಾಗಿ ಬಂದರೆ ಅರ್ + ಬ್ + ಉ ಎಂದಾಗುತ್ತದೆ. ಬಹುಲಗ್ರಹಣದಿಂದಲೇ ರೇಫಕ್ಕೆ ಮಕಾರಾದೇಶ ಅಮ್ಬು ರೂಪವಾಗುತ್ತದೆ. ದೇಶದಿಂದ ದೇಶಕ್ಕೆ ಹೋಗುವುದು (ಹರಿಯುವುದು) ಅಥವಾ ಇದರ ಮೇಲೆ ಹೋಗುತ್ತವೆ ಎಂದರ್ಥವಾಗಿರುವುದರಿಂದ ಅಂಬು ಎಂದರೆ ನೀರು ಆಗುತ್ತದೆ. ಅಂಬು ರಾತಿ= ನೀರನು ಕೊಡುವುದು ಅಂಬರ= ಮೇಘ. ರಾ ಧಾತುವಿಗೆ 'ಆತೋನುಪಸರ್ಗೇಕಃ' (ಪಾ. ಸೂ. ೩-೨-೩) ಸೂತ್ರದಿಂದ ಕ ಪ್ರತ್ಯಯ. ಇದು ಕಿತ್ತಾಗುವುದರಿಂದ ಧಾತುವಿನ ಆಕಾರಕ್ಕೆ ಲೋಪ ಪೃಷೋದರಾದಿಗಣದಲ್ಲಿ ಸೇರುವುದರಿಂದ ಅಂಬು + ರ ಎಂದಿರುವಾಗ ಉಕಾರಕ್ಕೆ ಅಕಾರಾದೇಶ. ಈ ಅಂಬರ= ಮೇಘ ಉಳ್ಳದ್ದು ಅಂಬರ= ಅರ್ಶ ಆದಿಗಣದಲ್ಲಿ ಸೇರಿರುವುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ ಅಥವಾ ಮತುಬರ್ಥಪ್ರತ್ಯಯಕ್ಕೆ 'ಉಗುಕಾರೇಕಾರರೇಫಾಶ್ಚ ವಕ್ತವ್ಯಾಃ' ವಾರ್ತಿಕದಿಂದ ಉಕ್. ಅಂಬರ ವೆಂದರೆ ಮೇಘದಿಂದ ಕೂಡಿರುವೆಂದರ್ಥ. ಅಥವಾ ತಾನಾಗಿ (ಆಕಾಶವೇ) ಮಳೆಗಾಲದಲ್ಲಿ ಪ್ರಾಣಿಗಳಿಗೆ ನೀರನ್ನು ಕೊಡು ತ್ತದೆಂದರ್ಥ.

ಅಥವಾ ಅಂಬು ಶಬ್ದ ಉಪಪದದಲ್ಲಿರುವಾಗ ರಾಜ್ಯ-ದೀಪ್ತೌ ಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ (ಪಾ.-ಸೂ-೩-೨-೧೦೧) ಸೂತ್ರದಿಂದ ಡ ಪ್ರತ್ಯಯ ಡಿತ್ತಾದುದರಿಂದ ಟಿ (ಅಜ್)ಗೆ ಲೋಪ. ಅಪಿ ಶಬ್ದವು ಸರ್ವೋಪಾಧಿ ವ್ಯಭಿಚಾರಸೂಚಕವಾದುದರಿಂದ (ನಿಮಿತ್ತವಿಲ್ಲದೆ ಕಾರ್ಯ ಬರುತ್ತದೆಂದು) ಉಕಾರಕ್ಕೆ ಅಕಾರಾದೇಶ. ನೀರಿನಂತೆ ಪ್ರಕಾಶಿಸುತ್ತದೆ ಯಾವ ಜಲನೆಯಿಲ್ಲದ ಸಮು ದ್ರದ ನೀರಿನ ರಾಶಿಯಂತೆ ನೀಲವಾಗಿ ತೋರಿಸುತ್ತದೆಂದರ್ಥ. 'ಪುಂಜೀಕೃತಮಿವ ಧ್ವಾಂತಂ ಮೇಘೋ ಭಾತಿ ಮತಂಗಜಃ ।

ಸರಃ ಶರತ್ಪ್ರಸನ್ನಾಂಭೋ ನಭಃಖಂಡಮಿವೋಜ್ಝಿತಮ್ ' ॥ ಎಂದು ನೀರಿನ ಸಾಮ್ಯವನ್ನು ಆಕಾಶಕ್ಕೆ ಹೇಳುವುದು ಕವಿ ಸಂಮತವಾಗಿದೆ. ಪರಮಾರ್ಥಸ್ವರೂಪವುಳ್ಳದ್ದು ಆಕಾಶ.

ಅಥವಾ ಮತ್ವರ್ಥದಲ್ಲಿ (ಉಳ್ಳದ್ದು ಎಂಬರ್ಥ.) ಅಂಬು ಶಬ್ದದಮೇಲೆ ರಪ್ರತ್ಯಯ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಉಕಾರಕ್ಕೆ ಅಕಾರ. ಅಂಬರವೆಂದರೆ ಮಳೆನೀರಿನಿಂದ ಕೂಡಿರುವುದು ಎಂದರ್ಥ. ಉದಾಹರಣೆ—

**ಯನ್ನಾಸತ್ಯಾ ಪರಾವತಿ ಯದ್ವಾಸ್ಥೋ ಅಧ್ಯಂಬರೇ.** (ಋ. ಸಂ. ೮–೮–೧೪)

**(೨) ವಿಯತ್ ॥ ಯಮು ಉಪರಮೇ (ಭ್ವಾ–ಪ) ಇತ್ಯಸ್ಮಾತ್ ಔಣಾದಿಕೇ ಕ್ವಿಪಿ ' ಗಮಃ ಕ್ವೌ ' ॥ (ಪಾ. ಸೂ೬–೪–೪೦) " ಗಮಾದೀನಾಮಿತಿ ವಕ್ತವ್ಯಮ್ " ಇತ್ಯುಕ್ತೇರನುನಾಸಿಕಲೋಪಃ । ' ಹ್ರಸ್ವಸ್ಯ ಪಿತಿ ಕೃತಿ ತುಕ್ '(ಪಾ. ಸೂ. ೬–೧–೭೧) ವಿಗತಂ ಯಮನಂ ಉಪರಮಣಮಸ್ಮಾತ್ ಇತಿ ವಿಯತ್ ॥**

ಉಪರಮಾರ್ಥಕವಾದ ಯಮ್‌ಧಾತುವಿಗೆ ಉಣಾದಿ ವಿಹಿತವಾದ ಕ್ವಿಪ್‌ಪ್ರತ್ಯಯ. ಗಮ್‌ಧಾತು ಒಂದಕ್ಕೆ ಮಾತ್ರ ಕ್ವಿಪ್‌ಪರವಾದಾಗ ಲೋಪ ಹೇಳಿದ್ದರೂ ವಾರ್ತಿಕಕಾರರು ಗಮಾದಿಧಾತುಗಳಿಗೆ ಲೋಪ ಹೇಳಬೇಕೆಂದುದರಿಂದ ಇದರ ಮಕಾರಕ್ಕೆ ಲೋಪ ಬರುತ್ತದೆ. ಕ್ವಿಪ್ ಪಿತ್ತಾದುದರಿಂದ ಇದು ಪರವಾದಾಗ ಧಾತುವಿನ ಹ್ರಸ್ವನಾದ ಅಕಾರಕ್ಕೆ ತುಗಾಗಮ. ಕ್ವಿಪಿನಲ್ಲಿ ಸರ್ವಲೋಪ. ಯತ್. ವಿಗತಂ ಯತ್ (ಯಮನಮ್) ವಿಯತ್. ಆಕಾಶವು ಎಲ್ಲಾಕಡೆ ವ್ಯಾಪಿಸಿರುವುದರಿಂದ ಅದಕ್ಕೆ ಎಲ್ಲೆಯೇ ಇಲ್ಲ. ಎಲ್ಲಿಯೂ ವಿರಾಮಹೊಂದುವುದಿಲ್ಲವೆಂದು ಕ್ಷೀರಸ್ವಾಮಿಯು ವ್ಯಾಖ್ಯಾನಮಾಡಿರುತ್ತಾನೆ.

ಅಥವಾ ವಿ ಉಪಸರ್ಗ ಪೂರ್ವದಲ್ಲಿರುವಾಗ ಯತೀ–ಪ್ರಯತ್ನೇ ಧಾತುವಿಗೆ ಹಿಂದಿನಂತೆ ಕ್ವಿಪ್ ಪ್ರತ್ಯಯ, ವಿಯತ್. ನಾನಾರೀತಿಯಾಗಿ ಇದರಲ್ಲಿ ಪ್ರಾಣಿಗಳು ವಿಹರಿಸುತ್ತವೆ ಎಂದರ್ಥವಾಗುತ್ತದೆ. ಆಕಾಶದಲ್ಲಿಯೇ ಎಲ್ಲರೂ ಅವಕಾಶ ಹೊಂದಿರುತ್ತಾರೆ. ಇದಕ್ಕೆ ಉದಾಹರಣೆ ಶ್ರುತಿಮಂತ್ರ ಹುಡಕಬೇಕು.

**(೩) ವ್ಯೋಮ ॥ ವಿಪೂರ್ವಾದವತೇರ್ವ್ಯಾಪ್ತ್ಯರ್ಥತ್ವಾತ್ (ಭ್ವಾ–ಪ) ಔಣಾದಿಕೇ " ಸರ್ವಧಾತುಭ್ಯೋ ಮನಿನ್ " (ಉ–೪–೧೪೫) ಇತಿ ಸೂತ್ರೇಣ ಮನಿನ್‌ಪ್ರತ್ಯಯೇ " ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ " [ಪಾ. ಸೂ. ೬-೪-೨೦] ಇತ್ಯೂಠಿ ಗುಣಃ । ವ್ಯವತಿ—ವ್ಯಾಪ್ನೋತಿ ಸರ್ವಂ ಜಗತ್ ॥**

ರಕ್ಷಿಣಾದ್ಯರ್ಥ ಕೊಡುವ ಅವ ಧಾತುವಿಗೆ ವಿ ಉಪಸರ್ಗ ಪೂರ್ವದಲ್ಲಿರುವಾಗ ವ್ಯಾಪ್ತ್ಯರ್ಥದಲ್ಲಿ ಔಣಾದಿಕ ಮನಿನ್ ಪ್ರತ್ಯಯ. ವಿ+ಅವ್+ಮನ್ ಎಂದಿರುವಾಗ ' ಜ್ವರತ್ವರ—' ಸೂತ್ರದಿಂದ ಉಪಧಾವಕಾರಗಳಿಗೆ ಊಠಾದೇಶ. ವಿ+ಊ+ಮನ್ " ಸಾರ್ವಧಾತ—" ಸೂತ್ರದಿಂದ ಗುಣ. ಯಣ್. ವ್ಯೋಮನ್. ನಾಂತಪದವಾಗುತ್ತದೆ. ಎಲ್ಲಾ ಪ್ರಪಂಚವನ್ನು ವ್ಯಾಪಿಸಿರುತ್ತದೆ. ಆಕಾಶವಿಲ್ಲದ ಪ್ರದೇಶವಿಲ್ಲವೆಂದರ್ಥ.

ಅಥವಾ ಗತ್ಯರ್ಥಕವಾದ ಅವ ಧಾತುವಿಗೆ ಭಾವಾರ್ಥದಲ್ಲಿ ಮನಿನ್ ಪ್ರತ್ಯಯ. ಹಿಂದಿನಂತೆ ಊಠಾದಿ. ಪ್ರಾಣಿಗಳ ವಿಶಿಷ್ಟವಾದ ಗಮನವಿರುತ್ತದೆ. ಅಥವಾ ರಕ್ಷಣಾರ್ಥದಲ್ಲಿ ಮನಿನ್ ಪ್ರತ್ಯಯ. ವಿಶೇಷವಾಗಿ ಪ್ರಾಣಿಗಳಿಗೆ ಅವಕಾಶಕೊಡುವುದರ ಮೂಲಕ ರಕ್ಷಿಸುತ್ತದೆ ಎಂದರ್ಥ.

ಉಣಾದಿಯಲ್ಲಿ 'ನಾಮನ್-ಸೀಮನ್-ವ್ಯೋಮನ್—' (ಉ-೪-೧೫೦) ಸೂತ್ರದಿಂದ ವ್ಯೇಞ್-ಸಂವರಣೇ ಧಾತುವಿಗೆ ಮನಿನ್‌ಪ್ರತ್ಯಯ ಹೇಳಿ ಉತ್ವವನ್ನು ನಿಪಾತಮಾಡಿರುತ್ತಾರೆ. ಗಾಳಿಯಿಂದ ಆವರಿಸಲ್ಪಟ್ಟದ್ದು ವ್ಯೋಮ. ನಿರುಕ್ತದಲ್ಲಿಯೂ (೧೧-೪೦) ಇದೇ ವ್ಯುತ್ಪತ್ತಿ ತೋರಿಸಿದೆ. ಆದರೆ ವಿ ಎಂಬಲ್ಲಿ ಅವಗ್ರಹಮಾಡಿರುವುದರಿಂದ ಶಾಕಲ್ಯಾದಿಗಳಿಗೆ ಈ ನಿರ್ವಚನ ಅಭಿಮತವಲ್ಲ. ಉದಾಹರಣೆ—

**ಸಹಸ್ರಾಕ್ಷರಾ ಪರಮೇ ವ್ಯೋಮನ್** (ಋ. ಸಂ. ೧-೧೬೪-೪೧) **ಸತ್ಯಾಮಾಶಿರಂ ಪೂರ್ವ್ಯೇ ವ್ಯೋಮನಿ** (ಋ. ಸಂ. ೯-೭೦-೧)

**(೪) ಬರ್ಹಿಃ ‖ ಬೃಹಿ-ವೃದ್ಧೌ (ಭೂ-ಪ) "ಬೃಂಹೇರ್ನಲೋಪಶ್ಚ" (ಉ-೨-೧೦೨) ಇತಿ ಇಸಿ ಪ್ರತ್ಯಯಃ । ಬೃಹಂತಿ ವರ್ಧತೇಽನೇನ ಪ್ರಾಣಿಜಾತಮ್ ‖**

ವೃದ್ಧ್ಯರ್ಥಕವಾದ ಬೃಹಿ ಧಾತುವಿಗೆ ಔಣಾದಿಕ ಇಸಿ ಪ್ರತ್ಯಯ. ಧಾತು ಇದಿತ್ತಾದುದರಿಂದ ನುಮಾಗಮ ಬಂದಾಗ ಪ್ರತ್ಯಯ ಸಂನಿಯೋಗದಿಂದ ಆ ನಕಾರಕ್ಕೆ ಲೋಪವೂ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಉಪಧಾ ಋಕಾರಕ್ಕೆ ಗುಣ. ಬರ್ಹ್ + ಇಸ್ ಬರ್ಹಿಸ್ ಸಾಂತಪದವಾಗುತ್ತದೆ. ಎಲ್ಲಾ ಪ್ರಾಣಿಗಳೂ ಈ ಆಕಾಶದಿಂದ ವೃದ್ಧಿಯನ್ನು ಹೊಂದುತ್ತವೆ. ಅಥವಾ ಇದು ವಿಭುವಾದುದರಿಂದ ಪರಿವೃದ್ಧವಾಗಿರುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಯಸ್ಮೈ ತ್ರಿಧಾತ್ವವೃತಂ ಬರ್ಹಿಃ** (ಋ. ಸಂ. ೮-೧೦೨-೧೪)

**(೫) ಧನ್ವ । ಇವಿ ರಿವಿ ಧವಿ ಗತ್ಯರ್ಥಾಃ (ಭೂ-ಪ) ಇದಿತ್ತಾತ್ತನ್ನುಮ್ (ಪಾ. ಸೂ. ೭-೧-೫೮) ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ (ಉ-೧-೧೫೪) ಇತಿ ಕನಿನ್ । ಧನ್ವಂತಿ ಗಚ್ಛಂತಿ ಅಸ್ಮಾದಾಪಃ ‖**

ಗತ್ಯರ್ಥಕವಾದ ಧವಿ ಧಾತುವಿಗೆ 'ಕನಿನ್'-ಇತ್ಯಾದಿ ಉಣಾದಿ ಸೂತ್ರದಿಂದ ಕನಿನ್‌ಪ್ರತ್ಯಯ. ಅನ್ ಉಳಿಯುತ್ತದೆ. ಧಾತು ಇದಿತ್ತಾದುದರಿಂದ ನುಮಾಗಮ. ಧನ್ವನ್ ಎಂದು ನಾಂತವಾಗುತ್ತದೆ. ನಪುಂಸಕದಲ್ಲಿ ಪ್ರಥಮಾ ಏಕವಚನದಲ್ಲಿ ನಲೋಪ ಬರುತ್ತದೆ. ಇದರಿಂದ ನೀರು ಸುರಿದುಹೋಗುತ್ತದೆ ಎಂದರ್ಥವಾಗುತ್ತದೆ.

ಅಥವಾ ಧನ-ಧಾನ್ಯೇ ಧಾತು. ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಪ್ರಾರ್ಥನಾರ್ಥದಲ್ಲಿ ಕ್ವನಿಪ್‌ಪ್ರತ್ಯಯ ಧನ್ + ವನ್. ಧನ್ವನ್. ಅವಕಾಶಕ್ಕೋಸ್ಕರ ಪ್ರಾರ್ಥಿಸಲ್ಪಡುತ್ತದೆ. ಅಥವಾ ಇದೂ ದೇವತೆಯಾದುದರಿಂದ ಆಯಾಯ ಅಭೀಷ್ಟವು ಯಾಚಿಸಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಯಃ ಪರಸ್ಯಾಃ ಪರಾವತಸ್ತಿರೋಧನ್ವಾತಿ ರೋಚತೇ** (ಋ. ಸಂ. ೧೦-೧೮೭-೨)

**(೬) ಅಂತರಿಕ್ಷಮ್ ‖ ಸರ್ವತ್ರ ಪೃಷೋದರಾದಿತ್ವಾತ್ (ಪಾ. ಸೂ. ೬-೩-೧೦೯) ಸಾಧು ‖**

ಪೃಷೋದರಾದಿಗಣವಲ್ಲಿ ಈ ಶಬ್ದವು ಸೇರಿರುವುದರಿಂದ ಸೂತ್ರಕಾರ್ಯವಿಲ್ಲದೆ ಅಭಿಮತ ಕಾರ್ಯದಿಂದಕೂಡಿ ಸಿದ್ಧವಾಗಿದೆ. **'ಅಂತರಿಕ್ಷಂ ಕಸ್ಮಾತ್'** (ನಿ. ೨-೧೦) ಎಂಬ ಭಾಷ್ಯಕ್ಕೆ ಸ್ಕಂದಸ್ವಾಮಿಯು ನಾನಾ ರೀತಿಯಿಂದ ವ್ಯಾಖ್ಯಾನಮಾಡಿರುತ್ತಾನೆ. ಸರ್ವಭೂತಗಳ ಮಧ್ಯದಲ್ಲಿ ಇದು ಶಾಂತವಾಗಿ ಕ್ರಿಯಾರಹಿತವಾಗಿ ಇರುತ್ತದೆ (ಅಂತರಾ + ಕ್ಷಾಂತಂ) ಶಾಂತವೆಂದರೆ ವ್ಯೂಹ

ರಹಿತವೆಂದರ್ಥ. ಇವರ ಮಧ್ಯದಲ್ಲಿ ಸ್ವರ್ಗಮರ್ತ್ಯ ಲೋಕಗಳಿರುತ್ತವೆ. ಹೀಗೆ ಅನೇಕ ವಿಕಲ್ಪಗಳಿಂದ ಉತ್ತರ ಹೇಳಿರುತ್ತಾರೆ. ಅಥವಾ ಪೃಥಿವೀ, ಅಪ್, ವಾಯು, ತೇಜೋರೂಪ ಭೂತಗಳಲ್ಲಿ ಇದು ನಾಶರಹಿತವಾದದ್ದು ಎಂದರ್ಥ. ಅಂತಃ, ಅಕ್ಷಯಂ ಈ ಎರಡು ಪದಗಳಿಗೆ ಪೃಷೋದರಾದಿ ಪಠಿತವಾದುದರಿಂದ ಆಯಾಯ ಕಾರ್ಯ ಬಂದು ಅಂತರಿಕ್ಷಂ ಎಂದಾಗಿದೆ, ವಿನಾಶ ಹೊಂದುವ ಪದಾರ್ಥಗಳ ಮಧ್ಯದಲ್ಲಿ ಇದು ಅವಿನಾಶಿವಸ್ತುವಾಗಿರುತ್ತದೆಂದು ತಾತ್ಪರ್ಯ. ಉದಾಹರಣೆ—

**ನ ಯಸ್ಯ ದ್ಯಾವಾ ಪೃಥಿವೀ ನ ಧನ್ವ ನಾಂತರಿಕ್ಷವ್** [ಋ. ಸಂ. ೧೦–೮೯–೨].

[೭] **ಆಕಾಶಮ್ । ಆಙ್ ಪೂರ್ವಾತ್ ಕಾಶೃ–ದೀಪ್ತೌ [ದಿ–ಆ] ಇತ್ಯಸ್ಮಾತ್ ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ [೩–೩–೧೧೮] ಇತಿ ಘುಪ್ರತ್ಯಯಃ । ಆ ಸಮಂತಾತ್ ಕಾಶಂತೇ ದೀಪ್ಯಂತೇ ಸೂರ್ಯಾದಯೋಽತ್ರ ॥**

ದೀಪ್ತ್ಯರ್ಥಕವಾದ ಕಾಶೃ ಧಾತುವಿಗೆ ಆಙ್ ಉಪಸರ್ಗ ಪೂರ್ವದಲ್ಲಿರುವಾಗ ಘ ಪ್ರತ್ಯಯ. ಅ ಉಳಿಯುತ್ತದೆ. ಆಕಾಶ್+ಅ. ನಪುಂಸಕಲಿಂಗ. ಆಕಾಶಮ್. ಇದರಲ್ಲಿ ಸೂರ್ಯಾದಿಗಳು ಚನ್ನಾಗಿ ಪ್ರಕಾಶಿಸುತ್ತಾರೆ ಎಂದರ್ಥವಾಗುತ್ತದೆ.

ಅಥವಾ ನಞ್ ಪೂರ್ವದಲ್ಲಿರುವಾಗ ಕಾಶೃ ಧಾತುವಿಗೆ 'ನಂದಿಗ್ರಹ—' ಸೂತ್ರದಿಂದ ಪಚಾದಿಗಣದಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ. ನ ಕಾಶತೇ ಇತಿ ಆಕಾಶಮ್ ಛಾಂದಸವಾಗಿ ನಞ್‌ನ ಅಕಾರಕ್ಕೆ ದೀರ್ಘ. ಪೃಥಿವೀಜಲಾದಿಗಳಂತೆ ಇದು ಪ್ರತ್ಯಕ್ಷವಾಗಿ ತೋರುವುದಿಲ್ಲವೆಂದರ್ಥ. ಇದು ಶ್ರುತಿಯಲ್ಲಿ ಹೇಳಿದೆ.

**" ತಿಸ್ರೋ ಮಹೀರುಪರಾಸ್ತಸ್ಥುರತ್ಯಾಗುಹ ದ್ವೇ ನಿಹಿತೇ ದರ್ಶ್ಯೇಕಾ "** (ಋ. ಸಂ. ೩–೫೬–೨) **' ತಸ್ಮಾನ್ನಾಂತರಿಕ್ಷಂ ಪಶ್ಯತಿ—' ॥ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ** (ತೈ. ಉ. ೨–೧)

(೮) **ಆಪಃ ।** ಆಪ್ಲೃ-ವ್ಯಾಪ್ತೌ (ಭೂ–ಪ) **"ಆಪ್ನೋತೇರ್ಹ್ರಸ್ವಶ್ಚ"** (ಉ ೨–೫೮) **ಇತಿ ಕ್ವಿಪ್ ಪ್ರತ್ಯಯಃ ಉಪಧಾಹ್ರಸ್ವಶ್ಚ । ಜಸಿ " ಅಪ್ತೃನ್ತೃಚ್‌ಸ್ವಸೃ — "** (ಪಾ. ಸೂ. ೬–೪–೧೧) **ಇತ್ಯನೇನ ದೀರ್ಘಃ ॥ ಆಪ್ನೋತಿ ಅಂತರಿಕ್ಷಂ ಸರ್ವಂ ಜಗತ್ ॥**

ಧಾತು ಸಾಮಾನ್ಯಕ್ಕೆ ವಿಹಿತವಾಗುವ ಕ್ವಿಪ್‌ಪ್ರತ್ಯಯವು ಆಪ್ ಧಾತುವಿಗೆ ಬಂದಾಗ ಧಾತುವಿಗೆ ಹ್ರಸ್ವ. ಅಪ್ ಪಕಾರಾಂತ ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾ ಬಹುವಚನ ಜಸ್‌ಪ್ರತ್ಯಯ ಪರವಾದಾಗ " ಅಪ್ತೃನ್— " ಸೂತ್ರದಿಂದ ಉಪಧಾದೀರ್ಘ. ಆಪಸ್ ರುತ್ವವಿಸರ್ಗ ಆಪಃ ಎಂದಾಗುತ್ತದೆ, ' ಆಪಃ ಸ್ತ್ರೀಭೂಮ್ನಿ—' ಎಂಬುದರಿಂದ ಈ ಶಬ್ದವು ಯಾವಾಗಲೂ ನಿತ್ಯ ಬಹುವಚನಾಂತ ಸ್ತ್ರೀಲಿಂಗವಾಗಿರುತ್ತದೆ. ಇದು ಸಕಲಜಗತ್ತನ್ನು ಆಕ್ರಮಿಸಿರುತ್ತದೆ ಅಥವಾ ಪ್ರಾಣಿಗಳಿಂದ ಹೊಂದಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ತತೀಯಮಪ್ಸು ನೃಮಣಾ ಅಜಸ್ರಮ್ ।** (ಋ. ಸಂ. ೧೦–೪೫)

(೯) **ಪೃಥಿವೀ ॥ ಪ್ರಥ ಪ್ರಖ್ಯಾನೇ** (ಭೂ–ಆ) **' ಪ್ರಥೇಃ ಷಿವನ್ ಸಂಪ್ರಸಾರಣಂ ಚ '** (ಉ–೧–ಪಾ) **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪–೧–೪೧) **ಇತಿ ಙೀಷ್ । ಪ್ರಥತೇ ಪೃಥಿವೀ ।**

ಪ್ರಸಿದ್ಧ್ಯರ್ಥವನ್ನು ಹೇಳುವ ಪ್ರಥ ಧಾತುವಿಗೆ ಔಣಾದಿಕ ಪಿವನ್‌ಪ್ರತ್ಯಯ. ಧಾತುವಿನ ರೇಫಕ್ಕೆ ಸಂಪ್ರಸಾರಣ. (ಋಕಾರ). ಪ್ರತ್ಯಯದಲ್ಲಿ ಇವ ಉಳಿಯುತ್ತದೆ. ಪೃಥ್ + ಇವ ಎಂದಿರುವಾಗ ಸ್ತ್ರೀತ್ವದಲ್ಲಿ ಪ್ರತ್ಯಯ ಪಿತ್ತಾದುದರಿಂದ್ವ 'ಪಿದ್ಗೌರಾ—' ಸೂತ್ರದಿಂದ ಙೀಷ್ 'ಯಸ್ಯೇತಿ ಚ ಸೂತ್ರದಿಂದ ಅಕಾರಲೋಪ. ಪೃಥಿವಿ ಪ್ರಸಿದ್ಧಿ ಹೊಂದಿರುವುದು ಎಂದರ್ಥ. ಉದಾಹರಣೆ—

**ಯಃ ಪಾರ್ಥಿವಸ್ಯ ಕ್ಷಮ್ಯಸ್ಯ ರಾಜಾ ॥ (ಋ. ಸಂ. ೨-೧೪-೧೧) " ಸ ದಾಧಾರ ಪೃಥಿವೀಂ ದ್ಯಾಮುತೇಮಾಮ್ (ಋ. ಸಂ. ೧೦-೧೨೧-೧)**

**(೧೦) ಭೂಃ ॥ ಭವತೇಃ ಕ್ವಿಪ್ ॥ ಭವತ್ಯಸ್ಮಾದ್ ವೃಷ್ಟ್ಯಾದಿಃ ॥**

ಭೂ ಧಾತುವಿಗೆ ಧಾತ್ವರ್ಥ ತೋರುವಾಗ ಕ್ವಿಪ್‌ಪ್ರತ್ಯಯ. ಕ್ವಿಪ್ ಸರ್ವಲೋಪವಾದರೆ ಭೂಃ ಎಂದಾಗುತ್ತದೆ. ಇದರಿಂದ ಮಳೆ ಮುಂತಾದವುಗಳು ಆಗುತ್ತವೆ ಎಂದರ್ಥವಾಗುತ್ತದೆ ಇದಕ್ಕೆ ಉದಾಹರಣೆ ನಿಗಮ ಹುಡುಕಬೇಕು.

**(೧೧) ಸ್ವಯಂಭೂಃ ॥ ಸ್ವಯಂ ಭವತಿ ॥ ಸ್ವಯಂಭ್ವಿಸ್ಮ್ಯಕಾರಾಂತಂ ಕೇಷುಚಿತ್ । ತದಾ " ಮೃಗಯ್ವಾದಿತ್ವಾತ್ " (ಉ-೧-೩೭) ಕುಃ ॥**

ಆಕಾಶ ತಾನಾಗಿ ಆಗುತ್ತದೆ, ಯಾರಿಂದಲೂ ಸೃಷ್ಟಿಸಲ್ಪಡುವುದಿಲ್ಲ. ತಾರ್ಕಿಕಾದಿಗಳ ಮತದಂತೆ ಆಕಾಶವು ನಿತ್ಯ ಸ್ವಯಂಭುಃ ಎಂದು ಹ್ರಸ್ವಾಕಾರಾಂತವಾಗಿಯೂ ಪ್ರಯೋಗವಿದೆ. ಆಗ ಮೃಗಯು ಮುಂತಾದ ಗಣದಲ್ಲಿ ಸೇರಿರುವುದರಿಂದ ಕುಪ್ರತ್ಯಯ. ಹ್ರಸ್ವ. ಇವೆರಡಕ್ಕೂ ನಿಗಮ ಸಿಗದಿರುವುದರಿಂದ ನಿರ್ಣಯವಿಲ್ಲ. ಎಲ್ಲಿಯಾದರೂ ಉಪಲಬ್ಧವಾದರೆ ಆಗ ಹ್ರಸ್ವ ದೀರ್ಘಗಳ ನಿರ್ಣಯ ಮಾಡಬೇಕು.

**(೧೨) ಅಧ್ವಾ ॥ ಅದ—ಭಕ್ಷಣೇ (ಅದಾ-ಪ) " ಅದೇರ್ಧಚ " (ಉ-೪೧೧೨) ಇತಿ ವನಿಪ್ ಧಕಾರಶ್ಚಾಂತಾದೇಶಃ । ಅದನಂ ಸ್ವಸ್ತಿ ಗಚ್ಛತಾಂ ಪಕ್ಷ್ಯಾದೀನಾಂ ವಿಷಮಸ್ಥಾನಾಭಾವಾತ್ ॥**

ಭಕ್ಷಣಾರ್ಥಕವಾದ ಅದ್ ಧಾತುವಿಗೆ ವನಿಪ್‌ಪ್ರತ್ಯಯ. ಧಾತುವಿನ ದಕಾರಕ್ಕೆ ಧಕಾರಾದೇಶ. ಅಧ್ + ವನ್ = ಅಧ್ವನ್ ಎಂದಾಗುತ್ತದೆ. ಪ್ರಥಮಾವಿಭಕ್ತಿ ಏಕವಚನದಲ್ಲಿ ದೀರ್ಘಾದಿಗಳು ಬಂದು ಅಧ್ವಾ ಎಂದಾಗುತ್ತದೆ. ಯಾವ ವಿಷಮ ಸ್ಥಾನವಿಲ್ಲದಿರುವುದರಿಂದ ಪಕ್ಷ್ಯಾದಿಗಳು ತೊಂದರೆ ಇಲ್ಲದೆ ಇದರಲ್ಲಿ ಹೋಗುತ್ತವೆಯೆಂದರ್ಥ. ಅಥವಾ ಅಧಿ ಉಪಸರ್ಗಪೂರ್ವಕವಾದ ಗತ್ಯರ್ಥಕಧಾತುವಿಗೆ ಬಹುಲಗ್ರಹಣದಿಂದ ಸಿದ್ಧವಾದ ವನಿಪ್‌ಪ್ರತ್ಯಯ. ಬಹುಲಗ್ರಹಣದಿಂದಲೇ ಧಾತು ಉಪಸರ್ಗ ಇಕಾರಗಳಿಗೆ ಲೋಪ. ಇದರಲ್ಲಿ ದೇವತೆ ಮುಂತಾದವರು ಹೋಗುತ್ತಾರೆ ಎಂದರ್ಥ. ಮಾಧವರು ಅಧಿ ಉಪಸರ್ಗಕ್ಕೆ ಗತಿ ಕ್ರಿಯಾರ್ಥವನ್ನು ಹೇಳಿರುತ್ತಾರೆ. ಅಥವಾ ಅಧ್ವಾ ಎಂದರೆ ದಾರಿ. ಅದು ಉಳ್ಳದ್ದು ಆಕಾಶ. ಮತ್ವರ್ಥಪ್ರತ್ಯಯಕ್ಕೆ ಲುಕ್ ಬಂದಿದೆ. ಮೇಘಮಾರ್ಗಾದಿಗಳಿಂದ ಕೂಡಿರುವುದು ಎಂದರ್ಥ. ಅತ—ಸಾತತ್ಯ ಗಮನೇ ಧಾತುವಿಗೆ 'ಅತೇರ್ಧಶ್ಚ' ಎಂಬ ಭೋಜಸೂತ್ರದಿಂದ ವನಿಪ್ ಬಂದಾಗ ಧಾತುತಕಾರಕ್ಕೆ ಧಕಾರಾದೇಶ. ಯಾವಾಗಲೂ ಸೂರ್ಯಾದಿಗಳು ಇದರಲ್ಲಿ ಸಂಚರಿಸುತ್ತಾರೆ ಎಂದರ್ಥವಾಗುತ್ತದೆ. ಉದಾಹರಣೆ—

**ಭೂಮಾ ರೇಜಂತೇ ಅಧ್ವನಿ ಪ್ರವಿಕ್ತೇ [ಋ. ಸಂ. ೬-೫೦-೫] ಅನುಮನೇ ಅಧ್ವನಿ ವೃಜಿನೇ ಪಥಿ. [ಋ. ಸಂ. ೬-೪೭-೧೩]**

**[೧೩] ಪುಷ್ಕರಮ್ ॥ ಪುಷ-ಪುಷ್ಟೌ [ಸ್ವಾ. ಪ.] "ಪುಷಃ ಕಿತ್ [ಉ. ೪-೪] ಇತಿ ಕರನ್‌ಪ್ರತ್ಯಯಃ। ಪುಷಿರತ್ರಾಂತರ್ಣೀತಣ್ಯರ್ಥಃ। ಪೋಷಯತಿ ಭೂತಾನಿ ಅವಕಾಶಪ್ರದಾನೇನ ॥**

ಪುಷ್ಟ್ಯರ್ಥಕವಾದ ಪುಷ ಧಾತುವಿಗೆ ಔಣಾದಿಕ ಪ್ರತ್ಯಯ. ಇದಕ್ಕೆ ಕಿತ್ತ್ವ ಅತಿದೇಶಮಾಡಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಇಲ್ಲಿ ಧಾತುವಿಗೆ ಅಂತರ್ಭಾವಿತಣ್ಯರ್ಥ ಹೇಳಬೇಕು. ಣಿಚ್ ಪ್ರತ್ಯಯವಿಲ್ಲದೇ ಧಾತುವಿಗೆ ಣಿಜಂತಾರ್ಥ ಹೇಳಬೇಕೆಂದರ್ಥ. ಆಕಾರವು ಅವಕಾಶಕೊಡುವುದರಿಂದ ಅಥವಾ ನೀರು ಮುಂತಾದವುಗಳನ್ನು ಕೊಡುವುದರ ಮೂಲಕ ಪ್ರಾಣಿಸಮುದಾಯವನ್ನು ಪೋಷಿಸುತ್ತದೆ. ಕ್ಷೀರಸ್ವಾಮಿಯು '**ಪುಷ್ಕಂ ವಾರಿ ರಾತಿ ಇತಿ ಪುಷ್ಕರಮ್**' ಎಂದು ನಿರ್ವಚನ ಮಾಡಿರುತ್ತಾನೆ. ನೀರು ಕೊಡುವುದರಿಂದ ಪುಷ್ಕರವೆಂದಾಗುತ್ತದೆ. ಪುಷ್ಕ ಉಪಪದವಾಗಿರುವಾಗ ರಾ ಧಾತುವಿಗೆ "ಆತೋಽನುಪಸರ್ಗೇಕಃ" ಸೂತ್ರದಿಂದಕ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ ಪುಷ್ಕರಂ ಎಂದಾಗಿದೆ. ಅಂತರ್ಭಾವಿತಣ್ಯರ್ಥವುಳ್ಳ ಪುಷ ಧಾತುವಿಗೆ ಹೃದೃಕೃಸೃಪೃವೀಚೀ ಪುಷಿಮುಷಿ ಮೂಜ್‌ಶೂಭ್ಯಃ ಕಿತ್ ಸೂತ್ರದಿಂದ ಕರಪ್ರತ್ಯಯ ಬರುತ್ತದೆಂದು ಭೋಜದೇವನ ಮತ ಅರ್ಥ ಹಿಂದಿನಂತೆಯೇ ಆಗುತ್ತದೆ.

ಅಥವಾ 'ವಪುಃ' ಎಂದು ನೀರಿನ ಹೆಸರು (ನಿ-೧-೧೧) ವಪುಸ್ಸನ್ನುಂಟುಮಾಡುವ ಸ್ವಭಾವವುಳ್ಳದ್ದು ಎಂಬರ್ಥದಲ್ಲಿ '**ಕೃಞೋ ಹೇತುತಾಚ್ಛೀಲ್ಯಾನುಲೋಮ್ಯೇಷು**' (ಪಾ-ಸೂ.೩-೨-೨೦) ಎಂಬ ಸೂತ್ರದಿಂದ ಟ ಪ್ರತ್ಯಯ. 'ಚುಟೂ' ಸೂತ್ರದಿಂದ ಟಕಾರ ಇತ್ತಾದರೆ ಅ ಉಳಿಯುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ ವಪುಷ್ಕರ ಎಂದು ರೂಪವಾಗುತ್ತದೆ. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಆದಿಯ ವಕಾರಕ್ಕೆ ಲೋಪ ಬರುತ್ತದೆ. ಯಾವಾಗಲೂ ನೀರು ಕೊಡುವುದೆಂರ್ಥ. ಉದಾಹರಣೆ—**ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ.** [ಋ. ಸಂ. ೭-೩೩-೧೧]

**(೧೪) ಸಗರಃ ॥ ಸಹ ಶಬ್ದಪೂರ್ವಾತ್ ಗ್ಯಾ-ನಿಗರಣೇ [ತು.ಪ.] ಇತ್ಯಸ್ಮಾತ್ 'ಋದೋರಪ್' [ಪಾ.ಸೂ. ೩-೩-೫೭] ಸಹಸ್ಯ ಸಭಾವಃ [ಪಾ.ಸೂ. ೬-೩-೭೮] ಸಹ ಗಿರಂತ್ಯಸ್ಮಿನ್ ಸ್ಥಿತಾ ಆದಿತ್ಯರಶ್ಮಯೋ ಭೌಮರಸಮಿತಿ ಸಗರಃ ॥**

ಸಹ ಶಬ್ದ ಪೂರ್ವದಲ್ಲಿರುವಾಗ ಗ್ಯಾ ಧಾತುವಿಗೆ ಅಪ್‌ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಋೂಕಾರಕ್ಕೆ ಗುಣ. [ರಪರವಾಗಿ ಬರುತ್ತದೆ.] '**ಸಹಸ್ಯ ಸಃ ಸಂಜ್ಞಾಯಾಮ್**' ಸೂತ್ರದಿಂದ ಸಂಜ್ಞೆ ತೋರುವುದರಿಂದ ಸಹಶಬ್ದಕ್ಕೆ ಸಾದೇಶ. ಇದರಲ್ಲಿದ್ದು ಸೂರ್ಯರಶ್ಮಿಗಳು ಭೂಮಿಯರಸಭಾಗವನ್ನು ಸೆಳೆಯುತ್ತವೆ. ಅಥವಾ ಇದರಲ್ಲಿರುವ ಮೇಘಾದಿಗಳು ಮಳೆ ನೀರನ್ನು ಸುರಿಸುತ್ತವೆ ಎಂದರ್ಥವಾಗುತ್ತದೆ. '**ಗೀರ್ಯತೇ ಇತಿ ಗರಃ**' ಕುಡಯಲ್ಪಡುವುದು ನೀರು ಎಂದರ್ಥ. ಗರಮೊಡನೆ ಇರುವುದು ಸಗರ. ಆಕಾಶವು ನೀರಿನಿಂದ ಕೂಡಿರುತ್ತದೆ. ಗೃಹದೇವನೂ ಭಾಷ್ಯದಲ್ಲಿ ಇದೇ ಅರ್ಥವನ್ನು [ಗರಮುದಕಂ ಗಿರಂತಿ ಗರಗಿರಃ] ವಿವರಿಸಿರುತ್ತಾನೆ.

ಅಥವಾ ಗ್ಯಾ-ಶಬ್ದೇ ಧಾತು. ಇದಕ್ಕೆ ಹಿಂದಿನಂತೆ ಅಪ್‌ಪ್ರತ್ಯಯ ಬಂದಾಗ ಗರಃ ಎಂದಾಗುತ್ತದೆ ಶಬ್ದವೆಂದರ್ಥ. ಶಬ್ದದಿಂದ ಕೂಡಿರುವುದು ಆಕಾಶ. ಇದು ಯಾವಾಗಲೂ ತನ್ನ ಗುಣವಾದ ಶಬ್ದದಿಂದ ಕೂಡಿಯೇ ಇರುತ್ತದೆ. ಉದಾಹರಣೆ—

**ಅಪಃ ಪ್ರೇರಯಂ ಸಗರಸ್ಯ ಬುಧ್ನಾತ್** [ಋ. ಸಂ. ೧೦-೮೯-೪]

**(೧೫) ಸಮುದ್ರಃ ‖ ಸಮುದ್ದ್ರವಂತಿ ಸಂಗತಾ ಊರ್ಧ್ವಂ ದ್ರವಂತಿ ಗಚ್ಛಂತ್ಯಸ್ಮಾದಾಪೋ ರಶ್ಮಿಭಿರಾಕೃಷ್ಯಮಾಣಾ ಆದಿತ್ಯಮಂಡಲಮ್ । ಸಮುತ್ ಪೂರ್ವಾತ್ ದ್ರವತೇರ್ಗತ್ಯರ್ಥಾತ್ 'ಅನ್ಯೇಷ್ವಪಿ ದೃಶ್ಯತೇ' (ಪಾ. ಸೂ. ೩-೨-೧೦೧) ಇತಿ ಅಪಾದಾನೇ ಡ ಪ್ರತ್ಯಯೇ ಟಿಲೋಪೇ ಚ ರೂಪಮ್ ‖**

ದ್ರು-ಗತೌ-ಧಾತು. ಸಮ್, ಉತ್ ಉಪಸರ್ಗಗಳು ಪೂರ್ವದಲ್ಲಿರುವಾಗ ಅಪಾದಾನಾರ್ಥದಲ್ಲಿ ಡಪ್ರತ್ಯಯ. ಡಿತ್ತಾದುದರಿಂದ ಭಸಂಜ್ಞಾ ಇಲ್ಲದಿದ್ದರೂ ಧಾತುವಿನ ಟಿಗೆ ಲೋಪ. ಬಹುಲಗ್ರಹಣದಿಂದ ಉತ್ ಉಪಸರ್ಗದ ತಕಾರಕ್ಕೆ ಲೋಪ. ಕಿರಣದಿಂದ ಸೆಳೆಯಲ್ಪಡುವ ನೀರು ಒಟ್ಟಾಗಿ ಮೇಲಕ್ಕೆ ಸೂರ್ಯಮಂಡಲಕ್ಕೆ ಇದರ ಮೂಲಕ ಹೋಗುತ್ತದೆ ಎಂದರ್ಥ. ಕರ್ಮಾರ್ಥದಲ್ಲಿ ಡಪ್ರತ್ಯಯ ಹೇಳಿದರೆ ಭೂಮಿಯರಸರೂಪವಾದ ನೀರು ಗಾಳಿಯಿಂದ ಪ್ರಚೋದಿತವಾಗಿ, ಅಥವಾ ಮಳೆಗಾಲದಲ್ಲಿ ಸೂರ್ಯಮಂಡಲದಿಂದ ಕಿರಣಗಳ ಮೂಲಕ ಉಂಟಾಗಿ ಇದರಲ್ಲಿ ಸುರಿಯುತ್ತದೆ. ಆಗ ಉತ್ ಉಪಸರ್ಗಕ್ಕೆ ಅಭಿ ಎಂಬರ್ಥವನ್ನು ಹೇಳಬೇಕು.

ಸಮ್ ಉಪಸರ್ಗಪೂರ್ವಕವಾದ ಮುದ್ಹರ್ಷೇ ಧಾತುವಿಗೆ 'ಸ್ಫಾಯಿತಂಚಿವಂಚಿ—' (ಉ. ೨-೧೨) ಸೂತ್ರದಿಂದ ಅಧಿಕರಣಾರ್ಥದಲ್ಲಿ ರಕ್‌ಪ್ರತ್ಯಯ. ಬಹುಲಗ್ರಹಣದಿಂದ ಸಮಿನಮಕಾರಕ್ಕೆ ಲೋಪ. ಸ+ಮುದ್+ರ. ಸಮುದ್ರ ಎಂದಾಗುತ್ತದೆ. ಇದರಲ್ಲಿ ಆಕಾಶಸಂಚಾರಿಗಳಾದ ಪ್ರಾಣಿಗಳು ಸಂತೋಷಪಡುತ್ತವೆ ಎಂದರ್ಥ. ಅಥವಾ ಏಕೀಭಾವಾರ್ಥ ಕೊಡುವ ಸಮ್ ಪದಪೂರ್ವದಲ್ಲಿರುವಾಗ ಉದಕಶಬ್ದಕ್ಕೆ ಮತ್ವರ್ಥದಲ್ಲಿ ರಪ್ರತ್ಯಯ. ಛಾಂದಸವಾಗಿ ಉದಕಪದಕ್ಕೆ ಉದ್ ಆದೇಶ. ವರ್ಷಾಕಾಲದಲ್ಲಿ ಏಕೀಭೂತವಾದ ನೀರಿನಿಂದ ಕೂಡಿರುವುದು ಎಂದರ್ಥ.

ಅಥವಾ ಸಮ್ ಉಪಸರ್ಗಪೂರ್ವಕವಾದ ಉಂದೀ-ಕ್ಲೇದನೇ (ರು-ಪ) ಧಾತುವಿಗೆ 'ಸ್ಫಾಯಿತಂಟಿ ವಂಚಿ—' ಸೂತ್ರದಿಂದ ರಕ್‌ಪ್ರತ್ಯಯ. ಇದು ಕಿತ್ತಾದುದರಿಂದ 'ಅನಿದಿತಾಂ—' ಸೂತ್ರದಿಂದ ಧಾತುವಿನ ಉಪಧೆಯಾದ ನಕಾರಕ್ಕೆ ಲೋಪ. ಮಳೆಯ ನೀರಿನಿಂದ ಸಮಸ್ತ ಪ್ರಪಂಚವನ್ನು ಒದ್ದೆ ಮಾಡುತ್ತದೆಂದರ್ಥ. ಉದಾಹರಣೆ—

**" ಏಕಃ ಸುಪರ್ಣಃ ಸ ಸಮುದ್ರಮಾ ವಿವೇಶ. "** (ಋ. ಸಂ. ೮-೬-೧೬, ೪)

**(೧) ಆಧ್ವರಮ್ ‖ ಅಧ್ವಾ ವ್ಯಾಖ್ಯಾತಃ । ಅಧ್ವಾನಂ ಮಾರ್ಗಂ ರಾತಿ ದದಾತಿ (ಅದಾಪ) ಸ್ವಸ್ಮಿನ್ ಗಚ್ಛತಾಂ ಪಕ್ಷ್ಯಾದೀನಾಮ್ ‖**

ಅಧ್ವಾ ಶಬ್ದ ಹಿಂದೆ ವ್ಯಾಖ್ಯಾತವಾಗಿದೆ, ಇದು ಉಪಪದವಾಗಿರುವಾಗ ರಾ ಧಾತುವಿಗೆ ಕ ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ. ತನ್ನಲ್ಲಿ ಹೋಗತಕ್ಕ ಪಕ್ಷ್ಯಾದಿಗಳಿಗೆ ಮಾರ್ಗವನ್ನು ಕೊಡುವುದು ಎಂದರ್ಥ. ಅಥವಾ ಇದರಲ್ಲಿ ಮೇಘಾದಿಗಳ ಮಾರ್ಗವಿರುತ್ತದೆ. ಆಗ ಅಧ್ವನ್ ಶಬ್ದಕ್ಕೆ ಮತ್ವರ್ಥದಲ್ಲಿ ರ ಪ್ರತ್ಯಯ ಹೇಳಬೇಕು.

ಅಥವಾ ಧ್ವರ-ಹಿಂಸಾಯಾಮ್ ಧಾತು. ನಞ್ ಪೂರ್ವದಲ್ಲಿರುವಾಗ ಇದಕ್ಕೆ 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' (ಪಾ.ಸೂ-೨-೩-೧೧೮) ಸೂತ್ರದಿಂದ ಘ ಪ್ರತ್ಯಯ. ಆಕಾರವಿಲ್ಲದಿರುವುದರಿಂದ ಹಿಂಸಿಸಲಶಕ್ಯವಾದದ್ದು ಎಂದರ್ಥ. ಉದಾಹರಣೆ—

**ಶಿಶೂ ಕ್ರೀಳಂತೌ ಪರಿ ಯಾತೋ ಅಧ್ವರಮ್** (ಋ-ಸಂ-೮-೩-೨೩, ೩) ಅಧ್ವರ ಪದಕ್ಕೆ ಸ್ಕಂದಸ್ವಾಮಿಯು

ಯಜ್ಞವೆಂದು ವ್ಯಾಖ್ಯಾನಮಾಡಿರುತ್ತಾನೆ. ಈ ಅರ್ಥದಲ್ಲಿ ಶ್ರುತ್ಯುದಾಹರಣೆ ಹುಡುಕಬೇಕು. ಹೀಗೆ ಹದಿನಾರು ಆಕಾಶದ ಹೆಸರು.

---

ಅಂತರಿಕ್ಷನಾಮಾನ್ಯುತ್ತರಾಣಿ ಷೋಳಶ ॥

ಆರು ಮತ್ತು ಹತ್ತು ಸೇರಿ ಷೋಳಶ ಶಬ್ದಗಳು ಅಂತರಿಕ್ಷ ವಾಚಕಗಳು. ನೀರುಳ್ಳದ್ದಾದರಿಂದ 'ಅಂಬರ'ವೆಂದೂ, ಅನೇಕ ರೀತಿಯಿಂದ ಅಂತರಿಕ್ಷವನ್ನು ವ್ಯಾಪಿಸಿರುವುದರಿಂದ 'ವಿಯತ್' ಎಂದೂ ಪ್ರಾಣಿಗಳನ್ನು ಬಹಳ ವಿಧದಿಂದ ಕಾಪಾಡುವ ಕಾರಣ 'ವ್ಯೋಮ' ಎಂದೂ ಅರ್ಥವಿವರಣೆ ಮಾಡಿದೆ. ಇದೇರೀತಿಯಲ್ಲಿಯೇ ಇತರ ಶಬ್ದಗಳಿಗೂ ಅರ್ಥವನ್ನು ವಿವರಿಸಬಹುದು [೨-೧೦-೩]

ಅಂತರಿಕ್ಷಂ ಕಸ್ಮಾದಂತರಾ ಕ್ಷಾಂತಂ ಭವತ್ಯಂತರೇಮೇ ಇತಿ ವಾ ಶರೀರೇ
ಷ್ವಂತರಕ್ಷಯಮಿತಿ ವಾ ॥

ಸ್ವರ್ಗ ಮತ್ತು ಭೂಮಿ ಇವೆರಡಕ್ಕೂ ಮಧ್ಯದಲ್ಲಿ ಇರುವುದರಿಂದ ಇವನ್ನು ಅಂತರಿಕ್ಷವೆಂದು ಕರೆಯುವರು. ಭೂಮಿಗೆ ಕೊನೆಯಲ್ಲಿಯೂ ಇರತಕ್ಕದ್ದಾದರಿಂದ ಅಂತರಿಕ್ಷವೆನಿಸುವುದು. ಅಥವಾ ಭೂಮಿ, ಸ್ವರ್ಗ ಇವೆರಡನ್ನೂ ಬೇರೆಯಾಗಿ ಇರತಕ್ಕವುಗಳೆಂದು ತಿಳಿಸತಕ್ಕದ್ದು. ಆದ್ದರಿಂದ ಅಂತರಿಕ್ಷವೆಂದು ಹೆಸರನ್ನು ಹೊಂದಿದೆ. ಭೂಮಿಯೇ ಮೊದಲಾದ ಪಂಚಭೂತಗಳಲ್ಲಿ ಭೂಮಿ, ನೀರು, ಬೆಂಕಿ, ಗಾಳಿ ಎಂಬ ನಾಲ್ಕು ನಾಶವನ್ನು ಹೊಂದುವಂತೆ ಇದು ನಾಶವನ್ನು ಹೊಂದದೇ ಇರುವುದರಿಂದಲೂ ಇದಕ್ಕೆ ಅಂತರಿಕ್ಷವೆಂದು ಹೇಳುತ್ತಾರೆ. [೨-೧೦-೪]

ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ॥

ಈ ಹದಿನಾರು ಶಬ್ದಗಳ ಸಮುದಾಯದಲ್ಲಿ ಸಮುದ್ರ ಎಂಬ ಹೆಸರು ಎರಡುವಿಧವಾದ ಅರ್ಥಕ್ಕೆ ಆಶ್ರಯವಾಗಿರುವುದು. ಸಮುದ್ರ ಎಂಬ ಅವಯವಾರ್ಥವು ಇದಕ್ಕೆ ಕಾರಣವಾಗಿರುತ್ತದೆ. ಭೂಮಿಯಲ್ಲಿರುವ ನೀರನ್ನು ಭೂಮಿಯಿಂದ ಹೊರಕ್ಕೆ ಎರಚುವುದು ಎಂಬರ್ಥವೂ ಸಮುದ್ರ ಶಬ್ದದಿಂದ ಬರುತ್ತದೆ. ಇದರಿಂದ ಅಂತರಿಕ್ಷದಲ್ಲಿಯೂ ನೀರನ್ನು ಹೊರಕ್ಕೆ ಎರಚುವುದು ಎಂಬರ್ಥ ಬರುವುದರಿಂದ ಸಂದೇಹಕ್ಕೆ ಅವಕಾಶವುಂಟಾಗುತ್ತದೆ. ಈ ವಿಷಯವನ್ನು ಇಲ್ಲಿ ವಿವರಿಸಿ ಹೇಳಿದೆ. ಲೋಕದಲ್ಲಿ ವ್ಯವಹಾರದಲ್ಲಿರುವ ಸಮುದ್ರ ಎಂಬ ಶಬ್ದಕ್ಕೆ ವಿಷಯವಾದ ರೂಢ್ಯರ್ಥವು ಇಲ್ಲಿ ವಿವೃತವಾಗಿಲ್ಲ. [೨-೧೦-೫]

ಸಮುದ್ರಃ ಕಸ್ಮಾತ್ಸಮುದ್ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇ
ನಮಾಪಃ ಸಮ್ಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ
ಸಮುನತ್ತೀತಿ ವಾ ॥

(೧) ಸಂ ಉದ್ ದ್ರವಂತಿ, (೨) ಸಂ ಅಭಿದ್ರವಂತೀ, (೩) ಸಂಮೋದಂತೇ ಅಸ್ಮಿನ್ ಭೂತಾನಿ, (೪) ಸಂ ಉದಕೋ ಭವತಿ, (೫) ಸಂ ಉನತ್ತೀ ಎಂದು ಐದು ವಿಧವಾಗಿ ಸಮುದ್ರ ಶಬ್ದಕ್ಕೆ ಅವಯವಾರ್ಥವನ್ನು ವಿವರಿಸಿದೆ. ಅದರಲ್ಲಿ ಮೊದಲನೆಯದು ತೆರೆ, ಅಲೆ, ಸಣ್ಣಹನಿ ಎಂಬ ನೀರಿನ ವಿಕಾರಗಳಿಂದ ಎಲ್ಲಾ ಕಡೆಯಲ್ಲಿಯೂ ನೀರುಗಳು ಹೊರಡಲು

ಆಸ್ಪದವಾಗಿರುವುದು ಎಂದು ಅರ್ಥವು ಆಗುತ್ತದೆ. ನೀರುಗಳೆಲ್ಲವೂ ಇಳಿಜಾರಾಗಿರುವ ಪ್ರದೇಶವನ್ನು ಅನುಸರಿಸಿಕೊಂಡು ಹರಿದು ಹೋಗಿ ಸಮುದ್ರದಲ್ಲಿ ಸೇರುವಂತೆ ನೀರೆಲ್ಲವನ್ನೂ ಒಟ್ಟುಗೂಡಿಸಿಕೊಂಡು ಕೆಳಮುಖನಾಗಿ ಎರಚುವುದು ಎಂದು ಎರಡನೆಯದರಲ್ಲಿ ಅರ್ಥವಾಗುತ್ತದೆ. ನೀರು ಎಂಬುವುದು ಯಾವಾಗಲೂ ಹಳ್ಳಕ್ಕೆ ಹರಿಯುವುದು ಸಾಮಾನ್ಯವು. ಮೂರನೆಯ ಅರ್ಥದಲ್ಲಿ ಪ್ರಾಣಿಗಳೆಲ್ಲವೂ ಬಹಳಮಟ್ಟಿಗೆ ಸಂತೋಷವನ್ನು ಹೊಂದಲು ಆಧಾರವಾಗಿರುವುದು ಎಂದಾಗಿದೆ. ಜಲಚರ ಪ್ರಾಣಿಗಳೇ ಇದಕ್ಕೆ ಉದಾಹರಣೆಯು. ಉತ್ ಎಂದರೆ ಉದಕವು. ಆ ಉದಕವನ್ನು ಬಹಳ ಮಟ್ಟಿಗೆ ಶೇಖರಿಸಿರುವುದರಿಂದ ಇದನ್ನು ಲೋಕದಲ್ಲಿರುವ ಸಮುದ್ರದಂತಿರುವುದಾಗಿ ಸಮುದ್ರನೆಂದು ಕರೆಯುತ್ತಾರೆ. ಇದು ನಾಲ್ಕನೆಯದರ ಅರ್ಥ. ಇದು ಬಿದ್ದ ಕಡೆಯಲ್ಲಿ ಅಥವಾ ಇದರ ವ್ಯಾಪ್ತಿಯು ಉಂಟಾದ ಸ್ಥಳದಲ್ಲಿ ತೇವವಾಗುವುದರಿಂದ ಸಂ ಉನತ್ತೀ ಎಂಬುದಾಗಿ ಅರ್ಥವನ್ನು ಹೇಳಿದೆ. (೨-೧೦-೬)

ತಯೋರ್ವಿಭಾಗಸ್ತತ್ರೇತಿಹಾಸಮಾಚಕ್ಷತೇ । ದೇವಾಪಿ-ಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಞ್ಚಕ್ರೇ । ದೇವಾಪಿಸ್ತಪಃ ಪ್ರತಿ-ಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥ ತಸ್ಯೈತದ್ವರ್ಷಕಾಮಸೂಕ್ತಂ ತಸ್ಯೈಷಾ ಭವತಿ—॥

ಸಮುದ್ರ ಎಂಬ ಶಬ್ದವು ರೂಢ್ಯರ್ಥದಿಂದ ಸಮುದ್ರವನ್ನು ಬೋಧಿಸುವುದು, ಅವಯವಾರ್ಥದಿಂದ ಅಂತರಿಕ್ಷವನ್ನು ಬೋಧಿಸುವುದು ಎಂದು ಎರಡುವಿಧವಾದ ಅರ್ಥಗಳ ವಿವೇಚನೆಯ ವಿಷಯದಲ್ಲಿ ಉದಾಹರಣೆಯನ್ನು 'ತಯೋರ್ವಿಭಾಗಃ' ಎಂದು ಪ್ರಾರಂಭಮಾಡಿಕೊಂಡು ಹೇಳಿದೆ. ಈ ಉದಾಹರಣೆಯಲ್ಲಿ ಮೊದಲು ಒಂದು ಇತಿಹಾಸವನ್ನು ವಿವರಿಸಿದೆ. ದೇವಾಪಿ ಎಂಬುವನೂ, ಶಂತನು ಎಂಬುವನೂ ಕುರುವಂಶದಲ್ಲಿ ಹುಟ್ಟಿದ ಅಣ್ಣತಮ್ಮಂದಿರು. ಅವರಲ್ಲಿ ಕೊನೆಯವನಾದ ಶಂತನು ಎಂಬುವನು ದೊರೆಯಾದನು. ಅಣ್ಣನಾದ ದೇವಾಪಿಯು ತಪಸ್ಸಿಗಾಗಿ ಹೊರಟುಹೋದನು. ಕೆಲವುಕಾಲ ಕಳೆದನಂತರ ರಾಜನಾದ ಶಂತನುವಿನ ರಾಜ್ಯದಲ್ಲಿ ಹನ್ನೆರಡುವರ್ಷಗಳವರೆವಿಗೂ ಮಳೆಯಾಗಲಿಲ್ಲ. ಆಗ ತಪಸ್ಸುಮಾಡುತ್ತಿದ್ದ ಬ್ರಾಹ್ಮಣರೆಲ್ಲರೂ ಸೇರಿದರು. ದೊರೆಯಾದ ಶಂತನುವಿನ ಹತ್ತಿರಕ್ಕೆ ಬಂದರು. "ನೀನು ಅಧರ್ಮವನ್ನು ಮಾಡಿದ್ದೀಯೆ ನಿಮ್ಮ ಅಣ್ಣನಿಗೆ ಸೇರತಕ್ಕ ರಾಜ್ಯವನ್ನು ತಪ್ಪಿಸಿದ್ದೀಯೆ. ಇದರಿಂದ ನಿನ್ನ ರಾಜ್ಯದಲ್ಲಿ ಮಳೆಯು ಆಗಿಲ್ಲ" ಎಂದು ಹೇಳಿದರು. ಆಗ ಶಂತನು ಅಣ್ಣನಾದ ದೇವಾಪಿಯನ್ನು ಬರಮಾಡಿಕೊಂಡನು. ಆಗ ದೇವಾಪಿಯು ತಾನು ಮಾಡುತ್ತಿದ್ದ ತಪಸ್ಸಿನ ಸಿದ್ಧಿಯಿಂದ ವಿಶ್ವಾಮಿತ್ರನಂತೆ ಬ್ರಾಹ್ಮಣನಾಗಿದ್ದನು. ಹೀಗೆ ಕ್ಷತ್ರಿಯ ಜಾತಿಯನ್ನು ಬಿಟ್ಟು ತಪಸ್ಸಿನ ಮಹಿಮೆಯಿಂದ ಬ್ರಾಹ್ಮಣನಾಗಿದ್ದರೂ ರಾಜ್ಯವನ್ನು ಪಾಲನೆಮಾಡಬೇಕೆಂಬ ಶಂತನುವಿನ ಬಲವಂತವನ್ನು ಮೀರಲಾರದೆ ದೇವಾಪಿಯು ತಪೋವನವನ್ನು ಬಿಟ್ಟು ರಾಜ್ಯಕ್ಕೆ ಬಂದನು.

ಆದರೆ " ನಾನು ನಿನಗೆ ಪುರೋಹಿತನಾಗಿದ್ದುಕೊಂಡು ನಿನ್ನ ರಾಜ್ಯದಲ್ಲಿ ಮಳೆ ಬರುವಂತೆ ಮಾಡುತ್ತೇನೆ. ರಾಜನಾಗಿರುವುದಿಲ್ಲ. ನೀನೇ ರಾಜನಾಗಿರಬೇಕು." ಎಂದು ಹೇಳಿದನು. ಅನಂತರದಲ್ಲಿ ವರ್ಷಕಾಮಸೂಕ್ತಕ್ಕೆ ಸಂಬಂಧಪಟ್ಟಿರುವ ಈ ಮಂತ್ರವನ್ನು ಅವನು ಹೇಳಿದನು. ಇದು ಇಲ್ಲಿಗೆ ಉದಾಹರಣೆಯಾಗಿದೆ ಮತ್ತು ಇದರ ಮುಂದಿನ 'ಯದ್ದೇವಾಪಿಃ' ಎಂಬ ಮಂತ್ರವೂ ಕೂಡ ಉದಾಹರಣೆಯಾಗಿದೆ. ಇಲ್ಲಿ ದೇವಾಪಿಯು ಬ್ರಾಹ್ಮಣನಾದನು ಎಂದು ಹೇಳಿದೆ. ವಿಶ್ವಾಮಿತ್ರನ ಹೋಲಿಕೆಯನ್ನು ಹೇಳಿದೆ. ಬ್ರಾಹ್ಮಣ ಶಬ್ದಕ್ಕೆ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು ಎಂದು ಅರ್ಥವಾಗುತ್ತದೆ. ಬ್ರಾಹ್ಮಣನ ಕೆಲಸವನ್ನು ಮಾಡುವವನೂ ಎಂದು ಅರ್ಥವಾಗುತ್ತದೆ. ಬ್ರಾಹ್ಮಣ ಜಾತಿಯಲ್ಲಿ ಹುಟ್ಟುವುದು, ತಪಸ್ಸನ್ನುಮಾಡುವುದು, ವೇದಾಧ್ಯಯನದಿಂದ ಜ್ಞಾನವನ್ನು ಸಂಪಾದಿಸುವುದು ಇವು ಮೂರು ಕೂಡ ಬ್ರಾಹ್ಮಣನೆಂಬುವುದಕ್ಕೆ ಗುರುತಾಗಿರುವುದು. ಇವು ಮೂರರಲ್ಲಿ ಮೊದಲನೆಯದೆರಡು ಇಲ್ಲದಿದ್ದರೆ ಸುಮ್ಮನೆ ಬ್ರಾಹ್ಮಣಜಾತಿಯಲ್ಲಿ ಕರೆಯಲ್ಪಡುವನು. ಇದರಿಂದ ದೇವಾಪಿ ಎಂಬುವನು ಬ್ರಾಹ್ಮಣ ಜಾತಿಯಲ್ಲಿ ಹುಟ್ಟದಿದ್ದರೂ ಪರಬ್ರಹ್ಮನನ್ನು ಚೆನ್ನಾಗಿ ತಿಳಿದುಕೊಂಡಿರುವುದರಿಂದ ವಿದುರನೇ ಮೊದಲಾದವರಂತೆ ಬ್ರಹ್ಮಜ್ಞಾನಿ ಎನಿಸಿಕೊಂಡಿರುವನು. ಇದಕ್ಕಾಗಿಯೇ ಮೊದಲು ಕ್ಷತ್ರಿಯನಾಗಿ ಹುಟ್ಟಿ ಅನಂತರ ತಪಸ್ಸಿನಿಂದ ಬ್ರಾಹ್ಮಣನಾದ ವಿಶ್ವಾಮಿತ್ರನನ್ನು ಈ ವಿಷಯದಲ್ಲಿ ಇಲ್ಲಿ ಉದಾಹರಣೆಯಾಗಿ ಹೇಳಿದೆ.

**ಇತಿ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು

---

## ಅಥೈಕಾದಶಃ ಖಂಡಃ

### ಹನ್ನೊಂದನೆಯ ಖಂಡವು

---

ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ದೇವಾಪಿರ್ದೇವಸುಮತಿಂ ಚಿಕಿತ್ವಾನ್ । ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥ (ಋ. ಸಂ. ೧೦–೯೮–೫) ಆರ್ಷ್ಟಿಷೇಣ ಋಷ್ಟಿಷೇಣಸ್ಯ ಪುತ್ರ ಇಷಿತಸೇನಸ್ಯೇತಿ ವಾ ಸೇನಾ ಸೇಶ್ವರಾ ಸಮಾನಗತಿರ್ವಾ ಪುತ್ರಃ ಪುರು ತ್ರಾಯತೇ ನಿಪರಣಾದ್ವಾ ಪುನ್ನರಕಂ ತತಸ್ತ್ರಾಯತ ಇತಿ ವಾ ಹೋತ್ರಮೃಷಿರ್ನಿಷೀದನ್ನೃಷಿರ್ದರ್ಶನಾನ್ ಸ್ತೋಮಾನ್ದದರ್ಶೇತ್ಯೌಪಮನ್ಯವಸ್ತದ್ಯದೇನಾಂಸ್ತಪಸ್ಯಮಾನಾನ್ಬ್ರಹ್ಮಸ್ವಯಂಭ್ವಭ್ಯಾನರ್ಷತ ಋಷಯೋಽಭವಂಸ್ತದೃಷೀಣಾಮೃಷಿತ್ವಮಿತಿ ವಿಜ್ಞಾಯತೇ ॥ (ತೈ. ಆ–೨–೯) ದೇವಾಪಿರ್ದೇವಾನಾಮಾಪ್ತ್ಯಾ ಸ್ತುತ್ಯಾ

ಚ ಪ್ರದಾನೇನ ಚ ದೇವಸುಮತಿಂ ದೇವಾನಾಂ ಕಲ್ಯಾಣೀಂ ಮತಿಂ ಚಿಕಿತ್ವಾಂಶ್ಚೇತನಾವಾನ್ । ಸ ಉತ್ತರಸ್ಮಾದಧರಂ ಸಮುದ್ರಂ । ಉತ್ತರ ಉದ್ಧತತರೋ ಭವತ್ಯಧರೋಽಧೋರೋಽಧೋ ನ ಧಾವತೀತ್ಯೂರ್ಧ್ವ-ಗತಿಃ ಪ್ರತಿಷಿದ್ಧಾ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥೧೧॥

---

ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್‌ದೇವಾಪಿರ್ದೇವ ಸುಮತಿಂ ಚಿಕಿತ್ವಾನ್ ॥ ಸಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥ " ಆರ್ಷ್ಟಿಷೇಣ ಋಷ್ಟಿಷೇಣಸ್ಯ ಪುತ್ರ ಇಷಿತ-ಸ್ಯೇನಸ್ಯೇತಿ ವಾ ॥ ಸೇನಾ ಸೇಶ್ವರಾ ಸಮಾನಗತಿರ್ವಾ । ಪುತ್ರಃ ಪುರು ತ್ರಾಯತೇ ನಿಪರಣಾದ್ವಾ, ಪುನ್ನರಕಂ ತತಸ್ತ್ರಾಯತ ಇತಿ ವಾ ॥ ಹೋತ್ರ ಮೃಷಿರ್ನಿಷೀದನ್ । ಋಷಿರ್ದರ್ಶನಾತ್ ಸ್ತೋಮಾನ್ ದದರ್ಶೇತ್ಯೌ ಪಮನ್ಯವಃ ತದ್ಯದೇನಾಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವ ಭ್ಯಾನರ್ಷತ್ತ ಋಷಯೋಽಭವಂಸ್ತದೃಷೀಣಾಮೃಷಿತ್ವಮಿತಿ ವಿಜ್ಞಾ-ಯತೇ । ದೇವಾಪಿರ್ದೇವಾನಾಮಾಪ್ತ್ಯಾ ಸ್ತುತ್ಯಾ ಚ ಪ್ರದಾನೇನ ಚ । ದೇವಸುಮತಿಂ ದೇವಾನಾಂ ಕಲ್ಯಾಣೀಂ ಮತಿಮ್ । ಚಿಕಿತ್ವಾಂ-ಶ್ಚೇತನಾವಾನ್ । "ಸ ಉತ್ತರಸ್ಮಾದಧರಂ ಸಮುದ್ರಂ" ಉತ್ತರ ಉದ್ಧತತರೋ ಭವತಿ । ಅಧರೋಽಧೋರಃ ॥ ಅಧೋ ನ ಧಾವತೀ ತ್ಯೂರ್ಧ್ವ ಗತಿಃ ಪ್ರತಿಷಿದ್ಧಾ ॥

ದೇವಾಪಿ ಎಂಬುವನು ಶಂತನುವಿನ ರಾಜ್ಯದಲ್ಲಿ ಮಳೆ ಬರುವಂತೆ ಯಜ್ಞವನ್ನು ಮಾಡಿಸುವಾಗ ಈ ಮಂತ್ರದಿಂದ ದೇವತೆಗಳನ್ನು ಸ್ತುತಿಮಾಡಿದನು. ಇಲ್ಲಿ 'ಋಷ್ಟಿಷೇಣ' ಅಥವ 'ಇಷಿತಸೇನ' ಎಂಬುವನ ಮಗನು ಆರ್ಷ್ಟಿಷೇಣ ಎನ್ನಿಸಿ ಕೊಳ್ಳುವನು. ಬಲವಾದ ಸೇನೆಯುಳ್ಳವನೆಂದು ಅರ್ಥವು. ಈ ದೇವಾಪಿಯು ಕ್ಷತ್ರಿಯನಾಗಿದ್ದು ಬ್ರಾಹ್ಮಣ ಧರ್ಮವನ್ನು ಆಚರಿಸುವವನಾಗಿದ್ದನು. ಶಂತನು ಎಂಬುವನು ಕ್ಷತ್ರಿಯನಾಗಿದ್ದು ಯಜ್ಞ ಮಾಡುವವನಾದನು. ಕ್ಷತ್ರಿಯನು ಯಜ್ಞ ಮಾಡಿ ಸುವವನೂ, ಕ್ಷತ್ರಿಯನು ಯಜ್ಞಮಾಡುವವನೂ ಎಂದು ಇಲ್ಲಿ ಹೇಳಿದೆ. ಇದರಿಂದ ಅವರವರ ವರ್ಣಧರ್ಮವು ವ್ಯತ್ಯಾಸವಾಗಿದೆ ಎಂದು ಹೇಳಿದೆ. ಬ್ರಾಹ್ಮಣನಿಗೆ ಯಜ್ಞ ಮಾಡಿಸುವುದು, ಯಜ್ಞ ಮಾಡುವುದು, ವೇದಾಧ್ಯಯನ ಮಾಡುವುದು, ವೇದಾಧ್ಯಯನ ಮಾಡಿಸುವುದು, ಎಂಬ ಕೆಲಸಗಳು ಉಕ್ತವಾಗಿವೆ. ಆದುದರಿಂದ ದೇವಾಪಿ ಎಂಬುವನಿಗೆ ಶಂತನುವಿನ ಯಜ್ಞದಲ್ಲಿ ದೇವತೆಗಳನ್ನು ಕರೆಯುವ ಯಜ್ಞದಲ್ಲಿ ಹೇಳಿದ ಮಂತ್ರಗಳನ್ನು ಪಠನಮಾಡುವ ಹೋತೃ ಎಂಬ ಋತ್ವಿಜನ ಕೆಲಸವು ಈ ಮಂತ್ರದಲ್ಲಿ ಹೇಳಿದೆ.

ದೇವಾಪಿ ಎಂಬ ಶಬ್ದಕ್ಕೆ ದೇವತೆಗಳಿಗೆ, ಭೂಮಿಗೆ ಉದಕವನ್ನು ಕೊಡುವುದರಲ್ಲಿ ಉದಾರವಾದ ಮನಸ್ಸು ಉಂಟಾಗುವಂತೆ ಮಾಡತಕ್ಕ ಉಪಾಯವನ್ನು ತಿಳಿದವನು ಎಂದು ಹೇಳಿದೆ. ಹೀಗೆಯೇ ಈ ದೇವಾಪಿಯು ಕೌಶಲವು ಇರುವುದರಿಂದ ಇವನು ದೇವತೆಗಳು ಮಳೆಯನ್ನು ಸುರಿಸುವಂತೆ ಸ್ತುತಿಯನ್ನು ಮಾಡಿದನೆಂದು ವಿವರಿಸಿದೆ. ಈ ದೇವಾಪಿಯು ಹೇಳಿದ ಸ್ತುತಿಯಿಂದ ದೇವತೆಗಳು ಸಂತುಷ್ಟರಾಗಿ ಅಂತರಿಕ್ಷದಿಂದ ಅಂದರೆ, ನೀರು ತುಂಬಿರುವ ಅವಕಾಶವನ್ನು ಹೊಂದಿರುವ ಭಾಗದಿಂದ [ಅಂತರಿಕ್ಷದಿಂದ] ಭೂಮಿಗೆ ಸಂಬಂಧವಾಗಿರುವ ಸಮುದ್ರವನ್ನು ತುಂಬುವಂತೆ ಮಳೆಯನ್ನು ಸುರಿಸಿದರು. ಇಲ್ಲಿ ಸಮುದ್ರ ಎಂಬ ಶಬ್ದಕ್ಕೆ ಹಿಂದೆ ಹೇಳಿದ ಐದು ವಿಧವಾದ ಅರ್ಥಗಳು ಅವಯವಾರ್ಥಗಳಿಂದ ವಿವೃತವಾಗಿದೆ. ರೂಢಿಯಿಂದ ಭೂಮಿಯಲ್ಲಿ ಪ್ರಸಿದ್ಧವಾದ ಸಮುದ್ರ ಎಂಬ ಅರ್ಥವು ವಿವರಿಸಿದೆ ಎಂದು ವಿಂಗಡಿಸಿ ಹೇಳಿದೆ.

ಅಂತರಿಕ್ಷದಿಂದ ಭೂಮಿಗೆ ಬರುವ ನೀರು ಸಣ್ಣ ಸಣ್ಣ ಹನಿಗಳಾಗಿ ಬೀಳುತ್ತವೆ. ಈ ಹನಿಗಳು ಮೇಲಿನಿಂದ ಬೀಳತಕ್ಕವುಗಳಾಗಿ ಭೂಮಿ ನೀರಿಗಿಂತಲೂ ಬೆಳೆಯಾಗುವುದಕ್ಕೆ ಮುಖ್ಯವಾದ ಕಾರಣವಾಗಿದೆ. ಮತ್ತು ಉತ್ತಮವಾದವುಗಳಾಗಿವೆ. ಇದರಿಂದಲೇ ಈ ನೀರನ್ನು "ದಿವ್ಯಾ ಆಪಃ ಎಂದು ಹೇಳಿದೆ. ಇದರಿಂದ ದೇವಾಪಿ ಎಂಬುವನು ದೇವತೆಗಳನ್ನು ಅವರವರ ತಿಳಿವಳಿಕೆಯಿಂದ ದಯೆಯುಳ್ಳವರಾಗಿ ಮಾಡುವವನು ಎಂಬ ಅರ್ಥವು ಸೂಚಿತವಾಗಿದೆ. ಹೀಗೆಯೇ ಋಷಿಯಾದವನೂ ಕೂಡ ಈ ದೇವಾಪಿ ಶಬ್ದದಿಂದ ವಾಚ್ಯನಾದವನು ಇರುವಂತೆ ಇನ್ನೊಬ್ಬನೂ ಆಗಬೇಕೆಂದು ಆಶಿಸಿದೆ.

ಈ ಮಂತ್ರದಲ್ಲಿರುವ ಪ್ರತಿಯೊಂದು ಪದಕ್ಕೂ ಅರ್ಥವು ವಿವೃತವಾಗಿದೆ. 'ಋಷ್ಟಿ' ಎಂದರೆ ಒಂದು ಬಗೆಯ ಆಯುಧವು. ಆ ಆಯುಧವನ್ನೇ ಬಹಳವಾಗಿ ಉಪಯೋಗಿಸುವ ಸೇನೆಯುಳ್ಳವನು ಋಷ್ಟಿಷೇಣನೆನಿಸುವನು. ಅಥವಾ ಯಾವಾಗಲೂ ಸೇನೆಗಳನ್ನು ಬೇರೆ ಬೇರೆ ಕಡೆಗೆ ಶತ್ರುಗಳ ಮೇಲೆ ಯುದ್ಧಕ್ಕಾಗಿ ಕಳುಹಿಸುವವನು ಎಂದು ಆರ್ಷ್ಟಿಷೇಣ ಶಬ್ದಕ್ಕೆ ಅರ್ಥವು ವಿವೃತವಾಗಿದೆ.

'ಸೇನಾ' ಎಂಬ ಶಬ್ದವು (ಇನಃ ಈಶ್ವರ) ಎಂದರೆ ಯಾವಾಗಲೂ ತಮ್ಮ ತಮ್ಮ ರಾಜನಿಂದ ಕೂಡಿರುವ ಜನ ಸಮುದಾಯವೆಂದು ಎಲ್ಲರೂ ಸೇರಿ ಒಂದು ಕೆಲಸವನ್ನು ಗೆಲ್ಲುವುದಕ್ಕಾಗಿ ಹೊರಟಿರುವ ಜನದ ಗುಂಪು ಎಂದೂ ಅರ್ಥವಾಗುತ್ತದೆ. ತಂದೆಯು ಮಾಡಿದ ಬಹಳವಾದ ಪಾಪವನ್ನು ತಿಳಿದಾಗಲೀ, ತಿಳಿಯದೇ ಆಗಲೀ ತಂದೆಯನ್ನು ಕಾಪಾಡುವವನಾದ್ದರಿಂದ ಪುತ್ರನೆನಿಸಿಕೊಳ್ಳುವನು. ಅಥವಾ ಪಿತೃಗಳಿಗೆ ತೃಪ್ತಿಯುಂಟಾಗಲು ಪಿಂಡಗಳನ್ನು ಕೊಡುವವನು ಎಂಬುದಾಗಿಯೂ, ಅಥವಾ 'ಪುತ್' ಎಂಬ ನರಕದಿಂದ ಪಿತೃಗಳನ್ನು ಕಾಪಾಡುವವನು ಎಂದೂ ಮೂರು ವಿಧವಾದ ಅರ್ಥವನ್ನು ಪುತ್ರ ಶಬ್ದಕ್ಕೆ ಹೇಳಿದೆ.

(1) ಬಹಳ ಸೂಕ್ಷ್ಮವಾಗಿರುವ ವಿಷಯಗಳನ್ನು ಜ್ಞಾನದಿಂದ ತಿಳಿಯುವವನು. ಆದುದರಿಂದ ಋಷಿ ಎನಿಸಿಕೊಳ್ಳುವನು. (2) ಮಂತ್ರಗಳು ಸ್ತೋಮಗಳೆನಿಸಿಕೊಳ್ಳುತ್ತವೆ. ಅವುಗಳನ್ನು ಸರಿಯಾದ ಜ್ಞಾನದಿಂದ ತಿಳಿದುಕೊಳ್ಳುವವನು ಋಷಿಯು ಎಂದು ಉಪಮನ್ಯು ಎಂಬ ಆಚಾರ್ಯನು ಹೇಳುವನು. "ತಪಸ್ಸು ಮಾಡತಕ್ಕ ಋಷಿಗಳಿಗೆ ಋಕ್ಕು, ಯಜಸ್ಸು, ಸಾಮ ಎಂಬ ವೇದಗಳು ತಾವಾಗಿಯೇ ಬಂದು ದರ್ಶನವನ್ನು ಕೊಟ್ಟಿರುವುವು. ಇದರಿಂದ ಅವುಗಳನ್ನು ಅಭ್ಯಾಸಮಾಡದಿದ್ದಾಗ್ಯೂ ಚೆನ್ನಾಗಿ ತತ್ವ ದೃಷ್ಟಿಯಿಂದಲೂ, ಬಹಳವಾದ ತಪಸ್ಸಿನಿಂದಲೂ ತಿಳಿದುಕೊಂಡು ಇರುವುದು" ಋಷಿಯ ಮುಖ್ಯ ಧರ್ಮವಾಗಿರುತ್ತದೆ. ಎಂದು ವೇದದಲ್ಲಿ ಹೇಳಿದೆ.

ಸ್ತೋತ್ರಗಳಿಂದ ದೇವತೆಗಳನ್ನು ಪ್ರತ್ಯಕ್ಷವಾಗಿ ಕಾಣುವವನು ಮತ್ತು ಹವಿಸ್ಸುಗಳನ್ನು ಅವರಿಗೆ ಕೊಡುವುದರಿಂದ ದೇವತೆಗಳನ್ನು ಹೊಂದುವವನು ದೇವಾಪಿ ಎಂಬ ಶಬ್ದಕ್ಕೆ ಅರ್ಥವಾಗಿ ಹೇಳಿದೆ.

ಎಲ್ಲಕ್ಕಿಂತಲೂ ಎತ್ತರವಾದ ಸ್ಥಳದಲ್ಲಿ ಇರುವುದು, ಆಪುದರಿಂದ, ಉತ್ತರ ಎಂದೂ, ಇದಕ್ಕಿಂತ ಮೇಲ್ಭಾಗದಲ್ಲಿ ಇಲ್ಲದಿರುವುದರಿಂದಲೂ ಉತ್ತರವೆಂದು ಹೇಳಿದೆ.

ಕೆಳಮುಖನಾಗಿ ಸಂಚರಿಸುವವನಿಗೆ ಕೊನೆಯ ಪ್ರದೇಶವು 'ಅಧಃ' ಎಂದು ಎನಿಸುತ್ತದೆ. ಇದಕ್ಕಿಂತಲೂ ಕೆಳಭಾಗವು ಇಲ್ಲದಿರುವ ಕಾರಣ ಇದಕ್ಕೆ 'ಅಧರ' ವೆಂದು ಹೆಸರಾಗಿದೆ. [೨-೧೧-೧]

ತಸ್ಯೋತ್ತರಾ ಭೂಯಸೇ ನಿರ್ವಚನಾಯ—

ಈ ಹಿಂದಿನ ಮಂತ್ರದಿಂದ ಹೇಳಿದ ಅರ್ಥವನ್ನು ವಿವರಿಸುವುದಕ್ಕಾಗಿ ಎಂದರೆ ಮೇಲುಭಾಗದಲ್ಲಿರುವ ಸಮುದ್ರ ಎಂಬ ಶಬ್ದದಿಂದ ಕರೆಯಬಹುದಾದ ಅಂತರಿಕ್ಷದಿಂದ ದೇವಾಪಿಯು ದೇವತೆಗಳಿಂದ ಮಳೆಯು ಬರುವಂತೆ ಯಜ್ಞವನ್ನು ಶಂತನು ಎಂಬುವನಿಂದ ಮಾಡಿಸಿ ತಾನು ಪುರೋಹಿತನಾಗಿದ್ದನು ಎಂಬ ಅರ್ಥವನ್ನು ಮುಂದಿನ ಮಂತ್ರದಿಂದಲೂ ವಿವರಿಸಿವೆ.

**ಇತ್ಯೇಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು

---

## ಅಥ ದ್ವಾದಶಃ ಖಂಡಃ

### ಹನ್ನೆರಡನೆಯ ಖಂಡವು

---

ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ । ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿ-ರ್ವಾಚಮಸ್ಮಾ ಅಯಚ್ಛತ್ ॥ (ಋ. ಸಂ. ೧೦-೯೮-೭) ಶಂತನುಃ ಶಂ ತನೋಽಸ್ತ್ವಿತಿ ವಾ ಶಮಸ್ಮೈ ತನ್ವಾ ಅಸ್ತ್ವಿತಿ ವಾ ಪುರೋಹಿತಃ ಪುರ ಏನಂ ದಧತಿ ಹೋತ್ರಾಯ ವೃತಃ ಕೃಪಾಯಮಾಣೋಽನ್ವಧ್ಯಾಯ ದ್ದೇವಶ್ರುತಂ ದೇವಾ ಏನಂ ಶೃಣ್ವಂತಿ ವೃಷ್ಟಿವನಿಂ ವೃಷ್ಟಿಯಾಚಿನಂ ರರಾಣೋ ರಾತಿರಭ್ಯಸ್ತೋ ಬೃಹಸ್ಪತಿರ್ಬ್ರಹ್ಮಾಸೀತ್ಸೋಽಸ್ಮೈ ವಾಚಮಯಚ್ಛದ್ಬೃಹದುಪವ್ಯಾಖ್ಯಾತಂ ॥೧೨॥

---

ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ । ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿ-ರ್ವಾಚಮಸ್ಮಾ ಅಯಚ್ಛತ್ ॥" ಶಂತನುಃ ಶಂ ತನೋಽಸ್ತ್ವಿತಿ ವಾ, ಶಮಸ್ಮೈ ತನ್ವಾ ಅಸ್ತ್ವಿತಿ ವಾ। ಪುರೋಹಿತಃ ಪುರ ಏನಂ ದಧತಿ। ಹೋತ್ರಾಯ ವೃತಃ ಕೃಪಾಯಮಾಣೋಽನ್ವಧ್ಯಾಯತ್। ದೇವಶ್ರುತಂ ದೇವಾ ಏನಂ ಶೃಣ್ವಂತಿ। ವೃಷ್ಟಿವನಿಂ ವೃಷ್ಟಿವಾಚಿನಮ್। ರರಾಣೋ ರಾತಿರಭ್ಯಸ್ತಃ, ಬೃಹಸ್ಪತಿ ರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯು-ಚ್ಛತ್, ಬೃಹದುಪವ್ಯಾಖ್ಯಾತಮ್ ॥

ದೇವಾಪಿ ಎಂಬುವನು ಶಂತನು ಎಂಬ ರಾಜನಿಗಾಗಿ ಪುರೋಹಿತನಾಗಿದ್ದನು. ಇವನು ಮಳೆಯು ಬರುವಂತೆ ಮಾಡುವುದಕ್ಕಾಗಿ ನಡೆಸಬೇಕಾದ ಯಜ್ಞದಲ್ಲಿ ದೇವತೆಗಳನ್ನು ಕರೆಯುವ ಮಂತ್ರಗಳನ್ನು ಹೇಳುವ ಹೋತೃ ಎಂಬ ಋತ್ವಿಜನಾಗಿ ಇದ್ದನು. ಇವನು ರಾಜನ ವಿಷಯದಲ್ಲಿ ದಯೆಯುಳ್ಳವನಾಗಿ ಪುರೋಹಿತನಾಗಿ ಇದ್ದುಕೊಂಡು ದೇವತೆಗಳು ಮಳೆಯು ಬರುವಂತೆ ಮಾಡಲು ಪ್ರಾರ್ಥನೆಮಾಡಿದನು. ದೇವತೆಗಳು ಮಳೆಯನ್ನು ಬೇಡುವವನಾದ ಇವನಿಗೋಸ್ಕರವಾಗಿ ಮಳೆಯು ಭೂಮಿಗೆ ಬರುವಂತೆ ಮಾಡಿದರು. ಬೃಹಸ್ಪತಿ ಎಂಬ ದೇವತೆಗಳ (ಮಂತ್ರಿ) ಪುರೋಹಿತನು ಈ ದೇವಾಪಿಗೆ ದೇವತೆಗಳನ್ನು ಯಜ್ಞಕ್ಕಾಗಿ ಬರುವಂತೆ ಮಾಡುವ ಮಂತ್ರಗಳನ್ನು ಪಠಿಸಲು ಅರ್ಹವಾದ ಮಾತುಗಳು ಹೊರಡುವಂತೆ ಮಾಡಿದನು. ಈ ಬೃಹಸ್ಪತಿಯ ಅನುಗ್ರಹಕ್ಕೆ ಪಾತ್ರನಾದ ದೇವಾಪಿಯು ಬೃಹಸ್ಪತಿಯ ವರದಿಂದ ಉಂಟಾದ ವಾಕ್ ಶಕ್ತಿಯಿಂದ ದೇವತೆಗಳು ಮಳೆ ಹುಯ್ಯುವಂತೆ ಮಾಡಿದನು. ಇದು ಈ ಮಂತ್ರದ ಅರ್ಥವಾಗಿದೆ.

ಒಬ್ಬನು ರೋಗಪೀಡಿತನಾಗಿ ಶರೀರವು ನನಗೆ ಸುಖಕರವಾಗಿರಲಿ ಎಂದು ಪ್ರಾರ್ಥಿಸುವನು, ಅನಂತರದಲ್ಲಿ ರೋಗವಿಲ್ಲದವನಾಗಿ ಆಗುವನು. ಇವನನ್ನು 'ಶಂ' = ಸುಖವಾದ ತನು = ಶರೀರವುಳ್ಳವನು ಎಂದು ಹೇಳಿದೆ. ಅಥವಾ ತನಗೆ ದೇವರು ಕೊಟ್ಟಿರುವ ಶರೀರದಿಂದ ಸುಖವನ್ನು ಅನುಭವಿಸುವವನು ಶಂತನು ಎಂದು ಹೇಳಿದೆ. ಯಾವಾಗಲೂ ಸುಖವನ್ನು ಶರೀರಕ್ಕಾಗಿ ಅಪೇಕ್ಷಿಸುವವನು ಶಂತನು ಎಂದೆನಿಸಿಕೊಳ್ಳುವನು ಎಂಬುದಾಗಿ ಈ ಮೂರುವಿಧವಾದ ಅರ್ಥವನ್ನು ಶಂತನು ಶಬ್ದಕ್ಕೆ ಹೇಳಿದೆ.

ರಾಜ್ಯಕ್ಕಾಗಲೀ ಅಥವಾ ತನಗಾಗಲೀ ಒದಗಿರುವ ತೊಂದರೆಯನ್ನು ಪರಿಹರಿಸುವುದಕ್ಕಾಗಿ ನಡೆಸುವ ಕೆಲಸವು ಶಾಂತಿ ಕರ್ಮವೆನಿಸುವುದು. ತನ್ನ ಸಂಬಂಧಿಯಾದ ಶರೀರವೇ ಮೊದಲಾದವುಗಳಿಗೆ ಅಭಿವೃದ್ಧಿಯನ್ನು ಉಂಟು ಮಾಡಲು ಮಾಡತಕ್ಕ ಕರ್ಮವು ಪೌಷ್ಟಿಕವೆನಿಸುವುದು. ಇತರರಿಗೆ ಹಿಂಸೆಯನ್ನುಂಟುಮಾಡುವುದಕ್ಕಾಗಿ ಆಚರಿಸುವ ಕರ್ಮವು ಆಭಿಚಾರಿಕವೆನಿಸುವುದು. ಈ ಪ್ರಕಾರವಾದ ಶಾಂತಿಕ, ಪೌಷ್ಟಿಕ, ಆಭಿಚಾರಿಕ ಕರ್ಮಗಳನ್ನು ಆಚರಿಸಲು ಅರ್ಹವಾದ ಮಂತ್ರಗಳನ್ನೂ, ಕೆಲಸಗಳನ್ನೂ ಮಾಡಲು ಅಥವಾ ಮಾಡಿಸಲು ಮುಂದಾಳಾಗಿರುವವನು ಪುರೋಹಿತನೆನಿಸುವನು. ರಾಜನಿಗೆ ಹೀಗೆ ಕೆಲಸಮಾಡುವವನು ಅವಶ್ಯಕವಾಗಿ ಬೇಕಾಗಿರುವ ಕಾರಣ ಇಂತಹವನನ್ನು ರಾಜನು ತನ್ನ ಮುಂದೆ ಇರಿಸಿಕೊಂಡಿರುವನು. ಇದಕ್ಕಾಗಿಯೇ ಇವನಿಗೆ ಪುರೋಹಿತನೆಂದು ಹೆಸರು ಬಂದಿದೆ.

ದೇವತೆಗಳಿಗಾಗಿ ಸ್ತೋತ್ರಗಳನ್ನು ಪಠನಮಾಡುವವನು ಹೋತೃವೆನಿಸುವನು. ಇವನು ಹೇಳಿದ ಸ್ತುತಿಯನ್ನು ದೇವತೆಗಳು ಕೇಳುತ್ತಾರಾಗಿ ಇವನನ್ನು ದೇವಶ್ರುತನೆಂದು ಕರೆಯುವರು. ಮಂತ್ರಗಳನ್ನು ಹೇಳುವುದರಿಂದ ದೇವತೆಗಳೂ ಕೂಡ ಆ ಮಂತ್ರಗಳ ಅರ್ಥವನ್ನು ತಿಳಿದು ಇವನ ಪ್ರಾರ್ಥನೆಯನ್ನು ನೆರವೇರಿಸುವರು.

ಬೃಹಸ್ಪತಿ, ಬೃಹತಾಂಪತಿಃ ಬೃಹಸ್ಪತಿಃ, ಎಂದು ಬೃಹಸ್ಪತಿ ಶಬ್ದದ ಸಮಾಸಾರ್ಥವಿವರಣೆ. ಬೃಹತ್ ಎಂದರೆ ದೊಡ್ಡದು, ಬಲವಾದದ್ದು ಎಂದು ಅರ್ಥವು. ಮಂತ್ರಗಳೇ ಮುಖ್ಯವಾದ ಕಾರಣವೆಂದು ಧರ್ಮದ ಮುಖ್ಯ ಕಾರಣವು ವಿವೃತವಾಗಿದೆ. ಮಳೆಯು ಬಾರದಿರಲು ಧರ್ಮಕ್ಕೆ ತೊಂದರೆಯು ಉಂಟಾದದ್ದು ಎಂಬ ಕಾರಣವು ಹೇಳಿದೆ. ಜ್ಯೇಷ್ಠನು ಇರುವಾಗ ರಾಜ್ಯದಲ್ಲಿ ಎರಡನೆಯನು ರಾಜನಾಗುವುದು ಎಂಬುವುದು ಧರ್ಮಾತಿಕ್ರಮವು. ಇದರಿಂದ ಮಳೆಯು ಬರಲಿಲ್ಲ ಎಂಬುವುದು ಇದಕ್ಕಾಗಿಯೇ. ದೇವಾಪಿಯು ಧರ್ಮವನ್ನು ರಕ್ಷಣೆಮಾಡಿದನು ಎಂದು ಹೇಳಿದೆ. ಈ ಅರ್ಥವು ಯಜ್ಞವನ್ನು ನಡೆಸುವುದು ಲೋಕರಕ್ಷಣೆಗೆ ಮುಖ್ಯವಾದುದೆಂದು ರಾಜಧರ್ಮವು ಇಲ್ಲಿ ಉಕ್ತವಾಗಿದೆ. ಈ ಅರ್ಥವು ದೇವತಾಪರವಾದುದೆಂದು ಇಲ್ಲಿ ಹೇಳಿದೆ.

ವೃಷ್ಟಿಷೇಣ ಎಂಬ ಪದದ ಅರ್ಥವು ಮಧ್ಯಮವು. ಇವನ ಮಗನು ಅಗ್ನಿ ಎಂಬುದಾಗಿಯೂ, ಈ ಆರ್ಷ್ಟಿಷೇಣನು ದೇವಾಪಿ ಎಂದೂ ಹೇಳಿವೆ. ಇವನು ಯಜಮಾನನಾದ ಶಂತನುವಿಗಾಗಿ ಅನುಕೂಲನಾದನೆಂದು ಹೇಳಿದೆ. ಇದರಲ್ಲಿ ವೃಷ್ಟಿಷೇಣ ಎಂಬ ಪದದಿಂದ ಉಂಟಾದ ಆರ್ಷ್ಟಿಷೇಣ ಮತ್ತು ಈ ಪದದಿಂದ ಕರೆಯಲ್ಪಡುವ ದೇವಾಪಿ, ಶಂತನು ಎಂಬ ಪದಗಳು ಅಗ್ನಿಯಿಂದುಂಟಾಗುವ ದೇಹ ಸಂಬಂಧವಾದ ಸೌಖ್ಯವನ್ನು ಸೂಚನೆಮಾಡಿಕೊಡುತ್ತವೆ. ಎಂಬ ಈ ಅರ್ಥವು ಅಧಿಭೂತ ಎನಿಸುತ್ತದೆ. ಬೃಹಸ್ಪತಿಃ ಎಂಬ ಶಬ್ದವು ವಾಕ್ ಅಧಿಪತಿಯು ಎಂಬ ಅರ್ಥವನ್ನು ವಿವರಿಸುವ ಮೂಲಕ ಮೇಘದಿಂದ ಉಂಟಾಗುವ ಬಲವಾದ ಧ್ವನಿ ಎಂಬ ಅರ್ಥವನ್ನು ಕೊಡತಕ್ಕದ್ದಾಗಿದೆ. ಇದರಿಂದಲೂ ಅಧಿಯಜ್ಞ ರೂಪವಾದ ಅರ್ಥವು ಉಕ್ತವಾಗಿದೆ. (೨-೧೨-೧)

## ಅಥ ಸಾಧಾರಣ ನಾಮಾನಿ

ಸ್ವಃ—ಎಂಬಿವೇ ಮೊದಲಾದ ಆರು ಶಬ್ದಗಳು ಅಂತರಿಕ್ಷಕ್ಕೂ ಸೂರ್ಯನಿಗೂ ಸಹ ಸಮಾನವಾದ ವಿವರಣೆಯನ್ನು ಕೊಡತಕ್ಕವುಗಳು.

**ಇತಿ ದ್ವಾದಶಃ ಖಂಡಃ**

ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು

---

## ಅಥ ತ್ರಯೋದಶಃ ಖಂಡಃ

**ಹದಿಮೂರನೆಯ ಖಂಡವು**

---

ಸಾಧಾರಣಾನ್ಯುತ್ತರಾಣಿ ಷಟ್ । ದಿವಶ್ಚಾದಿತ್ಯಸ್ಯ ಚ । ಯಾನಿ
ತ್ವಸ್ಯ ಪ್ರಾಧಾನ್ಯೇನೋಪರಿಷ್ಟಾತ್ತಾನಿ ವ್ಯಾಖ್ಯಾಸ್ಯಾಮ ಆದಿತ್ಯಃ

ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸೇತಿ ವಾದಿತೇಃ ಪುತ್ರ ಇತಿ ವಾಲ್ಪಪ್ರಯೋಗಂ ತ್ವಸ್ಯೈ ತದಾರ್ಚ್ಯಾಮ್ನಾಯೇ ಸೂಕ್ತಭಾಕ್ಸೂರ್ಯಮಾದಿತೇಯಮದಿತೇಃ ಪುತ್ರಮೇವ ಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ ಭವಂತಿ ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ ಭಗಸ್ಯಾಂಶಸ್ಯೇ ತ್ಯಥಾಪಿ ಮಿತ್ರಾವರಣಯೋಃ । ಆದಿತ್ಯಾ ದಾನುನಸ್ಪತೀ ದಾನಪತೀ । ಅಥಾಪಿ ಮಿತ್ರಸ್ಯೈಕಸ್ಯ। ಪ್ರ ಸ ಮಿತ್ರಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನೇತ್ಯಪಿ ನಿಗಮೋ ಭವತ್ಯಥಾಪಿ ವರುಣಸ್ಯೈಕಸ್ಯ । ಅಥಾ ವಯುನಾದಿತ್ಯ ವ್ರತೇ ತವ । ವ್ರತಮಿತಿ ಕರ್ಮನಾಮ ನಿವೃತ್ತಿಕರ್ಮ ವಾರಯತೀತಿ ಸತ ಇದಮಪೀತರದ್ವ್ರ ತಮೇತಸ್ಮಾದೇವ ವೃಣೋತೀತಿ ಸತೋಽನ್ನಮಪಿ ವ್ರತಮುಚ್ಯತೇ ಯದಾವೃಣೋತಿ ಶರೀರಂ ||೧೩||



## ಅಥ ಸಾಧಾರಣನಾಮಾನಿ

(೧) ಸ್ವಃ (೨) ಪೃಶ್ನಿಃ (೩) ನಾಕಃ (೪) ಗೌಃ (೫) ವಿಷ್ಟಪ್ (೬) ನಭಃ । ಇತಿ ಷಟ್ ಸಾಧಾರಣಾನಿ ||೪||

ಹೀಗೆ ಇವು ಆರು ಸಾಧಾರಣನಾಮಗಳು

ಇವುಗಳ ನಿರ್ವಚನವು ನಿಗಮದೇವತಾಕಾಂಡದಲ್ಲಿ ತೋರಿಸಿದೆ. ದೇವತಾಕಾಂಡದಲ್ಲಿ ಹೇಳಿದ ವ್ಯಾಖ್ಯಾನವು ಪರಿಶಿಷ್ಟದಲ್ಲಿ ಪ್ರದರ್ಶಿತವಾಗಿದೆ.

(೧) ಸ್ವಃ || ಸುಪೂರ್ವಾದರ್ತೇರೀರಯತೇರ್ವಾ "ಅನ್ಯೇಭ್ಯೋಽಪಿ ದೃಶ್ಯಂತೇ" (ಪಾ-ಸೂ-೩-೨-೭೫) ಇತಿ ವಿಚಿ ದೃಶಿಗ್ರಹಣಸ್ಯ ಪ್ರಯೋಗಾನುಸರಣಾರ್ಥತ್ವಾದಕರ್ತರ್ಯಪಿ ಭವತಿ || ಈರಯತೇರೀಕಾರಸ್ಯಾಕಾರೋ ವ್ಯತ್ಯಯೇನ ಗುಣಃ ||

ಋ-ಗತೌ, ಈರ-ಗತೌ ಈ ಎರಡು ಧಾತುಗಳಿಗೆ ಸುಪೂರ್ವದಲ್ಲಿರುವಾಗ 'ಅನ್ಯೇಭ್ಯೋಽಪಿ' ಸೂತ್ರದಿಂದ ವಿಚ್ ಪ್ರತ್ಯಯ. ಅಲ್ಲಿ ಕರ್ತ್ರರ್ಥದಲ್ಲಿ ಹೇಳಿದ್ದರೂ ದೃಶಿಗ್ರಹಣದಿಂದ ಪ್ರಯೋಗಾನುಸಾರಾರ್ಥ ಸ್ವೀಕರಿಸಬಹುದೆಂಬುದರಿಂದ ಇಲ್ಲಿ

ಅಕರ್ತೃರ್ಥದಲ್ಲಿ ಬಂದಿದೆ. ಸು + ಋ ಎಂದಿರುವಾಗ ಗುಣ. ಸು+ಅರ್. ಯಣ್. ಸ್ವರ್. ವಿಚ್‌ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. ಈರ ಧಾತುವಾದರೆ ಣಿಚ್‌ಪರವಾದಾಗ ವ್ಯತ್ಯಯದಿಂದ ಈ ಕಾರಕ್ಕೆ ಅಕಾರಾದೇಶ. ಹಿಂದಿನಂತೆ ಯಣ್ ಬಂದು ಸ್ವರ್ ಎಂದಾಗುತ್ತದೆ. "ಸ್ವರಾದಿನಿಪಾತಮವ್ಯಯಮ್" ಸೂತ್ರದಿಂದ ಅವ್ಯಯಸಂಜ್ಞೆ ಬರುವುದರಿಂದ "ಅವ್ಯಯಾದಾಪ್ ಸುಪಃ" (ಪಾ. ಸೂ. ೨-೪-೮೧) ಸೂತ್ರದಿಂದ ಇದರ ಪರದಲ್ಲಿ ಬಂದ ಸುಪ್‌ವಿಭಕ್ತಿಪ್ರತ್ಯಯಗಳಿಗೆ ಲುಕ್. ಸ್ವರ್. ಅಂತ್ಯದ ರೇಫಕ್ಕೆ "ಖರವಸಾನಯೋರ್ವಿಸರ್ಜನೀಯಃ" (ಪಾ. ಸೂ, ೮-೩-೧೫) ಸೂತ್ರದಿಂದ ವಿಸರ್ಗ. ಸ್ವಃ ರೂಪವಾಗುತ್ತದೆ. ಶೋಭನವಾದ ಗಮನ ಉಳ್ಳದ್ದು, (ಸು+ಅರಣಂ), ಹಿತವಾದ ಗಮನವುಳ್ಳದ್ದು, ಅಥವಾ ಯಾವುದು ಚನ್ನಾಗಿ ಕತ್ತಲೆಯನ್ನು ಹೋಗಲಾಡಿಸುವುದೋ, ಕಿರಣಗಳಿಂದ ಜಲಾದಿಗಳನ್ನು ತೆಗೆದುಕೊಳ್ಳಲು ಚನ್ನಾಗಿ ಮಾಡಲ್ಪಟ್ಟದ್ದು, ಗ್ರಹನಕ್ಷತ್ರಗಳ ಪ್ರಕಾಶ, ಕಾಂತಿಯಿಂದ ಚನ್ನಾಗಿ ಮಾಡಲ್ಪಟ್ಟದ್ದು ಅಥವಾ ಹೊಂದಲ್ಪಟ್ಟದ್ದು, ಸ್ವರ್ ಅಂದರೆ ಸೂರ್ಯ ಅಥವಾ ಸ್ವರ್ಗ. ಕಿರಣರಸದಿಂದ ಇವನ ಶೋಭನ ಗಮನವುಳ್ಳದ್ದು. ಪುಣ್ಯವಂತರಿಂದ ಹೊಂದಲ್ಪಡುವುದು. ತಾನಾಗಿಯೇ ಪ್ರಕಾಶಿತವಾಗಿರುವುದು, ರಸದಿಂದ ಕೂಡಿರುವುದು ಅಥವಾ ಜ್ಯೋತಿಶ್ಚಕ್ರದಿಂದ ಕೂಡಿರುವುದು, ಪ್ರಭೆಯುಳ್ಳದ್ದು ಸ್ವರ್ಗವಾಗುತ್ತದೆ. ಸ್ವರ್ಗಕ್ಕೆ ಉದಾಹರಣೆ—**ಭೂರ್ಭುವಃ ಸ್ವಃ** (ಯ. ವಾ. ಸಂ. ೩-೩೭). ಸೂರ್ಯನಿಗೆ ಉದಾಹರಣೆ—

**ಏಭಿರ್ನೋ ಅರ್ಕೈರ್ಭವಾನೋ ಅರ್ವಾಙ್ ಸ್ವರ್ಣ ಜ್ಯೋತಿಃ** (ಋ. ಸಂ. ೩-೫-೧೦-೩)

(೨) **ಪೃಶ್ನಿಃ ॥ ಪ್ರಪೂರ್ವಾದಶ್ನೋತೇಃ ಸ್ಪೃಶತೇರ್ವಾ "ಘೃಣಿ ಪ್ರಶ್ನಿಪಾರ್ಷ್ಣಿಚೂರ್ಣಿ ಭೂರ್ಣಿ—" (ಉ. ೪-೫೨) ಇತಿ ನಿಪ್ರತ್ಯಯಃ, ಪ್ರಾಶೇಃ ಸ್ಪೃಶೇಶ್ಚ ಪೃಶಭಾವೋ ನಿಪಾತ್ಯತೇ ॥**

ಅಶ-ಭೋಜನೇ. ಇದಕ್ಕೆ ಪ್ರ ಉಪಸರ್ಗಪೂರ್ವದಲ್ಲಿರುವಾಗ ಔಣಾದಿಕ ನಿಪ್ರತ್ಯಯ. ಅಥವಾ ಸ್ಪರ್ಶಾರ್ಥಕ ಸ್ಪೃಶಧಾತುವಿಗೆ ನಿಪ್ರತ್ಯಯ. ನಿಪ್ರತ್ಯಯದೊಡನೆ ಪ್ರಕೃತಿಗೆ ಪೃಶಾದೇಶವೂ ಸೂತ್ರದಿಂದಲೇ ನಿಪಾತಿತವಾಗಿದೆ. ಪೃಶ್ + ನಿ. ಪೃಶ್ನಿಃ. ಇವನನ್ನು ಶುಕ್ಲವರ್ಣವು ಆವರಿಸಿದೆ. ರಸವನ್ನು ಹೊಂದಿದೆ. ಕಾಂತಿಯಿಂದ ಕೂಡಿರುವುದು ಅಥವಾ ಇತರ ಗ್ರಹಗಳ ಕಾಂತಿಯಿಂದ ಅಸ್ಪೃಷ್ಟವಾದದ್ದು. ಪುಣ್ಯವಂತರಿಗೇ ಸ್ವರ್ಗವೆಂದು ಶ್ರುತಿಯು ಹೇಳುವುದರಿಂದ ಜ್ಯೋತಿಸ್ಸಿನಿಂದ ಅಥವಾ ಪುಣ್ಯವಂತರಿಂದ ಕೂಡಿರುವುದು ಎಂದರ್ಥವಾಗುತ್ತದೆ. ಸ್ವರ್ಗಕ್ಕೆ ಉದಾಹರಣೆ—"**ಪೃಶ್ನೇಃ ಪುತ್ರಾ ಉಪಮಾಸೋ ರಭಿಷ್ಠಾಃ**" (ಋ. ಸಂ. ೪-೩-೨೩-೫) ಸೂರ್ಯನಿಗೆ ಉದಾಹರಣೆ—**ಅಯಂ ವೇನಶ್ಚೋದಯತ್ ಪೃಶ್ನಿಗರ್ಭಾಃ** (ಋ. ಸಂ. ೮-೭-೭-೧)

(೩) ನಾಕಃ । **ನಯತೇಃ 'ಪಿನಾಕಾದಯಶ್ಚ' (ಉ-೪-೧೫) ಇತ್ಯಾಕಪ್ರತ್ಯಯಷ್ಟಿಲೋಪಶ್ಚ ನಿಪಾತ್ಯತೇ । ನೇತಾ ರಸಾನಾಮಿತ್ಯಾದಿ ॥**

ಣೀಞ್—ಪ್ರಾಪಣೇ ಧಾತು. ಪಿನಾಕಾದಿಗಣದಲ್ಲಿ ಸೇರಿರುವದರಿಂದ ಆಕಪ್ರತ್ಯಯದೊಡನೆ ಧಾತುವಿನ ಟಿಲೋಪವೂ (ಈ) ನಿಪಾತಿತವಾಗಿದೆ. ನ್ +ಆಕಃ=ನಾಕಃ. ರಸಗಳನ್ನು ಒಯ್ಯುವವನು; ತನ್ನ ಕಿರಣಗಳನ್ನು ಪ್ರಸರಿಸುವವನು, ಜ್ಯೋತಿಶ್ಚಕ್ರಕ್ಕೆ ನಾಯಕನಾದವನೆಂದು ಸೂರ್ಯನ ಪರವಾಗಿ ಅರ್ಥವಾಗುತ್ತದೆ. ಸ್ವರ್ಗಪರವಾದರೆ ಬೇರೆ ರೀತಿ ನಿರ್ವಚನಮಾಡಬೇಕು. ಕಂ ಎಂದರೆ ಸುಖದ ಹೆಸರು. ನ ಕಮ್. ಅಕಮ್. ಅಸುಖ= ದುಃಖವೆಂದರ್ಥ. ನ ಅಕಂ ಯತ್ರ ಸಃ ನಾಕಃ. ಎಲ್ಲಿ

ದುಃಖಲೇಶವೂ ಇಲ್ಲವೋ ಅದು ನಾಕ. 'ನವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಮ್ (ನಿ. ೨-೧೪) ಎಂಬ ಬ್ರಾಹ್ಮಣವಲ್ಲಿ ಹೇಳಿದಂತೆ ಅತ್ಯಂತಸುಖಸ್ಥಾನವಾದದ್ದು ನಾಕ = ಸ್ವರ್ಗ. 'ನ್ನಭ್ರಾಣ್ನಪಾನ್ನವೇದಾ–' (ಪಾ. ಸೂ. ೬-೩-೭೫) ನಞಿಗೆ ಪ್ರಕೃತಿಭಾವ ಹೇಳಿರುವುದರಿಂದ ನ ಲೋಪ ಬರುವುದಿಲ್ಲ. ಸ್ವರ್ಗಕ್ಕೆ ಉದಾಹರಣೆ—

**ನಾಕಸ್ಯ ಪೃಷ್ಠೇ ಅಧಿತಿಷ್ಠತಿ ಶ್ರಿತಃ** (ಋ. ಸಂ. ೨-೧-೧೦-೫) ಸೂರ್ಯನಿಗೆ ಉದಾಹರಣೆ. **ತತ್ರೇ ಅಧಿ ನಾಕೇ ಅಸ್ಮಿನ್** (ಋ. ಸಂ. ೮-೬-೧೮-೨)

**(೪) ಗೌಃ । ವ್ಯಾಖ್ಯಾತಂ ಪೃಥಿವೀನಾಮಸು ॥**

ಪೃಥಿವಿ ಹೆಸರು ಹೇಳುವಾಗ ಇದು ನಿರ್ವಚನ ಮಾಡಲ್ಪಟ್ಟಿದೆ. ಇಲ್ಲಿ ಗಮ್‌ಧಾತುವಿಗೆ ಅಂತರ್ಭಾವಿತಣ್ಯರ್ಥದ ಅರ್ಥವನ್ನು ಹೇಳಬೇಕು. (ಣಿಜಂತಾರ್ಥ ಹೇಳಬೇಕೆಂದರ್ಥ.) ಸೂರ್ಯಮಂಡಲವನ್ನು ಕುರಿತು ಕಿರಣಗಳಿಂದ ಜಲಾದಿಗಳನ್ನು ಹೋಗುವಂತೆ ಮಾಡುವುದು ಅಂತರಿಕ್ಷ. ಆಕಾಶದಲ್ಲಿ ಸಂಚರಿಸುವವನು ಸೂರ್ಯ. ಭೂಮಿಯ ಮೇಲೆ ದೂರ ಹೋಗಿರುವುದು. ಅಥವಾ ಇದರಲ್ಲಿ ಗ್ರಹನಕ್ಷತ್ರಾದಿಗಳು ಹೋಗುತ್ತವೆ ಎಂದರ್ಥವಾಗುವುದರಿಂದ ಗೌಃ ಅಂದರೆ ಅಂತರಿಕ್ಷ. ಇವಕ್ಕೆ ಉದಾಹರಣೆ—

**ಗವಾಮುಭಿ ಗೋಪತಿರೇಕ ಇಂದ್ರ** (ಋ-ಸಂ-೫-೬-೨೩-೬) ಸೂರ್ಯನಿಗೆ ಉದಾಹರಣೆ. **ಉತಾದಃ ಪರುಸೇ ಗವಿ** (ಋ-ಸಂ-೪-೮-೨೨-೩)

**(೫) ವಿಷ್ಟಪ್ ॥ ಷ್ಟಭಿ ಪ್ರತಿಬಂಧೇ (ಕ್ರ್ಯಾ-ಸೌ-ಪ) ವಿಪೂರ್ವಾತ್ ಕ್ವಿಪಿ ಭಕಾರಸ್ಯ ಪಕಾರೋ ವ್ಯತ್ಯಯೇನ । ವಿಷ್ಟಂಭಿರಾವಿಶತೇಽರ್ಥೇ ವರ್ತತೇ ॥ ಯದ್ವಾ ವಿಶೇರೇವ ಬಾಹುಲಕಾದ್ರೂಪ್ರಸಿದ್ಧಿಃ ॥**

ಷ್ಟಭಿ ಸೂತ್ರನಿರ್ದಿಷ್ಟವಾದ ಧಾತು. ವಿ ಉಪಸರ್ಗಪೂರ್ವದಲ್ಲಿರುವಾಗ ಇದಕ್ಕೆ ಕ್ವಿಪ್ ಪ್ರತ್ಯಯ. ವ್ಯತ್ಯಯದಿಂದ ಧಾತು ಭಕಾರಕ್ಕೆ ಪಕಾರಾದೇಶ. ಇಲ್ಲಿ ಈ ಧಾತುವಿಗೆ ಪ್ರವೇಶಾರ್ಥ ತೋರುತ್ತದೆ. ಅಥವಾ ಬಹುಲಗ್ರಹಣದಿಂದ ವಿಶ-ಪ್ರವೇಶನೇ ಧಾತುವಿಗೇ ಅಭಿಮತಪ್ರತ್ಯಯ ಬಂದು ರೂಪಸಿದ್ಧಿಯಾಗುತ್ತದೆ. ಭೂಮಿಯಿಂದ ರಸಗಳನ್ನು ಸ್ವೀಕರಿಸಲು ಅಭಿನಿವಿಷ್ಟವಾಗಿದೆ (ಸ್ವೀಕರಿಸುವ ಕಾರ್ಯಮಾಡುತ್ತವೆ) ಕಿರಣದಿಂದ ವ್ಯಾಪ್ತನಾಗಿರುವವನು, ಸೂರ್ಯನೆಂದರ್ಥ. ಸ್ವರ್ಗವಾದರೋ ಜ್ಯೋತಿಶ್ಚಕ್ರದಿಂದ ಅಥವಾ ಪುಣ್ಯವಂತರಿಂದ ವ್ಯಾಪ್ತವಾಗಿರುತ್ತದೆ. ಉದಾಹರಣೆ—**ಉದ್ಯದ್ ಬ್ರಧ್ನಸ್ಯ ವಿಷ್ಟಪಮ್ ॥** (ಋ.ಸಂ-೬-೫-೬-೧)

**(೬) ನಭಃ ॥ ನಯುತೇರಸುನಿ ಗುಣೇ 'ನಯಃ' ಇತಿ ಸ್ಥಿತೇ ಬಾಹುಲಕಾತ್ ಯಕಾರಸ್ಯ ಭಕಾರಃ । ನಾಕಶಬ್ದೇನ ಸಮಾನೋಽರ್ಥಃ ॥**

ಣೀಞ್-ಪ್ರಾಪಣೇ ಧಾತು. ಇದಕ್ಕೆ ಔಣಾದಿಕ ಅಸುನ್ ಪ್ರತ್ಯಯ ಬಂದಾಗ "ಸರ್ವಧಾತುಕಾ"—ಸೂತ್ರದಿಂದ ಧಾತುವಿನ ಈಕಾರಕ್ಕೆ ಗುಣ. (ಏ) ಅಯಾದೇಶ. ನಯ ಎಂದಿರುವಾಗ ಬಹುಲಗ್ರಹಣದಿಂದ ಯಕಾರಕ್ಕೆ ಭಕಾರಾದೇಶ. ರಸನಾಯಕ ಅಥವಾ ಗ್ರಹನಾಯಕ ಇತ್ಯಾದಿ. ನಾಕಶಬ್ದದಲ್ಲಿ ಹೇಳಿದ ಅರ್ಥವೇ ಇಲ್ಲಿ ಹೇಳಬೇಕು. ಅಥವಾ ಭಾಸನ ಶಬ್ದಕ್ಕೆ ವ್ಯತ್ಯಯದಿಂದ ರೂಪ. ಮಧ್ಯದ ಸಕಾರಕ್ಕೆ ಲೋಪ. ಭನ ಎಂದಿರುವಾಗ ಪರಸ್ಪರ ವರ್ಣವಿಪರ್ಯ ಬಂದರೆ ನಭಃ ಎಂದಾಗು

ತ್ತದೆ. ಸಾಂತಪದ. ಸೂತ್ರಾಂತರದಿಂದ ಈ ಕಾರ್ಯ ಬಾರದಿರುವುದರಿಂದ ಪೃಷೋದರಾದಿಗಣದಲ್ಲಿ ಸೇರಿದೆಯೆಂದು ತಿಳಿಯಬೇಕು. ಅಥವಾ ನಞ್ಪೂರ್ವಕವಾದ ಭಾಧಾತುವಿಗೆ ಅಸುನ್ ಬಂದಾಗ ಟಿಲೋಪ. ನಭಃ ಎಂದಾಗುತ್ತದೆ. ಉದಾಹರಣೆ **" ಜ್ಯೋತಿಷ್ಮತಿ ಪ್ರತಿಮುಂಚ ತೇ ನಭಃ " ॥—ಸ್ವರ್ಜಜ್ಞಾನೋ ನಭಸಾ— (ಋ-ಸಂ-೭-೩-೧೪-೫) ॥**

**ಹೀಗೆ ಇವು ಆರು ಸ್ವರ್ಗ ಮತ್ತು ಸೂರ್ಯರಿಗೆ ಸಾಮಾನ್ಯ ನಾಮಗಳು ॥**

ಸಾಧಾರಣಾನ್ಯುತ್ತರಾಣಿ ಷಡ್ ದಿವಶ್ಚಾದಿತ್ಯಸ್ಯ ಚ ॥

ಸ್ವಃ, ಪೃಶ್ನಿಃ, ನಾಕಃ ಎಂಬ ಮೂರು ಪದಗಳು ಸೂರ್ಯನೆಂಬ ಅರ್ಥವನ್ನೂ, ಬೋಧಿಸುವವುಗಳಾಗಿ ಇರುತ್ತವೆ. ಇವುಗಳಲ್ಲಿ ಅಂತರಿಕ್ಷ ಎಂಬ ಅರ್ಥವನ್ನು ಬೋಧಿಸುವ ಪದಗಳು ಇಲ್ಲಿ ಹೇಳತಕ್ಕವುಗಳಾಗಿದ್ದರೂ ಈ ಪದಗಳಿಂದ ಸೂರ್ಯನೆಂಬ ಅರ್ಥವು ಬರುವ ಕಾರಣ ಎರಡು ವಿಧವಾದ ಅರ್ಥವನ್ನು ಈ ಶಬ್ದಗಳಿಂದ ಹೇಳಬಹುದಾಗಿದೆ. ಇದಕ್ಕಾಗಿಯೇ ಈ ಆರು ಶಬ್ದ ಗಳನ್ನೂ ಬೇರೆಯಾಗಿ ಹೇಳಿದೆ. ಹಿಂದೆ ಹೇಳಿರುವ ಅಂತರಿಕ್ಷ ನಾಮಗಳಲ್ಲಿ ಈ ಶಬ್ದಗಳನ್ನು ಸೇರಿಸಿಲ್ಲ.

ಯಾನಿ ತ್ವಸ್ಯ ಪ್ರಾಧಾನ್ಯೇನೋಪರಿಷ್ಟಾತ್ತಾನಿ ವ್ಯಾಖ್ಯಾಸ್ಯಾಮಃ ॥

ಈ ಪದಗಳಲ್ಲಿ ಸೂರ್ಯನೆಂಬ ಅರ್ಥವು ಮುಖ್ಯವಾಗಿ ದೇವಾತಪರನೆಂಬ ಅರ್ಥವನ್ನು ಬೋಧಿಸುವ ಕಾರಣ ಅವು ಗಳನ್ನು ಹನ್ನೆರಡನೇ ಅಧ್ಯಾಯದಲ್ಲಿ ಹೇಳಿದೆ. ಈ ಪದಗಳು ಮಾತ್ರ ಎರಡರ್ಥಗಳನ್ನು ಕೊಡುವುದರಿಂದ ಅಂತರಿಕ್ಷವನ್ನು ಬೋಧಿಸುವ ಪದಗಳ ಜೊತೆಯಲ್ಲಿ ಈ ನೈಘಂಟುಕ ಕಾಂಡದಲ್ಲಿ ಹೇಳಿದೆ. ಸೂರ್ಯ ಎಂಬ ದೇವತೆಯನ್ನೇ ಅರ್ಥವನ್ನಾಗಿ ಹೇಳುವ ಸವಿತಾ, ಭಗಃ, ಸೂರ್ಯ, ಪೂಷಾ, ಎಂಬಿವೇ ಮೊದಲಾದವುಗಳು, ದೇವತಾ ಕಾಂಡದಲ್ಲಿ ಹೇಳಿದೆ. (೨-೧೩-೨)

ಆದಿತ್ಯಃ ಕಸ್ಮಾದಾದತ್ತೇ ರಸನಾದತ್ತೇ ಭಾಸಂ ಜ್ಯೋತಿ-
ಷಾನಾದೀಪ್ತೋ ಭಾಸೇತಿ ವಾದಿತೇಃ ಪುತ್ರ ಇತಿ ವಾ ॥

ಈ ದೇವತೆಯು ಕಿರಣಗಳಿಂದ ದ್ರವವೆಲ್ಲವನ್ನೂ ಹೀರುವನು. ಆದುದರಿಂದ ಆದತ್ತೇ ಎಂದರೆ ತೆಗೆದುಕೊಳ್ಳುವವನು ಎಂದರ್ಥ. ಇದರಿಂದ ಆದಿತ್ಯನೆನಿಸಿರುವನು. ಇವನು ಬೇರೆ ದೇವತೆಗಳ ಎಂದರೆ, ಚಂದ್ರನೇ ಮೊದಲಾದವರ ಕಾಂತಿಗಳನ್ನು ತನ್ನ ಪ್ರಕಾಶದಿಂದ ಎಳೆಯುವನು. ಇದರಿಂದಲೂ ಆದಿತ್ಯನೆನಿಸುವನು. ತನ್ನ ಕಾಂತಿಯಿಂದ ಎಲ್ಲವೂ ಪ್ರಕಾಶಿಸುವಂತೆ ಮಾಡುವನು. ಮತ್ತು ಅದಿತಿ ಎಂಬ ದೇವತಾ ಸ್ತ್ರೀಗೆ ಮಗನಾಗಿರುವನು ಎಂಬ ನಾಲ್ಕು ವಿಧವಾದ ಅರ್ಥವು ಆದಿತ್ಯ ಶಬ್ದಕ್ಕೆ ಇಲ್ಲಿ ಉಕ್ತವಾಗಿದೆ. (೨-೧೩-೩)

ಅಲ್ಪಪ್ರಯೋಗಂ ತ್ವಸ್ಯೈತದಾರ್ಚಾಭ್ಯಾಮ್ನಾಯೇ ಸೂಕ್ತಭಾಕ್
ಸೂರ್ಯಮಾದಿತೇಯಮದಿತೇಃ ಪುತ್ರಮ್ ॥

ಹತ್ತು ಮಂಡಲಗಳಿಂದ ಕೂಡಿರುವ ಈ ಋಗ್ವೇದದಲ್ಲಿ ಸವಿತಾ' ಪೂಷಾ, ಭಗಃ ಎಂಬ ಶಬ್ದಗಳು ಸೂರ್ಯನೆಂಬ ಅರ್ಥವನ್ನು ಬೋಧಿಸುವುದರಲ್ಲಿ ಬಹಳವಾಗಿ ಪ್ರಯುಕ್ತವಾಗಿವೆ. ಅನೇಕ ಕಡೆಗಳಲ್ಲಿ ಹೇಳಿದೆ, ಆದಿತ್ಯ ಎಂಬ ಶಬ್ದವು

ಕೆಲವು ಕಡೆಗಳಲ್ಲಿ ಮಾತ್ರ ಸೂರ್ಯ ಎಂಬ ಅರ್ಥವನ್ನು ಕೊಡುವುದರಲ್ಲಿ ಪ್ರಯುಕ್ತವಾಗಿದೆ. ಅದಿತಿ ಎಂಬ ದೇವತೆಯ ಪುತ್ರನು ಆದಿತ್ಯನೆಂಬ ಅರ್ಥದಲ್ಲಿಯೇ ಆದಿತ್ಯ ಶಬ್ದವು ಪ್ರಯುಕ್ತವಾಗಿದೆ. ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಅಧ್ವರ್ಯುನೆಂಬ ಋತ್ವಿಜನು ಯಜ್ಞದಲ್ಲಿ ಆಹ್ವಾನಿಸಬೇಕೆಂದು ಆಯಾಯಾ ಸೂಕ್ತಗಳಲ್ಲಿ ಹೇಳಲಿಲ್ಲ. ನಿಘಂಟುವಿನಲ್ಲಿ ಈ ಕ್ರಮವನ್ನು ಹೇಳಿರುವ ಕಾರಣ ಪ್ರಾಧಾನ್ಯದಿಂದ ಸೂರ್ಯನನ್ನು ಬೋಧಿಸುವ ಪದಗಳೂ, ಆದಿತ್ಯನನ್ನು ಬೋಧಿಸುವ ಪದಗಳೂ, ಇವೆರಡಕ್ಕೂ ಇರುವ ಪ್ರಯೋಗಗಳ ಹೆಚ್ಚು ಕಡಿಮೆಯನ್ನು ಇಲ್ಲಿ ತೋರಿಸಿದೆ. " ಯದೇದೇನಂ " ಎಂಬ ಮಂತ್ರದಲ್ಲಿ ಇದನ್ನು ಹೇಳಿದೆ. ಕೆಲವರು ಆದಿತ್ಯ ಎಂಬ ಪದವು ಕೆಲವು ಕಡೆಗಳಲ್ಲಿ ಮಾತ್ರ ಸೂರ್ಯ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳುತ್ತಾರೆ. ಈ ಅರ್ಥವು ಸರಿಯಾಗಿಲ್ಲವೆಂದು ಕೆಲವರ ಅಭಿಪ್ರಾಯವು. ಆದಿತ್ಯಪದದಿಂದ ಹವಿಸ್ಸನ್ನು ಸ್ವೀಕರಿಸುವ ದೇವತೆಯನ್ನು ಕರೆಯುವರು ಎಂದು ಆರು ಮಂತ್ರಗಳನ್ನೊಳಗೊಂಡಿರುವ ಸೂಕ್ತದಲ್ಲಿ ಈ ಮಂತ್ರವು ಸೇರಿದೆ. ಈ ಮಂತ್ರದಲ್ಲಿ ಎರಡು ವಾಕ್ಯವನ್ನು ಮಾಡಿಕೊಂಡು ಆದಿತ್ಯನೇ ಹವಿಸ್ಸನ್ನು ಹೊಂದುವವನು ಎಂದು ಕೆಲವರು. ಈ ಸೂಕ್ತದಲ್ಲಿ ಹೇಳಿರುವವನು ಇವನೇ ಎಂಬುದು ಎಂದು ಅರ್ಥ ಮಾಡಿರುತ್ತಾರೆ. ಆದಿತ್ಯ ಎಂಬ ಶಬ್ದಕ್ಕೆ ಹವಿಸ್ಸು ಎಂಬ ಅರ್ಥವನ್ನು ಮಾಡುವುದು ಸರಿಯಾಗಿಲ್ಲವೆಂದು ಕೆಲವರ ಅಭಿಪ್ರಾಯವು. ಹೀಗೆಯೇ ಆದಿತ್ಯ ಶಬ್ದಕ್ಕೆ ಸೂರ್ಯ, ಅದಿತಿಪುತ್ರ, ಹವಿಸ್ಸು ಎಂಬ ಮೂರು ಅರ್ಥಗಳಲ್ಲಿ ಈ ನಿಘಂಟು ಕಾಂಡದಲ್ಲಿ ಮಂತ್ರದಲ್ಲಿ ಹೇಳಿರುವ ಅರ್ಥವನ್ನು ಮಾತ್ರ ಹೇಳಿದೆ. (೨-೧೩-೪)

ಏವಮನ್ಯಾಸಾಮಪಿ ದೇವತಾನಾಮಾದಿತ್ಯಪ್ರವಾದಾಃ ಸ್ತುತಯೋ
ಭವಂತಿ ॥ ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋ ದಕ್ಷಸ್ಯ
ಭಗಸ್ಯಾಂಶಸ್ಯೇತಿ ॥

ಹೀಗೆಯೇ ಆದಿತ್ಯ ಶಬ್ದಕ್ಕೆ ಸೂರ್ಯ ಎಂಬ ಅರ್ಥದಲ್ಲಿರುವ ಪ್ರಾಧಾನ್ಯ, ಗೌಣಪ್ರಯೋಗಗಳು ವೇದದಲ್ಲಿ ಕಂಡು ಬರುವಂತೆ ಬೇರೆ ದೇವತೆಗಳ ಹೆಸರನ್ನು ಹೇಳತಕ್ಕ ಪದಗಳೂ ಕೂಡ ಆದಿತ್ಯನನ್ನು ಬೋಧಿಸುವವುಗಳಾಗಿ ಇರುತ್ತವೆ. ಮಿತ್ರ ವರುಣ, ಆರ್ಯಮ, ದಕ್ಷ, ಭಗ, ಅಂಶು ಎಂಬ ಆರು ಶಬ್ದಗಳು ಸೂರ್ಯನನ್ನು ಬೋಧಿಸುವವುಗಳಾದಾಗ್ಯೂ ಆದಿತ್ಯ ಶಬ್ದ ವಾಚ್ಯಗಳಾಗಿರುವವು ಎಂದು ಉದಾಹರಣೆಯನ್ನು ಕೊಟ್ಟಿದೆ. " ಇಮಾ ಗಿರ ಆದಿತ್ಯೇಭ್ಯೋ " ಎಂಬ ಈ ಮಂತ್ರದಲ್ಲಿ ಈ ಶಬ್ದಗಳನ್ನು ಈ ಅರ್ಥದಲ್ಲಿ ಹೇಳಿದೆ.

ಅಥಾಪಿ ಮಿತ್ರಾವರುಣಯೋಃ—" ಆದಿತ್ಯಾ ದಾನುನಸ್ಪತೀ "
ದಾನಪತೀ ॥

" ಆದಿತ್ಯಾ ದಾನುನಸ್ಪತೀ " ಎಂಬ ಪದಗಳಿಗೆ ಅರ್ಥವು ಇಲ್ಲಿ ಹೇಳಿದೆ. ದಾನುನಸ್ಪತೀ ಎನ್ನುವುದಕ್ಕೆ ದಾನಪತೀ, ದಾನಮಾಡುವವರಲ್ಲಿ ಉತ್ತಮರು ಎಂಬ ಅರ್ಥವನ್ನು ಹೇಳಿದೆ. ಮಿತ್ರ, ವರುಣ ಎಂಬ ದೇವತೆಗಳು ಆದಿತ್ಯ ಪದದಿಂದ ಬೋಧ್ಯರೆಂದೂ, ಅದಿತಿಯ ಮಕ್ಕಳೆಂದೂ, ದಾನಮಾಡುವವರಲ್ಲಿ ಉತ್ತಮರೆಂದೂ, ಯಜ್ಞಮಾಡುವ ಯಜಮಾನರುಗಳು ಯಜ್ಞದಲ್ಲಿ ಸ್ತೋತ್ರಮಾಡಿ ಆಯಾಯ ಫಲಗಳನ್ನು ಹೊಂದಿದ್ದಾರೆ ಎಂದೂ ಈ ಮಂತ್ರದಲ್ಲಿ ಹೇಳಿದೆ ಇದರಿಂದ ಮಿತ್ರಾ ವರುಣ ಎಂಬ ದೇವತೆಗಳೂ ಕೂಡ ಅದಿತಿಯ ಮಕ್ಕಳು ಎಂಬುದಾಗಿಯೂ, ಆದಿತ್ಯಪದದಿಂದ ಉಕ್ತವಾಗಿದೆ. [೨-೧೩-೬]

ಅಥಾಪಿ ಮಿತ್ರಸ್ಯೈಕಸ್ಯ—"ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನ" ಇತ್ಯಪಿ ನಿಗಮೋ ಭವತಿ ॥

"ಪ್ರ ಸ ಮಿತ್ರ" ಎಂಬ ಈ ಮಂತ್ರದಲ್ಲಿ ಆದಿತ್ಯಶಬ್ದಕ್ಕೆ ಮಿತ್ರ ಎಂಬ ಅರ್ಥವು ಉಕ್ತವಾಗಿದೆ. ಯಜ್ಞದಲ್ಲಿ ಯಜಮಾನನು ಹೇ ಆದಿತ್ಯ ಮಿತ್ರ ಎಂಬ ಶಬ್ದಗಳಿಂದ ಒಂದು ದೇವತೆಯನ್ನು ಸ್ತೋತ್ರಮಾಡಿದ್ದಾನೆ. ಈ ದೇವತೆಯು ಬಹಳ ಮಹಿಮೆಯುಳ್ಳವನು. ಈ ದೇವತೆಯನ್ನು ಕುರಿತು ಯಾಗಮಾಡಿದವನು ಈ ದೇವತೆಗೆ ಹವಿಸ್ಸನ್ನು ಸಂಸ್ಕಾರಮಾಡಿ ಹೋಮ ಮಾಡುವನು. ಇದರಿಂದ ಬಹಳ ಅನ್ನವನ್ನು ಪೊಂದುವನು. ಈ ದೇವತೆಯಿಂದ ರಕ್ಷಣೆಯನ್ನು ಹೊಂದಿ ಶತ್ರುಗಳು ಯಾರಿಂದಲೂ ಜಯಿಸಲು ಅಶಕ್ಯನಾಗುವನು. ಇನ್ನೊಬ್ಬನಿಗೆ ಅಧೀನನಾಗಿಲ್ಲದಿರುವನು. ಈ ದೇವತೆಯ ಅನುಗ್ರಹವನ್ನು ಪಡೆದವನು ಯಾವವಿಧವಾದ ಪಾಪಸಂಬಂಧದಿಂದಲೂ ಕೂಡಿರುವುದಿಲ್ಲವು. ಪಾಪವೆಂಬುವುದು ವಾಕ್ಕು, ಮನಸ್ಸು, ಕೆಲಸ ಇವುಗಳಿಂದ ಉಂಟಾಗುತ್ತಕ್ಕದ್ದು. ಈ ಪಾಪಕರವಾದ ದೃಷ್ಟಿಯು ಕಂಡುಬಂದ ಕೂಡಲೇ ದೇವತಾ ಅನುಗ್ರಹಪಾತ್ರನಾದವನಿಗೆ ವ್ಯಾಪಿಸಲ ವಕಾಶಕೊಡುವುದಿಲ್ಲ. ಮತ್ತು ಈ ದೇವತೆಯ ಅನುಗ್ರಹಕ್ಕೆ ಪಾತ್ರನಾದವನ ಮಕ್ಕಳುಗಳು, ಅಣ್ಣತಮ್ಮಂದಿರು, ಹೆಂಡತಿ ಮೊದಲಾದವರೂ ಕೂಡ ತಿರಸ್ಕರಿಸಲು ಶಕ್ಯರಾಗುವುದಿಲ್ಲ. ಈ ಪ್ರಕಾರವಾದ ಬಹಳ ಮಟ್ಟಿನ ಮಹಿಮೆಯನ್ನು ಈ ದೇವತೆಯನ್ನು ಆಶ್ರಯಮಾಡಿದವನಿಗೆ ಉಂಟುಮಾಡುವ ಕಾರಣ ಈ ದೇವತೆಯ ಮಹಿಮೆಯು ಊಹಿಸಲೂ ಕೂಡ ಅಶಕ್ಯವಾದದ್ದು ಎಂದು ಹೇಳಿದೆ. ಇದರಿಂದಲೇ ಈ ಮಿತ್ರ ಎಂಬ ದೇವತೆಯನ್ನು ಯಜ್ಞದಲ್ಲಿ ಯಜಮಾನನು ಸ್ತುತಿಮಾಡಿ ಹವಿಸ್ಸನ್ನು ಕೊಟ್ಟು ಪ್ರಾರ್ಥನೆಮಾಡುವನು ಎಂದು ಹೇಳಿದೆ. [೨-೧೩-೭]

ಅಥಾಪಿ ವರುಣಸ್ಯೈಕಸ್ಯ—"ಅಥಾ ವಯಮಾದಿತ್ಯ ವ್ರತೇ ತವ। ವ್ರತಮಿತಿ ಕರ್ಮನಾಮ ವೃಣೋತೀತಿ ಸತಃ ॥ ಇದಮಪೀತರದ್ ವ್ರತಮೇತಸ್ಮಾದೇವ ನಿವೃತ್ತಿಕರ್ಮ ವಾರಯತೀತಿ ಸತಃ ॥ ಅನ್ನಮಪಿ ವ್ರತಮುಚ್ಯತೇ ಯದಾವೃಣೋತಿ ಶರೀರಮ್ ॥

ಆದಿತ್ಯ ಶಬ್ದಕ್ಕೆ ವರುಣನು ಎಂಬ ದೇವತೆಯು ಎಂದು ಅರ್ಥವಾಗುವುದು. ಈ ವಿಷಯದಲ್ಲಿ "ಅಥಾವಯಮಾದಿತ್ಯ" ಎಂಬ ಮಂತ್ರದಲ್ಲಿ ಹೇಳಿರುವುದು ಉದಾಹರಣೆಯಾಗಿದೆ. ಈ ಮಂತ್ರದಲ್ಲಿ ವರುಣನೆಂಬ ದೇವತೆಯನ್ನು ವರುಣ ಎಂಬ ಶಬ್ದದಿಂದಲೂ, ಆದಿತ್ಯ ಎಂಬ ಶಬ್ದದಿಂದಲೂ ಸಂಬೋಧಿಸಿ ಹೇಳಿದೆ. ಆದಿತ್ಯ ಎಂಬ ಶಬ್ದಕ್ಕೆ ಅದಿತಿಯ ಮಗನೆಂದೂ ಹೇಳಿ ಈ ದೇವತೆಯು ನಮಗೆ ಸಂಬಂಧಪಟ್ಟಿರುವ ಮೂರು ವಿಧವಾದ ಪಾಶಗಳಿಂದ ನಮ್ಮನ್ನು ಬಿಡುಗಡೆ ಮಾಡಲಿ. ಇದರಿಂದ ನಾವುಗಳು ಪರಿಶುದ್ಧರಾಗುವೆವು. ಮೂರು ವಿಧವಾದ ನಮ್ಮ ಪಾಶಗಳಿಂದ ಬಿಡುಗಡೆಯನ್ನು ಹೊಂದಿದವರಾಗಿ ನಮ್ಮ ನಮ್ಮ ಸ್ವಾತಂತ್ರ್ಯವನ್ನು ಹೊಂದಿ ವೃದ್ಧಿಯನ್ನು ಹೊಂದುವ ವಿಷಯದಲ್ಲಿ ಯೋಗ್ಯವಾದ ಆಯಾಯ ನಿಯಮಗಳಿಂದ ಕೂಡಿ ಇರುವೆವು ಎಂದು ಪ್ರಾರ್ಥನೆಯು ಉಕ್ತವಾಗಿದೆ.

'ವ್ರತ' ಶಬ್ದವು 'ವೃ' ಧಾತುವಿನಿಂದ ನಿಷ್ಪನ್ನವಾಗಿ ಒಳ್ಳೆಯದನ್ನಾಗಲೀ ಅಥವಾ ಕೆಟ್ಟದನ್ನಾಗಲೀ ಫಲವನ್ನು ಹೊಂದಲು ಅನುಕೂಲವಾದ ಕರ್ಮಾರ್ಜನೆಯು. ಇದರಂತೆಯೇ ಯಜ್ಞದಲ್ಲಿ ಅಗ್ನಿಯ ಸಮೀಪವನ್ನು ಕುರಿತು ಬರುವವರನ್ನು

ತಪ್ಪಿಸುವ ಕೆಲಸವು ವ್ರತವೆನಿಸುತ್ತದೆ. ಇದನ್ನೇ ಯಮ ಮತ್ತು ನಿಯಮ ಎಂಬ ಶಬ್ದಗಳಿಂದ ವ್ಯವಹರಿಸಿ ಸ್ತ್ರೀ ಪುರುಷರಿಬ್ಬರಿಗೂ ಒಂದು ವಿಧವಾದ ಸ್ವೇಚ್ಛಾಪ್ರವೃತ್ತಿಯನ್ನು ನಿಲ್ಲಿಸುವುದು ವ್ರತವೆನಿಸುವುದು. ಇದಕ್ಕಾಗಿಯೇ 'ವಾರಯತೀತಿ ವ್ರತಂ' ಎಂದೂ ಅರ್ಥವನ್ನು ಹೇಳಿದೆ. ಶರೀರವೆಲ್ಲವನ್ನೂ ವ್ಯಾಪಿಸಿ ಅಭಿವೃದ್ಧಿಯನ್ನು ಕೊಡುವ ಕಾರಣ ಅನ್ನವು ವ್ರತವೆನಿಸುತ್ತದೆ. ರಸ ಎಂದರೆ ರುಚಿಯುಂಟಾಗುವ ಅಥವಾ ಶರೀರವನ್ನು ವೃದ್ಧಿಗೊಳಿಸುವ ರಕ್ತ, ಮಾಂಸ, ಮೇದಸ್ಸು, ಮಜ್ಜ, ಮೂಳೆ ಇವುಗಳ ರೂಪದಿಂದ ಶರೀರ ರೂಪದಲ್ಲಿ ಪರಿಣಾಮವನ್ನು ಹೊಂದುವ ಕಾರಣ "ಆವೃಣೋತಿ ಶರೀರಂ" ಎಂದು ಅರ್ಥ ಮಾಡಿ ಇದೆ. ಇದರಿಂದ ವ್ರತ ಶಬಕ್ಕೆ ಮೂರು ವಿಧವಾದ ಅರ್ಥವನ್ನು ವಿವರಿಸಿದೆ. (೨-೧೩-೮)

**ಇತಿ ತ್ರಯೋದಶಃ ಖಂಡಃ**

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು

---

## ಅಥ ಚತುರ್ದಶಃ ಖಂಡಃ

### ಹದಿನಾಲ್ಕನೆಯ ಖಂಡವು

---

ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ ಸ್ವೃತೋ ರಸಾನ್ಸ್ವೃತೋ ಭಾಸಂ ಜ್ಯೋತಿಷಾಂ। ಸ್ವೃತೋ ಭಾಸೇತಿ ವೈತೇನ ದ್ಯೌರ್ವ್ಯಾಖ್ಯಾತಾ। ಪೃಶ್ನಿರಾದಿತ್ಯೋ ಭವತಿ ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ। ಸಂಸ್ಪ್ರಷ್ಟಾ ರಸಾನ್ತ್ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ ಸಂಸ್ಪೃಷ್ಟೋ ಭಾಸೇತಿ ವಾಥ ದ್ಯೌಃ ಸಂಸ್ಪೃಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ। ನಾಕ ಆದಿತ್ಯೋ ಭವತಿ ನೇತಾ ರಸಾನಾಂ ನೇತಾ ಭಾಸಾಂ ಜ್ಯೋತಿಷಾಂ ಪ್ರಣಯೋಽಥ ದ್ಯೌಃ ಕಮಿತಿ ಸುಖನಾಮ ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ ನ ವಾ ಅಮುಂ ಲೋಕಂ ಜಗ್ಮುಷೇ ಕಿಂ ಚ ನಾಕಂ। ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ। ಗೌರಾದಿತ್ಯೋ ಭವತಿ ಗಮಯತಿ ರಸಾನ್ಗಚ್ಛತ್ಯಂತರಿಕ್ಷೇಽಥ ದ್ಯೌರ್ಯತ್ಪೃಥಿವ್ಯಾ ಅಧಿ ದೂರಂಗತಾ ಭವತಿ ಯಚ್ಚಾಸ್ಯಾಂ ಜ್ಯೋತೀಂಷಿ ಗಚ್ಛಂತಿ। ವಿಷ್ಟಬಾದಿತ್ಯೋ ಭವತ್ಯಾವಿಷ್ಟೋ ರಸಾನಾವಿಷ್ಟೋ ಭಾಸಂ ಜ್ಯೋತಿಷಾಮಾವಿಷ್ಟೋ ಭಾಸೇತಿ ವಾಥ ದ್ಯೌರಾವಿಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ। ನಮ ಆದಿತ್ಯೋ ಭವತಿ ನೇತಾ ಭಾಸಾಂ

ನೇತಾ ಭಾಸಾಂ ಜ್ಯೋತಿಷಾಂ ಪ್ರಣಯೋಽಪಿ ವಾ ಭನ ಏವ ಸ್ಯಾದ್ವಿ-
ಪರೀತೋ ನ ನ ಭಾತೀತಿ ವೈತೇನ ದ್ಯೌರ್ವ್ಯಾಖ್ಯಾತಾ ॥ ೧೪ ॥

ಸ್ವರಾದಿತ್ಯೋ ಭವತಿ ಸು ಅರಣಃ,—ಸು ಈರಣಃ । ಸ್ವೃತೋ ರಸಾ೯ ।
ಸ್ವೃತೋ ಭಾಸಂ ಜ್ಯೋತಿಷಾಮ್ । ಸ್ವೃತೋ ಭಾಸೇತಿ ವಾ । ಏತೇನ
ದ್ಯೌರ್ವ್ಯಾಖ್ಯಾತಾ ॥

ಆದಿತ್ಯ ಎಂಬ ಶಬ್ದಕ್ಕೆ ಸರಿಯಾಗಿ ನಡೆಯುವವನು ಎಂದರೆ ಪ್ರಪಂಚವೆಲ್ಲವೂ ಒಂದೇ ಸಮನಾಗಿ ಆಯಾಯ ವ್ಯಾಪಾರಗಳನ್ನು ನಡೆಸುವಂತೆ ಮಾಡುವವನು ಎಂಬರ್ಥವನ್ನು ಹೇಳಿ, 'ಸ್ವ' ಶಬ್ದಕ್ಕೆ ಆದಿತ್ಯನೆಂದು ಅರ್ಥವನ್ನು ಹೇಳಿದೆ. ಕತ್ತಲೆಗಳನ್ನು ಅಥವ ಅಜ್ಞಾನಗಳನ್ನು ನಾಶಪಡಿಸುವವನು ಎಂಬರ್ಥದಿಂದಲೂ ಆದಿತ್ಯನೆಂದು ಹೇಳಿದೆ.

ಭೂಮಿಗೆ ಅಥವಾ ಅಂತರಿಕ್ಷಕ್ಕೆ ನೀರನ್ನು ಅಮೃತವನ್ನು ಕೊಡುವುದಕ್ಕಾಗಿ ಸಿದ್ಧವಾಗಿರುವವನು ಆದಿತ್ಯನಾಗಿರುವನು.
ಗ್ರಹ ನಕ್ಷತ್ರ ಇವೇ ಮೊದಲಾದ ಬೆಳಕನ್ನು ಕೊಡುವ ಜ್ಯೋತಿಶ್ಚಕ್ರದಲ್ಲಿದ್ದುಕೊಂಡು ಅವುಗಳೆಲ್ಲಕ್ಕೂ ಕಾಂತಿಯನ್ನು ಉಂಟುಮಾಡುವವನು ಆದಿತ್ಯನೆನಿಸುವನು.

ಬಹಳವಾದ ಪ್ರಕಾಶದಿಂದ ಕೂಡಿರುವವನು ಅಥವಾ ಬಹಳ ಪ್ರಕಾಶವನ್ನು ಉಂಟುಮಾಡುವವನು ಆದಿತ್ಯನಾಗಿರುವನು ಎಂದು ಐದು ವಿಧವಾದ ಅರ್ಥಗಳನ್ನು ಆದಿತ್ಯ ಶಬ್ದಕ್ಕೆ ಹೇಳಿದೆ. ಈ ಅರ್ಥಗಳೆಲ್ಲವೂ ಅಂತರಿಕ್ಷವಾಚಕವಾದ 'ಸ್ವಃ' ಎಂಬ ಅವ್ಯಯದೊಡನೆ ಆಯಾಯ ಕ್ರಿಯಾಪದಗಳು ಸೇರಿ ಆಯಾಯ ಅರ್ಥ ಬದಲಾವಣೆಯಿಂದ ಆದಿತ್ಯನೆಂಬ ಅರ್ಥವನ್ನು ಕೊಡುತ್ತವೆ. ಇದರಿಂದ ಆದಿತ್ಯ ಶಬ್ದಕ್ಕೂ, 'ಸ್ವಃ' ಎಂಬ ಶಬ್ದಕ್ಕೂ ಅರ್ಥವು ಸಮಾನವಾಗಿದೆಯೆಂದು ಹೇಳಿದೆ.

ಪೃಶ್ನಿರಾದಿತ್ಯೋ ಭವತಿ—ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ
ಸಂಸ್ಪ್ರಷ್ಟಾ ರಸಾ೯ । ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಮ್ । ಸಂಸ್ಪೃಷ್ಟೋ
ಭಾಸೇತಿ ವಾ ॥ ಅಥ ದ್ಯೌಃ ಸಂಸ್ಪೃಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ ॥

ಸ್ವಃ ಪೃಶ್ನಿಃ ನಾಕಃ ಎಂಬ ಆದಿತ್ಯ ಸಾಧಾರಣ ನಾಮಗಳಲ್ಲಿ ಸ್ವ ಶಬ್ದಕ್ಕೆ ಅರ್ಥವನ್ನು ವಿವರಿಸಿದನಂತರ ಪೃಶ್ನಿಃ ಎಂಬ ಶಬ್ದಾರ್ಥವು ಇಲ್ಲಿ ವಿವರಿಸಲಾಗುತ್ತದೆ. ಬಹಳಮಟ್ಟಿಗೆ ಪ್ರಪಂಚವೆಲ್ಲವನ್ನೂ ವ್ಯಾಪಿಸುವುದು ಎಂಬರ್ಥದಿಂದ ಪ್ರಕಾಶಗೊಳಿಸುವುದು ಎಂಬರ್ಥವನ್ನು ವಿವರಿಸಿ, ಪೃಶ್ನಿ ಎಂದರೆ ಆದಿತ್ಯನು ಎಂದು ಅರ್ಥವನ್ನು ಮಾಡಿದೆ. ಯಾವಾಗಲೂ ಬಹಳಮಟ್ಟಿನ ಕಾಂತಿಯನ್ನು ಕೊಡುವ ವರ್ಣದಿಂದಿರುವವನು ಎಂದು ಅರ್ಥವು.

ಎಲ್ಲಾ ಕಾಲದಲ್ಲಿಯೂ ದ್ರವದ್ರವ್ಯಗಳನ್ನು ಕೂಡಿರುವವನು. ಈ ಕೆಲಸವೇ ಇವನದಾಗಿರುವುದು. ಇದನ್ನೇ ದೈವತಕಾಂಡದಲ್ಲಿ " ರಸಾದಾನಂ ಅಸ್ಯ ಕರ್ಮ " ಎಂದು ಹೇಳಿದೆ.

ಗ್ರಹ ನಕ್ಷತ್ರ, ಚಂದ್ರ ಎಂಬ ಬೆಳಕನ್ನು ಕೊಡುವವುಗಳೆಲ್ಲವೂ ಈ ಆದಿತ್ಯನ ಸಂಬಂಧದಿಂದ ತಮ್ಮ ಕಾಂತಿಯನ್ನು ಬಿಡುವುವು ಎಂದು ಅರ್ಥವನ್ನು ಹೇಳಿದೆ. ಬಹಳ ಕಾಂತಿಯಿಂದ ಇವನು ಕೂಡಿರುವವನು ಎಂದು ಪೃಶ್ನಿ ಶಬ್ದಕ್ಕೆ ಮೂರು

ವಿಧವಾದ ಅರ್ಥವನ್ನು ಮಾಡಿದೆ. ಕಾಂತಿಯಿಂದಲೂ, ಪುಣ್ಯವಂತರುಗಳಿಂದಲೂ ಕೂಡಿರುವ ಕಾರಣ ಪೃಶ್ನಿ ಶಬ್ದ ವಾಚ್ಯವಾದ ಆದಿತ್ಯನಂತೆ ಅಂತರಿಕ್ಷವೂ ಉಕ್ತವಾಗುವ ಕಾರಣ ಪೃಶ್ನಿ ಶಬ್ದವು ಉಭಯ ಸಾಮಾನ್ಯವೆನಿಸಿರುತ್ತದೆ.

ನಾಕ ಆದಿತ್ಯೋ ಭವತಿ—ನೇತಾ ರಸಾನಾಮ್ । ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ ॥ ಅಥ ದ್ಯೌಃ । ಕಮಿತಿ ಸುಖನಾಮ, ತತ್ ಪ್ರತಿಷಿದ್ಧಂ ಪ್ರತಿಷಿಧ್ಯೇತ । "ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಮ್ ।" ನ ವಾ ಅಮುಂ ಲೋಕಂ ಗತವತೇ ಕಿಞ್ಚ ನಾ-ಸುಖಂ, ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ ॥

ರಸಗಳನ್ನು ಅಂದರೆ ನೀರುಗಳನ್ನು ಮತ್ತು ಬೆಳಕನ್ನೂ ಸಹ ಎಲ್ಲಾ ದಿಕ್ಕುಗಳಿಗೂ ಒಂದೇ ಸಮನಾಗಿ ಬರುವಂತೆ ಹಂಚುವವನು ಆದಿತ್ಯನು ಎಂದು ನಾಕ ಶಬ್ದಕ್ಕೆ ಅರ್ಥವನ್ನು ಹೇಳಿದೆ. ಈ ದೇವನ ಕಿರಣಗಳ ಕಾಂತಿಯು ಜ್ಯೋತಿಶ್ಚಕ್ರಗಳಲ್ಲಿ ಸಂಬಂಧಿಸಿ ಬಹಳಮಟ್ಟಿಗೆ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿರುವುದರಿಂದ "ಜ್ಯೋತಿಷಾಂ ಪ್ರಣಯಃ" ಎಂದು ಆದಿತ್ಯನಿಗೆ ಹೇಳಿದೆ.

'ಕಂ' ಎಂದರೆ ಸುಖವೆಂದು ಅರ್ಥ. ಸುಖವನ್ನು ನಾಶಪಡಿಸುವುದು. 'ಅಕಂ' ಎನಿಸುವುದು. ಅದನ್ನು ನಾಶಪಡಿಸುವುದು ನಾಕವೆನಿಸುತ್ತದೆ. ಇದರಿಂದ ಸುಖವು ಎಂಬ ಅರ್ಥವು ನಾಕ ಶಬ್ದದಿಂದ ಉಂಟಾಗುತ್ತನೆದೆ. ಈ ಸುಖವಾಚಕವು ದ್ಯು ಶಬ್ದವಾಗಿದೆ.

ಈ ಲೋಕವನ್ನು ಹೊಂದಿದವನಿಗೆ ಯಾವಾಗಲೂ ಸುಖವೇ ಉಂಟಾಗುತ್ತದೆ. ಪುಣ್ಯವನ್ನು ಮಾಡಿದವರು ಇಲ್ಲಿಗೆ ಬಂದು ಸೇರುತ್ತಾರೆ. ಇವರಿಗೆ ಸುಖವನ್ನುಂಟುಮಾಡುವ ಪ್ರದೇಶವು ಸ್ವರ್ಗವೆನಿಸಿಕೊಂಡು ನಾಕ ಶಬ್ದಕ್ಕೆ ಅರ್ಥವಾಗಿದೆ. ನಾಕ ಎಂಬ ಶಬ್ದದಿಂದ ಆದಿತ್ಯ, ಅಂತರಿಕ್ಷ ಇವೆರಡು ಅರ್ಥವೂ ಇಲ್ಲಿ ವಿವೃತವಾಗಿದೆ.

ಗೌರಾದಿತ್ಯೋ ಭವತಿ—ಗಮಯತಿ ರಸಾ ॥ ಗಚ್ಛತ್ಯಂತರಿಕ್ಷೇ ಅಥ ದ್ಯೌರ್ಯತ್ ಪೃಥಿವ್ಯಾ ಅಧಿ ದೂರಂ ಗತಾ ಭವತಿ ಯಚ್ಚಾಸ್ಯಾಂ ಜ್ಯೋತೀಂಷಿ ಗಚ್ಛಂತಿ ॥

ಗೋ ಶಬ್ದವು ಆದಿತ್ಯನನ್ನು ಬೋಧಿಸುವುದು. ನೀರನ್ನು ಭೂಮಿಗೆ ಸೇರಿಸುವುದು ಅಥವಾ ನೀರನ್ನು ಭೂಮಿಯಿಂದ ಎಳೆಯುವುದು ಅಥವಾ ಅಂತರಿಕ್ಷಕ್ಕೆ ಸೇರಿಸುವುದು ಎಂಬರ್ಥದಿಂದ ಗೋ ಶಬ್ದವು ಆದಿತ್ಯನನ್ನು ಹೇಳುತ್ತದೆ. ಅಂತರಿಕ್ಷವು ಭೂಮಿಯಿಂದ ದೂರದಲ್ಲಿ ಇರುವುದು ಎಂಬರ್ಥದಿಂದಲೂ, ಗ್ರಹ ನಕ್ಷತ್ರ ಇವೇ ಮೊದಲಾದ ಬೆಳಕನ್ನು ಉಂಟುಮಾಡುವವುಗಳು ಇದರಲ್ಲಿ ಅಡಗುವ ಕಾರಣ 'ಗೌಃ' ಎಂದು ಗೋ ಶಬ್ದಕ್ಕೆ ಅರ್ಥವು ವಿವೃತವಾಗಿ ಇದೆ. ಇದರಿಂದ ಗೋ ಶಬ್ದಕ್ಕೆ ಆದಿತ್ಯ ಅಂತರಿಕ್ಷ ಎಂಬೆರಡು ಅರ್ಥಗಳು ಉಕ್ತವಾಗಿವೆ.

ವಿಷ್ಟಬಾದಿತ್ಯೋ ಭವತಿ—ಆವಿಷ್ಟೋ ರಸಾನ್ । ಆವಿಷ್ಟೋ ಭಾಸಂ ಜ್ಯೋತಿಷಾಮ್ ಆವಿಷ್ಟೋ ಭಾಸೇತಿ ವಾ ॥ ಅಥ ದ್ಯೌರಾವಿಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ ॥

ತನ್ನ ಕಿರಣಗಳಿಂದ ಭೂಮಿ ಮತ್ತು ಅಂತರಿಕ್ಷದಲ್ಲಿರುವ ನೀರನ್ನು ತೆಗೆದುಕೊಳ್ಳುವುದಕ್ಕಾಗಿ ವ್ಯಾಪ್ತವಾಗಿರುವ ಕಾರಣ ಆದಿತ್ಯನು 'ವಿಷ್ಟಪ್' ಎಂಬ ಶಬ್ದದಿಂದ ವಾಚ್ಯನಾಗಿರುವನು. ಇದರಂತೆಯೇ ತನ್ನ ಕಿರಣಗಳಿಂದ ಗ್ರಹಗಳೇ ಮೊದಲಾದ ಕಾಂತಿಯನ್ನು ವ್ಯಾಪಿಸಿರುವನು. ಅಥವ ಬಹಳ ಪ್ರಕಾಶದಿಂದ ಎಲ್ಲಾ ಕಡೆಯಲ್ಲೂ ಬೆಳಗುತ್ತಿರುವನು. ಆದುದರಿಂದ ಆದಿತ್ಯನು 'ವಿಷ್ಟಪ್' ಶಬ್ದಕ್ಕೆ ಅರ್ಥವಾಗಿರುತ್ತಾನೆ. ಇದರಂತೆಯೇ ಅಂತರಿಕ್ಷವು ಗ್ರಹನಕ್ಷತ್ರಾದಿಗಳಿಂದಲೂ, ಚೆನ್ನಾಗಿ ಪುಣ್ಯಮಾಡಿದವರಿಂದಲೂ ವ್ಯಾಪ್ತವಾಗಿರುವ ಕಾರಣ ವಿಷ್ಟಪ್ ಶಬ್ದಕ್ಕೆ ಅರ್ಥವಾಗಿರುವುದು. ಹೀಗೆ ವಿಷ್ಟಪ್ ಶಬ್ದಕ್ಕೆ ಉಭಯ ಸಮಾನವಾದ ಅರ್ಥವನ್ನು ಇಲ್ಲಿ ಹೇಳಿದೆ.

ನಭ ಆದಿತ್ಯೋ ಭವತಿ–ನೇತಾ ಭಾಸಾಂ ಜ್ಯೋತಿಷಾಂ ಪ್ರಣಯೋಽಪಿ ವಾ ಭನ ಏವ ಸ್ಯಾದ್ವಿಪರೀತೋ ನ ನ ಭಾತೀತಿ । ತೇನ ದ್ಯೌರ್ವ್ಯಾಖ್ಯಾತಾ ॥

ಬೆಳಕನ್ನು ಎಲ್ಲಾ ಕಡೆಯಲ್ಲಿಯೂ ಹರಡುವವನು ಆದಿತ್ಯನಾಗಿರುವನು. 'ಭನ' ಎಂಬ ಶಬ್ದವು 'ನಭ' ಎಂಬ ಶಬ್ದಕ್ಕೆ ವರ್ಣ ವ್ಯತ್ಯಾಸದಿಂದ ಇರುತ್ತದೆ. ಇದರಲ್ಲಿ ಕಿರಣಗಳನ್ನು ಒಂದೇ ಸಮನಾಗಿ ಹೊಂದಿಸುವವನು ನಭ ಎನ್ನಿಸಿಕೊಳ್ಳುತ್ತದೆ. ಅಥವ ಕಾಂತಿಯನ್ನು ಕೊಡದಿರುವವನಿಗಿಂತಲೂ ಬೇರೆಯಾದವನು ಅಲ್ಲವು ಎಂದು ಅರ್ಥವನ್ನು ಹೇಳಿ ಬಹಳ ಪ್ರಕಾಶವನ್ನು ಉಂಟುಮಾಡುವವನು ಎಂದು ಅರ್ಥವನ್ನು ಹೇಳಿದೆ. ಅಂತರಿಕ್ಷ ಎಂಬರ್ಥವನ್ನು ಹೇಳುವಾಗ ದ್ಯುಶಬ್ದಕ್ಕೂ ಹೀಗೆಯೇ ಅರ್ಥವನ್ನು ವಿವರಿಸಿ ಆದಿತ್ಯ ಮತ್ತು ಅಂತರಿಕ್ಷ ಇವೆರಡಕ್ಕೂ ಸಾಧಾರಣವಾದ ವಾಚಕನೆಂದು ವಿವರಿಸಿದೆ.

**ಇತಿ ಚತುರ್ದಶಃ ಖಂಡಃ**

ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು



---

ಅಥ ಪಂಚದಶಃ ಖಂಡಃ

**ಹದಿನೈದನೆಯ ಖಂಡವು**

---

ರಶ್ಮಿನಾಮಾನ್ಯುತ್ತರಾಣಿ ಪಂಚದಶ ರಶ್ಮಿರ್ಯಮನಾತ್ತೇಷಾ–
ಮಾದಿತಃ ಸಾಧಾರಣಾನಿ ಪಂಚಾಶ್ವರಶ್ಮಿಭಿರ್ದಿಙ್ನಾಮಾನ್ಯುತ್ತರಾಣ್ಯಷ್ಟೌ

ದಿಶಃ ಕಸ್ಮಾದ್ದಿಶತೇಃ ಆಸದನಾದಪಿ ವಾಭ್ಯಶನಾತ್ತತ್ರ ಕಾಷ್ಠಾ ಇತ್ಯೇತದನೇಕಸ್ಯಾಪಿ ಸತ್ತ್ವಸ್ಯ ನಾಮ ಭವತಿ ಕಾಷ್ಠಾ ದಿಶೋ ಭವಂತಿ ಕ್ರಾಂತ್ವಾ ಸ್ಥಿತಾ ಭವಂತಿ ಕಾಷ್ಠಾ ಉಪದಿಶೋ ಭವಂತೀತರೇತರಂ ಕ್ರಾಂತ್ವಾ ಸ್ಥಿತಾ ಭವಂತ್ಯಾದಿತ್ಯೋಽಪಿ ಕಾಷ್ಠೋಚ್ಯತೇ ಕ್ರಾಂತ್ವಾ ಸ್ಥಿತೋ ಭವತ್ಯಾಜ್ಯಂತೋಽಪಿ ಕಾಷ್ಠೋಚ್ಯತೇ ಕ್ರಾಂತ್ವಾ ಸ್ಥಿತೋ ಭವತ್ಯಾಪೋಽಪಿ ಕಾಷ್ಠಾ ಉಚ್ಯಂತೇ ಕ್ರಾಂತ್ವಾ ಸ್ಥಿತಾ ಭವಂತೀತಿ ಸ್ಥಾವರಾಣಾಂ ||೧೫||

---

## ಅಥ ರಶ್ಮಿನಾಮಾನಿ

---

(೧) ಖೇದಯಃ (೨) ಕಿರಣಾಃ (೩) ಗಾವಃ (೪) ರಶ್ಮಯಃ (೫) ಅಭೀಶವಃ (೬) ದೀಧಿತಯಃ (೭) ಗಭಸ್ತಯಃ (೮) ವನಮ್ (೯) ಉಸ್ರಾಃ (೧೦) ವಸವಃ (೧೧) ಮರೀಚಿಪಾಃ (೧೨) ಮಯೂಖಾಃ (೧೩) ಸಪ್ತಋಷಯಃ (೧೪) ಸಾಧ್ಯಾಃ (೧೫) ಸುಪರ್ಣಾಃ ||

ಇತಿ ಪಂಚದಶ ರಶ್ಮಿನಾಮಾನಿ || ೫ ||

ಈ ಹದಿನೈದು ಕಿರಣಗಳ ಹೆಸರು

**(೧) ಖೇದಯಃ || ತೇಷಾಮಾದಿತಃ ಸಾಧಾರಣಾನಿ ಪಂಚಾಶ್ವರಶ್ಮಿಭಿಃ (ನಿ. ೨-೧೫) ಇತ್ಯುಕ್ತೇಃ ಪೂರ್ವಮಾದಿತ್ಯರಶ್ಮಿನಾಮಾನಂತರಮಶ್ವರಶ್ಮೀನಾಂ ಚ ನಿರ್ವಚನಂ ಪ್ರದರ್ಶ್ಯತೇ। ಖಿದ-ದೈನ್ಯೇ (ದಿವಾ-ರುಧಾ-ಆ). ಖಿದ-ಪರಿಘಾತೇ-ತುದಾದಿರ್ಮುಚಾದಿಃ ಪರಸ್ಮೈ ಪದೀ। ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ (ಪಾ. ಸೂ. ೩-೩-೧೯) ಇತಿ ಘಞ್ ||**

ಇವುಗಳಲ್ಲಿ ಮೊದಲಿನ ಐದು ಪದಗಳು ಸೂರ್ಯನಕಿರಣ, ಕುದುರೆಯ ಕಡಿವಾಣದ ಹಗ್ಗ ಈ ಎರಡಕ್ಕೆ ಸಾಧಾರಣನಾಮವೆಂದು ನಿರುಕ್ತದಲ್ಲಿ ಹೇಳಿರುವುದರಿಂದ ಮೊದಲು ಸೂರ್ಯಕಿರಣಪರವಾಗಿಯೂ ಆಮೇಲೆ ಅಶ್ವರಶ್ಮಿಪರವಾಗಿಯೂ ನಿರ್ವಚನವನ್ನು ತೋರಿಸುತ್ತಾರೆ. ದೈನ್ಯಾರ್ಥಕವಾದ ಖಿದ ಧಾತು ಅಥವಾ ಪರಿಘಾತಾರ್ಥಕವಾದ ಖಿದ ಧಾತು, ಇವಕ್ಕೆ ಕರ್ತೃಭಿನ್ನಕಾರಕಾರ್ಥದಲ್ಲಿ ಸಂಜ್ಞೆ ತೋರುವಾಗ ಘಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಸೆಕೆಗಾಲದಲ್ಲಿ ಇದರಿಂದ (ಸೂರ್ಯಕಿರಣದಿಂದ) ಜನರು ಖೇದಗೊಳ್ಳುತ್ತಾರೆ. ಕುದುರೆಯು ಬಂಧನಕಾಲದಲ್ಲಿ ಇದರಿಂದ (ಹಗ್ಗ) ಖೇದಗೊಳ್ಳುತ್ತದೆ. ಅಥವಾ ಸೂರ್ಯನಿಂದ ಕಿರಣದಿಂದ ಲೋಕವು ಹಿಂಸೆಗೊಳಿಸಲ್ಪಡುತ್ತದೆ (ಪರಿಘಾತ). ಕುದುರೆಯು ಬಂಧನಕಾಲದಲ್ಲಿ ಹಿಂಸಿಸಲ್ಪಡುತ್ತದೆ ಎಂದರ್ಥವಾಗುತ್ತದೆ.

ಧಾತುಗಳಿಗೆ ಅನೇಕಾರ್ಥ ಅಂಗೀಕರಿಸಿರುವುದರಿಂದ ಖಿದ ಧಾತುವಿಗೆ ಖೇದನ ಅರ್ಥ. ಖೇದನವೆಂದರೆ ಛೇದನ ವೆಂದು ಮಾಧವರು ವ್ಯಾಖ್ಯಾನ ಮಾಡಿರುತ್ತಾರೆ. ಪಚಾದಿಗಣಪಠಿತವಾದುದರಿಂದ ಅಚ್ ಪ್ರತ್ಯಯ. ಹಿಂದಿನಂತೆ ಗುಣ. 'ಖೇದತಿ ತಮಃ' ಕತ್ತಲೆಯನ್ನು ನಾಶಮಾಡುವುದು ಸೂರ್ಯ ರಶ್ಮಿ. ಘಞ್ ಬಂದಾಗ ಇದರಿಂದ ಕುದುರೆಯು ವ್ಯಥೆ ಹೊಂದುತ್ತದೆ ಎಂದರ್ಥವಾಗುತ್ತದೆ. ಆಗ ಖೇದಾ ಎಂದು ಆಕಾರಾಂತ ಶಬ್ದ. ತೃತೀಯಾಂತವಾಗಿ ಉದಾಹೃತವಾಗಿವೆ.

**ಖೇದಯಾ ತ್ರಿವೃತಾ ದಿವಃ** (ಋ. ಸಂ. ೬-೫-೧೫-೩) ಸೂರ್ಯರಶ್ಮಿ ಎಂಬರ್ಥದಲ್ಲಿ ನಿಗಮ ಹುಡಕಬೇಕು.

(೨) **ಕಿರಣಾಃ " ಕೄ ವಿಕ್ಷೇಪೇ " ತುದಾದಿಃ (ಪ) ಕೄಞ್ ಹಿಂಸಾಯಾಮ್ ಕ್ರ್ಯಾದಿಃ (ಪ) ' ಕೄಪೄ ವೃಜಿಮಂದಿನಿಧಾಞ್‌ಭ್ಯಃ ಕ್ಯುಃ (ಉ-೨-೭೬) ಇತಿ ಕ್ಯು ಪ್ರತ್ಯಯಃ । ಕಿರಂತಿ ತಾಪಮಿತ್ಯಾದಿ—**

ವಿಕ್ಷೇಪಾರ್ಥದಲ್ಲಿ ಕೄಧಾತುವು ತುದಾದಿಯಲ್ಲಿಯೂ, ಹಿಂಸಾರ್ಥದಲ್ಲಿ ಕೄಞ್‌ಧಾತುವು ಕ್ರ್ಯಾದಿಯಲ್ಲಿಯೂ ಹೇಳಿದೆ. ಇದಕ್ಕೆ 'ಕೄಪೄ—' ಸೂತ್ರದಿಂದ ಕ್ಯು ಪ್ರತ್ಯಯ. ಕಕಾರ ಇತ್ತಾಗಿಯೂ ಉಳಿದಾಗ ಅದಕ್ಕೆ ' ಯುವೋರನಾಕೌ ' ಸೂತ್ರ ದಿಂದ ಅನಾದೇಶ. ' ಋತ ಇದ್ಧಾತೋಃ ' ಸೂತ್ರದಿಂದ ಧಾತುವಿನ ಋಕಾರಕ್ಕೆ ಇತ್ವ. ಣತ್ವ. ಕಿರಣ ಎಂದಾಗುತ್ತದೆ. ಸೂರ್ಯರಶ್ಮಿ ಯಲ್ಲಿ ಔಷ್ಣ್ಯದಿಂದ ತಾಪವನ್ನು ಕೊಡುವುದೆಂದೂ, ಅಶ್ವರಶ್ಮಿಯಲ್ಲಿ ಬಂಧನದಿಂದ ತಾಪದಾಯಕವೆಂದೂ ಅರ್ಥ ವಾಗುತ್ತದೆ. ಅಥವಾ ಸೂರ್ಯನಿಂದ ಸಕಲದಿಕ್ಕುಗಳಲ್ಲಿ ಪ್ರಸರಿಸಲ್ಪಡುತ್ತದೆ. ಕುದುರೆಯ ಕತ್ತಿನಲ್ಲಿ ಕಟ್ಟಲ್ಪಡುತ್ತದೆ ಅಥವಾ ಕತ್ತಲೆಯನ್ನು ನಾಶಮಾಡುತ್ತದೆ, ಕುಗಿುರೆಯಿಂದ ಹಗ್ಗವು ಕಚ್ಚಲ್ಪಡುತ್ತದೆ ಎಂದರ್ಥ. ಉದ—ಆದಿತ್ಯರಶ್ಮಿ ಗೆ—

**ಭಿಯಾ ದೃಲ್‌ಹಾಸಃ ಕಿರಣಾ ನೈಜನ್** (ಋ. ಸಂ. ೧-೫-೪-೧) ಅಶ್ವರಶ್ಮಿ ಗೆ—**ರೇಣುಂ ರೇರಿಹತ್ ಕಿರಣಂ ದದಶ್ವಾನ್** (ಋ. ಸಂ.-೩-೭-೧೨-೧)

(೩) **ಗಾವಃ ॥ ವ್ಯಾಖ್ಯಾತಃ ಪೃಥಿವೀನಾಮಸು ॥ (೧-೧) ಗಚ್ಛಂತಿ ಸರ್ವತಸ್ತಮೋ ವಿಹಂತುಂ, ಗೀಯಂತೇ ಸ್ತೂಯಂತೇ ಸ್ವಾಭಿಮತಸಾಧನಾತ್ ಯಜಮಾನೈರಶ್ವಪಾಲೈಶ್ಚ ॥**

ಪೃಥಿವಿಯ ಹೆಸರುಗಳಲ್ಲಿ ಇದು ವ್ಯಾಖ್ಯಾತವಾಗಿದೆ. ಸೂರ್ಯರಶ್ಮಿ ಎಂಬರ್ಥದಲ್ಲಿ—ಎಲ್ಲಾ ಕಡೆಯೂ ಕತ್ತಲೆ ಹೋಗ ಲಾಡಿಸಲು ಹೋಗುತ್ತದೆ, ಅಥವಾ ಭೂಮಿಯ ರಸಭಾಗವನ್ನು ಎಳೆಯಲು ಹೋಗುತ್ತದೆ ಎಂದರ್ಥ. ಅಶ್ವರಶ್ಮಿಯಲ್ಲಿ—ತಮ್ಮ ಅಭೀಷ್ಟಾರ್ಥವನ್ನು ನೆರವೇರಿಸಿ ಕೊಟ್ಟದ್ದರಿಂದ ಯಜಮಾನನಿಂದ ಅಥವಾ ಅಶ್ವಪಾಲಕನಿಂದ ಹೊಗಲ್ಪಡುತ್ತದೆ ಎಂದರ್ಥ ವಾಗುತ್ತದೆ. ಆದಿತ್ಯರಶ್ಮಿಗೆ ಉದಾಹರಣೆ—

**ಯತ್ರ ಗಾವೋ ಭೂರಿಶೃಂಗಾ ಅಯಾಸಃ** (ಋ. ಸಂ. ೨-೨-೨೪-೬)—**ಕೋ ಅದ್ಯ ಯುಂಕ್ತೇ ಧುರಿಗಾ ಋತಸ್ಯ** (ಋ. ಸಂ. ೮-೬-೮-೧) ಅಶ್ವರಶ್ಮಿಗೆ ನಿಗಮ ಹುಡಕಬೇಕು

(೪) **ರಶ್ಮಯಃ ॥ " ರಶಿರ್ಯಮನಾರ್ಥೋ ಧಾತುಃ " (ಸೌ-) 'ನಿಯೋಮಿಃ' (ಉ. ೪-೪೩) ಇತಿ ವಿಧೀಯಮಾನೋ ಮಿಪ್ರತ್ಯಯೋ ಬಾಹುಲಕಾದ್ ಭವತಿ । ರಶನಾ, ರಶ್ಮಿರಿತಿ ಕತಿಪಯ ಪ್ರಯೋಗ ವಿಷಯ ನಿಯಾಯಂ ರಶಿಃ ಭರತ್ಯಾದಿವತ್, ನ ಸರ್ವತ್ರ ಬಂಧನ ಪ್ರತೀತಿಃ ॥ ಬಧ್ನಂತ್ಯುದಕಮಥವಾ ಬಧ್ಯತೇ ಹೈರುದ ಕಮಶ್ವೋ ವಾ ॥**

ಬಂಧನಾರ್ಥದಲ್ಲಿ ರಶಿ ಎಂಬುದು ಸೂತ್ರನಿರ್ದಿಷ್ಟವಾದ ಧಾತು. ಬಹುಲಗ್ರಹಣದಿಂದ ನೀ ಧಾತುವಿಗೆ ಹೇಳಿದ ಮಿ ಪ್ರತ್ಯಯವು ಇದಕ್ಕೂ ಬರುತ್ತದೆ. ರಶ್+ಮಿ. ಬಹುವಚನದಲ್ಲಿ ರಶ್ಮಯಃ ಎಂದಾಗುತ್ತದೆ. ಕೆಲವು ಕಡೆಯಲ್ಲಿ ಮಾತ್ರ ರಶನಾ, ರಶ್ಮಿ ಶಬ್ದಗಳಿಂದ ಬಂಧನಾರ್ಥ ತೋರುತ್ತದೆ. ಸರ್ವತ್ರ ಇದಕ್ಕೆ ಬಂಧನಾರ್ಥವಿಲ್ಲ. ನೀರನ್ನು ಒಂದುಕಡೆ ಶೇಖರಿಸುತ್ತದೆ, ಅಥವಾ ಕಿರಣಗಳಿಂದ ನೀರು ಕಟ್ಟಲ್ಪಡುತ್ತದೆ ಎಂದು ಆದಿತ್ಯರಶ್ಮಿಯಲ್ಲಿ ಅರ್ಥವಾಗುತ್ತದೆ. ಇವುಗಳಿಂದ ಕುದುರೆಯು ಕಟ್ಟಲ್ಪಡುತ್ತದೆ ಎಂದು ಅಶ್ವರಶ್ಮಿಯಲ್ಲಿ ಅರ್ಥ.

ಅಥವಾ ಅಶೂ-ವ್ಯಾಪ್ತೌ. ಧಾತು. ಇದಕ್ಕೆ 'ಅಶೇರಶಚ' (ಉ. ೪-೪೬) ಸೂತ್ರದಿಂದ ಮಿಪ್ರತ್ಯಯ; ಪ್ರಕೃತಿಗೆ ರಶಾದೇಶ. ರಶ್ಮಿಃ. ಸರ್ವ ಜಗತ್ತನ್ನೂ ವ್ಯಾಪಿಸುತ್ತದೆ. ಕುದುರೆಯ ಕತ್ತನ್ನು ವ್ಯಾಪಿಸುತ್ತದೆ. ಆದಿತ್ಯರಶ್ಮಿಗೆ ಉದಾ—

ಸೂರ್ಯಸ್ಯೇವ ರಶ್ಮಯೋ ದ್ರಾವಯಿತ್ನವೋ (ಋ. ಸಂ-೭-೨-೨೨-೧) 'ವಿರಶ್ಮಯೋ ಜನಾಽಅಸು (ಋ. ಸಂ-೧-೪-೭-೩)

ಅಶ್ವರಶ್ಮಿಗೆ ಉದಾಹರಣೆ

**ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥ (ಋ. ಸಂ-೫-೧-೨೦-೧) —'ತೇ ರಶ್ಮಿಭಿಸ್ತಋಕ್ವಭಿಃ ಸುಖಾದಯಃ (ಋ. ಸಂ-೧-೬-೧೩-೬)**

**(೫) ಅಭೀಶವಃ ॥ ಅಭಿಪೂರ್ವಾತ್ "ಅಶೂ ವ್ಯಾಪ್ತೌ" (ಸ್ವಾ-ಆ) ಇತ್ಯಸ್ಮಾತ್ 'ಭೃಮೃಶೀತೃಚರಿತ್ಸರಿತನಿಧನಿಮಿಮಸ್ಜಿಭ್ಯ ಉಃ(ಉ-೧-೭) ಇತಿ ಉ ಪ್ರತ್ಯಯೋ ಬಾಹುಲಕಾದ್ ಭವತಿ, ಧಾತ್ವವಯವಸ್ಯಾಕರಸ್ಯೇಕಾರಶ್ಚ । ಜಸ್ । ಅಭಿ ವ್ಯಾಪ್ನುವಂತಿ ಜಗದಶ್ವಗ್ರೀವಾಂ ವಾ ॥**

ವ್ಯಾಪ್ತ್ಯರ್ಥಕವಾದ ಅಶ್ ಧಾತುವಿಗ ಅಭಿ ಉಪಸರ್ಗಪೂರ್ವದಲ್ಲಿರುವಾಗ ಬಹುಲಗ್ರಹಣದಿಂದ ಭೃ ಮುಂತಾದ ಧಾತುಗಳಿಗೆ ವಿಹಿತವಾದ ಉ ಪ್ರತ್ಯಯವು ಬರುತ್ತದೆ. ಅಭಿ+ಅಶ್+ಉ ಎಂದಿರುವಾಗ ಧಾತುವಿನ ಅಕಾರಕ್ಕೆ ಇಕಾರಾದೇಶ. ಸವರ್ಣದೀರ್ಘ. ಅಭೀಶು ಉಕಾರಾಂತ ಶಬ್ದವಾಗುತ್ತದೆ. ಬಹುವಚನದಲ್ಲಿ ಜಸ್ ಬಂದಾಗ ಗುಣ, ಅವಾದೇಶ. ಜಗತ್ತನ್ನು ಸುತ್ತಲೂ ವ್ಯಾಪಿಸುತ್ತದೆ, ಕುದುರೆಯ ಕತ್ತಿನ ಸುತ್ತಲೂ ವ್ಯಾಪಿಸುತ್ತದೆ ಎಂದರ್ಥ.

ಅಥವಾ ಅಭಿ ಉಪಸರ್ಗಪೂರ್ವಕವಾದ ಐಶ್ವರ್ಯಾರ್ಥಕವಾದ ಈಶ ಧಾತುವಿಗೆ ಹಿಂದಿನಂತೆ ಬಹುಲಗ್ರಹಣದಿಂದ ಉ ಪ್ರತ್ಯಯ. ಅಭಿ+ಈಶ್+ಉ. ಬಹುವಚನದಲ್ಲಿ ಅಭೀಶವಃ ಎಂದಾಗುತ್ತದೆ. ಸೂರ್ಯನು ಇವುಗಳಿಂದ ಕತ್ತಲೆಯನ್ನು ಹೋಗಲಾಡಿಸಲು ಸಮರ್ಥನಾಗುತ್ತಾನೆ. ಅಶ್ವಪಾಲಕನು ಈ ಹಗ್ಗದಿಂದ ಕುದುರೆಯನ್ನು ಕಟ್ಟಲು ಬಯಸುತ್ತಾನೆ ಎಂದರ್ಥ. ಅಶ್ವರಶ್ಮಿಗೆ ಉದಾಹರಣೆ—

**ಅಭೀಶೂನಾಂ ಮಹಿಮಾನಂ ಪನಾಯತ (ಋ. ಸಂ. ೫-೧-೨೦-೧).** ಆದಿತ್ಯರಶ್ಮಿಗೆ ನಿಗಮವನ್ನು ಹುಡುಕಬೇಕು.

**(೬) ದೀಧಿತಯಃ ॥ ಏತದಾದೀನ್ಯಾದಿತ್ಯರಶ್ಮಿ ನಾಮಾನ್ಯೇವ ॥ ದೀಧಿಜ್ ದೀಪ್ತಿದೇವನಯೋಃ (ಅದಾ ಆ) "ಕಿಚ್‌ಕ್ತೌಚ ಸಂಜ್ಞಾಯಾಮ್" (ಪಾ. ಸೂ. ೩-೩-೧೭೪) ಇತಿ ಕ್ತಿಚಿ ಪೃಷೋದರಾದಿತ್ವಾದೇವ (ಪಾ.ಸೂ-೬-೩-೧೦೯) ಯಥಾಕಥಂಚಿದ್ರೂಪಸಿದ್ಧಿರುನ್ನೇಯಾ ಧೀಯಂತೇ ವಿಧೀಯಂತೆ ಪ್ರೇಷ್ಯಂತೇ ರಸಾಹರಣಾದಿ ಕರ್ಮಸ್ವಾದಿತ್ಯೇನ ॥**

ಇನ್ನು ಮುಂದೆ ಹೇಳುವ ನಾಮಗಳೆಲ್ಲವೂ ಕೇವಲ ಸೂರ್ಯಕಿರಣಾರ್ಥವನ್ನೇ ಹೇಳುತ್ತೇವೆ. ದೀಪ್ತ್ಯರ್ಥಕವಾದ ದೀಧೀ ಧಾತುವಿಗೆ ಸಂಜ್ಞಾರ್ಥದಲ್ಲಿ ಕ್ತಿಚ್‌ಪ್ರತ್ಯಯ. ದೀಧೀ+ತಿ. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಅಭಿಮತ ಕಾರ್ಯವನ್ನು ಮಾಡಬೇಕು. ಧಾತುವಿಗೆ ಹ್ರಸ್ವ. ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ದೀಧಿತಿ ಶಬ್ದ. ಬಹುವಚನದಲ್ಲಿ ಗುಣ ಅಯಾದೇಶ. ದೀಧಿತಯಃ. ನೀರು ಮುಂತಾದ ರಸವನ್ನು ಆಕರ್ಷಿಸುವ ಕಾರ್ಯದಲ್ಲಿ ಸೂರ್ಯನಿಂದ ಪ್ರೇರಿಪಿಸಲ್ಪಡುತ್ತವೆ, ಕಳುಹಿಸಲ್ಪಡುತ್ತವೆ, ಅಥವಾ ಮಳೆಗೋಸ್ಕರ ನೀರು ಇವುಗಳ ಮೂಲಕ ಸೂರ್ಯನಿಂದ ಧರಿಸಲ್ಪಡುತ್ತದೆ ಎಂದರ್ಥ ಸೂರ್ಯನ ಕರ್ಮವು ರಸಾದಾನವೂ, ಕಿರಣಗಳಿಂದ ರಸಧಾರಣೆಯೂ ಆಗುತ್ತದೆಂದು ನಿರುಕ್ತ (೫-೧೦) ದಲ್ಲಿ ಹೇಳಿದೆ. "ನವಾಸ ಧೃತಂ ಗರ್ಭಂ ಭಾಸ್ಕರಸ್ಯ ಗಭಸ್ತಿಭಿಃ| ಪೀತ್ವಾ ರಸಂ ಸಮುದ್ರಾಣಾಂ ದ್ಯೌಃ ಪ್ರಸೂತೇ ರಸಾಯನಮ್ |" ಎಂದು ರಾಮಾಯಣದಲ್ಲಿಯೂ ಹೇಳಿದೆ. ಉದಾಹರಣೆ—

**ಶುಚೀದಯನ್ ದೀಧಿತಿ ಮುಕ್ಥಶಾಸಃ** (ಋ. ಸಂ. ೩-೪-೧೯-೧)

ದೀಧಿತಿಂ ಎಂಬುದಕ್ಕೆ ಕಿರಣಗಳಿಂದ ಎಂದರ್ಥವನ್ನು ವಾಜಸನೇಯ ಭಾಷ್ಯಕಾರರಾದ ಉವಟಾಚಾರ್ಯರು ಹೇಳಿರುತ್ತಾರೆ.

**(೭) ಗಭಸ್ತಯಃ || ಗೋ ಶಬ್ದಪೂರ್ವಾದಂತರ್ಣೀತಣ್ಯರ್ಥಾತ್ ಭಸ.ಭಕ್ಷಣದೀಪ್ತ್ಯೋಃ (ಜು. ಪ) ಇತ್ಯಸ್ಮಾತ್ ಪೂರ್ವವತ್ ಕ್ತಿಚೀಡಭಾವೇ ಚ ಪೃಷೋದರಾದಿತ್ವಾತ್ ಗೋಶಬ್ದಸ್ಯಾಕಾರಾಂತಾದೇಶಃ | ಗಾಂ ಭೂಮಿಂಚ ಭಾಸಯಂತಿ ದೀಪಯಂತಿ||**

ದೀಪ್ತ್ಯರ್ಥಕವಾದ ಭಸ ಧಾತುವಿಗೆ ಗೋ ಶಬ್ದ ಉಪಪದವಾಗಿರುವಾಗ ಹಿಂದಿನಂತೆ ಕ್ತಿಚ್‌ಪ್ರತ್ಯಯ. ಇಲ್ಲಿ ಣಿಜಂತದ ಅರ್ಥ (ಪ್ರಕಾಶಪಡಿಸುವುದು) ಹೇಳಬೇಕು. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ತಿಗೆ ಇಡಭಾವವೂ, ಗೋ ಶಬ್ದಕ್ಕೆ ಆಕಾರ ಅಂತಾದೇಶವೂ ಬರುತ್ತದೆ. ಗ+ಭಸ್+ತಿ. ಬಹುವಚನದಲ್ಲಿ ಗಭಸ್ತಯಃ ಎಂದಾಗುತ್ತದೆ. ಸ್ವರ್ಗ ಭೂಮಿಗಳನ್ನು ಪ್ರಕಾಶಗೊಳಿಸುತ್ತವೆ. ಅಥವಾ ಭೂಮಿ ಸಂಬಂಧವಾದಾಗ ಉಜ್ವಲವಾಗುತ್ತದೆ ಎಂದರ್ಥವಾಗುತ್ತದೆ.

ಅಥವಾ ಭಸ ಧಾತುವಿಗೆ ಭಕ್ಷಣಾರ್ಥ ಹೇಳಬೇಕು. (ನಿರು-೨-೮೦) ಭೌಮರಸ ರೂಪವಾದ ನೀರನ್ನು ಭಕ್ಷಿಸುತ್ತದೆ (ಆಕರ್ಷಿಸುತ್ತದೆ) ಎಂದರ್ಥ.

'ಭಸೇರ್ಗಟ್ ಚ' ಎಂಬ ಭೋಜಸೂತ್ರದಿಂದ ಭಸ ಧಾತುವಿಗೆ ತಿಪ್ರತ್ಯಯ. ಧಾತುವಿಗೆ ಗಟ್ ಆಗಮ. ಟಿತ್ತಾದುದರಿಂದ ಆದ್ಯವಯವಾಗಿ ಬಂದರೆ ಗಭಸ್ತಿ ಎಂದಾಗುತ್ತದೆ. ಪ್ರಕಾಶಿಸುವವುಗಳು ಕಿರಣಗಳು. ಮಾಧವರು ಗ್ರಹಧಾತುವಿನಿಂದ ಗಭಸ್ತಿ ಪದವಾಗಿದೆಯೆಂದು ಹೇಳುತ್ತಾರೆ. ಹಿಂದೆ ಹೇಳಿದ ಸೂತ್ರದಿಂದಲೇ ಕ್ತಿಚ್‌ಪ್ರತ್ಯಯ. ಧಾತುವಿಗೆ ಅಸುಗಾಗಮ. ಕಿತ್ತಾದದರಿಂದ ಅಂತಾವಯವವಾಗಿ ಬರುತ್ತದೆ. 'ಹೃಗ್ರಹೋರ್ಭಶ್ಛಂದಸಿ' ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಗಹ್+ಅಸ್+ತಿ. ಹಿಂದಿನಂತೆಯೇ ರೂಪ. ಭೌಮರಸವನ್ನು ಸ್ವೀಕರಿಸುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಗಭಸ್ತಿಪೂತೋ ನೃಭಿರದ್ರಿಭಿಃ ಸುತಃ** (ಋ. ಸಂ. ೭-೩-೧೮-೪) —**'ವೃಷ್ಣೋ ಅಂಶುಭ್ಯಾಂ ಗಭಸ್ತಿಪೂತಃ** (ಯ-ವಾ-ಸಂ-೭-೧)

**(೮) ವನಮ್ ॥ "ವನ, ಷಣ-ಸಂಭಕ್ತೌ" ಭೂವಾದಿಃ ಪರಸ್ಮೈಪದೀ । ಪುಂಸಿ ಸಂಜ್ಞಾಯಾಂ ಘಃ (ಪಾ-ಸೂ-೩-೩-೧೧೮) ವನತ್ಯೇ ಸೇವ್ಯತೇ ಶೀತಾದಿನಿವಾರಣಾಯ ॥ ಅಥವಾ ವನತಿರ್ಹಿಂಸಾರ್ಥಃ (ಭೂ-ಪ) ॥**

ಸೇವಿಸುವುದು ಎಂಬರ್ಥದಲ್ಲಿರುವ ವನ ಧಾತುವಿಗೆ ಸಂಜ್ಞಾ ತೋರುವಾಗ ಘಪ್ರತ್ಯಯ. ಅ ಉಳಿಯುತ್ತದೆ. ವನಮ್. ಶೀತನಿವಾರಣೆಗೋಸ್ಕರ ಜನರಿಂದ ಸೇವಿಸಲ್ಪಡುತ್ತದೆ. ಹಿಂಸಾರ್ಥವನ್ನು ಹೇಳುವುದಾದರೆ ಇವರಿಂದ ಕತ್ತಲೆಯು ಹಿಂಸಿಸಲ್ಪಡುತ್ತವೆ (ನಾಶಮಾಡಲ್ಪಡುತ್ತದೆ) ಎಂದರ್ಥವಾಗುತ್ತದೆ. ಯಾಚನಾರ್ಥಕವಾದ ವನ ಧಾತುವು ತನಾದಿಯಲ್ಲಿ ಆತ್ಮನೇ ಪದಿಯಾಗಿ ಹೇಳಿದೆ. ಇದಕ್ಕೆ ಕರ್ಮಣಿಯಲ್ಲಿ ಘಪ್ರತ್ಯಯ. ಮಳೆಗೆರೆಯುವುದಕ್ಕೋಸ್ಕರ ಪ್ರಾರ್ಥಿಸಲ್ಪಡುತ್ತದೆ ಎಂದರ್ಥ. ಅಥವಾ ಶಬ್ದಾರ್ಥಕವಾದ ವನ ಧಾತುವು ಭ್ವಾದಿಯಲ್ಲಿ ಹೇಳಿದೆ. ಇದಕ್ಕೆ ಹಿಂದಿನಂತೆ ಪ್ರತ್ಯಯ ಬಂದರೆ ಭಕ್ತರಿಂದ ಸ್ತುತಿಸಲ್ಪಡುವುದು ಎಂದರ್ಥವಾಗುತ್ತದೆ. ಉದಾಹರಣೆ—

**ಅಬುಧ್ನೇ ರಾಜಾ ವರುಣೋ ವನಸ್ಯ** (ಋ-ಸಂ-೧-೨-೧೪-೨) ಪ್ರಾರ್ಥಿಸಲ್ಪಡುವ ಕಿರಣದ ಎಂದು ಮಾಧವನು ವ್ಯಾಖ್ಯಾನ ಮಾಡಿರುತ್ತಾರೆ.

**(೯) ಉಸ್ರಾಃ ॥ "ವಸ-ನಿವಾಸೇ" (ಭೂ. ಪ) ಸ್ಫಾಯಿತಂಚಿವಂಚಿ—(ಉ. ೨-೧೨) ಇತ್ಯಾದಿನಾ ರಕ್ ಯಜಾದಿತ್ವಾತ್ ಸಂಪ್ರಸಾರಣಂ ಬಾಹುಲಕಾತ್ " ಶಾಸಿವಸಿಘಸೀನಾಂ ಚ (ಪಾ. ಸೂ. ೮-೩-೬೦) ಇತಿ ಷತ್ವಾಭಾವಃ ॥**

ವಾಸಾರ್ಥಕ ವಸ ಧಾತುವಿಗೆ ಔಣಾದಿಕ ರಕ್ ಪ್ರತ್ಯಯ. ಇದು ಕಿತ್ತಾದುದರಿಂದ ' ವಚಿಸ್ವಪಿಯಜಾದೀನಾಂ ಕಿತಿ ಸೂತ್ರದಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ (ಉಕಾರ) ಸಂಪ್ರಸಾರಣಾಚ್ಚ ಪೂರ್ವರೂಪ. ಉಸ್+ರ. ಬಹುವಚನದಲ್ಲಿ ಉಸ್ರಾಃ ಎಂದಾಗುತ್ತದೆ. ಉಕಾರದ ಪರದಲ್ಲಿರುವ ಸಕಾರಕ್ಕೆ ' ಶಾಸಿವಸಿ—'. ಸೂತ್ರದಿಂದ ಷತ್ವ ಹೇಳಿದ್ದರೂ ಬಹುಲಗ್ರಹಣದಿಂದ ಇಲ್ಲಿ ಬರುವದಿಲ್ಲ. ಇದರಲ್ಲಿ ಇತರ ತೇಜಸ್ಸು ವಾಸಿಸುತ್ತದೆ (ಎಲ್ಲಾ ತೇಜಸ್ಸು ಇದರಲ್ಲಿ ಅಂತರ್ಭೂತವಾಗಿದೆ). ಅಥವಾ ರಸಾದಿಗಳು ಇದರಲ್ಲಿ ವಾಸಿಸುತ್ತವೆ ಎಂದರ್ಥ.

ಅಥವಾ ಉತ್ ಉಪಸರ್ಗಪೂರ್ವಕವಾದ ಸ್ರು-ಗತೌ, ಧಾತುವಿಗೆ 'ಉಪಸರ್ಗೇ ಚ ಸಂಜ್ಞಾಯಾಂ' (ಪಾ. ಸೂ. ೩-೨-೯೯) ಸೂತ್ರದಿಂದ ಜನ್‌ಧಾತುವಿಗೆ ಹೇಳುವ ಡಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಉತ್+ಸ್ರು+ಅ. ಉತ್ ಉಪಸರ್ಗದ ಕೊನೆಯ ತಕಾರಕ್ಕೆ ಲೋಪ. ಪ್ರತ್ಯಯ ಡಿತ್ತಾದುದರಿಂದ ಧಾತುವಿನ ಟಿಗೆ (ಉಕಾರ) ಲೋಪ. ಉಸ್ರ ಎಂದಾಗುತ್ತದೆ. ಇವುಗಳಿಂದ ರಸಾದಿಗಳು ಸುರಿಯುತ್ತವೆ ಎಂದರ್ಥ. ಉದಾಹರಣೆ—

**ಉಸ್ರಾ ಇವ ಸ್ವಸರಾಣಿ** (ಋ. ಸಂ. ೧-೧-೬-೨)

**(೧೦) ವಸವಃ ॥ ವಸ-ನಿವಾಸೇ (ಭೂ. ಪ) 'ವಸ ಆಚ್ಛಾದನೇ' (ಅದಾ. ಆ) ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿದಿಬಂಧಿಮನಿಭ್ಯಶ್ಚ (ಉ. ೧-೧೦) ಇತಿ ಉ ಪ್ರತ್ಯಯಃ । ವಸಂತಿ ಲೋಕೇಷು, ವಸಂತ್ಯತ್ರ ರಸಾಃ ಇತ್ಯಾದಿ ॥**

ವಾಸಾರ್ಥಕವಾದ, ಅಥವಾ ಆಚ್ಛಾದನಾರ್ಥಕ(ಮುಚ್ಚುವುದು) ವಾದ ವಸ ಧಾತುವಿಗೆ ಔಣಾದಿಕವಾದ ಉಪ್ರತ್ಯಯ. ವಸ್+ಉ. ವಸು ಉಕಾರಾಂತಪದ. ಜಸಿನಲ್ಲಿ ಗುಣ, ಅವಾದೇಶ. ಲೋಕದಲ್ಲಿ ವಾಸಿಸುತ್ತವೆ, ಇವರಲ್ಲಿ ರಸವು ಆಶ್ರಯಿ

ಸಿರುತ್ತದೆ, ಇದರಲ್ಲಿ ಇತರ ತೇಜಸ್ಸು ಅಡಗಿರುತ್ತದೆ, ಮಳೆಯಿಂದ ಜಗತ್ತನ್ನು ಮುಚ್ಚುತ್ತದೆ. ಅಥವಾ ಕತ್ತಲೆಯನ್ನು ದೂರು ಮಾಡುತ್ತದೆ ಎಂದರ್ಥವಾಗುತ್ತದೆ. ಆಗ ಣಿಚ್‌ಪ್ರತ್ಯಯ ಬಂದು " ಬಹುಲಮನ್ಯತ್ರಾಪಿ ಸಂಜ್ಞಾಛಂದಸೋಃ " (ಪಾ. ಸೂ. ೬-೪-೫೧, ವಾ) ಎಂಬ ವಾರ್ತಿಕದಿಂದ ಅದಕ್ಕೆ ಲುಕ್ ಬಂದಿದೆಯೆಂದು ತಿಳಿಯಬೇಕು. ಣಿಜಂತಾರ್ಥದಲ್ಲಿ ಇದು ಮಳೆ ಮುಂತಾದುವುಗಳನ್ನು ಕೊಡುವುದರಿಂದ ಲೋಕವನ್ನು ವಾಸಮಾಡುವಂತೆ ಮಾಡುತ್ತದೆ (ಜೀವನಾಧಾರವಾಗಿರುತ್ತದೆ.) ಎಂದರ್ಥ. ಉದಾಹರಣೆ—

**ಜ್ಮಯಾ ಅತ್ರ ವಸವೋ ರಂತ ದೇವಾಃ (ಋ. ಸಂ. ೫-೪-೬-೩)—ಸುಗಾವೋ ದೇವಾಃ ಸದನಾ ಅಕರ್ಮಯ ಆ ಜಗ್ಮುಃ ಸವನಮಿದಂ ಜುಷಾಣಾಃ। ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವಸ್ಮೈಧತ್ತ ವಸವೋ ವಸೂನಿ (ಯ. ವಾ. ಸಂ. ೮-೧೮) ಹಿಂಕೃಣ್ವತೀ ವಸುಪತ್ನೀ ವಸೂನಾಮ್ (ಋ. ಸಂ. ೨-೩-೧೯೨) ॥**

**(೧೧) ಮರೀಚಯಃ ॥ ಮೃಙ್-ಪ್ರಾಣತ್ಯಾಗೇ (ತು-ಆ) "ಮೃಕಣಿಭ್ಯಾಮೀಚಿಃ" (ಉ-೪-೭೦) ಇತಿ ಈಚಿಃ ಪ್ರತ್ಯಯಃ। ಮ್ರಿಯತೇ ತಮೋಽಸ್ಮಿನ್ನಿತಿ ಮರೀಚಿಃ ರಶ್ಮಿಃ ॥**

ನಾಶಹೊಂದುವುದು ಎಂಬರ್ಥವನ್ನು ಕೊಡುವ ಮೃಧಾತುವಿಗೆ ಉಣಾದಿ ಸೂತ್ರದಿಂದ ಈಚಿ ಪ್ರತ್ಯಯ. ಮೃ+ಈಚಿ ಎಂದಿರುವಾಗ "ಸರ್ವಧಾತುಕಾ"—ಸೂತ್ರದಿಂದ ಗುಣ. (ಅರ್) ಮರೀಚಿಃ. ಇವರಲ್ಲಿ ಕತ್ತಲೆಯು ನಾಶಹೊಂದುತ್ತದೆಂದು ಅರ್ಥವಾಗುವುದರಿಂದ ಕಿರಣಕ್ಕೆ ಮರೀಚಿ ಎಂದು ಹೆಸರು. ಇಲ್ಲಿ ಮರೀಚಿ ಪದದಿಂದ ಅದು ಉಳ್ಳ ಸೂರ್ಯನು ಎಂದರ್ಥ. ಮತ್ವರ್ಥಪ್ರತ್ಯಕ್ಕೆ ಲುಕ್ ಬಂದಿದೆ. ಕಿರಣವುಳ್ಳ ಸೂರ್ಯಮಂಡಲವನ್ನು ಪಾಂತಿಃ ರಕ್ಷಿಸುತ್ತವೆ ಎಂಬರ್ಥವಲ್ಲಿ ಮರೀಚಿ ಉಪಪದ ವಾಗಿರುವಾಗ ಪಾ (ರಕ್ಷಣೆ) ಧಾತುವಿಗೆ 'ಆತೋನುಪಸರ್ಗೇ ಕಃ' ಸೂತ್ರದಿಂದ ಕ ಪ್ರತ್ಯಯ. ಮರೀಚಿಪಾಃ ಉದಾಹರಣೆ—

**ದೇವೇಭ್ಯಸ್ತ್ವಾ ಮರೀಚಿಪೇಭ್ಯ [ಯ. ವಾ. ಸಂ. ೭-೩]**

**(೧೨) ಮಯೂಖಾಃ ॥ ಡುಮಿಞ್—ಪ್ರಕ್ಷೇಪಣೇ॥ (ಸ್ವಾ-ಉ) ಅಸ್ಮಾತ್ ಮುಹೇ ಖೋ ಡಯೂಟ್ (ಉ. ೪-೨೨) ಇತಿ ವಿಧಿಯಮಾನಃ ಖ ಪ್ರತ್ಯಯೋ ಬಾಹುಲಕಾದ್ ಭವತಿ, ಡಯೂಡಾಗಮಶ್ಚ ಪ್ರತ್ಯಯಸ್ಯ ಬಾಹುಲಕಾದೇವ ಮಿನ್ವಂತಿ ತಮಃ ಮಯೂಖಾಃ ॥**

ಪ್ರಕ್ಷೇಪಣಾರ್ಥವಾದ ಡುಮಿಞ್ ಧಾತು. ಆದಿರ್ಞಿಟುಡವಃ ಸೂತ್ರದಿಂದ ಆದಿಯ ಡು ಇತ್ತಾಗುತ್ತದೆ. ಇವಕ್ಕೆ ಬಹುಲಗ್ರಹಣದಿಂದ ಮುಹಧಾತುವಿಗೆ ವಿಧಿಸಲ್ಪಟ್ಟ ಖ ಪ್ರತ್ಯಯ ಬರುತ್ತದೆ. ಪ್ರತ್ಯಯಕ್ಕೆ ಡಯೂಟ್ ಆಗಮ. ಇದರಲ್ಲಿ ಅಯೂ ಉಳಿಯುತ್ತದೆ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಅಯೂಖ ಎಂದಾಗುತ್ತದೆ. ಇದು ಪರವಾದಾಗ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ. ಬಹುವಚನದಲ್ಲಿ ಮಯೂಖಾಃ ಎಂದಾಗುತ್ತದೆ. ಕತ್ತಲೆಯನ್ನು ದೂರ ಮಾಡುತ್ತವೆ ಎಂದರ್ಥ. 'ಮಯೇರೂಟ್ ಚ' ಎಂದು ಭೋಜಸೂತ್ರ. ಗತ್ಯರ್ಥಕವಾದ ಮಯಧಾತುವಿಗೆ ಖ ಪ್ರತ್ಯಯ. ಅದಕ್ಕೆ ಊಟ್ ಆಗಮ. ಮಯ್+ಊಖ. ಸರ್ವಲೋಕಗಳಲ್ಲಿಯೂ ಹೋಗುತ್ತವೆ ಎಂದರ್ಥ. ಉದಾಹರಣೆ—

**ದಾದರ್ಥ ಪೃಥಿವೀಮಭಿತೋ ಮಯೂಖೈಃ** (ಋ. ಸಂ. ೫-೬-೨೪-೩)—**ಇಮೇ ಮಯೂಖಾ ಉಪ ಸೇದುರುಸದಃ** (ಋ. ಸಂ. ೮-೭-೧೮-೨) ॥

**ಸಪ್ತಋಷಯಃ ॥ "ಸಪ್ತ "ಸೃಪ್ತಾಸಂಖ್ಯಾ" (ನಿರು ೪-೨೬) ಇತ್ಯುಕ್ತೇಃ ಸೃಪೇರ್ಗತ್ಯರ್ಥಾತ್ ಸಪ್ಯಶೂಭ್ಯಾಂ ತುಟ್ ಚ" (ಉ. ೧-೧೫೫) ಇತಿ ಸಪೇರ್ವಿಧೀಯಮಾನಃ ಕನಿನ್‌ಪ್ರತ್ಯಯಸ್ತುಡಾಗಮಶ್ಚ ಬಾಹುಲಕಾದ್ ಭವತಿ। ಋಕಾರಸ್ಯಾಕಾರಶ್ಚ। ಷಡ್ಭ್ಯಃ ಸಕಾಶಾತ್ ಸೃಪ್ತಾ ಸಂಖ್ಯಾ ಸಪ್ತ॥ ಋಷ-ಗತೌ (ತು. ಪ.) ಅನೇಕಾರ್ಥತ್ವಾದ್ಧಾತೂನಾಂ ದರ್ಶನಾರ್ಥಃ। 'ಇಗುಪಧಾತ್—'(ಉ. ೪-೧೧೬) ಇತಿ ಇನ್ ಪ್ರತ್ಯಯಃ। ಋಷಯಃ ದ್ರಷ್ಟಾರಃ ॥ ಸಪ್ತಸಂಖ್ಯಾಕಾಶ್ಚ ತೇ ಋಷಯೋ ದ್ರಷ್ಟಾರಶ್ಚ ತ್ರೈಲೋಕ್ಯಸ್ಯೇತಿ ಸಪ್ತಋಷಯಃ॥**

ಇಲ್ಲಿ ಎರಡು ಪದಗಳಿಗೆ ಸಮಾಸವಾಗಿದೆ. ನಿರುಕ್ತ ರೀತಿಯಿಂದ ಸಪ್ತ ಎಂಬುದು ಗತ್ಯರ್ಥಕವಾದ ಸೃಪ್ ಧಾತುವಿನಿಂದುಂಟಾಗಿದೆ. ಬಹುಲಗ್ರಹಣದಿಂದ ಸಪ್‌ಧಾತುವಿಗೆ ಹೇಳಿದ ಕನಿನ್‌ಪ್ರತ್ಯಯ ಮತ್ತು ತುಡಾಗಮವು ಇದಕ್ಕೂ ಬರುತ್ತವೆ ಧಾತುವಿನ ಋಕಾರಕ್ಕೆ ಅಕಾರಾದೇಶ. ತುಟ್ ಟಿತ್ತಾದುದರಿಂದ ಕನಿನಿನ ಆದಿಗೆ ಬಂದರೆ ತ್ + ಅನ್ = ತನ್ ಎಂದಾಗುತ್ತದೆ. ಸಪ್ + ತನ್. ನಾಂತಪದವಾಗುತ್ತದೆ. ಆರರಿಂದ ಮುಂದುವರಿದ ಸಂಖ್ಯೆ ಸಪ್ತ = ಏಳು. ಧಾತುಗಳಿಗೆ ಅನೇಕಾರ್ಥಗಳಿವೆಯೆಂದುದರಿಂದ ಗತ್ಯರ್ಥಕವಾದ ಋಷಧಾತುವಿಗೆ ಇಲ್ಲಿ ದರ್ಶನಾ (ನೋಡುವುದು)ರ್ಥದಲ್ಲಿ "ಇಗುಪಧಾತ್—" ಉಣಾ ಸೂತ್ರದಿಂದ ಇನ್‌ಪ್ರತ್ಯಯ. ಋಷ್ + ಇ. ಕಿತ್ತ್ವಾತಿದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ನೋಡುವವರು ಎಂದರ್ಥ. ಸಪ್ತ ಚ ತೇ ಋಷಯಶ್ಚ. ದ್ವಿಗು ಸಮಾಸ. ಸಪ್ತ + ಋಷಿ ಎಂದಿರುವಾಗ 'ಋತ್ಯಕಃ' (ಪಾ. ಸೂ. ೬-೧-೧೨೮) ಸೂತ್ರದಿಂದ ಪ್ರಕೃತಿಭಾವ ಬರುವುದರಿಂದ ಗುಣ ಬರುವುದಿಲ್ಲ. ಬಹುವಚನದಲ್ಲಿ 'ಸಪ್ತಋಷಯಃ' ರೂಪ. ಮೂರು ಲೋಕಗಳನ್ನು ನೋಡುವ ಏಳು ಕಿರಣಗಳು. ಸೂರ್ಯರಶ್ಮಿ ಏಳು ಎಂದು ನಿರುಕ್ತಕಾರರು ಹೇಳಿರುತ್ತಾರೆ. [೪-೨೬]

ಅಥವಾ ಷಪ-ಸಮವಾಯೇ. ಧಾತು. 'ಧಾತ್ವಾದೇಃ ಷಃ ಸಃ' ಆದಿಗೆ ಸತ್ವ. ಇದಕ್ಕೆ 'ಸಪ್ಯಶೂಭ್ಯಾಂ ತುಟ್ ಚ' ಉಣಾದಿಸೂತ್ರದಿಂದ ಕನಿನ್‌ಪ್ರತ್ಯಯ, ತುಡಾಗಮ. ಹಿಂದಿನಂತೆ ಪ್ರಕ್ರಿಯೆ. ಸಪ್ತ ಎಂದರೆ ಸಮವೇತಗಳು, ಒಟ್ಟಿಗೆ ಕೂಡಿರುವವುಗಳು ಎಂದರ್ಥ. ಋಷ ಧಾತುವಿಗೆ ಗತ್ಯರ್ಥದಲ್ಲಿಯೇ ಇನ್‌ಪ್ರತ್ಯಯ. ಆಗ ಸಪ್ತಋಷಿಪದಕ್ಕೆ ಯಾವಾಗಲೂ ಒಟ್ಟಿಗೆ ನಾನಾ ದಿಕ್ಕುಗಳಿಗೆ ಹೋಗುವವುಗಳು ಎಂದರ್ಥವಾಗುತ್ತದೆ. ಉದಾಹರಣೆ—

**ಯತ್ರಾ ಸಪ್ತಋಷೀನ್ ಪರ ಏಕಮಾಹುಃ [ಋ. ಸಂ. ೮-೩-೧೭-೨]—' ಸಪ್ತ ಋಷಯಃ ಪ್ರತಿಹಿತಾಃ ಶರೀರೇ [ಯ. ವಾ. ಸಂ. ೩೪-೫೫]—ಅತ್ರಾಸತ ಋಷಯಃ ಸಪ್ತ ಸಾಕಮ್ [ಅಥ. ಸಂ. ೧೦-೨೬-೯]**

**[೧೪] ಸಾಧ್ಯಾಃ॥ ರಾಧಾ ಸಾಧಾ ಸಂಸಿದ್ಧೌ [ಸ್ವಾ. ದಿ. ಪ.] ' ಋಹಲೋರ್ಣ್ಯತ್ ' [ಪಾ. ಸೂ. ೩-೧-೧೨೪] ಇತಿ ಣ್ಯತ್ ಪ್ರತ್ಯಯಃ । 'ಕೃತ್ಯಲ್ಯುಟೋ ಬಹುಲಮ್' [ಪಾ. ಸೂ. ೩-೪-೧೧೩] ಇತಿ ಕರ್ತರಿ ಭವತಿ ॥**

ಸಂಸಿದ್ಧ್ಯರ್ಥಕವಾದ ಸಾಧ ಧಾತುವು ಹಲಂತವಾದುದರಿಂದ ಣ್ಯತ್‌ಪ್ರತ್ಯಯ ಉಳಿಯುತ್ತದೆ. ಬಹುಲಗ್ರಹಣದಿಂದ ಇಲ್ಲಿ ಈ ಪ್ರತ್ಯಯ ಕರ್ತ್ರರ್ಥದಲ್ಲಿ ಬರುತ್ತದೆಂದು ತಿಳಿಯಬೇಕು. ಸಾಧ್ + ಯ ಸಾಧ್ಯಾ:. ಬಹುವಚನಾಂತರೂಪ ರಸಾಹರಣ ಮುಂತಾದ ತಮ್ಮ ವ್ಯಾಪಾರವನ್ನು ಸಾಧಿಸಿ ಸಿದ್ಧಿಹೊಂದುತ್ತವೆಂದು ಸ್ಕಂದಸ್ವಾಮಿಯ ಅರ್ಥ. ಭಕ್ತರಿಂದ ಆರಾಧಿಸಲ್ಪಡುತ್ತವೆಂದು ಕ್ಷೀರಸ್ವಾಮಿಯ ಮತ. ಎರಡು ಅರ್ಥಗಳೂ ಕಿರಣಕ್ಕೆ ಸಂಗತವಾಗುತ್ತವೆ. ಉದಾಹರಣೆ—

**ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ (ಋ-ಸಂ-೨-೩-೨೩-೪)**

**(೧೫) ಸುಪರ್ಣಾಃ ॥ ಸೂಪಸೃಷ್ಟಾತ್ ಪ್ಯಾ-ಪಾಲನಪೂರಣಯೋಃ (ಜು-ಕ್ರ್ಯಾ-ಪ) ಇತ್ಯಸ್ಮಾತ್ "ಧಾಪ್ಯಾವಸ್ಯಸ್ಯಜ್ಯತಿಭ್ಯೋ ನಃ" (ಉ-೩-೬) ಇತಿ ನ ಪ್ರತ್ಯಯಃ । "ಪರ್ಣಂ ಪತತೇಃ ಪ್ರೀಣಾತೇಃ ವಾ"— ಇತ್ಯಷ್ಟಾದಶಾಧ್ಯಾಯನುವೃಷ್ಟತ್ವಾತ್ ಪತ್-ಧಾತೋಃ ಬಾಹುಲಕಾದ್ ನ ಪ್ರತ್ಯಯಃ ತಕಾರಶ್ಚ ರೇಫಾದೇಶಶ್ಚ। ಪ್ರೀಣಾತೇರೀಕಾರಸ್ಯ ಅಕಾರಾದೇಶಃ ಸ ಚ ಪಕಾರಾತ್ ಪರಃ ॥**

ಸು ಉಪಸರ್ಗಪೂರ್ವಕವಾದ ಪ್ಯಾ ಧಾತುವಿಗೆ ಔಣಾದಿಕ ನಪ್ರತ್ಯಯ. ಸು+ಪ್ಯಾ+ನ ಎಂದಿರುವಾಗ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ರೇಫದ ಪರದಲ್ಲಿ ನಕಾರ ಬಂದುದರಿಂದ ಣತ್ವ. ಪತ್, ಪ್ಯಾ, ಪ್ರೀ ಧಾತುಗಳಿಂದ ಪರ್ಣಪದವಾಗಿದೆಯೆಂದು ಹದಿನೆಂಟನೆಯ ಅಧ್ಯಾಯವಲ್ಲಿ ಹೇಳಿರುವುದರಿಂದ ಪತ್ ಧಾತುವಿಗೆ ಬಹುಲಗ್ರಹಣದಿಂದ ನಪ್ರತ್ಯಯ ಬಂದರೆ ಆಗ ಧಾತುವಿನ ತಕಾರಕ್ಕೆ ರೇಫಾದೇಶ ಹೇಳಬೇಕು. ಪ್ರೀಧಾತುವಿನ ರೂಪನೆಂದರೆ ಆಗ ಪಕಾರ ರೇಫಗಳ ಮಧ್ಯದಲ್ಲಿ ಅಕಾರಾಗನು ಬಂದಿವೆಯೆಂದು ತಿಳಿಯಬೇಕು. ಇದು ಈಕಾರಕ್ಕೆ ಆದೇಶವಾದುದರಿಂದ ಪರ್ಣವೆಂದಾಗುತ್ತದೆ. ಶಿತಾದಿಗಳನ್ನು ಹೋಗಲಾಡಿಸುವುದರಿಂದ ಚನ್ನಾಗಿ ಜಗತ್ತನ್ನು ಕಾಪಾಡುತ್ತದೆ, ಮಳೆಯಿಂದ ಜಗತ್ತನ್ನು ತುಂಬುತ್ತದೆ, ಶೋಭನಗಮನವುಳ್ಳದ್ದು, ಮಳೆ ಕೊಡುವುದರಿಂದ ಲೋಕವನ್ನು ತೃಪ್ತಿಗೊಳಿಸುತ್ತದೆ ಎಂದರ್ಥವಾಗುತ್ತದೆ.

**"ಬೃಹದ್ವದೇಮ ವಿದಥೇ ಸುವೀರಾಃ"** ಇತ್ಯಾದಿ ಮಂತ್ರಗಳಲ್ಲಿ ಸುವೀರಪದಕ್ಕೆ ವೀರರುಳ್ಳವರು ಎಂದು ನಿರುಕ್ತದಲ್ಲಿ ಅರ್ಥಮಾಡಿರುವುದರಿಂದ ಸು ಎಂಬುದು ಮತ್ವರ್ಥವನ್ನು ಹೇಳುತ್ತದೆ. ಪತ್ ಧಾತುವಿಗೆ ಭಾವಾರ್ಥದಲ್ಲಿ ನಪ್ರತ್ಯಯ. ಹಿಂದಿನಂತೆ ತಕಾರಕ್ಕೆ ರೇಫ. ಪರ್ಣವೆಂದರೆ ಪತನ ಎಂದರ್ಥವಾಗುತ್ತದೆ. ಶೋಭನವಾದ ಪತನವುಳ್ಳದ್ದು ಎಂದರ್ಥ. **"ಸುಪರ್ಣಂ ವಿಪ್ರಾಃ"** ಇತ್ಯಾದಿ ಮಂತ್ರಗಳಲ್ಲಿ ಪರ್ಣವುಳ್ಳದ್ದು. ಸುಪರ್ಣವೆಂದು ಹೇಳಿದೆ. ಉದಾಹರಣೆ—

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮ್ [ಋ. ಸಂ. ೨-೩-೧೮೧] ವಯಃ ಸುಪರ್ಣಾ ಉಪಸೇದುರಿಂದ್ರಮ್ [ಋ. ಸಂ. ೮-೩-೪-೬] ॥**

ಕಿರಣವಾಚಕ ಪದಗಳೆಲ್ಲವೂ ಬಹುವಚನಾಂತವಾಗಿಯೇ ಉಪಲಬ್ಧವಾಗುವುದರಿಂದ ಬಹುವಚನಾಂತವಾಗಿಯೇ ಹೇಳಿದೆ. ಹೀಗೆ ಮುಂದೆ ದಿಙ್ನಾಮಗಳನ್ನೂ ತಿಳಿಯಬೇಕು. ಹದಿನೈದು ಕಿರಣದ ಹೆಸರು ಮುಗಿದಿದೆ.

## ಅಥ ರಶ್ಮಿನಾಮಾನಿ

ಖೇದಯಃ ಇವೇ ಮೊದಲಾದ ಹದಿನೈದು ರಶ್ಮಿ ನಾಮಗಳಲ್ಲಿ ಐದು ನಾಮಗಳು ಸೂರ್ಯನ ಸಂಬಂಧಿಯಾದ ಕುದುರೆಗಳ ಹೆಸರುಗಳನ್ನು ಹೇಳುವ ಕಾರಣ ಸೂರ್ಯನ ಕಿರಣಗಳು ಮತ್ತು ಕುದುರೆಯ ಕಿರಣಗಳು ಎಂಬ ಇವೆರಡಕ್ಕೂ ಸಮಾನವಾಗಿರುತ್ತವೆ.

ರಶ್ಮಿನಾಮಾನ್ಯುತ್ತರಾಣಿ ಪಂಚದಶ।
ರಶ್ಮಿರ್ಯಮನಾತ್ ॥
ತೇಷಾಮಾದಿತಃ ಸಾಧಾರಣಾನಿ ಪಂಚಾಶ್ವರಶ್ಮಿಭಿಃ ॥

ಈ ಮೂರು ವಾಕ್ಯಗಳಿಂದ ಸೂರ್ಯನ ಕಿರಣಗಳು ಸೀರುಗಳು ಮತ್ತು ಸೂರ್ಯನ ಕುದುರೆಗಳು ಎಂಬ ಮೂರು ಪದಾರ್ಥಗಳ ಹೆಸರುಗಳು ವಿವೃತವಾಗಿವೆ. ಕಿರಣವೆಂದರೆ ಎರಚುವುದು ಎಂದರ್ಥ. ಅಂತರಿಕ್ಷದಲ್ಲಿ ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡಿರುವುವು. ಕ್ರಿಯಾಪದದ ಅರ್ಥವು ಈ ಮೂರು ಪದಾರ್ಥಗಳಲ್ಲಿಯೂ ಇರುವುದರಿಂದ ಈ ಮೂರು ಪದಕ್ಕೂ ಹೆಸರುಗಳೂ ಸಾಮಾನ್ಯವಾಗಿವೆ.

ಆದಿತ್ಯನೆಂಬ ಪದಕ್ಕೆ ದೇವತೆಯೆಂಬ ಅರ್ಥವಾದರೆ ರಶ್ಮಿ ಅಥವಾ ಕಿರಣ ಎಂದೂ ಮೋಡವೆಂದು ಅರ್ಥವನ್ನು ಹೇಳುವಾಗ ರಶ್ಮಿ ಪದಕ್ಕೆ ಉದಕವೆಂದೂ, ರಥದಲ್ಲಿದ್ದುಕೊಂಡು ಸರ್ವದಾ ಸಂಚರಿಸುವನೆಂಬ ಅರ್ಥವನ್ನು ಹೇಳುವಾಗ ಕುದುರೆ ಎಂದೂ, ಅಧಿದೇವ, ಅಧಿಭೂತ,, ಅಧಿಯಜ್ಞ ಎಂಬ ಮೂರು ವಿಧವಾದ ಅರ್ಥವು ಇಲ್ಲಿ ಸೂಚಿತವಾಗಿದೆ.

## ಅಥ ದಿಙ್ನಾಮಾನಿ

ಆತಾ: (೧) ಆಶಾ: (೨) ಉಪರಾ: (೩) ಆಷ್ಠಾ: (೪) ಕಾಷ್ಠಾ: (೫)
ವ್ಯೋಮ (೬) ಕಕುಭ: (೭) ಹರಿತ: (೮) ಇತ್ಯಷ್ಟೌ ದಿಙ್ನಾಮಾನಿ ||

ಹೀಗೆ ಈ ಎಂಟು ದಿಕ್ಕುಗಳ ಹೆಸರು

**[೧] ಆತಾ: ಆಙ್‌ಪೂರ್ವಾದತತೇರ್ಗತಿಕರ್ಮಣ: [ಭೂ-ಪ-] "ಅಕರ್ತರಿ ಚ ಕಾರಕೇ-' [೩-೩ ೧೯ ಪಾ-ಸೂ] ಇತಿ ಘಞ್ । ಅಭಿಮುಖ್ಯೇನ ಗಮ್ಯಂತೇ ಪ್ರಾಣಿಭಿಸ್ತಂ ತಂ ಕಾರ್ಯಂ ಪ್ರತಿ||**

ಅತ-ಸಾತತ್ಯಗಮನೇ ಧಾತು. ಇದಕ್ಕೆ 'ಅಕರ್ತರಿ'—ಸೂತ್ರದಿಂದ ಘಞ್ ಬಂದಾಗ ಅದು ಞಿತ್ತಾದುದರಿಂದ 'ಅತ ಉಪಧಾಯಾ:' ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. ಆತ್+ಅ. ಬಹುವಚನದಲ್ಲಿ ಆತಾ: ಎಂದು ರೂಪವಾಗುತ್ತದೆ. ಪ್ರಾಣಿಗಳು ತಮ್ಮ ತಮ್ಮ ಕಾರ್ಯಕ್ಕೋಸ್ಕರ ಇದರ ಅಭಿಮುಖವಾಗಿ ಹೋಗುತ್ತಾರೆ ಎಂದರ್ಥ. ಅಥವಾ ತನು-ವಿಸ್ತಾರೇ. ಧಾತು. ಇದಕ್ಕೆ ಆಙ್ ಉಪಸರ್ಗಪೂರ್ವದಲ್ಲಿರುವಾಗ ಬಹುಲಗ್ರಹಣದಿಂದ 'ಉಪಸರ್ಗೇಚ ಸಂಜ್ಞಾಯಾಮ್' [ಪಾ-ಸೂ ೩-೨-೯೯] ಸೂತ್ರದಿಂದ ಜನಧಾತುವಿಗೆ ಹೇಳಿದ ಡಪ್ರತ್ಯಯ ಬರುತ್ತದೆ. ಡಿತ್ತಾದುದರಿಂದ ಧಾತುವಿನ ಟಿಗೆ [ಅನ್] ಲೋಪ ಆತ್+ಅ. ಎಲ್ಲಾಕಡೆ ವ್ಯಾಪಿಸಿರುವುದು ವಿಸ್ತೃತವಾಗಿರುವುದು. ದಿಕ್ಕು ಎಲ್ಲಿನೋಡಿದರೂ ಅಲ್ಲಿ ಇರುತ್ತದೆ. ಉದಾಹರಣೆ–

ಋಜ್ಯಂತ್ಯಾತಾಃ ಸುಸಮ್ಯೃಷಾಸಃ [ಋ ಸಂ ೩-೩-೭-೬]—"ಉದಾತ್ಯೈಜಿಹತೇ ಬೃಹದ್ವಾರೋ" [ಋ. ಸಂ. ೬-೭-೨೫-೫] ||

**[೩] ಆಶಾಃ || ಆಙ್‌ಪೂರ್ವಾತ್ ಶದ್ಲೃ-ಶಾತನೇ [ಭೂ-ಪ] ಇತ್ಯಯಮತ್ರ ಗತ್ಯರ್ಥಃ, ಅನೇಕಾರ್ಥತ್ವಾದ್ಧಾತೂನಾಮ್ । ಪೂರ್ವವಡ್ಡಃ । ತಂತಮರ್ಥಂ ಪ್ರತ್ಯಾಗಮನಾತ್ ||**

ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಶಾತನಾರ್ಥಕ ಶದ್‌ಧಾತುವಿಗೆ ಇಲ್ಲಿ ಗಮನಾರ್ಥ ತೋರುವಾಗ ಹಿಂದಿನಂತೆ ಬಹುಲಗ್ರಹಣದಿಂದ ಡಪ್ರತ್ಯಯ. ಆಙ್ ಉಪಸರ್ಗ, ಆ+ಶದ್+ಅ ಎಂದಿರುವಾಗ ಟಿಲೋಪ [ಅದ್]. ಆಶಾಃ. ಬಹುವಚನ.

ಹಿಂದಿನಂತೆಯೇ ಅರ್ಥನಾಗುತ್ತದೆ. ಅಥವಾ ಆ ಎಂಬುದು ಅಭಿ ಎಂಬರ್ಥದಲ್ಲಿರುವ ನಿಪಾತ. ಅಶೂ ವ್ಯಾಪ್ತೌ. ಧಾತು. ಇದಕೆ, ಆ ಉಪಪದವಾಗಿರುವಾಗ ಘಞ್ಪ್ರತ್ಯಯ. ಆ+ಅಶ್+ಅ. ಸವರ್ಣ ದೀರ್ಘ. "ಆ ಅಶ್ನುವತೇ ಇತಿ ಆಶಾ." ಸುತ್ತಲೂ ವ್ಯಾಪಿಸಿರುತ್ತವೆ. ಪರಸ್ಪರ ಸೇರಿರುತ್ತವೆ–ಎಂದರ್ಥ. ಉದಾಹರಣೆ—

**ಇಂದ್ರ ಆಶಾಭ್ಯಸ್ಪರಿ** [ಋ. ಸಂ. ೨-೮-೯-೨] ||

[೩] **ಉಪರಾಃ || ಉಪರಮಂತೇ ಆಸ್ವಭ್ರಾಣಿ ಪ್ರಾಣಿನೋ ವಾ ಸ್ವಸ್ವವ್ಯಾಪಾರೇಭ್ಯಃ | ಪೂರ್ವವತ್ ಡಃ ||**
ರಮು-ಕ್ರೀಡಾಯಾಮ್. ಧಾತು. ಉಪ-ಉಪಸರ್ಗಪೂರ್ವದಲ್ಲಿರುವಾಗ ಇದಕ್ಕೆ ಬಹುಲಗ್ರಹಣದಿಂದ ಡಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ [ಅಮ್] ಲೋಪ. ಉಪ+ರ್+ಅ. ಬಹುವಚನದಲ್ಲಿ ಉಪರಾಃ ರೂಪವಾಗುತ್ತದೆ. ಇವುಗಳಲ್ಲಿ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರದಿಂದ ವಿಶ್ರಮಿಸಿರುತ್ತವೆ. ವಿಶ್ರಾಂತಿಗೋಸ್ಕರ ಯಾವುದಾದರೊಂದು ದಿಕ್ಕಿನಲ್ಲಿ ಕುಳಿತಿರುತ್ತವೆ. ಮೇಘಗಳು ಇರುತ್ತವೆ ಎಂದರ್ಥ. ತಮುಸ್ಯ "ಪೃಕ್ಷುಮುಪರಾಸು ಧೀಮಹಿ" ಎಂಬಲ್ಲಿ ಉಪರಾಶಬ್ದ ದಿಗಾಚಕ ಎಂಬುದರಲ್ಲಿ ಸಂದೇಹವಿದೆ. ಉದಾಹರಣೆ—

**ಉಪಹ್ವರೇ ಯದುಪರಾ ಅಪಿನ್ವನ್** [ಋ. ಸಂ. ೧-೫-೨-೧]

[೪] **ಆಷ್ಠಾಃ | ಆಙ್ಪೂರ್ವಾತ್ ತಿಷ್ಠತೇಃ** [ಭೂ. ಪ] **ಧಾತೋರ್ಘಞರ್ಥೇ ಕವಿಧಾನಮ್ | ಸ್ಥಾಸ್ನಾಗಾಪಾವ್ಯಧಿಹನಿಯುಧ್ಯರ್ಥಮ್** [ಮ. ಭಾ. ೩-೩-೧೯] **ಇತಿಕ ಪ್ರತ್ಯಯ, || ಸುಷಾಮಾದಿತ್ವಾತ್ ಷತ್ವಮ್ | ಆಸಮಂತಾತ್ ಸ್ಥೀಯತೇ ಆಭಿಃ ||**

ಷ್ಠಾ ಗತಿ ನಿವೃತ್ತೌ ಧಾತು. ಆಙ್ ಉಪಸರ್ಗ ಪೂರ್ವದಲ್ಲಿರುವಾಗ ಈ ಧಾತುವಿಗೆ ಘಞರ್ಥ ತೋರುವಾಗ ಕ ಪ್ರತ್ಯಯ. ಧಾತ್ವಾದಿಗೆ ಸತ್ವ. ಆ+ಸ್ಥಾ+ಅ. 'ಆತೋಲೋಪ ಇಟಚ' ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ. ಸುಷಾಮಾದಿಗಣದಲ್ಲಿ ಸೇರಿರುವುದರಿಂದ 'ಸುಷಾಮಾದಿಷು ಚ ಸೂತ್ರದಿಂದ ಸಕಾರಕ್ಕೆ ಷತ್ವ. ಬಹುವಚನದಲ್ಲಿ ಆಷ್ಠಾಃ ಎಂದಾಗುತ್ತದೆ. ಸುತ್ತಲೂ ಇದು ಇರುತ್ತದೆ ಎಂದರ್ಥವಾಗುತ್ತದೆ. ಇದಕ್ಕೆ ಉದಾಹರಣೆ ನಿಗಮ ಹುಡುಕಬೇಕು.

[೫] **ಕಾಷ್ಠಾಃ || ಕಾಶೃ ದೀಪ್ತೌ** [ಭೂ. ಆ.] **'ಹನಿಕುಷಿನೀರಮಿಕಾಶಿಭ್ಯಃ ಕ್ಥನ್** [ಉ. ೨-೨] **ಇತಿ ಕ್ಥನ್ ಪ್ರತ್ಯಯಃ | 'ತಿತುತ್ರತಥಸಿಸುಸರಕೇಷು' ಚ** [ಪಾ. ಸೂ. ೭-೨-೯] **ಇತಿ ಇಡಭಾವಃ | ಕಾಶಂತೇ ದೀಪ್ಯಂತೇ ಕಾಷ್ಠಾಃ ||**

ದೀಪ್ತ್ಯರ್ಥಕ ಕಾಶ್‌ಧಾತುವಿಗೆ 'ಹನಿಕುಷಿ—' ಉಣಾದಿ ಸೂತ್ರದಿಂದ ಥ ಎಂಬುದಕ್ಕೆ ಇಣ್ನಿಷೇಧ ಮಾಡಿರುವುದರಿಂದ ಇಡಾಗಮ ಬರುವುದಿಲ್ಲ. ಕಾಶ್+ಥ ಎಂದಿರುವಾಗ 'ವ್ರಶ್ಚಭ್ರಸ್ಜ—' ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. ಷಕಾರದ ಪರದಲ್ಲಿರುವ ಥಕಾರಕ್ಕೆ ಷ್ಟುತ್ವ. ಬಹುವಚನದಲ್ಲಿ ಕಾಷ್ಠಾಃ ಎಂದಾಗುತ್ತದೆ. ಪ್ರಕಾಶಿಸುವವುಗಳು ಎಂದರ್ಥ.

'ಕಾಷ್ಠಾ ದಿಶೋ ಭವಂತಿ" ಎಂಬ ನಿರುಕ್ತವ್ಯಾಖ್ಯಾನಮಾಡಿದ ಕ್ಷೀರಸ್ವಾಮಿಯು ಇದು ಕ್ರಾಂತ್ವಾ, ಸ್ಥಿತಾ ಎಂದು ಎರಡು ಶಬ್ದಗಳಿಂದ ಆಗಿದೆಯೆಂದು ಹೇಳಿರುತ್ತಾನೆ. ಪೃಷೋದರಾದಿ ಗಣದಲ್ಲಿ ಪಠಿತವಾದುದರಿಂದ ಇಷ್ಟ ರೂಪವಾಗಿದೆ. ಆಕಾಶದಂತೆ ದಿಕ್ಕೂ ಕೂಡಾ ಎಲ್ಲವನ್ನೂ ಅತಿಕ್ರಮಿಸಿರುತ್ತದೆ ಎಂದರ್ಥ. ಉದಾಹರಣೆ—

**ನರಸ್ತ್ವಾಂ ಕಾಷ್ಠಾಸ್ವರ್ವತಃ [ಋ. ಸಂ. ೪-೭-೨೭-೧]**

**[೨] ವ್ಯೋಮ ॥ ವ್ಯಾಖ್ಯಾತಮಂತರಿಕ್ಷನಾಮಸು ॥ [೩] ಸ ಏ ವಾರ್ಥೋऽತ್ರಾಪಿ ॥**

ಆಕಾಶನಾಮ ಹೇಳುವಾಗ ಇದು ವ್ಯಾಖ್ಯಾತವಾಗಿದೆ. ಅವಧಾತುವಿಗೆ ಮನಿನ್ ಬಂದು ಈ ರೂಪವಾಗಿದೆ. ಸರ್ವವನ್ನೂ ವ್ಯಾಪಿಸಿರುತ್ತದೆ, ವಿವಿಧವಾದ ಪ್ರಾಣಿಗಳ ಗಮನವುಳ್ಳದ್ದು ಮುಂತಾದ ಅರ್ಥವನ್ನು ಹಿಂದೆ ಹೇಳಿದಂತೆಯೇ ತಿಳಿಯಬೇಕು. "ಅಂಜೇರ್ವಾ ಓವನ್" ಎಂದು ಮಾಧವರಮತ. ವಿವಿಧವಾದ ಓಮ=ಅನ್ನವುಳ್ಳದ್ದು ವ್ಯೋಮ ಎಂದಾಗುತ್ತದೆ. "ಪವಮಾನ್ನೋ ಹರಿತ್ರ—ಆ ವಿವೇಶ" ಎಂಬ ಶ್ರುತಿಯಲ್ಲಿ ಹೇಳಿದಂತೆ ಗಾಳಿಯಿಂದ ವ್ಯಾಪ್ತವಾದದ್ದು ಎಂದರ್ಥವಾಗುತ್ತದೆ ದಿಗರ್ಥವನ್ನು ಕೊಡುವ ವ್ಯೋಮಶಬ್ದಕ್ಕೆ ಉದಾಹರಣೆ ಹುಡುಕಬೇಕು.

**[೭] ಕಕುಭಃ । ಕುಭಿ-ಆಚ್ಛಾದನೇ । "ಕ್ವಿಬ್ವಚಿಪ್ರಚ್ಛ್ಯ್ಯಾಯತಸ್ತು"—[ಪಾ. ಸೂ. ೩-೨-೧೭೮ ವಾ] ಇತ್ಯತ್ರ "ಪ್ರಾಕ್ ಪ್ರತ್ಯಯನಿರ್ದೇಶಾದಿಷ್ಟಸಿದ್ಧಿಃ [ಮ-ಭಾ] ಇತ್ಯುಕ್ತೇಃ ಕ್ವಿಪಿ ಪೃಷೋದರಾದಿತ್ವಾಚ್ಚ ರೂಪಸಿದ್ಧಿಃ ॥**

"ಕ್ವಿಬ್ವಚಿ—" ಎಂಬ ವಾರ್ತಿಕವ್ಯಾಖ್ಯಾನಮಾಡುವಾಗ ಭಾಷ್ಯಕಾರರು ಪ್ರತ್ಯಯ ಹೇಳಬೇಕಾದರೆ ಮೊದಲು ಅರ್ಥಸಂಪತ್ತಿಗೋಸ್ಕರ ಯೋಗ್ಯಧಾತುವನ್ನು ನಿರ್ಣಯಿಸಿರಬೇಕೆಂದುದರಿಂದ ಇಲ್ಲಿ ಕುಭಿಧಾತುವಿಗೆ ಕ್ವಿಪ್‌ಪ್ರತ್ಯಯ ಹೇಳಬೇಕು. ಪೃಷೋದರಾದಿ ಗಣದಲ್ಲಿ ಸೇರಿರುವುದರಿಂದ ಅಭಿಮತವಾದ ರೂಪಸಿದ್ಧಿಯಾಗುತ್ತದೆ. ವಿಸ್ತಾರಪಡಿಸುವುದರಿಂದ ಕಕುಪ್ ಎಂದು ಕ್ಷೀರಸ್ವಾಮಿಯೂ. ಉಚ್ಛ್ರಾಯಾರ್ಥಕಕುಭ್‌ಧಾತುವಿನಿಂದ ಕಕುಪ್‌ಶಬ್ದವಾದುದರಿಂದ ಮರ ಮುಂತಾದುವುಗಳ ಮೇಲೂ ತೋರುವುದರಿಂದ ಎತ್ತರವಾಗಿರುವುದು ಎಂದು ಮಾಧವರೂ ವ್ಯಾಖ್ಯಾನಮಾಡಿರುತ್ತಾರೆ. ಯಾವ ಬ್ರಹ್ಮನು ಇದನ್ನು ಇಷ್ಟು ವಿಸ್ತಾರವಾಗಿ ಮಾಡಿರುತ್ತಾನೆ ಎಂದರ್ಥವಾಗುವುದರಿಂದ ಕಿಂ, ಕುಭ್ ಎರಡು ಪದದಿಂದ ಇಷ್ಟ ರೂಪವಾಗಿದೆ ಎಂದು ಕೆಲವರ ಮತ. ಉದಾಹರಣೆ—

**ಕಕುಭೋ ನಿಧಾರಯಃ [ಋ. ಸಂ. ೬-೩-೨೬-೪]**

**[೮] ಹರಿತಃ ॥ ಹೃಞ್-ಹರಣೇ. [ಭೂ-ಉ-] ಹೃ-ಪಸಹ್ಯಕರಣೇ [ಜು-ಪ-] 'ಹೃಸೃರುಹಿಪುಷಿಭ್ಯಃ' 'ಹೃಶ್ಯಾಭ್ಯಾಮಿತನ್' [ಉ-೩-೯೦] ಇತಿ ಇತಿ:॥ 'ಂರಂತ್ಯಾಭಿ:' ಇತಿ ಕ್ಷೀರಸ್ವಾಮೀ॥**

ಬಲಾತ್ಕರಿಸುವುದು, ಅಥವಾ ಅಪಹರಿಸುವುದು ಎಂಬರ್ಥವನ್ನು ಕೊಡುವ ಹೃಧಾತುವಿಗೆ 'ಹೃಶ್ಯಾ'—ಉಣಾದಿ ಸೂತ್ರದಿಂದ ಇತನ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ ಹರ್+ಇತ್. ಬಹುವಚನದಲ್ಲಿ ಹರಿತ: ಎಂದಾಗುತ್ತದೆ. ಇವರಲ್ಲಿದ್ದು ಕಳ್ಳಕಾಕರು ಧನಾದಿಗಳನ್ನು ಅಪಹರಿಸುತ್ತಾರೆ. [ದಿಕ್ಕಿನಮೂಲಕ ಅಪಹರಿಸುತ್ತಾರೆ] ಎಂದರ್ಥ. ಉದಾಹರಣೆ—

**ಪವಮಾನೋ ಹರಿತ ಆ 'ವಿವೇಶ [ಯ-ಸಂ-೬-೭-೮-೩]' ವಾಯುರೇಷ ಪವಮಾನೋದಿಶೋ ಹರಿತ ಆವಿಷ್ಟೇ [ಐ-ಆ-೨-೩]**

ಹೀಗೆ ಎಂಟು ದಿಕ್ಕುಗಳ ಹೆಸರ ॥೬॥

———

## ಅಥ ದಿಜ್‌ನಾಮಾನಿ

ದಿಜ್‌ನಾಮಾನ್ಯುತ್ತರಾಣ್ಯಷ್ಟೌ ॥
ದಿಶಃ ಕಸ್ಮಾದ್ದಿಶತೇರಾಸದನಾದಪಿ ವಾಭ್ಯಶನಾತ್
॥ ತತ್ರ ಕಾಷ್ಠಾ ಇತ್ಯೇತದನೇಕಸ್ಯಾಪಿ ಸತ್ತ್ವಸ್ಯ ನಾಮ ಭವತಿ ॥

ಸೂರ್ಯನು ಎಂಬ ಅರ್ಥವನ್ನು ಆದಿತ್ಯ ಪದಕ್ಕೆ ಹೇಳಿದನಂತರ ಈ ಸೂರ್ಯನಿಗೆ ಉದಯಾಸ್ತಗಳ ವ್ಯವಸ್ಥೆಯಿಂದ ದಿಕ್ಕುಗಳ ಹೆಸರನ್ನು ಹೇಳಬೇಕಾಗಿರುವ ಕಾರಣ ಈಗ 'ಆಶಾಃ' ಎಂಬಿವೇ ಮೊದಲಾದ ಎಂಟು ದಿಕ್ಕುಗಳ ಹೆಸರು ಉಕ್ತವಾಗಿವೆ. ಜನಗಳಿಗೆ ಅಪೇಕ್ಷಿತವಾಗಿರುವ ಆಯಾಯ ಪದಾರ್ಥಗಳನ್ನು ಕುರಿತು ಇತರರನ್ನು ಈ ಪ್ರದೇಶಗಳು ಬರಮಾಡಿಕೊಳ್ಳುವುದರಿಂದ 'ಆಶಾಃ' ಎಂದೂ ಆಯಾ ಪ್ರದೇಶಗಳನ್ನೊಳಗೊಂಡಿರುವುದರಿಂದ 'ಆಶಾಃ ಎಂದೂ, ಎಲ್ಲಲೂ ಆಯಾಯ ಪ್ರದೇಶಗಳಲ್ಲಿ ಆಸಕ್ತರಾಗಿರುವುದರಿಂದ 'ಉಪರಾಃ' ಎಂದೂ ಈ ಶಬ್ದಗಳ ಅರ್ಥವು ಉಕ್ತವಾಗಿವೆ. ಹವಿಸ್ಸೇ ಮೊದಲಾದವುಗಳನ್ನು ದೇವತೆಗಳಿಗೆ ಹೊಂದಿಸಲು ಅನುಕೂಲವಾದ ಪ್ರದೇಶಗಳಾದ ಕಾರಣ ದಿಕ್ಕುಗಳೆಂದೂ, ಆಯಾಯ ವಸ್ತುಗಳನ್ನು ಹುಡುಕಿಕೊಂಡು ಈ ಪ್ರದೇಶಗಳನ್ನು ಕುರಿತು ಬರುವ ಕಾರಣ ಇವುಗಳಿಗೆ ದಿಕ್ಕುಗಳೆಂಬುದಾಗಿಯೂ ಹೆಸರು ಬಂದಿದೆ. ಆಯಾಯ ಪದಾರ್ಥಗಳಿಂದ ವ್ಯಾಪ್ತವಾಗಿರುವುದರಿಂದಲೂ ಹೆಸರು ಬಂದಿದೆ.

ಇದರಲ್ಲಿ ಕಾಷ್ಠಾ ಎಂಬ ಪದವು ದಿಕ್ಕು ಎಂಬ ಅರ್ಥವನ್ನು ಹೇಳುವಂತೆ ಬೇರೆ ಬೇರೆ ಪದಾರ್ಥಗಳ ಹೆಸರಾಗಿರುವುದು. ರೂಢ್ಯರ್ಥವನ್ನನುಸರಿಸಿ ದಿಕ್ಕು ಎಂಬ ಹೆಸರಾಗಿರುತ್ತದೆ. ಅವಯವಾರ್ಥವನ್ನು ಅನುಸರಿಸಿ ಬೇರೆ ಪದಾರ್ಥಗಳನ್ನು ಬೋಧಿಸುವುದಾಗಿ ಇರುತ್ತದೆ.

ಕಾಷ್ಠಾ ದಿಶೋ ಭವಂತಿ ಕ್ರಾಂತ್ವಾ ಸ್ಥಿತಾ ಭವಂತಿ ॥

ಎಲ್ಲೆಗಳನ್ನು ಮೀರಿ ಕೊನೆಯಲ್ಲಿರುವುದರಿಂದ ದಿಕ್ಕುಗಳಿಗೆ 'ಕಾಷ್ಠಾ' ಎಂದು ಹೆಸರು ಬಂದಿದೆ. ಇವುಗಳು ಅಂದರೆ ಕಡ್ಡಿಗಳು ಇಲ್ಲದಿರುವ ಪ್ರದೇಶವಿಲ್ಲದಿರುವುದಿಲ್ಲ. ಆದ್ದರಿಂದಲೇ ಕಾಷ್ಠಾ ಎಂದು ಹೆಸರು. [೨-೧೫-೭]

ಕಾಷ್ಠಾ ಉಪದಿಶೋ ಭವಂತೀತರೇತರಂ ಕ್ರಾಂತ್ವಾ ಸ್ಥಿತಾ ಭವಂತಿ॥

ದಿಕ್ಕುಗಳ ಮಧ್ಯ ಪ್ರದೇಶಗಳು ದಿಕ್ಕುಗಳಿಗೆ (ಒಂದಕ್ಕೊಂದು) ಪರಸ್ಪರವಾಗಿ ಸಂಬಂಧಿಸಿರುವ ಕಾರಣ 'ಉಪದಿಶಃ' ಎಂದರೆ ವಿದಿಕ್ಕು ಎನ್ನಿಸಿಕೊಳ್ಳುತ್ತವೆ. ಅವಯವಾರ್ಥವು ಹೀಗೆ ಇರುವ ಕಾರಣ ಕಾಷ್ಠಾ ಎಂಬ ಶಬ್ದಕ್ಕೆ ವಿದಿಕ್ಕುಗಳು ಎಂದರ್ಥವಾಗುತ್ತವೆ. ದಿಕ್=ಪೂರ್ವ, ಪಶ್ಚಿಮ ದಕ್ಷಿಣ, ಉತ್ತರಗಳು. ವಿದಿಕ್=ಆಗ್ನೇಯ, ನೈರುತ್ಯ, ವಾಯುವ್ಯ, ಈಶಾನ್ಯ ಒಟ್ಟು ಎಂಟು ದಿಕ್ಕುಗಳು.

॥ ಆದಿಕ್ಯೇಽಪಿ ಕಾಷ್ಠೋಚ್ಯತೇ ಕ್ರಾಂತ್ವಾ ಸ್ಥಿತೋ ಭವತಿ ॥

ಆದಿತ್ಯ, ಸೂರ್ಯನೂ ಕೂಡ ಕಾಷ್ಠಾ ಎಂಬ ಶಬ್ದದಿಂದ ಹೇಳಲ್ಪಡುವನು. ತನ್ನ ಸ್ಥಾನದಲ್ಲಿ ಇದ್ದುಕೊಂಡು ಎಲ್ಲವನ್ನೂ ಆಕ್ರಮಿಸಿ ಇರುವವನು. ಆದಕಾರಣ ಆ ಕಾಷ್ಠಾ ಎಂಬ ಶಬ್ದದಿಂದ ವ್ಯವಹೃತನಾಗಿರುವನು.

॥ ಅಜ್ಯಂತೋಽಪಿ ಕಾಷ್ಠೋಚ್ಯತೇ ಕ್ರಾಂತ್ವಾ ಸ್ಥಿತೋ ಭವತಿ ॥

ಯುದ್ಧರಂಗದ ಮಧ್ಯಪ್ರದೇಶವನ್ನು ಕಾಷ್ಠಾ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ಪ್ರದೇಶದಲ್ಲಿ ಬಾಣಗಳು ಗುರಿಯನ್ನನುಸರಿಸಿ ಬೀಳುವುದರಿಂದ ಬಾಣಗಳಿಂದ ವ್ಯಾಪ್ತವಾದ ಪ್ರದೇಶವಾದ ಕಾರಣ ಈ ಹೆಸರು ಬಂದಿದೆ.

॥ಆಪೋಽಪಿ ಕಾಷ್ಠಾ ಉಚ್ಯಂತೇ ಕ್ರಾಂತ್ವಾ ಸ್ಥಿತಾ ಭವತೀತಿ ಸ್ಥಾವರಾಣಾಮ್॥

ನೀರೂ ಕೂಡ ಭೂಮಿಯಲ್ಲಿರುವುಗಳು, ಅಂತರಿಕ್ಷದಲ್ಲಿರುವುಗಳು ಎಂದು ಎರಡು ವಿಧವಾಗಿರುತ್ತದೆ ಇವುಗಳು ಸ್ಥಿರವಾಗಿ ನಿಲ್ಲುವ ಪ್ರದೇಶವನ್ನು ಹುಡುಕಿಕೊಂಡು ಇರುವ ಕಾರಣ 'ಕಾಷ್ಠಾ' ಎಂಬ ಶಬ್ದಕ್ಕೆ ಹೆಸರಾಗಿದೆ. ಅಂತರಿಕ್ಷದಲ್ಲಿರುವ ನೀರುಗಳು ಭೂಮಿಯ ಸಂಬಂಧವನ್ನು ಹೊಂದಿವೆ ಎಲ್ಲಿಯೂ ಸ್ಥಿರವಾಗಿ ನಿಲ್ಲದಿರುವ ಕಾರಣ ಈ ನೀರುಗಳಿಗೂ 'ಕಾಷ್ಠಾ' ಎಂಬ ಪದದಿಂದ ಇವುಗಳು ಉಕ್ತವಾಗಿವೆ. ಹೀಗೆ ಕಾಷ್ಠಾ ಎಂಬ ಶಬ್ದಕ್ಕೆ ದಿಕ್ಕು, ವಿದಿಕ್ಕು, ಸೂರ್ಯ, ಯುದ್ಧರಂಗದ ಮಧ್ಯಪ್ರದೇಶ, ನೀರು ಎಂಬುದಾಗಿ ಐದು ವಿಧವಾದ ಅರ್ಥವನ್ನು ಇಲ್ಲಿ ವಿವರಿಸಿದೆ. ಮೊದಲಿರುವ ದಿಙ್ನಾಮಗಳಲ್ಲಿ ಕೆಲವಕ್ಕೆ ಒಂದೇ ವಿಧವಾದ ಅರ್ಥವನ್ನು ಹೇಳಿದೆ. ಕೆಲವಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಕಾಷ್ಠಾ ಎಂಬ ಶಬ್ದಕ್ಕೆ ಮಾತ್ರ ಅನೇಕ ವಿಧವಾದ ಅರ್ಥವನ್ನು ಹೇಳಿದೆ. ಇದರಿಂದ ಈ ಶಬ್ದದಲ್ಲಿ ಇರುವ ಅಧಿಭೂತ, ಅಧಿಯಜ್ಞ, ಅಧಿದೇವತ ಪರವಾದ ಮೂರು ವಿಧವಾದ ಅರ್ಥವನ್ನು ಕೊಡುವ ಮಹತ್ವವು ಇದೆ ಎಂದು ಹೇಳಿದೆ. ಅವರಲ್ಲಿ ಈ ಅರ್ಥವನ್ನು ವಿವರಿಸುವುದಕ್ಕಾಗಿ ಮುಂದಿನ ಮಂತ್ರವನ್ನು ಉದಾಹರಣೆಯಾಗಿ ಕೊಟ್ಟಿದೆ.

**ಇತಿ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು

---

## ಅಥ ಷೋಡಶಃ ಖಂಡಃ

**ಹದಿನಾರನೆಯ ಖಂಡವು**

---

ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ । ವೃತ್ರಸ್ಯ ನಿಣ್ಯಂ ವಿ ಚರಂತ್ಯಾಪೋ ದೀರ್ಘಂ ತಮ ಆಶಯದಿಂದ್ರ ಶತ್ರುಃ ॥ (ಋ. ಸಂ. ೧–೩೨–೧೦) ಅತಿಷ್ಠಂತೀನಾಮನಿವಿಶಮಾನಾನಾಮಿತ್ಯಸ್ಥಾವರಾಣಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ

ಮೇಘಃ ಶರೀರಂ ಶರೀರಂ ಶೃಣಾತೇಃ ಶಮ್ನಾತೇರ್ವಾ ವೃತ್ರಸ್ಯ ನಿಣ್ಯಂ ನಿರ್ಣಾಮಂ ವಿಚರಂತಿ ವಿಜಾನಂತ್ಯಾಪ ಇತಿ ದೀರ್ಘಂ ದ್ರಾಘತೇಸ್ತ-ಮಸ್ತನೋತೇರಾಶಯದಾಶೇತೇರಿಂದ್ರಶತ್ರುರಿಂದ್ರೋಽಸ್ಯ ಶಮಯಿತಾ ವಾ ಶಾತಯಿತಾ ವಾ ತಸ್ಮಾದಿಂದ್ರಶತ್ರುಸ್ತತ್ಕೋ ವೃತ್ರೋ ಮೇಘ ಇತಿ ನೈರುಕ್ತಾಸ್ತ್ವಾಷ್ಟ್ರೋಽಸುರಾ ಇತ್ಯೈತಿಹಾಸಿಕಾ ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣೋ ವರ್ಷಕರ್ಮ ಜಾಯತೇ ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತ್ಯಹಿವತ್ತು ಖಲು ಮಂತ್ರವರ್ಣಾ ಬ್ರಾಹ್ಮಣವಾದಾಶ್ಚ ವಿವೃದ್ಧ್ಯಾ ಶರೀರಸ್ಯ ಸ್ರೋತಾಂಸಿ ನಿವಾರಯಾಂಚಕಾರ ತಸ್ಮಿನ್ ಹತೇ ಪ್ರಸಸ್ಯಂದಿರ ಆಪಸ್ತದಭಿವಾದಿನ್ಯೇಷರ್ಗ್ಭವತಿ ॥೧೬॥

———

“ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಮ್ । ವೃತ್ರಸ್ಯ ನಿಣ್ಯಂ ವಿಚರಂತ್ಯಾಪೋ ದೀರ್ಘಂ ತಮ ಆಶಯ-ದಿಂದ್ರಶತ್ರುಃ ॥” ಅತಿಷ್ಠಂತೀನಾಮನಿವಿಶಮಾನಾನಾಮಿತ್ಯಸ್ಥಾವರಾಣಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ಮೇಘಃ ॥ ಶರೀರಂ ಶೃಣಾತೇಃ ಶಮ್ನಾತೇರ್ವಾ ॥ ವೃತ್ರಸ್ಯ ನಿಣ್ಯಂ ನಿರ್ಣಾಮಮ್ । ವಿಚರಂತಿ ವಿಜಾನಂತ್ಯಾಪ ಇತಿ ॥ ದೀರ್ಘಂ ದ್ರಾಘತೇಃ । ತಮಸ್ತನೋತೇಃ । ಆಶಯದಾ ಶೇತೇಃ । ಇಂದ್ರಶತ್ರುರಿಂದ್ರೋಽಸ್ಯ ಶಮಯಿತಾ ವಾ ಶಾತಯಿತಾ ವಾ ತಸ್ಮಾದಿಂದ್ರಶತ್ರುಃ ॥

ಕಾಷ್ಠಾ ಎಂಬ ಶಬ್ದಕ್ಕೆ ನೀರುಗಳು ಎಂಬ ಅರ್ಥವನ್ನು ಹೇಳಿರುವ ಉದಾಹರಣೆಯನ್ನು ಇಲ್ಲಿ ವಿವರಿಸಲಾಗಿದೆ. ‘ಅತಿಷ್ಠಂತೀನಾಮ್’ ಎಂಬ ಮಂತ್ರದಲ್ಲಿ ‘ಕಾಷ್ಠಾ’ ಎಂಬ ಶಬ್ದಕ್ಕೆ ನೀರುಗಳು ಎಲ್ಲಿಯಾದರೂ ಸ್ಥಿರವಾಗಿ ನಿಲ್ಲದಿರುವ ಕಾರಣ ಅತಿಷ್ಠ್ಯಂತಃ ಎಂದು ಹೇಳಿದೆ. ಈ ನೀರುಗಳು ಮೇಘಗಳ ಮಧ್ಯಭಾಗವನ್ನು ಹೊಂದುತ್ತವೆ. ಮೋಡಗಳಿಂದ ಕರೆಯಲು ಆಧಾರವಾಗಿದ್ದರೂ ಈ ನೀರುಗಳು ಅಲ್ಲಿ ನಿಲ್ಲದೆ ಸಮುದ್ರವೇ ಮೊದಲಾದ ಪ್ರದೇಶಗಳನ್ನು ಹೊಂದುವವರೆಗೂ ಬೇರೆ ಕಡೆ ಎಲ್ಲಿಗೂ ಹೋಗುವುದಿಲ್ಲ. ಹೀಗೆ ಇರುವ ಮೇಘಗಳಿಗೆ ಹೊರಗಡೆಯಲ್ಲಿ ಮೇಘ ಎಂಬ ಹೆಸರಿನಿಂದ ಇರುವ ಒಂದು ಶರೀರವು ರಕ್ಷಣೆಗಾಗಿ ಮಾಡಲ್ಪಟ್ಟಿದೆ. ಈ ನೀರುಗಳು ಮೇಘವು ಹೊಂದಬಹುದಾದ ಅಧಃ ಪ್ರದೇಶವನ್ನು ತಿಳಿದುಕೊಂಡಿರುತ್ತವೆ.

ಅದರಿಂದಲೇ ಇವುಗಳು ಎತ್ತರವಾಗಿರುವ ಮೇಘದಿಂದ ಇಳಿಜಾರಾದ ಪ್ರದೇಶಕ್ಕೆ ಬೀಳುತ್ತವೆ. ಈ ಮೋಡವೂ ಕೂಡ ತನ್ನಲ್ಲಿದ್ದ ನೀರುಗಳು ಹೊರಕ್ಕೆ ಜಾರುತ್ತಿರುವಾಗ ಅದಕ್ಕೆ ವಿರೋಧವಾಗಿರುವಂತೆ ತನ್ನ ಶರೀರವನ್ನು ವೃದ್ಧಿಹೊಂದಿಸುತ್ತದೆ. ಮೋಡವೆಂಬುವುದು ಕತ್ತಲೆಯ ಬಣ್ಣಕ್ಕೆ ಸರಿಯಾಗಿರುವುದು. ಹೊಗೆಯೇ ಮೊದಲಾದವುಗಳಿಂದ ಮೋಡವು ಉತ್ಪನ್ನವಾಗಿರುವ ಕಾರಣ ಬಹಳ ಕಪ್ಪು ಬಣ್ಣದಿಂದ ಕೂಡಿರುತ್ತದೆ. ಮೇಘಗಳಿಂದ ನೀರುಗಳು ಭೂಮಿಗೆ ಬೀಳಲು ಉಪಕ್ರಮ ಮಾಡಿದ ಹಾಗೆಲ್ಲಾ ಮೋಡಗಳಲ್ಲಿವೂ ಬಹಳ ಮಟ್ಟಿಗೆ ವೃದ್ಧಿಯನ್ನು ಹೊಂದುತ್ತವೆ. ಮೋಡಗಳ ಉದ್ದೇಶವು ಭೂಮಿಯಲ್ಲಿ ನೀರು ಬೀಳದಿರಬೇಕೆಂಬುದಾಗಿರುತ್ತದೆ. ಇದರಿಂದಲೇ ಬಹಳವಾದ ಕಪ್ಪು ಬಣ್ಣವನ್ನು ಹೊಂದಿರುತ್ತದೆ. ಇಲ್ಲಿ ವೃತ್ರ ಎಂಬ ಶಬ್ದವೂ, ಇಂದ್ರ ಶತ್ರು ಎಂಬ ಶಬ್ದವೂ ಇರುವ ಕಾರಣ ದೇವತಾನಾಮವನ್ನು ಹೇಳಿದಂತೆ ಮೊದಲನೆಯದಾದ ವೃತ್ರ ಶಬ್ದಾರ್ಥವನ್ನು ವಿವರಿಸಿದೆ. ಮೋಡಗಳಿಗೂ ನೀರಿಗೂ ಪರಸ್ಪರವಾಗಿ ಬಾಧ್ಯಬಾಧಕಭಾವವು ಇಲ್ಲಿ ಉಕ್ತವಾಗಿರುವುದರಿಂದ 'ಇಂದ್ರ' ಮತ್ತು 'ವೃತ್ರ' ಎಂಬ ಶಬ್ದಗಳ ಸಾನ್ನಿಧ್ಯದಿಂದ ವೃತ್ರನೆಂದರೆ ಅಸುರನೆಂದೂ, ಇಂದ್ರನು ಇವನನ್ನು ವಜ್ರಾಯುಧದಿಂದ ನಾಶಪಡಿಸಿದ ಅನಂತರ ಯುದ್ಧ ಪ್ರಕರಣವು ಉಕ್ತವಾಗಿರುವಂತೆ ಹೇಳಿದೆ.

ಶರೀರಂ ಎಂಬ ಪದವು ಹಿಂಸೆಯನ್ನು ಕೊಡುವುದು ಎಂಬ ಅರ್ಥವನ್ನು ಕೊಡುವ 'ಶೄ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. ನೀರಿನ ವಿಷಯದಲ್ಲಿ ಕಾಷ್ಠಾ ಎಂಬ ಶಬ್ದವು ಪ್ರಯುಕ್ತವಾಗಿ ಈ ನೀರುಗಳನ್ನು ವೃತ್ರ ಎಂಬುವುದು ತಡೆಯತಕ್ಕದ್ದು ಎಂದು ಹೇಳಿರುವುದರಿಂದ ಯುದ್ಧವು ನಡೆಯಿತು ಎಂಬ ಅರ್ಥವು ಇಲ್ಲಿ ಸೂಚಿತವಾಗಿದೆ. [೨-೧೬-೧]

ತತ್ಕೋ ವೃತ್ರಃ? ಮೇಘ ಇತಿ ನೈರುಕ್ತಾಃ ॥ ತ್ವಾಷ್ಟ್ರೋಽಸುರ ಇತ್ಯೈತಿಹಾಸಿಕಾಃ ॥ ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವ-ಕರ್ಮಣೋ ವರ್ಷಕರ್ಮ ಜಾಯತೇ ॥ ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ ॥

ವೃತ್ರ ಎಂಬುವುದು ಮೇಘವೆಂದು ವೇದಪದದ ಅರ್ಥವನ್ನು ವಿವರಿಸುವವರು ಹೇಳುತ್ತಾರೆ. ಪುರಾಣದ ಕಥೆಯನ್ನು ಹೇಳುವವರು ವೃತ್ರ ಎಂಬುವವು ರಾಕ್ಷಸನೆಂದೂ, ಇವನು ತ್ವಷ್ಟೃ ಎಂಬ ಹೆಸರುಳ್ಳ ಬ್ರಹ್ಮನ ಮಗನೆಂದು ಹೇಳುತ್ತಾರೆ. ನೀರು ಮತ್ತು ಬೆಳಕು ಇವುಗಳಿಗೆ ಪ್ರಮಾಣದಲ್ಲಿ ವ್ಯತ್ಯಾಸದಿಂದ ಸೇರಿಸುವ ಕಾಲದಲ್ಲಿ ಮಳೆಯುಂಟಾಗುತ್ತದೆ. ಈ ಸಮಯದಲ್ಲಿ ನೀರಿಗೂ ತೇಜಸ್ಸಿಗೂ ಪರಸ್ಪರ ಘರ್ಷಣೆಯು ಉಂಟಾಗುವುದರಿಂದ ಯುದ್ಧವು ನಡೆಯುವುದೆಂಬ ಹೋಲಿಕೆಯು ಕಂಡುಬರುತ್ತದೆ. ಪುರಾಣವನ್ನು ಹೇಳುವವರು ತ್ವಷ್ಟೃ ಎಂಬ ಬ್ರಹ್ಮನ ಮಗನಾದ ವೃತ್ರಾಸುರನಿಗೂ, ಇಂದ್ರನಿಗೂ ಯುದ್ಧವು ನಡೆದಾಗ ಇಂದ್ರನು ತನ್ನ ಆಯುಧವನ್ನು ವೃತ್ರಾಸುರನ ಮೇಲೆ ಪ್ರಯೋಗಿಸಿದನೆಂದೂ, ಆ ಕಾಲದಲ್ಲಿ ಅನೇಕ ವಿಧವಾದ ಭಯಂಕರವಾದ ಶಬ್ದಗಳು ಉಂಟಾಯಿತೆಂದೂ ಹೇಳುತ್ತಾರೆ. ಅಂತರಿಕ್ಷದಲ್ಲಿ ಮಳೆಯು ಬರುವಾಗ ನೀರು ಮತ್ತು ಬೆಳಕು ಇವುಗಳಿಗೆ ಪರಸ್ಪರವಾದ ವಾಯು ಸಂಬಂಧದಿಂದ ಗುಡುಗು ಸಿಡಿಲು ಮೊದಲಾದ ಧ್ವನಿಗಳು ಉಂಟಾಗುತ್ತವೆ. ಹೀಗೆ ಉಂಟಾದ ಧ್ವನಿಯ ಅನಂತರ ಅಂತರಿಕ್ಷದಲ್ಲಿ ಸೇರಿರುವ ನೀರೆಲ್ಲವೂ ಮಳೆಯ ರೂಪದಲ್ಲಿ ಭೂಮಿಯಲ್ಲಿರುವ ಇಳಿಜಾರು ಪ್ರದೇಶಕ್ಕೆ ಬಂದು ಸೇರುತ್ತವೆ. ಇದರಿಂದ ಮಳೆಯು ಬಂದು ಸುಖವುಂಟಾಗುತ್ತದೆ. ಈ ವಿಧವಾದ ಅರ್ಥವನ್ನು ನಿರುಕ್ತಕಾರರು ಹೇಳಿದ್ದಾರೆ. ಇಂದ್ರನಿಗೂ ವೃತ್ರನೆಂಬ ಅಸುರನಿಗೂ ಯುದ್ಧವು ನಡೆದನಂತರ ಸುಖವುಂಟಾಯಿತೆಂದು ಇತಿಹಾಸವನ್ನು ಹೇಳುವವರು ಒಪ್ಪು

ತ್ತಾರೆ. ಈ ಎರಡುವಿಧವಾದ ಅರ್ಥವೂ ಇಲ್ಲಿ ಹೇಳಿವೆ. ಆದರೆ ಇಂದ್ರನೆಂಬ ದೇವತೆಗೆ ಇರುವ ಶಕ್ತಿಗಿಂತಲೂ ಹೆಚ್ಚು ಶಕ್ತಿಯುಳ್ಳವನು ಇಲ್ಲವೆಂಬುವ ಅರ್ಥವು " ಯದಚರಸ್ತನ್ವ " ಎಂಬ ಋಕ್ಕಿನಿಂದ ವಿವರಿಸಲ್ಪಟ್ಟಿದೆ. ಇಂದ್ರನು ತನ್ನ ಶಕ್ತಿಗಳನ್ನೂ, ಸೇನೆಗಳನ್ನೂ ತನ್ನ ಜನಗಳಲ್ಲಿ ಪ್ರಕಟವಾಗುವಂತೆ ಮಾಡಿ ಅನೇಕವಿಧವಾದ ಶರೀರಗಳಿಂದ ಇರುವನು. ದಿನೇ ದಿನೇ ವೃದ್ಧಿಯನ್ನು ಹೊಂದುವನು. ಇತಿಹಾಸವನ್ನು ಹೇಳತಕ್ಕವರು ಹೇಳುವ ಯುದ್ಧವೇ ಮೊದಲಾದ ಕಥೆಯೆಲ್ಲವೂ ಇಂದ್ರನ ಶಕ್ತಿಯೇ ಆಗಿರುವುದು. ಇಂದ್ರನಿಗೆ ಶತ್ರುವೆಂಬುವನು ಯಾವನೂ ಇಲ್ಲ ಎಂದು ಅರ್ಥವನ್ನು ಹೇಳಿ ಯುದ್ಧವೆಂಬುವುದನ್ನು ಇಂದ್ರನ ಬಲವು ಅತಿಶಯವಾದದ್ದು ಎಂದುಹೇಳಲು ಹೀಗೆ ವಿವರಿಸಿದೆ. ಆದ್ದರಿಂದ ದೇವತೆಗಳು, ಅಸುರರು ಎಂಬ ಭೇದವೇ ಇಲ್ಲವೆಂದು ಈ ಮಂತ್ರದಲ್ಲಿ ಹೇಳಿದೆ.

ಅಹಿವತ್ತು ಖಲು ಮಂತ್ರವರ್ಣಾ ಬ್ರಾಹ್ಮಣವಾದಾಶ್ಚ ||
ವಿವೃದ್ಧ್ಯಾ ಶರೀರಸ್ಯ ಸ್ರೋತಾಂಸಿ ನಿವಾರಯಾಞ್ಚಕಾರ | ತಸ್ಮಿನ್ ಹತೇ
ಪ್ರಸಸ್ಯಂದಿರ ಆಪಃ ||

ಆದರೆ ವೃತ್ರಾಸುರನೆಂಬ ಅರ್ಥವು ಪುರಾಣದಲ್ಲಿ ಹೇಳಿರುವುದಕ್ಕೆ ಅನುಸಾರವಾಗಿ ನೈರುಕ್ತ ಮತದಲ್ಲಿಯೂ ವಿವರಣೆಯು ಕಂಡು ಬರುತ್ತದೆ. ಪರಸ್ಪರ ಶತ್ರುಭಾವವು ಯುದ್ಧಮಾಡುವಿಕೆಯೂ ಕೂಡ ನೀರು ಮತ್ತು ತೇಜಸ್ಸುಗಳಿಗೆ ಹೇಳಿದೆ. ಹೀಗೆ ಹೇಳಲು ಆಯಾಯ ಮಂತ್ರಗಳಲ್ಲಿ ತಕ್ಕ ಸೂಚನೆಯು ಕಂಡು ಬರುತ್ತವೆ. ಆಯಾಯ ಗ್ರಂಥಗಳಲ್ಲಿ ಆಯಾಯ ಋಷಿಗಳೂ ಸಹ ಹೇಳಿರುತ್ತಾರೆ. ಹೀಗೆ ಎರಡರ್ಥವೂ ಮಂತ್ರಗಳಿಂದಲೇ ಕಂಡು ಬರುವಾಗ ವೃತ್ರ ಎಂದರೆ ಮೇಲಿನ ಆವರಣವಾದ ಮೇಘವು ನಾಶವಾದರೆ ಭೂಮಿಗೆ ನೀರು ತಾನಾಗಿ ಬರುವಂತೆ ವೃತ್ರಾಸುರನ ಸಂಹಾರದ ಅನಂತರ ಲೋಕಸುಖವಾಯಿತೆಂಬ ಅರ್ಥವು ಹೇಳಿದಂತಾಗುತ್ತದೆ ಎಂದು ವಿವೃತವಾಗಿದೆ. ಈ ಅರ್ಥವನ್ನು ವಿವರಿಸುವುದಕ್ಕಾಗಿಯೇ ಮುಂದಿನ ಮಂತ್ರವೂ ಕೂಡ ಉದಾಹರಣೆಯಾಗಿ ಇಲ್ಲಿ ಹೇಳಿದೆ.

ತದಭಿವಾದಿನ್ಯೇಷರ್ಗ್ಭವತಿ—

**ಇತಿ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು.

---

## ಅಥ ಸಪ್ತದಶಃ ಖಂಡಃ

### ಹದಿನೇಳನೆಯ ಖಂಡವು

---

ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ
ಗಾವಃ | ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾಂ

ಅಪ ತದ್ವವಾರ ॥ (ಋ. ಸಂ. ೧–೩೨–೧೧) ದಾಸಪತ್ನೀರ್ದಾಸಾಧಿ-ಪತ್ನ್ಯೋ ದಾಸೋ ದಸ್ಯತೇರುಪದಾಸಯತಿ ಕರ್ಮಾಣ್ಯಹಿಗೋಪಾ ಅತಿಷ್ಠನ್ನಹಿನಾ ಗುಪ್ತಾಅಹಿರಯನಾದೇತ್ಯಂತರಿಕ್ಷೇಽಯಮಪೀತರೋಽ-ಹಿರೇತಸ್ಮಾದೇವ ನಿರ್ಹ್ರಸಿತೋಪಸರ್ಗ ಆಹಂತೀತಿ । ನಿರುದ್ಧಾ ಅಪಃ ಪಣಿನೇವ ಗಾವಃ । ಪಣಿರ್ವಣಿಗ್ಭವತಿ ಪಣಿಃ ಪಣನಾದ್ವಣಿಕ್ಪಣ್ಯಂ ನೇನೇಕ್ತಿ । ಅಪಾಂ ಬಿಲಮಪಿಹಿತಂ ಯದಾಸೀತ್ ಬಿಲಂ ಭರಂ ಭವತಿ ಬಿಭರ್ತೇರ್ವೃತ್ರಂ ಜಘ್ನಿವಾನಪವವಾರ ತದ್ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ ಯದವೃಣೋತ್ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ಯದವರ್ತತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ಯದವರ್ಧತ ತದ್ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ॥೧೭॥

---

ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ । ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾಁ ಅಪ ತದ್ವವಾರ ॥" ದಾಸಪತ್ನೀರ್ದಾಸಾಧಿಪತ್ನ್ಯಃ॥ ದಾಸೋ ದಸ್ಯತೇರುಪ-ದಾಸಯತಿ ಕರ್ಮಾಣಿ ॥

'ಅಹಿಗೋಪಾ ಅತಿಷ್ಠನ್' ಅಹಿನಾ ಗುಪ್ತಾಃ ॥ ಅಹಿರಯನಾ-ದೇತ್ಯಂತರಿಕ್ಷೇ ॥ ಅಯಮಪೀತರೋಽಹಿರೇತಸ್ಮಾದೇವ ನಿರ್ಹ್ರಸಿ-ತೋಪಸರ್ಗ ಆಹಂತೀತಿ ॥ "ನಿರುದ್ಧಾ ಆಪಃ ಪಣಿನೇವ ಗಾವಃ । ಪಣಿರ್ವಣಿಗ್ ಭವತಿ ॥ ಪಣಿಃ ಪಣನಾತ್ ॥ ವಣಿಕ್ ಪಣ್ಯಂ ನೇನೇಕ್ತಿ॥ 'ಅಪಾಂ ಬಿಲಮಪಿಹಿತಂ ಯದಾಸೀತ್' । ಬಿಲಂ ಭರಂ ಭವತಿ ಬಿಭರ್ತೇಃ ॥

ವೃತ್ರಂ ಜಘ್ನಿವಾನಪ ವವಾರ ತತ್ ॥ ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ "ಯದವೃಣೋತ್ತದ್ ವೃತ್ರಸ್ಯ ವೃತ್ರತ್ವಮಿತಿ ವಿಜ್ಞಾಯತೇ ॥ ಯದವರ್ತತ ತದ್ ವೃತ್ರಸ್ಯ ವೃತ್ರತ್ವ-ಮಿತಿ ವಿಜ್ಞಾಯತೇ ॥"

ಲೋಕದಲ್ಲಿ ವ್ಯಾಪಾರಮಾಡುವವನು ಮಾರುವ ಪದಾರ್ಥವನ್ನು ಒಂದು ಕಪೆಯಲ್ಲಿ ಬಚ್ಚಿಟ್ಟುಕೊಂಡು ಅವುಗಳನ್ನು ಆಯಾಯ ಕಾಲದಲ್ಲಿ ಹೊರಕ್ಕೆ ತೋರಿಸುವನು. ಇದರಂತೆ ನೀರುಗಳು ಮೋಡದ ಒಳಗಡೆಯಿದ್ದು ಆಯಾಯ ಕಾಲಗಳಲ್ಲಿ ಹೊರಗಡಗೆ ಬರುವುವು. ಮೇಘದಿಂದ ಈ ನೀರು ಹೊರಗಡೆಗೆ ಬರದಂತೆ ಅಡಚಣೆಯು ಉಂಟಾಗಿರುವುದು. ಇಂದ್ರನು ತಡೆಯಾಗಿರುವ ಮೇಘವನ್ನು ಹೊಡೆದನಂತರ ಅಂದರೆ ನೀರಿಗೆ ಉಂಟಾಗಿದ್ದ ತಡೆಯು ನಾಶವಾದನಂತರ ಮಳೆಯ ರೀತಿಯಲ್ಲಿ ಆ ನೀರು ಭೂಮಿಗೆ ಬೀಳುವುದು ಎಂಬರ್ಥವು ಇಂದ್ರ ಮತ್ತು ವೃತ್ರನೆಂಬ ಅಸುರನ ಯುದ್ಧ ಸಾದೃಶ್ಯದಿಂದ ಇಲ್ಲಿ ಉಕ್ತವಾಗಿದೆ. ಇದರಿಂದ ಎರಡು ವಿಧವಾಗ ಅರ್ಥವು ವಿವರಿಸಲ್ಪಟ್ಟಿದೆಯೆಂದು ತಿಳಿಯಬೇಕು.

ದಾಸನೆಂದರೆ ಕೆಲಸಮಾಡುವವನು. ಅವನ ಹೆಂಗಸರು ಅವನನ್ನು ರಕ್ಷಿಸುವರು. ದಾಸನಾದವನು ಕೆಲಸಮಾಡಿ ಆಯಾಸಪಟ್ಟಿರುವಾಗ ಅವನ ಸಂಬಂಧಿಯಾದ ಹೆಂಗಸರು ಅವನನ್ನು ಉಪಚರಿಸುವರು. ಇದರಂತೆಯೇ ಮೋಡವು ದಾಸನಂತೆಯೂ, ನೀರುಗಳು ದಾಸಪತ್ನಿಯರೆಂದೂ ಇಲ್ಲಿ ರೂಪಕ ಸಮಾಸದಿಂದ ಹೇಳಿದೆ. ದಾಸ ಎಂಬ ಶಬ್ದವು ವ್ಯವಸಾಯವನ್ನು ಹೆಚ್ಚುಮಾಡುವುದು ಎಂಬರ್ಥವುಳ್ಳ 'ದಸು' ಎಂಬ ಧಾತುವಿನಿಂದ ಉಂಟಾಗಿರುತ್ತದೆ.

'ಅಹಿಗೋಪಾಃ' ಎಂಬ ಶಬ್ದದಲ್ಲಿರುವ 'ಅಹಿ' ಎಂಬ ಶಬ್ದವನ್ನು ಅಂತರಿಕ್ಷದಲ್ಲಿ ಹಾವಿನಂತೆ ಓಡಾಡುವ ಕಾರಣ ಮೇಘಕ್ಕೆ ಸರ್ಪವನ್ನು ಹೋಲಿಸಿ 'ಅಹಿ' ಎಂದು ಹೇಳಿದೆ.

'ಆಹಂತಿ' ಎಂಬ ಕ್ರಿಯಾಪದದಿಂದಲೂ 'ಅಹಿ' ಎಂಬ ಶಬ್ದವು ಆಗಿರುತ್ತದೆ. ಹಾವುಗಳು ಲೋಕದಲ್ಲಿ ತಮ್ಮ ಹೆಡೆಗಳಿಂದ ಹೊಡೆಯುತ್ತವೆ. ಇದರಂತೆ ಈ ಮೋಡವೂ ಕೂಡ ಮೇಲ್ಭಾಗದಲ್ಲಿದ್ದುಕೊಂಡು ನೀರಿಗೆ ತಡೆಯಾಗಿರುತ್ತದ ಎಂದು ಹೇಳಿದೆ. 'ಆ' ಎಂಬ ಉಪಸರ್ಗವು ಹ್ರಸ್ವವಾಗಿ ಅಹಂತಿ ಎಂದಾಗಿ ಅದರಿಂದ 'ಅಹಿ' ಶಬ್ದವಾಗಿದೆ.

'ಪಣಿ' ಎಂಬ ಶಬ್ದಕ್ಕೆ ವರ್ತಕನೆಂದು ಅರ್ಥ ಮಾಡಿದೆ. ವ್ಯವಹಾರವನ್ನು ಯಾವಾಗಲೂ ಮಾಡುವವನು ವರ್ತಕನಾಗಿರುವನು; ಪಣ್ಯವೆಂದರೆ ಮಾರುವುದಕ್ಕಾಗಿ ಇಟ್ಟಿರುವ ಪದಾರ್ಥವು. ಇದರಿಂದ ಇವನು ಸರಿಯಾದ ಬೆಲೆಯು ಬರುವಂತೆ ವ್ಯವಹರಿಸುವನು.

'ಬಿಲ' ಎಂಬ ಶಬ್ದವು ನೀರಿನಿಂದ ತುಂಬಿರುವುದು. ಅಥವಾ ಪೋಷಣೆಯನ್ನು ಹೊಂದುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

'ವೃತ್ರ' ಎಂಬ ಶಬ್ದವು "ವೃಣೋತಿ" ಎಂಬ ಅರ್ಥದಿಂದಲೂ, 'ವರ್ತತೇ' ಎಂಬ ಅರ್ಥದಿಂದಲೂ, ಅಥವಾ 'ವರ್ಧತೇ' ಎಂದು ಕೂಡ ಆಗಿರುತ್ತದೆ. ಈ ಅರ್ಥದಲ್ಲಿ ಅನುಸಾರವಾಗಿ ವೇದಭಾಗವು ಇರುತ್ತದೆ. "ಯದವೃಣೋತ್", "ಯದವರ್ತತ" "ಯದವರ್ಧತ" ಎಂಬ ಈ ಮೂರು ವೇದವಾಕ್ಯಗಳಾಗಿವೆ. ಇದರಲ್ಲಿ ವೃಣೋತ್ ಎಂಬುವುದು ಅಂತರಿಕ್ಷವನ್ನಾಗಲೀ, ನೀರುಗಳನ್ನಾಗಲೀ ಇತರರಿಗೆ ಕಾಣಿಸದಂತೆ ಮುಚ್ಚುವುದು ಎಂಬರ್ಥವನ್ನು ಕೊಡುತ್ತದೆ.

ತೇಜಸ್ಸು ಮತ್ತು ವಾಯುಗಳು ಎಂಬ ಹೆಸರಿನಿಂದಿರುವ ಇಂದ್ರನಿಂದ ವೃತ್ರಾಸುರನೆಂಬ ಮೇಘವು ನಾಶವಾಗಿ ನೀರುಗಳು ಹೊರಗಡೆಗೆ ಬರುವ ರಂಧ್ರವು ತೆರೆದನಂತರ ಮಳೆಯ ರೂಪದಿಂದ ಭೂಮಿಗೆ ಅಂದರೆ ಹೊರಗಡೆ ಬರುವುವುಗಳಾಗಿ ಇರುವುವು. ಎಂಬರ್ಥವು 'ಯದವರ್ತತ' ಎಂಬ ವಾಕ್ಯದಿಂದ ಹೇಳಿದೆ.

'ಯತ್ ಅವರ್ಧತ' ಎಂಬ ವಾಕ್ಯದಿಂದ ವೃತ್ರನೆಂಬ ಅಸುರನು ತನ್ನ ಶರೀರದ ಆಕಾರದಿಂದ ಪ್ರಪಂಚವೆಲ್ಲವನ್ನೂ ನೀರಿರುವ ಪ್ರಮಾಣದಲ್ಲಿದ್ದನು ಎಂದು ಪುರಾಣದಲ್ಲಿ ಹೇಳಿರುವಂತೆ ಮೋಡವು ವೃತ್ರ ಶಬ್ದವಾಚ್ಯವಾಗಿ ಮಿತಿಮೀರಿದ ಪ್ರಮಾಣದಲ್ಲಿ ಅಂತರಿಕ್ಷದಲ್ಲಿ ಬಹಳ ಮಟ್ಟಿಗೆ ಬೆಳೆಯುತ್ತದೆ ಎಂದು ಹೇಳಿದೆ.

**ಇತಿ ಸಪ್ತದಶಃ ಖಂಡಃ**

ಇಲ್ಲಿಗೆ ಹದಿನೇಳನೆಯ ಖಂಡವು ಸಮಾಪ್ತವು

---

ಅಥಾಷ್ಟಾದಶಃ ಖಂಡಃ

**ಹದಿನೆಂಟನೆಯ ಖಂಡವು**

---

ರಾತ್ರಿನಾಮಾನ್ಯುತ್ತರಾಣಿ ತ್ರಯೋವಿಂಶತೀ ರಾತ್ರಿಃ ಕಸ್ಮಾತ್ಪ್ರರಮಯತಿ ಭೂತಾನಿ ನಕ್ತಂಚಾರೀಣ್ಯುಪರಮಯತೀತರಾಣಿ ಧ್ರುವೀಕರೋತಿ ರಾತೇರ್ವಾ ಸ್ಯಾದ್ದಾನಕರ್ಮಣಃ ಪ್ರದೀಯಂತೇಽಸ್ಯಾಮವಶ್ಯಾಯಾ ಉಷೋನಾಮಾನ್ಯುತ್ತರಾಣಿ ಷೋಳಶೋಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಸ್ತಸ್ಯಾ ಏಷಾ ಭವತಿ ॥ ೧೮ ॥

---

**ಅಥ ರಾತ್ರಿನಾಮಾನಿ**

---

(೧) ಶ್ಯಾವೀ (೨) ಕ್ಷಪಾ (೩) ಶರ್ವರೀ (೪) ಅಕ್ತುಃ (೫) ಊರ್ಮ್ಯಾ (೬) ರಾಮ್ಯಾ (೭) ಯಮ್ಯಾ (೮) ನಮ್ಯಾ (೯) ದೋಷಾ (೧೦) ನಕ್ತಾ (೧೧) ತಮಃ (೧೨) ರಜಃ (೧೩) ಅಸಕ್ನೀ (೧೪) ಪಯಸ್ವತೀ (೧೫) ತಮಸ್ವತೀ (೧೬) ಘೃತಾಚೀ (೧೭) ಶಿರಿಣಾ (೧೮) ಮೋಕೀ (೧೯) ಶೋಕೀ (೨೦) ಊಧಃ (೨೧) ಪಯಃ (೨೨) ಹಿಮಾ (೨೩) ವಸ್ವೀ

ಇತಿ ತ್ರಯೋವಿಂಶತೀ ರಾತ್ರಿನಾಮಾನಿ ||೭||

ಈ ಇಪ್ಪತ್ತಮೂರು ರಾತ್ರಿಗಳ ಹೆಸರು

———

(೧) ಶ್ಯಾವೀ || ಶ್ಯೈಙ್-ಗತೌ (ಭೂ. ಆ) 'ಇಣ್‌ಶೀಭ್ಯಾಂ ವನ್' (ಉ. ೧-೧೫೦) ಇತಿ ವಿಧೀಯಮಾನೋ ವನ್ ಪ್ರತ್ಯಯೋ ಬಾಹುಲಕಾದ್ ಭವತಿ । ಶ್ಯಾಯತೇ ಗಚ್ಛತಿ ಸ್ವಾಶ್ರಯಮಿತಿ ||

ಗತ್ಯರ್ಥಕವಾದ ಶ್ಯೈಧಾತುವಿಗೆ ಬಹುಲಗ್ರಹಣದಿಂದ ಔಣಾದಿಕ ವನ್ ಪ್ರತ್ಯಯ. ಶ್ಯೈ+ವ ಎಂದಿರುವಾಗ ಆವಾದೇಶ. "ಲೋಪೋ ವ್ಯೋರ್ವಲಿ" ಸೂತ್ರದಿಂದ ವಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ "ಅನ್ಯತೋಙೀಷ್" (ಪಾ. ಸೂ. ೪-೧-೪೦) ಸೂತ್ರದಿಂದ ಙೀಷ್. ಶ್ಯಾವ+ಈ. 'ಯಸ್ಯೇತಿ ಚ' ಅಕಾರಲೋಪ. ಶ್ಯಾವೀ=ರಾತ್ರಿ. ಇದರಲ್ಲಿ ಪ್ರಾಣಿಗಳು ತಮ್ಮ ಆಶ್ರಯಕ್ಕೆ ಹೋಗುತ್ತವೆ. ಬೂದಬಣ್ಣಕ್ಕೆ ಶ್ಯಾವನೆಂದು ಹೆಸರು. ಸಂಧ್ಯಾಕಾಲವಾದ ಮೇಲೆ ಈ ಬಣ್ಣ ರಾತ್ರಿಗಿರುವುದರಿಂದ ಶ್ಯಾವೀ ರಾತ್ರಿಯಾಗುತ್ತದೆ. ಉದಾಹರಣೆ—

ಶ್ಯಾವೀ ಚ ಯದರುಷೀ ಚ ಸ್ವಸಾರೌ । (ಋ. ಸಂ. ೩-೩-೩೦-೧)

(೨) ಕ್ಷಪಾ || ಕ್ಷಪ್ಯತೇ ಸೂರ್ಯಚಾರೇಣ ಕ್ಷಪಾ—ಇತಿ ಕ್ಷೀರಸ್ವಾಮೀ । ಕ್ಷಪ್-ಪ್ರೇರಣೇ, ಕ್ಷಪಿ—ಕ್ಷಾನ್ತ್ಯಾಮ್—ಇತಿ ಕಥಾದಿಷು ಪಠಿತೋಽಪಿ ಬಹುಲಮೇತನ್ನಿದರ್ಶನಮಿತ್ಯಸ್ಯೋದಾಹರಣತ್ವೇನ ಧಾತುವೃತ್ತಾ ಪಠ್ಯತೇ ||

ಪ್ರೇರಣಾದ್ಯರ್ಥಕೊಡುವ ಕ್ಷಪ ಧಾತುವಿಗೆ ಅಚ್ ಪ್ರತ್ಯಯ ಬಂದು ಕ್ಷಪಾ ಎಂದಾಗಿದೆ. ಸ್ತ್ರೀತ್ವದಲ್ಲಿ ಟಾಪ್ ಬಂದಿದೆ. ಸೂರ್ಯಗತಿಯಿಂದ ಆಗುವುದು ಕ್ಷಪಾ=ರಾತ್ರಿ. ಬಹುಲಗ್ರಹಣದಿಂದ ಭ್ವಾದಿಗಣದಲ್ಲಿಯೂ ಇದು ಹೇಳಿದೆ. ಇದು ಅಂತೋದಾತ್ತವಾದಾಗ ರಾತ್ರಿನಾಮವಾಗಿಯೂ, ಆದ್ಯುದಾತ್ತವಾದಾಗ ಸನ್ಯಾಸಿನಾಮವಾಗಿಯೂ ಇರುತ್ತದೆ. ಉದಾ :—

ನೃಣಾಂ ನರ್ಯೋ ನೃತಮಃ ಕ್ಷಪಾವಾನ್ (ಋ. ಸಂ. ೭-೭-೨೨-೧)

ತ್ವಮಿದಸಿ ಕ್ಷಪಾವಾನ್ (ಋ. ಸಂ. ೬-೫-೧೧-೨) ಎಂದು ಸನ್ಯಾಸಿವಾಚಕಕ್ಕೆ ಉದಾಹರಣೆ—

(೩) ಶರ್ವರೀ || ಶೄ-ಹಿಂಸಾಯಾಮ್ (ಕ್ರ್ಯಾ-ಪ) "ಕೄಗೄಶೄಪೃಙ್‌ಚತಿಭ್ಯಃ ಷ್ವರಚ್" (ಉ. ೨-೧೧೪) ಷಿತ್ವಾತ್ (ಪಾ-ಸೂ-೪-೧-೧೫) ಙೀಷ್ ।

ಹಿಂಸಾರ್ಥಕವಾದ ಶೄಧಾತುವಿಗೆ ಷ್ವರಚ್‌ಪ್ರತ್ಯಯ. ವರ ಉಳಿಯುತ್ತದೆ. ಪ್ರತ್ಯಯ ನಿಮಿತ್ತವಾಗಿ ಋಕಾರಕ್ಕೆ ಗುಣ. ಶರ್+ವರ. ಪ್ರತ್ಯಯ ಷಿತ್ತಾಗುವುದರಿಂದ ಸ್ತ್ರೀತ್ವದಲ್ಲಿ ಙೀಷ್. ಶರ್ವರೀ=ರಾತ್ರಿ. ಪ್ರಾಣಿಗಳು ರಾತ್ರಿಯಲ್ಲಿ ತಮ್ಮ ವ್ಯಾಪಾರದಿಂದ ಉಪರಮ ಹೊಂದುತ್ತವೆ; ರಾಕ್ಷಸರಿಂದ ಪ್ರಾಣಿಗಳು ಹಿಂಸಿಸಲ್ಪಡುತ್ತವೆ. ಉದಾಹರಣೆ—

ಅತಿಷ್ಕಂದತಿ ಶರ್ವರೀ (ಋ. ಸಂ. ೪-೩-೮-೩)

(೪) ಅಕ್ತುಃ । ಅಞ್ಜೂ-ವ್ಯಕ್ತಿಮ್ರಕ್ಷಣಕಾಂತಿಗತಿಷು (ರು-ಪ-) 'ಪಃ ಕಿಚ್ಚ' (ಉ-೧-೭೮) ಇತಿ ವಿಧೀಯಮಾನಃ ತುಪ್ರತ್ಯಯಃ ಕಿತ್ವಂ ಚ ಬಾಹುಲಕಾದ್ ಭವತಿ ।

ವ್ಯಕ್ತ್ಯಾದ್ಯರ್ಥಕ ಅಂಜೂಧಾತುವಿಗೆ ತುಪ್ರತ್ಯಯ. ಇದಕ್ಕೆ ಕಿತ್ತ್ವಾತಿದೇಶಮಾಡಿರುವುದರಿಂದ 'ಅನಿದಿತಾಂ ಹಲ ಉ' ಸೂತ್ರದಿಂದ ಉಪಧಾನಕಾರಕ್ಕೆ ಲೋಪ. ಅಜ್ + ತು ಎಂದಿರುವಾಗ 'ಚೋಃ ಕುಃ' ಸೂತ್ರದಿಂದ ಜಕಾರಕ್ಕೆ ಗಕಾರಾದೇಶ. ಅದಕ್ಕೆ ಚರ್ತ್ವ ಬಂದರೆ ಅಕ್ತುಃ ಎಂದಾಗುತ್ತದೆ. ಇದರಲ್ಲಿ ಪ್ರಪಂಚವು ಹಿಮದಿಂದ ಮುಚ್ಚಲ್ಪಡುತ್ತದೆ, ಅಥವಾ ಪ್ರತಿದಿನವೂ ಬರುವುದು ಎಂದರ್ಥ. ಉದಾಹರಣೆ—

**ವಿಶಾಮಕ್ತೋರುಷಸಃ ಪರ್ವಹೂತೌ (ಋ. ಸಂ. ೫-೪-೬-೨) ॥**

**(೫) ಊರ್ಮ್ಯಾ ॥ ಊರ್ಣುಞ್-ಆಚ್ಛಾದನೇ (ಅದಾ-ಉ) "ಊರ್ಣೋತೇರ್ಣ ಲೋಪಶ್ಚ' (ಉ-೧-೨೯) ಇತಿ ಮಿಪ್ರತ್ಯಯಃ ಇತಿ ಕೇಚಿತ್ । 'ಅರ್ತೇರೂಚ್ಚ' (ಉ-೪-೪೪) ಇತಿ ಮಿಪ್ರತ್ಯಯಃ ಇತಿ ಕಮಲನಯನಃ ॥ ಊರ್ಮಿಃ । ತದರ್ಹತಿ (ಪಾ. ಸೂ. ೫-೧-೬೨) ಛಂದಸಿ ಚ (ಪಾ. ಸೂ. ೫-೧-೬೭) ಇತಿ ಯತ್ ಪ್ರತ್ಯಯಃ ॥**

ಮುಚ್ಚುವುದು ಎಂಬರ್ಥ ಕೊಡುವ ಊರ್ಣುಧಾತುವಿಗೆ ಮಿಪ್ರತ್ಯಯ, ಅದರೊಡನೆ ಧಾತುವಿನ ಣಕಾರಕ್ಕೆ ಲೋಪ. ಊರ್ಮಿ ಎಂದಾಗುತ್ತದೆ. ಋ-ಗತೌ ಧಾತುವಿಗೆ ಮಿಪ್ರತ್ಯಯ. ಧಾತುವಿಗೆ ಊತ್ವ. ಋಕಾರಸ್ಥಾನದಲ್ಲಿ ಬರುವುದರಿಂದ ರ ಪರವಾಗಿ ಬರುತ್ತದೆಂದು ಕಮಲನಯನನ ಮತ. ಊರ್ಮಿ ಎಂದರೆ ಕತ್ತಲೆಯ ಸಮುದಾಯ. ಇದು ಲೋಕವನ್ನು ಮುಚ್ಚುವ ಸ್ವಭಾವವುಳ್ಳದ್ದು. ಊರ್ಮಿಯಿಂದ ಕೂಡಿರುವುದು ಎಂಬರ್ಥದಲ್ಲಿ (ಮತ್ವರ್ಥ) ಯತ್‌ಪ್ರತ್ಯಯ. 'ಯಸ್ಯೇತಿ ಚ' ಇಕಾರ ಲೋಪ. ಸ್ತ್ರೀತ್ವದಲ್ಲಿ ಟಾಪ್. ಊರ್ಮ್ಯಾ. ಕತ್ತಲೆಯುಳ್ಳದ್ದು ರಾತ್ರಿ. ಉದಾಹರಣೆ—

**ಇಂದ್ರಾಯ ನಕ್ತಮೂರ್ಮ್ಯಾ ಸುವಾಚಾಃ ॥ (ಋ. ಸಂ, ೬-೬-೩೨-೧)**

**(೬) ರಾಮ್ಯಾ ॥ ರಮು-ಕ್ರೀಡಾಯಾಮ್ । (ಭೂ-ಆ) ಅಂತರ್ಣೀತಣ್ಯರ್ಥಾತ್ ಪ್ರೋಪಸರ್ಗಾರ್ಥವಿಶಿಷ್ಟಾದಸ್ಮಾತ್ 'ಕೃತ್ಯಲ್ಯುಟೋ ಬಹುಲಮ್' (ಪಾ-ಸೂ-೩-೩-೧೧೩) ಇತಿ ಬಹುಲವಚನಾತ್ 'ಪೋರದುಪಧಾತ್' (ಪಾ-ಸೂ-೩-೧-೯೮) ಇತಿ ಯತಂ ಬಾಧಿತ್ವಾ, "ಋಹಲೋರ್ಣ್ಯತ್" (ಪಾ-ಸೂ-೩-೧-೧೨೪) ಭವತಿ "ಅಚೋಞ್ಣಿತಿ" (ಪಾ-ಸೂ-೭-೨-೧೧೫) ಇತಿ ವೃದ್ಧಿಃ ॥**

ಕ್ರೀಡಾರ್ಥಕವಾದ ರಮು ಧಾತುವಿಗೆ ಣಿಜಂತಾರ್ಥ ಹೇಳಬೇಕು. ಪ್ರ ಉಪಸರ್ಗಾರ್ಥದಿಂದ ಕೂಡಿದ ಈ ಧಾತುವಿಗೆ ಬಹುಲಗ್ರಹಣದಿಂದ 'ಋಹಲೋ-' ಸೂತ್ರದಿಂದ ಣ್ಯತ್ ಪ್ರತ್ಯಯ. ರಮ್ + ಯ ಎಂದಿರುವಾಗ ಇದು ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಸ್ತ್ರೀತ್ವದಲ್ಲಿ ಟಾಪ್. ರಾಮ್ಯಾ = ರಾತ್ರಿ. ರಾತ್ರಿಯಲ್ಲಿ ತಿರುಗುವ ಪ್ರಾಣಿಗಳನ್ನು ಚನ್ನಾಗಿ ಸಂತೋಷಪಡಿಸುತ್ತದೆ, ಹಗಲು ತಿರುಗುವ ಪ್ರಾಣಿಗಳನ್ನು ತಮ್ಮ ತಮ್ಮ ವ್ಯಾಪಾರಗಳಿಂದ ವಿರಾಮ ಹೊಂದುವಂತೆ ಮಾಡುತ್ತದೆ. ಮಾಧವರು ಎಲ್ಲಾ ಪ್ರಾಣಿಗಳಿಗೆ ಆನಂದವನ್ನುಂಟುಮಾಡುವುದು ರಾಮ್ಯಾ ಎಂದು ವ್ಯಾಖ್ಯಾನಮಾಡಿರುತ್ತಾರೆ. ವಾಜಸನೇಯ ಸಂಹಿತಯಲ್ಲಿ ರಾಮಪದಕ್ಕೆ ಕೃಷ್ಣವರ್ಣವೆಂದು ಹೇಳಿದೆ. ಆಗ ಅದನ್ನು ಹೊಂದಿರುವುದು 'ತದರ್ಹತಿ' ಎಂಬರ್ಥದಲ್ಲಿ 'ಛಂದಸಿ ಚ' (ಪಾ-ಸೂ-೫-೧-೬೭) ಸೂತ್ರದಿಂದ ಯತ್ ಪ್ರತ್ಯಯ. ಕಪ್ಪಾಗಿರುವುದು ರಾಮ್ಯಾ. **ಅಹಶ್ಚ ಕೃಷ್ಣಮಹಮರ್ಜುನಂ ಚ**– (ಋ. ಸಂ. ೪-೫-೧೧-೧) ಎಂಬ ಶ್ರುತಿಯೇ ಇದಕ್ಕೆ ಪ್ರಮಾಣ. ಅಥವಾ ರಾಮಪದಕ್ಕೆ ರಮಣವೆಂದು ಭಾವಾರ್ಥ ಹೇಳಬೇಕು, ರಮ್ ಧಾತುವಿಗೆ ಭಾವಾರ್ಥದಲ್ಲಿ ಘಞ್. ಇಲ್ಲಿ ಸ್ತ್ರೀಯರೊಡನೆ ಕ್ರೀಡೆ

ಇರುತ್ತದೆ ಎಂಬರ್ಥ ತೋರುವಾಗ 'ತತ್ರಸಾಧುಃ' (ಪಾ. ಸೂ. ೪-೪-೯೮) ಸೂತ್ರದಿಂದ ರಾಮಶಬ್ದದ ಮೇಲೆ ಯತ್‌ಪ್ರತ್ಯಯ. 'ಯಸ್ಯೇತಿಚ' ಅಕಾರ ಲೋಪ. ರಾಮ್ಯಾ ಅಂದರೆ ಕ್ರೀಡಾಕಾಲ. ಉದಾಹರಣೆ—

**ಸ ಇಧಾನ ಉಷಸೋ ರಾಮ್ಯಾ ಅನು (ಋ. ಸಂ. ೨-೫-೨೧-೩) 'ಆವಿರ್ಥೇನಾ ಅಕೃಣೋದ್ರಾಮ್ಯಾಣಾಮ್ (ಋ. ಸಂ. ೩-೨-೧೫-೩) ॥**

**(೭) ಯಮ್ಯಾ ॥ ಯಮು-ಉಪರಮೇ (ಭೂ. ಪ., 'ಅಘ್ನ್ಯಾದಯಶ್ಚ' (ಉ. ೪-೧೦೮) ಇತಿ ಯಕ್ ಪ್ರತ್ಯಯಾಂತೋ ನಿಪಾತ್ಯತೇ ॥**

ಉಪರಮಾರ್ಥಕವಾದ ಯಮು ಧಾತುವಿಗೆ ಯಕ್ ಪ್ರತ್ಯಯ ಬಂದು ಯಮ್ಯಾ ಎಂದು ನಿಪಾತಿತವಾಗಿದೆ. ಸಿದ್ಧ ರೂಪವೇ ನಿರ್ದಿಷ್ಟವಾಗಿದೆಯೆಂಬರ್ಥ. ಪ್ರಾಣಿಗಳ ವ್ಯಾಪಾರವನ್ನು ಕೊನೆಗಾಣಿಸುತ್ತದೆ. ಯಾವ ಕೆಲಸವಿಲ್ಲದೆ ರಾತ್ರಿಯಲ್ಲಿ ವಿಶ್ರಾಂತರಾಗುತ್ತಾರೆ ಎಂದರ್ಥ. ಅಥವಾ 'ಗದಮದಚರಯಮಶ್ಚಾನುಪಸರ್ಗೇ' (ಪಾ. ಸೂ. ೩-೧-೧೦೦) ಸೂತ್ರದಿಂದ ಕರ್ತೃರ್ಥದಲ್ಲಿಯೇ ಯತ್ ಪ್ರತ್ಯಯ. ಅಥವಾ ಕರ್ಮಣಿಯಲ್ಲಿ ಯತ್ ಬಂದರೆ ಸೂರ್ಯಗತಿಯಿಂದ ಕೊನೆಗೊಳಿಸಲ್ಪಡುವುದು ಎಂದರ್ಥವಾಗುತ್ತದೆ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

**(೮) ನಮ್ಯಾ (೯) ದೋಷಾ (೧೦) ನಕ್ತಾ (೧೧) ತಮಃ (೧೨) ರಜಃ (೧೩) ಅಸಿಕ್ನೀ ಈ ಆರು ಶಬ್ದಗಳಿಗೆ ನಿರ್ವಚನ ತೋರಿಸಿಲ್ಲ.**

**(೧೪) ಪಯಸ್ವತೀ ॥ ಪಯೋಽಸ್ಯಾ ಅಸ್ತೀತಿ ॥ "ಅಸ್ಮಯಾಮೇಧಾಸ್ರಜೋ ವಿನಿಃ (ಪಾ. ಸೂ. ೫-೨-೧೨೧) 'ಬಹುಲಂ ಛಂದಸಿ" (ಪಾ. ಸೂ. ೫-೨-೧೨೧) ಇತ್ಯುಕ್ತೇರ್ಮತುಪಿ ವತ್ವೇ ಚ 'ಉಗಿತಶ್ಚ' (ಪಾ. ಸೂ- ೪-೧.೬) ಇತ ಙೀಪ್ ॥**

ಕ್ಷೈತ್ಯ ಉಳ್ಳದ್ದು ಎಂಬರ್ಥದಲ್ಲಿ ಪಯಸ್ ಶಬ್ದದಮೇಲೆ ವಿನಿಪ್ರಾಪ್ತವಾದರೂ ಛಂದಸ್ಸಿನಲ್ಲಿ ಮತುಪ್ ಪ್ರತ್ಯಯವೇ ಬರುತ್ತದೆ. 'ಮಾದುಪಧಾಯಾಃ'—ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಪಯಸ್ವತ್ ಶಬ್ದವಾಗುತ್ತದೆ. ಉಕಾರ ಇತ್ತಾದುದರಿಂದ ಸ್ತ್ರೀತ್ವದಲ್ಲಿ 'ಉಗಿತಶ್ಚ' ಸೂತ್ರದಿಂದ ಙೀಪ್. ಮತುಪ್ ಪರವಾದಾಗ 'ತಸೌ ಮತ್ವರ್ಥೇ' ಸೂತ್ರದಿಂದ ಭಸಂಜ್ಞಾ ವಿಧಾನಮಾಡಿರುವುದರಿಂದ ಸಕಾರಕ್ಕೆ ರುತ್ವ ಬರುವುದಿಲ್ಲ. ಇದಕ್ಕೆ ಉದಾಹರಣೆ—ಶ್ರುತಿ, ಹುಡುಕಬೇಕು. ॥

**(೧೫) ತಮಸ್ವತೀ ॥ ತಾಮ್ಯಂತ್ಯನೇನೇತಿ (ದಿ-ಪ) ತಮೋಽನ್ಧಕಾರಂ ತೇನ ತದ್ವತೀ । ಪೂರ್ವವತ್ ಪ್ರಕೃತ್ಯಾ ॥ ನಿಗಮೋಽನ್ವೇಷಣೀಯಃ ॥**

ಇದರಿಂದ ಪ್ರಾಣಿಗಳು ಪೀಡಿಸಲ್ಪಡುತ್ತವೆ ಎಂದರ್ಥವಾಗುವುದರಿಂದ ತಮಸ್ ಅಂದರೆ ಕತ್ತಲೆ. ಈ ತಮಸ್ಸಿನಿಂದ ಕೂಡಿರುವುದು ರಾತ್ರಿ. ಹಿಂದಿನಂತೆ ಮತ್ವರ್ಥದಲ್ಲಿ ವಿನಿ ಪ್ರತ್ಯಯವನ್ನು ಬಾಧಿಸಿ ಛಾಂದಸವಾದುದರಿಂದ ಮತುಪ್ ಪ್ರತ್ಯಯ. ಮಕಾರಕ್ಕೆ ವಕಾರಾದೇಶ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್. ಇದಕ್ಕೂ ಉದಾಹರಣೆ ಶ್ರುತಿ ಹುಡುಕಬೇಕು.

**(೧೬) ಘೃತಾಚೀ ॥ ಘೃ-ಕ್ಷರಣದೀಪ್ತ್ಯೋಃ (ಜು-ಪ-) ಗೃ ಘೃ-ಸೇಚನೇ (ಭೂ-ಪ) 'ಅಞ್ಜಿಘೃಷಿಭ್ಯಃ ಕ್ತಃ' (ಉ-೩-೮೯) ಸೇಚಯತ್ಯನೇನ ಭೂಮಿಂ ಪರ್ಜನ್ಯಃ, ಘೃತಂ ಅಂಚತಿ ಇತಿ ಅಂಚೇರ್ಗತ್ಯರ್ಥಾತ್ ಕ್ವಿನ್ ॥**

ಇಲ್ಲಿ ಎರಡು ಪದಗಳಿವೆ. ಕ್ಷರಣ, ದೀಪ್ತಿ, ಸೇಚನಾದ್ಯರ್ಥ ಕೊಡುವ ಘೃ ಧಾತುವಿಗೆ ಔಣಾದಿಕ ಕ್ತ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಪರ್ಜನ್ಯದೇವತೆಯು ಇದರಿಂದ ಭೂಮಿಯನ್ನು ಅಭಿಷೇಚನಮಾಡುತ್ತಾನೆ; ಮೇಘದಿಂದ ಸುರಿಸುತ್ತಾನೆ ತನ್ನ ತೇಜಸ್ಸಿನಿಂದಲೇ ದೇವತೆಯಾದುದರಿಂದ ಪ್ರಕಾಶಿತವಾಗಿದೆ ಎಂಬರ್ಥದಲ್ಲಿ ಘೃತ ನೆಂದರೆ ಹಿಮರೂಪ ಜಲವೆಂದರ್ಥವಾಗುತ್ತದೆ. ಘೃತವನ್ನು ಹೊಂದಿರುವುದು ಎಂಬರ್ಥದಲ್ಲಿ ಘೃತಪದ ಉಪಪದವಾಗಿರುವಾಗ ಗತ್ಯರ್ಥಕ ಅಂಚು ಧಾತುವಿಗೆ 'ಋತ್ವಿಕ್ ದಧೃಕ್ ಸ್ರಗ್'—ಸೂತ್ರದಿಂದ ಕ್ವಿನ್‌ಪ್ರತ್ಯಯ. ಘೃತ+ಅಂಚ್ ಎಂದಿರುವಾಗ 'ಅನಿದಿತಾಂ'—(ಪಾ. ಸೂ. ೬–೪–೨೪) ಸೂತ್ರದಿಂದ ಉಪಧಾನಕಾರಕ್ಕೆ ಲೋಪ. 'ಅಚಃ' ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರ ನಕಾರವುಳ್ಳ ಅಂಚ್ ಧಾತು ಪರದಲ್ಲಿರುವುದರಿಂದ ಪೂರ್ವಕ್ಕೆ 'ಚೌ' (ಪಾ-ಸೂ-೬-೩-೧೩೮) ಸೂತ್ರದಿಂದ ದೀರ್ಘ. "ಅಂಚತೇಶ್ಚೋಪಸಂಖ್ಯಾನಮ್" (ಪಾ. ಸೂ. ೪–೧–೧–ವಾ) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಘೃತಾಚೀ. ಹಿಮವುಳ್ಳದ್ದು ರಾತ್ರಿ. ಇದಕ್ಕೂ ನಿಗಮ ಹುಡುಕಬೇಕು.

**(೧೭) ಶಿರಿಣಾ ‖ ಶೀಙಃ (ಅ-ಆ-) ಅಂತರ್ಣೀತಣ್ಯರ್ಥಾತ್ 'ಬಹುಲಮನ್ಯತ್ರಾಪಿ' (ಉ–೨–೪೬) ಇತಿ ಇನಚ್‌ಪ್ರತ್ಯಯೇ ರುಡಾಗಮೋ ಧಾತೋರ್ಹ್ರಸ್ವಶ್ಚ । ಶಾಯಯತಿ ಪ್ರಾಣಿನಃ ಶಿರಿಣಾ ‖**

ಶೀಙ್–ಸ್ವಪ್ನೇ ಧಾತು. ಣಿಜಂತಾರ್ಥ ತೋರುವಾಗ ಇದಕ್ಕೆ ಔಣಾದಿಕ ಇನಚ್‌ಪ್ರತ್ಯಯ. ಅದಕ್ಕೆ ರುಡಾಗಮ ಮತ್ತು ಧಾತುವಿಗೆ ಹ್ರಸ್ವ. ರುಟ್ ಟಿತ್ತಾಗುವುದರಿಂದ ಆದ್ಯವಯವಾಗಿ ಬರುತ್ತದೆ. ಶಿ+ರ್+ಇನ. 'ಅಟ್‌ಕುಪ್ವಾಙ್' ಸೂತ್ರದಿಂದ ಣತ್ವ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಪ್ರಾಣಿಗಳನ್ನು ಮಲಗಿಸುವುದು ಶಿರಣಾ=ರಾತ್ರಿ. ಉದಾಹರಣೆ—

**ಶಿರಿಣಾಯಾಂ ಚಿದಕ್ತುನಾ ಮಹೋಭಿಃ (ಋ. ಸಂ. ೨-೬-೨-೩) ‖**

**(೧೮) ಮೋಕೀ । ಮುಚ್‌ಲೃ–ಮೋಕ್ಷಣೇ (ತು–ಉ) 'ಇನ್ ಸರ್ವಧಾತುಭ್ಯಃ' (ಉ. ೪–೧೧೮) ಇತಿ ಇನಿ ಬಾಹುಲಕಾತ್ ಕುತ್ವಮ್ । 'ಕೃದಿಕಾರಾದಕ್ತಿನಃ (ಪಾ. ಸೂ. ೪–೧–೪೫–ವಾ) ಇತಿ ಙೀಷ್ ‖**

ಮೋಕ್ಷಣಾರ್ಥಕ ಮುಚ್‌ಧಾತುವಿಗೆ ಧಾತುಸಾಮಾನ್ಯಕ್ಕೆ ಬರುವ ಇನ್‌ಪ್ರತ್ಯಯ. ನಲೋಪ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಬಹುಲಗ್ರಹಣದಿಂದ ಚಕಾರಕ್ಕೆ ಕಕಾರಾದೇಶ. ಮೋಕಿ ಎಂದು ಇಕಾರಾಂತ ಕೃದಂತ ಪದವಾದುದರಿಂದ ಸ್ತ್ರೀತ್ವದಲ್ಲಿ ಙೀಷ್. ಇದರಲ್ಲಿ ಹಿಮವನ್ನು ಬಿಡುತ್ತಾನೆ. ಅಥವಾ ಮುಚ್‌ಧಾತುವಿಗೆ ಕ್ವಿಪ್ ಬಂದರೆ ಮೋಕ್ ಎಂದಾಗುತ್ತದೆ, ಪ್ರಾಣಿಗಳು ತಮ್ಮ ವ್ಯಾಪಾರವನ್ನು ಬಿಡುತ್ತವೆ. ಕ್ರಿಯಾ ವಿರಾಮವೆಂದು ತಾತ್ಪರ್ಯ. ಅದು ಉಳ್ಳದ್ದು ಎಂಬರ್ಥದಲ್ಲಿ 'ಛಂದಸೀವನಿಪೌ' (ಪಾ. ಸೂ. ೫-೨-೧೨೨-ವಾ) ವಾರ್ತಿಕದಿಂದ ಮತ್ವರ್ಥದಲ್ಲಿ ಈಕಾರ ರೂಪಪ್ರತ್ಯಯ. ಙ್ಯಂತವಾಗದಿದ್ದರೂ ವ್ಯತ್ಯಯದಿಂದ ಪ್ರಥಮಾ ವಿಭಕ್ತಿಯ ಸುಗೆ ಲೋಪ. ಉದಾಹರಣೆ—

**ಅನುವ್ರತಂ ಸವಿತುರ್ಮೋಕ್ಯಾಗಾತ್ । (ಋ. ಸಂ. ೨-೮-೨-೩).**

**(೧೯) ಶೋಕೀ ‖ ಶುಚ– ಶೋಕೇ । (ಭೂ. ಪ.) ಜ್ವಲತಿಕರ್ಮಾ ವಾ (ನಿಘ–೧–೧೭) ಪೂರ್ವವತ್ ಪ್ರಕ್ರಿಯಾ ‖**

ದುಃಖ ಅಥವಾ ಪ್ರಕಾಶಾರ್ಥವನ್ನು ಕೊಡುವ ಶುಚಧಾತುವಿಗೆ ಹಿಂದಿನಂತೆ ಇನ್ ಪ್ರತ್ಯಯ ಬಹುಲಗ್ರಹಣದಿಂದ ಕುತ್ವ. ಲಘೂಪಧ ಗುಣ. ಇಕಾರಾಂತವಾದುದರಿಂದ ಸ್ತ್ರೀತ್ವದಲ್ಲಿ ಙೀಷ್. ವಿರಹಿಗಳು ಇದರಲ್ಲಿ ದುಃಖಪಡುತ್ತಾರೆ

ಎಂದರ್ಥ. ಶೋಕಪದಕ್ಕೆ ನಿರುಕ್ತಕಾರರ ಮತದಂತೆ ತೇಜಸ್ಸೆಂದು ಅರ್ಥವಾಗುತ್ತದೆ. ತೇಜಸ್ಸುಳ್ಳದ್ದು ರಾತ್ರಿ. ಮತ್ವರ್ಥದಲ್ಲಿ ಈಕಾರ ಪ್ರತ್ಯಯ. ವ್ಯತ್ಯಯದಿಂದ ಸುಲೋಪ. ಅಗ್ನಿಯ ತೇಜಸ್ಸಿನಿಂದ ರಾತ್ರಿಯೂ ತೇಜಸುಳ್ಳದ್ದಾಗುತ್ತದೆಂದು ಬ್ರಾಹ್ಮಣದಲ್ಲಿ ಹೇಳಿದೆ. ಇದಕ್ಕೆ ನಿಗಮ ಬುಡುಕಬೇಕು.

(೨೦) **ಊಧಃ ॥ ‘ ಉನತ್ತ್ಯೂಧಃ ” ಇತಿ ಕ್ಷೀರಸ್ವಾಮೀ। ಉನ್ದೀ ಕ್ಲೇದನೇ—**(ರು. ಪ) **ಅಸುನಿ ಬಾಹುಲಕಾನ್ನಲೋಪೇ ದಕಾರಸ್ಯ ಧತ್ವೇ ದೀರ್ಘೇ ಚ ರೂಪಮ್ ॥**

ಒದ್ದೆಮಾಡುವುದು ಎಂಬರ್ಥಕೊಡುವ ಉನ್ದ್ ಧಾತುವಿಗೆ ಅಸುನ್. ಬಹುಲಗ್ರಹಣದಿಂದ ಧಾತುವಿನ ಉಪಧಾನ-ಕಾರಕ್ಕೆ ಲೋಪ. ದಕಾರಕ್ಕೆ ಧಕಾರಾದೇಶ. ಊಧಸ್ ಸಾಂತಪದವಾಗುತ್ತದೆ. ಹಿಮಕಣದಿಂದ ಪ್ರಾಣಿಜಾತವನ್ನು ಒದ್ದೆಮಾಡುತ್ತದೆ. ಅಥವಾ ಊಧಃ ಎಂದರೆ ಗೋವಿನಕೆಚ್ಚಲು. ಇದು ಪ್ರಸವಕಾಲದಲ್ಲಿ ಉನ್ನತವಾಗಿ ರಸವನ್ನು ಸೂಸುವಂತಿರುತ್ತದೆ. ಅದರಂತೆ ರಾತ್ರಿಯೂ ಕತ್ತಲೆಯಿಂದ ಉನ್ನತವಾಗಿ ರಸದಿಂದ ಕೂಡಿರುವುದರಿಂದ ಊಧಃ ಎಂಬ ಹೆಸರನ್ನು ಹೊಂದುತ್ತದೆ. ಉದಾಹರಣೆ—

**ಯೋ ಅಸ್ಮೈ ಘಂಸ ಉತ ವಾ ಯ ಊಧನಿ ।** (ಋ. ಸಂ. ೪-೨-೩-೩) **ಊಧರ್ನ ನಗ್ನಾಜರಂತೇ** (ಋ. ಸಂ. ೫-೭-೧೯-೧೨ ॥)

[೨೧] **ಪಯಃ ॥ ವ್ಯಾಖ್ಯಾತಂ ಪಯಸ್ವತೀತ್ಯತ್ರ, ಮತ್ವರ್ಥೀಯಸ್ಯಲುಕ್ ನಿಗಮೋಽನ್ವೇಷಣೀಯಃ॥**

ಪಯಸ್ವತೀ ಎಂಬ ರಾತ್ರಿನಾಮ ಹೇಳುವಾಗ ಇದು ವ್ಯಾಖ್ಯಾತವಾಗಿದೆ. ಛಾಂದಸವಾಗಿ ಮತುಪ್ ಪ್ರತ್ಯಯಕ್ಕೆ ಲುಕ್ ಬಂದಿದೆ. ಹಿಮಾದಿಗಳಿಂದ ರಸವುಳ್ಳದ್ದು ಎಂದರ್ಥ. ರಾತ್ರಿ ಪರ್ಯಾಯವಾಗಿ ಪಯಃ ಶಬ್ದ ಪ್ರಯೋಗಕ್ಕೆ ನಿಗಮ ಹುಡುಕಬೇಕು.

[೨೨] **ಹಿಮಾ ॥ “ ಹನ್ತೇರ್ಹಿಚ ’** [ಉ.೧.೧೪೪] **ಇತಿ ಮಕ್‌ಪ್ರತ್ಯಯೋ ಹಿರಾದೇಶಶ್ಚ೦ ಹನ್ತಿ** [ಅದಾ-ಪ] **ಪದ್ಮಾನೀತಿ ಹಿಮಮ್ ॥ ಅರ್ಶ ಆದಿತ್ವಾದಚ್ ॥**

ಹನ—ಹಿಂಸಾಗತ್ಯೋಃ ಧಾತು. ಇದಕ್ಕೆ ಔಣಾದಿಕ ಮಕ್‌ಪ್ರತ್ಯಯ; ಧಾತುವಿಗೆ ಹೀರಾದೇಶ ಕಮಲ ಮುಂತಾದವುಗಳನ್ನು ಹಿಂಸಿಸುವುದು ಹಿಮ. ಇದು ಉಳ್ಳದ್ದು ರಾತ್ರಿ. ಮತ್ವರ್ಥದಲ್ಲಿ ಹಿಮಶಬ್ದದ ಮೇಲೆ ಅಚ್‌ಪ್ರತ್ಯಯ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಉದಾಹರಣೆ—

**ಶಂ ಭಾನುನಾ ಶಂ ಹಿಮಾ ಶಂ ಘೃಣೇನ** [ಋ. ಸಂ. ೭-೮-೧೩-೪]

[೨೩] **ವಸ್ವೀ ॥ವಸ-ಆಚ್ಛಾದನೇ ।** [ಅದಾ-ಆ] **“ ಶೃಸ್ವೃಸ್ನಿಹಿತ್ರಪ್ಯಸಿ—”** [ಉ-೧೦] **ಇತಿ ಉ ಪ್ರತ್ಯಯಃ ॥ ವೃಷಾದೀನಾಂ ಚ** [ಪಾ. ಸೂ-೬.೧.೧೦೨] **ಇತ್ಯಾದ್ಯುದಾತ್ತತ್ವಮ್ ॥**

ಮುಚ್ಚುವುದು ಎಂಬ ಅರ್ಥ ಹೇಳುವ ವಸ ಧಾತುವಿಗೆ ಉಪ್ರತ್ಯಯ. ಲೋಕವನ್ನು ಕತ್ತಲೆಯು ಮುಚ್ಚುವುದರಿಂದ ವಸುಃ ಅಂದರೆ ಕತ್ತಲೆ. ಇದು ಉಳ್ಳದ್ದು ರಾತ್ರಿ. ವಸುಶಬ್ದಕ್ಕೆ ಮತ್ವರ್ಥದಲ್ಲಿ ‘ಛಂದಸೀ ವನಿಪೌ ಚ’ ವಾರ್ತಿಕದಿಂದ ಈಕಾರ ರೂಪಪ್ರತ್ಯಯ. ಯಣ್. ವಸ್ವೀ. ವ್ಯತ್ಯಯದಿಂದ ಸುಲುಕ್. ವೃಷಾದಿಗಣದಲ್ಲಿ ಸೇರಿರುವುದರಿಂದ ಆದ್ಯುದಾತ್ತವಾಗುತ್ತದೆ. ಅಥವಾ ಪ್ರಶಸ್ತಾರ್ಥವನ್ನು ಕೊಡುವ ವಸು ಶಬ್ದದಮೇಲೆ ಗುಣವಾಚಕವಾದುದರಿಂದ ‘ವೋತೋ ಗುಣವಚನಾತ್’ (ಪಾ.ಸೂ.

೪-೧-೪೪) ಸೂತ್ರದಿಂದ ಙೀಷ್. ಎಲ್ಲಾ ಪ್ರಾಣಿಗಳಿಗೂ ಆಹ್ಲಾದವನ್ನುಂಟುಮಾಡುವುದರಿಂದ ರಾತ್ರಿಗೆ ಪ್ರಾಶಸ್ತ್ಯ. ಇದಕ್ಕೆ ಉದಾಹರಣೆಯಾಗಿ ನಿಗಮವು ಹುಡುಕಬೇಕು.

ಹೀಗೆ ಇಪ್ಪತ್ತಮೂರು ರಾತ್ರಿ ನಾಮಗಳು.

---

## ಅಥ ರಾತ್ರಿನಾಮಾನಿ ।

ಶ್ಯಾವೀ, ಕ್ಷಪಾ ಎಂಬಿವೇ ಮೊದಲಾದ ಇಪ್ಪತ್ತು ಮೂರು ಶಬ್ದಗಳು ರಾತ್ರಿ ಎಂಬ ಅರ್ಥವನ್ನು ಹೇಳುವುವು.

ರಾತ್ರಿನಾಮಾನ್ಯುತ್ತರಾಣಿ ತ್ರಯೋವಿಂಶತಿಃ ॥ ರಾತ್ರಿಃ ಕಸ್ಮಾತ್ ಪ್ರರಮಯತಿ ಭೂತಾನಿ ನಕ್ತಞ್ಚಾರೀಣ್ಯುಪರಮತೀತರಾಣಿ ಧ್ರುವೀಕರೋತಿ ॥ ರಾತೇರ್ವಾ ಸ್ಯಾದ್ದಾನಕರ್ಮಣಃ ಪ್ರದೀಯಂತೇಽಸ್ಯಾಮವಶ್ಯಾಯಾಃ

ಕಾಷ್ಠಾ ಎಂಬ ಪದವು ದಿಙ್ ನಾಮವಾದಾಗ್ಯೂ ಬೇರೆ ಪದಾರ್ಥಗಳನ್ನು ಹೇಳುವುದರಿಂದ ಅವುಗಳನ್ನು ವಿವರಿಸಿ ಈಗ ರಾತ್ರಿಯ ಇಪ್ಪತ್ತಮೂರು ಹೆಸರುಗಳನ್ನು ಇಲ್ಲಿ ವಿವರಿಸಿದೆ. ರಾತ್ರಿನಾಮಗಳನ್ನು ದಿಕ್ಕಿನ ಹೆಸರುಗಳನ್ನು ವಿವರಿಸಲು ದಿಕ್ಕುಗಳನ್ನು ಕತ್ತಲೆಯು ಸೇರುವುದು ಕಾರಣವಾಗಿದೆ. ದಿಕ್ಕುಗಳಲ್ಲಿ ಕತ್ತಲೆಯು ಹೆಚ್ಚಾಗಿರುವುದನ್ನು ರಾತ್ರಿ ಎಂದು ಕರೆಯುತ್ತಾರೆ. ಈ ರಾತ್ರಿಯನ್ನು ವಿವರಿಸುವುದಕ್ಕೆ ಮೊದಲು ಇದಕ್ಕಾಗಿಯೇ ದಿಙ್ ನಾಮಗಳನ್ನು ಹೇಳಿದೆ. ಈ ಹೆಸರುಗಳು ಇಪ್ಪತ್ತುಮೂರು ಇರುತ್ತವೆ. ಕತ್ತಲೆಯಿಂದ ಕಪ್ಪುಬಣ್ಣವಾಗಿರುವ ಕಾರಣ ರಾತ್ರಿಯನ್ನು 'ಶ್ಯಾವೀ' ಎಂದು ಹೇಳುತ್ತಾರೆ. ಆಯಾಯ ಕೆಲಸಗಳಿಂದ ಪ್ರಾಣಿಗಳು ಹಗಲನ್ನು [ದಿವಸವನ್ನು] ಸುಖವಾಗಿ ಕಳೆದು ಅನಂತರ ನಿದ್ರೆಮಾಡುವುದರಿಂದ ಪ್ರಾಣಿಗಳು ಸುಖವನ್ನು ಹೊಂದುತ್ತವೆ. ಇದಕ್ಕಾಗಿಯೇ 'ಕ್ಷಪಾ' ಎಂದು ರಾತ್ರಿಗೆ ಹೆಸರು. ರಾತ್ರಿಯೆಂಬ ಈ ಕಾಲದಲ್ಲಿ ಪ್ರಾಣಿಗಳು ನಿದ್ರೆಮಾಡಿದ ನಂತರ ಹೊಸಬರಾಗಿ ಇರುವಂತೆ ಆಯಾಯ ಕೆಲಸಗಳನ್ನು ಮಾಡುತ್ತಾರೆ. ಇದರಿಂದ ಪ್ರಾಣಿಗಳಿಗೆ ನಿದ್ರೆಯನ್ನು ಕೊಟ್ಟು ರಕ್ಷಣೆ ಮಾಡುವುದರಿಂದ ರಾತ್ರಿಗೆ 'ಶರ್ವರೀ' ಎಂದು ಹೆಸರಾಯಿತು. ಹೀಗೆಯೇ ರಾತ್ರಿನಾಮಗಳ ಅವಯವಾರ್ಥವನ್ನು ವಿವರಿಸತಕ್ಕದ್ದು.

ಎಲ್ಲಾ ಪ್ರಾಣಿಗಳನ್ನು ಬಹಳ ಮಟ್ಟಿಗೆ ಸಂತೋಷಪಡಿಸುವ ಕಾಲವು ರಾತ್ರಿಯೆನಿಸುವುದು. ಪಿಶಾಚಿಯೇ ಮೊದಲಾದವುಗಳು ಬೆಳಕಿನ ಕಾಲವು ಕಳೆದನಂತರ ವಿಹಾರ ಕಾಲವು ಬಂದಿರುವುದೆಂದು ಬಹಳ ಸಂತೋಷಪಡುತ್ತವೆ. ಹಗಲಿನಲ್ಲಿ ವ್ಯವಹಾರವನ್ನು ಮಾಡುವ ಪ್ರಾಣಿಗಳೆಲ್ಲವನ್ನೂ ಆನಂದ ಪಡುವಂತೆ ಮಾಡುತ್ತವೆ. ಮನುಷ್ಯರೇ ಮೊದಲಾದವರು ಈ ಕಾಲವು ಬಂದ ಕೂಡಲೇ ತಮ್ಮ ಕೆಲಸವನ್ನು ಮುಗಿಸಿ ಸುಮ್ಮನಾಗುವರು. ಮತ್ತು ತಮ್ಮ ತಮ್ಮ ವಾಸಸ್ಥಾನಗಳಿಗಾಗಿ ಹೊರಟುಹೋಗುವರು. 'ರಮು' ಎಂಬ ಧಾತುವಿನಿಂದ ಉಂಟಾಗಿರುವ ರಾತ್ರಿ ಶಬ್ದದ ಅರ್ಥವನ್ನು ವಿವರಿಸಿದೆ. ದಾನವನ್ನು ಮಾಡುವುದು ಎಂಬರ್ಥವುಳ್ಳ ಧಾತುವಿನಿಂದ ಉಂಟಾದ ರಾತ್ರಿ ಶಬ್ದಕ್ಕೆ ಉದಕಧಾರಾಪೂರ್ವಕವಾಗಿ ಮಳೆಯನ್ನು ಕೊಡ-

ಕಾರಣದಿಂದಲೂ ಈ ಕಾಲದಲ್ಲಿಯೇ ಪ್ರಾಯಕವಾಗಿ ಹಿಮವು ಬೀಳುವುದರಿಂದಲೂ, ಹಿಮವು ಹೆಚ್ಚಾಗಿ ಬೀಳುವ ಕಾಲವನ್ನು ರಾತ್ರಿ ಎಂದು ಹೇಳಿದೆ.

## ಅಥ ಉಷೋ ನಾಮಾನಿ

(೧) ವಿಭಾವರೀ (೨) ಸೂನರೀ (೩) ಭಾಸ್ವತೀ (೪) ಓದತೀ (೫) ಚಿತ್ರಾಮಘಾ (೬) ಅರ್ಜುನೀ (೭) ವಾಜಿನೀ (೮) ವಾಜಿನೀವತೀ (೯) ಸುಮ್ನಾವರೀ (೧೦) ಅಹನಾ (೧೧) ದ್ಯೋತನಾ (೧೨) ಶ್ವೇತ್ಯಾ (೧೩) ಅರುಷೀ (೧೪) ಸೂನೃತಾ (೧೫) ಸೂನೃತಾವತೀ (೧೬) ಸೂನೃತಾವರೀ ಇತಿ ಷೋಡಶ ಉಷಾನಾಮಾನಿ ॥

ಈ ಹದಿನಾರು ಉಷಃ ಕಾಲದ ಹೆಸರುಗಳು

**(೧) ವಿಭಾವರೀ ॥ ಭಾ–ದೀಪ್ತೌ (ಅದಾ–ಪ) ವಿಪೂರ್ವಃ । ಆತೋಮನಿನ್ ಕ್ವನಿಬ್ ವನಿಪಶ್ಚ (ಪಾ. ಸೂ. ೩-೨-೭೪) ಇತಿ ವನಿಪ್ । "ವನೋರಚ" (ಪಾ. ಸೂ. ೪-೧-೭) ಇತಿ ಙೀಬ್ ರೇಫೌ ॥**

ದೀಪ್ತ್ಯರ್ಥಕವಾದ ಭಾಧಾತುವಿಗೆ ಅದಂತವಾದುದರಿಂದ ವನಿಪ್ ಪ್ರತ್ಯಯ. ವಿ ಉಪಸರ್ಗ. ವಿ+ಭಾ+ವನ್. ಸ್ತ್ರೀತ್ವದಲ್ಲಿ 'ವನೋ ರಚ' ಸೂತ್ರದಿಂದ ಙೀಪ್. ನಕಾರಕ್ಕೆ ರೇಫಾದೇಶ. ವಿಭಾವರೀ. ಸೂರ್ಯಕಿರಣ ಸಂಬಂಧದಿಂದ ವಿಶೇಷವಾಗಿ ಪ್ರಕಾಶಿಸುತ್ತದೆ ಎಂದರ್ಥ. ಉದಾಹರಣೆ—

**ಆಪಪ್ರುಷೀ ವಿಭಾವರಿ (ಋ. ಸಂ. ೩–೮–೩-೬) ॥**

**[೨] ಸೂನರೀ ॥ ಶೋಭನಾ ನರಾ ಅಸ್ಯಾಂ ಸಂತಿ, ಮತ್ವರ್ಥೀಯ ಈಕಾರಃ ವ್ಯತ್ಯಯೇನ ಹಲ್ ಙ್ಯಾದಿ ಲೋಪಃ । ಬಹುವ್ರೀಹಿಃ, ಪಿಪ್ಪಲ್ಯಾದೇರಾಕೃತಿ ಗಣತ್ವಾದೀಕಾರಃ ॥**

ಮಂಗಲಕರರಾದ ಮನುಷ್ಯರು ಇದರಲ್ಲಿ ಇರುತ್ತಾರೆ ಎಂಬ ಮತ್ವರ್ಥದಲ್ಲಿ ಸೂನರ ಶಬ್ದದ ಮೇಲೆ "ಛಂದಸೀವನಿಪೌ" ಎಂಬುದರಿಂದ ಈಕಾರ ಪ್ರತ್ಯಯ. "ಯಸ್ಯೇತಿಚ" ಅಕಾರಲೋಪ. ವ್ಯತ್ಯಯದಿಂದ ಙ್ಯಂತವಾಗದಿದ್ದರೂ ಸುಲೋಪ ಬರುತ್ತದೆ. ಅಥವಾ 'ಯಾವ ಕಾಲಕ್ಕೆ ಶೋಭನ ನರರು ಇರುತ್ತಾರೋ ಅದು' ಎಂದು ಬಹುವ್ರೀಹಿ ಸಮಾಸ. ಪಿಪ್ಪಲ್ಯಾದಿ ಗಣದಲ್ಲಿ ಸೇರಿರುವುದರಿಂದ ಈಕಾರ ಬರುತ್ತದೆ. ಬೆಳಗಿನ ಜಾವದಲ್ಲಿ ಮನಸ್ಸು ನೈರ್ಮಲ್ಯ ಹೊಂದುವಂತೆ " ಎಂದು ಮಹಾಕವಿ ಕಾಳಿದಾಸನೂ ಅತಿಥಿರಾಜನನ್ನು ವರ್ಣಿಸುವಾಗ ಹೇಳಿರುತ್ತಾನೆ. ಅಥವಾ ಕಾಲವನ್ನು ಚೆನ್ನಾಗಿ ಕಳೆಯುವಂತೆ ಮಾಡುತ್ತದೆ ಎಂಬರ್ಥ ತೋರುವುದರಿಂದ ಎರಡು ಪದಗಳಿವೆಯೆಂದು ತಿಳಿಯಬೇಕು. ನ್ಯಾ–ನಯೇ ಧಾತು. ಇದಕ್ಕೆ ಸುಪೂರ್ವದಲ್ಲಿರುವಾಗ 'ಅಚ ಇಃ' (ಉ-೪–೧೩೪) ಸೂತ್ರದಿಂದ ಇ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಋಕಾರಕ್ಕೆ ಗುಣ. ಬಹುಲ ಗ್ರಹಣದಿಂದ ಸುಪದಕ್ಕೆ ದೀರ್ಘ. ಸೂನರಿ ಎಂದು ಇಕಾರಾಂತ ಕೃದಂತವಾಗುವುದರಿಂದ "ಕೃದಿಕಾರಾದಕ್ತಿನಃ" ಎಂಬುದರಿಂದ ಙೀಷ್. ನರಪದಕ್ಕೆ ದೇವತೆಯೆಂಬ ಅರ್ಥವಾಗುವುದರಿಂದ ದೇವತೆಗಳಿಂದ ಕೂಡಿರುವುದು ಎಂದು ಮಾಧವರು ವ್ಯಾಖ್ಯಾನ

ವಾಡಿರುತ್ತಾರೆ. ಆಗ 'ಅನ್ಯೇಷಾಮಪಿ ದೃಶ್ಯತೇ' ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ವ್ಯತ್ಯಯದಿಂದ ಅವಗ್ರಹ ಬರುವುದಿಲ್ಲ. ಉದಾಹರಣೆ—

**ಜ್ಯೋತೀಷ್ಕೃಣೋತಿ ಸೂನರಿ (ಋ-ಸಂ-೫-೬-೧-೧)**

**(೩) ಭಾಸ್ವತೀ ॥ ಭಾಸೃ-ದೀಪ್ತೌ (ಭ್ವಾ-ಆ) ಕ್ವಿಪ್ । ಭಾಸತ ಇತಿ ಭಾಸಃ ಪ್ರಕಾಶಃ । ಭಾಸಾ ತದ್ವತೀ ಭಾಸ್ವತೀ ॥**

ದೀಪ್ತ್ಯರ್ಥಕವಾದ ಭಾಸ ಧಾತುವಿಗೆ ಕ್ವಿಪ್ ಬಂದರೆ ಸರ್ವಲೋಪ. ಭಾಸ್ ಸಾಂತಪದವಾಗುತ್ತದೆ. ಜ್ವಲಿಸುವುದು ಪ್ರಕಾಶವೆಂದರ್ಥ. ಅದರಿಂದ ಕೂಡಿರುವುದು ಭಾಸ್ವತೀ. ಮತುಪ್ ಪ್ರತ್ಯಯ. ವಕಾರಾದೇಶ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್. 'ತಸೌಮತ್ವರ್ಥೇ' ಸೂತ್ರದಿಂದ ಸಾಂತಕ್ಕೆ ಭಸಂಜ್ಞೆ ಬರುವುದರಿಂದ ಸಕಾರಕ್ಕೆ ರುತ್ವ ವಿಸರ್ಗಗಳು ಬರುವುದಿಲ್ಲ. ಸೂರ್ಯರಶ್ಮಿಗಳಿಂದ ಪ್ರಾತಃಕಾಲವು ಪ್ರಕಾಶದಿಂದ ಕೂಡಿರುತ್ತದೆ. ಉದಾಹರಣೆ—

**ಭಾಸ್ವತೀ ನೇತ್ರೀ ಸೂನೃತಾನಾಮ್ [ಋ. ಸಂ. ೧-೫-೧-೪]**

**(೪) ಓದತೀ। ಉನ್ದೀ-ಕ್ಲೇದನೇ (ರು-ಪ) ಉನ್ದೇರ್ಲಟಃ ಶತರಿ "ಛಂದಸ್ಯುಭಯಥಾ" (ಪಾ-ಸೂ-೩-೪-೧೧೭) ಇತಿ ಶತುರಾರ್ಧಧಾತುಕತ್ವೇನ ವಿಕರಣಾಭಾವಃ, 'ಅನಿದಿತಾಂ—' (ಪಾ.ಸೂ.೬-೪-೨೪) ಇತಿ ನಲೋಪಃ ವ್ಯತ್ಯಯೇನ ಗುಣಃ, ಙೀಪ್ ॥**

ಕ್ಲೇದನಾರ್ಥಕವಾದ ಉನ್ದ್ ಧಾತುವಿಗೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಉನ್ದ್+ಅತ್ ಎಂದಿರುವಾಗ ಶತೃ ಶಿತ್ತಾದರೂ ಛಂದಸ್ಸಿನಲ್ಲಿ ಆರ್ಧಧಾತುಕ ಸಂಜ್ಞೆಯೂ ಬರುವುದರಿಂದ ವಿಕರಣಪ್ರತ್ಯಯ (ಶ್ನಮ್) ಬರುವುದಿಲ್ಲ. ಅಪಿತ್ತಾದ ಸಾರ್ವಧಾತುಕವಾದುದರಿಂದ ಶತೃ ಙಿತ್ತಾಗುವುದರಿಂದ 'ಅನಿದಿತಾಂ'—ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಉದ್+ಅತ್. ವ್ಯತ್ಯಯದಿಂದ ಙಿತ್ತಾದರೂ ಗುಣ ಬರುತ್ತದೆ. ಪ್ರತ್ಯಯ ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಓದತೀ. ಹಿಮದಿಂದ ಲೋಕವನ್ನು ಒದ್ದೆಯಾಗಿ ಮಾಡುತ್ತದೆ ಎಂದರ್ಥ. ಉದಾಹರಣೆ—

**ಪದಂ ನ ವೇತ್ಯೋದತೀ (ಋ. ಸಂ. ೧-೪-೪-೧)**

**[೫] ಚಿತ್ರಾಮಘಾ ॥ ಚಿಞ್-ಚಯನೇ [ಸ್ವಾ-ಉ] 'ಅಮಿಚಿಮಿಮಿದಿಶಂಸಿಭ್ಯಃ ಕ್ತ್ರಃ' [ಉ-೪-೧೬೫] ಇತಿ ಕ್ತ್ರ ಪ್ರತ್ಯಯಃ । ಚಿತ್ರಮ್ । 'ಮಹಂತಿರ್ದಾನಕರ್ಮಾ' [ನಿಘ-೩-೨೦] ಘಞರ್ಥೇ ಕ ವಿಧಾನಮಿತ್ಯತ್ರ ಪರಿಗಣನಸ್ಯೋಪಲಕ್ಷಣಾರ್ಥತ್ವಾತ್ ಕಪ್ರತ್ಯಯೇ 'ಅನಿದಿತಾಂ—' ಇತಿ ನಲೋಪಃ । ಪೃಷೋದರಾದಿತ್ವಾತ್ ಘುತ್ವಮ್ ॥**

ಎರಡು ಪದಗಳಿಂದ ಈ ಶಬ್ದವಾಗಿದೆ. ಕೂಡಿಸುವುದು ಎಂಬರ್ಥವನ್ನು ಕೊಡುವ ಚಿಧಾತುವಿಗೆ ಔಣಾದಿಕ ಕ್ತ್ರಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಇಕಾರಕ್ಕೆ ಗುಣ ಬರುವುದಿಲ್ಲ. ಚಿತ್ರಮ್. ದಾನಾರ್ಥಕವಾದ ಮಂಹ್ ಧಾತುವಿಗೆ ಘಞರ್ಥದಲ್ಲಿ ಕಪ್ರತ್ಯಯ. ಅಲ್ಲಿ ಇಷ್ಟೇ ಧಾತುಗಳಿಗೆ ಎಂದು ಪರಿಗಣನೆ ಮಾಡಿದ್ದರೂ ಅದು ಉಪಲಕ್ಷಣವಾದುದರಿಂದ ಇದಕ್ಕೂ ಬರುತ್ತದೆ. ಕಕಾರ ಇತ್ತಾದುದರಿಂದ ಕಿತ್‌ಪ್ರತ್ಯಯ ಪರದಲ್ಲಿರುವುದರಿಂದ 'ಅನಿದಿತಾಂ—' ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ಸ್ತ್ರೀತ್ವದಲ್ಲಿ ಟಾಪ್. ಚಿತ್ರಾಮಘಾ. ಮಹ್ಯತೇ ಅರ್ಥಿಭ್ಯಃ ಇತಿ ಮಘಂ ಧನಮ್. ಯಾಚಕರಿಗೆ ದಾನಮಾಡಲ್ಪಡುವುದು ಮಘವೆಂದರ್ಥ. ಆಶ್ಚರ್ಯಕರವಾದ ಧನವುಳ್ಳದ್ದು ಉಷಃ ಕಾಲ. ಉದಾಹರಣೆ—

**ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ** [ಋ. ಸಂ. ೫-೫-೨೨-೫]

**[೬] ಅರ್ಜುನೀ ॥ ಅರ್ಜ ಸರ್ಜ ಅರ್ಜನೇ [ಚು–ಪ–] ಅರ್ಜೇರ್ಣಿಲುಕಿ ಉನನ್‌ಪ್ರತ್ಯಯಃ [ಉ-೩-೫೫] ಅರ್ಜಯತಿ । ಯದ್ವಾ ಅರ್ಜ-ಗತಿಸ್ಥಾನಾರ್ಜನೇಷು (ಭೂ–ಪ–) ಬಾಹುಲಕಾದುನನ್ ॥**

ಅರ್ಜನಾರ್ಥಕವಾದ ಅರ್ಜಧಾತುವಿಗೆ ಪ್ರೇರಣಾರ್ಥದಲ್ಲಿ ಣಿಚ್ ಬಂದಾಗ ಅದಕ್ಕೆ ಉನನ್‌ಪ್ರತ್ಯಯ. "ಣೇರನಿಟಿ" ಸೂತ್ರದಿಂದ ಣಿಲೋಪ. ಅರ್ಜುನ ಎಂದಾಗುತ್ತದೆ. ಗತ್ಯಾದ್ಯರ್ಥ ಕೊಡುವ ಅರ್ಜಧಾತುವಿಗೆ ಬಹುಲಗ್ರಹಣದಿಂದ ಉನನ್ ಪ್ರತ್ಯಯ. ಯಾಚಕರಿಂದ ಹೊಂದಲ್ಪಡುತ್ತನೆ, ತಮ್ಮ ಆಶ್ರಯದಲ್ಲಿ ಇರುತ್ತವೆ ಇತ್ಯಾದ್ಯರ್ಥವಾಗುತ್ತದೆ. ಅರ್ಜುನನೆಂಬುದ ರೂಪನಾಮವೆಂದು ನಿಘಂಟುವಿನಲ್ಲಿ ಹೇಳಿದೆ. ಸೂರ್ಯರಶ್ಮಿ ಸಂಬಂಧದಿಂದ ಅದು ಬಿಳಿಬಣ್ಣವಾಗುತ್ತದೆ. ಅದು ಉಳ್ಳದ್ದು ಅರ್ಜುನೀ. 'ಅನ್ಯತೋ ಙೀಷ್' ಸೂತ್ರದಿಂದ ಙೀಷ್. ಅರ್ಜುನೀ ಪದಕ್ಕೆ ಕಿರಣ, ಹಸು ಎಂಬ ಅರ್ಥವೂ ಇದೆ. ಅದು ವಾಹನವಾಗಿ ಉಳ್ಳದ್ದು. "ಯಾ ಗೋಮತೀರುಷಸಃ ಸರ್ವವೀರಾಃ" ಇತ್ಯಾದಿ ಶ್ರುತಿಯಿಂದ ಈ ಅರ್ಥ ವ್ಯಕ್ತವಾಗುತ್ತದೆ. ಆಗ ಮತ್ವರ್ಥದಲ್ಲಿ ಈಕಾರ ರೂಪಪ್ರತ್ಯಯ ವ್ಯತ್ಯಯದಿಂದ ಸುಲೋಪ. ಉದಾಹರಣೆ—

**ದ್ವಿಪಚ್ಚತುಷ್ಪದರ್ಜುನಿ** (ಋ. ಸಂ. ೧–೪–೬–೩)

(೭) **ಪಾಜಿನೀ ॥ ವಾಜ ಇತ್ಯನ್ನನಾಮ (ನಿಘ–೨–೭) ವಾಜೀ ಹವಿರ್ಲಕ್ಷಣಮನ್ನಮಸ್ಯಾ ಅಸ್ತಿ, 'ಅತ ಇನಿಠನೌ'** [ಪಾ. ಸೂ. ೫–೨–೧೧೫] **"ಋನ್ನೇಭ್ಯೋಙೀಪ್"** [ಪಾ. ಸೂ. ೪–೧–೫]

ವಾಜವೆಂಬುದು ಅನ್ನದ ಹೆಸರೆಂದು ನಿಂಘಟುವಿನಲ್ಲಿ ಹೇಳಿದೆ. ಹವಿರ್ಲಕ್ಷಣವಾದ ಅನ್ನದಿಂದ ಕೂಡಿರುವುದು ಎಂಬ ಮತ್ವರ್ಥದಲ್ಲಿ ಅದಂತವಾದುದರಿಂದ ಇನಿಪ್ರತ್ಯಯ. ವಾಜಿನ್ ನಾಂತಪದವಾದುದರಿಂದ ಸ್ತ್ರೀಲಿಂಗದಲ್ಲಿ ಙೀಪ್. ವಾಜಿನೀ. ಪ್ರಾತಃಕಾಲದಲ್ಲಿ ಹೋಮಾದಿಗಳನ್ನು ಮಾಡುವಾಗ ಹವಿಸ್ಸು ಉಪಯೋಗಿಸಲ್ಪಡುತ್ತದೆ. ದೇವತೆಗಳಿಗೆ ಕೊಡುವ ಹವಿಸ್ಸಿನಿಂದ ಇದೂ ಹವಿಸ್ಸುಳ್ಳದ್ದಾಗುತ್ತದೆ. ಉದಾಹರಣೆ—

**ವಾಯವಿಂದ್ರಶ್ಚ ಚೇತಥಃ ಸುತಾನಾಂ ವಾಜಿನೀವಸೂ** (ಋ. ಸಂ. ೧-೧-೩-೫)

(೮) **ವಾಜಿನೀವತೀ ॥ ವಾಜೋ ಬಲಂ ವೇಗೋ ವಾ ತೇನ ತದ್ವತೀ ವಾಜಿನೀ, ಕಾಷ್ಠಾ ಉಷಸಃ ಸ್ವಭೂತಾ ತೇನ ತದ್ವತೀ ವಾಜಿನೀವತೀ ॥ 'ಸಂಜ್ಞಾಯಮ್'ವಾ "ಛಂದಸೀರಃ" (ಪಾ–ಸೂ-೮–೨–೧೫) ಇತಿ ವಾ ಮತುಪೋ ವತ್ವಮ್ ॥**

ವಾಜವೆಂದರೆ ಬಲ ಅಥವಾ ವೇಗ. ಇದು ಉಳ್ಳದ್ದು ವಾಜನೀ. ಹಿಂದಿನಂತೆ ಇನಿಪ್ರತ್ಯಯ. ಅದು ಪ್ರಾತಃಕಾಲ ಸಂಬಂಧವಾದುದೇ ಆದುದರಿಂದ ವಾಜಿನೀ ಉಳ್ಳದ್ದು ವಾಜಿನೀವತಿ. ಮತುಪ್ ಪ್ರತ್ಯಯ. ಸಂಜ್ಞಾ ತೋರುವುದರಿಂದ ನಿಮಿತ್ತವಿಲ್ಲದಿದ್ದರೂ ಮತುಪಿನ ಮಕಾರಕ್ಕೆ ವಕಾರಾದೇಶ ಬರುತ್ತದೆ. ಅಥವಾ ವಾಜವೆಂದರೆ ಹವಿಸ್ಸೇ ಮುಂತಾದ ಅನ್ನವಾಗುತ್ತದೆ. ಇದು ಉಳ್ಳದ್ದು ಯಾಗಸಂತತಿ. ಈ ಯಾಗಾದಿಗಳುಳ್ಳದ್ದು ವಾಜಿನೀವತೀ. ಸಂಧ್ಯಾಕಾಲದಲ್ಲಿಯೇ ಹೆಚ್ಚಾಗಿ ಹೋಮಾದಿಗಳನ್ನು ಮಾಡುವುದು. ವಾಜವೆಂದರೆ ಅನ್ನ. ಅದು ಉಳ್ಳದ್ದು ಅನ್ನಸಮುದಾಯ ವಾಜನೀ. ಅನ್ನಸಂತತಿಯಿಂದ ಕೂಡಿರುವುದು ವಾಜಿನೀವತೀ. 'ವಾಜಿನೀವತೀತ್ಯುಷಾ ಹಿ ಸರ್ವೇಽನ್ನಂ ಲಭಂತೇ ಎಂದು ಮಾಧವರು ವ್ಯಾಖ್ಯಾನಮಾಡಿರುವುದರಿಂದ ಇಲ್ಲಿ ಎರಡು ಮತ್ವರ್ಥಪ್ರತ್ಯಯಗಳಿಗೆ ತರತಮಭಾವದಿಂದ ಕೂಡಿರುವುದರಿಂದ ಅರ್ಥ ಕಲ್ಪಿಸಬೇಕು. ಉದಾಹರಣೆ—

**ವೃಶ್ಚೀಭ್ಯಃ ಸುಭಗೇ ವಾಜಿನೀವತಿ (ಋ. ಸಂ. ೬-೨-೨೨-೩) "–ಅಸ್ಮಭ್ಯಂವಾಜಿನೀವತಿ" (ಋ-ಸಂ. ೩-೮-೭-೩)**

**(೯) ಸುಮ್ನಾವರೀ॥ ಸುಪೂರ್ವಾತ್ ಮ್ನಾ-ಮಾನೇ (ಅದಾ-ಪ) ಇತ್ಯಸ್ಮಾತ್ ಉಪಸರ್ಗೇ ಚ ಸಂಜ್ಞಾಯಾಮ್ (ಪಾ. ಸೂ. ೩-೨-೯೯) ಇತಿ ಜನೇರ್ವಿಧೀಯಮಾನೋ ಡ ಪ್ರತ್ಯಯೋ ಬಾಹುಲಕಾದ್ ಭವತಿ। "ಛಂದಸೀವನಿಪೌ"। "ವನೋ ರಚ" (ಪಾ. ಸೂ. ೪-೧-೭) ಇತಿ ಜೀಬ್ರೌ॥ "ಅನ್ಯೇಷಾಮಪಿ ದೃಶ್ಯತೇ" ಇತಿ ದೀರ್ಘಃ॥**

ಅಭ್ಯಾಸಾರ್ಥಕವಾದ ಮ್ನಾ ಧಾತುವಿಗೆ ಬಹುಲಗ್ರಹಣದಿಂದ ಸುಪೂರ್ವದಲ್ಲಿರುವಾಗ ಡ ಪ್ರತ್ಯಯ. ಸುಮ್ನಾ+ಅ ಎಂದಿರುವಾಗ ಪ್ರತ್ಯಯ ಡಿತ್ತಾದುದರಿಂದ ಟಿ (ಆ) ಲೋಪ ಸುಮ್ನಮ್. ಯಾವಾಗಲೂ ಎಲ್ಲರಿಂದಲೂ ನನಗೆ ಉಂಟಾಗಲಿ ಎಂದು ಅಭ್ಯಾಸದಿಂದ ಪ್ರಾರ್ಥಿಸಲ್ಪಡುವುದು ಸುಖ. ಸುಮ್ನದಿಂದ ಕೂಡಿರುವುದು ಉಷಃಕಾಲ. ಮತ್ವರ್ಥದಲ್ಲಿ ಛಂದಸ್ಸಿನಲ್ಲಿ ವನಿಪ್ ಪ್ರತ್ಯಯ. 'ಅನ್ಯೇಷಾಮಪಿ—" ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ಸ್ತ್ರೀ ಲಿಂಗದಲ್ಲಿ 'ವನೋರಚ' ಸೂತ್ರದಿಂದ ಜೀಪ್ ನಕಾರಕ್ಕೆ ರೇಫಾದೇಶ. ಸುಮ್ನಾವರೀ ಎಂದು ವೇದದಲ್ಲಿ ಮಾತ್ರ ಈ ರೂಪವಾಗುತ್ತದೆ. ಉದಾಹರಣೆ—

**ಸುಮ್ನಾವರೀ ಸೂನೃತಾ ಈರಯನ್ತೀ (ಋ. ಸಂ. ೧-೮-೩-೨)**

**(೧೦) ಅಹನಾ॥ ಅಹಿ ಗತೌ (ಭ್ವಾ-ಪ) ಅಹ-ವ್ಯಾಪ್ತೌ (ಸ್ವಾ-ಪ) "ಯುಚ್ ಬಹುಲಮ್" (ಉ-೨-೭೪) ಇತಿ ಯುಚ್ಪ್ರತ್ಯಯಃ, ಬಹುಲವಚನಾತ್ ಪೂರ್ವತ್ರ ನಕಾರ ಲೋಪಃ॥**

ಗತ್ಯರ್ಥಕವಾದ ಅಹಿ ಧಾತು. ಅಥವಾ ವ್ಯಾಪ್ತ್ಯರ್ಥಕವಾದ ಅಹ ಧಾತು. ಇದಕ್ಕೆ ಯುಚ್ ಪ್ರತ್ಯಯ. 'ಯುವೋರನಾಕೌ ಸೂತ್ರದಿಂದ ಅದಕ್ಕೆ ಅನಾದೇಶ. ಅಹಿಗೆ ನುಮ್ ಬಂದಿದ್ದರೂ ಬಹುಲಗ್ರಹಣದಿಂದಲೇ ನಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ ಟಾಪ್. ಅಹನಾ. ಆಕಾಶದಲ್ಲಿ ಹೋಗುತ್ತದೆ ಅಥವಾ ಬೇಗ ಕ್ಷಯವನ್ನು ಹೊಂದುತ್ತದೆ. ತನ್ನ ಕಾಂತಿಯಿದ ಸರ್ವಲೋಕವನ್ನು ವ್ಯಾಪಿಸುತ್ತದೆ, ಅಥವಾ ಸೂರ್ಯರಶ್ಮಿಗಳಿಂದ ವ್ಯಾಪ್ತವಾಗುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಗೃಹಂ ಗೃಹಮಹನಾ ಯಾತ್ಯಚ್ಛಾ [ಋ. ಸಂ. ೨-೧-೪-೪]**

**[೧೧] ದ್ಯೋತನಾ॥ ಣ್ಯಂತಾತ್ ದ್ಯುತ ದೀಪ್ತೌ ಭ್ವಾ-ಆ. ಇತ್ಯಸ್ಮಾತ್ "ಣ್ಯಾಸಶ್ರನ್ಥೋ ಯುಚ್" ಪಾ.ಸೂ. ೩-೩-೧೦೭] ಇತಿ ಬಾಹುಲಕಾತ್ ಕರ್ತರಿ ಯುಚ್. ಣೇರನಿಟಿ" [ಪಾ. ೬-೪-೫೧] ಇತಿ ಣಿ ಲೋಪಃ॥**

ದ್ಯುತ ಧಾತುವಿಗೆ ಣಿಚ್ ಬಂದಾಗ ದ್ಯೋತಿ ಎಂದಾಗುತ್ತದೆ. ಣಿಜಂತದ ಮೇಲೆ 'ಣ್ಯಾಸಶ್ರಂಥ—' ಸೂತ್ರದಿಂದ ಕರ್ತ್ರರ್ಥದಲ್ಲಿ ಯುಚ್. ಅದಕ್ಕೆ ಅನಾದೇಶ. ಇದು ಪರದಲ್ಲಿರುವಾಗ ಅನಿಡಾದಿಯಾದ ಆರ್ಧಧಾತುಕವಾದುದರಿಂದ ಣಿಗೆ ಲೋಪ. ಸ್ತ್ರೀತ್ವದಲ್ಲಿ ಟಾಪ್. ದ್ಯೋತನಾ. ಪ್ರಕಾಶವಾದುದರಿಂದ ಎಲ್ಲಾ ವಸ್ತುಗಳನ್ನು ಪ್ರಕಾಶಪಡಿಸುತ್ತದೆ.

ಅಥವಾ ದೀಪ್ತ್ಯರ್ಥಕವಾದ ಕೇವಲ ದ್ಯುತ ಧಾತುವಿಗೆ "ಅನುದಾತ್ತೇತಶ್ಚ ಹಲಾದೇಃ" (ಪಾ. ಸೂ. ೩-೩-೧೪೯) ಸೂತ್ರದಿಂದ ಯುಚ್. ಅನಾದೇಶ, ಲಘೂಪಧ ಗುಣ. ಟಾಪ್. ಸ್ವತಃ ತಾನಾಗಿ ಪ್ರಕಾಶಿಸುವುದು ಎಂದರ್ಥ. ಉದಾ—

**ಶಿಷಾಸಂತೀ ದ್ಯೋತನಾ ಶಶ್ವದಾಗಾತ್ (ಋ. ಸಂ. ೨-೧-೪೪)**

**[೧೨] ಶ್ವೇತ್ಯಾ । ಶ್ವಿತಾ-ವರ್ಣೇ [ಭೂ-ಆ-] ಅಘ್ನ್ಯಾದಿತ್ವಾತ್ [ಉ-೪-೧೧೮] ಯಕ್ ದ್ರಷ್ಟವ್ಯಃ । ಶ್ವೇತತೇ ಶ್ವೇತ್ಯಾ ॥**

ವರ್ಣಾರ್ಥದಲ್ಲಿ ಶ್ವಿತ್‌ಧಾತುವಿಗೆ ಅಘ್ನ್ಯಾದಿಗಣದಲ್ಲಿ ಸೇರಿರುವುದರಿಂದ ಯಕ್‌ಪ್ರತ್ಯಯ. ಬಹುಲಗ್ರಹಣದಿಂದ ಧಾತುವಿನ ಲಘೂಪಧೆಗೆ ಗುಣ. ಶ್ವೇತ್+ಯ. ಸ್ತ್ರೀತ್ವದಲ್ಲಿ ಟಾಪ್. ಶ್ವಿತಾ—ವರ್ಣೇ ಎಂದು ವರ್ಣಸಾಮಾನ್ಯದಲ್ಲಿ ಹೇಳಿದ್ದರೂ ಇಲ್ಲಿ ಶುಕ್ಲವರ್ಣವನ್ನೇ ತೆಗೆದುಕೊಳ್ಳಬೇಕು. ಪ್ರಾತಃ ಕಾಲದಲ್ಲಿ ಅದು ವಿಶೇಷವಾದುದರಿಂದ ತೇಜಸ್ಸಿನಿಂದ ಬೆಳ್ಳಗಾದದ್ದು ಎಂದರ್ಥವಾಗುತ್ತದೆ. ಉದಾಹರಣೆ—

**ರುಶದ್ವತ್ಸಾ ರುಶತೀ ಶ್ವೇತ್ಯಾಗಾತ್** [ಋ. ಸಂ. ೧-೮-೧-೨] ॥

**[೧೩] ಅರುಷೀ॥ ಋ, ಸೃ ಗತೌ [ಜು-ಪ-] ಋ-ಗತಿಪ್ರಾಪಣಯೋಃ [ಭೂ-ಪ-] ಋಸಹಿಭ್ಯಾಮುಷನ್ [ಉ-೪-೭೪] ಪಿಪ್ಪಲ್ಯಾದೇರಾಕೃತಿಗಣತ್ವಾದೀಕಾರಃ ॥**

ಗತ್ಯರ್ಥಕವಾದ ಜುಹೋತ್ಯಾದಿಗಣಪಠಿತ ಋಧಾತು. ಅಥವಾ ಗತಿ, ಪ್ರಾಪಣಾರ್ಥಕವಾದ ಭ್ವಾದಿಪಠಿತ ಋ ಧಾತುವಿಗೆ ಉಷನ್ ಪ್ರತ್ಯಯ ಋ+ಉಷ ಎಂದಿರುವಾಗ "ಸಾರ್ವಧಾತು—" ಸೂತ್ರದಿಂದ ಧಾತುವಿಗೆ ಗುಣ. ರಪರವಾಗಿ ಬಂದರೆ ಅರುಷ ಎಂದಾಗುತ್ತದೆ. ಪಿಪ್ಪಲ್ಯಾದಿಗಣಪಠಿತವಾದುದರಿಂದ ಈಕಾರಾದೇಶ. ಸೂರ್ಯೋದಯವಾದೊಡನೆ ನಾಶವನ್ನು ಹೊಂದುತ್ತದೆ. ಅಥವಾ ತನ್ನನ್ನು ಸ್ತೋತ್ರಮಾಡುವವರಿಗೆ ಐಶ್ವರ್ಯವನ್ನು ಒದಗಿಸಿಕೊಡುತ್ತದೆ ಎಂದರ್ಥ.

ಅಥವಾ ಆಙ್‌ಪೂರ್ವಕವಾದ ರುಚ-ದೀಪ್ತೌ ಧಾತುವಿಗೆ ಬಹುಲಗ್ರಹಣದಿಂದ ಔಣಾದಿಕ ಡುಷಚ್ ಪ್ರತ್ಯಯ. ಆ+ರುಚ್+ಉಷ ಎಂದಿರುವಾಗ ಪ್ರತ್ಯಯ ಡಿತ್ತಾದುದರಿಂದ ಧಾತುವಿನ ಟಿಗೆ [ಉಚ್] ಲೋಪ. ಉಪಸರ್ಗಕ್ಕೆ ಹ್ರಸ್ವ. ಅರುಷೀ. ಸುತ್ತಲೂ ಪ್ರಕಾಶಿಸುವುದು. ಅರುಷನೆಂದರೆ ರೂಪನಾಮವೆಂದು ನಿಘಂಟುಕಾರರು ಹೇಳಿರುವುದರಿಂದ ಇಲ್ಲಿ ಸಾಮರ್ಥ್ಯದಿಂದ ಬಿಳಿಬಣ್ಣವೆಂದು ಅರ್ಥವಾಗುತ್ತದೆ. ಅದು ಉಳ್ಳದ್ದು ಅರುಷೀ ಆಗುತ್ತದೆ. "ಅನ್ಯತೋ ಙೀಷ್" ಸೂತ್ರದಿಂದ ಸ್ತ್ರೀತ್ವದಲ್ಲಿ ಙೀಷ್ ಬಂದಿದೆ. ಉದಾಹರಣೆ—

**ಅಶ್ವೇವ ಚಿತ್ರಾರುಷೀ** [ಋ. ಸಂ. ೩-೮-೩-೨]

**[೧೪] ಸೂನೃತಾ ॥ [೧೫] ಸೂನೃತಾವತೀ [೧೬] ಸೂನೃತಾವರೀ ॥ ಸುಷ್ಠು ಊನ್ಯತೇ ಅಪ್ರಿಯೈರಿತಿ ಸೂನ್ । ಸುಪೂರ್ವಾತ್ 'ಊನ-ಪರಿಹಾನೇ' [ದಿ-ಆ] ಇತ್ಯಸ್ಮಾತ್ ಕ್ವಿಪ್ । ಋತಮಿತಿ ಸತ್ಯನಾಮ [ನಿರು-೪-೧೯] ಸೂಂಶ್ಚ ತದೃತಂಚ ಸೂನೃತಮ್, ಪೃಷೋದರಾದಿತ್ವಾತ್ [ಪಾ. ಸೂ. ೬-೩-೧೦೯] ನಲೋಪಾಭಾವಃ॥**

ಮೂರು ಶಬ್ದಗಳಿಗೂ ಸೌಲಭ್ಯದಿಂದ ಒಟ್ಟಿಗೆ ನಿರ್ವಚನ ತೋರಿಸುತ್ತಾನೆ. ಅಪ್ರಿಯಾದಿಗಳಿಂದ ಚೆನ್ನಾಗಿ ಬಿಡಲ್ಪಟ್ಟಿರುವುದು ಸೂನ್. ಸು ಉಪಪದವಾಗಿರುವಾಗ ತ್ಯಾಗಾರ್ಥಕ ಊನ ಧಾತುವಿಗೆ ಕ್ವಿಪ್. ಸವರ್ಣದೀರ್ಘ. ಕ್ವಿಪಿನಲ್ಲಿ ಸರ್ವಲೋಪ. ಋತಂ ಎಂಬುದು ಸತ್ಯದ ನಾಮವೆಂದು ನಿರುಕ್ತದಲ್ಲಿ ಹೇಳಿದೆ. ಸೂನ್, ಋತಪದಗಳಿಗೆ ಕರ್ಮಧಾರಯ. ಅಪ್ರಿಯವಲ್ಲದೆ ಸತ್ಯರೂಪವಾಗಿರುವುದು. ಪೃಷೋದರಾದಿಗಣಪಠಿತವಾದುದರಿಂದ ನಕಾರಕ್ಕೆ ಪದಾಂತವಾದರೂ ಲೋಪ ಬರುವುದಿಲ್ಲ. ಪ್ರಿಯ ಸತ್ಯವುಳ್ಳದ್ದು ಎಂಬರ್ಥದಲ್ಲಿ ಅರ್ಶಆದಿಗಣದಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ. ಟಾಪ್. ಸೂನೃತಾ.

ಎರಡನೆಯ ಪದದಲ್ಲಿ ಸೂನೃತವುಳ್ಳದ್ದು ಎಂಬರ್ಥದಲ್ಲಿ ಮತುಪ್‌ಪ್ರತ್ಯಯ. "ಮಾದುಪ-" ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. 'ಅನ್ಯೇಷಾಮಪಿ ದೃಶ್ಯತೇ' ಸೂತ್ರದಿಂದ ಮತುಪ್ ಪರವಾದಾಗ ಪೂರ್ವಪದಕ್ಕೆ ದೀರ್ಘ. ಸೂನೃತಾವತ್. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ ಙೀಪ್. ಸೂನೃತಾವತೀ. ಮೂರನೆಯ ಶಬ್ದದಲ್ಲಿ 'ಛಂದಸೀ ವನಿಪೌ' ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಹಿಂದಿನಂತೆ ಪೂರ್ವಪದಕ್ಕೆ ದೀರ್ಘ. 'ವನೋರಚ' ಙೀಪ್. ನಕಾರಕ್ಕೆ ರೇಫಾದೇಶ. ಸೂನೃತಾವರೀ. ಅಥವಾ ಪ್ರಿಯಸತ್ಯರೂಪವಾದ ಮಾತಿಗೆ ಸೂನೃತಾ ಎಂದು ಹೆಸರು. ಅದು ಉಳ್ಳದ್ದು ಸೂನೃತಾದಿಗಳಾಗುತ್ತವೆ. ಪ್ರಾತಃ ಕಾಲದಲ್ಲಿ ಸ್ತೋತ್ರಮಂತ್ರಾದಿಗಳನ್ನು ಹೇಳುವುದರಿಂದ ಸೂನೃತವಾಕ್ಕುಳ್ಳದ್ದಾಗುತ್ತದೆ. ಮಾಧವರು ಸೂನೃತ ಪದಕ್ಕೆ ಅನ್ನವೆಂದರ್ಥ ಹೇಳುತ್ತಾರೆ. ಹವಿಸ್ಸು ಮುಂತಾದ ಅನ್ನ ಅಥವಾ ಧನವುಳ್ಳದ್ದು ಸೂನೃತಾದಿಗಳಾಗುತ್ತವೆ. ಕ್ರಮವಾಗಿ ಉದಾ—

**ಸುಪಸ್ನಾವರೀ ಸೂನೃತಾ ಈರಯಂತೀ (ಋ. ಸಂ. ೧-೮-೩-೨) "ಉದೀರಯ ಪ್ರತಿಮಾ ಸೂನೃತಾ ಉಷಃ" (ಋ. ಸಂ. ೧-೪-೩-೨) "ರೇವತ್‌ಸ್ತೋತ್ರೇ ಸೂನೃತೇ ಜಾರಯಂತೀ" (ಋ. ಸಂ. ೧-೬-೨೬-೪) ಚಿಕಿತ್ವತ್ ಸೂನೃತಾವರೀ (ಋ-ಸಂ-೩-೮-೩-೪)**

ಹೀಗೆ ಹದಿನಾರು ಪ್ರಾತಃಕಾಲದ ಹೆಸರು || ೮ ||

---

## ಅಥ ಉಷೋನಾಮಾನಿ

" ವಿಭಾವರೀ " ಎಂಬಿವೇ ಮೊದಲಾದವುಗಳು ಹದಿನಾರು ' ಉಷೋ ನಾಮಾನ್ಯುತ್ತರಾಣಿ ಷೋಳಶ ' ಎಂಬ ವಾಕ್ಯದಿಂದ ಹೇಳಿದೆ. ರಾತ್ರಿಯ ಕೊನೆಯ ಭಾಗವು ' ಉಷ ' ಎಂಬ ಹೆಸರಿನಿಂದ ಇರುವ ಕಾರಣ ರಾತ್ರಿಯ ಹೆಸರನ್ನು ಹೇಳಿದನಂತರ ಇವುಗಳನ್ನು ಹೇಳಿದೆ. ಅನೇಕ ವಿಧವಾದ ಭಯವನ್ನೂ, ಕಾಂತಿಗಳನ್ನೂ ಉಂಟುಮಾಡಲು ಅವಕಾಶವನ್ನು ಕೊಡುವ ಕಾಲವಾದುದರಿಂದ ಇದಕ್ಕೆ "ವಿಭಾವರೀ" ಎಂದು ಹೆಸರು. ಬೆಳಗಿನ ಝಾವದಲ್ಲಿ ಪ್ರಾಯಕವಾಗಿ ಪ್ರಾಣಿಗಳಿಗೆ ಬಹಳಷ್ಟಿನ ಸೌಖ್ಯವು ಕಂಡುಬರುವುದರಿಂದ 'ಸೂನರೀ' ಎಂದು ಹೆಸರು. ಹೀಗೆಯೇ ಈ ನಾಮಗಳ ಬೇರೆ ಪದಗಳಿಗೆ ಅನಯುವ ಅರ್ಥವನ್ನು ವಿವರಿಸುವುದು.

ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ||

ಕತ್ತಲೆಗಳನ್ನು ನಾಶಗೊಳಿಸುವುದು. ಆದಕಾರಣ ಈ ಕಾಲಕ್ಕೆ ಉಷಃಕಾಲವೆಂದು ಹೆಸರಾಗಿದೆ. ರಾತ್ರಿಯು ಪ್ರಾರಂಭವಾದಾಗಿನಿಂದ ತುಂಬಿಕೊಂಡಿದ್ದ ಕತ್ತಲೆಯೆಲ್ಲವೂ ಈ ಕಾಲದಲ್ಲಿ ಕದಲಿಯದಾಗುವುದು. ಉಚ್ಛತಿ=ನಾಶವಾಗುವುದು). ಉಚ್ಛ ಧಾತುವಿನಿಂದ ಈ ಶಬ್ದವು ಉಂಟಾಗಿದೆ.

**ಇತ್ಯಷ್ಟಾದಶಃ ಖಂಡಃ**

ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು

---

## ಅಥೈಕೋನವಿಂಶಃ ಖಂಡಃ

**ಹತ್ತೊಂಭತ್ತನೆಯ ಖಂಡವು**

---

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ। ಯಥಾ ಪ್ರಸೂತಾ ಸವಿತುಃ ಸವಾಷೆ ಏವಾರಾತ್ರ್ಯುಷಸೇ ಯೋನಿಮಾರೈಕ್॥ (ಋ. ಸಂ. ೧-೧೧೩-೧) ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮಚ್ಚಿತ್ರಂ ಪ್ರಕೇತನಂ ಪ್ರಜ್ಞಾ-ತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸ-ವಾಯ ರಾತ್ರಿರಾದಿತ್ಯಸ್ಯೈವಂ ರಾತ್ರ್ಯುಷಸೇ ಯೋನಿಮರಿಚತ್ಸ್ಥಾನಂ ಸ್ತ್ರೀಯೋನಿರಭಿಯುತ ಏನಾಂ ಗರ್ಭಸ್ತಸ್ಯಾ ಏಷಾಪರಾ ಭವತಿ ॥೧೯॥

---

ತಸ್ಯಾ ಏಷಾ ಭವತಿ —

"ಇದಂ ಶ್ರೇಷ್ಠಂ ಜ್ಯೋತಿಷಾಂ ಜೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ। ಯಥಾ ಪ್ರಸೂತಾ ಸವಿತುಃ ಸವಾಯ್ँ ಏವಾ ರಾತ್ರ್ಯುಷಸೇ ಯೋನಿಮಾರೈಕ್"॥ ಇದಂ ಶ್ರೇಷಂ ಜ್ಯೋತಿಷಾಂ ಜ್ಯೋತಿರಾಗಮತ್। ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿ ರಾದಿತ್ಯಸ್ಯ। ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಮ್। ಸ್ತ್ರೀ-ಯೋನಿರಭಿಯುತ ಏನಾಂ ಗರ್ಭಃ॥

ಈ ಉಷಃಕಾಲದ ವಿವರಣೆಯನ್ನು ಕೊಡುವ ಮಂತ್ರವು ಇಲ್ಲಿ ಹೇಳಿರುತ್ತದೆ. ಉಷಃಕಾಲದ ಲಕ್ಷಣವು ಸೂರ್ಯನೇ ಮೊದಲಾದ ಬೆಳಕನ್ನು ಕೊಡುವ ಗ್ರಹನಕ್ಷತ್ರ ಮೊದಲಾದವುಗಳಿಗೆ ಸೂಚಕವಾಗಿರುತ್ತದೆ. ಸೂರ್ಯನು ಯಾವಾಗಲೂ ತನ್ನ ಬೆಳಕನ್ನು ಲೋಕಕ್ಕೆ ಹರಡುವುದರ ಮೂಲಕ ಎಲ್ಲರಿಗೂ ಸಂಕಟವನ್ನುಂಟುಮಾಡುವನು. ಚಂದ್ರನು ಬಹಳ ತಣ್ಣಗಿರುವ ಪ್ರಕಾಶವನ್ನು ಕೊಡುವುದರಿಂದ ಜನಗಳಿಗೆ ಸಂಕಟ, ಸಂತೋಷ—ಇವೆರಡೂ ಉಂಟಾಗುತ್ತದೆ. ಈ ಉಷಃಕಾಲದಲ್ಲಿ ಒಂದೇ ಸಮನಾದ ಶೀತೋಷ್ಣಗಳು ಪ್ರಾಣಿಗಳಿಗೆ ಬಹಳ ಸುಖವನ್ನು ಉಂಟುಮಾಡುತ್ತದೆ. ಇದರಿಂದ ಈ ಕಾಲವನ್ನು ಹಗಲು ರಾತ್ರಿ

ಗಳೆರಡಕ್ಕಿಂತಲೂ ಶ್ರೇಷ್ಠವೆಂದು ಹೇಳಿದೆ. ಈ ಕಾಲವು ಯಜ್ಞವೇ ಮೊದಲಾದ ಕರ್ಮಗಳಿಗೂ, ದೇವತಾ ಸೇವೆಯೇ ಮೊದಲಾದ ಕೆಲಸಗಳಿಗೂ ಉತ್ತಮವಾಗಿರತಕ್ಕದ್ದು. ಆದುದರಿಂದಲೂ ಶ್ರೇಷ್ಠವಾಗಿದೆ. ಈ ಕಾಲದಲ್ಲಿ ಪ್ರಾಣಿಗಳಿಗೆ ಬುದ್ಧಿಯು ಬಹಳ ಪ್ರಕಾಶವಾಗಿರುವ ಕಾರಣ ಈ ಕಾಲವನ್ನು "ಪ್ರಜ್ಞಾತತಮಮ್" ಎಂದು ವಿವರಿಸಿದೆ. ಪ್ರಾಣಿಗಳೆಲ್ಲವೂ ಈ ಕಾಲದಲ್ಲಿ ಎಚ್ಚರಗೊಂಡವುಗಳಾಗಿ ಆಯಾಯ ದಿಕ್ಕುಗಳನ್ನು ಕುರಿತು ಹೊರಡುತ್ತವೆ. ಅಥವಾ ದಿಕ್ಕುಗಳಲ್ಲಿ ಸಂಚರಿಸುತ್ತವೆ. ಈ ಕಾಲವು ಇತರ ಬೆಳಕನ್ನು ಕೊಡುವ ಕಾಲಕ್ಕಿಂತ ದೊಡ್ಡದಾಗಿ ಹಗಲಿನ ಪ್ರಾರಂಭವನ್ನು ಮೊದಲುಗೊಂಡು ಇರುವ ಕಾರಣ "ವಿಭೂತತಮಮ್" ಎಂಬ ಹೆಸರನ್ನು ಹೊಂದಿದೆ. ರಾತ್ರಿಯೆಂಬುವುದು ಒಬ್ಬ ಹೆಂಗಸೆಂಬುದಾಗಿ ಇಲ್ಲಿ ಹೇಳಿ ಈ ಹೆಂಗಸು ಸೂರ್ಯನೆಂಬ ಮಗುವನ್ನು ಈ ಕಾಲದಲ್ಲಿ ಪ್ರಸವಿಸುವ ಕಾರಣ, ಆ ಪ್ರಸವವನ್ನು ಉಂಟುಮಾಡುವ 'ಉಷಾಂ' ಎಂಬ ದೇವತೆ ಎಂದೂ, ಇಲ್ಲಿ ವರ್ಣಿಸಿದೆ. ಹೀಗೆಯೇ ರಾತ್ರಿ ಎಂಬುವುದು ಉಷಃಕಾಲಕ್ಕೆ ಹಿಂದಿನಿಂದ ಇದ್ದುಕೊಂಡು ಇರುವ ಕಾರಣ ಜನ್ಯಜನಕ ಭಾವವು ಲೋಕವ್ಯವಹಾರವನ್ನು ಅನುಸರಿಸಿ ಪ್ರಾಣಿಗಳ ಜನ್ಮಕಾರಣವೆಂದು ರೂಪಕ ಅಲಂಕಾರದಿಂದ ವಿವೃತವಾಗಿವೆ. ರಾತ್ರಿಯಿಂದ ಉಷಃಕಾಲವು ಹುಟ್ಟಿದಂತೆ ಉಷಃಕಾಲದಿಂದ ಸೂರ್ಯನು ಹುಟ್ಟಿದನು ಎಂಬ ಅರ್ಥವು ಇದರಿಂದ ತಿಳಿದು ಬರುತ್ತದೆ. ರಾತ್ರಿಯು ಉಷಃಕಾಲವನ್ನು ಗರ್ಭದಲ್ಲಿ ಧರಿಸಿಕೊಂಡು ಆ ಕಾಲಕ್ಕೆ ಅನುಸಾರವಾಗಿ ಜನ್ಯ ಕಾರಣವಾಯಿತು ಎಂದು ಹೇಳಿ ರಾತ್ರಿಯ ಕೊನೆಯ ಭಾಗವನ್ನೇ ಉಷಃ ಶಬ್ದದಿಂದ ಹೇಳಿದೆ. ಪ್ರಾಣಿಗಳು ಭೂಮಿಯಲ್ಲಿ ಹುಟ್ಟಿ ಹೊರಕ್ಕೆ ಬರುವ ಹೆಂಗಸಿನ ಅಂಗವನ್ನು ಎಂಬ ಶಬ್ದದಿಂದ ಹೇಳಿರುವಂತೆ ರಾತ್ರಿಯನ್ನು ಉಷಃಕಾಲಕ್ಕೆ ಜನ್ಮದಾತೃವಾದ ಕಾರಣ ಈ ಹೋಲಿಕೆಯನ್ನು ವಿವರಿಸಿದೆ. ಗರ್ಭವು ಪ್ರಾಣಿಶರೀರವು ಬೆಳೆಯಲು ಅರ್ಹವಾದ ದ್ರವ್ಯಗಳು ಸೇರತಕ್ಕ ಸ್ಥಾನವನ್ನು ಯೋನಿಶಬ್ದದಿಂದ ವ್ಯವಹರಿಸುತ್ತಾರೆ. ಈ ಕಾಲದಲ್ಲಿ ಪ್ರಾಣಿಗಳೆಲ್ಲವೂ ಆಯಾಯ ಅವರವರ ಕೆಲಸಕ್ಕನುಗುಣವಾಗಿ ಒಂದು ಕಡೆ ಸೇರುವ ಕಾರಣ ಉಷಾಃ ಎಂಬ ಶಬ್ದವನ್ನೂ, ಯೋನಿ ಎಂಬ ಶಬ್ದವನ್ನೂ ವ್ಯವಹರಿಸಿದೆ. ಇದರಂತೆ ಬಟ್ಟೆಯನ್ನು ನೇಯುವಾಗ ದಾರಗಳನ್ನು ಒಂದು ಕಡೆ ಸೇರುವಂತೆ ಮಿಶ್ರಮಾಡುವ ಕಾರಣ ಮಿಶ್ರಣವೆಂಬ ಕ್ರಿಯಾಧಾರವು ಈ ಶಬ್ದದಿಂದ ವಿವೃತವಾಗಿದೆ. ಮಿಶ್ರೀಭಾವರೂಪವಾದ ಕರ್ಮವನ್ನು ಹೇಳುವಾಗ ಈ ಶಬ್ದವು ಪುಲ್ಲಿಂಗದಿಂದ ಇರುತ್ತದೆ. ಜನ್ಮಪ್ರಾಣಿಯ ಉತ್ಪತ್ತಿಗೆ ಕಾರಣ ಪ್ರದೇಶವೆಂದು ಹೇಳುವಾಗ ಸ್ತ್ರೀಲಿಂಗವಾಗಿರುತ್ತದೆ ಎಂದು ತಿಳಿಯಬೇಕು.

ಇದರಂತೆಯೇ ಉಷಃಕಾಲದ ಉಷ ಎಂಬ ಶಬ್ದದ ಅರ್ಥವನ್ನು ವಿವರಿಸುವ ಬೇರೆ ಮಂತ್ರವು ಉದಾಹರಣೆಯಾಗಿ ಇಲ್ಲಿ ಹೇಳಿದೆ.

**ಇತ್ಯೇಕೋನವಿಂಶಃ ಖಂಡಃ**

ಇಲ್ಲಿಗೆ ಹತ್ತೊಂಭತ್ತನೆಯ ಖಂಡವು ಸಮಾಪ್ತವು

---

## ಅಥ ವಿಂಶಃ ಖಂಡಃ

**ಇಪ್ಪತ್ತನೆಯ ಖಂಡವು**

---

ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ।
ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ

ಆಮಿನಾನೇ ॥ (ಋ. ಸಂ. ೧–೧೧೩–೨) ರುಶದ್ವತ್ಸಾ ಸೂರ್ಯವತ್ಸಾ ರುಶದಿತಿ ವರ್ಣನಾಮ ರೋಚತೇರ್ಜ್ವಲತಿಕರ್ಮಣಃ ಸೂರ್ಯಮಸ್ಯಾ ವತ್ಸಮಾಹ ಸಾಹಚರ್ಯಾದ್ರಸಹರಣಾದ್ವಾ ರುಶತೀ ಶ್ವೈತ್ಯಾಗಾತ್ । ಶ್ವೈತ್ಯಾ ಶ್ವೈತತೇರರಿಚತ್ಕೃಷ್ಣಾ ಸದನಾನ್ಯಸ್ಯಾಃ ಕೃಷ್ಣವರ್ಣಾ ರಾತ್ರಿಃ ಕೃಷ್ಣಂ ಕೃಷ್ಯತೇರ್ನಿಕೃಷ್ಟೋ ವರ್ಣೋಽಥೈನೇ ಸಂಸ್ತೌತಿ ಸಮಾನ-ಬಂಧೂ ಸಮಾನಬಂಧನೇ ಅಮೃತೇ ಅಮರಧರ್ಮಾಣಾವನೂಚೀ ಅನೂಚ್ಯಾವಿತೀತರೇತರಮಭಿಪ್ರೇತ್ಯ ದ್ಯಾವಾ ವರ್ಣಂ ಚರತಸ್ತೇ ಏವ ದ್ಯಾವೌ ದ್ಯೋತನಾದಪಿ ವಾ ದ್ಯಾವಾ ಚರತಸ್ತಯಾ ಸಹ ಚರತ ಇತಿ ಸ್ಯಾದಾಮಿನಾನೇ ಆಮಿನ್ವಾನೇ ಅನ್ಯೋನ್ಯಸ್ಯಾಧ್ಯಾತ್ಮಂ ಕುರ್ವಾಣೇ ಅಹರ್ನಾಮಾನ್ಯುತ್ತರಾಣಿ ದ್ವಾದಶಾಹಃ ಕಸ್ಮಾದುಪಾ-ಹರಂತ್ಯಸ್ಮಿನ್ಕರ್ಮಾಣಿ ತಸ್ಯೈಷ ನಿಪಾತೋ ಭವತಿ ವೈಶ್ವಾನರೀ-ಯಾಯಾಮೃಚಿ ॥೨೦॥

ತಸ್ಯಾ ಏಷಾಪರಾ ಭವತಿ —

"ರುಶದ್ವತ್ಸಾ ರುಶತೀ ಶ್ವೈತ್ಯಾಗಾದಾರೈಗು ಕೃಷ್ಣಾ ಸದನಾನ್ಯಸ್ಯಾಃ ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ ಆಮಿನಾನೇ । ರುಶದ್ವತ್ಸಾ ಸೂರ್ಯವತ್ಸಾ । ರುಶದಿತಿ ವರ್ಣನಾಮ । ರೋಚತೇಃ ಜ್ವಲತಿಕರ್ಮಣಃ । ಸೂರ್ಯ್ಯಮಸ್ಯಾ ವತ್ಸಮಾಹ ಸಾಹಸಚರ್ಯ್ಯಾದ್ರಸಹರಣಾದ್ವಾ । 'ರುಶತೀ ಶ್ವೈತ್ಯಾಗಾತ್' । ಶ್ವೈತ್ಯಾ ಶ್ವೈತತೇಃ । ಅರಿಚತ್ ಕೃಷ್ಣಾ ಸದನಾನ್ಯಸ್ಯಾಃ । ಕೃಷ್ಣಾವರ್ಣಾ ರಾತ್ರಿಃ । ಕೃಷ್ಣಂ ಕೃಷ್ಯತೇನಿ ಕೃಷ್ಟೋ ವರ್ಣಃ ॥ ಅಥೈನೇ ಸಂಸ್ತೌತಿ "ಸಮಾನಬಂಧೂ" ಸಮಾನಬಂಧನೇ । 'ಅಮೃತೇ' ಅಮರಧರ್ಮಾಣೌ 'ಅನೂಚೀ' ಅನೂಚ್ಯಾವಿತೀತರೇತರಮಭಿಪ್ರೇತ್ಯ 'ದ್ಯಾವಾ ವರ್ಣಂ ಚರತಃ ತೇ ಏವ ದ್ಯಾವೌ ದ್ಯೋತನಾತ್ । ಅಪಿ ವಾ ದ್ಯಾವಾ ಚರತ-ಸ್ತಯಾ ಸಹ ಚರತ ಇತಿ ಸ್ಯಾತ್ ॥ ಆಮಿನಾನೇ ಆಮಿನ್ವಾನೇ ಅನ್ಯೋ-ನ್ಯ ಸ್ಯಾಧ್ಯಾತ್ಮಂ ಕುರ್ವಾಣೇ ॥

ಹಿಂದಿನ ಮಂತ್ರದಲ್ಲಿ ಹೇಳಿದ ಅರ್ಥವನ್ನು ವಿವರಿಸುವುದಕ್ಕಾಗಿ ಈ ಮಂತ್ರವನ್ನು ಇಲ್ಲಿ ಹೇಳಿದೆ. ಈ ಮಂತ್ರವನ್ನು ಹೇಳಿರುವವನು ಸೂರ್ಯನೆಂಬ ಬಹಳ ಕಾಂತಿಯುಳ್ಳ ಮಗುವನ್ನು ಉಷಃ ಕಾಲವು ಪ್ರಸವಿಸಿರುತ್ತದೆ ಎಂದೂ, ಬಹಳ ಕಾಂತಿಯುಳ್ಳ ಮಗುವನ್ನು ಹೆತ್ತಿರುವ ತಾಯಿಯು ತನ್ನ ಮಗುವಿನೊಡನೆ ಇರುವಳೆಂಬ ಹೋಲಿಕೆಯನ್ನು ಸೂರ್ಯನೊಡನಿರುವ ಉಷಃ ಕಾಲಕ್ಕೆ ಹೋಲಿಸಿದೆ. ತಾಯಿಯು ಎದೆಯ ಹಾಲನ್ನು ಮಗುವು ಹೀರುವಂತೆ ರಾತ್ರಿಯಲ್ಲಿ ಬೀಳುತ್ತಿರುವ ಹಿಮವನ್ನು ತನ್ನ ಕಿರಣಗಳಿಂದ ಹೀರುವ ಸೂರ್ಯನನ್ನು ಮಗುವಿಗೆ ಹೋಲಿಸಿದೆ. ಲೋಕವ್ಯವಹಾರವನ್ನು ಅನುಸರಿಸಿ ವತ್ಸ=ಮಗು ಮತ್ತು ತಾಯಿ ಇವೆರಡು ಅರ್ಥವನ್ನು ಇಲ್ಲಿ ವಿವರಿಸಿದೆ.

ರುಶತೀ ಎಂಬ ಶಬ್ದವು ಬಹಳ ಕಾಂತಿಯನ್ನು ಹೊಂದಿರುವ ಸ್ವಭಾವದ್ದು ಎಂದು ವಿವರಿಸಿದೆ. ಉಷಃ ಕಾಲವು ಬಹಳ ಧವಳವರ್ಣವನ್ನು ಉಳ್ಳದ್ದಾಗಿ ಬಹಳ ಕಾಂತಿಯಿಂದ ಕೂಡಿ ಆಗ ಕ್ಷಣದಲ್ಲಿ ಮಗುವನ್ನು ಪ್ರಸವಿಸಿದ ಬಿಳಿ ರೇಷ್ಮೆ ಸೀರೆಯನ್ನು ಟ್ಟಿರುವ ತಾಯಿಗೆ ಹೋಲಿಸಿದೆ. ಹೀಗೆಯೇ ಉಷಃ ಕಾಲವು ಬಂತು ಎಂದು ವಿವರಿಸಿದೆ.

ಕರೀ ಬಣ್ಣದಿಂದ ಕೂಡಿರುವ ರಾತ್ರಿಯು ಮಗುವನ್ನು ಹೆತ್ತಿರುವ ಉಷಃ ಕಾಲದ ಹತ್ತಿರಕ್ಕೆ ಬಂದು ಇದನ್ನು ನೋಡಿಕೊಂಡು ಹೊರಟು ಹೋಗುತ್ತದೆ. ಎಂದರೆ ಬಂಧುಗಳು ಮಗುವನ್ನು ಪ್ರಸವಿಸಿದ ತಾಯಿಯ ಯೋಗಕ್ಷೇಮವನ್ನು ವಿಚಾರಿಸುವ ಕ್ರಮವು ಇಲ್ಲಿ ತೋರಿಸಿದೆ. ಇದರಿಂದ ರಾತ್ರಿ ಎಂಬುವುದು ಉಷಃಕಾಲದ ಹಿಂದಿನ ಭಾಗವಾಗಿದೆ.

ರಾತ್ರಿ ಮತ್ತು ಉಷಸ್ಸು—ಎಂಬಿವೆರಡು ಸೂರ್ಯನಿಗೆ ಉಂಟಾಗುವ ಉದಯಾಸ್ತ ಕಾಲಗಳಲ್ಲಿ ಬಹಳ ಹತ್ತಿರದಲ್ಲಿರುವ ನೆಂಟರೆಂದು ಹೋಲಿಸಿದೆ. ಸೂರ್ಯನಿಗೆ ಅಸ್ತಕಾಲವು ಬಂದದ್ದನ್ನು ನೋಡಿ ರಾತ್ರಿಯು ನೆಂಟರಂತೆ ಹತ್ತಿರಕ್ಕೆ ಬಂದು ಸೇರುವುದು. ಉಷಃಕಾಲವು ಸೂರ್ಯನ ಉದಯಕಾಲವನ್ನು ತಿಳಿದು ಬಂಧುವಿನಂತೆ ಸಮೀಪವನ್ನು ಹೊಂದುವುದು. ಇದರಿಂದ ಸೂರ್ಯನಿಗೆ ರಾತ್ರಿ ಮತ್ತು ಉಷಃಕಾಲ—ಎಂಬಿವೆರಡು ಸುಖದುಃಖವನ್ನು ವಿಚಾರಿಸುವ ಹತ್ತಿರದ ನೆಂಟರಾಗಿರುವುವು ಎಂಬ ಅರ್ಥವು ಉಕ್ತವಾಗಿದೆ.

ಈ ರಾತ್ರಿ ಮತ್ತು ಉಷಸ್ಸು ಎಂಬೆರಡು ಕಾಲಗಳು ಜನನ ಮರಣಗಳನ್ನು ಹೊಂದದೇ ಇರುವ ಕಾರಣ ದೇವತೆಗಳಾಗಿರುವುವು.

ಈ ಎರಡು ಕಾಲಗಳು ಒಂದಕ್ಕೊಂದು ಎಡಬಿಡದೇ ಹೊಂದಿಕೊಂಡಿರುವುದರಿಂದ ಮಿತ್ರರಂತಿರುವರು. ಉಷಃಕಾಲವು ತನ್ನ ಬೆಳಕಿನಿಂದ ಹೊಳೆಯುತ್ತಿರುತ್ತದೆ. ರಾತ್ರಿ ಕಾಲವು ತನ್ನ ಕತ್ತಲೆಯ ಪ್ರಭಾವದಿಂದಲೂ, ನಕ್ಷತ್ರಗಳ ಸಮೂಹದಿಂದಲೂ ತನ್ನ ಅಧಿಕಾರವನ್ನು ತೋರಿಸುತ್ತಿರುತ್ತದೆ. ರಾತ್ರಿಯ ಅಧಿಕಾರವೆಲ್ಲವೂ ಕಳೆದನಂತರ ಎಂದರೆ ಸಣ್ಣ, ಸಣ್ಣ ಸೇನೆಯಿಂದ ಕೂಡಿದ ಶತ್ರುವು ಹಿಂಸೆಮಾಡುವವನಾಗಿ ಕಳೆದು ಹೋದನಂತರ, ಬಹಳ ಕಾಂತಿಯಿಂದ ಕೂಡಿರುವ ಸೂರ್ಯನೂ ಉಷಃ ಕಾಲವೂ ಬರುವ ಕ್ರಮವನ್ನು, ಶತ್ರುವನ್ನು ಓಡಿಸಿ ಬರುವ ರಾಜನಿಗೆ ಹೋಲಿಸಿ ಹೇಳಿದೆ. ಹೀಗೆಯೇ ಅಂತರಿಕ್ಷಕ್ಕೂ ರಾತ್ರಿಗೂ ಸಹ ಪರಸ್ಪರವಾದ ಸಂಮರ್ದವನ್ನು ವಿವರಿಸಿ ಇವೆರಡೂ ಒಂದಕ್ಕೊಂದು ಸ್ಪರ್ಧೆಮಾಡುತ್ತವೆ ಎಂದು ಹೇಳಿದೆ.

ರಾತ್ರಿಯ ಪೋಷಣೆಯು ಉಂಟಾಗುವಂತೆ ಉಷಸ್ಸು ಅವಕಾಶವನ್ನು ಕೊಡುತ್ತದೆ. ಉಷಸ್ಸಿಗೆ ಅಭಿವೃದ್ಧಿಯು ಉಂಟಾಗುವಂತೆ ರಾತ್ರಿಯು ನಡೆದುಕೊಳ್ಳುತ್ತದೆ.

## ಅಥಾಹರ್ನಾಮಾನಿ

(೧) ವಸ್ತೋಃ (೨) ದ್ಯೌಃ (೩) ಭಾನುಃ (೪) ವಾಸರಮ್ (೫) ಸ್ವಸರಾಣಿ (೬) ಘ್ರಂಸಃ (೭) ಘರ್ಮಃ (೮) ಘೃಣಃ (೯) ದಿನಮ್ (೧೦) ದಿವಾ (೧೧) ದಿವೇ ದಿವೇ (೧೨) ದ್ಯವಿದ್ಯವಿ

ಇತಿ ದ್ವಾದಶಾಹರ್ನಾಮಾನಿ ॥೯॥

**(೧) ವಸ್ತೋಃ । ವಸ್ತೇ (ಅಪಾ-ಪ) ಆಚ್ಛಾದಯತೀತಿ ಜ್ಯೋತಿಃ । ವ್ಯತ್ಯಯೇನ ಕರ್ತರಿ ತೋಸುನ್ (ಪಾ. ಸೂ. ೩-೪-೧೩) ॥**

ಮುಚ್ಚುವುದು ಎಂಬರ್ಥವನ್ನು ಕೊಡುವ ವಸ ಧಾತುವಿಗೆ ವ್ಯತ್ಯಯದಿಂದ ತೋಸುನ್ ಪ್ರತ್ಯಯ. ವಸ್ತೋಸ್ ಶಬ್ದವಾಗುತ್ತದೆ. ಕೆಲವು ಮಂತ್ರಗಳಲ್ಲಿ 'ದೋಷಾವಸ್ತೋಃ' ಎಂದು ಸಮಸ್ತವಾಗಿಯೇ ದೃಷ್ಟವಾಗಿದೆ. ಪ್ರಕಾಶದಿಂದ ಜಗತ್ತನ್ನು ಮುಚ್ಚುವುದು ಜ್ಯೋತಿಸ್ಸು. ಇದರಿಂದ ಕೂಡಿರುವುದು ದಿವಸ. ಕುಹ, ಕ್ವ ಇತ್ಯಾದಿ ಸಪ್ತಮ್ಯಂತಪದಗಳ ಸಾಮಾನಾಧಿಕರಣ್ಯವಿರುವುದರಿಂದ ವಸ್ತೋಃ ಎಂಬ ಅವ್ಯವವೂ ಸಪ್ತಮ್ಯರ್ಥವನ್ನೇ ಹೇಳುತ್ತದೆ. "ಅವ್ಯಯಾದಾಪ್‌ಸುಪಃ" ಸೂತ್ರದಿಂದ ಇದರಮೇಲೆ ಬಂದ ವಿಭಕ್ತಿಗೆ ಲುಕ್ ಬರುತ್ತದೆ. ಉದಾಹರಣೆ—

**ಕುಹಸ್ವಿದ್ದೋಷಾ ಕುಹ ವಸ್ತೋರಶ್ವಿನಾ (ಋ. ಸಂ. ೭-೮-೧೮-೨)**

**(೨) ದ್ಯೌಃ ॥ ದ್ಯುತ-ದೀಪ್ತೌ (ಭೂ. ಆ) ಬಾಹುಲಕಾತ್ ಡೋ ಪ್ರತ್ಯಯಃ । ದ್ಯೋತತೇ ಕಿರಣ-ಸಂಬಂಧಾತ್ । ಯದ್ವಾ ದ್ಯು-ಅಭಿಗಮನೇ (ಅದಾ-ಪ) 'ದ್ಯುಗಮಿಭ್ಯಾಂ ಡೋಃ' ಇತಿ ಶ್ರೀ ಭೋಜದೇವಃ ॥**

ದೀಪ್ತ್ಯರ್ಥಕವಾದ ದ್ಯುತ ಧಾತುವಿಗೆ ಬಹುಲಗ್ರಹಣದಿಂದ ಡೋಸ್ ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಉತ್) ಲೋಪ. ದ್ಯೋ ಶಬ್ದವಾಗುತ್ತದೆ. ಪ್ರಥಮಾಸುವಿನಲ್ಲಿ ಣಿದ್ವದ್ಭಾವವಿರುವುದರಿಂದ ವೃದ್ಧಿ. ರುತ್ವವಿಸರ್ಗ. ದ್ಯೌಃ ಸೂರ್ಯಕಿರಣಸಂಬಂಧದಿಂದ ಪ್ರಕಾಶಿಸುವುದು ಎಂದರ್ಥ. ಭೋಜದೇವನ ಮತದಲ್ಲಿ ಅಭಿಗಮನಾರ್ಥಕವಾದ ದ್ಯು ಧಾತುವಿಗೆ ಡೋಸ್‌ಪ್ರತ್ಯಯ. ಟಿಲೋಪ (ಉ) ಇದರಲ್ಲಿ ಪ್ರಾಣಿಗಳು ತಮ್ಮ ತಮ್ಮ ಅಭಿಮತ ಪ್ರದೇಶವನ್ನು ಕುರಿತು ಹೋಗುತ್ತವೆ ಎಂದರ್ಥ. 'ಗೋತೋ ಣಿತ್' ಸೂತ್ರದಿಂದ ಣಿದ್ವದ್ಭಾವ ಬರುವುದರಿಂದ ವೃದ್ಧಿ ಬಂದು ಹಿಂದಿನಂತೆಯೇ ರೂಪ. ಉದಾಹರಣೆ. **'ಮಧ್ಯ ಆರೋಧನೇ ದಿವಃ' (ಋ. ಸಂ. ೧-೭-೨೨-೧)** ಕೆಲವರು ದ್ಯುಃ ಎಂದು ಉಕಾರಾಂತವಾಗಿ ಪಾಠಮಾಡುತ್ತಾರೆ. ಆಗ ದ್ಯುತಧಾತುವಿಗೆ 'ಡಿಚ್ಚ' ಎಂಬ ಅಧಿಕಾರದಲ್ಲಿ ಹೇಳಿದ "ದ್ಯುದ್ರುಭ್ಯಾಂಚ" ಸೂತ್ರದಿಂದ ಉ ಪ್ರತ್ಯಯ. ಅಥಾ ದ್ಯು- ಅಭಿವಗ ಮನೇ ಧಾತು. "ಅಶ್ರ್ವಾದಯಶ್ಚ"(ಉ-೫-೩೦) ಸೂತ್ರದಿಂದ ಡುನ್ ಪ್ರತ್ಯಯಾಂತ ನಿಪಾತಿತವಾಗಿದೆ. ಉ ಪ್ರತ್ಯಯ ಹೇಳಿದಾಗ ಅದಕ್ಕೆ ಡಿತ್ವ ಹೇಳಿರುವುದರಿಂದ ಧಾತುವಿನ ಟಿಗೆ ಲೋಪ. ದ್ಯು ಎಂದು ಉಕಾರಾಂತ ಪದವಾಗುತ್ತದೆ. ಈ ಎರಡು ನಿರ್ವಚನದಲ್ಲಿಯೂ ಅರ್ಥ ಹಿಂದೆ ಹೇಳಿದಂತೆಯೇ ತಿಳಿಯಬೇಕು. ಉದಾಹರಣೆ—

**ದ್ಯುಭಿರಕ್ತುಭಿಃ ಪರಿಪಾತಮಸ್ಮಾನ್ (ಋ-ಸಂ-೧-೭-೩೮-೫)—ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿ (ಋ. ಸಂ. ೨-೫-೧೭-೧) ॥**

**(೩) ಭಾನುಃ ॥ ಭಾ-ದೀಪ್ತೌ (ಅದಾ-ಪ-) "ಭಾದಾಭ್ಯಾಂ ನುಃ" (ಉ-೩-೩೧)**

ದೀಪ್ತ್ಯರ್ಥಕವಾದ ಭಾ ಧಾತುವಿಗೆ ಕರ್ತ್ರರ್ಥದಲ್ಲಿ ನು ಪ್ರತ್ಯಯ. ಸೂರ್ಯಸಂಬಂಧದಿಂದ ಪ್ರಕಾಶಿಸುವುದು ಎಂದರ್ಥ. ಮಾಧವನು ಕಿರಣಕ್ಕೆ ಭಾನುವೆಂದು ಹೇಳಿದ್ದರೂ ಹಗಲೂ ಭಾನುಶಬ್ದವಾಚ್ಯವಾಗುತ್ತದೆ. ಉದಾಹರಣೆ—

**ಉದ್ದೇವ್ಯಾ ಉಷಸೋ ಭಾನುರರ್ತ (ಋ. ಸಂ. ೩-೪-೧೫-೨)**

**(೪) ವಾಸರಮ್ ॥ ವಸ–ನಿವಾಸೇ (ಭೂ-ಪ-) ಣಿಜಂತಃ ಶುದ್ಧೋऽಪಿ ವಿಪೂರ್ವಸ್ಯಾರ್ಥೇ ವರ್ತತೇ। ಅರ್ತಿ ಕಮಿಭ್ರಮಿದಿವಿ ಚಮಿ ವಾಸಿಭ್ಯಶ್ಚಿತ್ (ಉ. ೩-೧೨೮) ಇತ್ಯರಚ್ ಪ್ರತ್ಯಯಃ ॥ ವಿವಾಸಯತಿ ಶೀತಾದಿಕಮ್ ॥**

ಕೇವಲ ವಸಧಾತುವಾದರೂ ವಿ ಉಪಸರ್ಗದಿಂದ ಕೂಡಿದ ಣಿಜಂತವಾದ ವಸಧಾತುವಿನ ಅರ್ಥವನ್ನು ಇಲ್ಲಿ ಅಂಗೀಕರಿಸಬೇಕು. ವಾಸಿ ಎಂಬ ಣಿಜಂತದ ಮೇಲೆ 'ಅರ್ತಿಕಮಿ—' ಸೂತ್ರವಿಹಿತವಾದ ಅರಚ್ ಪ್ರತ್ಯಯ. 'ಣೇರನಿಟಿ' ಸೂತ್ರದಿಂದ ಣಿಚಿಗೆ ಲೋಪ. ವಾಸರವೆಂದಾಗುತ್ತದೆ. ಶೀತಾದಿಗಳನ್ನು ಹೋಗಲಾಡಿಸುವುದು ಹಗಲು ಎಂದರ್ಥ. ಅಥವಾ ವಸಧಾತುವಿಗೆ ಸ್ವಾರ್ಥದಲ್ಲಿಯೇ ಣಿಚ್. "ಅತ ಉಪಧಾಯಾಃ" ಅಕಾರಕ್ಕೆ ವೃದ್ಧಿ. ವಾಸಿ ಎಂಬುದಕ್ಕೆ ಅಧಿಕರಣಾರ್ಥದಲ್ಲಿ ಅರಚ್ ಪ್ರತ್ಯಯ. ಣಿಲೋಪ. ಇದರಲ್ಲಿ ಸುಖದಿಂದ ವಾಸಿಸುತ್ತಾರೆ ಎಂದರ್ಥ. ಅಥವಾ ವಾಸೃ–ದೀಪ್ತೌ ಧಾತು. ಹಿಂದೆ ಹೇಳಿದ ಸೂತ್ರದಿಂದಲೇ ಅರಚ್ ಪ್ರತ್ಯಯ. ಪ್ರಕಾಶಿಸುವುದು ವಾಸರ=ಹಗಲು.

ಅಥವಾ ಗತ್ಯರ್ಥಕವಾದ ಸೃ ಧಾತುವಿಗೆ ವಿ ಉಪಸರ್ಗಪರದಲ್ಲಿರುವಾಗ 'ನಂದಿಗ್ರಹ ಪಚಾದಿಭ್ಯಃ—' ಸೂತ್ರದಿಂದ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ವಿಸರವೆಂಬುದು ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ವಿ ಎಂಬುದಕ್ಕೆ ವಾ ಆದೇಶಬರುತ್ತದೆ. ನಾನಾವಿಧ ಗಮನವುಳ್ಳದ್ದು ಎಂದರ್ಥ. "ವಾಸರಾಣಿ ವೇಸರಾಣಿ" (ನಿರು ೪-೭) ಎಂಬ ನಿರುಕ್ತಭಾಷ್ಯದಲ್ಲಿ ಸ್ಕಂದಸ್ವಾಮಿಯು ವೇಸರಶಬ್ದವೇ ಸಾದೃಶ್ಯದಿಂದ ವಾಸರಶಬ್ದವಾಗಿದೆಯೆಂದು ಹೇಳಿರುತ್ತಾನೆ. ವೇಸರವೆಂದರೆ ಹೇಸರಕತ್ತೆ. ಇಲ್ಲಿ ಎರಡು ವಿರುದ್ಧ ಧರ್ಮಗಳಿವೆ. ಅಶ್ವತ್ವಜಾತಿ, ಗರ್ದಭತ್ವ ಜಾತಿ ಎರಡೂ ಇದರಲ್ಲಿ ಸೇರಿವೆ. ಅದರಂತೆ ಹಗಲಿನಲ್ಲಿಯೂ ಎರಡು ವಿರುದ್ಧಧರ್ಮಗಳಿವೆ. ಪೂರ್ವಭಾಗದಲ್ಲಿ ಶೀತವೂ ಅಪರಾಹ್ಣದಲ್ಲಿ ಉಷ್ಣವೂ ಹೆಚ್ಚಾಗಿರುವುದರಿಂದ ಈ ವಿರುದ್ಧ ಧರ್ಮಸಂಬಂಧದಿಂದ ವೇಸರಸಾಮ್ಯ ಬರುತ್ತದೆ. ಏಕಾರಕ್ಕೆ ಆಕಾರಾದೇಶ. ಉದಾಹರಣೆ—

ಅಹಾನೀವ ಸೂರ್ಯೋ ವಾಸರಾಣಿ (ಋ-ಸಂ-೬-೪-೧೨-೨) ಇಲ್ಲಿ ಅಹಾನಿ ಎಂಬ ಪದದೊಡನೆ ಪೌನರುಕ್ತ್ಯ ಬರುವುದರಿಂದ ಕೇವಲ ವಾಸರ ಶಬ್ದಕ್ಕೆ ಶ್ರುತಿ ಹುಡಬೇಕು.

**(೫) ಸ್ವಸರಾಣಿ। ಸ್ವಶಬ್ದೇ ಉಪಪದೇ ಸರ್ತೇರ್ಗತ್ಯರ್ಥಾತ್ ಪಚಾದ್ಯಚ್ (ಪಾ-ಸೂ-೩-೧-೧೩೪) ಸ್ವೇನ ಆತ್ಮನೈವ ಗಚ್ಛಂತಿ ॥**

ಸ್ವ ಎಂಬ ಶಬ್ದವು ಉಪಪದವಾಗಿರುವ ಗತ್ಯರ್ಥಕವಾದ ಸೃಧಾತುವಿಗೆ ಪ್ರಚಾದಿಗಣದಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಸ್ವಸರ. ಬಹುವಚನದಲ್ಲಿ ಸ್ವಸರಾಣಿ ಎಂದಾಗುತ್ತದೆ. (ಹಗಲಿನಲ್ಲಿ) ಇಲ್ಲಿ ತಾವಾಗಿ ಹೋಗುತ್ತಾರೆ ಎಂದರ್ಥ. ಅಥವಾ ನಿರುಕ್ತಕಾರರು ಹೇಳಿರುವಂತೆ (ನಿರು. ೨-೧೪) ಸ್ವರ್ ಎಂದರೆ ಸೂರ್ಯ. ಇದು ಉಪಪದವಾಗಿರುವಾಗ ಣಿಜಂತಾರ್ಥಕೊಡುವ ಗತ್ಯರ್ಥಕ ಸೃಧಾತುವಿಗೆ 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' ಸೂತ್ರದಿಂದ ಘ ಪ್ರತ್ಯಯ. ಗುಣಾದಿಗಳು ಬರುತ್ತವೆ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಸ್ವರ್ ಪದದ ರೇಫಕ್ಕೆ ಲೋಪ ಬರುತ್ತದೆ. ಸೂರ್ಯನಿಂದ ಸಮಾಪ್ತಿಗೊಳಿಸಲ್ಪಡುತ್ತವೆ ಎಂದರ್ಥ. ಸೂರ್ಯನು ತನ್ನ ಉದಯಾಸ್ತಗಳಿಂದ

ಹಗಲನ್ನು ಹೋಗುವಂತೆ ಮಾಡುತ್ತಾನೆ. ಅಥವಾ ಸುಉಪಸರ್ಗ ಪೂರ್ವಕವಾದ ಕ್ಷೇಪಣಾರ್ಥಕ ಅಸು ಧಾತುವಿಗೆ ಕೃದರಾದಿ ಗಣದಲ್ಲಿ ಸೇರಿರುವುದರಿಂದ ಅರಚ್ ಪ್ರತ್ಯಯ. ಸು+ಅಸ್+ಅರ. ಸ್ವಸರಂ ಎಂದಾಗುತ್ತದೆ. ಉಪಸೃಷ್ಟಧಾತುವಿನಿಂದ ಈ ಪದವಾಗಿದೆಯೆಂದು ಮಾಧವರು ವ್ಯಾಖ್ಯಾನ ಮಾಡಿರುವುದರಿಂದ ಈ ನಿರ್ವಚನ ಅವರಿಗೆ ಸಂಮತವಾಗಿದೆ. ಸೂರ್ಯನಿಂದ ತನ್ನ ಉದಯಾಸ್ತಮಯಗಳಿಂದ ಚನ್ನಾಗಿ ತಳ್ಳಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**ಉಸ್ರಾ ಇವ ಸ್ವಸರಾಣಿ (ಋ. ಸಂ. ೧-೧-೬-೨)**

**(೬) ಘ್ರಂಸಃ ॥ ಗ್ರಹ-ಉಪಾದಾನೇ (ಕ್ರ್ಯಾ-ಉ-) ಅಸ್ಮಾತ್ ಘಞ್ ಪೃಷೋದರಾದಿತ್ವಾತ್ (ಪಾ. ಸೂ. ೬-೩-೧೦೯) ಗಕಾರಸ್ಯ ಘಕಾರೋ ನುಮಾಗಮಃ ಹಕಾರಸ್ಯ ಸಕಾರಃ । ಗೃಹ್ಯಂತೇಽಸ್ಮಿನ್ ರಸಾ ಅವಶ್ಯಾಯಾ ಅದಿತ್ಯೇನ ॥**

ಗ್ರಹಣಾರ್ಥಕವಾದ ಗ್ರಹ್‌ಧಾತುವಿಗೆ ಅಧಿಕರಣಾರ್ಥದಲ್ಲಿ ಘಞ್ ಪ್ರತ್ಯಯ. ಗ್ರಹ್+ಅ ಎಂದಿರುವಾಗ ಪೃಷೋದರಾದಿಯಲ್ಲಿ ಸೇರಿರುವುದರಿಂದ ಧಾತುವಿನ ಗಕಾರಕ್ಕೆ ಘಕಾರವೂ ಸಕಾರಕ್ಕೆ ಹಕಾರಾದೇಶ ಬರುವುದಲ್ಲದೆ ನುಮಾಗಮವೂ ಬರುತ್ತದೆ. ಞಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಘ್ರಂಸಃ ಎಂದಾಗುತ್ತದೆ. ಇದರಲ್ಲಿ ಸೂರ್ಯನಿಂದ ರಸಾದಿಗಳು ಎಳೆಯಲ್ಪಡುತ್ತವೆ ಎಂದರ್ಥವಾಗುತ್ತದೆ. ಉದಾಹರಣೆ—

**ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ (ಋ. ಸಂ. ೪-೨-೩-೩)**

**(೭) ಘರ್ಮಃ ॥ ಘೃ-ಕ್ಷರಣದೀಪ್ತ್ಯೋಃ (ಜು. ಪ.) ‘ ಘರ್ಮಃ ’ (ಉ. ೧-೧೪೬) ಇತಿ ಮಪ್ರತ್ಯಯಾಂತೋ ನಿಪಾತಃ । ಜಿಘರ್ತಿ ದೀಪ್ಯತೇ ರಶ್ಮಿಸಂಬಂಧಾತ್ ॥**

ದೀಪ್ತ್ಯರ್ಥಕವಾದ ಘೃಧಾತುವಿಗೆ ಮಪ್ರತ್ಯಯದಿಂದ ಘರ್ಮ ಎಂದು ನಿಪಾತಿತವಾದುದು. ಸೂರ್ಯರಶ್ಮಿಯಿಂದ ಪ್ರಕಾಶಿಸುವುದು ಘರ್ಮ=ಹಗಲು. ಇದಕ್ಕೆ ನಿಗಮ ಹುಡುಕಬೇಕು.

**(೮) ಘೃಣಃ ॥ ಜಿಘರ್ತೇಃ ‘ ಇಣ್‌ಸಿಞ್‌ಜಿದೀಙ್‌ಷ್ಯವಿಭ್ಯೋನಕ್ ’ (ಉ. ೩-೨) ಇತೀಣಾದಿಭ್ಯೋ ವಿಧೀಯಮಾನೋ ನಕ್‌ಪ್ರತ್ಯಯೋ ಬಾಹುಲಕಾದ್ ಭವತಿ । ಪೂರ್ವವದರ್ಥಃ ॥**

ದೀಪ್ತ್ಯರ್ಥಕವಾದ ಘೃಧಾತುವಿಗೆ ಬಹುಲಗ್ರಹಣದಿಂದ ಇಣಾದಿಗಳಿಗೆ ವಿಹಿತವಾದ ನಕ್‌ಪ್ರತ್ಯಯವು ಬರುತ್ತದೆ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. “ ಋವರ್ಣಾನ್ನಸ್ಯಣತ್ವಂವಾಚ್ಯಂ ” ವಾರ್ತಿಕದಿಂದ ಪ್ರತ್ಯಯನಕಾರಕ್ಕೆ ಣತ್ವ. ಸೂರ್ಯಕಿರಣದಿಂದ ಪ್ರಕಾಶಿಸುವುದು ಎಂದರ್ಥ. ಉದಾಹರಣೆ—

**ಘೃಣಾ ವಯೋರುಷಾಸಃ ಪರಿತ್ಮನ್ (ಋ. ಸಂ. ೩-೭-೧೯-೬)**

**(೯) ದಿನಮ್ ॥ ದೋ- ಅವಖಂಡನೇ (ದಿ. ಪ) ಪೂರ್ವವದೌಣಾದಿಕೇ ನಕ್ ಪ್ರತ್ಯಯೇ ಬಾಹುಲಕಾತ್ ‘ ದ್ಯತಿಸ್ಯತಿಮಾಸ್ಥಾ— ’ (ಪಾ. ಸೂ. ೭-೪-೪೦) ಇತೀತ್ವಮ್ । ದ್ಯತಿತಮಃ ದಿನಮ್ ॥**

ತುಂಡುಮಾಡುವುದು ಎಂಬರ್ಥವನ್ನು ಕೊಡುವ ದೋ ಧಾತುವಿಗೆ ಬಹುಲಗ್ರಹಣದಿಂದ ಹಿಂದಿನಂತೆ ನಕ್‌ಪ್ರತ್ಯಯ. ಇದು ಕಿತ್ತಾದುದರಿಂದ ‘ ದ್ಯತಿಸ್ಯತಿ— ’ ಸೂತ್ರದಿಂದ ಧಾತುವಿನ ಆಕಾರಕ್ಕೆ ಇತ್ತ್ವ ಬರುತ್ತದೆ. ದಿನ ಎಂದಾಗುತ್ತದೆ. ಕತ್ತಲೆಯನ್ನು ಖಂಡಿಸುವುದು. ನಾಶ ಮಾಡುವುದು ಎಂದರ್ಥ. ಉದಾಹರಣೆ—

**ಅಥಾ ಸರಿಭ್ಯಃ ಸುದಿನಾ ವ್ಯುಚ್ಛಾನ್ (ಋ-ಸಂ-೫-೨-೨೮-೧)**

**(೧೧) ದಿವೇ ದಿವೇ॥ ದಿವು-ಕ್ರೀಡಾವಿಜಿಗೀಷಾವ್ಯವಹಾರದ್ಯುತಿಸ್ತುತಿ ಮೋದಮದಸ್ವಪ್ನಕಾಂತಿಗತಿಷು (ದಿ-ಪ) 'ದಿವೇರ್ಡಿವಿಃ' ಇತ್ಯಧಿಕರಣೇ ಡಿವಿ ಪ್ರತ್ಯಯಃ ॥**

ಕ್ರೀಡಾದಿ ಹತ್ತು ಅರ್ಥವನ್ನು ಕೊಡುವ ದಿವ್‌ಧಾತುವಿಗೆ ಅಧಿಕರಣಾರ್ಥದಲ್ಲಿ ಡಿವಿ ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಇವ್) ಲೋಪ. ದಿವ್ ಶಬ್ದವಾಗುತ್ತದೆ. ಇದರಲ್ಲಿ ಪ್ರಾಣಿ ಸಮೂಹವು ಆನಂದಾದಿಗಳನ್ನು ಹೊಂದುತ್ತದೆ. "ಸುಪಾಂ ಸುಲುಕ್—" (ಪಾ. ಸೂ. ೭-೧-೩೯) ಸೂತ್ರದಿಂದ ಸಪ್ತಮೀ ಏಕವಚನ ಬಂದಾಗ ಅದಕ್ಕೆ ಶೇ ಆದೇಶ. ಶಿತ್ತಾಗಿ ಏ ಉಳಿಯುತ್ತದೆ. ವ್ಯತ್ಯಯದಿಂದ ಪ್ರಗೃಹ್ಯಸಂಜ್ಞಾ ಬರುವುದಿಲ್ಲ. ಅಥವಾ 'ವ್ಯತ್ಯಯೋ ಬಹುಲಮ್' ಸೂತ್ರದಿಂದ ಸಪ್ತಮೀ ಏಕವಚನಕ್ಕೆ ಚತುರ್ಥೀ ಏಕವಚನ ಬಂದಿದೆ. ವೀಪ್ಸಾರ್ಥ ತೋರುವಾಗ 'ಸರ್ವಸ್ಯ ದ್ವೇ' (ಪಾ ಸೂ.೮-೧-೪) ಸೂತ್ರದಿಂದ ದ್ವಿತ್ವ. ಪ್ರತಿದಿವಸದಲ್ಲಿಯೂ ಎಂದರ್ಥ. ಮಂತ್ರದಲ್ಲಿ ಹೀಗೆಯೇ ದೃಷ್ಟವಾದುದರಿಂದ ಈ ನಾಮ ಹೇಳಿದೆ. ಉದಾಹರಣೆ—

**ಉಪತ್ವಾಗ್ನೇ ದಿವೇದಿವೇ (ಋ.ಸಂ.೧.೧.೨.೨) ದಿವೇದಿವೇ ವಾಮಮಸ್ಮಭ್ಯಂ ಸಾವೀಃ (ಋ-ಸಂ-೫.೧.೧೫.೬)**

**(೧೨) ದ್ಯವಿ ದ್ಯವಿ ॥ ದ್ಯೋ ಶಬ್ದೋ ವ್ಯಾಖ್ಯಾತಃ ॥೨॥ ಸಪ್ತಮ್ಯೇಕವಚನಂ ವೀಪ್ಸಾದಿ ಪೂರ್ವತ್॥**

ಎರಡನೆಯ ನಾಮ ದ್ಯೋ ಶಬ್ದವೇ ಇದು. ಈ ರೀತಿಯಾಗಿಯೂ ಮಂತ್ರದಲ್ಲಿ ದೃಷ್ಟವಾದುದರಿಂದ ಹಗಲಿನ ನಾಮವಾಗಿ ಹೇಳಿದೆ. ದ್ಯೋ ಶಬ್ದದಂತೆಯೇ ವ್ಯುತ್ಪತ್ತಿ ತಿಳಿಯಬೇಕು. ವೀಪ್ಸಾರ್ಥದಲ್ಲಿ ದ್ವಿತ್ವ ಬಂದಿದೆ. ಸಪ್ತಮ್ಯಂತವಾದುದರಿಂದ ಪ್ರತಿ ಹಗಲಿನಲ್ಲಿಯೂ ಎಂದರ್ಥವಾಗುತ್ತದೆ. ಉದಾಹರಣೆ—

**ಮಿನೀಮಸಿ ದ್ಯವಿ ದ್ಯವಿ (ಋ-ಸಂ-೧-೨-೧೬-೧)**

ಹೀಗೆ ಹನ್ನೆರಡು ಹಗಲಿನ ಹೆಸರು

---

## ಅಥಾಹರ್ನಾಮಾನಿ

ಈ ಹನ್ನೆರಡೂ ಅಹರ್ನಾಮಗಳು ಎಂದರೆ ಹಗಲಿನ ಹೆಸರುಗಳು

ಅಹಃ ಕಸ್ಮಾದುಪಾಹರಂತ್ಯಸ್ಮಿನ್ ಕರ್ಮಾಣಿ ॥

ಹಗಲಿಗೆ **ಅಹಃ** ಎಂಬ ಹೆಸರು ಏತಕ್ಕೆ ಬಂದಿತು ಎಂದರೆ, ಹಗಲಿನಲ್ಲಿ (ಚೆನ್ನಾಗಿ ಬೆಳಕಿರುವುದರಿಂದ) ಜನರು ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ಮಾಡಲು ಶಕ್ತರಾಗಿರುತ್ತಾರೆ. ಎಂದರೆ ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆಗಿನ ಕಾಲಕ್ಕೆ ಅಹಃ (ದಿನ ಅಥವಾ ಹಗಲು) ಎಂದು ಹೆಸರು.

ತಸ್ಯೈಷ ನಿಪಾತೋ ಭವತಿ ವೈಶ್ವಾನರೀಯಾವೃಚಿ॥

ಅಹಃ ಶಬ್ದದ ಪ್ರಯೋಗವು ವೈಶ್ವಾನರ (ಅಗ್ನಿ) ದೇವತಾಕವಾದ ಈ ಕೆಳಗಿನ ಋಕ್ಕಿನಲ್ಲಿ ಇರುವುದರಿಂದ ಅದನ್ನು ಇಲ್ಲಿ ವಿವರಿಸಲಾಗಿದೆ.

**ಇತಿ ದ್ವಿತೀಯಾಧ್ಯಾಯೇ ವಿಂಶಃ ಖಂಡಃ**

**ಇಲ್ಲಿಗೆ ಎರಡನೆಯ ಅಧ್ಯಾಯದಲ್ಲಿ ಇಪ್ಪತ್ತನೆಯ ಖಂಡವು ಸಮಾಪ್ತವು**

---

## ಅಥೈಕೋನವಿಂಶಃ ಖಂಡಃ

### ಇಪ್ಪತ್ತೊಂದನೆಯ ಖಂಡವು

---

ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ। ವೈಶ್ವಾನರೋ ಜಾಯಮಾನೋ ನ ರಾಜಾವಾತಿರಜ್ಜ್ಯೋತಿಷಾಗ್ನಿಸ್ತಮಾಂಸಿ॥ (ಋ.ಸಂ. ೬-೯-೧) ಅಹಶ್ಚ ಕೃಷ್ಣಂ ರಾತ್ರಿಃ ಶುಕ್ಲಂ ಚಾಹರರ್ಜುನಂ ವಿವರ್ತೇತೇ ರಜಸೀ ವೇದ್ಯಾಭಿರ್ವೇದಿತವ್ಯಾಭಿಃ ಪ್ರವೃತ್ತಿಭಿರ್ವೈಶ್ವಾನರೋ ಜಾಯಮಾನ ಇವೋದ್ಯನ್ನಾದಿತ್ಯಃ ಸರ್ವೇಷಾಂ ಜ್ಯೋತಿಷಾಂ ರಾಜಾವಾಹನ್ನಗ್ನಿರ್ಜ್ಯೋತಿಷಾ ತಮಾಂಸಿ ಮೇಘನಾಮಾನ್ಯುತ್ತರಾಣಿ ತ್ರಿಂಶನ್ಮೇಘಃ ಕಸ್ಮಾನ್ಮೇಹತೀತಿ ಸತ ಆ ಉಪರ ಉಪಲ ಇತ್ಯೇತಾಭ್ಯಾಂ ಸಾಧಾರಣಾನಿ ಪರ್ವತನಾಮಭಿರುಪರ ಉಪಲೋ ಮೇಘೋ ಭವತ್ಯುಪರಮಂತೇಽಸ್ಮಿನ್ನಭ್ರಾಣ್ಯುಪರತಾ ಆಪ ಇತಿ ವಾ ತೇಷಾಮೇಷಾ ಭವತಿ ॥ ೨೧ ॥

**ಅಹಶ್ಚ ಕೃಷ್ಣಂ** ಎಂಬ ಋಕ್ಕಿನ ಅರ್ಥವು—

ಅಂಧಕಾರಯುಕ್ತವಾದ ರಾತ್ರಿಕಾಲವೂ, ಸ್ವತೇಜಸ್ಸಿನಿಂದ ಕೂಡಿದ ಹಗಲೂ ಸಹ ವೈಶ್ವಾನರನ ಆಜ್ಞಾಧೀನವಾಗಿ ಜಗತ್ತನ್ನು ಪ್ರಕಾಶಗೊಳಿಸುತ್ತಾ ಎಲ್ಲರಿಗೂ ಗೋಚರಿಸತಕ್ಕ ತಮ್ಮ ಭ್ರಮಣಗಳಿಂದ ಪರ್ಯಾಯರೂಪದಲ್ಲಿ ಸಂಚರಿಸುತ್ತವೆ. ವೈಶ್ವಾನರ ರೂಪಿಯಾದ ಅಗ್ನಿಯು ಉತ್ಪನ್ನನಾದೊಡನೆಯೇ ಪ್ರಭುವಿನಂತೆ (ರಾಜನಂತೆ) ಪ್ರಕಾಶಿಸುತ್ತಾ ತನ್ನ ತೇಜಸ್ಸಿನಿಂದ ಕತ್ತಲೆಯನ್ನು ಪೂರ್ಣವಾಗಿ ನಾಶಮಾಡಿದ್ದಾನೆ.

ಹಗಲು ಪ್ರಕಾಶ (ಬೆಳ್ಳಗೆ) ಯುಕ್ತವಾಗಿರುವುದು, ರಾತ್ರಿಯು ಕತ್ತಲೆಯಿಂದ ಕೂಡಿರುವುದು ಎಂದರೆ ಕಪ್ಪಗಿರುವುದು. ಈ ಪರಸ್ಪರ ವಿರೋಧ ಗುಣವುಳ್ಳ ಹಗಲುರಾತ್ರಿಗಳೂ ಒಂದಾಗುತ್ತಲೊಂದು ಎಡಬಿಡದೆ ನಡೆದು ಬರುತ್ತಿರುವುದು. ಈ

ಪರಿವರ್ತನೆಗೆ ಕೊನೆಯಿಲ್ಲ. ಇದನ್ನು ಎಲ್ಲರೂ ತಿಳಿಯಬೇಕು. (ರಾತ್ರಿ ಕಾಲದಲ್ಲಿ) ಉತ್ಪನ್ನನಾದ ವೈಶ್ವಾನರ ನಾಯಕನಾದ ಅಗ್ನಿಯು ಸೂರ್ಯನಂತೆ ಸಮಸ್ತ ತೇಜಸ್ಸುಗಳಿಗೂ ಅಧಿಪತಿಯಾಗಿರುವನು. ಸೂರ್ಯನು ಉದಯಿಸಿ ಯಾವ ರೀತಿ ಸಮಸ್ತ ತೇಜಸ್ಸುಗಳಿಗೂ ರಾಜನಾಗಿರುವನೋ ಅದರಂತೆ ವೈಶ್ವಾನರಾಗ್ನಿಯೂ ಸಹ ತಾನು ಉತ್ಪನ್ನನಾದ ಕೂಡಲೆ ರಾತ್ರಿಕಾಲದಲ್ಲಿ ಕತ್ತಲೆಯನ್ನು ಪರಿಹರಿಸಿ ಎಲ್ಲರಿಗೂ ಬೇಕಾದ ಬೆಳಕನ್ನು ಉಂಟುಮಾಡುವನು.

## ಅಥ ಮೇಘನಾಮಾನಿ

(೧) ಅದ್ರಿಃ । (೨) ಗ್ರಾವಾ । (೩) ಗೋತ್ರಃ । (೪) ವಲಃ । (೫) ಅಶ್ನಃ
(೬) ಪುರುಭೋಜಾಃ (೭) ವಲಿಶಾನಃ (೮) ಅಶ್ಮಾ (೯) ಪರ್ವತಃ (೧೦) ಗಿರಿಃ
(೧೧) ವ್ರಜಃ (೧೨) ಚರುಃ (೧೩) ವರಾಹಃ (೧೪) ಶಂಬರಃ (೧೫) ರೌಹಿಣಃ
(೧೬) ರೈವತಃ (೧೭) ಫಲಿಗಃ (೧೮) ಉಪರಃ (೧೯) ಉಪಲಃ (೨೦) ಚಮಸಃ
(೨೧) ಅಹಿಃ (೨೨) ಅಭ್ರಮ್ (೨೩) ವಲಾಹಕಃ (೨೪) ಮೇಘಃ (೨೫) ದೃತಿಃ
(೨೬) ಓದನಃ (೨೭) ವೃಷನ್ಧಿಃ (೨೮) ವೃತ್ರಃ (೨೯) ಅಸುರಃ (೩೦) ಕೋಶಃ

ಇತಿ ತ್ರಿಂಶನ್ಮೇಘನಾಮಾನಿ ॥

ಉಪರ, ಉಪಲಶಬ್ದದವರೆಗೆ ಪರ್ವತ ಮತ್ತು ಮೋಡಕ್ಕೆ ಸಾಧಾರಣನಾಮವಾದುದರಿಂದ ಮೇಘನಾಮ, ಪರ್ವತ ನಾಮವನ್ನು ಕ್ರಮವಾಗಿ ನಿರ್ವಚನಮಾಡಿ ತೋರಿಸಿದೆ.

**(೧) ಅದ್ರಿಃ । ಅದ-ಭಕ್ಷಣೇ (ಅದಾ. ಪ) ‹ ಅದಿಶದಿಭೂಶಭಿಭ್ಯಃ ಕ್ರಿನ್ ’ (ಉ. ೪-ಪಾ) ಇತಿ ಕ್ರಿನ್ ಪ್ರತ್ಯಯಃ । ನಞ್ಪೂರ್ವಾತ್ ದೃ-ವಿದಾರಣೇ (ಕ್ರ್ಯಾ-ಪ) ಇತ್ಯಸ್ಮಾತ್ ಬಾಹುಲಕಾತ್ ರಿನ್‌ಪ್ರತ್ಯಯಃ ಟಿಲೋಪಶ್ಚ ॥**

ಭಕ್ಷಣಾರ್ಥಕವಾದ ಅದ ಧಾತುವಿಗೆ ಕ್ರಿನ್‌ಪ್ರತ್ಯಯ. ಕಕಾರನಕಾರಗಳು ಇತ್ತಾಗಿ ರಿ ಉಳಿಯುತ್ತವೆ. ಅದ್ + ರಿ ಮೋಡವು ಸೂರ್ಯರಶ್ಮಿಯಿಂದ ಸೆಳೆಯಲ್ಪಟ್ಟ ಭೂಸಂಬಂಧವಾದ ರಸವನ್ನು ಭಕ್ಷಿಸುತ್ತದೆ. ಮೇಘದಿಂದ ಸುರಿಸಿದ ನೀರನ್ನು ಪರ್ವತವು ತಿನ್ನುತ್ತದೆ, ಅಥವಾ ಪರ್ವತದಲ್ಲಿ ಉಂಟಾದ ಪದಾರ್ಥಗಳು ಪ್ರಾಣಿಗಳಿಂದ ತಿನ್ನಲ್ಪಡುತ್ತವೆ. ಇದರಲ್ಲಿ ಇದ್ದು ಮನುಷ್ಯರು ಪದಾರ್ಥಗಳನ್ನು ತಿನ್ನುತ್ತಾರೆ ಎಂದರ್ಥವಾಗುತ್ತದೆ. ಸೀಳುವುದು ಎಂಬರ್ಥವನ್ನು ಕೊಡುವ ದೃಧಾತುವಿಗೆ ನಞ್ ಉಪಪದವಾಗಿರುವಾಗ ಬಹುಲಗ್ರಹಣದಿಂದ ರಿನ್ ಪ್ರತ್ಯಯ, ಧಾತುವಿನ ಟಿಗೆ (ಋ) ಲೋಪ. ‹ನ ದೀರ್ಯತೇ ಇತಿ ಅದ್ರಿಃ’ ಸೀಳಲು ಅಸಾಧ್ಯವಾದದ್ದು ಪರ್ವತ ಅಥವಾ ಮೇಘ. ಮೇಘಕ್ಕೆ ಉದಾಹರಣೆ—

**ವಿಜಯುಷಾ ಯಯಥುಃ ಸಾನ್ವದ್ರೇಃ (ಋ-ಸಂ-೧-೮-೧೬-೧) ಪರ್ವತಕ್ಕೆ ಉದಾ—ನಾಂತರಿಕ್ಷಂ ನಾದ್ರಯಃ ಸೋಮೋ ಅಕ್ಷಃ (ಋ—ಸಂ—೫-೪-೧೫-೨)**

**(೩) ಗ್ರಾವಾ ॥ ಹನ್ತೇಃ (ಅದಾ-ಪ) ಅನ್ಯೇಭ್ಯೋಽಪಿ ದೃಶ್ಯಂತೇ (ಪಾ. ಸೂ. ೩-೨-೭೫) ಇತಿ ಕ್ವನಿಪ್ । ಪೃಷೋದರಾದಿತ್ವಾತ್ ಧಾತೋರ್ಗ್ರಾದೇಶಃ ॥**

ಹನ-ಹಿಂಸಾಗತ್ಯೋಃ ಧಾತು. ಇದಕ್ಕೆ ಕ್ವನಿಪ್ ಪ್ರತ್ಯಯ ಬಂದಾಗ ಪೃಷೋದರಾದಿಯಲ್ಲಿ ಸೇರಿರುವುದರಿಂದ ಧಾತುವಿಗೆ ಗ್ರಾದೇಶ. ಗ್ರಾವನ್ ಶಬ್ದ. ಇಂದ್ರನಿಂದ ಹೊಡೆಯಲ್ಪಡುತ್ತದೆ, ಅಥವಾ ಮೇಘದಿಂದ ಚಂದ್ರನು ಹಿಂಸಿಸಲ್ಪಡುತ್ತಾನೆ ಎಂದರ್ಥವಾಗುವುದರಿಂದ ಚಂದ್ರಹಿಂಸಕವಾದದ್ದು ಗ್ರಾವಾ. ಅಥವಾ ನಿಗರಣಾರ್ಥಕವಾದ, ಶಬ್ದಾರ್ಥಕವಾದ, ಸ್ತುತಿಕ್ರಿಯಾ ಹೇಳುವ ಗೃಧಾತುವಿಗೆ ಹಿಂದಿನಂತೆ ಕ್ವನಿಪ್ ಪ್ರತ್ಯಯ. 'ದೃಶ್ಯಂತೇ' ಎಂದು ಸೂತ್ರದಲ್ಲಿ ಹೇಳಿರುವುದರಿಂದ ಅಭಿಮತಕಾರ್ಯ ಸಿದ್ಧವಾಗುತ್ತದೆ. ಮಳೆಗಾಲದಲ್ಲಿ ನೀರನ್ನು ಸುರಿಸುತ್ತದೆ, ಆಕಾಶದಿಂದ ಪ್ರಾದುರ್ಭೂತವಾದದ್ದು, ಗುಡುಗು ಶಬ್ದಮಾಡುತ್ತದೆ, ಮಳೆಗೋಸ್ಕರ ಜನರಿಂದ ಸ್ತೋತ್ರಮಾಡಲ್ಪಡುವುದು. ಗ್ರಾವ=ಮೇಘ. ಪರ್ವತವೂ ಕೊಡಾ ರೆಕ್ಕೆ ಕಡಿಯುವಾಗ ಹಿಂಸಿಸಲ್ಪಡುತ್ತದೆ, ಮೇಘದಿಂದ ಸುರಿಸಿದ ಝರಿಗಳ ಮೂಲಕ ಬಿಡುತ್ತದೆ, ಗುಹಾದಿಗಳಲ್ಲಿರುವ ಸಿಂಹಾದಿ ಧ್ವನಿಗಳಿಂದ ಇದೂ ಶಬ್ದಮಾಡುತ್ತದೆ, ಉಪಯುಕ್ತ ಪದಾರ್ಥಗಳಿಂದ ಕೂಡಿರುವುದರಿಂದ ಪ್ರಾಣಿಗಳಿಂದ ಸ್ತುತಿಸಲ್ಪಡುತ್ತದೆ ಎಂದು ನಾನಾರ್ಥವಾಗುತ್ತದೆ. ಮೇಘಕ್ಕೆ ಉದಾಹರಣೆ—

"ಇಂದ್ರ ಗ್ರಾವಣೋ|ಅದಿತಿಃವಾ ಸಜೋಷಾಃ" (ಋ-ಸಂ-೪-೧-೨೯-೫) ಪರ್ವತಕ್ಕೆ ಉದಾಗ್ರಾವಾಣೋ ಅಪ ಮುಚ್ಛುನಾಮುಪ ಸೇಧತ (ಋ-ಸಂ-೮-೮-೩೩-೨) "ಗ್ರಾವಾಣ ಉಪರೇಷ್ವಾ ಮಹೀಯಂತೇ (ಋ-ಸಂ-೮-೮-೩೩-೩)

(೩) ಗೋತ್ರಃ। ಗುಜ್-ಅವ್ಯಕ್ತೇ ಶಬ್ದೇ (ಭೂ-ಆ-) "ಗುಧೃವೀಪಚಿವಚಿ—" (ಉ. ೪-೧೬೨) ಇತಿ ತ್ರಪ್ರತ್ಯಯಃ ॥ ಮೇಘೋ ಗರ್ಜಿತಲಕ್ಷಣಮವ್ಯಕ್ತಾಕ್ಷರಂ ಶಬ್ದಕರೋತಿ.

ಶಬ್ದಾರ್ಥಕವಾದ ಗು ಧಾತುವಿಗೆ ಔಣಾದಿಕ ತ್ರಪ್ರತ್ಯಯ. 'ಸಾರ್ವಧಾತುಕಾ—' ಸೂತ್ರದಿಂದ ಧಾತುವಿನ ಉಕಾರಕ್ಕೆ ಗುಣ. ಗುಡುಗು ಶಬ್ದಮಾಡುವುದರಿಂದ ಮೇಘವು ಗೋತ್ರವಾಗುತ್ತದೆ. ಸಿಡಿಲಿನ ಧ್ವನಿ ಕೇಳಿದೊಡನೆಯೇ ಸೆಖೆಗಾಲದಲ್ಲಿ ಮಳೆಯಾಗಲು ಮೋಡವಾಯಿತು ಎಂದು ಜನರು ಶಬ್ದಮಾಡುತ್ತಾರೆ. ಅಥವಾ ಗೋ ಅಂದರೆ ಸೂರ್ಯರಶ್ಮಿಯಿಂದ ತರಲ್ಪಟ್ಟ ನೀರು. ಇದನ್ನು ಮಳೆಗಾಲಕ್ಕಿಂತ ಬೇರೆ ಕಾಲದಲ್ಲಿ ರಕ್ಷಿಸಲ್ಪಟ್ಟಿರುತ್ತದೆ ಎಂದರ್ಥವಾಗುವುದರಿಂದ ಗೋಪದ ಉಪಪದವಾಗಿರುವಾಗ ತ್ರೈಙ್-ಪಾಲನೇ ಧಾತುವಿಗೆ 'ಆತೋಽನುಪಸರ್ಗೇ ಕಃ' (ಪಾ. ಸೂ. ೩-೨-೩) ಸೂತ್ರದಿಂದ ಕ ಪ್ರತ್ಯಯ. 'ಆತೋಲೋಪಇಟಿಚ' ಕ ಪರವಾದಾಗ ಆಕಾರ ಲೋಪ. ಶರದಾದಿ ಕಾಲದಲ್ಲಿ|ಮೇಘಗಳಲ್ಲಿ ನೀರು ಘನೀಭೂತವಾಗಿ ಇರುತ್ತವೆ. ಅಥವಾ ಗೋವನ್ನು ಮಳೆಯಿಂದ ನೀರು ಕೊಟ್ಟು ರಕ್ಷಿಸುವುದು ಮೇಘ. ಪರ್ವತವೂ ಕೂಡಾ ನಿರ್ಝರಾದಿಗಳು ಬೀಳುವಾಗ ಉಂಟಾಗುವ ಶಬ್ದದಿಂದ ಶಬ್ದವುಳ್ಳದ್ದಾಗುತ್ತದೆ, ಮಳೆಯ ನೀರನ್ನು ಕೆರೆ ಮುಂತಾದವುಗಳಲ್ಲಿ ಸಂರಕ್ಷಿಸುತ್ತದೆ. ಚನ್ನಾಗಿ ಹುಲ್ಲು ಮುಂತಾದವುಗಳಿಂದ ಹಸುಗಳನ್ನೂ ರಕ್ಷಿಸುತ್ತದೆ. ಆದುದರಿಂದ ಇದೂ ಗೋತ್ರವಾಗುತ್ತದೆ. ಮೇಘಕ್ಕೆ ಉದಾಹರಣೆ—

**ಗೋತ್ರಾ ಶಿಕ್ಷನ್ ದಧೀಚೇ ಮಾತರಿಶ್ವನೇ (ಋ. ಸಂ. ೮-೧-೫-೨) ತ್ವಂ ಗೋತ್ರಮಂಗಿರೋಭ್ಯೋಽವೃಣೋರಪ (ಋ. ಸಂ. ೧-೪-೯-೩) ಉದ್ಗೋತ್ರಾಣಿ ಸಸೃಜೇ ದಂಸನಾವಾನ್ (ಋ. ಸಂ. ೩-೨-೨೫-೪) ಪರ್ವತಕ್ಕೆ ಉದಾ—**

**ಗೋತ್ರಭಿದಂ ಗೋವಿದಂ ವಜ್ರಬಾಹುಮ್ (ಋ. ಸಂ. ೮-೫-೨೨-೬)**

**(೪) ವಲಃ ॥ ವೃ-ಆವರಣೇ (ಸ್ವಾ-ಉ) "ಗ್ರಹವೃದೃನಿಶ್ಚಿಗಮಶ್ಚ" (ಪಾ. ಸೂ. ೩-೩-೫೮) ಇತ್ಯಪ್। ಅಪಿಲಕಾದಿತ್ವಾತ್ ಲತ್ವಮ್। ಯದ್ವಾ, ವಲ-ಸಂವರಣೇ ಅಸ್ಮಾತ್ "ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ" (ಪಾ. ಸೂ. ೩-೩-೧೧೮) ಇತಿ ಘಃ**

ಮುಚ್ಚುವುದು ಎಂಬರ್ಥ ಕೊಡುವ ವೃಧಾತುವಿಗೆ ಅಪ್ ಪ್ರತ್ಯಯ. 'ಸಾರ್ವಧಾತುಕಾ ಸೂತ್ರದಿಂದ ಗುಣ. ರಪರವಾಗಿ ಬಂದರೆ ವರ ಎಂದಾಗುತ್ತದೆ. ರೇಫಕ್ಕೆ ಲಕಾರಾದೇಶ ಅಥವಾ ಸಂವರಣಾರ್ಥಕ ವಲಧಾತುವಿಗೆ ಸಂಜ್ಞಾ ತೋರು

ವಾಗ ಘ ಪ್ರತ್ಯಯ. ಅಕಾರ ಉಳಿಯುತ್ತದೆ. ವ್ರಿಯತೇ ಅನೇನ ಇತಿ ವಲಃ. ಇದರಿಂದ ದಿಕ್ಕುಗಳೂ ಆಕಾಶವೂ ಮುಚ್ಚಲ್ಪಡುತ್ತವೆ. ಪರ್ವತದಿಂದಲೂ ವ್ಯಾಪಿಸಿರುವುದರಿಂದ ಭೂವ್ಯಾಕಾಶಗಳು ಆವರಿಸಲ್ಪಡುತ್ತವೆ. ಮೇಘಕ್ಕೆ ಉದಾಹರಣೆ—

**ಅಲಾತೃಣೋ ವಲ ಇಂದ್ರ ವ್ರಜೋ ಗೋಃ (ಋ-ಸಂ-೩-೨-೨-೫) ಪರ್ವತಕ್ಕೆ ಇಂದ್ರೋ ವಲಂ ರಕ್ಷಿತಾರಂ ದುಘಾನಾಮ್ (ಋ.ಸಂ.೮-೨-೧೫-೬)**

**(೫) ಅಶ್ನಃ ॥ ಅಶೂ-ವ್ಯಾಪ್ತೌ (ಸ್ವಾ-ಆ) ಅಶ-ಭೋಜನೇ (ಕ್ರ್ಯಾ-ಪ) ಆಭ್ಯಾಂ 'ಇಣ್‌ಸಿಞ್‌ಜಿ'— (ಉ-೩-೨) ಇತಿ ವಿಧೀಯಮಾನೋ ನಕ್‌ಪ್ರತ್ಯಯೋ ಬಾಹುಲಕಾದ್ ಭವತಿ । ಶಾತ್ (ಪಾ-ಸೂ-೮-೪-೪೪) ಇತಿ ಪ್ರತಿಷೇಧಾತ್ ಶ್ಚುತ್ವಂ ನ ಭವತಿ ।**

ವ್ಯಾಪ್ತ್ಯರ್ಥಕವಾದ ಅಶೂ ಧಾತು, ಭೋಜನಾರ್ಥಕವಾದ ಅಶ ಧಾತು-ಇವುಗಳಿಗೆ ಬಹುಲಗ್ರಹಣದಿಂದ ನಕ್‌ಪ್ರತ್ಯಯ. ಶಕಾರದ ಪರದಲ್ಲಿ ತವರ್ಗ ಬಂದುದರಿಂದ 'ಶಾತ್' ಸೂತ್ರದಿಂದ ನಿಷೇಧವಾದಿರುವುದರಿಂದ ಶ್ಚುತ್ವ (ಞಕಾರ) ಬರುವುದಿಲ್ಲ. ಮೇಘ, ಪರ್ವತ ಎರಡರಲ್ಲಿಯೂ ಆಕಾಶವನ್ನು ವ್ಯಾಪಿಸಿರುವುದು, ಮಳೆ ಸುರಿಸಬೇಕಾದ ನೀರನ್ನು ಸೇರಿಸಿಟ್ಟಿರುವುದು, ಸುರಿಸಿದ ನೀರನ್ನು ಶೇಖರಿಸುವುದು ಎಂದರ್ಥವಾಗುತ್ತದೆ. ಅಶನ ಪದದಿಂದ ಶೇಖರಿಸುವುದುಎಂದು ಲಕ್ಷಣೆಯಿಂದ ಅರ್ಥ ಹೇಳಬೇಕು. ಪರ್ವತಕ್ಕೆ ನಿಗಮ ಹುಡುಕಬೇಕು. ಮೇಘಕ್ಕೆ ಉದಾಹರಣೆ—

**ಅಶ್ನಾಪಿನದ್ಧಂ ಮಧುಪರ್ಯಪಶ್ಯನ್ (ಋ-ಸಂ-೮-೨-೧೮-೨)**

**(೬) ಪುರುಭೋಜಾಃ । ಭುಜ-ಪಾಲನಾಭ್ಯವಹಾರಯೋಃ (ರು-ಪ) ಇತ್ಯಸ್ಮಾತ್ 'ವಿದಿಭುಜಿಭ್ಯಾಂ ವಿಶ್ವೇ' (ಉ-೪-೨೩೧) ಇತಿ ವಿಶ್ವಶಬ್ದೇ ಉಪಪದೇ ವಿಹಿತೋಽಸುಪ್ರತ್ಯಯಃ ಪುರುಶಬ್ದೇಽಪ್ಯುಪಪದೇ ಬಾಹುಲಕಾತ್ ಭವತಿ ।**

ಭುಜ ಧಾತುವಿಗೆ ಪಾಲನ, ಅಭ್ಯವಹಾರ (ತಿನ್ನುವುದು) ಎಂದು ಎರಡು ಅರ್ಥಗಳಿವೆ. ವಿಶ್ವಶಬ್ದ ಉಪಪದವಾಗಿರುವಾಗ ಅಸುಪ್ರತ್ಯಯ ಹೇಳಿದ್ದರೂ, ಬಹುಲಗ್ರಹಣದಿಂದ ಪುರುಶಬ್ದ ಉಪಪದವಾಗಿರುವಾಗಲೂ ಇದಕ್ಕೆ ಅಸುಪ್ರತ್ಯಯ ಬರುತ್ತದೆ. ಭುಜ್+ಅಸ್. ಲಘೂಪಧಗುಣ. ಪುರುಭೋಜಸ್ ಸಾಂತಪದವಾಗುತ್ತದೆ. ಪ್ರಥಮಾ ಏಕವಚನದಲ್ಲಿ ದೀರ್ಘಾದಿಗಳು ಬಂದು ಪುರುಭೋಜಾಃ ಎಂದಾಗುತ್ತದೆ. ಪುರು ಎಂದರೆ ಬಹು ಎಂದರ್ಥ. ಮೇಘವು ಬಹುಪ್ರಾಣಿಜಾತವನ್ನು ಮಳೆಯಿಂದ ರಕ್ಷಿಸುತ್ತದೆ, ಪರ್ವತವು ದುರ್ಭಿಕ್ಷಾದಿಗಳಿಂದ ರಕ್ಷಿಸುತ್ತದೆ. ಸಮುದ್ರ, ಪರ್ವತಗಳು ರಾಜನಂತೆ ದುರ್ಭಿಕ್ಷನಾಶಕಗಳೆಂದು ಪ್ರಸಿದ್ಧವಾಗಿವೆ. ಅಭ್ಯವಹಾರಾರ್ಥದಲ್ಲಿ ಸಾಮರ್ಥ್ಯದಿಂದ ಅಧಿಕಜಲವನ್ನು ಸುರಿಸುವುದಕ್ಕೋಸ್ಕರ ಮೇಘವು ಶೇಖರಿಸುತ್ತದೆ. ಪರ್ವತವು ಮಳೆ ಬಂದುದನ್ನು ಶೇಖರಿಸುತ್ತದೆಂದರ್ಥವಾಗುತ್ತದೆ. ಅಥವಾ ಕರ್ಮಣಿಯಲ್ಲಿ ಪ್ರತ್ಯಯ. ಹಲವರಿಂದ ರಕ್ಷಿಸಲ್ಪಡುತ್ತದೆ, ತಿನ್ನಲ್ಪಡುತ್ತದೆ. ಮೇಘಕ್ಕೆ ಇಂದ್ರನೂ ಸೂರ್ಯಕಿರಣಗಳೂ ರಕ್ಷಕರು. ಪರ್ವತಕ್ಕೆ ಆಯಾಯ ರಾಜರು ರಕ್ಷಕರು. ನೀರಿನ ಮೂಲಕ ತಿನ್ನಲ್ಪಡುವುದು. ಇವೆರಡಕ್ಕೂ ನಿಗಮ ಹುಡುಕಬೇಕು.

**(೭) ವಲಿಶಾನಃ । ವಲ-ಸಂವರಣೇ (ಭೂ. ಆ) ಔಣಾದಿಕಃ ಕ್ವಿಪ್। ಈಶ ಐಶ್ವರ್ಯೇ (ಅ-ಆ) ಲಟಃ ಶಾನಚ್ ।**

ಸಂವರಣಾರ್ಥಕ ವಲಧಾತುವಿಗೆ ಕ್ವಿಪ್. ವಲ್. ಈಶಧಾತುವಿಗೆ ಲಟ್ ಬಂದಾಗ ಆತ್ಮನೇಪದವಾದುದರಿಂದ ಅದಕ್ಕೆ ಶಾನಚಾದೇಶ. ವಲ್+ಈಶಾನ. ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ಈಕಾರಕ್ಕೆ ಹ್ರಸ್ವ. ವಲಿಶಾನಃ

ಎಂದಾಗುತ್ತದೆ. ಲೋಕವೇದನಿಘಂಟುಗಳಲ್ಲಿ ವಲೀಶಾನ ಎಂದೇ ದೃಷ್ಟವಾಗಿದೆ. ಆಕಾಶವನ್ನು ಆವರಿಸುತ್ತಾ ಮಳೆ ಸುರಿಸಲ ಬಯಸುತ್ತದೆ. ಪರ್ವತವೂ ಕೂಡಾ ತನ್ನ ಶರೀರದಿಂದ ಭೂಮ್ಯಾಕಾಶಗಳನ್ನು ಆವರಿಸಿ ದುರ್ಭಿಕ್ಷಾದಿಗಳಿಂದ ಮನುಷ್ಯರನ್ನು ರಕ್ಷಿಸಲು ಸಮರ್ಥವಾಗುತ್ತದೆ. ಇವೆರಡಕ್ಕೂ ನಿಗಮ ಹುಡುಕಬೇಕು.

**(೮) ಅಶ್ಮಾ ॥ ಅಶೂ–ವ್ಯಾಪ್ತೌ (ಸ್ವಾ–ಆ–) ಅಶ–ಭೋಜನೇ (ಕ್ರ್ಯಾ–ಪ) ಅಶಿಶಕಿಭ್ಯಾಂ ಛಂದಸಿ (ಉ. ೪–೧೪೪) ಇತಿ ಮನಿನ್ । ಅಶ್ಮ ಇತ್ಯನೇನ ಸಮಾನಾರ್ಥಃ ॥**

ವ್ಯಾಪ್ತ್ಯರ್ಥಕ ಅಶೂ ಧಾತುವಿಗೂ, ಭೋಜನಾರ್ಥಕವಾದ ಅಶ ಧಾತುವಿಗೂ ಮನಿನ್ ಪ್ರತ್ಯಯ ಬಂದರೆ ಅಶ್ಮನ್ ಎಂದು ನಾಂತಪದವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಸುಲೋಪ ದೀರ್ಘಾದಿ. ಅಶ್ಮಾ. ಆಕಾಶವನ್ನು ವ್ಯಾಪಿಸಿರುವುದು ಇತ್ಯಾದ್ಯರ್ಥಗಳನ್ನು ಅಶ್ಮಪದದಲ್ಲಿ (೫) ಹೇಳಿದಂತೆಯೇ ತಿಳಿಯಬೇಕು. ಉದಾಹರಣೆ ಮೇಘಕ್ಕೆ—

**ಅಪಾವೃಣೋದು ರೋ ಅಶ್ಮವ್ರಜಾನಾಮ್ (ಋ.ಸಂ. ೮–೭–೨೭–೬) (ಪರ್ವತಕ್ಕೆ) ಅಶ್ಮನೋರಂತರಗ್ನಿಂ ಜಜಾನ (ಋ. ಸಂ. ೨–೬–೭–೩)**

**(೯) ಪರ್ವತಃ ॥ ಪೄ–ಪಾಲನಪೂರಣಯೋಃ (ಕ್ರ್ಯಾ–ಪ–) "ಸ್ನಾಮದಿಪದ್ಯರ್ತಿಪೄಶಕಿಭ್ಯೋ ವನಿಪ್" (ಉ. ೪–೧೯) ಪೃಣಂತಿ ಪಾಲಯಂತಿ ಅವಯವಿನಂ ಪೂರ್ಯಂತೇ ವಾ ತೇನ ಇತಿ ಪರ್ವಾಣಿ । ಯದ್ವಾ ಪ್ರೀಣಾತೇರ್ಬಾಹುಲಕಾತ್ ವನಿಪಿ ಈಕಾರಸ್ಯಾಕಾರಃ ಸ ಚ ಪಕಾರಾತ್ ಪರಃ ಪ್ರೀಣಯಂತಿ ಸ್ವಾಶ್ರಯಮಿತಿ ॥**

ಪಾಲನಾರ್ಥಕವಾದ ಪೄ ಧಾತುವಿಗೆ ಔಣಾದಿಕ ವನಿಪ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಪರ್ವನ್. ಅವಯವಿಯನ್ನು ರಕ್ಷಿಸುತ್ತವೆ ಅಥವಾ ಅದರಿಂದ ತುಂಬಿಸಲ್ಪಡುತ್ತದೆ. ಬಹುಲಗ್ರಹಣದಿಂದ ಪ್ರೀಧಾತುವಿಗೆ ವನಿಪ್ ಬಂದಾಗ ಈ ಕಾರಕ್ಕೆ ಅಕಾರಾದೇಶ. ಅದು ಪಕಾರದ ಪದಕ್ಕೆ ಬಂದರೆ ಪರ್ವನ್ ಎಂದಾಗುತ್ತದೆ. ತನ್ನ ಆಶ್ರಯ ವನ್ನು ಸಂತೋಷಗೊಳಿಸುತ್ತದೆ ಎಂದರ್ಥ. ಪರ್ವ ಎಂದರೆ ಅವಯವ. ಇದು ಉಳ್ಳದ್ದು ಎಂಬ ಮತ್ವರ್ಥದಲ್ಲಿ 'ಪರ್ವಮರುದ್ಭ್ಯಾಂ ತಪ್ ವಕ್ತವ್ಯಃ' (ಪಾ. ಸೂ. ೫–೨–೧೨೧–ವಾ) ಎಂಬ ವಾರ್ತಿಕದಿಂದ ತಪ್‌ಪ್ರತ್ಯಯ. ನಲೋಪ. ಪರ್ವತ. ಮೇಘ ಪರ್ವತ ಇವೆರಡೂ ದೇವತಾಸ್ವರೂಪಿಗಳಾದುದರಿಂದ ಅವಯವ್ಯರ್ಥದಲ್ಲಿ ಪ್ರಯೋಗಿಸಿದೆ. ಅಥವಾ ಧೂಮಾದಿ ಅವಯವ ಸಂಘಾತ ಮೇಘದಲ್ಲಿಯೂ, ಶಿಲಾವೃಕ್ಷಾದಿ ಸಂಘಾತ ಪರ್ವತದಲ್ಲಿಯೂ ಪ್ರತ್ಯಕ್ಷವಾಗಿ ತೋರುವುದರಿಂದ ಅವಯವಿತ್ವ ಸಮಂಜಸವಾಗಿದೆ.

ಅಥವಾ ಪರ್ವ–ಪೂರಣೇ. ಧಾತು. ಇದಕ್ಕೆ 'ಭೃಮೃದೃಶಿಯಜ—' (ಉ. ೩–೧೧೭) ಸೂತ್ರದಿಂದ ಅತಚ್ ಪ್ರತ್ಯಯ. ಪರ್ವ್+ಅತ. ಮೇಘವು ಮಳೆ ನೀರಿನಿಂದ ಭೂಮಿಯನ್ನು ತುಂಬಿಸುತ್ತದೆ, ಆಕಾಶವನ್ನು ಆವರಿಸುತ್ತದೆ. ಪರ್ವತವೂ ಝರೀನದೀ ನೀರಿನ ಮೂಲಕ ಭೂಮಿಯನ್ನು ತುಂಬುತ್ತದೆ, ತನ್ನ ಔನ್ನತ್ಯಾದಿಗಳಿಂದ ಭೂಮ್ಯಾಕಾಶಗಳನ್ನು ಆವರಿಸುತ್ತದೆ ಎಂದರ್ಥವಾಗುತ್ತದೆ. ಮೇಘಕ್ಕೆ ಉದಾಹರಣೆ—

**ನಿ ಪರ್ವತಾ ಅದ್ಮಸದೋ ನ ಸೇದುಃ (ಋ. ಸಂ. ೪–೭–೨–೩) ಬಲಿತ್ಥಾ ಪರ್ವತಾನಾಮ್ (ಋ. ಸಂ. ೪–೪–೨೯–೧) ಪರ್ವತಕ್ಕೆ ಉದಾ—**

**ಪ್ರಪರ್ವತಾನಾಮುಶತೀ ಉಪಸ್ಥಾತ್ (ಋ. ಸಂ. ೩–೨–೧೨–೧)**

(೧೦) ಗಿರಿಃ । ಗ್ರ್ಯಾ-ನಿಗರಣೇ (ತು-ಪ-) ಅಥವಾ ಗ್ರ್ಯಾ-ಶಬ್ದೇ (ಕ್ರ್ಯಾ-ಪ-) "ಗೃಣಾತಿಃ ಸ್ತುತಿಕರ್ಮಾ" ನಿರು. ೩-೫) ಕಿದಿತಿ ವರ್ತಮಾನೇ "ಕ್ಷ್ಯಾ ಗ್ರ್ಯಾ ಶೃ ಪೃ ಕುಟಿ—" (ಉ. ೪-೧೩೮) ಇತಿ ಇ ಪ್ರತ್ಯಯಃ । "ಯೂತ ಇದ್ಧಾತೋಃ" (ಪಾ. ಸೂ. ೭-೧-೧೦೦) ಇತೀತ್ವಮ್-ಗಿರಿಃ ॥

ನಿಗರಣ, ಶಬ್ದ, ಸ್ತುತಿ ಅರ್ಥಗಳನ್ನು ಕೊಡುವ ಗ್ರ್ಯಾ ಧಾತುವಿಗೆ ವರ್ತಮಾನ ಕಾಲದಲ್ಲಿ 'ಕ್ಷ್ಯಗ್ರ್ಯ-' ಉಣಾದಿ ಸೂತ್ರದಿಂದ ಇ ಪ್ರತ್ಯಯ. ಇದಕ್ಕೆ ಕಿತ್ತ್ವಾತಿದೇಶದಿಂದ ಇದು ಪರವಾದಾಗ ಋದಂತ ಧಾತುವಿಗೆ ಇತ್ವ. ಗಿರ್+ಇ. ರ ಪರವಾಗಿ ಬಂದಿದೆ. ನೀರನ್ನು ಸುರಿಸುವುದು ಇತ್ಯಾದಿ ಗ್ರಾವನ್ (೨) ಶಬ್ದಕ್ಕೆ ಹೇಳಿದ ಅರ್ಥಗಳೇ ಇಲ್ಲಿ ಸಂಭವಿಸುತ್ತವೆ. ಪರ್ವತಕ್ಕೆ ಉದಾಹರಣೆ—

**ನಿರಾವಿಧ್ಯದ್ ಗಿರೇಭ್ಯರ್ಷ್ಟಿರ್ನ ಭ್ರಾಜತೇ ತುಜಾ ಶವಃ (ಋ. ಸಂ. ೧-೪-೨೧-೩) ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** (ಋ. ಸಂ. ೨-೨-೨೪-೨) ಇದು ಎರಡಕ್ಕೂ ಉದಾಹರಣೆಯಾಗುತ್ತದೆ.

(೧೧) ವ್ರಜಃ॥ ವ್ರಜ-ಗತೌ (ಭೂ. ಪ) ‹ ಗೋಚರಸಂಚರ—' (ಪಾ. ಸೂ-೩-೩-೧೧೯) ಇತಿ ನಿಪಾತನಾತ್ ಘಃ ಕರಣಾಧಿಕರಣಯೋಸ್ತದ್ವ್ಯತಿರಿಕ್ತೇ ಕಾರಕೇಽಪಿ ಘೋ ಭವತಿ ॥

ಗತ್ಯರ್ಥಕವಾದ ವ್ರಜ ಧಾತುವಿಗೆ ಘ ಪ್ರತ್ಯಯ ಬಂದು 'ಗೋಚರ—' ಸೂತ್ರದಿಂದ ವ್ರಜಃ ಎಂದು ನಿಪಾತಿತವಾಗಿದೆ. ಕರಣ, ಅಧಿಕರಣಕಾರಕದಲ್ಲಿ ಘ ಹೇಳಿದ್ದರೂ ಇಲ್ಲಿ ನಿಪಾತದಿಂದ ಕರ್ತ್ರರ್ಥದಲ್ಲಿ ಬಂದಿದೆಯೆಂದು ತಿಳಿಯಬೇಕು. ಅಂತರಿಕ್ಷದಲ್ಲಿ ಹೋಗುವುದು, ಇದರಿಂದ ಇಂದ್ರನು ಹೋಗುತ್ತಾನೆ, ಎಂದರ್ಥ. ಇಂದ್ರನಿಗೆ ಮೇಘವಾಹನನೆಂದು ಹೆಸರು. ಪರ್ವತವೂ ಕೂಡಾ ರೆಕ್ಕೆ ಕಡಿಯಬೇಕಾದರೆ ಹಿಂದೆ ಅಂತರಿಕ್ಷ ಗಮನವುಳ್ಳದ್ದು ಆಗಿದ್ದಿತು. ಅಥವಾ ತನ್ನ ಶರೀರದಿಂದ ಭೂಮಿ ಅಂತರಿಕ್ಷಗಳಲ್ಲಿ ಹೋಗುತ್ತದೆ, ಇದರಲ್ಲಿ ಪ್ರಾಣಿಗಳು ಹೋಗುತ್ತವೆ ಎಂದರ್ಥವಾಗುತ್ತದೆ. ಮೇಘಕ್ಕೆ ಉದಾಹರಣೆ—

**ಅಪ ವ್ರಜಮೂರ್ಣುಥಃ ಸಪ್ತಾಸ್ಯಮ್** (ಋ-ಸಂ-೭-೮-೧೯-೩) ಪರ್ವತಕ್ಕೆ ಉದಾ—**ವ್ರಜಂ ಗೋಮಂತಮುಶಿಜೋ ವಿವವ್ರುಃ** (ಋ-ಸಂ-೩-೪-೧೪-೧)

(೧೨) ಚರುಃ ॥ ಚರ-ಗತಿ ಭಕ್ಷಣಯೋಃ (ಭೂ-ಪ-) "ಭೃಮೃಶೀತೃಚರಿ—" (ಉ-೧-೭) ಇತಿ ಉ ಪ್ರತ್ಯಯಃ । ಚರಂತಿ ಗಚ್ಛಂತ್ಯಸ್ಮಾದಾಪೋ ಮೇಘಾದ್ವರ್ಷಾಕಾಲೇ ॥

ಗತಿ ಭಕ್ಷಣಾರ್ಥ ಕೊಡುವ ಚರ ಧಾತುವಿಗೆ ಔಣಾದಿಕ ಉ ಪ್ರತ್ಯಯ. ಚರು ಎಂದಾಗುತ್ತದೆ. ಇದರಿಂದ ವರ್ಷಾಕಾಲದಲ್ಲಿ ನೀರು ಹೋಗುತ್ತದೆ. ಪರ್ವತದಿಂದಲೂ ಝರಿಗಳ ಮೂಲಕ ನೀರು ಇಳಿದು ಹೋಗುತ್ತದೆ ಎಂದರ್ಥ. ಅಥವಾ ನೀರು ಸುರಿಸಲು ಶೇಖರಿಸುತ್ತದೆ. ಪರ್ವತವಾದರೆ ಇದರಲ್ಲಿ ಪ್ರಾಣಿಗಳು ಸಂಚರಿಸುತ್ತವೆ ಎಂದು ಅಧಿಕರಣಾರ್ಥದಲ್ಲಿ ಪ್ರತ್ಯಯ ಹೇಳಬೇಕು. ಅಥವಾ ಇದರಲ್ಲಿ ಆದ ಪದಾರ್ಥಗಳು ಪ್ರಾಣಿಗಳಿಂದ ತಿನ್ನಲ್ಪಡುತ್ತವೆ ಎಂದರ್ಥ. ಪರ್ವತಪರ್ಯಾಯದಲ್ಲಿ ಚರುಶಬ್ದಕ್ಕೆ ನಿಗಮ ಹುಡುಕಬೇಕು. ಮೇಘಕ್ಕೆ ಉದಾಹರಣೆ—

**ಸ ನೋ ವೃಷನ್ನಮುಂ ಚರುಮ್** (ಋ-ಸಂ-೧-೧-೧೪-೧)

(೧೩) ವರಾಹಃ ॥ ವೃಞೋಕೇಃ (ಸ್ವಾ-ಪ) ‹ ಗ್ರಹವೃದೃನಿಶ್ಚಿಗಮುಶ್ಚ ' (ಪಾ-ಸೂ-೩-೩-೫೮) ಇತ್ಯಕಾರಃ । ವರಶಬ್ದೇ ಕರ್ಮಣ್ಯುಪಪದೇ ಆಙ್‌ಪೂರ್ವಾದ್ಧರತೇಃ ‹ ಕರ್ಮಣ್ಯಣ್ ' (ಪಾ- ಸೂ-೩-೨-೧) ವರಮುದಕಮಾಹರತಿ ಇತಿ ವರಾಹಃ ॥

ವೃಞ್-ವರಣೇ. ಧಾತು. 'ಗ್ರಹವೃದೃ—' ಸೂತ್ರದಿಂದ ಅಪ್ ಪ್ರತ್ಯಯ. ಇದನ್ನು ನಿಮಿತ್ತೀ ಕರಿಸಿ ಧಾತುವಿನ ಋಕಾರಕ್ಕೆ ಗುಣ. ವರವೆಂದಾಗುತ್ತದೆ. ನೀರು ಎಂದರ್ಥ. "ವರಂ ಆಹರತಿ" ವರವೆಂಬ ಕರ್ಮವಾಚಕಪದ ಉಪಪದವಾಗಿರುವಾಗ ಆಙ್ ಉಪಸರ್ಗಪೂರ್ವಕ ಹೃಞ್ ಧಾತುವಿಗೆ ಅಣ್ ಪ್ರತ್ಯಯ. ಇದು ಣಿತ್ತಾದುದರಿಂದ ವೃದ್ಧಿ. ಅಹಾರ ಎಂದಾಗುತ್ತದೆ. ವರಾಹಾರ ಎಂದಿರುವಾಗ ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಆಕಾರ ರೇಫಗಳಿಗೆ ಲೋಪ. ವರಾಹಃ. ನೀರನ್ನು ತರುವುದು ಮೇಘ. ವರ=ನೀರೆಂಬ ಆಹಾರವುಳ್ಳದ್ದು.

ಅಥವಾ ವರಶಬ್ದ ಉಪಪದವಾಗಿರುವಾಗ ಆಙ್ ಉಪಸರ್ಗಪೂರ್ವಕ ಹೃಞ್ ಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡ ಪ್ರತ್ಯಯ. ಡಿತ್ತಾದುದರಿಂದ ವರಾಹಸಾದೃಶ್ಯದಿಂದ ಮೇಘವೂ ವರಾಹ ಶಬ್ದವಾಚ್ಯವಾಗುತ್ತದೆ. ಅಥವಾ ವರಂ=ಉತ್ಕೃಷ್ಟವಾದ ನೀರನ್ನು ವಹತಿ=ಕೊಡಲು ಉದ್ಯುಕ್ತವಾಗುತ್ತದೆ ಎಂದರ್ಥವಾಗುವುದರಿಂದ ವರ ಉಪಪದವಾಗಿರುವಾಗ ವೃಹೂ ಉದ್ಯಮನೇ ಧಾತುವಿಗೆ ಹಿಂದಿನಂತೆ ಡ ಪ್ರತ್ಯಯ. ಉತ್ತಮ ನೀರನ್ನು ಕೊಡುವುದು ವರಾಹ. ಅಥವಾ ವರಶಬ್ದ ಉಪಪದವಾಗಿರುವಾಗ ದಾನಾರ್ಥಕ ಹು ಧಾತುವಿಗೆ ಡ ಪ್ರತ್ಯಯ. ಉತ್ತಮವಾದ ನೀರನ್ನು ಕೊಡುತ್ತದೆ, ಅಥವಾ ಮಳೆ ಸುರಿಸಲು ಸ್ವೀಕರಿಸುತ್ತದೆ ಎಂದರ್ಥ. ಪರ್ವತವೂ ಕೂಡಾ ಉತ್ಕೃಷ್ಟ ಪದಾರ್ಥವನ್ನು ಪ್ರಾಣಿಗಳಿಗೆ ಒದಗಿಸಿ ಕೊಡುತ್ತದೆ. ಅನೇಕ ಉತ್ತಮ ಪದಾರ್ಥಗಳು ಪರ್ವತದಲ್ಲಿ ದೊರೆಯುವುದರಿಂದ ಪರ್ವತವೇ ಕೊಡುತ್ತದೆ ಎಂದು ತಾತ್ಪರ್ಯ. ಉತ್ತಮವಾದ ಆಹಾರ ಇದರಲ್ಲಿದೆ, ಹಂದಿಯಂತೆ ಇದೂ ಕಪ್ಪಾದುದರಿಂದ ವರಾಹ ವಾಚ್ಯವಾಗುತ್ತದೆ. ಪರ್ವತಕ್ಕೆ ನಿಗಮ ಹುಡುಕಬೇಕು. ಮೇಘಕ್ಕೆ ಉದಾಹರಣೆ—

**"ವಿಧ್ಯದ್ವರಾಹಂ ತಿರೋ ಅದ್ರಿ ಮಸ್ತಾ" (ಋ. ಸಂ. ೧-೪-೨೮-೨) "ವರಾಹಮಿಂದ್ರ" ಏಮುಷಮ್ (ಋ. ಸಂ. ೬-೫-೩೦-೫)**

**(೧೪) ಶಂಬರಃ॥ ಶಮು-ಉಪಶಮೇ (ದಿ-ಪ-) ಅತ್ರ ಅಂತರ್ಣೀತಣ್ಯರ್ಥಃ। "ಶಮೇರ್ಬನ್" (ಉ. ೪-೯೧) ಇತಿ ಬನ್ ಪ್ರತ್ಯಯಃ। ರೋ ಮತ್ವರ್ಥೀಯಃ।**

ಉಪಶಮಾರ್ಥಕವಾದ ಶಮು ಧಾತುವು ಇಲ್ಲಿ ಣಿಜಂತಾರ್ಥವನ್ನು ಹೇಳುತ್ತದೆ. ಇದಕ್ಕೆ ಔಣಾದಿಕ ಬನ್ ಪ್ರತ್ಯಯ ಬಂದಾಗ ಶಂಬ ಎಂದಾಗುತ್ತದೆ. ಅಸುರರನ್ನು ನಾಶಮಾಡುವುದು. ಶಂಬವೆಂದರೆ ವಜ್ರಾಯುಧ. ಶದ್ಲೃ-ಶಾತನೇ ಧಾತುವಿಗೆ ಬಹುಲಗ್ರಹಣದಿಂದ ಬನ್ ಪ್ರತ್ಯಯ ಬಂದಾಗ ಪೃಷೋದರಾದಿಗಣ ಪಠಿತವಾದುದರಿಂದ ಶಮಾದೇಶ. ಪ್ರಹರ್ತೃತ್ವ (ಹೊಡೆಯುವುದು) ಸಂಬಂಧದಿಂದ ಶಂಬವುಳ್ಳದ್ದು ಶಂಬರ. ಮತ್ವರ್ಥದಲ್ಲಿ ರ ಪ್ರತ್ಯಯ. ಇಂದ್ರ ಪ್ರೇರಿತವಾದ ವಜ್ರವು ಮೇಘಗಳನ್ನು ಹೊಡೆಯುತ್ತದೆ. ಅಥವಾ ಸಂಪೂರ್ವಕವಾದ ವೃ ಧಾತುವಿಗೆ ಅ ಪ್ರತ್ಯಯ. ಧಾತು ಋಕಾರಕ್ಕೆ ಗುಣ. ಸಂವರ. ವ್ಯತ್ಯಯದಿಂದ ವಕಾರಕ್ಕೆ ಬಕಾರ. ಇದರಿಂದ ಆಕಾಶವು ಮುಚ್ಚಲ್ಪಡುತ್ತದೆ. ಪರ್ವತದಿಂದ ಭೂಮಿ ಮುಚ್ಚಲ್ಪಡುತ್ತದೆ. ಅಥವಾ ಶಂಬರ ನೀರಿನ ಹೆಸರೆಂದು ನಿರುಕ್ತದಲ್ಲಿ ಹೇಳಿರುವುದರಿಂದ ಶಂಬರವುಳ್ಳದ್ದೂ ಶಂಬರ ಅಂದರೆ ಮೇಘವಾಗುತ್ತದೆ. ಛಾಂದಸವಾದುದರಿಂದ ಮತ್ವರ್ಥದಲ್ಲಿ ಬಂದ ಪ್ರತ್ಯಯಕ್ಕೆ ಲುಕ್ ಬಂದಿದೆ. ನೀರು ಉಳ್ಳದ್ದು ಮೇಘ, ಪರ್ವತ ಎರಡೂ ಆಗುತ್ತದೆ. ಪರ್ವತಕ್ಕೆ ನಿಗಮ ಹುಡುಕಬೇಕು. ಮೇಘಕ್ಕೆ ಉದಾಹರಣೆ—

**ಉತಾದರ್ಶಮನ್ಯುನಾ ಶಂಬರಾಣಿ ವಿ (ಋ. ಸಂ-೨-೭-೧-೨) 'ಅಧೂನೋತ್ ಕಾಷ್ಠಾ ಅವ ಶಂಬರಂ ಭೇತ್ (ಋ. ಸಂ. ೧-೪.೨೫-೬)**

(೧೫) ರೌಹಿಣಮ್ ‖ ರುಹ–ಬೀಜಜನ್ಮನಿ (ಭ್ವಾ–ಪ) ಭಾವೇ ಘಞ್ । ರೋಹಃ ಆರೋಹಣಂ ಆದಿತ್ಯಪಕ್ಷ್ಯಾದೀನಾಮಸ್ಮಿನ್ನಸ್ತೀತಿ ‖

ಮೊಳಕೆ ಬರುವುದು ಮುಂತಾದ ಅರ್ಥಕೊಡುವ ರುಹಧಾತುವಿಗೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಲಘೂಪಧ ಗುಣ. ರೋಹಃ. ಸೂರ್ಯ ಪಕ್ಷಿ ಮುಂತಾದವುಗಳ ಆರೋಹಣವು (ಏರುವಿಕೆ) ಇದರಲ್ಲಿದೆ. ರೋಹವುಳ್ಳದ್ದು ಎಂಬ ಮತ್ವರ್ಥದಲ್ಲಿ 'ಅತ ಇನಿಠನೌ' ಸೂತ್ರದಿಂದ ಇನಿಪ್ರತ್ಯಯ. ರೋಹಿ ಆಕಾಶ. 'ತತ್ರಭವಃ' (ಪಾ. ಸೂ. ೪-೩-೫೩) ಸೂತ್ರದಿಂದ ಅಲ್ಲಿ ಇರುವುದು, ಉಂಟಾಗುವುದು ಎಂಬರ್ಥದಲ್ಲಿ ರೋಹಿನ್ ಶಬ್ದದಮೇಲೆ ಅಣ್‌ಪ್ರತ್ಯಯ. ಣಿತ್ತಾದುದರಿಂದ ಆದಿಯ ಅಚಿಗೆ (ಓ) ವೃದ್ಧಿ. ಣತ್ವ. ರೌಹಿಣಮ್. 'ಇನಣ್ಯನಪತ್ಯೇ' ಸೂತ್ರದಿಂದ ಪ್ರಕೃತಿಭಾವ ಬರುವುದರಿಂದ ನಾಂತದ ಟಿಲೋಪಕ್ಕೆ ಅವಕಾಶವಿಲ್ಲ. ಆಕಾಶದಿಂದ ಮೇಘವು ಹೋಗುತ್ತದೆ. ಪಕ್ಷಚ್ಛೇದವಾಗಬೇಕಾದರೆ ಮೊದಲು ಪರ್ವತವೂ ಅಲ್ಲಿ ಹೋಗುತ್ತಿತ್ತು. ಆದುದರಿಂದ ಅಲ್ಲಿರುವುದು ಎಂದು ಅರ್ಥ ಹೇಳಿದರೂ ಅಸಾಮಂಜಸ್ಯವಿಲ್ಲ.

ಅಥವಾ 'ಬಹುಲಮನ್ಯತ್ರಾಽಪಿ' (ಉ–೨–೪೬) ಸೂತ್ರದಿಂದ ರುಹಧಾತುವಿಗೆ ಇನಚ್‌ಪ್ರತ್ಯಯ ಬಂದರೆ ರೋಹಿಣ ಎಂದಾಗುತ್ತದೆ. ಇಂದ್ರನೆಂದರ್ಥ. ಅವನ ಸಂಬಂಧವಾದದ್ದು ಎಂಬರ್ಥದಲ್ಲಿ 'ತಸ್ಯೇದಮ್' ಸೂತ್ರದಿಂದ ಅಣ್ ಪ್ರತ್ಯಯ. 'ಯಸ್ಯೇತಿ ಚ' ಅಕಾರ ಲೋಪ. ಆದಿವೃದ್ಧಿ. 'ತುರಾಷಾಣ್ಮೇಘವಾಹನಃ' ಎಂದು ಅಮರ. ತನ್ನ ವಾಹನವಾದುದರಿಂದ ಇಂದ್ರನು ಮೇಘವನ್ನು ಏರುತ್ತಾನೆ. ಅಪ್ಸರಸ್ತ್ರೀಯರೊಡನೆ ಕ್ರೀಡಿಸಲು ಪರ್ವತಗಳಲ್ಲಿಯೂ ಇಂದ್ರನ ಗಮನವಿರುವುದರಿಂದ ತದೀಯತ್ವ ಪರ್ವತಕ್ಕೂ ಬರುತ್ತದೆ. ಅಥವಾ ಛೇದ್ಯ ಛೇದಕಭಾವಸಂಬಂಧದಿಂದ ಇಂದ್ರಪರ್ವತಗಳಿಗೆ ಸಂಬಂಧ ಹೇಳಬೇಕು. ಬ್ರಾಹ್ಮಣೇತಿ-ಹಾಸದಲ್ಲಿಯೂ 'ಹಿಂದೆ ಪರ್ವತಗಳು ರೆಕ್ಕೆಯುಳ್ಳವುಗಳಾದುದರಿಂದ ಪಕ್ಷಿಗಳಂತೆ ಹಾರುತ್ತಾ ಲೋಕೋಪದ್ರವ ಮಾಡುತ್ತಿದ್ದವು. ಆಗ ಇಂದ್ರನು ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕಡಿದುಹಾಕಿದನು. ಅದರಿಂದ ಈಗ ನಿಶ್ಚಲವಾಗಿದೆ' ಎಂದು ಪ್ರಸಿದ್ಧವಾಗಿದೆ. ಕ್ರಮವಾಗಿ ಉದಾಹರಣೆ—

'ಅಹನ್ನಹಿಮಭಿನದ್ರೌಹಿಣಮ್' (ಋ. ಸಂ. ೧-೭-೧೬-೨) ಯೋ ರೌಹಿಣಮಸ್ಫುರದ್ವಜ್ರಬಾಹುಃ (ಋ. ಸ. ೨-೩-೯-೨)

(೧೬) ರೈವತಃ । ರೇವತ್ಯೋ ಗಾವಃ 'ಪಶವೋ ವೈ ರೇವತೀಃ—' ಇತಿ ಶ್ರುತೇಃ । 'ತಸ್ಯೇದಮ್' (ಪಾ. ಸೂ. ೪-೩-೧೨೦) ಇತ್ಯಣ್ ‖

ಪಶುಪರ್ಯಾಯವಾಗಿ ರೇವತೀಪದ ಶ್ರುತಿಯಲ್ಲಿ ಹೇಳಿರುವುದರಿಂದ ರೇವತಿ ಎಂದರೆ ಹಸುಗಳು. ರೇವತೀ ಸಂಬಂಧವಾದದ್ದು ಎಂಬರ್ಥದಲ್ಲಿ 'ತಸ್ಯೇದಮ್' ಸೂತ್ರದಿಂದ ಅಣ್ ಪ್ರತ್ಯಯ. 'ಯಸ್ಯೇತಿಚ' ಈಕಾರಲೋಪ. ಣಿತ್ತಾದ ತದ್ಧಿತಪ್ರತ್ಯಯವಾದುದರಿಂದ ಆದಿವೃದ್ಧಿ. ರೈವತ ಎಂದಾಗುತ್ತದೆ. ಮಳೆಯನ್ನು ಎಲ್ಲಾ ಕಡೆಯಲ್ಲಿಯೂ ಸುರಿಸುವುದರಿಂದ ಹುಲ್ಲು ನೀರನ್ನು ಹುಟ್ಟಿಸುವುದರ ಮೂಲಕ ಮೇಘವು ಹಸು ಸಂಬಂಧಿಯಾಗುತ್ತದೆ. ಹೀಗೆ ಪರ್ವತವೂ ಪಶು ಸಂಬಂಧಿಯಾಗುತ್ತದೆ. ಅಥವಾ ರಯಿ (=ಧನ) ಉಳ್ಳವನು ಎಂಬರ್ಥದಲ್ಲಿ ಮತುಪ್‌ಪ್ರತ್ಯಯ. ಇದು ಪರದಲ್ಲಿರುವಾಗ "ರಯೇರ್ಮತೌ ಬಹುಲಮ್" ಸಂಪ್ರಸಾರಣ. ಎರಡು ಸಂಪ್ರಸಾರಣ ಹೊಂದಲು ಯೋಗ್ಯವರ್ಣವಿರುವಾಗ ಪರಕ್ಕೆ ಮಾತ್ರ ಸಂಪ್ರಸಾರಣ ಬರುತ್ತದೆ. ಪೂರ್ವರೂಪ. ರ+ಇ+ಮತ್. ಗುಣ. ರೇಮತ್. "ಸಂಜ್ಞಾಯಾಮ್" ಸೂತ್ರದಿಂದ ಮಕಾರಕ್ಕೆ ವತ್ವ. ಪ್ರಥಮೈಕವಚನದಲ್ಲಿ ರೇವಾನ್ ಎಂದಾಗುತ್ತದೆ. ಸಕಲಧನಕ್ಕೆ ಸ್ವಾಮಿಯಾದ ಇಂದ್ರನೆಂದರ್ಥ. ಅವನ

ಸಂಬಂಧವಾದದ್ದು ಎಂದು ಹಿಂದಿನಂತೆ ಅಣ್‌ಪ್ರತ್ಯಯ. ರೇವತ್ + ಅ ಎಂದಿರುವಾಗ ಆದಿವೃದ್ಧಿ. ರೈವತಃ ಎಂದಾಗುತ್ತದೆ. ಹಿಂದಿನಂತೆ ಇಂದ್ರ ಸಂಬಂಧಿತ್ವ ತಿಳಿಯಬೇಕು. ಇವೆರಡಕ್ಕೂ ಉದಾಹರಣೆ ನಿಗಮ ಹುಡುಕಬೇಕು.

**(೧೭) ಫಲಿಗಃ ॥ ಪ್ರತಿಫಲತಿ ತತ್ ಫಲಮ್ । ತದಸ್ಮಿನ್ನಸ್ತೀತಿ ಫಲಿ ಸ್ವಚ್ಛಮುದಕಮ್. ತದ್ಗಚ್ಛತ್ಯಾಧಾರ ತ್ವೇನ ಮೇಘೋ ವರ್ಷಿಷ್ಯಮಾಣಂ ಪರ್ವತೋ ಹಿ ವೃಷ್ಟಮಿತಿ ಶೇಷಃ । ಡ ಪ್ರಕರಣೇ "ಅನ್ಯೇಷ್ವಪಿ ದೃಶ್ಯತೇ" ಇತಿ ಗಮೇರ್ಡಪ್ರತ್ಯಯಃ ॥**

ಫಲವೆಂದರೆ ಪ್ರತಿಫಲಿಸುವುದೆಂದರ್ಥ. ಫಲವುಳ್ಳದ್ದು ಫಲಿ. 'ಅತ ಇನಿಠನೌ' ಮತ್ವರ್ಥದಲ್ಲಿ ಇನಿ ಪ್ರತ್ಯಯ. ನಿರ್ಮಲ ವಾದ ನೀರು ಎಂದರ್ಥ. ಆಧಾರ ರೂಪವಾಗಿ ಇದನ್ನು ಮುಂದೆ ಮಳೆ ಸುರಿಸುವುದಕ್ಕೋಸ್ಕರ ಹೊಂದುವುದು ಮೇಘ ಫಲಿಗ ವಾಗುತ್ತದೆ. ಫಲಿ ಉಪಪದವಾಗಿರುವಾಗ ಗಮ್ ಧಾತುವಿಗೆ ಡಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಅಮ್) ಲೋಪ. ನಿರ್ಮಲವಾದ ನೀರಿನಿಂದ ಪರಿಪೂರ್ಣವಾದದ್ದೆಂದರ್ಥ. ಅಥವಾ ಫಲವುಳ್ಳದ್ದು, ಸ್ನಾನಪಾನಾದಿ ಪ್ರಯೋಜನದಿಂದ ಕೂಡಿರುವುದು ಫಲಿ ನೀರು. ಅದನ್ನು ಹೊಂದಿರುವುದು ಫಲಿಗಃ.

ಮಾಧವರು ಫಲ ಧಾತುವಿಗೆ ಭೇದನ ಕ್ರಿಯಾ ಅರ್ಥ ಹೇಳುತ್ತಾರೆ. 'ಭಿಂದನ್ ಗಚ್ಛತಿ, ಫಲಸಂಯುಕ್ತಃ ಗಚ್ಛತಿ' ಎಂದು ನಿರ್ವಚನಮಾಡಿರುತ್ತಾರೆ. ಮೇಘವು ಮಳೆಗಾಲದಲ್ಲಿ ಗ್ರೀಷ್ಮದಿಂದ ಉಂಟಾದ ತಾಪವನ್ನು ಭೇದಿಸುತ್ತಾ ಹೋಗುತ್ತದೆ. ಪರ್ವತವೂ ತನ್ನ ಭಾರದಿಂದ ಭೂಮಿಯನ್ನು ಭೇದಿಸಿ ಕೆಳಗೆ ಹೋಗುತ್ತದೆ. ಅಥವಾ ಪ್ರಳಯಕಾಲದಲ್ಲಿ ತಾನೇ ನೂರಾರು ಹೋಳಾಗಿ ನಾಶ ಹೊಂದುತ್ತದೆ. 'ತ್ವಯ್ಯಾಯತ್ತಂ ಕೃಷಿಫಲಂ—' ಎಂದು ಕಾಳಿದಾಸನು ಹೇಳಿರುವಂತೆ ಕೃಷಿಫಲವು ಮೇಘಾ ಧೀನವಾದುದರಿಂದ ಫಲಸಹಿತವಾಗಿ ಹೋಗುತ್ತದೆಂದರ್ಥ. ಫಲದಶೆಯಲ್ಲಿ ಪರ್ವತವೂ ಕೂಡಾ ಸಸ್ಯಾದಿಫಲ ಸಹಿತವಾಗಿ ಹೋಗುತ್ತದೆ. ಫಲ ಧಾತುವಿಗೆ ಇನ್ ಬಂದರೆ ಫಲಿ ಎಂದಾಗುತ್ತದೆ. ಹಿಂದಿನಂತೆ ಗಮ್ ಧಾತುವಿಗೆ ಡ ಪ್ರತ್ಯಯ. ಫಲಿನಾ ಗಚ್ಛತಿ ಫಲಿಗಃ. ಉದಾಹರಣೆ—

**ವಲಂ ರುರೋಜ ಫಲಿಗಂ ರವೇಣ (ಋ. ಸಂ. ೩-೭-೨೬-೫)**

**(೧೮,) (೧೯) ಉಪರಃ, ಉಪಲಃ ॥ "ಆ ಉಪರ ಉಪಲ ಇತ್ಯೇತಾಭ್ಯಾಂ ಸಾಧಾರಣಾನಿ ಪರ್ವತ ನಾಮಭಿಃ" (ನಿರು-೨-೨೧) ಜನೇರ್ವಿಧೀಯಮಾನೋ ಡ ಪ್ರತ್ಯಯಃ ಬಾಹುಲಕಾದ್ರಮೇರ್ಭವತಿ । ಕೃದುತ್ತರ ಪದಪ್ರಕೃತಿಸ್ವರಂ ಬಾಧಿತ್ವಾ ಅವ್ಯಯ ಪೂರ್ವಪದ ಪ್ರಕೃತಿ ಸ್ವರಶ್ಚಮ್ ॥**

ಉಪರ ಉಪಲ ಶಬ್ದಗಳವರೆಗೆ ಪರ್ವತನಾಮಗಳಿಂದ ಮೇಘಕ್ಕೆ ಸಾಧಾರಣನಾಮವೆಂದು ನಿರುಕ್ತ. ಇಲ್ಲಿ ಆಙ್‌ಗೆ ಅಭಿವಿಧಿ, ಮರ್ಯಾದಾ ಎರಡು ಅರ್ಥಗಳಿವೆ. ಮರ್ಯಾದಾರ್ಥ ಸ್ವೀಕರಿಸಿದರೆ ಉಪರ ಉಪಲದವರೆಗೆ ಎಂದರೆ ಅವುಗಳನ್ನು ಬಿಟ್ಟು ಹಿಂದಿನವುಗಳು ಸಾಧಾರಣನಾಮವೆಂದಾಗುತ್ತದೆ. ಉಪಲ ಎಂದು ಒಂದೇ ಶಬ್ದ ಹೇಳದೆ ಎರಡು ಶಬ್ದಗಳನ್ನೂ ಹೇಳಿರು ವುದರಿಂದ ರಲವರ್ಣಗಳಿಗೆ ವಿಶೇಷವಿಲ್ಲವೆಂದು ಸೂಚಿತವಾಗುತ್ತದೆ. ಅದೂ ಅಲ್ಲದೆ ಅವೆರಡಕ್ಕೂ ಒಂದೇ ರೀತಿ ನಿರ್ವಚನ, ಒಂದೇ ಯೋಗಕ್ಷೇಮವೆಂದು ಅಂಗೀಕರಿಸಿ ' ಉಪರ ಉಪಲೋ ಮೇಘೋಭವತಿ " (ನಿರು. ೨-೨೧) ಎಂದೂ ಹೇಳಿರುತ್ತಾರೆ. ಉಪಲಶಬ್ದ ಪಾಷಾಣದಲ್ಲಿ ಮಾತ್ರ ಪ್ರಸಿದ್ಧವಾದುದರಿಂದ ಅದರ ಸಂಘಾತವು ಪರ್ವತವಾಗುವುದರಿಂದ ಅಲ್ಲಿ ಮಾತ್ರ ಉಪಲಶಬ್ದ ಪ್ರಸಿದ್ಧವಾಗಿದೆಯೆಂದು, ಮೇಘದಲ್ಲಿಯೂ ಈ ಶಬ್ದ ಪ್ರಯೋಗವಿದೆಯೆಂದು ತಿಳಿಸಲು ಮೇಘಃ ಎಂದಿರುತ್ತಾರೆ. ಪರ್ವತಾರ್ಥ

ದಲ್ಲಿ ಉಪ=ಉಪೇತ್ಯ=ಹತ್ತಿರಕ್ಕೆ ಬಂದು ರ=ರಮಂತೇ=ವಿಹರಿಸುತ್ತವೆ., ಪರ್ವದಲ್ಲಿ ಮೇಘಗಳು ಬಂದು ವಿಶ್ರಮಿಸುತ್ತವೆ. ಎಂದರ್ಥವಾಗುತ್ತದೆ. ಮೇಘ ಪಕ್ಷದಲ್ಲಿ 'ನೀರು ಇವರಲ್ಲಿ ಬಂದು ಸೇರುತ್ತದೆ' ಎಂದರ್ಥವಾಗುತ್ತದೆ. ಉಪ ಉಪಸರ್ಗ ಪೂರ್ವದಲ್ಲಿರುವಾಗ ರಮ್‌ಧಾತುವಿಗೆ ಬಹುಲಗ್ರಹಣದಿಂದ ಜನ್‌ಧಾತುವಿಗೆ ವಿಹಿತವಾದ ಡಪ್ರತ್ಯಯ ಬರುತ್ತದೆ ಟಿಲೋಪ (ಅಮ್) ಉಪರಃ. ಕೃದಂತವಾದ ಉತ್ತರಪದವಿದ್ದರೂ ಕೃದುತ್ತರಪದಪ್ರಕೃತಿಸ್ವರವನ್ನು ಬಾಧಿಸಿ ಅವ್ಯಯಪೂರ್ವಪದಪ್ರಕೃತಿ ಸ್ವರ ಬರುತ್ತದೆ. 'ಜಲವಾಪನಾತ್ ಉಪರಃ.' ಎಂದು ಮಾಧವರು ನಿರ್ವಚನಮಾಡಿರುತ್ತಾರೆ. ಆಗ ವಪ್ ಧಾತುವಿಗೆ ಕೃದರಾದಿಪಾಠದಿಂದ ಅರನ್ ಪ್ರತ್ಯಯ. ವಪ್+ಅರ. ಬಹುಲಗ್ರಹಣದಿಂದ ವಕಾರಕ್ಕೆ ಸಂಪ್ರಸಾರಣ ಪೂರ್ವರೂಪ. ನೀರುಕೊಡುವುದೆಂದರ್ಥ. ಶ್ರೀ ಭೋಜದೇವನು 'ಪೃಷಿಪಟಿವೇವಿ—' ಸೂತ್ರದಿಂದ ವಪ್‌ಧಾತುವಿಗೆ ಅಲಚ್ ಪ್ರತ್ಯಯ ಹೇಳಿರುತ್ತಾನೆ. ವ್ಯುತ್ಪತ್ತಿ ತಿಳಿಯದಿರುವುದರಿಂದ ಅವಗ್ರಹ ಮಾಡಿಲ್ಲ. ರಲಗಳಿಗೆ ಭೇದವಿಲ್ಲದಿರುವುದರಿಂದ ಎರಡಕ್ಕೂ ಒಂದೇ ನಿರ್ವಚನ. ಪರ್ವತಕ್ಕೆ ಉದಾಹರಣೆ ಹುಡುಕಬೇಕು. ಮೇಘನಾಮಕ್ಕೆ ಉದಾಹರಣೆ—

**ವಿಷ್ಣಾಮುಪರಾ ಉದಾಯನ್ (ಋ. ಸಂ. ೭-೭-೧೯-೩) ॥**

**(೨೦) ಚಮಸಃ । ಚಮು- ಅದನೇ (ಭ್ವಾ-ಪ-) 'ಅತ್ಯವಿಚಮಿ-' (ಉ. ೩-೧೧೩) ಇತ್ಯಾದಿನಾ ಅಸಚ್ ॥**

ಭಕ್ಷಣಾರ್ಥಕವಾದ ಚಮ್ ಧಾತುವಿಗೆ ಔಣಾದಿಕ ಅಸಚ್ ಪ್ರತ್ಯಯ. ಮಳೆಯಿಂದ ಸುರಿದ ನೀರನ್ನು ಶೇಖರಿಸುತ್ತದೆ. ಅಥವಾ ಇದರಲ್ಲಿರುವ ಪದಾರ್ಥಗಳು ಪ್ರಾಣಿಗಳಿಂದ ತಿನ್ನಲ್ಪಡುತ್ತದೆ ಇತ್ಯಾದ್ಯರ್ಥವಾಗುತ್ತದೆ. ನಿಗಮ ಹುಡುಕಬೇಕು.

**(೨೧) ಅಹಿಃ ॥ ಇಣ್-ಗತೌ (ಅದಾ-ಪ-) "ಇನ್ ಸರ್ವಧಾತುಭ್ಯಃ" (ಉ-೪-೧೧೮) ಇತೀನ್ ಪ್ರತ್ಯಯಃ । ಗುಣಾಯಾದೇಶೌ । ಯಕಾರಸ್ಯ ಹಕಾರೋ ವ್ಯತ್ಯಯೇನ । ಏತ್ಯಂತರಿಕ್ಷೇ ॥**

ಗತ್ಯರ್ಥಕವಾದ ಇಣ್ ಧಾತುವಿಗೆ ಇನ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ 'ಸಾರ್ವಧಾತು—' ಸೂತ್ರದಿಂದ ಧಾತುವಿಗೆ ಗುಣ. ಏ+ಇ. ಅಯಾದೇಶ. ಅಯಿ ಎಂದಿರುವಾಗ ವ್ಯತ್ಯಯದಿಂದ ಯಕಾರಕ್ಕೆ ಹಕಾರಾದೇಶ. ಆಕಾಶದಲ್ಲಿ ಹೋಗುವುದು. ಗತ್ಯರ್ಥಕವಾದ ಅಯ ಧಾತುವಿಗೆ ಇನ್ ಬಂದು ವ್ಯತ್ಯಯದಿಂದ ಹಕಾರಾದೇಶ ಹೇಳಿದರೂ ಇದೇ ರೂಪವಾಗುತ್ತದೆ. ಅಥವಾ ಗತ್ಯರ್ಥಕವಾದ ಅಹಿ ಧಾತುವಿಗೆ ಇನ್ ಪ್ರತ್ಯಯ ಬಂದರೆ ಅಹಿ ಎಂದಾಗುತ್ತದೆ. ಧಾತು ಇದಿತ್ತಾದುದರಿಂದ ನುಮಾಗಮ [illegible] ಇದ್ದರೂ ಬಹುಲಗ್ರಹಣದಿಂದ ಅದಕ್ಕೆ ಲೋಪ. ಅಥವಾ ಆಗಮಶಾಸ್ತ್ರ ಅನಿತ್ಯವೆಂದುದರಿಂದ ಇಲ್ಲಿ ನುಮಾಗಮ ಬರುವುದಿಲ್ಲ.

ಅಥವಾ ಅಪ-ವ್ಯಾಪ್ತೌ ಧಾತು. ಸ್ವಾದಿ, ಪರಸ್ಮೈಪದೀ, ಹಿಂದಿನಂತೆ ಇನ್‌ಪ್ರತ್ಯಯಾದಿ ಆಪ್ನೋತಿ ಅಂತರಿಕ್ಷಮ್. ಆಕಾಶವನ್ನು ಅಥವಾ ದಿಕ್ಕನ್ನು ಸೂಚಿಸುವುದು ಎಂದರ್ಥ. ಅಥವಾ ಹನ-ಹಿಂಸಾಗತ್ಯೋಃ ಧಾತು ಆಙ್ ಉಪಸರ್ಗ ಪೂರ್ವದಲ್ಲಿರುವಾಗ 'ಆಙಿ ಶ್ರಿಹನಿಭ್ಯಾಂ ಹ್ರಸ್ವಶ್ಚ (ಉ-೪-೧೩೩) ಸೂತ್ರದಿಂದ ಇಣ್‌ಪ್ರತ್ಯಯ. ಇದಕ್ಕೆ ಡಿತ್ವಾತಿದೇಶವಿರುವುದರಿಂದ ಧಾತುವಿನ ಟಿಗೆ (ಅನ್) ಲೋಪ. ಆ ಸಮಂತಾತ್ ಹಂತಿ. ಸುತ್ತಲೂ ಉಷ್ಣವನ್ನು ನಾಶಮಾಡುತ್ತದೆ ಆಕಾಶಕ್ಕೆ ಹೋಗುತ್ತದೆ. ಅಥವಾ ಕೇವಲ ಹನ್ ಧಾತುವಿಗೆ ಇಣ್‌ಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಹಿಃ ಎಂದಾಗುತ್ತದೆ. ಹಿಂಸಕವೆಂದರ್ಥ. ನಹಿಃ, ಅಹಿಃ. ನಞ್ ತತ್ಪುರುಷಸಮಾಸ. ಅಹಿಂಸಕವಾದದ್ದು. ಯಾವಾಗಲೂ ಲೋಕಕ್ಕೆ ಮಳೆ ಮುಂತಾದವುಗಳನ್ನು ಕೊಡುವುದರಿಂದ ಹಿಂಸೆಮಾಡುವುದಿಲ್ಲ. ಮಾಧವರೂ ಅಹಿಸದಕ್ಕೆ ಸಕಲ ಇಷ್ಟಾರ್ಥವನ್ನು ಕೊಡುವುದೆಂದು ವ್ಯಾಖ್ಯಾನಮಾಡಿರುತ್ತಾರೆ. ಈ ಅಹಿಶಬ್ದವು ಅಸುರವಾಚಕವಾದರೆ ಆದ್ಯುದಾತ್ತವಾಗುತ್ತದೆ. ನದೀನಾಮವಾದರೆ ಅಂತೋದಾತ್ತವಾಗಿರುತ್ತದೆ. ಕ್ರಮವಾಗಿ ಉದಾಹರಣೆ—

**ಯದಿಂದ್ರಾಹನ್ ಪ್ರಥಮಜಾಮಹೀನಾಮ್ (ಋ. ಸಂ. ೧-೨-೩೬-೪) 'ಇಂದ್ರೋದಕ್ಷಂ ಪರಿ ಜಾನಾದ-ಹೀನಾಮ್ (ಋ. ಸಂ.-೮-೭-೨೯-೬)** ಇಲ್ಲಿ ಮೇಘಪರವಾಗಿಯೇ ಸ್ಕಂದಸ್ವಾಮಿಯು ವ್ಯಾಖ್ಯಾನಮಾಡಿರುತ್ತಾನೆ.

**ದಾಸಪತ್ನೀರಹಿಗೋಪಾ ಅತಿಷ್ಠನ್ (ಋ. ಸಂ- ೧-೨-೩೮-೧)**

**(೨೨) ಅಭ್ರಮ್ । ಅಭ್ರ-ಗತೌ (ಭೂ-ಪ) ಪಚಾದ್ಯಚ್ । ಅಭ್ರಂತ್ಯಂತರಿಕ್ಷೇ । ಆಪೋರಾತೀತಿ ವಾ ಅಪ್‌ಶಬ್ದೇ ಕರ್ಮಣ್ಯುಪಪದೇ ರಾತೇರ್ದಾನಾರ್ಥಾತ್ 'ಆತೋಽನುಪಸರ್ಗೇಕಃ' (ಪಾ- ಸೂ-೩-೨-೩) ಪಕಾರಸ್ಯ ಭಕಾರೋ ವ್ಯತ್ಯಯೇನ ॥**

ಗತ್ಯರ್ಥಕವಾದ ಅಭ್ರ ಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್ ಪ್ರತ್ಯಯ. ಆಕಾಶದಲ್ಲಿ ಸಂಚರಿಸುವುದು ಅಭ್ರ. ಅಥವಾ ಕರ್ಮವಾಚಕವಾದ ಅಪ್ ಶಬ್ದ ಉಪಪದವಾಗಿರುವಾಗ ದಾನಾರ್ಥಕ ರಾ ಧಾತುವಿಗೆ ಕ ಪ್ರತ್ಯಯ. 'ಆತೋ ಲೋಪಃ—' ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ. ಅಪ್+ರ. ವ್ಯತ್ಯಯದಿಂದ ಪಕಾರಕ್ಕೆ ಭಕಾರಾದೇಶ. ಆಪಃ ರಾತಿ. ಇತಿ ಅಭ್ರಮ್. ನೀರನ್ನು ಕೊಡುವುದು. ಕೆಲವರು 'ನ ಭ್ರಂಸ್ಯತ್ಯಸ್ಮಾದಾಪೋ ಅಭ್ರಾಣಿ ನಾನ್ಯತಃ' ಎಂದು ವ್ಯಾಖ್ಯಾನ ಮಾಡುತ್ತಾರೆ. ಮಳೆಗಾಲವನ್ನು ಬಿಟ್ಟರೆ ಬೇರೆ ಸಮಯದಲ್ಲಿ ಇದರಿಂದ ನೀರು ಸುರಿಯುವುದಿಲ್ಲವೆಂದರ್ಥ. ಆಗ ಭ್ರಸ, ಭ್ರಂಸ ಅಧಃ ಪತನೇ ಧಾತು. ಇದಕ್ಕೆ ನಞ್ ಪೂರ್ವದಲ್ಲಿರುವಾಗ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡ ಪ್ರತ್ಯಯ' ಡಿತ್ತಾದುದರಿಂದ ಧಾತುವಿನ ಟಿಗೆ (ಅಸ್) ಲೋಪ. ಅ+ಭ್ರ್+ಅ. ಅಭ್ರಮ್. ಭ್ರಾಜೃ-ದೀಪ್ತೌ. ಈ ಧಾತುವಿಗೂ ನಞ್ ಪೂರ್ವದಲ್ಲಿರುವಾಗ ಡಪ್ರತ್ಯಯ ಬಂದರೆ ಅಭ್ರ ಎಂದಾಗುತ್ತದೆ. ವರ್ಷಾಕಾಲದಲ್ಲಿ ಮಲಿನವರ್ಣವಿರುವುದರಿಂದ ಪ್ರಕಾಶಿಸುವುದಿಲ್ಲವೆಂದರ್ಥ. ಉದಾಹರಣೆ—

**ಪ್ರಾಣಃ ಪಿನ್ವ ವಿದ್ಯುದಭ್ರೇವ ರೋದಸೀ (ಋ. ಸಂ-೭-೩-೧-೩) 'ಉದಭ್ರಾಣೀವ ಸ್ತನಯನ್ನಿಯರ್ತಿ' (ಋ. ಸಂ. ೪-೭-೧೮-೨) ॥**

**(೨೩) ವಲಾಹಕಃ ॥ ಬಲಾಕಾದಿಭಿರ್ಹೀಯತೇ ಗಮ್ಯತೇ ಇತಿ ಬಲಾಹಕಃ, ವಾರಿವಾಹಕೋ ವಾ, ಪೃಷೋದರಾದಿತ್ವಾತ್ ವರ್ಣಾಗಮಾದಿನಾ ಸಾಧುಃ ॥ ವರಾಹಶಬ್ದಾದ್ವಾ "ಸಂಜ್ಞಾಯಾಂ ಕನ್" (ಪಾ. ಸೂ. ೫-೩-೭೫) ರೇಫಸ್ಯ ಲಕಾರಃ ॥**

ಬೆಳ್ಳಕ್ಕಿಗಳಿಂದ (ಕೊಕ್ಕರೆ) ಹೊಂದಲ್ಪಡುತ್ತದೆ. ವರ್ಷಾಕಾಲದಲ್ಲಿ ಮೇಘದ ಕೆಳಗೆ ಸಾಲಾಗಿ ಹೋಗುತ್ತವೆ. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ವರ್ಣಾಗಮ ಬಂದು ಬಲಾಹಕ ಎಂದಾಗಿದೆ. ಅಥವಾ ವರಾಹದಂತೆ ಕಪ್ಪಾದುದರಿಂದ ವರಾಹಸಾಮ್ಯದಿಂದ ವರಾಹವಾಗುತ್ತದೆ. ಸಂಜ್ಞೆ ತೋರುವುದರಿಂದ ಕನ್ ಬಂದಿದೆ. ಇದಕ್ಕೆ ಉದಾಹರಣೆ ನಿಗಮ ಹುಡುಕಬೇಕು.

**(೨೪) ಮೇಘಃ ॥ ಮಿಹ-ಸೇಚನೇ । (ಭೂ-ಪ-) ಪ್ರಚಾದ್ಯಚ್ । ನ್ಯಙ್ಕ್ವಾದಿತ್ವಾತ್ ಕುತ್ವಮ್ । ಮೇಹತಿ ಸಿಂಚತಿ ವರ್ಷಣಾದ್ಭೂಮಿಂ ಮೇಘಃ ॥**

ಸೇಚನಾರ್ಥಕವಾದ ಮಿಹ್ ಧಾತುವಿಗೆ ಪಚಾದಿಗಣ ಪಠಿತವಾದುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. "ನ್ಯಙ್ಕ್ವಾದೀನಾಂ ಚ" ಸೂತ್ರದಿಂದ ಹಕಾರಕ್ಕೆ ಕುತ್ವ. ಪ್ರಯತ್ನಸಾಮ್ಯದಿಂದ ಹಕಾರಕ್ಕೆ ಘಕಾರಾದೇಶ. ಮಳೆಯಿಂದ ಭೂಮಿಯನ್ನು ತೋಯಿಸುವುದು ಮೇಘ ಉದಾಹರಣೆ—

ವೃಷಾ ವಾಂ ಮೇಘೋ ವೃಷಣಾ ಪೀಪಾಯ (ಋ-ಸಂ-೨-೪-೨೬.೩) "ಅಸ್ಮಿನ್ ಮೇಘೇ ವಿದ್ಯುತ್"।

(೨೫) ದೃತಿಃ । ದೃ-ವಿದಾರಣೇ (ಕ್ರ್ಯಾ-ಪ) "ದೃಣಾತೇರ್ಹ್ರಸ್ವಶ್ಚ" (ಉ-೪-೧೭೮) ಇತಿ ತಿ ಪ್ರತ್ಯಯ ಹ್ರಸ್ವವಿಧಾನಸಾಮರ್ಥ್ಯಾತ್ ಗುಣೋ ನ ಭವತಿ। ದೀರ್ಯತೇ ಇಂದ್ರೇಣ ॥

ಸೀಳುವುದು ಎಂಬರ್ಥ ಕೊಡುವ ದೃಧಾತುವಿಗೆ ಔಣಾದಿಕ ತಿಪ್ರತ್ಯಯ. ಹ್ರಸ್ವವಿಧಾನ ಮಾಡಿರುವುದರಿಂದ ಗುಣ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಗುಣ ಹೇಳುವುದಾದರೆ ಹ್ರಸ್ವವಿಧಾನ ಮಾಡಿರುವುದು ವ್ಯರ್ಥವಾಗುತ್ತದೆ. ಇಂದ್ರನಿಂದ ಸೀಳಲ್ಪಡುವುದು ದೃತಿ. ಅಥವಾ ತಿದಿಯಂತೆ ನೀರಿನ ಆಧಾರವಾಗಿದ್ದು ಸುರಿಸುವುದು. ಉದಾಹರಣೆ—

ದೃತಿಂ ಸುಕರ್ಷ ವಿಷಿತಂ ನ್ಯಞ್ಚಮ್ (ಋ. ಸಂ. ೪-೪-೨೮-೨) "ಈಶಾನೋ ವಿಸೃಜತ್ ದೃತಿಮ್" ॥

(೨೬) ಓದನಃ। ಉದಕಶಬ್ದೇ ಉಪಪದೇ ದದಾತೇಃ 'ಕೃತ್ಯಲ್ಯುಟೋ ಬಹುಲಮ್'[ಪಾ.ಸೂ. ೩-೪.೨೨೩ ಇತಿ ಕರ್ತರಿಲ್ಯುಟ್ । ಓದನಃ ಉದಕದಾತೇತ್ಯರ್ಥಃ ॥

ಉದಕಶಬ್ದ ಉಪಪದವಾಗಿರುವಾಗ ದಾನಾರ್ಥಕವಾದ ದಾ ಧಾತುವಿಗೆ ಕರ್ತ್ರರ್ಥದಲ್ಲಿ ಲ್ಯುಟ್‌ಪ್ರತ್ಯಯ. ಯು ಉಳಿದಾಗ ಅದಕ್ಕೆ ಅನಾದೇಶ. ಪೃಷೋದರಾದಿಪಠಿತವಾದುದರಿಂದ ಲೋಪಾದಿ. ನೀರು ಕೊಡುವವನು ಓದನ. ಅಥವಾ ಉನ್ದೀ-ಕ್ಲೇದನೇ ಧಾತು. ಇದಕ್ಕೆ 'ಉನ್ದೇರ್ನಲೋಪಶ್ಚ' ಸೂತ್ರದಿಂದ ಯುಚ್‌ಪ್ರತ್ಯಯ. ಅನಾದೇಶ ಧಾತುವಿನ ನಕಾರಕ್ಕೆ ಲೋಪ. ಆಗ ಲಘೂಪಧಗುಣ. 'ಉನತ್ತಿ ವನಭೂಮಿಮ್' ಮಳೆ ನೀರಿನಿಂದ ವನಪ್ರದೇಶವನ್ನು ವೃದ್ಧಿ ಮಾಡುವುದು ಮೇಘ. ಉದಾಹರಣೆ—

ಧಾರಯತ್ ಪಕ್ವಮೋದನಮ್ (ಋ. ಸಂ. ೬-೫-೩೦-೧)

(೨೭) ವೃಷನ್ಧಿಃ ॥ ವೃಷ-ಸೇಚನೇ. (ಭೂ. ಪ.) 'ಕನಿನ್ಯುವೃಷೀತ್ಯಾದಿನಾ ಕನಿನ್, ವೃಷಾ । ಶತ್ರುಜಯಾದಿಸಾಧನತ್ವಾತ್ ಕಾಮಾನಾಂ ವರ್ಷಿತಾ ಯಜ್ಞಃ। ಸನ್ನಿಧೀಯತೇಽಸ್ಮಿನ್ನಿಂದ್ರೇಣ ಪ್ರಹಾರಕಾಲೇ. 'ಕರ್ಮಣ್ಯಧಿಕರಣೇ ಚ' (ಪಾ. ಸೂ. ೩-೩-೯೩) ಇತಿ ಕಿ ಪ್ರತಯಃ ನಲೋಪಾಭಾವಶ್ಛಾಂದಸಃ ॥

ಸೇಚನಾರ್ಥಕವಾದ ವೃಷ್‌ಧಾತುವಿಗೆ ಔಣಾದಿಕ ಕನಿನ್‌ಪ್ರತ್ಯಯ ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ ವೃಷನ್ ನಾಂತಪದವಾಗುತ್ತದೆ. ಶತ್ರುಜಯಾದಿ ಫಲಗಳಿಂದ ಅನೇಕ ಇಷ್ಟಾರ್ಥವನ್ನು ಕೊಡುವುದು ವೃಕ್ಣಾ=ಯಜ್ಞ. ಪ್ರಹರಣಕಾಲದಲ್ಲಿ ಇಂದ್ರನಿಂದ ಸನ್ನಿಧಾನ ಹೊಂದಲ್ಪಡುತ್ತದೆ ಎಂಬರ್ಥದಲ್ಲಿ ವೃಷನ್ ಎಂಬ ಅಧಿಕರಣವಾಚಕಪದವು ಉಪಪದವಾಗಿರುವಾಗ ಧಾತುವಿಗೆ ಕಿಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ. ವೃಷನ್‌ಧಿ ಎಂದಿರುವಾಗ ಛಾಂದಸವಾದುದರಿಂದ ನಲೋಪ ಬರುವುದಿಲ್ಲ. ವಿಷನ್ಧಿಃ ಎಂದೂ ಕೆಲವು ಕೋಶಗಳಲ್ಲಿ ದೃಷ್ಟವಾಗಿದೆ. ಆಗ ವಿಷವೆಂದರೆ ನೀರು. ಅದು ಇದರಲ್ಲಿ ಸೇರಿರುತ್ತದೆ ಎಂದರ್ಥಮಾಡಬೇಕು. ಆಗ ಛಾಂದಸವಾಗಿ ಮುಮಾಗಮ ಬಂದಿದೆಯೆಂದು ತಿಳಿಯಬೇಕು. ಉದಾಹರಣೆ—

ವೃಷಾ ವೃಷನ್ಧಿಂ ಚತುರಶ್ರಿಮಸ್ಯನ್ (ಋ. ಸಂ. ೩-೬-೭-೨) ಇಲ್ಲಿ ವೃಷನ್ಧಿಯೆಂಬುದು ಮೇಘನಾಮವೇ ಎಂದು ಸಂದೇಹವಿದೆ.

(೨೮) ವೃತ್ರಃ ॥ ವೃಣೋತೇರಾಚ್ಛಾದನಾರ್ಥತ್ವಾತ್ 'ಅಮಿಚಿಮಿಮಿದಿ ಶಂಸಿಭ್ಯಃ ಕ್ರನ್' (ಉ. ४-೧೫೯) ಇತಿ ಕ್ರನ್ ಪ್ರತ್ಯಯೋ ಬಾಹುಲಕಾದ್‌ಭವತಿ ॥ ಆಚ್ಛಾದಯತಿ ಹ್ಯಸೌ ಕೃತ್ಸ್ನಂ ನಭಃ ॥

ಆಚ್ಛಾದನಾರ್ಥಕವಾದ ವೃ ಧಾತುವಿಗೆ ಬಹುಲಗ್ರಹಣದಿಂದ ಔಣಾದಿಕ ಕ್ತ್ರನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಮೇಘವು ವರ್ಷಾಕಾಲದಲ್ಲಿ ಸಂಪೂರ್ಣ ಆಕಾಶವನ್ನು ಮುಚ್ಚುವುದರಿಂದ ವೃತ್ರನೆಂದಾಗುತ್ತದೆ. ವೃತು ಧಾತುವಿಗೆ ಗತ್ಯರ್ಥದಲ್ಲಿ "ಸ್ಫಾಯಿತಂಚಿ ವಂಚಿ—" (ಉ. ಸೂ. ೨-೧೨) ಸೂತ್ರದಿಂದ ರಕ್ ಪ್ರತ್ಯಯ. ಇದೂ ಕಿತ್ತಾದುದರಿಂದ ಗುಣ ವಿಲ್ಲ. ವೃತ್+ರ. ಸಂಪೂರ್ಣಾಕಾಶದಲ್ಲಿ ಹೋಗುತ್ತದೆ. ವೃದ್ಧ್ಯರ್ಥಕವಾದ ವೃಧ್ ಧಾತುವಿಗೆ ಬಹುಲಗ್ರಹಣದಿಂದ ಕ್ತ್ರನ್ ಪ್ರತ್ಯಯ. ವ್ಯತ್ಯಯದಿಂದ ಧಕಾರಕ್ಕೆ ತಕಾರಾದೇಶ. ವರ್ಷಾಕಾಲದಲ್ಲಿ ಅಭಿವೃದ್ಧವಾಗುತ್ತದೆಂದರ್ಥ. ಬ್ರಾಹ್ಮಣದಲ್ಲಿ ಈ ಮೂರ ಅರ್ಥಗಳೂ ಹೇಳಿದೆ. ಉದಾಹರಣೆ—

ವೃತ್ರಾಯ ವಜ್ರಮೀಶಾನಃ ಕಿಯೇಧಾಃ (ಋ. ಸಂ. ೧-೪-೨೮-೨) ಅಹನ್ಯದ್ ವೃತ್ರಸ್ಯರ್ಯಂ ವಿವೇರಪಃ (ಋ. ಸಂ. ೮-೮-೪-೧) ॥

**(೨೯) ಅಸುರಃ ॥ ಅಸು-ಕ್ಷೇಪಣೇ। (ದಿ-ಪ-) "ಅಸಿ ಮಸೋರುರನ್" (ಉ. ೧-೮೨, ೪೩) ಇತಿ ಉರನ್ ಪ್ರತ್ಯಯಃ, ಅಸ್ಯತಿ ಕ್ಷಿಪತಿ ಭೂಮೌ ಜಲಮ್ ॥**

ಕ್ಷೇಪಣಾರ್ಥಕವಾದ ಅಸ್‌ಧಾತುವಿಗೆ ಕರ್ತ್ರರ್ಥದಲ್ಲಿ ಔಣಾದಿಕ ಉರನ್‌ಪ್ರತ್ಯಯ. ಅಸ್+ಉರ. ಭೂಮಿಯಲ್ಲಿ ನೀರನ್ನು ಎರಚುತ್ತದೆ ಎಂದರ್ಥ. ಅಸ-ಭುವಿ. ಇದಕ್ಕೆ 'ಶೃಸ್ವೃಸ್ನಿಹಿ'—ಸೂತ್ರದಿಂದ ಉಪ್ರತ್ಯಯ ಅಸುಃ. 'ಶರೀರೇ ತಿಷ್ಠತೀತಿ ಅಸುಃ' ಶರೀರದಲ್ಲಿರುವುದು ಪ್ರಾಣವೆಂದರ್ಥ. 'ಪಾನೀಯಂ ಪ್ರಾಣಿನಾಂ ಪ್ರಾಣಾಃ' ಇತ್ಯಾದಿ ವಚನಗಳಿಂದ ನೀರು ಪ್ರಾಣಿಗಳಿಗೆ ಪ್ರಾಣಸ್ಥಾನದಲ್ಲಿದೆ. ಅಸುಂ ರಾತಿ ಇತಿ ಅಸುರಃ. ಅಸು ಉಪಪದವಾಗಿರುವಾಗ ರಾಧಾತುವಿಗೆ 'ಆತೋನುಪ— ಸೂತ್ರದಿಂದ ಕಪ್ರತ್ಯಯ. ಆಲೋಪ. ಅಸುರಃ. ನೀರನ್ನು ಕೊಡುವವನು. ಅಥವಾ ಮತ್ವರ್ಥದಲ್ಲಿ ರಪ್ರತ್ಯಯ. ನೀರಿನಿಂದ ಕೂಡಿರುವುದು ಎಂದರ್ಥ.

ಅಥವಾ ಗತಿ, ದೀಪ್ತಿ, ಆದಾನ ಈ ಮೂರು ಅರ್ಥಗಳನ್ನು ಕೊಡುವ ಅಸ ಧಾತುವಿಗೆ ಹಿಂದಿನಂತೆ ಉರನ್ ಪ್ರತ್ಯಯ. ಅಂತರಿಕ್ಷದಲ್ಲಿ ಹೋಗುತ್ತದೆ, ತಾನಾಗಿ ಪ್ರಕಾಶಿಸುತ್ತದೆ, ಮಳೆಗರೆಯಲು ನೀರನ್ನು ಸ್ವೀಕರಿಸುತ್ತದೆ ಎಂದರ್ಥ. ಅಥವಾ ಸುರ-ಐಶ್ವರ್ಯೇ ಧಾತು. 'ಇಗುಪಧಜ್ಞಾಪ್ರೀಕಿರಃ ಕಃ' (ಪಾ-ಸೂ-೩-೧-೧೩೫) ಸೂತ್ರದಿಂದ ಇಗುಪಧಧಾತುವಾದುದ ರಿಂದ ಕಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. "ಸುರತೀತಿ ಸುರಃ ಈಶ್ವರಃ" ಸ್ವತಂತ್ರನೆಂದರ್ಥ. 'ನ ಸುರಃ, ಅಸುರಃ' ಅಸ್ವತಂತ್ರವೆಂದರ್ಥ. ಮೇಘವು ಇಂದ್ರಾದಿಗಳ ಅಧೀನವಾಗಿದೆ. ಉದಾಹರಣೆ—

**ದಿವಃ ಶ್ಯೇನಾಸೋ ಅಸುರಸ್ಯ ನೀಲಯಃ (ಋ. ಸಂ. ೮-೪-೨೪-೧) "ದೀರ್ಘಾಧಿಯೋ ರಕ್ಷಮಾಣಾ ಅಸುರ್ಯಮ್" (ಋ. ಸಂ. ೨-೭-೬-೪)**

**(೩೦) ಕೋಶಃ ॥ ಕ್ರೋಶತೇಃ ಶಬ್ದಕರ್ಮಣಃ (ಭೂ-ಪ-) ಪಚಾದ್ಯಚಿ ಪೃಷೋದರಾದಿತ್ವಾತ್ ರೇಫ ಲೋಪಃ, ಕೋಶಃ ॥ ಮೇಘೋ ಹಿ ಗರ್ಜಿತಲಕ್ಷಣಂ ಶಬ್ದಂ ಕರೋತಿ ॥**

ಶಬ್ದವ್ಯಾಪಾರಾರ್ಥಕ ಕ್ರುಶ್ ಧಾತುವಿಗೆ ಪಚಾದಿಗಣ ಪಠಿತವಾದುದರಿಂದ ಅಚ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಪೃಷೋದರಾದಿಗಣ ಪಠಿತವಾದುದರಿಂದ ಧಾತುವಿನ ರೇಫಕ್ಕೆ ಲೋಪ ಕೋಶಃ. ಮೇಘವು

ಘರ್ಜನೆರೂಪವಾದ ಶಬ್ದವನ್ನು ಮಾಡುತ್ತದೆ. ವೃದ್ಧ್ಯರ್ಥಕವಾದ ಕುಪ್ ಧಾತುವಿಗೆ ಹಿಂದಿನಂತೆ ಅಚ್ ಪ್ರತ್ಯಯ. ಗುಣ. ಪಕಾರಕ್ಕೆ ಶಕಾರಾದೇಶ. ನೀರನ್ನು ಹೆಚ್ಚಿಸುವುದು ಎಂದರ್ಥ. ಮಾಧವರು ಕ್ರುಶ ಧಾತುವಿಗೆ ಛಾದನಾರ್ಥ ಹೇಳಿ ಆಕಾಶವನ್ನು ಮುಚ್ಚುವುದು ಕೋಶವೆಂದು ಹೇಳಿರುತ್ತಾರೆ. ನೀರಿಗೆ ಕೋಶಸ್ಥಾನವಾದುದರಿಂದ ಜಲಕೋಶ ಮೇಘವೆಂದು ಕೆಲವರ ಮತ. ಭೋಜದೇವನು ಶಬ್ದಾರ್ಥಕವಾದ ಕು ಧಾತುವಿಗೆ 'ಕುದಾಪಾಭ್ಯಃ ಶಃ' ಸೂತ್ರದಿಂದ ಶ ಪ್ರತ್ಯಯ ಹೇಳಿ ಶಬ್ದಮಾಡುವುದು ಕೋಶವೆಂದು (ಗರ್ಜಿಸುವುದು) ವ್ಯಾಖ್ಯಾನ್ನಮಾಡಿರುತ್ತಾನೆ. ಉದಾಹರಣೆ—

**ದಿವ್ಯಾ ನ ಕೋಶಾಸೋ ಅಭ್ರವರ್ಷಾಃ (ಋ. ಸಂ. ೭-೩-೨೪-೬) "ಮಹಾಂತಂ ಕೋಶಮುದಚಾ ನಿ ಷಿಂಚ (ಋ. ಸಂ. ೪-೪-೨೮-೩)**

ಹೀಗೆ ಮೂವತ್ತು ಮೇಘದ ನಾಮಗಳು.

## ಅಥ ಮೇಘನಾಮಾನಿ

ಮೇಘಃ ಕಸ್ಮಾನ್ಮೇಹತೀತಿ ಸತಃ ||

**ಮೇಘ** ಶಬ್ದವು ನೀರನ್ನು ಸಿಂಪಡಿಸು ಎಂಬರ್ಥವಿರುವ **ಮೇಹತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಮೇಘವು ನೀರನ್ನು ಸುರಿಸುವುದು ಪ್ರಸಿದ್ಧವಾಗಿದೆ.

ಆ ಉಪರ ಉಪಲ ಇತ್ಯೇತಾಭ್ಯಾಂ ಸಾಧಾರಣಾನಿ ಪರ್ವತ-
ನಾಮಭಿಃ ||

**ಉಪರ, ಉಪಲ** ಎಂಬ ಎರಡುಪದಗಳೂ ಪರ್ವತದ ಹೆಸರನ್ನು ಸೂಚಿಸುವುದಲ್ಲದೆ ಮೇಘದ ಹೆಸರನ್ನೂ ಸೂಚಿಸುವುದು. ಈ ಎರಡು ಶಬ್ದಗಳಿಗೂ ಒಂದೇ ವಿಧವಾದ ನಿಷ್ಪತ್ತಿ ಇರುವುದು. ರಕಾರಕ್ಕೂ ಲಕಾರಕ್ಕೂ ಭೇದವೇನೂ ಇರುವುದಿಲ್ಲ.

ಉಪರ ಉಪಲೋ ಮೇಘೋ ಭವತಿ। ಉಪರಮಂತೇಽಸ್ಮಿನ್ನ-
ಭ್ರಾಣಿ ಉಪಸ್ತಾ ಆಪ ಇತಿ. ವಾ

ಉಪರ, ಉಪಲ ಎಂಬ ಶಬ್ದಗಳಿಗೆ ಮೇಘವೆಂದು ಅರ್ಥವು ಏಕೆಂದರೆ-ಮೇಘಗಳಲ್ಲಿ ಉದಕಗಳು ಚಲನವಿಲ್ಲದೆ ಇದ್ದೆಡೆಯಲ್ಲಿಯೇ ಇರುವವು. ಚಲನರಹಿತವಾಗಿರುವ ಉದಕಗಳಿರುವುದರಿಂದ ಇದಕ್ಕೆ ಉಪರ ಅಥವಾ ಮೇಘವೆಂದು ಹೆಸರು. ಮೇಘವು ಅಂತರಿಕ್ಷದಲ್ಲಿ ಚಲಿಸುವುದಾದರೂ ಅದರಲ್ಲಿರುವ ಉದಕಗಳಿಗೆ ಚಲನವಿರುವುದಿಲ್ಲ.

**ಇತ್ಯೇಕವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೊಂದನೆಯ ಖಂಡವು ಸಮಾಪ್ತವು

———

## ಅಥ ದ್ವಾವಿಂಶಃ ಖಂಡಃ

### ಇಪ್ಪತ್ತೆರಡನೆಯ ಖಂಡವು

ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ಕೃತತ್ರಾದೇಷಾಮುಪರಾ ಉದಾಯನ್ । ತ್ರಯಸ್ತಪಂತಿ ಪೃಥಿವೀಮನೂಪ ದ್ವಾ ಬೃಬೂಕಂ ವಹತಃ ಪುರೀಷಂ ॥ (ಋ-ಸಂ-೧೦-೨೭-೨೩) ದೇವಾನಾಂ ನಿರ್ಮಾಣೇ ಪ್ರಥಮಾ ಅತಿಷ್ಠನ್ಮಾಧ್ಯಮಿಕಾ ದೇವಗಣಾಃ ಪ್ರಥಮ ಇತಿ ಮುಖ್ಯನಾಮ ಪ್ರತಮೋ ಭವತಿ ಕೃಂತತ್ರಮಂತರಿಕ್ಷಂ ವಿಕರ್ತನಂ ಮೇಘಾನಾಂ ವಿಕರ್ತನೇನ ಮೇಘಾನಾಮುದಕಂ ಜಾಯತೇ । ತ್ರಯಸ್ತಪಂತಿ ಪೃಥಿವೀಮನೂಪಾಃ ಅನುವಪಂತಿ ಲೋಕಾನ್ತ್ಸ್ವೇನ ಸ್ವೇನ ಕರ್ಮಣಾಯಮಪೀತರೋಽನೂಪ ಏತಸ್ಮಾದೇವಾನೂಪ್ಯತ ಉದಕೇನಾಪಿ ವಾನ್ವಾವಿತಿ ಸ್ಯಾದ್ಯಥಾ ಪ್ರಾಗಿತಿ ತಸ್ಯಾನೂಪ ಇತಿ ಸ್ಯಾದ್ಯಥಾ ಪ್ರಾಚೀನಮಿತಿ । ದ್ವಾ ಬೃಬೂಕಂ ವಹತಃ ಪುರೀಷಂ । ವಾಯ್ವಾದಿತ್ಯಾ ಉದಕಂ ಬೃಬೂಕಮಿತ್ಯುದಕನಾಮ ಬ್ರವೀತೇರ್ವಾ ಶಬ್ದಕರ್ಮಣೋ ಭ್ರಶಂತೇರ್ವಾ ಪುರೀಷಂ ಪೃಣಾತೇಃ ಪೂರಯತೇರ್ವಾ ॥ ೨೨ ॥

**ದೇವಾನಾಂ ಮಾನೆ ಎಂಬ ಋಕ್ಕಿನ ಅರ್ಥವು—**

ದೇವತೆಗಳನ್ನು (ಪ್ರಜಾಪತಿಯು) ನಿರ್ಮಾಣಮಾಡುವಾಗ ಮೊದಲು ಮೇಘಗಳ ಉತ್ಪತ್ತಿಯಾದವು. ಮೇಘಗಳನ್ನು ಭೇದಿಸಿದ್ದರಿಂದ ವೃಷ್ಟ್ಯುದಕಗಳು ಉತ್ಪನ್ನವಾದವು. ಪರ್ಜನ್ಯ, ವಾಯು, ಆದಿತ್ಯ ಈ ಮೂರು ದೇವತೆಗಳೂ ಯಥಾ ಕ್ರಮವಾಗಿ ಬೀಜವನ್ನು ಬಿತ್ತಿ ಭೂಮಿಯನ್ನು ಶುದ್ಧಿಗೊಳಿಸುತ್ತಾರೆ. ಅವರಲ್ಲಿ ವಾಯು ಮತ್ತು ಪರ್ಜನ್ಯರು ಪುಷ್ಟಿಕಾರಕ ವಾದ ಉದಕವನ್ನು ಆದಿತ್ಯಮಂಡಲಕ್ಕೆ ಒಯ್ಯುತ್ತಾರೆ.

ಪ್ರಜಾಪತಿಯಿಂದ ದೇವತೆಗಳು ಸೃಷ್ಟಿಸಲ್ಪಟ್ಟಾಗ ಮಧ್ಯಮಸ್ಥಾನದ (ಅಂತರಿಕ್ಷಸ್ಥರಾದ) ದೇವತೆಗಳಿಗೆ (ಮೇಘಗಳಿಗೆ) ಮುಖ್ಯಸ್ಥಾನವು ಲಭಿಸಿತು. ಎಂದರೆ ಎಲ್ಲಾ ದೇವತೆಗಳಲ್ಲಿಯೂ ಅಂತರಿಕ್ಷಸ್ಥ ದೇವತೆಗಳಿಗೆ ಪ್ರಾಧಾನ್ಯತೆಯು ಲಭಿಸಿತು. ಇಲ್ಲಿ ಪ್ರಥಮಶಬ್ದಕ್ಕೆ ಮುಖ್ಯವೆಂದು ಅರ್ಥವು. ಅಂತರಿಕ್ಷದಲ್ಲಿರುವ ಮೇಘಗಳನ್ನು ಸೀಳುವುದರಿಂದ ಮೇಘಗಳು ಉದಕರೂಪವಾದ ವೃಷ್ಟಿಯನ್ನು ಸುರಿಸುವವು. ಪರ್ಜನ್ಯ ವಾಯು ಆದಿತ್ಯರೆಂಬ ಮೂರು ದೇವತೆಗಳು ಸೇರಿ ಓಷಧಿಸಸ್ಯಾದಿಗಳನ್ನು ಬೆಳೆಸಿ ವೃದ್ಧಿ ಪಡಿಸುವರು. ಎಂದರೆ ಪರ್ಜನ್ಯನು ವೃಷ್ಟಿಯನ್ನು ಸುರಿಸುವನು, ವಾಯುವು ಸಹಾಯಕನಾಗಿ ಬೀಸುವನು. ಆದಿತ್ಯನು ತನ್ನ

ರಶ್ಮಿಗಳಿಂದ ಸಸ್ಯಾದಿಗಳ ಬೆಳವಣಿಗೆಗೆ ಸಹಾಯ ಮಾಡುವನು. ಇವರುಗಳ ಸಹಕಾರದಿಂದ ಓಷಧಿವನಸ್ಪತಿಗಳು ಬೆಳೆದು ವೃದ್ಧಿಯನ್ನೈದುವವು. ಇವರು ಮಾಡುವ ಈ ಕೆಲಸಕ್ಕೆ **ಅನೂಪ**ವೆಂದು ಹೆಸರು. ಅನೂಪವೆಂದರೆ ನದಿಯ ದಡವೆಂಬ ಇನ್ನೊಂದು ಅರ್ಥವೂ ಇರುವುದು. ಈ ಅರ್ಥಕ್ಕೆ ಈ ರೂಪನಿಷ್ಪತ್ತಿಯೇ ಅನ್ವಯಿಸುವುದು. ಏಕೆಂದರೆ ಇಲ್ಲಿಯೂ ಉದಕದ ಪ್ರಾಧಾನ್ಯತೆಯೇ ಕಂಡುಬರುವುದು. ಹೇಗೆಂದರೆ ಪ್ರಾಕ್ ಶಬ್ದದಿಂದ ಪ್ರಾಚೀನ ಶಬ್ದವು ನಿಷ್ಪನ್ನವಾಗಿರುವಂತೆ **ಅನ್ವಾಪ್** ಶಬ್ದದಿಂದ ಅನೂಪಶಬ್ದವು ನಿಷ್ಪನ್ನವಾಗಿದೆ. ಈ ಎರಡೂ ಎಂದರೆ ವೃಷ್ಟಿಯೂ, ನದಿಯ ದಡವೂ ಫಲವತ್ತಾದ ಉದಕಗಳಿಂದ ತುಂಬಿರುವುದು. ಗಾಳಿಯೂ ಸೂರ್ಯನೂ ಆವಿಯರೂಪದ ಉದಕಕಣಗಳನ್ನು ಧರಿಸಿ ಸಸ್ಯಾದಿಗಳ ಅಭಿವೃದ್ಧಿಗೆ ಕಾರಣರಾಗಿರುವರು. **ಬೃಬೂಕಂ** ಎಂದರೆ ಉದಕವು. (ಆವಿಯ ಅಥವಾ ತೇವದ ರೂಪದಲ್ಲಿರುವ ಉದಕವು) ಈ ಶಬ್ದವು ಶಬ್ದ ಮಾಡು ಎಂಬರ್ಥವುಳ್ಳ **ಬ್ರು** ಧಾತುವಿನಿಂದಾಗಲಿ (ವೃಷ್ಟಿರೂಪದಿಂದ,'ಕೆಳಕ್ಕೆ ಬೀಳು ಎಂಬರ್ಥವುಳ್ಳ **ಭ್ರಂಶ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. **ಪುರೀಷಂ** ಎಂದರೆ ಫಲವತ್ತಾದುದು ಎಂದರ್ಥವು. ಈ ಶಬ್ದವು ತುಂಬು ಎಂಬರ್ಥವುಳ್ಳ **ಪೃ** ಧಾತುವಿನಿಂದಾಗಲಿ, ತುಂಬುವಂತೆ ಮಾಡು ಎಂಬರ್ಥವುಳ್ಳ **ಪ್ರಾ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು.

**ಇತಿ ದ್ವಾವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೆರಡನೆಯ ಖಂಡವು ಸಮಾಪ್ತವು

---

## ಅಥ ತ್ರಯೋವಿಂಶಃ ಖಂಡಃ

### ಇಪ್ಪತ್ತಮೂರನೆಯ ಖಂಡವು

---

ವಾಙ್ನಾಮಾನ್ಯುತ್ತರಾಣಿ ಸಪ್ತಪಂಚಾಶದ್ವಾಕ್ಕಸ್ಮಾದ್ವಚೇಸ್ತತ್ರ
ಸರಸ್ವತೀತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ ತದ್ಯದ್ದೇವತಾ-
ವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮೋಽಥೈತನ್ನದೀವತ್ ॥ ೨೩ ॥

ಕೆಳಗೆ ಕೊಟ್ಟಿರುವ ಐವತ್ತೇಳು ಶಬ್ದಗಳೂ ವಾಕ್ಕುಗಳ (ವಾಕ್ಯಗಳ) ಹೆಸರುಗಳು

### ಅಥ ವಾಙ್ನಾಮಾನಿ

(೧) ಶ್ಲೋಕಃ (೨) ಧಾರಾ (೩) ಇಲಾ (೪) ಗೌಃ (೫) ಗೌರೀ (೬) ಗಾಂಧರ್ವೀ (೭) ಗಭೀರಾ (೮) ಗಂಭೀರಾ (೯) ಮಂದ್ರಾ (೧೦) ಮಂದ್ರಾಜನೀ (೧೧) ವಾಶೀ (೧೨) ವಾಣೀ (೧೩) ವಾಣೀಚೀ (೧೪) ವಾಣಃ (೧೫) ಪವಿಃ (೧೬) ಭಾರತೀ (೧೭) ಧಮನಿಃ (೧೮) ನಾಲೀಃ (೧೯) ಮೇನಾ (೨೦) ಮೇಳಿಃ

(೨೧) ಸೂರ್ಯ್ಯಾ (೨೨) ಸರಸ್ವತೀ (೨೩) ನಿವಿತ್ (೨೪) ಸ್ವಾಹಾ (೨೫) ವಗ್ನುಃ (೨೬) ಉಪಬ್ದಿಃ (೨೭) ಮಾಯುಃ (೨೮) ಕಾಕಾತ್ (೨೯) ಜಿಹ್ವಾ (೩೦) ಘೋಷಃ (೩೧) ಸ್ವರಃ (೩೨) ಶಬ್ದಃ (೩೩) ಸ್ವನಃ (೩೪) ಋಕ್ (೩೫) ಹೋತ್ರಾ (೩೬) ಗೀಃ (೩೭) ಗಾಥಾ (೩೮) ಗಣಃ (೩೯) ಧೇನಾ (೪೦) ಗ್ನಾಃ (೪೧) ವಿಪಾ (೪೨) ನಗ್ನಾ (೪೩) ಕಶಾ (೪೪) ಧಿಷಣಾ (೪೫) ನೌಃ (೪೬) ಅಕ್ಷರಮ್ (೪೭) ಮಹೀ (೪೮) ಅದಿತಿಃ (೪೯) ಶಚೀ (೫೦) ವಾಕ್ (೫೧) ಅನುಷ್ಟುಪ್ (೫೨) ಧೇನುಃ (೫೩) ವಲ್ಗುಃ (೫೪) ಗಲ್ದಾ (೫೫) ಸ್ವರಃ (೫೬) ಸುಪರ್ಣೀ (೫೭) ಬೇಕುರಾ

ಇತಿ ಸಪ್ತಪಂಚಾಶತ್ ವಾಙ್ನಾಮಾನಿ ॥

'ವಾಙ್ನಾಮಾನ್ಯುತ್ತರಾಣಿ' (ನಿರು–೨–೨೩) ಎಂಬ ನಿರುಕ್ತದ ಭಾಷ್ಯದಲ್ಲಿ ಸ್ಕಂದಸ್ವಾಮಿಯು ಹೀಗೆ ವಿವರಿಸಿರುತ್ತಾನೆ. ಮೇಲಿನ ಐವತ್ತೇಳು ಶಬ್ದಗಳು ವಾಕ್ಕಿನ ಹೆಸರು. ಇದರಿಂದ ಹೇಳಲ್ಪಡುತ್ತದೆ ವಾಕ್ ಅಂದರೆ ವಾಗಿಂದ್ರಿಯ. ಅದರ ಕಾರ್ಯವಾದ ಶಬ್ದವೂ ಹೇಳಲ್ಪಡುವುದರಿಂದ ವಾಕ್ ಆಗುತ್ತದೆ. ಇದರಿಂದ ಅರ್ಥವು ಹೇಳಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ ಅರ್ಥವೂ ವಾಕ್. ಶಬ್ದಮಾಡುವುದು ಮೇಘವೂ ವಾಕ್. ವಾಗಧಿಷ್ಠಾತ್ರಿ ದೇವತೆಯೂ ವಾಕ್. ಇವೆಲ್ಲವೂ ಮೇಘ (ಕಾರಣವಾದುದರಿಂದ ಮೇಘ ನಾಮವಾದ ಮೇಲೆ ಹೇಳಿದೆ- 'ವಚ–ಪರಿಭಾಷಣೇ' ಧಾತು. 'ಕ್ವಿಬ್‌ವಚಿ—' ಸೂತ್ರದಿಂದ ವಾರ್ತಿಕ) ಕ್ವಿಪ್ ಬಂದು ದೀರ್ಘ ಬಂದು ವಾಕ್ ರೂಪವಾಗಿದೆ. ಸಂಪ್ರಸಾರಣ ಬರುವುದಿಲ್ಲವೆಂದು ಆವಾರ್ತಿಕದಲ್ಲಿಯೇ ಹೇಳಿದೆ.

(೧) **ಶ್ಲೋಕಃ । ಶ್ರು–ಶ್ರವಣೇ (ಭೂ–ಪ–) "ಇಣ್‌ಭೀಕಾಪಾಶಲ್ಯ—" (ಉ–೩–೪೧) ಇತಿ ಕನ್ ಪ್ರತ್ಯಯೋ ಬಾಹುಲಕಾದ್ಭವತಿ, ಗುಣಃ, ಕಪಿಲಕಾದಿತ್ವಾತ್ ಲತ್ವಮ್ । ಶ್ರೂಯತೇ ಇತಿ ಶ್ಲೋಕಃ ॥**

ಕೇಳುವುದು ಎಂಬರ್ಥವನ್ನು ಕೊಡುವ ಶ್ರುಧಾತುವಿಗೆ ಬಹುಲಗ್ರಹಣದಿಂದ ಕನ್‌ಪ್ರತ್ಯಯ. 'ಸಾರ್ವಧಾತು'— ಸೂತ್ರದಿಂದ ಗುಣ. ಶ್ರೋಕ ಎಂದಿರುವಾಗ ಕಪಿಲಕಾದಿ ಗಣದಲ್ಲಿ ಸೇರಿರುವುದರಿಂದ ರೇಫಕ್ಕೆ ಲತ್ವ. ಕೇಳಲ್ಪಡುವುದು ಶ್ಲೋಕ. ಅಥವಾ ಸಂಘಾತಾರ್ಥಕವಾದ ಶ್ಲೋಕ್ ಧಾತುವಿಗೆ ಸಂಜ್ಞಾ ತೋರುವಾಗ ಘ ಪ್ರತ್ಯಯ. ಪದರೂಪದಿಂದ ಕವಿಗಳಿಂದ ಸೇರಿಸಲ್ಪಡುವುದು ಶ್ಲೋಕ. 'ಪದ್ಯೇ ಯಶಸಿ ಚ ಶ್ಲೋಕಃ' ಎಂದು ಅಮರ. ಉದಾಹರಣೆ—

**'ಋತಸ್ಯ ಶ್ಲೋಕೋ ಬಧಿರಾ ತತರ್ದ' (ಋ. ಸಂ-೩-೬-೧೦-೩) 'ಶ್ಲೋಕೋ ನ ಯಾತಾಮಪಿ ವಾಜೋ ಅಸ್ತಿ' (ಋ-ಸಂ-೭-೬-೧೧-೫) ॥**

(೨) **ಧಾರಾ । ಧೃಙ್–ಧಾರಣೇ (ಭೂ–ಉ) 'ಹೇತುಮತಿ ಚ' (ಪಾ-ಸೂ-೩-೧-೨೬) ಇತಿ ಣಿಚಿ 'ಏರಜಣ್ಯಂತಾನಾಮ್' [ಮ. ಭಾ] ಇತ್ಯಸ್ಯಾಪ್ರಾಪಕತ್ವಾದೇವ 'ಕೃತಲ್ಯುಟೋ ಬಹುಲಮ್' ಇತಿ ಕರ್ತರಿ ಭವತಿ ॥**

ಧಾರಣಾರ್ಥಕವಾದ ಧೃಧಾತುವಿಗೆ ಪ್ರೇರಣಾರ್ಥದಲ್ಲಿ ಣಿಚ್. ಣಿತ್ತಾದುದರಿಂದ ಧಾತು ಋಕಾರಕ್ಕೆ ವೃದ್ಧಿ. ಧಾರಿ ಎಂಬ ಇಕಾರಾಂತ ಧಾತುವಿಗೆ ಭಾಷ್ಯದಲ್ಲಿ ಣ್ಯಂತಕ್ಕೆ ಬರುವುದಿಲ್ಲವೆಂದು ಹೇಳಿದ್ದರೂ ಬಹುಲಗ್ರಹಣದಿಂದ ಕರ್ತೃರ್ಥದಲ್ಲಿ ಅಚ್‌ಪ್ರತ್ಯಯ. ಧಾರಿ+ಅ. 'ಣೇರನಿಟಿ' ಣಿ ಲೋಪ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಧಾರಾ. ಅಥವಾ ಧಾರಿ ಣ್ಯಂತಕ್ಕೆ ಪಚಾದಿಯಾದುದರಿಂ ಅಚ್‌ಪ್ರತ್ಯಯ. ನೀರು ಸುರಿಸುವುದರಿಂದ ಲೋಕವನ್ನು ಧರಿಸಿರುವುದು. ತನ್ನ ಅರ್ಥದ ಮೂಲಕ ಲೋಕಧಾರಣ ಸಾಮರ್ಥ್ಯ ಉಳ್ಳದ್ದು. ಉದಾಹರಣೆ—

**'ಧಾರಾ ಸುತಸ್ಯ ರೋಚತೇ'** (ಋ. ಸಂ. ೭-೫-೨೪-೧) **'ಯಃ ಸಸಾದ ಧಾರಾಮೃತಸ್ಯ'** [ಋ. ಸಂ-೧-೫-೧೧-೪] ||

(೩) ಇಲಾ || **ಇಲಕ್ಷೇಪಣೇ [ತು. ಪ.] ಇಗುಪಧೇಭ್ಯಃ ಕರ್ತರಿ ವಿಧೀಯಮಾನಃ ಕಃ ಪ್ರತ್ಯಯಃ ಬಾಹುಲಕಾತ್ ಭವತಿ । ಕ್ಷಿಪ್ಯತೇ ಪ್ರೇರ್ಯತೇ ಉಚ್ಚಾರಣಕಾಲೇ ಪ್ರಾಣೇನ, ಇಲಾ** ||

ಕ್ಷೇಪಣಾರ್ಥಕವಾದ ಇಲ ಧಾತುವಿಗೆ ಕರ್ತೃರ್ಥದಲ್ಲಿ ಹೇಳಿದ ಇಗುಪಧಲಕ್ಷಣಕಪ್ರತ್ಯಯವು ಇಲ್ಲಿ ಕರ್ಮಣಿಯಲ್ಲಿ ಬಹುಲಗ್ರಹಣದಿಂದ ಬರುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಸ್ತ್ರೀತ್ವದಲ್ಲಿ ಟಾಪ್. ಋಗ್ವೇದಿಗಳ ಮತದಂತೆ ಲತ್ವ. ಉಚ್ಚಾರಣ ಕಾಲದಲ್ಲಿ ಪ್ರಾಣವಾಯುವಿನಿಂದ ಪ್ರೇರೇಪಿಸಲ್ಪಡುವುದು ಇಲಾ. ಅಥವಾ ಸ್ತುತ್ಯರ್ಥಕವಾದ ಈಡ ಧಾತುವಿಗೂ, ದೀಪ್ತ್ಯರ್ಥಕವಾದ ಇಂಧೀ ಧಾತುವಿಗೂ ಕಪ್ರತ್ಯಯ ಬಂದು ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ಅಭಿಮತರೂಪವಾಗಿದೆ. ಇದರಿಂದ ದೇವತೆಯು ಸ್ತೋತ್ರಮಾಡಲ್ಪಡುತ್ತದೆ, ತಾನೇ ದೇವತೆಯಾದುದರಿಂದ ಸ್ತುತಿಸಲ್ಪಡುತ್ತದೆ. ವಾಕ್ಪ್ರಯೋಗ ಮಾಡುವವನನ್ನು ಪ್ರಕಾಶಿಸುತ್ತದೆ, ತನ್ನ ತೇಜಸ್ಸಿನಿಂದ ಪ್ರಕಾಶಿತವಾಗುತ್ತದೆ ಎಂದು ಅರ್ಥವಾಗುತ್ತದೆ. ಅಥವಾ ಇಲಾ ಎಂಬುದು ಅನ್ನದ ಹೆಸರು (ನಿರು-೩-೭) ಅದು ಉಳ್ಳದ್ದು ಎಂಬರ್ಥದಲ್ಲಿ ಅಚ್‌ಪ್ರತ್ಯಯ. ಯಜಮಾನನಿಂದ ಕೊಡಲ್ಪಡುವ ಹವಿರ್ಲಕ್ಷಣಾನ್ನದಿಂದ ಕೂಡಿರುವುದು ಇಲಾ. ಉದಾಹರಣೆ—

**ಅಭಿ ನ ಇಲಾ ಯೂಥಸ್ಯ ಮಾತಾ** (ಋ. ಸಂ-೪-೨-೧೬-೪)

(೪) **ಗೌಃ || ವ್ಯಾಖ್ಯಾತಾ ಪೃಥಿವೀನಾಮಸು** ||

ಪೃಥಿವೀನಾಮ ನಿರ್ವಚನಮಾಡುವಾಗ ಇದು ವ್ಯಾಖ್ಯಾತವಾಗಿದೆ. ಯಜ್ಞದಲ್ಲಿ ಕರೆಯಲ್ಪಟ್ಟುಹೋಗುತ್ತದೆ, ಗಾನ ಮಾಡಲ್ಪಡುತ್ತದೆ, ಸ್ತುತಿಸಲ್ಪಡುತ್ತದೆ ಎಂದರ್ಥ. ಉದಾಹರಣೆ—

**'ಅಯಂ ಸ ಶಿಂಕ್ತೇ ಯೇನ ಗೌ ರಭೀವೃತಾ'** (ಋ. ಸಂ. ೨-೩-೧೯-೪)

(೫) **ಗೌರೀ । ರೋಚತೇರ್ಜ್ವಲತಿಕರ್ಮಣಃ** (ನಿ. ಘ-೧-೧೬) **'ಋಜೇಂದ್ರಾಗ್ರವಜ್ರ—'** (ಉ-೨-೨೭) **ಇತ್ಯಾದಿ ಸೂತ್ರೇಣ ರನ್‌ಪ್ರತ್ಯಯಾಂತೋ ಗೌರಶಬ್ದೋ ನಿಪಾತಿತಃ ತಸ್ಮಾದ್ರುಚೇರ್ಧಾತೋರ್ಗಾವಾದೇಶಃ 'ಷಿದ್ಗೌರಾದಿಭ್ಯಶ್ಚ'** (ಪಾ. ಸೂ-೪-೧-೪೧) **ಇತಿ ಙೀಷ್** ।

ಪ್ರಕಾಶಾರ್ಥಕವಾದ ರುಚ್ ಧಾತುವಿಗೆ ರನ್ ಪ್ರತ್ಯಯ ಬಂದ ನಿಪಾತಿತವಾಗಿದೆ. ನಿಪಾತದಿಂದಲೇ ಧಾತುವಿಗೆ ಗೋ ಆದೇಶ. ಸ್ತ್ರೀತ್ವದಲ್ಲಿ ಙೀಷ್. ಅಕಾರ ಲೋಪ. ಗೌರೀ. ವಾಗ್ದೇವತೆಯಾದುದರಿಂದ ತನ್ನ ದೀಪ್ತಿಯಿಂದಲೇ ಜ್ವಲಿಸುತ್ತದೆ

ಎಂದರ್ಥ. ಅಥವಾ ಉದ್ಯಮನಾರ್ಥಕವಾದ ಗೂರೀ ಧಾತುವಿಗೆ ಹಿಂದಿನಂತೆ ನಿಪಾತದಿಂದ ಈ ರೂಪವಾಗುತ್ತದೆ. ಉಕಾರಕ್ಕೆ ಓಕಾರ ಬಂದರೆ ಗೋರ್ + ರ. 'ರೋರಿ' ಸೂತ್ರದಿಂದ ರೇಫ ಲೋಪ. ಆದಿವೃದ್ಧಿ. ಙೀಷ್. ತನ್ನ ಅಭಿಧೇಯವನ್ನು ಪ್ರಕಾಶ ಪಡಿಸುತ್ತದೆ ಎಂದರ್ಥ. ಗುಜ್-ಅವ್ಯಕ್ತೇ ಶಬ್ದೇ ಧಾತು. ಇದಕ್ಕೂ ಔಣಾದಿಕ ಇನ್‌ಪ್ರತ್ಯಯ ಬಂದು ನಿಪಾತಿತವಾದರೆ ಗೌರೀರೂಪವಾಗುತ್ತದೆ. ಗರ್ಜಿತರೂಪವಾದ ಅವ್ಯಕ್ತ ಶಬ್ದವನ್ನು ಮಾಡುವುದು ಎಂದರ್ಥ. ಬಿಳೀಬಣ್ಣವಿರುವುದರಿಂದ ಗೌರಿ ಸರಸ್ವತಿಯಾಗುತ್ತಾಳೆ. 'ಭಾಸ್ವತ್ಕಪರ್ದಾಂ ಶಶಿಕಲಾಮಿಂದುಕುಂದಾವದಂತಾಮ್ ಎಂದು ಶಂಕರಾಚಾರ್ಯರು ಹೇಳಿರುತ್ತಾರೆ. 'ಸರ್ವಶುಕ್ಲಾ ಸರಸ್ವತೀ' ಎಂದು ಹೇಳಿದೆ. ಉದಾಹರಣೆ—

**ಗೌರೀರ್ಮಿಮಾಯ ಸಲಿಲಾನಿ ತಕ್ಷತಿ** (ಋ. ಸಂ. ೨-೩-೨೨-೧) '**—ಸೋಮೋ' ಗೌರೀ ಅಧಿಶ್ರಿತಃ** (ಋ. ಸಂ. ೬-೨-೩೮-೩) ||

**(೬) ಗಾಂಧರ್ವೀ || 'ಗವಿಗಂಧ್ಯಜ್ಯಜ್ಞೋವಃ' | ಧೃಞ್-ಧಾರಣೇ (ಭ್ವಾ. ಉ) ಇತ್ಯಸ್ಮಾತ್ ಗೋ ಶಬ್ದೋಪಪದಾತ್ ವಪ್ರತ್ಯಯಃ + ಉಪಪದಸ್ಯ ಗಮಾದೇಶಃ, ಗಂಧರ್ವಃ, ಗೋರ್ಯಜ್ಞಸ್ಯ ಧಾರಯಿತೇಂದ್ರಃ ||**

ಧಾರಣಾರ್ಥಕವಾದ ಧೃ ಧಾತುವಿಗೆ ಗೋಶಬ್ದ ಉಪಪದವಾಗಿರುವಾಗ ವ ಪ್ರತ್ಯಯ, ಗೋಶಬ್ದಕ್ಕೆ ಗಮಾದೇಶ. ಪ್ರತ್ಯಯ ನಿಮಿತ್ತವಾಗಿ ಧಾತು ಋಕಾರಕ್ಕೆ ಗುಣ. ಗಂಧರ್ವಃ ಗೋಪದಕ್ಕೆ ಯಜ್ಞವೆಂದರ್ಥ. ಯಜ್ಞವನ್ನು ಪೋಷಿಸುವ ಇಂದ್ರನು ಗಂಧರ್ವ. ಭೋಜನು ಅರ್ದನಾರ್ಥಕವಾದ ಗಂಧ ಧಾತುವಿಗೆ ವಪ್ರತ್ಯಯವನ್ನೂ ಧಾತುವಿಗೆ ರಗಾಗಮವನ್ನೂ ಹೇಳುತ್ತಾನೆ. ಗಂಧಯತೇ ಹಿನಸ್ತಿ ದೇವಶತ್ರೂನ್. ದೇವಶತ್ರುಗಳನ್ನು ನಾಶಮಾಡುವ ಇಂದ್ರನು ಎಂದರ್ಥ. ಅವನ ಸಂಬಂಧವಾದದ್ದು ಎಂಬರ್ಥದಲ್ಲಿ 'ತಸ್ಯೇದಮ್' ಸೂತ್ರದಿಂದ ಅಣ್ ಪ್ರತ್ಯಯ. ಅಲೋಪ. ಆದಿವೃದ್ಧಿ. ಸ್ತ್ರೀತ್ವದಲ್ಲಿ 'ಟಿಡ್ಢಾಣಞ್—' ಸೂತ್ರದಿಂದ ಙೀಪ್. ಬ್ರಾಹ್ಮಣದಲ್ಲಿಯೂ ಈ ಅರ್ಥ ವಿವೃತವಾಗಿದೆ. ಇಂದ್ರಸಂಬಂಧವಾದ ಮಂತ್ರಾದಿ ಗಳು ಎಂದರ್ಥ. ಐತರೇಯ ಬ್ರಾಹ್ಮಣದಲ್ಲಿ ಸೋಮನು ಗಂಧರ್ವರಾಜನೆಂದೂ ಅವನು ದೇವಗಾಯಕನೆಂದೂ ಅವನ ಸಂಬಧ ವಾದ ಮಾತು ಗಾಂಧರ್ವೀ ಆಗುತ್ತದೆಂದು ಹೇಳಿದೆ. ಇದಕ್ಕೆ ನಿಗಮ—

"ತಾಂ ಗಂಧರ್ವೋಽವದೀತ್ ಗರ್ಭೇ ಅಂತಃ" || "ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯ" (ಋ. ಸಂ. ೮-೩-೧೫-೬) ||

**(೭) ಗಭೀರಾ | (೮) ಗಂಭೀರಾ || ಭೀಯಂತಿ ರಾತೀತಿ ಭೀರಾಃ | "ಆತೋಽನುಪಸರ್ಗೇ ಕಃ" | ಗವಾಂ ಭೀರಾ ಗಭೀರಾ ಚ | ಪೃಷೋದರಾದಿತ್ವಾತ್ ಗೋ ಶಬ್ದಸ್ಯ ಗಭಾವೋ ಗಂಭಾವಶ್ಚ ||**

ಭೀ ಪದವು ಉಪಪದವಾಗಿರುವಾಗ ರಾ ಧಾತುವಿಗೆ ಕ ಪ್ರತ್ಯಯ. 'ಗವಾಂ ಭೀರಾ' ಎಂದು ಷಷ್ಠೀತತ್ಪುರುಷ ಸಮಾಸ. ಪೃಷೋದರಾದಿಗಣ ಪಠಿತವಾದುದರಿಂದ ಗೋ ಪದಕ್ಕೆ ಗ, ಮತ್ತು ಗಮ್ ಆದೇಶ. ಸಿಡಿಲು ಗರ್ಜನೆ ಮುಂತಾದ ಮಾಧ್ಯಮಿಕವಾಕ್ ಶ್ರವಣ ಮಾತ್ರದಿಂದ ಗಮ್ ಧಾತುವಿಗೆ ಈರನ್ ಪ್ರತ್ಯಯ, ನುಮಾಗಮ, ಧಾತು ಮಕಾರಕ್ಕೆ ವಿಕಲ್ಪ ಲೋಪ ಕಾರ್ಯಗಳು ನಿಪಾತಿತವಾಗಿವೆ. ಯಜ್ಞದಲ್ಲಿ ಹೋಗುವುದು, ಜ್ಞಾನಾರ್ಥಿಗಳಿಂದ ಹೊಂದಲ್ಪಡುವುದು ಎಂದರ್ಥ. ಅಥವಾ 'ಗಾಧೃ-ಪ್ರತಿಷ್ಠಾಲಿಪ್ಸಯೋರ್ಗ್ರಂಥೇಚ' ಧಾತು. ಇದಕ್ಕೆ ಭಕಾರಾಂತಾದೇಶವಾಗಿಯೂ, ಹ್ರಸ್ವವೂ, ವಿಕಲ್ಪವಾಗಿ ನುಮಾಗಮವೂ ನಿಪಾತಿತವಾಗಿ ಗಭೀರ ರೂಪವಾಗಿದೆ. ತನ್ನ ಸ್ಥಾನದಲ್ಲಿ ಪ್ರತಿಷ್ಠಿತವಾಗಿರುವುದು, ಪ್ರಾಣಿಗಳಿಂದ ಬಯಸಲ್ಪಡು ವುದು, ಗದ್ಯಪದ್ಯಾದಿ ರೂಪದಿಂದ ಗುಂಫಿತವಾಗಿರುವುದು ವಾಗೆಂದರ್ಥ. ಗಂಭೀರ, ಪದಗಳಿಗೆ ಉದಾಹರಣೆ ಹುಡುಕಬೇಕು.

**(೯) ಮನ್ದ್ರಾ । ಮದಿ-ಸ್ತುತಿಮೋದಮದ ಸ್ವಪ್ನಕಾಂತಿಗತಿಷು (ಭ್ವಾ-ಆ) ಗಚ್ಛತಿ ಸ್ವಾಭಿಧೇಯಂ ಪ್ರಾಪ್ನೋತಿ ॥**

ಸ್ತುತ್ಯಾದ್ಯರ್ಥಕವಾದ ಮದಿ ಧಾತುವಿಗೆ ಔಣಾದಿಕ ರಕ್‌ಪ್ರತ್ಯಯ. ಧಾತು ಇದಿತ್ತಾದುದರಿಂದ ನುಮಾಗಮ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ತನ್ನ ಅರ್ಥವನ್ನು ಹೊಂದುತ್ತದೆ. ಅರ್ಥವನ್ನು ಬಯಸುವವರಿಂದ ಹೊಂದಲ್ಪಡುತ್ತದೆ ಎಂದರ್ಥ. ಉದಾಹರಣೆ—

**ಸ ಮನ್ದ್ರಯಾ ಚ ಜಿಹ್ವಯಾ** (ಋ-ಸಂ-೫-೨-೨೨-೩) ॥

(೧೦) **ಮಂದ್ರಾಜನೀ ॥ ಮಂದ್ರಶಬ್ದೋ ವ್ಯಾಖ್ಯಾತಃ । 'ಅಜ-ಗತಿಕ್ಷೇಪಣಯೋಃ' । ಲ್ಯುಟ್ । ಪಿಪ್ಪಲ್ಯಾದಿಷು ದ್ರಷ್ಟವ್ಯಮ್ ॥**

ಮಂದ್ರಶಬ್ದ ಹಿಂದೆ ವ್ಯಾಖ್ಯಾತವಾಗಿದೆ. ಮಂದ್ರಶಬ್ದ ಉಪಪದವಾಗಿರುವಾಗ ಗತಿಕ್ಷೇಪಣಾರ್ಥವನ್ನು ಕೊಡುವ ಅಜ ಧಾತುವಿಗೆ ಲ್ಯುಟ್‌ಪ್ರತ್ಯಯ. ಅದಕ್ಕೆ ಅನಾದೇಶ. ಸ್ತ್ರೀತ್ವದಲ್ಲಿ ಪಿಪ್ಪಲ್ಯಾದಿಗಣಪಠಿತವಾದುದರಿಂದ ಙೀಷ್. ಮಂದ್ರವಾದ ಗಮನವೂ, ಕ್ಷೇಪಣ ಅಂದರೆ ಪ್ರೇರಣವೂ, ಉಚ್ಚಾರಣವೂ ಯಾವ ಮಾತಿಗೆ ಇವೆಯೋ ಅದು ಮಂದ್ರಾಜನೀ. ಉದಾಹರಣೆ—

**ಮಂದ್ರಾಜನೀ ಚೋದತೇ ಅಂತರಾಸನಿ** (ಋ. ಸಂ. ೭-೨-೨೧-೨)

(೧೧) **ವಾಶೀ ॥ ವಾಶೃ-ಶಬ್ದೇ (ದಿ-ಆ) ' ವಸಿವಪಿಯಜಿರಾಜಿವ್ರಜಿ—'** (ಉ-೪-೧೨೧) **ಇತಿ ಇಞ್ ಕರ್ಮಣಿ ಕಾರಕೇ ವಾ ದೃಶ್ಯತೇ ವಾಶಿಃ ।' ಕೃದಿಕಾರಾದಕ್ತಿನಃ ಇತಿ ಙೀಷ್ ವಾಶೀ ॥**

ಶಬ್ದಾರ್ಥಕವಾದ ವಾಶ್‌ಧಾತುವಿಗೆ ಔಣಾದಿಕ ಇಪ್ರತ್ಯಯ. ಇಕಾರಾಂತ ಕೃದಂತವಾಗುವುದರಿಂದ ಸ್ತ್ರೀಲಿಂಗದಲ್ಲಿ ಙೀಷ್ ಶಬ್ದಮಾಡಲ್ಪಡುವುದು ವಾಶಿ=ವಾಕ್. ಅಥವಾ ಸ್ತುತಿಸಲ್ಪಡುವುದು ಇತ್ಯಾದಿ ಹಿಂದಿನಂತೆ ತಿಳಿಯಬೇಕು. ಉದಾಹರಣೆ—

**ತೇ ವಾಶೀಮಂತ ಇಷ್ಮಿಣೋ ಅಭೀಷೋ** (ಋ. ಸಂ. ೧-೬-೧೩-೬) **' ವಾಶೀಭಿಸ್ತ ಕ್ಷತಾಶ್ಮನ್ಮಯೋಭಿಃ** (ಋ. ಸಂ. ೮-೫-೧೯-೪) ॥

(೧೨) **ವಾಣೀ** ॥ ಶಬ್ದಾರ್ಥಕವಾದ ವಣಧಾತುವಿಗೆ ಬಹುಲಗ್ರಹಣದಿಂದ ಇಞ್‌ಪ್ರತ್ಯಯ. ಹಿಂದಿನಂತೆ ಇಕಾರಾಂತವಾದುದರಿಂದವಾಣಿ ಶಬ್ದಕ್ಕೆ ಙೀಷ್. ಉದಾಹರಣೆ—

**ವಾಣೀಃ ಪುರುಹೂತಂ ಧಮಂತೀಃ** (ಋ. ಸಂ. ೩-೨-೨-೧೦) **"ಅಭಿವಾಣೀರೃಷೀಣಾಂ ಸಪ್ತ ನೂಷತ** (ಋ. ಸಂ. ೭-೫-೬-೩) ॥

(೧೩) **ವಾಣೀಚೀ** ॥ 'ವಾಣೀಂ ಅಂಚತಿ' ಎಂದು ವಿಗ್ರಹ. ವಾಣೀ ಉಪಪದವಾಗಿರುವಾಗ ಗತಿಪೂಜನಾರ್ಥಕವಾದ ಅಂಚು ಧಾತುವಿಗೆ "ಋತ್ವಿಗ್ದಧೃಕ್—" ಸೂತ್ರದಿಂದ ಕ್ವಿನ್ ಪ್ರತ್ಯಯ. "ಅನಿದಿತಾಂ—" ಸೂತ್ರದಿಂದ ನ ಲೋಪ.

ವಾಣೀ+ಅಚ್ ಎಂದಿರುವಾಗ 'ಅಚಃ' ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ. 'ಅಂಚತೇಶ್ಚೋಪ ಸಂಖ್ಯಾನಮ್' ವಾರ್ತಿಕದಿಂದ ಜೀಪ್. ವಾಣೀಚೀ. ಸ್ತುತಿರೂಪವಾದ ವಾಕ್ಕನ್ನು ಹೊಂದುವುದು ಎಂದರ್ಥ. ಉದಾಹರಣೆ—

**ರಥೇ ವಾಣೀಚ್ಯಾಹಿತಾ (ಋ. ಸಂ. ೪-೪-೧೫-೪)**

(೧೪) **ವಾಣಃ** ॥ ಶಬ್ದಮಾಡಲ್ಪಡುವುದು ವಾಣ. ಶಬ್ದಾರ್ಥಕ ವಣ ಧಾತುವಿಗೆ 'ಅಕರ್ತರಿಚ ಕಾರಕೇ ಸಂಜ್ಞಾಯಾಮ್' ಸೂತ್ರದಿಂದ ಘಞ್ ಪ್ರತ್ಯಯ. ಅಥವಾ ವಣನಂ ವಾಣಃ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ವಣನವುಳ್ಳದ್ದು ವಾಣಃ. ಅರ್ಶಆದಿ ಗಣದಲ್ಲಿ ಸೇರಿರುವುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. 'ಯಸ್ಯೇತಿಚ' ಪೂರ್ವದ ಅಕಾರಕ್ಕೆ ಲೋಪ. ಸ್ತುತಿಯಿಂದ ಕೂಡಿರುವುದು ವಾಕ್. ಉದಾಹರಣೆ—

**ದೀನಾ ದಕ್ಷಾ ವಿ ದುಹನ್ತಿ ಪ್ರ ವಾಣಮ್ (ಋ. ಸಂ. ೩-೬-೧೨-೪)** ॥

(೧೫) **ಪವಿಃ** । ಪವಿತ್ರಗೊಳಿಸುವುದು ಎಂಬರ್ಥವನ್ನು ಕೊಡುವ ಪೂಞ್ ಧಾತುವಿಗೆ 'ಅಚ ಇಃ' (ಉ. ೪-೧೩೪) ಸೂತ್ರದಿಂದ ಇ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. "ಪಾವಕಾ ನಃ ಸರಸ್ವತೀ" ಎಂದು ಶ್ರುತಿ ಹೇಳಿದಂತೆ ವಾಕ್ ನಮ್ಮನ್ನು ಪವಿತ್ರಗೊಳಿಸುತ್ತದೆ. ಸಂಕೀರ್ತನದಿಂದ ಪವಿತ್ರತವಾಗುತ್ತದೆ. 'ವಾಚಂ ಶೌರಿಕಥಾಲಾಪಪ್ರಸಂಗೇ ಪುನೀಮಹೇ' ಎಂದು ಕವಿ ಹೇಳಿರುತ್ತಾನೆ. ಶುದ್ಧಿಕರಣವಾಗಿರುವುದೂ ವಾಕ್. ಪಂಡಿತರಿಗೆ ವಾಕ್ ಪವಿತ್ರದಾಯಕವೆಂದು ಮಾಧವರೂ ಹೇಳಿರುತ್ತಾರೆ. ಉದಾಹರಣೆ—

**ವಾಣಸ್ಯ ಚೋದಯಾ ಪವಿಮ್ (ಋ. ಸಂ. ೭.೧.೭-೧)** ॥

(೧೬) **ಭಾರತೀ** ॥ ಡುಭೃಞ್-ಧಾರಣಪೋಷಣಯೋಃ ಧಾತು. ಇದಕ್ಕೆ 'ಭೃಮೃದೃಶಿಯಜಿ'—ಸೂತ್ರದಿಂದ ಅತಚ್‌ಪ್ರತ್ಯಯ. ಧಾತುವಿನ ಋಕಾರಕ್ಕೆ ಗುಣ. ಭರತ ಎಂದು ರೂಪವಾದಾಗ "ಪ್ರಜ್ಞಾದಿಭ್ಯಶ್ಚ" (ಪಾ. ಸೂ.೫-೪-೩೮) ಸೂತ್ರದಿಂದ ಸ್ವಾರ್ಥದಲ್ಲಿ ಅಣ್‌ಪ್ರತ್ಯಯ. 'ತದ್ಧಿತೇ'—ಸೂತ್ರದಿಂದ ಆದಿವೃದ್ಧಿ ಅಣಂತವಾದುದರಿಂದ ಸ್ತ್ರೀತ್ವದಲ್ಲಿ ಜೀಪ್. ನೀರು ಸುರಿಸುವುದರಿಂದ ಜಗತ್ತನ್ನು ಧರಿಸಿರುವುದು, ಪ್ರಾಣಿಗಳಿಂದ ತನ್ನ ಅರ್ಥವು ಧರಿಸಲ್ಪಡುತ್ತದೆ, (ವ್ಯವಹಾರ ಸಾಧನವಾಗುತ್ತದೆ) ಎಂದರ್ಥ. ಭರತ ಎಂದರೆ ಅಗ್ನಿ. ಇದು ಪ್ರಾಣವಾಗಿ ಹವಿಸ್ಸನ್ನು ಧರಿಸುತ್ತದೆ ಎಂದು ವಾಜಸನೇಯದಲ್ಲಿ ಹೇಳಿದೆ. ತತ್ಸಂಬದ್ಧವಾದದ್ದು ಭಾರತೀ. ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದೆಯೆಂದು ಉಪನಿಷತ್ತಿನಲ್ಲಿ ಹೇಳಿದೆ. ಅಥವಾ ಭರತವೆಂಬುದು ಋತ್ವಿಕ್ಕಿನ ಹೆಸರು. ಸ್ತುತಿ ಸಾಧನವಾದುದರಿಂದ ಋತ್ವಿಕ್ಸಂಬಂಧವಾದದ್ದು ಭಾರತೀ ಆಗುತ್ತದೆ. ಉಧಾಹರಣೆ—

**ಆ ಭಾರತೀ ಭಾರತೀಭಿಃ ಸಜೋಷಾ (ಋ. ಸಂ. ೨-೮-೨೩-೩)** ॥

(೧೭) **ಧಮನಿಃ** ॥ ಗತ್ಯರ್ಥಕವಾದ ಧಮ ಧಾತುವಿಗೆ 'ಅರ್ತಿಸೃಧೃಧಮ್ಯ—' ಸೂತ್ರದಿಂದ ಅನಿ ಪ್ರತ್ಯಯ. ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥ ಹೇಳಿರುವುದರಿಂದ ಇದರಿಂದ ಅರ್ಥವು ತಿಳಿಯಲ್ಪಡುತ್ತದೆ, ಸಾಧು ಅಸಾಧು ವಿಭಾಗದಿಂದ ವಿದ್ವಾಂಸರಿಂದ ತಿಳಿಯಲ್ಪಡುತ್ತದೆ ಎಂದರ್ಥ. ವಧಾರ್ಥದಲ್ಲಿಯೂ ಧಮ ಧಾತು ಇದೆಯೆಂದು ನಿರುಕ್ತದಲ್ಲಿ ಹೇಳಿರುವುದರಿಂದ

ಶಾಪಾಕ್ರೋಶಾದಿ ರೂಪನಾದ ಇವರಿಂದ ಹಿಂಸಿಸಲ್ಪಡುತ್ತದೆ ಎಂದೂ ಅರ್ಥವಾಗುತ್ತದೆ ವಾಕ್ಕೇ ವಜ್ರವೆಂದು ಬ್ರಾಹ್ಮಣದಲ್ಲಿ ಹೇಳಿದೆ. 'ಮುಖದಿಂದ' ವಾಕ್ಕೆಂಬ ಬಾಣಗಳು ಹೊರಡುತ್ತವೆಂದು ಭಾರತದಲ್ಲಿಯೂ ಹೇಳಿದೆ. ಉದಾಹರಣೆ—

**ಇಂದ್ರೇಷಿತಾಂ ಧಮನಿಂ ಪಪ್ರಥನ್ನಿ—(ಋ. ಸಂ. ೨-೬.೪-೩) ||**

**(೧೮) ನಾಲೀಃ ||** ಗಂಧನಾರ್ಥಕವಾದ ನಲ ಧಾತುವಿಗೆ ಬಹುಲಗ್ರಹಣದಿಂದ 'ವಸಿ ವಪಿ ಯಜಿ—' ಸೂತ್ರದಿಂದ ವಿಹಿತವಾದ ಇಞ್ ಪ್ರತ್ಯಯ ಬರುತ್ತದೆ. ಇದು ಞಿತ್ತಾದುದರಿಂದ "ಅತ ಉಪಧಾಯಾಃ' ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. ನಾಲಿ ಎಂಬ ಇಕಾರಾಂತ ಕೃದಂತಕ್ಕೆ ಸ್ತ್ರೀತ್ವದಲ್ಲಿ ಙೀಷ್. ನಾಲೀ ಙ್ಯಂತವಾಗಿದ್ದರೂ ವ್ಯತ್ಯಯದಿಂದ ಸು ಲೋಪ ಬರುವುದಿಲ್ಲ. ರುತ್ವ, ವಿಸರ್ಗ. ಗಂಧನೆಂದರೆ ಅರ್ದನವೆಂದು ಹೇಳಿದೆ. ಹಿಂಸಾತ್ಮಕವಾದ ಸೂಚನಕ್ಕೆ ಅರ್ದನವೆಂದು ಹೆಸರು. ಸೂಚಿಸುವುದು ವಾಕ್. ಉದಾಹರಣೆ—

**ಶ್ಯಮುಸ್ಯ ಧಮ್ನ್ಯತೇ ನಾಲೀಃ (ಋ. ಸಂ. ೮-೭-೨೩-೭) ||**

**(೧೯) ಮೇನಾ ||** ಪೂಜಾರ್ಥಕವಾದ ಮಾನ ಧಾತುವಿಗೆ 'ಬಹುಲಮನ್ಯತ್ರಾಪಿ ಇನಚ್ ಭವತಿ' (ಉ. ೨-೪೬) ಎಂಬ ಸೂತ್ರದಿಂದ ಇನಚ್ ಪ್ರತ್ಯಯ. ಮಾನ+ಇನ ಎಂದಿರುವಾಗ ಬಹುಲಗ್ರಹಣದಿಂದ ಧಾತು ನಕಾರಕ್ಕೆ ಲೋಪ. ಗುಣ ಆದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಗುರು ಮುಂತಾದವರು ಉಪದೇಶ ವಾಕ್ಯದಿಂದ ಇದರಿಂದ ಪೂಜಿಸಲ್ಪಡುತ್ತಾರೆ, ಸ್ವಯಂ ದೇವತೆಯಾದುದರಿಂದ ಪೂಜಿಸಲ್ಪಡುವುದು. ಉದಾಹರಣೆ—

**ಆನ್ಮೇನಾಂ ಕೃಣ್ವನ್ನಚ್ಯುತೋ ಭುವದ್ಗೋಃ (ಋ. ಸಂ. ೮-೬-೧೦೩)** ಮೇನಾಂ ಎಂಬುದಕ್ಕೆ ಗರ್ಜಿತ ಶಬ್ದವನ್ನು ಎಂದು ಮಾಧವನು ವ್ಯಾಖ್ಯಾನಮಾಡಿರುತ್ತಾನೆ.

**(೨೦) ಮೇಲಿಃ ||** ಸಂಗಮನಾರ್ಥಕವಾದ ಮಿಲ ಧಾತುವಿಗೆ ಹಿಂದಿನಂತೆ ಬಹುಲಗ್ರಹಣದಿಂದ ಇಞ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಮೇಲಿಃ. ಅರ್ಥದಿಂದ ಕೂಡಿರುವುದು ವಾಕ್. 'ವಾಗರ್ಥಾವಿವ ಸಂಪೃಕ್ತೌ' ಎಂದು ಕಾಳಿದಾಸನು ಹೇಳಿರುತ್ತಾನೆ. ಮತ್ವರ್ಥೀಯ ಪ್ರತ್ಯಯ ಬಂದು ಛಾಂದಸವಾಗಿ ಲುಕ್ ಬಂದರೆ ಮೇಲಿ ಪದಕ್ಕೆ ವಾಗ್ಮೀ (ಮಾತುಳ್ಳವನು) ಎಂದರ್ಥವಾಗುತ್ತದೆ. ಉದಾಹರಣೆ—

**‹ ಮೇಲಿಂ ಮದಂತಂ ಪತ್ರೋರುಪಸ್ಥೆ ' (ಋ. ಸಂ. ೩-೧-೨೭-೪)**

**(೨೧) ಸೂರ್ಯ್ಯಾ ||ಸರ್ತೇರ್ಗತ್ಯರ್ಥಾತ್, ಸುವತೇರ್ವಾ ಪ್ರೇರಣಾರ್ಥಾತ್ ‹ ರಾಜಸೂಯ ಸೂರ್ಯ- (ಪಾ. ಸೂ. ೩-೧-೧೧೪) ಇತ್ಯಾದಿನಾ ನಿಪಾತನಾತ್ ಕ್ಯಪಿ ಸರ್ತೇರೂತ್ವಂ ಸುವತೇರ್ವಾ ರುಡಾಗಮಃ ||**

ಗತ್ಯರ್ಥಕವಾದ ಸೃಧಾತು ಅಥವಾ ಪ್ರೇರಣಾರ್ಥಕವಾದ ಷುಧಾತು ಇವುಗಳಿಗೆ ಕ್ಯಪ್ ಪ್ರತ್ಯಯ ಬಂದು ಸೂರ್ಯಾ ಎಂದು ನಿಪಾತಿತವಾಗಿದೆ. ನಿಪಾತದಿಂದಲೇ ಸೃಧಾತುವಾದರೆ ಊತ್ವವೂ, ಷುಧಾತುವಾದರೆ ರುಡಾಗಮವೂ ಸಿದ್ಧವಾಗಿದೆ. ಸ್ತೋತ್ರಮಾಡುವವರನ್ನು ಕುರಿತು ಹೋಗುತ್ತದೆ, ‹ ಇದನ್ನು ಮಾಡು ' ಎಂದು ಮನುಷ್ಯರಿಗೆ ಕರ್ಣಶಷ್ಕುಲೀರೂಪ. ಶ್ರೋತ್ರ+ತ್ರಾಕಾಶವನ್ನು ಹೊಂದಿ ಪ್ರೇರೇಪಿಸುತ್ತದೆ ಎಂದರ್ಥ. ಅಥವಾ ಸುಪೂರ್ವಕವಾದ ಈರ ಧಾತುವಿಗೆ " ಕೃತ್ಯಲ್ಯುಟೋ ಬಹುಲಮ್ " ಎಂಬುದರಿಂದ ಕರ್ಮಣಿಯಲ್ಲಿ ಕ್ಯಪ್ ಪ್ರತ್ಯಯ ಬಂದು ನಿಪಾತಿತವಾಗಿದೆ. ಚನ್ನಾಗಿ ಉಚ್ಚರಿಸಲ್ಪಡುವುದು

ಸೂರ್ಯಾ. ಅಥವಾ ಪ್ರೇರಣಾರ್ಥಕವಾದ ಷೂ ಧಾತುವಿಗೆ "ಸುಸೂಧೀಗೃಧಿಭ್ಯಃ ಕ್ರನ್" ಸೂತ್ರದಿಂದ ಕ್ರನ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಉಚ್ಚಾರಣಕಾಲದಲ್ಲಿ ಪ್ರಾಣದಿಂದ ಪ್ರೇರೇಪಿಸಲ್ಪಡುವುದು, ಸೂರಾ. 'ಛಂದಸಿ ಸ್ವಾರ್ಥೇ—" ಎಂಬುದರಿಂದ ಇದಕ್ಕೆ ಯತ್‌ಪ್ರತ್ಯಯ. ಆಕಾರ ಲೋಪ. ಸೂರ್ಯಾ. ಅಥವಾ "ಸೂರಿಷು ಸಾಧುಃ" ಎಂಬರ್ಥದಲ್ಲಿ 'ತತ್ರ ಸಾಧುಃ" ಸೂತ್ರದಿಂದ ಯತ್‌ಪ್ರತ್ಯಯ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

**(೨೨) ಸರಸ್ವತೀ ॥ ಸರ್ತೇರಸುನ್ ಸರಃ। ಗದ್ಯಪದ್ಯಾದಿರೂಪೇಣ ಪ್ರಸರಣಮಸ್ಯಾಸ್ತೀತಿ, "ಅಸ್ಮಾಯಾಮೇಧಾಸ್ರಜೋ ವಿನಿಃ" (ಪಾ-ಸೂ-೫-೨-೧೨೧) "ಬಹುಲಂ ಛಂದಸಿ' ಇತ್ಯಪ್ರತ್ಯೇಯರ್ಮತುಪಿ ಙೀಪ್ ॥**

ಗತ್ಯರ್ಥಕವಾದ ಸೃ ಧಾತುವಿಗೆ ಅಸುನ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣಃ ಸರಸ್. ಸಾಂತಪದವಾಗುತ್ತದೆ. ಗದ್ಯಪದ್ಯಾದಿ ರೂಪದಿಂದ ಪ್ರಸರಣವೆಂದರ್ಥ. ಅದು ಉಳ್ಳದ್ದು ಎಂಬ ಮತ್ವರ್ಥದಲ್ಲಿ ಅಸಂತವಾದುದರಿಂದ ವಿನಿಪ್ರತ್ಯಯ ಪ್ರಾಪ್ತವಾದರೂ ಛಂದಸ್ಸಿನಲ್ಲಿ ಬಹುಲಗ್ರಹಣದಿಂದ ಮತುಪ್‌ಪ್ರತ್ಯಯ ಬಂದು ಅದು-ಸರ್ಥೆಯ ಪರದಲ್ಲಿರುವುದರಿಂದ ವತ್ವ ಹೊಂದುತ್ತದೆ. ಉಗಿತ್ತಾದುದರಿಂದ ಙೀಪ್. ಸರಸ್ವತೀ ಅಥವಾ ಸರಃ ಎಂಬುದು ನೀರಿನ ಹೆಸರು ಅದು ಉಳ್ಳದ್ದು, ವೃಷ್ಟ್ಯಧಿದೇವತೆಯಾದುದರಿಂದ ಮಾಧ್ಯಮಿಕವಾಕ್ ಸರಸ್ವತೀ. ಇದೇ ನದೀನಾಮ, ದೇವತಾನಾಮ ವಾಗುತ್ತದೆಂದು ಭಾಷ್ಯದಲ್ಲಿ ಹೇಳಿದೆ. ಉದಾಹರಣೆ—

**ಪಾವಕಾ ನಃ ಸರಸ್ವತೀ (ಋ. ಸಂ-೧-೧-೬-೩) ನದಿಗೆ —'ಇಯಂ ಶುಷ್ಮೇಭಿಃ' (ಋ. ಸಂ-೪-೮-೩೦-೨)**

**(೨೩) ನಿವಿತ್** । ನಿ ಉಪಸರ್ಗಪೂರ್ವಕವಾದ ಜ್ಞಾನಾರ್ಥಕವಾದ ವಿದ್ ಧಾತುವಿಗೆ 'ಸತ್ಸೂದ್ವಿಷದ್ರುಹದುಹ—' ಸೂತ್ರದಿಂದ ಕ್ವಿಪ್‌ಪ್ರತ್ಯಯ. ಇದಕ್ಕೆ ಸರ್ವಲೋಪ. ಇಲ್ಲಿ ಅಂತರ್ಭೂತಣ್ಯಂತಾರ್ಥ ಹೇಳಬೇಕು. ನಿವಿತ್. ಚೆನ್ನಾಗಿ ತನ್ನ ಅರ್ಥವನ್ನು ತಿಳಿಸಿಕೊಡುವುದು. ಉದಾಹರಣೆ—

**'ತಾನ್ ಪೂರ್ವಯಾ ನಿವಿದಾ ಹೂಮಹೇ ವಯಮ್' (ಋ. ಸಂ-೧-೬-೧೫-೩)**

**(೨೪) ಸ್ವಾಹಾ ॥ ಅತ್ರ ನಿರುಕ್ತಮ್-ಸ್ವಾಹೇತ್ಯೇತತ್ ಸು ಆಹೇತಿ ವಾ, ಸ್ವಾ ವಾಗಾಹೇತಿ ವಾ, ಸ್ವಂ ಪ್ರಾಹೇತಿ ವಾ, ಸ್ವಾಹುತಂ ಹವಿರ್ಜುಹೋತೀತಿ ವಾ (ನಿರು-೮-೨೦)**

ಸ್ಕಂದಸ್ವಾಮಿಯು ನಿರುಕ್ತದಲ್ಲಿ ನಿರ್ವಚನ ಮಾಡಿರುವಂತೆ ವ್ಯಾಖ್ಯಾನಮಾಡಿರುತ್ತಾನೆ. ಸ್ವಾಹಾ ಪದವು 'ಸ್ವಾಹಾಕೃತಿ' ಪದದ ಪೂರ್ವಭಾಗ, ಆಕಾರಾಂತವಾಗಿದೆ. "ಆಹುತಿಗಳು ವಷಟ್ಕೃತಗಳಾಗದಿದ್ದರೆ ಸ್ವಾಹಾಕೃತವಾಗದಿದ್ದರೆ ದೇವತೆಗಳಿಗೆ ಮುಟ್ಟುವುದಿಲ್ಲವೆಂದು" ಶತಪಥ ಬ್ರಾಹ್ಮಣದಲ್ಲಿ ಹೇಳಿದೆ. ಸ್ವಾಹಾಕಾರವು ಸಂಪ್ರದಾನವಾದುದರಿಂದ ನಿಯತವಾಗಿ ಮಂತ್ರದ ಕೊನೆಯಲ್ಲಿರುತ್ತದೆ. ಇದು ಯಾವ ಮಂತ್ರದ ಕೊನೆಯಲ್ಲಿ ಶ್ರುತವಾಗುವುದೋ ಆ ಹೋಮ ಮಂತ್ರವು ಮಂಗಲಕರಾರ್ಥವನು ಹೇಳುತ್ತದೆ. ಅಥವಾ ಬ್ರಹ್ಮನ ಆತ್ಮೀಯವಾದ ಮಾತು ಹೇಳುತ್ತದೆ ಎಂದರ್ಥ. ಸ್ವಾಹಾಕಾರ ರೂಪವಾದ ವಾಕ್ ಬ್ರಹ್ಮನಿಂದ ಸೃಷ್ಟವಾದುದೆಂದು ತಾತ್ಪರ್ಯ. ಅಥವಾ ಯಜಮಾನನಿಗೆ ತನ್ನನ್ನು ಹೇಳುವುದು ಸ್ವಾಹಾ. ದೇವತೆಗೋಸ್ಕರ ಕೊಡಲ್ಪಟ್ಟ ಹವಿಸ್ಸು ಸ್ವಪದದಿಂದ ವಾಚ್ಯವಾಗಿದೆ. ಸ್ವಾಹಾಕಾರಕ್ಕೆ ಸಂಪ್ರದಾನತ್ವವು ಇದರಿಂದ ಸ್ಪಷ್ಟವಾಗಿ ಪ್ರತೀತವಾಗುತ್ತದೆ. ಅಥವಾ

ಈ ಸ್ವಾಹಾಕಾರದಿಂದ ಹೋಮಿಸುತ್ತಾನೆ. ಸ್ವಾಹಾಕಾರದಿಂದ ಹೋಮಿಸುವುದೇ ಶ್ರೇಷ್ಠವಾದದ್ದು. ಈ ಅರ್ಥ ಸ್ವೀಕರಿಸಿದಾಗ ಸುಪೂರ್ವಕ ಹು ಧಾತುವಿನಿಂದ ನಿಷ್ಪನ್ನವಾದ ಶಬ್ದವಾಗುತ್ತದೆ. 'ತಾನಾಗಿ ಸರಸ್ವತಿಯು ಹೇಳುತ್ತಾಳೆ' ಎಂದು ಬ್ರಾಹ್ಮಣದಲ್ಲಿ ವಿವರಣೆ ಇದೆ. "ಸ್ವಯಮೇವ ಆಹ" ಎಂಬ ಅರ್ಥವನ್ನು ಪ್ರಕಾಶಪಡಿಸುವ ನಿಪಾತ ಸ್ವಾಹಾ ಎಂದಾಗಿದೆ, ಪದ ಸಂಸ್ಕಾರ ತಿಳಿಯದೆ ಅವಗ್ರಹ ಮಾಡಿಲ್ಲ. ಕ್ಷೀರಸ್ವಾಮಿಯು 'ಚೆನ್ನಾಗಿ ಕರೆಯುವುದು ಸ್ವಾಹಾ' ಎಂದಿರುತ್ತಾನೆ. ಅವನ ಮತದಲ್ಲಿ ಇದು ಅವ್ಯಯವಲ್ಲ. ಅಗ್ನಿಯ ಹೆಂಡತಿಯ ಹೆಸರು. ಭಾಷ್ಯದಲ್ಲಿ ಮಾತ್ರ ವಾಙ್ನಾಮವಾಗಿ ನಿರ್ವಚನ ಮಾಡಿರುವುದರಿಂದ ಹಿಂದೆ ಅದರ ನಿರ್ವಚನ ನಾನಾ ರೀತಿಯಾಗಿ ತೋರಿಸಿದೆ. ಅದರಲ್ಲಿ ಉತ್ತಮ ನಿರ್ವಚನವನ್ನು ವಿದ್ವಾಂಸರು ಅಂಗೀಕರಿಸಬಹುದು. ಈ ಮಾತು ಅಗ್ನಿಯಿಂದ ಉಂಟಾದುದರಿಂದ ಮಾತಿಗೂ ಅಗ್ನಿಗೂ ಕಾರ್ಯಕಾರಣಭಾವವಿದೆ. ಆದುದರಿಂದ ಅಗ್ನಿ ಸಂಬಂಧವಾದ ವಾಕ್ಕಿಗೂ ಸ್ವಾಹಾ ಎಂದು ಹೆಸರು. ಸ್ವಾಹಾಕಾರ ಪಕ್ಷದಲ್ಲಿ ನಿಗಮ ಪ್ರಸಿದ್ಧನಾಗಿದೆ. ಇತರಾರ್ಥಗಳಲ್ಲಿ ನಿಗಮ ಹುಡುಕಬೇಕು.

(೨೫) **ವಗ್ನುಃ** ॥ ಪರಿಭಾಷಣಾರ್ಥಕವಾದ ವಚಧಾತುವಿಗೆ 'ವಚೇರ್ಗಶ್ಚ' (ಉ-೩-೩೨) ಸೂತ್ರದಿಂದ ನು ಪ್ರತ್ಯಯ. ಚಕಾರಕ್ಕೆ ಗಕಾರಾದೇಶ ಉಚ್ಚರಿಸಲ್ಪಡುವುದು. ವ್ಯವಹಾರಕಾಲದಲ್ಲಿ ಪ್ರಯೋಗಿಸಲ್ಪಡುವುದು. ಉದಾಹರಣೆ—

**'ವಗ್ನು ಮಿಯರ್ತಿ ಯಂ ವಿದೇ' (ಋ. ಸಂ-೬-೮-೪-೧) 'ಇಂದ್ರಸ್ಯೇವ ವಗ್ನು ರಾ ಶೃಣ್ವ ಆಜೌ' (ಋ. ಸಂ-೭-೪-೧೩-೩)॥**

(೨೬) **ಉಪಬ್ದಿಃ** ॥ ಉಪಸರ್ಗಪೂರ್ವಕವಾದ ಗತ್ಯರ್ಥಕ ಪದಧಾತುವಿಗೆ 'ಇನ್ ಸರ್ವಧಾತುಭ್ಯಃ' ಸೂತ್ರದಿಂದ ವಿಹಿತವಾದ ಇನ್‌ಪ್ರತ್ಯಯ. ಉಪ+ಪದ್+ಇ. ಎಂದಿರುವಾಗ ಬಹುಲಗ್ರಹಣದಿಂದ ಧಾತುವಿನ ಉಪಧಾ ಅಕಾರಕ್ಕೆ ಲೋಪ. ಜಶ್‌ವಿಧಿಯಲ್ಲಿ 'ನ ಪದಾಂತದ್ವಿರ್ವಚ—' (ಪಾ. ಸೂ-೧-೧-೫೮) ಸೂತ್ರದಿಂದ ಸ್ಥಾನಿವದ್ಭಾವಕ್ಕೆ ನಿಷೇಧ ಹೇಳಿರುವುದರಿಂದ, ಉಪ+ಪ್+ದ್+ಇ ಎಂದಿರುವಾಗ 'ಝಲಾಂ ಜಶ್ ಝಶಿ' ಸೂತ್ರದಿಂದ ಪಕಾರಕ್ಕೆ ಜಶ್ತ್ವ. (ಬಕಾರ) ಉಪಬ್ದಿಃ. ಭಕ್ತರ ಸಮೀಪಕ್ಕೆ ಹೋಗುವುದು, ಆಚಾರ್ಯರ ಸಮೀಪದಲ್ಲಿ ತಿಳಿಯಲ್ಪಡುವುದು ಎಂದರ್ಥ. ಅಥವಾ ಉಪಪೂರ್ವಕವಾದ ದಾನಾರ್ಥಕ ಧಾತುವಿಗಾಗಲೀ, ಖಂಡನಾರ್ಥಕ ದೋ ಧಾತುವಿಗಾಗಲಿ ರಕ್ಷಣಾರ್ಥಕ ದಯ ಧಾತುಗಾಗಲೀ. 'ಕೃತ್ಯಲ್ಯುಟೋ ಬಹುಲಮ್' ಸೂತ್ರದಲ್ಲಿರುವ ಬಹುಲಗ್ರಹಣದಿಂದ "ಉಪಸರ್ಗೇ ಘೋಃ ಕಿಃ' (ಪಾ ಸೂ-೩-೩-೯೨) ಸೂತ್ರದಿಂದ ಘು ಸಂಜ್ಞೆ ಇರುವುದರಿಂದ ಕರ್ತ್ರರ್ಥದಲ್ಲಿ ಕಿಪ್ರತ್ಯಯ ಬಕಾರಾಗನು. ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ. ಸಮೀಪಕ್ಕೆ ಬಂದು ಪ್ರಯೋಗಿಸುವವರೆಗೆ ಇಷ್ಟಾರ್ಥವನ್ನು ಕೊಡುತ್ತದೆ, ತರ್ಕಸಮಯದಲ್ಲಿ ಪ್ರತಿವಾದಿಗಳ ಅಜ್ಞಾನವನ್ನು ಖಂಡಿಸುತ್ತದೆ (ನಾಶಮಾಡುತ್ತದೆ) ಭಕ್ತರನ್ನು ರಕ್ಷಿಸುವುದರಿಂದ ಉಪಬ್ದಿಯಾಗುತ್ತದೆ ಉದಾಹರಣೆ—

**ಆಘೋಷಯಂತಃ ಪೃಥಿವೀಮುಪಬ್ದಿಭಿಃ (ಋ. ಸಂ-೮-೪-೨೯-೪) 'ಉಪಬ್ದಿರಿಯರ್ತಿ ಸೋಮಃ (ಋ. ಸಂ-೭-೩-೨೫-೫) ಶೃಣ್ವ ಆಯುತಾ ಮುಪಬ್ದಿಃ (ಋ. ಸಂ-೨-೪-೯-೨) ॥**

(೨೭) **ಮಾಯುಃ** ॥ ಡುಮಿಞ್-ಪ್ರಕ್ಷೇಪಣೇ ಧಾತು. ಡು ಇತ್ತಾಗುತ್ತದೆ ಇದಕ್ಕೆ 'ಕೃವಾಪಾಜಿಮಿಸ್ವದಿಸಾಧ್ಯ-ಶೂಭ್ಯ ಉಣ್' (ಉ-೧-೧) ಸೂತ್ರದಿಂದ ಉಣ್‌ಪ್ರತ್ಯಯ. 'ಮೀನಾತಿ ಮಿನೋತಿ ದೀಙಾಂ ಲ್ಯಪಿ ಚ' (ಪಾ-ಸೂ-೬-೧-೫೦) ಸೂತ್ರದಿಂದ ಧಾತುವಿನ ಇಕಾರಕ್ಕೆ ಆಕಾರಾದೇಶ. ಮಾ+ಉ ಎಂದಿರುವಾಗ "ಆತೋಯುಕ್ ಚಿಣ್‌ಕೃತೋಃ"

ಸೂತ್ರದಿಂದ ಯುಗಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬಂದರೆ ಮಾಯುಃ ಎಂದಾಗುತ್ತದೆ. ಉಚ್ಚರಿಸಲ್ಪಡುವುದು. ಪ್ರೇರೇಪಿಸಲ್ಪಡುವುದು. ಭೂಮಿಯಲ್ಲಿ ಮಳೆ ನೀರನ್ನು ಕೊಡುವುದು ಎಂದರ್ಥ. ಉದಾಹರಣೆ—

**ಮಿಮಾತಿ ಮಾಯುಂ ಧ್ವಸನಾವಧಿಶ್ರಿತಾ (ಋ. ಸಂ. ೨-೩-೧೯-೪)**

(೨೮) **ಕಾಕುತ್** ॥ ಶಬ್ದಾರ್ಥಕವಾದ ಕೈಧಾತುವಿಗೆ ಸಂಪದಾದಿಗಣಪಠಿತವಾದುದರಿಂದ ಕ್ವಿಪ್ ಪ್ರತ್ಯಯ. 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ಧಾತುವಿಗೆ ಆತ್ವ. ಶಬ್ದಮಾಡುವುದು ಕಾ. ಮೃಗಯ್ವಾದಿಗಣಪಠಿತವಾದುದರಿಂದ ಕುಪ್ರತ್ಯಯ. ಬಹುಲಗ್ರಹಣದಿಂದ ತಕಾರ ಅಧಿಕವಾಗಿ ಬರುತ್ತದೆ. ಅಥವಾ ಲೌಲ್ಯಾರ್ಥಕವಾದ ಕಕ ಧಾತುವಿಗೆ ಬಹುಲ ಗ್ರಹಣದಿಂದ ಉತಿನ್‌ಪ್ರತ್ಯಯ. ಅದು ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. ಕಾಕುತ್. ಚಂಚಲವಾಗಿರುವುದು. ಶಬ್ದವು ಒಂದೇ ಅರ್ಥದಲ್ಲಿ ನಿಶ್ಚಿತವಾಗಿರುವುದಿಲ್ಲ. ಅನೇಕ ಶಬ್ದಗಳು ಅನೇಕಾರ್ಥದಲ್ಲಿರುತ್ತವೆ. ಒಂದೇ ಅರ್ಥ ಕೊಡುವ ಪದವೂ ಕೂಡಾ ಕಾಕ್ವಾದಿಗಳಿಂದ (ಧ್ವನಿವಿಕಾರ) ಭಿನ್ನಾರ್ಥಕವಾಗುತ್ತದೆ. ಅಥವಾ ಕಕುತ್ ಅಂದರೆ ಉಚ್ಚಸ್ಥಾನ. ಅದು ಉಳ್ಳದ್ದು ಕಾಕುತ್. ಮತ್ವರ್ಥೀಯ ಪ್ರತ್ಯಯಕ್ಕೆ ಲುಕ್, ಛಾಂದಸವಾಗಿ ದೀರ್ಘವೂ ಬಂದಿರುತ್ತದೆ. ಉದಾಹರಣೆ—

**ಯಾ ತೇ ಕಾಕುತ್ ಸುಕೃತಾ ಯಾ ವರಿಷ್ಠಾ (ಋ. ಸಂ. ೪-೭-೧೩-೨)॥**

(೨೯) **ಜಿಹ್ವಾ** ॥ 'ಶೇವವಹ್ವಜಿಹ್ವಾಗ್ರೀವಾ—' ಸೂತ್ರದಿಂದ ನಿಪಾತಿತವಾಗಿದೆ. ಆಸ್ವಾದನಾರ್ಥಕವಾದ ಲಿಹ ಧಾತುವಿಗೆ ವಪ್ರತ್ಯಯ, ಆದಿಯಲಕಾರಕ್ಕೆ ಜಕಾರಾದೇಶಗಳು ಬಂದಿರುತ್ತವೆ. ಗ್ರಂಥವಿಷಯ ಸಂದರ್ಭಗಳನ್ನು ಇದರಿಂದ ಆಸ್ವಾದನೆ ಮಾಡುತ್ತಾನೆ ಎಂದರ್ಥ. ಅಥವಾ ಆಙ್‌ಪೂರ್ವಕ ಹ್ವೇಞ್‌ಧಾತುವಿಗಾಗಲೀ, ಹುಧಾತುವಿಗಾಗಲೀ ಯಙ್ ಬಂದ ಅದರ ಮೇಲೆ ಕ ಪ್ರತ್ಯಯ, ಯಙಂತವಾದರೆ 'ಸನ್ಯಙೋಃ' ಸೂತ್ರದಿಂದ ದ್ವಿತ್ವಾದಿ. ಹ್ವೇಞ್‌ಧಾತುವಾದರೆ 'ಅಭ್ಯಸ್ತಸ್ಯಚ' ಸೂತ್ರದಿಂದ ಸಂಪ್ರಸಾರಣ ಬಂದು ಹು ಆಗುತ್ತದೆ. "ನಧಾತುಲೋಪ ಆರ್ಧಧಾತುಕೇ" ಸೂತ್ರದಿಂದ ಗುಣನಿಷೇಧ ಬರುವುದರಿಂದ ಉವಙ್ ಬಂದು ಉಕ್ತರೂಪವಾಗಿದೆ. ಜೋಹುವಾ ಎಂದಿರುವಾಗ ಪೃಷೋದರಾದಿಪಠಿತವಾದುದರಿಂದ ಓಕಾರಕ್ಕೆ ಇಕಾರಾದೇಶ. ಉಕಾರಕ್ಕೆ ಲೋಪ. ಪುನಃ ಪುನಃ ಕರೆಯುತ್ತದೆ, ಶಬ್ದಮಾಡುತ್ತದೆ, ರಸಾದಿಗಳನ್ನು ಸ್ವೀಕರಿಸುತ್ತದೆ ಇದರಲ್ಲಿ ಹೋಮ ಮಾಡುತ್ತಾನೆ ಇತ್ಯಾದ್ಯರ್ಥಗಳಾಗುತ್ತವೆ. ಉದಾಹರಣೆ—

**ಪುರೋ ವಿಪ್ರಾ ದಧಿರೇ ಮಂದ್ರಜಿಹ್ವಮ್ (ಋ. ಸಂ. ೩-೭-೨೬-೧) " ಅನರ್ವಾಣಂ " ವೃಷಭಂ ಮಂದ್ರ ಜಿಹ್ವಮ್ (ಋ. ಸಂ. ೨-೫-೧೨-೧) ॥**

(೩೦) **ಘೋಷಃ** ॥ ಶಬ್ದಾರ್ಥಕವಾದ ಘುಷ್‌ಧಾತುವಿಗೆ 'ಹಲಶ್ಚ' (ಪಾ. ಸೂ. ೩-೩-೧೨೧) ಸೂತ್ರದಿಂದ ಘಞ್‌ಪ್ರತ್ಯಯ. ಲಘೂಪಧಗುಣ. ಶಬ್ದಮಾಡಲ್ಪಡುವುದು ಘೋಷ. ಉದಾಹರಣೆ—

**ಉಕ್ಷೋ ಪಿತೃಭ್ಯಾಂ ಶ್ರುತಿ ದಾನು ಘೋಷಮ್ (ಋ-ಸಂ-೩-೧-೨-೧) 'ಇಂದ್ರೇ ಘೋಷಾ ಅಸೃಕ್ಷತ' (ಋ. ಸಂ-೨-೫-೧೨-೧)**

(೩೧) **ಸ್ವರಃ** ॥ ಶಬ್ದ, ಉಪತಾಪಾರ್ಥವನ್ನು ಕೊಡುವ ಸ್ವೃಧಾತುವಿಗೆ 'ಪುಂಸಿ ಸಂಜ್ಞಾಯಾಂ ಘಃ—' ಸೂತ್ರದಿಂದ ಘಪ್ರತ್ಯಯ. "ಸಾರ್ವಧಾತುಕಾ—" ಸೂತ್ರದಿಂದ ಧಾತು ಋಕಾರಕ್ಕೆ ಗುಣ. 'ಸ್ವರ್ಯತೇ ಅನಯಾ' ಇದರಿಂದ

ದೇವತೆಯು ಕರೆಯಲ್ಪಡುತ್ತದೆ, ಮರ್ಮಭೇದಕ ವಾಕ್ಯದಿಂದ ವ್ಯಥೆಪಡಿಸುತ್ತದೆ ಎಂದರ್ಥ. ಸ್ವೃಧಾತುವಿಗೆ ಪೂಜಾರ್ಥವು ನಿರುಕ್ತದಲ್ಲಿ ಹೇಳಿದೆ. "ಗೋಚರ ಸಂಚರ—" (ಪಾ. ಸೂ-೩-೩-೧೧೯) ಸೂತ್ರದಲ್ಲಿ ಚಕಾರವು ಅನುಕ್ತಸಮುಚ್ಚಾಯಕವಾದುದರಿಂದ ಘಪ್ರತ್ಯಯ. ಇದರಿಂದ ದೇವತೆಯು ಪೂಜಿಸಲ್ಪಡುತ್ತದೆ ಎಂದರ್ಥ. ಅಥವಾ ಕರ್ತ್ರರ್ಥದಲ್ಲಿ ಪಚಾದಿಗಣಪಠಿತವಾದುದರಿಂದ ಸ್ವಧಾತುವಿಗೆ ಅಚ್‌ಪ್ರತ್ಯಯ. ಇಂದ್ರಾದಿದೇವತಾಪೂಜಕವಾದದ್ದು ಎಂದರ್ಥ. ಉದಾಹರಣೆ—

**ಸ್ವರಶ್ಚ ಮೇ ಶ್ಲೋಕಶ್ಚ ಮೇ (ಯ-ವಾ-ಸಂ-೧೮-೧)**

(೩೨) ಶಬ್ದಃ ॥ ಆಕ್ರೋಶಾರ್ಥಕವಾದ ಶಪ್‌ಧಾತುವಿಗೆ "ಶಾಶಪಿಭ್ಯಾಂ ದನೌ" (ಉ-೪-೯೭) ಸೂತ್ರದಿಂದ ದನ್‌ಪ್ರತ್ಯಯ. ಇದರಿಂದ ಶಪಿಸುತ್ತಾನೆ ಎಂದರ್ಥ. ಸಂಸ್ಕಾರದಿಂದ ಕೂಡಿದ ಮಾತಿಗೆ ಶಬ್ದವೆಂದು ಹೆಸರು. ಯೋಗವಿಭಾಗದಿಂದ ಪಕಾರಕ್ಕೆ ಬಕಾರಾದೇಶ. ಅಂತರಿಕ್ಷದಲ್ಲಿ ಶಬ್ದವನ್ನು ಮಾಡುತ್ತದೆ ಎಂದೂ ಅರ್ಥವಾಗುತ್ತದೆ. ಉದಾಹರಣೆ—

**'ಶಬ್ದೋ ರೋಗಿಣೋ ಮೀಮಾಂಸಾ ಚ'** ॥

(೩೩) ಸ್ವನಃ ॥ ಶಬ್ದಾರ್ಥಕವಾದ ಸ್ವನಧಾತುವಿಗೆ 'ಸ್ವನಹಸೋರ್ವಾ' (ಪಾ. ಸೂ-೩-೩-೬೨) ಸೂತ್ರದಿಂದ ಅಪ್‌ಪ್ರತ್ಯಯ. ಶಬ್ದಮಾಡುವುದು ಸ್ವನ- ಉದಾಹರಣೆ—

**ಸಿಂಧೋರೂರ್ಮೇರಿವ ಸ್ವನಃ (ಋ-ಸಂ-೭-೧-೩-೨)** ॥

(೩೪) ಋಕ್ ॥ ಸ್ತುತ್ಯರ್ಥಕವಾದ ಋಚ ಧಾತುವಿಗೆ ಸಂಪದಾದಿ ಗಣಪಠಿತವಾದುದರಿಂದ ಕ್ವಿಪ್‌ಪ್ರತ್ಯಯ. ಇದರಿಂದ ಸ್ತೋತ್ರಮಾಡುತ್ತಾರೆ, ಅಥವಾ ತಾನೇ ದೇವತೆಯಾದುದರಿಂದ ಸ್ತುತಿಸಲ್ಪಡುವುದು ಋಕ್. ಪದಾಂತದಲ್ಲಿ ಕುತ್ವ ಬಂದಿದೆ. ಉದಾಹರಣೆ—

**ಋಚಾ ವನೇ ಮಾನೃಚಃ (ಋ. ಸಂ-೬-೫-೨೭-೩)** ॥

(೩೫) ಹೋತ್ರಾ ॥ ದಾನಾದಾನಾರ್ಥಕವಾದ ಹು ಧಾತುವಿಗೆ "ಹುಯಾಮಾಶ್ರುಭಾಸಿಭ್ಯಸ್ತ್ರನ್' (ಉ-೪-೧೬೮) ಸೂತ್ರದಿಂದ ತ್ರನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಸ್ತ್ರೀತ್ವದಲ್ಲಿ ಟಾಪ್. ಮಂತ್ರರೂಪವಾದ ಇದರಿಂದ ಹೋಮಿಸಲ್ಪಡುತ್ತದೆ, ಅಥವಾ ಇದರಲ್ಲಿ ಪ್ರಾಣವು ಹೋಮಿಸಲ್ಪಡುತ್ತದೆ ಎಂದರ್ಥ. 'ವಾಕ್ಕಿನಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ವಾಕ್ಕನ್ನೂ ಹೋಮಿಸುತ್ತೇವೆ' ಎಂದು ಐತರೇಯ ಉಪನಿಷತ್ತಿನಲ್ಲಿ ಹೇಳಿದೆ. ಅಥವಾ ಹೋತ್ರವೆಂದರೆ ಯಜ್ಞನಾಮವೆಂದು ನಿರುಕ್ತದಲ್ಲಿ ಹೇಳಿರುವುದರಿಂದ "ಇದರಲ್ಲಿ ಹವಿಸ್ಸು ಹೋಮಿಸಲ್ಪಡುತ್ತದೆ" ಎಂದರ್ಥವಾದುದರಿಂದ ಯಜ್ಞವೂ ವಾಕ್ಕಾಗುತ್ತದೆ. ವಾಕ್ಸಾಧ್ಯವಾದದ್ದು ಎಂದು ತಾತ್ಪರ್ಯ. "ವಾಗ್ವೈ ಯಜ್ಞಃ" ಎಂದು ಬ್ರಾಹ್ಮಣದಲ್ಲಿ ಹೇಳಿದೆ ಉದಾಹರಣೆ—

**'ವನೇಮ ತದ್ಧೋತ್ರಯಾ ಚಿತಂತ್ಯಾ' (ಋ.ಸಂ-೨-೧-೧೭-೨) 'ವೀತಿಹೋತ್ರಂ ತ್ವಾ ಕವೇ' (ಋ. ಸಂ-೪-೧-೧೯-೩)** ॥

(೩೬) ಗೀಃ ॥ ಸ್ತೋತ್ರಾರ್ಥವನ್ನು ಕೊಡುವ ಗೃಧಾತುವಿಗೆ ಔಣಾದಿಕ ಕ್ವಿಪ್‌ಪ್ರತ್ಯಯ. 'ಋತ ಇದ್ಧಾತೋಃ' ಸೂತ್ರದಿಂದ ಋಕಾರಕ್ಕೆ ಇತ್ವ. ರಪರನಾಗಿ ಬಂದರೆ ಗಿರ್ ಎಂದಾಗುತ್ತದೆ. "ರ್ವೋರುಪಧಾಯಾ ದೀರ್ಘ ಇಕಃ' ಸೂತ್ರ

ದಿಂದ ರೇಫಾಂತದ ಉಪಧೆಗೆ ದೀರ್ಘ. ಗೀರ್+ಸ್. ಹಲಂತದಪರದಲ್ಲಿರುವ ಸುವಿಗೆ ಲೋಪ ರೇಫಕ್ಕೆ ಪದಾಂತದಲ್ಲಿ ವಿಸರ್ಗ. ಗೀಃ. ಇದರಿಂದ ಪೂಜಿಸಲ್ಪಡುವುದು ಎಂದರ್ಥ. ಉದಾಹರಣೆ—

**ತಮಿದ್ವರ್ಧಂತು ನೋ ಗಿರಃ (ಋ-ಸಂ-೬-೧-೧೦-೨)**

**(೩೭) ಗಾಥಾ ||** ಗೈ=ಶಬ್ದೇ. ಧಾತು. ಪೂಜಾರ್ಥವೂ ನಿಘಂಟುವಿನಲ್ಲಿ ಹೇಳಿದೆ. ಇದಕ್ಕೆ "ಉಷಿಕುಷಿ ಗಾರ್ತಿಭ್ಯಸ್ಥನ್" (ಉ. ೨-೩) ಸೂತ್ರದಿಂದ ಥನ್‌ಪ್ರತ್ಯಯ. "ಆದೇಚ ಉಪದೇಶೇಽಶಿತಿ" ಸೂತ್ರದಿಂದ ಧಾತುವಿಗೆ ಆತ್ವ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಗಾಥಾ. ಇದು ದೇವತೆಗಳನ್ನು ಗಾನವಾಡುತ್ತದೆ, ಅಥವಾ ಇದನ್ನು ಗಾನ ಮಾಡುತ್ತಾರೆ ಎಂದರ್ಥ. ಉದಾಹರಣೆ—

**ತಂ ಗಾಥಯಾ ಪುರಾಣ್ಯಾ (ಋ. ಸಂ. ೭-೪-೨೫-೪) ‘ ಯುಂಜಂತಿ ಹರೀ ಇಷಿರಸ್ಯ ಗಾಥಯಾ ’ (ಋ. ಸಂ. ೬-೭-೨-೩) ||**

**(೩೮) ಗಣಃ ||** ಸಂಖ್ಯಾನಾರ್ಥಕವಾದ ಗಣಧಾತುವಿಗೆ ‘ಅಕರ್ತರಿ ಚ ಕಾರಕೇ ಸಂಜ್ಞಾಯಾಮ್’ ಸೂತ್ರದಿಂದ ಘಞ್. ಧಾತು ಅದಂತವಾದುದರಿಂದ "ಅತೋ ಲೋಪಃ’ ಸೂತ್ರದಿಂದ ಧಾತುವಿನ ಅಂತ್ಯ ಅಕಾರಕ್ಕೆ ಲೋಪ. "ಅಚಃ ಪರಸ್ಮಿನ್—" ಸೂತ್ರದಿಂದ ಇದಕ್ಕೆ ಸ್ಥಾನಿವದ್ಭಾವ ಬರುವುದರಿಂದ ಘಞ್ ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ ಬರುವುದಿಲ್ಲ. ಎಣಿಸಲ್ಪಡುವುದು ಗಣ. ವಾಕ್ಪರ್ಯಾಯದಲ್ಲಿ ಗಣಶಬ್ದಕ್ಕೆ ನಿಗಮ ಹುಡುಕಬೇಕು.

**(೩೯) ಧೇನಾ ||** ಧಾರಣಾರ್ಥಕವಾದ ಧಾಞ್‌ಧಾತುವಿಗೆ ಲಟ್ ಬಂದಾಗ ಅದಕ್ಕೆ ಶಾನಚ್. ದಧಾ+ಆನ ಎಂದಿರುವಾಗ ವ್ಯತ್ಯಯದಿಂದ ಏತ್ವ, ಅಭ್ಯಾಸಲೋಪ. ಧೇನಾ. ತನ್ನ ಅರ್ಥವನ್ನು ಧರಿಸಿರುವುದು, ಮಳೆ ಸುರಿಸುವುದರಿಂದ ಲೋಕವನ್ನು ಪೋಷಿಸುವುದು. ಅಥವಾ ಪಾನಾರ್ಥಕವಾದ ಧೇಟ್ ಧಾತುವಿಗೆ ‘ಧೇಟ ಇಚ್ಚ’ (ಉ-೩-೧೦) ಸೂತ್ರದಿಂದ ನ ಪ್ರತ್ಯಯ ಧಾತುವಿನ ಏಕಾರಕ್ಕೆ ಇಕಾರಾದೇಶ. ಧಿ+ನ ಎಂದಿರುವಾಗ "ಸಾರ್ವಧಾ"—ಸೂತ್ರದಿಂದ ಗುಣ ಟಾಪ್. ಇದನ್ನು ಪಾನಮಾಡುತ್ತಾರೆ. ಪಾನವೆಂದರೆ ಸ್ವೀಕಾರ, ಅಥವಾ ಆಸ್ವಾದ. ‘ಧೀಯತೇ ಅನೇನ’ ಇದರಿಂದ ಆಸ್ವಾದ ಹೊಂದುತ್ತಾರೆ, ಅಥವಾ ಪ್ರಾಣವನ್ನು ಹೊಂದಿರುತ್ತಾರೆ ಎಂದರ್ಥ. ಅಥವಾ ಧಿವಿ-ಪ್ರೀಣನೇ ಧಾತು. ಇದಕ್ಕೆ ಬಹುಲಗ್ರಹಣದಿಂದ ನಪ್ರತ್ಯಯ. ಧಾತುವಿಗೆ ಬಂದ ನುವಿನ ನಕಾರಕ್ಕೂ, ವಕಾರಕ್ಕೂ ಲೋಪ. ಧಾತುವಿನ ಇಕಾರಕ್ಕೆ ಗುಣ. ಧೇನಾ. ಚನ್ನಾಗಿ ಪ್ರಯೋಗಿಸಿದ ಮಾತು ಸಂತೋಷಗೊಳಿಸುತ್ತದೆ ಎಂದರ್ಥವಾಗುತ್ತದೆ. ಪ್ರೀತಿದಾಯಕವಾದುದರಿಂದ ವಾಕ್ ಧೇನಾಶಬ್ದ ವಾಚ್ಯವಾಗುವುದೆಂದು ಮಾಧವರು ಹೇಳಿರುತ್ತಾರೆ. ಉದಾಹರಣೆ—

**ಧೇನಾ ಜಿಗಾತಿ ದಾಶುಷೇ (ಋ-ಸಂ-೧-೧-೩-೩) "ಜನಾನಾಂ ಧೇನಾ ಅವಚಾಕಶದ್ವೃಷಾ (ಋ.ಸಂ-೭-೮-೨೫-೧)**

**(೪೦) ಗ್ನಾ ||** ಗತ್ಯರ್ಥಕವಾದ ಗಮ್‌ಧಾತುವಿಗೆ "ಧಾಪ್ಯಾವಸ್ಯಜ್ಯತಿಭ್ಯೋ ನಃ" (ಉ-೩-೬) ಸೂತ್ರದಿಂದ ವಿಹಿತವಾದ ನಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಧಾತುವಿನ ಟಿಗೆ (ಅಮ್) ಲೋಪ. ಅದಂತ

ವಾದುದರಿಂದ ಸ್ತ್ರೀಲಿಂಗದಲ್ಲಿ ಟಾಪ್. ಗ್ನಾ. ಗತ್ಯರ್ಥಕ ಧಾತುಗಳಿಗೆ ಜ್ಞಾನಾರ್ಥ ಹೇಳಿರುವುದರಿಂದ ಇದನ್ನು ಯಥೇಚ್ಛವಾಗಿ ತಿಳಿಯುತ್ತಾರೆ. ಅಥವಾ ಯಜ್ಞಗಳಲ್ಲಿ ಹೋಗುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

ಅಭಿ ಯಜ್ಞಂ ಗೃಣೀಹಿ ನೋ ಗ್ನಾವಃ (ಋ–ಸಂ–೧–೧–೨೮–೩) ಇಲ್ಲಿ ಗ್ನಾಃ ಎಂದರೆ ಛಂದಸ್ಸೆಂದು ಬ್ರಾಹ್ಮಣದಲ್ಲಿ ಹೇಳಿದೆ. ಗಾಯತ್ರ್ಯಾದಿ ಛಂದಸ್ಸುಗಳೂ ಕೂಡಾ ವಾಗ್ರೂಪಗಳಾದುದರಿಂದ ಗ್ನಾಪದವಾಚ್ಯವಾಗುವುವೆಂದು ಮಾಧವರ ಮತ ॥

(೪೧) ವಿಪಾ । ಪ್ರೇರಣಾರ್ಥಕವಾದ ವಿಪ್‌ಧಾತುವಿಗೆ ಸಂಪದಾದಿಗಣಪಠಿತವಾದುದರಿಂದ ಕ್ವಿಪ್. ವಿಪ್ ಎಂದಾಗುತ್ತದೆ. ವಿಪಾ ಎಂಬುದು ತೃತೀಯೈಕವಚನ. ಮನಸ್ಸಿನಿಂದ ಪ್ರೇರಿತವಾಗಿ ಮಾತನ್ನಾಡುತ್ತಾನೆಂದು ಬ್ರಾಹ್ಮಣದಲ್ಲಿ ಹೇಳಿದೆ. ಉದಾಹರಣೆ—

**ವರುಣಾಯ ವಿಪಾ ಗಿರಾ (ಋ–ಸಂ–೪–೪–೬–೧) ॥**

(೪೨) **ನಗ್ನಾ** । ಬಾಲ್ಯವಾದುದರಿಂದ ತಂದೆ ಮನೆಯಿಂದ ಹೋಗುವುದಿಲ್ಲ, ಆವರಣವಿಲ್ಲದಿದ್ದರೂ ನಾಚಿಕೆಹೊಂದುವುದಿಲ್ಲವೆಂದರ್ಥವಾಗುತ್ತದೆ. 'ನಗ್ನಿಕಾऽನಾಗತಾರ್ತವಾ'—ಎಂದು ಅಮರ. ನಗ್ನಾ ಅಂದರೆ ಕನ್ಯೆ. ಗ್ನಾಶಬ್ದ ಹಿಂದೆ ಹೇಳಿದೆ. ಇಲ್ಲಿ ನ ಪೂರ್ವವಾಗಿದೆ. ನ ಎಂದರೆ ನಞ್ಙ್ಲ. ಪ್ರತಿಷೇಧಾರ್ಥಕವಾದ ಒಂದು ಅವ್ಯಯ. ಆದುದರಿಂದ 'ನಲೋಪೋ ನಞಃ' ಸೂತ್ರದಿಂದ ನಲೋಪ ಬರಲಿಲ್ಲ. ಕೆಲವರು 'ನನಾ' ಎಂದು ಪಾಠಮಾಡುತ್ತಾರೆ. ಆಗ ನಮ್‌ಧಾತುವಿಗೆ ಬಹುಲಗ್ರಹಣದಿಂದ ನಪ್ರತ್ಯಯ, ಧಾತುವಿನ ಮಕಾರಕ್ಕೆ ಲೋಪ. ಇದರಿಂದ ಬಗ್ಗುವಂತೆ ಮಾಡುತ್ತಾನೆ ಎಂದರ್ಥವಾಗುತ್ತದೆ. ಉದಾಹರಣೆ ಹುಡುಕಬೇಕು.

(೪೩) **ಕಶಾ** ॥ ದೀಪ್ತ್ಯರ್ಥಕವಾದ ಕಾಶೃಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಛಾಂದಸವಾಗಿ ಧಾತುವಿನ ಆಕಾರಕ್ಕೆ ಹ್ರಸ್ವ. ಅದಂತವಾಗುವುದರಿಂದ ಸ್ತ್ರೀತ್ವದಲ್ಲಿ ಟಾಪ್. ಇಲ್ಲಿ ಣಿಜರ್ಥ ಧಾತ್ವರ್ಥದಲ್ಲಿ ಸೇರಿದೆಯೆಂದು ತಿಳಿಯಬೇಕು. ಅರ್ಥಗಳನ್ನು ಪ್ರಕಾಶಪಡಿಸುತ್ತದೆ ಎಂದರ್ಥ. ಅಥವಾ ಶಬ್ದಾರ್ಥಕವಾದ ಕಶಧಾತುವಿಗೆ ಅಚ್‌ಪ್ರತ್ಯಯ. ಶಬ್ದಮಾಡುವುದು ಕಶಾ. ಅಥವಾ ಗತ್ಯರ್ಥಕವಾದ ಕಶಧಾತುವಿಗೆ ಅಚ್‌ಪ್ರತ್ಯಯ ಹೊಂದಬೇಕಾದುದನ್ನು ಹೊಂದುತ್ತದೆ ಎಂದರ್ಥ. ಉದಾಹರಣೆ—

**ಯಾ ವಾಂ ಕಶಾ ಮಧುಮತೀ (ಋ–ಸಂ–೧–೨–೪–೩)**

(೪೪) **ಧಿಷಣಾ** ॥ ಅರ್ಥವನ್ನು ಧರಿಸುವಂತೆ ಮಾಡುವುದು ಧೀಃ ಅಂದರೆ ಬುದ್ಧಿ. ಅಥವಾ ಫಲವನ್ನು ಕೊಡುವುದರಿಂದ ಕರ್ತೃವನ್ನು ಧರಿಸಿರುವುದು. ಕರ್ಮವಿಷಯಕವಾದ ಬುದ್ಧಿ ಅಥವಾ ಕರ್ಮ. ಈ ಧೀಯನ್ನು ಹೊಂದಿರುವುದು (ಸನೋತಿ) ಎಂಬರ್ಥದಲ್ಲಿ ಸಂಭಕ್ತ್ಯರ್ಥಕ ಸನ್ (ಷಣ) ಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಪೃಷೋದರಾದಿಗಣಪಠಿತವಾದುದರಿಂದ ಧೀಪೂರ್ವ ಪದಕ್ಕೆ ಹ್ರಸ್ವ, ಧಿಸನ, ಷತ್ವ, ಟಾಪ್, ಧಿಷಣಾ. ಅಥವಾ ಞಿಧೃಷಾ–ಪ್ರಾಗಲ್ಭ್ಯೇ ಧಾತು ಇದಕ್ಕೆ 'ಧೃಷೇರ್ಧಿಷ್ ಚ ಸಂಜ್ಞಾಯಾಮ್' (ಉ. ೨–೮೦) ಸೂತ್ರದಿಂದ ಕ್ಯುಪ್ರತ್ಯಯ, ಧಾತುವಿಗೆ ಧಿಷಾದೇಶ. "ಯುವೋರನಾಕೌ" ಸೂತ್ರದಿಂದ ಪ್ರತ್ಯಯಕ್ಕೆ ಅನಾದೇಶ. ವೃಷ್ಟ್ಯಾದಿಗಳಿಂದ ಜಗತ್ತನ್ನು ರಕ್ಷಿಸಲು ಸಮರ್ಥವಾದದೆಂದರ್ಥ, ಅಥವಾ ಸ್ಕಂದಸ್ವಾಮಿ ಹೇಳಿದ ಧಾರಣಾರ್ಥಕ ಧಿಷಿಧಾತು, ಜುಹೋತ್ಯಾದಿಗಣಪಠಿತವಾದ

ಶಬ್ದಾರ್ಥಕ ಧಿಷಧಾತು, ಇದಕ್ಕೆ ಬಹುಲಗ್ರಹಣದಿಂದ ಕ್ಯುಪ್ರತ್ಯಯ. ಹಿಂದಿನಂತೆ ಅನಾದೇಶ. ಧಿಷಣಾ. ತನ್ನಲ್ಲಿ ತನ್ನ ಅಭಿಧೇಯ (ಅರ್ಥ) ವನ್ನು ಧರಿಸಿರುತ್ತದೆ. ಶಬ್ದಾರ್ಥಗಳಿಗೆ ಯಾವಾಗಲೂ ನಿತ್ಯಸಂಬಂಧ. ಮೇಘದಲ್ಲಿದ್ದು ಶಬ್ದ ಮಾಡುತ್ತದೆಂದು ಅರ್ಥವಾಗುತ್ತದೆ. ಉದಾಹರಣೆ—

**ಮಿಮಾತಿ ಮಾಯುಂ ಧಿಷಣಾವಧಿಶ್ರಿತಾ (ಋ. ಸಂ. ೨-೬-೧೯-೩) 'ಆಪಶ್ಚ ಮಿತ್ರಂ ಧಿಷಣಾ ಚ ಸಾಧನ್' (ಋ. ಸಂ. ೧-೭-೩೦) ॥**

(೪೫) **ನೌಃ । ನುದ ಪ್ರೇರಣೇ (ತು-ಉ) 'ಗ್ಲಾನುದಿಭ್ಯಾಂ ಡೌ' (ಉ- ೨-೬೦) ಇತಿ ಡೌ ಪ್ರತ್ಯಯಃ. ನುದ್ಯತೇ ಪ್ರೇರ್ಯತೇ ಮೂಲಾಧಾರಾದಿಸ್ಥಾನೇಭ್ಯಃ ಪ್ರಾಣೇನ ॥**

ಪ್ರೇರಣಾರ್ಥಕವಾದ ನುದ ಧಾತುವಿಗೆ ಔಣಾದಿಕ ಡೌಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಉದ್) ಲೋಪ. **ನೌ** ಔಕಾರಾಂತ ಶಬ್ದವಾಗುತ್ತದೆ. ಮೂಲಾಧಾರಾದಿಸ್ಥಾನದವೆಸೆಯಿಂದ ಪ್ರಾಣವಾಯುವಿನಿಂದ ಪ್ರೇರೇಪಿಸಲ್ಪಡುವುದು ಎಂದರ್ಥ. ಅಥವಾ ನಮ್ ಧಾತುವಿಗೆ ಬಹುಲಗ್ರಹಣದಿಂದ ಡೌಪ್ರತ್ಯಯ. ಟಿಲೋಪ. ಸ್ವಯಂ ದೇವತೆ ಯಾದುದರಿಂದ ನಮಸ್ಕರಿಸಲ್ಪಡುತ್ತದೆ 'ವಾಗ್ವೈ ಸುತರ್ಮಾ ನೌಃ' ಎಂದು ಬ್ರಾಹ್ಮಣದಲ್ಲಿ ಹೇಳಿದೆ. ಉದಾಹರಣೆ—

**ಸಮಿತೋ ನಾವ್ಯಾಹಿತಮ್ (ಋ. ಸಂ. ೮-೭-೨೩-೪) ॥**

**(೪೬) ಅಕ್ಷರಮ್** ॥ ವ್ಯಾಪ್ತ್ಯರ್ಥಕವಾದ ಅಶೂಧಾತು, ಭೋಜನಾರ್ಥಕವಾದ ಅಶಧಾತು. ಇದಕ್ಕೆ 'ಅಶೇಃ-ಸರನ್' (ಉ-೩-೬೨) ಸೂತ್ರದಿಂದ ಸರನ್‌ಪ್ರತ್ಯಯ. ಅಶ್+ಸರ ಎಂದಿರುವಾಗ 'ವ್ರಶ್ಚಭ್ರಸ್ಜಸೃಜ'—ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. ಅದಕ್ಕೆಸಕಾರಪರದಲ್ಲಿರುವುದರಿಂದ 'ಷಢೋಃಕಃ ಸಿ' ಸೂತ್ರದಿಂದ ತಕಾರಾದೇಶ. 'ಆದೇಶಪ್ರತ್ಯಯೋಃ' ಸಕಾರಕ್ಕ ಷತ್ವ. ಕಷಗಳಯೋಗವಿರುವಾಗ ಕ್ಷ ಆಗುತ್ತದೆ. ಕೇಳಲು ತನ್ನ ಅಭಿಧೇಯವನ್ನು ಹೊಂದಿರುತ್ತದೆ, ಹವಿಸ್ಸನ್ನು ವ್ಯಾಪಿಸಿರುತ್ತದೆ, ತಿನ್ನುತ್ತದೆ ಎಂದರ್ಥ. ಗತಿಪೂಜನಾರ್ಥಕವಾದ ಅಞ್ಚುಧಾತುವಿಗೆ ಬಹುಲಗ್ರಹಣದಿಂದ ಸರನ್‌ಪ್ರತ್ಯಯ. 'ಅನಿದಿತಾಂ'—ಸೂತ್ರದಿಂದ ನಲೋಪ. ಅಚ್+ಸರ ಎಂದಿರುವಾಗ 'ಚೋಃ ಕುಃ' ಸೂತ್ರದಿಂದ ಚಕಾರಕ್ಕೆ ತಕಾರಾದೇಶ. ಷತ್ವಾದಿ. ಪೂಜಿಸಲ್ಪಡುವುದು. ಅಂಜೂಧಾತುವಾದರೆ ವೃಷ್ಟಿಯಿಂದ ಭೂಮಿಯನ್ನು ತೊಯಿಸುವುದು ಎಂದರ್ಥವಾಗುತ್ತದೆ. ಅಥವಾ ನಞ್‌ಪೂರ್ವಕವಾದ ಕ್ಷರಧಾತುವಿಗೆ ಪಚಾದಿಗಣಪಠಿತವಾದುರಿಂದ ಅಚ್‌ಪ್ರತ್ಯಯ. 'ನ ಕ್ಷರತಿ ಇತಿ ಅಕ್ಷರಮ್, ಯಾವಾಗಲೂ ಎಲ್ಲರಿಂದಲೂ ಪ್ರಯೋಗಿಸಲ್ಪಟ್ಟರೂ ನಾಶವಾಗದಿರುವುದು. 'ವಾಕ್ಕೆಂಬುದು ಸಮುದ್ರ. ಈ ಮಾತು ಯಾವಾಗಲೂ ಕ್ಷಯಿಸುವುದಿಲ್ಲ'ವೆಂದು ಬ್ರಾಹ್ಮಣದಲ್ಲಿ ಹೇಳಿದೆ ಉದಾಹರಣೆ—

**ಅಕ್ಷರೇಣ ಪ್ರತಿ ಮಿಮತ ಏತಾಮ್ (ಋ-ಸಂ-೭-೬-೧೩-೩) 'ಉಪಾಕ್ಷರಾ ಸಹಸ್ರಿಣೀ'-(ಋ-ಸಂ-೫-೨-೧೯-೪) ॥**

**(೪೭) ಮಹೀ** ॥ ಪೃಥಿವೀ ನಾಮದಲ್ಲಿ ವ್ಯಾಖ್ಯಾನಮಾಡಿದೆ. (೧-೧೨). ಇದರಿಂದ ದೇವತೆಯು ಪೂಜಿಸಲ್ಪಡುತ್ತದೆ. ಉದಾಹರಣೆ—**"ಅಮಾತ್ರಂ ತ್ವಾ ಧಿಷಣಾ ತಿತ್ವಿಷೇ ಮಹೀ" (ಋ. ಸಂ. ೧-೭-೧೫-೨) ॥**

**(೪೮) ಅದಿತಿಃ ॥** ಇದೂ ಪೃಥಿವೀ ನಾಮದಲ್ಲಿ ಹೇಳಿದೆ. (೧--೧೪) ದೀನವಲ್ಲದಿರುವುದು. ಎಲ್ಲರಿಂದಲೂ ಪ್ರಯೋಗಿಸಲ್ಪಟ್ಟರೂ ನಾಶವಾಗದಿರುವುದು. ಉದಾಹರಣೆ—

ಅನಾಗಸೋ ಅದಿತಯೇ ಸ್ಯಾಮ (ಋ. ಸಂ. ೧-೨-೧೫-೫) ||

(೪೯) ಶಚೀ || ಕ್ಷೀರಸ್ವಾಮಿಯು ಗತ್ಯರ್ಥದಲ್ಲಿ ಶಚಧಾತುವನ್ನು ಹೇಳಿರುತ್ತಾನೆ. ಆದರೆ ಧಾತುಪಾಠದಲ್ಲಿ ಗತ್ಯರ್ಥ ಹೇಳಿಲ್ಲ. 'ಶಚ-ವ್ಯಕ್ತಾಯಾಂ ವಾಚಿ' ಎಂದು ಹೇಳಿದೆ. ಇದಕ್ಕೆ 'ಇನ್ ಸರ್ವಧಾತುಭ್ಯಃ' ಸೂತ್ರದಿಂದ ಇನ್‌ಪ್ರತ್ಯಯ. ಶಚಿ ಇಕಾರಾಂತವಾದ ಕೃದಂತವಾದುದರಿಂದ 'ಕೃದಿಕಾರಾ—' ವಾರ್ತಿಕದಿಂದ ಙೀಷ್. ಯಜ್ಞವನ್ನು ಕುರಿತು ಹೋಗುವುದು, ಇದರಿಂದ ಅರ್ಥವು ತಿಳಿಯಲ್ಪಡುತ್ತದೆ, ವ್ಯಕ್ತವಾಗಿ ಉಚ್ಚರಿಸುವುದು ಇತ್ಯಾದ್ಯರ್ಥಗಳಾಗುತ್ತವೆ. ಉದಾಹರಣೆ—

ಶಚೀರ್ಮದಂತ ಉತ ದಕ್ಷಿಣಾಭಿರ್ನೇಜ್ಜಿಹ್ಮಾಯಂತ್ಯೋ ನರಕಂ ಪತಾಮ (ನಿರು-೧.೧೧)||

(೫೦) ವಾಕ್ || ಇದು ಮೊದಲು ವ್ಯಾಖ್ಯಾತವಾಗಿದೆ. ವ್ಯವಹರಿಸಲ್ಪಡುವುದು ಎಂದರ್ಥ. ಉದಾಹರಣೆ— 'ಯದ್ವಾಗ್ ವದಂತ್ಯವಿಚೇತನಾನಿ' (ಋ-ಸಂ-೬-೭-೫-೪)

(೫೧) ಅನುಷ್ಟುಪ್ || ವೃದ್ಧ್ಯರ್ಥಕವಾದ ಸ್ತುಭಧಾತುವಿಗೆ ಕ್ವಿಪ್‌ಪ್ರತ್ಯಯ ಅನು + ಸ್ತುಭ್ ಎಂದಿರುವಾಗ 'ಉಪಸರ್ಗಾತ್ ಸುನೋತಿ'—ಸೂತ್ರದಿಂದ ಷತ್ವ. ಪದಾಂತದಲ್ಲಿ ಚರ್ತ್ವ. ಅನುಕ್ರಮವಾಗಿ ಅಕಾರವನ್ನು ಆರಂಭಿಸಿ ಕಕಾರಾದಿ ಸ್ಪರ್ಶವರ್ಣಗಳಿಂದ ವೃದ್ಧಿಹೊಂದುವುದು ಎಂದರ್ಥ. "ಅಕಾರವೇ ಸರ್ವವಾಕ್, ಅದೇ ಸ್ಪರ್ಶ (ಕಕಾರಾದಿ) ಊಷ್ಮಾದಿ (ಶಷಸಹ) ಗಳಿಂದ ಅಭಿವೃದ್ಧವಾಗಿ ಬಹುರೂಪವಾಗಿ, ಪರಾ, ಪಶ್ಯಂತೀ, ಮಧ್ಯಮಾ, ವೈಖರೀ' ಎಂದು ಪ್ರಸಿದ್ಧವಾಗುತ್ತದೆ' ಎಂದು ಉಪನಿಷತ್ತುಗಳಲ್ಲಿ ಹೇಳಿದೆ. ಧ್ವನಿಃ, ವರ್ಣಃ, ಪದಮ್, ವಾಕ್ಯಮ್ ಎಂದು ಪದವು ನಾಲ್ಕುರೀತಿಯಾಗಿರುತ್ತದೆ. 'ಸೂಕ್ಷ್ಮರೂಪದಿಂದ ವಿಸ್ತೃತವಾದ ವಾಗ್ದೇವಿಯನ್ನು ಸೇವಿಸುತ್ತೇನೆ' ಎಂದು ಭೋಜದೇವನು ಹೇಳಿರುತ್ತಾನೆ. ನಾಲ್ಕು ರೀತಿಯಿಂದ ವಾಕ್ ಪರಿಮಿತವಾಗಿದೆಯೆಂದು ನಿರುಕ್ತ. ಅಥವಾ ಮೊದಲು ಐವತ್ತು ಅಕ್ಷರಗಳಿಂದ, ಆಮೇಲೆ ಗದ್ಯವದ್ಯ ರೂಪದಿಂದ ವಿಸ್ತೃತವಾದದ್ದು ಎಂದರ್ಥ. ಅಪ್ಪಯ್ಯದೀಕ್ಷಿತರೂ ಕೂಡ—"ಪರಿಮಿತವಾದ ವರ್ಣಗಳು ಅಪರಿಮಿತವಾದ ವಾಗ್ವೃತ್ತಿ ಯನ್ನು ಹೊಂದುತ್ತವೆಯೆಂದು ಹೇಳಿರುತ್ತಾರೆ. ಅಥವಾ ಸ್ತುಭಧಾತುವಿಗೆ ಸ್ತೋತ್ರಾರ್ಥ ನಿರುಕ್ತದಲ್ಲಿ ಹೇಳಿರುವುದರಿಂದ ಕ್ರಮವಾಗಿ ಇದರಿಂದ ದೇವತೆಗಳನ್ನು ಸ್ತುತಿಸುತ್ತಾರೆ ಎಂದರ್ಥವಾಗುತ್ತದೆ. ಉದಾಹರಣೆ—

ಅನುಷ್ಟುಭಮನು ಚ ಚರ್ಯ್ಯಮಾಣಮಿಂದ್ರಮ್ (ಋ. ಸಂ. ೮-೭-೧೦-೪) |

(೫೨) ಧೇನುಃ || ಪಾನಾರ್ಥಕವಾದ ಧೇಟ್‌ಧಾತುವಿಗೆ "ಧೇಟ ಇಚ್ಚ" (ಉ-೩.೩೩) ಸೂತ್ರದಿಂದ ನುಪ್ರತ್ಯಯ, ಧಾತುವಿಗೆ ಇಕಾರಾಂತಾದೇಶ. ಧೇನುಃ ಆಕಾರಕ್ಕೆ ಅಪವಾದವಾಗಿ ಇಕಾರ ಹೇಳಿದೆ. ಎಲ್ಲರೂ ಇದನ್ನು ಸ್ವೀಕರಿಸುತ್ತಾರೆ, ಇದರಿಂದ ಉಂಟಾದ ವೃಷ್ಟಿಯು ಎಲ್ಲರಿಂದಲೂ ಕುಡಿಯಲ್ಪಡುತ್ತದೆ. ಅಥವಾ ಧೇನುವಿನಂತೆ ಸರ್ವಕಾಮವನ್ನೂ ಕೊಡುತ್ತದೆ ಎಂದರ್ಥ. 'ಏಕಃಶಬ್ದಃ ಸಮ್ಯಗ್‌ಜ್ಞಾತಃ ಸುಷ್ಠು ಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ' ಎಂದು ಭಾಷ್ಯದಲ್ಲಿ ಹೇಳಿದೆ. ಒಂದೇ ಶಬ್ದವಾದರೂ ಚೆನ್ನಾಗಿ ತಿಳಿಯಲ್ಪಟ್ಟು ಪ್ರಯೋಗಿಸಿದರೆ ಅದು ಸಕಲೇಷ್ಟಾರ್ಥವನ್ನೂ ಕೊಡುತ್ತದೆಂದರ್ಥ. ಇದಕ್ಕೆ ಶ್ರುತಿ—'ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾಂ ಅಫಲಾಮಪುಷ್ಪಾಮ್ (ಋ. ಸಂ. ೮.೨-೨೩-೨೩-೫) "ಅಭಿ ಸಪ್ತ ಧೇನವಃ (ಋ ಸಂ. ೭-೩-೧೬-೫) ನೇಷ್ಟುಃ ಸಚಂತ ಧೇನವಃ (ಋ. ಸಂ. ೨-೫-೨೬-೫)

(೫೩) ವಲ್ಗುಃ || ಸಂವರಣಾರ್ಥಕವಾದ ವಲಧಾತುವಿಗೆ "ವಲೇರ್ಗುಕ್ ಚ" (ಉ. ೧-೧೯) ಸೂತ್ರದಿಂದ ಉ ಪ್ರತ್ಯಯ. ಗುಗಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬಂದರೆ ವಲ್ಗುಃ ಎಂದಾಗುತ್ತದೆ. ಜಗತ್ತನ್ನು ಮುಚ್ಚುತ್ತದೆ

ಅಥವಾ ವ್ಯಾಪಿಸುತ್ತದೆ ಎಂದರ್ಥ. ವಲಧಾತುವಿಗೆ ಶಬ್ದಾರ್ಥ ಹೇಳಿದರೆ ಗರ್ಜಿತಾದಿರೂಪವಾದ ಶಬ್ದವನ್ನು ಮಾಡುತ್ತದೆ ಎಂದರ್ಥ. ಉದಾಹರಣೆ—

**ಅಯಂ ನಾಭಾ ವದತಿ ವಲ್ಗುವೋ ಗೃಹೇ (ಋ. ಸಂ. ೮-೨-೧-೪) ||**

(೫೪) **ಗಲ್ದಾ** || ಗಲ ಅದನೇ ಎಂದು ಭ್ವಾದಿಯಲ್ಲಿ ಹೇಳಿದೆ. ಅದನ ಪದಕ್ಕೆ ಸ್ಕಂದಸ್ವಾಮಿಯು ಪೂರಣಾರ್ಥವನ್ನು ಹೇಳಿರುತ್ತಾನೆ. ಸಕಲಕಾಮನೆಗಳನ್ನೂ ಪೂರ್ತಿಮಾಡುವುದು ಗಲ. ಇದು ಉಪಪದವಾಗಿರುವಾಗ ದಾನಾರ್ಥಕ ದಾ ಧಾತುವಿಗೆ 'ಆತೋಽನುಪಸರ್ಗೇ ಕಃ' ಸೂತ್ರದಿಂದ ಕ ಪ್ರತ್ಯಯ. 'ಆತೋ ಲೋಪ ಇಟಿ ಚ' ಧಾತುವಿನ ಆಕಾರಕ್ಕೆ ಲೋಪ. ಅದಂತವಾದುದರಿಂದ ಟಾಪ್. ಸಕಲಕಾಮನೆಯನ್ನು ಕೊಡುವುದು ಎಂದರ್ಥ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

(೫೫) **ಸರಃ** || ಗತ್ಯರ್ಥಕವಾದ ಸೃಧಾತುವಿಗೆ ಔಣಾದಿಕ ಅಸುನ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಸರಸ್ ಸಾಂತಪದವಾಗುತ್ತದೆ. ಗತ್ಯರ್ಥಧಾತುಗಳಿಗೆ ಜ್ಞಾನಾರ್ಥಹೇಳಿರುವುದರಿಂದ ವಾಗ್ದೇವತೆಯಾದುದರಿಂದ ಎಲ್ಲವನ್ನೂ ತಿಳಿಯುತ್ತದೆ, ವಿದ್ವಾಂಸರಿಂದ ತಿಳಿಯಲ್ಪಡುತ್ತದೆ, ಕರೆಯಲ್ಪಟ್ಟದ್ದಾಗಿ ಹೋಗುತ್ತದೆ ಎಂದರ್ಥವಾಗುತ್ತದೆ. ಸ್ತೋತ್ರ ಶಾಸ್ತ್ರರೂಪವಾದ ವಾಕ್ ಸರಸ್ಸೆಂದು ಮಾಧವನು ಹೇಳಿರುತ್ತಾನೆ. ಉದಾಹರಣೆ—

**ಸರೋ ನ ಪರ್ಣಮಭಿತೋ ವದಂತಃ (ಋ. ಸಂ. ೫-೭-೪-೨) ||**

(೫೬) **ಸುಪರ್ಣೀ** || ರಶ್ಮಿ ನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೫-೧೫) ಸುಪರ್ಣಪದಕ್ಕೆ ಸ್ತ್ರೀತ್ವದಲ್ಲಿ "ಪಾಕಕರ್ಣಪರ್ಣಪುಷ್ಪಫಲಮೂಲ—" (ಪಾ. ಸೂ. ೪-೧-೬೪) ಸೂತ್ರದಿಂದ ಙೀಷ್. "ಯಸ್ಯೇತಿ ಚ" ಪೂರ್ವದ ಅಕಾರಕ್ಕೆ ಲೋಪ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

(೫೭) **ಬೇಕುರಾ** || ದೀಪ್ತ್ಯರ್ಥಕವಾದ ಭಾಧಾತು ಉಪಪದವಾಗಿರುವಾಗ ಕೃಞ್ ಧಾತುವಿಗೆ ಔಣಾದಿಕ ಕ ಪ್ರತ್ಯಯ. ಓಷ್ಠ್ಯಪೂರ್ವವಾಗಿದ್ದರೂ ಛಾಂದಸವಾದುದರಿಂದ ಧಾತುವಿನ ಋಕಾರಕ್ಕೆ ಉತ್ವ ರಪರವಾಗಿ ಬರುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಭಕಾರಕ್ಕೆ ಬಕಾರ, ಅಕಾರಕ್ಕೆ ಏಕಾರಾದೇಶಗಳು ಬರುತ್ತವೆ. ಅದಂತವಾದುದರಿಂದ ಟಾಪ್. ಪ್ರಯೋಗಿಸುವವನ್ನು ಉಜ್ವಲಗೊಳಿಸುವುದು ಎಂದರ್ಥ. 'ಬೇಕುರಾನಮಾಸಿ ಜುಷ್ಟಾ' ಎಂದು ತಾಂಡ್ಯಮಹಾ ಬ್ರಾಹ್ಮಣದಲ್ಲಿ ಹೇಳಿದೆ. ವ್ಯಾಪ್ತಿಕ್ರಿಯಾವಾಚಕವಾದ ವ್ಯಚಧಾತುವಿನಿಂದ ಬೇಕುರಾ ಪದವಾಗಿದೆಯೆಂದು ಭರತಸ್ವಾಮಿ ಭಾಷ್ಯದಲ್ಲಿ ಹೇಳಿದೆ. ಹೀಗೆ ಐವತ್ತೇಳು ಮಾತಿನ ಹೆಸರು. ||

ಮೇಘನಾಮಗಳನ್ನು ಹೇಳುವಾಗ ಸಂದರ್ಭಾನುಸಾರವಾಗಿ **ದೇವಾನಾಮಾನೆ** ಎಂಬ ಮಂತ್ರವನ್ನು ವಿವರಿಸಿದ್ದಾಯಿತು. ಈಗ ವಾಙ್ನಾಮಗಳ ವಿಷಯಗಳನ್ನು ವಿವರಿಸುತ್ತೇನೆ. **ವಾಕ್** ಎಂಬ ಶಬ್ದವು ಹೇಳು ಎಂಬರ್ಥವುಳ್ಳ **ವಚ್** ಧಾತುವಿನಿಂದ ನಿಷ್ಪನ್ನವಾಗಿದೆ. ಈ ವಾಙ್ನಾಮಗಳಲ್ಲಿ **ಸರಸ್ವತಿ** ಎಂಬ ಶಬ್ದವೂ ಸೇರಿದೆ. ಈ ಸರಸ್ವತಿ ಶಬ್ದಕ್ಕೆ ಎರಡು ವಿಧವಾದ ಅರ್ಥವಿರುವುದು.. ಸರಸ್ವತಿ ಎಂದರೆ ಆ ಹೆಸರಿನ ದೇವತೆಯು. ಈ ವಿಷಯವನ್ನು ಮುಂದೆ ವಿವರಿಸಲಾಗುವುದು ಎಂದರೆ **ಪಾವಕಾ- ನಃ ಸರಸ್ವತೀ** ಎಂಬ ಮಂತ್ರವನ್ನು ವಿವರಿಸುವಾಗ (ನಿ. ೧೧-೨೬) ಸರಸ್ವತೀ ದೇವತೆಯ ವಿಷಯವನ್ನು ಹೇಳಲಾಗುವುದು. ಈ ಸರಸ್ವತೀಶಬ್ದಕ್ಕೆ ಆ ಹೆಸರಿನ ನದಿ ಎಂಬ ಇನ್ನೊಂದರ್ಥವೂ ಇರುವುದು. ಅದನ್ನು ಈಗ ಇಲ್ಲಿ ವಿವರಿಸುತ್ತೇನೆ.

**ಇತಿ ತ್ರಯೋವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತಮೂರನೆಯ ಖಂಡವು ಸಮಾಪ್ತವು

---

## ಅಥ ಚತುರ್ವಿಂಶಃ ಖಂಡಃ

## ಇಪ್ಪತ್ತನಾಲ್ಕನೆಯ ಖಂಡವು

ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ । ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥ (ಋ. ಸಂ. ೬–೬೧–೨) ಇಯಂ ಶುಷ್ಮೈಃ ಶೋಷಣೈಃ ಶುಷ್ಮಮಿತಿ ಬಲನಾಮ ಶೋಷಯತೀತಿ ಸತೋ ಬಿಸಂ ಬಿಸ್ಯತೇರ್ಭೇದನಕರ್ಮಣೋ ವೃದ್ಧಿಕರ್ಮಣೋ ವಾ ಸಾನು ಸಮುಚ್ಛ್ರಿತಂ ಭವತಿ ಸಮುನ್ನುನ್ನಮಿತಿ ವಾ ಮಹದ್ಭಿರೂರ್ಮಿಭಿಃ ಪಾರಾವತಘ್ನೀಂ ಪಾರಾವಾರಘಾತಿನೀಂ ಪಾರಂ ಪರಂ ಭವತ್ಯವಾರಮವರಮವನಾಯ ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ ಸರಸ್ವತೀಂ ನದೀಂ ಕರ್ಮಭಿಃ ಪರಿಚರೇಮೋದಕನಾಮಾನ್ಯುತ್ತರಾಣ್ಯೇಕಶತಮುದಕಂ ಕಸ್ಮಾದುನತ್ತೀತಿ ಸತೋ ನದೀನಾಮಾನ್ಯುತ್ತರಾಣಿ ಸಪ್ತತ್ರಿಂಶನ್ನದ್ಯಃ ಕಸ್ಮಾನ್ನದನಾ ಇಮಾ ಭವಂತಿ ಶಬ್ದವತ್ಯೋ ಬಹುಲಮಾಸಾಂ ನೈಘಂಟುಕಂ ವೃತ್ತಮಾಶ್ಚರ್ಯಮಿವ ಪ್ರಾಧಾನ್ಯೇನ ತತ್ರೇತಿಹಾಸಮಾಚಕ್ಷತೇ ವಿಶ್ವಾಮಿತ್ರಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ ವಿಶ್ವಾಮಿತ್ರಃ ಸರ್ವಮಿತ್ರಃ ಸರ್ವಂ ಸಂಸೃತಂ ಸುದಾಃ ಕಲ್ಯಾಣದಾನಃ ಪೈಜವನಃ ಪಿಜವನಸ್ಯ ಪುತ್ರಃ ಪಿಜವನಃ ಪುನಃ ಸ್ಪರ್ಧನೀಯಜವೋ ವಾ ಮಿಶ್ರೀಭಾವಗತಿರ್ವಾ ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯಾವನುಯಯುರಿತರೇ ಸ ವಿಶ್ವಾಮಿತ್ರೋ ನದೀಸ್ತುಷ್ಟಾವ ಗಾಧಾ ಭವತೇತ್ಯಪಿ ದ್ವಿವದಪಿ ಬಹುವತ್ತದ್ಯದ್ದ್ವಿವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮೋಽಥೈತದ್ಬಹುವತ್ ॥೨೪॥

———

ಅಥೈತನ್ನದೀವತ್

ಈಗ ಸರಸ್ವತೀ ಎಂಬ ಶಬ್ದಕ್ಕೆ ನದಿಯ ಪರವಾಗಿ ಅರ್ಥವನ್ನು ವಿವರಿಸಲಾಗುವುದು.

ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ । ಪಾರಾವತಘ್ನೀ ಮವಸೇ ಸುವೃಕ್ತಿಭಿಃ ಸರಸ್ವತೀಮಾವಿವಾಸೇಮ ಧೀತಿಭಿಃ । ಇಯಂ ಶುಷ್ಮೈಃ ಶೋಷಣೈಃ। ಶುಷ್ಮಮಿತಿ ಬಲನಾಮ ಶೋಷಯತೀತಿ ಸತಃ। ಬಿಸಂ ಬಿಸ್ಯತೇರ್ಭೇದನಕರ್ಮಣೋ ವೃದ್ಧಿಕರ್ಮಣೋ ವಾ। ಸಾನು ಸಮುಚ್ಛ್ರಿತಂ ಭವತಿ ಸಮುನ್ನುನ್ನಮಿತಿ ವಾ । ಮಹದ್ಭಿರೂರ್ಮಿಭಿಃ ಪಾರಾವತಘ್ನೀಂ ಪಾರಾವಾರಘಾತಿನೀಂ । ಪಾರಂ ಪರಂ ಭವತಿ । ಅವಾರಮವರಂ । ಅವನಾಯ ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ ಸರಸ್ವತೀಂ ನದೀಂ ಕರ್ಮಭಿಃ ಪರಿಚರೇಮ ॥

**ಇಯಂ ಶುಷ್ಮೇಭಿಃ ಎಂಬ ಋಕ್ಕಿನ ಅರ್ಥವು—**

ನದೀರೂಪಳಾದ ಈ ಸರಸ್ವತೀದೇವಿಯು ತಾವರೇದಂಟಿಗಾಗಿ ಪಂಕವನ್ನು ಕೊರೆಯುವಂತೆ ತನ್ನ ಶಕ್ತಿಯುತವಾದವೂ ಮಹತ್ತಾದವೂ ಆದ ಅಲೆಗಳಿಂದ ಪರ್ವತಗಳ ಉನ್ನತ ಪ್ರದೇಶಗಳನ್ನು ಸುಲಭವಾಗಿ ಭೇದಿಸುತ್ತಾಳೆ. ದೂರದೇಶದಲ್ಲಿರುವ ವೃಕ್ಷಾದಿಗಳನ್ನೂ ದಡಗಳನ್ನೂ ಕೆಳಗುರುಳಿಸತಕ್ಕ ಈ ಸರಸ್ವತೀನದಿಯನ್ನು ಉತ್ತಮವಾದ ಸ್ತುತಿಗಳಿಂದಲೂ ಉತ್ತಮವಾದ ಕರ್ಮಗಳಿಂದಲೂ ರಕ್ಷಣಾರ್ಥಕವಾಗಿ ಸೇವೆಮಾಡೋಣ.

**ಶುಷ್ಮ**ವೆಂದರೆ ಬಲವೆಂದರ್ಥವು. ಏಕೆಂದರೆ, ಅದುಮು ಎಂಬರ್ಥವುಳ್ಳ ಶೋಷಯತಿ ಧಾತುವಿನಿಂದ ಶುಷ್ಮಶಬ್ದವು ನಿಷ್ಪನ್ನವಾಗಿ ಎಲ್ಲವನ್ನೂ ತನ್ನ ಬಲದಿಂದ ಅದುಮುವುದರಿಂದ ಶುಷ್ಮಶಬ್ದಕ್ಕೆ ಬಲವೆಂಬ ಅರ್ಥವು ರೂಢಿಯಾಗಿದೆ. ಬಿಸಂ ಎಂದರೆ ತಾವರೆಯದಂಟು. ಈ ಶಬ್ದವು ಕತ್ತರಿಸು, ತುಂಡು ಮಾಡು ಅಥವಾ ವೃದ್ಧಿಯಾಗು ಎಂಬರ್ಥವಿರುವ ಬಿಸ್ಯತಿಧಾತುವಿನಿಂದ ನಿಷ್ಪನ್ನವಾಗಿದೆ. **ಸಾನು** ಎಂಬ ಶಬ್ದಕ್ಕೆ ಎತ್ತರವಾದಪ್ರದೇಶವು ಅಥವಾ ಉನ್ನತವಾದ ಪ್ರದೇಶವು, ಶಿಖರವು ಎಂದರ್ಥ. ಈ ಸರಸ್ವತೀನದಿಯು ತನ್ನ ದೊಡ್ಡದಾದ ಅಲೆಗಳಿಂದ ಮೃದುವಾದ ತಾವರೆದಂಟನ್ನು ಸುಲಭವಾಗಿ ಕತ್ತರಿಸುವಂತೆ ತನ್ನ ಎರಡು ದಡಗಳನ್ನೂ ಕೊಚ್ಚಿ ನಾಶಮಾಡುತ್ತಾಳೆ. ಎಂದರೆ ನದಿಯ ಪ್ರವಾಹದಿಂದ ಎರಡು ದಡಗಳೂ ಕುಸಿದು ಬಿದ್ದು ನದಿಯ ನೀರಿನಲ್ಲಿ ಸೇರಿಹೋಗುತ್ತವೆ. **ಪಾರಂ** ಎಂದರೆ ಬೇರೆಯಾದುದು (ಪರಂ) ಅಥವಾ ದೂರದಲ್ಲಿರುವುದು. ಅವರಂ ಎಂದರೆ ಹತ್ತಿರದಲ್ಲಿರುವುದು. **ಪಾರಾವಾರಂ** ಎಂದರೆ ದೂರದಲ್ಲಿರುವ (ಎದುರಾಗಿರುವ) ಮತ್ತು ಹತ್ತಿರದಲ್ಲಿರುವ ಎರಡು ದಡಗಳು ಎಂದರ್ಥವು. ಪಾರಾವತಘ್ನೀಂ ಎಂದರೆ ತನ್ನ ಎರಡು ದಡಗಳನ್ನು ಕೊಚ್ಚಿ ಹರಿಯುವ ನದಿ. ಇಂತಹ ಎರಡು ದಡಗಳ ಮಧ್ಯದಲ್ಲಿ ಹರಿಯುತ್ತಿರುವ ಸರಸ್ವತೀನದಿಯನ್ನು ನಮ್ಮ ರಕ್ಷಣೆಗಾಗಿ, ಉತ್ತಮವಾಗಿ ರಚಿಸಲ್ಪಟ್ಟು ಸ್ಪಷ್ಟವಾಗಿಯೂ ಸ್ವರಸಹಿತವಾಗಿಯೂ ಪಠಿಸಲ್ಪಡುವ ಸ್ತುತಿಗಳಿಂದ ಅಥವಾ ಶ್ರೇಷ್ಠವಾಗಿ ಆಚರಿಸಲ್ಪಡುವ ಪೂಜಾದಿಕರ್ಮಗಳಿಂದ ಸೇವೆಮಾಡೋಣ.

## ಅಥೋದಕನಾಮಾನಿ

ಈ ಕೆಳಗೆ ಹೇಳಿರುವ ನೂರೊಂದು ನಾಮಗಳು ಉದಕಗಳ (ನೀರಿನ) ಹೆಸರುಗಳು

(೧) ಅರ್ಣಃ (೨) ಕ್ಷೋದಃ (೩) ಕ್ಷದ್ಮ (೪) ನಭಃ (೫) ಅಮ್ಭಃ (೬) ಕಬಂಧಮ್ (೭) ಸಲಿಲಮ್ (೮) ವಾಃ (೯) ವನಮ್ (೧೦) ಘೃತಮ್ (೧೧) ಮಧು (೧೨) ಪುರೀಷಮ್ (೧೩) ಪಿಪ್ಪಲಮ್ (೧೪) ಕ್ಷೀರಮ್ (೧೫) ವಿಷಮ್ (೧೬) ರೇತಃ (೧೭) ಕಶಃ (೧೮) ಜನ್ಮ (೧೯) ಬೃಬೂಕಮ್ (೨೦) ಬುಸಮ್ (೨೧) ತುಗ್ರ್ಯಾ (೨೨) ಬುರ್ಬುರಮ್ (೨೩) ಸುಕ್ಷೇಮ (೨೪) ಧರಣಮ್ (೨೫) ಸಿರಾ (೨೬) ಅರರಿಂದಾನಿ (೨೭) ಧ್ವಸ್ಮನ್ವತ್ (೨೮) ಜಾಮಿ (೨೯) ಆಯುಧಾನಿ (೩೦) ಕ್ಷಪಃ (೩೧) ಅಹಿಃ (೩೨) ಅಕ್ಷರಮ್ (೩೩) ಸ್ರೋತಃ (೩೪) ತೃಪ್ತಿಃ (೩೫) ರಸಃ (೩೬) ಉದಕಮ್ (೩೭) ಪಯಃ (೩೮) ಸರಃ (೩೯) ಭೇಷಜಮ್ (೪೦) ಸಹಃ (೪೧) ಶವಃ (೪೨) ಯಹಃ (೪೩) ಓಜಃ (೪೪) ಸುಖಮ್ (೪೫) ಕ್ಷತ್ರಮ್ (೪೬) ಆವಯಾಃ (೪೭) ಶುಭಮ್ (೪೮) ಯಾದುಃ (೪೯) ಭೂತಮ್ (೫೦) ಭುವನಮ್ (೫೧) ಭವಿಷ್ಯತ್ (೫೨) ಮಹತ್ (೫೩) ಆಪಃ (೫೪) ವ್ಯೋಮ (೫೫) ಯಶಃ (೫೬) ಮಹಃ (೫೭) ಸರ್ಣೀಕಮ್ (೫೮) ಸ್ವೃತೀಕಮ್ (೫೯) ಸತೀನಮ್ (೬೦) ಗಹನಮ್ (೬೧) ಗಭೀರಮ್ (೬೨) ಗಂಭರಮ್ (೬೩) ಈಮ್ (೬೪) ಅನ್ನಮ್ (೬೫) ಹವಿಃ(೬೬) ಸದ್ಮ (೬೭) ಸದನಮ್ (೬೮) ಋತಮ್ (೬೯) ಯೋನಿಃ (೭೦) ಋತ್ಯಸ್ಯಯೋನಿಃ (೭೧) ಸತ್ಯಮ್ (೭೨) ನೀರಮ್ (೭೩) ರಯಿಃ (೭೪) ಸತ್ (೭೫) ಪೂರ್ಣಮ್ (೭೬) ಸರ್ವಮ್ (೭೭) ಅಕ್ಷಿತಮ್ (೭೮) ಬರ್ಹಿಃ (೭೯) ನಾಮ (೮೦) ಸರ್ಪಿಃ (೮೧) ಅಪಃ (೮೨) ಪವಿತ್ರಮ್ (೮೩) ಅಮೃತಮ್ (೮೪) ಇಂದುಃ (೮೫) ಹೇಮ (೮೬) ಸ್ವಃ (೮೭) ಸರ್ಗಾಃ (೮೮) ಶಮ್ಬರಮ್ (೮೯) ಅಭ್ವಮ್ (೯೦) ವಪುಃ (೯೧) ಅಮ್ಬು (೯೨) ತೋಯಮ್ (೯೩) ತೂಯಮ್ (೯೪) ಕೃಪೀಟಮ್ (೯೫) ಶುಕ್ರಮ್ (೯೬) ತೇಜಃ (೯೭) ಸ್ವಧಾ (೯೮) ವಾರಿ (೯೯) ಜಲಮ್ (೧೦೦) ಜಲಾಷಮ್ (೧೦೧) ಇದಮ್ ॥ ಇತ್ಯೇಕಶತಮುದಕನಾಮಾನಿ ॥೧೨॥

ಮೇಲಿನ ನೂರೊಂದು ನೀರಿನ ಹೆಸರೆಂದು ನಿರುಕ್ತದಲ್ಲಿ ಹೇಳಿದೆ

(೧) ಅರ್ಣಃ ॥ ಋ-ಗತೌ (ಭ್ವಾ-ಪ-) 'ಉದಕೇ ನುಟ್‌ಚ' (ಉ-೪-೧೯೨) ಇತಿ ಅರ್ತೇರಸುನ್‌ಪ್ರತ್ಯಯಃ । ಅರ್ಯತೇ ತತ್ ಪ್ರಾಣಿಭಿರಿತ್ಯರ್ಣಃ ॥

ಗತ್ಯರ್ಥಕವಾದ ಋಧಾತುವಿಗೆ ನೀರು ಎಂಬರ್ಥದಲ್ಲಿ ಅಸುನ್‌ಪ್ರತ್ಯಯ, ನುಡಾಗಮ. ಪ್ರತ್ಯಯನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ಅರ್ನ್+ಅಸ್. 'ರಷಾಭ್ಯಾಂ'-ಸೂತ್ರದಿಂದ ಣತ್ವ. ಅರ್ಣಸ್ ಸಾಂತಪದವಾಗುತ್ತದೆ. ಪ್ರಾಣಿಗಳಿಂದ ಪೊಂದಲ್ಪಡುತ್ತದೆ, ತಗ್ಗಾದಪ್ರದೇಶಕ್ಕೆ ಹೋಗುತ್ತದೆ ಎಂದರ್ಥ. ಅರ್ಣಃ ಎಂದು ಅಕಾರಾಂತಪದವೂ ಇದೆ. ಆಗ ಪಚಾದಿಗಣದಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ ಹೇಳಬೇಕು. ಆಕಾಶದಿಂದ ಸುರಿಯಲ್ಪಟ್ಟು ಭೂಮಿಯನ್ನು ಹೊಂದುತ್ತದೆಂದರ್ಥ. ಉದಾಹರಣೆ—

ಸೃಜದರ್ಣಾಂಸ್ಯವ ಯದ್ಯುಧಾ (ಋ. ಸಂ. ೨-೪-೧೬-೪) ಅಗ್ನೇ ದಿವೋ ಅರ್ಣ ಮಚ್ಛಾ ಜಿಗಾಸಿ (ಋ. ಸಂ. ೩-೧-೨೨-೩) ॥

(೨) ಕ್ಷೋದಃ ॥ ಸಂಪೇಷಣಾರ್ಥಕವಾದ ಕ್ಷುದಿರ್ ಧಾತುವಿಗೆ ಅಸುನ್‌ಪ್ರತ್ಯಯ. ಕ್ಷುದ್+ಅಸ್. ಲಘೂಪಧಗುಣ. ಕ್ಷೋದಸ್ ಸಾಂತಪದವಾಗುತ್ತದೆ. ಕ್ಷುದ್ಯತೇ ಇತಿ ಕ್ಷೋದಃ. ನೀರು ಪರ್ವತಾದಿಗಳಿಂದ ಕಲ್ಲುಗಳಮೇಲೆ ಬೀಳುವುದರಿಂದ ಚೂರುಚೂರಾಗುತ್ತದೆ. ಉದಾಹರಣೆ— ನಾವಾ ನ ಕ್ಷೋದಃ ಪ್ರದಿಶಃ ಪೃಥಿವ್ಯಾಃ (ಋ. ಸಂ. ೮-೧-೧೮-೭) ಯಾಭೀರಸಾಜ್ ಕ್ಷೋದಸೋದ್ನಃ ಪಿಪನ್‌ಥುಃ (ಋ- ಸಂ. ೧-೭-೩೫-೨) ॥

(೩) ಕ್ಷದ್ಮ ॥ ಕ್ಷದ ಧಾತುವಿಗೆ ಸ್ಥೈರ್ಯಾರ್ಥವನ್ನು ಸ್ಕಂದಸ್ವಾಮಿ ಹೇಳಿರುತ್ತಾನೆ. ಸುಬೋಧಿನೀಕಾರನು ಗತಿ, ಹಿಂಸನಾರ್ಥಗಳನ್ನು ಹೇಳಿರುತ್ತಾನೆ. ಇದಕ್ಕೆ 'ಅನ್ಯೇಭ್ಯೋಽಪಿ ದೃಶ್ಯಂತೇ' ಸೂತ್ರದಿಂದ ಮನಿನ್‌ಪ್ರತ್ಯಯ. ಕ್ಷದ್ಮನ್ ನಾಂತಪದವಾಗುತ್ತದೆ, ತನ್ನ ಕಾರ್ಯದಲ್ಲಿ ಅಥವಾ ಜಲಾಶಯವನ್ನು ಹೊಂದಿ ಸ್ಥಿರವಾಗಿರುತ್ತದೆ,ಬಾಯಾರಿಕೆಯನ್ನು ಅಥವಾ ಉಷ್ಣವನ್ನು ಹೋಗಲಾಡಿಸುತ್ತದೆ ಎಂದರ್ಥ. ಉದಾಹರಣೆ—

ಕ್ಷದ್ಮೇವಾರ್ಥೇಷು ತರ್ತ್ತರೀಥ ಉಗ್ರಾ (ಋ. ಸಂ. ೮-೬-೨-೨) ॥

(೪) ನಭಃ ॥ ಣಹ-ಬಂಧನೇ ಧಾತು ಧಾತ್ವಾದಿಗೆ ನತ್ವ. "ನಹೇರ್ದಿವಿಭಶ್ಚ" ಎಂದು ಆಕಾಶಾರ್ಥದಲ್ಲಿ ಹೇಳಿದ್ದರೂ ಬಹುಲಗ್ರಹಣದಿಂದ ಈ ಧಾತುವಿಗೆ ಉದಕಾರ್ಥದಲ್ಲಿಯೂ ಅಸುನ್‌ಪ್ರತ್ಯಯ, ಹಕಾರಕ್ಕೆ ಭಕಾರಾದೇಶ ಬರುತ್ತದೆ. ನಭಸ್ ಸಾಂತಪದವಾಗುತ್ತದೆ. ಆಕಾಶದಲ್ಲಿ ಇದು ಮೇಘಗಳಿಂದ ಕಟ್ಟಲ್ಪಡುತ್ತದೆ (ಶೇಖರಿಸುವುದು) ಭೂಮಿಯಲ್ಲಿ ಸೇಚನಾದಿಗಳಿಂದ ಆಶ್ರಯಿಸಲ್ಪಡುತ್ತದೆ. ಅಥವಾ ಪ್ರಾಣಿಗಳ ಮನಸ್ಸನ್ನು ಆಕರ್ಷಿಸುತ್ತದೆ. ಪ್ರಾಣಿಗಳು ಯಾವಾಗಲೂ ಎಲ್ಲಿ ನೀರು ಸಮೃದ್ಧವಾಗಿರುವುದೋ ಅಲ್ಲಿ ವಾಸವನಾಡಲು ಮನಸ್ಸುಮಾಡುತ್ತವೆ. ಅಥವಾ 'ನ ನ ಭಾತಿ' ಪ್ರಕಾಶಿಸದೇ ಇರುವುದಿಲ್ಲ. ದೇವತಾತ್ಮವಿರುವುದರಿಂದ ತಮ್ಮ ಕಾಂತಿಯಿಂದ ಪ್ರಕಾಶಿಸುತ್ತದೆ ಎಂದರ್ಥ. ಒಂದು ನಞ್‌ಗೆ ಲೋಪವೂ ಇನ್ನೊಂದು ನಞ್‌ನ ನಕಾರಕ್ಕೆ ಲೋಪಾಭಾವವೂ ಬರುತ್ತದೆ. ಭಾಧಾತುವಿಗೆ ಅಸುನ್ ಬಂದಿದೆ. ಅಥವಾ 'ನಭಃ ಇವ ನಭಃ' ಆಕಾಶದಂತಿರುವುದರಿಂದ ಜಲವೂ ನಭಸ್ಸಾಗುತ್ತದೆ. ಸಾದೃಶ್ಯ ದ್ವಿನಿಷ್ಠವಾದುದರಿಂದ ಆಕಾಶಸಾಮ್ಯ ಜಲಕ್ಕೂ, ಜಲದಸಾಮ್ಯ ಆಕಾಶಕ್ಕೂ ಇರುತ್ತದೆ. ಆಕಾಶಸದೃಶವಾದುದರಿಂದ ನಭಸ್ಸು ಜಲ. ಉದಾಹರಣೆ—

**ಮದಚ್ಯುತಮಿಶಾನಾಂ ನಭೋಜಾಮ್** (ಋ. ಸಂ. ೭.೭-೨೫-೪) **ನಭೋವಸಾ ನಃ ಪರಿಯಾಸ್ಯ-ಧ್ವರಮ್** (ಋ. ಸಂ. ೭-೩-೮-೫) ॥

(೫) **ಅಂಭಃ** ॥ ವ್ಯಾಪ್ತ್ಯರ್ಥಕವಾದ ಆಪ್ ಧಾತುವಿಗೆ “ಉದಕೇನುಮ್‌ಭೌ ಚ” (ಉ. ೪-೨೦೮) ಎಂಬುದರಿಂದ ಅಸುನ್‌ಪ್ರತ್ಯಯ. “ಆಪ್ನೋ ಹ್ರಸ್ವಃ ಅಸುನಿ” ಎಂಬುದರಿಂದ ಈ ಪ್ರತ್ಯಯಪರದಲ್ಲಿರುವಾಗ ಧಾತುವಿಗೆ ಹ್ರಸ್ವ. ಪಕಾರಕ್ಕೆ ಭಕಾರಾದೇಶ. ನುಮಾಗಮ. ಅಮ್ಭಸ್ ಎಂದು ಸಾಂತಪದವಾಗುತ್ತದೆ. ಎಲ್ಲವನ್ನೂ ವ್ಯಾಪಿಸುವುದು ಎಂದರ್ಥ. “ಎಲ್ಲವೂ ನೀರೇ” ಎಂದು ಆಥರ್ವಣ ಬ್ರಾಹ್ಮಣವೂ, “ ಇದೆಲ್ಲವೂ ನೀರೇ ” ಎಂದು ಉಪನಿಷತ್ತು ಹೇಳುತ್ತಿವೆ. ಭೂಮಿಯಲ್ಲಿ ಜಲಭಾಗವೇ ಹೆಚ್ಚಾಗಿರುತ್ತದೆ. ಉದಾಹರಣೆ—

**ಅಂಭಃ ಕಿಮಾಸೀದ್‌ ಗಹನಂ ಗಭೀರಮ್** (ಋ. ಸಂ. ೮-೭-೧೭-೧) ॥

(೬) **ಕಬಂಧಮ್** ॥ **‘ ಬಂಧಿರನಿಭೃತತ್ವೇ ’** (ನಿರು. ೧೦-೪) ॥

ಬಂಧಿಧಾತುವಿಗೆ ಅನಿಭೃತಾರ್ಥ ಹೇಳಬೇಕೆಂದು ನಿರುಕ್ತದಲ್ಲಿ ಹೇಳಿದೆ. ನಿಭೃತವೆಂದರೆ ಚಂಚಲ. ಅದಾಗದಿರುವುದು ಅಂದರೆ ಅಚಂಚಲವೆಂದರ್ಥ. ಕಬಂಧವೆಂಬಲ್ಲಿ ಎರಡು ಪದಗಳಿವೆ. ಕಮನೀಯಂ ಚ ತತ್‌ಬಂಧಂ ಚ ಕ ಬಂಧಮ್. ಕಮು ಕಾಂತೌ ಧಾತುವಿಗೆ ಡ ಪ್ರತ್ಯಯ ಬಂದರೆ ಕ ಎಂದಾಗುತ್ತದೆ. ಡಿತ್ತ್ವಾದದರಿಂದ ಟಿಲೋಪ ಬರುತ್ತದೆ. ಬಂಧಧಾತುವಿಗೆ ಪಚಾದಿಪಠಿತವಾದುದರಿಂದ ಅಚ್‌ಪ್ರತ್ಯಯ. ಮನೋಹರವಾಗಿ ಸ್ಥಿರವಾಗಿರುತ್ತದೆ ಎಂದರ್ಥ. ಅಥವಾ ಕಂ=ಸುಖವನ್ನು ಬಧ್ನಾತಿ=ಕೊಡುತ್ತದೆ. ಸ್ನಾನಪಾನಾದಿಗಳಿಂದ ಪ್ರಾಣಿಗಳಿಗೆ ಸಂತೋಷಜನಕವಾಗುವುದೆಂದು ತಾತ್ಪರ್ಯ. ಕಂ ಎಂಬ ಕರ್ಮ ಉಪಪದವಾಗಿರುವಾಗ ಬಂಧಧಾತುವಿಗೆ ಅಣ್‌ಪ್ರತ್ಯಯ. ಉದಾಹರಣೆ—

**ನೀಚೀನಬಾರಂ ವರುಣಃ ಕಂಬಂಧಮ್** (ಋ. ಸಂ. ೪-೪-೩೦-೩) **‘ ಅಯಮರ್ಣೋ ನ ಮರುತಃ ಕ ಬಂಧಿನಃ** (ಋ. ಸಂ. ೪-೩-೧೫-೩) ॥

(೭) **ಸಲಿಲಮ್** ॥ ಗಮನಾರ್ಥವನ್ನು ಕೊಡುವ ಸಲಧಾತುವಿಗೆ “ ಸಲಿಕಲ್ಯನಿಮಹಿಭಡಿ—” (ಉ. ೧-೫೪) ಸೂತ್ರದಿಂದ ಇಲಚ್‌ಪ್ರತ್ಯಯ. ಕೆಳಗಿನ ಪ್ರದೇಶವನ್ನು ಕುರಿತು ಹೋಗುವುದು, ಪ್ರಾಣಿಗಳಿಂದ ಹೊಂದಲ್ಪಡುವುದು ಎಂದರ್ಥ. ಉದಾಹರಣೆ—

**‘ ಗೌರೀರ್ಮಿಮಾಯ ಸಲಿಲಾನಿ ತಕ್ಷತಿ ’** (ಋ. ಸಂ. ೨.೩-೨೨-೧) ॥

(೮) **ವಾಃ** ॥ ವರಣಾರ್ಥವಾದ ವೃಞ್‌ಧಾತುವಿಗೆ ಛಾಂದಸವಾಗಿ ಸ್ವಾರ್ಥದಲ್ಲಿ ಅಣ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಅಂತ್ಯದ ಋಕಾರಕ್ಕೆ ಆರ್. ವಾರ್ ಶಬ್ದವಾಗುತ್ತದೆ. ಇದಕ್ಕೆ ಸುಬಂತವಾಗ ‘ ಹಲ್‌ಙ್ಯಾಭ್ಯೋ—’ ಸೂತ್ರದಿಂದ ಅದಕ್ಕೆ ಲೋಪ. ರೇಫಕ್ಕೆ ವಿಸರ್ಗ. ವಾಃ. ಇಂದ್ರನಿಂದ ಪ್ರಾರ್ಥಿಸಲ್ಪಟ್ಟದ್ದು. “ಅನಶನಮಸ್ಯಂದಮಾನಾ ಅವಿರತ ವಾಹಿಕಮ್ ಎಂದು ಈ ಅರ್ಥ ಶ್ರುತಿಯಲ್ಲಿ ಹೇಳಿದೆ. ಉದಾಹರಣೆ—

**“ ವಾರ್ಣ ಪಥಾ ರಥ್ಯೇವ ಖಾನೀತ್”** (ಋ. ಸಂ. ೨.೫-೨೫-೧)

(೯) **ವನಮ್** ॥ ವನ- ಸಂಭಕ್ತೌ ಧಾತು. ಇದಕ್ಕೆ ಪುಂಸಿ " ಸಂಜ್ಞಾಯಾಂಘಃ ಪ್ರಾಯೇಣ " ಸೂತ್ರದಿಂದ ಘ ಪ್ರತ್ಯಯ. ವನ್ಯತೇ ಇತಿ ವನಮ್. ಎಲ್ಲರಿಂದಲೂ ಸೇವಿಸಲ್ಪಡುವುದು ಎಂದರ್ಥ. ಉದಾಹರಣೆ—

**' ಯಥಾ ವಾತೋ ಯಥಾ ವನಮ್ '** (ಋ. ಸಂ. ೪-೪-೨೦) **' ಸೋಮೋ ವಿಶ್ವಾನ್ಯತಸಾ ವನಾನಿ '** (ಋ. ಸಂ. ೮-೪-೧೪-೫)

(೧೦) **ಘೃತಮ್** ॥ ಸೇಚನಾರ್ಥಕವಾದ ಘೃಧಾತುವಿಗೆ " ಅಂಜಿಘೃಸಿಭ್ಯಃಕ್ತಃ " (ಉ. ೩-೮೯) ಸೂತ್ರದಿಂದ ಕ್ತಪ್ರತ್ಯಯ ಕಿತ್ತಾಗುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ವರುಣನು ಇದರಿಂದ ಭೂಮಿಯನ್ನು ಅಭಿಷೇಚನಮಾಡುತ್ತಾನೆ ಅಥವಾ ಇದರಿಂದ ಜನರು ಸೇಚನ ಮಾಡುತ್ತಾರೆ ಎಂದರ್ಥ. ಘೃತವು ಉದಕನಾಮವೆಂದು ನಿಘಂಟುವಿನಲ್ಲಿ ಹೇಳಿದೆ. " ಜಿಘರ್ತೇಃ ಸಿಂಚತಿಕರ್ಮಣಃ " (ನಿರು. ೭-೨೪) ಎಂದು ಭಾಷ್ಯ. ಕ್ಷರಣ, ದೀಪ್ತ್ಯರ್ಥಕ ಘೃಧಾತುವಿಗೆ 'ಗತ್ಯರ್ಥಾ-ಕರ್ಮಕ—' ಸೂತ್ರದಿಂದ ಅಕರ್ಮಕವಾಗುವುದರಿಂದ ಕರ್ತ್ರರ್ಥದಲ್ಲಿ ಕ್ತಪ್ರತ್ಯಯ ಬರುತ್ತದೆ. ಮೇಘದಿಂದ ಅಥವಾ ಪರ್ವತದಿಂದ ಕೆಳಗೆ ಸುರಿಯುತ್ತದೆ, ತನ್ನ ಕಾಂತಿಯಿಂದ ಪ್ರಕಾಶಿಸುತ್ತದೆ ಎಂದರ್ಥ. ಉದಾಹರಣೆ—

**ಆದಿದ್‌ಘೃತೇನ ಪೃಥಿವೀ ವ್ಯುದ್ಯತೇ** (ಋ ಸಂ. ೨-೩-೨೩-೧) ॥

(೧೧) **ಮಧು** ॥ ಮೇಘದ ಮಧ್ಯದಲ್ಲಿರುವ ನೀರಿಗೆ ಮಧುವೆಂದು ಹೆಸರು. ಅಲ್ಲಿಯೇ ವಿದ್ಯುತ್ ರೂಪದಿಂದ ಸುಡುತ್ತಾ ಗಾಳಿಯಿಂದ ತಿರುಗಿಸಲ್ಪಡುತ್ತಾ ಶಬ್ದ ಮಾಡುತ್ತಿರುತ್ತದೆ. ಗತ್ಯರ್ಥದಲ್ಲಿ ಧ್ಮಾಧಾತುವಿದೆಯೆಂದು ಅದರಿಂದ ಈ ಮಧ ಶಬ್ದವಾಗಿದೆ. ಅಥವಾ ಣ್ಯಂತಾರ್ಥ ಹೇಳಿ ಅದರಿಂದ ಹೊರಗೆ ಹಾಕಲ್ಪಡುವುದು ಎಂದು ಅರ್ಥ ಹೇಳಬೇಕು. ಅಥವಾ ತೃಪ್ತ್ಯರ್ಥಕವಾದ ಮದಧಾತುವಿಗೆ ಬಹುಲಗ್ರಹಣದಿಂದ ಉಪ್ರತ್ಯಯ, ಧಕಾರಾಂತಾದೇಶ. ಕುಡಿಯಲ್ಪಟ್ಟ ಇದರಿಂದ ಪ್ರಾಣಿಗಳು ಸಂತೋಷಪಡುತ್ತವೆ ಎಂದರ್ಥ. ಅಥವಾ ಮಧುವಿನಂತೆ (ಜೇನು) ಆಸ್ವಾದ್ಯವಾದುದರಿಂದ ಜಲವೂ ಮಧುವಾಗುತ್ತದೆ. ಇದಿಷ್ಟು ಸ್ಕಂದಸ್ವಾಮಿಯು ಮಾಡಿದ ನಿರ್ವಚನಗಳು. ವೈಯಾಕರಣರ ಮತದಲ್ಲಿ ಜ್ಞಾನಾರ್ಥಕ ಮನ ಧಾತುವಿಗೆ ವರ್ತಮಾನಾರ್ಥದಲ್ಲಿ " ಫಲಿಪಾಟನಮಿಮನಿಜನಾಂ ಗುಕ್‌ಪಾಟನಾಕಿಧತಶ್ಚ " (ಉ. ಸೂ. ೧-೧೮) ಸೂತ್ರದಿಂದ ಉಪ್ರತ್ಯಯ, ಧಕಾರಾಂತಾದೇಶ. ಜನರಿಂದ ಚೆನ್ನಾಗಿ ತಿಳಿಯಲ್ಪಡುವುದು ಮಧು. " ಮನನೀಯಂ ಮಧು " ಎಂದು ಭಟ್ಟಭಾಸ್ಕರಮಿಶ್ರರು ಹೇಳಿರುತ್ತಾರೆ. ಉದಾಹರಣೆ—

**ವಿದ್ವಾನ್ ಮಧ್ವ ಉಜ್ಜಭಾರಾ ದೃಶೇಕಮ್** (ಋ. ಸಂ. ೭-೫-೩೩-೫)

(೧೨) **ಪುರೀಷಮ್**॥ ಪಾಲನ, ಪೂರಣ ಅರ್ಥವನ್ನು ಕೊಡುವ ಪೃಧಾತುವಿಗೆ "ಕೄಪೄಬ್ಯಾಂಕಿಚ್ಚ"(ಉ. ೪-೨೭) ಸೂತ್ರದಿಂದ ಈಷನ್‌ಪ್ರತ್ಯಯ. ಅದಕ್ಕೆ ಕಿತ್ತ್ವ ಹೇಳಿರುವುದರಿಂದ ಗುಣವಿಲ್ಲ. " ಉದೋಷ್ಠ್ಯಪೂರ್ವಸ್ಯ " ಸೂತ್ರದಿಂದ ಉತ್ವ ರಪರವಾಗಿ ಬರುತ್ತದೆ. ಪುರೀಷಮ್. ಪ್ರಲಯ ಕಾಲದಲ್ಲಿ ಪ್ರಪಂಚವನ್ನು ತುಂಬಿಸುತ್ತದೆ, ಇದರಿಂದ ಕೆರೆ ಮುಂತಾದವುಗಳು ತುಂಬಲ್ಪಡುತ್ತವೆ, ಸಸ್ಯಾದಿಗಳನ್ನು ಸಮೃದ್ಧಿಪಡಿಸುವುದರ ಮೂಲಕ ಲೋಕಪಾಲಕವಾಗಿರುತ್ತದೆ ಎಂದರ್ಥ. ಅಥವಾ ಪ್ರೀಞ್ ಧಾತುವಿಗೆ ಬಹುಲಗ್ರಹಣದಿಂದ ಕೀಷನ್ ಪ್ರತ್ಯಯ, ಈಕಾರಕ್ಕೆ ಉಕಾರಾದೇಶ, ಅದು ಪಕಾರದ ಪರವಾಗಿ ಬರುತ್ತದೆ. ಕಿತ್ತಾದುದರಿಂದ ಗುಣವಿಲ್ಲ. ಜಗತ್ತನ್ನು ಸಂತೋಷಗೊಳಿಸುವುದು ಪುರೀಷ. ಉದಾಹರಣೆ—

**' ಉದ್ಯನ್‌ತ್ಸಮುದ್ರಾದುತ ವಾ ಪುರೀಷಾತ್ '** (ಋ. ಸಂ. ೨-೩-೧೧-೧) ॥

(೧೩) ಪಿಪ್ಪಲಮ್ ॥ ಪ್ಯಾ ಪಾಲನಪೂರಣಯೋಃ ಧಾತು. ಇದಕ್ಕೆ ‘ ಕಲಸ್ತೃಪಾದಿಭ್ಯಃ—’ ಎಂಬುದರಿಂದ ಕಲಪ್ರತ್ಯಯ. ‘ ಬಹುಲಂ ಛಂದಸಿ ’ ಸೂತ್ರದಿಂದ ಉತ್ವ ಬರುವುದಿಲ್ಲ. ಧಾತುವಿಗೆ ದ್ವಿತ್ವ. ‘ ಉರತ್ ’ ಸೂತ್ರದಿಂದ ಅಭ್ಯಾಸ ಋಕಾರಕ್ಕೆ ಅತ್ವ. ‘ ಅರ್ತಿಪಿಪರ್ತ್ಯೋಶ್ಚ ’ ‘ ಬಹುಲಂ ಛಂದಸಿ ’ (ಪಾ. ಸೂ. ೭-೪.೭೭, ೭೮) ಎಂಬುದರಿಂದ ಅದಕ್ಕೆ ಇಕಾರಾದೇಶ. ಪಿಪೃ+ಅಲ ಎಂದಿರುವಾಗ ಛಾಂದಸವಾದುದರಿಂದ ಧಾತು ಪಕಾರಕ್ಕೆ ದ್ವಿತ್ವ, ಋಕಾರಕ್ಕೆ ಲೋಪ. ಪಿಪರ್ತಿ ಇತಿ ಪಿಪ್ಪಲಮ್. ಜಗತ್ತನ್ನು ತುಂಬುವುದು ಇತ್ಯಾದಿ ಪುರೀಷ ಶಬ್ದಾರ್ಥದಂತೇ ತಿಳಿಯಬೇಕು. ನಿರುಕ್ತದ ರೀತಿಯಲ್ಲಿ ಅಪಿ ಉಪಸರ್ಗಪೂರ್ವಕವಾದ ಗತ್ಯರ್ಥಕವಾದ ಪ್ಲುಙ್ ಧಾತುವಿನಿಂದ ಈ ಪದವಾದಿದೆ. ನೀರು ನದಿಗಳಲ್ಲಿ ಪ್ರವಾಹ ರೂಪವಾಗಿ ತಗ್ಗಿನ ಪ್ರದೇಶಕ್ಕೆ ಹೋಗುತ್ತದೆ, ಜಲಾಶಯಗಳಲ್ಲಿ ಕಟ್ಟಿ ಇರುವುದರಿಂದ ನಿರುದ್ಧವಾಗಿ ನಿಂತಿರುತ್ತದೆ. ಧಾತ್ವರ್ಥ ದಿಂದ ಹೋಗುವುದೂ, ಅಪಿಶಬ್ದದಿಂದ ನಿಂತಿರುವುದೂ ಅರ್ಥವಾಗುತ್ತದೆ. ಪೃಷೋದರಾದಿಗಣದಲ್ಲಿ ಪಠಿತವಾದುದರಿಂದ ಅಪಿ+ಪ್ಲು+ಡ ಎಂಬುದರಿಂದ ಪಿಪ್ಪಲವೆಂದಾಗಿದೆ. ಉದಾಹರಣೆ—

‘ ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ’ (ಋ. ಸಂ. ೨-೩-೧೮-೨) ॥

(೧೪) ಕ್ಷೀರಮ್ ॥ ಘಸ್ಲೃ-ಅದನೇ ಧಾತು. ‘ ಘಸೇಃ ಕಿಚ್ಚ ’ (ಉ. ೪-೩೩) ಸೂತ್ರದಿಂದ ಈರನ್‌ಪ್ರತ್ಯಯ. ಚಕಾರದಿಂದ ಪೂರ್ವಸೂತ್ರದಿಂದ ‘ ಕಿಚ್ಚ ’ ಎಂಬುದು ಅನುವೃತ್ತವಾಗುತ್ತದೆ. ಕಿತ್ತಾದುದರಿಂದ ‘ ಗಮಹನಜನ—’ (ಪಾ. ಸೂ. ೬-೪-೯೮) ಸೂತ್ರದಿಂದ ಧಾತುವಿನ ಉಪಧೆಗೆ (ಅ) ಲೋಪ, ಘ್+ಸ್+ಈರ ಎಂದಿರುವಾಗ ಖರಿಚ’ ಸೂತ್ರದಿಂದ ಘಕಾರಕ್ಕೆ ಕಕಾರ. ‘ ಶಾಸಿವಸಿಘಸೀನಾಂಚ’ ಸೂತ್ರದಿಂದ ಸಕಾರಕ್ಕೆ ಷಕಾರಾದೇಶ. ಕಷಯೋಗದಿಂದ ಕ್ಷಕಾರ. ಕ್ಷೀರಮ್. ಇದನ್ನು ಎಲ್ಲರೂ ತಿನ್ನುತ್ತಾರೆ ಎಂದರ್ಥ. ಅಥವಾ ಸಂಚಲನಾರ್ಥಕವಾದ ಕ್ಷರಧಾತುವಿಗೆ ಬಹುಲಗ್ರಹಣದಿಂದ ಡೀರನ್‌ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಅರ್) ಲೋಪ. ಮೇಘದಿಂದ ಚಲಿಸಿ ಬೀಳುವುದು ಎಂದರ್ಥ. ಉದಾಹರಣೆ—

**ಕ್ಷೀರೇಣ ಸ್ನಾತಃ ಕುಯವಸ್ಯ ಯೋಷಾ** (ಋ. ಸಂ. ೧-೭-೧೮-೩) ॥

(೧೫) ವಿಷಮ್ ॥ ವ್ಯಾಪ್ತ್ಯರ್ಥಕವಾದ ವಿಷ್ಲೃಧಾತುವಿಗೆ “ವಿಷೇರ್ವ್ಯಾಪ್ತಿಕರ್ಮಣಿ” ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. “ವೇವೇಷ್ಟಿ ಸರ್ವಮ್”. ಸಕಲ ಜಗತ್ತನ್ನೂ ವ್ಯಾಪಿಸಿರುವುದು ವಿಷ. ಅಥವಾ ವಿ ಉಪಸರ್ಗಸಹಿತವಾದ ಶೌಚಾರ್ಥಕ ಷ್ಣಾಧಾತುವಿಗೆ ಬಹುಲಗ್ರಹಣದಿಂದ ಡಪ್ರತ್ಯಯ, ಣಕಾರಕ್ಕೆ ಲೋಪ. ಡಿತ್ತಾದುದ ರಿಂದ ಟಿಲೋಪ (ಆ) ವಿ+ಸ್+ಅ. ಷತ್ವ. ವಿಶೇಷವಾಗಿ ಇದರಿಂದ ಸ್ನಾನಮಾಡುತ್ತಾರೆ ಎಂದರ್ಥ. ಮೊದಲನೆಯ ಶೌಚ ಸಾಧನವಾದದ್ದು ಜಲ. ಅಥವಾ ಷಚ-ಸೇಚನೇ, ಸೇವನೇ ಚ.ಧಾತು. ವಿ ಪೂರ್ವದಲ್ಲಿರುವಾಗ ಇದಕ್ಕೆ ಡಪ್ರತ್ಯಯ. ಹಿಂದಿ ನಂತ ಟಿಲೋಪ ಡತ್ವಾದಿ. ಸ್ನಾನಪಾನಾದಿಗಳನ್ನು ಬರುವುದರಿಂದ ಸೇವಿಸಲ್ಪಡುವುದೆಂದರ್ಥ. ಉದಾಹರಣೆ—

ಜಾತಂ ವಿಸ್ತಾತೋ ಅಪಕಂ ವಿಷೇಣ (ಋ. ಸಂ. ೧-೮-೧೬-೧) “ಕೇಶ್ಯಗ್ನಿಂ ಕೇಶೀ ವಿಷಮ್” (ಋ. ಸಂ. ೮-೭-೨೪-೧) ॥

(೧೬) ರೇತಃ ॥ ಪ್ರಸವಾರ್ಥಕವಾದ ರಿ ಧಾತುವಿಗೆ ‘ಸ್ರುರೀಭ್ಯಾಂ ತುಟ್ ಚ’ (ಉ-೪-೧೯೨) ಸೂತ್ರದಿಂದ ಅಸುನ್‌ಪ್ರತ್ಯಯ, ತುಡಾಗಮ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. ರೇತಸ್ ಸಾಂತಪದವಾಗುತ್ತದೆ.

ರೀಯತೇ ಇತಿ ರೇತಃ ಸ್ರವಿಸುವುದು, ಹರಿಯುವುದು ಎಂದರ್ಥ. ಅಥವಾ "ದೇವಾನಾಂ ರೇತೋ ವರ್ಷಮ್" ಎಂದು ಉಪನಿಷತ್ತಿನಲ್ಲಿ ಹೇಳಿರುವುದರಿಂದ ಮಳೆನೀರು ದೇವತೆಗಳ ರೇತಸ್ಸಾದುದರಿಂದ ರೇತಃ ಎಂದರೆ ನೀರು ಆಗುತ್ತದೆ. ಉದಾಹರಣೆ—

**ಅಸ್ಮೇ ರೇತಃ ಸಿಂಚತಂ ಯನ್ಮನುರ್ಹಿತಮ್** (ಋ. ಸಂ. ೫-೧-೧೪-೨) **"ಸಪ್ತಾರ್ಧಗರ್ಭಾ ಭುವನಸ್ಯ ರೇತಃ"** (ಋ. ಸಂ. ೨-೩-೨೧-೧) ||

(೧೭) ಕಶಃ || ಗತಿ, ಶಬ್ದಾರ್ಥವನ್ನು ಕೊಡುವ ಕಶಧಾತುವಿಗೆ ಔಣಾದಿಕ ಅಸುನ್‌ಪ್ರತ್ಯಯ. ಕಶಸ್ ಸಾಂತಪದವಾಗುತ್ತದೆ. ತಗ್ಗಿನ ಪ್ರದೇಶಕ್ಕೆ ಹೋಗುವುದು, ಮೇಘದಿಂದ ಬೀಳುತ್ತಾ ಶಬ್ದಮಾಡುವುದು ಎಂದರ್ಥ. ಉದಾಹರಣೆ—

**ಯಾಭಿರ್ಮಹಾಮತಿಥಿಗ್ವಂ ಕಶೋ ಜುವನ್** (ಋ. ಸಂ. ೧-೭-೩೫-೪) ||

(೧೮) **ಜನ್ಮ** || ಜನೀ-ಪ್ರಾದುರ್ಭಾವೇ ಧಾತು. "ಅನ್ಯೇಭ್ಯೋಽಪಿ ದೃಶ್ಯಂತೇ" ಸೂತ್ರದಿಂದ ಮನಿನ್‌ಪ್ರತ್ಯಯ. ಜನ್ಮನ್ ನಾಂತಪದವಾಗುತ್ತದೆ. 'ಅಗ್ನೇರಾಪಃ' (ತೈ-ಉ) ಎಂಬ ಉಪನಿಷದ್ವಾಕ್ಯದಂತೆ ಇದು ಸೃಷ್ಟಿಯ ಆದಿಕಾಲದಲ್ಲಿ ತನ್ನ ಕಾರಣದಿಂದ ಹುಟ್ಟುತ್ತದೆ ಎಂದರ್ಥ. ಅಥವಾ ಇದರಲ್ಲಿ ಮೀನು ಮುಂತಾದ ಜಲಚರ ಪ್ರಾಣಿಗಳು ಹುಟ್ಟುತ್ತವೆ ಎಂದರ್ಥವಾಗುವುದರಿಂದ ಅಧಿಕರಣಾರ್ಥದಲ್ಲಿ ಪ್ರತ್ಯಯ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

(೧೯) **ಬೃಬೂಕಮ್** || ಶಬ್ದಾರ್ಥಕವಾದ ಬ್ರೂಞ್‌ಧಾತು. ಅಧಃ ಪತನಾರ್ಥಕವಾದ ಭ್ರಂಶಧಾತು, ಹೀಗೆ ಈ ಎರಡು ಧಾತುಗಳ ಸಮುದಾಯದ ಮೇಲೆ 'ಉಲೂಕಾದಯಶ್ಚ' ಸೂತ್ರದಿಂದ ಊಕಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿಪಾತದಿಂದಲೇ ರೂಪಸಿದ್ಧಿ. ಊಕಪ್ರತ್ಯಯಪರವಾದಾಗ ಎರಡು ಧಾತುಗಳಿಗೆ ಬೃಬೂ ಆದೇಶವೆಂದು ಶ್ರೀನಿವಾಸನ ಮತ. ಕ್ರಮವಾಗಿ ಬೀಳುತ್ತಾ ಶಬ್ದಮಾಡುತ್ತದೆ, ಅನಾವರಣವಿರುವ ಆಕಾಶದಿಂದ ಬೀಳುತ್ತದೆ ಮೇಘದಿಂದ ಬೀಳುತ್ತದೆ' ಎಂದರ್ಥವಾಗುತ್ತದೆ. ಉದಾಹರಣೆ—

**ದ್ವಾ ಬೃಬೂಕಂ ವಹತಃ ಪುರೀಷಮ್** (ಋ. ಸಂ. ೭-೭-೧೯-೩) ||

(೨೦) **ಬುಸಮ್** || ಷ್ಣಾ-ಶೌಚೇ. ಧಾತು. ವಿ ಉಪಸರ್ಗಪೂರ್ವದಲ್ಲಿರುವಾಗ 'ಆತಶ್ಚೋಪಸರ್ಗೇ' (ಪಾ. ಸೂ. ೩-೩-೧೦೬) ಸೂತ್ರದಿಂದ ಕ ಪ್ರತ್ಯಯ. ಧಾತ್ವಾದಿಗೆ ಸತ್ವ. ಬಹುಲಗ್ರಹಣದಿಂದ ಉಪಸರ್ಗದ ಇಕಾರಕ್ಕೆ ಉಕಾರಾದೇಶ, ಧಾತುವಿನ ನಕಾರಕ್ಕೆ ಲೋಪ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ. ವಬಗಳಿಗೆ ಅಭೇದ. ಪ್ರಥಮಶೌಚಸಾಧನವಾದುದರಿಂದ ವಿಶೇಷವಾಗಿ ಇದರಿಂದ ಸ್ನಾನಮಾಡುತ್ತಾರೆ ಎಂದರ್ಥ. ಅಥವಾ ಭ್ರಂಶ ಧಾತುವಿಗೆ ಪಚಾದಿಗಣ ಪಠಿತವಾದುದರಿಂದ ಅಚ್ ಬಂದು ಪೃಷೋದರಾದಿಯಲ್ಲಿ ಸೇರಿಸುವುದರಿಂದ ಅಭಿಮತರೂಪವಾಗುತ್ತದೆ. ಅಥವಾ ಬುಸ-ವಿಸರ್ಗೇ ಧಾತು. ಇದಕ್ಕೆ ಬಹುಲಗ್ರಹಣದಿಂದ 'ಗೇ ಹೇ ಕಃ' ಸೂತ್ರದಿಂದ ವಿಹಿತವಾದ ಕ ಪ್ರತ್ಯಯ ಬಂದರೆ ಬುಸ ಎಂದಾಗುತ್ತದೆ. ಬುಸ್ಯತೇ, ಮೇಘಗಳಿಂದ ಬಿಡಲ್ಪಡುವುದು ಎಂದರ್ಥ. ಉದಾಹರಣೆ—

**"ಆವಿಃ ಸ್ವಃ ಕೃಣುತೇ ಗೂಹತೇ ಬುಸಮ್"** (ಋ. ಸಂ. ೭-೭-೧೯-೪) |

(೨೧) **ತುಗ್ರ್ಯಾ** || ಹಿಂಸಾರ್ಥಕವಾದ **ತುಜ** ಧಾತುವಿಗೆ 'ಕ್ವಿಪ್‌ಚ' (ಪಾ. ಸೂ. ೩-೨-೭೬) ಸೂತ್ರದಿಂದ ಕ್ವಿಪ್ ಪ್ರತ್ಯಯ. ತುಜಂತಿ ಹಿಂಸಂತಿ ತಸ್ಕರ' ಶೈತ್ಯದಿಂದ ಕತ್ತಲೆಯನ್ನು ಅಥವಾ ಜನರನ್ನು ಪೀಡಿಸುವುದು ತುಜಃ ಅಂದರೆ

ಕಿರಣಗಳು ಅದು ಉಳ್ಳವನು ತುಗ್ರಃ. ಮತ್ವರ್ಥದಲ್ಲಿ ರ ಪ್ರತ್ಯಯು ಬಂದಿದೆ. ಸೂರ್ಯನೆಂದರ್ಥ. ಅಲ್ಲಿ ಉಂಟಾದದ್ದು ತುಗ್ರ್ಯ. 'ಭವೇ ಛಂದಸಿ' (ಪಾ. ಸೂ. ೪-೪-೧೧೦) ಸೂತ್ರದಿಂದ ಭವಾರ್ಥದಲ್ಲಿ ಯತ್ ಪ್ರತ್ಯಯು. 'ಯಸ್ಯೇತಿ ಚ' ಅಕಾರಲೋಪ. ಆದಿತ್ಯನಿಂದ ವೃಷ್ಟಿಯೂ, ವೃಷ್ಟಿಯಿಂದ ಅನ್ನವೂ ಅದರಿಂದ ಪ್ರಜೆಗಳೂ ಆಗುತ್ತಾರೆಂದು ಮನುವು ಹೇಳಿರುತ್ತಾನೆ.

ಅಥವಾ ತುಗ್ರ ಎಂದರೆ ಗ್ರೀಷ್ಮಕಾಲ. ಇದು ಅತಿಶಯವಾದ ಸೂರ್ಯತಾಪವುಳ್ಳದ್ದಾಗಿರುತ್ತದೆ. "ತತ್ರ ಸಾಧುಃ" ಸೂತ್ರದಿಂದ ಅದಕ್ಕೆ ಯತ್‌ಪ್ರತ್ಯಯು. ವೃತ್ತಿಕಾರರು ಅಗ್ನಿ, ಆಕಾಶ ಯಜ್ಞ, ಉತ್ತಮ ಇಷ್ಟು ಅರ್ಥದಲ್ಲಿ ತುಗ್ರಶಬ್ದವಿದೆಯೆಂದು ಹೇಳಿರುತ್ತಾರೆ. 'ತುಗ್ರಾದ್ ಘನ್' (ಪಾ. ಸೂ. ೪-೪-೧೧೫) ಸೂತ್ರದಿಂದ ಭವಾರ್ಥದಲ್ಲಿ ಘನ್‌ಪ್ರತ್ಯಯ ಪ್ರಾಪ್ತವಾದರೂ ವ್ಯತ್ಯಯದಿಂದ 'ಭವೇ ಛಂದಸಿ' ಸೂತ್ರದಿಂದ ಯತ್‌ಪ್ರತ್ಯಯವೇ ಬರುತ್ತದೆ. ತುಗ್ರ್ಯಾಃ ಎಂದು ಸ್ತ್ರೀಲಿಂಗದಲ್ಲಿಯೂ, ತುಗ್ರ್ಯಂ ಎಂದು ನಪುಂಸಕದಲ್ಲಿಯೂ ಪ್ರಯೋಗ ಪ್ರಸಿದ್ಧವಾಗಿದೆ. 'ಅಗ್ನೇರಾಪಃ' (ತೈ-ಉ) ಎಂದು ನೀರಿಗೆ ಅಗ್ನಿಯು ಕಾರಣವೆಂದು ಹೇಳಿದೆ. ಅಗ್ನಿಯಿಂದ ಧೂಮವೂ, ಧೂಮದಿಂದ ಮೇಘವೂ, ಅದರಿಂದ ಮಳೆಯೂ ಆಗುತ್ತವೆಂದು ಮುಂಡಕದಲ್ಲಿ ಹೇಳಿದೆ. ಅಗ್ನಿಯಲ್ಲಿ ಸಮರ್ಪಿಸಿದ ಆಹುತಿಯು ಆದಿತ್ಯನನ್ನು ಸೇರುತ್ತದೆ, ಆದಿತ್ಯನಿಂದ ವೃಷ್ಟಿಯಾಗುತ್ತದೆಂದು ಮನುಸ್ಮೃತಿಯಲ್ಲಿ ಹೇಳಿದೆ. ಇವೆಲ್ಲವೂ ಮಳೆಗೆ ಪರಂಪರಾಕಾರಣಗಳೆಂದು ತಿಳಿಯಬೇಕು. ವರಿಷ್ಠ ಅಂದರೆ ಉತ್ತಮನು. ಸರ್ವೈಶ್ವರ್ಯದಿಂದ ಕೂಡಿರುವ ಇಂದ್ರನೇ ವರಿಷ್ಠನು ಅವನೇ ಮಳೆಯನ್ನು ಕೊಡುವವನು. ಅವನಲ್ಲಿ ಉಂಟಾಗುವುದು ಮಳೆ ಎಂದು ಹೇಳಲು ಸಾಧ್ಯವಿದೆ. ಉದಾಹರಣೆ—

**ಆವಃ ಶಮಂ ವೃಷಭಂ ತುಗ್ರ್ಯಾಸು (ಋ. ಸಂ. ೧-೩-೩-೫) ॥ ಉತ ಯಸ್ತುಗ್ರ್ಯೇ ಸಚಾ (ಋ. ಸಂ- ೬-೩-೪-೫)**

(೨೨) **ಬುಬುರ್ವರಮ್** ॥ ಪಾಲನ, ಪೂರಣಾರ್ಥಕವಾದ ಪೃ ಧಾತುವಿಗೆ ಬಹುಲಗ್ರಹಣದಿಂದ ಕಪ್ರತ್ಯಯು. 'ಉದೋಷ್ಠ್ಯಪೂರ್ವಸ್ಯ' ಸೂತ್ರದಿಂದ ಉತ್ವ ರಪರವಾಗಿ ಬಂದರೆ ಪುರಂ ಎಂದಾಗುತ್ತದೆ. 'ವಪುಷಃ ಪುರಮ್'. ಶರೀರಕ್ಕೆ ಪೂರಕವಾದದ್ದು ಅಥವಾ ಪಾಲಕವಾದದ್ದು 'ವಪುಃ ಪುರಂ'. ಪೃಷೋದರಾದಿಯಲ್ಲಿ ಪಠಿತವಾದುದರಿಂದ ವಕಾರಕ್ಕೆ ಲೋಪ. ಸಕಾರಕ್ಕೆ ರೇಫಾದೇಶ. ಎರಡು ಪಕಾರಗಳಿಗೂ ಬಕಾರಾದೇಶ ಬುಬುರ್ವರಮ್ ಎಂದಾಗುತ್ತದೆ. ಬುಬುರ್ವರವು ಇದರಲ್ಲಿದೆ ಎಂಬರ್ಥದಲ್ಲಿ ಅರ್ಶ ಆದಿಗಣದಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯು. ಇದಕ್ಕೆ ನಿಗಮ ಹುಡುಕಬೇಕು.

(೨೩) **ಸುಕ್ಷೇಮ** ॥ ನಿವಾಸಗತ್ಯರ್ಥಕವಾದ ಕ್ಷಿಧಾತು (ತುದಾದಿ) ಕ್ಷಯಾರ್ಥಕವಾದ ಕ್ಷಿ ಧಾತು. (ಭ್ವಾದಿ) ಇವರ ಮೇಲೆ 'ಅರ್ತಿಸ್ತುಸು—' (ಉ. ೧.೧೩೭) ಸೂತ್ರವಿಹಿತವಾದ ಮನ್‌ಪ್ರತ್ಯಯು. ಉಣಾದಿಪ್ರತ್ಯಯಗಳಲ್ಲಿ ಕೆಲವು ಕಡೆ 'ಹಲಂತ್ಯಮ್' ಸೂತ್ರದಿಂದ ಇತ್ಸಂಜ್ಞಾ ಬರುವುದಿಲ್ಲ. ಪ್ರಕೃತ ನಕಾರಕ್ಕೂ ಇತ್ಸಂಜ್ಞೆ ಇಲ್ಲದಿರುವುದರಿಂದ ಲೋಪ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಾರಕ್ಕೆ ಗುಣ. ಕ್ಷೇಮನ್ ನಾಂತಪದವಾಗುತ್ತದೆ. ಇದರಿಂದ ಪ್ರಾಣಿಗಳು ವಾಸಿಸುತ್ತವೆ, ಇದರಿಂದ ದಾರಿ ನಡೆದು ಹೋಗುತ್ತವೆ (ಜಲಮಾರ್ಗ), ಮೇಲ್ಭಾಗದಿಂದ ಕ್ಷಯ ಹೊಂದುತ್ತವೆ ಎಂದರ್ಥವಾಗುತ್ತದೆ. ಅಥವಾ ಪೂರ್ವೋಕ್ತಧಾತುಗಳಿಗೆ ಮನಿನ್‌ಪ್ರತ್ಯಯು ಬಂದು ಉಕ್ತರೂಪವಾಗುತ್ತದೆ. ಮಾಧವರು ಸುಕ್ಷೋಮ ಎಂದು ಪಾಠ ಮಾಡುತ್ತಾರೆ. ವೃಷ್ಟ್ಯೈತ್ವಾ ಕ್ಷೇಮಾಯತ್ವಾ (ಯ) ಎಂಬಲ್ಲಿ ಕ್ಷೇಮಶಬ್ದವು ಉದಕನಾಮವಾಗುತ್ತದೆ. ಶ್ರುತಿವಾಕ್ಯಗಳಿಂದ ಪಾಠನಿಶ್ಚಯ ಮಾಡಬೇಕು.

(೨೪) **ಧರುಣಮ್** ॥ ಧೃಙ್ ಧಾರಣೇ ಧಾತು. ‘ ಹೇತುಮತಿ ಚ ’ ಸೂತ್ರದಿಂದ ಪ್ರೇರಣಾರ್ಥದಲ್ಲಿ ಣಿಚ್ ವೃದ್ಧಿ. ಧಾರಿ. ಣಿಜಂತದ ಮೇಲೆ ಕ್ಯನ್‌ಪ್ರತ್ಯಯ, ಣಿಲುಕ್. ‘ಯುವೋರನಾಕೌ ’ ಸೂತ್ರದಿಂದ ಪ್ರತ್ಯಯಕ್ಕೆ ಅನಾದೇಶ ಧರುಣಮ್. ಛಾಂದಸವಾದುದರಿಂದ ಅಕಾರಕ್ಕೆ ಉಕಾರವರ್ಣವ್ಯತ್ಯಯ. ಜಗತ್ತನ್ನು ಧರಿಸುವುದು ಎಂದರ್ಥ. ಉದಾಹರಣೆ–

‘ ಪಥಾಂ ವಿಸರ್ಗೇ ಧರುಣೇಷು ತಸ್ಥೌ ’ (ಋ.ಸಂ. ೭–೫-೩೩-೬) ಧೀರಾ ಇಚ್ಛೇ ಧರ್ಧರುಣೇಷ್ವಾರ-ಭತ್ ’ (ಋ. ಸಂ. ೭.೨-೨೯.೩)

(೨೫) ಸಿರಾ ॥ ಗತ್ಯರ್ಥಕವಾದ ಸೃಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಅದನ್ನು ನಿಮಿತ್ತ ಕರಿಸಿ ಧಾತು ಋಕಾರಕ್ಕೆ ಗುಣ. ಸರ ಎಂದು ರೂಪವಾದಾಗ ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಸಿರ ಎಂದಾಗುತ್ತದೆ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಸಿರಾ. ಗಮನಸ್ವಭಾವವುಳ್ಳದ್ದು ಎಂದರ್ಥ. ಉದಾಹರಣೆ—

**ವೃತ್ರಮಾಶಯಾನಂ ಸಿರಾಸು (ಋ–ಸಂ–೧–೮–೨೬–೧)**

ಕೆಲವರು ಸುರಾ ಎಂದು ಪಾಠಮಾಡುತ್ತಾರೆ. ಷುಞ್–ಅಭಿಷವೇ. ಧಾತು. ಅಭಿಷವನೆಂದರೆ ಕ್ಲೇದನ. (ಒದ್ದೆ ಮಾಡುವುದು) ಅಥವಾ ಪ್ರಸವಾರ್ಥಕವಾದ ಷು ಧಾತುವಿಗೆ “ಸುಸೂಧಾ ಗೃಧಿಭ್ಯಃ ಕ್ರನ್” (ಉ. ೨–೨೩) ಸೂತ್ರದಿಂದ ಕ್ರನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಸ್ತ್ರೀತ್ವದಲ್ಲಿ ಟಾಪ್. ಸುರಾ. ಭೂಮಿಯನ್ನು ಒದ್ದೆಮಾಡುವುದು, ತನ್ನ ಸ್ಥಿತಿಯಿಂದ ಸಸ್ಯಾದಿಗಳನ್ನು ಹುಟ್ಟಿಸುವುದು, ಇತರರ ಪ್ರಯೋಜನಕ್ಕೋಸ್ಕರ ಇರುವುದು ಎಂದರ್ಥ. ಐಶ್ವರ್ಯಾರ್ಥಕವಾದ ಸುರ ಧಾತುವಿನಿಂದ ಸುರಾ ರೂಪವಾಗಿದೆಯೆಂದು ಕೆಲವರ ಮತ. ಜಗತ್ತನ್ನು ಸೃಷ್ಟಿಸಲು ಸಮರ್ಥವಾಗುತ್ತದೆಂದರ್ಥ. ಇದಕ್ಕೆ ನಿಗಮ ಹುಡುಕಬೇಕು.

(೨೬) **ಅರರಿಂದಾನಿ** ॥ ದಾನಾರ್ಥಕವಾದ ರಾ ಧಾತುವಿಗೆ ‘ಆದೃಗಮಹನಜನಃ ಕಿಕಿನೌ ಲಿಟ್ ಚ” (ಪಾ. ಸೂ. ೩–೨-೧೭೧) ಸೂತ್ರದಿಂದ ಕಿ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವಾದಿಗಳು ಬರುತ್ತವೆ. ರರಾ + ಇ ಎಂದಿರುವಾಗ ಪ್ರತ್ಯಯ ಕಿತ್ತಾದುದರಿಂದ ‘ಆತೋಲೋ—’ ಸೂತ್ರದಿಂದ ಆಕಾರಲೋಪ. ರರಿಃ ರೂಪವಾಗುತ್ತದೆ. ಕೊಡುವವನು ಎಂದರ್ಥ. “ರರೀ ಯಸ್ಯ ನವಿದ್ಯತೇ ಅರರಿ.” ಇತರರಿಂದ ಕೊಡದೇ ಇರುವುದು. ‘ಅರರಿ ದದಾತಿ’ ಇತರರಿಂದ ಕೊಡಲು ಅಸಾಧ್ಯವಾದುದನ್ನು ಕೊಡುವುದು ಎಂಬರ್ಥದಲ್ಲಿ ಅರರ ಉಪಪದವಾಗಿರುವಾಗ ದಾ ಧಾತುವಿಗೆ “ಆತೋಽನುಪ ಸರ್ಗೇಕಃ” ಸೂತ್ರದಿಂದ ಕ ಪ್ರತ್ಯಯ. ಆಕಾರಲೋಪ. ನಕಾರ ಛಾಂದಸವಾಗಿ ಬರುತ್ತದೆ. ಅರರಿಂದಮ್. ಅಥವಾ ಬಹುಲ ಗ್ರಹಣದಿಂದ ಕರ್ಮಣಿಯಲ್ಲಿ ಕಿ ಪ್ರತ್ಯಯ. ರರಿ=ದತ್ತವಾದದ್ದು. ನರರಿ=ಅರರಿ. ಪೃಥಿವ್ಯಾದಿಗಳಿಂದ ಕೊಡಲ್ಪಡದಿರುವ ಸುಖವೆಂದರ್ಥ. ‘ಅರರಿ ದಧಾತಿ ಇತಿ ಅರರಿಂದಮ್’ ನೀರಿನಿಂದುಂಟಾಗುವ ಸುಖವು ಇನ್ನಾವ ಪೃಥಿವ್ಯಾದಿಗಳಿಂದ ಉಂಟಾಗುವುದಿಲ್ಲ. ಆದುದರಿಂದ ಅದತ್ತವಾದ ಸುಖವನ್ನು ನೀರು ಕೊಡುತ್ತದೆ. ಉದಾಹರಣೆ—

**ಅಧಾರಯುದರರಿಂದಾನಿ ಸುಕ್ರತುಃ (ಋ. ಸಂ. ೨–೨–೪–೫) ॥**

(೨೭) **ಧ್ವಸ್ಮನ್ವತ್** ॥ ಗತ್ಯರ್ಥಕವಾದ ಧ್ವಂಸು ಧಾತುವಿಗೆ ಔಣಾದಿಕ ಮನಿನ್‌ಪ್ರತ್ಯಯ ಬಹುಲಗ್ರಹಣದಿಂದ ಭಾವಾರ್ಥದಲ್ಲಿ ಬರುತ್ತದೆ. ಈ ಧಾತುವಿಗೆ ಅಧಃಪತನಾರ್ಥವೂ ಹೇಳಿದೆ. ಬಹುಲಗ್ರಹಣದಿಂದ ಮಕಾರಲೋಪ. ಧ್ವಸ್ಮನ್ ಎಂದು ನಾಂತಪದವಾಗುತ್ತದೆ. ಮೇಘಗಳಿಂದ ಅಥವಾ ಪರ್ವತಗಳಿಂದ ಧ್ವಂಸನಂ ಅಂದರೆ ಗಮನ ಅಥವಾ ಕೆಳಗೆ ಬೀಳುವುದು.

ಎಂದರ್ಥ. ಅಧಃ ಪತನ ಅಥವಾ ಗಮನವುಳ್ಳದ್ದು ಎಂಬರ್ಥದಲ್ಲಿ ಮತುಪ್‌ಪ್ರತ್ಯಯ. 'ಅನೋ ನುಟ್ ಚ' ಸೂತ್ರದಿಂದ ಮತುಪಿಗೆ ನುಡಾಗಮ. ಈ ನುಡಾಗಮ ಬಂದದ್ದು ಅಸಿದ್ಧವಾಗುವುದರಿಂದ 'ಮಾದುಪಧಾಯಾ—' ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಧ್ವಂಸನವುಳ್ಳದ್ದು 'ಧ್ವಸ್ಮನ್ವತ್' ಆಗುತ್ತದೆಂದು ಮಾಧವನು ವ್ಯಾಖ್ಯಾನಮಾಡಿರುತ್ತಾನೆ. ಉದಾ—

"ಸಂ ತ್ವಾ ಧ್ವಸ್ಮನ್ವದಭ್ಯೇತು ಪಾಥಃ" (ಋ. ಸಂ. ೪-೫-೧೯-೨) ||

(೨೮) ಜಾಮಿ || ಗತ್ಯರ್ಥಕವಾದ ಜಮ್ ಧಾತುವಿಗೆ 'ವಸಿವಪಿಯಜಿ—' ಸೂತ್ರದಿಂದ ವಿಹಿತವಾದ ಇಞ್‌ಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಞಿತ್ತಾದುದರಿಂದ ಧಾತುವಿನ ಉಪಧೆಗೆ ವೃದ್ಧಿ. ಜಮತಿ ಇತಿ ಜಾಮಿ. ತಗ್ಗಾದ ಪ್ರದೇಶಕ್ಕೆ ಹೋಗುವುದು, ಜಲಾಪೇಕ್ಷಿಗಳಿಂದ ಹೊಂದಲ್ಪಡುವುದು. ಎಂದರ್ಥ. ಅಥವಾ ಪ್ರಾದುರ್ಭಾವಾರ್ಥಕವಾದ ಜನೀ ಧಾತುವಿಗೆ "ಜನಿಘಸಿಭ್ಯಾಮಿಣ್" (ಉ. ೧-೧೨೬) ಸೂತ್ರದಿಂದ ಇಣ್‌ಪ್ರತ್ಯಯ. ಬಹುಲಗ್ರಹಣದಿಂದ ನಕಾರಕ್ಕೆ ಮಕಾರಾದೇಶ. ಉಪಧಾದೀರ್ಘ. "ಜಾಯತೇ" ಅಸ್ಮಾತ್ ಪೃಥಿವ್ಯಾದಿಗಳು ಹುಟ್ಟುತ್ತವೆ, ತನ್ನ ಕಾರಣದಿಂದ ಇದು ಹುಟ್ಟುತ್ತದೆ ಎಂದರ್ಥ. ಅಗ್ನಿಯಿಂದ ನೀರೂ, ನೀರಿನಿಂದ ಪೃಥಿವಿಯೂ ಹುಟ್ಟುತ್ತದೆಂದು ತೈತ್ತರೀಯದಲ್ಲಿ ಹೇಳಿದೆ. ಕೆಲವರು 'ಜಾಮಿವತ್' ಎಂದು ಪಾಠಮಾಡುತ್ತಾರೆ. ನಿಗಮವನ್ನು ಹುಡುಕಿ ಇದನ್ನು ನಿಶ್ಚಯಿಸಬೇಕು.

(೨೯) ಆಯುಧಾನಿ || ಯುಧ-ಸಂಪ್ರಹಾರೇ. ಧಾತು. 'ಘಞರ್ಥೇಕ ವಿಧಾನಮ್' ವಾರ್ತಿಕದಿಂದ ಕ ಪ್ರತ್ಯಯ. ಆಙ್ ಉಪಸರ್ಗ. ಪ್ರತ್ಯಯ ಕಿತ್ತಾದುದರಿಂದ ಲಘೂಪಧ ಗುಣವಿಲ್ಲ. ಇದರಿಂದ ಆಮಂತ್ರಿಸಿ ಯುದ್ಧಮಾಡುತ್ತಾರೆ ಎಂದರ್ಥ. ಅಥವಾ ಧಾತು ಇಗುಪಧವಾದುದರಿಂದ 'ಇಗುಪಧಜ್ಞಾಪ್ರೀಕಿರಃ ಕಃ' 'ಸೂತ್ರದಿಂದ ಕರ್ತರಿಯಲ್ಲಿ ಕ ಪ್ರತ್ಯಯ. ಆಯುಧಮ್.' ರಾಕ್ಷಸರನ್ನು ಸಂಹರಿಸುತ್ತದೆ ಎಂದರ್ಥ. ಬಹುವಚನ ರೂಪ. ಉದಾಹರಣೆ—

ಇಂದ್ರೇ ಸಂತಿಷ್ಠ ಜನಯಾಯುಧಾನಿ (ಋ. ಸಂ. ೭-೪-೮-೨) 'ಜಾಮಿ ಬ್ರುವಾಣ ಆಯುಧಾನಿ ವೇತಿ' (ಋ-ಸಂ-೭-೬-೪-೨) ||

(೩೦) ಕ್ಷಪಃ || ಪ್ರೇರಣಾರ್ಥಕವಾದ ಕ್ಷಪ ಧಾತುವಿಗೆ ಅಸುನ್ ಪ್ರತ್ಯಯ. ಇದು ಧಾತುಪಾಠದಲ್ಲಿ ಪಠಿತವಾಗದಿದ್ದರೂ 'ಬಹುಲಮೇತನ್ನಿದರ್ಶನಮ್' (ಚುರಾ-ಗ-ಸೂ) ಎಂಬುದರಿಂದ ಉದಾಹರಣೆಗಾಗಿ ಹೇಳಿದೆ. ಅಸುನ್ ಪರದಲ್ಲಿರುವಾಗ ಸ್ವಾರ್ಥದಲ್ಲಿ ಬಂದಿರುವಣಿಚಿಗೆ ಲೋಪ. ಕ್ಷಪಯತಿ ಪಿಪಾಸಾಮ್. ಬಾಯಾರಿಕೆಯನ್ನು ಹೋಗಲಾಡಿಸುವುದು ಎಂದರ್ಥ. ಉದಾಹರಣೆ—

ಕ್ಷಪೋ ಜಿನ್ವಂತಃ ಪೃಷತೀಭಿರ್ಋಷ್ಟಿಭಿಃ (ಋ. ಸಂ. ೧-೫-೭-೩) ||

(೩೧) ಅಹಿಃ || ಮೇಘನಾಮದಲ್ಲಿ ವ್ಯಾಖ್ಯಾತವಾಗಿದೆ (೧೦-೨೧) ಕೆಳಗಿನ ಪ್ರದೇಶವನ್ನು ಕುರಿತು ಹೋಗುತ್ತದೆ, ನೀರಾಗಿ ತಾಪವನ್ನು ಹೋಗಲಾಡಿಸುತ್ತದೆ, ಪ್ರಾಣಿಗಳಿಗೆ ಅಹಿಂಸಕವಾಗಿರುವುದು ಎಂದರ್ಥವಾಗುತ್ತದೆ. "ಪೃಥಿವ್ಯಾ ನಿಶ್ಶಿತಾ ಅಹಿಮ್" (ಋ. ಸಂ. ೧-೫-೨೬-೧) ಎಂಬಲ್ಲಿ ಅಹಿಪದಕ್ಕೆ ಮೇಘವೆಂದು ಸ್ಕಂದಸ್ವಾಮಿಯ ಭಾಷ್ಯ. ನೀರೆಂದರೂ ಅಸಮಂಜಸವಾಗುವುದಿಲ್ಲ. ನಿಗಮ ಹುಡುಕಬೇಕು.

(೩೩) **ಸ್ರೋತಃ** ॥ ಗತ್ಯರ್ಥಕವಾದ ಸ್ರುಧಾತುವಿಗೆ 'ಸ್ರುರೀಭ್ಯಾಂ ತುಟ್ ಚ' (ಉ. ೪–೧೯೭) ಸೂತ್ರದಿಂದ ಅಸುನ್ ಪ್ರತ್ಯಯ. ತುಡಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಟಿತ್ತಾದುದರಿಂದ ಅಸುನಿಗೆ ಆದ್ಯವಯವವಾಗಿ ಬಂದರೆ ಸ್ರೋತಸ್ ಎಂದು ಸಾಂತಪದವಾಗುತ್ತದೆ. ನಿಮ್ನ ಪ್ರದೇಶಕ್ಕೆ ಹೋಗುವುದೆಂದರ್ಥ. ಉದಾಹರಣೆ—

**ಧನ್ವನ್ ಸ್ರೋತಃ ಕೃಣುತೇ ಗಾತು ಭೂರ್ಮಿಮ್** (ಋ. ಸಂ. ೧–೭–೨–೫) ॥

(೩೪) ತೃಪ್ತಿಃ ॥ ಪ್ರೇರಣಾರ್ಥಕವಾದ ತೃಪ್ ಧಾತುವಿಗೆ ಕ್ತಿನ್ ಪ್ರತ್ಯಯ. ಸಂಜ್ಞೆ ತೋರುವುದರಿಂದ 'ಕ್ತಿಚ್‌ಕ್ತೌ ಚ ಸಂಜ್ಞಾಯಾಮ್' ಸೂತ್ರದಿಂದ ಕ್ತಿಚ್ ಬಂದರೂ ತೃಪ್ತಿಃ ಎಂದಾಗುತ್ತದೆ. ಪ್ರತ್ಯಯ ಕಿತ್ತಾಗುವುದರಿಂದ ಗುಣವಿಲ್ಲ. ಇದರಿಂದ ಅಭಿಷೇಚಿಸಲ್ಪಟ್ಟ ದೇವತೆಗಳು ತೃಪ್ತರಾಗುತ್ತಾರೆ, ಕುಡಿದದ್ದರಿಂದ ಪ್ರಾಣಿಗಳು ಇದರಿಂದ ತೃಪ್ತಿ ಹೊಂದುತ್ತಾರೆ ಎಂದರ್ಥ. ಈ ಅರ್ಥ ಶ್ರುತಿಯಲ್ಲಿಯೂ ಹೇಳಿದೆ—

ಮನ್ಯೇ ಭೇಜಾನೋ ಅಮೃತಸ್ಯ ತರ್ಹಿ ಹಿರಣ್ಯವರ್ಣಾ ಅತೃಪಂ ಯದಾವಃ (ಅಥ. ಸಂ-೩-೧೩-೬). ನೀರಿನ ಪರ್ಯಾಯವಾಗಿ ತೃಪ್ತಿಶಬ್ದಕ್ಕೆ ನಿಗಮ ಹುಡುಕಬೇಕು.

(೩೫) ರಸಃ ॥ ಶಬ್ದಾರ್ಥಕವಾದ ರಸಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಮೇಘ ಪರ್ವತಾದಿಗಳಿಂದ ಬೀಳುವಾಗ ಶಬ್ದಮಾಡುವುದು ಎಂದರ್ಥ. ಅಥವಾ ರಸ–ಆಸ್ವಾದನೇ. ಧಾತು. 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' ಸೂತ್ರದಿಂದ ಘಪ್ರತ್ಯಯ. ನಾಲಿಗೆಯಿಂದ ಆಸ್ವಾದ ನೋಡಲ್ಪಡುತ್ತದೆ, ನೆಕ್ಕಲ್ಪಡುತ್ತದೆ ಎಂದರ್ಥ. ಅಥವಾ ರಸವೆಂದರೆ ನೀರಿನ ಗುಣ. ಗುಣ ಗುಣಿಗಳಿಗೆ ಅಭೇದವಿರುವುದರಿಂದ ನೀರಿನ ಪರ್ಯಾಯವಾಗಿ ಹೇಳಿದೆ. ಅಥವಾ ರಸವುಳ್ಳದ್ದು ಜಲ. ಮತ್ವರ್ಥ ಪ್ರತ್ಯಯಕ್ಕೆ ಲುಕ್ ಬಂದಿದೆ. ರಸ ಧಾತುವಿಗೆ ಪೂಜಾರ್ಥವೂ ನಿಘಂಟುವಿನಲ್ಲಿ ಹೇಳಿದೆ. ಸ್ವಯಂ ದೇವತೆಯಾದುದರಿಂದ ಪೂಜಿಸಲ್ಪಡುತ್ತದೆ, ಅಥವಾ ಇದರಿಂದ ದೇವತೆ ಪೂಜಿಸಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾ—

**ಆ ತ್ವಾವಿಶಂತ್ವಿಂದವಃ**- (ಋ. ಸಂ. ೬-೬-೧೯-೨) ॥

(೩೬) **ಉದಕಮ್**॥ '**ಉದಕಞ್ಚ**' (ಉ. ೨–೩೬) **ಇತ್ಯುಣಾದಿಸೂತ್ರೇಣ ಉದಕಶಬ್ದೋ ನಿಪಾತ್ಯತೇ**॥

ಉತ್ ಉಪಸರ್ಗ. ಖನು-ಅವಧಾರಣೇ ಧಾತು. ಇದಕ್ಕೆ ಕ್ವುನ್‌ಪ್ರತ್ಯಯ ಬಂದಾಗ ಧಾತುವಿಗೆ ಲೋಪ. 'ಯುವೋರನಾಕೌ' ಸೂತ್ರದಿಂದ ಪ್ರತ್ಯಯಕ್ಕೆ ಅಕಾದೇಶ. ಉದಕವೆಂದು ನಿಪಾತಿತವಾಗಿದೆ. ಕರ್ಮಾರ್ಥದಲ್ಲಿ ವಾಯುವಿನಿಂದ ಹಾರಿಸಲ್ಪಡುತ್ತದೆಂದೂ, ವರ್ಷರಿಯಲ್ಲಿ ತನ್ನ ವೇಗದಿಂದ ಭೂಮಿಯನ್ನು ಸೀಳಿ ತಗ್ಗುಮಾಡುವುದೆಂದು ಅರ್ಥವಾಗುತ್ತದೆ. (ಉತ್ಪನತಿ ಭೂಮಿಂ) ಉತ್‌ಪೂರ್ವಕ ಅಂಚುಧಾತುವಿನ ರೂಪವೆಂದು ಕೆಲವರ ಮತ. ಹೋಗುವ ಸ್ವಭಾವವುಳ್ಳದ್ದು. ಉದಾಹರಣೆ—

ಉದಾನಿಷುರ್ಮಹೀರಿತಿ ತಸ್ಮಾದುದಕಮುಚ್ಯತೇ [ಅಥ. ಸಂ. ೩–೧೩–೪] **ಸಮಾನಮೇತದುದಕಮ್** ' [ಋ. ಸಂ. ೨-೩-೨೩–೫] ' **ಮಂಡೂಕಾ ಇವೋದಕಾನ್** ' [ಋ. ಸಂ. ೮-೮-೨೪-೫] **ಮಂಡೂಕಾ ಉದಕಾದಿವ** [ಋ. ಸಂ. ೮–೮–೨೫-೫]

[೩೭] **ಪ್ರಯಃ** ॥ ತರ್ಪಣಾರ್ಥಕವಾದ ಪ್ರೀ(ಞ್‌ಧಾತುವಿಗೆ ಅಸುನ್‌ಪ್ರತ್ಯಯ. ಗುಣ ಅಯಾದೇಶ. ಪ್ರಯಸ್ ಸಾಂತಪದವಾಗುತ್ತದೆ. ಅಥವಾ ಪ್ರ ಉಪಸರ್ಗಪೂರ್ವಕವಾದ ಯಮಧಾತುವಿಗೆ ಅಸುನ್ ಬಂದಾಗ ಬಹುಲಗ್ರಹಣದಿಂದ ಟಿ ಲೋಪ. ಇದರಿಂದ ದೇವತೆಗಳು ತೃಪ್ತಿಹೊಂದಿಸಲ್ಪಡುತ್ತಾರೆ, ಅತಿಶಯವಾಗಿ ಹೋಗುವುದು ಎಂದರ್ಥ. ಉದಾಹರಣೆ—

**ಆಪೋ ನ ದ್ವೀಪಂ ದಧತಿ ಪ್ರಯಾಂಸಿ [ಋ. ಸಂ. ೨-೪-೮-೩]** ॥

[೩೮] **ಸರಃ** । ಗತ್ಯರ್ಥಕವಾದ ಸೃ ಧಾತುವಿಗೆ ಅಸುನ್ ಪ್ರತ್ಯಯ. ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬಂದರೆ ಸರಸ್ ಸಾಂತಪದವಾಗುತ್ತದೆ. ಹೋಗುವುದು, ಪ್ರಾಣಿಗಳಿಂದ ಹೊಂದಲ್ಪಡುವುದು ಎಂದರ್ಥ. ಉದಾಹರಣೆ—

**ಸಾಕಂ ಸರಾಂಸಿ ತ್ರಿಶತಮ್ (ಋ. ಸಂ. ೬-೫-೭೯-೪)**

**(೩೯) ಭೇಷಜಮ್ ॥ ಭಿಷಜ್ ಚಿಕಿತ್ಸಾಯಾಮ್ ಕಂಡ್ವಾದಿಃ । 'ಪುಂಸಿ ಸಂಜ್ಞಾಯಾಂ ಘಃ' ॥ ಭಿಷಜ್ಯಂತ್ಯನೇನ ಸಾಧು** ॥

ಚಿಕಿತ್ಸಾರ್ಥದಲ್ಲಿ ಭಿಷಜ್ ಧಾತುವು ಕಂಡ್ವಾದಿಗಣದಲ್ಲಿ ಹೇಳಿದೆ. 'ಅನಂತಾವಸಥೇತಿಹ ಭೇಷಜಾತ್' ಇತ್ಯಾದಿ ನಿರ್ದೇಶದಿಂದ ಅಜಾದಿ ಪ್ರತ್ಯಯದಿಂದ ಉಕ್ತರೂಪ ಸಿದ್ಧಿಯಾಗಿದೆ. ಇದರಿಂದ ಚಿಕಿತ್ಸೆಮಾಡುತ್ತಾರೆ ಎಂದರ್ಥ. 'ಆಪ ಇದ್ವಾ-ಉ ಭೇಷಜೀರಾಪೋ—' ಎಂದು ಶ್ರುತಿಯಲ್ಲಿಯೂ ಈ ಅರ್ಥ ಹೇಳಿದೆ. ಭೇಷವೆಂದರೆ ರೋಗ ಇದನ್ನು ಜಯಿಸುವುದು ಎಂದು ದುರ್ಗನ ಮತ. ಅಥವಾ ಭೇಷಜವುಳ್ಳದ್ದು ಭೇಷಜ. ಅರ್ಶಆದಿಗಣಪಠಿತವಾದುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ. **'ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ'** (ಋ. ಸಂ. ೨-೨-೧೧-೫) ॥

(೪೦) **ಸಹಃ** ॥ ಅಭಿಭವಾ (ತಿರಸ್ಕಾರ)ರ್ಥದಲ್ಲಿ ಸಹಧಾತು ಹೇಳಿದೆ. ಇದಕ್ಕೆ ಅಚ್‌ಪ್ರತ್ಯಯ. ಉಷ್ಣವನ್ನು ಅಥವಾ ಅಗ್ನಿಯನ್ನು ನಾಶಮಾಡುತ್ತದೆ ಎಂದರ್ಥ. ಅಥವಾ ಸಹವೆಂಬುದು ಬಲದ ಹೆಸರೆಂದು ನಿಘಂಟುವಿನಲ್ಲಿ ಹೇಳಿದೆ. ಬಲವುಳ್ಳದ್ದು ಎಂಬರ್ಥದಲ್ಲಿ ಸಹಶಬ್ದದಮೇಲೆ ಮತ್ವರ್ಥಪ್ರತ್ಯಯ ಬಂದು ಲುಕ್ಕಾಗಿದೆ. ಸಹಶಬ್ದದ ಮೇಲೆ ಬಲಜನಕನೆಂದು ತಾತ್ಪರ್ಯ. ಉದಾಹರಣೆ—**ಸಹದಾತುಂ ಪುರುಹೂತ ಕ್ಷಿಯಂತೇ** (ಋ. ಸಂ. ೩-೨-೩-೩) ಛಾಂದಸವಾಗಿ ಸಲೋಪ ಬಂದಿದೆ.

[೪೧] **ಶವಃ** ॥ **ಟು ಓ ಶ್ವಿ-ಗತಿವೃದ್ಧ್ಯೋಃ [ಭೂ-ಪ] 'ಶ್ವೇಃ ಸಂಪ್ರಸಾರಣಾಂಚ' [ಉ-೪-೧೯೮] ಇತ್ಯಸುನ್** ॥

ಗತಿ, ವೃದ್ಧ್ಯರ್ಥಗಳಲ್ಲಿ ಶ್ವಿಧಾತುವಿಗೆ. ಟು, ಓ ಎರಡೂ ಇತ್ತಾಗುತ್ತವೆ. ಇದಕ್ಕೆ ಅಸುನ್ ಪ್ರತ್ಯಯ ಬಂದಾಗ ಸಂಪ್ರಸಾರಣ (ವಕಾರಕ್ಕೆ ಉಕಾರ) ಪೂರ್ವರೂಪ. ಶು+ಅಸ್ ಎಂದಿರುವಾಗ ಗುಣ, ಅವಾದೇಶ. ಶವಸ್ ಸಾಂತಪದವಾಗುತ್ತದೆ. ಹೋಗುವುದು, ಮಳೆಗಾಲದಲ್ಲಿ ಅಭಿವೃದ್ಧವಾಗುವುದು ಎಂದರ್ಥ. ಗತ್ಯರ್ಥಕವಾದ ಶವಧಾತುವಿನಿಂದ ಈ ಶಬ್ದವಾಗಿದೆ ಯೆಂದು ನಿಘಂಟು [೨-೧೪] ಶವತಿ=ಗಚ್ಛತಿ ಇತಿ ಶವಃ. ಹೋಗುವುದು. ಇದಕ್ಕೆ ಉದಾಹರಣೆ ಹುಡುಕಬೇಕು. ವಾಧವರು ತಮ್ಮ ನಾಮ ನಿಘಂಟುವಿನಲ್ಲಿ ಶವಃ ಎಂದು ಹೇಳದೆ 'ಶಿವಂ, ಶಾವಮ್' ಎಂದು ಹೇಳಿರುತ್ತಾರೆ. ಶಿವವೆಂದು ಲೋಕದಲ್ಲಿಯೂ ಜಲಪರ್ಯಾಯ ವಚನವಾಗಿ ಹೇಳಿರುವುದರಿಂದ ವೈದಿಕ ಪದಗಳಲ್ಲಿ ಹೇಳಿರುವುದಕ್ಕೆ ಅಷ್ಟು ಪ್ರಯೋಜನವಿಲ್ಲ. ಶಾವವೆಂಬುದು

ಅಪ್ರಸಿದ್ಧವಾಗಿ ತೋರುತ್ತದೆ. ಸಾಮಾನ್ಯವಾಗಿ ಯಾವ ಪೂರ್ವಾಚಾರ್ಯರೂ ಈ ಹೆಸರನ್ನು ಹೇಳಿಲ್ಲ. 'ಶಪಂತಿ ಅನೇನ ಇತಿ ಶಾಪಮ್' ಶಪ–ಆಕ್ರೋಶೇ. ಧಾತುವಿಗೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಸೂತ್ರದಿಂದ ಘಞ್ ಬಂದಾಗ ಉಪಧಾ ವೃದ್ಧಿ. ಶಾಪಸಾಧನವಾದದ್ದು ಎಂದರ್ಥ. ಮುನಿಗಳು ಯಾವಾಗಲೂ ಕೈಯಲ್ಲಿ ನೀರನ್ನು ಹಿಡಿದೇ ಶಪಿಸುವರೆಂದು ಪ್ರಸಿದ್ಧಿ.

**[೪೨] ಯಹಃ** ॥ ಎರಡು ಧಾತುಗಳಿಂದ ಈ ಶಬ್ದವಾಗಿದೆ. ಬಾಯಾರಿಕೆಗೊಂಡವರಿಂದ ಹೊಂದಲ್ಪಡುವುದು, ಸ್ವಯಂ ದೇವತೆಯಾದುದರಿಂದ ಯಜ್ಞದಲ್ಲಿ ಕರೆಯಲ್ಪಡುವುದು ಎಂದರ್ಥವಾಗುವುದರಿಂದ, 'ಯಾ-ಪ್ರಾಪಣೆ, ಹ್ವೇಞ್-ಸ್ಪರ್ಧಾಯಾಮ್' ಈ ಎರಡು ಧಾತುಗಳ ಮೇಲೆ ಅಸುನ್ ಬಂದು ಅಭಿಮತರೂಪವಾಗಿದೆ. ಪೃಷೋದರಾದಿಯಲ್ಲಿ ಸೇರಿದೆಯೆಂದು ತಿಳಿಯಬೇಕು. ಉದಾಹರಣೆ ಶ್ರುತಿ ಹುಡುಕಬೇಕು.

**[೪೩] ಓಜಃ** ॥ ಆರ್ಜವಾರ್ಥದಲ್ಲಿ ಉಬ್ಜ ಧಾತುವನ್ನು ಹೇಳಿದ್ದರೂ ಇಲ್ಲಿ ತಿರಸ್ಕಾರಾರ್ಥ ಹೇಳಬೇಕು. ಇದಕ್ಕೆ 'ಉಬ್ಜೇರ್ಬಲೋಪಶ್ಚ' (ಉ. ೪–೧೮೭) ಸೂತ್ರದಿಂದ ಅಸುನ್, ಬಕಾರಲೋಪ. ಲಘೂಪಧಗುಣ. ಓಜಸ್ ಸಾಂತಪದವಾಗುತ್ತದೆ. ನಿರುಕ್ತದಲ್ಲಿ ಇದಕ್ಕೆ ವೃದ್ಧ್ಯರ್ಥ ಹೇಳಿದೆ. ತನ್ನ ವೇಗದಿಂದ ಪ್ರದೇಶಗಳನ್ನು ಕೆಡಹುತ್ತದೆ, ವರ್ಷಾಕಾಲದಲ್ಲಿ ಅಭಿವೃದ್ಧಿ ಹೊಂದುವುದು, ಎಂದರ್ಥ. ಇದಕ್ಕೂ ಉದಾಹರಣೆ ಹುಡುಕಬೇಕು.

**[೪೪] ಸುಖಮ್** ॥ ಸುಖವನ್ನುಂಟುಮಾಡುವುದರಿಂದ ನೀರು ಸುಖವಾಗುತ್ತದೆ. **'ಸುಖಂ ಕಸ್ಮಾತ್? ಸುಹಿತಂ ಖೇಭ್ಯಃ'** (ನಿ.೩-೧೩) ಎಂಬ ನಿರುಕ್ತದ ಭಾಷ್ಯದಲ್ಲಿ ಸ್ಕಂದಸ್ವಾಮಿಯು ಹೀಗೆ ವಿವರಿಸಿರುತ್ತಾನೆ. ಖ ಎಂದರೆ ಇಂದ್ರಿಯಗಳು. ಅವುಗಳಿಂದ ಹಿತವನ್ನು ಕೊಡುವುದು. ಇಲ್ಲಿ ಹಿತಪದದ ಸಂಬಂಧದಿಂದ 'ಖೇಭ್ಯಃ' ಎಂದು ಚತುರ್ಥೀ ಬಂದಿಲ್ಲ. ಇಂದ್ರಿಯಗಳು ಅಚೇತನಗಳಾದುದರಿಂದ ಸುಖಾದಿಸಂಬಂಧ ಅವುಗಳಿಗೆ ಬಾಧಿತವಾಗುವುದರಿಂದ ಹೇತ್ವರ್ಥದಲ್ಲಿ ಪಂಚಮೀ ವಿಭಕ್ತಿ ಹೇಳಬೇಕು. ಇಂದ್ರಿಯ ಮತ್ತು ವಿಷಯಗಳ ಸನ್ನಿಕರ್ಷದಿಂದ ಸುಖವುಂಟಾಗುತ್ತದೆ. ಇಲ್ಲಿಯೂ ಸಾಕ್ಷಾತ್ ಸಂಬಂಧ ಕೂಡದಿರುವುದರಿಂದ ಸಂಬಂಧಯೋಗ್ಯವಾದ ಪದಾರ್ಥವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇಂದ್ರಿಯ ಹೇತುಕವಾಗಿ ಪುರುಷನಿಗೆ ಅತಿಶಯವಾಗಿ ಹಿತವನ್ನುಂಟು ಮಾಡುವುದೆಂದರ್ಥ. ಸುಖಾದಿಗಳು ಆತ್ಮನ ಧರ್ಮಗಳು. ಅಥವಾ 'ಖೇಭ್ಯಃ' ಎಂಬುದು ಚತುರ್ಥೀ ವಿಭಕ್ತಿಯೇ ಆಗುತ್ತದೆ. ಆತ್ಮನು ಮೊದಲು ಮನಸ್ಸಿನಿಂದ ಸಂಯೋಗಹೊಂದುತ್ತಾನೆ, ಮನಸ್ಸು ಇಂದ್ರಿಯಗಳೊಡನೆ ಸಂಬಂಧ ಹೊಂದುತ್ತದೆ ಎಂದು ಕ್ರಮವಿರುವುದರಿಂದ ಖ ಎಂದರೆ ಆತ್ಮಾ. ಇವನು ಸರ್ವದೇಹವ್ಯಾಪ್ತಿಯೆಂದು 'ವರ್ಣ್ಯಃ ಸ ಏಷಃ ಇಹ ಪ್ರವಿಷ್ಟಃ ಆ ನಖಾಗ್ರೇಭ್ಯೋ ಯಥಾ ಕ್ಷುರಃ' ಎಂದು ಉಪನಿಷತ್ತುಗಳಲ್ಲಿ ಹೇಳಿದೆ. 'ಖಂ ಪುನಃ ಖನತೇಃ' [ನಿರು. ೩–೩೧] ಎಂದು ನಿರುಕ್ತದಲ್ಲಿ ಹೇಳಿದಂತೆ 'ಉತ್ಖನತಿ=ವಿನಾಶಯತಿ ಪರಬ್ರಹ್ಮಪ್ರಾಪ್ತಿಸುಖಮ್.' ಇತಿ ಸುಖಮ್. ಇಂದ್ರಿಯ ಹೇತುಕವಾದ ಸುಖವು ಬ್ರಹ್ಮಸುಖವನ್ನು ಮರೆಮಾಚುತ್ತದೆ. ವಿವೇಕವಿಲ್ಲದೆ ವಿಷಯ ಸುಖವೇ ಸುಖವೆಂದು ಪರಬ್ರಹ್ಮಪ್ರಾಪ್ತಿಗೆ ಹೋಗುವುದಿಲ್ಲವೆಂದರ್ಥ. ಇದಕ್ಕೆ ಶ್ರುತಿ ಹುಡುಕಬೇಕು.

**(೪೫) ಕ್ಷತ್ರಮ್** ॥ ಕ್ಷದ ಎಂಬುದು ಸೌತ್ರಧಾತು. ಸ್ಕಂದಸ್ವಾಮಿಯು ಸ್ಥೈರ್ಯಾರ್ಥವನ್ನೂ, ಮಾಧವನು ಶಕಲೀಕರಣಾರ್ಥವನ್ನೂ (ಚೂರಾಗುವುದು), ಸುಬೋಧಿನೀಕಾರನು ಗತಿಹಿಂಸಾರ್ಥಗಳನ್ನೂ ಹೇಳಿರುತ್ತಾರೆ. ಈ ಧಾತುವಿಗೆ 'ಗುಧೃವೀಪಚಿ—' (ಉ-೪-೧೬೨) ಸೂತ್ರದಿಂದ ತ್ರ ಪ್ರತ್ಯಯ. ಚರ್ತ್ವ. 'ಕ್ಷತ್ರಮ್' ಎಂದಾಗುತ್ತದೆ. ಮಳೆಗಾಲವನ್ನು ಬಿಟ್ಟು ಬೇರೆಕಾಲಗಳಲ್ಲಿ ಸೂರ್ಯರಶ್ಮಿಗಳಿಂದ ಸೆಳೆಯಲ್ಪಟ್ಟ ನೀರು ಮೇಘಗಳಲ್ಲಿ ಗಟ್ಟಿಯಾಗಿ ಕಲ್ಲಿನಂತೆ ಸ್ಥಿರವಾಗಿರುತ್ತದೆ, ಜಲಾಶಯದಲ್ಲಿಯೂ ಸ್ಥಿರವಾಗಿರುತ್ತದೆ. ತಿನ್ನಲ್ಪಡುತ್ತದೆ, ಅತಿಯಾಗಿ ಸೇವಿಸಿದರೆ ಶ್ಲೇಷ್ಮಾದಿಗಳನ್ನು ಹುಟ್ಟಿಸಿ ಪ್ರಾಣಿಗಳಿಗೆ ಹಿಂಸೆಯನ್ನುಂಟುಮಾಡುತ್ತದೆ, ನಿಮ್ನಪ್ರದೇಶಕ್ಕೆ ಹೋಗುತ್ತದೆ, ಪಿಪಾಸಾರ್ಥಿಗಳಿಂದ ಹೊಂದಲ್ಪಡುತ್ತದೆ ಎಂದರ್ಥವಾಗುತ್ತದೆ.

ಅಥವಾ ಕ್ಷತ್ರ ಎಂಬುದು ಬಲನಾಮ. ಅರ್ಶಆದಿಗಣದಲ್ಲಿ ಸೇರಿರುವುದರಿಂದ ಅಚ್‌ಪ್ರತ್ಯಯ. ಬಲವುಳ್ಳದ್ದು ನೀರು. ಕ್ಷತ್ರ ಧನನಾಮವೆಂದು ನಿಘಂಟುವಿನಲ್ಲಿ ಹೇಳಿದೆ. ಧನ ಹೇತುವಾದುದರಿಂದ ಜಲವು ಕ್ಷತ್ರವಾಗುತ್ತದೆ. 'ಕ್ಷತಾತ್ ತ್ರಾಯತೇ ಇತಿ ಕ್ಷತ್ರಮ್' ಅನ್ನವ್ಯುತ್ಪತ್ತ್ಯಾವಿಶ್ಲೇಷದಿಂದ ಇದು ರಕ್ಷಿಸುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ. ಉದಾಹರಣೆ...."**ಯುವಂ ನೋ ಯೇಷು ವರುಣ ಕ್ಷತ್ರಮ್**" [ಋ. ಸಂ. ೪-೪-೨-೬] ದೊಡ್ಡದು, ಬಲ, ಧನವೆಂದು ಮಾಧವಾಚಾರ್ಯರ ಭಾಷ್ಯ. "**ಉತ ದ್ಯಾವಾಪೃಥಿವೀ ಕ್ಷತ್ರಮುರು**" [ಋ. ಸಂ. ೪-೮-೮-೩] ಇಲ್ಲಿ ಕ್ಷತ್ರವೆಂದರೆ ಧನ. ಈ ಎರಡು ಪದಗಳಿಗೂ ನೀರು ಎಂದು ಅರ್ಥವಿದೆ.

[೪೬] **ಆವಯಾಃ** ॥ ಆಙ್ ಉಪಸರ್ಗ. ವೀ-ಗತಿ, ವ್ಯಾಪ್ತಿ, ಪ್ರಜನ, ಕಾಂತ್ಯಸನಖಾದನೇಷು. ಧಾತು "ಇಣಶ್ಚಾಸಿಃ' ಸೂತ್ರವಿಹಿತವಾದ ಅಸಿಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಧಾತುವಿನ ಈಕಾರಕ್ಕೆ ಗುಣ. ಅಯಾದೇಶ. ಆವಯಾಸ್ ಸಾಂತಪದವಾಗುತ್ತದೆ. ಮೇಘದಿಂದ ತಳ್ಳಲ್ಪಡುತ್ತದೆ, ಅಭಿಮುಖವಾಗಿ ಹೋಗುತ್ತದೆ ಎಂದರ್ಥ. ಉದಾಹರಣೆ ಹುಡುಕಬೇಕು.

(೪೭) **ಶುಭಮ್** ॥ ದೀಪ್ತ್ಯರ್ಥಕವಾದ ಶುಭಧಾತುವಿಗೆ ಕ್ವಿಪ್ ಪ್ರತ್ಯಯ. ಶುಭ್ ಎಂದಾಗುತ್ತದೆ. ದೇವತೆ ಯಾವುದರಿಂದ ತನ್ನ ಕಾಂತಿಯಿಂದ ಪ್ರಕಾಶಿಸುವುದೆಂದರ್ಥ. ಇದು ಯಾವಾಗಲೂ ದ್ವಿತೀಯೈಕವಚನಾಂತವಾಗಿಯೇ ವೇದದಲ್ಲಿ ದೃಷ್ಟವಾಗಿದೆ. ಉದಾಹರಣೆ—

' **ಶುಭಂ ಪೃಕ್ಷಮಿಷಮೂರ್ಜಂ ವಹಂತ** ' [ಋ. ಸಂ. ೫-೧-೧-೪] ' **ಇಷಂ ಜನಾಯ ವಹಥಃ ಶುಭಸ್ಪತೀಃ** ' [ಋ. ಸಂ. ೭-೮-೧೫-೪] " **ಪ್ರವತ್ವಾಣೀ ಶುಭಸ್ಪತೀ** [ಋ. ಸಂ. ೧-೧-೬-೧] ॥

[೪೮] **ಯಾದುಃ** ॥ ಪ್ರಾಪಣಾರ್ಥಕವಾದ ಯಾ ಧಾತುವಿಗೆ ' ಭೃಮೃಶೀತೃ—' ಸೂತ್ರದಿಂದ ವಿಹಿತವಾದ ಉ ಪ್ರತ್ಯಯವೂ, ದುಡಾಗಮವೂ ಬಹುಲಗ್ರಹಣದಿಂದ ಬರುತ್ತದೆ. ಯಾ+ದು. ನಿಮ್ನಪ್ರದೇಶಕ್ಕೆ ಹೋಗುವುದೆಂದರ್ಥ. ಗಮನಕ್ರಿಯೆಗೆ ಯಾದುಃ ಎಂದು ಮಾಧವನ ಮತ. ಉದಾಹರಣೆ— ' **ದದಾತಿ ಮಹ್ಯಂ ಯಾದುರೀ** ' [ಋ. ಸಂ. ೨.೧.೧೧.೬]. ಯಾದುಃ ಅಂದರೆ ನೀರು. ಅದು ಉಳ್ಳದ್ದು ಎಂಬ ಮತ್ವರ್ಥದಲ್ಲಿ ರ ಪ್ರತ್ಯಯ ಬಂದಿದೆಯೆಂದು ಸ್ಕಂದ ಸ್ವಾಮಿಯ ಭಾಷ್ಯ. ॥

[೪೯] **ಭೂತಮ್** ॥ ಸತ್ತಾರ್ಥಕವಾದ ಭೂ ಧಾತುವಿಗೆ ಕರ್ತ್ರರ್ಥದಲ್ಲಿ ನಿಷ್ಠಾ ತಕಾರ [ಕ್ತ] ಇಡಾಗಮ ಬರುವುದಿಲ್ಲ. ಮೊದಲೇ ಇದ್ದದ್ದು ಎಂದರ್ಥ. 'ಅಪ ಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್' ಎಂದು ಮನು ಹೇಳಿರುತ್ತಾನೆ. ನೀರನ್ನು ಮೊದಲು ಸೃಷ್ಟಿಸಿ ಅದರಲ್ಲಿ ತನ್ನ ವೀರ್ಯವನ್ನಿಟ್ಟನೆಂದರ್ಥ. ಭೂಧಾತುವಿಗೆ ಪ್ರಾಪ್ತ್ಯರ್ಥವೂ ಇರುವುದರಿಂದ ಬಾಯಾರಿಕೆಯುಳ್ಳವನಿಂದ ಹೊಂದಲ್ಪಡುವುದು ಎಂದರ್ಥ. ಪೃಥಿವ್ಯಾದಿ ಪಂಚಮಹಾಭೂತಗಳಲ್ಲಿ ಸೇರಿರುವುದರಿಂದ ಇದೂ ಭೂತವಾಗುತ್ತದೆ. ಉದಾಹರಣೆ ಹುಡುಕಬೇಕು.

[೫೦] **ಭುವನಮ್** ॥ ಸತ್ತಾರ್ಥಕ ಭೂಧಾತುವಿಗೆ 'ಭೂಸೂಧೂಞ್‌ಭ್ರಸ್ಜಿ—' [ಉ. ೨-೭೫] ಸೂತ್ರದಿಂದ ಕ್ಯುಪ್ರತ್ಯಯ. ಅದಕ್ಕೆ ಅನಾದೇಶ. ಭೂ+ಅನ ಎಂದಿರುವಾಗ 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙಾದೇಶ.

ಇದರಿಂದ ಎಲ್ಲಾ ಪದಾರ್ಥಗಳಾಗುವುದರಿಂದ ಭುವನವಾಗುತ್ತದೆ. ಉದಾಹರಣೆ–**'ಯ ಇಮಾ ವಿಶ್ವಾ ಭುವನಾನಿ ಜುಹ್ವತ್'** [ಋ. ಸಂ. ೮–೩–೧೬–೧] **"ಇಮಾ ಚ ವಿಶ್ವಾ ಭುವನಾನ್ಯಸ್ಯ"** [ಋ. ಸಂ. ೩–೩–೩೧–೪]

[೫೧] **ಭವಿಷ್ಯತ್** ॥ ಭೂ ಧಾತುವಿಗೆ **'ಲೃಟ್ ಶೇಷೇ ಚ'** ಸೂತ್ರದಿಂದ ಲೃಟ್ ಬಂದರೆ ಅದಕ್ಕೆ **'ಲೃಟಃ ಸದ್ವಾ'** [ಪಾ. ಸೂ. ೩–೩–೧೪] ಸೂತ್ರದಿಂದ ಶತೃ ಆದೇಶಃ 'ಸ್ಯತಾಸೀಲೃಲುಟೋಃ' ಎಂಬುದರಿಂದ ಸ್ಯವಿಕರಣ. ಭೂ+ಸ್ಯ+ಅತ್. ಇಡಾಗಮ. ಧಾತುವಿನ ಊಕಾರಕ್ಕೆ ಗುಣ, ಅವಾದೇಶ. "ಆದೇಶ ಪ್ರತ್ಯಯಯೋಃ" ಸೂತ್ರದಿಂದ ಷತ್ವ. ಭವಿಷ್ಯತ್. ನೀರು ಭವಿಷ್ಯತ್ಕಾಲದಲ್ಲಿಯೂ ಇರುತ್ತದೆ. ಪ್ರಲಯ ಕಾಲದಲ್ಲಿಯೂ ನೀರಿಗೆ ನಾಶವಿಲ್ಲವೆಂದು ಹೇಳಿದೆ. ಉದಾಹರಣೆ ಶ್ರುತಿ ಹುಡುಕಬೇಕು.

(೫೨) **ಮಹತ್** ॥ ಪೂಜಾರ್ಥಕವಾದ ಮಹಧಾತುವಿಗೆ ಶತೃಪ್ರತ್ಯಯ ಬಂದು 'ವರ್ತಮಾನೇ ಪೃಷನ್ಮಹದ್ಬೃಹಜ್ಜಗಚ್ಛೃತವಚ್ಚ' (ಉ. ೨–೭೮) ಸೂತ್ರದಿಂದ ಮಹತ್ ಎಂದು ನಿಪಾತಿತವಾಗಿದೆ. ಇದರಿಂದ ದೇವತೆಯು ಪೂಜಿಸಲ್ಪಡುತ್ತದೆ, ದೇವತೆಯಾದುದರಿಂದ ತಾನೇ ಪೂಜಿಸಲ್ಪಡುತ್ತದೆ. ಅಥವಾ ಮಾನಶಬ್ದ, ತ್ಯಾಗಾರ್ಥಕ ಹಾ ಧಾತುವಿನಿಂದ ಪೃಷೋದರಾದಿ ಪಠಿತವಾದುದರಿಂದ ಈ ರೂಪಸಿದ್ಧವಾಗುತ್ತದೆ. ಮಾನದಿಂದ ಅಂದರೆ ತನ್ನಲ್ಲಿರುವ ಪರಿಮಾಣದಿಂದ ತನಗಿಂತ ಕಡಿಮೆಯಾದ ಪ್ರಮಾಣವುಳ್ಳ ಇತರ ಪದಾರ್ಥಗಳನ್ನು ಬಿಡುತ್ತದೆ ಅಂದರೆ ಅತಿಕ್ರಮಿಸಿರುತ್ತದೆ ಎಂದರ್ಥ. ವಿಷ್ಣುಪುರಾಣದಲ್ಲಿ ನೀರಿಗೆ ಸರ್ವಮಹತ್ವ ಹೇಳಿದೆ. ಉದಾಹರಣೆ—

**ಮಹತ್ತ ಉಲ್ಬಂ ಸ್ಥವಿರಂ ತದಾಸೀತ್** (ಋ. ಸಂ. ೮–೧–೧೦–೧) ॥

(೫೩) **ಆಪಃ** ॥ ವ್ಯಾಪ್ತ್ಯರ್ಥಕ ಆಪ್ (೧) ಧಾತುವಿಗೆ ಕ್ವಿಪ್ ಪ್ರತ್ಯಯ. ಇದು ನಿತ್ಯ ಬಹುವಚನಾಂತ. ಸಂಪೂರ್ಣ ಜಗತ್ತು ನೀರಿನಿಂದ ವ್ಯಾಪ್ತವಾಗಿದೆ. ಕರ್ಮಣಿಯಲ್ಲಿ ಪ್ರತ್ಯಯ ಹೇಳಿದರೆ ಇಂದ್ರನಿಂದ ಹೊಂದಲ್ಪಟ್ಟದ್ದೆಂದರ್ಥ. ಅಥವಾ ಇಂದ್ರನು ಇದನ್ನು ಹೊಂದುತ್ತಾನೆ. ಈ ಅರ್ಥ ಶ್ರುತಿಯಲ್ಲಿ ಹೇಳಿದೆ. **" ತದಾಪ್ನೋದಿಂದ್ರೋ ವೋ ಯತೀಸ್ತಸ್ಮಾದಾಪೋ ಅನು ಷ್ಠನ "** (ಅಥ. ಸಂ. ೩–೧೩–೨) ಉದಾಹರಣೆ—

**" ಆಪೋ ಹಿ ಷ್ಠಾ ಮಯೋಭುವಃ—"** (ಋ. ಸಂ. ೭–೪–೫೧)

(೫೪) **ವ್ಯೋಮ** ॥ ಆಕಾಶನಾಮಗಳಲ್ಲಿ ಇದು ವ್ಯಾಖ್ಯಾತವಾಗಿದೆ. (೩–೩) ಪ್ರಾಣಿಗಳನ್ನು ರಕ್ಷಿಸುವುದು, ಭೂಮಿಯನ್ನು ಸುತ್ತಿರುವುದು ಎಂದರ್ಥ. ನಿಗಮ ಹುಡುಕಬೇಕು.

(೫೫) **ಯಶಃ** ॥ ವ್ಯಾಪ್ತಿ, ಭೋಜನ ಅರ್ಥಕೊಡುವ ಅಶಧಾತುವಿಗೆ ' ಅಶೇರ್ದೇವನೇ ಯುಟ್ ಚ ' (ಉ. ೪-೧೯೬) ಸೂತ್ರದಿಂದ ವಿಹಿತವಾದ ಅಸುನ್ ಬಹುಲಗ್ರಹಣದಿಂದ ಉದಕಾರ್ಥದಲ್ಲಿಯೂ ಬರುತ್ತದೆ. ಯುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಯಶಸ್ ಸಾಂತಪದವಾಗುತ್ತದೆ. ಭೋಜದೇವನು 'ಅಶೇರ್ಯುಟ್ ಚ' ಎಂದೇ ಹೇಳಿರುತ್ತಾನೆ. ಜಗತ್ತನ್ನು ವ್ಯಾಪಿಸುತ್ತದೆ, ಪ್ರಾಣಿಗಳಿಂದ ಸೇವಿಸಲ್ಪಡುತ್ತದೆ ಎಂದರ್ಥ. ಉದಾಹರಣೆ—

ತಿರ್ಯ್ಯಗ್ ಬಿಲಶ್ಚಮಸ ಊರ್ಧ್ವಬುಧ್ನೋ ಯಸ್ಮಿನ್ ಯಶೋ ನಿಹಿತಂ ವಿಶ್ವರೂಪಮ್ ॥ ಅತ್ರಾಸತ ಋಷಯಃ ಸಪ್ತ ಸಾಕಂ ಯೇ ಅಸ್ಯ ಗೋಪಾ ಮಹತೋ ಬಭೂವುಃ॥ (ಅಥ. ಸಂ. ೧೦–೨೬–೯)॥

(೫೬) **ಮಹಃ** || ಪೂಜಾರ್ಥಕವಾದ ಮಹ ಧಾತುವಿಗೆ ಔಣಾದಿಕ ಅಸುನ್ ಪ್ರತ್ಯಯ. ಮಹಸ್ ಸಾಂತ ಪದವಾಗುತ್ತದೆ. ಮಹತ್‌ಪದದ ಅರ್ಥವೇ ಇಲ್ಲಿ ಹೇಳಬೇಕು. ಉದಾಹರಣೆ—

**" ಮಹೋಭ್ಯಃ ಸ್ವಾಹಾ " ' ಮಹೋ ಅರ್ಣಃ ' (ಋ. ಸಂ. ೧-೧-೬-೩) ' ಮಹ್ನಾ ಜಿನೋಷಿ ಮಹಿನಿ ' (ಋ. ಸಂ. ೪-೪-೨೯-೧)** ||

(೫೭) **ಸರ್ಣೀಕಮ್** || ಗತ್ಯರ್ಥಕವಾದ ಸೃಧಾತುವಿಗೆ 'ಸರ್ತೇರ್ನುಮ್ ಚ' (ಉ. ೪–೨೩) ಸೂತ್ರದಿಂದ ಈಕನ್‌ಪ್ರತ್ಯಯ. ನಕಾರಾಗಮ. ಕಿತ್ತ್ವ ಅನುವೃತ್ತವಾದರೂ ಬಹುಲಗ್ರಹಣದಿಂದ ಇಲ್ಲಿ ಬರುವುದಿಲ್ಲ. ಆದುದರಿಂದ ಪ್ರತ್ಯಯ ನಿಮಿತ್ತವಾಗಿ ಧಾತು ಋಕಾರಕ್ಕೆ ಗುಣ. ರೇಫವ ಪರವಲ್ಲಿರುವುದರಿಂದ ನಕಾರಕ್ಕೆ ಣತ್ವ. ಸರ್ಣೀಕಮ್. ಓಡುವ ಸ್ವಭಾವವುಳ್ಳದ್ದು ಎಂದರ್ಥ. ಉದಾಹರಣೆ—

**"ಸಲಿಲಾಯ ತ್ವಾ ಸರ್ಣೀಕಾಯ ತ್ವಾ ಸತೀಕಾಯ ತ್ವಾ"** ||

(೫೮) **ಸೃತೀಕಮ್** || ಸೃ–ಶಬ್ದೋಪತಾಪಯೋಃ ಧಾತು (ಭೂ–ಪ) ನಿಘಂಟುವಿನಲ್ಲಿ ಗತ್ಯರ್ಥವೂ, ನಿರುಕ್ತದಲ್ಲಿ ಪೂಜಾರ್ಥವೂ ಹೇಳಿವೆ. 'ಅಲೀಕಾದಯಶ್ಚ' (ಉ–೪–೨೫) ಸೂತ್ರದಿಂದ ಈಕನ್‌ಪ್ರತ್ಯಯ ಬಂದು ನಿಪಾತಿತವಾಗಿದೆ. ಆದುದರಿಂದ ತುಗಾಗಮ ಅದರಿಂದಲೇ ಸಿದ್ಧವಾಗಿದೆ. ಕಿತ್ತ್ವ ಅಧಿಕೃತವಾಗುವುದರಿಂದ ಗುಣ ಬರುವುದಿಲ್ಲ. ಶಬ್ದ ಮಾಡುವುದು, ಹೋಗುವ ಸ್ವಭಾವವುಳ್ಳದ್ದು, ಇದರಿಂದ ದೇವತೆಗಳು ಪೂಜಿಸಲ್ಪಡುತ್ತಾರೆ, ತಾನೇ ಪೂಜಿಸಲ್ಪಡುವುದು ಇತ್ಯಾದ್ಯರ್ಥಗಳಾತ್ತವೆ. ಉದಾಹರಣೆ ಹುಡುಕಬೇಕು. ಕೆಲವರು 'ಸತೀಕಮ್' ಎಂದು ಪಾಠಮಾಡುತ್ತಾರೆ. ಆಗ ಗತ್ಯವಸಾದನಾದ್ಯರ್ಥಕವಾದ ಷದ್‌ಲೃಧಾತುವಿಗೆ ಹಿಂದಿನಂತೆ ಈಕನ್‌ಪ್ರತ್ಯಯ ಬಂದು ಉಕ್ತರೂಪವಾಗಿದೆಯೆಂದು ತಿಳಿಯಬೇಕು. ದಕಾರಕ್ಕೆ ತಕಾರಾದೇಶ. ಹೋಗುವುದು, ದಡಮುಂತಾದವುಗಳನ್ನು ನಾಶಮಾಡುವುದು ಎಂದರ್ಥ. **' ಸತೀಕಾಯ ತ್ವಾ '** ಎಂಬ ಪೂರ್ವಮಂತ್ರವೇ ಉದಾಹರಣೆಯಾಗುತ್ತದೆ. ಪದಕಾರರ ಅಭಿಪ್ರಾಯ ವಿಚಿತ್ರವಾದುದರಿಂದ ಸ ಶಬ್ದದಲ್ಲಿ ಅವಗ್ರಹ ಮಾಡುತ್ತಾರೆ.

(೫೯) **ಸತೀನಮ್** || ' ಸತೀಕಮ್' ಶಬ್ದದ ಸಮಾನಾರ್ಥವುಳ್ಳದ್ದೇ ಈ ಪದ ನಿಪಾತದಿಂದಲೇ ದಕಾರಕ್ಕೆ ತಕಾರಾದೇಶ ಬಂದಿದೆ. ಅಥವಾ ಸತೀ ಅಂದರೆ ಶೋಭನವಾದದ್ದು, ಅರ್ಥಾತ್ ಮಾಧ್ಯಮಿಕವಾದ ವಾಕ್ ಆಗುತ್ತದೆ. ' ಸತಿ ಈನಾ ಅಸ್ಯ ' ಅದೇ ಸ್ವಾಮಿಯಾಗಿ ಇರುವುದು ಸತೀನಾ. ' ಸಂಜ್ಞಾಪೂರಣ್ಯೋಶ್ಚ ' ಸೂತ್ರದಿಂದ ಪುಂವದ್ಭಾವ ನಿಷೇಧ ಬರುವುದರಿಂದ ಪುಂವದ್ಭಾವ ಬಂದಿಲ್ಲ. ಉದಾಹರಣೆ—

"ಅಥೋ ಸತೀನ ಕಂಕತಃ" (ಋ. ಸಂ. ೨-೫-೧೪-೧) **"ಸತೀನ ಸತ್ವಾ ಹವೋ ಭರೇಷು"** (ಋ. ಸಂ. ೧-೬-೮-೧) ||

(೬೦) ಗಹನಮ್ || ವಿಲೋಡನಾರ್ಥಕವಾದ 'ಗಾಹೂ' ಧಾತುವಿಗೆ 'ಯುಚ್ ಬಹುಲಮ್' (ಉ. ೨-೭೪) ಸೂತ್ರದಿಂದ ಯುಚ್‌ಪ್ರತ್ಯಯ. 'ಯುವೋರನಾಕೌ' ಸೂತ್ರದಿಂದ ಅದಕ್ಕೆ ಅನಾದೇಶ. ಬಹುಲಗ್ರಹಣದಿಂದ ಧಾತುವಿಗೆ ಹ್ರಸ್ವ. ಪ್ರಾಣಿಗಳಿಂದ ಪ್ರವೇಶಿಸಲ್ಪಡುವುದು ಗಹನ. ಉದಾಹರಣೆ—

**' ಅಂಭಃ ಕಿಮಾಸೀತ್ ಗಹನಂ ಗಭೀರಮ್ '** (ಋ. ಸಂ. ೮–೭-೧೭-೧) ||

(೬೧) **ಗಭೀರಮ್** ॥ ಗತ್ಯರ್ಥಕವಾದ ಗಮ್‌ಧಾತುವಿಗೆ " ಗಭೀರಗಂಭೀರೌ " (ಉ. ೪-೨೪) ಸೂತ್ರದಿಂದ ನುಮಾಗಮ, ಈರನ್‌ಪ್ರತ್ಯಯ, ಮಕಾರಲೋಪ ಬಂದು ' ಗಭೀರ ' ಎಂದು ನಿಪಾತಿತವಾಗಿದೆ. ಯಜ್ಞದಲ್ಲಿ ಹೋಗುತ್ತದೆ ಇತ್ಯಾದ್ಯರ್ಥವಾಗುತ್ತದೆ. ಉದಾಹರಣೆ—

**" ಸರ್ಷಿ ದೀನೇ ಗಭೀರಾ ಆँ** (ಋ. ಸಂ. ೬-೪-೫೩-೧) **' ನತಂಹಂತಿ ಸ್ರವತೋ ಗಭೀರಾಃ '** (ಋ. ಸಂ. ೮-೬-೫-೪) ॥ "

(೬೨) **ಗಂಭರಮ್** ॥ ' ಕೃದರಾದಯಶ್ಚ ' (ಉ. ೫-೫೨) ಸೂತ್ರದಿಂದ ಅರಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿಪಾತದಿಂದಲೇ ಗಮ್‌ಧಾತುವಿಗೆ ಅನ್, ಭಡಾಗಮ ಬಂದಿದೆ. ಹಿಂದೆ ವಿವರಿಸಿದ ಅರ್ಥವೇ ಇಲ್ಲಿ ತೋರುತ್ತದೆ. ಅಥವಾ ಉಪಾದಾನಾರ್ಥಕ ಗ್ರಹಧಾತುವಿಗೆ ಹಿಂದಿನ ಸೂತ್ರದಿಂದ ಅರನ್‌ಪ್ರತ್ಯಯ. ' ಹೃಗ್ರಹೋರ್ಭಶ್ಛಂದಸಿ' ವಚನದಿಂದ ಧಾತು ಹಕಾರಕ್ಕೆ ಭಕಾರಾದೇಶ. ಬಹುಲಗ್ರಹಣದಿಂದ ರೇಫಕ್ಕೆ ಮಕಾರ. ಅದೂ ಅಕಾರದ ಪರವಾಗಿ ಬರುತ್ತದೆ. ಸ್ವೀಕರಿಸಲ್ಪಡುವುದೆಂದರ್ಥ. ಉದಾಹರಣೆ—

**' ಗಂಭೀರೇಷು ಪ್ರತಿಷ್ಠಾಮ್ '** (ಋ. ಸಂ. ೮-೬-೨-೪) ॥

[೬೩] **ಈಮ್** ॥ ಇದು ಅವ್ಯಯ. ಅನೇಕ ಪಾಠಗಳಲ್ಲಿ ಕಮ್ ಎಂದು ಲಿಪಿಭ್ರಮೆಯಿಂದ ಪಠಿತವಾಗಿದೆ. ಉದಾಹರಣೆ—

**" ವಿ ಯದಜ್ರಾಃ ಅಜಥನಾವಈಂ ಯಥಾ "** (ಋ. ಸಂ. ೪-೩-೧೪-೪) ॥

(೬೪) **ಅನ್ನಮ್** ॥ ಪ್ರಾಣನಾ (ಜೀವನ) ರ್ಥಕವಾದ ಅನ ಧಾತುವಿಗೆ ' ಕ್ಷ್ಯಾವ್ಯಾಜ್ಯಾಸಿ—' (ಉ. ೩-೯) ಸೂತ್ರದಿಂದ ನಪ್ರತ್ಯಯ. ಅನ್+ನ=ಅನ್ನಮ್. " ಅಸ್ಯ ಶೋಷಾದಯೋ ದೋಷಾಃ ಭವಂತಿ ಯದಲಾಭತಃ । ನ ಹಿ ತೋಯಾದ್ ವಿನಾ ತೃಪ್ತಿಃ ಸ್ವಸ್ಥಸ್ಯಾಪ್ಯಾತುರಸ್ಯ ಚ " ಎಂದು ವಾಗ್ಭಟನು ಹೇಳಿದಂತೆ ನೀರಿಲ್ಲದಿದ್ದರೆ ಎಂದೂ ಪ್ರಾಣಿಗಳು ಜೀವಿಸಲಾರವು. ಇದರಿಂದ ಪ್ರಾಣಿಗಳು ಜೀವಿಸಿರುತ್ತವೆ ಎಂದರ್ಥ. ಭಕ್ಷಣಾರ್ಥಕವಾದ ಅದ್‌ಧಾತುವಿಗೆ ನಿಷ್ಠಾತಕಾರ. (ಕ್ತಪ್ರತ್ಯಯ.) ಅದ್+ನ ಎಂದಿರುವಾಗ 'ರದಾಭ್ಯಾಂ ನಿಷ್ಠಾತಃ—' ಸೂತ್ರದಿಂದ ನತ್ವ. ಅನ್ನ ಎಂದು ನಿರ್ದೇಶಿಸಿರುವುದರಿಂದಲೇ ಅದಧಾತುವಿಗೆ ಜಗ್ಧಿ ಆದೇಶ ಬರುವುದಿಲ್ಲ. ತಿನ್ನಲ್ಪಡುವುದು, ಅಥವಾ ಅನ್ನಕ್ಕೆ ಕಾರಣವಾದುದರಿಂದ ನೀರು ಅನ್ನವಾಗುತ್ತದೆ. ಉದಾಹರಣೆ—

**' ಹಿರಣ್ಯದಾ ದದತ್ಯನ್ನಮಸ್ಮೈ '** (ಋ. ಸಂ. ೨-೭-೨೩-೫) ॥

**(೬೫) ಹವಿಃ** ॥ ದಾನ, ಅದನವೆಂಬ ಅರ್ಥ ಹೇಳುವ ಹು ಧಾತುವಿಗೆ " ಅರ್ಚಿ ಶುಚಿ ಹು ಸೃಪಿ—" (ಉ. ೨-೧೦೧) ಸೂತ್ರದಿಂದ ಇಸಿ ಪ್ರತ್ಯಯ. ಧಾತುವಿನ ಉಕಾರಕ್ಕೆ ಗುಣ ಅವಾದೇಶ. ಹವಿಸ್ ಸಾಂತಪದವಾಗುತ್ತದೆ. ಬಾಯಾರಿದವರಿಗೆ ಕೊಡಲ್ಪಡುತ್ತದೆ. ಪ್ರಾಣಿಗಳಿಂದ ಹೊಂದಲ್ಪಡುತ್ತದೆ, ದೇವತೋದ್ದೇಶದಿಂದ ಹೋಮಿಸಲ್ಪಡುತ್ತದೆ, " ಜುಹೋಮಿ " ಇತ್ಯಾದಿ ಮಂತ್ರಗಳಿಂದ ಅಗ್ನಿಯಲ್ಲಿ ಹಾಕಲ್ಪಡುತ್ತವೆ ಇತ್ಯಾದ್ಯರ್ಥಗಳಾಗುತ್ತವೆ. ಉದಾಹರಣೆ—

**' ವಿಶ್ವಕರ್ಮನ್ ಹವಿಷಾ ವಾವೃಧಾನಃ '** (ಋ. ಸಂ. ೮-೩-೧೬-೬)

(೬೬) ಸದ್ಮ ॥ (೬೭) ಸದನಮ್ ॥ ಷದ್ಲೃ-ವಿಶರಣಗತ್ಯವಸಾದನೇಷು ಧಾತು. ಮನಿನ್‌ಪ್ರತ್ಯಯ ಬಂದರೆ ಸದ್ಮನ್ ನಾಂತಪದವಾಗುತ್ತದೆ. 'ಯುಚ್ ಬಹುಲಮ್' (ಉ-೨-೭೪) ಸೂತ್ರದಿಂದ ಯುಚ್ ಬಂದರೆ ಅದಕ್ಕೆ ಅನಾದೇಶ. ಸದನಮ್. ಶಿಲಾದಿಗಳ ಮೇಲೆ ಬೀಳುವುದರಿಂದ ಕಣಕಣವಾಗುತ್ತದೆ, ಇದರಿಂದ ಗೋಡೆ ಮುಂತಾದವುಗಳು ನಶಿಸಿಹೋಗುತ್ತವೆ, ನಿಮ್ನಪ್ರದೇಶಕ್ಕೆ ಹೋಗುತ್ತದೆ, ಪ್ರಾಣಿಗಳಿಂದ ಹೊಂದಲ್ಪಡುತ್ತದೆ, ಬಾಯಾರಿಕೆಯನ್ನು ನಾಶಮಾಡುತ್ತದೆ, ಇತ್ಯಾದ್ಯರ್ಥಗಳು ಧಾತ್ವರ್ಥಾನುಸರಣೆಯಿಂದ ತೋರುತ್ತವೆ. ಉದಾಹರಣೆ—

**ಹವಿರ್ಹವಿಷ್ಮೋ ಮಹಿ ಸದ್ಮ ದೈವ್ಯಮ್ (ಋ. ಸಂ. ೭-೩-೮-೫) ॥**

(೬೮) ಋತಮ್ ॥ ಗತ್ಯರ್ಥಕವಾದ ಋ ಧಾತುವಿಗೆ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಹೋಗುವ ಸ್ವಭಾವವುಳ್ಳದ್ದು ಋತ. ॥

(೬೯) ಯೋನಿಃ ॥ ಯು-ಮಿಶ್ರಣಾಮಿಶ್ರಣಯೋಃ ಧಾತು. 'ವಹಿಶ್ರಿಯುದ್ರುಗ್ಲಾಹಾತ್ವರಿಭ್ಯೋ ನಿಃ' (ಉ. ೪-೫೧) ಸೂತ್ರದಿಂದ ನಿಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಯೋನಿಃ. ಎಲ್ಲಾ ಪದಾರ್ಥಗಳಿಂದ ಕೂಡಿರುವುದು. ಅಥವಾ ವೀಧಾತುವಿಗೆ ನಿ ಪ್ರತ್ಯಯ ಬಂದು ಬಹುಲಗ್ರಹಣದಿಂದ ಉಕಾರಾದಿಗಳು ಬಂದು ಉಕ್ತರೂಪವಾಗುತ್ತದೆ. ವಾಯುವಿನಿಂದ ಸುತ್ತಲ್ಪಟ್ಟದ್ದು ಅಥವಾ ದಡದಿಂದ ಕೂಡಿರುವುದು. 'ವೃಷ್ಟೇರನ್ನಂ ತತಃ ಪ್ರಜಾಃ' ಎಂದು ಮನುವು ಹೇಳಿರುವುದರಿಂದ ಅನ್ನಕಾರಣವಾದುದರಿಂದ ಜಲವು ಯೋನಿಯಾಗುತ್ತದೆ. ಉದಾಹರಣೆ—

**"ಚರತ್ ಪ್ರಿಯಸ್ಯ ಯೋನಿಷು ಪ್ರಿಯಃ ಸನ್" (ಋ. ಸಂ. ೮-೭-೭-೫) "ಸ್ವಚಂ ಪೃಂಚತ್ಯುಪರಸ್ಯ ಯೋನೌ" (ಋ. ಸಂ. ೧-೫-೨೭-೩) ॥**

(೭೦) ಋತಸ್ಯ ಯೋನಿಃ ॥ ಯಜ್ಞಕ್ಕೆ ಕಾರಣವಾದುದು. ನೀರಿಲ್ಲದೆ ಯಾರೂ ಯಜ್ಞವನ್ನು ಮಾಡಲು ಸಮರ್ಥರಾಗುವುದಿಲ್ಲ. ಅಥವಾ ಋತನೆಂದರೆ ಮುಂದೆ ಉಂಟಾಗುವ ಮಳೆ. ಅದಕ್ಕೆ ಇದು ಕಾರಣವೆಂದರ್ಥ. 'ಸಹಸ್ರಗುಣಮುತ್ಸ್ರಷ್ಟುಮಾದತ್ತೇ ಹಿ ರಸಂ ರವಿಃ' ಎಂದು ಕಾಳಿದಾಸ. ಸೂರ್ಯನು ಭೂಮಿಯಿಂದ ಕಿರಣ ಮೂಲಕ ರಸವನ್ನು ಸೆಳೆದು ಮಳೆಗಾಲದಲ್ಲಿ ಪುನಃ ಸುರಿಸುತ್ತಾನೆಂದು ಹೇಳಿದೆ. ಉದಾಹರಣೆ—

**"ಋತಸ್ಯ ಯೋನಿಮಾಸದಃ" (ಋ. ಸಂ. ೪-೧-೧೩-೪) "ಋತಸ್ಯ ಯೋನಾಗರ್ಭೇ ಸುಜಾತಮ್" (ಋ. ಸಂ. ೧-೫-೯-೨) ॥**

(೭೧) ಸತ್ಯಮ್ ॥ "ಸತ್ಸು ಭವಮ್" ಮಂತ್ರಾದಿಗಳಲ್ಲಿರುವುದು ಎಂಬರ್ಥದಲ್ಲಿ 'ಭವೇ ಛಂದಸಿ' ಸೂತ್ರದಿಂದ ಯತ್‌ಪ್ರತ್ಯಯ. ಅಥವಾ ಸಾಧ್ವರ್ಥದಲ್ಲಿ 'ತತ್ರಸಾಧುಃ' (ಪಾ. ಸೂ. ೪-೪-೯೮) ಸೂತ್ರದಿಂದ ಯತ್. ಅಥವಾ 'ಸತಃ ಅರ್ಹಮ್' ಉತ್ತಮವಾದದ್ದು ಎಂಬರ್ಥದಲ್ಲಿ "ಛಂದಸಿ ಚ" ಸೂತ್ರದಿಂದ ಯಪ್ರತ್ಯಯ. ಉದಾಹರಣೆ—

**"ವಿದ್ಯುದಸಿ ವಿದ್ಯಾಮಯಾಧ್ಯಾಸ ಭೃತಾಸ್ಸತ್ಯಮುಪೈತಿ" ॥ "ಋತಾತ್ ಸತ್ಯಮುಪಾಗಾತ್" ॥**

(೭೨) ನೀರಮ್ ॥ ಪ್ರಾಪಣಾರ್ಥಕವಾದ ಣೀ (ಣೀಞ್) ಧಾತುವಿಗೆ 'ಸ್ಫಾಯಿತಂಚಿವಂಚಿಶಕಿ—' (ಉ-೨-೧೨) ಸೂತ್ರದಿಂದ ರಕ್‌ಪ್ರತ್ಯಯ. ಕಿತ್ತ್ವವಿಧಾನವಿರುವುದರಿಂದ ಗುಣ ಬರುವುದಿಲ್ಲ. ತುಷ್ಟಿಯನ್ನುಂಟುಮಾಡುತ್ತದೆ, ಜನರಿಂದ ತಮಗೆ ಅಭಿಮತವಾದ ದೇಶಕ್ಕೆ ಒಯ್ಯಲ್ಪಡುತ್ತದೆ ಎಂದರ್ಥ. ನೀರು ಹುಡುಕಬೇಕು.

(೭೩) ರಯಿಃ ॥ ರೀಙ್–ಗತೌ. ಧಾತು. ಇದಕ್ಕೆ 'ಅಚ ಇಃ' (ಉ. ೪–೧೩೪) ಸೂತ್ರದಿಂದ ಇಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತು 'ಇಕಾರಕ್ಕೆ ಗುಣ. ಅಯಾದೇಶ. 'ರೀಯತೇ=ಗಚ್ಛತಿ ಇತಿ ರಯಿಃ.' ಹೋಗುವ ಸ್ವಭಾವವುಳ್ಳದ್ದು. ಅಥವಾ ಆದಾನಾರ್ಥಕ ರಾಧಾತುವಿಗೆ ಬಹುಲಗ್ರಹಣದಿಂದ ಇಪ್ರತ್ಯಯು, ಯುಗಾಗನು, ಧಾತುವಿಗೆ ಹ್ರಸ್ವ. ಬಾಯ್ಗಾರಿಕೆಗೊಂಡವರಿಂದ ಸ್ವೀಕರಿಸಲ್ಪಡುವುದು. ನಿಗಮ ಹುಡುಕಬೇಕು.

(೭೪) ಸತ್ ॥ ಅಸ-ಭುವಿ. ಧಾತು. ಇದಕ್ಕೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಇದಕ್ಕೆ ಙಿತ್ತ್ವಾತಿದೇಶವಿರುವುದರಿಂದ ಅಸ್+ಅತ್ ಎಂದಿರುವಾಗ "ಶ್ನಸೋರಲ್ಲೋಪಃ" (ಪಾ. ಸೂ. ೬-೪-೧೧೧) ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ. ಸತ್. ಪ್ರಲಯಕಾಲದಲ್ಲಿಯೂ ನಾಶವಿಲ್ಲದಿರುವುದರಿಂದ ಯಾವಾಗಲೂ ಇರುವುದೆಂದರ್ಥ. ಉದಾಹರಣೆ—
"ಸದಸಿ ಭೂಯಾಃ" ॥

(೭೫) ಪೂರ್ಣಮ್ ॥ ಪೃ–ಪಾಲನಪೂರಣಯೋಃ ಧಾತು. ಇದಕ್ಕೆ ನಿಷ್ಠಾತಕಾರ (ಕ್ತಪ್ರತ್ಯಯ) ಪೃ+ತ ಎಂದಿರುವಾಗ "ಉದೋಷ್ಠ್ಯಪೂರ್ವಸ್ಯ" ಸೂತ್ರದಿಂದ ಋಕಾರಕ್ಕೆ ಉತ್ವ. ರ ಪರವಾಗಿ ಬಂದಾಗ "ಹಲಿಚ" (ಪಾ. ಸೂ-೮–೨–೭೭) ಸೂತ್ರದಿಂದ ರೇಫಾಂತ ಧಾತುವಿನ ಉಪಧೆಗೆ ದೀರ್ಘ. ಪೂರ್+ತ. ರೇಫದ ಪರದಲ್ಲಿ ನಿಷ್ಠಾತಕಾರ ಬಂದುದರಿಂದ "ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ" ಸೂತ್ರದಿಂದ ಣತ್ವ. ನತ್ವ. ರೇಫದ ಪರದಲ್ಲಿ ನ ಬಂದುದರಿಂದ "ರದಾಭ್ಯಾಂ–ನೋಣಃ" ಸೂತ್ರದಿಂದ ಣತ್ವ. ಪೂರ್ಣಮ್. ಸೇತು ಮುಂತಾದವುಗಳಿಂದ ರಕ್ಷಿಸಲ್ಪಟ್ಟದ್ದು, ಜಲಾರ್ಥಿಗಳಿಂದ ಪಾತ್ರೆಗಳಲ್ಲಿ ತುಂಡಲ್ಪಡುವುದು ಎಂದರ್ಥ. ಅಥವಾ ಪೂರೀ–ಆಪ್ಯಾಯನೇ ಧಾತು. "ವಾ ದಾಂತ ಶಾಂತ ಪೂರ್ಣದಸ್ತ"—(ಪಾ. ಸೂ–೭–೨–೨೭) ಸೂತ್ರದಿಂದ ಕ್ತಾಂತವಾಗಿ ನಿಪಾತಿತವಾಗಿದೆ. ಸಂತೋಷಗೊಳಿಸುವುದು ಉಪಭೋಗದಿಂದ ಕ್ಷೀಣವಾಗುವುದು ಎಂದರ್ಥ. ಉದಾಹರಣೆ—

"ಪೂರ್ಣಂ ಪರ್ಣೇನ ಸಿಚ್ಯತೇ" (ಅಥ. ಸಂ. ೧೦–೮–೨೯) ॥

(೭೬) ಸರ್ವಮ್ ॥ ಗತ್ಯರ್ಥಕವಾದ ಸೃಧಾತುವಿಗೆ "ಸರ್ವನಿಘೃಷ್ವರಿಷ್ವ ಲಷ್ವಶಿವ—" (ಉ–೧-೧೫೧) ಸೂತ್ರದಿಂದ ಅಭಿಮತಪ್ರತ್ಯಯ ಬಂದು ನಿಪಾತಿತವಾಗಿದೆ. 'ಅತಂತ್ರೇ' ಎಂಬುದರಿಂದ ಕರ್ತ್ರರ್ಥದಲ್ಲಿ ಬರುವುದಿಲ್ಲ. ಆದರೆ ಬಹುಲಗ್ರಹಣವಿರುವುದರಿಂದ ಆ ನಿಷೇಧವೂ ಇಲ್ಲ. ಇದರಿಂದ ಹೋಗಲಾಡಿಸಲ್ಪಡುತ್ತದೆ. ಅಥವಾ ಬಾಯಾರಿಕೆಯನ್ನು ಉಷ್ಣವನ್ನು ನಾಶಮಾಡುತ್ತದೆ ಎಂದರ್ಥ. ಉದಾಹರಣೆ—

"ಸರ್ವಮಸಿ ಸರ್ವಂ ಮೇ ಭೂಯಾಃ' ॥

(೭೭) ಅಕ್ಷಿತಮ್ ॥ ಕ್ಷಯಾರ್ಥಕವಾದ ಕ್ಷಿಧಾತುವಿಗೆ ಭಾವಾರ್ಥದಲ್ಲಿ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಭಾವಾರ್ಥದಲ್ಲಿ ಪ್ರತ್ಯಯ ಬಂದುದರಿಂದಲೇ ದೀರ್ಘವಿಲ್ಲ. ದೀರ್ಘ ಬಾರದಿರುವುದರಿಂದ 'ಕ್ಷಿಯೋ ದೀರ್ಘಾತ್' ಸೂತ್ರದಿಂದ ನತ್ವವೂ ಇಲ್ಲ. ಕ್ಷಿತ ಅಂದರೆ ಕ್ಷಯ. ಅದು ಇಲ್ಲದಿರುವುದು ಅಕ್ಷಿತ. ಯಾವಾಗಲೂ ಎಲ್ಲರಿಂದ ಉಪಯೋಗಿಸಲ್ಪಟ್ಟರೂ ನಾಶವಿಲ್ಲದಿರುವುದು, ಮೇಲಿಂದ ಮೇಲೆ ಮಳೆ ಬರುವುದರಿಂದಲೂ ನಾಶವಿಲ್ಲ. ಉದಾಹರಣೆ—

" ಉತ್ಸಮಕ್ಷಿತಂ ವ್ಯಚಂತಿ ' (ಋ. ಸಂ. ೪–೨೭–೨) ' ಸಮಾನಮರ್ಥಮಕ್ಷಿತಮ್ ' (ಋ. ಸಂ. ೨-೧-೧೪-೫) " ಅಕ್ಷಿತಮುತ್ಯೈ ಜುಹೋಮಿ ಸ್ವಾಹಾ " ॥

(೭೮) **ಬರ್ಹಿಃ** ॥ " ಬೃಂಹೇರ್ನಲೋಪಶ್ಚ " (ಉ. ೨-೧೦೨) ಸೂತ್ರದಿಂದ ಇಸಿ ಪ್ರತ್ಯಯ. ಧಾತುವಿನ ನಕಾರಕ್ಕೆ ಲೋಪ. ಬೃಹ್ + ಇಸ್ ಎಂದಿರುವಾಗ ಲಘೂಪಧ ಗುಣ. ಬರ್ಹಿಸ್ ಸಾಂತಪದವಾಗುತ್ತದೆ. ಇದಕ್ಕೆ ನಿಗಮ ಹುಡುಕಬೇಕು.

(೭೯) **ನಾಮ** ॥ ಣಮು-ಪ್ರಹ್ವತ್ವೇ ಶಬ್ದೇಚ ಧಾತು. ಇದಕ್ಕೆ ಮನಿನ್‌ಪ್ರತ್ಯಯ ಬಂದು ' ನಾಮನ್ ' ಎಂದು ನಿಪಾತಿತವಾಗಿದೆ. ದೇವತೆಯಾದುದರಿಂದ ಪುರುಷರಿಂದ ನಮಸ್ಕರಿಸಲ್ಪಡುತ್ತದೆ. ಣಿಜಂತದ ಮೇಲೆ ಮನಿನ್ ಬಂದೂ ನಿಪಾತಿತವಾಗುತ್ತದೆ. ನದಿಯ ತೀರದಲ್ಲಿರುವ ಜೊಂಡು ಹುಲ್ಲು ಮುಂತಾದವುಗಳನ್ನು ಬಗ್ಗಿಸುತ್ತದೆಂದರ್ಥ. ಅಥವಾ ಗತ್ಯಾದ್ಯರ್ಥ ಕೊಡುವ ಅಮಧಾತುವಿಗೆ, ಚುರಾದಿಗಣಪಠಿತವಾದ ರೋಗಾರ್ಥ ಕೊಡುವ ಅಮಧಾತುವಿಗೆ ನಞ್ ಪೂರ್ವದಲ್ಲಿರುವಾಗ ಮನಿನ್ ಬಂದು ನಿಪಾತಿತವಾಗುತ್ತದೆ. ' ನ ಅಮಂತಿ=ಗಚ್ಛಂತಿ ಅನೇನ.' ಸ್ನಾನಪಾನ ಯೋಗ್ಯವಾದ ನೀರಿರುವುದರಿಂದ ಪ್ರಾಣಿಗಳು ಬೇರೆ ಕಡೆಗೆ ಹೋಗುವುದಿಲ್ಲ. ' ನ ಆಮಯತ್ಯನೇನ ರೋಗಃ ' ಇದರಿಂದ ರೋಗ ಬರುವುದಿಲ್ಲವೆಂದರ್ಥ. ಈ ಅರ್ಥ ಶ್ರುತಿಯಲ್ಲಿಯೂ ಹೇಳಿದೆ. ' ಆಪೋ ಅಮೀವ ಚಾತನೀಃ ' ॥ ಉದಾಹರಣೆ—

**"ನಾಮಾನಿ ಯಹ್ವೋ ಅಧಿ ಯೇಷು ವರ್ಧತೇ" (ಋ. ಸಂ. ೭-೨-೩೩-೧) "ದಧಾನಾ ನಾಮ ಯಜ್ಞಿಯಮ್" (ಋ. ಸಂ. ೧-೧-೧೧-೪)** ॥

(೮೦) **ಸರ್ಪಿಃ** ॥ ಗತ್ಯರ್ಥಕವಾದ ಸೃಪ್ (ಲೃ) ಧಾತುವಿಗೆ 'ಅರ್ಚಿಶುಚಿಹುಸೃಪಿ—' (ಉ. ಸೂ. ೨-೧೦೧) ಸೂತ್ರದಿಂದ ಇಸಿಪ್ರತ್ಯಯ, ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಸರ್ಪಿಸ್ ಸಾಂತಪದವಾಗುತ್ತದೆ. ದ್ರವದ್ರವ್ಯವಾದುದರಿಂದ ಗಮನ ಸ್ವಭಾವವುಳ್ಳದ್ದು ಎಂದರ್ಥ. ಜಲಪರ್ಯಾಯದಲ್ಲಿ ಇದಕ್ಕೆ ಉದಾಹರಣೆ ಹುಡುಕಬೇಕು.

(೮೧) **ಆಪಃ** ॥ ವ್ಯಾಪ್ತ್ಯರ್ಥಕವಾದ ಆಪ್ (ಲೃ) ಧಾತುವಿಗೆ 'ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚ ವಾ' (ಉ. ೪-೨೦೨) ಸೂತ್ರದಿಂದ ಅಸುನ್‌ಪ್ರತ್ಯಯ ಧಾತುವಿಗೆ ಹ್ರಸ್ವ. ಕರ್ಮಾರ್ಥದಲ್ಲಿ ಹೇಳಿದ್ದರೂ ಬಹುಲಗ್ರಹಣದಿಂದ ನೀರೆಂಬ ಅರ್ಥದಲ್ಲಿಯೂ ಬರುತ್ತದೆ. ಅಪಸ್ ಸಾಂತಪದವಾಗುತ್ತದೆ. ಆಪಃ ಶಬ್ದದ ಅರ್ಥವೇ ಈ ಶಬ್ದಕ್ಕೂ ತಿಳಿಯಬೇಕು. ಉದಾಹರಣೆ—

**"ಬಹ್ವೀನಾಂ ಗರ್ಭೋ ಅಪಸಾಮುಪಸ್ಥಾತ್" (ಋ. ಸಂ. ೧-೭-೧-೪) "ಜಾಮೀನಾಮಗ್ನಿರಪಸಿ ಸ್ವಸೃಣಾಮ್" (ಋ. ಸಂ. ೨-೮-೧೪-೧)** ॥

(೮೨) **ಪವಿತ್ರಮ್** ॥ ಪೂಞ್-ಪವನೇ. ಧಾತು. ಇದಕ್ಕೆ ಸಂಜ್ಞಾ ತೋರುವಾಗ 'ಪುವಃ ಸಂಜ್ಞಾಯಾಮ್' (ಪಾ. ಸೂ. ೩-೨-೧೮೫) ಸೂತ್ರದಿಂದ ಕರಣಾರ್ಥದಲ್ಲಿ ಇತ್ರಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ ಪವಿತ್ರಮ್. ಸ್ನಾನಮಾಡಿ ಇದರಿಂದ ಪವಿತ್ರನಾಗುತ್ತಾನೆ ಎಂದರ್ಥ. ಅಥವಾ ಜಲವೂ ದೇವತೆಯಾದುದರಿಂದ "ಕರ್ತರಿ ಚರ್ಷಿದೇವತಯೋಃ' (ಪಾ. ಸೂ. ೩-೨-೧೮೬) ಸೂತ್ರದಿಂದ ಕರ್ತ್ರರ್ಥದಲ್ಲಿಯೇ ಇತ್ರಪ್ರತ್ಯಯ. ಪಾಪಮಾಡಿದವರನ್ನು ಪವಿತ್ರಮಾಡುತ್ತದೆ ಎಂದರ್ಥ. "ಜ್ಞಾನಂ ತಪೋಽಗ್ನಿರಾಹಾರೋಮೃನ್ಮನೋ ವಾರ್ಯುಪಾಂಜನಮ್ । ವಾಯುಃ ಕರ್ಮಾರ್ಕಕಾಲೌ ಚ ಶುದ್ಧೇಃ ಕರ್ತೄಣಿ ದೇಹಿನಾಮ್" ಎಂದು ಮನುವು ಪವಿತ್ರಸಾಧನಗಳನ್ನು ಹೇಳಿರುತ್ತಾನೆ. ಉದಾಹರಣೆ—

"ಶತಪವಿತ್ರಾಃ ಸ್ವಧಯಾ ಮದಂತೀಃ" (ಋ. ಸಂ. ೫-೪-೧೪-೩)

(೬೩) **ಅಮೃತಮ್** ॥ ಮೃಜ್-ಪ್ರಾಣತ್ಯಾಗೇ. ಧಾತು. ನಞ್ ಪೂರ್ವದಲ್ಲಿರುವಾಗ 'ತನಿಮೃಙ್‌ಭ್ಯಾಂ ಕಿಚ್ಚ' (ಉ. ೩-೮೫) ಸೂತ್ರದಿಂದ ತನ್‌ಪ್ರತ್ಯಯ. ಕಿತ್ತ್ವ ಹೇಳಿರುವುದರಿಂದ ಗುಣ ಬರುವುದಿಲ್ಲ. "ನಲೋಪೋ—" ಸೂತ್ರದಿಂದ ನಞಿನ ನಕಾರಕ್ಕೆ ಲೋಪ. ಅಮೃತಮ್ ಕುಡಿಯುವುದರಿಂದ ಪ್ರಾಣಿಗಳು ಇದರಿಂದ ಮರಣಹೊಂದುವುದಿಲ್ಲವೆಂದರ್ಥ. 'ಅಮೃತೋ ಹ್ಯಾಪಃ' ಎಂದು ಶ್ರುತಿಯಿರುವುದರಿಂದ ಅಮೃತದಂತೆ ಆಸ್ವಾದ್ಯವಾದುದರಿಂದ ನೀರೂ ಅಮೃತವಾಗುತ್ತದೆ. ಉದಾಹರಣೆ—

"ಯತ್ರಾ ಸುಪರ್ಣಾ ಅಮೃತಸ್ಯ ಭಾಗಮ್" (ಋ. ಸಂ. ೨-೩-೧೮-೧) ॥

(೬೪) **ಇಂದುಃ** ॥ ಞಿ ಇನ್ಧೀ ದೀಪ್ತೌ-ಧಾತು. 'ಉನ್ದೇರಿಚ್ಚಾದೇ.' (ಉ. ೧-೧೨) ಸೂತ್ರದಿಂದ ವಿಹಿತವಾಗುವ ಉ ಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ, ಧಕಾರಕ್ಕೆ ದಕಾರಾದೇಶ. 'ಇಂಧೇ+ದೀಪ್ಯತೇ ಇತಿ ಇಂದುಃ' ದೇವತೆಯಾದುದರಿಂದ ಇದು ತನ್ನ ಕಾಂತಿಯಿಂದಲೇ ಪ್ರಕಾಶಿಸುತ್ತದೆ ಎಂದರ್ಥ. ಅಥವಾ ಕ್ಲೇದನಾರ್ಥಕ (ಒದ್ದೆ) ವಾದ ಉನ್ದ್ ಧಾತುವಿಗೆ ಉ ಪ್ರತ್ಯಯ, ಆದಿಯ ಉಕಾರಕ್ಕೆ ಇಕಾರಾದೇಶ. 'ಉನತ್ತಿ ಭೂಮಿಮ್' ಭೂಮಿಯನ್ನು ಒದ್ದೆ ಮಾಡುವುದು ಎಂದರ್ಥ. ಅಥವಾ ಇದಿ-ಪರಮೈಶ್ವರ್ಯೇ. ಧಾತು. ಇದಕ್ಕೆ ಉ ಪ್ರತ್ಯಯ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಜಲವೇ ಈಶ್ವರ. ಪ್ರಾಣಿ ಜೀವನವೇ ಜಲಾಧೀನವಾಗಿರುವುದರಿಂದ ಸರ್ವೋತ್ಕರ್ಷ ನೀರಿಗಿದೆ. ಜಲಪರ್ಯಾಯದಲ್ಲಿ ಉದಾಹರಣೆ ಹುಡುಕಬೇಕು.

(೬೫) **ಹೇಮ** ॥ ಹಿರಣ್ಯನಾಮಗಳಲ್ಲಿ ವ್ಯಾಖ್ಯಾತವಾಗಿವೆ. (೨-೧) ತಗ್ಗಾದ ಪ್ರದೇಶಕ್ಕೆ ಹೋಗುವುದು, ಪ್ರಾಣಿಗಳಿಂದ ಹೊಂದಲ್ಪಡುವುದು, ಮಳೆಗಾಲದಲ್ಲಿ ಹೆಚ್ಚಾಗುವುದು ಎಂದರ್ಥವಾಗುತ್ತದೆ. ಜಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೬೬) **ಸ್ವಃ** ॥ ಸು ಉಪಸರ್ಗಪೂರ್ವದಲ್ಲಿರುವಾಗ ಗತ್ಯರ್ಥಕ ಋಧಾತುವಿಗೆ 'ಅನ್ಯೇಭ್ಯೋಽಪಿ ದೃಶ್ಯಂತೇ' (ಪಾ. ಸೂ. ೩-೨-೭೫) ಸೂತ್ರದಿಂದ ವಿಚ್‌ಪ್ರತ್ಯಯ. ಇದರಲ್ಲಿ ಸರ್ವವೂ ಲೋಪವಾಗುತ್ತದೆ. ಧಾತುವಿನ ಋಕಾರಕ್ಕೆ ಗುಣ. ಯಣ್. ಸ್ವರ್ ರೇಫಾಂತ ಪದ. ಇಲ್ಲಿ ಣ್ಯಂತಾರ್ಥ ಹೇಳಬೇಕು. 'ಸ್ವರಾದಿನಿಪಾತಮವ್ಯಯಮ್' ಸೂತ್ರದಿಂದ ಇದಕ್ಕೆ ಅವ್ಯಯ ಸಂಜ್ಞೆ ಬರುವುದರಿಂದ ಇದರ ಮೇಲೆ ಬಂದ ಸುಬಾದಿ ವಿಭಕ್ತಿಗಳಿಗೆ ಲುಕ್ ಬರುತ್ತದೆ. 'ಖರವಸಾನಯೋರ್ವಿಸರ್ಜನೀಯಃ' ಸೂತ್ರದಿಂದ ರೇಫಕ್ಕೆ ವಿಸರ್ಗ. ಸ್ವಃ. ಅನಾವೃಷ್ಟಿ ಮುಂತಾದವುಗಳಿಂದ ಉಂಟಾದ ಕ್ಲೇಶವನ್ನು ಹೋಗಲಾಡಿಸುತ್ತದೆ ಎಂದರ್ಥ. ಅಥವಾ ಸೂತ್ರದಲ್ಲಿ ಅಪಿಶಬ್ದ ಹೇಳಿರುವುದು ಯಾವ ನಿಮಿತ್ತವಿಲ್ಲವಾದರೂ ಕಾರ್ಯ ಬರುತ್ತದೆಂದು ಸೂಚಿಸುವುದರಿಂದ ಕೇವಲ ಋಧಾತುವಿಗೆ ಸ್ವಾರ್ಥದಲ್ಲಿ ವಿಚ್ ಬಂದು ಅಭಿಮತ ರೂಪವಾಗುತ್ತದೆ. ದೋಷರಹಿತವಾದ ಗಮನವುಳ್ಳದ್ದು, ಚನ್ನಾಗಿ ತಗ್ಗಾದ ಪ್ರದೇಶಕ್ಕೆ ಹೋಗುವುದು, ಚನ್ನಾಗಿ ಪ್ರಾಣಿಗಳಿಂದ ಸೇವಿಸಲ್ಪಡುವುದು ಇತ್ಯಾದ್ಯರ್ಥಗಳು ತೋರುತ್ತವೆ. ಇದು ಅಕಾರಾಂತವಾಗಿಯೂ ಪ್ರಯೋಗದಲ್ಲಿ ತೋರಿವೆ. ಆಗ ಸು ಪೂರ್ವಕವಾದ ರಮ್ ಧಾತುವಿಗೆ ಬಹುಲಗ್ರಹಣದಿಂದ ಇಷ್ಟವಾದ ಪ್ರತ್ಯಯ ಬಂದು ರೂಪಸಿದ್ಧಿಯಾಗಿದೆಯೆಂದು ತಿಳಿಯಬೇಕು. ಕ್ರಮವಾಗಿ ಉದಾಹರಣೆ

"ಆವಿಃ ಸ್ವಃ ಕೃಣುತೇ ಗೂಹತೇ ಬುಸಮ್" (ಋ. ಸಂ. ೭-೭-೧೯-೪) ಸ್ವರ್ಃ ಸಿಷಾಸನ್ರಥಿರೋ ಗವಿಷ್ಟಿಷು [ಋ. ಸಂ. ೭-೩-೧-೨] "ಆಸು ಸ್ವಾಸು ವಂಸಗಃ" [ಋ. ಸಂ. ೮-೮-೨-೩]

(೮೭) ಸಗರ್ಾಃ ।। ಸೃಜ-ವಿಸರ್ಗೇ ಧಾತು. ಕರ್ಮಣಿಯಲ್ಲಿ ಘಞ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ, ' ಚಜೋಃ ಕು ಘಿಣ್ಯತೋಃ ' ಸೂತ್ರದಿಂದ ಕುತ್ವ. ಬಹುವಚನದಲ್ಲಿ ಜಸ್ ಬಂದಾಗ ಸಗರ್ಾಃ ಎಂದಾಗುತ್ತದೆ. ಮೇಘಗಳಿಂದ ಸೃಷ್ಟಿ ಹೊಂದುತ್ತದೆ ಎಂದರ್ಥ. ಅಥವಾ ಸರ್ಗವೆಂದರೆ ವೇಗ. ಅದು ಉಳ್ಳದ್ದು ಸರ್ಗವಾಗುತ್ತದೆ. ಅರ್ಶ ಆದಿಗಣದಲ್ಲಿ ಸೇರಿರುವುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ. ವೇಗವುಳ್ಳದ್ದು ನೀರು. ಉದಾಹರಣೆ—

**ಸಗರ್ಾಸೋ ವಾತಾಃ ಇವ ॥ [ಋ. ಸಂ. ೭-೭-೧೧-೪] ॥**

(೮೮) ಶಮ್ಬರಮ್ ।। ಸಮ್ ಉಪಸರ್ಗ ಪೂರ್ವಕವಾದ ವರಣಾರ್ಥಕ ವೃ ಧಾತುವಿಗೆ ' ಗ್ರಹವೃದೃನಿಶ್ಚಿಗಮಶ್ಚ (ಪಾ. ಸೂ. ೩-೩-೫೮) ಸೂತ್ರದಿಂದ ಅಪ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್‌ಗೆ ಗುಣ. ಸಂವರ ಎಂದಾಗುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಕರ್ತ್ರರ್ಥದಲ್ಲಿ ಅಚ್‌ಪ್ರತ್ಯಯ ಬಂದರೆ ಭೂಮಿಯನ್ನು ಮುಚ್ಚುವುದು ಎಂದರ್ಥವಾಗುತ್ತದೆ. ಅಥವಾ ಶಂಬ ಎಂದರೆ ವಜ್ರ. ಅದು ಉಳ್ಳವನೂ ಶಂಬ ಅಂದರೆ ಇಂದ್ರ. ಮತ್ವರ್ಥ ಪ್ರತ್ಯಯಕ್ಕೆ ಲುಕ್ ಬಂದಿದೆಯೆಂದು ಮೇಘನಾಮದಲ್ಲಿ ವ್ಯಾಖ್ಯಾತವಾಗಿದೆ. ಇದು ಉಪಪದವಾಗಿರುವಾಗ ದಾನಾರ್ಥಕ ರಾ ಧಾತುವಿಗೆ ' ಘಞರ್ಥೇ ಕವಿಧಾನಮ್ ಎಂಬುದು ಉಪಲಕ್ಷಣವಾದುದರಿಂದ ಕಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ ಧಾತುವಿನ ಆ ಕಾರಕ್ಕೆ ಲೋಪ. ಇಂದ್ರನಿಂದ ಕೊಡಲ್ಪಡುವುದು ಶಂಬರವಾಗುತ್ತದೆ. ಅಥವಾ ಇಲ್ಲಿ ಎರಡು ಪದಗಳಿವೆ. " ಶಂಚ ತತ್ ವರಂಚ ಶಂಬರಮ್ " ಕರ್ಮಧಾರಯ ಸಮಾಸ. ರೋಗಾದಿಗಳಿಗೆ ಶಮನವೂ, ಸಕಲಪದಾರ್ಥಗಳಲ್ಲಿ ಉತ್ಕೃಷ್ಟವೂ ಆಗಿದೆ ಎಂದರ್ಥ. ಶಂಬರ, ಸಂಬರ ಎರಡೂ ಜಲನಾಮಗಳಿವೆಯೆಂದು ಮಾಧವನ ಮತ. ಉದಾಹರಣೆ—

**' ಅತಿಥಿಗ್ವಾಯ ಶಂಬರಂ ಗಿರೇರುಗ್ರೋ ಅವಾಭರತ್ ' [ಋ. ಸಂ. ೨-೧-೧೯-೨] ॥**

[೮೯] ಅಭ್ವಮ್ ॥ ಆಙ್ ಉಪಸರ್ಗಪೂರ್ವಕವಾದ ಭೂಧಾತುವಿಗೆ ಬಹುಲಗ್ರಹಣದಿಂದ ಕ ಪ್ರತ್ಯಯ. 'ಛಂದಸ್ಯುಭಯಥಾ' ಎಂದುದರಿಂದ ಸುಪ್‌ಪರವಾದಾಗ 'ನಭೂಸುಧಿಯೋಃ' ಸೂತ್ರದಿಂದ ವಿಹಿತವಾದ ಯಣ್‌ನಿಷೇಧ ಬರುವುದಿಲ್ಲ. ಯಣ್. 'ಅಭ್ವನಾ ಭವತಿ' ಎಂದು ಮಾಧವನ ಮತ. ಭೂಮಿಯ ಸುತ್ತಲೂ ಇರುವುದು ಅಭ್ವಮ್. ಉದಾ—

**"ಸಜೇಮ್ಯಭ್ವಂ ಮರುತೋ ಜುನಂತಿ" [ಋ. ಸಂ. ೨-೪-೮-೩] ॥**

[೯೦] ವಪುಃ ॥ ಟು-ವಪ್-ಬೀಜಸಂತಾನೇ. ಧಾತು. ಇದಕ್ಕೆ 'ಅರ್ತಿಪೃವಪಿ—' (ಉ. ಸೂ. ೨-೧೧೦) ಸೂತ್ರದಿಂದ ಉಸಿಪ್ರತ್ಯಯ. ವಪುಸ್ ಸಾಂತಪದವಾಗುತ್ತದೆ. ಬೀಜಾವಾಪದಲ್ಲಿ ನೀರು ಸಾಧನವಾಗುವುದರಿಂದ ಇದರಿಂದ ಬೀಜವು ಬಿತ್ತಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

**"ಚರಿಷ್ಣ್ವರ್ಚಿರ್ವಪುಷಾಮಿದೇಕಮ್' [ಋ. ಸಂ. ೩-೫-೭-೪] ॥**

[೯೧] ಅಮ್ಬು ॥ ಅಂತರಿಕ್ಷನಾಮದಲ್ಲಿ ಅಂಬರಶಬ್ದ ನಿರ್ವಚನಮಾಡುವಾಗ ವ್ಯಾಖ್ಯಾತವಾಗಿದೆ. ಜಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೯೨) **ತೋಯಮ್** ॥ **ತವತೇರ್ವೃದ್ಧಿಕರ್ಮಣಃ** [ನಿರು–೯–೨೫]

ವೃದ್ಧ್ಯರ್ಥಕವಾದ ತುಧಾತುವಿಗೆ 'ಅಘ್ನ್ಯಾದಯಶ್ಚ' (ಉ. ೪-೧೧೮) ಸೂತ್ರದಿಂದ ಯತ್‌ಪ್ರತ್ಯಯ ಬಂದು ನಿಪಾತಿತವಾಗಿದೆ. ವರ್ಷಾಕಾಲದಲ್ಲಿ ಅಭಿವೃದ್ಧಿಯಾಗುವುದು ತುದ ಧಾತುವಿನಿಂದ ತೋಯ ಪದವಾಗಿದೆಯೆಂದು ಕ್ಷೀರ ಸ್ವಾಮಿಯ ಮತ. ಆಗ ನಿಪಾತದಿಂದಲೇ ದಕಾರ ಲೋಪಾದಿಗಳನ್ನು ಹೇಳಬೇಕು. ಅಥವಾ ಆವರಣಾರ್ಥದಲ್ಲಿ ತುದಿ ಎಂದು ಸೌತ್ರ ಧಾತು ಹೇಳಿದೆ. ಅದರಿಂದ ಈ ಪದವಾಗಿದೆ. ಭೂಮಿಯನ್ನು ಮುಚ್ಚುವುದು ಎಂದರ್ಥ. ಉದಾ—

**"ತೋಯೇನ ಜೀವಧ್ಯಃ ಸಸರ್ಜ ಭೂಮ್ಯಾಮ್"**

(೯೩) **ತೂಯಮ್** ॥ ಹಿಂದಿನಂತೆಯೇ ನಿಪಾತದಿಂದ ಉಕ್ತರೂಪಸಿದ್ಧಿಯಾಗಿದೆ. ಇಲ್ಲಿ ಛಾಂದಸವಾಗಿ ದೀರ್ಘ ಬಂದಿದೆ. ಜಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೯೪) **ಕೃಪೀಟಮ್** ॥ ಕೃಪೂ ಸಾಮರ್ಥ್ಯೇ ಧಾತು. 'ಕೃತೃಕೃಪಿಭ್ಯಃ ಕೀಟನ್' (ಉ. ೪–೧೮೦) ಸೂತ್ರ ದಿಂದ ಕೀಟನ್‌ಪ್ರತ್ಯಯ. ಕಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ. ಕೃಪಣ, ಕೃಪೀಟ, ಕರ್ಪೂರಾದಿ ಪದಗಳು ಕೃಪೂಧಾತುವಿನಿಂದಲೇ ನಿಷ್ಪನ್ನವಾಗಿವೆಯೆಂದು ಕಾಶಿಕಾವೃತ್ತಿಕಾರರು ಹೇಳಿರುತ್ತಾರೆ. 'ಉಣಾದಯೋ ಬಹುಲಮ್ ಎಂಬಲ್ಲಿ ಬಹುಲಗ್ರಹಣಮಾಡಿರುವುದರಿಂದ 'ಕೃಪೋ ರೋಲಃ' ಸೂತ್ರದಿಂದ ಲತ್ವ ಬರುವುದಿಲ್ಲ. 'ಕೃಪಣಾದೀನಾಂ ಪ್ರತಿಷೇಧೋ ವಕ್ತವ್ಯಃ" (ಪಾ. ಸೂ. ೮–೨–೧೮ ಭಾ) ಎಂದು ಭಾಷ್ಯದಲ್ಲಿ ಲತ್ವನಿಷೇಧವೇ ಹೇಳಿದೆ. ತಾಪ ನಿವಾರಣೆ ಮಾಡಲು ಸಮರ್ಥ ವಾಗುತ್ತದೆ ಎಂದರ್ಥ. ಉದಾಹರಣೆ—

**'ಯತ್ರಾ ಕೃಪೀಟಮನು ತದ್ದಹಂತಿ' (ಋ. ಸಂ. ೭-೭-೨೧-೨)** ॥

(೯೫) **ಶುಕ್ರಮ್** ॥ ದೀಪ್ತ್ಯರ್ಥಕವಾದ ಶುಚಧಾತುವಿಗೆ "ಋಜ್ರೇಂದ್ರಾಗ್ರವಜ್ರ—" (ಉ. ೨–೨೭) ಸೂತ್ರದಿಂದ ರ ಪ್ರತ್ಯಯ. ರೇತಸ್ಸಿಗೂ ಶುಕ್ರವೆಂದು ಹೆಸರು. ನೀರು ದೇವತೆಗಳ ರೇತಸ್ಸಾದುದರಿಂದ ಶುಕ್ರಪದ ವಾಚ್ಯ ವಾಗುತ್ತದೆ. ಉದಾಹರಣೆ—

**" ಶುಕ್ರಾಸು ತೇ ಶುಕ್ರಮಾಯುನಾವ್** ॥

(೯೬) **ತೇಜಃ** ॥ ಪಾಲನಾರ್ಥಕವಾದ ತೇಜೃಧಾತುವಿಗೆ ಅಸುನ್‌ಪ್ರತ್ಯಯ. ತೇಜಸ್ ಸಾಂತಪದವಾಗುತ್ತದೆ. ಬಾಯಾರಿಕೆ ಮುಂತಾದವುಗಳನ್ನು ಹೋಗಲಾಡಿಸುವುದರ ಮೂಲಕ ಪ್ರಾಣಿಗಳನ್ನು ಕಾಪಾಡುತ್ತದೆ ಎಂದರ್ಥ. ಅಥವಾ ನಿಶಾನಾರ್ಥಕವಾದ ತಿಜಧಾತುವಿಗೆ ಅಸುನ್ ಬಂದು ತೇಜಃ ಎಂದಾಗಿದೆ. ನೀರು ಅಗ್ನಿಜನ್ಯವಾದುದರಿಂದ ಕಾರ್ಯಕಾರಣಗಳಿಗೆ ಅಭೇದೋಪಚಾರದಿಂದ ನೀರೂ ತೇಜಃ ಶಬ್ದವಾಚ್ಯವಾಗುತ್ತದೆ. ಅಗ್ನಿಯಂತೆ ತೀಕ್ಷ್ಣವಾದುದು ಎಂದರ್ಥ. ಜಲಪರ್ಯಾಯ ದಲ್ಲಿ ನಿಗಮ ಹುಡುಕಬೇಕು.

(೯೭) **ಸ್ವಧಾ** ॥ ಸ್ವ ಶಬ್ದ ಉಪಪದವಾಗಿರುವಾಗ 'ಡು ಧಾಞ್–ಧಾರಣಪೋಷಣಯೋಃ' ಧಾತುವಿಗೆ "ಆತೋಽನುಪಸರ್ಗೇ ಕಃ" (ಪಾ.ಸೂ. ೩–೨–೩) ಸೂತ್ರದಿಂದ ಕಪ್ರತ್ಯಯ. ಸ್ವಂ ಅಂದರೆ ಆತ್ಮಾ. ಸರ್ವಾಂತರ್ಯಾಮಿಯಾದ ನಾರಾಯಣನನ್ನು ಧರಿಸುವುದು ಎಂದರ್ಥ. "ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ। ಅಯನಂ ತಸ್ಯ ತಾಃ

ಪೂರ್ವಂ ತೇನ ನಾರಾಯಣಃ ಸ್ಮೃತಃ" (ಮನು-೫-೧-ಶ್ಲೋ-೧೦) ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಅಥವಾ ಸ್ವಪದಕ್ಕೆ ಧನವೆಂದರ್ಥ. ಸಸ್ಯಾದ್ಯಭಿವೃದ್ಧಿಯನ್ನು ಮಾಡುವುದರ ಮೂಲಕ ಹಣವನ್ನು ಕೊಡುವುದು ನೀರು. ಇದಕ್ಕೂ ಜಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೯೮) ವಾರಿ ॥ ಆಚ್ಛಾದನಾರ್ಥಕ ವೃಞ್ ಧಾತುವಿಗೆ ಔಣಾದಿಕ ಇಞ್ ಪ್ರತ್ಯಯ. ಞಿತ್ತಾದುದರಿಂದ 'ಅಚೋ ಞ್ಣಿತಿ" ಸೂತ್ರದಿಂದ ವೃದ್ಧಿ (ಆರ್). ವಾರಿ. ಸೇತ್ವಾದಿಗಳಿಂದ ತಡೆಯಲ್ಪಡುವುದು, ಭೂಮಿಯನ್ನು ಸುತ್ತಿರುವುದು, ಎಂದರ್ಥ. ಉದಾಹರಣೆ—

**"ದೇವಂ ಬರ್ಹಿರ್ವಾರಿತೀನಾಮ್" [ಯ-ವಾ-ಸಂ-೨೧-೫೭] ॥**

**(೯೯) ಜಲಮ್** ॥ ಘಾತನಾರ್ಥಕವಾದ ಜಲಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಅತಿ ಶೀತವಾಗುವುದು ಎಂದರ್ಥ. ಅಥವಾ "ಜಾಯತೇ ಇತಿ ಜಃ" 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ವಿಹಿತವಾದ ಡಪ್ರತ್ಯಯವು ನಿರುಪಪದವಾದ ಜನ್‌ಧಾತುವಿಗೂ ಬರುತ್ತವೆ. ಟಿಲೋಪ (ಅನ್) ಪ್ರಾಣಿಯೆಂದರ್ಥ. ಜ ಉಪಪದವಾಗಿರುವಾಗ ಆದಾನಾರ್ಥಕ ಲಾಧಾತುವಿಗೆ ಕಪ್ರತ್ಯಯ. ಆಲೋಪ. ಪ್ರಾಣಿಗಳಿಂದ ಸ್ವೀಕರಿಸಲ್ಪಡುವುದು ಎಂದರ್ಥ. ಇದಕ್ಕೆ ಉದಾಹರಣೆ ಹುಡುಕಬೇಕು.

(೧೦೦) **ಜಲಾಷಮ್** ॥ ಜಶಬ್ದದ ವ್ಯುತ್ಪತ್ತಿ ಹಿಂದೆ ತೋರಿಸಿದೆ. ಜೈಃ ಲಷ್ಯತೇ ಇತಿ ಜಲಾಷಮ್. ಪ್ರಾಣಿಗಳಿಂದ ಬಯಸಲ್ಪಡುವುದು. ಲಷ-ಕಾಂತೌ. ಧಾತು. ಕಾಂತಿಯೆಂದರೆ ಇಚ್ಛಾ. ಇದಕ್ಕೆ ಕರ್ಮಣಿಯಲ್ಲಿ ಘಞ್‌ಪ್ರತ್ಯಯ. ಞಿತ್ತಾದುದರಿಂದ ಉಪಧಾವೃದ್ಧಿ. ಅಥವಾ ಜಲಾಷವೆಂದರೆ ಸುಖದ ಹೆಸರು. ನೀರು ಸುಖಕಾರಣವಾದುದರಿಂದ ಕಾರ್ಯಕಾರಣಗಳಿಗೆ ಅಭೇದಾಭಿಪ್ರಾಯದಿಂದ ನೀರೂ ಜಲಾಷವೆಂದು ಹೇಳಿದೆ, ಉದಾಹರಣೆ—

ರುದ್ರಂ ಜಲಾಷಭೇಷಜಮ್ (ಋ. ಸಂ. ೧-೩-೨೬-೪) ಜಲಾಷವೆಂದರೆ ನೀರೆಂದು ಮಾಧವರು ವ್ಯಾಖ್ಯಾನ ಮಾಡಿರುತ್ತಾರೆ.

(೧೦೧) **ಇದಮ್** ॥ ಇದಿ-ಪರಮೈಶ್ವರ್ಯೇ. ಧಾತು. ಇದಿತ್ತಾದುದರಿಂದ ನುಮಾಗಮ. "ಇಂದೇಃ ಕಮಿರ್ನಲೋಪಶ್ಚ" (ಉ. ೪-೧೫೨) ಸೂತ್ರದಿಂದ ಕಮಿಪ್ರತ್ಯಯ. ಇನ್ದ್+ಅಮ್ ಎಂದಿರುವಾಗ ನಲೋಪ. ಇದಮ್. ವೇದತೆಯಾದುದರಿಂದ ನೀರಿಗೆ ಪರಮೈಶ್ವರ್ಯವಿರುತ್ತದೆ. "ಇಣೋ ದಮುಕ್" ಎಂದು ಭೋಜದೇವನ ಸೂತ್ರ. ಇದಮ್. ಕಿತ್ತಾದುದರಿಂದ ಇಣ್‌ಧಾತುವಿಗೆ ಗುಣ ಬರುವುದಿಲ್ಲ. ನಿಮ್ನ ಪ್ರದೇಶಕ್ಕೆ ಹೋಗುವುದು, ಪ್ರಾಣಿಗಳಿಂದ ಹೊಂದಲ್ಪಡುವುದು ಎಂದರ್ಥ. ಅಥವಾ ದೀಪ್ತ್ಯರ್ಥಕ ಇನ್ಧ್ ಧಾತುವಿಗೆ ಕಮಿಪ್ರತ್ಯಯ. ಬಹುಲಗ್ರಹಣದಿಂದ ನಲೋಪ, ಧಕಾರಕ್ಕೆ ದಕಾರಾದೇಶ. ದೇವತೆಯಾದುದರಿಂದ ಪ್ರಕಾಶಿಸುವುದು ಎಂದರ್ಥ. ಉದಾಹರಣೆ—

**"ಸ್ವಸಾರೋ ಯಾ ಇದಂ ಯಯುಃ"** (ಋ-ಸಂ-೨-೫-೨೬+೫) **'ತಾ ಜಿಹ್ವಯಾ ಸದಮೇದಂ ಸುಮೇಧಾಃ'** (ಋ-ಸಂ-೫-೧-೧೦-೩) **"ರೂಪಾಮಿಮಾನೋ ಅಕೃಣೋದಿದಂತಃ"** (ಋ-ಸಂ-೪-೨-೧೯-೩)

ಹೀಗೆ ನೂರೊಂದು ನೀರಿನ ಹೆಸರುಗಳು

ಉದಕಂ ಕಸ್ಮಾದುನತ್ತೀತಿ ಸತಃ ॥

ಉದಕವೆಂಬ ಶಬ್ದವು ನೆನೆಯಿಸು ಎಂಬರ್ಥವಿರುವ **ಉನ್ದೀ ಕ್ಲೇದನೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ನೀರು ಹರಿಯುವ ಅಥವಾ ನೀರು ಇರುವ ಪ್ರದೇಶವು ಯಾವಾಗಲೂ ನೆನೆದಿರುವುದು (ಹಸಿಯಾಗಿರುವುದು)

---

## ಅಥ ನದೀನಾಮಾನಿ

---

(೧) ಅವನಯಃ (೨) ಯಹ್ವ್ಯಃ (೩) ಖಾಃ (೪) ಸೀರಾಃ (೫) ಸ್ರೋತ್ಯಾಃ (೬) ಏನ್ಯಃ (೭) ಧುನಯಃ (೮) ರುಜಾನಾಃ (೯) ವಕ್ಷಣಾಃ (೧೦) ಸ್ವಾದೋಅರ್ಣಾಃ (೧೧) ರೋಧಚಕ್ರಾಃ (೧೨) ಹರಿತಃ (೧೩) ಸರಿತಃ (೧೪) ಅಗ್ರುವಃ (೧೫) ಸಸ್ರುತಃ (೧೬) ನಮನ್ವಃ (೧೭) ವಧ್ವಃ (೧೮) ಹಿರಣ್ಯವರ್ಣಾಃ (೧೯) ರೋಹಿತಃ (೨೦) ಅರ್ಣಾಃ (೨೧) ಸಿಂಧವಃ (೨೨) ಕುಲ್ಯಾಃ (೨೩) ವರ್ಯ್ಯಃ (೨೪) ಉರ್ವ್ಯಃ (೨೫) ಇರಾವತ್ಯಃ (೨೬) ಪಾರ್ವತ್ಯಃ (೨೭) ಸ್ರವನ್ತ್ಯಃ (೨೮) ಊರ್ಜಸ್ವತ್ಯಃ (೨೯) ಪಯಸ್ವತಃ (೩೦) ಸರಸ್ವತ್ಯಃ (೩೧) ತರಸ್ವತ್ಯಃ (೩೨) ಹರಸ್ವತ್ಯಃ (೩೩) ರೋಧಸ್ವತ್ಯಃ (೩೪) ಭಾಸ್ವತ್ಯಃ (೩೫) ಅಜಿರಾಃ (೩೬) ಮಾತರಃ (೩೭) ನದ್ಯಃ ||

ಇತಿ ಸಪ್ತತ್ರಿಂಶನ್ನದೀನಾಮಾನಿ ||೧೩||

---

(೧) **ಅವನಯಃ** || ಪೃಥಿವೀನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧) ಶ್ರುತಿಯಲ್ಲಿ ಇದು ಯಾವಾಗಲೂ ಬಹುವಚನಾಂತವಾಗಿಯೇ ದೃಷ್ಟವಾಗಿದೆ. ತನ್ನ ನೀರಿನಿಂದ ಲೋಕವನ್ನು ರಕ್ಷಿಸುತ್ತವೆ. ತೀರಾದಿ ನಿರ್ಮಾಣದಿಂದ ಜನರಿಂದ ರಕ್ಷಿಸಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—

'ಅಸಿಂಚಂತೀರವನಯಃ ಸಮುದ್ರಮ್' (ಋ.ಸಂ.೪-೪-೩೧-೧) 'ಗಾ ನ ವ್ರಾಣಾ ಅವನೀರಮುಂಚತ್' **(ಋ. ಸಂ. ೧-೪-೨೯-೫)**

(೨) **ಯಹ್ವ್ಯಃ** || ಯಾ—ಪ್ರಾಪಣೇ ಧಾತು. 'ಶೇವಯಹ್ವಜಿಹ್ವಾಗ್ರೀವಾ—' (ಉ-೧-೧೫೨) ಸೂತ್ರದಿಂದ ಅಪ್ರತ್ಯಯ, ಧಾತುವಿಗೆ ಹ್ರಸ್ವ, ಹುಗಾಗಮ ಬಂದು ಯಹ್ವ ಎಂದು ನಿಪಾತಿತವಾಗಿದೆ. ಅದಂತವಾದುದರಿಂದ ಟಾಪ್ ಬರ ಬೇಕಾದರೆ ಬಹುಲಗ್ರಹಣದಿಂದ ಙೀಪ್ ಬಂದಿದೆ. ಯಹ್ವೀ. ಬಹುವಚನದಲ್ಲಿ ಯಹ್ವ್ಯಃ ಎಂದು ರೂಪವಾಗುತ್ತದೆ. ಆಯಾಯ ಪ್ರದೇಶವನ್ನು ಕುರಿತು ಹೋಗುತ್ತದೆ, ಪ್ರಾಣಿಗಳಿಂದ ಹೊಂದಲ್ಪಡುತ್ತದೆ ಎಂದರ್ಥ. ಅಥವಾ ಯಹ್ವ ಎಂದು ಮಹತ್ತಿನ

ಪರ್ಯಾಯವೆಂದು ಹೇಳಿರುವುದರಿಂದ ಮಹತ್ಪರಿಮಾಣ ಉಳ್ಳವುಗಳು ನದಿಗಳು. ಅಥವಾ ಎರಡು ಧಾತುಗಳಿಂದ ಈ ಪದವಾಗಿದೆ. ಯಾ-ಪ್ರಾಪಣೇ, ಹ್ವೇಞ್-ಸ್ಪರ್ಧಾಯಾಮ್ ಧಾತುಗಳು. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಅಭಿಮತ ರೂಪವಾಗುತ್ತದೆ. ಪ್ರಾಣಿಗಳಿಂದ ಹೊಂದಲ್ಪಡುವವುಗಳು, ಯಜ್ಞಾದಿಗಳಲ್ಲಿ ಕರೆಯಲ್ಪಡುವವುಗಳು. ಉದಾಹರಣೆ— **'ಸ್ವಯಮತ್ಕೈಃ ಪರಿದೀಯಂತಿ ಯಹ್ವೀಃ'** (ಋ. ಸಂ. ೨-೭-೨೪-೪) **'ಅವರ್ಧಯಂತ ಸುಭಗಂ ಸಪ್ತ ಯಹ್ವೀಃ** (ಋ. ಸಂ. ೨-೮-೧೩-೪)||

ಕೆಲವು ಕೋಶಗಳಲ್ಲಿ "ಯವ್ಯಾಃ" ಎಂದೂ ಪಠಿತವಾಗಿದೆ. ಆಗ "ಯು ಮಿಶ್ರಣಾಮಿಶ್ರಣಯೋಃ" ಧಾತುವಿನಿಂದ ಈ ರೂಪವಾಗಿದೆಯೆಂದು ತಿಳಿಯಬೇಕು. ಅಮಿಶ್ರಣ ಪದಕ್ಕೆ ಬೇರಾಗುವುದು ಎಂದರ್ಥ. ಸ್ಕಂದಸ್ವಾಮಿಯೂ ಪೃಥಗ್ಭಾವ ಎಂದೇ ಅರ್ಥವಿವರಣಮಾಡಿರುತ್ತಾನೆ. ವಿ ಮುಂತಾದ ಉಪಸರ್ಗವಿದ್ದಾಗ "ವಿಯುತಂ" ಇತ್ಯಾದಿ ಪದಗಳಲ್ಲಿ ಬೇರಾಗುವಿಕೆ ಅರ್ಥ ತೋರುವುದರಿಂದ ವಿ ಇತ್ಯಾದಿ ಉಪಸರ್ಗಗಳಿಗೆ ಆ ಅರ್ಥಹೇಳಬೇಕೆಂದು ಕೆಲವರ ಮತ. ಇದು ಸರಿಯಲ್ಲ. 'ಯುತಂ ಧನಮಸ್ಯ' 'ಯುತಂ ಭೋಜನಮಸ್ಯ' ಇತ್ಯಾದಿ ಸ್ಥಳಗಳಲ್ಲಿ ಕೇವಲ ಧಾತುವಿದ್ದರೂ ಪೃಥಗ್ಭಾವ ತೋರುತ್ತದೆ. ಈ ಧಾತುವಿಗೆ "ಆಸು ಯುವಪಿರಪಿ—" (ಪಾ. ಸೂ-೩-೧-೧೨೬) ಸೂತ್ರದಿಂದ ಣ್ಯತ್ ಪ್ರಾಪ್ತವಾದರೆ ಬಹುಲಗ್ರಹಣದಿಂದ "ಅಚೋ ಯತ್" (ಪಾ. ಸೂ. ೩-೧-೯೭) ಸೂತ್ರದಿಂದ ಯತ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಯೋ+ಯ ಎಂದಿರು ವಾಗ "ವಾಂತೋ ಯಿ ಪ್ರತ್ಯಯೇ" ಸೂತ್ರದಿಂದ ಅವಾದೇಶ: ಯವ್ಯಾ. ಸ್ತ್ರೀತ್ವದಲ್ಲಿ ಟಾಪ್. ಮಳೆಗಾಲದಲ್ಲಿ ಮೇಘದಿಂದ ಮಿಶ್ರಣ ಹೊಂದಿರುತ್ತವೆ. ಇತರ ಕಾಲದಲ್ಲಿ ಸೂರ್ಯರಶ್ಮಿಗಳಿಂದ ಸೆಳೆಯಲ್ಪಡುತ್ತಾ ಪೃಥಗ್ಭಾವ ಹೊಂದಿರುತ್ತವೆ ಎಂದರ್ಥ. ಅಥವಾ ಬಂಧನಾರ್ಥಕವಾದ ಯುಜ್ ಧಾತುವಿಗೆ ಅಘ್ನ್ಯಾದಿಗಣದಲ್ಲಿ ಸೇರಿರುವುದರಿಂದ ಯಕ್‌ಪ್ರತ್ಯಯ. ಇದರಲ್ಲಿ ಸೇತು ಮುಂತಾದವುಗಳು ಕಟ್ಟಲ್ಪಡುತ್ತವೆ. ಅಥವಾ ಯವಾದಿ ಧಾನ್ಯಗಳಿಗೆ ಹಿತವಾದವುಗಳು ನದಿಗಳು. ಆಗ "ಖಲಯವ-ಮಾಷತಿಲ ವೃಷಬ್ರಹ್ಮಣಶ್ಚ (ಪಾ. ಸೂ. ೫.೧.೭) ಸೂತ್ರದಿಂದ ಹಿತಾರ್ಥದಲ್ಲಿ ಯವಪದದ ಮೇಲೆ ಯತ್‌ಪ್ರತ್ಯಯ. ಯವ್ಯಾಃ. ಉದಾಹರಣೆ—**'ವಾರ್ಣಂ ತ್ವಾ ಯವ್ಯಾಭಿಃ'** (ಋ. ಸಂ. ೬-೭-೨-೨) ಇಲ್ಲಿ ಯವ್ಯಾ ಪದಕ್ಕೆ ಕಾಲುವೆಯೆಂದು ಮಾಧವರ ವ್ಯಾಖ್ಯಾನ. ಹೀಗೆ ಎರಡು ನಿರ್ವಚನಗಳಲ್ಲಿ ಯುಕ್ತವಾದುದನ್ನು ವಿದ್ವಾಂಸರು ಸ್ವೀಕರಿಸಬಹುದು.

(೩) ಖಾಃ || ಖನ-ಅವದಾರಣೇ. ಧಾತು. 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಲ್ಲಿ ದೃಶ್ಯತೇ ಪದದಿಂದ ಎಲ್ಲಾ ನಿಮಿತ್ತಗಳನ್ನುಲ್ಲಂಘಿಸಿ ಕಾರ್ಯಗಳು ಬರುತ್ತವೆಯೆಂದು ಸೂಚಿಸಿರುವುದರಿಂದ ಕೇವಲವಾದ ಖನಧಾತುವಿಗೂ ಡಪ್ರತ್ಯಯ ಬರುತ್ತದೆ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಬಹುವಚನದಲ್ಲಿ ಖಾಃ ಎಂದು ರೂಪ. ವೃತ್ರಹನನವಾದಮೇಲೆ ಇಂದ್ರನಿಂದ ಅಗೆಯಲ್ಪಟ್ಟವುಗಳು. ಈ ಅರ್ಥ ಶ್ರುತಿಯಲ್ಲಿ ಹೇಳಿದೆ.—**'ಅಪಾಂ ಬಿಲಮಪಿಹಿತಂ ಯದಾಸೀದ್ ವೃತ್ರಂ ಜಘನ್ವಾ ಅಪ ತದ್ವವಾರ'** (ಋ. ಸಂ. ೧-೨-೩೮-೧) ನದಿಗಳೂ ಹೇಳುತ್ತವೆ. **'ಇಂದ್ರೋ ಅಸ್ಮಾ ಅದದತ್ ವಜ್ರಬಾಹುಃ'** (ಋ. ಸಂ. ೩-೨-೧೩-೧). ಅಥವಾ ತಮ್ಮ ವೇಗದಿಂದ ಭೂಮಿಯನ್ನು ಅಗೆಯುತ್ತಾ ಹರಿಯುತ್ತವೆ ಎಂದರ್ಥ. ಅಥವಾ 'ಖೈ-ಸ್ಥೈರ್ಯೇ ಹಿಂಸಾಯಾಂ ಚ' ಧಾತು. 'ಘಞರ್ಥೇ ಕವಿಧಾನಮ್' ಎಂಬುದರಿಂದ ಕ ಪ್ರತ್ಯಯ. ಧಾತುವಿಗೆ ಆತ್ವ ಬಂದಾಗ ಅದಕ್ಕೆ ಲೋಪ. ಖ ಅದಂತದ ಮೇಲೆ ಸ್ತ್ರೀತ್ವದಲ್ಲಿ ಟಾಪ್. ವೃತ್ರಾಸುರನಿಂದ ತಡೆಯಲ್ಪಟ್ಟವುಗಳಾಗಿ ಸ್ಥಿರವಾಗಿರುತ್ತವೆ, ಅಥವಾ ಅವನಿಂದ ಹಿಂಸಿಸಲ್ಪಡುವವುಗಳು ಎಂದರ್ಥ. ಉದಾ—

**"ಸರಾಯಯಖ್ವಾಮುಪ ಸೃಜಾ ಗೃಣಾನಃ"** (ಋ. ಸಂ. ೪-೭-೮-೪) **"ಋಧ್ಯಾಮ ತೇ ವರುಣ ಖಾಮೃತಸ್ಯ"** (ಋ. ಸಂ. ೨-೭-೯-೫) ||

(೪) **ಸೀರಾಃ** ॥ ಷಿಞ್-ಬಂಧನೇ ಧಾತು. ಭ್ವಾದಿ, ಕ್ರ್ಯಾದಿಗಳಲ್ಲಿ ಹೇಳಿವೆ. 'ಶುಸಿಚಿಮೀನಾಂ ದೀರ್ಘಶ್ಚ' (ಉ. ೨-೨೪) ಸೂತ್ರದಿಂದ ರ ಪ್ರತ್ಯಯ. ಧಾತ್ವಾದಿಗೆ ಸತ್ವ, ದೀರ್ಘ. ಸೀರ. ಅದಂತವಾದುದರಿಂದ ಟಾಪ್. ಇವುಗಳಲ್ಲಿ ಸೇತು ಮುಂತಾದವುಗಳಿಂದ ಕಟ್ಟುತ್ತಾರೆ, ಶಿಲಾದಿಗಳಿಂದ ಸೋಪಾನಗಳನ್ನು ಕಟ್ಟುತ್ತಾರೆ ಎಂದರ್ಥ. 'ಸರಣಾತ್ ಸೀರಃ' ಹೋಗುವುದು ಸೀರ. ಸೃ-ಗತೌ-ಧಾತು. ಕೃಸ್ತ್ರ್ಯಾಶ್ಯಕಟಿಪಟಿ—" ಸೂತ್ರದಿಂದ ಈರನ್‌ಪ್ರತ್ಯಯ. ಬಹುಲಗ್ರಹಣದಿಂದ ಟಿಲೋಪ. ಟಾಪ್. ಸೀರಾ ನದೀವಾಚಕವಾದರೆ ಅಂತೋದಾತ್ತವಾಗುವುದೆಂದೂ, ನೇಗಿಲುವಾಚಕವಾದರೆ ಆದ್ಯುದಾತ್ತವಾಗುವುದೆಂದೂ ಮಾಧವರು ಹೇಳಿರುತ್ತಾರೆ. ಉದಾಹರಣೆ— **" ದ್ರವಿತ್ನ್ವಃ ಪೃಥಿವ್ಯಾಂ ಸೀರಾ ಅಧಿ "** (ಋ. ಸಂ. ೮-೧-೮-೪) **" ಸೀರಾ ಇಂದ್ರಃ ಸ್ರವಿತವೇ ಪೃಥಿವ್ಯಾ "** (ಋ. ಸಂ. ೩-೬-೨-೩) ॥ ಹಲವಾಚಿಗೆ ಉದಾಹರಣೆ—

**" ಸೀರಾ ಯುಂಜಂತಿ ಕವಯಃ "** (ಋ. ಸಂ. ೮-೫-೧೮-೪)

(೫) **ಸ್ರೋತ್ಯಾಃ** ॥ "ಸ್ರೋತಸಿ ಭವಾಃ" ಪ್ರವಾಹಗಳಿಂದ ಉಂಟಾದವುಗಳು ಎಂಬರ್ಥ ತೋರುವಾಗ 'ಸ್ರೋತಸೋ ವಿಭಾಷಾ ಡ್ಯಡ್ಡ್ಯೌ" (ಪಾ. ಸೂ. ೪-೪-೧೧೩) ಸೂತ್ರದಿಂದ ಡ್ಯಪ್ರತ್ಯಯ. ಸ್ರೋತಸ್ + ಯ ಎಂದಿರುವಾಗ ಡಿತ್ತಾದುದರಿಂದ ಟಿಲೋಪ. ಸ್ತ್ರೀತ್ವದಲ್ಲಿ ಟಾಪ್. ಸ್ರೋತ್ಯಾಃ. ಪ್ರವಾಹಗಳಿಂದ ನದೀಸ್ವರೂಪ ಉಂಟಾಗುತ್ತದೆ. ಉದಾ—

**'ನವತಿ ಸ್ರೋತ್ಯಾ ನವ ಸ್ರವಂತೀ'** (ಋ. ಸಂ. ೮-೫-೨೫-೩)

(೬) **ಏನ್ಯಃ**॥ ಗತ್ಯರ್ಥಕವಾದ ಇಣ್‌ಧಾತುವಿಗೆ 'ವೀ ಜ್ಯಾ ಜ್ವರಿಭ್ಯೋ ನಿಃ' (ಉ-೪-೪೮) ಸೂತ್ರದಿಂದ ನಿಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಏನಿ ಎಂಬ ಇಕಾರಾಂತ ಕೃದಂತಕ್ಕೆ 'ಕೃದಿಕಾರಾದಕ್ತಿನ' ವಾರ್ತಿಕದಿಂದ ಙೀಷ್. ಬಹುವಚನದಲ್ಲಿ ಏನ್ಯಃ ಎಂದಾಗುತ್ತದೆ. ಗಮನಸ್ವಭಾವವುಳ್ಳವುಗಳು, ಅಥವಾ ಪ್ರಾಣಿಗಳಿಂದ ಸೇವಿಸಲ್ಪಡುವವುಗಳು ಎಂದರ್ಥ. ಇದು ನದೀವಾಚಕವಾದರೆ ಅಂತೋದಾತ್ತವಾಗಿಯೂ ಇತರಾರ್ಥದಲ್ಲಿ ಆದ್ಯುದಾತ್ತವಾಗಿಯೂ ಇರುತ್ತದೆಂದು **ಮಾಧವನ ವ್ಯಾಖ್ಯಾನ.** ಕ್ರಮದಿಂದ ಉದಾಹರಣೆ—

**' ವಿ ಯದ್ ವರ್ತತ ಏನ್ಯಃ '**(ಋ. ಸಂ.೪-೩-೧೨-೨) **ಏನೀ ತ ಏತೇ ವೃಹತೋ ಅಭಿಶ್ರಿಯಾ** (ಋ. ಸಂ. ೨-೨-೧೩-೬)

(೭) **ಧುನಯಃ** ॥ ಕಂಪನಾರ್ಥಕವಾದ ಧೂಞ್‌ಧಾತುವಿಗೆ ಬಹುಲಗ್ರಹಣದಿಂದ "ಘೃಣಿಪೃಶ್ನಿ—" (ಉ.೪-೫೨) ಸೂತ್ರದಿಂದ ವಿಹಿತವಾದ ನಿಪ್ರತ್ಯಯ. ಕಿತ್ತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಪ್ವಾದಿಧಾತುಗಣದಲ್ಲಿ ಸೇರಿರುವುದರಿಂದ ಹ್ರಸ್ವ. ತನ್ನ ತೀರವೃಕ್ಷಾದಿಗಳನ್ನು ನಡುಗಿಸುತ್ತದೆ ಅಥವಾ ಗಮನಶೀಲವಾದುದರಿಂದ ತಾನೇ ಕಂಪಿಸುತ್ತದೆ ಎಂದರ್ಥ. ಉದಾಹರಣೆ—

**"ದಿವೇ ದಿವೇ ಧುನಯೋ ಯನ್ತ್ಯರ್ಥಮ್"** (ಋ. ಸಂ. ೨-೭-೧೨-೨)

(೮) **ರುಜಾನಾಃ** ॥ ರುಜೋ ಭಂಗೇ ಧಾತು. ಪರಸ್ಮೈಪದಿಯಾದರೂ ವ್ಯತ್ಯಯದಿಂದ ಲಟಿಗೆ ಶಾನಚ್. ಅದೂ ಪ್ರಥಮಾಸಮಾನಾಧಿಕರಣವಿರುವಾಗಲೇ ಬರುತ್ತದೆ. ಆಗಮಶಾಸ್ತ್ರ ಅನಿತ್ಯವಾದುದರಿಂದ ಅಥವಾ ವ್ಯತ್ಯಯದಿಂದ ಮುಮಾಗಮ ಬರುವುದಿಲ್ಲ. ದಡವನ್ನು ಭಂಗಗೊಳಿಸುವುದು, ಪ್ರವಾಹದಿಂದ ಬೀಳಿಸುವುದು ಎಂದರ್ಥ. ಉದಾಹರಣೆ—

**"ಸಂ ರುಜಾನಾಃ ಪಿಪಿಷ ಇಂದ್ರಶತ್ರುಃ"** (ಋ. ಸಂ. ೧-೨-೩೭-೧) ॥

(೯) ವಕ್ಷಣಾಃ ॥ ವಕ್ಷ–ರೋಷೇ. ಧಾತು. "ಕ್ರುಧಮಂಡಾರ್ಥೇಭ್ಯಶ್ಚ" ಸೂತ್ರದಿಂದ ಯುಚ್‌ಪ್ರತ್ಯಯ. 'ಯುವೋರನಾಕೌ' ಸೂತ್ರದಿಂದ ಅದಕ್ಕೆ ಅನಾದೇಶ. ವಕ್ಷ್+ಅನ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಪ್ರತ್ಯಯ ದಿಂದ ಚಿತ್ಸ್ವರವನ್ನು ಬಾಧಿಸಿ ಪ್ರತ್ಯಯ ಸ್ವರ (ಅಂತೋದಾತ್ತ) ಬರುತ್ತದೆ. ಅಥವಾ ಪ್ರಾಪಣಾರ್ಥಕವಾದ ವಹಧಾತುವಿಗೆ ಯುಚ್ ಬಹುಲಮ್ ಸೂತ್ರದಿಂದ ಯುಚ್‌ಪ್ರತ್ಯಯ ಷುಗಾಗಮ. ವಹ್+ಷ್+ಅನ. ಹಕಾರಕ್ಕೆ ಡತ್ವ, ಕತ್ವ. ಸ್ತ್ರೀತ್ವದಲ್ಲಿ ಟಾಪ್. ವಕ್ಷಣಾಃ. ವರ್ಷಾಕಾಲದಲ್ಲಿ ವೇಗದಿಂದ ಹೋಗುವುದರಿಂದ ಸಿಟ್ಟಿನಿಂದಲೋ ಎಂಬಂತೆ ಹೋಗುತ್ತವೆ, ತಾವಾಗಿ ಪ್ರವಹಿಸುತ್ತವೆ, ಎಂದರ್ಥ. ಮಾಧವನು ವಕ್ಷಧಾತುವಿಗೆ ಪ್ರಾಪ್ತ್ಯರ್ಥವನ್ನು ಹೇಳಿರುವುದರಿಂದ ಸಮುದ್ರಕ್ಕೆ ಹೋಗುತ್ತವೆ, ತಗ್ಗಾದ ಪ್ರದೇಶಕ್ಕೆ ಹೋಗುತ್ತವೆ, ಪ್ರಾಣಿಗಳಿಂದ ಹೊಂದಲ್ಪಡುತ್ತವೆ ಎಂದರ್ಥವಾಗುತ್ತದೆ. ಉದಾಹರಣೆ—

**" ಪ್ರ ವಕ್ಷಣಾ ಅಭಿಸತ್ ಪರ್ವತಾನಾಮ್ " (ಋ. ಸಂ. ೧–೨–೩೬–೧) " ಮಹಿಜ್ಯೋತಿರ್ನಿ ಹಿತಂ ವಕ್ಷಣಾಸು ' (ಋ. ಸಂ. ೩–೨–೩–೪) ॥**

(೧೦) **ಸ್ವಾದೋ ಅರ್ಣಾಃ** ॥ ಸ್ವಾದ ಭಕ್ಷಣೇ ಧಾತು. ಇದಕ್ಕೆ ಕತ್ರ್ಯರ್ಥದಲ್ಲಿ ಅಸುನ್ ಪ್ರತ್ಯಯ. ಸ್ವಾದಸ್ ಸಾಂತಪದವಾಗುತ್ತದೆ. ಅರ್ಣಾ ಎಂಬುದು ಅಕಾರಾಂತವಾಗಿ ಉದಕನಾಮದಲ್ಲಿ ನಿರ್ವಚನ ಮಾಡಿದೆ. ಸ್ವಾದಃ=ತಿನ್ನಲ್ಪಡುವ ಅರ್ಣಃ=ನೀರು ಯಾರಿಗೆ ಇದೆಯೋ ಅದು ಸ್ವಾದೋ ಅರ್ಣಾ ಆಗುತ್ತದೆ. ಭಕ್ಷಣಕ್ಕೆ ಬಾಧನ ಎಂಬರ್ಥ ಹೇಳಬೇಕು. ದಡವನ್ನು ಬಾಧಿಸುವ (ಕಡಿದುಹಾಕುವ) ನೀರುಳ್ಳವುಗಳು ನದಿಗಳು. ಅತಿಶಯವೇಗವುಳ್ಳ ನೀರುಳ್ಳವುಗಳೆಂದರ್ಥ. " ಪ್ರಕೃತ್ಯಾಂತಃ ಪಾದಮವ್ಯಪರೇ ' (ಪಾ. ಸೂ. ೬–೧–೧೧೫) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ' ಭಕ್ಷಿತ ಕೂಲೋದಕಾಃ ' ಎಂದು ಮಾಧವರ ವ್ಯಾಖ್ಯಾನ. ವೇಗವುಳ್ಳ ಜಲದಿಂದ ದಡವನ್ನು ನಾಶಮಾಡುವುವೆಂದರ್ಥ. ಉದಾ:—

**"ಧನ್ವನ್ನರ್ಣಸೋ ನದ್ಯ ಸ್ವಾದೋ ಅರ್ಣಾಃ " (ಋ. ಸಂ. ೪–೨–೨೬–೨) ॥**

(೧೧) **ರೋಧಚಕ್ರಾಃ** ॥ ರುಧಿರ್–ಆವರಣೇ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಅದನ್ನು ನಿಮಿತ್ತೀ ಕರಿಸಿ ಧಾತುವಿನ ಲಘೂಪಧೆಗೆ ಗುಣ. ರೋಧ ಎಂದಾಗುತ್ತದೆ. ತಡೆಯುವುದು ಎಂದರ್ಥ. ಡುಕೃಞ್–ಕರಣೇ ಧಾತು. ' ಘಞರ್ಥೇ ಕವಿಧಾನಮ್ ' ಸೂತ್ರದಿಂದ ಇದಕ್ಕೆ ಕ ಪ್ರತ್ಯಯ. 'ಕೃಞಾದೀನಾಂ ಕೇ ದ್ವೇ ಭವತಃ' ಸೂತ್ರದಿಂದ ಕಪರದಲ್ಲಿರು ವಾಗ ಧಾತುವಿಗೆ ದ್ವಿತ್ವಾದಿ. ಚಕೃ+ಅ ಯಣ. ಚಕ್ರ ಅಂದರೆ ಮಾಡುವುದು ಎಂದರ್ಥ. ರೋಧ ಚಕ್ರವುಳ್ಳದ್ದು ರೋಧಚಕ್ರಾ. ಪ್ರಾಣಿಗಳ ಸ್ವೈರ ಸಂಚಾರ ನಿರೋಧ ಕ್ರಿಯೆಯನ್ನು ನದಿಗಳು ಪ್ರವಾಹದಿಂದ ಮಾಡುತ್ತವೆ ಅಥವಾ ರೋಧಃ ಅಂದರೆ ದಡ. ಅದರ ಚಕ್ರ ಅಂದರೆ ಕೃತಿ ಉಳ್ಳವುಗಳು. 'ರೋಧಃ ಚಕ್ರಂ ಯಾಸಾಂ ತಾಃ' ರೋಧಸ್ ಶಬ್ದವಾದರೂ ಸಕಾರ ಲೋಪ ಛಾಂದಸವಾಗಿ ಬಂದಿದೆ. ತೀರ ನಿರ್ಮಾಣವುಳ್ಳವುಗಳು ತೀರಸಹಿತವಾದ ನದಿಗಳು. ಅಥವಾ ರುಧಧಾತುವಿಗೆ ಕರಣಾರ್ಥದಲ್ಲಿ ಘಞ್‌ಪ್ರತ್ಯಯ. ರುಧ್ಯತೇ ಅನೇನ ಇತಿ ರೋಧಃ. ಜಲಪ್ರವಾಹವು ಇದರಿಂದ ತಡೆಯಲ್ಪಡುತ್ತದೆ. ದಡ. ಆ ದಡದ ನಿರ್ಮಾಣವುಳ್ಳದ್ದು ರೋಧಚಕ್ರಾಃ=ನದಿಗಳು. ಉದಾಹರಣೆ— **' ಸಮುದ್ರಂ ನ ಸ್ರವತೋ ರೋಧಚಕ್ರಾಃ ' (ಋ. ಸಂ. ೨-೫-೧೩-೨)**

(೧೨) **ಹರಿತಃ** ॥ ಹರಣಾರ್ಥಕವಾದ ಹೃಞ್ ಧಾತುವಿಗೆ 'ಹೃಸೃರುಹಿಯುಷಿಭ್ಯ ಇತಿಃ' (ಉ–೧–೯೪) ಸೂತ್ರದಿಂದ ಇತಿಪ್ರತ್ಯಯ. ಇಕಾರ ಇತ್ತಾಗಿ ಲೋಪವಾಗುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ಹರಿತ್ ತಾಂತಪದವಾಗುತ್ತದೆ. ಬಹುವಚನದಲ್ಲಿ 'ಹರಿತಃ' ಎಂದು ರೂಪ. ಪ್ರಸಹ್ಯಕರಣವೆಂಬ ಅರ್ಥವೂ ಹೃಞ್ ಧಾತುವಿಗೆ

ಜುಹೋತ್ಯಾದಿಯಲ್ಲಿ ಹೇಳಿದೆ. ವೇಗದಿಂದ ಮರಗಿಡ ಮುಂತಾದವುಗಳನ್ನು ಅಪಹರಿಸುತ್ತದೆ, ಅಥವಾ ಬಲಾತ್ಕಾರದಿಂದ ಕಿತ್ತು ಒಯ್ಯುತ್ತದೆ ಎಂದರ್ಥ. ನದೀ ಪರ್ಯಾಯದಲ್ಲಿ ಹರಿತ್‌ಪದಕ್ಕೆ ನಿಗಮ ಹುಡುಕಬೇಕು.

(೧೩) **ಸರಿತಃ** ॥ ಗತ್ಯರ್ಥಕವಾದ ಸೃಧಾತುವಿಗೆ ಹಿಂದೆ ಹೇಳಿದ ಸೂತ್ರದಿಂದ (ಉ–೧–೯೪) ಇತಿಪ್ರತ್ಯಯ. "ಸಾರ್ವಧಾತುಕಾರ್ಧಧಾತುಕಯೋಃ" ಸೂತ್ರದಿಂದ ಗುಣ. ಬಹುವಚನದಲ್ಲಿ 'ಸರಿತಃ' ಎಂದು ರೂಪವಾಗುತ್ತದೆ. ಗಮನ ಸ್ವಭಾವವುಳ್ಳವುಗಳು, ಪ್ರಾಣಿಗಳಿಂದ ಹೊಂದಲ್ಪಡುವುಗಳು ಎಂದರ್ಥ. ಉದಾಹರಣೆ—'**ಸಮ್ಯಕ್‌ಸ್ರವಂತಿ ಸರಿತೋ ನ ಧೇನಾಃ** (ಋ. ಸಂ. ೩-೮-೧೧.೧) '**ಯೋ ವಾಂ ಸಮುದ್ರಾಂತಸರಿತಃ ಪಿಪರ್ತಿ**' (ಋ. ಸಂ. ೫ ೫–೧೭–೨)॥

(೧೪) **ಅಗ್ರುವಃ** ॥ ಅಹಿ-ಗತೌ–ಧಾತು. 'ಜತ್ರ್ವಾದಯಶ್ಚ' (ಉ-೪-೧೦೦) ಸೂತ್ರದಿಂದ ರು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿಪಾತದಿಂದಲೇ ಇದಿತ್ತ್ವಾದುದರಿಂದ ನುಮ್ ಬಂದಿದ್ದರೂ ಲೋಪವಾಗುತ್ತದೆ. ಬಹುವಚನದಲ್ಲಿ ಅಗ್ರು+ಆಸ್ ಎಂದಿರುವಾಗ ಯಣ್‌ಪ್ರಾಪ್ತವಾದರೆ 'ತನ್ವಾದೀನಾಂ ಛಂದಸಿ ಬಹುಲಮ್' ವಾರ್ತಿಕದಿಂದ ಉವಙಾದೇಶ. 'ಅಗ್ರುವೋ ಗಮನಾತ್ ನದ್ಯಃ' ಎಂದು ಮಾಧವರ ಭಾಷ್ಯ. ಆಯಾಯ ದೇಶಕ್ಕೆ ಹೋಗುವವುಗಳು ಎಂದರ್ಥ. ಉದಾ:—

**'ಸಮಗ್ರುವೋ ಸಮನೇಷ್ವಂಜನ್'** (ಋ. ಸಂ. ೫.೨-೧-೫)

(೧೫) **ನಭನ್ವಃ** ॥ ಣಭ ಧಾತುವು ಭ್ವಾದಿಯಲ್ಲಿ ಆತ್ಮನೇಪದಿಯಾಗಿಯೂ ದಿವಾದಿ, ಕ್ರ್ಯಾದಿಗಳಲ್ಲಿ ಪರಸ್ಮೈಪದಿಯಾಗಿಯೂ ಹಿಂಸಾರ್ಥದಲ್ಲಿ ಪಠಿತವಾಗಿದೆ. ಇದಕ್ಕೆ ಬಹುಲಗ್ರಹಣದಿಂದ 'ದಾಭಾಭ್ಯಾಂ ನುಃ' ಸೂತ್ರದಿಂದ ವಿಹಿತವಾದ ನುಪ್ರತ್ಯಯ ಬರುತ್ತದೆ. ಮಧ್ಯದಲ್ಲಿ ಅಕಾರ ಹೆಚ್ಚಾಗಿ ಬರುತ್ತದೆ. ಬಹುವಚನ ಜಸ್‌ಪರವಾದಾಗ "ಜಸಾದಿಸು ಛಂದಸಿ ವಾವಚನಮ್" ಎಂದುದರಿಂದ 'ಜಸಿ ಚ' ಸೂತ್ರದಿಂದ ಬರಬೇಕಾದ ಗುಣ ಬರುವುದಿಲ್ಲ. ಯಣ್ 'ನಭಂತೇ ಇತಿ ನಭನ್ವಃ' ದಡವೃಕ್ಷಾದಿಗಳನ್ನು ಹಿಂಸಿಸುವವುಗಳು ಎಂದರ್ಥ. ಇದು ಎರಡು ಲಿಂಗಗಳಲ್ಲಿಯೂ ದೃಷ್ಟವಾಗಿದೆ. ಉದಾಹರಣೆ—

**"ಪ್ರಾಗ್ರುವೋ ನಭನ್ವೋ೩ ನ ವಕ್ವಾಃ"** (ಋ. ಸಂ. ೩–೬–೨–೨) **"ಪ್ರ ಪರ್ವತಸ್ಯ ನಭನೂಂ ರಚುಚ್ಯವುಃ"** (ಋ. ಸಂ. ೪–೩–೨೪–೭) ॥

(೧೬) **ವಧ್ವಃ** ॥ ವಹ–ಪ್ರಾಪಣೇ. ಧಾತು. 'ವಹೋ ಧಶ್ಚ' (ಉ. ೧–೮೦) ಸೂತ್ರದಿಂದ ಊಪ್ರತ್ಯಯ, ಧಾತುವಿನ ಹಕಾರಕ್ಕೆ ಧಕಾರಾದೇಶ. ವಧೂ ರೂಪವಾಗುತ್ತದೆ. ಭೂಮಿಯಲ್ಲಿ ಹರಿಯುತ್ತವೆ, ಪ್ರವಾಹಗಳಿಂದ ಒಯ್ಯಲ್ಪಡುತ್ತವೆ. ಅಥವಾ ಸಮುದ್ರನ ಹೆಂಡತಿಯಾದುದರಿಂದ ನದಿಗಳು ವಧುಗಳಾಗುತ್ತವೆ. ನದಿಗಳ ಪತಿ ಸಮುದ್ರ ಎಂದು ಹೇಳಿದೆ. ನದೀ ಪರ್ಯಾಯವಾಗಿ ವಧೂ ಶಬ್ದಕ್ಕೆ ನಿಗಮ ಹುಡುಕಬೇಕು.

(೧೭) **ಹಿರಣ್ಯವರ್ಣಾಃ** ॥ ಹಿರಣ್ಯಶಬ್ದ ಹೇಮನಾಮದಲ್ಲಿ ವ್ಯಾಖ್ಯಾತವಾಗಿದೆ. ವರಣಾರ್ಥಕವಾದ ವೃಙ್ ಧಾತುವಿಗೆ 'ಋಜ್ರೇಂದ್ರಾಗ್ರ ವಜ್ರ—' (ಉ. ೨–೨೭) ಸೂತ್ರದಿಂದ ರನ್‌ಪ್ರತ್ಯಯ ಬಂದು ವರ್ಣ ಎಂದು ನಿಪಾತಿತವಾಗಿದೆ. ವರ್ಣ ಅಂದರೆ ಬಿಳಿಪು ಮುಂತಾದ ಬಣ್ಣಗಳು. ಹಿರಣ್ಯ=ಕಾಂತವಾದ, ಮನೋಹರವಾದ ವರ್ಣ=ಬಣ್ಣವು ಯಾಸಾಂ ತಾಃ ಯಾರಿಗೆ ಇದೆಯೋ ಅವು 'ಹಿರಣ್ಯವರ್ಣಗಳು' ಅಥವಾ ಧರ್ಮಾದಿಗಳಲ್ಲಿ ಹಿತಗಳಾಗಿಯೂ, ಮನಸ್ಸಿಗೆ ಸಂತೋಷವನ್ನುಂಟುಮಾಡುವವುಗಳೂ ಆಗಿವೆ, ಅಥವಾ ತಾಪಾದಿ ನಿವಾರಕಗಳು ಎಂದರ್ಥ. ಉದಾಹರಣೆ—

**"ಹಿರಣ್ಯವರ್ಣಾಃ ಪರಿಯಂತಿ ಯಹ್ವೀಃ"** [ಋ. ಸಂ. ೨-೭–೨೩–೪]

(೧೮) ರೋಹಿತಃ ॥ 'ರುಹ.ಬೀಜಜನ್ಮನಿಪ್ರಾದುರ್ಭಾವೇಚ' ಧಾತು 'ಹೃಸೃರುಹಿಯುಪಿಭ್ಯ ಇತಿಃ' (ಉ.೧-೯೪) ಸೂತ್ರದಿಂದ ಇತಿಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ರೋಹಿತ್ ತಾಂತಪದವಾಗುತ್ತದೆ. ಬಹುವಚನಾಂತರೂಪ. ಇವರಿಂದ, ಅಥವಾ ಇದರ ನೀರಿನಿಂದ ಬೀಜಾದಿಗಳು ಮೊಳಕೆ ಹೊಂದುತ್ತವೆ ಎಂದರ್ಥ. (ರೋಹಂತಿ ಆಭಿಃ ಬೀಜಾನಿ) ನದೀಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು.

(೧೯) ಸಸ್ರುತಃ ॥ ಸಮ್ ಉಪಸರ್ಗಪೂರ್ವಕವಾದ ಗತ್ಯರ್ಥಕ ಸ್ರುಧಾತುವಿಗೆ 'ಕ್ವಿಪ್ ಚ' (ಪಾ-ಸೂ-೩-೨-೭೬) ಸೂತ್ರದಿಂದ ಕ್ವಿಪ್‌ಪ್ರತ್ಯಯ. ಛಾಂದಸವಾಗಿ ಸಮಿನಮಕಾರಕ್ಕೆ ಲೋಪ. ಪಿತ್ತಾದ ಕೃತ್ತಾದುದರಿಂದ ಹ್ರಸ್ವಕ್ಕೆ ತುಗಾಗಮ. ಸಸ್ರುತ್. ಬಹುವಚನಾಂತರೂಪ. ಕ್ಷುದ್ರನದಿಗಳೂ ಮಹಾನದಿಗಳೂ ಪರಸ್ಪರ ಸೇರಿ ಹರಿಯುತ್ತವೆ. 'ಸಂಗತಾಃ ಸಸ್ರುತಃ'. ಅಥವಾ ಸ್ರವಣಾರ್ಥಕವಾದ ಸ್ರುಧಾತುವಿಗೆ ಸಂಪದಾದಿಗಣ ಪಠಿತವಾದುದರಿಂದ ಕ್ವಿಪ್. ಹಿಂದಿನಂತೆ ತುಗಾಗಮ. ಸ್ರುತಃ ಅಂದರೆ ಜಲಪ್ರವಾಹಗಳು. 'ಸ್ರುತಾ ಸಹ ವರ್ತಂತೇ ಇತಿ ಸಸ್ರುತಃ' ಪ್ರವಾಹದಿಂದ ಕೂಡಿ ಇರುವವುಗಳು 'ಸಹಸ್ಯ ಸಃ ಸಂಜ್ಞಾಯಾಮ್' (ಪಾ-ಸೂ-೬-೩-೭೮) ಸೂತ್ರದಿಂದ ಸಹ ಎಂಬುದಕ್ಕೆ ಸಾದೇಶ. 'ಸಸ್ರುತಃ ಸ್ರೋತಸಾ ಯುಕ್ತಾಃ' ಎಂದು ಮಾಧವರ ಭಾಷ್ಯ. ಉದಾಹರಣೆ—'ಋತಸ್ಯ ಧೇನಾ ಅಯನಂತ ಸಸ್ರುತಃ' (ಋ. ಸಂ. ೨-೨-೮-೧) ॥

(೨೦) ಅರ್ಣಾಃ ॥ "ಋಣ-ಗತೌ" ಧಾತು. ಪಚಾದಿಗಣಪಠಿತವಾದುದರಿಂದ 'ನಂದಿಗ್ರಹ—' ಸೂತ್ರದಿಂದ ಅಚ್‌ಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಸ್ತ್ರೀತ್ವದಲ್ಲಿ ಟಾಪ್. 'ಅರ್ಣಂತಿ ಇತಿ ಅರ್ಣಾಃ' ಗಮನ ಸ್ವಭಾವ ವುಳ್ಳವುಗಳು ಎಂದರ್ಥ. ಅಥವಾ ಅರ್ಣವೆಂಬ ಅಕಾರಾಂತಪದ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. ಅರ್ಣ ಉಳ್ಳದ್ದು ಅರ್ಣವಾಗುತ್ತವೆ. ಅರ್ಶ ಆದಿಗಣದಲ್ಲಿ ಸೇರಿರುವುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ. ನದಿಗಳು ಯಾವಾಗಲೂ ನೀರಿನಿಂದ ಕೂಡಿರುತ್ತವೆ. 'ಅರ್ತೇರರ್ಣಾಂಸ್ಯುಪಗಾಃ' ಎಂದು ಮಾಧವರ ಮತದಂತೆ ಇದು ಋಧಾತುವಿನಿಂದ ನಿಷ್ಪನ್ನವಾಗುತ್ತದೆ. ಗತ್ಯರ್ಥಕ ಋ ಧಾತುವಿಗೆ 'ಧಾಪ್ಯಾವಸ್ಯ—" ಸೂತ್ರದಿಂದ ನಪ್ರತ್ಯಯ. ಧಾತುವಿಗೆ ಗುಣ. ರಪರವಾಗಿ ಬಂದಾಗ ಪ್ರತ್ಯಯನಕಾರಕ್ಕೆ ಣತ್ವ. ಅಥವಾ ಪಚಾದಿಗಣಪಠಿತವಾದುದರಿಂದ ಅಚ್ ಬಂದರೆ ಧಾತುವಿಗೆ ಗುಣ. ಬಹುಲ ಗ್ರಹಣದಿಂದ ಅಸುನ್‌ಪರವಾದಾಗ ಹೇಳಿದ ನುಡಾಗಮ ಬರುತ್ತದೆ. ಗಮನಶೀಲವಾದವುಗಳು ಎಂದರ್ಥ. ಉದಾಹರಣೆ—

"ಋಣೋರಪೋ ಅನವದ್ಯಾರ್ಣಾಃ" [ಋ. ಸಂ. ೨-೪-೧೬-೨]

[೨೧] ಸಿಂಧವಃ॥ ಸ್ಯನ್ದೂ-ಪ್ರಸ್ರವಣೇ ಧಾತು. 'ಸ್ಯನ್ದೇಃ ಸಂಪ್ರಸಾರಣಂ ಧಶ್ಚ (ಉ. ೧-೧೧) ಸೂತ್ರದಿಂದ ಇದಕ್ಕೆ ಉಪ್ರತ್ಯಯ, ಧಾತು ದಕಾರಕ್ಕೆ ಧಕಾರಾದೇಶ. ಸಂಪ್ರಸಾರಣವೆಂದುದರಿಂದ ಯಕಾರಕ್ಕೆ ಇಕಾರ. ಪೂರ್ವರೂಪ ಸಿಂಧು ಉಕಾರಾಂತಪದವಾಗುತ್ತದೆ. ಬಹುವಚನಾಂತರೂಪ. ಹರಿಯುವ ಸ್ವಭಾವವುಳ್ಳವುಗಳು. ಉದಾಹರಣೆ—

'ಅಧೋ ಅಕ್ಷಾಃ ಸಿಂಧವಃ ಸ್ರೋತ್ಯಾಭಿಃ" (ಋ. ಸಂ. ೩-೨-೧೩-೨) 'ಯಸ್ಯ ತೇ ಸಪ್ತ ಸಿಂಧವಃ (ಋ. ಸಂ. ೬-೫-೭-೨) ॥

(೨೨) ಕುಲ್ಯಾಃ ॥ 'ಕುಲ-ಸಂಸ್ತ್ಯಾನೇ' ಧಾತು. 'ಕೋಲಂತಿ ಅಸ್ಮಿನ್ ಶಿಲಾದಯಃ ಇತಿ ಕುಲಂ ಪರ್ವತಃ' ಶಿಲಾದಿಗಳು ಸಂಘಾತರೂಪವಾಗಿ ಇರುವುದು ಪರ್ವತ ಕುಲವಾಗುತ್ತದೆ. ಕುಲದಲ್ಲಿ ಅಂದರೆ ಪ್ರಧಾನಪರ್ವದಲ್ಲಿ ಹುಟ್ಟುವವುಗಳು ಎಂಬ ಭವಾರ್ಥದಲ್ಲಿ 'ಭವೇ ಛಂದಸಿ' ಸೂತ್ರದಿಂದ ಯತ್‌ಪ್ರತ್ಯಯ. ಕುಲ+ಯ. 'ಯಸ್ಯೇತಿಚ' ಸೂತ್ರದಿಂದ ಅಕಾರ ಲೋಪ. ಬಹುವಚನದಲ್ಲಿ ಕುಲ್ಯಾಃ ಎಂದು ರೂಪವಾಗುತ್ತದೆ. ಮೇಘದ ಅಥವಾ ಪರ್ವತದ ಎತ್ತರವಾದ ಪ್ರದೇಶಕ್ಕೆ ಕುಲ

ವೆಂದು ಹೆಸರು. ಅಲ್ಲಿಂದ ಉಂಟಾಗುವುದು ಕುಲ್ಯ. " ಕುಲ್ಯಾಲ್ಪಾಕೃತ್ರಿಮಾ ಸರಿತ್ " ಎಂದು ಅಮರ. ಗದ್ದೆಗಳಿಗೆ ನೀರು ಹಾಯಿಸಲು ಮಾಡಿರುವ ಕಾಲುವೆ ಎಂದರ್ಥ. ಉದಾಹರಣೆ—

**'ಸ್ಯನ್ದತಾಂ ಕುಲ್ಯಾ ವಿಷಿತಾಃ ಪುರಸ್ತಾತ್' (ಋ. ಸಂ. ೪–೪–೨೮–೩) 'ಹ್ರದಂ ಕುಲ್ಯಾ ಇವಾಽಽಶತ' (ಋ. ಸಂ. ೩-೩-೯-೩)** ||

(೨೩) **ವರ್ಯಃ** || ವರಣ, ಸಂಭಕ್ತಿ ಈ ಎರಡು ಅರ್ಥಗಳನ್ನು ಹೇಳುವ ವೃ ಧಾತುವಿಗೆ 'ಅಚ ಇಃ' (ಉ–೪–೧೩೪) ಸೂತ್ರದಿಂದ ಇಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತು ಋಕಾರಕ್ಕೆ ಗುಣ. ವರಿ ಎಂಬ ಇಕಾರಾಂತದ ಮೇಲೆ ಸ್ತ್ರೀತ್ವದಲ್ಲಿ 'ಕೃದಿಕಾರಾತ್—' ಸೂತ್ರದಿಂದ ಙೀಷ್ ವರೀ. ಬಹುವಚನದಲ್ಲಿ 'ವರ್ಯಃ' ಎಂದಾಗುತ್ತದೆ. ಎಲ್ಲರಿಂದಲೂ ಪ್ರಾರ್ಥಿಸಲ್ಪಡುವುವು ಎಂದರ್ಥ. ನದೀಪರ್ಯಾಯದಲ್ಲಿ ನಿಗಮ ಹುಡುಕಬೇಕು.

ಈ ಹೆಸರನ್ನು ಮಾಧವನು "ಋತಾವರ್ಯಃ" ಎಂದು ಪಾಠಮಾಡಿರುತ್ತಾನೆ. ಋತವೆಂಬುದು ಉದಕನಾಮ ವ್ಯಾಖ್ಯಾತವಾಗಿದೆ. ಇದು ಉಳ್ಳದ್ದು ಎಂಬರ್ಥದಲ್ಲಿ "ಛಂದಸೀ ವನಿಪೌ" ಎಂಬುದರಿಂದ ವನಿಪ್‌ಪ್ರತ್ಯಯ. "ವನೋರಚ" ಸೂತ್ರದಿಂದ ಙೀಪ್, ನಕಾರಕ್ಕೆ ರೇಫಾದೇಶ. 'ಅನ್ಯೇಷಾಮಪಿ ದೃಶ್ಯತೇ' ಸೂತ್ರದಿಂದ ಋತವೆಂಬುದಕ್ಕೆ ದೀರ್ಘ. ಋತಾವರೀ. ಬಹುವಚನದಲ್ಲಿ 'ಋತಾವರ್ಯಃ' ಎಂದಾಗುತ್ತದೆ. ಸ್ಕಂದಸ್ವಾಮಿ ಮಾತ್ರ ಇದನ್ನು ನದೀನಾಮವೆಂದು ಅಂಗೀಕರಿಸುವುದಿಲ್ಲ. ವಿದ್ವಾಂಸರು ವಿಮರ್ಶಿಸಬೇಕು. ಉದಾಹರಣೆ—**'ಋತಾವರೀರುಪ ಮುಹೂರ್ತಮೇವೈಃ' (ಋ. ಸಂ. ೩-೨-೧೨-೫)**||

[೨೪] **ಉರ್ವ್ಯಃ** || ಆಚ್ಛಾದನಾರ್ಥಕ ಊರ್ಣುಞ್ ಧಾತುವಿನಿಂದಲೂ, ವೃಞ್‌ಧಾತುವಿನಿಂದಲೂ ನಿಷ್ಪನ್ನ ವಾಗಿದೆಯೆಂದು ಪೃಥಿವೀ ನಾಮದಲ್ಲಿ ವ್ಯಾಖ್ಯಾತವಾಗಿದೆ. [೧–೧೦] ದೊಡ್ಡದಾಗಿರುವವುಗಳು, ತಮ್ಮ ನೀರಿನಿಂದ ಭೂಮಿ ಯನ್ನು ಮುಚ್ಚುವವುಗಳು ಎಂದರ್ಥ. ಈ ಶಬ್ದಕ್ಕೂ, ಸಾಮಾನ್ಯ ಮುಂದಿನ ಪದಗಳಿಗೂ ನದೀ ಪರ್ಯಾಯವಾಗಿ ಉದಾಹರಣೆ ಇರುವ ನಿಗಮ ಹುಡುಕಬೇಕು.

(೨೫) **ಇರಾವತ್ಯಃ** || ಗತ್ಯರ್ಥಕವಾದ ಇಣ್‌ಧಾತುವಿಗೆ 'ಋಜ್ರೇಂದ್ರಾಗ್ರವಜ್ರ' ಸೂತ್ರದಿಂದ ರಪ್ರತ್ಯಯ ಗುಣಾ ಭಾವಾದಿಗಳು ಬಂದು ಇರಾ ಎಂದು ನಿಪಾತಿತವಾಗಿದೆ. ಬಲವೆಂದರ್ಥ. "ಇರಾ ಆಸಾಮಸ್ತಿ ಇತಿ ಇರಾವತ್ಯಃ" ಬಲವುಳ್ಳವುಗಳು ನದಿಗಳು. ಮತುಪ್‌ಪ್ರತ್ಯಯ. ಅಕಾರದ ಪರದಲ್ಲಿರುವುದರಿಂದ ಮಕಾರಕ್ಕೆ ವತ್ವ. 'ಉಗಿತಶ್ಚ' ಸೂತ್ರದಿಂದ ಙೀಪ್ ಬಂದಿದೆ.

(೨೬) **ಪಾರ್ವತ್ಯಃ** || ಮೇಘನಾಮದಲ್ಲಿ ಪರ್ವತಶಬ್ದ ವ್ಯಾಖ್ಯಾತವಾಗಿದೆ. (೧–೧೦–೯) 'ಪರ್ವತಸ್ಯ ಅಪತ್ಯಂ' ಮೇಘದಿಂದ ಉಂಟಾದದ್ದು ಎಂಬರ್ಥದಲ್ಲಿ 'ತಸ್ಯಾಪತ್ಯಮ್' [ಪಾ. ಸೂ. ೪–೧–೯೨] ಸೂತ್ರದಿಂದ ಅಣ್‌ಪ್ರತ್ಯಯ. ಅದು ಣಿತ್ತಾದುದರಿಂದ ಆದಿವೃದ್ಧಿ. 'ಟಡ್ಢಾಣಞ್—' ಸೂತ್ರದಿಂದ ಅಣಂತವಾದುದರಿಂದ ಙೀಪ್। ಬಹುವಚನದಲ್ಲಿ ಪಾರ್ವತ್ಯಃ ಎಂದಾಗುತ್ತದೆ.

(೨೭) **ಸ್ರವನ್ತ್ಯಃ**|| ಗತ್ಯರ್ಥಕವಾದ ಸ್ರುಧಾತುವಿಗೆ ಲಟ್ ಬಂದಾಗ ಅದಕ್ಕೆ ಶತೃ ಆದೇಶ. ಇದನ್ನು ನಿಮಿತ್ತೀಕರಿಸಿ ಗುಣ, ಅವಾದೇಶ. ಉಗಿತ್ತಾದುದರಿಂದ ನುಮಾಗಮ, ಸ್ತ್ರೀತ್ವದಲ್ಲಿ ಙೀಪ್. ಬಹುವಚನಾಂತರೂಪ. ಸದಾಗಮನ ಸ್ವಭಾವವುಳ್ಳವುಗಳು. ಉದಾಹರಣೆ—**' ನವತಿಂ ಸ್ರೋತ್ಯಾ ನ ವ ಚ ಸ್ರವಂತೀಃ '** (ಋ. ಸಂ. ೮–೫–೨೫–೩) ಇಲ್ಲಿ ಸ್ರೋತ್ಯಾ ಎಂಬುದು ನದಿಗೆ ವಿಶೇಷಣ. ಇಲ್ಲಿ ' ರೇವತ್ಯಃ ' ಎಂಬ ಪಾಠ ಕೆಲವು ಕೋಶಗಳಲ್ಲಿ ದೃಷ್ಟವಾಗಿದೆ. ಆಗ-ರಯಿ

ಎಂದರೆ ಉದಕನಾಮನೆಂದು ಹಿಂದೆ ಹೇಳಿದೆ. (೧೨–೭೩) ಅದು ಉಳ್ಳದ್ದು ನದಿಗಳು. 'ರಯೇರ್ಮತೌ ಬಹುಲಮ್' ವಾರ್ತಿಕದಿಂದ ಯಕಾರಕ್ಕೆ ಸಂಪ್ರಸಾರಣ. ಪೂರ್ವರೂಪ- ಗುಣ. ಮತುಪಿನ ಮಕಾರಕ್ಕೆ ವತ್ವ. ಸ್ತ್ರೀತ್ವದಲ್ಲಿ ಙೀಪ್. ರೇವತೀ. ಉದಾಹರಣೆ—

**"ಪತಿಃ ಸಿಂಧೂನಾಮಸಿ ರೇವತೀನಾಮ್"** [**ಋ. ಸಂ. ೮–೮–೩೮**] ಇಲ್ಲಿ ಸಿಂಧುಶಬ್ದ ವಿಶೇಷಣ.

(೨೮) **ಊರ್ಜಸ್ವತ್ಯಃ** ॥ ' ಊರ್ಜ–ಬಲಪ್ರಾಣನಯೋಃ ' ಧಾತು. ಇದಕ್ಕೆ ಅಸುನ್‌ಪ್ರತ್ಯಯ ಬಂದರೆ ಊರ್ಜಸ್ ಸಾಂತಪದವಾಗುತ್ತದೆ. ಬಲವೆಂದರ್ಥ. ಊರ್ಜಸ್ ಉಳ್ಳವುಗಳು ನದಿಗಳು. ಮತ್ವರ್ಥದಲ್ಲಿ ಅಸಂತವಾದುದರಿಂದ ವಿನಿಪ್ರತ್ಯಯಪ್ರಾಪ್ತವಾದರೂ 'ಬಹುಲಂ ಛಂದಸಿ' ಸೂತ್ರದಿಂದ ಅದನ್ನು ಬಾಧಿಸಿ ಮತುಪ್‌ಪ್ರತ್ಯಯವೇ ಬರುತ್ತದೆ. ಅದುಪಧೆಯು ಪರದಲ್ಲಿರುವುದರಿಂದ ಮಕಾರಕ್ಕೆ ವಕಾರಾದೇಶ. 'ತಸೌ ಮತ್ವರ್ಥೇ' ಸೂತ್ರದಿಂದ ಭಸಂಜ್ಞಾ ಬರುವುದರಿಂದ ರುತ್ವಾದಿಗಳು ಬರುವುದಿಲ್ಲ. ಸ್ತ್ರೀತ್ವದಲ್ಲಿ ಙೀಪ್. ಅತಿಶಯ ಬಲವುಳ್ಳ ನದಿಗಳು ಸ್ಥಿರವಾದ ವೃಕ್ಷಾದಿಗಳನ್ನೂ ಕೆಡದು ಹಾಕುತ್ತವೆ. ಶ್ರುತಿಯಲ್ಲಿಯೂ ಇದು ಹೇಳಿದೆ—"ಓಜಸಾ ವಾ ಏತಾ ವಹಂತೀರಿವ್ರೋಹತೀರಿವ ಆಕೂಲಂತೀರಿವ ಧಾವಂತೀರಿವ." ॥

(೨೯) **ಪಯಸ್ವತ್ಯಃ** ॥ ಪಾ–ಪಾನೇ–ಧಾತು. 'ಪಿಬತೇರೀ ಚಾಸುನ್' ಸೂತ್ರದಿಂದ ಅಸುನ್‌ಪ್ರತ್ಯಯ, ಆಕಾರಕ್ಕೆ ಈಕಾರಾದೇಶ. ಪೀ+ಅಸ್ ಎಂದಿರುವಾಗ ಗುಣ, ಅಯಾದೇಶ. ಪಯಸ್ ಸಾಂತಪದವಾಗುತ್ತದೆ. ಅಥವಾ ವೃದ್ಧ್ಯರ್ಥಕ ಪ್ಯಾಯೀಧಾತುವಿಗೆ ಅಸುನ್. ಬಹುಲಗ್ರಹಣದಿಂದ 'ಪ್ಯಾಯಃ ಪೀ' ಸೂತ್ರದಿಂದ ವಿಹಿತವಾದ ಪೀಭಾವ ಬರುತ್ತದೆ. ಪಯಸ್ ಶಬ್ದದ ಮೇಲೆ ಹಿಂದಿನಂತೆ ಮತುಬಾದಿಪ್ರತ್ಯಯಗಳು ಬರುತ್ತವೆ. ಇದರಿಂದ ಕುಡಿದದ್ದರಿಂದ ಪ್ರಾಣಿಗಳು ಅಭಿವೃದ್ಧವಾಗುತ್ತವೆ, ನೀರು ಪಯಃ. ಅದು ಉಳ್ಳದ್ದು ನದಿಗಳು.

(೩೦) **ಸರಸ್ವತ್ಯಃ** ॥ ಸರಃ ಎಂಬುದು ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧೨–೩೮) ಸರಸ್ಸುಳ್ಳವುಗಳು ನದಿಗಳು. ಹಿಂದಿನಂತೆ ಮತುಬಾದಿಗಳು ಬರುತ್ತವೆ.

(೩೧) **ತರಸ್ವತ್ಯಃ** ॥ 'ತೄ–ಪ್ಲವನತರಣಯೋಃ' ಧಾತು. ಅಸುನ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ತರಸ್ ಸಾಂತಪದವಾಗುತ್ತದೆ. ಇದರಿಂದ ಆಪತ್ತನ್ನು ದಾಟುತ್ತಾರೆ ಎಂದರ್ಥ. ಬಲವಾಗುತ್ತದೆ. ಬಲ, ವೇಗವುಳ್ಳವುಗಳು ನದಿಗಳು. ಮತುಬಾದಿ.

(೩೨) **ಹರಸ್ವತ್ಯಃ** ॥ ಹರಣಾರ್ಥಕವಾದ ಹೃಞ್‌ಧಾತುವಿಗೆ ಅಸುನ್‌ಪ್ರತ್ಯಯ. ಧಾತು ಋಕಾರಕ್ಕೆ ಗುಣ. 'ಉದಕಂ ಹರ ಉಚ್ಯತೇ' ಎಂದು ನಿರುಕ್ತ. ಹರಃ ಎಂದರೆ ನೀರು. ಎಲ್ಲರಿಂದಲೂ ಸ್ವೀಕರಿಸಲ್ಪಡುವುದು, ಎಂದರ್ಥ. ಇದು ಉಳ್ಳದ್ದು ನದಿಗಳು.

(೩೩) **ರೋಧಸ್ವತ್ಯಃ** ॥ 'ರೋಧಃ' ದಡಃಎಂದು ಹಿಂದೆ ಹೇಳಿದೆ. ದಡದಿಂದ ಕೂಡಿರುವುದು ನದೀ. ಮತುಬಾದಿ. ಉದಾಹರಣೆ—**'ಚಿತ್ರಾ ರೋಧಸ್ವತೀ ರನು'** [ಋ. ಸಂ. ೧–೩–೧೭–೧]

[೩೪] **ಭಾಸ್ವತ್ಯಃ** ॥ ದೀಪ್ತ್ಯರ್ಥಕವಾದ ಭಾಧಾತುವಿಗೆ ಅಸುನ್‌ಪ್ರತ್ಯಯ. ಭಾಃ ಕಾಂತಿ. ಅದು ಉಳ್ಳದ್ದು ನದೀ- ಕಾಂತಿಯುಳ್ಳವುಗಳು ನದಿಗಳು. ಮತುಬಾದಿ.

(೩೫) ಅಜಿರಾಃ ‖ ಅಜಿ–ಗತಿಕ್ಷೇಪಣಯೋಃ. ಧಾತು. "ಅಜಿರಶಿಶಿರ ಶಿಥಿಲ ಸ್ಥಿರ ಸ್ಫಿರ ಸ್ಥವಿರ ಖದಿರಾಃ" [ಉ-೧-೫೩] ಸೂತ್ರದಿಂದ ಕಿರಚ್‌ಪ್ರತ್ಯಯ. ಇದು ಪರವಾದಾಗ ನಿಪಾತವಮಾಡಿರುವುದರಿಂದ ಧಾತುವಿಗೆ ವೀಭಾವ ಬರುವುದಿಲ್ಲ. ಸ್ತ್ರೀತ್ವದಲ್ಲಿ ಟಾಪ್. ಹೋಗುವ ಸ್ವಭಾವವುಳ್ಳವುಗಳು, ಇವುಗಳಲ್ಲಿ ದೋಣಿ ಮುಂತಾದವುಗಳು ತಳ್ಳಲ್ಪಡುತ್ತವೆ ಎಂದರ್ಥವಾಗುತ್ತದೆ. ಅಥವಾ ಅಜಿರವೆಂದು ಕ್ಷಿಪ್ರನಾಮವಾಗಿ ನಿಘಂಟುವಿನಲ್ಲಿ ಹೇಳಿರುವುದರಿಂದ ವೇಗ ಉಳ್ಳವುಗಳೂ ಅಜಿರವಾಗುತ್ತವೆ. ವೇಗದಿಂದ ಹೋಗುವವುಗಳು ಎಂದರ್ಥ.

(೩೬) ಮಾತರಃ ‖ ಮಾಜ್ ಮಾನೇ ಧಾತು. 'ಶಂಸಿಕ್ಷದಾದಿಭ್ಯಃ ಸಂಜ್ಞಾಯಾಮ್‌ತೃನ್‌ತೃಚೌ' ಎಂಬ ವಚನದಿಂದ ನದೀಸಂಜ್ಞಾ ತೋರುವುದರಿಂದ ತೃನ್‌ತೃಚ್‌ಪ್ರತ್ಯಯಗಳು ಬರುತ್ತವೆ. 'ನ ಷಟ್‌ಸ್ವಸ್ರಾದಿಭ್ಯಃ' ಸೂತ್ರದಿಂದ ಙೀಪ್ ನಿಷೇಧ ಬರುತ್ತದೆ. ಬ್ರಹ್ಮನಿಂದ ನಿರ್ಮಿತವಾದದ್ದು, ಇದರಲ್ಲಿ ನೀರು ಹಿಡಿಸುತ್ತದೆ, ತಾಯಿಯಂತೆ ಲೋಕರಕ್ಷಕವಾದದ್ದು ಎಂದರ್ಥ. ನದೀಮಾತೃಕವೆಂದು ನದಿಗಳಿಂದಲೇ ಸಸ್ಯಾದಿಗಳಾಗುವ ಪ್ರದೇಶಕ್ಕೆ ಪ್ರಸಿದ್ಧಿ ಇದೆ. ಉದಾಹರಣೆ—

**"ಜಜ್ಞಾನಂ ಸಪ್ತಮಾತರಃ" [ಋ. ಸಂ. ೭–೫–೪–೪] "ದ್ವಿತೀಯಮಾ ಸಪ್ತಶಿವಾಸು ಮಾತೃಷು" [ಋ. ಸಂ. ೨–೨–೮–೨] ‖**

[೩೭] **ನದ್ಯಃ** ‖ ಣದ–ಅವ್ಯಕ್ತೇ ಶಬ್ದೇ. ಧಾತು. 'ಣೋ ನಃ' ಆದಿಗೆ ನತ್ವ. ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. 'ನದಟ್' ಎಂದು ಭಾಷ್ಯದಲ್ಲಿ ಟಿತ್ತಾಗಿ ಪಠಿತವಾದುದರಿಂದ ಸ್ತ್ರೀತ್ವದಲ್ಲಿ ಟಿತ್ತಾದುದರಿಂದ 'ಟಿಡ್ಢಾಣಞ್—' ಸೂತ್ರದಿಂದ ಙೀಪ್. ನದಂತಿ ಇತಿ|ನದ್ಯಃ. ಶಬ್ದಮಾಡುತ್ತಾ ಹರಿಯುತ್ತವೆ ಎಂದರ್ಥ. ಉದಾಹರಣೆ—

**"ಅರ್ಣವೋ ನ ನದ್ಯಃ ಸಮುದ್ರಿಯಃ" (ಋ–ಸಂ–೧–೪–೧೯–೨) "ಪ್ರತೀಪಂ ಶಾಪಂ ನದ್ಯೋ ವಹನ್ತಿ" (ಋ. ಸಂ. ೭–೭–೨೦–೪) ‖**

ಹೀಗೆ ಮೂವತ್ತೇಳು ನದೀನಾಮಗಳು

———

ಈ ಮೂವತ್ತೇಳೂ ನದೀನಾಮಗಳು ಎಂದರೆ ನದೀ ಎಂಬರ್ಥವನ್ನು ಸೂಚಿಸುವ ಶಬ್ದಗಳು.

ನದ್ಯಃ ಕಸ್ಮಾನ್ನದನಾ ಇಮಾ ಭವಂತಿ ಶಬ್ದವತ್ಯಃ ‖

**ನದೀ** ಎಂಬ ಶಬ್ದವು ಶಬ್ದಮಾಡುತ್ತ (ನದನಾ) ಅಥವಾ ಭೋರ್ಗರೆಯುತ್ತಾ ಹರಿಯುವುದರಿಂದ ನದನ ಶಬ್ದದಂತೆ ಇದಕ್ಕೆ ನದೀ ಎಂದು ಹೆಸರು ಅನ್ವರ್ಥನಾಮವಾಗಿದೆ.

ಬಹುಲಮಾಸಾಂ ನೈಘಂಟುಕಂ ವೃತ್ತಮಾಶ್ಚರ್ಯಮಿವ
ಪ್ರಾಧಾನ್ಯೇನ ತತ್ರೇತಿಹಾಸಮಾಚಕ್ಷತೇ। ವಿಶ್ವಾಮಿತ್ರ ಋಷಿಃ
ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ। ವಿಶ್ವಾಮಿತ್ರಃ
ಸರ್ವಮಿತ್ರಃ। ಸರ್ವಂ ಸಂಸೃತಂ। ಸುದಾಃ ಕಲ್ಯಾಣದಾನಃ।

ಪೈಜವನಃ ಪಿಜವನಸ್ಯ। ಪುತ್ರಃ ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀಭಾವಗತಿರ್ವಾ। ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ। ಅನುಯಯುರಿತರೇ। ಸ ವಿಶ್ವಾಮಿತ್ರೋ ನದೀಸ್ತುಷ್ಟಾವ। ಗಾಧಾ ಭವತ ಇತಿ। ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿವದುಪರಿಷ್ಟಾತ್ ವ್ಯಾಖ್ಯಾಸ್ಯಾಮಃ ॥

ಈ ನದಿಗಳ ಕಾರ್ಯಗಳು ಯಾವಾಗಲೂ ಸಾಮಾನ್ಯವಾಗಿರುವವು ಎಂದರೆ ಏನೂ ಹೆಚ್ಚು ಕಡಿಮೆಯಿಲ್ಲದೆ ಒಂದೇ ಸಮನಾಗಿ ನಡೆದು ಬರುತ್ತಿರುವವು. ಈ ನದಿಗಳ ಕಾರ್ಯಾದಿಗಳಲ್ಲಿ ಆಶ್ಚರ್ಯಕರವಾದ ವಿಷಯಗಳು ಯಾವವೂ ಸಾಮಾನ್ಯವಾಗಿರುವುದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಅಂತಹ ವಿದ್ಯಮಾನಗಳುಂಟು. ಅದನ್ನು ವಿಶದಪಡಿಸುವುದಕ್ಕಾಗಿ ಇಲ್ಲಿ ಒಂದು ಪೂರ್ವೇತಿಹಾಸವನ್ನು ಹೇಳಿದ್ದಾರೆ—

ಪೂರ್ವದಲ್ಲಿ ವಿಶ್ವಾಮಿತ್ರನೆಂಬ ಓರ್ವ ಋಷಿಯಿದ್ದನು. ಆ ಋಷಿಯು ಪೈಜವನನೆಂಬ ರಾಜನ ಪುತ್ರನಾದ ಸುದಾಃ ಎಂಬುವನಿಗೆ ಪುರೋಹಿತನಾಗಿದ್ದನು. ವಿಶ್ವಾಮಿತ್ರನೆಂದರೆ ವಿಶ್ವ–ಸಕಲರಿಗೂ, ಮಿತ್ರಃ–ಸ್ನೇಹಿತನೆಂದರ್ಥವು. ಅಥವಾ ಸರ್ವರೂ ವಿಶ್ವಾಮಿತ್ರನಿಗೆ ಸ್ನೇಹಿತರು. **ಸುದಾಃ** ಎಂದರೆ ಕಲ್ಯಾಣ ಅಥವಾ ಶ್ರೇಷ್ಠವಾದ ದಾನಗಳನ್ನು ಮಾಡತಕ್ಕವನು ಎಂದರ್ಥವು. ಪಿಜವನ ಎಂಬುವನ ಪುತ್ರನಿಗೆ ಪೈಜವನನೆಂದು ಹೆಸರು. ಪಿಜವನ ಎಂಬ ಹೆಸರಿಗೆ ಅರ್ಥವೇನು ಎಂದರೆ ಸ್ಪರ್ಧೆಯಿಂದ ವೇಗವಾಗಿ ಓಡುವವನು ಅಥವಾ ಇತರರಿಂದ ಅನುಸರಿಸಲಾಗದ ವೇಗವುಳ್ಳವನು ಎಂದರ್ಥವು. ಒಂದಾನೊಂದು ಕಾಲದಲ್ಲಿ ಈ ವಿಶ್ವಾಮಿತ್ರಋಷಿಯು ಸುದಾಃ ಎಂಬ ರಾಜನಿಂದ ದಾನವಾಗಿ ಕೊಟ್ಟ ಬಹಳ ದ್ರವ್ಯವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ವಿಪಾಟ್ ಮತ್ತು ಶುತುದ್ರೀ (the rivers Beas and Sutlej) ನದಿಗಳ ಸಂಗಮ ಸ್ಥಾನಕ್ಕೆ ಬಂದನು. ಇವನ ಬಳಿ ದ್ರವ್ಯವಿರುವುದನ್ನು ತಿಳಿದ ಅನೇಕ ದುಷ್ಟರು ಎಂದರೆ ಕಳ್ಳರು ಇವನನ್ನು ಹಿಂಬಾಲಿಸಿ ಬರುತ್ತಿದ್ದರು. ಇದನ್ನು ತಿಳಿದ ಋಷಿಯು ನದಿಯನ್ನು ದಾಟಿ ಬೇಗನೆ ತನ್ನಾಶ್ರಮಕ್ಕೆ ಹೋಗಲು ಪ್ರಯತ್ನಿಸಿದನು. ಆದರೆ ಆ ನದಿಗಳು ತುಂಬುಪ್ರವಾಹದಿಂದ ಹರಿಯುತ್ತಿದ್ದುದರಿಂದ ಬೇಗನೆ ದಾಟಲು ಸಾಧ್ಯವಾಗಲಿಲ್ಲ. ಆದ್ದರಿಂದ ವಿಶ್ವಾಮಿತ್ರಋಷಿಯು ವಿಪಾಟ್ ಮತ್ತು ಶುತುದ್ರಿ ನದಿಗಳನ್ನು ಸ್ತೋತ್ರಮಾಡಿದನು. ಏನೆಂದು ಮಾಡಿದನು ಎಂದರೆ **ಗಾಧಾ ಭವತ** ಎಲೈ ನದಿಗಳೇ ನೀವು ನಿಮ್ಮ ಉದಕಗಳನ್ನು ಕಡಿಮೆಮಾಡಿಕೊಂಡು ನಾನು ದಾಟಲು ಅನುಕೂಲವಾಗುವಂತೆ ಮಾಡಿರಿ ಎಂದು. ಇಲ್ಲಿ ಎರಡು ನದಿಗಳು ಮಾತ್ರವಿದ್ದರೂ ಋಷಿಯು ಬಹುವಚನ ಪ್ರಯೋಗಮಾಡಿ ಸ್ತುತಿಸಿದಾನೆ. ಈ ದ್ವಿವಚನ ಬಹುವಚನಪ್ರಯೋಗದ ವಿಷಯದಲ್ಲಿ ಮುಂದೆ ವಿವರಿಸಲಾಗುವುದು. (ಹದಿನಾಲ್ಕನೆ ಅಧ್ಯಾಯದಲ್ಲಿ **ಪ್ರಪವರ್ತಾನಾಂ** ಎಂಬ ಋಕ್ಕನ್ನು ವಿವರಿಸುವಾಗ ನಿ. ೯-೩೯).

ಈ ಇತಿಹಾಸವು ಋಗ್ವೇದಸಂಹಿತೆಯಲ್ಲಿ ೩-೩೩ನೆಯ ಸೂಕ್ತದಲ್ಲಿ ವಿಶ್ವಾಮಿತ್ರನಿಗೂ ನದಿಗಳಿಗೂ ನಡೆದ ಸಂವಾದ ರೂಪದಲ್ಲಿ ವರ್ಣಿಸಲಾಗಿದೆ. ಮತ್ತು ಇದೇ ಮಂಡಲದ (೩ನೇ ಮಂಡಲ) ೫೩ನೇ ಸೂಕ್ತದ ೯–೧೧ ಋಕ್ಕುಗಳಲ್ಲಿಯೂ ಹೇಳಿದೆ. ಅದರ ಸಾರಾಂಶವನ್ನು ಇಲ್ಲಿ ಕೊಟ್ಟಿದೇನೆ—

ವಿಶ್ವಾಮಿತ್ರಋಷಿಯು—ಪರ್ವತಗಳ ಎತ್ತರವಾದ ಪ್ರದೇಶಗಳಲ್ಲಿ ಉತ್ಪನ್ನವಾದವೂ, ಕಡಿವಾಣವನ್ನು ಸಡಿಲಿಸಿರುವ ಕಾರಣದಿಂದ ಪರಸ್ಪರ ಸ್ಪರ್ಧಿಸುತ್ತಾ ವೇಗವಾಗಿ ಓಡುತ್ತಿರುವ ರಥದ ಎರಡು ಅಶ್ವಗಳಂತೆ ಇರುವವೂ, ತಮ್ಮ ಕರುಗಳನ್ನು ಸಮೀಪಿಸಲು ಆತುರದಿಂದ ಓಡಿಬರುತ್ತಿರುವ ಎರಡು ಗೋವುಗಳಂತೆಯೂ ಇರುವ **ವಿಪಾಟ್** ಮತ್ತು **ಶುತುದ್ರೀ** ಎಂಬ ಎರಡು ನದಿಗಳೂ ಸಹ ತಮ್ಮ ಸಂಯುಕ್ತವಾದ ಪ್ರವಾಹಗಳೊಡನೆ ವೇಗವಾಗಿ ಹರಿಯುತ್ತವೆ. [೧ನೇ ಋಕ್ಕು]

ಎಲೈ ನದಿಗಳೇ, ರಥಿಕನು ತನ್ನ ನಿರ್ದಿಷ್ಟ ಪ್ರದೇಶಕ್ಕೆ ರಥದೊಡನೆ ಓಡುವಂತೆ ನೀವಿಬ್ಬರೂ ಸಹ ಇಂದ್ರನಿಂದ ಪ್ರೇರಿತರಾಗಿಯೂ, ಇಂದ್ರನ ಆಜ್ಞೆಯನ್ನು ಪಾಲಿಸುವವರಾಗಿಯೂ ಸಹ ಇಬ್ಬರೂ ಜತೆಯಾಗಿ ಸಾಗರದ ಅಭಿಮುಖವಾಗಿ ಹೋಗುತ್ತಿದ್ದೀರಿ. ಒಟ್ಟಿಗೆ ಪ್ರವಹಿಸುತ್ತಲೂ ನಿಮ್ಮ ನಿಮ್ಮ ಅಲೆಗಳಿಂದ ವೃದ್ಧಿಯನ್ನು ತೋರ್ಪಡಿಸುತ್ತಲೂ ಹರಿಯುತ್ತಿರುವ ಪ್ರಕಾಶಮಾನರಾದ ಎಲೈ ನದಿಗಳೇ ನಿಮ್ಮಲ್ಲಿ ಒಂದು ಇನ್ನೊಂದನ್ನು ಅನುಸರಿಸುತ್ತದೆ. [೨]

ಅತಿಶಯವಾದ ಮಾತೃಪ್ರೇಮವುಳ್ಳ **ವಿಪಾಟ್** ನದಿಯನ್ನು ನಾನು ಸಮೀಪಿಸುತ್ತೇನೆ. ವಿಸ್ತೃತವಾದುದೂ ಶೋಭನಾತ್ಮಕವಾದುದೂ ಆದ ಈ ನದಿಯು ಕರುವನ್ನು ಪ್ರೀತಿಸಲು ವೇಗದಿಂದ ಮುನ್ನುಗ್ಗುವ ಗೋವುಗಳಂತೆ **ಶುತುದ್ರಿ** ನದಿಯೊಡನೆ ಕೂಡಿ ಇಬ್ಬರಿಗೂ ಸಮಾನವಾದ ಆಶ್ರಯವನ್ನೇ [ಸಮುದ್ರವನ್ನೇ] ಹೋಗಿ ಸೇರುತ್ತದೆ. [೩]

ನದಿಗಳು—[ಎಲೈ ಋಷಿಯೇ] ನಮ್ಮ ಈ ಪ್ರವಾಹದಿಂದ ನಾವು ಪೃಥ್ವಿಯನ್ನು ಫಲವತ್ತನ್ನಾಗಿ ಮಾಡುತ್ತಾ ದೇವನಾದ ಇಂದ್ರನ ನಿಯಮಾನುಸಾರವಾಗಿ ಅವನಿಂದ ಕ್ಲುಪ್ತವಾದ ಸಾಗರವೆಂಬ ನಮ್ಮ ಬೀಡಿಗೆ ಪ್ರವಹಿಸಿ ಹೋಗಿ ಸೇರುತ್ತೇವೆ. ಇಂದ್ರನಿಂದ ನಿರ್ಮಿತವಾದ ಮಾರ್ಗವನ್ನನುಸರಿಸಿ ನಮ್ಮ ಗಂತವ್ಯ ಪ್ರದೇಶಕ್ಕೆ ಹೋಗಿ ಸೇರಲು ನಮಗೆ ಕಾಲಾತೀತವಾಗಬಾರದು. ನಮ್ಮನ್ನು ಪ್ರಾರ್ಥಿಸುತ್ತಿರುವ ಈ ಋಷಿಯ ಇಷ್ಟಾರ್ಥವೇನಿರಬಹುದು ? ಅದನ್ನು ನಾವು ತಿಳಿಯಲಿಚ್ಛಿಸುತ್ತೇವೆ. [೪]

ವಿಶ್ವಾಮಿತ್ರ—ಎಲೈ ಉದಕ ಪ್ರವಾಹಪೂರಿತಗಳಾದ ನದಿಗಳೇ, ಸೋಮಾಹರಣಕ್ಕಾಗಿ ಹೊರಟಿರುವ ನನಗಾಗಿ ನಿಮ್ಮ ಪ್ರವಾಹವನ್ನು ಕೊಂಚ ತಡೆಗಟ್ಟಿರಿ. ಅದೇ ನನ್ನ ಪ್ರಾರ್ಥನೆಯು. ಕುಶಿಕ ಪುತ್ರನಾದ ನಾನು ರಕ್ಷಣೆಯನ್ನಪೇಕ್ಷಿಸಿ ನನ್ನ ಮುಂದಿರತಕ್ಕ ಈ ಶುತುದ್ರೀನದಿಯನ್ನು ನಮ್ರತೆಯಿಂದ ಪ್ರಾರ್ಥಿಸುತ್ತೇನೆ. [೫]

ನದಿಗಳು—ಉದಕಗಳ ಪ್ರವಾಹಕ್ಕೆಲ್ಲಾ ಅಡ್ಡಲಾಗಿದ್ದ ಅಹಿಯನ್ನು [ವೃತ್ರ] ಹನನ ಮಾಡಿದಾಗ ವಜ್ರಬಾಹುವಾದ ಇಂದ್ರನು ನಮ್ಮ ಪ್ರವಾಹಕ್ಕನುಗುಣವಾದ ಕಾಲುವೆಗಳನ್ನೆಲ್ಲಾ ನಿರ್ಮಿಸಿದನು. ಶ್ರೇಷ್ಠವಾದ ಪ್ರಾಣಿಯುಳ್ಳವನೂ ಜಗತ್ಪ್ರೇರಕನೂ ಆದ ಇಂದ್ರನ ನಿಯಮನಕ್ಕೆ ಅಧೀನರಾಗಿ ನಾವು ಪ್ರವಹಿಸುತ್ತಿದ್ದೇವೆ. [೬]

ವಿಶ್ವಾಮಿತ್ರ—ವೃತ್ರಾಸುರನನ್ನು ತನ್ನ ವಜ್ರಾಯುಧದಿಂದ ಕೊಂದು ಉದಕಗಳ ಸ್ವತಂತ್ರವಾದ ಪ್ರವಾಹಕ್ಕಿದ್ದ ಪ್ರತಿಬಂಧಕವನು ತಪ್ಪಿಸಿ ಅವುಗಳು ಸ್ವೇಚ್ಛೆಯಿಂದ ಹರಿಯುವಂತೆ ಮಾಡಿದ ಇಂದ್ರನ ಅಸಾಧಾರಣವಾದ ಸಾಹಸ ಕರ್ಮಗಳೆಲ್ಲವೂ ಸ್ತುತ್ಯವಾಗಿಯೇ ಇರುತ್ತವೆ. [೭]

ನದಿಗಳು—ಇಂದ್ರನನ್ನು ಸ್ತುತಿಸತಕ್ಕ ಎಲೈ ಋಷಿಯೇ, ನೀನು ಈಗ ಪಠಿಸಿದ ಸ್ತುತಿವಾಕ್ಯಗಳನ್ನು ಮರೆಯಬೇಡ. ಇವೇ ವಾಕ್ಯಗಳಿಂದ ಮುಂದಿನ ಯುಗಗಳಲ್ಲಿಯೂ ಇದೇ ಸ್ತುತಿಯು ಪಠಿಸಲ್ಪಡಬೇಕಾಗುತ್ತದೆ. ಉತ್ತಮವಾದ ಕರ್ಮ

ಕರ್ತನಾದ ಎಲೈ ಋಷಿಯೇ, ನಮ್ಮನ್ನು ಇದೇ ಸಂವಾದಾತ್ಮಕವಾದ ಸ್ತುತಿವಾಕ್ಯಗಳಿಂದ ಸೇವಿಸು. ಆದರೆ ಮಾನವ ರಂತೆ ಪ್ರಗಲ್ಭಾತ್ಮಕವಾದ ರೀತಿಯಲ್ಲಿ ಮಾತ್ರ ನಮ್ಮ ವಿಷಯದಲ್ಲಿ ವ್ಯವಹರಿಸಬೇಡ. ನಿನಗೆ ನಮಸ್ಕಾರವಿರಲಿ [೮]

ವಿಶ್ವಾಮಿತ್ರ—ನನಗೆ ಒಡಹುಟ್ಟಿದಂತಿರುವ ಎಲೈ ನದಿಗಳೇ, ನಿಮ್ಮನ್ನು ಸ್ತುತಿಸುವ ನನ್ನಲ್ಲಿ ಅನುಗ್ರಹವುಳ್ಳವರಾಗಿರಿ. ನಾನು ರಥದೊಂದಿಗೂ ಮತ್ತು ಇತರ ಭಾರಗಳೊಂದಿಗೂ ಬಹುದೂರದಿಂದ ಬಂದಿರುತ್ತೇನೆ. ನನಗೆ ಸಹಾಯಮಾಡುವುದಕ್ಕಾಗಿ ನಿಮ್ಮ ಪ್ರವಾಹಗಳನ್ನು ಕೊಂಚ ಕಡಿಮೆ ಮಾಡಿರಿ. ನಮ್ಮ ರಥಚಕ್ರದ ಇರುಚಿಯ ಮಟ್ಟಕ್ಕಿಂತಲೂ ಕೊಂಚ ಕಡಿಮೆ ಮಟ್ಟದಲ್ಲಿ ನಿಮ್ಮ ಪ್ರವಾಹವನ್ನು ನಿಯಮನಮಾಡಿರಿ. [೯]

ನದಿಗಳು—ಸ್ತುತಿಕರ್ತನಾದ ಎಲೈ ಋಷಿಯೇ, ನಾವು ನಿನ್ನ ಪ್ರಾರ್ಥನೆಯನ್ನು ಮನ್ನಿಸುವೆವು. ನೀನು ಭಾರವನ್ನು ಹೊತ್ತಿರುವ ರಥದೊಂದಿಗೆ ಬಹುದೂರ ಪ್ರದೇಶದಿಂದ ಬಂದಿರುವೆಯೆಂಬುದೂ ನಿಜ. ನಾವು ನಿನ್ನ ಮುಂದೆ ಬಾಗಿ ನಡೆಯುವೆವು ತನ್ನ ಮುದ್ದು ಮಗುವನ್ನು ಎತ್ತಿಕೊಳ್ಳಲು ತಾಯಿಯು ಬಾಗುವಂತೆಯೂ, ತನ್ನ ಪ್ರಿಯನನ್ನು ಆಲಂಗಿಸಿಕೊಳ್ಳಲು ಯುವತಿಯು ಬಾಗುವಂತೆಯೂ ನಾವು ಬಾಗಿ ನಡೆಯುತ್ತೇವೆ. [೧೦]

ವಿಶ್ವಾಮಿತ್ರ—ಎಲೈ ನದಿಗಳೇ, ನಿಮ್ಮನ್ನು ಸುಲಭವಾಗಿ ದಾಟಲು ನೀವು ಬಹಳವಾದ ಅನುಕೂಲಗಳನ್ನು ಕಲ್ಪಿಸಿದ್ದೀರಿ. ನನ್ನೊಡನಿರುವ ಭರತರೂ ಸಹ ನಿಮ್ಮ ಸಂಯುಕ್ತಾತ್ಮಕವಾದ ಪ್ರವಾಹವನ್ನು ದಾಟಲಿ. ನಮ್ಮನ್ನು ಹಿಂಬಾಲಿಸುವ ಸಮಸ್ತ ಗುಂಪೂ ಸಹ ನಿಮ್ಮಿಂದ ಅನುಗ್ರಹಿಸಲ್ಪಟ್ಟವರಾಗಿಯೂ ಇಂದ್ರನಿಂದ ಪ್ರೇರಿತರಾಗಿಯೂ ಸಹ ನಿಮ್ಮ ಪ್ರವಾಹ ವನ್ನು ಪೂರ್ವಸ್ಥಿತಿಗೆ ತಂದುಕೊಳ್ಳಿರಿ. [೧೧]

ಗೋವುಗಳ ಅನ್ವೇಷಣೆಮಾಡುತ್ತಾ ಹೊರಟ ಭರತರು ನದಿಗಳನ್ನು ದಾಟಿದರು. ಋಷಿಯು ನದಿಗಳ ಅಭಿಮಾನವನ್ನು ಸ್ವೀಕರಿಸಿ ಸಂತುಷ್ಟನಾದನು. ಎಲೈ ನದಿಗಳೇ, ಅನ್ನಸಂಪತ್ತನ್ನು ಹಂಚುವವರಾಗಿಯೂ ಅದನ್ನೇ ವೃದ್ಧಿಪಡಿಸುವವರಾಗಿಯೂ ನಿಮ್ಮ ಪ್ರವಾಹವನ್ನು ಮುಂದುವರೆಸಿರಿ. ನಿಮ್ಮ ಪಾತ್ರಗಳನ್ನು ತುಂಬುತ್ತಾ ಪೂರ್ಣಪ್ರವಾಹದಿಂದ ಹರಿಯಿರಿ. [೧೨]

ಆದರೂ ಸಹ ನಮ್ಮ ರಥದ ನೊಗದ ಮೂಕಿಯು ಪ್ರವಾಹದ ಮಟ್ಟಕ್ಕಿಂತ ಮೇಲಿರುವಂತಾಗಲಿ, ನೀವು ಆ ಪ್ರಮಾಣದಲ್ಲಿಯೇ ಹರಿಯಿರಿ. ದೋಷರಹಿತರೂ ಅದೂಷ್ಯರೂ ಆದ ವಿಪಾಟ್ ಶುತುದ್ರೀನದಿಗಳು ಪ್ರವಾಹದಿಂದ ತುಂಬಿ ಹರಿಯಲಿ. [೧೩]

ಈ ರೀತಿಯಾಗಿ ವಿಶ್ವಾಮಿತ್ರನು ನದಿಗಳನ್ನು ಸ್ತುತಿಸಿ ಅವುಗಳನ್ನು ದಾಟಿದನು ಎಂಬುದೇ ಈ ಸೂಕ್ತದ ವಿಷಯ ವಾಗಿದೆ. ಈ ಸೂಕ್ತದಲ್ಲಿ ವಿಶ್ವಾಮಿತ್ರಋಷಿಯು ವಿಪಾಟ್‌ಚ್ಛುತದ್ರಿ ನದಿಗಳನ್ನು ದ್ವಿವಚನ ಮತ್ತು ಬಹುವಚನಗಳಲ್ಲಿ ಸಂಬೋಧಿಸಿದ್ದಾನೆ. ಇಲ್ಲಿ ಬಹುವಚನದಲ್ಲಿ ಸಂಬೋಧಿಸಿರುವುದೇ ವಿಶೇಷವಾಗಿ ಕಂಡು ಬರುವುದು. ಈಗ ದ್ವಿವಚನದಲ್ಲಿ ಸಂಬೋಧಿಸಿರುವ ಋಕ್ಕನ್ನು ಮುಂದೆ ಎಂದರೆ ಪ್ರಪರ್ವತಾನಾಂ ಎಂಬ ಋಕ್ಕನ್ನು ವಿವರಿಸುವಾಗ [ನಿ. ೯–೩೯] ತಿಳಿಸಲಾಗು ವುದು. ಈಗ ಬಹುವಚನದ ಉದಾಹರಣೆಗಾಗಿ ಮುಂದಿನ ಋಕ್ಕನ್ನು ವಿವರಿಸಲಾಗಿದೆ—

ಇತಿ ಚತುರ್ವಿಂಶಃ ಖಂಡಃ

ಇಲ್ಲಿಗೆ ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವು

———

## ಅಥ ಪಂಚವಿಂಶಃ ಖಂಡಃ

### ಇಪ್ಪತ್ತೈದನೆಯ ಖಂಡವು.

——

ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ । ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯು-ರಹ್ವೇ ಕುಶಿಕಸ್ಯ ಸೂನುಃ ॥ (ಋ. ಸಂ. ೩-೩೩-೫) ಉಪರಮಧ್ವಂ ಮೇ ವಚಸೇ ಸೋಮ್ಯಾಯ ಸೋಮಸಂಪಾದಿನ ಋತಾವರೀರ್ಋತ-ವತ್ಯ ಋತಮಿತ್ಯುದಕನಾಮ ಪ್ರತ್ಯೃತಂ ಭವತಿ ಮುಹೂರ್ತ-ಮೇವೈರಯನೈರವನೈರ್ವಾ ಮುಹೂರ್ತೋ ಮುಹುರ್ಋತುರ್ಋತು-ರರ್ತೇರ್ಗತಿಕರ್ಮಣೋ ಮುಹುರ್ಮೂಢ ಇವ ಕಾಲೋ ಯಾವದ-ಭೀಕ್ಷ್ಣಂ ಚೇತ್ಯಭೀಕ್ಷ್ಣಮಭಿಕ್ಷಣಂ ಭವತಿ ಕ್ಷಣಃ ಕ್ಷಣೋತೇಃ ಪ್ರಕ್ಷ್ಣುತಃ ಕಾಲಃ ಕಾಲಯತೇರ್ಗತಿಕರ್ಮಣಃ ಪ್ರಾಭಿಹ್ವಯಾಮಿ ಸಿಂಧುಂ ಬೃಹತ್ಯಾ ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ಚಾವನಾಯ ಕುಶಿಕಸ್ಯ ಸೂನುಃ ಕುಶಿಕೋ ರಾಜಾ ಬಭೂವ ಕ್ರೋಶತೇಃ ಶಬ್ದಕರ್ಮಣಃ ಕ್ರಂಶತೇರ್ವಾ ಸ್ಯಾತ್ಪ್ರಕಾಶಯತಿಕರ್ಮಣಃ ಸಾಧು ವಿಕ್ರೋಶಯಿತಾರ್ಥಾನಾಮಿತಿ ವಾ ನದ್ಯಃ ಪ್ರತ್ಯೂಚುಃ ॥೨೫॥

———

**ರಮಧ್ವಂ ಮೇ ವಚಸೇ** ಎಂಬ ಋಕ್ಕಿನ ಅರ್ಥವು-ಉದಕಪೂರ್ಣವಾದ ಎಲೈ ನದಿಗಳೇ, ಸೋಮಾಹರಣಾರ್ಥವಾಗಿ ಹೊರಟಿರುವ ನನ್ನ ಪ್ರಾರ್ಥನೆಯ ನಿಮಿತ್ತವಾಗಿ ನಿಮ್ಮ ಶೀಘ್ರಗಾಮಿಗಳಾದ ಪ್ರವಾಹಗಳನ್ನು ಕೊಂಚಕಾಲ ತಡೆಯಿರಿ. (ಎಲೈ ಶುತುದ್ರಿಯೇ,) ಕುಶಿಕಪುತ್ರನಾದ ನಾನು ಆತ್ಮರಕ್ಷಣಾರ್ಥವಾಗಿ ನಿನ್ನನ್ನು ಮಹತ್ತಾದ ಸ್ತುತಿಯಿಂದ ನಮ್ರನಾಗಿ ಪ್ರಾರ್ಥಿಸುತ್ತೇನೆ.

**ಉಪರಮಧ್ವಂ ಮೇ ವಚಸೇ ಸೋಮ್ಯಾಯ ಸೋಮ್ಯಾಯ ಸೋಮಸಂಪಾದಿನೇ—**[ಎಲೈ ನದಿಗಳೇ] ಯಜ್ಞಮಾಡುವುದಕ್ಕಾಗಿ ಸೋಮಲತೆಗಳನ್ನು ತರಲು ಹೊರಟಿರುವ ನನ್ನ ಪ್ರಾರ್ಥನೆಯನ್ನು ಮನ್ನಿಸಿ ನೀವು ನಿಮ್ಮ ಪ್ರವಾಹಗಳನ್ನು ಸ್ವಲ್ಪಕಾಲ ತಡೆಗಟ್ಟಿರಿ. ಏಕೆಂದರೆ ತುಂಬಿ ಹರಿಯುತ್ತಿರುವ ಆಳವಾದ ಪ್ರವಾಹವನ್ನು ದಾಟಲು ಸಾಧ್ಯವಿಲ್ಲದ್ದರಿಂದ

ನೀವು ನನಗಾಗಿ ಕೊಂಚಕಾಲ ಎಂದರೆ ನಾನು ನದಿಯನ್ನು ದಾಟುವವರೆಗೆ ನಿಮ್ಮ ಪ್ರವಾಹವನ್ನು ತಡೆಗಟ್ಟಿರಿ ಎಂದು ವಿಶ್ವಾಮಿತ್ರಋಷಿಯು ನದಿಗಳನ್ನು ಪ್ರಾರ್ಥಿಸುವನು.

**ಋತಾವರೀಃ ಋತವತ್ಯಃ**–ಋತಶಬ್ದಕ್ಕೆ ನೀರು, ಉದಕವೆಂದರ್ಥವು ಏಕೆಂದರೆ **ಋ–ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಋತಶಬ್ದವು ಎಲ್ಲೆಲ್ಲಿಯೂ ವ್ಯಾಪಿಸುವ ಸ್ವಭಾವವುಳ್ಳದ್ದರಿಂದ ಋತಶಬ್ದಕ್ಕೆ ಉದಕವೆಂದರ್ಥವು.

**ಮುಹೂರ್ತೋ ಮುಹುರೃತುಃ। ಮುಹೂರ್ತಮೇನ್ಯೈಃ ಅಯನ್ಯೈರವನ್ಯೈರ್ವಾ। ಋತುರರ್ತೇರ್ಗತಿ ಕರ್ಮಣಃ ಮುಹುರ್ಮೂಢ ಇವ ಕಾಲೋಯಾವದಭೀಕ್ಷ್ಣಂ ಚೇತಿ**—

ಋಷಿಯು ನದಿಗಳನ್ನು ಉದ್ದೇಶಿಸಿ ಒಂದು ಮುಹೂರ್ತಕಾಲದ ಮಟ್ಟಿಗೆ ತಮ್ಮ ಪ್ರವಾಹವನ್ನು ತಡೆಗಟ್ಟಬೇಕೆಂದು ಪ್ರಾರ್ಥಿಸಿದ್ದಾನೆ—**ಮುಹೂರ್ತ**ವೆಂದರೆ ಸ್ವಲ್ಪಕಾಲ ಮಾತ್ರ ಬಹಳ ಕಾಲವಲ್ಲ. ನಾನು ನದಿಯನ್ನು ದಾಟುವಷ್ಟು ಅತ್ಯಲ್ಪ ಕಾಲಮಾತ್ರ ಎಂದರ್ಥವು. **ಏನ್ಯೈಃ** ಎಂದರೆ ಈ ನಿಮ್ಮ ಹೆಚ್ಚಾದ ಉದಕಗಳಿಂದ ಹರಿಯುವುದನ್ನು ನಿಲ್ಲಿಸಿರಿ. ಅಥವಾ **ಏನ್ಯೈ** ಅಂದರೆ **ಅವನ್ಯೈಃ** ನಿಮ್ಮ ರಕ್ಷಣೆಗಳಿಂದ ಅಥವಾ **ಚಿತ್ರೈರ್ಗಮನೈಃ** ಆಶ್ಚರ್ಯಕರವಾದ ಅಥವಾ ವಿಧವಿಧವಾದ ಗಮನ [ಪ್ರವಾಹ] ಗಳಿಂದ ಎಂದೂ ಅರ್ಥಮಾಡಬಹುದು. **ಮುಹೂರ್ತೋ ಮುಹುರೃತು :—** ಋ–**ಗತೌ** ಎಂಬ ಗತ್ಯರ್ಥಕ ಧಾತುವಿನಿಂದ ಋತಶಬ್ದವು ನಿಷ್ಪನ್ನವಾಗಿ ಕಾಲವೆಂಬ ಅರ್ಥವನ್ನು ಸೂಚಿಸುವುದು ಕಾಲವು ಯಾವಾಗಲೂ ಮುಂದೆ ಮುಂದೆ ಹೋಗುತ್ತಿರುವುದರಿಂದ [ಕಳೆದು ಹೋಗುತ್ತಿರುವುದರಿಂದ] ಋತಶಬ್ದಕ್ಕೆ ಕಾಲವೆಂಬ ಅರ್ಥವಿರುವುದು. ಋತವೆಂದರೆ ಕಾಲದಲ್ಲಿ ಬಹು ಸಣ್ಣ ವಿಭಾಗವು. ಮುಹೂರ್ತವೆಂದರೆ ಮುಹುಃ ಮತ್ತೆ ಮತ್ತೆ ಋತ–ಕಾಲವು ಪುನಃ ಪುನಃ ಒದಗಿ ಬರುವ ಸಣ್ಣದಾದ ಒಂದು ಕಾಲ ವಿಭಾಗವು. ಈ ಮುಹೂರ್ತವೆಂಬ ಕಾಲಪರಿಮಾಣವು ಅಭೀಕ್ಷ್ಣ ಅಥವಾ ಅಭಿಕ್ಷಣ ವೆನಿಸುವುದು. ಅಭಿಕ್ಷಣವೆಂದರೆ ಈಗ ನಡೆಯುತ್ತಿರುವ ಕಾಲದ ಒಂದು ಸಣ್ಣ ವಿಭಾಗವು, ತುಂಡುಮಾಡಿರುವುದು. ಕ್ಷಣ ಶಬ್ದವು ಹಿಂಸಿಸು, ಕತ್ತರಿಸು ಎಂಬರ್ಥವಿರುವ ಕ್ಷಣೋತಿ ಧಾತುವಿನಿಂದ ನಿಷ್ಪನ್ನವಾಗಿದೆ. ಕಾಲದ ಒಂದು ಸಣ್ಣ ಕತ್ತರಿಸಿದ ತುಂಡು ಎಂದರೆ ಕಾಲದ ಅತಿ ಸಣ್ಣ ವಿಭಾಗವು. **ಪ್ರಕ್ಷ್ಣುತಃ ಕಾಲಃ** ಎಂದರೆ ವಿಶೇಷವಾಗಿ ಸಣ್ಣದಾಗಿರುವ ಅತಿ ಚಿಕ್ಕದಾಗಿರುವ ಕಾಲಪರಿಮಾಣಕ್ಕೆ ಕ್ಷಣವೆಂದು ಹೆಸರು.

**ಕಾಲಃ ಕಾಲಯತೇರ್ಗತಿಕರ್ಮಣಃ—**ಕಾಲ ಶಬ್ದವು ಗತ್ಯರ್ಥವನ್ನು ಸೂಚಿಸುವ ಕಾಲಯತಿ ಧಾತುವಿನಿಂದ ನಿಷ್ಪನ್ನವಾಗಿದೆ. ಮುಂದೆ ಮುಂದೆ ಸಾಗುತ್ತಿರುವುದರಿಂದ ಕಾಲಕ್ಕೆ ಕಾಲವೆಂದು ಹೆಸರು ಬಂದಿದೆ. ಈ ಕಾಲವು ಯಾವಾಗಲೂ ಸ್ಥಿರವಾಗಿ ನಿಲ್ಲುವುದಿಲ್ಲ. ಮುಂದೆ ಸಾಗುತ್ತಲೇ ಇರುವುದು.

**ಪ್ರಾಭಿಹ್ವಯಾಮಿ ಸಿಂಧುಂ ಬೃಹತ್ಯಾ ಮಹತ್ಯಾ ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ ಅವನಾಯ—**[ವಿಶ್ವಾಮಿತ್ರನಾದ ನಾನು] [ಸಿಂಧುಂ] ಪ್ರವಹಿಸುತ್ತಿರುವ ಈ ನದಿಯನ್ನು ಮನಃಪೂರ್ವಕವಾಗಿಯೂ ಬುದ್ಧಿಶಕ್ತಿಯನ್ನು ಉಪಯೋಗಿಸಿಯೂ ಮಾಡಿರುವ ದೊಡ್ಡದಾದ ಈ ನನ್ನ ಸ್ತುತಿಯಿಂದ ಅಭಿಮುಖವಾಗಿ ನಿಂತು ನನ್ನ ರಕ್ಷಣೆಗಾಗಿ ಪ್ರಾರ್ಥಿಸುತ್ತೇನೆ.

**ಕುಶಿಕಸ್ಯ ಸೂನುಃ ಕುಶಿಕೋ ರಾಜಾ ಬಭೂವ।** ವಿಶ್ವಾಮಿತ್ರ ಋಷಿಯು, ತಾನು ಕುಶಿಕನೆಂಬುವನ ಪುತ್ರ ನೆಂದು ಹೇಳಿಕೊಂಡಿದ್ದಾನೆ. ಈ ಕುಶಿಕನೆಂಬುವನು ಒಬ್ಬ ರಾಜನು. ಕೆಲವು ಕಡೆ ಕೌಶಿಕನೆಂಬ ಪದಪ್ರಯೋಗವೂ ಇದೆ.

**ಕ್ರೋಶತೇಃ ಶಬ್ದಕರ್ಮಣಃ । ಕ್ರಂಶತೇರ್ವಾ ಸ್ಯಾತ್ ಪ್ರಕಾಶಯತಿ ಕರ್ಮಣಃ ಸಾಧುವಿಕ್ರೋಶಯಿತಾರ್ಥಾನಾಮಿತಿ ವಾ**—ಕುಶಿಕ ಶಬ್ದವು ಶಬ್ದಮಾಡು ಎಂಬರ್ಥವುಳ್ಳ ಕ್ರೋಶತಿ ಧಾತುವಿನಿಂದಾಗಲಿ, ಪ್ರಕಾಶಪಡಿಸು, ಕೀರ್ತಿಯಿಂದ ಬೆಳಗು ಎಂಬರ್ಥವಿರುವ ಕ್ರಂಶತಿ ಧಾತುವಿನಿಂದಾಗಲೀ ನಿಷ್ಪನ್ನವಾಗಬಹುದು. ಈ ರಾಜನು ಸಾಧುಜನರಿಗೆ ದ್ರವ್ಯಾದಿಗಳನ್ನು ದಾನಮಾಡುವುದರಿಂದ ಇವನ ಕೀರ್ತಿಯು ಪ್ರಕಾಶಿತವಾಯಿತೆಂದು ಈ ರಾಜನಿಗೆ ಕುಶಿಕ ಶಬ್ದವು [ಹೆಸರು] ಸಲ್ಲುವುದು. ಈ ವಿಶ್ವಾಮಿತ್ರಋಷಿಯ ಪ್ರಾರ್ಥನೆಗೆ ನದಿಗಳು ಪ್ರತ್ಯುತ್ತರವನ್ನು ಹೇಳಿದವು. ಅದನ್ನು ಮುಂದೆ ತಿಳಿಸಲಾಗಿದೆ.

**ಇತಿ ಪಂಚವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೈದನೆಯ ಖಂಡವು ಸಮಾಪ್ತವು

---

## ಅಥ ಷಡ್ವಿಂಶಃ ಖಂಡಃ

**ಇಪ್ಪತ್ತಾರನೆಯ ಖಂಡವು**

ಇಂದ್ರೋ ಅಸ್ಮಾँ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ । ದೇವೋऽನಯತ್ಸವಿತಾ ಸುಪಾಣಿಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ ॥ (ಋ. ಸಂ. ೩-೩೩-೬) ಇಂದ್ರೋ ಅಸ್ಮಾನರದ್ವಜ್ರಬಾಹೂ ರದತಿಃ ಖನತಿಕರ್ಮಾಪಹನ್ ವೃತ್ರಂ ಪರಿಧಿಂ ನದೀನಾಮಿತಿ ವ್ಯಾಖ್ಯಾತಂ । ದೇವೋऽನಯತ್ಸವಿತಾ ಸುಪಾಣಿಃ ಕಲ್ಯಾಣಪಾಣಿಃ ಪಾಣಿಃ ಪಣಾಯತೇಃ ಪೂಜಾಕರ್ಮಣಃ ಪ್ರಗೃಹ್ಯ ಪಾಣೀ ದೇವಾನ್ಪೂಜಯಂತಿ । ತಸ್ಯ ವಯಂ ಪ್ರಸವೇ ಯಾಮ ಉರ್ವೀಃ । ಉರ್ವ್ಯ ಊರ್ಣೋತೇರ್ವೃಣೋತೇರಿತ್ಯೌರ್ಣವಾಭಃ ಪ್ರತ್ಯಾಖ್ಯಾಯಾಂತತ ಆಶುಶ್ರುವುಃ ॥೨೬॥

---

**ಇಂದ್ರೋ ಅಸ್ಮಾನ್**—ಎಂಬ ಋಕ್ಕಿನ ಅರ್ಥವು—ಎಲೈ ವಿಶ್ವಾಮಿತ್ರನೇ, ವಜ್ರಾಯುಧವನ್ನು ಹಸ್ತದಲ್ಲಿ ಧರಿಸಿರುವ ಇಂದ್ರನು ನದಿಗಳ ಉದಕಗಳಿಗೆ ತಡೆಯಾಗಿ ಸುತ್ತಲೂ ಆವರಿಸಿ ನಿಂತಿದ್ದ ಮೇಘರೂಪಿಯಾದ ವೃತ್ರಾಸುರನನ್ನು ನಾಶಮಾಡಿ ನಮ್ಮ ಪ್ರವಾಹದ್ವಾರ (ಮಾರ್ಗ)ಗಳನ್ನು ಬಿಡಿಸಿದನು. ಜಗತ್ಪ್ರೇರಕನಾದವನೂ ಶ್ರೇಷ್ಠವಾದ ಹಸ್ತವುಳ್ಳವನೂ ಪ್ರಕಾಶಮಾನನೂ ಆದ ಇಂದ್ರನು ನಮ್ಮ ಪ್ರವಾಹಕ್ಕೆ ಅನುಕೂಲವನ್ನುಂಟುಮಾಡಿದನು. ಆ ಪ್ರಭೂತವಾದ ಉದಕದಿಂದ ನಾವು ಆ ಇಂದ್ರನ ಆಜ್ಞಾನುವರ್ತಿಗಳಾಗಿ ಪ್ರವಹಿಸುತ್ತಿದ್ದೇವೆ.

**ಇಂದ್ರೋ ಅಸ್ಮಾನ್ ಅರದದ್ವಜ್ರಬಾಹುಃ ರದತಿಃ ಖನತಿಕರ್ಮಾಪಹನ್ ವೃತ್ರಂ ಪರಿಧಿಂ ನದೀನಾಮಿತಿ ವ್ಯಾಖ್ಯಾತಂ**—ತನ್ನ ಹಸ್ತದಲ್ಲಿ ವಜ್ರಾಯುಧವನ್ನು ಧರಿಸಿರುವ ಇಂದ್ರನು ಮೇಘಗಳನ್ನು ಸುತ್ತಲೂ ಆವರಿಸಿದ ವೃತ್ರನನ್ನು ಸಂಹಾರಮಾಡಿ ನಾವುಗಳು ಪ್ರವಹಿಸುವುದಕ್ಕೆ ಅನುಕೂಲವಾಗುವಂತೆ ಕಾಲುವೆ (ಹಳ್ಳ)ಗಳನ್ನು ಅಗೆದು ನಿರ್ಮಿಸಿದನು. **ಅರದತ್** ಎಂಬ ಶಬ್ದವು ಅಗಿ, ತೋಡು ಎಂಬರ್ಥವುಳ್ಳ ರದತಿಧಾತುವಿನಿಂದ ನಿಷ್ಪನ್ನವಾಗಿದೆ. ನದಿಗಳು ಪ್ರವಹಿಸುವುದಕ್ಕೆ ಅನುಕೂಲವಾಗುವಂತೆ ಇಂದ್ರನು ನಮ್ಮ ಪಾತ್ರಗಳನ್ನು ಅಗೆದು ಹಳ್ಳವಾಗಿ ಮಾಡಿದನು. ಈ ವಿಷಯವನ್ನು ಹಿಂದೆಯೇ ಹೇಳಲಾಗಿದೆ.

**ದೇವೋಽನಯತ್ಸವಿತಾ ಸುಪಾಣಿಃ ಕಲ್ಯಾಣಪಾಣಿಃ ಪಾಣಿಃ ಪಣಾಯತೇಃ ಪೂಜಾಕರ್ಮಣಃ ಪ್ರಗೃಹ್ಯ ಪಾಣೀ ದೇವಾನ್ಪೂಜಯಂತಿ**—ಸಮಸ್ತ ಜಗತ್ತಿಗೂ ಪ್ರೇರಕನಾದ ಆ ಇಂದ್ರದೇವನು ತನ್ನ ಉತ್ತಮವಾದ ಹಸ್ತದಿಂದ ನಿರ್ದೇಶಮಾಡಿ ನಮ್ಮನ್ನು ನಮ್ಮ ನಿರ್ದಿಷ್ಟಸ್ಥಾನವಾದ ಸಮುದ್ರದ ಕಡೆಗೆ ಪ್ರವಹಿಸುವಂತೆ ಮಾಡಿದನು. **ಸುಪಾಣಿಃ ಕಲ್ಯಾಣ ಪಾಣಿಃ**—ಉತ್ತಮವಾದ ಶ್ರೇಷ್ಠವಾದ ಹಸ್ತವುಳ್ಳವನು. ಪಾಣಿಶಬ್ದವು ಪೂಜಾಕರ್ಮವನ್ನು ಸೂಚಿಸುವ ಪಣಾಯತಿ ಧಾತುವಿನಿಂದ ನಿಷ್ಪನ್ನವಾಗಿದೆ. ಏಕೆಂದರೆ ಪುರುಷರು (ಜನರು) ತಮ್ಮ ಕೈಗಳನ್ನು ಮುಗಿದುಕೊಂಡು ದೇವತೆಗಳನ್ನು ಪೂಜಿಸುತ್ತಾರೆ. ಆದ್ದರಿಂದ ಹಸ್ತಕ್ಕೆ ಪಾಣಿ ಎಂದು ಹೆಸರು.

**ತಸ್ಯ ವಯಂ ಪ್ರಸವೇ ಯಾಮ ಉರ್ವೀಃ :—ಉರ್ವ್ಯ ಊರ್ಣೋತೇರ್ವೃಣೋತೇರಿತ್ಯೌರ್ಣವಾಭಃ ಪ್ರತ್ಯಾಖ್ಯಾಯಾಂತತ ಆಪುಶ್ರುವುಃ**–ಆ ಇಂದ್ರನ ಪ್ರೇರಣೆಯಿಂದಲೇ ನಾವು ವಿಸ್ತಾರವಾದ ಪ್ರವಾಹದಿಂದ ಕೂಡಿ ಪ್ರವಹಿಸುವೆವು. ಅಥವಾ ಬಹಳವಾದ ಉದಕದಿಂದ ಕೂಡಿ ಪ್ರವಹಿಸುತ್ತಿರುವೆವು. **ಉರ್ವ್ಯಃ** ಎಂಬ ಶಬ್ದವು ಬಹಳವಾಗಿ ವಿಸ್ತರಿಸು ಎಂಬರ್ಥವುಳ್ಳ ಊರ್ಣೋತಿ ಧಾತುವಿನಿಂದ ನಿಷ್ಪನ್ನವಾಗಿರುವುದು. ಆವರಿಸು ಎಂಬರ್ಥವುಳ್ಳ ವೃಣೋತಿಧಾತುವಿನಿಂದ ಈಶಬ್ದವು ನಿಷ್ಪನ್ನವಾಗಿದೆಯೆಂದು ಔರ್ಣವಾಭರೆಂಬ ಆಚಾರ್ಯರ ಮತವು. ಈ ರೀತಿ ಹೇಳಿದ ಮೇಲೆ ನದಿಗಳು ವಿಶ್ವಾಮಿತ್ರಋಷಿಯ ಪ್ರಾರ್ಥನೆಯನ್ನು ಅಂಗೀಕರಿಸಿದವು.

**ಇತಿ ಷಡ್ವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತಾರನೆಯ ಖಂಡವು ಸಮಾಪ್ತವು

———

## ಅಥ ಸಪ್ತವಿಂಶಃ ಖಂಡಃ

**ಇಪ್ಪತ್ತೇಳನೆಯ ಖಂಡವು**

ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾ-
ದನಸಾ ರಥೇನ । ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾ-
ಯೇವ ಕನ್ಯಾ ಶಶ್ವಚೈತೇ ॥ (ಋ. ಸಂ. ೩–೩೩–೧೦) ಆ ಶೃಣವಾಮ

ತೇ ಕಾರೋ ವಚನಾನಿ ಯಾಹಿ ದೂರಾದನಸಾ ಚ ರಥೇನ ಚ ನಿನ-
ಮಾಮ ತೇ ಪಾಯಯಮಾನೇವ ಯೋಷಾ ಪುತ್ರಂ ಮರ್ಯಾಯೇವ
ಕನ್ಯಾ ಪರಿಷ್ವಜನಾಯ ನಿನಮಾ ಇತಿ ವಾಶ್ವನಾಮಾನ್ಯುತ್ತರಾಣಿ
ಷಡ್ವಿಂಶತಿಸ್ತೇಷಾಮಷ್ವಾ ಉತ್ತರಾಣಿ ಬಹುವದಶ್ವಃ ಕಸ್ಮಾದಶ್ನುತೇಽ-
ಧ್ವಾನಂ ಮಹಾಶನೋ ಭವತೀತಿ ವಾ ತತ್ರ ದಧಿಕ್ರಾ ಇತ್ಯೇತದ್ದಧತ್ಕ್ರಾ-
ಮತೀತಿ ವಾ ದಧತ್ಕ್ರಂದತೀತಿ ವಾ ದಧದಾಕಾರೀ ಭವತೀತಿವಾ
ತಸ್ಯಾಶ್ವವದ್ದೇವತಾವಚ್ಚ ನಿಗಮಾ ಭವಂತಿ ತದ್ಯದ್ದೇವತಾ ವದುಪರಿಷ್ಟಾ-
ತ್ತದ್ವ್ಯಾಖ್ಯಾಸ್ಯಾಮೋಽಥೈತದಶ್ವವತ್ ॥೨೭॥

**ಆ ತೇ ಕಾರೋ** ಎಂಬ ಋಕ್ಕಿನ ಅರ್ಥವು—ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ, ನಿನ್ನ ಸ್ತುತಿವಾಕ್ಯಗಳನ್ನು ನಾವು ಆಲಿಸಿ ಕೇಳಿದ್ದೇವೆ. ಗಾಡಿಯೊಡನೆಯೂ ರಥದೊಡನೆಯೂ ಬಹು ದೂರಪ್ರದೇಶದಿಂದ ಬಂದಿದ್ದೀಯೆ. ಮಗುವಿಗೆ ಸ್ತನ್ಯಪಾನಮಾಡಿಸುವುದಕ್ಕಾಗಿ ಮಾತೆಯಾದ ಸ್ತ್ರೀಯು ಬಗ್ಗುವಂತೆಯೂ ಪುರುಷನಿಗೆ ಆಲಿಂಗನಕ್ಕೆ ಅನುಕೂಲವಾಗಲು ಯುವತಿಯು ಬಗ್ಗುವಂತೆಯೂ ಸಹ ನಿನಗಾಗಿ ನಾವು ನಮ್ಮ ಪ್ರವಾಹವನ್ನು ತಗ್ಗಿಸಿ ಬಾಗುತ್ತೇವೆ.

**ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ಚ ರಥೇನ ಚ ನಿನಮಾಮ ತೇ ಪಾಯಯಮಾನೇವ ಯೋಷಾ ಪುತ್ರಂ ಮರ್ಯಾಯೇವ ಕನ್ಯಾ ಪರಿಷ್ವಜನಾಯ ನಿಗಮಾ ಇತಿ ವಾ**—ನದಿಗಳು ವಿಶ್ವಾಮಿತ್ರನನ್ನು ಕುರಿತು ಈ ರೀತಿ ಹೇಳಿದವು—ನಮ್ಮನ್ನು ಸ್ತುತಿಸುತ್ತಿರುವ ಎಲೈ ವಿಶ್ವಾಮಿತ್ರನೇ, ನಿನ್ನ ಮಾತುಗಳನ್ನು ನಾವು ಆಲಿಸಿ ಕೇಳಿದೆವು. ನೀನು ಬಹುದೂರ ಪ್ರದೇಶದಿಂದ ನಿನ್ನ ಗಾಡಿಯೊಡನೆಯೂ ರಥದೊಡನೆಯೂ ಇಲ್ಲಿಗೆ ಬಂದಿರುವೆ. ಆದುದರಿಂದ ನೀನು ನದಿಗಳಾದ ನಮ್ಮನ್ನು ಸುಲಭವಾಗಿ ದಾಟಲು ಅನುಕೂಲವಾಗುವಂತೆ, ಸ್ತ್ರೀಯು ತನ್ನ ಮಗುವಿಗೆ ಸ್ತನ್ಯ ಪಾನಮಾಡಿಸುವುದಕ್ಕಾಗಿ ಬಗ್ಗುವಂತೆಯೂ, ಅಥವಾ ಹೊಸದಾಗಿ ಮದುವೆಯಾದ ಕನ್ಯೆಯು ಪತಿಯ ಆಲಿಂಗನಕ್ಕಾಗಿ ಲಜ್ಜೆಯಿಂದ ಬಗ್ಗುವಂತೆಯೂ ನಾವು ನಮ್ಮ ಪ್ರವಾಹಗಳನ್ನು ತಗ್ಗಿಸಿ ನಿನಗಾಗಿ ಬಾಗುವೆವು.

———

**ಅಥಾಶ್ವನಾಮಾನಿ ಷಡ್ವಿಂಶತಿಃ**

ಈ ಇಪ್ಪತ್ತಾರು ನಾಮಗಳು ಅಶ್ವಗಳ ಹೆಸರುಗಳು.

## ಅಥ ಅಶ್ವನಾಮಾನಿ

(೧) ಅತ್ಯಃ (೨) ಹಯಃ (೩) ಅರ್ವಾ (೪) ವಾಜೀ
(೫) ಸಪ್ತಿಃ (೬) ವಹ್ನಿಃ (೭) ದಧಿಕ್ರಾಃ (೮) ದಧಿಕ್ರಾವಾ (೯) ಏತಗ್ವಾ

(೧೦) ಏತಶಃ (೧೧) ಪೈದ್ವಃ (೧೨) ದೌರ್ಗಹಃ (೧೩) ಉಚ್ಚೈಃಶ್ರವಸಃ (೧೪) ತಾರ್ಕ್ಷ್ಯಃ (೧೫) ಆಶುಃ (೧೬) ಬ್ರಧ್ನಃ (೧೭) ಅರುಷಃ (೧೮) ಮಾಂಶ್ಚತ್ವಃ (೧೯) ಅವ್ಯಥಯಃ (೨೦) ಶ್ಯೇನಾಸಃ (೨೧) ಸುಪರ್ಣಾಃ (೨೨) ಪತಂಗಾಃ (೨೩) ನರಃ (೨೪) ಹ್ವಾರ್ಯಾಣಾಮ್ (೨೫) ಹಂಸಾಸಃ (೨೬) ಅಶ್ವಾಃ ॥ ಇತಿ ಷಡ್ವಿಂಶತಿರಶ್ವನಾಮಾನಿ ॥

**(೧) ಅತ್ಯಃ ॥ ಅತ-ಸಾತತ್ಯಗಮನೇ । ‘ ಕೃತ್ಯಲ್ಯುಟೋ ಬಹುಲಮ್ ’ (ಪಾ. ಸೂ. ೩-೩-೧೧೩) ಇತಿ ಕರ್ತರಿ ಯತ್ ॥**

ಯಾವಾಗಲೂ ಹೋಗುವುದು ಎಂಬ ಅರ್ಥ ಕೊಡುವ ಅತ್‌ಧಾತುವಿಗೆ ಯತ್‌ಪ್ರತ್ಯಯ. ಅತ್ಯಃ. ಸತತ ಗಮನವುಳ್ಳದ್ದು ಕುದುರೆ. ಅಥವಾ ‘ ಅಘ್ನ್ಯಾದಯಶ್ಚ ’ ಸೂತ್ರದಿಂದ ಯತ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ‘ ಗಚ್ಛತ್ಯನೇನ ಅಶ್ವಾರೋಹಾ ವಾ ’ ಇದರಿಂದ ಕುದುರೆ ಸವಾರನು ಹೋಗುತ್ತಾನೆ ಎಂದರ್ಥ. ಉದಾಹರಣೆ—

**‘ ವಾಮತ್ಯಾ ಅಪಿ ಕರ್ಣೇ ವಹನ್ತು ’ (ಋ. ಸಂ. ೪-೧-೩೦-೪) ॥**

(೨) **ಹಯಃ** ॥ ‘ ಹಯ ಗತಿವಿಕ್ರಾಂತೇ ’ ಧಾತು. ಪಚಾದಿಗಣಪಠಿತವಾದುದರಿಂದ ಅಚ್ ಪ್ರತ್ಯಯ. ‘ಹಯತಿ ಇತಿ ಹಯಃ ’ ದಾರಿಯಲ್ಲಿ ಯಾವಾಗಲೂ ಹೋಗುವುದು. ಕುದುರೆಗಳ ಗತಿವಿಶೇಷಕ್ಕೆ ವಿಕ್ರಮಣವೆಂದು ಹೆಸರು. ವಿಕ್ರಮಣ ಹೊಂದುವವುಗಳು ಕುದುರೆಗಳು. ಉದಾಹರಣೆ. **‘ ಹಯೋ ನ ವಿದ್ವಾँ ಅಯುಜಿ ಸ್ವಯಂ ಧುರಿ ’ (ಋ. ಸಂ. ೪-೨-೨೮-೧) ‘ ಹಯೋಽಸಿ ’ (ತಾ. ಬ್ರಾ. ೧-೧-೭)**

(೩) **ಅರ್ವಾ** ॥ ‘ಋ–ಗತಿಪ್ರಾಪಣಯೋಃ’ ಧಾತು. ‘ಸ್ನಾಮದಿಪದ್ಯರ್ತಿ—’ ಸೂತ್ರದಿಂದ ವನಿಪ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಅರ್ವನ್ ನಾಂತಪದವಾಗುತ್ತದೆ. ಪ್ರಥಮಾವಿಭಕ್ತಿಯಲ್ಲಿ ದೀರ್ಘಾದಿಗಳು ಬಂದು ಅರ್ವಾ ಎಂದಾಗುತ್ತದೆ. ದಾರಿಯಲ್ಲಿ ಹೋಗುವುದು, ಮಾರ್ಗದ ಕೊನೆಮುಟ್ಟಿಸುವುದು ಎಂದರ್ಥ. ಅಥವಾ ಇತರರನ್ನು ಆಶ್ರಯಿಸುವುದು, ಅಶ್ವಾರೋಹನ ಅಧೀನವಾದುದರಿಂದ ಅಸ್ವತಂತ್ರ ಎಂದರ್ಥ. ಉದಾಹರಣೆ—**‘ದ್ರೂನ್ನೋ ವನ್ವನ್ ಕ್ರತ್ವಾ ನಾರ್ವಾ’ (ಋ. ಸಂ. ೪-೫-೧೪-೪)**

(೪) **ವಾಜೀ** ॥ ವಜ–ಗತೌ–ಧಾತು. ಇದಕ್ಕೆ ಘಞ್ ಪ್ರತ್ಯಯ ಬಂದರೆ ಞಿತ್ತಾದುದರಿಂದ ಉಪಧಾದೀರ್ಘ. ವಾಜ ಅಂದರೆ ವೇಗ. ‘ರಂಹಸ್ತರಣಿಃ ಪ್ರಸಭೋ ವೇಗೋ ರಪೋ ಜವೋ ವಾಜಃ’ ಎಂದು ನಿಘಂಟು. ‘ಅಜಿವ್ರಜ್ಯೋಶ್ಚ’ (ಪಾ. ಸೂ. ೭.೩.೬೦) ಸೂತ್ರದಲ್ಲಿ ನ್ಯಾಸಕಾರನು ಚಕಾರ ಅನುಕ್ತಸಮುಚ್ಚಯಕ್ಕೋಸ್ಕರ ಹೇಳಿರುವುದರಿಂದ ವಜಧಾತುವಿಗೂ ಕುತ್ವ ನಿಷೇಧ ಬರುತ್ತದೆಂದು ಹೇಳಿರುತ್ತಾನೆ. ‘ವಾಜಃ, ವಾಜ್ಯಮ್’ ಇತ್ಯಾದಿ. ‘ವಾಜಃ ಅಸ್ಯ ಅಸ್ತಿ’ ಎಂಬ ಮತ್ವರ್ಥದಲ್ಲಿ ಅದಂತವಾದುದರಿಂದ ‘ಅತ ಇನಿಠನೌ’ (ಪಾ. ಸೂ. ೫-೨-೧೧೫) ಸೂತ್ರದಿಂದ ಇನಿಪ್ರತ್ಯಯ. ‘ಯಸ್ಯೇತಿ ಚ’ ಅಕಾರ ಲೋಪ. ವಾಜಿನ್ ನಾಂತಪದವಾಗುತ್ತದೆ. ವೇಗವುಳ್ಳದ್ದು ಕುದುರೆ. ಅಥವಾ ವಾಜ ಅಂದರೆ ಹವಿರ್ಲಕ್ಷಣವಾದ ಅನ್ನ. ಅಶ್ವಜಾತಿ ದೇವತೆಗಳಿಗೆ ಉಚಿತವಾದ ಹೆಸರು ಮುಂತಾದ ಧಾನ್ಯದ ಅನ್ನದಿಂದ ಕೂಡಿರುವುದು ಎಂದರ್ಥ. ಅಥವಾ ವೇಜನ

ವುಳ್ಳದ್ದು ವಾಜೀ. ವೇಜನವೆಂದರೆ ನಡುಕ. ಕುದುರೆಯು ಕಂಪವುಳ್ಳದ್ದು, ಇತರರನ್ನೂ ನಡುಗಿಸುತ್ತದೆ. ಆಗ 'ಓವಿಜೀ ಭಯಚಲನಯೋಃ' ಧಾತುವಿನಿಂದ ಈ ರೂಪಸಿದ್ಧಿಯಾಗುತ್ತದೆಯೆಂದು ತಿಳಿಯಬೇಕು. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಅಭಿಮತರೂಪವಾಗುತ್ತದೆ. ಉದಾಹರಣೆ—**'ವಿಮೋಚನಂ ವಾಜಿನೋ ರಾಸಭಸ್ಯ'** (ಋ. ಸಂ. ೩-೩-೧೯-೫) ||

(೫) **ಸಪ್ತಿಃ** || ಷಪ–ಸಮವಾಯೇ. ಧಾತು. 'ಧಾತ್ವಾದೇಃ ಷಃ ಸಃ' ಆದಿಗೆ ಸತ್ವ- "ಸಪಿನಸಿವಸಿಪದಿಭ್ಯಸ್ತಿಪ್" ಎಂಬ ಭೋಜಸೂತ್ರದಿಂದ ತಿಪ್‌ಪ್ರತ್ಯಯ. ಯುದ್ಧದಲ್ಲಿ ವೇಗದಿಂದ ಬಂದು ಸೇರುವುದು ಸಪ್ತಿಪದವಾಚ್ಯವಾದ ಕುದುರೆ. ಅಥವಾ ಸೃಪ್ಲೃ–ಗತೌಧಾತು ಇದಕ್ಕೆ ತಿಪ್ರತ್ಯಯ ಬಂದಾಗ ಗುಣ ಬಂದರೆ ಬಹುಲಗ್ರಹಣದಿಂದ ರೇಫಕ್ಕೆ ಲೋಪ. 'ಸರ್ಪತಿ ಇತಿ ಸಪ್ತಿಃ' ದಾರಿಯಲ್ಲಿ ಹೋಗುವುದು. ಉದಾಹರಣೆ—

**"ಜುಷಾಣ ಇಂದ್ರ ಸಪ್ತಿಭಿರ್ನ ಆಗಹಿ"** (ಋ. ಸಂ. ೬–೧–೯–೩) ||

(೬) **ವಹ್ನಿಃ** || ಪ್ರಾಪಣಾರ್ಥಕವಾದ ವಹಧಾತುವಿಗೆ "ವಹಿಶ್ರಿಶ್ರುಯುದ್ರು—" (ಉ. ೪–೫೧) ಸೂತ್ರದಿಂದ ನಿಪ್ರತ್ಯಯ. ವಹ್ನಿಃ. ಭಾರವನ್ನು ಒಯ್ಯುವುದು ಕುದುರೆ. ಉದಾಹರಣೆ—

**"ಯೇ ತ್ವಾ ವಹಂತಿ ವಹ್ನಯಃ** (ಋ. ಸಂ. ೧–೧–೨೬–೬) ||

(೭) **ದಧಿಕ್ರಾಃ** || **ತತ್ರ ದಧಿಕ್ರಾ ಇತ್ಯೇತದ್ ದಧತ್ ಕ್ರಾಮತೀತಿ ವಾ ದಧತ್ ಕ್ರಂದತೀತಿ ವಾ ದಧದಾಕಾರೀ ಭವತೀತಿ ವಾ** (ನಿರು–೨–೨೭) ||

ಇದು ಎರಡು ಪದಗಳಿಂದ ನಿಷ್ಪನ್ನವಾಗಿದೆ. ದಧತ್ ಎಂಬ ಪೂರ್ವಪದ ಸಮಾನವಾಗಿದೆ. "ದಧತ್ ಕ್ರಾಮತಿ' ಅಶ್ವಾರೋಹಿಯನ್ನು ಹೊತ್ತು ಹೋಗುತ್ತದೆ. 'ಕ್ರಮು ಪಾದವಿಕ್ಷೇಪೇ' ಧಾತು. 'ಜನಸನ ಖನಕ್ರಮಗಮೋ ವಿಟ್' (ಪಾ. ಸೂ. ೩–೨–೬೭) ಸೂತ್ರದಿಂದ ವಿಟ್. ಇದು ಪರದಲ್ಲಿರುವಾಗ 'ವಿಡ್ವನೋರನುನಾಸಿಕಸ್ಯಾತ್ 'ಸೂತ್ರದಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಆತ್ವ. ಪೃಷೋದರಾದಿಪಠಿತವಾದುದರಿಂದ ದಧತ್ ಎಂಬಲ್ಲಿ ತಲೋಪ, ಅಕಾರಕ್ಕೆ ಇಕಾರಾದೇಶ. ದಧಿಕ್ರಾಃ ಆಕಾರಾಂತಪದವಾಗುತ್ತದೆ. 'ದಧತ್ ಕ್ರದಂತಿ' ಭಾರವನ್ನು ಹೊತ್ತಿದ್ದರೂ ಸಂತೋಷದಿಂದ ಹ್ರೇಷಾರವನ್ನು ಮಾಡುತ್ತದೆಂದರ್ಥ, ದಧತ್ ಉಪಪದವಾಗಿರುವಾಗ ಕ್ರದಿಧಾತುವಿಗೆ 'ಅನ್ಯೇಭ್ಯೋಽಪಿ ದೃಶ್ಯಂತೇ' ಸೂತ್ರದಿಂದ ವಿಚ್ ಪ್ರತ್ಯಯ. ವ್ಯತ್ಯಯದಿಂದ ನುಮಿನ ನಕಾರಕ್ಕೆ ಆತ್ವ. ದಲೋಪ. 'ದಧದಾಕಾರಿ ಭವತಿ' ಭಾರ ಹೊತ್ತಾಗ ಸ್ವಲ್ಪ ಬಗ್ಗಿದ ಮಧ್ಯಭಾಗವುಳ್ಳದ್ದೂ, ಎತ್ತಿದ ಕತ್ತುಳ್ಳದ್ದೂ, ಸ್ವಲ್ಪ ಸಂಕುಚಿತವಾದ ಮೂಗೂ, ನಿಶ್ಚಲವಾದ ಕಣ್ಣುಳ್ಳದ್ದೂ ಆಗಿ ಒಂದು ವಿಶಿಷ್ಟಾಕಾರ ಉಳ್ಳದ್ದಾಗಿರುತ್ತದೆ. ದಧತ್ ಉಪಪದವಾಗಿರುವಾಗ ಕೃಞ್‌ಧಾತುವಿಗೆ ಕ್ವಿಪ್‌ಪ್ರತ್ಯಯ. ಆಙ್ ಉಪಸರ್ಗ ವ್ಯತ್ಯಯದಿಂದ ಯಣ್. ದಧಿಕ್ರಾಃ ಬಹುವಚನಾಂತರೂಪ. ಉದಾಹರಣೆ—

**"ಕ್ರತುಂ ದಧಿಕ್ರಾ ಅನು ಮಂತವೀತ್ವತ್** (ಋ. ಸಂ. ೩–೭–೧೪–೪)

(೮) **ದಧಿಕ್ರಾವಾ** || ಹಿಂದಿನಂತೆ ಇಲ್ಲಿಯೂ ಎರಡು ಪದಗಳಿವೆ. ಹಿಂದಿನಂತಯೇ ಅರ್ಥ ತಿಳಿಯಬೇಕು. "ಅನ್ಯೇಭ್ಯೋಽಪಿ ದೃಶ್ಯಂತೇ" (ಪಾ–ಸೂ–೩–೨–೭೫) ಸೂತ್ರದಿಂದ ವನಿಪ್‌ಪ್ರತ್ಯಯಮಾತ್ರ ಬೇರೆಯೆಂದು ತಿಳಿಯಬೇಕು. ಉದಾಹರಣೆ—**'ದಧಿಕ್ರಾವೇಷಮೂರ್ಜಂ ಸ್ವರ್ಜನತ್** (ಋ. ಸಂ. ೩–೭–೧೪–೨) ||

(೯) ಏತಗ್ವಾ ‖ ಇಲ್ಲಿಯೂ ಎರಡುಪದಗಳಿಂದ ಈ ರೂಪವಾಗಿದೆ. ಗತ್ಯರ್ಥಕವಾದ ಇಣ್‌ಧಾತುವಿಗೆ "ಹಸಿಮೃಗ್ರಿಣ್ವಾಮಿದ"-(ಉ-೩-೮೬) ಸೂತ್ರದಿಂದ ಕರ್ಮಾರ್ಥದಲ್ಲಿ ತನ್ ಪ್ರತ್ಯಯ. 'ಭೂತೇಽಪಿದೃಶ್ಯಂತೇ' ಎಂದು ಸೂತ್ರವಿರುವುದರಿಂದ ಇದುಭೂತಕಾಲಾರ್ಥದಲ್ಲಿ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. 'ಏತಂ' ಅಂದರೆ ಹೋದದ್ದು, ಪಟ್ಟಿದ್ದು ಎಂದರ್ಥ. ಇದು ಉಪಪದವಾಗಿರುವಾಗ ಗತ್ಯರ್ಥಕ ಗಮ್‌ಧಾತುವಿಗೆ ಬಹುಲಗ್ರಹಣದಿಂದ 'ಇಣ್‌ಶೀಙ್‌ಭ್ಯಾಂ ವನ್' (ಉ-೧-೧೫೦) ಸೂತ್ರದಿಂದ ವಿಹಿತವಾದ ವನ್‌ಪ್ರತ್ಯಯ, ಟಿಲೋಪ (ಅಮ್) ಬರುತ್ತದೆ. 'ಗಮ್ಯತ ಇತಿ ಗ್ವಃ' 'ಏತಃ ಪ್ರಾಪ್ತಃ ಗಂತವ್ಯೋ ಯೇನ ಸಃ' ಏತಗ್ವಃ. ಹೋಗಬೇಕಾದುದನ್ನು ಬೇಗ ಹೊಂದಿರುವುದು. ಕುದುರೆ ವೇಗಾತಿಶಯದಿಂದ ವಿಲಂಬವಿಲ್ಲದೆ ಹೋಗಬೇಕಾದ ದೇಶಕ್ಕೆ ಹೋಗುತ್ತದೆ. 'ಏತಗ್ವಾಃ ಪ್ರಾಪ್ತಗಂತವ್ಯಾಃ' ಎಂದು ಮಾಧವರ ವ್ಯಾಖ್ಯಾನ. ಅಥವಾ ಏತಶಬ್ದ ಶುಕ್ಲವರ್ಣಪರ್ಯಾಯವಾಚಕ. ಇದು ಉಪಪದವಾಗಿರುವಾಗ ಗಮ್‌ಧಾತುವಿಗೆ ಕ್ವಿಪ್. ಇದು ಪರದಲ್ಲಿರುವಾಗ 'ಗಮಃ ಕ್ವೌ' (ಪಾ. ಸೂ. ೬-೪-೪೦) ಸೂತ್ರದಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. 'ಊಙ್ಗಮಾದೀನಾಮ್' ವಾರ್ತಿಕದಿಂದ ಉಕಾರಾಂತಾದೇಶ. ಆಙ್ ಉಪಸರ್ಗ. "ಆಗಮನಂ ಆಗೂಃ' ವ್ಯತ್ಯಯದಿಂದ ಆಕಾರ ಉಕಾರಗಳಿಗೆ ಸ್ಥಾನವಿಪರ್ಯಯ. ಶುಕ್ಲವರ್ಣದ ಪ್ರಾಪ್ತಿಯು ಇದಕ್ಕೆ ಇದೆ ಎಂದು ಮತ್ವರ್ಥ ಪ್ರತ್ಯಯ ಬಂದಾಗ ಛಾಂದಸವಾದುದರಿಂದ ಆ ಪ್ರತ್ಯಯಕ್ಕೆ ಲುಕ್. ಏತಗ್ವಾಃ=ಬಿಳೀ ಬಣ್ಣದ ಕುದುರೆಗಳು. ಅಥವಾ ಏತೆ ಅಂದರೆ ಶುಕ್ಲವರ್ಣ. ಅದು ಉಳ್ಳದ್ದು ಎಂದು ಅರ್ಥ ವಿವಕ್ಷೆಮಾಡಿದಾಗ "ಕೇಶಾದ್ವೋಽನ್ಯತರಸ್ಯಾಮ್" ಸೂತ್ರದಿಂದ ವಪ್ರತ್ಯಯ. ಗಕಾರ ಹೆಚ್ಚಾಗಿ ಬರುತ್ತದೆ. 'ಏತಸ್ಯ ಶ್ವೇತವರ್ಣಸ್ಯ ಗ್ವೋ ಮತ್ವರ್ಥೀಯೋ ಭವತಿ' ಎಂದು ಮಾಧವನೂ ಈ ಅರ್ಥವನ್ನು ಹೇಳಿರುತ್ತಾನೆ. ಯಾವ ಕುದುರೆಯೇ ಆಗಲಿ ಅದರ ದೇಹದಲ್ಲಿ ಎಲ್ಲಿಯಾದರೂ ಬಿಳಿಬಣ್ಣ ಇದ್ದೇ ಇರುತ್ತದೆ. ಒಂದು ಶಬ್ದವು ರೂಢಿಯಿಂದ ಒಂದರ್ಥವನ್ನು ಹೇಳುತ್ತಾ ಇನ್ನೊಂದರ್ಥದಲ್ಲಿ ಅದು ಪ್ರಯೋಗಿಸಲ್ಪಟ್ಟರೆ ಆಗ ಆ ಅರ್ಥಸಮಂಜಸವಾಗುವಂತೆ ವ್ಯುತ್ಪತ್ತಿ ಕಲ್ಪಿಸಬೇಕೆಂದು ಪದಮಂಜರೀಕಾರನು ಹೇಳಿರುತ್ತಾನೆ. ಸಂಗತವಾದುದರಿಂದ ಇಲ್ಲಿ ನಾನಾರ್ಥಗಳನ್ನು ವಿವರಿಸುವುದು. ಕೆಲವು ಕಡೆ ಏತಗ್ವಾ ಎಂದು ಆಕಾರಾಂತವಾಗಿಯೇ ಪಠಿತವಾಗಿದೆ. ಉದಾಹರಣೆ—

"ಏತಗ್ವಾ ಚಿನ್ನ ಸುಯುಜಾಯುಜಾನಃ" (ಋ. ಸಂ. ೫-೫-೧೭-೨) "ಏತಗ್ವಾ ಚಿದ್ಯ ಏತಶಾ ಯುಯೋಜತೇ" (ಋ. ಸಂ. ೬-೫-೯-೨) ಇಲ್ಲಿ "ಸುಪಾಂ ಸುಲುಕ್—" (ಪಾ. ಸೂ. ೭-೧-೩೯) ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ. ‖

(೧೦) ಏತಶಃ ‖ ಇಣ್-ಗತೌ-ಧಾತು. 'ಇಣಸ್ತಶನ್‌ತಶಸುನೌ' (ಉ-೩-೧೪೯) ಸೂತ್ರದಿಂದ ತಶನ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಏತಶಃ ಹೋಗುವುದರಲ್ಲಿ ಪಟುವಾದದ್ದು ಎಂದರ್ಥ. ಅಥವಾ ಲೋಮಾದಿಗಣಪಠಿತವಾದುದರಿಂದ ಏತಶಬ್ದದ ಮೇಲೆ ಶಸ್‌ಪ್ರತ್ಯಯ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತ ರೂಪಸಿದ್ಧಿ. ಉದಾಹರಣೆ—**'ಏತಶೋ ವಹತಿ ಧೂರ್ಷು ಯುಕ್ತಃ' (ಋ. ಸಂ. ೫-೫-೫-೨) 'ಯದೇತಶೇಭಿಃ ಪತರೈ ರಥರ್ಯಸಿ' (ಋ. ಸಂ. ೭-೮-೧೨-೩) ‖**

(೧೧) ಪೈದ್ವಃ ‖ ಗತ್ಯರ್ಥಕವಾದ ಪದ ಧಾತುವಿಗೆ ಬಹುಲಗ್ರಹಣದಿಂದ 'ಕೃಗೃಶೃದ್ರಾಭ್ಯೋ ವಃ' ಸೂತ್ರದಿಂದ ವಿಹಿತವಾದ ವಪ್ರತ್ಯಯ ಬರುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಧಾತುವಿನ ಅಕಾರಕ್ಕೆ ಐಕಾರಾದೇಶ. ಪೈದ್ವಃ. ಪದ್ಯತೆ. ಹೋಗುವುದು ಅಥವಾ ಇದರಿಂದ ಜನರು ಹೋಗುವುದು ಎಂದರ್ಥ. 'ಪದೇಃ ಪೈದ್ವೋ ಗತಿ ಕ್ರಿಯಾಯಾಮ್'

ಎಂದು ಮಾಧವನೂ ಹೇಳಿರುತ್ತಾನೆ. ಉದಾಹರಣೆ—**'ಪೈದ್ವೋ ನ ಹಿ ತ್ವ ಮಹಿ ನಾಮ್ನಾಂ ಹನ್ತಾ** (ಋ. ಸಂ-೭-೩-೨೪-೪) ||

(೧೨) **ದೌರ್ಗಹಃ** || ದುರ್ ಉಪಸರ್ಗ ಉಪಪದವಾಗಿರುವಾಗ ಉಪಾದಾನಾರ್ಥಕ ಗ್ರಹಾಧಾತು ಅಥವಾ ಗಾಹ್ (ವಿಲೋಡನಾರ್ಥ) ಧಾತುವಿಗೆ 'ಈಷದ್ದುಃ ಸುಷು ಕೃಚ್ಛ್ರಾರ್ಥೇಷು ಖಲ್' (ಪಾ. ಸೂ. ೩-೩-೧೨೬) ಸೂತ್ರದಿಂದ ಖಲ್‌ಪ್ರತ್ಯಯ. ಅ ಉಳಿಯುತ್ತದೆ. ಪೃಷೋದರಾದಿಯಲ್ಲಿ ಸೇರಿಸುವುದರಿಂದ ಗ್ರಹಧಾತುವಿನ ರೇಫಲೋಪವೂ, ಗಾಹ್ ಧಾತುವಿಗೆ ಹ್ರಸ್ವವೂ ಬರುತ್ತದೆ. "ದುರ್ಗಹ ಏವ ದೌರ್ಗಹಃ. ಸ್ವಾರ್ಥದಲ್ಲಿ ಪ್ರಜ್ಞಾದಿಗಣಪಠಿತವಾದುದರಿಂದ ಅಣ್ ಪ್ರತ್ಯಯ. ಣಿತ್ತಾದುದರಿಂದ ಆದಿವೃದ್ಧಿ. ಕುದುರೆಯ ಗುಟ್ಟನ್ನು ತಿಳಿಯದವರಿಂದ ಹೊಂದಲು ಅಶಕ್ಯವಾದದ್ದು ಎಂದರ್ಥ. ಅಥವಾ ದುರ್ಗಹ ಅಂದರೆ ದುಃಖದಿಂದ ಪ್ರವೇಶಾರ್ಹವಾದದ್ದು ಜಲ. ಅಲ್ಲಿ ಹುಟ್ಟಿರುವುದು ಕುದುರೆ. 'ತತ್ರಭವಃ ಸೂತ್ರದಿಂದ ಅಣ್ ಬಂದರೆ ಪೂರ್ವೋಕ್ತರೂಪವಾಗುತ್ತದೆ. ಶತಪಥ ಬ್ರಾಹ್ಮಣದಲ್ಲಿ ನೀರೇ ಅಶ್ವಕ್ಕೆ ಮೂಲಕಾರಣವೆಂದು ಹೇಳಿದೆ. ಉದಾಹರಣೆ. **ಸಪ್ತ್ಯಪುರುಷಯೋಃ ದೌರ್ಗಹೇ ಬಧ್ಯಮಾನೇ** (ಋ. ಸಂ. ೩-೭-೧೮-೩)

(೧೩) **ಔಚ್ಚೈಃಶ್ರವಸಃ** || ಅಮೃತ ಕಡೆಯುವಾಗ ಹುಟ್ಟಿದ ಕುದುರೆಗೆ 'ಉಚ್ಚೈಃ ಶ್ರವಾಃ' ಎಂದು ಹೆಸರು ಇದು ಇಂದ್ರನ ಕುದುರೆ. ಉಚ್ಚೈಃ=ಅಧಿಕವಾದ ಶ್ರವಃ=ಕೀರ್ತಿಯಿಂದ ಕೂಡಿರುವುದೆಂದರ್ಥ, ಇದರಿಂದ ಅಥವಾ ಇದರ ಕುಲದಲ್ಲಿ ಹುಟ್ಟಿದವುಗಳು. 'ತಸ್ಯಾಪತ್ಯಮ್' (ಪಾ. ಸೂ. ೪-೧-೯೨) ಸೂತ್ರದಿಂದ ಅಣ್‌ಪ್ರತ್ಯಯ. 'ತದ್ಧಿತೇಷ್ವಚಾ—' ಸೂತ್ರದಿಂದ ಆದಿವೃದ್ಧಿ. ಔಚ್ಚೈಃ ಶ್ರವಸಃ ಎಂದಾಗುತ್ತದೆ. ಇದಕ್ಕೆ ಉದಾಹರಣೆ ಶ್ರುತಿ ಹುಡುಕಬೇಕು.

(೧೪) **ತಾರ್ಕ್ಷ್ಯಃ** || ಎರಡು ಪದಗಳಿಂದ ಈ ರೂಪವಾಗಿದೆ. ತೂರ್ಣಂ ಅಶ್ನುತೇ ಗಂತವ್ಯಮ್. ತೀರ್ಣೇ ಅಂತರಿಕ್ಷೇ ಕ್ಷಿಯತಿ. ಬೇಗನೆ ಹೊಂದಬೇಕಾದ ಪ್ರದೇಶವನ್ನು ಹೊಂದುತ್ತದೆ, ಆಕಾಶದಲ್ಲಿ ಹಾರಿಹೋಗುತ್ತದೆ ಎಂದರ್ಥ. ತೂರ್ಣ, ಅಥವಾ ತೀರ್ಣಪೂರ್ವಪದ. ಇದು ಉಪಪದವಾಗಿರುವಾಗ ಅಶಧಾತು ಅಥವಾ ಕ್ಷಿಧಾತುವಿಗೆ ಪ್ರತ್ಯಯ ಬಂದು ಈ ರೂಪವಾಗುತ್ತದೆ. ಪೃಷೋದರಾದಿಯಲ್ಲಿ ಸೇರಿಸಿಯೇ ಅಭಿಮತರೂಪ ಸಾಧನೆ ಮಾಡಿಕೊಳ್ಳಬೇಕು. ಕುದುರೆ ವೇಗದಿಂದ ಓಡುವಾಗ ಆಕಾಶದಲ್ಲಿ ಹಾರಿದಂತೆಯೇ ತೋರುತ್ತದೆ. ಅಥವಾ ವೇಗದಿಂದ ತಾರ್ಕ್ಷ್ಯ ಅಂದರೆ ಗರುಡನಿಗೆ ಸಮಾನವಾದುದರಿಂದ ಇದೂ ತಾರ್ಕ್ಷ್ಯಪದವಾಚ್ಯವಾಗುತ್ತದೆ. 'ತುರಂಗ ಗರುಡೌ ತಾರ್ಕ್ಷ್ಯೌ' ಎಂದು ಅಮರ. 'ತೃಕ್ಷಸ್ಯ ಅಪತ್ಯಂ ತಾರ್ಕ್ಷ್ಯಃ' ಎಂದು ಕ್ಷೀರಸ್ವಾಮಿ. ಗರ್ಗಾದಿಗಣಪಠಿತವಾದುದರಿಂದ ಅಪತ್ಯಾರ್ಥದಲ್ಲಿ ಯಞ್‌ಪ್ರತ್ಯಯ. ಇದಕ್ಕೂ ಶ್ರುತಿ ಹುಡುಕಬೇಕು.

(೧೫) **ಆಶುಃ** || ಅಶೂ—ವ್ಯಾಪ್ತೌ. ಧಾತು. 'ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್' (ಉ-೧-೧) ಸೂತ್ರದಿಂದ ಉಣ್‌ಪ್ರತ್ಯಯ. ಣಿತ್ತಾದುದರಿಂದ ಉಪಧಾವೃದ್ಧಿ. ದಾರಿಯನ್ನು ಹೊಂದಿರುತ್ತದೆ ಎಂದರ್ಥ. ಅಥವಾ ಭೋಜನಾರ್ಥಕ ಅಶಧಾತುವಿಗೆ ಬಹುಲಗ್ರಹಣದಿಂದ ಉಣ್. ತುಂಬಾ ಭಕ್ಷಣವುಳ್ಳದ್ದು ಕುದುರೆ. ಆಶು ಎಂಬುದು ಕ್ಷಿಪ್ರನಾಮವಾಗಿಯೂ ನಿಘಂಟುವಿನಲ್ಲಿ ಹೇಳಿದೆ. ಆಗ ವೇಗವುಳ್ಳದ್ದು ಎಂದರ್ಥವಾಗುತ್ತದೆ. ಉದಾಹರಣೆ—**'ದ್ರವಚ್ಚ ಕ್ರೇಷ್ವಾಶುಷು** (ಋ. ಸಂ. ೬-೩-೧೩-೮) ||

(೧೬) **ಬ್ರಧ್ನಃ** || ಭಾಸ್ಕರಮಿಶ್ರರು 'ಪರಿವೃಢ ಅಂದರೆ (ಕತ್ತು) ಪಟ್ಟಿಗೆ ಬ್ರಧ್ನನೆಂದು' ಹೆಸರು ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಉವಟಾಚಾರ್ಯರು ಸ್ತೋತ್ರವೆಂದು ಅರ್ಥಮಾಡಿರುತ್ತಾರೆ. ಕುದುರೆಯನ್ನು ಕಟ್ಟುವುದಲ್ಲದೆ ಅನ್ನದಂತೆ

ಉಪಕಾರಿಯಾದುದರಿಂದ ಸ್ತೋತ್ರಮಾಡುತ್ತಾರೆ. ಉದಾಹರಣೆ—**‘ಯುಂಜಂತಿ ಬ್ರಧ್ನಮರುಷಂ ಚರಂತಮ್’** (ಋ ಸಂ. ೧-೧-೧೧-೧) ||

(೧೭) **ಅರುಷಃ** || ‘ಋ ಗತಿಪ್ರಾಪಣಯೋಃ’ ಧಾತು. ಬಹುಲಗ್ರಹಣದಿಂದ ಉಷನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಎದುರಾಗಿ ಹೋಗುತ್ತದೆ. ಅಥವಾ ಜನರಿಂದ ಹೊಂದಲ್ಪಡುತ್ತದೆ ಎಂದರ್ಥ. ಅರುಷವೆಂಬುದು ರೂಪನಾಮವಾಗಿ ನಿಘಂಟುವಿನಲ್ಲಿ ಹೇಳಿದೆ (೬-೭) ಅದುಉಳ್ಳದ್ದು ಎಂಬ ಮತ್ವರ್ಥದಲ್ಲಿ ಅರ್ಶಆದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಪ್ರಶಸ್ತರೂಪವುಳ್ಳದ್ದೆಂದರ್ಥ. ಉದಾಹರಣೆ—**‘ಹರಿಂ ಮೃಜಂತ್ಯರುಷೋ ನ ಯುಜ್ಯತೇ’** **(ಋ. ಸಂ. ೭-೨-೨೭-೧)**

(೧೮) **ಮಾಂಶ್ಚತ್ವಃ**|| ಮನ-ಜ್ಞಾನೇ. ಧಾತು. ಪೃಷೋದರಾದಿ ಪಠಿತವಾದುದರಿಂದ ಉಕ್ತರೂಪಸಿದ್ಧವಾಗುತ್ತದೆ. ‘ಮಹೀಮೇ ಅಸ್ಯ ವೃಷನಾಮ ಶೂಷೇ ಮಾಂಶ್ಚತ್ವೇ ವಾ ಪೃಶನೇ ವಾ ವಧತ್ರೇ’ (ಋ. ಸಂ. ೭-೪-೨೧-೪) ಎಂಬಲ್ಲಿ ಮಾಧವಾ ಚಾರ್ಯರಭಾಷ್ಯ. ಮಹೀ=ದೊಡ್ಡದಾದ ಇಮೇ=ಇವುಗಳು, ಅಸ್ಯ=ಚಂದ್ರನಿಗೆ ಶೂಷೇ=ಸುಖಕರವಾಗಿರುತ್ತವೆ. ಮಾಂಶ್ಚತ್ವೇ. ಇದು ಕುದುರೆಯಸಾಮ. ಮಕ್ಷುಚರತೀತಿ. ಬೇಗನೆ ಹೋಗುವವುಗಳು. ಕುದುರೆಯಿಂದ ಯುದ್ಧಮಾಡುತ್ತಿರಲು ಶತ್ರುಗಳಿಗೆ ಹಿಂಸೆಯಾಗುತ್ತದೆ. ಇತ್ಯಾದಿ ವಿವರಣೆ ಇದೆ. ಮಂಶ್ಚತೇ ಎಂದೂ ಪಾಠ ದೃಷ್ಟವಾಗಿದೆ. ‘ಬ್ರಧ್ನಂ ಮಾಂಶ್ಚತೋರ್ವರುಣಸ್ಯ ಬಭ್ರುಮ್’ ಎಂಬ ಮಂತ್ರದಲ್ಲಿಯೂ ಮಂಶ್ಚತು ಎಂಬುದು ಅಶ್ವನಾಮ ಎಂದು ಹೇಳಿದೆ. ಇಲ್ಲಿಮಾತ್ರ ವರುಣನಿಗೆ ವಿಶೇಷಣವೆಂದು ಹೇಳಿದೆ.

(೧೯) **ಅವ್ಯಥಯಃ** || ಇದರಿಂದ ಎಂಟು ಶಬ್ದಗಳವರೆಗೆ ಬಹುವಚನಾಂತವಾಗಿರುತ್ತವೆಯೆಂದು ನಿರುಕ್ತ. (೨-೨೪೭) ವ್ಯಥ-ಭಯಚಲನಯೋಃ ಧಾತು. ‘ ಇನ್‌ಸರ್ವಧಾತುಭ್ಯಃ’ ಸೂತ್ರದಿಂದ ‘ಇನ್‌ಪ್ರತ್ಯಯ. ವ್ಯಥೆ ಪಡುವುದು ವ್ಯಥಿ. ನವ್ಯಥಯಃ ಅವ್ಯಥಯಃ. ನಞ್‌ಸಮಾಸ. ಯುದ್ಧಾಭಿಮುಖವಾದಾಗ ಭಯಕಾರಣವಿದ್ದರೂ ಭಯ ಹೊಂದದಿರುವವುಗಳು. ಅಥವಾ ವ್ಯಥಿ ಅಂದರೆ ಕ್ರೋಧನಾಮ. (ನಿಘ-೨-೧೬) ಹತ್ತಿದರೂ, ಹೊಡೆದರೂ, ಕಟ್ಟಿದರೂ ಸಿಟ್ಟು ಮಾಡದಿರುವವುಗಳು ಎಂದರ್ಥ. ಉದಾಹರಣೆ—**‘ ಪತತ್ರಿಭೀರಶ್ರಮೈರವ್ಯಥಿಭಿಃ ’** (ಋ. ಸಂ. ೫-೫-೧೬-೭) ||

(೨೨) **ಶ್ಯೇನಾಸಃ** || ಶ್ಯೈಙ್-ಗತೌ. (ಭ್ವಾ-ಆ.) “ಶಾಸ್ತ್ಯೃಧ್ಯ—” ಸೂತ್ರದಿಂದ ಇನಚ್‌ಪ್ರತ್ಯಯ. ಧಾತುವಿಗೆ ಆತ್ವ ಬಂದಾಗ ಗುಣ. ಸ್ತುತಿಸುವಂತೆ ಹೋಗುವುದು. ಸುಂದರಗಮನವುಳ್ಳದ್ದೆಂದರ್ಥ. ಜಸ್ ಬಂದಾಗ ಅಸುಗಾಗಮ ಬಂದಿದೆ. ಉದಾ:—**“ಶ್ಯೇನಾಸೋ ನ ದು ವಸನಾಸೋ ಅರ್ಥಮ್”** (ಋ-ಸಂ-೩-೫-೫-೫).

(೨೦) **ಸುಪರ್ಣಾಃ**|| ಪೄ-ಪಾಲನಪೂರಣಯೋಃ ಧಾತು. ‘ ಧಾಪೄವಸ್ಯಜ್ಯತಿಭ್ಯೋ ನಃ’ (ಉ. ೩-೬) ಸೂತ್ರದಿಂದ ನಪ್ರತ್ಯಯ. ಧಾತು ಋಕಾರಕ್ಕೆ ಗುಣ ಬಂದಾಗ ಣತ್ವ. ಹುಲ್ಲು ಮುಂತಾದವುಗಳನ್ನು ಕೊಡುವುದರ ಮೂಲಕ ಚನ್ನಾಗಿ ರಕ್ಷಿಸಲ್ಪಡುತ್ತವೆ, ಹ್ರೇಷಾರವದಿಂದ ಯುದ್ಧಕಾಲದಲ್ಲಿ ಆಕಾಶವನ್ನು ತುಂಬುತ್ತವೆ ಎಂದರ್ಥ. ಅಥವಾ ಗತ್ಯರ್ಥಕ ಪತ್‌ಧಾತುವಿಗೆ ಬಹುಲಗ್ರಹಣದಿಂದ ನ ಪ್ರತ್ಯಯ. ತಕಾರಕ್ಕೆ ರೇಫಾವೇಶ. ಮನೋಹರವಾದ ಗಮನವುಳ್ಳವುಗಳೆಂದರ್ಥ. ಅಶ್ವಪರ್ಯಾಯದಲ್ಲಿ ಉದಾಹರಣೆ ಹುಡಕಬೇಕು.

(೨೧) **ಪತಙ್ಗಾಃ** || ಗತ್ಯರ್ಥಕವಾದ ಪತ್‌ಧಾತುವಿಗೆ ‘ ಪತೇರಂಗಚ್ ’ (ಉ. ಸೂ. ೧-೧೧೭) ಸೂತ್ರದಿಂದ ಅಂಗಚ್‌ಪ್ರತ್ಯಯ. ಅಥವಾ ಖಚ್‌ಪ್ರತ್ಯಯ ಪ್ರಕರಣದಲ್ಲಿ ‘ ಗಮೇಸ್ತು ಖಚ್ಯುಪಸಂಖ್ಯಾನಮ್ ಎಂಬ ವಾರ್ತಿಕದಿಂದ ಖಚ್‌ಪ್ರತ್ಯಯ. ಅದಕ್ಕೆ ವಿಕಲ್ಪವಾಗಿ ಡಿತ್ತ್ವ ಹೇಳಿರುವುದರಿಂದ ಟಿಗೆ ಲೋಪ. (ಅಮ್) ಖಿದಂತಪದವು ಉತ್ತರಪದ

ವಾಗಿರುವಾಗ ' ಖಿತ್ಯನವ್ಯಯಸ್ಯ ' (ಪಾ. ಸೂ. ೬-೩-೬೬) ಸೂತ್ರದಿಂದ ಮುಮಾಗಮ. ಅನುಸ್ವಾರ, ಪರಸವರ್ಣ. ಪೂರ್ವದಲ್ಲಿ ಕುದುರೆಗಳು ಪಕ್ಷಿಗಳಾಗಿದ್ದುವೆಂದು ಪ್ರಸಿದ್ಧಿ. ಉದಾಹರಣೆ—' **ರಥೇ ಯುಕ್ತಾಸ ಆಶವಃ ಪತಙ್ಗಾಃ** (ಋ. ಸಂ. ೧-೮-೧೮-೪) ॥ ಇಲ್ಲಿ ಆರು ಶಬ್ದ ವಿಶೇಷಣ.

(೨೩) **ನರಃ** ॥ ಣೀಞ್-ಪ್ರಾಪಣೇ. ಧಾತು. ಧಾತ್ವಾದಿಗೆ ನತ್ವ. "ನಯತೇರ್ಡಿಚ್ಚ" (ಉ. ೩-೯೩) ಸೂತ್ರದಿಂದ ಋನ್‌ಪ್ರತ್ಯಯ. ಇದು ಡಿತ್ತಾದುದರಿಂದ ಧಾತುವಿನ ಟಿಗೆ (ಈ) ಲೋಪ. ನೃ ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾ ಜಸ್‌ಪರವಾದಾಗ ಗುಣ ಬಂದರೆ ನರಃ ಎಂದಾಗುತ್ತದೆ. ಅಶ್ವಾರೋಹಿಯನ್ನು ಒಯ್ಯುತ್ತದೆ, ಕಾರ್ಯವನ್ನು ನಿರ್ವಹಿಸುತ್ತದೆ. ಉದಾಹರಣೆ—

**"ತ್ವಂ ಸೂರೋ ಹರಿತೋ ರಾಮಯೋನೄನ್" (ಋ. ಸಂ. ೧-೮-೨೬-೩)** ನೄನ್ ಅಂದರೆ ಅಶ್ವಗಳನ್ನು ಎಂದು ಮಾಧವರ ಭಾಷ್ಯ.

(೨೪) **ಹ್ವಾರ್ಯಾಣಾಮ್** ॥ ಹ್ವೃ-ಕೌಟಿಲ್ಯೇ. ಧಾತು. "ಋಹಲೋರ್ಣ್ಯತ್" (ಪಾ. ಸೂ. ೩-೧-೧೨೪) ಸೂತ್ರದಿಂದ ಣ್ಯತ್‌ಪ್ರತ್ಯಯ. ಯ ಉಳಿಯುತ್ತದೆ. ಣಿತ್ತಾದುದರಿಂದ 'ಅಚೋ ಞ್ಣಿತಿ' ಸೂತ್ರದಿಂದ ವೃದ್ಧಿ. ಷಷ್ಠೀ ಬಹುವಚನಾಂತವಾಗಿ ಹೇಳಿದೆ. ಹ್ವಾರ್ಯಾಃ. ಕಡಿವಾಣವನ್ನು ಎಳೆದಾಗ ಮುಖವನ್ನು ಡೊಂಕಾಗಿಮಾಡಿಕೊಳ್ಳುತ್ತವೆ ಎಂದರ್ಥ. ಅಥವಾ ಹ್ವೃಧಾತುವಿಗೆ ತಿನ್ನುವುದು ಎಂಬರ್ಥವನ್ನು ನಿಘಂಟುವಿನಲ್ಲಿ ಹೇಳಿದೆ. ಬಹುಲಗ್ರಹಣದಿಂದ ಣ್ಯತ್. ಹುಲ್ಲು ಮುಂತಾದವುಗಳನ್ನು ತಿನ್ನುವವುಗಳು ಎಂದರ್ಥ. ಗತ್ಯರ್ಥದಲ್ಲಿ ಹ್ವರಿಧಾತುವನ್ನು ಮಾಧವನು ಹೇಳಿರುತ್ತಾನೆ. ಆಗ ಗಮನಶೀಲಗಳು ಎಂದರ್ಥ. ಉದಾಹರಣೆ—

**ಪುತ್ರೋ ನ ಹ್ವಾರ್ಯಾಣಾಮ್ (ಋ. ಸಂ. ೪-೧-೧-೪)** ॥

(೨೫) **ಹಂಸಾಸಃ** ॥ ಹಿನ-ಹಿಂಸಾಗತ್ಯೋಃ. ಧಾತು. 'ವೃತೃವದಿಹನಿಕಮಿ—' (ಉ-೩-೬೯) ಸೂತ್ರದಿಂದ ಸಪ್ರತ್ಯಯ. ಹನ್+ಸ ಎಂದಿರುವಾಗ ನಕಾರಕ್ಕೆ ಅನುಸ್ವಾರ. ಬಹುವಚನದಲ್ಲಿ 'ಆಜ್ಜಸೇರಸುಕ್' ಸೂತ್ರದಿಂದ ಅಸುಗಾಗಮ. ಹಂಸಾಸಃ. ದಾರಿಯಲ್ಲಿ ಹೋಗುವವುಗಳು, ಹೋಗುವಾಗ ಕಾಲುಗಳಿಂದ ದಾರಿಯನ್ನು ಹಿಂಸಿಸುತ್ತವೆ (ಹಾಳುಮಾಡುತ್ತವೆ) ಎಂದರ್ಥ. ಉದಾಹರಣೆ—'**ಹಂಸಾಸೋ ಯೇ ವಾಂ ಮಧುಮಂತೋ ಅಸ್ರಿಧಃ**' (ಋ. ಸಂ. ೩-೭-೨೧-೪) ॥

(೨೬) **ಅಶ್ವಾಃ** ॥ ವ್ಯಾಪ್ತ್ಯರ್ಥಕವಾದ ಅಶೂ (ಉದಿತ್) 'ಅಶೂಪ್ರುಷಿಲಟಿಕಸಿ—' (ಉ-೧-೧೪೯) ಸೂತ್ರದಿಂದ ಕ್ವನ್‌ಪ್ರತ್ಯಯ. ವ ಉಳಿಯುತ್ತದೆ. ಬಹುವಚನದಲ್ಲಿ ಅಶ್ವಾಃ ಎಂದು ರೂಪ. ಭೋಜನಾರ್ಥಕ ಅಶಧಾತುವಿಗೆ ಬಹುಲಗ್ರಹಣದಿಂದ ಕ್ವನ್‌ಬಂದರೂ ಅಶ್ವ ಎಂದೇ ರೂಪ. ದಾರಿಯಲ್ಲಿ ವ್ಯಾಪಿಸಿರುವವುಗಳು, ಅಧಿಕ ಆಹಾರವುಳ್ಳವುಗಳು ಎಂದರ್ಥ. ಉದಾಹರಣೆ—'**ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ**' (ಋ. ಸಂ. ೨-೩-೧೨-೫)

ಹೀಗೆ ಇಪ್ಪತ್ತಾರು ಅಶ್ವನಾಮಗಳು.

———

**ತೇಷಾಮಷ್ಟಾ ಉತ್ತರಾಣಿ ಬಹುವತ್**—ಈ ಇಪ್ಪತ್ತಾರು ಅಶ್ವನಾಮಗಳಲ್ಲಿ ಕೊನೆಯ ಎಂಟು ನಾಮಗಳು ಯಾವಾಗಲೂ ಬಹುವಚನದಲ್ಲಿಯೇ ಉಪಯೋಗಿಸಲ್ಪಡುವವು.

**ಅಶ್ವಃ ಕಸ್ಮಾದಶ್ನುತೇಽಧ್ವಾನಂ ಮಹಾಶನೋ ಭವತೀತಿ ವಾ**—ಅಶ್ವಶಬ್ದದ ನಿಷ್ಪತ್ತಿ ಹೇಗೆಂದರೆ—**ಅಶ್ನೋತಿ ಅಧ್ವಾನಂ**—ಮಾರ್ಗವನ್ನು ವ್ಯಾಪಿಸಿ ಅತಿಕ್ರಮಿಸಿರುವುದರಿಂದ ಎಂದರೆ ಮಾರ್ಗಾನುಕ್ರಮಣಮಾಡುವುದರಿಂದ ಅಶ್ವವೆಂದು ಹೆಸರು ಅಥವಾ **ಮಹಾಶನೋ ವಾ ಭವತೀತಿ ವಾ**-ಇದು ಬಹಳ ಹೆಚ್ಚಾಗಿ ಆಹಾರವನ್ನು (ಹುಲ್ಲು ಧಾನ್ಯ ಮೊದಲಾದ ವನ್ನು) ತಿನ್ನುವುದರಿಂದ ಇದಕ್ಕೆ ಅಶ್ವವೆಂಬ ಹೆಸರು ಬಂದಿರುವುದು.

**ತತ್ರ ದಧಿಕ್ರಾ ಇತ್ಯೇತತ್ ದಧತ್ ಕ್ರಾಮತೀತಿ ವಾ ದಧತ್ ಕ್ರಂದತೀತಿ ವಾ ದಧದಾಕಾರೀ ಭವತೀತಿ ವಾ ||**

ಈ ಇಪ್ಪತ್ತಾರು ಅಶ್ವನಾಮಗಳಲ್ಲಿ ದಧಿಕ್ರಾ ಎಂಬುದು ಸಂದಿಗ್ಧಾರ್ಥವುಳ್ಳದ್ದಾಗಿದೆ. ಎಂದರೆ ಈ ಪದಕ್ಕೆ ಅಶ್ವವೆಂದೂ ಹೆಸರು ಮತ್ತು ಈ ಹೆಸರಿನ ದೇವತೆಯೂ ಒಂದು ಇರುವುದು **ದಧತ್ ಕ್ರಾಮತೀತಿ ವಾ**—ಅಶ್ವಶಬ್ದದ ಪರವಾಗಿ ಅರ್ಥಮಾಡುವಾಗ ಈ ಕುದುರೆಯು ಸವಾರನನ್ನು ಹೊತ್ತುಕೊಂಡು ಹೋಗುವುದರಿಂದ ದಧಿಕ್ರಾ ಎಂದು ಹೆಸರು ಅಥವಾ **ದಧತ್ ಕ್ರಂದತೀತಿ ವಾ**-ಸವಾರನನ್ನು ಕೂರಿಸಿಕೊಂಡು ಹೋಗುವಾಗ ಹೇಷಾರವವನ್ನು (ಶಬ್ದವನ್ನು) ಮಾಡುವುದರಿಂದ ದಧಿಕ್ರಾ ಎಂದು ಹೆಸರು ಅಥವಾ **ದಧಕಾರೀ ಭವತೀತಿ ವಾ**-ಸವಾರನು ಇದರ ಮೇಲೆ ಕುಳಿತಿರುವಾಗ ಇದು ಗ್ರೀವಾದಿ ಅವಯವಗಳನ್ನು ಒಂದು ವಿಧವಾಗಿ ನಿಲ್ಲಿಸಿ ಆಕರ್ಷಕವಾದ ಆಕಾರವುಳ್ಳದ್ದಾಗಿ ಕಾಣುವುದರಿಂದ ಇದಕ್ಕೆ (ಅಶ್ವಕ್ಕೆ)ದಧಿಕ್ರಾ ಎಂದೂ ಹೆಸರು.

**ತಸ್ಯಾಶ್ವತ್ ದೇವತಾವಚ್ಚ ನಿಗಮಾ ಭವಂತಿ | ಅಥೈತದಶ್ವವತ್ ||** ಈ ದಧಿಕ್ರಾ ಎಂಬ ಶಬ್ದಕ್ಕೆ ಎರಡುವಿಧ ಪ್ರಯೋಗವಿರುವುದು. ಒಂದು ಸಾಧಾರಣ ಅಶ್ವವೆಂಬ ಅರ್ಥದಲ್ಲಿಯೂ ಇನ್ನೊಂದು ದಧಿಕ್ರಾ ಎಂಬ ದೇವತೆ ಎಂಬರ್ಥದಲ್ಲಿಯೂ ಎರಡು ಪ್ರಯೋಗಗಳಿವೆ. ದೇವತೆ ಎಂಬ ಅರ್ಥದಲ್ಲಿ ಇದರ ವಿವರಣೆಯನ್ನು ನಾವು ಮುಂದೆ (೧-೧೦-೩೧) ಮಾಡುವೆವು. ಅಶ್ವವೆಂಬ ಅರ್ಥದಲ್ಲಿ ಇದರ ವಿವರಣೆಗಾಗಿ ಈ ಕೆಳಗಿನ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದೆ.

**ಇತಿ ಸಪ್ತವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೇಳನೆಯ ಖಂಡವು ಸಮಾಪ್ತವು

—·—

ಅಥಾಷ್ಟಾವಿಂಶಃ ಖಂಡಃ

**ಇಪ್ಪತ್ತೆಂಟನೆಯ ಖಂಡವು**

ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ ಗ್ರೀವಾಯಾಂ ಬದ್ಧೋ
ಅಪಿ ಕಕ್ಷ ಆಸನಿ | ಕ್ರತುಂ ದಧಿಕ್ರಾ ಅನು ಸಂತವೀತ್ವತ್ಪಥಾಮಂಕಾ-

ಸ್ಯನ್ವಾಪನೀಫಣತ್ ॥ (ಋ. ಸಂ. ೪-೪೦-೪) ಅಪಿ ಸ ವಾಜೀ ವೇಜನವಾನ್ ಕ್ಷೇಪಣಮನು ತೂರ್ಣಮಶ್ನುತೇಽಧ್ವಾನಂ ಗ್ರೀವಾಯಾಂ ಬದ್ಧೋ ಗ್ರೀವಾ ಗಿರತೇರ್ವಾ ಗೃಣಾತೇರ್ವಾ ಗೃಹ್ಣಾತೇರ್ವಾಪಿಕಕ್ಷ ಆಸನೀತಿ ವ್ಯಾಖ್ಯಾತಂ ಕ್ರತುಂ ದಧಿಕ್ರಾಃ ಕರ್ಮ ವಾ ಪ್ರಜ್ಞಾಂ ವಾ। ಅನು ಸಂತವೀತ್ವತ್। ತನೋತೇಃ ಪೂರ್ವಯಾ ಪ್ರಕೃತ್ಯಾ ನಿಗಮಃ। ಪಥಾಮಂಕಾಸಿ ಪಥಾಂ। ಕುಟಿಲಾನಿ ಪಂಥಾಃ ಪತತೇರ್ವಾ ಪದ್ಯತೇರ್ವಾ ಪಂಥತೇರ್ವಾಂಕೋಽಞ್ಚತೇ ರಾಪನೀಫಣದಿತಿ ಫಣತೇಶ್ಚರ್ಕರೀತವೃತ್ತಂ ದಶೋತ್ತರಾಣ್ಯಾದಿಷ್ಟೋಪಯೋಜನಾನೀತ್ಯಾಚಕ್ಷತೇ ಸಾಹಚರ್ಯಜ್ಞಾನಾಯ ಜ್ವಲತಿಕರ್ಮಾಣ ಉತ್ತರೇ ಧಾತವ ಏಕಾದಶ ತಾವಂತ್ಯೇವೋತ್ತರಾಣಿ ಜ್ವಲತೋ ನಾಮಧೇಯಾನಿ ನಾಮಧೇಯಾನಿ ॥೨೮॥

**ಉತ ಸ್ಯ ವಾಜೀ ಕ್ಷಿಪಣಿಂ**—ಎಂಬ ಋಕ್ಕಿನ ಅರ್ಥವು—ಪ್ರಸಿದ್ಧನೂ ಅಶ್ವರೂಪನೂ ಆದ ದಧಿಕ್ರಾದೇವನು ಕತ್ತಿನಲ್ಲಿಯೂ ಕಕ್ಷಪ್ರದೇಶದಲ್ಲಿಯೂ ಮುಖಪ್ರದೇಶದಲ್ಲಿಯೂ ಬಂಧಿತನಾಗಿ ತನ್ನ ಪಾದಕ್ಷೇಪವನ್ನು ಅಧಿಕವಾಗಿ ವೇಗಗೊಳಿಸುತ್ತಾನೆ. ಇದೇ ದಧಿಕ್ರಾದೇವನು ಯಜ್ಞವನ್ನನುಸರಿಸಿ ಅತ್ಯಂತ ಪ್ರಬಲವಾದ ಶಕ್ತಿಯುಳ್ಳವನಾಗಿ ಸಕಲ ಮಾರ್ಗಗಳ ಬಳಸುವಿಕೆಯನ್ನು ಪೂರ್ಣವಾಗಿ ವ್ಯಾಪಿಸಿ ಸಂಚರಿಸುತ್ತಾನೆ.

**ಅಪಿ ಸ ವಾಜೀ ವೇಜನವಾನ್ ಕ್ಷೇಪಣಮನು ತೂರ್ಣಮಶ್ನಾತೇಽಧ್ವಾನಂ** ॥ ಮತ್ತು ಈ ಅಶ್ವವು ಬಹಳ ವೇಗವುಳ್ಳದ್ದಾಗಿದೆ ಎಂದರೆ ಇದು ತನ್ನ ಪಾದವಿಕ್ಷೇಪದಿಂದ ಬಹುವೇಗವಾಗಿ ಸಂಚರಿಸುತ್ತದೆ. ಮಾರ್ಗದಲ್ಲಿ ಹೋಗುವಾಗ ಅತಿ ವೇಗವಾಗಿ ಹೋಗುವುದು.

ಗ್ರೀವಾಯಾಂ ಬದ್ಧಃ। ಗ್ರೀವಾ ಗಿರತೇರ್ವಾ ಗೃಣಾತೇರ್ವಾ
ಗೃಹ್ಣಾತೇರ್ವಾ। ಅಪಿ ಕಕ್ಷ ಆಸನೀತಿ ವ್ಯಾಖ್ಯಾತಂ।

ಈ ಅಶ್ವವು ಕತ್ತಿನಲ್ಲಿ ಅಥವಾ ಹೆಗಲಿನಲ್ಲಿ (ಹಗ್ಗದಿಂದ) ಕಟ್ಟಲ್ಪಟ್ಟಿರುವುದು. ಗ್ರೀವಾ ಎಂದರೆ ಕತ್ತು. ಗ್ರೀವಾ ಎಂಬಶಬ್ದವು ನುಂಗು ಎಂಬರ್ಥವುಳ್ಳ ಗಿರತಿಧಾತುವಿನಿಂದಾಗಲಿ, ಶಬ್ದಮಾಡು ಎಂಬರ್ಥವುಳ್ಳ ಗೃಣಾತಿಧಾತುವಿನಿಂದಾಗಲಿ ಹಿಡಿದುಕೋ ಎಂಬರ್ಥವಿರುವ ಗೃಹ್ಣಾತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಪಕ್ಕಗಳಲ್ಲಿಯೂ ಮತ್ತು ಮುಖದಲ್ಲಿಯೂ ಕಟ್ಟಲ್ಪಟ್ಟಿರುವುದು ಎಂಬುದನ್ನು ಹಿಂದೆಯೇ ವಿವರಿಸಲಾಗಿದೆ.

**ಕ್ರತುಂ ದಧಿಕ್ರಾಃ ಕರ್ಮ ವಾ ಪ್ರಜ್ಞಾಂ ವಾ**

ಕ್ರತುವೆಂದರೆ ಕರ್ಮ, ಈ ಅಶ್ವವು ಕಾರ್ಯವನ್ನು ಎಂದರೆ ಗಮನ ಕಾರ್ಯವನ್ನು ಮಾಡುವುದು ಎಂದರೆ ವೇಗವಾಗಿ ಹೋಗುವುದು. ಅಥವಾ ಕ್ರತುಶಬ್ದಕ್ಕೆ ಪ್ರಜ್ಞೆ ಎಂದರೆ ಬುದ್ಧಿ, ತಿಳುವಳಿಕೆ ಎಂದೂ ಅರ್ಥವು. ಇದು ಬಹಳ ಬುದ್ಧಿಶಾಲಿಯು.

**ಅನುಸಂತವೀಶ್ವತ್ ತನೋತೇಃ ಪೂರ್ವಯಾ ಪ್ರಕೃತ್ಯಾ ನಿಗಮಃ।** ಅನುಸಂತವೀಶ್ವತ್ ಎಂಬ ಶಬ್ದವು ವಿಸ್ತರಿಸು, ಹರಡು ಎಂಬರ್ಥವುಳ್ಳ ತನೋತಿಧಾತುವಿನಿಂದ ನಿಷ್ಪನ್ನವಾಗಿದೆ.

ಪಥಾಮಂಕಾಂಸಿ ಪಥಾಂ ಕುಟಿಲಾನಿ ಪಂಥಾಃ ಪತತೇರ್ವಾ ಪದ್ಯ-
ತೇರ್ವಾ ಪಂಥತೇರ್ವಾ ಅಂಕೋಽಞ್ಚತೇಃ। ಆಪನೀಫಣದಿತಿ ಫಣತೇಶ್ಚ-
ರ್ಕರೀತವೃತ್ತಂ ॥

ಪಥಾಂ ಎಂಬ ಶಬ್ದವು ಗತ್ಯರ್ಥಕವಾದ ಪತತಿ ಧಾತುವಿನಿಂದಾಗಲಿ, ಪದ್ಯತಿ ಧಾತುವಿನಿಂದಾಗಲಿ, ಪಂಥತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಮೂರು ಧಾತುಗಳಿಗೂ ಗತ್ಯರ್ಥ ಎಂದು ಹೋಗು, ಸಂಚರಿಸು ಎಂಬರ್ಥವೇ ಇರುವುದು. ಅಂಕವೆಂಬ ಶಬ್ದವು ಬಗ್ಗು, ಸೊಟ್ಟಾಗಿರು ಎಂಬರ್ಥವಿರುವ ಅಂಚತಿ ಧಾತುವಿನಿಂದ ನಿಷ್ಪನ್ನವಾಗಿದೆ. ರಸ್ತೆಯು ಅನೇಕ ಕಡೆ ಡೊಂಕು ಡೊಂಕಾಗಿರುವುದು, ತಿರುವು, ಬಗ್ಗಿರು ಎಂಬರ್ಥವಿರುವುದು ಇಂತಹ ರಸ್ತೆಯಲ್ಲಿಯೂ ಅಶ್ವವು ವೇಗವಾಗಿ ಹೋಗುವುದು. ಆಪನೀಫಣತ್ ಎಂಬ ಶಬ್ದವು ಕಟ್ಟು, ಬಂಧಿಸು ಎಂಬರ್ಥವುಳ್ಳ ಫಣತಿ ಧಾತುವಿನಿಂದ ನಿಷ್ಪನ್ನವಾಗಿದೆ.

ದಶೋತ್ತರಾಣ್ಯಾದಿಷ್ಟೋಪಯೋಜನಾನೀತ್ಯಾಚಕ್ಷತೇ ಸಾಹಚರ್ಯ
ಜ್ಞಾನಾಯ।

ಈ ಕೆಳಗೆ ಹೇಳಿರುವ ಹತ್ತು ಶಬ್ದಗಳೂ ಬೇರೆ ಬೇರೆ ದೇವತೆಗಳ ವಾಹನಗಳೆಂದು (ಅಶ್ವಗಳೆಂದು) ಹೇಳಲ್ಪಟ್ಟಿವೆ.

(೧) ಹರೀ ಇಂದ್ರಸ್ಯ (೨) ರೋಹಿತೋಽಗ್ನೇಃ (೩) ಹರಿತ
ಆದಿತ್ಯಸ್ಯ (೪) ರಾಸಭಾವಶ್ವಿನೋಃ (೫) ಅಜಾಃ ಪೂಷ್ಣಃ
(೬) ಪೃಷತ್ಯೋ ಮರುತಾಮ್ (೭) ಅರುಣ್ಯೋ ಗಾವ ಉಷಸಃ
(೮) ಶ್ಯಾವಾಃ ಸವಿತುಃ (೯) ವಿಶ್ವರೂಪಾ ಬೃಹಸ್ಪತೇಃ (೧೦)
ನಿಯುತೋ ವಾಯೋಃ ॥

ಇತಿ ದಶಾದಿಷ್ಟೋಪಯೋಜನಾನಿ ॥೧೫

**ದಶೋತ್ತರಾಣ್ಯಾಷ್ಟೋಪಯೋಜನಾನೀತ್ಯಾಚಕ್ಷತೇ ಸಾಹಚರ್ಯಜ್ಞಾನಾಯ.** (ನಿರು. ೨-೨೮) **ಇತಿ ಹಾಸಪಕ್ಷೇಽಪಿ ಪೂರ್ವಪಕ್ಷಾಪರಪಕ್ಷಾವಹೋರಾತ್ರೇ ವಾ ॥**

ಈ ನಿರುಕ್ತಕ್ಕೆ ಸ್ಕಂದಸ್ವಾಮಿಯ ಭಾಷ್ಯ. (೧) 'ಹರೀ ಇಂದ್ರಸ್ಯ'—ಸೋಮಪಾನಾದಿಕ್ರಿಯಾಸಾಧನಗಳು. (೨) "ರೋಹಿತೋಽಗ್ನೇಃ"—ನಿತ್ಯಪಕ್ಷದಲ್ಲಿ ಜ್ವಲಿಸುವ ಅಶ್ವಗಳು ವ್ಯಾಪ್ತಿ ಉಳ್ಳವುಗಳು. (೩) "ಹರಿತ ಆದಿತ್ಯಸ್ಯ"—ಬೆಳಿಗ್ಗೆ ಸೂರ್ಯನ ಕಿರಣಗಳು ಹರಿದ್ವರ್ಣವುಳ್ಳವುಗಳು (ಪಚ್ಚೆ) (೪) "ರಾಸಭಾವಶ್ವಿನೋಃ" — ಅಶ್ವಿಭೋಗಕಾಲದಲ್ಲಿ ಕತ್ತೆಯವರ್ಣವುಳ್ಳವುಗಳು, ತತ್ಕಾಲೋಚಿತವಾದ ಶ್ಯಾಮಲವರ್ಣದಿಂದ ಈ ವ್ಯವಹಾರ. (೫) "ಅಜಾಃ ಪೂಷ್ಣಃ"—ಅಜಾಃ=ಗಮನಶೀಲವಾದವುಗಳು. ಪೂಷನ್ ಸ್ವರೂಪದ ಕಾಲದಲ್ಲಿ ಕಿರಣಗಳು ಪ್ರಸರಿಸುತ್ತವೆ. (೬) "ಪೃಷತ್ಯೋ ಮರುತಾಮ್"—ಮಳೆಗಾಲದಲ್ಲಿ ಎಲ್ಲಾ ಕಡೆಯಲ್ಲಿಯೂ ವಾಯುಪ್ರೇರಣೆಯಿಂದ ವಿಚಿತ್ರವಾದ ಮೇಘಪಂಕ್ತಿಗಳಿರುತ್ತವೆ. (೭) "ಅರುಣ್ಯೋ ಗಾವ ಉಷಸಃ—" ಉಷಃಕಾಲದಲ್ಲಿ ಕತ್ತಲೆ ನಾಶವಾದಾಗ ಹೊಂಬಣ್ಣದಿಂದ ಬರುತ್ತವೆ. (೮) "ಶ್ಯಾವಾ-ಸವಿತುಃ '—ಸವಿತೃಕಾಲದಲ್ಲಿ ಕಿರಣಗಳು ಶ್ಯಾಮವರ್ಣವಾಗಿರುತ್ತವೆ. (೧೮) (೯) 'ವಿಶ್ವರೂಪಾ ಬೃಹಸ್ಪತೇಃ'—'ಛಂದಾಸಿ ವೈ ವಿಶ್ವರೂಪಾಣಿ' (ಶತ-ಬ್ರಾ—೮-೪) ಶ್ರುತಿಯಿಂದ ನಾನಾರೂಪವಾಗಿರುತ್ತವೆ. (೧೦) "ನಿಯುತೋ ವಾಯೋಃ"—ನೀರು ಸುರಿದಾಗ ಹುಲ್ಲು ಎಲೆ ಮುಂತಾದವುಗಳಲ್ಲಿ ನೀರು ವ್ಯಾಪಿಸಿರುವುದರಿಂದ ಮಿಶ್ರವರ್ಣವಾಗಿರುತ್ತವೆ. ಇವುಗಳ ಶಬ್ದವ್ಯುತ್ಪತ್ತಿ—

(೧) **ಹರೀ**|| ಹೃಞ್-ಹರಣೇ ಧಾತು. 'ಹೃಪಿಶಿರುಹಿವೃತಿವಿದಿ—' (ಉ—೪-೧೧೫) ಸೂತ್ರದಿಂದ ಇನ್‌ಪ್ರತ್ಯಯ. ಧಾತು ಋಕಾರಕ್ಕೆ ಗುಣ. ಹರಿಃ. ದ್ವಿವಚನದಲ್ಲಿ ಹರೀ ರೂಪ. ರಥವನ್ನು ಒಯ್ಯುವುಗಳು. ತಾಂಡ್ಯಕದಲ್ಲಿ (೬—೧—೧) ಇಂದ್ರನ ಪೂರ್ವಪಕ್ಷ, ಅಪರಪಕ್ಷಗಳಿಗೆ ಹರೀ ಎಂದು ಹೆಸರು. ಅವುಗಳಿಂದ ಅವನು ಎಲ್ಲವನ್ನೂ ಸ್ವೀಕರಿಸುತ್ತಾನೆ' ಎಂದ ಹೇಳಿದೆ. ಆಗ ಕರಣಾರ್ಥದಲ್ಲಿ ಇನ್‌ಪ್ರತ್ಯಯ ಹೇಳಬೇಕು. ಐತರೇಯ ಬ್ರಾಹ್ಮಣದಲ್ಲಿ (೨-೩-೬) ಋಕ್ಸಾಮಗಳು (ಇಂದ್ರನು ಹರೀಶಬ್ದವಾಚ್ಯಗಳೆಂದು ಹೇಳಿದೆ. ಉದಾಹರಣೆ—**' ಇಂದ್ರೋ ಹರೀ ಯುಯುಜೇ ಅಶ್ವಿನಾ ರಥಮ್ ' (ಋ. ಸಂ.) ೨-೩-೫-೧)**

(೨) **ರೋಹಿತಃ** || ' ರುಹ-ಬೀಜಜನ್ಮನೀಪ್ರಾದುರ್ಭಾವೇ ' ಧಾತು. ' ಹೃಸೃರುಹಿ—' (ಉ. ೧—೯೪) ಸೂತ್ರದಿಂದ ಇತಿಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಇದರ ಮೇಲೆ ಏರುತ್ತಾರೆ, ಅಥವಾ ರಥವನ್ನು ಎಳೆಯುತ್ತವೆ ಎಂದರ್ಥ. " ಉದಾಹರಣೆ—**ರೋಹಿದಶ್ವ ಶುಚಿವ್ರತ (ಋ. ಸಂ. ೬.೩.೩೨—೨)**

(೩) **ಹರಿತಃ** || ಹರಣಾರ್ಥಕ ಹೃಧಾತುವಿಗೆ ಹಿಂದಿನ ಸೂತ್ರದಿಂದ ಇತಿಪ್ರತ್ಯಯ. ಧಾತು ಋಕಾರಕ್ಕೆ ಗುಣ. ರಥವನ್ನು ಎಳೆಯುತ್ತವೆ, ಕತ್ತಲನ್ನು ನಾಶಪಡಿಸುತ್ತವೆ. ಅಥವಾ ಹರಿಚ್ಛಬ್ದ ಹಳದಿ, ಅಥವಾ ಪಚ್ಚೆಬಣ್ಣವನ್ನು ಹೇಳುವುದರಿಂದ ಆ ಬಣ್ಣವುಳ್ಳವುಗಳೆಂದರ್ಥ. ಉದಾಹರಣೆ—**' ಯದೇತದಯುಕ್ತಹರಿತಃ ಸಧಸ್ಥಾತ್ (ಋ. ಸಂ. ೧—೮—೭—೪)**

(೪) **ರಾಸಭೌ** || ರಾಸೃ—ಶಬ್ದೇ ಧಾತು. ' ರಾಸಿವಲ್ಲಿಭ್ಯಾಞ್ಚ ' (ಉ. ೩—೧೨೧) ಸೂತ್ರದಿಂದ ಅಭಚ್‌ಪ್ರತ್ಯಯ ಶಬ್ದಮಾಡುವವುಗಳು. ರಾಸಭೌ ದ್ವಿವಚನಾಂತಪದ. ಉದಾಹರಣೆ—**' ಯುಞ್ಜಾಥಾಂ ರಾಸಭಂ ರಥೇ '** (ಋ. ಸಂ. ೬—೬-೮—೨) **' ತದ್ರಾಸಭೋ ನಾಸತ್ಯಾ ಸಹಸ್ರಮಾಜಾ ' (ಋ. ಸಂ. ೧—೮—೮—೨)** ||

(೫) **ಅಜಾಃ** || ಗತಿ, ಕ್ಷೇಪಣಾರ್ಥಕವಾದ ಅಜಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ವ್ಯತ್ಯಯದಿಂದ ವೀಭಾವ ಬರುವುದಿಲ್ಲ. ಎಲ್ಲಾ ಕಡೆ ಹೋಗುವವುಗಳು, ಕತ್ತಲೆಯನ್ನು ನಾಶಮಾಡುವವುಗಳು. ಉದಾ:—
**ಅಹೇಲಮಾನೋ ರರಿವಾಂ ಅಜಾಶ್ವ ಶ್ರವಸ್ಯತಾಮಜಾಶ್ವ '** (ಋ. ಸಂ. ೨—೨—೨—೪) ||

(೬) **ಪೃಷತ್ಯಃ** ‖ 'ಪೃಷು, ವೃಷು-ಸೇಚನೇ' ಧಾತು. 'ವರ್ತಮಾನೇ ಪೃಷತ್—' (ಪಾ. ಸೂ. ೬-೪-೩೦-ವಾ ಎಂಬ ವಾರ್ತಿಕದಿಂದ ನಿಪಾತಿತವಾಗಿದೆ. 'ಪೃಷತ್ಯಃ ಸಹ ಸಂಗತಾಃ' ಎಂದು ಮಾಧವರು ಸ್ತ್ರೀಲಿಂಗ ಹೇಳಿರುತ್ತಾರೆ. ಆಗ 'ಪುಂಯೋಗಾದಾಖ್ಯಾಯಾಮ್' (ಪಾ. ಸೂ ೪-೧-೪೮) ಸೂತ್ರದಿಂದ ಙೀಷ್. ಪೃಷತೀ. ಬಹುವಚನದಲ್ಲಿ ಪೃಷತ್ಯಃ ರೂಪವಾಗುತ್ತದೆ. ಸೇರಿರುವುಗಳೆಂದರ್ಥ. ಉದಾಹರಣೆ—

**"ಉಪೋ ರಥೇಷು ಪೃಷತೀರಯುಗ್ಧ್ವಮ್ (ಋ. ಸಂ. ೧-೩-೧೯-೧) ‖**

(೭) **ಗಾವಃ** ‖ ರಶ್ಮಿನಾಮದಲ್ಲಿ (೧-೫-೩) ಇದು ವ್ಯಾಖ್ಯಾತವಾಗಿದೆ. ಗಮನಸ್ವಭಾವವುಳ್ಳವುಗಳೆಂದರ್ಥ. ಉದಾಹರಣೆ—

**"ಯುಂಕ್ತೇ ಗವಾ ಮರುಣಾನಾಮನೀಕಮ್" (ಋ. ಸಂ. ೨-೧-೯-೧) ‖**

(೮) **ಶ್ಯಾವಾಃ** ‖ ಶ್ಯೈಙ್-ಗತೌ. ಧಾತು. ಬಹುಲಗ್ರಹಣದಿಂದ 'ಕ್ಯಾ ಗ್ಯಾ ಶ್ಯಾ-' (ಉ। ೧-೧೫೩) ಸೂತ್ರದಿಂದ ವಿಹಿತವಾದ ವಪ್ರತ್ಯಯ ಬರುತ್ತದೆ. 'ಆದೇಚಉಪದೇ—" ಸೂತ್ರದಿಂದ ಧಾತುವಿಗೆ ಆತ್ವ. ಬೂದು ಕೆಂಪು ಬಣ್ಣಕ್ಕೆ ಶ್ಯಾವವೆಂದು ಹೆಸರು. ಆ ಬಣ್ಣ ಉಳ್ಳವುಗಳೂ ಶ್ಯಾವಗಳಾಗುತ್ತವೆ. ಗುಣವಾಚಕ ಪದದಮೇಲೆ ಮತುಪ್ ಬಂದಾಗ ಅದಕ್ಕೆ 'ಗುಣವಚನೇಭ್ಯೋ ಮತುಪೋ ಲುಗ್ವಕ್ತವ್ಯಃ' ಎಂಬ ವಾರ್ತಿಕದಿಂದ ಲೋಪ. ಉದಾಹರಣೆ—

**"ವಿ ಜಾನಾಞ್ ಚ್ಛಾವಾಃ ಶಿತಿಪಾದೋ ಅಖ್ಯನ್" (ಋ. ಸಂ. ೧-೩-೬-೫) ‖**

(೯) **ವಿಶ್ವರೂಪಾಃ** ‖ ನಾನಾ ಬಣ್ಣವುಳ್ಳ ಕುದುರೆಗಳೆಂದರ್ಥ. ಉದಾಹರಣೆ—

**"ಬೃಹಸ್ಪತಿಶ್ಚ ಸವಿತಾ ಚ ವಿಶ್ವರೂಪೈರಿಹಾಗತಮ್ ‖ "ಬೃಹಸ್ಪತಿರ್ವಿಶ್ವರೂಪಾ ಸುಪಾಜತ"** (ಋ. ಸಂ. ೨-೩-೫-೧)

(೧೦) **ನಿಯುತಃ** ‖ ನಿ ಉಪಸರ್ಗಪೂರ್ವಕವಾದ ಮಿಶ್ರಣಾರ್ಥಕ ಯುಧಾತುವಿಗೆ ಕ್ವಿಪ್‌ಪ್ರತ್ಯಯ. ಪಿತ್ತಾದ ಈಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ತುಗಾಗಮ. ಬಹುವಚನದಲ್ಲಿ ನಿಯುತಃ ಎಂದು ರೂಪವಾಗುತ್ತದೆ. ತಮ್ಮನ್ನಾಗಲೀ ರಥವನ್ನಾಗಲೀ ಹುಲ್ಲು ಎಲೆಗಳಿಂದ ಸಂಪರ್ಕ ಹೊಂದಿಸುತ್ತವೆ. ಅಥವಾ ನಿ ಉಪಸರ್ಗಪೂರ್ವದಲ್ಲಿರುವಾಗ ಯಮು-ಉಪರಮೇ. ಧಾತುವಿಗೆ ಉತಿಪ್ರತ್ಯಯ. ಧಾತುವಿನ ಟಿಗೆ (ಅಮ್) ಲೋಪ. ಸಾರಥಿಯಿಂದ ನಿಯಮಗೊಳಿಸಲ್ಪಡುವವುಗಳಲ್ಲಿ ಎಂದರ್ಥ. ಉದಾಹರಣೆ—

**"ನಿಯುದ್ಭಿರ್ವಾ ಯವಿಷ್ಟಯೇ ದುರೋಣೇ" (ಋ. ಸಂ. ೫-೬-೧೪-೩)**

ಹೀಗೆ ಈ ಹತ್ತು ಪದಗಳು ಕುದುರೆಗಳಿಗೂ, ಕಿರಣಗಳಿಗೂ ಉಪಯೋಗಿಸಲ್ಪಡುತ್ತವೆ.

**ಅಥ ಜ್ವಲತಿಕರ್ಮಾಣಃ । ಜ್ವಲತೋ ನಾಮಧೇಯಾನಿ ।।**

ಕೆಳಗೆ ಕೊಟ್ಟಿರುವ ಹನ್ನೊಂದು ಶಬ್ದಗಳೂ ಜ್ವಲತಿ-ಪ್ರಕಾಶಿಸುತ್ತದೆ ಎಂಬರ್ಥವಿರುವ ಪದಗಳು.

(೧) ಭ್ರಾಜತೇ (೨) ಭ್ರಾಶ್ಯತೇ (೩) ಭ್ರಾಶ್ಯತಿ (೪) ದೀದಯತಿ (೫) ಶೋಚತಿ (೬) ಮನ್ದತೇ (೭) ಭನ್ದತೇ (೮) ರೋಚತೇ (೯) ದ್ಯೋತತೇ (೧೦) ಜ್ಯೋತತೇ (೧೧) ದ್ಯುಮತ್ ||

ಇತ್ಯೇಕಾದಶ ಜ್ವಲತಿಕರ್ಮಾಣಃ ||೧೬||

**(೧) ಭ್ರಾಜತೇ** || ಹನ್ನೊಂದು ಪ್ರಕಾಶಿಸುವುದು ಎಂಬ ಕ್ರಿಯೆಯನ್ನು ಹೇಳುವ ಧಾತುಗಳನ್ನು ಹೇಳುತ್ತಾನೆ. ಟುಭ್ರಾಜೃದೀಪ್ತೌ. ಭ್ವಾದಿಗಣದಲ್ಲಿ ಆತ್ಮನೇಪದಿಯಾಗಿ ಹೇಳಿದೆ. ಉದಾ:—**'ಭ್ರಾಜತೇ ಶ್ರೇಣಿದನ್''** (**ಋ. ಸಂ. ೭-೭-೨-೩**)

**(೨) ಭ್ರಾಶತೇ (೩) ಭ್ರಾಶ್ಯತಿ** || ಟು-ಭ್ರಾಸೃ ಭ್ಲಾಶೃ-ದೀಪ್ತೌ. ಭ್ವಾದಿಯಲ್ಲಿ ಆತ್ಮನೇಪದಿಯಾಗಿ ಹೇಳಿವೆ. ಶಬ್ವಿಕರಣ ಬಂದಾಗ ಈ ರೂಪಗಳು. 'ವಾಭ್ರಾಶಭ್ಲಾಶ ಭ್ರಮು ಕ್ರಮು ತ್ರಸಿ ತ್ರುಟಿ ಲಷ:' (ಪಾ-ಸೂ-೩-೧-೭೦) ಸೂತ್ರದಿಂದ ಇದಕ್ಕೆ ವಿಕಲ್ಪವಾಗಿ ಶ್ಯನ್ ವಿಕರಣ ಬಂದಾಗ ಭ್ರಾಶ್ಯತಿರೂಪ. ಛಾಂದಸವಾಗಿ ಪರಸ್ಮೈಪದಿಯಾಗುತ್ತದೆ. ಉದಾ:-**'ನಿ ತಿಗ್ಮಾನಿ ಭ್ರಾಶಯನ್ ಭ್ರಾಶ್ಯಾನಿ'** (**ಋ. ಸಂ. ೮-೬-೨೦-೫**) ಶಿಲಾಜಿತ್ತು ಮುಂತಾದವುಗಳಿಗೆ ಭ್ರಾಶ್ಯಾನಿ ಎಂದು ಹೆಸರೆಂದು ಮಾಧವನ ಮತ. "ಭ್ಲಾಶ್ಯತಿ" ಎಂದು ಪಾಠಾಂತರವಿದೆ.

**(೪) ದೀದಯತಿ** || ನಿದು ನಿರುಕ್ತದಲ್ಲಿ (ನಿ-೧೦-೧೯) ಹೇಳಿದ ಧಾತು. ಅಥವಾ "ದಿಧೀಙ್-ದೀಪ್ತಿದೇವನಯೋಃ" ಅದಾದಿಗಣದಲ್ಲಿ ಆತ್ಮನೇಪದಿಯಾಗಿ ಹೇಳಿದೆ. ವ್ಯತ್ಯಯದಿಂದ ಧಕಾರಕ್ಕೆ ದಕಾರಾದೇಶ. "ಬಹುಲಮ್ ಛಂದಸಿ" (ಪಾ. ಸೂ. ೨-೪-೭೩) ಸೂತ್ರದಿಂದ ಶಪ್ ವಿಕರಣಕ್ಕೆ ಲುಕ್ ಬರುವುದಿಲ್ಲ. ಛಾಂದಸವಾಗಿ ಪರಸ್ಮೈಪದಪ್ರತ್ಯಯ ಬರುತ್ತದೆ. ಉದಾಹರಣೆ—**'ಯೋ ಅನಿಸ್ಮೋ ದೀದಯದಪ್ ಸ್ವಂತಃ೧** (**ಋ. ಸಂ. ೭-೭-೨೪-೪**)||

**(೫) ಶೋಚತಿ** || ಶುಚ-ಶೋಕೇ. ಭ್ವಾದಿ, ಪರಸ್ಮೈಪದೀ, ಧಾತುಗಳಿಗೆ ಅನೇಕಾರ್ಥವಿರುವುದರಿಂದ ದೀಪ್ತ್ಯರ್ಥವೂ ಇದೆಯೆಂದು ತಿಳಿಯಬೇಕು. ಉದಾಹರಣೆ—

**'ಅಜಸ್ರೇಣ ಶೋಚಿಷಾ ಶೋಶುಚಾನ:' (ಋ-ಸಂ-೫-೨-೭-೪.)** ||

**(೬) ಮನ್ದತೇ** || 'ಮದಿ-ಸ್ತುತಿಮೋದ ಮದ ಸ್ವಪ್ನಕಾಂತಿಗತಿಷು.' ಇಲ್ಲಿ ಹಿಂದಿನಂತೆ ದೀಪ್ತ್ಯರ್ಥ ಹೇಳಬೇಕು. ಇದಿತ್ತಾದುದರಿಂದ ನುಮಾಗನು ಬಂದಿದೆ. ಭ್ವಾದಿ ಆತ್ಮನೇಪದೀ. ನಿಗಮ ಹುಡಕಬೇಕು.

**(೭) ಭನ್ದತೇ** || 'ಭದಿ-ಕಲ್ಯಾಣೇ ಸುಖೇ ಚ.' ಭ್ವಾದಿ, ಆತ್ಮನೇಪದೀ. ಹಿಂದಿನಂತೆ ಇಲ್ಲಿ ದೀಪ್ತ್ಯರ್ಥ ತೋರುತ್ತದೆ. ಇದಕ್ಕೂ ಉದಾಹರಣೆ ಹುಡುಕಬೇಕು.

**[೮] ರೋಚತೇ** || 'ರುಚ-ದೀಪ್ತೌ' ಚುರಾದಿ. ಆತ್ಮನೇಪದೀ. ಕಥಾದಿಗಣದಲ್ಲಿ ಸೇರಿದೆ. ಉದಾ:—**"ವಿಯತ್ ಸೂರ್ಯೋ ನ ರೋಚತೇ ಬೃಹದ್ಭಾಃ** [ಋ-ಸಂ-೫-೨-೧೧-೪.]"

(೯) **ದ್ಯೋತತೇ** । ದ್ಯುತ-ದೀಪ್ತೌ. ಭ್ವಾದಿ. ಆತ್ಮನೇಪದೀ. ಉದಾಹರಣೆ—**'ಅದಿದ್ಯುತತ್' (ಋ. ಸಂ. ೪-೫-೧೩-೪)** ||

(೧೦) **ಜ್ಯೋತತೇ** || "ಯುತೃಜುತೃ-ದೀಪ್ತೌ" ಭ್ವಾದಿ. ಆತ್ಮನೇಪದೀ. ಛಾಂದಸವಾಗಿ ಯಕಾರ ಬಂದಿದೆ. ಅಥವಾ "ದ್ಯುತೇರಿಸಿನ್ನಾದೇಶ್ಚ ಜಃ" (ಉ-೨-೧೦೩) ಸೂತ್ರದಿಂದ ಇಸಿನ್‌ಪ್ರತ್ಯಯ ಪರದಲ್ಲಿರುವಾಗ ವಿಹಿತವಾದ ಜಕಾರ ಬಹುಲಗ್ರಹಣದಿಂದ ದ್ಯುತಧಾತುವಿಗೇ ಬಂದರೆ ಉಕ್ತರೂಪವಾಗುತ್ತದೆ. ಉದಾಹರಣೆ ನಿಗಮ ಹುಡುಕಬೇಕು.

ಕೆಲವರು ಇದರ ಸ್ಥಾನದಲ್ಲಿ "ಛನ್ದ್ಯತೇ" ಎಂದು ಪಾಠಮಾಡುತ್ತಾರೆ. ಆಗ ಛದಿ-ಸಂವರಣೇ. ಧಾತು. ಚುರಾದಿ. ಪರಸ್ಮೈಪದೀ. ವ್ಯತ್ಯಯದಿಂದ ಇಲ್ಲಿ ಆತ್ಮನೇಪದ ಬಂದಿದೆ. ಣಿಲೋಪ. "ಛಂದಸ್ಯುಭಯಥಾ" (ಪಾ. ಸೂ. ೩-೪-೧೧೭) ಸೂತ್ರದಿಂದ ಆರ್ಧಧಾತುಕಸಂಜ್ಞೆಯೂ ಬರುವುದರಿಂದ ಣಿಲೋಪ ಬರಬಹುದು. ಉದಾಹರಣೆ ಹುಡುಕಬೇಕು.

(೧೧) **ದ್ಯುಮತ್** || ದ್ಯೋತತೇ ದ್ಯುತ್. ಪ್ರಕಾಶಿಸುವುದು ಎಂದರ್ಥ ಸಂಪದಾದಿ ಗಣಪಠಿತವಾದುದರಿಂದ ದ್ಯುತಧಾತುವಿಗೆ ಕ್ವಿಪ್. ದ್ಯುತ್ ಉಳ್ಳದ್ದು ದ್ಯುಮತ್. ಪೃಷೋದರಾದಿಗಣ ಪಠಿತವಾದುದರಿಂದ ತಕಾರಲೋಪ. ಅಥವಾ ದಿವುಧಾತುವಿಗೆ ಕ್ರೀಡಾದ್ಯರ್ಥಗಳಿವೆ. ಇಲ್ಲಿ ದೀಪ್ತ್ಯರ್ಥ ತೋರುವಾಗ (ಪ್ರಕಾಶಿಸುವುದು) ವಿಚ್‌ಪ್ರತ್ಯಯ. ದ್ಯೋತನಂ ದಿವ್. ಇದರಮೇಲೆ ಮತುಪ್ ಬಂದಾಗ 'ದಿವ ಉತ್' ಸೂತ್ರದಿಂದ ವಕಾರಕ್ಕೆ ಉತ್ವ. ಯಣ್. ದ್ಯುಮತ್. ಪ್ರಕಾಶ ಉಳ್ಳದ್ದು ಎಂದರ್ಥ. ಸಮಾಮ್ನಾಯದಲ್ಲಿ ಯಾವ ಪದಾರ್ಥಕ್ಕೆ ಯಾವುದು ವಾಚಕವೋ, ಅದು ಆಖ್ಯಾತವಾಗಲಿ, ನಾಮವಾಗಲೀ, ಅದನ್ನು ಹೇಳುವಾಗ ಇನ್ನೊಂದರೊಡನೆ ಹೇಳುವುದೂ ಇದೆ. ಅಂದರೆ ಆಖ್ಯಾತಗಳನ್ನು ಹೇಳುವಾಗ ಕೆಲವು ನಾಮ ಹೇಳುವದು, ನಾಮಗಳನ್ನು ಹೇಳುವಾಗ ಕೆಲವು ಆಖ್ಯಾತ ಹೇಳುವುದು. ಉದಾಹರಣೆ—

ಕಾಂತ್ಯರ್ಥಕ ಧಾತು ಹೇಳುವಾಗ ಉಶಿಗಾದಿ ನಾಮಗಳು. ವ್ಯಾಪ್ತ್ಯರ್ಥಕ ಧಾತುಗಳೊಡನೆ ಆಪ್ನುವಾನ ಪದ, ಮಹನ್ನಾಮ ಹೇಳುವಾಗ ವವಕ್ಷಿಥ ಧಾತು, ನೋಡುವ ಅರ್ಥ ಹೇಳುವ ಧಾತುಗಳನ್ನು ಹೇಳುವಾಗ ವಿಚರ್ಷಣಿರಿತ್ಯಾದಿ ನಾಮಗಳು, ಹೇಳಿವೆ. ಹಾಗೆ ಇಲ್ಲಿ ದ್ಯುಮತ್ ಎಂಬ ನಾಮ ಧಾತು ಮಧ್ಯದಲ್ಲಿ ಪಠಿತವಾಗಿದೆ. ಉದಾ:—

**'ದ್ಯುಮದನುಮೀವ ಚಾತನಂ ರಕ್ಷೋಹಾ' [ಋ-ಸಂ-೫-೨-೧೨-೬]** ||

ಹೀಗೆ ಹನ್ನೊಂದು ಜ್ವಲನಾರ್ಥಕ ಧಾತುಗಳು.

ಅಥ ಜ್ವಲತೋಃ ನಾಮಧೇಯಾನಿ । ತಾವಂತ್ಯೇವೋತ್ತರಾಣಿ ಜ್ವಲತೋಃ ನಾಮಧೇಯಾನಿ ನಾಮಧೇಯಾನಿ.

ಜ್ವಲತಿ ಎಂದು ಮೊದಲಾದ ಹನ್ನೊಂದು ಧಾತುಗಳ ವಿಷಯಗಳನ್ನು ಹೇಳಿ ಅದೇ ಅರ್ಥವಿರುವ ಎಂದರೆ ಪ್ರಕಾಶಿಸುವ ಎಂದು ಗುಣವಾಚಕ ಅರ್ಥವುಳ್ಳ ಹನ್ನೊಂದು ಪದಗಳನ್ನು ಕೆಳಗೆ ಕೊಟ್ಟಿದೆ—

(೧) ಜಮತ್ (೨) ಕಲ್ಮಲೀಕಿನಮ್ (೩) ಜಞ್ಜಣಾಭವನ್
(೪) ಮಲ್ಮಲಾಭವನ್ (೫) ಅರ್ಚಿಃ (೬) ಶೋಚಿಃ (೭) ತಪಃ
(೮) ತೇಜಃ (೯) ಹರಃ (೧೦) ಘೃಣಿಃ (೧೧) ಶೃಙ್ಗಾಣಿ||

ಇತ್ಯೇಕಾದಶ ಜ್ವಲತೋಃ ನಾಮಧೇಯಾನಿ ನಾಮಧೇಯಾನಿ ||೧೭||

## ಜ್ವಲತ್ ಮೊದಲಾದ ೧೧ ನಾಮಗಳ ವ್ಯಾಕರಣ ರೂಪನಿಷ್ಪತ್ತಿಯು

(೧) **ಜಮತ್** ॥ ಜಮತ್ಯಾದಿಗಳು ಹನ್ನೊಂದು ಪ್ರಕಾಶಿಸುವ (ದೀಪ್ತಿಯುಳ್ಳ) ಪದಾರ್ಥದ ನಾಮಗಳು. ಜಮು–ಅದನೇ. ಧಾತು. ಶತೃಪ್ರತ್ಯಯ. ಉದಾಹರಣೆ—

**"ಗೃಣಾನಾ ಜಮದಗ್ನಿನಾ" (ಋ. ಸಂ. ೩–೪–೧೧–೧೮)** ॥

(೨) **ಕಲ್ಮಲೀಕಿನಮ್** ॥ ಇಲ್ಲಿಂದ ಮೂರು ಶಬ್ದಗಳು ಪೃಷೋದರಾದಿಗಣಪಠಿತವಾದುದರಿಂದ ಅಭಿಮತ ರೂಪಸಿದ್ಧಿಯಾಗುತ್ತದೆ. ಪ್ರಕಾಶಿಸುವವುಗಳು ಎಂದರ್ಥ. ಉದಾಹರಣೆ—

**"ನಮಸ್ಯಾ ಕಲ್ಮಲೀಕಿನಂ ನಮೋಭಿಃ" (ಋ. ಸಂ. ೨–೭–೧೭–೩)** ॥

(೩) **ಜಂಜಣಾಭವನ್** ॥ **"ಅರ್ಚಿಷಾ ಜಂಜಣಾಭವನ್" (ಋ. ಸಂ. ೬–೩–೩೦–೪)** ॥

(೪) **ಮಲ್ಮಲಾಭವನ್** ॥ **"ಮಲ್ಮಲಾಭವಂತೀತ್ಯಾಸಾದಯಾಮಿ"**

(೫) **ಅರ್ಚಿಃ** ॥ "ಅರ್ಚ–ಪೂಜಾಯಾಮ್." ಧಾತು. 'ಅರ್ಚಿಶುಚಿಹುಸೃಪಿ—' (೨–೧೦೧) ಸೂತ್ರದಿಂದ ಇಸಿಪ್ರತ್ಯಯ. (ದೇವತಾ ಪೂಜನ ಸಾಧನಗಳಾದುದರಿಂದ) ಅಥವಾ ಅಗ್ನಿಯ ಜ್ವಾಲೆಗಳು. ಉದಾಹರಣೆ—

**"ಅಯೋದಂಷ್ಟ್ರೋ ಅರ್ಚಿಷಾ ಯಾತುಧಾನಾನ್" (ಋ. ಸಂ. ೮–೪–೫–೨)** ॥

(೬) **ಶೋಚಿಃ** ॥ ಪ್ರಕಾಶಿಸುವುದು ಎಂಬರ್ಥ ಕೊಡುವ ಶುಚಧಾತುವಿಗೆ ಹಿಂದಿನ ಸೂತ್ರದಿಂದ ಇಸಿಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಶೋಚಿಸ್ ಸಾಂತಪದವಾಗುತ್ತದೆ. ಪ್ರಕಾಶಿಸುವುದು ಎಂದರ್ಥ. ಉದಾಹರಣೆ—

**"ಯದಸ್ಯ ವಾತೋ ಅನುಯಾತಿ ಶೋಚಿಃ" (ಋ. ಸಂ. ೩–೫–೭–೫)** ॥

(೭) **ತಪಃ** ॥ ತಪ–ಸಂತಾಪೇ. ಅಥವಾ ತಪ–ದಾಹೇ. ಧಾತು. ಅಸುನ್‌ಪ್ರತ್ಯಯ. ತಪಸ್ ಸಾಂತಪದವಾಗುತ್ತದೆ. ಶರೀರಾದಿಗಳನ್ನು ಸುಡುವುದು ಎಂದರ್ಥ. ಉದಾಹರಣೆ—

**"ಪರಾ ಶೃಣೀಹಿ ತಪಸಾ ಯಾತುಧಾನಾನ್" (ಋ. ಸಂ. ೮–೪–೭–೪)**

**ಅಗ್ನೇ ಯತ್ತೇ ತಪಸೇನ ತಂ ಪ್ರತಿ ತಪಾ" (ಅಥ–ಸಂ–೨–೧೯–೧)** ॥

(೮) **ತೇಜಃ** ॥ ನಿಶಾನಾರ್ಥಕ (ತೀಕ್ಷ್ಣವಾಗುವುದು) ತಿಜಧಾತುವಿಗೆ ಅಸುನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಸಾಂತಪದ. ಕತ್ತಲೆಯನ್ನು ಅಥವಾ ಪಾಪವನ್ನು ಕಡಿಮೆ ಮಾಡುತ್ತದೆ ಎಂದರ್ಥ. ಅಥವಾ

ಪಾಲನಾರ್ಥಕ ತೇಜಧಾತುವಿಗೆ ಅಸುನ್‌ಪ್ರತ್ಯಯ. ಪ್ರಾಣಿಗಳಿಗೆ ಪ್ರಕಾಶಕೊಡುವುದರ ಮೂಲಕ ರಕ್ಷಿಸುವುದು ಎಂದರ್ಥ. ಉದಾಹರಣೆ—

**"ಅಗ್ನೇ ಯತ್ತೇ ತೇಜಸ್ತೇನ...." (ಅಥ-ಸಂ-೨-೧೯-೫)**

(೯) ಹರಃ ॥ ಹರಣಾರ್ಥಕ ಹೃಞ್‌ಧಾತುವಿಗೆ ಅಸುನ್‌ಪ್ರತ್ಯಯ. "ಸಾರ್ವಧಾ—" ಸೂತ್ರದಿಂದ ಧಾತು ಋಕಾರಕ್ಕೆ ಗುಣ. ಹರಸ್ ಸಾಂತಪದ. ಕತ್ತಲೆಯನ್ನು ಅಪಹರಿಸುವುದು. ಉದಾಹರಣೆ—

**"ಅಗ್ನೇ ಯತ್ತೇ ಹರಸ್ತೇನ" (ಅಥ-ಸಂ-೨-೧೯-೩)" "ರಕ್ಷೋ ಹರಸಾ ಶೃಣೀಹಿ" (ಋ. ಸಂ. ೮-೪-೭-೪) ॥**

(೧೦) **ಘೃಣಿಃ** ॥ ಘೃ-ಕ್ಷರಣದೀಪ್ತ್ಯೋಃ. ಧಾತು. 'ಘೃಣಿ ಪೃಶ್ನಿಪಾರ್ಷ್ಣಿ—' ಸೂತ್ರದಿಂದ ನಿಪ್ರತ್ಯಯಾಂತ ವಾಗಿ ನಿಪಾತಿತವಾಗಿದೆ. ಅಥವಾ ದೀಪ್ತ್ಯರ್ಥಕ ಘೃಣಿಧಾತುವಿಗೆ "ಇಗುಪಧಾತ್ ಕಿತ್" (ಉ. ೪-೧೧೬) ಸೂತ್ರದಿಂದ ಇಪ್ರತ್ಯಯ. ಪ್ರಕಾಶಿಸುವುದು ಎಂದರ್ಥ. ಉದಾಹರಣೆ—

**"ಉಪ ಛಾಯಾಮಿವ ಘೃಣೇಃ" (ಋ. ಸಂ. ೪-೫-೨೮-೩) ಆ ಘೃಣೇ ಸಂ ಸಚಾವಹೈ" (ಋ. ಸಂ. ೪-೮-೨೧-೧) ॥**

ಹೃಣೀಃ ಎಂದು ಕೆಲವು ಕೋಶಗಳಲ್ಲಿ ಪಠಿತವಾಗಿದೆ. ಆದರೆ ನೈಗಮ ಕಾಂಡದಲ್ಲಿ 'ಆ ಘೃಣೇಃ' (ನಿರು-೫-೯) ಎಂದು ನಿರುಕ್ತದಲ್ಲಿ ಹೇಳಿರುವುದರಿಂದ ಈ ಪಾಠ ಸರಿಯಲ್ಲ.

(೧೧) **ಶೃಂಗಾಣಿ** ॥ ಶೃಗಿ-ಶಬ್ದೇ-ಶ್ರಿಞ್-ಸೇವಾಯಾಂ, ಶೄ-ಹಿಂಸಾಯಾಮ್, ಧಾತುಗಳಿಗೆ ಅನೇಕಾರ್ಥ ಇರುವುದರಿಂದ ಇಲ್ಲಿ ದೀಪ್ತ್ಯರ್ಥ ಹೇಳಬೇಕು. "ಶೃಣಾತೇರ್ಹ್ರಸ್ವಶ್ಚ" (ಉ. ಸೂ. ೧-೧೨೫) ಗನ್, ಕಿತ್, ನುಟ್ ಪದಗಳು ಪೂರ್ವಸೂತ್ರದಿಂದ ಅನುವೃತ್ತವಾಗುತ್ತವೆ. ಶ್ರಿಧಾತುವಾದರೆ ಬಹುಲಗ್ರಹಣದಿಂದ ಸಂಪ್ರಸಾರಣಾದಿಗಳೂ (ಋಕಾರ) ಬರುತ್ತವೆ. ಗನ್‌ಪ್ರತ್ಯಯ ನುಡಾಗಮ ಬಂದರೆ ಶೃಂಗಂ ಎಂದಾಗುತ್ತದೆ. ಕಿತ್ತ್ವ ಅತಿದೇಶಮಾಡಿರುವುದರಿಂದ ಗುಣ ಬರುವುದಿಲ್ಲ. ಸೂರ್ಯಮಂಡಲವನ್ನಾಶ್ರಯಿಸಿದ್ದು ಹಿಂಸಿಸುತ್ತದೆ. ಗ್ರೀಷ್ಮಾದಿಗಳಲ್ಲಿ ಸೂರ್ಯಕಿರಣ ಪ್ರಾಣಿಹಿಂಸಕವಾಗಿರುತ್ತದೆ. ಅಥವಾ ಎರಡು ಧಾತುಗಳಿಂದ ಈ ರೂಪವಾಗಿರುತ್ತದೆ. ಶೄ ಮತ್ತು ಗಮ್ ಧಾತುಗಳಿಗೆ ಔಣಾದಿಕ ಪ್ರತ್ಯಯದಿಂದ ಉಕ್ತ ರೂಪವಾಗುತ್ತದೆ. ಶರಣಾಯ ಉದ್ಗತಂ ಶೃಂಗಮ್. ಎಂದಾಗುತ್ತದೆ. ಪೃಷೋದರಾದಿಪಠಿತವಾದುದರಿಂದ ಶಿರಸ್ ಪದಕ್ಕೆ ಶೃಭಾವ. ಮಕಾರ ಅಧಿಕವಾಗಿ ಬರುತ್ತದೆ. ತೇಜಸ್ಸಿಗೆ ಶೃಂಗವೆಂದು ಹೆಸರು. ಇದರಿಂದ ಶಿರಸ್ಸು ಮೇಲಕ್ಕೆ ಬರುತ್ತದೆ. ಬೆಳಕು ನೋಡಲು ತಲೆ ಎತ್ತುತ್ತಾರೆ. ಬೆಳಕಿನಿಂದ ಮೊಳಕೆ ಮೇಲೆ ಬರುತ್ತದೆ. ಉದಾಹರಣೆ—

**ಯತ್ರ ಗಾವೋ ಭೂರಿಶೃಂಗಾ ಅಯಾಸಃ (ಋ. ಸಂ. ೨-೨-೨೪-೬) "ವಿ ಶೃಂಗಿಣಾಮಭಿನ. ಚ್ಛುಷ್ಣಮಿನ್ದ್ರಃ" (ಋ. ಸಂ. ೧-೩-೩-೨) ॥**

ಅಧ್ಯಾಯ ಸಮಾಪ್ತಿಯನ್ನು ತಿಳಿಸಲು 'ಶೃಂಗಾಣಿ' ಎಂದು ಎರಡುಸಾರಿ ಹೇಳಿದೆ. ಶಾಸ್ತ್ರದಲ್ಲಿ ಈ ರೀತಿ ದ್ವಿರ್ವಚನ ಹೇಳಿಯೇ ಅಧ್ಯಾಯ ಸಮಾಪ್ತಿಯನ್ನು ಸೂಚಿಸುವುದು ಪ್ರಸಿದ್ಧವಾಗಿದೆ. ಶಬ್ದಶಾಸ್ತ್ರದಲ್ಲಿ ದ್ವಿರುಕ್ತವಾದ ಸ್ಥಳದಲ್ಲಿ ಎರಡನೆಯ

ರೂಪಕ್ಕೆ 'ಆಮ್ರೇಡಿತ' ಎಂದು 'ತಸ್ಯ ಪರಮಾಮ್ರೇಡಿತಮ್' (ಪಾ. ಸೂ. ೮-೧-೨) ಸೂತ್ರದಿಂದ ಸಂಜ್ಞೆ ಹೇಳಿದೆ. ಇಲ್ಲಿ ಮಹಾಸಂಜ್ಞೆ ಮಾಡಿರುವುದಕ್ಕೆ ಪ್ರಯೋಜನವೇನು? ಎಂದು ಭಾಷ್ಯಕಾರರು ಆಶಂಕಿಸಿ ಹೀಗೆ ಸಮಾಧಾನ ಹೇಳಿರುತ್ತಾರೆ. "ಅನ್ವರ್ಥ ಸಂಜ್ಞೆಯನ್ನು ತಿಳಿಸಲು, ಹೀಗೆ ಮಹಾಸಂಜ್ಞೆ ಮಾಡಿರುತ್ತಾರೆ ಆಮ್ರೇಡ್ಯತೇ ಅಂದರೆ ಅಧಿಕವಾಗಿ ಹೇಳುವುದು ಎಂದರ್ಥ. ಈ ರೀತಿಯಾದ ಶಬ್ದಗಳೆಲ್ಲವೂ ಅನ್ವರ್ಥ ಸಂಜ್ಞೆಯುಳ್ಳವುಗಳು ಎಂದು ತಿಳಿಯಬೇಕು. "ಅಹೋದರ್ಶನೀಯಃ ಅಹೋ ದರ್ಶನೀಯಃ ಎರಡುಸಾರಿ ಹೇಳಿದರೆ ಅತ್ಯಂತ ಸುಂದರನೆಂದರ್ಥ.

[ಅತ್ರಿ ಗೋತ್ರೋದ್ಭವನಾದ ದೇವರಾಜಯಜ್ವನನ ನೈಘಂಟುಕ ಕಾಂಡದ ನಿರ್ವಚನದಲ್ಲಿ

ಮೊದಲನೆಯ ಅಧ್ಯಾಯ ಸಮಾಪ್ತವಾಗಿದೆ.]



ಇತಿ ನಿರುಕ್ತೇ ದ್ವಿತೀಯೋಽಧ್ಯಾಯಃ

ಇಲ್ಲಿಗೆ ನಿರುಕ್ತದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವು.



# ಅಥ ನಿರುಕ್ತೇ ತೃತೀಯೋಽಧ್ಯಾಯಃ

## ಮೂರನೆಯ ಅಧ್ಯಾಯವು

### ಪ್ರಥಮ ಖಂಡಃ

---

ಓಂ ॥ ಕರ್ಮನಾಮಾನ್ಯುತ್ತರಾಣಿ ಷಡ್ವಿಂಶತಿಃ ಕರ್ಮ ಕಸ್ಮಾ-
ತ್ಕ್ರಿಯತ ಇತಿ ಸತೋಽಪತ್ಯನಾಮಾನ್ಯುತ್ತರಾಣಿ ಪಂಚದಶಾಪತ್ಯಂ
ಕಸ್ಮಾದಪತತಂ ಭವತಿ ನಾನೇನ ಪತತೀತಿ ವಾ ತದ್ಯಥಾ ಜನಯಿತುಃ
ಪ್ರಜೈವಮರ್ಥೀಯೇ ಋಚಾ ಉದಾಹರಿಷ್ಯಾಮಃ ॥೧॥

ಈ ಕೆಳಗೆ ಸೂಚಿಸಿರುವ ಇಪ್ಪತ್ತಾರು ನಾಮಗಳೂ ಕರ್ಮನಾಮಗಳು ಅಂದರೆ ಕಾರ್ಯಗಳ (ಕೆಲಸಗಳ) ಹೆಸರು. ಕರ್ಮಶಬ್ದಕ್ಕೆ ಈ ಹೆಸರು ಹೇಗೆ ಬಂತೆಂದರೆ **ಡುಕೃಞ್** ಕರಣೇ ಎಂಬ ಧಾತುವಿನಿಂದ ಕರ್ಮಶಬ್ದವು ನಿಷ್ಪನ್ನವಾಗಿದೆ. ಈ ಧಾತುವಿಗೆ ಮಾಡು ಎಂಬರ್ಥವಿರುವುದರಿಂದ ಕರ್ಮಶಬ್ದಕ್ಕೆ ಮಾಡುವುದು, ಮಾಡುವ ಕೆಲಸ ಎಂದರ್ಥವು. ಆದ್ದರಿಂದ ಕೆಲಸವು ಅಥವಾ ಕಾರ್ಯವು ಮಾಡಲ್ಪಡುವುದರಿಂದ ಇದಕ್ಕೆ ಕರ್ಮ ಎಂಬ ಹೆಸರು ಬಂದಿದೆ.

(೧) ಅಪಃ (೨) ಅಪ್ನಃ (೩) ದಂಸಃ (೪) ವೇಷಃ (೫) ವೇಪಃ
(೬) ವಿಷ್ಟ್ವೀ (೭) ವ್ರತಮ್ (೮) ಕರ್ವರಮ್ (೯) ಶಕ್ಮ (೧೦) ಕ್ರತುಃ
(೧೧) ಕರುಣಮ್ (೧೨) ಕರಣಾನಿ (೧೩) ಕರಾಂಸಿ (೧೪) ಕರಂತೀ (೧೫) ಕರಿಕ್ರತ್
(೧೬) ಚಕ್ರತ್ (೧೭) ಕರ್ತ್ವಮ್ (೧೮) ಕರ್ತೋಃ (೧೯) ಕರ್ತವೈ (೨೦) ಕೃತ್ವೀ
(೨೧) ಧೀಃ (೨೨) ಶಚೀ (೨೩) ಶಮೀ (೨೪) ಶಿಮೀ (೨೫) ಶಕ್ತಿಃ (೨೬) ಶಿಲ್ಪಮ್ ॥

ಇತಿ ಷಡ್ವಿಂಶತಿಃ ಕರ್ಮನಾಮಾನಿ ॥೧॥

**'ಕರ್ಮನಾಮಾನ್ಯುತ್ತರಾಣಿ' (ನೀರು–೩-೧)** ಇಲ್ಲಿ ಸ್ಕಂದಸ್ವಾಮಿಯ ಭಾಷ್ಯ-ಜ್ವಲನಕ್ರಿಯೆಯನ್ನು ಹಿಂದೆ ಹೇಳಿರುವುದರಿಂದ ಕ್ರಿಯೆಯ ಸಂಬಂಧವಿರುವ ಕರ್ಮದ (ಕಾರ್ಯ) ಇಪ್ಪತ್ತಾರು ಹೆಸರುಗಳನ್ನು ಹೇಳುತಾನೆ. 'ಅಪಃ'–ಇತಿ. ಕ್ರಿಯತೇ ಇತಿ ಕರ್ಮ. ಮಾಡಲ್ಪಡುವುದು ಕರ್ಮ. ವಿಶೇಷಾಶ್ರಯವಿಲ್ಲದೆ ಹೇಳಿದ ಸಾಮಾನ್ಯ ನಾಮಗಳು. ವಾಕ್ಯಾರ್ಥದಿಂದ ಇವು ಕರ್ಮಗಳಿಗೆ ಅಸಾಧಾರಣ ನಾಮಗಳೆಂದು ತಿಳಿಯಬೇಕು.

**(೧) ಅಪಃ (೨) ಅಪ್ನಃ ॥** ಆಪ್ಲೃ-ವ್ಯಾಪ್ತೌ. ಧಾತು. 'ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚ ವಾ' (ಉ-೪-೨೦೨) ಸೂತ್ರದಿಂದ ಕರ್ಮ ಎಂಬ ಅರ್ಥ ತೋರುವಾಗ ಅಸುನ್‌ಪ್ರತ್ಯಯ, ಧಾತುವಿಗೆ ಹ್ರಸ್ವ, ವಿಕಲ್ಪವಾಗಿ

ನುಡಾಗಮ. ಅಪಸ್ ಎಂದು ಸಾಂತಪದವಾಗುತ್ತದೆ. ನುಡಾಗಮ ಬಂದಾಗ ಅಪ್ನಸ್ ಎಂದಾಗುತ್ತದೆ. ಆಯಾಯ ಕರ್ತೃವನ್ನು (ಕೆಲಸಮಾಡುವವನನ್ನು) ಹೊಂದುತ್ತವೆ, ಅಥವಾ ಆ ಕರ್ತೃಗಳನ್ನು ಫಲರೂಪದಿಂದ ಹೊಂದುತ್ತವೆ ಎಂದರ್ಥ. ಉದಾಹರಣೆ—'**ಇಂದ್ರಂ ಸೋಮೇಭಿಸ್ತದಪೋ ವೋ ಅಸ್ತು**' (ಋ–ಸಂ–೨–೬–೧೪–೫) '**ತೇ ಸೌಭಗಂ ವೀರವದ್ಗೋಮದಪ್ನಃ**'(ಋ–ಸಂ–೭–೮–೧೧–೩) ||

(೩) **ದಂಸಃ** || 'ದಸಿ–ದಂಸನದರ್ಶನಯೋಃ' ಧಾತು. ಅಸುನ್‌ಪ್ರತ್ಯಯ. ಧಾತು ಇದಿತ್ತಾದುದರಿಂದ ನುಮಾಗಮ. ದಂಸಸ್ ಸಾಂತಪದವಾಗುತ್ತದೆ. ಆಯಾಯಕಾರಣದಿಂದ ತೋರುವುದು, ಅಥವಾ ತೋರಲ್ಪಡುವುದು ಕರ್ಮ. ಅಥವಾ ಮೋಕ್ಷಣಾರ್ಥಕವಾದ ದಸಿಧಾತುವಿಗೆ ಹಿಂದಿನಂತೆ ಅಸುನ್. ಪಾಪದಿಂದ ಪುರುಷನನ್ನು ಬಿಡುಗಡೆ ಮಾಡಿಸುತ್ತದೆ ಅಥವಾ ಸಂಸಾರದಲ್ಲಿ ಆಪತ್ತಿನಿಂದ ಮೋಕ್ಷಗೊಳಿಸುತ್ತದೆ. ಉದಾಹರಣೆ—'**ದಸ್ಮಸ್ಯ ಚಾರುತಮಮಸ್ತಿ ದಂಸಃ**' (**ಋ. ಸಂ. ೧–೫–೨–೨**)

(೪) **ವೇಷಃ** || ವಿಷಲೃ–ವ್ಯಾಪ್ತೌ. ಧಾತು. ಪಚಾದಿಗಣಪಠಿತವಾದುದರಿಂದ 'ನಂದಿಗ್ರಹ–' ಸೂತ್ರದಿಂದ ಅಚ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ವೇಷ. ಅಕಾರಾಂತಪದವಾಗುತ್ತದೆ. ತನ್ನ ಕರ್ತವ್ಯವನ್ನು ವ್ಯಾಪಿಸಿರುತ್ತದೆ, ವಿಸ್ತಾರಹೊಂದಿರುತ್ತದೆ. ಅಥವಾ ಭಕ್ಷಣಾರ್ಥದಲ್ಲಿಯೂ ನಿಘಂಟುವಿನಲ್ಲಿ ಹೇಳಿರುವುದರಿಂದ ತನ್ನ ಫಲವನ್ನು ತನ್ನ ಕರ್ತೃವಿನಿಂದ ಅನುಭವಿಸುವಂತೆ ಮಾಡಿಸುತ್ತದೆ. ಉದಾಹರಣೆ—'**ಕರ್ಮಣೇ ವಾಂ ವೇಷಾಯ**' (**ಯ. ವಾ. ಸಂ. ೧–೬**)

(೫) **ವೇಪಃ** || ವೇಪೃ–ಕಂಪನೇ. ಧಾತು. ಅಸುನ್‌ಪ್ರತ್ಯಯ. ಮಾಧವನ ಮತದಲ್ಲಿ ಪ್ರೇರಣಾರ್ಥಕವಾದ ವಿಪಿಧಾತುವಿಗೆ ಅಸುನ್. ಲಘೂಪಧಗುಣ. ಇದರಲ್ಲಿ ಕೆಲಸಗಾರರು ನಿಯೋಗಿಸಲ್ಪಡುತ್ತಾರೆ ಎಂದರ್ಥ. ಉದಾ:—

**"ತ್ವಂ ವೇಪಸಾ ತುವಿಜಾತ ಸ್ತವಾನಃ" (ಋ–ಸಂ–೩–೫–೧೧–೨)** ||

(೬) **ವಿಷ್ಟ್ವೀ** || ವ್ಯಾಪ್ತ್ಯರ್ಥಕವಾದ ವಿಷ್‌ಲೃಧಾತುವಿಗೆ 'ಜ್ವಾ, ಗ್ವಾ ಸ್ತ್ವಾ ಜಾಗೃಭ್ಯಃ ಕ್ವಿನ್' (ಉ–೪–೫೪) ಸೂತ್ರದಿಂದ ವಿಹಿತವಾದ ಕ್ವಿನ್‌ಪ್ರತ್ಯಯ. ಬಹುಲಗ್ರಹಣದಿಂದ ಬರುತ್ತದೆ. ತುಡಾಗಮ. ಸ್ತ್ರೀತ್ವದಲ್ಲಿ ಙೀಪ್. 'ವೇಷಃ' ಶಬ್ದದಂತೆಯೇ ಅರ್ಥ ತಿಳಿಯಬೇಕು. ಶ್ರುತಿಯಲ್ಲಿ ಸ್ತ್ರೀಲಿಂಗದಿಂದ ನಿರ್ದಿಷ್ಟವಾದುದರಿಂದ ಹಾಗೆಯೇ ಹೇಳಿದೆ. ಉದಾ:—

**"ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ" (ಋ–ಸಂ–೩–೪–೭–೩) "ವಿಷ್ಟ್ವೀ ಶಮೀ ತರಣಿತ್ವೇನ ವಾಘತಃ" (ಋ–ಸಂ–೧–೭–೨೦–೪)** || ಶಮೀ ವಿಶೇಷಣವೆಂದು ತಿಳಿಯಬೇಕು.

(೭) **ವ್ರತಮ್** || ವರಣಾರ್ಥಕವಾದ ವೃಧಾತುವಿಗೆ ಬಹುಲಗ್ರಹಣದಿಂದ "ಪೃಷಿರಂಜಿಭ್ಯಾಂ ಕಿತ್" ಸೂತ್ರದಿಂದ ವಿಹಿತವಾದ ಅತಚ್‌ಪ್ರತ್ಯಯ ಬರುತ್ತದೆ. ಕಿತ್ತ್ವ ಹೇಳಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. ವ್ರತಮ್. ವ್ರತವೆಂದರೆ ಕರ್ಮನಾಮ ಎಂದು ಪ್ರಾರಂಭಿಸಿ ನಿರುಕ್ತಭಾಷ್ಯದಲ್ಲಿ (೨–೧೩) ಸ್ಕಂದಸ್ವಾಮಿಯು ನಾನಾ ರೀತಿಯಾಗಿ ವ್ಯಾಖ್ಯಾನ ಮಾಡಿರುತ್ತಾನೆ. ಇದು ಎರಡು ರೀತಿಯಾಗಿರುತ್ತದೆ. ಶುಭರೂಪವಾಗಿ, ಅಶುಭರೂಪವಾಗಿ ಕರ್ತೃವನ್ನು ಹೊಂದುತ್ತದೆ. ಇದು ಶ್ರುತಿಯಲ್ಲಿಯೂ ಹೇಳಿದೆ—'ತೇ ವಿದ್ಯಾಕರ್ಮಣೀ ಸಮ ನ್ವಾರಭತೇ ಪೂರ್ವಪ್ರಜ್ಞಾ ಚ.' ಇನ್ನೊಂದು ರೀತಿಯಿಂದಲೂ

ವ್ರತವಾಗುತ್ತದೆ. ಜಿಹ್ವೆ, ಉಪಸ್ಥ, ಸ್ತ್ರೀ ಮುಂತಾದ ವಿಷಯಗಳಿಂದ ನಿವೃತ್ತಿ ಹೊಂದಿರುವ ಕರ್ಮ ವ್ರತವಾಗುತ್ತದೆ. ತಡೆಯುವ ಸ್ವಭಾವವುಳ್ಳದ್ದು ವ್ರತ. ಇದು ನಿವೃತ್ತಿ ರೂಪಕರ್ಮವಾಗುತ್ತದೆ. ನಿವೃತ್ತಿರೂಪವಾದದ್ದು ಒಂದು ಸಂಕಲ್ಪ. ಪ್ರಮಾದದಿಂದ ಅತಿಕ್ರಮಿಸಿ ನಡೆಯುವ ಪುರುಷನನ್ನು ಆ ಮಾರ್ಗದಿಂದ ತಡೆಯುತ್ತದೆ. ಭೋಜನಾದಿಗಳೂ ವ್ರತವಾಗುತ್ತದೆ. ಇದು ಪ್ರವೃತ್ತಿಕರ್ಮ. ಹಸಿವೆ ಮುಂತಾದವುಗಳನ್ನು ತಡೆಯುವುದರಿಂದ ವಾರಣಾರೂಪಧರ್ಮ ಇಲ್ಲಿಯೂ ಸಂಭವಿಸುತ್ತದೆ. ಸರ್ವ ಭೋಗ ವರ್ಜ್ಯವಾದುದೇ ವ್ರತವೆಂದು ಸುಬೋಧಿನೀಕಾರಮತ. ಪ್ರವೃತ್ತಿ ನಿವೃತ್ತಿಕರ್ಮವಾಚಕ ವ್ರತಶಬ್ದಕ್ಕೆ ಕ್ರಮವಾಗಿ ಉದಾಹರಣೆ—

**"ಅಥಾ ವಯಮಾದಿತ್ಯವ್ರತೇ ತವ" (ಋ–ಸಂ–೧–೨–೧೫–೫) "ಬ್ರಾಹ್ಮಣಾ ವ್ರತ ಚಾರಿಣಃ" (ಋ–ಸಂ–೫–೭–೩–೧) "ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ" (ಯು–ವಾ–ಸಂ–೧–೫) ||**

(೮) **ಕರ್ವರಮ್** || ಕರ್ವ–ದರ್ಪೇ. ಧಾತು- 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' ಸೂತ್ರದಿಂದ ಘಪ್ರತ್ಯಯ. ಅಥವಾ, ಕೃ-ವಿಕ್ಷೇಪೇ, ಕೃಞ್-ಹಿಂಸಾಯಾಮ್, ಈಧಾತುಗಳಿಗೆ 'ಕೃ ಗೃ ಶೃ—' ಸೂತ್ರದಿಂದ ಷ್ವರಚ್‌ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಫಲವನ್ನು ಕೊಡುವುದು, ಇದರಲ್ಲಿ ಪಾತ್ರಾದಿಗಳು ಪ್ರಸರಿಸಲ್ಪಡುತ್ತವೆ, ಶುಭವನ್ನು ಅಥವಾ ಅಶುಭವನ್ನು ಹಿಂಸಿಸುವುದು ಎಂದರ್ಥವಾಗುತ್ತವೆ. ಉದಾ:—**'ಅತ' ಇನೋಷಿ ಕರ್ವರಾ ಪುರೂಣಿ (ಋ. ಸಂ. ೮-೨-೨-೨)** ||

(೯) **ಶಕ್ಮ** || ಶಕ್ಲೃ–ಶಕ್ತೌ. ಧಾತು. 'ಅಶಿಶಕಿಭ್ಯಾಂ ಛಂದಸಿ' (ಉ-೪-೧೪೭) ಸೂತ್ರದಿಂದ ಮನಿನ್‌ಪ್ರತ್ಯಯ. ಶಕ್ಮನ್ ನಾಂತಪದವಾಗುತ್ತದೆ. ಇದರಿಂದ ಅಭಿಮತ ಫಲ ಹೊಂದಲ್ಪಡುತ್ತದೆ, ಇಷ್ಟಸಾಧನೆಯಲ್ಲಿ ಸಮರ್ಥವಾಗುತ್ತದೆ. ಮಾಡಲು ಶಕ್ಯವಾದದ್ದು. ಎಂದರ್ಥ. ಉದಾ:—**'ಮಧ್ಯಾ ಕರ್ತೋರ್ವಿತತಂ ಸಂಜಭಾರ' (ಋ. ಸಂ. ೨-೮-೨-೪)**

(೧೦) **ಕ್ರತುಃ** || ಕರಣಾರ್ಥಕ ಕೃಞಧಾತುವಿಗೆ 'ಕೃಞ್ ಕತುಃ' (ಉ. ೧–೨೪) ಸೂತ್ರದಿಂದ ಕತುಪ್ರತ್ಯಯ. ಅತು ಉಳಿಯುತ್ತದೆ. ಕಿತ್ತಾದುದರಿಂದ ಗುಣವಿಲ್ಲ. ಯಣಾದೇಶ. ಮಾಡಲ್ಪಡುವುದು ಕರ್ಮ. ಉದಾ:— **'ಕ್ರತುಂ ದಧಿಕ್ರಾ ಅನು ಸಂತವೀತ್ವತ್' (ಋ. ಸಂ. ೩-೭-೧೪-೪) ಶತಕ್ರತೋ ಮಾದಯಸ್ವಾಸುತೇಷು ' (ಋ. ಸಂ. ೪-೭-೧೩-೫)** ||

(೧೧) **ಕರುಣಮ್** || ಕೃ–ವಿಕ್ಷೇಪೇ ಧಾತು. 'ಕೃವೃದಾರಿಭ್ಯ ಉನನ್' (ಉ. ೩–೫೦) ಸೂತ್ರದಿಂದ ಉನನ್‌ಪ್ರತ್ಯಯ. ಹಿಂಸಾರ್ಥಕ ಕೃಞ್‌ಧಾತುವಿಗೂ ಈ ಪ್ರತ್ಯಯ ಬಂದರೆ ಗುಣ ಬಂದು ಉಕ್ತರೂಪವಾಗುತ್ತದೆ. ರೇಫ ವಿರುವುದರಿಂದ 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಕರ್ವರ ಶಬ್ದದಂತೆಯೇ ಅರ್ಥವಾಗುತ್ತದೆ. ಉದಾಹರಣೆ— **'ಸ ವಿಶ್ವಸ್ಯ ಕರುಣಸ್ಯೇಶ ಏಕಃ' (ಋ. ಸಂ. ೧–೭–೯–೨)** ||

(೧೨) **ಕರಣಾನಿ** || ಕೃಞ್‌ಧಾತುವಿಗೆ 'ಯುಚ್‌ಬಹುಲಮ್' (ಉ. ೨–೭೪) ಸೂತ್ರದಿಂದ ಯುಚ್. ಅಥವಾ ಲ್ಯುಟ್‌ಪ್ರತ್ಯಯ. 'ಯುವೋರನಾಕೌ' ಸೂತ್ರದಿಂದ ಅದಾದೇಶ. ಬಹುವಚನಾಂತವಾಗಿಯೇ ಶ್ರುತಿಗಳಲ್ಲಿ ದೃಷ್ಟವಾಗಿದೆ. ಧಾತು ಋಕಾರಕ್ಕೆ ಗುಣ. ಕರ್ಮವಾಚಕ ಕರಣಪದವು ಆದ್ಯುದಾತ್ತವಾಗುತ್ತದೆಂದು ಮಾಧವನ ಮತ. ಉದಾ:— 'ಪ್ರ

**ತೇ ಪೂರ್ವಾಣಿ ಕರಣಾನಿ ವೋಚಮ್'** (ಋ. ಸಂ. ೪-೧-೩೦-೧) **'ಪ್ರ ತೇ ಪೂರ್ವಾಣಿ ಕರಣಾನಿ ವಿಪ್ರ'** (**ಋ. ಸಂ. ೩.೬ ೨-೫**) ||

(೧೩) **ಕರಾಂಸಿ** || ಕೃಞ್‌ಧಾತುವಿಗೆ ಅಸುನ್ ಪ್ರತ್ಯಯ. ಧಾತು ಋಕಾರಕ್ಕೆಗುಣ. ಕರಸ್ ಸಾಂತಪದವಾಗುತ್ತದೆ. ಬಹುವಚನದಲ್ಲಿ ಕರಾಂಸಿ ಎಂದು ರೂಪ. 'ಭೂತೇಽಪಿ ದೃಶ್ಯಂತೇ' ಎಂದುದರಿಂದ ಈ ಪ್ರತ್ಯಯ ಭೂತಾರ್ಥದಲ್ಲಿ ಅಥವಾ ಭವಿಷ್ಯದರ್ಥದಲ್ಲಿ ಬರುತ್ತದೆ. ಹಿಂದಿನಂತೆಯೇ ಅರ್ಥ ತಿಳಿಯಬೇಕು. ಮಾಡಲ್ಪಟ್ಟವುಗಳೂ ಮಾಡಲ್ಪಡುವವುಗಳೂ ಕರಾಂಸಿ ಪದವಾಚ್ಯಗಳಾಗುತ್ತವೆ ಎಂದು ಮಾಧವರು. ಉದಾ:—**'ಆವಿದ್ವಾಂ ಆಹ ವಿದುಷೇ ಕರಾಂಸಿ'** (**ಋ. ಸಂ-೩-೬-೨-೫**) ||

(೧೪) **ಕರಂತೀ** || ಕೃಞ್‌ಧಾತುವಿಗೆ ಲಟ್‌ಬಂದಾಗ ಅದಕ್ಕೆ ಶತೃಾದೇಶ. ಸ್ತ್ರೀತ್ವದಲ್ಲಿ 'ಉಗಿತಶ್ಚ' ಸೂತ್ರದಿಂದ ಙೀಪ್. ಮಾಡುವವನಿಗೆ ಇಷ್ಟವಾದದ್ದು. ಕರ್ಮ. ಇದಕ್ಕೆ ಉದಾಹರಣೆ ಹುಡುಕಬೇಕು.

(೧೫) **ಕರಿಕ್ರತ್** || 'ದಾಧರ್ತಿದರ್ಧರ್ತಿ ದರ್ಧರ್ಷಿ'—(ಪಾ. ಸೂ. ೭-೪-೬೫) ಸೂತ್ರದಿಂದ ಛಂದಸ್ಸಿನಲ್ಲಿ ಕೃಞ್ ಧಾತುವಿಗೆ ಯಙ್‌ಲುಗಂತದ ಮೇಲೆ ಶತೃ ಬಂದು, ನುಮಾಗಮಾಭಾವ, ಅಭ್ಯಾಸಕ್ಕೆ ರಿಗಾಗಮಗಳು ಬಂದು ನಿಪಾತಿತವಾಗಿದೆ. ಶತೃವಿನ ಅಕಾರದೊಡನೆ ಯಣಾದೇಶ ಬಂದಾಗ ಋಕಾರಾಂತವಾದ ಅಂಗನಾದುದರಿಂದ ರಿಗಾಗಮವನ್ನೂ ನಿಪಾತಮಾಡಬೇಕೆಂದು ನ್ಯಾಸಕಾರನ ಮತ. ಇಷ್ಟಪ್ರಾಪ್ತಿಗೂ, ಅನಿಷ್ಟ ನಿವಾರಣೆಗೂ ಪುನಃ ಪುನಃ ಮಾಡಲ್ಪಡುವುದು ಕರ್ಮ. ಇದಕ್ಕೂ ನಿಗಮ ಹುಡುಕಬೇಕು.

(೧೬) **ಚಕ್ರತ್** || ಕರಣಾರ್ಥದಲ್ಲಿ ಕೃಞ್‌ಧಾತುವು ಭ್ವಾದಿಯಲ್ಲಿ ಹೇಳಿದೆ. 'ಬಹುಲಮ್ ಛಂದಸಿ' ಸೂತ್ರದಿಂದ ಶಬ್ವಿಕರಣಕ್ಕೆ ಬದಲಾಗಿ ಶ್ಲುವಿಕರಣ ಬರುತ್ತದೆ. ಆಗ 'ಶ್ಲೌ' ಸೂತ್ರದಿಂದ ಧಾತುವಿಗೆ ದ್ವಿತ್ವಾದಿ. ಲಟಿಗೆ ಶತೃಪ್ರತ್ಯಯ. ಯಣಾದೇಶ. ಅಭೀಷ್ಟಸಾಧಕವಾದದ್ದು ಕರ್ಮ. ಇದಕ್ಕೂ ನಿಗಮ ಹುಡುಕಬೇಕು. ಕೆಲವು ಕೋಶಗಳಲ್ಲಿ 'ಚಕ್ರತುಃ' ಎಂದೂ ದೃಷ್ಟವಾಗಿದೆ. ನಿಗಮದರ್ಶನದಿಂದ ನಿರ್ಣಯಿಸಬೇಕು. ಮಾಧವರು ಇದರ ಸ್ಥಾನದಲ್ಲಿ 'ಚರ್ಕೃತ್ಯಂ' ಎಂದು ಪಾಠ ಮಾಡಿ 'ಚರ್ಕೃತ್ಯಾನಿ ಕೃಣ್ವತಃ' (ಋ. ಸಂ. ३-೬-೭-೧೩) ಎಂದು ಉದಾಹರಿಸುತ್ತಾರೆ. ಕರ್ಮಕ್ಕೆ ಚರ್ಕೃತ್ಯವೆಂದು ವ್ಯಾಖ್ಯಾನಮಾಡಿರುತ್ತಾರೆ.

(೧೭) **ಕರ್ತ್ವಮ್** || ಕೃಞ್‌ಧಾತುವಿಗೆ 'ಅನ್ಯೇಭ್ಯೋಽಪಿ ದೃಶ್ಯಂತೇ' ಸೂತ್ರದಿಂದ ವನ್‌ಪ್ರತ್ಯಯ. ಅಥವಾ 'ಕೃತ್ಯಾರ್ಥೇ ತವೈಕೇಕೇನ್ಯತ್ವನಃ' (ಪಾ. ಸೂ. ३-೪-೧೪) ಸೂತ್ರದಿಂದ ತ್ವನ್‌ಪ್ರತ್ಯಯ. ಭಾವಕರ್ಮವೇ ಇಲ್ಲಿ ಕೃತ್ಯಾರ್ಥ. ಧಾತು ಋಕಾರಕ್ಕೆ ಗುಣ. ಉದಾಹರಣೆ—**'ತದ್ದೇವಾನಾಂ ದೇವತಮಾಯ ಕರ್ತ್ವಮ್'** (**ಋ. ಸಂ. ೨-೭-೧-೩**)

(೧೮) **ಕರ್ತೋಃ** || ಕೃಞ್‌ಧಾತುವಿಗೆ "ಸಿತನಿಗಮಿ ಮಸಿ—" (ಉ-೧-೬೭) ಸೂತ್ರದಿಂದ ವಿಹಿತವಾದ ತುನ್‌ಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. 'ಕರ್ತುಃ' ಮಾಡುವುದು ಕರ್ಮ. ಷಷ್ಠ್ಯೇಕವಚದಲ್ಲಿ 'ಕರ್ತೋಃ' ಎಂದು ರೂಪವಾಗುತ್ತದೆ. ನಿಗಮದಲ್ಲಿ ಹೀಗೆಯೇ ದೃಷ್ಟವಾದುದರಿಂದ ಅದೇ ರೂಪ ಹೇಳಿದೆ. ಉದಾಹರಣೆ—

"ಮಧ್ಯಾಕರ್ತೋರ್ವಿತತಂ ಸಂಜಭಾರ" (ಋ. ಸಂ. ೧-೮-೭-೪) **"ಮಧ್ಯಾಕರ್ತೋರ್ನ್ಯಧಾಚ್ಛಕ್ಮ ಧೀರಃ" (ಋ. ಸಂ. ೨-೮-೨-೪) ||**

(೧೯) **ಕರ್ತವೈ ||** ಕೃಞ್‌ಧಾತುವಿಗೆ "ಕೃತ್ಯಾರ್ಥೇ ತವೈಕೇಕೇನ್ಯತ್ವನಃ" ಸೂತ್ರದಿಂದ ತವೈಪ್ರತ್ಯಯ. ಧಾತುವಿನ ಇಕಿಗೆ ಗುಣ. ಕರ್ತವೈ ಏಜಂತವಾದ ಕೃದಂತವಾದುದರಿಂದ 'ಕೃನ್ಮೇಜಂತಃ' (ಪಾ. ಸೂ. ೧-೧-೩೯) ಸೂತ್ರದಿಂದ ಅವ್ಯಯಸಂಜ್ಞಾ ಬರುತ್ತದೆ. ಅವ್ಯಯಸಂಜ್ಞೆ ಇರುವುದರಿಂದ ಸುಪ್‌ಪ್ರತ್ಯಯಕ್ಕೆ ಲುಕ್ ಬರುತ್ತದೆ. ಮಾಡಬೇಕಾದುದು ಕರ್ಮ. ಇದಕ್ಕೆ ನಿಗಮ ಹುಡುಕಬೇಕು.

(೨೦) **ಕೃತ್ವೀ ||** ಕೃಞ್‌ಧಾತುವಿಗೆ ಬಹುಲಗ್ರಹಣದಿಂದ "ಸಃ ಕಿಚ್ಚ" (ಉ-೧-೭೮) ಸೂತ್ರದಿಂದ ವಿಹಿತವಾದ ತುಪ್ರತ್ಯಯವು ಬರುತ್ತದೆ. ಕಿತ್ತ್ವಾತಿದೇಶದಿಂದ ಧಾತುವಿಗೆ ಗುಣ ಬರುವುದಿಲ್ಲ. ಕೃತು ಎಂದಾಗುತ್ತದೆ. ಮಾಡಲ್ಪಡುವುದು ಕರ್ಮ, "ಶಿಲ್ಪಾವನ್ಯೇ ಕೃತುರ್ಯಕವ್" ಎಂದು ಮಾಧವರೂ ಕರ್ಮನಾಮದಲ್ಲಿ ಇದನ್ನು ಪಾಠಮಾಡಿರುತ್ತಾರೆ. 'ಸುಪಾಂ ಸುಲುಕ್—' (ಪಾ. ಸೂ. ೭-೧-೩೯) ಸೂತ್ರದಲ್ಲಿ 'ಇಯಾಡಿಯಾಜೀಕಾರಾಣಾಮುಪಸಂಖ್ಯಾನಮ್' ಎಂದು ವಾರ್ತಿಕ ಹೇಳಿರುವುದರಿಂದ ವಿಭಕ್ತಿಗೆ ಈಕಾರಾದೇಶ. ಕೃತು+ಈ. ಯಣಾದೇಶ. ಸ್ಕಂದಸ್ವಾಮಿಯೂ ಕೂಡ-ಕೃತ್ವೀ ಎಂಬುದು ಕರ್ಮನಾಮ. ಧನಪ್ರಾಪ್ತಿಗೋಸ್ಕರ ಮಾಡುವ ಕಾರ್ಯವೆಂದು ವ್ಯಾಖ್ಯಾನಮಾಡಿರುತ್ತಾನೆ. ಉದಾ:....

**"ತ್ವಂ ರಥಮೇತಶಂ ಕೃತ್ವ್ಯೇ ಧನೇ (ಋ. ಸಂ. ೧-೪-೧೮-೧) "ಕೃತ್ವೀ ಸವರ್ಣಾಮದದರ್ವಿವಸ್ವತೇ" (ಋ. ಸಂ. ೭-೬-೨೩-೨) ||**

(೨೧) **ಧೀಃ ||** 'ಧೃಞ್-ಆಧಾರೇ' ಧಾತು. ಕ್ವಿಪ್. ಫಲದಾನದಿಂದ ಕರ್ತೃವನ್ನು ಹೊಂದಿರುವುದು ಕರ್ಮ ಅಥವಾ ಧಾರಣ, ಪೋಷಣಾಣರ್ಥಕವಾದ ಧಾಧಾತುವಿಗೆ ಕ್ವಿಪ್ ಬಂದಾಗ 'ಘುಮಾಸ್ಥಾಗಾಪಾಜಹಾತಿಸಾಂ ಹಲಿ' (ಪಾ. ಸೂ. ೬-೪-೬೬) ಸೂತ್ರದಿಂದ ಈತ್ವ. ಫಲದಿಂದ ಕರ್ತೃನ್ನು ಧರಿಸಿರುವುದು. ಫಲವನ್ನು ಕೊಡುವುದು. ಅಥವಾ ಧ್ಯೈ-ಚಿಂತಾಯಾಮ್ ಧಾತು. 'ಧ್ಯಾಯತೇಃ ಸಂಪ್ರಸಾರಣಂ ಚ' ವಾರ್ತಿಕದಿಂದ ಕ್ವಿಪ್ ಬಂದಾಗ ಸಂಪ್ರಸಾರಣ. ಯಕಾರಕ್ಕೆ ಇಕಾರ ಬಂದರೆ ಪೂರ್ವರೂಪ. ಕಾರ್ಯಮಾಡುವವರಿಂದ ಚಿಂತಿಸಲ್ಪಡುವುದು (ಈ ರೀತಿ ಮಾಡಬೇಕೆಂದು) ಉದಾಹರಣೆ— **"ಧಿಯಂ ಧಿಯಂ ಸೀಷಧಾತಿ ಪ್ರಪೂಷಾ' (ಋ. ಸಂ. ೪-೮-೬-೩) ||**

(೨೨) **ಶಚೀ ||** ಶಚ-ವ್ಯಕ್ತಾಯಾಂ ವಾಚಿ ಧಾತು. 'ಇನ್ ಸರ್ವಧಾತುಭ್ಯಃ' (ಉ. ೪-೧೧೪) ಸೂತ್ರದಿಂದ ಇನ್‌ಪ್ರತ್ಯಯ. ಶಚಿ ಎಂದು ಇಕಾರಾಂತಕೃದಂತವಾದುದರಿಂದ 'ಕೃದಿಕಾರಾದಕ್ತಿನಃ' ವಾರ್ತಿಕದಿಂದ ಸ್ತ್ರೀತ್ವದಲ್ಲಿ ಙೀಷ್. ಶಚೀ. ಕಾರ್ಯದಲ್ಲಿ ವ್ಯಕ್ತವಾಗಿ ಮಾತನಾಡುತ್ತಾರೆ. ಕ್ಷೀರಸ್ವಾಮಿಯು ಶಚಧಾತುವಿಗೆ ಗತ್ಯರ್ಥ ಹೇಳಿರುತ್ತಾನೆ. ಎಲ್ಲರನ್ನೂ ಹೊಂದುವುದು ಕರ್ಮ. ಆದರೆ ಧಾತು ಪಾಠದಲ್ಲಿ ಎಲ್ಲಿಯೂ ಈ ಅರ್ಥ ಹೇಳಿಲ್ಲ. ಉದಾಹರಣೆ— **'ಯದ್ ದೇವಯಂತ ಮವಥಃ ಶಚೀಭಿಃ' (ಋ. ಸಂ. ೫-೫-೧೭-೪) ||**

(೨೩) **ಶಮೀ ||** ಶಮು-ಉಪಶಮೇ ಧಾತು. ಹಿಂದಿನಂತೆ ಇನ್‌ಬಂದಾಗ ಸ್ತ್ರೀತ್ವದಲ್ಲಿ ಙೀಷ್. ಇದರಿಂದ ಅನಿಷ್ಟಾದಿಗಳನ್ನು ಹೋಗಲಾಡಿಸಿಕೊಳ್ಳುತ್ತಾನೆ, ಅನಿಷ್ಟನಿವಾರಕವಾದದ್ದು ಕರ್ಮ. ಣಿಜಂತದ ಮೇಲೆ ಇನ್ನಾದಿಗಳು ಬಂದರೂ ಇದೇರೂಪ. ಕರ್ಮವು ಅನಿಷ್ಟವ್ಯಾಧ್ಯಾದಿಗಳನ್ನು ನಾಶಗೊಳಿಸುತ್ತದೆ. ಉದಾ:—**'ಶಮೀಮದುರ್ಮಖಸ್ಯ ವಾ' (ಋ. ಸಂ. ೬-೪-೨೭-೪) ||**

(೨೪) ಶಿಮೀ ॥ ಶಮಧಾತುವಿಗೆ ಹಿಂದಿನಂತೆಯೇ ಇನ್ನಾದಿಪ್ರತ್ಯಯ. ಬಹುಲಗ್ರಹಣದಿಂದ ಶಕಾರೋತ್ತರಾ ಕಾರಕ್ಕೆ ಇಕಾರಾದೇಶ. ಅಥವಾ ಶಕ್ತ್ಯರ್ಥಕ ಶಕ್‌ಧಾತುವಿಗೆ ಇನ್ನಾದಿಗಳು ಬಂದು ಕಕಾರಕ್ಕೆ ಮಕಾರವೂ, ಅಕಾರಕ್ಕೆ ಇಕಾರವೂ ಬಹುಲಗ್ರಹಣದಿಂದ ಬಂದರೆ ಶಿಮೀ ಎಂದಾಗುತ್ತದೆ. ಶಕ್ಮಪದದಂತೆಯೇ ಅರ್ಥ ತಿಳಿಯಬೇಕು. ಉದಾ:—**'ಧುನಿಃ ಶಮೀವಾಞ್ಛರುಮಾಂ ಋಜೀಷೀ' (ಋ. ಸಂ. ೮-೪-೧೪-೫)**

(೨೫) ಶಕ್ತಿಃ ॥ ಶಕ್‌ಲೃ-ಶಕ್ತೌ,ಧಾತು. 'ಸ್ತ್ರಿಯಾಂಕ್ತಿನ್' (ಪಾ-ಸೂ-೩-೩-೬೪) ಸೂತ್ರದಿಂದ ಕ್ತಿನ್‌ಪ್ರತ್ಯಯ. ಮಾಡಲು ಶಕ್ಯವಾದದ್ದು' ಇದರಿಂದ ಪರಲೋಕವನ್ನುಹೊಂದಲು ಶಕ್ತವಾದದ್ದು. ಕರ್ಮ. ಉದಾ:—**"ಅಜೀಜಿನಚ್ಛಕ್ತಿ-ಭೀರೋದಮಿಪ್ರಾವಮ್" (ಋ. ಸಂ. ೮-೪-೧೧-೫). ॥**

(೨೬) **ಶಿಲ್ಪಮ್ ॥** ಶೀಲ-ಉಪಧಾರಣೇ. ಧಾತು. ಶೀಲ-ಸಮಾಧೌ ಎಂದು ಭ್ವಾದಿಯಲ್ಲಿಯೂ ಹೇಳಿದೆ ಇವುಗಳಿಗೆ 'ಖಷ್ಪಶಿಲ್ಪಶಷ್ಪ—' (ಉ-೩-೧೬) ಸೂತ್ರದಿಂದ ಪಪ್ರತ್ಯಯ, ಣಿಲೋಪ, ಉಪಧಾ ಹ್ರಸ್ವ ಬಂದು ಶಿಲ್ಪ ಎಂದು ನಿಪಾತಿತವಾಗಿದೆ. ಪುನಃ ಪುನಃ ಅಭ್ಯಾಸಮಾಡುತ್ತಾರೆ, ಅತಿಕ್ಲೇಶಧಾಯಕವಾದುದರಿಂದ ಮಾಡುವವನನ್ನು ಕೃಶವನ್ನಾಗಿ ಮಾಡುತ್ತದೆ. ಕರ್ಮ. ಆಗ ಶಿಞ್-ತನೂಕರಣೇ. ಧಾತು. ನಿಪಾತದಿಂದಲೇ ಅಭಿಮತರೂಪವಾಗಿದೆಯೆಂದು ತಿಳಿಯಬೇಕು. ಕುಂಭಾರಮುಂತಾದವರ ಕರ್ಮ ಶಿಲ್ಪಎಂದು ಉಣಾದಿವೃತ್ತಿಯಲ್ಲಿ ಹೇಳಿದೆ. ಉದಾಹರಣೆ—

**ಯತ್ತೇ ಶಿಲ್ಪಂ ಕಶ್ಯಪ ರೋಚನಾವತ್ (ಅಥ-ಸಂ-೧೩-೩-೧೦.) 'ದಿವಃ ಶಿಲ್ಪಮುವಂತಮ್'** ॥

ಹೀಗೆ ಇಪ್ಪತ್ತಾರು ಕರ್ಮದ ನಾಮಗಳು.

---

## ॥ ಅಪತ್ಯನಾಮಾನ್ಯುತ್ತರಾಣಿ ಪಂಚದಶ ॥

ಕೆಳಗೆ ಸೂಚಿಸಿರುವ ಹದಿನೈದು ಶಬ್ದಗಳೂ ಅಪತ್ಯನಾಮಗಳು.

(೧) ತುಕ್ (೨) ತೋಕಮ್ (೩) ತನಯಃ (೪) ತೋಕ್ಮ
(೫) ತಕ್ಮ (೬) ಶೇಷಃ (೭) ಅಪ್ನಃ (೮) ಗಯಃ (೯) ಜಾಃ
(೧೦) ಅಪತ್ಯಮ್ (೧೧) ಯಹುಃ (೧೨) ಸೂನುಃ (೧೩) ನಪಾತ್
(೧೪) ಪ್ರಜಾ (೧೫) ಬೀಜಮ್ ॥

ಇತಿ ಪಂಚದಶಾಪತ್ಯನಾಮಾನಿ ॥೨॥

(೧) **ತುಕ್ ॥ ತುಜ-ಹಿಂಸಾಯಾಮ್. (ಭೂ-ಪ) ಕ್ವಿಪ್ । ತೋಜತಿ ಹಿನಸ್ತಿ ಮಾತಾಪಿತರೌ ಗರ್ಭವಾಸಾದಿನಾ ॥**

ಹಿಂಸಾರ್ಥಕ ತುಜಧಾತುವಿಗೆ ಕ್ವಿಪ್‌ಪ್ರತ್ಯಯ ಬಂದರೆ ಸರ್ವಲೋಪವಾಗುತ್ತದೆ. ಪದಾಂತದಲ್ಲಿ 'ಚೋಃ ಕುಃ' ಸೂತ್ರದಿಂದ ಕುತ್ವ. ಗರ್ಭವಾಸಾದಿಗಳಿಂದ ತಾಯಿತಂದೆಗಳಿಗೆ ವ್ಯಥೆಗೊಳಿಸುವವನು. 'ಯದಾ ಪಿಪೇಷ'—ಇತ್ಯಾದಿ ಮಂತ್ರಗಳಿಂದಲೂ ಪುತ್ರನು ತಂದೆತಾಯಿಗಳನ್ನು ಪೀಡಿಸುವವನೆಂದು ಹೇಳಿದೆ. ಮಾಧವನು ತುಜಧಾತುವಿಗೆ ಗತಿ ಮತ್ತು ಪ್ರೇರಣಾರ್ಥಗಳನ್ನು ಹೇಳಿರುತ್ತಾನೆ. ಹಿಂದಿನಂತೆ ಕ್ವಿಬಾದಿ. ಇವನಿಂದ ತಂದೆಯು ಪಿತೃಲೋಕಕ್ಕೆ ಹೋಗುತ್ತಾನೆ, ಪಿತೃ ಋಣವನ್ನು ಹೋಗಲಾಡಿಸಿಕೊಳ್ಳುತ್ತಾನೆ, ಪ್ರಸವಕಾಲದಲ್ಲಿ ವಾಯುವಿನಿಂದ ಪ್ರೇರೇಪಿಸಲ್ಪಡುವವನು ಎಂದರ್ಥ. ಅಥವಾ ಪ್ರಸಾದಾರ್ಥಕವಾದ ಷ್ಟುಚಧಾತುವಿಗೆ ಕ್ವಿಪ್. ಪೃಷೋದರಾದಿಗಣಪಠಿತವಾದುದರಿಂದ ಸಕಾರಲೋಪ ಇವನಿಂದ ತಂದೆ ತಾಯಿಗಳು ಸಂತೋಷಗೊಳಿಸಲ್ಪಡುತ್ತಾರೆ ಎಂದರ್ಥ. ಉದಾಹರಣೆ—**" ತುಚೇ ತು ನೋ ಭವನ್ತು ವರಿವೋವಿದಃ '** (ಋ. ಸಂ. ೬-೨-೩೩-೪) **'ತುಚೇ ತನಾಯ ತತ್‌ಸು ನೋ '** (ಋ. ಸಂ. ೬-೧-೨೮-೩) ||

(೨) **ತೋಕಮ್** || ವ್ಯಥಾರ್ಥವನ್ನುಕೊಡುವ ತುದಧಾತುವಿಗೆ 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' (ಪಾ-ಸೂ-೩-೩-೧೧೮) ಸೂತ್ರದಿಂದ ಘಪ್ರತ್ಯಯ. ಲಘೂಪಧಗುಣ. ಪೃಷೋದರಾದಿಗಣಪಠಿತವಾದುದರಿಂದ ದಕಾರಕ್ಕೆ ಕಕಾರಾದೇಶ. ಗರ್ಭವಾಸಕಾಲದಲ್ಲಿ ಇವನಿಂದ ತಾಯಿಯು ವ್ಯಥೆಪಡುತ್ತಾಳೆ, ರೋಗಾದಿಗಳಿಂದ ಪೀಡಿಸಲ್ಪಡುತ್ತಾನೆ ಎಂದರ್ಥ. ಅಥವಾ ಷ್ಟುಚ-ಸ್ತುತೌ. ಧಾತು. 'ಕೃದಾಧಾರಾರ್ಚಿಕಲಿಭ್ಯಃ ಕಃ' ಸೂತ್ರದಿಂದ ವಿಹಿತವಾದ ಕಪ್ರತ್ಯಯ ಬಹುಲಗ್ರಹಣದಿಂದ ಬಂದು ಸಲೋಪವಾಗುತ್ತದೆ. ಸ್ತೋತ್ರಮಾಡಲ್ಪಡುವವನು. **ಪುತ್ರ.** ಐತರೇಯಬ್ರಾಹ್ಮಣದ ಹರಿಶ್ಚಂದ್ರೋಪಾಖ್ಯಾನದಲ್ಲಿ 'ಋಣ-ಮಸ್ಮಿನ್—' ಇತ್ಯಾದಿಮಂತ್ರಗಳಿಂದ-ಪುತ್ರನಿಂದ ಋಣನಿವೃತ್ತಿಯೂ, ಅಮೃತತ್ವಪ್ರಾಪ್ತಿಯೂ ಆಗುತ್ತದೆಂದು ಪ್ರಶಂಸೆ ಮಾಡಿದೆ. ಅಥವಾ ತು ಎಂಬುದು ಸೌತ್ರಧಾತು ವೃದ್ಧ್ಯರ್ಥಕೊಡುತ್ತದೆ. ಹಿಂದಿನಂತೆ ಕಪ್ರತ್ಯಯ. ಗುಣ. ತಾಯಿತಂದೆಗಳಿಂದ ಬೆಳೆಸಲ್ಪಡುವವನ ಎಂದರ್ಥ. ಉದಾಹರಣೆ—

**"ಮಾ ನಸ್ತೋಕೇಷು ತನಯೇಷು ರೀರಿಷಃ"** (ಋ. ಸಂ- ೫-೪-೧೩-೩) ||

(೩) **ತನಯಃ** || ತನು-ವಿಸ್ತಾರೇ. ಧಾತು. "ವಲಿಮಲಿ ತನಿಭ್ಯಃ ಕಯನ್" (ಉ-೪-೯೭) ಸೂತ್ರದಿಂದ ಕಯನ್‌ಪ್ರತ್ಯಯ. ಅಯ ಉಳಿಯುತ್ತದೆ. ಕುಲವನ್ನು ವಿಸ್ತಾರಗೊಳಿಸುವವನು. ಉದಾ:—

**"ಮಾ ನಸ್ತೋಕೇ ತನಯೇ ಮಾನ ಆಯೌ"** (ಋ. ಸಂ. ೧-೮-೬-೩) ||

(೪) **ತೋಕ್ಮ** || ಹಿಂದೆ ಹೇಳಿದ ತುಜ, ಸ್ತುಚ, ತನು, ತುದ ಧಾತುಗಳಲ್ಲಿ ಯಾವುದಕ್ಕಾದರೂ ಮನಿನ್ ಬಂದರೆ ಪೃಷೋದರಾದಿಗಣಪಠಿತವಾದುದರಿಂದ ಅಭಿಮತ ರೂಪಸಿದ್ಧಿಯಾಗುತ್ತದೆ. ಇದಕ್ಕೆ ಉದಾಹರಣೆ ಹುಡುಕಬೇಕು.

(೫) **ತಕ್ಮ** || ಗಮನಾರ್ಥಕವಾದ ತಕಧಾತುವಿಗೆ ಮನಿನ್‌ಪ್ರತ್ಯಯ. ಅಥವಾ ತುಚಧಾತುವಿಗೆ ಮನಿನ್ ಬಂದಾಗ ಉಕಾರಕ್ಕೆ ಬಹುಲಗ್ರಹಣದಿಂದ ಅಕಾರಾದೇಶ. ಇದನಿಂದ ತಂದೆಯು ಪಿತೃಲೋಕವನ್ನು ಹೊಂದುತ್ತಾನೆ ಎಂದರ್ಥ. ನಿಗಮ ಹುಡುಕಬೇಕು.

(೬) **ಶೇಷಃ** || ಶಿಷ-ಸರ್ವೋಪಭೋಗೇ. ಚುರಾದಿಪಠಿತವಾದ ಧಾತು. ಔಣಾದಿಕ ಅಸುನ್‌ಪ್ರತ್ಯಯ. ಲಘೂಪಧ ಗುಣ. ತಂದೆ ಸತ್ತಮೇಲೆ ಸರ್ವಸಂಪತ್ತನ್ನೂ ಭೋಗಿಸುವವನು, ತಂದೆಯೊಡನೆ ಪುತ್ರನು ಸಾಯುವುದಿಲ್ಲ, ಕುಲಾಭಿ

ವೃದ್ಧಿಗೆ ಉಳಿಯುತ್ತಾನೆ ಎಂದರ್ಥ. ಅಥವಾ ಶಿಷ್ಲೃ-ವಿಶೇಷಣೇ ಧಾತು. ಹಿಂದಿನಂತೆ ಅಸುನ್‌ಪ್ರತ್ಯಯ. ತಂದೆ ಮುಂತಾದವರಿಂದ ವಿದ್ಯಾದಿಗಳಿಂದ ವಿಶೇಷ ಹೊಂದುತ್ತಾನೆ. "ಪುನಾತು ಪಿತ್ರಾ ಪ್ರಜಾ ಮೇ ಪತಚ್ಛ್ರೇಯಸೀಮಾತ್ಮನಃ ಕುರುತೇ" ಎಂದು ಬ್ರಾಹ್ಮಣ. "ತಮ್ಮಿಂದಲೂ ಅತಿಶಯ ಗುಣವುಳ್ಳ ಪುತ್ರರನ್ನು ಬಯಸುತ್ತಾರೆ" ಎಂದು ಮಹಾಭಾರತ ದಲ್ಲಿಯೂ ಹೇಳಿದೆ. ಅಥವಾ ಹಿಂಸಾರ್ಥಕೊಡುವ ಶಿಷಧಾತುವಿಗೆ ಹಿಂದಿನಂತೆ ಅಸುನ್‌ಪ್ರತ್ಯಯ. ತಂದೆತಾಯಿಗಳನ್ನು ಹಿಂಸಿಸುವವನು. ಉದಾಹರಣೆ—

**'ನ ಶೇಷೋ ಅಗ್ನೇ ಅನ್ಯಜಾತಮಸ್ತಿ' (ಋ. ಸಂ. ೫-೨-೬-೨) "ಮಾ ಶೇಷಸಾ ಮಾ ತನಸಾ" (ಋ. ಸಂ. ೪-೪-೮-೪) ||**

(೭) **ಅಪ್ನಃ ||** ಕರ್ಮನಾಮದಲ್ಲಿ ಇದು ವ್ಯಾಖ್ಯಾತವಾಗಿದೆ (೨-೧) ಬಹುಲಗ್ರಹಣದಿಂದ ಪುತ್ರನೆಂಬ ಅರ್ಥ ದಲ್ಲಿಯೂ ಇದು ಪ್ರಯೋಗಿಸಲ್ಪಡುತ್ತದೆ. 'ಆಪ್ನೋತೇರ್ಹ್ರಸ್ವಶ್ಚ ನುಟ್ ವಾ' ಎಂಬ ಸೂತ್ರದಲ್ಲಿ ಭೋಜರಾಜನು ಕರ್ಮಾರ್ಥವನ್ನು ಹೇಳಿರಲಿಲ್ಲ. ಇವನಿಂದ ಸರ್ವಕಾಮಗಳನ್ನು ಹೊಂದುತ್ತಾನೆ, ಅಧಿಕಪುಣ್ಯದಿಂದಲೇ ಹೊಂದಲ್ಪಡುವವನು ಎಂದರ್ಥ. 'ಆಪ್ನಂ ಧನಂ' ಎಂದು ಮಾಧವನು ಹೇಳಿದ್ದರೂ ಪುತ್ರನೂ ಆಗಬಹುದು. ಉದಾ:—**'ಯಚ್ಚಿತ್ರಮಪ್ನ ಉಷಸೋ ವಹನ್ತಿ' (ಋ. ಸಂ. ೧-೮-೪-೫)**

(೮) **ಗಯಃ ||** ಗಮನಾರ್ಥಕವಾದ ಗಮ್ ಧಾತುವಿಗೆ 'ಅಘ್ನ್ಯಾದಯಶ್ಚ' (ಉ-೪-೧೦೮) ಸೂತ್ರದಿಂದ ಯಕ್‌ಪ್ರತ್ಯಯ ಬಂದು ನಿಪಾತಿತವಾಗಿದೆ. ನಿಪಾತದಿಂದಲೇ ಮಕಾರಲೋಪ. ಗತ್ಯರ್ಥಕ ಗಾಙ್‌ಧಾತುವಿಗೆ ಯಕ್ ಬಂದರೂ ನಿಪಾತದಿಂದ ಹ್ರಸ್ವಹೇಳಬೇಕು. ಗತ್ಯರ್ಥದಲ್ಲಿ ಹಿಂದಿನಂತೆಯೇ ಅರ್ಥ ತಿಳಿಯಬೇಕು. ಉದಾಹರಣೆ—**'ಇಂದ್ರೋ ವಸುಭಿಃ ಪರಿ ಪಾತು ನೋ ಗಯಮ್' (ಋ. ಸಂ. ೮-೨-೧೨-೩) 'ಗಯಸ್ಫಾನಃ ಪ್ರತರಣಾಸು ವೀರಃ' (ಋ. ಸಂ. ೧-೬-೨೨-೪)** ಇಲ್ಲಿ ಗಯನೆಂಬುದು ಗೃಹ ಮತ್ತು ಪುತ್ರನಾಮನೆಂದು ಹರದತ್ತ. ಕೇವಲ ಗೃಹನಾಮವೆಂದು ಮಾಧವ.

(೯) **ಜಾಃ ||** ಜನೀ-ಪ್ರಾದುರ್ಭಾವೇ. ಧಾತು. 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಲ್ಲಿ ಅಪಿಶಬ್ದವು ಯಾವ ಉಪಾಧಿ ಇಲ್ಲದಿದ್ದರೂ ಕಾರ್ಯ ಬರುತ್ತದೆಂದು ತಿಳಿಸುವುದರಿಂದ ಧಾತು ಕೇವಲವಾಗಿದ್ದರೂ ಡಪ್ರತ್ಯಯ ಬರುತ್ತದೆ. ಡಿತ್ತಾದುರಿಂದ ಟಿಲೋಪ (ಅನ್) ಅದಂತವಾದುದರಿಂದ ಸ್ತ್ರೀತ್ವದಲ್ಲಿ ಟಾಪ್. ಬಹುವಚನಾಂತರೂಪ. ತಾಯಿತಂದೆಗಳಿಂದ ಹುಟ್ಟುವವನು ಪುತ್ರ. ಉದಾಹರಣೆ—**'ಸೋಮಃ ಪರಿ ಕ್ರತುನಾ ಪಶ್ಯತೇ ಜಾಃ' (ಋ. ಸಂ. ೭-೨-೨೬-೪) 'ಅನಮೀವೋ ರುದ್ರ ಜಾಸು ನೋ ಭವ' ಋ. ಸಂ. ೫-೪-೧೩-೨) ||**

(೧೦) **ಅಪತ್ಯಮ್ ||** 'ಅಘ್ನ್ಯಾದಯಶ್ಚ' (ಉ-೪-೧೦೮) ಸೂತ್ರದಿಂದ, ಅಪಉಪಸರ್ಗಪೂರ್ವಕವಾದ ತನು ಧಾತುವಿಗಾಗಲೀ, ನಞ್‌ಪೂರ್ವಕವಾದ ಪತಧಾತುವಿಗಾಗಲೀ ಯಕ್ ಪ್ರತ್ಯಯ ಬಂದು ನಿಪಾತಿತವಾಗಿದೆ. ಕುಲವನ್ನು ವಿಸ್ತಾರ ಮಾಡುವವನು, ಇವನಿಂದ ತಂದೆತಾಯಿಗಳು ನರಕದಲ್ಲಿ ಬೀಳುವುದಿಲ್ಲ ಎಂದರ್ಥ. ಉದಾಹರಣೆ-**'ಕುವೇರಪತ್ಯಮಾ ದುಹೇ' (ಋ. ಸಂ. ೬-೭-೩೫-೨)**

(೧೧) **ಯಹುಃ ||** ಪ್ರಾಪಣಾರ್ಥಕ ಯಾ ಧಾತು, ಸ್ಪರ್ಧಾರ್ಥಕ ಹ್ವೇಞ್‌ಧಾತು ಇವುಗಳಿಗೆ 'ಮೃಗಯ್ವಾದಯಶ್ಚ' (ಉ-೧-೩೬) ಸೂತ್ರದಿಂದ ಕುಪ್ರತ್ಯಯ ಬಂದು ನಿಪಾತಿತವಾಗಿದೆ. ಪುಣ್ಯವಶದಿಂದ ಹೊಂದಲ್ಪಟ್ಟವನು, ತನ್ನ ಹೆಸರಿನಿಂದ ತಂದೆ ತಾಯಿಗಳಿಂದ ಕರೆಯಲ್ಪಡುವವನು. ಉದಾಹರಣೆ—**'ಈಶಾನಃ ಸಹ ಸೋ ಯಹೋ' (ಋ. ಸಂ. ೧-೫-೨೭-೪)**

(೧೨) **ಸೂನುಃ**॥ ಷೂಞ್–ಪ್ರಾಣಿಪ್ರಸವೇ ಧಾತು. 'ಸುವಃ ಕಿತ್' (ಉ–೩–೩೪) ಸೂತ್ರದಿಂದ ನುಪ್ರತ್ಯಯ. ಕಿತ್ತ್ವಹೇಳಿರುವುದರಿಂದ ಗುಣ ಬರುವುದಿಲ್ಲ. ತಾಯಿಯಿಂದ ಪ್ರಸವಿಸಲ್ಪಡುವವನು. ಉದಾ:–**'ಅಗ್ನಿಂ ಸೂನುಂ ಸನುಶ್ರುತಂ ಸಹಸೋ ಜಾತವೇದಸಮ್' (ಋ. ಸಂ ೩-೧–೯-೪)** ॥

(೧೩) **ನಪಾತ್** ॥ ನಞ್‌ಪೂರ್ವಕವಾದ ಪತಧಾತುವಿಗೆ ಣಿಜಂತವೇಲೆ ಕ್ವಿಪ್. 'ಬಹುಲಮನ್ಯತ್ರಾಪಿ ಸಂಜ್ಞಾ–ಛಂದಸೋಃ' ವಾರ್ತಿಕದಿಂದ ಣಿಲೋಪ. ನ ಪಾತಯತಿ ಇತಿ ನಪಾತ್. 'ನಭ್ರಾನ್ನಪಾತ್–(ಪಾ–ಸೂ–೬–೩–೭೫) ಸೂತ್ರದಿಂದ ನಞಿಗೆ ಪ್ರಕೃತಿಭಾವಬರುವುದರಿಂದ ಲೋಪವಿಲ್ಲ. ತಂದೆತಾಯಿಗಳನ್ನು ನರಕಕ್ಕೆ ಕೆಡಹುವುದಿಲ್ಲ. ಅಥವಾ ಇವನಿಂದ ತಂದೆ ನರಕಕ್ಕೆ ಬೀಳುವುದಿಲ್ಲ. ಉದಾ:—**'ಏಹಿ ವಾಂ ವಿಮುಚೋ ನಪಾತ್' (ಋ. ಸಂ. ೪–೮–೨೧–೧)** ॥

(೧೪) **ಪ್ರಜಾ** ॥ ಪ್ರಉಪಸರ್ಗಪೂರ್ವಕವಾದ ಜನೀಧಾತುವಿಗೆ 'ಉಪಸರ್ಗೇ ಚಸಂಜ್ಞಾಯಾಮ್' (ಪಾ–ಸೂ–೩–೨–೯೯) ಸೂತ್ರದಿಂದ ಡಪ್ರತ್ಯಯ. ಟಿಲೋಪ. (ಅನ್) ಸ್ತ್ರೀತ್ವದಲ್ಲಿ ಟಾಪ್. ಬಹುವಚನಾಂತರೂಪ. **'ಪ್ರಜಾಂ ದೇವಿ ದಿದಿಡ್ಢಿನಃ' (ಋ.ಸಂ. ೨–೭–೧೫–೬।-೮–೧೦–೨)**॥

(೧೫) **ವೀಜವ್**॥ ವೀಜ–ಪ್ರಜನನ ಕಾಂತ್ಯಸನಖಾದನೇಷು. ಧಾತು. ಇದಕ್ಕೆ ಅಚ್‌ಪ್ರತ್ಯಯ. ಭೋಜರಾಜನು ವೀಧಾತುವಿಗೆ ಜಕ್‌ಪ್ರತ್ಯಯ ಹೇಳಿರುತ್ತಾನೆ. ವಬಗಳಿಗೆ ಭೇದವಿಲ್ಲದಿರುವುದರಿಂದ ಬೀಜಂ ಎಂದೂ ಆಗುತ್ತದೆ. ಹುಟ್ಟುವವನು, ಇವರಿಂದ ತಂದೆಯು ಋಣವಿಮೋಚನವನ್ನು ಹೊಂದುತ್ತಾನೆ ಎಂದರ್ಥ. ಮಾಧವರು ವೀಜ್‌ಧಾತುವಿಗೆ ಪ್ರೇರಣಾರ್ಥ ಹೇಳುತ್ತಾರೆ. ಕಾರ್ಯಕ್ಕೋಸ್ಕರ ತಂದೆ ಮುಂತಾದವರಿಂದ ಪ್ರೇರೇಪಿಸಲ್ಪಡುವವನು. ಬೀಜವು ಹೇಗೆ ಉತ್ತರೋತ್ತರಾಭಿವೃದ್ಧಿಗೋಸ್ಕರ ಇರುವುದೋ ಹಾಗೆ ಪುತ್ರನೂ ಪಿತೃಕುಲಾಭಿವೃದ್ಧಿಗೆ ಕಾರಣನಾಗುತ್ತಾನೆ. ಆದುದರಿಂದ ಪುತ್ರನು ಬೀಜ. ಉದಾಹರಣೆ—

**"ಯಸ್ಯಾಂ ಬೀಜಂ ಮನುಷ್ಯಾ ೩ ವಪನ್ತಿ" (ಋ. ಸಂ. ೮–೩–೨೭–೨)**

ಹೀಗೆ ಹದಿನೈದು ಪುತ್ರನಾಮಗಳು.

———

ಅಪತ್ಯಂ ಕಸ್ಮಾತ್ ಅಪತತಂ ಭವತಿ। ನಾನೇನ ಪತತೀತಿ ವಾ ॥

ಕರ್ಮನಾಮಾನಂತರ ಅಪತ್ಯನಾಮಗಳನ್ನು ವಿವರಿಸಲಾಗುವುದು. ಅಪತ್ಯವೆಂದರೇನು? **ಅಪತತಂ ಭವತಿ। ಪಿತುಃ ಸಕಾಶಾದಪೇತ್ಯ ಪೃಥುಗಿವ ತತಂ ಭವತಿ ।** ತಂದೆಯಿಂದ ಉತ್ಪನ್ನನಾಗಿ ಅವನ ವಂಶವನ್ನು ನಿಲ್ಲದಂತೆ ವಿಸ್ತರಿಸುವುದರಿಂದ ಮುಂದುವರಿಸುವುದರಿಂದ ಪುತ್ರನಿಗೆ ಅಪತ್ಯವೆಂದು ಹೆಸರು. ಅಥವಾ ತಂದೆಯು ನರಕದಲ್ಲಿ ಬೀಳದಂತೆ ರಕ್ಷಿಸುವನು— ಪುನ್ನಾಮನರಕಾತ್ ತ್ರಾಯತ ಇತಿ ಪುತ್ರಃ

ತದ್ಯಥಾ ಜನಯಿತುಃ ಪ್ರಜೈವಮರ್ಥೀಯೇ ಋಚಾ ಉದಾ-
ಹರಿಷ್ಯಾಮಃ

ಹೇಗೆಂದರೆ ತಂದೆಯಿಂದ ಉತ್ಪನ್ನನಾದ ಪ್ರಜೆಯು (ಸಂತತಿಯು) ತಂದೆಗೆ ಸಂಬಂಧಪಟ್ಟಿರುವುದೆಂಬುದನ್ನು ಮುಂದಿನ ಋಕ್ಕುಗಳಿಂದ ವಿಶದಪಡಿಸಲಾಗುವುದು.

**ಇತಿ ತೃತೀಯಾಧ್ಯಾಯೇ ಪ್ರಥಮಃ ಖಂಡಃ**

ಇಲ್ಲಿಗೆ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವು

———

ಅಥ ದ್ವಿತೀಯಃ ಖಂಡಃ

**ಎರಡನೆಯ ಖಂಡವು.**

ಪರಿಷದ್ಯಂ ಹ್ಯರಣಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ। ನ ಶೇಷೋ ಅಗ್ನೇ ಅನ್ಯಜಾತಮಸ್ತ್ಯಚೇತಾನಸ್ಯ ಮಾ ಪಥೋ ವಿ ದುಕ್ಷಃ ॥ (ಋ-ಸಂ-೭-೪-೭) ॥ ಪರಿಹರ್ತವ್ಯಂ ಹಿ ನೋಪಸರ್ತವ್ಯ-ಮರಣಸ್ಯ ರೇಕ್ಣೋಽರಣೋಽಪಾರ್ಣೋ ಭವತಿ ರೇಕ್ಣ ಇತಿ ಧನನಾಮ ರಿಚ್ಯತೇ ಪ್ರಯತೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ। ಪಿತ್ರ್ಯಸ್ಯೇವ ಧನಸ್ಯ। ನ ಶೇಷೋ ಅಗ್ನೇ ಅನ್ಯಜಾತಮಸ್ತಿ। ಶೇಷ ಇತ್ಯಪತ್ಯನಾಮ ಶಿಷ್ಯತೇ ಪ್ರಯತೋಽಚೇತಯಮಾನಸ್ಯ ತತ್ಪ್ರಮತ್ತಸ್ಯ ಭವತಿ ಮಾ ನಃ ಪಥೋ ವಿದೂದುಷ ಇತಿ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೨ ॥



**ಪರಿಷದ್ಯಂ ಹ್ಯರಣಸ್ಯ—**ಎಂಬ ಋಕ್ಕಿನ ಅರ್ಥವು—ಋಣರಹಿತವಾದ ಸುಸ್ಥಿತಿಗೆ ಧನವು ಪೂರ್ಣವೂ ಶಕ್ತವೂ ಆದ ಸಾಧನವಾಗಿರುತ್ತದೆಯಲ್ಲವೇ? ಆದುದರಿಂದಲೇ ನಾವು ನಾಶರಹಿತವಾದ ಧನಕ್ಕೆ ಒಡೆಯರಾಗಿರುವಂತಾಗಲಿ. ಎಲೈ ಅಗ್ನಿಯೇ. ಇನ್ನೊಬ್ಬರ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನು ನಿಜವಾದ ಪುತ್ರಾಭಿಮಾನವುಳ್ಳವನಾಗಿರುವುದಿಲ್ಲ. ಪೂರ್ಣ ಪ್ರಜ್ಞನಲ್ಲದ ನನ್ನ ಪುತ್ರೋತ್ಪಾದನಸಾಧಕವಾದ ಮಾರ್ಗಗಳನ್ನು ತಡೆಯಬೇಡ.

ಪರಿಹರ್ತವ್ಯಂ ಹಿ ನೋಪಸರ್ತವ್ಯಂ। ಅರಣಸ್ಯ ರೇಕ್ಣ ಅರಣೋಽ ಪಾರ್ಣೋ ಭವತಿ। ರೇಕ್ಣ ಇತಿ ಧನನಾಮ। ರಿಚ್ಯತೇ ಪ್ರಯತಃ ಸ್ಯಾಮ। ಪಿತ್ರ್ಯಸ್ಯೇವ ಧನಸ್ಯ। ನ ಶೇಷೋ ಅಗ್ನೇ ಅನ್ಯಜಾತಮಸ್ತಿ ಶೇಷ ಇತ್ಯಪತ್ಯನಾಮ। ಶಿಷ್ಯತೇ ಪ್ರಯತಃ। ಅಚೇತಯಮಾನಸ್ಯ ತತ್ಪ್ರಮತ್ತಸ್ಯ ಭವತಿ। ಮಾ ನಃ ಪಥೋ ವಿದೂದುಷ ಇತಿ।

ವಸಿಷ್ಠಋಷಿ ಮತ್ತು ಅಗ್ನಿ ಇವರುಗಳ ಸಂವಾದರೂಪವಾದ ಈ ಋಕ್ಕಿನಲ್ಲಿ ವಸಿಷ್ಠಋಷಿಯ ಪುತ್ರರು ಕಾರಣಾಂತರದಿಂದ ಹತರಾಗಲು ಪುನಃ ತನಗೆ ಪುತ್ರನಾಗಬೇಕೆಂಬ ಇಚ್ಛೆಯಿಂದ ಅಗ್ನಿಯನ್ನು ಪ್ರಾರ್ಥಿಸುವಾಗ ತನಗೆ **ಕ್ರೀತಕ ಕೃತ್ರಿಮದ-ತ್ರಕಾದೀನಾಂ ಪುತ್ರಾಣಾಮನ್ಯತಮಂ ಕುರುಷ್ವ ಪುತ್ರಮಿತಿ** । ಔರಸಪುತ್ರನೇ ಆಗಬೇಕೆಂದು ಬಯಸುತ್ತಾನೆ. ಪುತ್ರರಲ್ಲಿ ಅನೇಕವಿಧವಿರುವುದು. ಮಕ್ಕಳಿಲ್ಲದಿರುವವರು ಮತ್ತೊಬ್ಬರ ಮಕ್ಕಳನ್ನು ಕ್ರಯಕ್ಕೆ ತೆಗೆದುಕೊಂಡು ಅವುಗಳನ್ನು ಪೋಷಿಸಿ ತನ್ನ ಮಕ್ಕಳಂತೆಯೇ ಕಾಪಾಡಿ ಅವರನ್ನು ಪುತ್ರರಂತೆ ಭಾವಿಸುವುದು ಒಂದುವಿಧವು. ಈ ವಿಧವಾದ ಪುತ್ರನಿಗೆ ಕ್ರೀತಕ (ಕ್ರಯಕ್ಕೆ ಪಡೆದ) ಪುತ್ರನೆಂದು ಹೆಸರು. ರೋಗಾದ್ಯನೇಕಕಾರಣಗಳಿಂದ ತನ್ನ ಪತ್ನಿಯಲ್ಲಿ ಪುತ್ರೋತ್ಪಾದನೆ ಮಾಡಲು ಸಾಮರ್ಥ್ಯವಿಲ್ಲದ ಪುರುಷನು ತನ್ನ ಪತ್ನಿಯಲ್ಲಿ ಮತ್ತೊಬ್ಬ ಪುರುಷನಿಂದ(ತನ್ನ ಬಂಧು ಅಥವಾ ಬೇರೆ ಪುರುಷನಿಂದ) ಪುತ್ರೋತ್ಪಾದನೆಯಾಗುವಂತೆ ಮಾಡಿ ಆ ಪುತ್ರನನ್ನು ತನ್ನ ಪುತ್ರನೆಂದೇ ಭಾವಿಸುವುದು. ಈ ವಿಧವಾದ ಪುತ್ರನಿಗೆ ಕೃತ್ರಿಮ ಪುತ್ರನೆಂದು ಹೆಸರು. ತನಗೆ ಪುತ್ರನಿಲ್ಲದಿರುವಾಗ ಯೋಗ್ಯರಾದ ಮತ್ತೊಬ್ಬರ ಶಿಶುವನ್ನು ದತ್ತುಸ್ವೀಕಾರವಾಗಿ ಪರಿಗ್ರಹಿಸಿ ಎಂದರೆ ಶಾಸ್ತ್ರೋಕ್ತ ರೀತಿಯಿಂದ ಪರಿಗ್ರಹಿಸಿ ತನಗೆ ಉತ್ತರಾಧಿಕಾರಿಯಂತೆಯೂ ಪರಿಗಣಿಸುವುದು. ಈ ವಿಧವಾದ ಪುತ್ರನಿಗೆ ದತ್ತ-ಪುತ್ರನೆಂದು ಹೆಸರು ಈ ಮೂರು ವಿಧವೂ ಸಾಮಾನ್ಯವಾಗಿ ಆಚರಣೆಯಲ್ಲಿರುವ ವಿಧಾನಗಳು. ಆದರೂ ಇವುಗಳೊಂದನ್ನೂ ಇಷ್ಟಪಡದೆ ವಸಿಷ್ಠಋಷಿಯು ತನ್ನ ಪತ್ನಿಯಲ್ಲಿ ತನ್ನ ಶರೀರ ಸಂಪರ್ಕದಿಂದಲೇ ಉತ್ಪನ್ನನಾಗುವ ಔರಸಪುತ್ರನೇ ಬೇಕೆಂದು ಅಪೇಕ್ಷಿಸಿ ಅಗ್ನಿಯನ್ನು ಪ್ರಾರ್ಥಿಸುವನು. ಮೇಲೆ ಹೇಳಿದ ಅನೇಕವಿಧ ಪುತ್ರರಲ್ಲಿ ಔರಸಪುತ್ರನೇ ತನ್ನ ಶರೀರದಿಂದ ಉತ್ಪನ್ನನಾಗಿರುವ ಕಾರಣ ಶ್ರೇಷ್ಠನೆಂಬ ವಿಚಾರದಲ್ಲಿ ಯಾವ ಅನುಮಾನವೂ ಭಿನ್ನಾಭಿಪ್ರಾಯವೂ ಇರುವುದಿಲ್ಲ. ಇದನ್ನು ಎಲ್ಲರೂ ಒಪ್ಪುವರು. ಮತ್ತೂ—

**ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೇ ।**
**ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಂ ॥**

(ತೈ. ಏಕಾಗ್ನಿ ಕಾಂಡ. ೨-೧೧)

ಎಂಬ ಶ್ರುತಿವಾಕ್ಯವೂ ಇದನ್ನು ಸಮರ್ಥಿಸುವುದು. ಈ ಮಂತ್ರದಲ್ಲಿ ತಂದೆಯು ಆಗತಾನೇ ಹುಟ್ಟಿರುವ ತನ್ನ ಪುತ್ರನನ್ನು ಉದ್ದೇಶಿಸಿ (ಜಾತಕರ್ಮದಲ್ಲಿ ಪುತ್ರನ ಶಿರಸ್ಸನ್ನು ಆಘ್ರಾಣಿಸುವಾಗ) ಹೇಳುವ ವಾಕ್ಯವಿದು. ಎಲೈ ಪುತ್ರನೇ, ನೀನು ನನ್ನ ಸ್ವಂತ ಅಂಗದಿಂದಲೂ ಹೃದಯದಿಂದಲೂ ಉತ್ಪನ್ನನಾಗಿರುವೆ. ಆದ್ದರಿಂದ ನಾನೇ ಪುತ್ರರೂಪದಿಂದ ನಿನ್ನಲ್ಲಿರುವೆನು. ವಸ್ತುತಃ ನನಗೂ ನಿನಗೂ ವ್ಯತ್ಯಾಸವೇನೂ ಇಲ್ಲ. ನೀನು ನೂರು ವರ್ಷಗಳವರೆಗೆ ಆಯುಸ್ಸನ್ನು ಪಡೆದು ಜೀವಿಸಿರು ಎಂದು ಈ ಆಶೀರ್ಮಂತ್ರದ ಅಭಿಪ್ರಾಯವು. ಆದ್ದರಿಂದ ಪುತ್ರರಲ್ಲೆಲ್ಲಾ ಔರಸಪುತ್ರನೇ ಶ್ರೇಷ್ಠನೆಂದೂ ಅಂತಹ ಔರಸಪುತ್ರನನ್ನೇ ತನಗೆ ಅನುಗ್ರಹಿಸಬೇಕೆಂದು ವಸಿಷ್ಠಋಷಿಯು ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಅಗ್ನಿಯನ್ನು ಪ್ರಾರ್ಥಿಸಿದ್ದಾನೆ.

ಪ್ರಕೃತ ಋಕ್ಕಿನಲ್ಲಿ ಅಪತ್ಯಶಬ್ದದ ಪ್ರಯೋಗವಿಲ್ಲ. ಶೇಷಶಬ್ದಪ್ರಯೋಗ ಮಾತ್ರವಿದೆ. ಆದರೆ ಅಪತ್ಯ ಮತ್ತು ಶೇಷ ಶಬ್ದಗಳಿಗೆ ಒಂದೇ ಅರ್ಥವಿರುವುದೆಂದು ಯಾಸ್ಕರು ಈ ಶಬ್ದಗಳ ನಿರ್ವಚನವನ್ನು ಹೇಳಿದಾರೆ. ಅಪತ್ಯಶಬ್ದಕ್ಕೆ ವಿಸ್ತಾರಮಾಡುವುದು ಎಂದರೆ ಕುಲವನ್ನು ವಿಸ್ತರಿಸುವುದು, ಅಭಿವೃದ್ಧಿಮಾಡುವುದು ಎಂಬರ್ಥವಿರುವುದರಿಂದ ಅಪತ್ಯವೆಂದರೆ ಪುತ್ರ ಅಥವಾ ಸಂತತಿ ಎಂದರ್ಥವು. ಪುತ್ರನು ತಂದೆಯ ವಂಶವನ್ನು ವಿಸ್ತಾರಮಾಡುವನು ಎಂದರೆ ಬೆಳೆಯುವಂತೆ ಮಾಡುವನು. ಆದ್ದರಿಂದ ಅಪತ್ಯವೆಂದರೆ ಪುತ್ರಸಂತತಿಯು ; **ನ ಅನೇನ ಪತತೀತಿ ವಾ** ಈ ಪುತ್ರನಿಂದ ತಂದೆಯು ನರಕಾದಿಗಳಲ್ಲಿ ಬೀಳುವುದಿಲ್ಲವಾದ್ದ

ರಿಂದ ಪುತ್ರನಿಗೆ ಅಪತ್ಯವೆಂದೂ ಹೆಸರು. ಪುತ್ರನು ಮಾಡುವ ಸತ್ಕರ್ಮಾಚರಣೆಯಿಂದ ತಂದೆಯಾದವನು ಮೃತನಾದ ಮೇಲೆ ನರಕದಲ್ಲಿ ಬೀಳದೆ ಸ್ವರ್ಗಲೋಕವನ್ನು ಪಡೆಯುವನು ಎಂದು ಪ್ರತೀತಿ ಇದೆ. ಆದ್ದರಿಂದ ತಂದೆಯನ್ನು ನರಕದಲ್ಲಿ ಬೀಳದಂತೆ ಮಾಡುವವನಾದ್ದರಿಂದ ಪುತ್ರನಿಗೆ ಅಪತ್ಯವೆಂದು ಹೆಸರು. ಶೇಷಶಬ್ದಕ್ಕೂ ಅಪತ್ಯ ಅಥವಾ ಪುತ್ರನೆಂದೇ ಅರ್ಥವು. ಹೇಗೆಂದರೆ ಶೇಷ ಎಂದರೆ ಉಳಿದಿರುವುದು ಎಂದರ್ಥ, ಇಲ್ಲಿ ಸಂಸಾರದಲ್ಲಿರುವ ತಂದೆಮಕ್ಕಳಲ್ಲಿ ತಂದೆಯ ವಯಸ್ಸು ಹೆಚ್ಚಾಗಿರುವುದರಿಂದ ಅವನು ಮೊದಲು ಮೃತನಾಗುವನು. ಆರೀತಿ ಮೃತನಾದ ಮೇಲೆ ಎಂದರೆ ಪರಲೋಕವನ್ನೈದಿದ ಮೇಲೆ ಈ ಲೋಕದಲ್ಲಿ ಉಳಿಯುವವನು ಪುತ್ರನೇ. ಆದ್ದರಿಂದ ಪುತ್ರನನ್ನು ಶೇಷ ಎಂದೂ ಹೇಳುವರು. ಪ್ರಕೃತ ಋಕ್ಕಿನಲ್ಲಿ ಶೇಷಶಬ್ದಕ್ಕೆ ಇದೇ ಅರ್ಥವಿರುವುದು

ಪರಕೀಯರ ಧನವನ್ನು ವರ್ಜಿಸಬೇಕು ಎಂದರೆ ಸ್ವೀಕರಿಸಬಾರದು. ಅದರಲ್ಲಿಯೂ ತನಗೆ ಸಂಬಂಧವಿಲ್ಲದ ಅಥವಾ ದೂರಸಂಬಂಧಿಯಾದವನ ಧನವನ್ನು ಮುಟ್ಟಲೇ ಬಾರದು. **ರೇಕ್ಣ** ಎಂದರೆ ಧನವು. ಈ ಶಬ್ದವು ಬಿಡು, ಬಿಟ್ಟುಹೋಗು ಎಂಬರ್ಥವುಳ್ಳ ರಿಚ್‌ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ ಒಬ್ಬ ಪುರುಷನು ತಾನು ಮೃತನಾಗುವಾಗ ತನ್ನಲ್ಲಿರುವ ಧನವನ್ನು (ಪುತ್ರಾದಿಗಳಿಗಾಗಿ) ಬಿಟ್ಟುಹೋಗುವನಷ್ಟೆ. ಆರೀತಿ ಬಿಟ್ಟುಹೋಗುವ ಧನಕ್ಕೆ ರೇಕ್ಣಃ ಎಂದು ಹೆಸರು. ಇಂತಹ ಧನವು ನಮಗೆ ಬೇಡ, ಎಂದರೆ ನ್ಯಾಯವಾಗಿ ನಮಗೆ ಸೇರದಿರುವ, ಶರೀರ ಸಂಬಂಧವಾಗಿ ಹಕ್ಕುಬಾಧ್ಯತೆ ಇಲ್ಲದಿರುವ ಇನ್ನೊಬ್ಬರ ಧನವು ನಮಗೆ ಬೇಡ. ನಮಗೆ ಶಾಶ್ವತವಾದುದೂ ಪಿತ್ರಾರ್ಜಿತವಾದುದೂ ಆದ ಧನವೇ ಬೇಕು. ಬೇರೊಬ್ಬ ಪುರುಷನಿಂದ ಉತ್ಪನ್ನನಾದ ಪುತ್ರನು (ನಮಗೆ) ಪುತ್ರನೇ ಅಲ್ಲ ಎಂದರೆ ದತ್ತಪುತ್ರ ಮೊದಲಾದ ಪುತ್ರರಲ್ಲಿ ಯಾವವಿಧವಾದ ಪುತ್ರನೂ ಬೇಡ. ಔರಸಪುತ್ರನೇ ಬೇಕು. ಶೇಷ ಎಂಬ ಶಬ್ದವು ಪುತ್ರನೆಂಬ ಅರ್ಥವನ್ನು ಸೂಚಿಸುವುದು. ತಂದೆಯ ಮರಣಾನಂತರ ಉಳಿಯುವ ಸ್ವಂತ ಪುತ್ರನಿಗೆ ಶೇಷನೆಂದು ಹೆಸರು. ಇತರ ವಿಧವಾದ ಪುತ್ರನನ್ನು ಬುದ್ಧಿಯಿಲ್ಲದ ಅವಿವೇಕಿಗಳು ಮಾತ್ರ ಅಪೇಕ್ಷಿಸುವರು. ನಮಗೆ ನಮ್ಮ ಸ್ವಶರೀರದಿಂದ ಉತ್ಪನ್ನವಾಗುವ ಔರಸಪುತ್ರನು ಮಾತ್ರ ಬೇಕು. ಆದ್ದರಿಂದ ಎಲೈ ಅಗ್ನಿಯೇ, ನಾವು ಕೆಟ್ಟ ಮಾರ್ಗವನ್ನು ಎಂದರೆ ನಮ್ಮ ಪಿತೃಪಿತಾಮಹ ಮೊದಲಾದ ಹಿರಿಯರು ಅನುಸರಿಸುತ್ತಿದ್ದ ಮಾರ್ಗವನ್ನು ಬಿಟ್ಟು ಬೇರೆ ಕೆಟ್ಟ ಮಾರ್ಗವನ್ನು ಅನುಸರಿಸದಂತಾಗಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು. ಈ ವಿಷಯದಲ್ಲಿ ಇದರ ಮುಂದಿನ ಋಕ್ಕಿನ ನಿರ್ವಚನವನ್ನು ಹೇಳಲಾಗುವುದು.

**ಇತಿ ದ್ವಿತೀಯಃ ಖಂಡಃ**

ಇಲ್ಲಿಗೆ ಎರಡನೆಯ ಖಂಡವು ಸಮಾಪ್ತವು

---

## ಅಥ ತೃತೀಯಃ ಖಂಡಃ

### ನೂರನೆಯ ಖಂಡವು

ನ ಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ
ಮಂತವಾ ಉ । ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀ-

ಷಾಳೀತು ನವ್ಯಃ ॥ (ಋ. ಸಂ. ೭–೪–೮) ನ ಹಿ ಗ್ರಹೀತವ್ಯೋಽರಣಃ ಸುಸುಖತಮೋಽಪ್ಯನ್ಯೋದರ್ಯೋ ಮನಸಾಪಿ ನ ಮಂತವ್ಯೋ ಮಮಾಯಂ ಪುತ್ರ ಇತ್ಯಥ ಸ ಓಕಃ ಪುನರೇವ ತದೇತಿ ಯತ ಆಗತೋ ಭವತ್ಯೋಕ ಇತಿ ನಿವಾಸನಾಮೋಚ್ಯತ ಏತು ನೋ ವಾಜೀ ವೇಜನವಾನಭಿಷಹಮಾಣಃ ಸಪತ್ನಾನ್ನವಜಾತಃ ಸ ಏವ ಪುತ್ರ ಇತ್ಯಥೈತಾಂ ದುಹಿತೃದಾಯಾದ್ಯ ಉದಾಹರಂತಿ ಪುತ್ರದಾಯಾದ್ಯ ಇತ್ಯೇಕೇ ॥೩॥

———

**ನ ಹಿ ಗ್ರಭಾಯಾರಣಃ** ಎಂಬ ಋಕ್ಕಿನ ಅರ್ಥವು—ಪಿತೃಋಣವನ್ನು ಪರಿಹರಿಸಲಸಮರ್ಥನೂ ಹರ್ಷಸಾಧಕನಾಗದಿರುವವನೂ ಬೇರೊಬ್ಬರ ಉದರದಲ್ಲಿ ಉತ್ಪನ್ನನೂ ಆದವನು ಉತ್ತಮನಾದ ಸ್ಥಿತಿಯಲ್ಲಿದ್ದರೂ ಪುತ್ರರೂಪದಲ್ಲಿ ಸ್ವೀಕರಿಸಲು ಮನಸ್ಸಿನಿಂದಲೂ ಯೋಚನೆಮಾಡಲು ಕೂಡ ಅರ್ಹನಾಗಿರುವುದಿಲ್ಲ. ಅದಲ್ಲದೆ ಅನ್ಯಪುತ್ರನಾದ ಅವನು ತಾನು ಹುಟ್ಟಿದ ಮನೆಗೇ ಹಿಂತಿರುಗಿ ಹೋಗುತ್ತಾನೆ. ಆದುದರಿಂದ ಅನ್ನವಂತನೂ ಶತ್ರುಗಳನ್ನು ಎದುರಿಸಿ ಸೋಲಿಸುವವನೂ ನೂತನನೂ ಆದ ಪುತ್ರನು ನಮಗೆ ಪ್ರೀತಿಕಾರಕನಾಗಿ ನಮಗೂ ಉತ್ಪನ್ನನಾಗಲಿ.

ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ಸ್ಪಷ್ಟವಾಗಿ ಸಮರ್ಥನೆ ಮಾಡುವುದಕ್ಕಾಗಿ ಋಷಿಯು ತನಗೆ ಯಾವ ವಿಧವಾದ ಪುತ್ರನು ಬೇಕೆಂಬ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ಋಕ್ಕಿನಲ್ಲಿ ವಿಶದವಾಗಿ ವಿವರಿಸಿದ್ದಾನೆ. ಹಿಂದಿನ ಋಕ್ಕಿನಲ್ಲಿ ಹೇಳಿರುವ ನಾನಾವಿಧ ಪುತ್ರರ ವಿಷಯದಲ್ಲಿ ಔರಸಪುತ್ರನೇ ಶ್ರೇಷ್ಠನೆಂಬ ವಿಷಯವನ್ನು ಸಮರ್ಥಿಸುವುದಕ್ಕಾಗಿ ಈ ಋಕ್ಕಿಗೂ ನಿರ್ವಚನವನ್ನು ಹೇಳಲಾಗಿದೆ—

ಇನ್ನೊಬ್ಬರ ಪುತ್ರನು ಎಷ್ಟೇ ಚೆನ್ನಾಗಿರಲಿ ಅಥವಾ ಸಂತೋಷಪಡಿಸುವವನಾಗಲಿ ಅವನನ್ನು ಪುತ್ರನನ್ನಾಗಿ (ದತ್ತವಾಗಿ) ಎಂದಿಗೂ ಸ್ವೀಕರಿಸಲೇಬಾರದು. ಏಕೆಂದರೆ, ಆ ಪುತ್ರನು ವೀರ್ಯದಿಂದ ಅನ್ಯಸ್ತ್ರೀಯ ಗರ್ಭದಲ್ಲಿ ಉತ್ಪನ್ನನಾದವನು. ಇಂತಹ ಅನ್ಯಪುರುಷನ ಪುತ್ರನನ್ನು, ಇವನು ನನ್ನ ಪುತ್ರನು ಎಂದು ಮನಸ್ಸಿನಲ್ಲಿಯೂ ಚಿಂತಿಸಬಾರದು. ಏಕೆಂದರೆ, ದತ್ತಪುತ್ರನಿಗೆ ಪಿತೃಭಕ್ತಿ ಇರುವುದುಂಟೇ ಎಂಬ ನಾಣ್ಣುಡಿಯಂತೆ ಈ ಪುತ್ರನಿಗೆ ತನ್ನನ್ನು ಸ್ವೀಕರಿಸಿದ ಪಿತೃವಿನಲ್ಲಿ ಯಾವ ವಿಧವಾದ ಪ್ರೀತಿಯಾಗಲಿ, ಅಭಿಮಾನವಾಗಲಿ ಇರುವುದಿಲ್ಲ. ತನಗೆ ಸಿಕ್ಕುವ ಆಸ್ತಿಯ ವಿಷಯದಲ್ಲಿ ಮಾತ್ರ ಆಸಕ್ತಿ ಇರುವುದು. ಇದಲ್ಲದೆ ಇವನು ಎಂದಿದ್ದರೂ ತಾನು ಹುಟ್ಟಿದ ಮನೆಗೇ ಹಿಂದಕ್ಕೆ ಹೋಗುವವನು ಎಂದರೆ ತನ್ನ ಸ್ವಂತ ಪಿತೃವಿನಲ್ಲಿಯೇ ಅಭಿಮಾನವಿರುವುದು. ದತ್ತಪಿತೃವಿನಲ್ಲಿ ಯಾವ ವಿಧವಾದ ಪ್ರೀತ್ಯಭಿಮಾನಗಳೂ ಇರುವುದಿಲ್ಲ. **ಓಕಃ** ಎಂಬ ಶಬ್ದಕ್ಕೆ ವಾಸಮಾಡುವ ಮನೆ ಎಂದರ್ಥವು. ಆದ್ದರಿಂದ ನಮಗೆ ಈ ವಿಧವಾದ ಎಂದರೆ ಅನ್ಯಕುಲಜನಾದ ಪುತ್ರನು ಬೇಡ. ನಮ್ಮ ಸ್ವಂತ ಪತ್ನಿಯೇ ಸ್ವಶರೀರ ಸಂಪರ್ಕದಿಂದ, ಶತ್ರುಗಳಿಗೆ ಭಯವನ್ನುಂಟುಮಾಡುವವನೂ ಪರಾಕ್ರಮಶಾಲಿಯೂ ಆದ ಪುತ್ರನು ಹೊಸದಾಗಿ ಹುಟ್ಟಲಿ ಎಂದು ವಸಿಷ್ಠಋಷಿಯು ಅಗ್ನಿಯನ್ನು ಪ್ರಾರ್ಥಿಸಿರುವದು.

ಕೆಲವರು ಈ ರೀತಿ ಹೇಳುವರು–ಪುರುಷನಿಗೆ ತನ್ನ ಪತ್ನಿಯಲ್ಲಿ ಉಂಟಾಗುವ ಸಂತತಿ ಎಂದರೆ ಪುತ್ರ ಅಥವಾ ಪುತ್ರಿಯು. ಪುತ್ರನಿಲ್ಲದೆ ಪುತ್ರಿಮಾತ್ರ ಇದ್ದರೆ ಅದನ್ನೇ ದಾಯಾದ್ಯ ಎಂದರೆ ಪುತ್ರನೆಂದು ಭಾವಿಸಬೇಕು. ಪುತ್ರನಾಗಲಿ,

ಪುತ್ರಿಯಾಗಲಿ, ಇಬ್ಬರೂ ದಾಯಕ್ಕೆ ಎಂದರೆ ಪಿತೃವಿನ ಆಸ್ತಿಗೆ ಸಮಾನ ಹಕ್ಕುದಾರರು. ಪುತ್ರನಂತೆ ಪುತ್ರಿಯೂ ತಂದೆ ತಾಯಿಗಳ ಪ್ರೀತ್ಯಾದರಗಳಿಗೆ ಪಾತ್ರಳು ಎಂದು. ಮತ್ತೆ ಕೆಲವರು—ಪುತ್ರನು ನೆರವೇರಿಸುವ ಸಂಸ್ಕಾರಾದಿಗಳನ್ನು ಪುತ್ರಿಯು ಮಾಡಲಾರಳು. ಆದ್ದರಿಂದ ಪುತ್ರನೇ ದಾಯಾದ್ಯನು ಎಂದು ಹೇಳುವರು. ಈ ವಿಷಯದಲ್ಲಿ **ಶಾಸದ್ವಹ್ನಿಃ** ಎಂಬ ಋಕ್ಕಿನ ಉದಾಹರಣೆಯನ್ನು ಕೊಟ್ಟಿರುವರು.

**ಇತಿ ತೃತೀಯಃ ಖಂಡಃ**

ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು

---

## ಅಥ ಚತುರ್ಥಃ ಖಂಡಃ

### ನಾಲ್ಕನೆಯ ಖಂಡವು

ಶಾಸದ್ವಹ್ನಿರ್ದುಹಿತುರ್ನಪ್ತ್ಯಂ ಗಾದ್ವಿದ್ವಾ ಋತಸ್ಯ ದೀಧಿತಿಂ ಸಪರ್ಯನ್। ಪಿತಾ ಯತ್ರ ದುಹಿತುಃ ಸೇಕಮೃಜನ್ತ್ಸಂಶಗ್ಮ್ಯೇನ ಮನಸಾ ದಧನ್ವೇ (ಋ. ಸಂ. ೩–೩೧–೧)॥ ಪ್ರಶಾಸ್ತಿ ವೋಢಾಂ ಸಂತಾನಕರ್ಮಣೇ ದುಹಿತುಃ ಪುತ್ರಭಾವಂ ದುಹಿತಾ ದುರ್ಹಿತಾ ದೂರೇ ಹಿತಾ ದೋಗ್ಧೇರ್ವಾ ನಪ್ತಾರಮುಪಾಗಮದ್ದೌಹಿತ್ರಂ ಪೌತ್ರಮಿತಿ ವಿದ್ವಾನ್ ಪ್ರಜನನಯಜ್ಞಸ್ಯ ರೇತಸೋ ವಾಂಗಾದಂಗಾತ್ಸಂಭೂತಸ್ಯ ಹೃದಯಾದಧಿಜಾತಸ್ಯ ಮಾತರಿ ಪ್ರತ್ಯೃತಸ್ಯ ವಿಧಾನಂ ಪೂಜಯನ್ನ-ವಿಶೇಷಣ ಮಿಥುನಾಃ ಪುತ್ರಾ ದಾಯಾದಾ ಇತಿ ತದೇತದೃಕ್‌ಶ್ಲೋಕಾ-ಭ್ಯಾಮಭ್ಯುಕ್ತಂ। ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೇ ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ ಶತಮಿತ್ಯವಿಶೇಷೇಣ ಪುತ್ರಾಣಾಂ ದಾಯೋ ಭವತಿ ಧರ್ಮತಃ। ಮಿಥುನಾನಾಂ ವಿಸರ್ಗಾದೌ ಮನುಃ ಸ್ವಾಯಂಭುವೋಽಬ್ರವೀತ್। ನ ದುಹಿತರ ಇತ್ಯೇಕೇ ತಸ್ಮಾ-ತ್ಪುಮಾನ್ ದಾಯಾದೋಽದಾಯಾದಾ ಸ್ತ್ರೀತಿ ವಿಜ್ಞಾಯತೇ ತಸ್ಮಾ-ತ್ಸ್ತ್ರಿಯಂ ಜಾತಾಂ ಪರಾಸ್ಯಂತಿ ನ ಪುಮಾಂಸಮಿತಿ ಚ ಸ್ತ್ರೀಣಾಂ ದಾನವಿಕ್ರಯಾತಿಸರ್ಗಾ ವಿದ್ಯಂತೇ ನ ಪುಂಸಃ ಪುಂಸೋಽಪೀತ್ಯೇಕೇ

ಶೌನಃಶೇಪೇ ದರ್ಶನಾತ್ । ಅಭ್ರಾತೃಮತೀವಾದ ಇತ್ಯಪರಂ ।
ಅಮೂರ್ಯಾ ಯಂತಿ ಜಾಮಯಃ ಸರ್ವಾ ಲೋಹಿತವಾಸಸಃ ।
ಅಭ್ರಾತರ ಇವ ಯೋಷಾಸ್ತಿಷ್ಠಂತಿ ಹತವರ್ತ್ಮನಃ ॥ ಅಭ್ರಾತೃಕಾ
ಇವ ಯೋಷಾಸ್ತಿಷ್ಠಂತಿ ಸಂತಾನಕರ್ಮಣೇ ಪಿಂಡದಾನಾಯ ಹತ-
ವರ್ತ್ಮಾನ ಇತ್ಯಭ್ರಾತೃಕಾಯ ಅನಿರ್ವಾಹ ಔಪಮಿಕಸ್ತಸ್ಯೋತ್ತರಾ
ಭೂಯಸೇ ನಿರ್ವಚನಾಯ ॥೪॥

---

**ಶಾಸದ್ವಹ್ನಿರ್ದುಹಿತುಃ** ಎಂಬ ಋಕ್ಕಿನ ಅರ್ಥವು—ಪುತ್ರಿಯನ್ನು ಜಾಮಾತೃವಿಗೆ (ಅಳಿಯನಿಗೆ) ವಹಿಸಿಕೊಡತಕ್ಕ ಪಿತೃವು ಸ್ವಪುತ್ರಿಯ ಮಗನೇ ತನಗೂ ಪುತ್ರನೇ (ಪೌತ್ರನೇ) ಆಗುವವನೆಂಬ ಆದೇಶವನ್ನು ಕೊಡುತ್ತಲೂ, ಅದೇ ಭಾವನೆಯಿಂದ ಸ್ವಪುತ್ರಿಯಲ್ಲಿ ಪುತ್ರೋತ್ಪಾದಕನಾದ ಜಾಮಾತೃವನ್ನು ಅಲಂಕಾರಾದ್ಯಾದರಗಳಿಂದ ಸತ್ಕರಿಸುತ್ತಲೂ (ಅವನಿಗೆ ತನ್ನ ಪುತ್ರಿಯನ್ನು ಕೊಟ್ಟು) ತನ್ನ ನಪ್ತೃವಿಗೆ (ಮೊಮ್ಮಗನಿಗೆ) ಪಿತೃರೂಪದಲ್ಲಿರುತ್ತಾನೆ. ಅವನ ಜಾಮಾತೃವಾದರೋ ಅವಳಲ್ಲಿ ರೇತಸ್ಸೇಚನವನ್ನುಂಟುಮಾಡುತ್ತಾ ಸ್ವಸುಖದ ಅಭಿಲಾಷೆಯಿಂದ ಅವಳೊಂದಿಗೆ ಸೇರಿಕೊಳ್ಳುತ್ತಾನೆ.

ಅಥೈನಾಂ ದುಹಿತೃದಾಯಾದ್ಯ ಉದಾಹರಂತಿ । ಪುತ್ರದಾಯಾದ್ಯ
ಇತ್ಯೇಕೇ ॥

ಇಲ್ಲಿ ದಾಯಾದ ಶಬ್ದಕ್ಕೆ ಪಿತೃವಿನಿಂದ ಆರ್ಜಿತವಾದ ಸ್ವತ್ತು. ಈ ಸ್ವತ್ತಿಗೆ ಅಥವಾ ಆಸ್ತಿಯ ಭಾಗದಲ್ಲಿ ಪಾಲಿಗೆ ದುಹಿತೃ ಎಂದರೆ ಪುತ್ರಿಯೂ ಅರ್ಹಳು ಎಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಪುತ್ರನಿಗೇ ತಂದೆಯ ಆಸ್ತಿಯು ಸೇರಬೇಕು, ಪುತ್ರಿಗಲ್ಲ ಎಂದು ಹೇಳುತ್ತಾರೆ. ಈ ವಿಷಯದಲ್ಲಿ–**ಯದೃಚ್ಛಂತಿ ಸ್ಥಾಲೀಂ ಸ ನಾಉಪುಯಂ ತಸ್ಮಾ-ತ್ಪುಮಾನ್ದಾಯಾದೋಽದಾಯಾದಾ ಸ್ತ್ರೀತಿ ವಿಜ್ಞಾಯತೇ (ಮೈತ್ರಾಯಣೀಯ ಸಂಹಿತೆ. ೪-೬-೪)** ಎಂಬ ಶ್ರುತಿ ವಾಕ್ಯವಿರುವುದು. ಆದರೆ ಕೆಲವರು ಪುತ್ರನಿಗೂ ಪುತ್ರಿಗೂ ಪಿತೃವಿನ ಆಸ್ತಿಯಲ್ಲಿ ಸಮನಾದ ಹಕ್ಕಿದೆ ಎಂದು ವಾದಿಸುವರು.

ಪ್ರಶಾಸ್ತಿ ವೋಳ್ಹಾ ಸಂತಾನಕರ್ಮಣೇ ದುಹಿತುಃ ಪುತ್ರಭಾವಂ ।
ದುಹಿತಾ ದುರ್ಹಿತಾ ದೂರೇ ಹಿತಾ ॥ ದೋಗ್ಧೇರ್ವಾ ।
ನಪ್ತಾರಮುಪಾಗಮದ್ದೌಹಿತ್ರಂ ಪೌತ್ರಮಿತಿ । ವಿದ್ವಾನ್
ಪ್ರಜನನಯಜ್ಞಸ್ಯ ರೇತಸೋ ವಾ ಅಂಗಾದಂಗಾತ್ಸಂಭೂತಸ್ಯ
ಹೃದಯಾದಧಿಜಾತಸ್ಯ ಮಾತರಿ ಪ್ರತ್ಯೃತಸ್ಯಾವಿಧಾನಂ ಪೂಜಯನ್ನ
ವಿಶೇಷೇಣ ಮಿಥುನಾಃ ಪುತ್ರಾ ದಾಯಾದಾ ಇತಿ ॥

ಈಗ ದುಹಿತೃದಾಯಾದಿಗಳ ಎಂದರೆ ಪುತ್ರಿಯ ಮೂಲಕ ಸಂತಾನಾಭಿವೃದ್ಧಿಯ ವಿಷಯವನ್ನು ಪರಿಶೀಲಿಸುವೆವು. ಒಬ್ಬ ಪುರುಷನಿಗೆ ಪುತ್ರನೂ ಪುತ್ರಿಯೂ ಇದ್ದರೆ ಅವರ ಮೂಲಕ ಆ ಪುರುಷನ ಸಂತಾನಾಭಿವೃದ್ಧಿಯು ಆಗುವುದು. ಎಂದರೆ ವಂಶಾಭಿವೃದ್ಧಿಯಾಗುವುದು. ಪುತ್ರನಿಂದ ಉಂಟಾಗುವ ಸಂತತಿಗೆ ಪುತ್ರದಾಯಾದಿಗಳೆಂದೂ ಪುತ್ರಿಯಿಂದ ಉಂಟಾಗುವ ಸಂತತಿಗೆ ದುಹಿತೃದಾಯಾದಿಗಳೆಂದೂ ವ್ಯವಹಾರವಿರುವುದು. ಇಲ್ಲಿ ದಾಯಾದಶಬ್ದದ ಅರ್ಥವಿವರಣೆಮಾಡುವುದು ಆವಶ್ಯಕವಾಗಿರುವುದು. ದಾಯವೆಂದರೆ ತಂದೆಯ ಆಸ್ತಿಯಲ್ಲಿ ಪುತ್ರ ಅಥವಾ ಪುತ್ರಿಗೆ ಸಲ್ಲುವ ಭಾಗ. ದಾಯ + ಅದಃ = ದಾಯಾದ ಆಸ್ತಿಯನ್ನು ಅನುಭವಿಸಲು ಹಕ್ಕಿರುವ ಪುತ್ರ ಅಥವಾ ಪುತ್ರಿಗೆ ದಾಯಾದ ಎಂದು ಹೇಳುವ ರೂಢಿ ಇರುವುದು. ಪ್ರಕೃತ ಋಕ್ಕಿನಲ್ಲಿ ದುಹಿತೃದಾಯಾದಿಗಳ ವಿಷಯವು ಉಕ್ತವಾಗಿದೆ.

ಕೆಲವು ಧರ್ಮಶಾಸ್ತ್ರಜ್ಞರು ಪುತ್ರನಂತೆ ಪುತ್ರಿಗೂ ದಾಯಭಾಗ ಸಲ್ಲಬೇಕಾದುದು ನ್ಯಾಯವೆಂದು ಹೇಳುತ್ತಾರೆ. ಕನ್ಯಾಪಿತೃವು ತನ್ನ ಪುತ್ರಿಯನ್ನು ಬೇರೆ ಗೋತ್ರದ ಓರ್ವ ಪುರುಷನಿಗೆ ವಿವಾಹಮಾಡಿಕೊಡುವಾಗ ತನ್ನ ಪುತ್ರಿಯಲ್ಲಿ ಉತ್ಪನ್ನನಾಗುವ ಪುತ್ರನು ತನಗೂ ಪುತ್ರಸಮಾನನಾಗುವನೆಂಬ ಎಂದರೆ ತನಗೆ ಮರಣಾನಂತರ ಉತ್ತರಕ್ರಿಯಾದಿಗಳನ್ನು ಪುತ್ರರಂತೆ ಮಾಡುವನೆಂಬ ಭರವಸೆಯನ್ನು ಇಟ್ಟುಕೊಂಡಿರುವನು. ಮತ್ತು ಆ ವಿವಾಹವನ್ನು ವಿಧ್ಯುಕ್ತಕ್ರಿಯೆಯಿಂದ ಮಾಡಿ ಮನಶ್ಶಾಂತಿಯನ್ನು ಹೊಂದುವನು. ಅಳಿಯನೂ ಸಹ ತನ್ನ ಪತ್ನಿಯಲ್ಲಿ ಹುಟ್ಟುವ ಪುತ್ರನು ತನ್ನ ಮಾವನಿಗೆ ಪುತ್ರನಂತೆ ಇರಬಹುದೆಂಬ ವಿಷಯವನ್ನು ಸಮ್ಮತಿಸುವನು. ಇಲ್ಲಿ ದುಹಿತೃಶಬ್ದಕ್ಕೆ ಯಾಸ್ಕರು ಈ ರೀತಿ ಅರ್ಥವಿವರಣೆಮಾಡಿರುವರು— **ದುಹಿತಾ ದುರ್ಹಿತಾ ದೂರೇ ಹಿತಾ ದೋಗ್ಧೇರ್ವಾ ।** ತನ್ನ ಪುತ್ರಿಯು ವಿವಾಹಾನಂತರ ತನ್ನ ಸಮೀಪವನ್ನು ತ್ಯಜಿಸಿ ದೂರದಲ್ಲಿ ಎಂದರೆ ಪತಿಯ ಗೃಹದಲ್ಲಿ ವಾಸಮಾಡುವವಳಾದ್ದರಿಂದ ಪುತ್ರಿಗೆ ದುಹಿತೃವೆಂದು ಹೆಸರು. ಅಥವಾ ಹಸುವು (ದೋಗ್ಧೇರ್ವಾ) ಹಾಲನ್ನು ಕರೆಯುವಂತೆ ಪುತ್ರಿಯು ಪುತ್ರನನ್ನು ಉತ್ಪತ್ತಿಮಾಡುವವಳೆಂಬ ಅರ್ಥವನ್ನು ಸೂಚಿಸುವ ದುಹ್ (ಹಾಲನ್ನು ಕರೆ) ಎಂಬ ಧಾತುವಿನಿಂದ ದುಹಿತೃಶಬ್ದವು ನಿಷ್ಪನ್ನವಾಗಬಹುದು.

ಪುತ್ರನೂ ಪುತ್ರಿಯೂ ಸಹ ತಂದೆಯ ಅಂಗದಿಂದ ಮತ್ತು ಹೃದಯದಿಂದ ಉತ್ಪನ್ನರಾಗುವ ಕಾರಣ ಪುತ್ರಪುತ್ರಿಯರಿಬ್ಬರೂ ದಾಯಾರ್ಹರೆಂದು ಕೆಲವರ ಅಭಿಮತ. ಈ ವಿಷಯವು **ಅಂಗಾದಂಗಾತ್ಸಂಭವತಿ** ಎಂಬ ಮಂತ್ರದಲ್ಲಿ ಉಕ್ತವಾಗಿದೆಯೆಂದು ಹೇಳುವರು. ಈ ಮಂತ್ರವನ್ನು ಪುತ್ರ ಅಥವಾ ಪುತ್ರಿಯ ಜಾತಕರ್ಮಕಾಲದಲ್ಲಿ ಶಿಶುವಿನ ಶಿರಸ್ಸನ್ನು ತಂದೆಯು ಆಘ್ರಾಣಿಸುವಾಗ ಹೇಳಬೇಕಾದ ಮಂತ್ರವೆಂದು ಗೃಹ್ಯಸೂತ್ರಾದಿಗಳಲ್ಲಿ ಹೇಳಿದೆ.

ತದೇತದೃಕ್ಶ್ಲೋಕಾಭ್ಯಾಮಭ್ಯುಕ್ತಂ । ಅಂಗಾದಂಗಾತ್ಸಂಭವಸಿ ಹೃದ-
ಯಾದಧಿ ಜಾಯಸೇ । ಆತ್ಮಾ ವೈ ಪುತ್ರನಾಮಾಸಿ ಸ ಜೀವ ಶರದಃ
ಶತಂ ॥ ಅವಿಶೇಷೇಣ ಪುತ್ರಾಣಾಂ ದಾಯೋ ಭವತಿ ಧರ್ಮತಃ ।
ಮಿಥುನಾನಾಂ ವಿಸರ್ಗಾದೌ ಮನುಃ ಸ್ವಾಯಂಭುವೋಽಬ್ರವೀತ್ ॥

ಈಗ ಹೇಳಿದ ವಿಷಯಗಳು ಎಂದರೆ ಪುತ್ರಪುತ್ರಿಯರಿಬ್ಬರೂ ದಾಯಾರ್ಹರೆಂಬ ವಿಷಯವು **ಅಂಗಾದಂಗಾತ್ಸಂಭವಸಿ** ಎಂಬ ಋಕ್ಕಿನಲ್ಲಿಯೂ, **ಅವಿಶೇಷೇಣ ಪುತ್ರಾಣಾಂ** ಎಂಬ ಶ್ಲೋಕದಲ್ಲಿಯೂ ಸೂಚಿಸಲಾಗಿದೆ ಎಂದು ಸ್ವಾಯಂಭುವಮನುವು

ಹೇಳಿರುವನು. ಸೃಷ್ಟ್ಯಾದಿಯಲ್ಲಿ ಪುತ್ರ ಮತ್ತು ಪುತ್ರಿ ಎಂಬ ಸಂತತಿಯು ಸ್ತ್ರೀಪುರುಷರ ಮಿಥುನದಿಂದ ಜನಿಸುವವರಾದ್ದರಿಂದ ಪುತ್ರ ಪುತ್ರಿಯರಿಬ್ಬರಿಗೂ ದಾಯವು (ತಂದೆಯ ಆಸ್ತಿಯಲ್ಲಿ ಭಾಗವು) ಸಲ್ಲಬೇಕೆಂದು ಸ್ವಾಯಂಭುವಮನುವಿನ ಅಭಿಪ್ರಾಯವು.

ನ ದುಹಿತರ ಇತ್ಯೇಕೇ । ತಸ್ಮಾತ್ ಪುಮಾನ್ ದಾಯಾದೋಽದಾಯಾ-
ದಾ ಸ್ತ್ರೀತಿ ವಿಜ್ಞಾಯತೇ । ತಸ್ಮಾತ್ಸ್ತ್ರಿಯಂ ಜಾತಾಂ ಪರಾಸ್ಯಂತಿ ನ
ಪುಮಾಂಸಮಿತಿ ಚ । ಸ್ತ್ರೀಣಾಂ ದಾನವಿಕ್ರಯಾತಿಸರ್ಗಾ ವಿದ್ಯಂತೇ
ನ ಪುಂಸಃ ॥

ಕೆಲವರು ಹೀಗೆ ವಾದಿಸುತ್ತಾರೆ—ಪುತ್ರನಿಗೇ ದಾಯವು ಸಲ್ಲಬೇಕು. ಪುತ್ರಿಗೆ ಸೇರಕೂಡದು, ಏಕೆಂದರೆ, ಹೆಣ್ಣು ಶಿಶುವು ಉತ್ಪನ್ನವಾದರೆ ಅದನ್ನು ಅಷ್ಟಾಗಿ ಗೌರವಿಸುವುದಿಲ್ಲ. ಎಂದಿದ್ದರೂ ಆ ಶಿಶುವು (ಪುತ್ರಿಯು) ಬೇರೆಯವರ ಮನೆಗೆ (ವಿವಾಹಾನಂತರ) ಹೊರಟುಹೋಗುವುದು. ಮತ್ತು ದಾನ (ಕನ್ಯಾದಾನ) ಕ್ರಯ ಮೊದಲಾದವುಗಳಿಂದ ಪುತ್ರಿಯನ್ನು ತ್ಯಜಿಸಬೇಕಾಗುವುದು. ಪುತ್ರನ ವಿಷಯ ಹಾಗಲ್ಲ. ಅವನು ಪಿತೃವಿನ ಮನೆಯಲ್ಲಿಯೇ ಇರುವನು ಎಂದು ಇವರ ವಾದವು.

ಪುಂಸೋಽಪೀತ್ಯೇಕೇ । ಶೌನಃಶೇಪೇ ದರ್ಶನಾತ್ ।

ದಾನಕ್ರಯಾದಿ ಮಾರ್ಗಗಳಿಂದ ಸ್ತ್ರೀಯು ತಂದೆಯ ಮನೆಯನ್ನು ಬಿಟ್ಟು ಹೊರಟುಹೋಗುವಳೆಂದೂ ಆ ವಿಧವಾದ ತೊಂದರೆಯು ಪುರುಷರಿಗೆ (ಪುತ್ರನಿಗೆ) ಇರುವುದಿಲ್ಲವೆಂದೂ ಹಿಂದೆ ಹೇಳಿದೆಯಷ್ಟೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಕೆಲವು ಸಂದರ್ಭಗಳೂ ಇವೆ. ಶುನಃಶೇಪನ ವಿಷಯವನ್ನೇ ತೆಗೆದುಕೊಳ್ಳೋಣ. ಆ ಸಂದರ್ಭದಲ್ಲಿ ಶುನಃಶೇಪನೆಂಬ ತನ್ನ ಪುತ್ರನನ್ನು ಅವನ ತಂದೆಯು ಬೇರೊಬ್ಬರಿಗೆ ವಿಕ್ರಯಮಾಡಿದನೆಂದು ಹೇಳಿದೆ. (ಐತರೇಯ ಬ್ರಾಹ್ಮಣ ೩೩ ನೇ ಅಧ್ಯಾಯದ ೬ನೇ ಖಂಡದಲ್ಲಿ ಹೇಳಿದೆ) ಆದ್ದರಿಂದ ಪುತ್ರರಿಗೂ ಪುತ್ರಿಯರಿಗೂ ಇರುವ ಹಕ್ಕುಗಳೂ ಅಡಚಣೆಗಳೂ ಸಮಾನವಾದವು ಎಂದು ಕೆಲವರು ಹೇಳುವರು.

ಅಮೂರ್ಯಾಯಂತಿ ಜಾಮಯಃ ಸರ್ವಾ ಲೋಹಿತವಾಸಸಃ ।
ಅಭ್ರಾತರ ಇವ ಯೋಷಾಸ್ತಿಷ್ಠಂತಿ ಹತವರ್ತ್ಮನಃ ॥ ಅಭ್ರಾತೃಕಾ
ಇವ ಯೋಷಾಸ್ತಿಷ್ಠಂತಿ ಸಂತಾನಕರ್ಮಣೇ ಪಿಂಡದಾನಾಯ
ಹತವರ್ತ್ಮಾನ ಇತ್ಯಭ್ರಾತೃಕಾಯಾ ಅನಿರ್ವಾಹ ಔಪಮಿಕಃ ॥

ಮತ್ತೆ ಕೆಲವರು ಹೀಗೆ ಹೇಳುವರು– ಒಬ್ಬ ತಂದೆಗೆ ಪುತ್ರಿಮಾತ್ರ ಇದ್ದು ಆ ಪುತ್ರಿಗೆ ಅಣ್ಣನಾಗಲಿ, ತಮ್ಮನಾಗಲಿ ಇಲ್ಲದಿದ್ದರೆ (ಅಭ್ರಾತೃಕಾ) ಅಂತಹ ಸಂದರ್ಭದಲ್ಲಿ ಪುತ್ರಿಯೇ ತಂದೆಯ ಸಮಸ್ತ ಆಸ್ತಿಗೂ ಬಾಧ್ಯಳು ಎಂದು ಹೇಳುವರು ಮತ್ತು **ಅಮೂರ್ಯಾಯಂತಿ** (ಅಥರ್ವ ವೇ ಸಂ. ೧–೧೭–೧) ಎಂಬ ಅಥರ್ವಮಂತ್ರನ್ನು ಉದಾಹರಿಸಿ ಸಹೋದರನಿಲ್ಲದ ಪುತ್ರಿಗೆ ವಿವಾಹವು ನಿಷೇಧವೆಂದೂ ಆ ಪುತ್ರಿಯು ತಂದೆಯ ಮನೆಯಲ್ಲಿ ವಿವಾಹವಿಲ್ಲದೆ ಪುತ್ರನಂತೆಯೇ ವಾಸವಾಗಿರುವಳೆಂದೂ ಈ ಮಂತ್ರವನ್ನೂ ಉಪಮಾನವನ್ನಾಗಿ ಉದಾಹರಿಸಿದ್ದಾರೆ. ಇಂತಹ ಸ್ತ್ರೀಯು ಪತಿಯಿಲ್ಲದ ಅಥವಾ ಪತಿಯು ಮೃತನಾದ

ರಿಂದ ಪತಿಯಿಲ್ಲದವಳಾಗಿ ಸಂತಾನ (ಪುತ್ರೋತ್ಪಾದನ) ಕರ್ಮಕ್ಕೂ ಪಿಂಡಪ್ರದಾನಾದಿಗಳಿಗೂ ಅನರ್ಹಳಾಗಿರುವಳು ಎಂಬರ್ಥವು ಇಲ್ಲಿ ಸೂಚಿತವಾಗಿದೆ. ಈ ವಿಷಯದಲ್ಲಿ **ತಸ್ಯೋತ್ತರಾ ಭೂಯಸೇ ನಿರ್ವಚನಾಯ** ಎಂದು ಮತ್ತೊಂದು ಋಕ್ಕಿನ ಉದಾಹರಣೆಯನ್ನು ಕೊಟ್ಟಿರುವರು.

**ಇತಿ ಚತುರ್ಥಃ ಖಂಡಃ**

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು

---

## ಅಥ ಪಂಚಮಃ ಖಂಡಃ

### ಐದನೆಯ ಖಂಡವು

ಅಭ್ರಾತೇವ ಪುಂಸ ಏತಿ ಪ್ರತೀಚೀ ಗರ್ತಾರುಗಿವ ಸನಯೇ ಧನಾನಾಂ। ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ ನಿರಿಣೀತೇ ಅಪ್ಸಃ॥ (ಋ. ಸಂ. ೧–೧೨೪–೭) ಅಭ್ರಾತೃಕೇವ ಪುಂಸಃ ಪಿತೄನೇತ್ಯಭಿಮುಖೀ ಸಂತಾನಕರ್ಮಣೇ ಪಿಂಡದಾನಾಯ ನ ಪತಿಂ ಗರ್ತಾರೋಹಿಣೀವ ಧನಲಾಭಾಯ ದಾಕ್ಷಿಣಾಜೀ ಗರ್ತಃ ಸಭಾಸ್ಥಾಣು–ರ್ಗೃಣಾತೇಃ ಸತ್ಯಸಂಗರೋ ಭವತಿ ತಂ ತತ್ರ ಯಾಪುತ್ರಾ ಯಾಪತಿಕಾ ಸಾರೋಹತಿ ತಾಂ ತತ್ರಾಕ್ಷೈರಾಘ್ನಂತಿ ಸಾ ರಿಕ್ಥಂ ಲಭತೇ ಶ್ಮಶಾನ–ಸಂಚಯೋಽಪಿ ಗರ್ತ ಉಚ್ಯತೇ ಗುರತೇರಪಗೂರ್ಣೋ ಭವತಿ ಶ್ಮಶಾನಂ ಶ್ಮಶಯನಂ ಶ್ಮ ಶರೀರಂ ಶರೀರಂ ಶೃಣಾತೇಃ ಶಮ್ನಾತೇರ್ವಾ ಶ್ಮಶ್ರು ಲೋಮ ಶ್ಮನಿ ಶ್ರಿತಂ ಭವತಿ ಲೋಮ ಲುನಾತೇರ್ವಾ ಲೀಯತೇರ್ವಾ ನೋಪರಸ್ಯಾವಿಃಕುರ್ಯಾದ್ಯದುಪರಸ್ಯಾವಿಃಕುರ್ಯಾ–ದ್ಗರ್ತೇಷ್ಠಾಃ ಸ್ಯಾತ್ಪ್ರಮಾಯುಕೋ ಯಜಮಾನ ಇತ್ಯಪಿ ನಿಗಮೋ ಭವತಿ। ರಥೋಽಪಿ ಗರ್ತ ಉಚ್ಯತೇ ಗೃಣಾತೇಃ ಸ್ತುತಿಕರ್ಮಣಃ। ಸ್ತುತತಮಂ ಯಾನಂ। ಆರೋಹಥೋ ವರುಣ ಮಿತ್ರ ಗರ್ತಮಿತ್ಯಪಿ ನಿಗಮೋ ಭವತಿ। ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷೂಷಾ ಹಸನೇವ ದಂತಾನ್। ವಿವೃಣುತೇ ರೂಪಾಣೀತಿ

ಚತಸ್ರ ಉಪಮಾ ನಾಭ್ರಾತ್ರೀಮುಪಯಚ್ಛೇತ ತೋಕಂ ಹ್ಯಸ್ಯ
ತದ್ಭವತೀತ್ಯಭ್ರಾತೃಕಾಯಾ ಉಪಯಮನಪ್ರತಿಷೇಧಃ ಪ್ರತ್ಯಕ್ಷಃ
ಪಿತುಶ್ಚ ಪುತ್ರಭಾವಃ ಪಿತಾ ಯತ್ರ ದುಹಿತುರಪುತ್ರಾಯಾ ರೇತಃ-
ಸೇಕಂ ಪ್ರಾರ್ಜಯತಿ ಸಂದಧಾತ್ಯಾತ್ಮಾನಂ ಸಂಗಮೇನ ಮನಸೇತ್ಯ-
ಥೈತಾಂ ಜಾಮ್ಯಾರಿಕ್ಥಪ್ರತಿಷೇಧ ಉದಾಹರಂತಿ ಜ್ಯೇಷ್ಠಂ ಪುತ್ರಿ-
ಕಾಯಾ ಇತ್ಯೇಕೇ ॥೫॥

---

**ಅಭ್ರಾತೇವ ಪುಂಸ ಏತಿ** ಎಂಬ ಋಕ್ಕಿನ ಅರ್ಥವು—ಭ್ರಾತೃರಹಿತಳಾದ ಸ್ತ್ರೀಯು (ಅಲಂಕಾರಾದಿ ಲಾಭಕ್ಕೋಸ್ಕರ) ಪಿತ್ರಾದಿಗಳ ಬಳಿಗೆ ಹೋಗುವಂತೆ ಮತ್ತು ಅಪುತ್ರಳೂ ಅಭರ್ತೃಕಳೂ ಆದ ಸ್ತ್ರೀಯು ಧನಾದಿಲಾಭಕ್ಕೋಸ್ಕರ (ನ್ಯಾಯ) ಸ್ಥಾನಕ್ಕೆ ಹೋಗುವಂತೆ ಉಷೆಯೂ ಸೂರ್ಯನಿಗಭಿಮುಖಳಾಗಿ ಹೋಗುತ್ತಾಳೆ. ಮತ್ತು ಪತಿಕಾಮಳಾದ ಸ್ತ್ರೀಯು ಶುಭ ವಸ್ತ್ರವನ್ನುಟ್ಟು (ಪತಿಯ ಸಮೀಪಕ್ಕೆ ಹೋಗುವಂತೆ) ಉಷೆಯು (ಮಂದಹಾಸಯುಕ್ತಳಾಗಿ ತನ್ನ ದಂತಗಳನ್ನು) ಪ್ರದರ್ಶಿಸುವಂತೆ ನೀಲಪೀತಾದಿರೂಪ ವಿಶೇಷಗಳನ್ನು ಚೆನ್ನಾಗಿ ಪ್ರಕಾಶಗೊಳಿಸುತ್ತಾಳೆ.

ಅಭ್ರಾತೃಕೇವ ಪುಂಸಃ ಪಿತೄನೇತ್ಯಭಿಮುಖೀ ಸಂತಾನಕರ್ಮಣೇ ಪಿಂಡ-
ದಾನಾಯ ಪತಿಂ। ಗರ್ತಾರೋಹಿಣೀವ ಧನಲಾಭಾಯ ದಾಕ್ಷಿ-
ಣಾಜೀ । ಗರ್ತಃ ಸಭಾಸ್ಥಾಣುರ್ಗೃಣಾತೇಃ । ಸತ್ಯಸಂಗರೋ ಭವತಿ ।
ತಂ ತತ್ರ ಯಾಪುತ್ರಾ ಯಾಪತಿಕಾ ಸಾರೋಹತಿ । ತಾಂ ತತ್ರಾಕ್ಷೈ-
ರಾಘ್ನಂತಿ ಸಾ ರಿಕ್ಥಂ ಲಭತೇ ॥

ಅಣ್ಣ ತಮ್ಮಂದಿರಿಲ್ಲದ ಸ್ತ್ರೀಯನ್ನು ಅವಳ ತಂದೆಯು ಒಬ್ಬ ವರನಿಗೆ ಮದುವೆಮಾಡಿಕೊಟ್ಟು ಅವಳ ಪತಿಯ ಮನೆಗೆ ಕಳುಹಿಸಿದ್ದರೂ ಅವಳ ತನ್ನ ಗಂಡನ ಬಳಿ ಇರದೆ, ತನ್ನ ತಂದೆಯ ಮನೆಗೇ ಹಿಂತಿರುಗಿ ಬರುವಳು. ಮದುವೆಮಾಡಿಕೊಡುವಾಗ ಇವಳ ತಂದೆಯು ತನ್ನ ಅಳಿಯನ ವಂಶಾಭಿವೃದ್ಧಿಯಾಗಲೆಂದೂ, ಅವನು ಮೃತನಾದನಂತರ ಅವನ ಪಿಂಡಪ್ರದಾನಾದಿ ಅಪರ ಕರ್ಮಗಳನ್ನು ನಿರ್ವಹಿಸಲು ಪುತ್ರನನ್ನು ಪಡೆಯಲೆಂಬ ಉದ್ದೇಶದಿಂದಲೂ ಆ ಸ್ತ್ರೀಯನ್ನು ಅವಳ ಪತಿಯ ಮನೆಗೆ ಕಳುಹಿಸಿರುತ್ತಾನೆ—ಆದರೆ ಆ ಸ್ತ್ರೀಯ ಮನಸ್ಸು ತನ್ನ ಪತಿಯಲ್ಲಾಗಲಿ, ಪತಿಯ ಗೃಹಕೃತ್ಯಗಳಲ್ಲಾಗಲಿ ನೆಲಸದೆ ತನ್ನ ತಂದೆಯ ಬಳಿಗೇ ತಂದೆಯ ಆಸ್ತಿಯಲ್ಲಿ ಪಾಲನ್ನು ತೆಗೆದುಕೊಳ್ಳುವ ಉದ್ದೇಶದಿಂದ ಆ ಸ್ತ್ರೀಯು ಬರುವಳು. ಬಂದು ತಂದೆಯಿಂದ ಆಸ್ತಿಯನ್ನು ಸುಲಭವಾಗಿ ಪಡೆಯಲಾಗದಿದ್ದರೆ ಮತ್ತು ಆ ಸ್ತ್ರೀಯು ದಕ್ಷಿಣದೇಶದವಳಾಗಿದ್ದರೆ ನ್ಯಾಯಸ್ಥಾನದ ಎಂದರೆ ಪಂಚಾಯತಿಯ ಜನರು ಕೂಡುವ ಸಭಾಸ್ಥಾನಕ್ಕೆ ಬರುವಳು. ಇಲ್ಲಿ **ಗರ್ತ**ಶಬ್ದಕ್ಕೆ ಸ್ಥಾಣು ಅಥವಾ ಸಭಾಸ್ಥಾನದ ಸ್ತಂಭವೆಂಬರ್ಥವಿರುವುದು (ಮೆಟ್ಟಿಲೂ ಎಂದೂ ಹೇಳಬಹುದು). ಏತಕ್ಕೆ ಬರುವಳು ಎಂದರೆ ತನಗೆ ಮಕ್ಕಳಾಗಲಿ, ಪತಿಯಾಗಲೀ ಇಲ್ಲದ ವಿಧವಾ ಸ್ತ್ರೀಯು ತನಗೆ ಪಿತೃವಿನ ಆಸ್ತಿಯಲ್ಲಿ ಸಲ್ಲಬೇಕಾದ ಪಾಲಿಗಾಗಿ ನ್ಯಾಯಸ್ಥಾನದ ಮೆಟ್ಟಲನ್ನು ಹತ್ತಿ ಅಲ್ಲಿರುವ ಸಭಿಕರ ಮುಂದೆ ತನ್ನ

ವಿದ್ಯೆಗೆ ಮಾನಗಳನ್ನು ಹಕ್ಕನ್ನೂ ತಿಳಿಸಿ ತನಗೆ ಬರಬೇಕಾದ ಆಸ್ತಿಯನ್ನು ಪಡೆಯುವಳು. ಅದರಂತೆ ಸಹೋದರರಿಲ್ಲದ ಈ ಒಂಟಿ ಸ್ತ್ರೀಯೂ ಸಹ ತನ್ನ ತಂದೆಯ ಆಸ್ತಿಯ ಮೇಲೆಯೇ ಕಣ್ಣಿಟ್ಟು ಪತಿಗೃಹವನ್ನು ತ್ಯಜಿಸಿ ಪಿತೃಗೃಹಾಭಿಮುಖಳಾಗಿ ಬರುವಳು. ಎಂದು ಒಂದು ಉಪಮಾನವನ್ನು ಇಲ್ಲಿ ಹೇಳಿರುವರು. ಗರ್ತಶಬ್ದಕ್ಕೆ ಇಲ್ಲಿ ಸಭಾಮಂಟಪದ ಸ್ತಂಭವೆಂದು ಹೇಳಿರುವರು. ಇಂತಹ ಅಪುತ್ರಳೂ ಪತಿರಹಿತಳೂ ಆದ ಸ್ತ್ರೀಯು ಸಭಾ ನಿಯಮದ ಪ್ರಕಾರ ರಿಕ್ಥವನ್ನು ಎಂದರೆ ತಂದೆಯ ಆಸ್ತಿಯಲ್ಲಿ ಪಾಲನ್ನು ಪಡೆಯುವಳು. [ವಸ್ತು ಸ್ಥಿತಿಯು ಹೀಗಿರುವುದರಿಂದ ಭ್ರಾತೃರಹಿತಳಾದ ಸ್ತ್ರೀಯನ್ನು ವಿವಾಹಿತಳನ್ನಾಗಿ ಮಾಡದೆ ಅವಿವಾಹಿತಳನ್ನಾಗಿಯೇ ತಂದೆಯ ಮನೆಯಲ್ಲಿಟ್ಟಿರುವುದು ರೂಢಿಯಾಗಿದ್ದಂತೆ ಕಂಡುಬರುವುದು]

ಶ್ಮಶಾನಸಂಚಯೋಽಪಿ ಗರ್ತ ಉಚ್ಯತೇ ಗುರತೇರಪೂರ್ಣೋಭವತಿ ।
ಶ್ಮಶಾನಂ ಶ್ಮಶಯನಂ । ಶ್ಮ ಶರೀರಂ । ಶರೀರಂ ಶೃಣಾತೇಃ ।
ಶಮ್ನಾತೇರ್ವಾ । ಶ್ಮಶ್ರು ಲೋಮ ಲುನಾತೇರ್ವಾ ಲೀಯತೇರ್ವಾ
ನೋಪರಸ್ಯಾವಿಷ್ಕುರ್ಯಾತ್ । ಯದುಪರಸ್ಯಾವಿಷ್ಕುರ್ಯಾ–
ದ್ಗರ್ತೇಷ್ಠಾಃ ಸ್ಯಾತ್ ಪ್ರಮಾಯುಕೋ ಯಜಮಾನಃ ಇತ್ಯಪಿ
ನಿಗಮೋ ಭವತಿ ॥

ಗರ್ತವೆಂದರೆ ಶವವನ್ನು ಹೂಳುವುದಕ್ಕಾಗಿ ತೆಗೆದ (ಅಗೆದ) ಮಣ್ಣಿನ ಗುಡ್ಡೆಯು ಎಂದರೆ ಶವವನ್ನು ಹೂಳಿದ ಮೇಲೆ ಅದನ್ನು ಗುರ್ತಿಸುವುದಕ್ಕಾಗಿ ಸಮಾಧಿಯ ಮೇಲೆ ಕಟ್ಟಿರುವ ಅಥವಾ ಹಾಕಿರುವ ಮಣ್ಣಿನಗುಡ್ಡೆಯು. ಗರ್ತಶಬ್ದವು ಗುಡ್ಡೆ ಮಾಡು ಎಂಬರ್ಥವಿರುವ ಗುರತಿಧಾತುವಿನಿಂದ ನಿಷ್ಪನ್ನವಾಗಿದೆ. **ಶ್ಮಶಾನ** ವೆಂದರೆ **ಶ್ಮಶಯನಂ** । ಶ್ಮ ಎಂದರೆ ಶರೀರವು ಆ ಶರೀರವು ( ಪ್ರಾಣವಿಲ್ಲದ, ಮೃತವಾದ ಶರೀರವು ) ಬಿದ್ದಿರುವ ಸ್ಥಳಕ್ಕೆ ಅಥವಾ ಅದನ್ನು ಹೂಳುವುದಕ್ಕೆ ಅಥವಾ ಸುಡುವುದಕ್ಕೆ ಕ್ಲುಪ್ತವಾದ ಪ್ರದೇಶಕ್ಕೆ ಶ್ಮಶಾನವೆಂದು ಹೆಸರು. ಶರೀರಶಬ್ದವು ಸುಡು ಎಂಬರ್ಥವುಳ್ಳ ಶೃಣಾತಿಧಾತುವಿನಿಂದಾಗಲಿ, ನಾಶಮಾಡು ಎಂಬರ್ಥವುಳ್ಳ ಶಮ್ನಾತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು, **ಶ್ಮಶ್ರು** ಎಂದರೆ ಕೂದಲು (ಮೀಸೆ) ಲೋಮವೆಂದು ಹೆಸರು ಏಕೆಂದರೆ ಈ ಕೂದಲು ಶರೀರದ ಮೇಲೆ ನಿಂತಿರುವುದರಿಂದ ಶ್ಮಶ್ರು ಎಂಬ ಹೆಸರು. ಲೋಮಶಬ್ದವು ಕತ್ತರಿಸು ಎಂಬರ್ಥವುಳ್ಳ ಲುನಾತಿಧಾತುವಿನಿಂದಾಗಲಿ, ಅಂಟಿಕೊಳ್ಳು ಎಂದರ್ಥವಿರುವ ಲೀಯತಿ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. **ಉಪರ** ಎಂಬ ಶಬ್ದಕ್ಕೆ ಯಜ್ಞದಲ್ಲಿ ಪಶುಗಳನ್ನು ಕಟ್ಟುವುದಕ್ಕೆ ಉಪಯೋಗಿಸುವ ಯೂಪಸ್ತಂಭವು ಇದನ್ನು ಹೂಳಿರುವ ಹಳ್ಳಕ್ಕೆ ಗರ್ತವೆಂದು ಹೆಸರು. ಈ ಯೂಪದ (ಹೂಳಿರುವ) ಬುಡದ ಭಾಗವನ್ನು ಹಳ್ಳದಿಂದ ಮೇಲೆ ತೆಗೆದು ಎಲ್ಲರಿಗೂ ಕಾಣುವಂತೆ ಮಾಡಬಾರದು ಹಾಗೇನಾದರೂ ಯಜ್ಞದಲ್ಲಿ ಯೂಪವನ್ನು ಬುಡಸಹಿತ ಕಾಣುವಂತೆ ಹೊರಕ್ಕೆ ತೆಗೆದರೆ ಅದರಿಂದ ಯಜ್ಞ ಮಾಡುವ ಯಜಮಾನನಿಗೆ ಕೆಡಕುಂಟಾಗುವುದು ಎಂದು ಈ ನಿಗಮ ವಾಕ್ಯದ ಅಭಿಪ್ರಾಯವು. ಈ ವಾಕ್ಯವನ್ನು ಗರ್ತಶಬ್ದದ ಪ್ರಯೋಗವನ್ನು ತೋರಿಸುವುದಕ್ಕಾಗಿ ಇಲ್ಲಿ ಉದಾಹರಿಸಲಾಗಿದೆ.

ರಥೋಽಪಿ ಗರ್ತ ಉಚ್ಯತೇ ಗೃಣಾತೇಃ ಸ್ತುತಿಕರ್ಮಣಃ । ಸ್ತುತತಮಂ
ಯಾನಂ । ಆರೋಹಥೋ ವರುಣ ಮಿತ್ರ ಗರ್ತಂ ಇತ್ಯಪಿ
ನಿಗಮೋ ಭವತಿ ॥

ಗರ್ತ ಶಬ್ದಕ್ಕೆ ರಥವೆಂದೂ ಅರ್ಥವಿರುವುದು. ಏಕೆಂದರೆ ಪ್ರಶಸ್ಯವಾದದ್ದು, ಉತ್ತಮವಾದದ್ದು ಎಂಬರ್ಥವನ್ನು ಸೂಚಿಸುವ ಗೃಣಾತಿಧಾತುವಿನಿಂದ ಗರ್ತಶಬ್ದವು ನಿಷ್ಪನ್ನವಾಗಿದೆ. ರಥವೆಂದರೆ ಅತಿ ಪ್ರಶಸ್ತವಾದ ಯಾನವು, ವಾಹನವು ಎಂದರ್ಥವು. ಈ ವಿಷಯದಲ್ಲಿ ಒಂದು ಋಕ್ಕಿನ ಉದಾಹರಣೆಯನ್ನು ಕೊಡುವರು—

ಹಿರಣ್ಯರೂಪಮುಷಸೋ ವ್ಯುಷ್ಟಾವಯಃಸ್ಥೂಣಮುದಿತಾ ಸೂರ್ಯಸ್ಯ।
ಆರೋಹಥೋ ವರುಣ ಮಿತ್ರ ಗರ್ತಮತಶ್ಚಕ್ಷಾಥೇ ಅದಿತಿಂ ದಿತಿಂ ಚ।

(ಋ. ಸಂ. ೫-೬೨-೮)

ಇದರ ಅರ್ಥವು–ಎಲೈ ಮಿತ್ರಾವರುಣರೇ, ಉಷಸ್ಸಿನ ಆವಿರ್ಭಾವಕಾಲದಲ್ಲಿಯೂ, ಸೂರ್ಯನ ಉದಯಕಾಲದಲ್ಲಿಯೂ ನೀವು ನಿಮ್ಮ ಸುವರ್ಣರೂಪವುಳ್ಳದ್ದೂ ಉಕ್ಕಿನ ಸ್ತಂಭಗಳುಳ್ಳದ್ದೂ ಆದ ರಥವನ್ನು ಹತ್ತುತ್ತೀರಿ. ಅನಂತರ ಅಖಂಡಳಾದ ಪೃಥ್ವಿಯನ್ನೂ ಖಂಡರೂಪರಾದ ಪ್ರಜೆಗಳನ್ನೂ (ಅದಿತಿ, ದಿತಿ) ನೋಡುತ್ತೀರಿ. ಈ ಋಕ್ಕಿನಲ್ಲಿರುವ ಗರ್ತಶಬ್ದಕ್ಕೆ ರಥವೆಂಬ ಅರ್ಥವನ್ನು ತೋರಿಸುವುದಕ್ಕಾಗಿ ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದೆ—

ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷೂಷಾ
ಹಸನೇವ ದಂತಾನ್ ವಿವೃಣುತೆ ರೂಪಾಣೀತಿ ।

ಇಲ್ಲಿ ನಿರುಕ್ತಕಾರರು–ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ ನಿರಿಣಾತೇ ಅಪ್ಸಃ । ಎಂಬ ಉಪಮಾನವನ್ನು ಕೊಟ್ಟಿರುವರು. ಸುಂದರಳಾದ ಓರ್ವ ಯುವತಿಯು ತನ್ನ ಪತಿಯ ಸಂಗವನ್ನು ಅಪೇಕ್ಷಿಸಿ ಅವನ ಸಮೀಪಕ್ಕೆ ಬರುವಾಗ ಶುಭ್ರವಸ್ತ್ರದಿಂದ ಅಲಂಕರಿಸಿಕೊಂಡು ಋತುಕಾಲದಲ್ಲಿ ಹಸನ್ಮುಖಿಯಾಗಿ ತನ್ನ ದಂತ ಪಂಕ್ತಿಯನ್ನು ಕಾಣುವಂತೆ ಪ್ರದರ್ಶಿಸುತ್ತಾ ನಗುಮುಖದಿಂದ ತನ್ನ ಪತಿಯ ಬಳಿಗೆ ಬರುವಂತೆ ಉಷೋದೇವತೆಯು ತನ್ನ ಆಕರ್ಷಕವಾದ ನಾನಾರೂಪಗಳನ್ನೂ ಪ್ರದರ್ಶಿಸುತ್ತಾಳೆ. ಎಂಭಿಪ್ರಾಯವು.

ಚತಸ್ರ ಉಪಮಾಃ। ನಾಭ್ರಾತ್ರೀಮುಪಯಚ್ಛೇತ ತೋಕಂ ಹ್ಯಸ್ಯ
ತದ್ಭವತಿ ಇತ್ಯಭ್ರಾತೃಕಾಯಾ ಉಪಯಮನಪ್ರತಿಷೇಧಃ ಪ್ರತ್ಯಕ್ಷಃ
ಪಿತುಶ್ಚ ಪುತ್ರಭಾವಃ ॥

ಈ ಋಕ್ಕಿನಲ್ಲಿ ಉಷೋದೇವತೆಯನ್ನು ವರ್ಣಿಸುವಾಗ ಋಷಿಯು ನಾಲ್ಕು ಉಪಮಾನಗಳನ್ನು ಕೊಟ್ಟು ವರ್ಣಿಸಿದ್ದಾನೆ—**ಅಭ್ರಾತೇವ ಪುಂಸ** ಎಂಬುದು ಮೊದಲನೆಯ ಉಪಮಾನ, **ಗರ್ತಾರೋಹಿಣೀ ವೇತಿ** ಎಂಬುದು ಎರಡನೆಯದು. **ಜಾಯೇವ ಪತ್ಯ** ಎಂಬುದು ಮೂರನೆಯದು **ಹಸ್ರೇವ ನಿರಿಣೀತೇ ಅಪ್ಸಃ** ಎಂಬುದು ನಾಲ್ಕನೆಯದು. ಅಭ್ರಾತೃಕಾ ಎಂದರೆ ಸಹೋದರನಿಲ್ಲದ ಪುತ್ರಿಗೆ ವಿವಾಹವು ನಿಷಿದ್ಧವೆಂದು ಹೇಳಲ್ಪಟ್ಟಿದೆ. ಏಕೆಂದರೆ ಈ ಸ್ತ್ರೀಯು ತನ್ನ ತಂದೆಗೆ ಪುತ್ರಭಾವದಿಂದ ಎಂದರೆ ಪುತ್ರನಂತೆ ಇರುವಳು. ಅಪ್ಸಃ ಎಂಬ ಶಬ್ದವು ಭಕ್ಷಿಸು ಎಂಬರ್ಥವುಳ್ಳ **ಪ್ಸಾ** ಧಾತುವಿನಿಂದ ನಿಷ್ಪನ್ನವಾಗಿದೆ. ಅಪ್ಸ ಶಬ್ದವು ಅದಕ್ಕೆ ವಿರುದ್ಧವಾದ ಅರ್ಥವನ್ನೂ ತಿಳಿಸುವುದು. ಏಕೆಂದರೆ ರೂಪವು ನೋಡುವುದಕ್ಕೆ ಮಾತ್ರ ಯೋಗ್ಯವು. ಭಕ್ಷಿಸು

ವುದಕ್ಕೆ ಅಲ್ಲ. ಇದು ಶಾಕಪೂಣಿಯವರ ಮತವು; ಅಥವಾ ವ್ಯಾಪಕಾರ್ಥವಾದ ಆಪ್ (ಆಪ್ಲೃ–ವ್ಯಾಪ್ತೌ) ಧಾತುವಿನಿಂದ ನಿಷ್ಪನ್ನವಾಗಿ ಸರ್ವತ್ರ ವ್ಯಾಪಕವಾದುದರಿಂದ ಅಪ್ಸವೆಂಬ ಹೆಸರೆಂದೂ ಹೇಳಲಾಗಿದೆ. ಅಪ್ಸವುಳ್ಳವಳು, ರೂಪವುಳ್ಳವಳು ಅಪ್ಸರಾ ಎಂಬ ಹೆಸರಿನಿಂದ ಕರೆಯಲ್ಪಡುವಳು.

ಪಿತಾ ಯತ್ರ ದುಹಿತುರಪ್ರತ್ತಾಯಾ ರೇತಃಸೇಕಂ ಪ್ರಾರ್ಜಯತಿ ಸಂ-
ದಧಾತ್ಯಾತ್ಮಾನಂ ಸಂಗಮೇನ ಮನಸೇತಿ ॥ ಅಥೈತಾಂ ಜಾಮ್ಯಾ
ರಿಕ್ಥಪ್ರತಿಷೇಧ ಉದಾಹರಂತಿ । ಜ್ಯೈಷ್ಠ್ಯಂ ಪುತ್ರಿಕಾಯಾ ಇತ್ಯೇಕೇ ॥

ಭ್ರಾತೃರಹಿತಳಾದ ತನ್ನ ಪುತ್ರಿಯನ್ನು ಯೋಗ್ಯವರನಿಗೆ ಕೊಟ್ಟು ವಿವಾಹಮಾಡಿ ಆ ತನ್ನ ಪುತ್ರಿಯಲ್ಲಿ ಹುಟ್ಟುವ ಪುತ್ರನು ತನಗೆ ದೌಹಿತ್ರ (ಮೊಮ್ಮಗ) ನಾಗಿರುವನೆಂದು ಮನಶ್ಶಾಂತಿಯಿಂದ ತಂದೆಯು ನಿಶ್ಚಿಂತೆಯಿಂದಿರುವನು. ಆ ತನ್ನ ಪುತ್ರಿಯು ತನ್ನ ಪುತ್ರನೆಂದೇ (ಮಗನೆಂದೇ) ಭಾವಿಸುವನು. ಆದರೆ ಕೆಲವು ಧರ್ಮಶಾಸ್ತ್ರಜ್ಞರು ಮುಂದಿನ ಋಕ್ಕನ್ನು ಸಮರ್ಥಿಸಿ ತಂದೆಯ ಆಸ್ತಿಯಲ್ಲಿ ಭ್ರಾತೃರಹಿತಳಾದ ಪುತ್ರಿಗೆ ಸಮಸ್ತಪಕ್ಕೂ ಇರುವುದೆಂದು ನಿಶ್ಚಯಿಸಿರುವರು ಆದರೆ ಮತ್ತೆ ಕೆಲವರು ತಂದೆಯ ಆಸ್ತಿಯಲ್ಲಿ ಬಹುಭಾಗವು (ಎಲ್ಲವೂ ಅಲ್ಲ) ಭ್ರಾತೃರಹಿತಳಾದ ಪುತ್ರಿಗೆ ಸೇರತಕ್ಕದ್ದೆಂದು ಹೇಳುವರು. ಈ ವಿಷಯದಲ್ಲಿ ಮುಂದಿನ ಋಕ್ಕನ್ನೂ ಉದಾಹರಣೆಯಾಗಿ ಕೊಟ್ಟಿದೆ.—

**ಇತಿ ಪಂಚಮಃ ಖಂಡಃ**

ಇಲ್ಲಿಗೆ ಐದನೆಯ ಖಂಡವು ಸಮಾಪ್ತವು

———

## ಅಥ ಷಷ್ಠಃ ಖಂಡಃ

**ಆರನೆಯ ಖಂಡವು**

———

ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿ-
ಧಾನಂ । ಯದೀ ಮಾತರೋ ಜನಯಂತ ವಹ್ನಿಮನ್ಯಃಕರ್ತಾ ಸುಕೃ-
ತೋರನ್ಯ ಋಂಧನ್ ॥ (ಋ. ಸಂ. ೩–೩೧–೨) ನ ಜಾಮಯೇ
ಭಗಿನ್ಯೈ ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ ಜಮತೇರ್ವಾ
ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ತಾನ್ವ ಆತ್ಮಜಃ
ಪುತ್ರೋ ರಿಕ್ಥಂ ಪ್ರಾರಿಚತ್ಪ್ರಾದಾಚ್ಚಕಾರೈನಾಂ ಗರ್ಭನಿಧಾನೀಂ ಸನಿ-

ತುರ್ಹಸ್ತಗ್ರಾಹಸ್ಯ ಯದಿಹ ಮಾತರೋಽಜನಯಂತ ವಹ್ನಿಂ ಪುತ್ರ-ಮವಹ್ನಿಂ ಚ ಸ್ತ್ರಿಯಮನ್ಯತರಃ ಸಂತಾನಕರ್ತಾ ಭವತಿ ಪುಮಾನ್ ದಾಯಾದೋಽನ್ಯತರೋಽರ್ಧಯಿತ್ವಾ ಜಾಮಿಃ ಪ್ರದೀಯತೇ ಪರಸ್ಮೈ ॥೬॥

—·—

**ನ ಜಾಮಯೇ ತಾನ್ವೋ** ಎಂಬ ಋಕ್ಕಿನ ಅರ್ಥವು-ಔರಸಪುತ್ರನು ಪಿತ್ರಾರ್ಜಿತವಾದ ಧನವನ್ನು ತನ್ನ ಸಹೋದರಿಗೆ ದಾನಮಾಡುವುದಿಲ್ಲ. ಅವಳನ್ನು ಆದರಿಸತಕ್ಕ ಪತಿಗೆ ಒಪ್ಪಿಸಿ ಅವಳನ್ನು ಅವನ ಗರ್ಭಕ್ಕೆ ಪಾತ್ರಳಾಗುವಂತೆ ಮಾಡುತ್ತಾನೆ. ಒಂದು ವೇಳೆ ಮಾತಾಪಿತೃಗಳು ಸ್ತ್ರೀ ಮತ್ತು ಪುಂರೂಪದ ಸಂತಾನವನ್ನು ಪಡೆದರೂ ಸಹ ಅವರಲ್ಲಿ ಪುತ್ರನು ಪಿಂಡಾರ್ಪಣಾದಿ ಕರ್ಮಗಳಲ್ಲಿ ಶ್ರೇಷ್ಠನಾದ ಕರ್ತನಾಗುತ್ತಾನೆ. ಪುತ್ರಿಯು ವಸ್ತ್ರಾಭರಣಾದ್ಯಲಂಕಾರಗಳಿಗೆ ಮಾತ್ರ ಪಾತ್ರಳಾಗುತ್ತಾಳೆ.

**ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ**—ಈ ಸ್ತ್ರೀಯಲ್ಲಿ (ಭಗಿನಿಯಲ್ಲಿ) ಮಕ್ಕಳನ್ನು ಇತರರು (ತನಗೆ ಬಂಧವಲ್ಲದವರು) ಉತ್ಪಾದನೆಮಾಡುವುದರಿಂದ ಈ ಸ್ತ್ರೀಗೆ ಜಾಮಿಯೆಂದು ಹೆಸರು. **ಜಾಂ** ಎಂದರೆ ಅಪತ್ಯ, ಸಂತತಿ; **ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ**—ಅಥವಾ ಈ ಜಾಮಿಶಬ್ದವು ಗತ್ಯರ್ಥಕವಾದ (ಹೋಗು ಎಂಬರ್ಥವಿರುವ) ಜಮತಿಧಾತುವಿನಿಂದ ನಿಷ್ಪನ್ನವಾಗಬಹುದು. ಏಕೆಂದರೆ ಈ ಸ್ತ್ರೀಯು ವಿವಾಹಾನಂತರ ತನ್ನ ತಂದೆಯ ಮನೆಯನ್ನು ಬಿಟ್ಟು ತನ್ನ ಪತಿಯ ಗೃಹಕ್ಕೆ ಹೋಗುವವಳಾದ್ದರಿಂದ ಈ ಸ್ತ್ರೀಗೆ (ಪುತ್ರಿಗೆ) ಜಾಮಿಯೆಂದೂ ಹೆಸರು. ಈ ಸ್ತ್ರೀಯಲ್ಲಿ ಹುಟ್ಟುವ ಪುತ್ರನು ತನಗೆ ಪುತ್ರನಾಗಲೆಂದೇ ಈ ಸ್ತ್ರೀಗೆ ಧನವನ್ನು ಕೊಡುವನು ಮತ್ತು ಗರ್ಭಾಧಾನಮಾಡಲು ಸಮರ್ಥನಾದ ಪುರುಷನಿಗೆ ವಿವಾಹಮಾಡಿ ಕೊಡುವನು. ಅನಂತರ ಈ ಸ್ತ್ರೀಯಲ್ಲಿ ಪುತ್ರಶಿಶುವನ್ನೂ ಸ್ತ್ರೀಶಿಶುವನ್ನೂ ಪಡೆದಿದ್ದೇ ಆದರೆ ಪುತ್ರಶಿಶುವಿಗೆ ದಾಯಾದಭಾಗವು ಸಲ್ಲುವುದು, ಸ್ತ್ರೀಶಿಶುವಿಗೆ ದಾಯಾದಭಾಗವಿಲ್ಲ. ಆ ಶಿಶುವನ್ನು ಕಾಲಕ್ರಮದಲ್ಲಿ ಇನ್ನೊಬ್ಬ ಪುರುಷನಿಗೆ ವಿವಾಹಮಾಡಿಕೊಡುವರು. ಹಿಂದೆ ಹೇಳಿದಂತೆ ಪುರುಷಶಿಶು ಅಥವಾ, ಬಾಲಕರ ವಿಷಯದಲ್ಲಿಯೂ ದಾನಕ್ರಯಾದಿಗಳು ಉಂಟೆಂಬ ಕೆಲವರ ವಾದವನ್ನು ಒಪ್ಪುವುದಕ್ಕಾಗುವುದಿಲ್ಲ. ಶುನಃಶೇಪ ಮೊದಲಾದವರ ವಿಚಾರದಲ್ಲಿ ಅದು ಕಾರಣಾಂತರದಿಂದ ನಡೆದಿರುತ್ತದೆ. ಸಾಮಾನ್ಯವಾಗಿ ಪುತ್ರನೇ ದಾಯದಕ್ಕೆ ಅರ್ಹನು, ಸ್ತ್ರೀಯು ಅರ್ಹಳಲ್ಲ. ಇಲ್ಲಿ ಜ್ಯೇಷ್ಠ ಶಬ್ದಕ್ಕೆ ಮತ್ತೊಂದರ್ಥವಿರುವುದು. ಪುತ್ರಿಗೆ ಹುಟ್ಟುವ ಮಕ್ಕಳಲ್ಲಿ ಜ್ಯೇಷ್ಠಶಿಶುವಿಗೆ ದಾಯಕ್ಕೆ ಅರ್ಹತೆ ಇರುವುದು. ಇತರ ಮಕ್ಕಳಿಗೆ ಇರುವುದಿಲ್ಲ. ತಂದೆಯು ಇಷ್ಟಪಟ್ಟರೆ. ಇತರ ಮಕ್ಕಳಿಗೂ ಆಸ್ತಿಯಲ್ಲಿ ಕೆಲವು ಭಾಗವನ್ನು ಹಂಚಿಕೊಡಬಹುದು.

**ಇತಿ ಷಷ್ಠಃ ಖಂಡಃ**

ಇಲ್ಲಿಗೆ ಆರನೆಯ ಖಂಡವು ಸಮಾಪ್ತವು.

———

## ಅಥ ಸಪ್ತಮಃ ಖಂಡಃ

### ಏಳನೆಯ ಖಂಡವು

———

ಮನುಷ್ಯನಾಮಾನ್ಯುತ್ತರಾಣಿ ಪಂಚವಿಂಶತಿರ್ಮನುಷ್ಯಾಃ ಕಸ್ಮಾನ್ಮತ್ವಾ ಕರ್ಮಾಣಿ ಸೀವ್ಯಂತಿ ಮನಸ್ಯಮಾನೇನ ಸೃಷ್ಟಾ ಮನಸ್ಯತಿಃ ಪುನರ್ಮನಸ್ವೀಭಾವೇ ಮನೋರಪತ್ಯಂ ಮನುಷೋ ವಾ ತತ್ರ ಪಂಚಜನಾ ಇತ್ಯೇತಸ್ಯ ನಿಗಮಾ ಭವಂತಿ ॥

———

ಈ ಕೆಳಗೆ ಹೇಳಿರುವ ಇಪ್ಪತ್ತೈದೂ ಮನುಷ್ಯನಾಮುಗಳು (ಮನುಷ್ಯರ ಹೆಸರುಗಳು)

(೧) ಮನುಷ್ಯಾಃ (೨) ನರಃ (೩) ಧವಾಃ (೪) ಜನ್ತವಃ (೫) ವಿಶಃ (೬) ಕ್ಷಿತಯಃ (೭) ಕೃಷ್ಟಯಃ (೮) ಚರ್ಷಣಯಃ (೯) ನಹುಷಃ (೧೦) ಹರಯಃ (೧೧) ಮರ್ಯಾಃ (೧೨) ಮರ್ತ್ಯಾಃ (೧೩) ಮರ್ತಾಃ (೧೪) ವ್ರಾತಾಃ (೧೫) ತುರ್ವಶಾಃ (೧೬) ದ್ರುಹ್ಯವಃ (೧೭) ಆಯವಃ (೧೮) ಯದವಃ (೧೯) ಅನವಃ (೨೦) ಪೂರವಃ (೨೧) ಜಗತಃ (೨೨) ತಸ್ಥುಷಃ (೨೩) ಪಂಚಜನಾಃ (೨೪) ವಿವಸ್ವಂತಃ (೨೫) ಪೃತನಾಃ ॥

ಇತಿ ಪಂಚವಿಂಶತಿರ್ಮನುಷ್ಯನಾಮಾನಿ ॥೨॥

**(೧) ಮನುಷ್ಯಾಃ ॥ 'ಮತ್ವಾ ಕರ್ಮಾಣಿ ಸೀವ್ಯನ್ತಿ' (ನಿರು-೩-೭)**

ಎರಡು ಧಾತುವಿನಿಂದ ಈ ಪದವಾಗಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ. ಮತ್ವಾ ಎಂಬುದರಿಂದ ಮನ ಧಾತು, ಸೀವ್ಯನ್ತಿ ಎಂದುದರಿಂದ ಷಿವು ಧಾತು ಇವುಗಳಿಂದ ಈ ಪದವಾಗಿದೆ. ಪ್ರಸನ್ನಮನಸ್ಕನಾದ ಪ್ರಜಾಪತಿಯಿಂದ ಸೃಷ್ಟರಾದವರು. ಸತ್ವಪ್ರಧಾನವಾದ ಮನಸ್ಸಿನಿಂದ ಉಂಟಾದವರು ಎಂದರ್ಥ. 'ಸ ಪಿತೄನ್ ಸೃಷ್ಟ್ವಾ ಮನಸ್ಯದನು ಮನುಷ್ಯಾನಸೃಜತ' ಎಂದು ಶ್ರುತಿಯಲ್ಲಿಯೂ ಈ ಅರ್ಥಹೇಳಿದೆ. 'ಮನೋರ್ಜಾತಾವಞ್ಯತೌಷುಕ್ ಚ' (ಪಾ-ಸೂ-೪-೧-೧೬೧) ಸೂತ್ರದಿಂದ ಮನು ಶಬ್ದಕ್ಕೆ ಜಾತ್ಯುಪಾಧಿ ಇರುವಾಗ ಅಞಪ್ರತ್ಯಯ, ಷುಗಾಗಮ. ಞಿತ್ತಾದುದರಿಂದ ಆದಿವೃದ್ಧಿ. 'ಮನೋರಪತ್ಯಂ ಜಾತಿಶ್ಚೇ' ಕೇವಲ ಅಪತ್ಯಾರ್ಥವಿವಕ್ಷಾಮಾಡಿದಾಗ ಅಣ್‌ಪ್ರತ್ಯಯ ಬಂದು ಮಾನವ ಎಂದಾಗುತ್ತದೆ. ಅಥವಾ ಮನುಷ ಎಂಬ ಅಕಾರಾಂತಪದವಿದೆ. 'ಸಮಿದ್ಧೋ ಅದ್ಯ ಮನುಷೋ ದುರೋಣೇ' ಎಂಬ ಮಂತ್ರದಲ್ಲಿ ಯಾವ ಉಪಾಧಿಯೂ ಇಲ್ಲದೆ ದೃಷ್ಟವಾಗಿದೆ.

ಪೃಷೋದರಾದಿಗಣಪಠಿತವಾದುದರಿಂದ ಈ ಶಬ್ದ ಮನುಷ್ಯ ಎಂಬರೂಪವಾಗುತ್ತದೆ. ಉದಾ:—**'ಸ್ವಾರ್ಹಾ ವಸು ಮನುಷ್ಯಾ ದದೀಮಹಿ'** (ಋ. ಸಂ. ೨-೬-೩೦-೪) **'ದೈವ್ಯಾಃ ಶಮಿತಾರ ಆರಭಧ್ವಮುತ ಮನುಷ್ಯಾಃ** (ಐ-ಬ್ರಾ-೨-೧-೬) ||

(೨) **ನರಃ** || ಣೀಞ್ ಪ್ರಾಪಣೇ ಧಾತು. ಧಾತ್ವಾದಿಗೆ ನತ್ವ. ' ನಯತೇರ್ಡಿಚ್ಚ ' (ಉ-೨-೮೩) ಸೂತ್ರದಿಂದ ಋನ್‌ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ (ಈ)-ಲೋಪ. ನೃ ಶಬ್ದವಾಗುತ್ತದೆ. ಪ್ರಥಮಾ ಬಹುವಚನದಲ್ಲಿ 'ಜಸಿಚ' ಸೂತ್ರದಿಂದ ಗುಣ ನರಃ ಎಂದು ರೂಪವಾಗುತ್ತದೆ. ಸಂಸಾರ ಚಕ್ರವನ್ನು ನಡೆಸುವವನು. ಇವನೂ ಪದಾರ್ಥವಾದುದರಿಂದ ಒಂದುಕಡೆಯಿಂದ ಒಂದುಕಡೆಗೆ ಒಯ್ಯಲ್ಪಡುವನು. ಅಥವಾ ಗಾತ್ರವಿಕ್ಷೇಪಾರ್ಥಕವಾದ ನೃತೀಧಾತುವಿಗೆ ಬಹುಲಗ್ರಹಣದಿಂದ ಋನ್. ಡಿತ್ತಾದುದರಿಂದ ಟಿಲೋಪ. (ಋತ್) ಕಾರ್ಯಸಮಯದಲ್ಲಿ ಯಾವಾಗಲೂ ಅಂಗಚಲನೆಯನ್ನೂ ಮಾಡುತ್ತಾನೆ. ಉದಾ:— **ತಂ ತ್ವಾ ನರಃ ಪ್ರಥಮಂ ದೇವಯಂತಃ '** (ಋ. ಸಂ. ೪-೪-೩೫-೨) **ತ್ವಾ ವೃತ್ರೇಷ್ವಿಂದ್ರ ಸತ್ಪತಿಂ ನರಃ '** (ಋ. ಸಂ. ೪-೭-೨೭-೧)

(೩) **ಧವಾಃ** || ಕಂಪನಾರ್ಥಕವಾದ ಧುಞ್ ಅಥವಾ ಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಧಾತುವಿನ ಉಕಾರಕ್ಕೆ ಗುಣ, ಅವಾದೇಶ. ಧವಾಃ ಬಹುವಚನಾಂತರೂಪ. ಅವಯವಗಳನ್ನು ಕಂಪಿಸುವವನು, ಅಥವಾ ಮೃತ್ಯುವಿನಿಂದ ನಡುಗುವವನು ಎಂದರ್ಥ. ಅಥವಾ 'ಧಾವು-ಗತಿಶುದ್ಧ್ಯೋಃ' ಧಾತು ಇದಕ್ಕೆ ಅಚ್‌ಪ್ರತ್ಯಯ ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಉಪಧಾದಹ್ರಸ್ವ. ಅತ್ತಿಂದ ಇತ್ತ ಶರಣಾರ್ಥಿಯಾಗಿ ತಿರುಗುವವನು ಎಂದರ್ಥ. ಉದಾಹರಣೆ—**'ಕೋ ವಾಂ ಶಯುತ್ರಾ ವಿಧವೇವ ದೇವರಮ್'** (ಋ. ಸಂ. ೭-೮-೧೮-೨) ||

(೪) **ಜಂತವಃ** || ಜನೀ-ಪ್ರಾದುರ್ಭಾವೇ. ಧಾತು. "ಕಮಿಮನಿಜನಿ ಗಾಭಾ—" (ಉ. ೧-೭೦) ಸೂತ್ರದಿಂದ ತುಪ್ರತ್ಯಯ. ನಕಾರಕ್ಕೆ ಅನುಸ್ವಾರಪರಸವರ್ಣ. ಹುಟ್ಟತಕ್ಕವುಗಳು ಎಂದರ್ಥ. ಉದಾ:—**"ಇರಜ್ಯನ್ನಗ್ನೇ ಪ್ರಥಯಸ್ವ ಜನ್ತುಭಿಃ"** (ಋ. ಸಂ. ೮-೭-೨೮-೪) ||

(೫) **ವಿಶಃ** || ವಿಶ-ಪ್ರವೇಶನೇ. ಧಾತು. ಕ್ವಿಪ್‌ಪ್ರತ್ಯಯ. ವಿಶ್ ಶಕಾರಾಂತಪದವಾಗುತ್ತದೆ. ವಿಶಃ ಬಹುವಚನಾಂತರೂಪ. ಎಲ್ಲಾ ಕಾರ್ಯಗಳಲ್ಲಿಯೂ ಅಧಿಕಾರಿಯಾಗಿ ಪ್ರವೇಶಿಸುತ್ತಾನೆ. ತನ್ನ ಭೂಮಿರಾಜಾದಿಗಳನ್ನು ಆಶ್ರಯಿಸುತ್ತಾನೆ ಉದಾ:—**"ವಿಶೋ ರಾಜಾನ ಮುಪತಸ್ಥುರ್ಋಗ್ಮಿಯಮ್"** (ಋ. ಸಂ. ೪-೫-೧೦-೪) ||

(೬) **ಕ್ಷಿತಯಃ** || ಕ್ಷಿ-ನಿವಾಸಗತ್ಯೋಃ ಧಾತು. **"ಕ್ತಿಚ್‌ಕ್ತೌ ಚ ಸಂಜ್ಞಾಯಾಮ್"** (ಪಾ. ಸೂ. ೩-೩-೧೭೪) ಸೂತ್ರದಿಂದ ಕ್ತಿಚ್‌ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಬಹುವಚನಾಂತರೂಪ. ಕ್ಷಿತಯಃ ಭೂಮಿಯಲ್ಲಿ ವಾಸಮಾಡುತ್ತಾನೆ. ಉದಾ:—**"ಅನು ಕ್ರೋಶಂತಿ ಕ್ಷಿತಯೋ ಭರೇಷು"** (ಋ. ಸಂ. ೩-೭-೧೧-೫)

(೭) **ಕೃಷ್ಟಯಃ** || ಕೃಷ-ವಿಲೇಖನೇ. ಧಾತು. ಭಾವಾರ್ಥದಲ್ಲಿ ಕ್ತಪ್ರತ್ಯಯ ಕರ್ಷಣವೆಂದರ್ಥ. ಇಲ್ಲಿ ಕೃಷ್ಟ ಪದದಿಂದ ಕರ್ಮಸಾಮಾನ್ಯಾರ್ಥ ತೋರುತ್ತದೆ. ಈ ಕರ್ಮ ಉಳ್ಳವರು ಎಂಬರ್ಥದಲ್ಲಿ 'ಲುಗಕಾರೇಕಾರರೇಫಾಶ್ಚ ವಕ್ತವ್ಯಾಃ' ಎಂಬ ವಾರ್ತಿಕದಿಂದ ಇಕಾರಪ್ರತ್ಯಯ. 'ಯಸ್ಯೇತಿಚ' ಅಕಾರಲೋಪ. ಕೃಷ್ಟಿಃ. ಬಹುವಚನಾಂತರೂಪ. ಕೃಷ್ಟಯಃ. 'ಇದು ಮನುಷ್ಯರ ಹೆಸರು, ಕರ್ಮವುಳ್ಳವರಾದುದರಿಂದ ಕೃಷ್ಟಿಗಳಾಗುತ್ತಾರೆ' ಎಂದು ಭಾಷ್ಯದಲ್ಲಿ (೩-೪-೫-೧) ಹೇಳಿದೆ. ಇದೇ ಅರ್ಥ ಭಗವದ್ಗೀತೆಯಲ್ಲಿ 'ನೈವ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' ಎಂದು ಹೇಳಿದೆ. ಅಥವಾ ಶುದ್ಧವಾದ ಕೃಷಧಾತುವು ವಿಸ್ತಾರ್ವಕಾರ್ಥವನ್ನು ತಿಳಿಸುತ್ತದೆ. ಕರ್ಮಣಿಯಲ್ಲಿ ಕ್ತಪ್ರತ್ಯಯ. ವಿವಿಧವಾದ ಕ್ರಿಯೆಯುಳ್ಳದ್ದು ಶರೀರವೆಂದರ್ಥ. ಇದು ಉಳ್ಳದ್ದೂ ಎಂಬ ಅರ್ಥದಲ್ಲಿ ಹಿಂದಿನಂತೆ ಮತ್ವರ್ಥಕೊಡುವ ಇಪ್ರತ್ಯಯ. ವಿಕೃಷ್ಟದೇಹವುಳ್ಳವರು ಮನುಷ್ಯರು. ಕಾಲಿನಿಂದ

ಭೂಮಿಯನ್ನು ಕೆರೆಯುವವರು ಎಂದು ಮಾಧವರ ವ್ಯಾಖ್ಯಾನ. ವಶೀಕರಣ ಮಾಡಿಕೊಳ್ಳುವವರು ಎಂದು ಭಟ್ಟಭಾಸ್ಕರಮಿತ್ರರ ಮತ. ಉದಾ:—**"ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ" (ಋ. ಸಂ. ೩-೪-೫-೧) "ಸದ್ಯಶ್ಚಿದ್ಯಃ ಶವಸಾ ಪಂಚ ಕೃಷ್ಟೀಃ" (ಋ. ಸಂ. ೮-೮-೩೭-೩)** ||

(೮) **ಚರ್ಷಣಯಃ** || ಚರ-ಗತಿಭಕ್ಷಣಯೋಃ. ಧಾತು. 'ಅರ್ತಿಸೃಪ್ಪಧನ್ಯ—' (ಉ-೨-೯೫) ಸೂತ್ರದಿಂದ ಅನಿಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಷುಗಾಗಮ. ಚರ್ಷಣಿ ಎಂದಾಗುತ್ತದೆ. ಗಮನ ಸ್ವಭಾವವುಳ್ಳವರು. ಚರಣವುಳ್ಳವರು. ಅಥವಾ 'ಕೃಷೇರಾದೇಶ್ಚ ಚಃ' (ಉ-೨-೯೭) ಸೂತ್ರದಿಂದ ಕೃಷಧಾತುವಿಗೆ ಅನಿಪ್ರತ್ಯಯ. ಆದಿಯ ಕಕಾರಕ್ಕೆ ಚಕಾರಾದೇಶ. ಆಕರ್ಷಂತಿ ವಶೀಕರಣ ಮಾಡಿಕೊಳ್ಳುತ್ತಾರೆ ಎಂದರ್ಥ. ಸ್ಕಂದಸ್ವಾಮಿಯೂ ಸಕಲ ಪದಾರ್ಥವನ್ನು ನೋಡುವವರು ಎಂದು 'ಪಿತಾ ಕುಟಸ್ಯ ಚರ್ಷಣಿಃ' ಎಂಬ ಮಂತ್ರದಲ್ಲಿ ವ್ಯಾಖ್ಯಾನಮಾಡಿರುತ್ತಾನೆ. ಉದಾ:—

**"ಪ್ರ ಚರ್ಷಣಿಭ್ಯಃ ಪೃತನಾ ಹವೇಷು" (ಋ. ಸಂ. ೧-೭-೨೯-೧) "ಮಹಾಂ ಇಂದ್ರೋ ನೃಷದಾ ಚರ್ಷಣಿಪ್ರಾಃ"** ||

(೯) **ನಹುಷಃ** || ಣಹ-ಬಂಧನೇ ಧಾತು. 'ಣೋ ನಃ' ನತ್ವ. 'ಜನೇರುಸಿಃ' ಸೂತ್ರದಿಂದ ವಿಹಿತವಾದ ಉಸಿ ಪ್ರತ್ಯಯು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಪ್ರಥಮಾ ಬಹುವಚನದಲ್ಲಿ 'ನಹುಷಃ' ಎಂದು ರೂಪ. ಪೂರ್ವಕೃತ ಕರ್ಮಗಳಿಂದ ಸಂಸಾರದಲ್ಲಿ ಕಟ್ಟಲ್ಪಡುತ್ತಾರೆ. ಅಥವಾ ಕಟ್ಟುತ್ತಾರೆ ಎಂದರ್ಥ. ಉದಾಹರಣೆ—**"ಸಚಾ ಸನೇಷು ನಹುಷಃ ಸುವೀರಾಃ" (ಋ. ಸಂ. ೨-೧-೨-೩) "ಆಯಾತಂ ನಹುಷಸ್ಪರಿ" (ಋ. ಸಂ. ೫-೮-೨೫-೩)**

ಕೆಲವು ಕೋಶಗಳಲ್ಲಿ ಇದು ಅಕಾರಾಂತಪದವಾಗಿ ದೃಷ್ಟವಾಗಿದೆ. ಆಗ ನಹಧಾತುವಿಗೆ 'ಋನಹಿಭ್ಯಾಮುಷನ್' ಸೂತ್ರದಿಂದ ಉಷನ್‌ಪ್ರತ್ಯಯ. ಅರ್ಥವ್ಯತ್ಯಾಸವಿಲ್ಲ. ಉದಾಹರಣೆ—**"ಪ್ರಸಸ್ರಾಣಸ್ಯ ನಹುಷಸ್ಯ ಶೋಷಃ"** (ಋ. ಸಂ. ೪-೧-೪-೭)||

(೧೦) **ಹರಯಃ** || ಹರಣ, ಬಲಾತ್ಕಾರನೆಂಬ ಅರ್ಥಕೊಡುವ ಹೃಧಾತುವಿಗೆ "ಇನ್ ಸರ್ವಧಾತುಭ್ಯಃ" (ಉ. ೪-೧೧೮) ಸೂತ್ರದಿಂದ ಇನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ ಹರಿ ಎಂದಾಗುತ್ತದೆ. ಹರಯಃ ಬಹುವಚನಾಂತರೂಪ. ಪದಾರ್ಥಗಳನ್ನು ಒಯ್ಯುತ್ತಾನೆ. ಮೃತ್ಯುವಿನಿಂದ ಬಲಾತ್ಕಾರದಿಂದ ಒಯ್ಯಲ್ಪಡುತ್ತಾನೆ ಎಂದರ್ಥ. 'ಅಹಂ ಪ್ರಜಾಶ್ಚಾಕ್ರುಶತೀರ್ಹರಾಮಿ' ನಾನು ವ್ಯಥೆಯಿಂದ ಕೂಗುತ್ತಿರುವ ಜನರನ್ನು ಅಪಹರಿಸುತ್ತೇನೆ ಎಂದು ಮೃತ್ಯುವಾಕ್ಯವಿವೆ. ಮನುಷ್ಯಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೧೧) **ಮರ್ಯಾಃ** || (೧೨) **ಮರ್ತ್ಯಾಃ** || ಮೃಙ್-ಪ್ರಾಣತ್ಯಾಗೇ ಧಾತು. ಅಘ್ನ್ಯಾದಯಶ್ಚ (ಉ-೪-೧೧೮) ಸೂತ್ರದಿಂದ ಯತ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ವಿಕಲ್ಪವಾಗಿ ತುಡಾಗಮ. ಧಾತುವಿನ ಋಕಾರಕ್ಕೆ ಗುಣ. ಛಂದಸಿ ನಿಷ್ಟರ್ಕ್ಯ ದೇವಹೂಯ—(ಪಾ. ಸೂ. ೩-೧-೧೨೩) ಸೂತ್ರದಿಂದಲೂ ಮರ್ಯ ಎಂದು ಯತ್ಪ್ರತ್ಯಯಾಂತವಾಗಿ ನಿಪಾತಿತ ವಾಗಿದೆ. ಮೃಙ್‌ಧಾತುವಿಗೆ 'ಹಸಿಮೃಗ್ರಿರಾವಾ' (ಉ. ೨-೮೩) ಸೂತ್ರದಿಂದ ತನ್‌ಪ್ರತ್ಯಯ ಮರ್ತ ಎಂದಾಗುತ್ತದೆ. ಇದರ ಮೇಲೆ 'ವಸ್ತ್ವಮರ್ತ ಯವಿಷ್ಟೇಭ್ಯಶ್ಛಂದಸಿ' ಎಂಬ ವಚನದಿಂದ ಸ್ವಾರ್ಥದಲ್ಲಿ ಯತ್‌ಪತ್ರಯ 'ಯಸ್ಯೇತಿ ಚ' ಪೂರ್ವದ ಅಕಾರಕ್ಕೆ ಲೋಪ. ಮರಣಸ್ವಭಾವವುಳ್ಳವರು ಮರ್ತ್ಯಾಃ ಉದಾ :— **"ಕೋ ನು ಮರ್ಯಾ ಅಮಿಮಿತ"** (ಋ. ಸಂ.

೬-೩-೪೮-೩೭) ಮರ್ಯನ್ನ ಯೋಷಾ ಕೃಣುತೇ ಸಧಸ್ಥಆ ‘ (ಋ. ಸಂ. ೭-೮-೧೮-೨)" ಮರ್ಯ್ಯಾಯೋಷ ಕನ್ಯಾ ಶಶ್ವಚ್ಚೈಶ-(ಋ. ಸಂ. ೩-೨-೧೩-೫) ॥ ‘ ಯೋ ಮರ್ತ್ಯೇಷ್ವಮೃತೋ ಋತಾವಾ ’ (ಋ. ಸಂ. ೩-೪-೧೬-೧)

(೧೩) ಮರ್ತಾಃ ॥ ಪೂರ್ವೋಕ್ತವಾದ ಮೃಙ್‌ಧಾತುವಿಗೆ ತನ್‌ಪ್ರತ್ಯಯ ಮರಣಶೀಲರೆಂದರ್ಥ. ಉದಾ:— ಮಾ ನೋ ಮರ್ತಾ ಅಭಿದ್ರುಹನ್ (ಋ. ಸ. ೧-೧-೧೦-೫೬) “ ತಂಮರ್ತಾ ಅಮರ್ತ್ಯನಮ್ ” (ಋ. ಸ. ೮-೬-೨೫-೧)

(೧೪) ವ್ರಾತಾಃ ॥ ವೃಞ್-ವರಣೇ ಧಾತು “ ತಾತವ್ರಾತಲಾತಸಃಪಿತ್ತ—ಎಂದು ಭೋಜಸೂತ್ರದಿಂದ ಕೃತ್ ಪ್ರತ್ಯಯ, ಆಡಾಗಮ ನಿಪಾತಿತವಾಗಿದೆ. ತಮಗೆ ಅಭಿಮತವಾದ ವರವನ್ನು ತಪಃಸಂತುಷ್ಟರಾದ ದೇವತೆಗಳಿಂದ ಪ್ರಾರ್ಥಿಸುತ್ತಾರೆ, ಯಜ್ಞಾದಿಗಳಲ್ಲಿ ವರಣೆಹೊಂದುತ್ತಾರೆ ಎಂದರ್ಥ. ಅಥವಾ ಧಾನ್ಯಾದಿಸಂಚಯಕ್ಕೆ ವ್ರಾತನೆಂದು ಹೆಸರು. ವ್ರಾತವುಳ್ಳವರೂ ವ್ರಾತರೇ. ಅರ್ಶಆದಿಗಣಪಠಿತವಾದುದರಿಂದ ಮತ್ವರ್ಥದಲ್ಲಿ ಅಚ್‌ಪ್ರತ್ಯಯ ಅಥವಾ ವ್ರಾತಶಬ್ದ ಕರ್ಮನಾಮದಲ್ಲಿ ಪಠಿತವಾಗಿದೆ. (ನಿಘ-೨-೧) ಅಥವಾ ಅನ್ನ ವ್ರಾತವಾಗುತ್ತದೆ. ಇವುಗಳ ಸಂಬಂಧವುಳ್ಳವರು ವ್ರಾತರು “ ತಸ್ಯೇದಮ್ ” ಸೂತ್ರದಿಂದ ಸಂಬಂಧಾರ್ಥದಲ್ಲಿ ಅಣ್‌ಪ್ರತ್ಯಯ ‘ ಕರ್ಮಣಾ ಜಾಯತೇ ’ ಜಂತುಃ ಕರ್ಮಣೈವ ವಿಮುಚ್ಯತೇ ಇತ್ಯಾದಿವಚನದಿಂದ ಕರ್ಮದಲ್ಲಿ ಅಧಿಕಾರಿಯಾದುದರಿಂದ ಮನುಷ್ಯನಿಗೆ ಕರ್ಮಸಂಬಂಧಿತ್ವ ಸಿದ್ಧವಾಗುತ್ತದೆ. ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಅನ್ನದಿಂದಲೇ ಅಭಿವೃದ್ಧಿಹೊಂದುತ್ತವೆಯೆಂದು ತೈತ್ತರೀಯದಲ್ಲಿ ಹೇಳಿದೆ. (ತೈ. ಉ. ೧-೨) “ ಅನ್ನಾತ್ ರೇತೋ ರೇತಸೋ ಪುರುಷಃ ಎಂದೂ ಅಲ್ಲಿಯೇ ಹೇಳಿದೆ. ಇದರಿಂದ ಅನ್ನಸಂಬಂಧವೂ ಮನುಷ್ಯನಿಗೆ ಸ್ಪಷ್ಟವಾಗಿದೆ. ಉದಾ :— ‘ **ಪಂಚ ವ್ರಾತಾ ಅಪಸ್ಯವಃ** ” (ಋ. ಸಂ. ೬-೮-೩-೨) ॥

(೧೫) ತುರ್ವಶಾಃ ॥ ತುರ್ವೀ-ಹಿಂಸಾಯಾಮ್ ಧಾತು. ‘ ಕಲೇರಶಚ್ ’ ಎಂಬ ಭೋಜಸೂತ್ರವಿಹಿತವಾದ ಅಶಚ್‌ಪ್ರತ್ಯಯ ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಪ್ರಾಣಿಗಳನ್ನು ಹಿಂಸಿಸುವನು, ರೋಗಾದಿಗಳಿಂದ ಪೀಡಿಸಲ್ಪಡುವನು. ಅಥವಾ ತೂರತ್ವರಣಹಿಂಸನಯೋಃ ಧಾತು. ಇದಕ್ಕೆ ಕ್ವಿಪ್ ಬಂದಾಗ ತೂರ್ ಎಂದಾಗುತ್ತದೆ. ಅಶಧಾತುವಿಗೆ ಪಚಾದಿಪಠಿತವಾದುದರಿಂದ ಅಚ್ ಬಂದರೆ ಅಶ ಎಂದಾಗುತ್ತದೆ. ‘ ತೂರ್ಣಂ ಅಶ್ನುವತೇ ’ ತೂರ್‌ಅಶ. ಪೃಷೋದರಾದಿಗಣ ಪಠಿತವಾದುದರಿಂದ ಪೂರ್ವಪದಕ್ಕೆ ಹ್ರಸ್ವಃ. ವಕಾರ ಅಧಿಕವಾಗಿ ಬರುತ್ತದೆ. ಹೊಂದಬೇಕಾದುದನ್ನು ಬೇಗ ಹೊಂದುತ್ತಾನೆ ಎಂದರ್ಥ. ಅಥವಾ ಇಚ್ಛಾರ್ಥಕವಾದ ವಶಧಾತುವಿಗೆ ‘ ವಶಿರಣ್ಯೋರುಪಸಂಖ್ಯಾನಮ್ ’ ಎಂಬ ವಾರ್ತಿಕದಿಂದ ಅಪ್ ಪ್ರತ್ಯಯ. ತುರ್ವಶನೆಂದರೆ ಕಾಮ. ಕಾಮವುಳ್ಳವರು ಮನುಷ್ಯರು. ಅಥವಾ ‘ ಚತುರ್ಷು ಧರ್ಮಾರ್ಥಕಾಮಮೋಕ್ಷೇಷು ವಶಃ ಯೇಷಾಂ ತೇ ಚತುರ್ವಶಾಃ ’ ಪೃಷೋದರಾದಿಗಣಪಠಿತವಾದುದರಿಂದ ಚಕಾರಲೋಪ. ಸ್ವಾಧೀನ ಪುರುಷಾರ್ಥ ಉಳ್ಳವರೆಂದರ್ಥ. ಉದಾಹರಣೆ—‘ **ತುರ್ವಶೇಷ್ವಮನ್ಮಹಿ** ’ (ಋ. ಸಂ ೫-೭-೩೩-೪)

(೧೬) ದ್ರುಹ್ಯವಃ ॥ ದ್ರುಹ ಜಿಘಾಂಸಾಯಾಮ್ ಧಾತು. ಇದಕ್ಕೆ ಕ್ವಿಪ್ ಬಂದರೆ ಲಘೂಪಧಗುಣ ಬಂದು ದ್ರೋಹವೆಂದಾಗುತ್ತದೆ. ‘ದ್ರೋಹಂ ಪರೇಷಾಂ ಇಚ್ಛಂತಿ’ ಯಾವಾಗಲೂ ಇತರರಿಗೆ ದ್ರೋಹವನ್ನು ಬಯಸುವುದು ಮನುಷ್ಯನ ಸ್ವಭಾವ. ‘ ಛಂದಸಿ ಪರೇಚ್ಛಾಯಾಮಪಿ ’ ಎಂಬ ವಾರ್ತಿಕದಿಂದ ದ್ರುಹ್‌ಧಾತುವಿಗೆ ಕ್ಯಚ್‌ಪ್ರತ್ಯಯ. ಯ ಉಳಿಯುತ್ತದೆ. ಕಿತ್ತಾದುದರಿಂದ ಗುಣವಿಲ್ಲ. ‘ ಕ್ಯಾ ಛಂದಸಿ (ಪಾ. ಸೂ. ೩-೨-೧೭೦) ಸೂತ್ರದಿಂದ ಛಂದಸ್ಸಿನಲ್ಲಿ ಕ್ಯಜಂತದ ಮೇಲೆ

ಉಪ್ರತ್ಯಯ. ಬಹುವಚನದಲ್ಲಿ ನ್ರುಹ್ಯವಃ ಎಂದಾಗುತ್ತದೆ. ಉದಾಹರಣೆ—'ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ' (ಋ. ಸಂ. ೫-೨-೨೫-೧)

(೧೭) ಆಯವಃ ॥ ಗತ್ಯರ್ಥಕವಾದ ಇಣ್‌ಧಾತುವಿಗೆ "ಛಂಧಸೀಣಃ" (ಉ-೧-೨) ಸೂತ್ರದಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ ಧಾತುವಿಗೆ ವೃದ್ಧಿ. ಆಯಾದೇಶ. ಆಯು ಉಕಾರಾಂತಪದ. ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಾರೆ, ಗಮನ ಸ್ವಭಾವದವರು. ಉದಾ:—

"ಬಾಹು ಭ್ಯಾಮಗ್ನಿಮಾಯವೋಽಜನಂತ" (ಋ. ಸಂ. ೭-೬-೨-೫) ಆಂಯೋರ್ಹ ಸ್ಕಂಭ ಉಪಮಸ್ಯ ನೀಳೇ' (ಋ-ಸಂ-೭-೫-೩೬-೬) ಅಂತೋದಾತ್ತವಾದ ಆಯುಶಬ್ದ ನೂತ್ರ ಮನುಷ್ಯವಾಚ್ಯಕವೆಂದು ಮಾಧವರ ಭಾಷ್ಯ.

(೧೮) ಯದವಃ ॥ ಯಮು-ಉಪರಮೇ. ಧಾತು. "ಯಮೇರ್ದುಕ್" ಭೋಜ ಸೂತ್ರದಿಂದ ಇದಕ್ಕೆ ದುಕ್ ಪ್ರತ್ಯಯ. ಕಿತ್ತಾದುದರಿಂದ 'ಅನುದಾತ್ತೋಪದೇಶವನತಿ ತನೋತ್ಯಾದೀನಾಂ' (ಪಾ. ಸೂ. ೬-೪-೩೭) ಸೂತ್ರದಿಂದ ಧಾತು ಮಕಾರಕ್ಕೆ ಲೋಪ. ಯದು ಉಕಾರಾಂತಪದ. ಕುಮಾರ್ಗದಲ್ಲಿದ್ದವರು ಆಚಾರ್ಯನಿಂದ, ರಾಜನಿಂದ ಶಿಕ್ಷಿಸಲ್ಪಡುತ್ತಾರೆ ಎಂದರ್ಥ. ನಿಯಮ್ಯರು. ಉದಾಹರಣೆ—"ಯೋ ಅಸ್ತಿ ಯಾದ್ವಃ ಪಶುಃ" (ಋ. ಸಂ. ೫-೭-೧೬-೧) 'ಯದಷು ಭವಃ ಯಾದ್ವಃ' ಯದುವಿನಲ್ಲಿ ಉಂಟಾದವರೆಂದರ್ಥ.

(೧೯) ಅನವಃ ॥ ಅನ-ಪ್ರಾಣನೇ. ಧಾತು. 'ಅಣಶ್ಚ' (ಉ-೧-೮) ಸೂತ್ರದಿಂದ ವಿಹಿತವಾದ ಉಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಪ್ರಾಣಧರಿಸಿರುವವರು. ಮನುಷ್ಯರಿಗೆ ಜ್ಞಾನವಿರುವುದರಿಂದ ಧರ್ಮಾದ್ಯನುಷ್ಠಾನ ಮಾಡುವುದರಿಂದ ಇವರು ಬದುಕಿರುವುದು ಸಾರ್ಥಕವಾಗಿರುತ್ತದೆ. ಪಶ್ವಾದಿಗಳ ಪ್ರಾಣಧಾರಣೆ ಜ್ಞಾನವಿಲ್ಲದಿರುವುದರಿಂದ ನಿಷ್ಫಲ. ಇದೇ ಉಪನಿಷತ್ತಿನಲ್ಲಿಯೂ 'ತಸ್ಯ ಯು ಆತ್ಮಾನಂ ವಿಸ್ತರಂ ವೇದ' ಇತ್ಯಾದಿ ವಾಕ್ಯಗಳಿಂದ ವೈಶಿಷ್ಟ್ಯ ಹೇಳಿದೆ. ಉದಾಹರಣೆ—

"ಅನವಸ್ತೇ ರಥಮಶ್ವಾಯ ತಕ್ಷನ್" (ಋ. ಸಂ. ೪-೧-೨೯-೪) ॥

(೨೦) ಪೂರವಃ ॥ ಪೂರೀ-ಆಪ್ಯಾಯನೇ ಧಾತು. "ಭೃಮೃಶೀತೃಚರಿ—" (ಉ-೧-೭) ಸೂತ್ರದಿಂದ ವಿಹಿತವಾದ ಉಪ್ರತ್ಯಯ ಬರುತ್ತದೆ. ಬಹುವಚನಾಂತರೂಪ. ಪೂರೈಸಲ್ಪಡುವ ಕಾಮನೆಯುಳ್ಳವರು ಎಂದರ್ಥ. ಉದಾಹರಣೆ— "ಯಂ ಪೂರವೋ ವೃತ್ರಹಣಂ ಸ ಚಂತೇ" (ಋ. ಸಂ. ೧-೪-೨೫-೬)

(೨೧) ಜಗತಃ॥ ಗತ್ಯರ್ಥಕ ಗಮ್‌ಧಾತುವಿಗ "ವರ್ತಮಾನೇ ಪೃಷದ್ ಬೃಹತ್ ಮಹತ್‌ಶತೃವಚ್ಚ" (ಉ.೨-೭೮) ಸೂತ್ರದಿಂದ ಶತೃಪ್ರತ್ಯಯ ಬಂದು ನಿಪಾತಿತವಾಗಿದೆ. ದೇಶದಿಂದ ದೇಶಕ್ಕೆ ಹೋಗುವ ಸ್ವಭಾವವುಳ್ಳವರು. ಉದಾಹರಣೆ— "ಯದೇಷಾಮುಗ್ರಂ ಜಗತಾಮಿರಜ್ಯಸಿ" (ಋ. ಸ. ೮-೩-೬-೨)

(೨೨) ತಸ್ಥುಷಃ ॥ ಷ್ಠಾ-ಗತಿನಿವೃತ್ತೌ ಧಾತು. "ಛಂದಸಿ ಲುಜ್‌ಲಜ್‌ಲಿಟಃ" "ಕ್ವಸುಶ್ಚ" ಸೂತ್ರದಿಂದ ಲಿಟ್ ಸ್ಥಾನದಲ್ಲಿ ಕ್ವಸುಪ್ರತ್ಯಯ. "ವಸ್ವೇಕಾಜಾದ್ಘಸಾಮ್" ಸೂತ್ರದಿಂದ ವಸುಪ್ರತ್ಯಯಕ್ಕೆ ಇಡಾಗಮ. ಲಿಟನಸ್ಥಾನದಲ್ಲಿ ಬಂದುದ ರಿಂದ 'ಲಿಟಿಧಾತೋರನಭ್ಯಾಸಸ್ಯ' ಸೂತ್ರದಿಂದ ಧಾತುವಿಗೆ ದ್ವಿತ್ವಾದಿ. ತಸ್ಥಾ + ಇವಸ್ ಎಂದಿರುವಾಗ 'ಆತೋಲೋಪಃ—'

ಸೂತ್ರದಿಂದ ಆಕಾರಲೋಪ. ತಸ್ಥಿವಸ್ ಎಂದು ಸಕಾರಾಂತಪದವಾಗುತ್ತದೆ. ವ್ಯತ್ಯಯದಿಂದ ಜಸ್‌ಪ್ರತ್ಯಯಕ್ಕೆ ದ್ವಿತೀಯಾಶಸ್ ಬರುತ್ತದೆ. ಆಗ 'ವಸೋಃ ಸಂಪ್ರಸಾರಣಮ್' (ಪಾ. ಸೂ. ೬-೪-೧೩೧) ಸೂತ್ರದಿಂದ ಸಂಪ್ರಸಾರಣ ವಕಾರಕ್ಕೆ ಉಕಾರ ಬಂದರೆ ಪೂರ್ವರೂಪ. ತಸ್ಥುಸ್+ಅಸ್. 'ಶಾಸಿವಸಿಘಸೀನಾಂ ಚ' ಸೂತ್ರದಿಂದ ವಸಿನ ಸಕಾರಕ್ಕೆ ಷತ್ವ. ತಸ್ಥುಷಃ. ಇವನಲ್ಲಿ ಧರ್ಮವು ಪ್ರತಿಷ್ಠಿತವಾಗಿರುತ್ತದೆ ಎಂದರ್ಥ. ಉದಾಹರಣೆ—"**ಚರತಂ ಪರಿ ತಸ್ಥುಷಃ**"ಡಿ( **ಋ-ಸಂ-೧-೧-೧೧-೧**) ಇಲ್ಲಿ ಉವಟಾಚಾರ್ಯರು "ತಸ್ಥುಷಃ ಎಂದರೆ ಮನುಷ್ಯರು. ಋತ್ವಿಗ್ಯಜಮಾನರು" ಎಂದು ವ್ಯಾಖ್ಯಾನಮಾಡಿರುತ್ತಾರೆ.

(೨೩) **ಪಂಚಜನಾಃ** ‖ '**ಪಂಚಜನಾ ಮಮ ಹೋತ್ರಂ ಜುಷಧ್ವಮ್**' ಎಂಬ ಮಂತ್ರದಲ್ಲಿ ಅನೇಕರು ಅನೇಕ ರೀತಿಯಾಗಿ ವ್ಯಾಖ್ಯಾನಮಾಡಿರುತ್ತಾರೆ. ಗಂಧರ್ವ, ಪಿತೃಗಳು, ದೇವತೆ, ಅಸುರ, ರಕ್ಷಸುಗಳು ಪಂಚಜನರೆಂದು ಕೆಲವರು. ನಾಲ್ಕುವರ್ಣದವರು ಮತ್ತು ನಿಷಾದ (ಬೇಡ) ಪಂಚಮ ಸೇರಿ ಪಂಚಜನರೆಂದು ಉಪಮನ್ಯುಮತಾನುಯಾಯಿಗಳು. ಮನುಷ್ಯರೇ ಪಂಚಜನರಾಗಬೇಕೆಂದು ಹಲವರ ಅಭಿಪ್ರಾಯ. ಇಲ್ಲಿ ಎರಡು ಪದಗಳಿವೆ. ಪೃಚೀ-ಸಂಪೃಕ್ತೇ ಧಾತು ಅದಕ್ಕೆ ಕನಿನ್. ಬಹುಲಗ್ರಹಣದಿಂದ ಋಕಾರಕ್ಕೆ+ಅಕಾರ ನಕಾರ. ಅಧಿಕವಾಗಿ ಬರುತ್ತವೆ. ಭೋಜರಾಜನು ವಿಸ್ತಾರಾರ್ಥಕ ಪಚಿ ಧಾತುವಿಗೆ ಕನ್‌ಪ್ರತ್ಯಯ ಹೇಳುತ್ತಾನೆ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಏಕಾದಿ ಸಂಖ್ಯೆಗಿಂತ ವಿಸ್ತಾರವಾದದ್ದು, ಅಧಿಕವಾದದ್ದು ಪಂಚಸಂಖ್ಯಾ. ಜಾಯಂತೇ ಇತಿ ಜನಾಃ ಜನೀಧಾತುವಿಗೆ ಅಚ್‌ಪ್ರತ್ಯಯ. ಪಂಚಭೂತಗಳಿಂದ ಹುಟ್ಟಿದವರು "ಪಂಚಜನಾಃ" ಎಂದು ಕ್ಷೀರಸ್ವಾಮಿ.

೨೪. **ವಿವಸ್ವಂತಃ** ‖ ವಸ-ನಿವಾಸೇ ಧಾತು, ಅನ್ಯೇಭ್ಯೋಽಪಿ ದೃಶ್ಯಂತೇ' ' ಸೂತ್ರದಿಂದ ವಿಚ್‌ಪ್ರತ್ಯಯ ಭಾವಾರ್ಥ ದಲ್ಲಿ ಬರುತ್ತದೆ. ವಸ್ ಸಾಂತಪದವಾಗುತ್ತದೆ. 'ವಿವಿಧಂ ವಸನಂ' ನಾನಾರೀತಿಯಾದ ವಾಸ. ವಿ. ಉಪಸರ್ಗ ವಿವಃ. ಇದು ಉಳ್ಳವರು. ವಿವಸ್ವಂತಃ ಬಹುವಚನಾಂತರೂಪ. ಯಾವಮನುಷ್ಯನಿಗಾದರೂ ವಿವಸನ ಇದ್ದೇ ಇರುತ್ತದೆ. ಮತುಪಿನ ಮಕಾರಕ್ಕೆ ಅದುಪಧೆಯಾದುದರಿಂದ ವತ್ವ ಬಂದಿದೆ. ವಿವಸ್ವತ್ ಶಬ್ದವು ಸೂರ್ಯವಾಚಕವಾಗಿದ್ದರೆ ಆದ್ಯುದಾತ್ತವಾಗಿಯೂ ಮನುಷ್ಯ ವಿಶೇಷಯಜಮಾನಾದಿಗಳು ವಾಚ್ಯವಾದರೆ ಆಗ ಎರಡನೆಯ ಅಕ್ಷರ ಉದಾತ್ತವಾಗಿರುತ್ತದೆಂದು ಮಾಧವರ ವ್ಯಾಖ್ಯಾನ ಉದಾ– '**ಆವಿರ್ಭವ ಸೂಕ್ತರೂಪಾ ವಿವಸ್ವತೇ**' (**ಋ. ಸಂ. ೧-೨-೩೨-೩**) '**ಶಿವೋ ದೂತೋ ವಿವಸ್ವತಃ** (**ಋ. ಸಂ. ೬-೩-೨೨-೩**) ಇಲ್ಲಿ ವಿವಸ್ವತ್ ಪದಕ್ಕೆ ಯಜಮಾನನೆಂದು ಅರ್ಥ. '**ಮಹೋ ಜಾಯಾ ವಿವಸ್ವತೋನನಾಶ**' (**ಋ. ಸಂ. ೭-೩-೨೩-೧**) ಇಲ್ಲಿ ಸೂರ್ಯನೆಂದರ್ಥ.

(೨೫) **ಪೃತನಾಃ** ‖ 'ಪೃಜ್-ವ್ಯಾಯಾಮೇ' ಧಾತು. ಔಣಾದಿಕ ತನಪ್‌ಪ್ರತ್ಯಯ. ಕಿತ್ತ್ವಾತಿದೇಶದಿಂದ ಗುಣವಿಲ್ಲ. ಉದ್ಯೋಗಶೀಲನೆಂದರ್ಥ. ಉದಾಹರಣೆ—'**ತ್ವಯಾಧ್ಯಕ್ಷೇಣ ಪೃತನಾ ಜಯೇಯಮ್**' (**ಋ. ಸಂ. ೮-೭-೧೫-೧**) ‖

ಮನುಷ್ಯರು ಅನೇಕರಾದುದರಿಂದ ಬಹುವಚನಾಂತವಾಗಿಯೇ ನಿಘಂಟುಗಳಲ್ಲಿ ಹೇಳಿದೆ. 'ಮನುಷ್ಯಾ ಮಾನುಷಾ ಮರ್ತ್ಯಾ ಮನುಜಾ ಮಾನವಾ ನರಾಃ । ಸ್ಯುಃ ಪುಮಾಂಸಃ ಪಂಚಜನಾಃ ಪುರುಷಾಃ ಪೂರುಷಾ ವಿಶಃ' ಎಂದು ಅಮರ ಕಾರನೂ ಬಹುವಚನಾಂತವಾಗಿಯೇ ಹೇಳಿರುತ್ತಾನೆ.

ಹೀಗೆ ಇಪ್ಪತ್ತೈದು ಮನುಷ್ಯರ ಹೆಸರು.

ಮನುಷ್ಯಃ ಕಸ್ಮಾತ್ ಮತ್ವಾ ಕರ್ಮಾಣಿ ಸೀವ್ಯಂತಿ ಮನಸ್ಯಮಾನೇನ ಸೃಷ್ಟಾಃ।
ಮನಸ್ಯತಿಃ ಪುನರ್ಮನಸ್ವೀಭಾವೇ। ಮನೋರಪತ್ಯಂ। ಮನುಷೋ ವಾ।
ತತ್ರ ಪಂಚಜನಾ ಇತ್ಯೇತಸ್ಯ ನಿಗಮಾ ಭವಂತಿ ॥

ಮನುಷ್ಯಶಬ್ದದ ನಿಷ್ಪತ್ತಿಯು ಹೇಗೆ ಎಂದರೆ ಮನುಷ್ಯರು ಯೋಚಿಸಿ ತಮ್ಮ ಕೆಲಸಕಾರ್ಯಗಳಲ್ಲಿ ತೊಡಗುವವರು ಅಥವಾ ಬುದ್ಧಿವಂತನಾದ ಪ್ರಜಾಪತಿಯಿಂದ ಮನಸ್ಸಿನಲ್ಲಿ ಯೋಚಿಸಿ ಸೃಷ್ಟಿಮಾಡಲ್ಪಟ್ಟವರು. ಮನಸ್ಯತಿ ಎಂಬ ಶಬ್ದವು (ಮನಸ್ಸಿನಲ್ಲಿ) ಬುದ್ಧಿವಂತನು ಎಂಬರ್ಥವನ್ನು ಸೂಚಿಸುತ್ತದೆ. ಅಥವಾ ಮನುಷ್ಯಶಬ್ದವು ಮನುವಿನಿಂದ ಉತ್ಪನ್ನರಾದವರು ಎಂಬರ್ಥವನ್ನೂ ಸೂಚಿಸುವುದು. ಅಥವಾ ಮನುಷಃ ಎಂಬ ಶಬ್ದದಿಂದಲೂ ಮನುಷ್ಯಶಬ್ದವು ನಿಷ್ಪನ್ನವಾಗಿರಬಹುದು ಈ ಸಂದರ್ಭದಲ್ಲಿ. **ಪಂಚಜನಾಃ**– ಐದುವಿಧ ಮನುಷ್ಯರ ಪಂಗಡಗಳು ಎಂಬ ವಿಷಯವನ್ನು ಮುಂದಿನ ಋಕ್ಕಿನಲ್ಲಿ ವಿವರಿಸಲಾಗಿದೆ.

**ಇತಿ ಸಪ್ತಮ ಖಂಡಃ**

ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು

---

## ಅಥ ಅಷ್ಟಮಃ ಖಂಡಃ

### ಎಂಟನೆಯ ಖಂಡವು

ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ। ಊರ್ಜಾದ ಉತ ಯಜ್ಞಿಯಾಸಃ ಪಂಚಜನಾ ಮಮ ಹೋತ್ರಂ ಜುಷಧ್ವಂ (ಋ. ಸಂ. ೧೦–೫೩–೪) ತದದ್ಯ ವಾಚಃ ಪರಮಂ ಮಂಸೀಯ ಯೇನಾಸುರಾನಭಿಭವೇಮ ದೇವಾ ಅಸುರಾ ಅಸುರತಾ ಸ್ಥಾನೇಷ್ವಸ್ತಾ ಸ್ಥಾನೇಭ್ಯ ಇತಿ ವಾಪಿ ವಾಸುರಿತಿ ಪ್ರಾಣಾನಾಮಾಸ್ತಃ ಶರೀರೇ ಭವತಿ ತೇನ ತದ್ವಂತಃ ಸೋರ್ದೇವಾನಸೃಜತ ತತ್ಸುರಾಣಾಂ ಸುರತ್ವಮಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ। ಊರ್ಜಾದ ಉತ ಯಜ್ಞಿಯಾಸಃ ಅನ್ನಾದಾಶ್ಚ ಯಜ್ಞಿಯಾಶ್ಚೋರ್ಗಿತ್ಯನ್ನನಾಮೋರ್ಜಯತೀತಿ ಸತಃ ಪಕ್ವಂ ಸುಪ್ರವೃಕ್ಣಮಿತಿ ವಾ। ಪಂಚಜನಾ ಮಮ ಹೋತ್ರಂ ಜುಷಧ್ವಂ। ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ ಚತ್ವಾರೋ

ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವೋ ನಿಷಾದಃ ಕಸ್ಮಾ-
ನ್ನಿಷದನೋ ಭವತಿ ನಿಷಣ್ಣಾಮಸ್ಮಿನ್ಪಾಪಕಮಿತಿ ನೈರುಕ್ತಾಃ ।
ಯತ್ಪಾಂಚಜನ್ಯಯಾ ವಿಶಾ । ಪಂಚಜನೀನಯಾ ವಿಶಾ ಪಂಚ ಪೃಕ್ತಾ
ಸಂಖ್ಯಾ ಸ್ತ್ರೀಪುಂನಪುಂಸಕೇಷ್ವವಿಶಿಷ್ಟಾ ಬಾಹುನಾಮಾನ್ಯುತ್ತರಾಣಿ
ದ್ವಾದಶ ಬಾಹೂ ಕಸ್ಮಾತ್ಪ್ರಬಾಧತ ಆಭ್ಯಾಂ ಕರ್ಮಾಣ್ಯಂಗುಲಿನಾ-
ಮಾನ್ಯುತ್ತರಾಣಿ ದ್ವಾವಿಂಶತಿರಂಗುಲಯಃ ಕಸ್ಮಾದಗ್ರಗಾಮಿನ್ಯೋ
ಭವಂತೀತಿ ವಾಗ್ರಗಾಲಿನ್ಯೋ ಭವಂತೀತಿ ವಾಗ್ರಕಾರಿಣ್ಯೋ ಭವಂತೀತಿ
ವಾಗ್ರಸಾರಿಣ್ಯೋ ಭವಂತೀತಿ ವಾಂಕನಾ ಭವಂತೀತಿ ವಾಂಜನಾ
ಭವಂತೀತಿ ವಾಪಿ ವಾಭ್ಯಂಚನಾದೇವ ಸ್ಯುಸ್ತಾಸಾಮೇಷಾ ಭವತಿ ॥ ೮ ॥

**ತದದ್ಯ ವಾಚಃ ಪ್ರಥಮಂ ಮಸೀಯ** ಎಂಬ ಋಕ್ಕಿನ ಅರ್ಥವು—ಯಾವ ವಾಗ್ರೂಪವಾದ ಉಪದೇಶದಿಂದ ಸಕಲ ದೇವತೆಗಳೂ ಅಸುರರನ್ನು ಸೋಲಿಸಬಲ್ಲರೋ ಅಂತಹ ಶ್ರೇಷ್ಠವಾದ ಅದೇ ವಾಗುಪದೇಶವನ್ನು ನಾನು ಇಂದು ಉಚ್ಚರಿಸುತ್ತೇನೆ. ಹವಿಸ್ಸನ್ನು ಭಕ್ಷಿಸುವವರೂ ಯಜ್ಞಾರ್ಹರೂ ದೇವಮಾನವಾದಿ ಐದು ವಿಭಾಗವಾಗಿ ಇರುವವರೂ ಆದ ಎಲೈ ಪಂಚಜನರೇ, ನನ್ನ ಹೋತೃವಿನ ಕರ್ಮವನ್ನು ನೆರವೇರಿಸಿ.

**ತದ್ಯದ ವಾಚಃ ಪ್ರಥಮಂ ಮಸೀಯ ಯೇನಾಸುರಾಂ ಅಭಿದೇವಾ ಅಸಾಮ............ಪಂಚಪೃಕ್ತಾ ಸಂಖ್ಯಾ ಸ್ತ್ರೀಪುಂಸಪುಂಸಕೇಷ್ವವಿಶಿಷ್ಟಾ ॥** ಯಾವ ಉತ್ಕೃಷ್ಟವಾದ ವಾಕ್ಕಿನಿಂದ ಅಸುರರನ್ನು ನಾವು ಸೋಲಿಸಲು ಶಕ್ತರಾಗುವೆವೋ ಅಂತಹ ಅತಿಶ್ರೇಷ್ಠವಾದ ವಾಕ್ಕನ್ನು ನಾನು ಮನಸ್ಸಿನಲ್ಲಿ ಧ್ಯಾನಿಸಿ ತಿಳಿಯುತ್ತೇನೆ. ಎಂದು ಈ ಋಕ್ಕಿನ ಪೂರ್ವಾರ್ಧದ ಅಭಿಪ್ರಾಯವು. **ಅಸುರಾಃ** ಎಂದರೆ ಕೆಟ್ಟ ಸ್ಥಳಗಳಲ್ಲಿ ವಾಸಮಾಡಲು ಸಂತೋಷಪಡುವವರು. ಅಥವಾ **ಅ+ಸು+ರಾಃ ನ ಸುಷ್ಠು ಸ್ಥಾನೇಷು ರತಾಃ ಚಪಲಾ ಇತ್ಯರ್ಥಃ ।** ಒಳ್ಳೆಯ ಸ್ಥಾನಗಳಲ್ಲಿರಲು ಇಷ್ಟಪಡದಿರುವವರು ಅಥವಾ **ಸ್ಥಾನೇಷು ಅಸ್ತಾಃ** ತಮ್ಮ ಸ್ವಸ್ಥಾನಗಳಿಂದ (ದೇವಾದಿಗಳಿಂದ ಸೋಲಿಸಲ್ಪಟ್ಟು) ಓಡಿಸಲ್ಪಡುವವರು. ಅಥವಾ **ಅಸು** ಎಂದರೆ ಪ್ರಾಣಕ್ಕೆ ಹೆಸರು. ಎಂದರೆ ಪ್ರಾಣವಾಯುವು. ಅಂತಹ ಪ್ರಾಣವಾಯುವು ಇರುವ ಶರೀರದಲ್ಲಿ ವಾಸಮಾಡುವ ಪ್ರಾಣಿಗಳು ಎಂದು ಹೇಳಬಹುದು. ಇದಲ್ಲದೆ **ಸು** ಎಂದರೆ ಪ್ರಶಸ್ತವಾದ ಸ್ಥಾನವು. **ಸೋರ್ದೇವಾನಸೃಜತ** ಎಂಬ ಬ್ರಾಹ್ಮಣವಾಕ್ಯದಂತೆ ಪ್ರಜಾಪತಿಯು ತನ್ನ ಉತ್ತಮವಾದ ಸ್ಥಾನದಿಂದ ಎಂದರೆ ತನ್ನ ಉತ್ತಮಾಂಗದಿಂದ ದೇವತೆಗಳನ್ನು ಸೃಷ್ಟಿಮಾಡಿದನು. ಆದ್ದರಿಂದ ದೇವತೆಗಳಿಗೆ **ಸುರಾಃ** ಎಂದು ಹೆಸರು. ಅದರಂತೆ ಪ್ರಶಸ್ತವಲ್ಲದ ಎಂದರೆ ನಿಕೃಷ್ಟವಾದ ತನ್ನ ಅವಯವದಿಂದ ಪ್ರಜಾಪತಿಯು ಅಸುರರನ್ನು ಸೃಷ್ಟಿಸಿದನು. ಆದ್ದರಿಂದಲೇ ಅವರಿಗೆ ಅಸುರರೆಂದು ಹೆಸರು. **ಊರ್ಕ್** ಎಂದರೆ ಅನ್ನಕ್ಕೆ ಹೆಸರು. **ಊರ್ಜಯತೀತಿ ಸತಃ** ಎಂದರೆ ಅನ್ನದಿಂದ ಬಲವು ಶರೀರದಲ್ಲಿ ಉತ್ಪನ್ನವಾಗುವುದು. ಅಥವಾ **ಪಕ್ವಂ ಸುಪ್ರವೃಕ್ಣಮಿತಿ ವಾ** ಅನ್ನವನ್ನು ಬೇಯಿಸುವಾಗ ಅದನ್ನು ಸುಲಭವಾಗಿ ಮುರಿದು ಅಥವಾ ವಿಂಗಡಿಸಿ ತಿನ್ನಬಹುದು. ಪಂಚಜನರೆಂದರೆ—ಗಂಧರ್ವರು ಪಿತೃಗಣಗಳು, ದೇವತೆಗಳು ಅಸುರರು, ರಾಕ್ಷಸರು ಎಂದು ಐದು ವಿಧವಾದ ವರ್ಗದವರು. ಅಥವಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದ ಜನರ ಜತೆಗೆ ನಿಷಾದ ಎಂಬ ಬೇಡರ ಜಾತಿಯ ಜನರೂ

ಸೇರಿದರೆ ಆಗುವ ಐದು ಗುಂಪಿನ ಜನರಿಗೆ ಪಂಚಜರೆನಂದು ಹೆಸರೆಂದು ಔಪಮನ್ಯವ ಎಂಬ ಆಚಾರ್ಯರ ಮತವು. ನಿಷಾದ ಎಂಬ ಹೆಸರು ಬೇಡರಿಗೆ ಹೇಗೆ ಬಂತು ಎಂದರೆ ಬೇಡನು ಪ್ರಾಣಿಗಳನ್ನು ಕೊಂದು ಜೀವಿಸುವನು ಅಥವಾ ಪ್ರಾಣಿಗಳನ್ನು ಕೊಲ್ಲುವುದೇ ಮೊದಲಾದ ಹಿಂಸೆಯಿಂದ ಉಂಟಾಗುವ ಪಾಪವು ಇವನಲ್ಲಿ ನೆಲೆಸಿರುವುದರಿಂದ ಇವನಿಗೆ ನಿಷಾದನೆಂಬ ಹೆಸರು ಬಂದಿದೆಯೆಂದು ನಿರುಕ್ತಕಾರರ ಮತವು. **ಪಾಂಚಜನ್ಯಯಾ ವಿಶಾ** ಎಂಬಲ್ಲಿ ಐದುವಿಧವಾದ ಪ್ರಜೆಗಳ ಸಮುದಾಯದಿಂದ ಎಂದು ಹೇಳುವಾಗ ಈ ಸಮುದಾಯದಲ್ಲಿ ಸ್ತ್ರೀಯರು, ಪುರುಷರು, ನಪುಂಸಕರು ಮೊದಲಾದ ಎಲ್ಲಾ ವಿಧಜನರೂ ಇರುವರು ಎಂದಭಿಪ್ರಾಯವು. **ಪಾಂಚಜನ್ಯಯಾ** ವಿಶಾ ಎಂಬ ಶಬ್ದಗಳಿರುವ ಋಕ್ಕಿನ ಉದಾಹರಣೆಯು—

**ಯತ್ಪಾಂಚಜನ್ಯಯಾ ವಿಶೇಂದ್ರೇ ಘೋಷಾ ಅಸೃಕ್ಷತ**
**ಅಸ್ತೃಣಾದ್ಬರ್ಹಣಾ ವಿಪೋ೩ ರ್ಯೋ೩ ಮಾನಸ್ಯ ಸ ಕ್ಷಯಃ ॥**

(ಋ. ಸಂ. ೮-೬೩-೭)

ಈ ಋಕ್ಕಿನ ಅರ್ಥವು—ನಿಷಾದಾದಿ ಪಂಚವರ್ಣಾತ್ಮಕರಾದ ಪ್ರಜೆಗಳಿಂದ ಇಂದ್ರನನ್ನುದ್ದೇಶಿಸಿದ ಸ್ತುತಿಗಳು ನಿರ್ಮಿತವಾಗಿ ಯಾವಾಗ ಪಠಿತವಾದವೋ ಆ ಒಡನೆಯೇ, ಕೇವಲ ಸ್ವಸಾಮರ್ಥ್ಯದಿಂದಲೇ ಇಂದ್ರನು ಶತ್ರುಗಳನ್ನು ನಾಶಪಡಿಸಿದನು. ಅಂತಹ ಸ್ವಾಮಿಯಾದ ಇಂದ್ರನು ಮೇಧಾವಿಯಾದ ಸ್ತುತಿಕರ್ತನ ಪೂಜೆಗೆ ಪಾತ್ರಸ್ಥಾನನಾಗಿ ಆಗುತ್ತಾನೆ.

ಬಾಹುನಾಮಾನ್ಯುತ್ತರಾಣಿ ದ್ವಾದಶ ॥

(೧) ಆಯತೀ (೨) ಚ್ಯವಾನಾ (೩) ಅಭೀಶು (೪) ಅಪ್ನವಾನಾ (೫) ವಿನಙ್ಗೃಸೌ (೬) ಗಭಸ್ತೀ (೭) ಕರಸ್ನೌ (೮) ಬಾಹೂ (೯) ಭುರಿಜೌ (೧೦) ಕ್ಷಿಪಸ್ತೀ (೧೧) ಶಕ್ವರೀ (೧೨) ಭರಿತ್ರೇ ॥

ಇತಿ ದ್ವಾದಶ ಬಾಹುನಾಮಾನಿ ॥ ೪ ॥

(೧) **ಆಯತೀ ॥** ಆಙ್-ಉಪಸರ್ಗ. ಯತೀ-ಪ್ರಯತ್ನೇ. ಗತ್ಯರ್ಥದಲ್ಲಿಯೂ ಇದೆ. 'ಇನ್ ಸರ್ವಧಾತುಭ್ಯಃ' (ಉ-೪-೧೧೪) ಸೂತ್ರದಿಂದ ಇನ್‌ಪ್ರತ್ಯಯ. ಆಯತಿಃ ಎಂದು ರೂಪ. ತೋಳುಗಳು ಎರಡಾದುದರಿಂದ ಎಲ್ಲಾ ದ್ವಿವಚನಾಂತವಾಗಿಹೇಳಿದೆ. ಕಾರ್ಯದಲ್ಲಿ ಮೊದಲು ಪ್ರಯತ್ನಿಸುವುದು ಸಾಧನಭಾವವನ್ನು ಹೊಂದುವವುಗಳು ಎಂದರ್ಥ. ಬಾಹುಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೨) **ಚ್ಯವಾನಾ ।** ಚ್ಯುಙ್-ಗತೌ. ಧಾತು. 'ಸಮಾನಚ್‌ಸ್ತುವಃ' ಎಂಬ ಸೂತ್ರದಲ್ಲಿ ಮೊದಲು ಪ್ರತ್ಯಯ ನಿರ್ದೇಶಮಾಡಿರುವುದು. ಅಧಿಕಾರ್ಥಪ್ರತಿಪತ್ತಿಗೋಸ್ಕರವೆಂದು ಹೇಳಿರುವುದರಿಂದ ಇಲ್ಲಿ ಇದಕ್ಕೂ ಅನಚ್‌ಪ್ರತ್ಯಯ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ, ಅವಾದೇಶ. ಚ್ಯವಾನ ಎಂದು ಅಕಾರಾಂತಪದವಾಗುತ್ತದೆ. ದ್ವಿವಚನ ಬಂದಾಗ ಅದಕ್ಕೆ 'ಸುಂಪಾಂ ಸುಲುಕ್—' (ಪಾ-ಸೂ-೭-೧-೩೯) ಸೂತ್ರದಿಂದ ಆಕಾರಾದೇಶ. ಕರ್ಮದ ಕೊನೆ ಹೊಂದುವವುಗಳೆಂದರ್ಥ. ಇದಕ್ಕೂ ನಿಗಮ ಹುಡುಕಬೇಕು.

(೩) ಅಭೀಶೂ ॥ ರಶ್ಮಿನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೫-೬) ಕರ್ಮವನ್ನು ವ್ಯಾಪಿಸಿರುವವುಗಳು, ಅಥವಾ ಕಾರ್ಯಮಾಡಲು ಮುಂದಾಗುವವುಗಳು, ಕಾರ್ಯವು ತೋಳಿನ ಅಧೀನವಾಗಿರುತ್ತದೆ. ಇದಕ್ಕೂ ನಿಗಮ ಹುಡುಕಬೇಕು.

(೪) **ಅಪ್ನವಾನಾ** ॥ ಆಪ್ಲೃ-ವ್ಯಾಪ್ತೌ. ಧಾತು. 'ತಾಚ್ಛೀಲ್ಯವಯೋವಚನಶಕ್ತಿಷುಚಾನಶ್' (ಪಾ-ಸೂ-೩-೨-೧೨೯) ಸೂತ್ರದಿಂದ ಚಾನಶ್‌ಪ್ರತ್ಯಯ. ಶಿತ್ತಾದುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಬರುವುದರಿಂದ ಶ್ನುವಿಕರಣ ಬರುತ್ತದೆ. ಆಪ್ನ+ಆನ ಎಂದಿರುವಾಗ 'ಛಂದಸ್ಯುಭಯಥಾ' ಸೂತ್ರದಿಂದ ಆರ್ಧಧಾತುಕಸಂಜ್ಞೆಯೂ ಬರುವುದರಿಂದ ಗುಣ, ಅವಾದೇಶ ಬರುತ್ತದೆ. ಪೃಷೋದರಾದಿಗಣಪಠಿತವಾದುದರಿಂದ ಧಾತುವಿಗೆ ಹ್ರಸ್ವ. ದ್ವಿವಚನಕ್ಕೆ ಹಿಂದಿನಂತೆ ಛಂದಸ್ಸಿನಲ್ಲಿ ಆಕಾರಾದೇಶ. 'ಅಪ್ನವಾನಾ' ಎಂದು ರೂಪ. ಕಾರ್ಯವನ್ನು ವ್ಯಾಪಿಸಿರುವವುಗಳು. ಅಥವಾ ಅಪ್ನಸ್ ಎಂದು ಕರ್ಮನಾಮದಲ್ಲಿ ವ್ಯಾಖ್ಯಾತವಾಗಿದೆ- " ಅಪ್ನಃ ಅಸ್ಯ ಅಸ್ತಿ " ಕರ್ಮಉಳ್ಳದ್ದು ಎಂಬರ್ಥದಲ್ಲಿ ' ಛಂದಸೀವನಿಪೌ " ವಾರ್ತಿಕದಿಂದ ವನಿಪ್ ಪ್ರತ್ಯಯ ಅಪ್ನವನ್‌ಶಬ್ದ. ವಿಭಕ್ತಿಗೆ ಆಕಾರ ಹಿಂದಿನಂತೆ ತಿಳಿಯಬೇಕು. ಛಾಂದಸವಾಗಿ ಸಕಾರಕ್ಕೆ ಲೋಪ ಬಂದಿದೆ. ಕಾರ್ಯದಿಂದ ಕೂಡಿರುವವುಗಳು ತೋಳುಗಳು. ನಕಾರಾಂತವೇ ಅಥವಾ ಅಕಾರಾಂತವೇ ಎಂಬ ಸಂದೇಹವಿದೆ. ನಿಗಮವನ್ನು ಹುಡುಕಿ ನಿರ್ಣಯಿಸಬೇಕು.

(೫) ವಿನಙ್ಗೃಸೌ ॥ " ವಿನಮ್ಯ ಗ್ರಸತಃ " ಬಗ್ಗಿ ಅನ್ನಾದಿಗಳನ್ನು ಹಿಡಿದು ನುಂಗುತ್ತವೆ. ಎಂದು ಮಾಧವರು ವ್ಯಾಖ್ಯಾನಮಾಡಿರುತ್ತಾರೆ. ಗ್ರಸ ಅದನೇ ಧಾತುವಿಗೆ ಅಚ್‌ಪ್ರತ್ಯಯ. ವಿನಮ್+ಗ್ರಸ ಎಂದಿರುವಾಗ ಪೃಷೋದರಾದಿಗಣಪಠಿತವಾದುದರಿಂದ ಅವಿಗೆ ಲೋಪ ರೇಫಕ್ಕೆ ಸಂಪ್ರಸಾರಣ (ಋಕಾರ)ನುಗಾಗಮ. " ವಿನಂಗ್ರಸೌ " ದ್ವಿವಚನಾಂತರೂಪ. ಉದಾ- **ಅನ್ನಸ್ಮೈ ಜೋಷಮಭರದ್ವಿನಙ್ಗೃಸಃ (ಋ. ಸಂ. ೭-೨-೨-೨೩)** ॥

(೬) **ಗಭಸ್ತೀ** ॥ ರಶ್ಮಿನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೫-೭) ಜನರು ಇವೆರಡರಿಂದ ಅನ್ನಾದಿಗಳನ್ನು ತಿನ್ನುತ್ತಾರೆ. ಗ್ರಹಧಾತುವಿನಿಂದ ಗಭಸ್ತೀಪದವಾಗಿದೆಯೆಂದೂ ಇವುಗಳಿಂದ ಪುರುಷರು ಪದಾರ್ಥಗಳನ್ನು ಹಿಡಿಯುತ್ತಾರೆ ಎಂದು ಅರ್ಥವಿವರಣೆಯನ್ನೂ ಮಾಧವರು ಮಾಡಿರುತ್ತಾರೆ. ಉದಾ ;— **ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ (ಋ. ಸಂ. ೭-೫-೨೨-೫)** ॥

(೭) ಕರಸ್ನೌ ॥ ' ಕರಾಂಸಿ ' ಎಂದು ಕರ್ಮನಾಮಗಳಲ್ಲಿ ಕರಃ ಶಬ್ದವು ವ್ಯಾಖ್ಯಾತವಾಗಿದೆ ಷ್ಣೈ-ವೇಷ್ಟನೇ ಧಾತು. ಧಾತ್ವಾದಿಗೆ ಸತ್ವಬಂದಾಗ ಣಕಾರಕ್ಕೆ ನಕಾರ ಸ್ನೈಎಂದಾಗುತ್ತದೆ. ಕರ್ಮವಾಚಕವಾದ ಕರಶಬ್ದವು ಉಪಪದವಾಗಿರುವಾಗ ' ಆತೋಽನುಪಸರ್ಗೇಕಃ (ಪಾ ಸೂ. -೩-೨-೩) ಸೂತ್ರದಿಂದ ಕಪ್ರತ್ಯಯ' ಆತಲೋಪ ಇಟಿಚ ' ಸೂತ್ರದಿಂದ ಧಾತುವಿಗೆ ಬಂದಿರುವ ಆಕಾರಕ್ಕೆ ಲೋಪ. ' ಕರ್ಮಣಾಂ ಪ್ರಸ್ನಾತಾರೌ " ಎಂದು ನಿರುಕ್ತದಲ್ಲಿ ಹೇಳಿದೆ. ಕರ್ಮವನ್ನು ಸುತ್ತಿರುವವುಗಳು. ಕಾರ್ಯಮಾಡುವವುಗಳೆಂದರ್ಥ. ಉದಾ—' **ಸುಪ್ರಕರಸ್ನಮುತಯೇ** ' (**ಋ. ಸಂ. ೬-೩-೨-೫**)

(೮) **ಬಾಹೂ** ॥ ಬಾಧೃ-ವಿಲೋಡನೇ ಧಾತು. "ಅರ್ಜಿದೃಶಿ ಕಮ್ಯಮಿಪಸಿ (ಉ-೧-೨೬) ಸೂತ್ರದಿಂದ ಉ ಪ್ರತ್ಯಯ. ಧಕಾರಕ್ಕೆ ಹಕಾರಾವೇಶ ದ್ವಿವಚನದಲ್ಲಿ ಬಾಹೂ ರೂಪವಾಗುತ್ತದೆ. ಇವುಗಳಿಂದ ಕಾರ್ಯಸಮಾಪ್ತಿಗೊಳ್ಳುತ್ತಾನೆ, ಇತರರನ್ನು ಪೀಡಿಸುತ್ತಾನೆ. ಉದಾಹರಣೆ—'**ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ' (ಋ. ಸಂ. ೪-೭-೩೧-೩)** ॥

(೯) **ಭುರಿಜೌ** ॥ ಹರಣಾರ್ಥಕವಾದ ಹೃಞ್‌ಧಾತು, ಅಥವಾ ಧಾರಣಪೋಷಣಾರ್ಥಕವಾದ (ಡು) ಭೃಞ್‌ಧಾತು, ಇವಕ್ಕೆ 'ಭೃಞ ಇಚ್ಚ' (ಉ-೨-೭೧) ಸೂತ್ರದಿಂದ ಇಜಿಪ್ರತ್ಯಯ. ಹೃಞ್ ಆದರೆ "ಹೃಗ್ರಹೋರ್ಭಶ್ಛಂದಸಿ" ಸೂತ್ರದಿಂದ

ಹಕಾರಕ್ಕೆ ಭಕಾರಾದೇಶ ಬರುತ್ತವೆ. ಗುಣ ಬಂದಾಗ ಛಾಂದಸವಾದುದರಿಂದ ಅಕಾರಕ್ಕೆ ಉಕಾರಾದೇಶ. ಪದಾರ್ಥಗಳನ್ನು ಅಪಹರಿಸುತ್ತವೆ, ಕಾರ್ಯಮಾಡುವ ಸಾಮರ್ಥ್ಯ ಹೊಂದಿರುತ್ತವೆ ಎಂದರ್ಥ. ಉದಾಹರಣೆ–**"ತಮುಹ್ಯನ್ ಭುರಿಜೋರ್ಧಿಯಾ"** (**ಋ. ಸಂ. ೬–೮–೧೬–೪**) ||

(**೧೦**) **ಕ್ಷಿಪಸ್ತೀ** || ಕ್ಷಿಪ–ಪ್ರೇರಣೇ. ಧಾತು. 'ವತವಿತಸೇಸ್ತಿ :–' ಸೂತ್ರವಿಹಿತವಾದ ತಿಪ್ರತ್ಯಯ, ಧಾತುವಿಗೆ ಅಸುಗಾಗಮ, ಗುಣಾಭಾವಕಾರ್ಯಗಳು ಬರುತ್ತವೆ. ದ್ವಿವಚನಾಂತರೂಪ. ಜನರಿಂದ ಕಾರ್ಯದಲ್ಲಿ ಪ್ರೇರೇಪಿಸಲ್ಪಡುತ್ತವೆ 'ಕ್ಷಿಪತೀ' ಎಂದು ಪಾಠಾಂತರವಿದೆ. ಆಗ ಪೂರ್ವೋಕ್ತಧಾತುವಿಗೆ ಶತೃಬಂದಾಗ 'ಉಗಿತಶ್ಚ' ಸೂತ್ರದಿಂದ ಙೀಪ್ ಬರುತ್ತದೆ. ಛಂದಸ್ಸಿನಲ್ಲಿ ವಿಕಲ್ಪವೆಂದುದರಿಂದ ನುಮಾಗಮ ಬರುವುದಿಲ್ಲ. ದ್ವಿವಚನ ಔ ಬಂದಾಗ ಪೂರ್ವಸವರ್ಣದೀರ್ಘ. ಕಾರ್ಯಗಳಲ್ಲಿ ಪದಾರ್ಥಗಳನ್ನು ಇತ್ತ ಅತ್ತಹಾಕುತ್ತದೆ ಎಂದರ್ಥ. ಅಥವಾ ಕ್ಷಿಪಧಾತುವಿಗೆ 'ರುಹಿನಂದಿ ಜೀವಿ–.' (ಉ–೩–೧೨೩) ಸೂತ್ರದಿಂದ ಯಚ್‌ಪ್ರತ್ಯಯ 'ಝೋನ್ತಃ' ಸೂತ್ರದಿಂದ ಅದಕ್ಕೆ ಅಂತಾದೇಶ. ಛಾಂದಸವಾದುದರಿಂದ ನಕಾರಕ್ಕೆ ಲೋಪ. ಪದಾರ್ಥಗಳನ್ನು ಅಲ್ಲಿ ಇಲ್ಲಿ ಚೆಲ್ಲುತ್ತವೆ. ನಿಗಮ ಹುಡುಕಿ ನಿರ್ಣಯಿಸಬೇಕು.

(**೧೧**) **ಶಕ್ವರೀ** || ಶಕ್‌ಲೃ–ಶಕ್ತೌ. ಧಾತು. " ಸ್ನಾಮದಿಪದ್ಯರ್ತಿಪೃಶಕಿಭ್ಯೋ ವನಿಪ್ " (ಉ. ೪–೧೧೯) ಸೂತ್ರದಿಂದ ವನಿಪ್‌ಪ್ರತ್ಯಯ. ಸ್ತ್ರೀತ್ವದಲ್ಲಿ 'ವನೋರಚ' (ಪಾ–ಸೂ–೪–೧–೭) ಸೂತ್ರದಿಂದ ಙೀಪ್. ನಕಾರಕ್ಕೆ ರೇಫಾದೇಶ. ಶಕ್ವರೀ. ದ್ವಿವಚನ ಬಂದಾಗ ಹಿಂದಿನಂತೆ ಪೂರ್ವಸವರ್ಣದೀರ್ಘ. ಕಾರ್ಯಮಾಡಲು ಶಕ್ತಿಹೊಂದಿರುವವುಗಳು. ಉದಾಹರಣೆ—

**"ಅಂಗುಲಯಃ ಶಕ್ವರಯೋ ದಿಶಶ್ಚ ಮೇ ಯಜ್ಞೇನ ಕಲ್ಪಂತಾಮ್"** (**ಯು–ವಾ–ಸಂ–೧೮–೨೨**) ||

(**೧೨**) **ಭರಿತ್ರೇ** || ಭೃಞ್–ಭರಣೇ. ಧಾತು. 'ಅಶಿತ್ರಾದಿಭ್ಯ ಇತ್ರೋತ್ರೌ' (ಉ–೪–೧೬೮) ಸೂತ್ರದಿಂದ ಇತ್ರಪ್ರತ್ಯಯ. ಧಾತು ಋಕಾರಕ್ಕೆ ಗುಣ. ಸೂರ್ಯನು ಕಿರಣ ಧರಿಸಿದಂತೆ ಪುರುಷರು ಇದನ್ನು ಧರಿಸಿರುತ್ತಾರೆ, ಕರ್ಮಕರಣ ಸಾಮರ್ಥ್ಯ ಹೊಂದಿರುತ್ತವೆ. ಉದಾಹರಣೆ—

**ಅಂಶು ದುಹಂತಿ ಹಸ್ತಿನೋ ಭರಿತ್ರೈಃ** (**ಋ–ಸಂ–೩–೨–೨೦–೨**) ||

ಹೀಗೆ ಹನ್ನೆರಡು ತೋಳುಗಳ ಹೆಸರು.

ಈ ಹನ್ನೆರಡು ಶಬ್ದಗಳೂ ಬಾಹುನಾಮಗಳು

———

## ಬಾಹೂ ಕಸ್ಮಾತ್ ಪ್ರಬಾಧತ ಆಭ್ಯಾಂ ಕರ್ಮಾಣಿ ||

ಬಾಹು ಶಬ್ದಕ್ಕೆ ಅರ್ಥವೇನು ಎಂದರೆ ಈ ಎರಡು ಅಂಗಗಳಿಂದ ಕೆಲಸ ಕಾರ್ಯಗಳು ಚೆನ್ನಾಗಿ ನೆರವೇರಿಸಲ್ಪಡುತ್ತವೆ ಯಾದ್ದರಿಂದ ಈ ಅಂಗಗಳಿಗೆ ಬಾಹೂ ಎಂಬ ಎಂಬ ಹೆಸರು.

## || ಅಂಗುಲಿನಾಮಾನ್ಯುತ್ತರಾಣಿ ದ್ವಾವಿಂಶತಿಃ ||

(೧) ಅಗ್ರುವಃ (೨) ಅಣ್ವ್ಯಃ (೩) ವ್ರಿಶಃ (೪) ಕ್ಷಿಪಃ (೫) ಶರ್ಯಾಃ (೬) ರಶನಾಃ (೭) ಧೀತಯಃ (೮) ಅಥರ್ಯಃ (೯) ವಿಪಃ (೧೦) ಕಕ್ಷ್ಯಾಃ (೧೧) ಅವನಯಃ (೧೨) ಹರಿತಃ (೧೩) ಸ್ವಸಾರಃ (೧೪) ಜಾಮಯಃ (೧೫) ಸನಾಭಯಃ (೧೬) ಯೋಕ್ತ್ರಾಣಿ (೧೭) ಯೋಜನಾನಿ (೧೮) ಧುರಃ (೧೯) ಶಾಖಾಃ (೨೦) ಅಭೀಶವಃ (೨೧) ದೀಧಿತಯಃ (೨೨) ಗಭಸ್ತಯಃ ॥

ಇತಿ ದ್ವಾವಿಂಶತಿರಙ್ಗುಲಿನಾಮಾನಿ ॥೫॥

(೧) ಅಗ್ರುವಃ ॥ ' ಜತ್ರ್ವಾದಯಶ್ಚ ' (ಉ. ೪-೧೦೦) ಸೂತ್ರದಿಂದ ರುಪ್ರತ್ಯಯಾಂತವಾಗಿ ನಿಪಾತಿತವಾಗಿದೆ ರುಗಿ-ಗತೌ ಧಾತು, ಇದಿತ್ತಾಗಿ ನುಮಾಗಮ ಬಂದಿದ್ದರೂ ನಿಪಾತದಿಂದಲೇ ಲೋಪ. ಅಗ್ರು ಎಂದ ಉಕಾರಾಂತಪದ. ಬೆರಳುಗಳು ಯಾವಾಗಲೂ ಅನೇಕವಾದುದರಿಂದ ಬಹುವಚನಾಂತವಾಗಿಯೇ ಹೇಳಿವೆ. ತನ್ವಾದಿಯಲ್ಲಿ ಸೇರಿರುವುದರಿಂದ ಬಹುವಚನದಲ್ಲಿ ಉವಜಾದೇಶ ಬಂದಿದೆ. ಕಾರ್ಯಕ್ಕೋಸ್ಕರ ಹೋಗುವವುಗಳು. ಅಥವಾ ಅಗ್ರಪದ ಉಪಪದವಾಗಿರುವಾಗ ಗಮ್ ಧಾತುವಿಗೆ ಹಿಂದಿನಂತೆ ರುಪ್ರತ್ಯಯ ಬಂದು ನಿಪಾತಿತವಾಗಿದೆ. ಗಮಿನ ಟಿಗೂ (ಅಮ್) ಅಗ್ರಪದದ ಗ್ರಪದಕ್ಕೂ ಲೋಪ ಬಂದಿದೆ. ' ಅಗ್ರೇ ಗಚ್ಛಂತಿ ಇತಿ ಅಗ್ರುವಃ ' ಕಾರ್ಯಾರಂಭದಲ್ಲಿ ಮೊದಲು ಹೋಗುವವುಗಳು. ಎಲ್ಲಾ ಅವಯವಗಳಿಗಿಂತ ಬೆರಳು ಮುಂದೆ ಹೋಗುತ್ತದೆ. ಉದಾ:— **' ತಮೀಂ ಹಿನ್ವಂತ್ಯಗ್ರುವಃ ' (ಋ. ಸಂ-೬-೭-೧೭-೩)** ॥

(೨) ಅಣ್ವ್ಯಃ ॥ ಅಣಧಾತುವಿಗೆ ಶಬ್ದಾರ್ಥವು ಹೇಳಿದೆ. ' ಅಣಶ್ಚ ' (ಉ-೧-೮) ಸೂತ್ರದಿಂದ ಉಪ್ರತ್ಯಯ. ಅಣು ಎಂದಾಗುತ್ತದೆ. ಗುಣವಾಚಕವಾದುದರಿಂದ ' ವೋತೋ ಗುಣವಚನಾತ್ ' (ಪಾ-ಸೂ-೪-೧-೪೪) ಸೂತ್ರದಿಂದ ಸ್ತ್ರೀತ್ವದಲ್ಲಿ ಙೀಪ್. ಯಣ್. ಅಣ್ವೀ. ಬಹುವಚನದಲ್ಲಿ ಅಣ್ವ್ಯಃ ಎಂದಾಗುತ್ತದೆ. ಸ್ಫೋಟಾದಿ ಶಬ್ದವನ್ನು ಮಾಡುತ್ತವೆ, ಇವುಗಳಿಂದ ಚಪ್ಪಾಳೆ ಶಬ್ದ ಮಾಡುತ್ತಾರೆ, ಅಥವಾ ಹಸ್ತಪರಿಮಾಣಕ್ಕಿಂತಲೂ ಅಲ್ಪಪರಿಮಾಣವುಳ್ಳವುಗಳು ಬೆರಳುಗಳು ಎಂದರ್ಥ. ಉದಾಹರಣೆ— **' ತಮಿಮಣ್ವೀಃ ಸಪರ್ಯತ ' (ಋ. ಸಂ. ೫-೭-೧೭-೨)**

(೩) ವ್ರಿಶಃ ॥ ವಿಶ-ಪ್ರವೇಶನೇ ಧಾತು. 'ಕ್ವಿಬ್ವಚಿ—" ಸೂತ್ರದಿಂದ ಕ್ವಿಪ್ ಬಂದಾಗ ರೇಫ ಅಧಿಕವಾಗಿ ಬರುತ್ತದೆ. ವ್ರಿಶಃ ಬಹುವಚನಾಂತರೂಪ. ಕಾರ್ಯಗಳಲ್ಲಿ ಸಾಧನ ಭಾವವನ್ನು ಹೊಂದುತ್ತವೆ. ಉದಾ:—

**"ತಮೀಂ ಹಿನ್ವಂತಿ ಧೀತಯೋ ದಶ ವ್ರಿಶಃ (ಋ-ಸಂ-೨-೨-೧೩-೫)** ॥

(೪) ಕ್ಷಿಪಃ ॥ ಕ್ಷಿಪ-ಪ್ರೇರಣೇ. ಧಾತು. ಔಣಾದಿಕ ಕ್ವಿಪ್‌ಪ್ರತ್ಯಯ. ಕ್ಷಿಪ್‌ಶಬ್ದ. ಕಾರ್ಯಗಳಲ್ಲಿ ಜನರಿಂದ ಪ್ರೇರೇಪಿಸಲ್ಪಡುತ್ತವೆ. ಇವುಗಳಲ್ಲಿ ಉಂಗುರ ಮುಂತಾದವುಗಳು ಇಡಲ್ಪಡುತ್ತವೆ ಎಂದರ್ಥ. ಉದಾ:—

**"ಮೃಜಂತಿ ತ್ವಾ ದಶ ಕ್ಷಿಪಃ" (ಋ. ಸಂ. ೬-೭-೩೦-೪)** ॥

(೫) ಶರ್ಯಾಃ ॥ ಶೄ-ಹಿಂಸಾಯಾಮ್. ಧಾತು. ಅಘ್ನ್ಯಾದಿಗಳು ಅಕೃತಿಗಣವಾದುದರಿಂದ ಇದೂ ಅಲ್ಲಿ ಸೇರಿರುವುದರಿಂದ ಯತ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಪಾಪಕಾರ್ಯಗಳನ್ನು ಮಾಡುತ್ತವೆ. ಪಾಪದಿಂದ ಬಿಡುಗಡೆಮಾಡುತ್ತವೆ. ಉದಾ:—

**"ಆಯಃ ಶರ್ಯಾಭಿಸ್ತುವಿನೃಮ್ಣೋ ಅಸ್ಯ" (ಋ. ಸಂ. ೮-೧-೨೬-೩)** ॥

**(೬) ರಶನಾಃ** ॥ ಬಂಧನಾರ್ಥಕವಾದ ರಶಿಧಾತುವಿಗೆ 'ಯುಚ್‌ಬಹುಲಮ್' ಸೂತ್ರದಿಂದ ಯುಚ್‌ಪ್ರತ್ಯಯ. "ಯುವೋರನಾಕೌ" ಅದಕ್ಕೆ ಅನಾದೇಶ. ಕಟ್ಟಬೇಕಾದುದನ್ನು ಕಟ್ಟುತ್ತವೆ, ಇವುಗಳಿಂದ ಕಟ್ಟುತ್ತಾರೆ. 'ಅಶೇರಶಚ' ಎಂದು ಭೋಜಸೂತ್ರಕರ್ಮವನ್ನು ವ್ಯಾಪಿಸಿರುವುದು ಉದಾ:—

**"ರಶನಾಭಿರ್ದಶಭಿರಭ್ಯಧೀತಾಮ್" (ಋ-ಸಂ-೭-೫-೩೨-೬) "ಅಚ್ಛಾ ಬರ್ಹೀರಶನಾಭಿರ್ನಯನ್ತಿ" (ಋ-ಸಂ-೭-೩-೨೨-೧)** ॥

**(೭) ಧೀತಯಃ** ॥ "ಡು-ದಾಞ್‌ಧಾರಣಪೋಷಣಯೋಃ" ಧಾತು. 'ಕ್ತಿಚ್‌ಕ್ತೌಚ ಸಂಜ್ಞಾಯಾಮ್' ಸೂತ್ರದಿಂದ ಕ್ತಿಚ್‌ಪ್ರತ್ಯಯ. ಕಿತ್ತಾದಪ್ರತ್ಯಯ ಪರದಲ್ಲಿರುವುದರಿಂದ "ಘುಮಾಸ್ಥಾಗಾಪಾಜಹಾತಿಸಾಂ—" ಸೂತ್ರದಿಂದ ಧಾತುವಿಗೆ ಈತ್ವ. ಣಿಜರ್ಥಧಾತ್ವರ್ಥದಲ್ಲಿ ಸೇರಿದೆ. ಪುರುಷರಿಂದ ಕರ್ಮದಲ್ಲಿ ವಿನಿಯೋಗಿಸಲ್ಪಡುತ್ತದೆ, ಕರ್ಮಸಾಧನಗಳನ್ನು ಧರಿಸುವಂತೆ ಮಾಡುತ್ತವೆ. ಉದಾಹರಣೆ—

**"ಸ ಸಪ್ತಧೀತಿಭಿರ್ಹಿತಃ" (ಋ-ಸಂ-೬-೭-೩೨-೪)** ॥

**(೮) ಅಥರ್ಯಃ** ॥ ಅತ-ಸಾತ್ಯತಗಮನೇ. ಧಾತು. ಬಹುಲಗ್ರಹಣದಿಂದ ಇನ್‌ಪ್ರತ್ಯಯ, ಧಾತುವಿಗೆ ಅಥಾರಾದೇಶ. ಅಥರಿ ಎಂಬ ಕೃದಂತದಮೇಲೆ 'ಕೃದಿಕಾರಾದಕ್ತಿನಃ' ಸೂತ್ರದಿಂದ ಙೀಷ್ ಅಥರೀ. ಬಹುವಚನದಲ್ಲಿ ಜಸ್ ಬಂದಾಗ ಯಣ್ ಅಥರ್ಯಃ. ಉದಾಹರಣೆ—**'ಉಷರ್ಬುಧಮಥರ್ಯೋ೯ ನ ದಂತಮ್'** (ಋ. ಸಂ. ೩-೫-೫-೨) .

"ಅಥರ್ಯವಃ" ಎಂಬ ಪಾಠವೂ ಕೆಲವು ಕಡೆ ದೃಷ್ಟವಾಗಿದೆ. ನಿಗಮವನ್ನು ಹುಡುಕಿ ನಿರ್ಣಯಿಸಬೇಕು.

**(೯) ವಿಪಃ** ॥ ಪ್ರೇರಣಾರ್ಥಕ ವಿಪ್‌ಧಾತುವಿಗೆ ಕ್ವಿಪ್. ಬಹುವಚನದಲ್ಲಿ 'ವಿಪಃ' ಎಂದು ರೂಪವಾಗುತ್ತದೆ. ಕಾರ್ಯಗಳಲ್ಲಿ ಪುರುಷರಿಂದ ಪ್ರೇರೇಪಿಸಲ್ಪಡುತ್ತವೆ. ಉದಾಹರಣೆ—**'ವಿಪೋ ನ ದ್ಯುಮ್ನಾ ನಿಯುವೇ ಜನಾನಾಮ್' (ಋ. ಸಂ. ೬-೧-೩೫-೩)** ॥

**(೧೦) ಕಕ್ಷ್ಯಾಃ** ॥ "ದಶಾವನಿಭ್ಯಃ" ಎಂಬ ಮಂತ್ರದಲ್ಲಿ "ಕಕ್ಷ್ಯಾಃ ಪ್ರಕಾಶಯನ್ತಿ ಕರ್ಮಾಣಿ" (ನಿರು-೩-೯) ಎಂದು ನಿರುಕ್ತ. ಅನುಷ್ಠಾನರೂಪ ಫಲದಿಂದ, ಫಲಕೊಡುವುದರಿಂದ ಕಾರ್ಯಗಳನ್ನು ಉಜ್ವಲಗೊಳಿಸುತ್ತವೆ ಎಂದರ್ಥ. "ಖ್ಯಾ-ಪ್ರಕಥನೇ" ಎಂಬ ಧಾತುವಿನಿಂದ ಕಕ್ಷ್ಯಾಶಬ್ದವಾಗಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ. ಖ್ಯಾ ಧಾತುವಿಗೆ ಕ್ಸಪ್ರತ್ಯಯ ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪವಾಗುತ್ತದೆ. ಪ್ರಕಥನಪದಕ್ಕೆ ಪ್ರಕಾಶವೆಂದರ್ಥ. ಅಥವಾ ಬಾಹುತಲಕ್ಕೆ ಕಕ್ಷ್ಯಾ ಎಂದು ಹೆಸರು. ಅಲ್ಲಿ ಯಾವಾಗಲೂ ಬೆರಳುಗಳು ಪ್ರಚ್ಛನ್ನವಾಗಿರುವುದರಿಂದ ಪುರುಷರಿಂದ ಕಾರ್ಯ ಸಮಯದಲ್ಲಿ ಪ್ರಕಾಶಗೊಳಿಸಲ್ಪಡುತ್ತವೆ ಎಂದರ್ಥ. ಅರಣಿಯಲ್ಲಿ ಅಗ್ನಿ ಹುಟ್ಟಿ ಅದು ಅರಣಿಯನ್ನು ಪ್ರಕಾಶಪಡಿಸುತ್ತದೆ. ಅರಣಿಯಿಂದ ಅಗ್ನಿ ಹುಟ್ಟುತ್ತದೆಂದೂ ವ್ಯವಹಾರವಿದೆ. ಅದರಂದೆ ಕಕ್ಷ್ಯಾಪ್ರಕಾಶ್ಯವಾದುದರಿಂದ ಅದರಿಂದ ಹುಟ್ಟಿದೆಯೆಂದೂ ಹೇಳಬಹುದು. ಆಗ "ತತ್ರ ಭವಃ" ಸೂತ್ರದಿಂದ ಕಕ್ಷಾ ಶಬ್ದದಮೇಲೆ ಯತ್‌ಪ್ರತ್ಯಯ ಬಂದರೆ ಕಕ್ಷ್ಯಾಃ ಎಂದಾಗುತ್ತದೆ. ಉದಾಹರಣೆ—

ಫರಿಷ್ವಜಧ್ವಂ ದಶ ಕಕ್ಷ್ಯಾಭಿಃ (ಋ. ಸಂ. ೮-೫-೧೯-೪) ॥ "ದಶಾವನಿಭ್ಯೋ ದಶ ಕಕ್ಷ್ಯೇಭ್ಯಃ (ಋ. ಸಂ. ೮-೪-೩೦-೨) ॥

(೧೧) ಅವನಯಃ ॥ ಪೃಥಿವೀನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧) ಕರ್ಮಗಳನ್ನು ಸಂರಕ್ಷಿಸುತ್ತದೆ, ರಕ್ಷಿಸಲ್ಪಡುವವುಗಳು- ಉದಾ:—'ಸನಾತ್ ಸನೀಲಾ ಅವನೀರವಾತಾಃ' (ಋ. ಸಂ. ೧-೫-೨(೫) 'ದಶಾವನಿಭ್ಯಃ' (ಋ. ಸಂ. ೮-೪-೩೦-೨) ॥

(೧೨) ಹರಿತಃ ॥ ನದೀನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೩-೧೨) ಇವುಗಳಿಂದ ಪದಾರ್ಥಗಳನ್ನು ಒಯ್ಯುತ್ತಾರೆ. ಪದಾರ್ಥಹರಣದಲ್ಲಿ ಬೆರಳುಗಳೇ ಸಾಧನ. ಉದಾ:—'ಏತಂ ತ್ಯಂ ಹರಿತೋ ದಶ' (ಋ. ಸಂ. ೬-೮-೨೮-೩) ॥

(೧೩) ಸ್ವಸಾರಃ ॥ ಸ್ವಶಬ್ದಉಪಪದನಾಗಿರುವಾಗ 'ಅಸು-ಕ್ಷೇಪಣೇ' ಧಾತುವಿಗೆ 'ಸಾವಸೇ ಋನ್ (ಉ-೨-೭೯) ಸೂತ್ರದಿಂದ ಋನ್‌ಪ್ರತ್ಯಯ. ಪರರೂಪ. ಸ್ವಸೃಶಬ್ದ. ಇವುಗಳಿಂದ ಪದಾರ್ಥಗಳು ತಳ್ಳಲ್ಪಡುತ್ತವೆ., ಕಾರ್ಯದಲ್ಲಿ ನಿಯೋಗಿಸಲ್ಪಡುವವುಗಳು. ಅಥವಾ ಸ್ವಶಬ್ದ ಉಪಪದವಾಗಿರುವಾಗ ವಿಶರಣಾದ್ಯರ್ಥಕೊಡುವ ಷದ್‌ಲೃಧಾತುವಿಗೆ ಬಹುಲಗ್ರಹಣದಿಂದ ಋನ್‌ಪ್ರತ್ಯಯ. ಧಾತುವಿನ ಟಿಗೆ (ಅದ್) ಲೋಪ. ಬಹುವಚನದಲ್ಲಿ 'ಅಪ್‌ತೃನ್—' ಸೂತ್ರದಿಂದ ದೀರ್ಘ. ತಮ್ಮ ತಮ್ಮ ವ್ಯಾಪಾರವನ್ನು ಹೊಂದುತ್ತವೆ, ವ್ಯಾಪಿಸಿರುತ್ತವೆ, ಅಥವಾ ತಮ್ಮತಮ್ಮ ಹಸ್ತದಲ್ಲಿ ಅಡಗಿರುತ್ತವೆ ಎಂದರ್ಥ. ಅಥವಾ ಪರಸ್ಪರ ಅಕ್ಕತಂಗಿಯರಂತೆ ತೋರುತ್ತವೆ. ಒಂದೇ ಕೈಯಲ್ಲಿ ಹುಟ್ಟಿರುವುದರಿಂದ ಸೋದರಿಯರಂತಿರುವುದರಿಂದ ಬೆರಳುಗಳು ಸ್ವಸೃಶಬ್ದವಾಚ್ಯವಾಗುತ್ತವೆ. ಋಕಾರಾಂತವಾದರೂ 'ನಷಟ್‌ಸ್ವಸ್ರಾದಿಭ್ಯಃ' ಸೂತ್ರದಿಂದ ಙೀಪ್‌ನಿಷೇಧ ಬರುತ್ತದೆ. ಉದಾಹರಣೆ—"ದ್ರವಸ್ಯಂತಿ ಸ್ವಸಾರೋ ಅರ್ಹ ಯೋಣವಮ್" (ಋ. ಸಂ. ೧-೫-೨-೫)

(೧೪) ಜಾಮಯಃ ॥ ನಿಘಂಟುವಿನಲ್ಲಿ ಗತ್ಯರ್ಥಕವಾಗಿ ಹೇಳಿರುವ ಜಮುಧಾತುವಿಗೆ 'ಜನಿಘಸಿಭ್ಯಾಮಿಣ್' ಸೂತ್ರವಿಹಿತವಾದ ಇಣ್‌ಪ್ರತ್ಯಯ ಬಹುಲಗ್ರಹಣದಿಂದ ಬರುತ್ತದೆ. ಪ್ರತ್ಯಯ ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. 'ಅಲಿಶಲಿಪಲಿ—' ಸೂತ್ರದಿಂದ ಶ್ರೀಭೋಜದೇವನು ಸಾಕ್ಷಾತ್ತಾಗಿ ಇಣ್‌ಪ್ರತ್ಯಯ ಹೇಳಿರುತ್ತಾನೆ. ಕರ್ಮವನ್ನು ಕುರಿತು ಹೋಗುತ್ತವೆ, ಇವುಗಳಿಂದ ಅನ್ನಾದಿಗಳನ್ನು ತಿನ್ನುತ್ತಾರೆ ಎಂದರ್ಥ. ಜನೀ-ಪ್ರಾದುರ್ಭಾವೇ ಧಾತು. ಬಹುಲಗ್ರಹಣದಿಂದ ನಕಾರಕ್ಕೆ ಮಕಾರಾದೇಶ. ತಮ್ಮ ಕಾರಣದಿಂದ ಹುಟ್ಟಿದವುಗಳು ಉದಾ:—' ತ್ವಂ ಸಾನಾವಧಿ ಜಾಮಯಃ ' (ಋ. ಸಂ. ೬-೮-೧೬-೫) ॥

(೧೫) ಸನಾಭಯಃ ॥ ಣಹ-ಬಂಧನೇ ಧಾತು. ಆದಿಗೆ ನತ್ವ 'ನಹೋಭಶ್ಚ' (ಉ-೪-೧೨೨) ಸೂತ್ರದಿಂದ ಇಞ್‌ಪ್ರತ್ಯಯ, ಧಾತು ಹಕಾರಕ್ಕೆ ಭಕಾರಾದೇಶ. ' ನಹ್ಯತೇ ಅನಯಾ ಗರ್ಭ ಇತಿ ನಾಭಿಃ ' ಗರ್ಭವನ್ನು ಧರಿಸಿರುವುದು ಉದರ. ' ಸಮಾನಾ ನಾಭಿರಾಸಾಮಿತಿ ಸನಾಭಯಃ ' ' ಜ್ಯೋತಿರ್ಜನಪದ—' ಸೂತ್ರದಿಂದ ಸಮಾನಪದಕ್ಕೆ ಸಭಾವ. ಒಂದೇ ಮೂಲಪ್ರದೇಶ ಉಳ್ಳವುಗಳು. ಹಸ್ತವೊಂದೇ ಬೆರಳುಗಳಿಗೆ ಉತ್ಪತ್ತಿಸ್ಥಾನ. ಉದಾಹರಣೆ—' ಸನಾಭಯೋ ವಾಜಿನಮೂರ್ಜಯನ್ತಿ ' (ಋ. ಸಂ. ೭-೩-೨೫-೪) ॥

**(೧೬) ಯೋಕ್ತ್ರಾಣಿ. (೧೭) ಯೋಜನಾನಿ ||** ಯುಜಿರ್–ಯೋಗೇ ಧಾತು. 'ದಾಮ್ನೀಶಸಯುಯುಜಸ್ತು—' (ಪಾ. ಸೂ. ೩–೨–೧೮೨) ಸೂತ್ರದಿಂದ ಷ್ಟ್ರನ್‌ಪ್ರತ್ಯಯ. ತ್ರ ಉಳಿಯುತ್ತದೆ. ಧಾತುವಿನ ಲಘೂಪಧೆಗೆ ಗುಣ. ಕುತ್ವ, ಚರ್ತ್ವ. ಯೋಕ್ತ್ರಾಣಿ. 'ಯುಚ್ ಬಹುಲಮ್' ಸೂತ್ರದಿಂದ ಎರಡನೆಯ ಪದದಲ್ಲಿ ಯಚ್‌ಪ್ರತ್ಯಯ. ಅದಕ್ಕೆ ಅನಾದೇಶ, ಲಘೂಪಧ ಗುಣ. ಬಹುವಚನದಲ್ಲಿ 'ಯೋಜನಾನಿ' ರೂಪವಾಗುತ್ತದೆ. ಇವುಗಳಿಂದ ಪದಾರ್ಥಗಳನ್ನು ಕೂಡಿಸುತ್ತಾರೆ, ಕೈಯಿಂದ ಕೂಡಿರುವವುಗಳು, ಇವುಗಳಿಂದ ತಲೆ ಕೂದಲು ಮುಂತಾದವುದಳು ಕಟ್ಟಲ್ಪಡುತ್ತವೆ ಎಂದರ್ಥವಾಗುತ್ತದೆ. ಶಬ್ದ ಸ್ವಭಾವದಿಂದ ಎರಡೂ ನಪುಂಸಕಗಳಾಗಿರುತ್ತವೆ. ಉದಾಹರಣೆ—'**ದಶಯೋಕ್ತ್ರೇಭ್ಯೋ ದಶಯೋಜನೇಭ್ಯಃ' (ಋ. ಸಂ. ೮–೪–೩೦–೨)**

**(೧೮) ಧುರಃ ||** ವಧಾರ್ಥಕವಾದ ಧುರ್ವೀಧಾತುವಿಗೆ ಕರ್ತೃರ್ಥದಲ್ಲಿ ಕ್ವಿಪ್‌ಪ್ರತ್ಯಯ. '**ರಾಲ್ಲೋಪಃ**' (ಪಾ–ಸೂ–೬–೪–೧೧) ಸೂತ್ರದಿಂದ ವಕಾರಕ್ಕೆಲೋಪ. ಧುರ್‌ಶಬ್ದ. ಬಹುವಚನದಲ್ಲಿ 'ಧುರಃ' ಎಂದುರೂಪ. ಕರ್ಮಗಳನ್ನು ಮುಗಿಸುವುದರ ಮೂಲಕ ನಾಶಪಡಿಸುತ್ತದೆ, ಇತರರನ್ನು ಹಿಂಸೆಪಡಿಸುತ್ತದೆ ಎಂದರ್ಥ. ಧ್ವಧಾತುವಿಗೆ ಣಿಜಂತದ ಮೇಲೆ ಔಣಾದಿಕ ಕ್ವಿಪ್‌ಪ್ರತ್ಯಯ ಬಂದು ಬಹುಲಗ್ರಹಣದಿಂದ ಆಕಾರಕ್ಕೆ ಉಕಾರ. ಧರಿಸಲುಯೋಗ್ಯವಾದ ಸುವರ್ಣಾದಿಗಳನ್ನು ಬೆರಳುಗಳಲ್ಲಿ ಧರಿಸುತ್ತಾರೆ. ಉದಾಹರಣೆ—'**ದಶ ಧುರೋ ದಶಯುಕ್ತ ವಹದ್ಭ್ಯಃ**'(ಋ-ಸಂ-೮-೪-೩೦-೨) ||

**(೧೯) ಶಾಖಾಃ ||** ಅಶೂ–ವ್ಯಾಪ್ತೌ. ಧಾತು. ಇದಕ್ಕೆ ಖಪ್ರತ್ಯಯ ಬಂದಾಗ ಅದಕ್ಕೆ ಡಿತ್ವಹೇಳಿ ಶಾಖಶಬ್ದ ವ್ಯುತ್ಪತ್ತಿಯನ್ನು ಭೋಜದೇವನು ಹೇಳಿರುತ್ತಾನೆ. ಸಕಲವನ್ನೂ ವ್ಯಾಪಿಸಿರುವುದೆಂದರ್ಥ. ಅಥವಾ ಶೀಙ್–ಸ್ವಪ್ನೇ. ಧಾತು ಅಧಿಕರಣವಾಚಕವಾದ ಖಶಬ್ದವು ಉಪಪದವಾಗಿರುವಾಗ ಇದಕ್ಕೆ 'ಅಧಿಕರಣೇ ಶೇತೇಃ' (ಪಾ–ಸೂ–೩–೨–೧೫) ಸೂತ್ರದಿಂದ ಅಚ್ ಪ್ರತ್ಯಯ. ಖಶಯೂಃ. ಹಸ್ತದ ತುದಿಯಲ್ಲಿರುವುದರಿಂದ ಬೆರಳುಗಳು ಆಕಾಶದಲ್ಲಿ ಇರುತ್ತವೆ. ಪೃಷೋದರಾದಿಗಣ ಪಠಿತವಾದುದರಿಂದ ಯಕಾರಕ್ಕೆ ಲೋಪ, ಶಕಾರಾಕಾರಗಳಿಗೆ ಸವರ್ಣದೀರ್ಘ ಬಂದರೆ ಖಾಶಾ ಎಂದಾಗುತ್ತದೆ. ಆಗ ಎರಡು ಅಕ್ಷರಗಳಿಗೆ ಸ್ಥಾನವಿನಿಮಯ. ಸ್ತ್ರೀತ್ವದಲ್ಲಿ ಟಾಪ್. ಶಾಖಾ ಎಂದಾಗುತ್ತದೆ.

ಅಥವಾ ಶಕ್ತ್ಯರ್ಥಕ ಶಕಲೃಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ಉಪಧಾದೀರ್ಘ ಕಕಾರಕ್ಕೆ ಖಕಾರಾದೇಶ. ಪುಸ್ತಕಾದಿ ಧಾರಣೆಯಲ್ಲಿ ಅಥವಾ ಕಾರ್ಯಮಾಡಲು ಸಮರ್ಥಗಳಾಗುತ್ತವೆ. ಲಥವಾ ಶಾಖೃ–ವ್ಯಾಪ್ತೌ. ಧಾತು. ಅಚ್‌ಪ್ರತ್ಯಯ. ಕರ್ಮಗಳನ್ನು ವ್ಯಾಪಿಸಿರುವವುಗಳು. ಅಥವಾ ಸ್ವಪ್ನಾರ್ಥಕ ಶೀಙ್‌ಧಾತುವಿಗೆ 'ವೃಕ್ಷಾವಯವಾಚ್ಚ' ಸೂತ್ರದಿಂದ ವಿಹಿತವಾದ ಖಪ್ರತ್ಯಯವು ಹಸ್ತಾವಯವಾರ್ಥನಲ್ಲಿಯೂ ಬರುತ್ತದೆ. ಇದರಲ್ಲಿ ಉಗುರು ಮುಂತಾದವುಗಳು ಇರುತ್ತವೆ ಎಂದರ್ಥ. 'ಅಂಗುಲ್ಯಃ ಕರಶಾಖಾಃ ಸ್ಯುಃ' ಎಂದು ಅಮರ. ವೃಕ್ಷಶಾಖೆಯಂತಿರುವುದರಿಂದ ಬೆರಳುಗಳೂ ಶಾಖಾಶಬ್ದವಾಚ್ಯವಾಗುತ್ತವೆ. ಉದಾ:—'**ಹಸ್ತಾಭ್ಯಾಂದಶಶಾಖಾಭ್ಯಾಂ (ಋ. ಸಂ. ೮–೭–೨೫–೭)** ||

**(೨೦) ಅಭೀಶವಃ ||** ರಶ್ಮಿನಾಮದಲ್ಲಿ ವ್ಯಾಖ್ಯಾತವಾಗಿದೆ. (೧–೫–೫) ಕಾರ್ಯಗಳನ್ನು ವ್ಯಾಪಿಸುತ್ತವೆ, ಕಾರ್ಯ ಮಾಡಲು ಸಮರ್ಥವಾಗುತ್ತವೆ. ಉದಾಹರಣೆ—'**ದಶಾಭೀ ಶುಭ್ಯೋ ಅರ್ಚತಾ ಜರೇಭ್ಯಃ' (ಋ. ಸಂ. ೮–೪–೩೦–೨)** ||

(೨೧) **ದೀಧಿತಯಃ** ॥ ಇದೂ ರಶ್ಮಿನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೫-೬) ಉಂಗುರಾದಿಗಳನ್ನು ಧರಿಸಿರುವುದರಿಂದ ಪ್ರಕಾಶಿಸುತ್ತವೆ. ಬೆರಳುಗಳಿಂದ ಕ್ರೀಡಿಸುತ್ತಾರೆ ಅಥವಾ ಪದಾರ್ಥಗಳನ್ನು ಧರಿಸುತ್ತಾರೆ. ಉದಾಹರಣೆ— **"ಅಗ್ನಿಂ ನರೋ ದೀಧಿತಿಭಿರರಣ್ಯೋಃ"** (ಋ. ಸಂ. ೫-೧-೨೩-೧)

(೨೨) **ಗಭಸ್ತಯಃ** ॥ ರಶ್ಮಿನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೫-೭) ಇವುಗಳಿಂದ ಜನರು ಪದಾರ್ಥಗಳನ್ನು ಧರಿಸುತ್ತಾರೆ ಎಂದರ್ಥ. ಉದಾಹರಣೆ—**"ದೀಪ್ಯತೇ ಮಧೋರಂಶುಶು ಗಭಸ್ತಿಭಿಃ"** ॥

ಕೆಲವರು 'ಸುಹಸ್ತ್ಯಾ' ಎಂದು ಪಾಠಮಾಡುತ್ತಾರೆ. ಇನ್ನು ಕೆಲವರು ಸಸ್ರುತಃ ಎಂದು ಹೇಳುತ್ತಾರೆ. ಇವುಗಳೆಲ್ಲವೂ ನದೀನಾಮಗಳಲ್ಲಿ ವ್ಯಾಖ್ಯಾತವಾಗಿವೆ. ನಿಗಮವನ್ನು ಹುಡುಕಿ ಪಾಠನಿರ್ಣಯವನ್ನು ಮಾಡಿಕೊಳ್ಳಬೇಕು.

ಹೀಗೆ ಇಪ್ಪತ್ತೆರಡು ಬೆರಳುಗಳ ಹೆಸರು

———

ಈ ಇಪ್ಪತ್ತೆರಡು ಶಬ್ದಗಳೂ ಅಂಗಲಿ (ಬೆರಳುಗಳ) ನಾಮಗಳು.

ಅಂಗುಲಯಃ ಕಸ್ಮಾದಗ್ರಗಾಮಿನ್ಯೋ ಭವಂತೀತಿ ವಾಗ್ರಗಾಲಿನ್ಯೋ ಭವಂತೀತಿ ವಾಗ್ರಕಾರಿಣ್ಯೋ ಭವಂತೀತಿ ವಾಗ್ರಸಾರಿಣ್ಯೋ ಭವಂತೀತಿ ವಾಂಕನಾ ಭವಂತೀತಿ ವಾಂಚನಾ ಭವಂತೀತಿ ವಾಪಿ ವಾಭ್ಯಂಜನಾದೇವ ಸ್ಯುಃ ॥

**ಅಂಗುಲಯಃ** (ಬೆರಳುಗಳು) ಎಂಬ ಶಬ್ದದ ನಿಷ್ಪತ್ತಿಯೇನು ಎಂದರೆ **ಅಗ್ರಗಾಮಿನ್ಯೋ ಭವಂತೀತಿ ವಾ**— ಇವು ಬಾಹುಗಳ ಅಥವಾ ಹಸ್ತಗಳ ತುದಿಯಲ್ಲಿರುವವು. ಆದ್ದರಿಂದ ಇವುಗಳಿಗೆ **ಅಂಗುಲಯಃ** ಎಂದುಹೆಸರು ಬಂದಿದೆ **ಅಗ್ರಗಾಲಿನ್ಯೋ ಭವಂತೀತಿ ವಾ**—ಹಸ್ತವನ್ನು ನೀರಿನಲ್ಲಿ ಅದ್ದಿದಾಗ ಈ ಬೆರಳುಗಳ ತುದಿಯಿಂದ ನೀರು ತೊಟ್ಟಿಕ್ಕುವುದು. **ಅಗ್ರಕಾರಿಣ್ಯೋ ಭವಂತೀತಿ ವಾ**—ಕೆಲಸಕಾರ್ಯಗಳನ್ನು ಕೈಗಳಿಂದ ಮಾಡುವಾಗ ಈ ಬೆರಳುಗಳು ಎಲ್ಲಕಿಂತ ಮುಂದೆ ಬಂದು ಕೆಲಸಮಾಡಲು ಸಹಾಯಮಾಡುವವು. **ಅಗ್ರಸಾರಿಣ್ಯೋ ಭವಂತೀತಿ ವಾ**—ಎಲ್ಲಕಿಂತಲೂ ಇವು ಮುಂದೆ ಸರಿಯುವವು. ಅಂಕನಾ **ಭವಂತೀತಿ ವಾ**—ಕೆಲಸಮಾಡುವಾಗ ಇವು ವಸ್ತುಗಳನ್ನು ಹಿಡಿದು ಅಮುಕಿ ಮಾಡುವವು. ಅಂಚನಾ ಭವಂತೀತಿ ವಾ—ಇವು ಚೆನ್ನಾಗಿ ಬಗ್ಗಿ ಅಥವಾ ಬಗ್ಗಿಸಿ ಕೆಲಸಮಾಡುವವು. **ಅಭ್ಯಂಜನಾದೇವ ಸ್ಯುಃ**—ಇವು ಅಭಿಮುಖವಾಗಿ ಹೋಗಿ ಕೆಲಸಮಾಡುವವು. ಉದಾಹರಣೆಗಾಗಿ ಮುಂದಿನ ಋಕ್ಕನ್ನು ಕೊಟ್ಟಿದೆ.

**ಇತ್ಯಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

———

## ಅಥ ನವಮಃ ಖಂಡಃ

### ಒಂಭತ್ತನೆಯ ಖಂಡವು

ದಶಾವನಿಭ್ಯೋ ದಶಕಕ್ಷ್ಯೇಭ್ಯೋ ದಶಯೋಕ್ತ್ರೇಭ್ಯೋ ದಶಯೋಜನೇಭ್ಯಃ ।ದಶಾಭೀಶುಭ್ಯೋ ಅರ್ಚತಾಜರೇಭ್ಯೋ ದಶ ಧುರೋ ದಶ ಯುಕ್ತಾವಹದ್ಭ್ಯಃ॥ (ಋ. ಸಂ. ೧೦-೯೪-೭) ಅವನಯೋಽಙ್ಗುಲಯೋ ಭವಂತ್ಯವಂತಿ ಕರ್ಮಾಣಿ ಕಕ್ಷ್ಯಾಃ ಪ್ರಕಾಶಯಂತಿ ಕರ್ಮಾಣಿ ಯೋಕ್ತ್ರಾಣಿ ಯೋಜನಾನೀತಿ ವ್ಯಾಖ್ಯಾತಮಭೀಶವೋಽಭ್ಯಶ್ನುವತೇ ಕರ್ಮಾಣಿ। ದಶ ಧುರೋ ದಶ ಯುಕ್ತಾ ವಹದ್ಭ್ಯಃ। ಧೂರ್ಧೂರ್ವತೇರ್ವಧಕರ್ಮಣ ಇಯಮಪೀತರಾ ಧೂರೇತಸ್ಮಾದೇವ ವಿಹಂತಿ ವಹಂ ಧಾರಯತೇರ್ವಾ ಕಾಂತಿಕರ್ಮಾಣ ಉತ್ತರೇ ಧಾತವೋಽಷ್ಟಾದಶಾನ್ನನಾಮಾನ್ಯುತ್ತರಾಣ್ಯಷ್ಟಾವಿಂಶತಿರನ್ನಂ ಕಸ್ಮಾದಾನತಂ ಭೂತೇಭ್ಯೋಽತ್ತೇರ್ವಾತ್ತಿಕರ್ಮಾಣ ಉತ್ತರೇ ಧಾತವೋ ದಶ ಬಲನಾಮಾನ್ಯುತ್ತರಾಣ್ಯಷ್ಟಾ ವಿಂಶತಿರ್ಬಲಂ ಕಸ್ಮಾದ್ಬಲಂ ಭರಂ ಭವತಿ ಬಿಭರ್ತೇರ್ಧನನಾಮಾನ್ಯುತ್ತರಾಣ್ಯಷ್ಟಾ ವಿಂಶತಿರೇವ ಧನಂ ಕಸ್ಮಾದ್ಧಿನೋತೀತಿ ಸತೋ ಗೋನಾಮಾನ್ಯುತ್ತರಾಣಿ ನವ ಕ್ರುಧ್ಯತಿಕರ್ಮಾಣ ಉತ್ತರೇ ಧಾತವೋ ದಶ ಕ್ರೋಧನಾಮಾನ್ಯುತ್ತರಾಣ್ಯೇಕಾದಶ ಗತಿಕರ್ಮಾಣ ಉತ್ತರೇ ಧಾತವೋ ದ್ವಾವಿಂಶಶತಂ ಕ್ಷಿಪ್ರನಾಮಾನ್ಯುತ್ತರಾಣಿ ಷಡ್ವಿಂಶತಿಃ ಕ್ಷಿಪ್ರಂ ಕಸ್ಮಾತ್ಸಂಕ್ಷಿಪ್ತೋ ವಿಕರ್ಷೋಽನ್ತಿಕನಾಮಾನ್ಯುತ್ತರಾಣ್ಯೇಕಾದಶಾಂತಿಕಂ ಕಸ್ಮಾದಾನೀತಂ ಭವತಿ ಸಂಗ್ರಾಮನಾಮಾನ್ಯುತ್ತರಾಣಿ ಷಟ್‌ಚತ್ವಾರಿಂಶತ್ಸಂಗ್ರಾಮಃ ಕಸ್ಮಾತ್ಸಂಗಮನಾದ್ವಾ ಸಂಗರಣಾದ್ವಾ ಸಂಗತೌ ಗ್ರಾಮಾವಿತಿ ವಾ ತತ್ರ ಖಲ ಇತ್ಯೇತಸ್ಯ ನಿಗಮಾ ಭವಂತಿ ॥ ೯ ॥



ಅವನಯೋಽಙ್ಗುಲಯೋ ಭವಂತ್ಯವಂತಿ ಕರ್ಮಾಣಿ। ಕಕ್ಷ್ಯಾಃ ಪ್ರಕಾಶಯಂತಿ ಕರ್ಮಾಣಿ। ಯೋಕ್ತ್ರಾಣಿ ಯೋಜನಾನೀತಿ ವ್ಯಾಖ್ಯಾತಂ। ಅಭೀಶವೋಽಭ್ಯಶ್ನುವತೇ ಕರ್ಮಾಣಿ। ದಶ ಧುರೋ ದಶ ಯುಕ್ತಾ ವಹದ್ಭ್ಯಃ। ದೂರ್ಧೂರ್ವತೇರ್ವಧಕರ್ಮಣಃ॥

**ಅವನಯಃ** ಎಂಬುದೂ ಅಂಗುಲಿಗಳ ಹೆಸರುಗಳು. ಏಕೆಂದರೆ ಈ ಬೆರಳುಗಳು ಮಾಡುವ ಕೆಲಸವನ್ನು ಕೆಟ್ಟುಹೋಗದಂತೆ ಕಾಪಾಡುತ್ತವೆ ; **ಕಕ್ಷ್ಯಾಃ** ಕರ್ಮಗಳನ್ನು ಚೆನ್ನಾಗಿ ಪ್ರಕಾಶಪಡಿಸುತ್ತವೆ, ಸ್ಪಷ್ಟವಾಗಿ ಕಾಣುವಂತೆ ಮಾಡುತ್ತವೆ. **ಯೋಕ್ತ್ರಾಣಿ**–ಎಂದರೆ ಸೊಂಟಕ್ಕೆ ಕಟ್ಟುವ (ಸ್ತ್ರೀಯರಿಗೆ) ದರ್ಭೆಹುಲ್ಲಿನ ಪಟ್ಟಿ. ಇದನ್ನು ಮಾಡುವುದೂ ಕಟ್ಟುವುದೂ ಬೆರಳುಗಳಿಂದಲೇ ಆಗುವ ಕಾರಣ ಬೆರಳುಗಳಿಗೆ ಯೋಕ್ತ್ರಾಣಿ ಎಂಬ ಹೆಸರು ಬಂದಿವೆ. **ಅಭೀಶವೋಽಭ್ಯಶ್ನುವತೇ ಕರ್ಮಾಣಿ**–ಅಭೀಶವಃ ಎಂಬ ಶಬ್ದವೂ ಅಂಗುಲಿಯ ಹೆಸರು ಏಕೆಂದರೆ ತಿನ್ನುವುದು, ಭಕ್ಷಿಸುವುದು, ಭೋಜನ ಮಾಡುವುದು ಮೊದಲಾದ ಕರ್ಮಗಳನ್ನು ಈ ಬೆರಳುಗಳ ಸಹಾಯದಿಂದಲೇ ಮಾಡುವುದರಿಂದ ಬೆರಳುಗಳಿಗೆ ಅಭೀಶವಃ ಎಂದೂ ಹೆಸರು ಅಥವಾ ಕೆಲಸಕಾರ್ಯಗಳನ್ನು ಮಾಡುವಾಗ ಈ ಬೆರಳುಗಳು ಆ ಕೆಲಸಗಳಲ್ಲಿ ವ್ಯಾಪಿಸಿರುತ್ತವೆ. ಎಂಬರ್ಥದಿಂದಲೂ ಬೆರಳುಗಳಿಗೆ ಅಭೀಶವಃ ಎಂಬ ಹೆಸರು ಬಂದಿವೆ

ದಶ ಧುರೋ ದಶ ಯುಕ್ತಾ ವಹದ್ಭ್ಯಃ। ಧೂರ್ದೂರ್ವತೇರ್ವಧಕರ್ಮಣಃ।
ಇಯಮಪೀತರಾ ಧೂರೇತಸ್ಮಾದೇವ ವಿಹಂತಿ ವಹಂ। ಧಾರಯತೇರ್ವಾ।

**ದಶ ಧುರೋ ದಶ ಯುಕ್ತಾ ವಹದ್ಭ್ಯಃ**—ಅಶ್ವಗಳು ಅಥವಾ ಎತ್ತುಗಳು ಹೊರುವ ಜೀನು ಮೊದಲಾದವುಗಳಿಗೆ ಧುರಃ ಎಂದು ಹೆಸರು. ಇವನ್ನೂ ಅಶ್ವಾದಿಗಳಿಗೆ ಕಟ್ಟುವಾಗ ಈ ಬೆರಳುಗಳ ಪ್ರಯೋಗವಿರುವುದು ಎಂದರೆ ಬೆರಳುಗಳ ಸಹಾಯದಿಂದ ಈ ಕೆಲಸಕಾರ್ಯಗಳನ್ನು ನೆರವೇರಿಸುವರು: **ದೂರ್ಧೂರ್ವತೇರ್ವಧಕರ್ಮಣಃ**–ದುರಃ ಎಂಬ ಶಬ್ದವು ಅಂಗುಲಿಗಳ ಹೆಸರು ಧುರಃ ಎಂದರೆ ಜೀನುಗಳು, ಲಗಾಮುಗಳು. ಇವನ್ನು ಅಶ್ವವು ಧರಿಸುವುದರಿಂದ ಇವಕ್ಕೆ ಧೂಃ ಎಂಬ ಹೆಸರು, ಇವನ್ನೂ ಕಟ್ಟುವುದಕ್ಕೆ ಬೆರಳುಗಳನ್ನೂ ಉಪಯೋಗಿಸುವುದರಿಂದ ಬೆರಳುಗಳಿಗೆ **ಧುರಃ** ಎಂಬಹೆಸರು. **ಧುರಃ** ಎಂಬಶಬ್ದಕ್ಕೆ ಮತ್ತೊಂದು ಅರ್ಥವೂ ಇರುವುದು. **ಧೂಃ** ಎಂಬ ಶಬ್ದವು ಕೊಲ್ಲು ಎಂಬರ್ಥವಿರುವ ಧೂರ್ವತಿಧಾತುವಿನಿಂದ ನಿಷ್ಪನ್ನವಾಗಿದೆ. ಈ ಕೊಲ್ಲುವ ಕೆಲಸವನ್ನು ಬೆರಳುಗಳ (ಹಸ್ತದ) ಸಹಾಯದಿಂದ ಮಾಡುವುದರಿಂದ **ಧುರಃ** ಎಂಬ ಶಬ್ದಕ್ಕೆ ಬೆರಳುಗಳು ಎಂಬ ಹೆಸರೂ ಇರುವುದು.

ಕಾಂತಿಕರ್ಮಾಣ ಉತ್ತರೇ ಧಾತವೋಽಷ್ಟಾದಶ ॥

ಈ ಕೆಳಗೆ ಹೇಳಿರುವ ಹದಿನೆಂಟು ಧಾತುಗಳೂ ಕಾಂತಿ (ಅಪೇಕ್ಷಿಸು) ಕರ್ಮವನ್ನು ಸೂಚಿಸುವ ಧಾತುಗಳು—

(೧) ವಶ್ಮಿ (೨) ಉಶ್ಮಸಿ (೩) ವೇತಿ (೪) ವೇನತಿ (೫) ವೇಸತಿ
(೬) ವಾಞ್ಛತಿ (೭) ವಷ್ಟಿ (೮) ವನೋತಿ (೯) ಜುಷತೇ
(೧೦) ಹರ್ಯತಿ (೧೧) ಆಚಕೇ (೧೨) ಉಶಿಕ್ (೧೩) ಮನ್ಯತೇ

(೧೪) ಛನ್‌ತ್ಸತ್ (೧೫) ಚಾಕನತ್ (೧೬) ಚಕಮಾನಃ (೧೭) ಕನತಿ
(೧೮) ಕಾನಿಷತ್ ॥

ಇತ್ಯಷ್ಟಾದಶ ಕಾಂತಿ ಕರ್ಮಾಣಃ

'ಕಾಂತಿಕರ್ಮಾಣಃ' (ನಿರು. ೩-೯) ಕಾಂತಿಯೆಂದರೆ ಇಚ್ಛಾ. ಇಚ್ಛಾಕ್ರಿಯೆಯನ್ನು ಹೇಳುವ ಧಾತುಗಳು.

**(೧) ವಶ್ಮಿ ॥** ವಶ-ಕಾಂತೌ. ಅದಾದಿ. ಪರಸ್ಮೈಪದೀ ಲಟ್. ಉತ್ತಮ ಪುರುಷ ಏಕವಚನಾಂತರೂಪ. ಉದಾಹರಣೆ—**"ತದಹಂ ವಶ್ಮಿ ಪವಮಾನ ಸೋಮ"** (ಋ. ಸಂ. ೭-೪-೬-೪) ॥

**(೨) ಉಶ್ಮಸಿ ॥** ಹಿಂದೆ ಹೇಳಿದ ವಶಧಾತುವಿಗೆ ಲಡುತ್ತಮಪುರುಷ ಬಹುವಚನದಲ್ಲಿ ಮಸ್‌ಪ್ರತ್ಯಯ. ಆದಾದಿಯಾದುದರಿಂದ ವಿಕರಣಕ್ಕೆ ಲುಕ್. 'ಸಾರ್ವಧಾತುಕಮಪಿತ್' (ಪಾ. ಸೂ. ೧-೨-೪) ಸೂತ್ರದಿಂದ ಅಪಿತ್ಸಾರ್ವಧಾತುಕವಾದುದರಿಂದ ಅದಕ್ಕೆ ಙಿದ್ವದ್ಭಾವ ಬರುವುದರಿಂದ 'ಗ್ರಹಿಜ್ಯಾವಯಿ'—(ಪಾ. ಸೂ. ೬-೧-೧೬) ಸೂತ್ರದಿಂದ ಧಾತುವಕಾರಕ್ಕೆ ಸಂಪ್ರಸಾರಣ (ಉ) 'ಸಂಪ್ರಸಾರಣಾಚ್ಚ' ಸೂತ್ರದಿಂದ ಪೂರ್ವರೂಪ. ಉಶ್+ಮಸ್ ಎಂದಿರುವಾಗ 'ಇದಂತೋ ಮಸಿಃ' (ಪಾ. ಸೂ. ೭-೧-೪೬) ಸೂತ್ರದಿಂದ ಪ್ರತ್ಯಯಕ್ಕೆ ಇಕಾರ. ಉಶ್ಮಸಿ. ಬಯಸುತ್ತೇವೆ ಎಂದರ್ಥ. ಉದಾಹರಣೆ—**'ತಾಂ ವಾ ವಾಸ್ತೂನ್ಯುಶ್ಮಸಿ ಗಭಧ್ಯೈ'** (ಋ. ಸಂ. ೨-೨-೨೪-೬)

**(೩) ವೇತಿ ॥** 'ವೀ-ಗತಿಪ್ರಜನ ಕಾಂತ್ಯಶನಖಾದನೇಷು' ಅದಾದಿ ಪರಸ್ಮೈಪದೀ. ವಿಕರಣಕ್ಕೆ ಲುಕ್. ಪ್ರಥಮಪುರುಷ ಏಕವಚನಾಂತರೂಪ. 'ಸಾರ್ವಧಾತು—' ಸೂತ್ರದಿಂದ ಗುಣ ಬಂದಿದೆ. ಉದಾ:—**"ವೇಷಿ ಹೋತ್ರ ಮುತ ಪೋತ್ರಂ ಯಜತ್ರಾ"** (ಋ. ಸಂ. ೧-೫-೨೪-೪) ॥

**(೪) ವೇನತಿ ॥** ಇದು ಕೇವಲ ನಿರುಕ್ತದಲ್ಲಿ ಹೇಳಿದ ಧಾತು. ಪಾಣಿನಿಧಾತು ಪಾಠದಲ್ಲಿ 'ವೇನೃ-ಗತಿಜ್ಞಾನ ಚಿಂತಾನಿಶಾಮನವಾದಿತ್ರಗೃಹಣೇಷು' ಎಂದು ಸ್ವರಿತೇತ್ತಾಗಿ ಭ್ವಾದಿಯಲ್ಲಿ ಹೇಳಿದೆ. ಪ್ರ-ಪು-ಏ. ಉದಾ:—**'ನಾ ಸತ್ಯಮಾ ವಿ ವೇನತಮ್'** (ಋ. ಸಂ. ೪-೪-೧೬-೨) ॥

**(೫) ವೇಸತಿ ॥** ಇದೂ ನಿರುಕ್ತಪಠಿತವಾದ ಧಾತು. 'ವೇಶತಿ' ಎಂದು ಪಾಠಾಂತರವೂ ಇದೆ. ಇಚ್ಛಾರ್ಥದಲ್ಲಿ ಹೇಳಿದೆ. ನಿಗಮವನ್ನು ಹುಡುಕಿ ನಿರ್ಣಯಿಸಬೇಕು.

**(೬) ವಾಞ್ಛತಿ ॥** 'ವಾಛಿ-ಇಚ್ಛಾಯಾಮ್. ಭ್ವಾದಿ ಪರಸ್ಮೈಪದೀ. ಇದಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ, ಪರಸವರ್ಣ. ಶಪ್‌ವಿಕರಣ. ಪ್ರ-ಪು-ಏ. ಉದಾ:—**'ವಿಶಸ್ತ್ವಾ ಸರ್ವಾ ವಾಞ್ಛನ್ತು'** (ಋ. ಸಂ. ೮-೮-೩೧-೧) ॥

**(೭) ವಷ್ಟಿ ॥** ಪೂರ್ವೋಕ್ತವಾದ ವಸಧಾತುವಿಗೆ ಪ್ರಥಮ ಪುರುಷೈಕವಚನದಲ್ಲಿ ತಿಪ್ ಬಂದಾಗ 'ವ್ರಶ್ಚಭ್ರಸ್ಜ—' ಸೂತ್ರದಿಂದ ಧಾತು ಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. ಉದಾ:—**ಸಮುಯೋರ್ ಗಾ ಅಜತಿ ಯಸ್ಯ ವಷ್ಟಿ'** (ಋ. ಸಂ. ೧-೩೧-೩) ॥

(೮) ವನೋತಿ ‖ ' ವನು-ಯಾಚನೇ ' ತನಾದಿ. ಪರಸ್ಮೈಪದೀ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಚ್ಛಾರ್ಥವೂ ಇದೆ. ಉವಿಕರಣ. ಅದಕ್ಕೆ ತಿಪ್‌ನಿಮಿತ್ತವಾಗಿ ಗುಣ. ಉದಾ :—' **ಸ್ಪಾರ್ಹಂ ಯದ್ರೇಕ್ಣ ಪರಮಂ ವನೋಷಿ ತತ್** ' (ಋ. ಸಂ. ೧-೨-೨೪-೪)

(೯) ಜುಷತೇ ‖ 'ಜುಷೀ-ಪ್ರೀತಿಸೇವನಯೋಃ' ತುದಾದಿ. ಆತ್ಮನೇಪದೀ. ಇಲ್ಲಿ ಇಚ್ಛಾರ್ಥ ಹೇಳಬೇಕು. ಶವಿಕರಣ. ಇದು ಙಿತ್ತಾಗುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಉದಾ:—'**ಸ ಪುಷ್ಟಿಂ ಯಾತಿ ಜೋಷಮಾ ಚಿಕಿತ್ವಾನ್**' (ಋ. ಸಂ. ೧-೫-೨೫-೫) 'ಜುಷತೇ ಹರ್ಯತಿ' ಎಂದು ಸಾಹಚರ್ಯಹೇಳಿರುವುದರಿಂದ ಜೋಷವೆಂದರೆ ಕಾಮ ಎಂದು ಸ್ಕಂದಸ್ವಾಮಿಯ ಭಾಷ್ಯ. ‖

(೧೦) ಹರ್ಯತಿ ‖ 'ಹರ್ಯ-ಗತಿಕಾಂತ್ಯೋಃ' ಭ್ವಾದಿ ಪರಸ್ಮೈಪದೀ. ಕಾಂತಿಗೆ ಇಚ್ಛಾರ್ಥ ಹೇಳಿದೆ. ಶಪ್ ವಿಕರಣ. ಉದಾ:—'**ತಾ ಜುಷಾಣೋ ಹರ್ಯತಿ ಜಾತವೇದಾಃ**' (ಋ. ಸಂ. ೩-೮-೧೧-೩) ।

(೧೧) ಆಚಕೇ ‖ ಆಙ್-ಉಪಸರ್ಗ. 'ಚಕ-ತೃಪ್ತೌ' ಭ್ವಾದಿ. ಆತ್ಮನೇಪದೀ. ಲಟ್. ಉತ್ತಮಪುರುಷೈಕ ವಚನದಲ್ಲಿ ಇಟ್‌ಪ್ರತ್ಯಯ ಬಂದಾಗ ಅದಕ್ಕೆ 'ಟಿತಆ—' ಸೂತ್ರದಿಂದ ಏತ್ವ. ಪರರೂಪ. 'ಅನಮೋಜ ಆಚಕೇ' (ಋ. ಸಂ. - ೩-೪-೯-೫) ಎಂಬಲ್ಲಿ ಕಾಂತ್ಯರ್ಥಕ ಕಮುಧಾತುವಿಗೆ ಉತ್ತಮಪುರುಷದಲ್ಲಿ ಇಟ್ ಬಂದಾಗ ಛಾಂದಸವಾಗಿ ಧಾತುವಿನ ಮಕಾರಕ್ಕೆ ಲೋಪ ಬರುತ್ತದೆಂದು ಭಾನುದತ್ತನ ಮತ. ಉದಾ:—'**ತ್ವಾಮವಸ್ಯುರಾಚಕೇ**' (ಋ. ಸಂ. ೨-೪-೯-೫) '**ಯಸ್ತೇ ಶತ್ರುತ್ವಮಾಚಕೇ**' (ಋ. ಸಂ. ೬-೩-೯೨,೫) ‖

(೧೨) ಉಶಿಕ್ ‖ ಧಾತುಮಧ್ಯದಲ್ಲಿ ನಾವು ಹೇಳುವುದೂ ಇದೆಯೆಂದು ಹಿಂದೆ ಹೇಳಿದೆ. ಪೂರ್ವೋಕ್ತವಾದ ವಶ+ಧಾತುವಿಗೆ 'ವಶೇಃ ಕಿತ್' (ಉ-೨-೬೮) ಸೂತ್ರದಿಂದ ಕಿಕ್‌ಪ್ರತ್ಯಯ. ಅದಕ್ಕೆ ಕಿತ್ತ್ವ ಹೇಳಿರುವುದರಿಂದ "ಗ್ರಹಿಜ್ಯಾವಯಿ—" ಸೂತ್ರದಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಚಿಕಿನಲ್ಲಿ ಇಕ್ ಉಳಿಯುತ್ತದೆ. ಉದಾ:—

"**ಉಶಿಕ್ ಪಾವಕೋ ಅರತಿಃ ಸುಮೇಧಾಃ**" (ಋ-ಸಂ-೭-೮-೨೯-೧) ‖

(೧೩) ಮನ್ಯತೇ ‖ 'ಮನ-ಜ್ಞಾನೇ.' ದಿವಾದಿ. ಆತ್ಮನೇಪದೀ. ಇಲ್ಲಿ ಇಚ್ಛಾರ್ಥ. ಶ್ಯನ್‌ವಿಕರಣ. ಉದಾ:—"**ಅಧ್ರಶ್ಚಿದ್ಯ ಮನ್ಯಮಾನ ಸ್ತುರಶ್ಚಿತ್**" (ಋ. ಸಂ. ೫-೪-೮-೨) "**ಯದಿ ಮನ್ಯೇತೋಪಮುಸ್ಯ ಮಿತ್ರ್ಯೋದನ್ಯೈಃ**'

(೧೪) ಛನಸ್ಸತ್ ‖ "ಛದಿ-ಸಂವರಣೇ." ಚುರಾದಿ. ಲೇಟ್. (ಐದನೆಯ ಲಕಾರ) ವೇದದಲ್ಲಿ ಮಾತ್ರ ಇದರ ಪ್ರಯೋಗ. ತಿಪ್‌ಬಂದಾಗ 'ಲೇಟೋಽಡಾಟೌ' (ಪಾ-ಸೂ-೩-೪-೯೪) ಸೂತ್ರದಿಂದ ಅದಕ್ಕೆ ಅಡಾಗಮ. "ಇತಶ್ಚ ಲೋಪಃ ಪರಸ್ಮೈಪದೇಷು" (ಪಾ-ಸೂ-೩-೪-೯೭) ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಲೋಪ. "ಸಿಬ್ಬಹುಲಂ ಲೇಟಿ" (ಪಾ-೩-೧-೩೪) ಸೂತ್ರದಿಂದ ಸಿಪ್. ಅದಕ್ಕೂ ಅಡಾಗಮ, ಇಕಾರಲೋಪ. "ಮನ್ಯತೇ ಛನತ್ಸತ್ ವಸುಷಃ" (ಋ. ಸಂ. ೭-೭-೨೯-೩) ಇತ್ಯಾದಿ ಪ್ರಯೋಗವೂ ಇರುವುದರಿಂದ ಛದಿಧಾತುವಿಗೆ ಇಚ್ಛಾರ್ಥ ಹೇಳಬೇಕು." ಎಂದು ಸ್ಕಂದಸ್ವಾಮಿಯ ಭಾಷ್ಯ. ಉದಾಹರಣೆ—

"ದರೇಚತಾಯ ಛನತ್ಸತ್" (ಋ. ಸಂ. ೨-೧-೨೧-೬) "ಅಚ್ಛಾನತ್ಸುಃ ಪಂಚಕೃಷ್ಟಯಃ" (ಋ. ಸಂ. ೮-೬-೨೬-೬) ||

(೧೫) **ಚಾಕನತ್** || ಕನೀ ದೀಪ್ತಿಕಾಂತಿಗತಿಷು ಭ್ವಾದಿ. ಪರಸ್ಮೈಪದೀ ಇದಕ್ಕೆ ಯಜ್ ಬಂದಾಗ ಅದಕ್ಕೆ ಲುಕ್ ವ್ಯತ್ಯಯದಿಂದ 'ನುಗತೋಽನುನಾಸಿಕಾಂತಸ್ಯ' ಎಂಬುದರಿಂದ ನುಗಾಗಮ ಬರುವುದಿಲ್ಲ. ಯಜ್‌ಲುಗಂತದಮೇಲೆ ಲೇಟ್ "ಲೇಟೋಽಡಾಟೌ' ಅದಕ್ಕೆ ಅಡಾಗಮ "ಇತಶ್ಚ ಲೋಪಃ"-ಸೂತ್ರದಿಂದ ತಿಪಿನ ಇಕಾರಕ್ಕೆ ಲೋಪ. ಯಜ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ "ದೀರ್ಘೋಽಕಿತಃ" ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ. ಉದಾ—"ಬ್ರಹ್ಮೇದಿಂದ್ರಸ್ಯ ಚಾಕನತ್ (ಋ. ಸಂ. ೬-೨-೩೮-೧)ಯೇ ನಿಃ ಶಚಿಷ್ಠ ಚಾಕನತ್ ||

(೧೬) **ಚಕಮಾನಃ** || ಚಕ-ತೃಪ್ತೌ ಧಾತು ಭ್ವಾದಿ ಆತ್ಮನೇಪದೀ ತಾಚ್ಛೀಲ್ಯವಯೋವಚನಶಕ್ತಿಷು ಚಾನಶ್ (ಪಾ-ಸೂ-೩-೨-೧೨೮) ಸೂತ್ರದಿಂದ ಚಾನಶ್‌ಪ್ರತ್ಯಯ. ಶಪ್‌ವಿಕರಣ ಚಕ+ಆನ ಎಂದಿರುವಾಗ "ಆನೇಮುಕ್" ಸೂತ್ರದಿಂದ ಮುಗಾಗಮ. ಚಕಮಾನಃ ಉದಾ—"ಚಕಮಾನ ಪಿಬತು ದುಗ್ಧಮಂಶುಮ್ (ಋ. ಸಂ. ೩-೨-೨-೧

(೧೭) **ಕನತೀ** || ಕನೀ ದೀಪ್ತಿಕಾಂತಿಗದಿಷು. ಭ್ವಾದಿ. ಪರಸ್ಮೈಪದೀ ಶಪ್‌ವಿಕರಣ. ಉದಾ—"ಭಾನತ್ ಕನತಿ ಸುದತಮ್" "ಇಂದ್ರ ಸೋಮಸ್ಯ ಕಾಣುಕಾ (ಋ ಸಂ. ೨೬-೪-೨೯-೪)||

(೧೮) **ಕಾನಿಷತ್** || ಪೂರ್ವೋಕ್ತವಾದ ಧಾತುವಿಗೆ ಲೇಟ್‌ಬಂದಾಗ ಪ್ರಥಮಪುರುಷ ಏಕವಚನದಲ್ಲಿ 'ಸಿಬ್ಬಹುಲಂ ಲೇಟಿ' ಸೂತ್ರದಿಂದ ಸಿಪ್ ಇಡಾಗಮ ಬಹುಲಗ್ರಹಣದಿಂದ ಧಾತುವಿನಉಪಧೆಗೆ ವೃದ್ಧಿ ಇಕಾರಲೋಪಾದಿಗಳು ಹಿಂದಿನಂತೆಯೇ ತಿಳಿಯಬೇಕು. ಉದಾ—"ಅಗ್ನೇ" ತೃತೀಯೇ ಸವನೇ ಹಿ ಕಾನಿಷಃ' (ಋ. ಸಂ. ೩-೧-೩೧-೫)||

ಹೀಗೆ ಹದಿನೆಂಟು ಇಚ್ಛಾಕ್ರಿಯಾವಾಚಕ ಧಾತುಗಳು.

ಅಥಾನ್ನನಾಮಾನಿ || ಅನ್ನನಾಮಾನ್ಯುತ್ತರಾಣ್ಯಷ್ಟಾವಿಂಶತಿಃ |

ಈ ಕೆಳಗೆ ಹೇಳಿರುವ ಹದಿನೆಂಟು ನಾಮಗಳೂ ಅನ್ನವೆಂಬ ಅರ್ಥವನ್ನು ಸೂಚಿಸುವ ಪದಗಳು.

(೧) ಅನ್ಧಃ (೨) ವಾಜಃ (೩) ಪಯಃ (೪) ಪ್ರಯಃ (೫) ಪೃಕ್ಷಃ (೬) ಪಿತುಃ (೭) ವಯಃ (೮) ಸಿನಮ್ (೯) ಅವಃ (೧೦) ಕ್ಷು (೧೧) ಧಾಸಿಃ (೧೨) ಇರಾ (೧೩) ಇಲಾ (೧೪) ಇಷಮ್ (೧೫) ಊರ್ಕ್ (೧೬) ರಸಃ (೧೭) ಸ್ವಧಾ (೧೮) ಅರ್ಕಃ (೧೯) ಕ್ಷದ್ಮ (೨೦) ನೇಮಃ (೨೧) ಸಸಮ್ (೨೨) ನಮಃ (೨೩) ಆಯುಃ (೨೪) ಸೂನೃತಾ (೨೫) ಬ್ರಹ್ಮ (೨೬) ವರ್ಚಃ (೨೭) ಕೀಲಾಲಮ್. (೨೮) ಯಶಃ ||

|| ಇತ್ಯಷ್ಟಾವಿಂಶತಿರನ್ನನಾಮಾನಿ ||

(೧) **ಅನ್ಧಃ ॥ ಅಂಧ ಇತ್ಯನ್ನನಾಮ । ಆಧ್ಯಾನೀಯಂ ಭವತಿ** (ನಿರು–೫–೧) ಎಲ್ಲರಿಂದಲೂ ಪ್ರಮುಖವಾಗಿ ಅಪೇಕ್ಷಿಸಲ್ಪಡುವುದು ಅನ್ನ ಇವರಿಂದಲೇ ಶರೀರಸ್ಥಿತಿಯೂ ಪ್ರೀತ್ಯಾದಿಗಳೂ ಉಂಟಾಗುತ್ತವೆ ಎಂದು ಸ್ಕಂದಸ್ವಾಮಿಯ ಭಾಷ್ಯ. ಆಜ್ ಉಪಸರ್ಗ ಪೂರ್ವಕವಾದ ಚಿಂತಾರ್ಥಕವಾದ ಧ್ಯೈಧಾತುವಿಗೆ ಅಸುನ್‌ಪ್ರತ್ಯಯ ಬಂದಾಗ ಬಹುಲಗ್ರಹಣದಿಂದ ಧಾತುವಿನ ಯಕಾರಾಕಾರಗಳಿಗೆ ಲೋಪ ಬರುತ್ತದೆ. ಉಪಸರ್ಗಕ್ಕೆ ಹ್ರಸ್ವಧಾತುವಿಗೆ ನುಡಾಗಮ ಅನ್ಧಸ್ ಸಾಂತಪದವಾಗುತ್ತದೆ. ಅಥವಾ ಭಕ್ಷಣಾರ್ಥಕ ಅದಧಾತುವಿಗೆ ಅದೇರ್ನುಮ್ ಧಶ್ಚ (ಉ–೪–೨೦೦) ಸೂತ್ರದಿಂದ ಕರ್ಮಣಿಯಲ್ಲಿ ಅಥವಾ ಕರ್ತರಿಯಲ್ಲಿ ಅಸುನ್‌ಪ್ರತ್ಯಯ, ನುಮಾಗಮ, ದಕಾರಕ್ಕೆ ಧಕಾರಾದೇಶ. ಅನ್ಧಃ ಪ್ರಾಣಿಗಳಿಂದ ತಿನ್ನಲ್ಪಡುವುದು, ಅನ್ನವೂ ಪ್ರಾಣಿಗಳನ್ನು ತಿನ್ನುತ್ತದೆ. ಈ ಎರಡರ್ಥವೂ ಶ್ರುತಿಯಲ್ಲಿ ಹೇಳಿದೆ. " ಅದ್ಯತೇಽತ್ತಿಚ ಭೂತಾನಿ " (ತೈ–ಉ–೨–೨) ' ಆನಿತ್ಯನೇನಾಂಧಃ ' ಎಂದು ಕ್ಷೀರಸ್ವಾಮೀ 'ಇದರಿಂದ ಬದುಕಿರುತ್ತಾರೆ ಎಂದರ್ಥ ಪ್ರಾಣನಾರ್ಥಕವಾದ ಅನಧಾತುವಿಗೆ ಅಸುನ್ ಬಂದಾಗ ಧುಗಾಗಮ ಉದಾ—**ಆಮತ್ರೇಭಿಃ ಸಿಂಚತಾ ಮಧ್ಯಮನ್ಧಃ** (ಋ. ಸಂ. ೨-೬-೧೩-೧ **' ಇಂದ್ರೋಹಿ ಮತ್ಸ್ಯನ್ಧಃ '** (ಋ. ಸಂ. -೧-೧-೧೭-೧) ॥

(೨) **ವಾಜಃ** ॥ ವಜ–ಗತೌ. ಧಾತು. 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' (ಪಾ–ಸೂ–೩–೩–೧೯) ಸೂತ್ರದಿಂದ ಘಞ್‌ಪ್ರತ್ಯಯ. "ಅತ ಉಪಧಾಯಾಃ" ಧಾತುವಿನ ಉಪಧೆಗೆ ವೃದ್ಧಿ. "ಅಜಿವ್ರಜ್ಯೋಶ್ಚ" ಸೂತ್ರದಲ್ಲಿ ಚಕಾರ ಅನುಕ್ತಸಮುಚ್ಚಾಯಕವಾದುದರಿಂದ ಇಲ್ಲಿ ಕುತ್ವನಿಷೇಧ ಸಿದ್ಧವಾಗುತ್ತದೆ. ವಾಜಃ ಅಕರಾಂತಪದ. ಎಲ್ಲರಿಂದಲೂ ಪ್ರಮುಖವಾಗಿ ಹೊಂದಲ್ಪಡುವುದು, ಇದರಿಂದ ಸುಖ ಹೊಂದುತ್ತಾನೆ, ತಿಂದದ್ದರಿಂದ ತೃಪ್ತಿಹೊಂದುತ್ತಾನೆ, ಶುದ್ಧವಾದ ಅನ್ನದಿಂದ ಸತ್ವ ಶುದ್ಧಿ ಹೊಂದುತ್ತಾನೆ ಎಂದರ್ಥ- 'ಆಹಾರಶುದ್ಧೌ ಸತ್ವಶುದ್ಧಿಃ.' ಎಂದು ಉಪನಿಷತ್ತಿನಲ್ಲಿ ಹೇಳಿದೆ. ಅಥವಾ ಗತ್ಯರ್ಥ ಧಾತುಗಳಿಗೆ ಜ್ಞಾನಾರ್ಥ ಹೇಳಿರುವುದರಿಂದ, ತಿಂದಿರುವ ಅನ್ನದಿಂದ ಧರ್ಮವನ್ನು ತಿಳಿಯುತ್ತಾನೆ ಎಂದರ್ಥವಾಗುತ್ತದೆ. "ದಶ ಧರ್ಮಾನ್ ವಿಜಾಯಂತಿ ಧೃತರಾಷ್ಟ್ರನಿಭೋಧನಾತ್ ಮತ್ತಃ ಪ್ರಮತ್ತಃ ಶ್ರಾಂತಃ ಕ್ರುದ್ಧೋ ಬುಭುಕ್ಷಿತಃ' ॥ ಎಂದು ಭಾರತದಲ್ಲಿ ಹೇಳಿದೆ. ಗತ್ಯರ್ಥಧಾತುಗಳಿಂದ ನಿಷ್ಪನ್ನಗಳಾದ ಅನ್ನನಾಮಗಳಿಗೆ ಈ ಅರ್ಥವನ್ನೇ ಹೇಳಬೇಕು. ಉದಾ:—

"ಸ್ತುತಾನಾಂ ವಾಜಿನೀವಸೂ" (ಋ. ಸಂ- ೧–೧–೩–೫) **"ವಾಜಂ ಹವನಸ್ಯೇದಂ ರಥಮ'** ' (ಋ. ಸಂ. ೧–೪–೧೨–೧) ॥

(೩) **ಪಯಃ** ॥ ಇದು ರಾತ್ರಿನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೭-೨೧) ಅಥವಾ ಪಯಃ.ಗತೌ ಧಾತು. ಅಸುನ್‌ಪ್ರತ್ಯಯ. ಕುಡಿಯಲ್ಪಡುವುದು. 'ಪೇಯ, ಚೋಷ್ಯ, ಲೇಹ್ಯ, ಚರ್ವ್ಯ, ಎಂದು ಅನ್ನ (ಆಹಾರ) ನಾಲ್ಕುವಿಧವಾಗಿವೆ. ಇವನ್ನು ತಿನ್ನುವುದರಿಂದ ವೃದ್ಧಿಹೊಂದುತ್ತಾರೆ. "ಜಾತಾನ್ಯನ್ನೇನ ವರ್ಧನ್ತೇ" (ತೈ-ಉ) ಎಂದು ಶ್ರುತಿ. ಉದಾಹರಣೆ— **'ಪಯಸ್ವಾನಗ್ನ ಆಗಹಿ'** (ಋ. ಸಂ. ೧–೨–೧೨–೩) **'ಯದೀ ವೃತಸ್ಯ ಪಯಸಾ ಪಿಯಾನಃ** (ಋ. ಸಂ. ೧–೫–೨೭–೩) ॥

(೪) **ಪ್ರಯಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೧೨.೩೨) ಅನ್ನದಿಂದ ಸಕಲರೂ ತೃಪ್ತಿ ಹೊಂದುತ್ತಾರೆ. ಉದಾ— **ಉಪ ಪ್ರಯೋಭಿರಾಗತಮ್** (ಋ. ಸಂ. ೧-೧-೩-೪) **" ತುರಾಯ ಪ್ರಯೋನ ಹಮಿ ಸ್ತೋಮಂ ಮಾಹಿನಾಯ "** (ಋ. ಸಂ. ೧-೪-೧೭-೧) **ಪ್ರಯಸ್ವನ್ತಃ ಪ್ರತಿ ಹರ್ಯಾಮಸಿ ತ್ವಾ '** (ಋ. ಸಂ. ೮-೬-೨೧-೩) ॥

(೪) **ಶ್ರವಃ** ॥ ಶ್ರವಣಾರ್ಥಕವಾದ ಶ್ರುಧಾತುವಿಗೆ (ಕರ್ಮಣಿಯಲ್ಲಿ) ಅಸುನ್‌ಪ್ರತ್ಯಯ. ಧಾತುವಿನ ಉಕಾರಕ್ಕೆ ಗುಣ, ಅವಾದೇಶ. ವರ್ಣಿಸಲ್ಪಡುವ ಅನ್ನದ ಕೀರ್ತಿ ಕೇಳಲ್ಪಡುತ್ತದೆ ಧರ್ಮ ಧರ್ಮಿಗಳಿಗೆ ಅಭೇದಾಭಿಪ್ರಾಯದಿಂದ ಕೀರ್ತಿ ಯುಳ್ಳ ಅನ್ನವು ಕೀರ್ತಿನಾಮದಿಂದಲೇ ಹೇಳಿದೆ. ಉದಾ:—**ಮರ್ತಂ ದಧಾಸಿ ಶ್ರವಸೇ ದಿವೇ ದಿವೇ** (ಋ. ಸಂ. ೧–೨–೩೩–೨) "**ಅಭಿಶ್ರವ ಋಜ್ಯನ್ತಃ**" (ಋ. ಸಂ. ೪–೭–೯೩) ॥ 'ಅಕ್ಷಿತಿಶ್ರವಃ' ಇತ್ಯಾದಿ ನಿಗಮಗಳಲ್ಲಿ ವೇದ ಭಾಷ್ಯದಲ್ಲಿ ಶ್ರವವೆಂಬುದು ಅನ್ನನಾಮವೆಂದು ಸ್ಪಷ್ಟವಾಗಿ ಹೇಳಿದೆ. ನಿರುಕ್ತ ಟೀಕೆಯಲ್ಲಿ ಎರಡು ರೀತಿಯಾಗಿಯೂ ಹೇಳಿದೆ. ಪ್ರಯಃ, ಶ್ರವಃ ಎರಡೂ ಅನ್ನನಾಮವೆಂದು ಪ್ರಸಿದ್ಧವಾಗಿದೆ. ಇವೆರಡಲ್ಲಿ ನಿರುಕ್ತಕಾರರ ಅಭಿಪ್ರಾಯವನ್ನು ವಿದ್ವಾಂಸರು ನಿರ್ಣಯಿಸಿಕೊಳ್ಳಬೇಕು.

(೫) **ಪೃಕ್ಷಃ** ॥ ಪೃಚೀ-ಸಂಪರ್ಕೇ ಧಾತು. ಔಣಾದಿಕ ಕ್ವಿಪ್‌ಬಂದಾಗ ಧಾತುವಿಗೆ ಕುಗಾಗಮ ಅನ್ನದ ಸ್ವರೂಪ ತಿಳಿದವ ರಿಂದ ಸಂಪರ್ಕ ಹೊಂದಿರುವುದು " ಪಾಯೋ ತವ ಪ್ರ ಪೃಞ್ಚತೀ " ಎಂಬ ಮಂತ್ರಭಾಷ್ಯದಲ್ಲಿ ಮಾಧವರು ಪೃಚಿಧಾತುವಿಗೆ ದಾನಾರ್ಥವನ್ನು ಹೇಳಿರುತ್ತಾರೆ. ಬೇಡಿದವರಿಗೆ ಕೊಡಲ್ಪಡುವುದು ಅನ್ನ. ಸ್ಕಂದಸ್ವಾಮಿಯು ಪೃಕ್ಷಾ ಎಂಬುದು ಅನ್ನನಾಮ ವೆಂದು ಹೇಳಿರುತ್ತಾನೆ. ಉದಾಹರಣೆ—" **ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚಂತೇ** " (ಋ. ಸಂ. ೧–೫–೧೬–೨)**ಪೃಕ್ಷೋ ವಹತಮಶ್ವಿನಾ** ' ಋ. ಸಂ. ೧–೪–೨-೬) ॥

(೬) **ಪಿತುಃ** ॥ ಪಾ ರಕ್ಷಣೇ ಧಾತು. ' ಕಮಮನಿಜನಿಭಾ '—(ಉ–೧–೭೦) ಸೂತ್ರವಿಹಿತವಾದ ತುಪ್ರತ್ಯಯ. ಬಹುಲಗ್ರಹಣದಿಂದ ಧಾತುವಿಗೆ ಇಕಾರ. ರಕ್ಷಿಸಲ್ಪಡಬೇಕಾದದ್ದು ಅನ್ನ. ಓಪ್ಯಾಯೀ–ವೃದ್ಧೌ. ಈ ಧಾತುವಿಗೂ ತುಪ್ರತ್ಯಯ ಬಂದಾಗ ಧಾತುವಿಗೆ ಪಿ ಆದೇಶ ವೃದ್ಧಿಸಾಧಕವಾದದ್ದು. ಉದಾ:—" **ಪಿತುಂ ನ ಸ್ತೋಷಮ್** ' (ಋ. ಸಂ.೨–೫–೬-೧) **ಪ್ರಮನ್ದಿನೇ ಪಿತುಮದರ್ಚನಾ ವಚಃ** (ಋ. ಸಂ. ೧–೭–೧೨–೧) ॥

(೭) **ವಯಃ** ॥ " ವೀ ಗತಿಪ್ರಜನಕಾನ್ತ್ಯಶನಖಾದನೇಷು " ಧಾತುವಿಗೆ ಅಸುನ್‌ಪ್ರತ್ಯಯ ಗುಣ, ಅಯಾದೇಶ. ವಯಸ್ ಸಾಂತಪದ. ಕಾರಕಭೇದದಿಂದ ಗತ್ಯಾದ್ಯರ್ಥಗಳೆಲ್ಲವೂ ಅನ್ನದಲ್ಲಿ ಸಂಭವಿಸುತ್ತವೆ. ಅಥವಾ ಗತ್ಯರ್ಥಕ ವಯಧಾತು ವಿಗೆ ಅಸುನ್ ಉದಾ—' **ಬೃಹದಸ್ಮೇ ವಯ ಇಂದ್ರೋ ದಧಾತಿ**'. (ಋ. ಸಂ. ೨–೧–೧೦–೨) ' **ಪರಿಷ್ಕ್ರಂ ಸನೋಮನನಾಂ ವಯೋಗಾತವ** (ಋ. ಸಂ. ೫–೫–೧೬–೪) ॥

ಕೆಲವರು ಈ ಪದದ ಸ್ಥಾನದಲ್ಲಿ " ಸುತಃ " ಎಂದು ಪಾಠಮಾಡುತ್ತಾರೆ. ಆಗ ಪ್ರಾಣಿಪ್ರಸವಾರ್ಥಕ ಷೂಞ್‌ಧಾತು. ವಿಗೆ " ತಾತಪ್ರಾತಲಾತ ಸುತ '— ಸೂತ್ರದಿಂದ ಕ್ತ ಪ್ರತ್ಯಯ, ಧಾತುವಿಗೆ ಹ್ರಸ್ವವೂ ನಿಪಾತಿತವಾಗುತ್ತದೆ. ಮಳೆಯಿಂದ ಉಂಟಾಗುವುದು ಅನ್ನ. "ಸೂರ್ಯನಿಂದ ಮಳೆಯೂ, ಮಳೆಯಿಂದ ಅನ್ನವೂ ಅದರಿಂದ ಪ್ರಜೆಗಳು" ಎಂದು ಶ್ರುತಿಯಲ್ಲಿ ಹೇಳಿದೆ. ಇದಕ್ಕೆ ನಿಗಮ ಹುಡುಕಬೇಕು.

(೮) **ಸಿನಮ್** ॥ ಷಿಞ್–ಬಂಧನೇ. ಧಾತು. 'ಇಣ್ ಸಿಞ್‌ದೀಙುಷ್ಯವಿಭ್ಯೋ ನಕ್' (ಉ–೩–೨) ಸೂತ್ರದಿಂದ ನಕ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಭೂತಗಳನ್ನು ಕಟ್ಟಿರುವುದು, ಇರುವಂತೆಮಾಡುವುದು, ಅನ್ನವಿಲ್ಲದಿದ್ದರೆ ಹಸಿವೆಯಿಂದ ಸಾಯುತ್ತವೆ. ಇದರಿಂದ ಕಟ್ಟಲ್ಪಡುತ್ತದೆ. ಅನ್ನಕ್ಕೋಸ್ಕರ ಸೇವಕಾದಿಗಳು ಸಂಬದ್ಧರಾಗಿರುತ್ತಾರೆ. ಉದಾ:– '**ಯೇನ ಸ್ಮಾಸಿನಂ ಭರತಃ ಸಖಿಭ್ಯಃ**' (ಋ. ಸಂ. ೩–೪–೯-೧) ॥

(೯) ಅವಃ॥ ಅವ ಧಾತು. ರಕ್ಷಣಗತ್ಯಾದ್ಯನೇಕಾರ್ಥಗಳಿವೆ. ಇದಕ್ಕೆ ಅಸುನ್‌ಪ್ರತ್ಯಯ ಬಂದರೆ ಅವಸ್ ಸಾಂತ ಪದವಾಗುತ್ತದೆ. ರಕ್ಷಣಾದಿಸಕಲಧಾತ್ವರ್ಥಗಳನ್ನೂ ಅನ್ನದಲ್ಲಿ ಹೇಳಬಹುದು. ಇದರಿಂದ ಲೋಕವು ರಕ್ಷಿಸಲ್ಪಡುತ್ತದೆ ಇತ್ಯಾದಿ. ಉದಾ:—**'ಶ್ರವತ್ ಬ್ರಹ್ಮಣ್ಯವಸಾಗಮತ್'॥ 'ಅಗ್ನಿರ್ಗಿರೋಽವಸಾ ವೇತು ಧೀತಿಮ್' (ಋ. ಸಂ.೧-೫-೨೫-೪)** ॥

(೧೦) **ಕ್ಷು** ॥ ಟು-ಕ್ಷು-ಶಬ್ದೇ. ಕ್ಷಿ-ನಿವಾಸಗತ್ಯೋಃ, ಇವುಗಳಿಗೆ 'ಖನಿಶೃಭ್ಯಾಂ ಡಿಚ್ಚ' (ಉ-೧-೩೨). ಸೂತ್ರದಿಂದ ವಿಹಿತವಾದ ಡಿತ್ತಾದ ಕುಪ್ರತ್ಯಯ ಬರುತ್ತದೆ. ಡಿತ್ತಾದುದರಿಂದ ಧಾತುವಿನ ಟಿಗೆ (ಉ) ಲೋಪ. ಸ್ತೋತೃಗಳಿಂದ ಸ್ತುತಿಸಲ್ಪಡುತ್ತದೆ, ಅನ್ನವೂ ದೇವತೆಯಾದುದರಿಂದ ಅನೇಕಸೂಕ್ತಗಳಿಂದ ಸ್ತುತಿಸಲ್ಪಡುತ್ತದೆ, ಇದರಿಂದ ಲೋಕವು ವಾಸಿಸುತ್ತದೆ ಎಂಬರ್ಥ. ಉದಾ:—**'ತ್ವಂ ವಾಜಸ್ಯ ಕ್ಷುಮತೋ ರಾಯ ಈಶಿಷೇ' (ಋ. ಸಂ. ೨-೫-೧೮-೫) 'ಆ ತೂ ನ ಇಂದ್ರ ಕ್ಷುಮಂತಮ್' (ಋ. ಸಂ. ೬-೫-೩೭-೧)** ॥

(೧೧) **ಧಾಸಿ** ॥ ಬಹುಲಗ್ರಹಣದಿಂದ "ಪ್ಲುಷಿಶುಷಿಕುಷಿಭ್ಯಃ ಕ್ಸಿಃ" (ಉ-೩,೧೫೧) ವಿಹಿತವಾದ ಸಿಪ್ರತ್ಯಯವು ದಾಞ್‌ಧಾತುವಿಗೆ ಬರುತ್ತದೆ. ಕಿತ್ತಾದರೂ 'ಘುಮಾಸ್ಥಾ—' ಸೂತ್ರದಿಂದ ಈತ್ವ ಬರುವುದಿಲ್ಲ. ಯಾಚಕರಿಗೆ ಕೊಡಲ್ಪಡುತ್ತದೆ, ಪ್ರಾಣಧರಿಸುವಂತೆ ಮಾಡುವುದು ಅನ್ನ. ಉದಾ:—

**"ವಿದತ್ಸರ ಮಾ ತನಯಾಯ ಧಾಸಿಮ್" (ಋ-ಸಂ-೧-೫-೧೩-)** ॥

(೧೨) **ಇರಾ** ॥ ಇದು ನದೀನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೩-೨೫)

(೧೩) **ಇಲಾ** ॥ "ಈಡ್ಯತೇ ಇತಿ ಇಲಾ" ತಿನ್ನಲ್ಪಟ್ಟದ್ದರಿಂದ ಜಠರಾಗ್ನಿಯು ಅಧಿಕಪ್ರಕಾಶಿಸುತ್ತದೆ, ಉದರಲ್ಲಿ ಇಡಲ್ಪಡುತ್ತದೆ, ಭುಕ್ತವಾದ ಅನ್ನದಿಂದ ನಿದ್ರಿಸುತ್ತಾರೆ. ಹಸಿವೆಯಾದವನಿಗೆ ನಿದ್ರೆ ಬರುವುದಿಲ್ಲ. ಉದಾ;—

**"ಕಸ್ಮಾ ಇಲಾಂ ಸವೀರಾ ವಾ ಯಜಾಮಹೇ" (ಋ-ಸಂ-೧-೩-೨೦-೪)**

(೧೪) **ಇಷಮ್**॥ 'ಇಷು-ಇಚ್ಛಾಯಾಮ್' ಧಾತು. ಇದಕ್ಕೆ ಕ್ವಿಪ್ ಬಂದರೆ ಸರ್ವಲೋಪವಾಗಿ ಇಷ್ ಉಳಿಯುತ್ತದೆ. ವೇದದಲ್ಲಿ ಸಾಮಾನ್ಯವಾಗಿ ದ್ವಿತೀಯೈಕವಚನಾಂತವಾಗಿಯೇ ದೃಷ್ಟವಾದುದರಿಂದ ಹಾಗೆಯೇ ಹೇಳಿದೆ. ಎಲ್ಲರಿಂದಲೂ ಬಯಸಲ್ಪಡುವುದು ಅಥವಾ ಗತ್ಯರ್ಥಕ ಇಷುಧಾತುವಿಗೆ ಕ್ವಿಪ್. ಎಲ್ಲರಿಂದಲೂಹೊಂದಲ್ಪಡುವುದು. ಉದಾ:—

**"ಇಷಂ ಸ್ತೋತೃಭ್ಯ ಆಭರ" (ಋ. ಸಂ. ೩-೮-೨೨-೧) "ಅಶ್ವಿನಾ ಯಜ್ವರೀರಿಷಃ" (ಋ. ಸಂ. ೧-೧-೫-೧)** ॥

(೧೫) **ಊರ್ಕ್** ॥ ಇದೂ ಅನ್ನದ ಹೆಸರು. 'ಊರ್ಜಯತಿ ಇತಿ ಊರ್ಕ್ ಪ್ರಾಣವಂತನನ್ನಾಗಿ ಬಲವಂತನನ್ನಾಗಿ ಮಾಡುವುದು. ಪಕ್ವ, ಅಥವಾ ಸುಪ್ರವೃಕ್ತ ಪದದಿಂದ ಈ ಶಬ್ದವಾಗಿದೆಯೆಂದು ಸ್ಕಂದಸ್ವಾಮಿಯ ಮತ. ಪಕ್ವಶಬ್ದದಲ್ಲಿ ಪಕಾರಲೋಪ ಬಂದರೆ ಕ್ವ ಉಳಿಯುತ್ತದೆ. ಇಲ್ಲಿ ವರ್ಣವ್ಯತ್ಯಯ ಬಂದರೆ ವಕಾರಕ್ಕೆ ಉಕಾರ, ರುಗಾಗಮ. ದೀರ್ಘ. 'ಸುಪ್ರವೃಕ್ತಂ' ಎಂಬಲ್ಲಿ ಪೃಕ್ತಧಾತು. ರೇಫಲೋಪ. ಕ್ವಿಪ್ ಬಂದಾಗ ಸಂಯೋಗಾದಿ ಲೋಪ. ಅಕಾರಕ್ಕೆ ಉತ್ವ, ರುಗಾಗಮ. 'ಪೃಷೋದರಾದಿ' ಪಠಿತವಾದುದರಿಂದ ಈ ಕಾರ್ಯಗಳೆಲ್ಲಾ ಸಿದ್ಧಿಸುತ್ತವೆ. ಇದರಿಂದ ಪ್ರಾಣ ಧರಿಸಲ್ಪಡುತ್ತದೆ ಅಥವಾ ಜೀವಿಸು

ತ್ತದೆ. 'ಊರ್ಜ–ಬಲಪ್ರಾಣನಯೋಃ' ಧಾತು. ಕರಣಾರ್ಥದಲ್ಲಿ ಇದಕ್ಕೆ ಕ್ವಿಪ್‌ಪ್ರತ್ಯಯ. ಪದಾಂತದಲ್ಲಿ ಕುತ್ವ. ಊರ್ಕ್. ಉದಾಹರಣೆ—**'ಯಂಸಿ ತ್ಮನಮೂರ್ಜಂ ನ ವಿಶ್ವಧ ಕ್ಷರಧ್ಯೈ'** (ಋ. ಸಂ. ೧.೫.೫.೩) ||

(೧೬) **ರಸಃ** || ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೧೨–೩೫) ಅನ್ನಪರ್ಯಾಯವಾಚಿಯಾದಾಗ ಉದಾಹರಣೆ—**'ಮಹೇ ಯತ್ ಪಿತ್ರ ಈಂ ರಸಃ ದಿವೇ ಕಃ** (ಋ. ಸಂ. ೧.೫.೧೫–೫)

(೧೭) **ಸ್ವಧಾ** || ಸ್ವಶಬ್ದ ಉಪಪದವಾಗಿರುವಾಗ ಧಾಞ್‌ಧಾತುವಿಗೆ 'ಗೇಹೇ ಕಃ' ಸೂತ್ರದಿಂದ ವಿಹಿತವಾದ ಕಪ್ರತ್ಯಯವು ಬಹುಲಗ್ರಹಣದಿಂದ ಬಂದರೆ ಧಾತುವಿನ ಆಕಾರಕ್ಕೆ 'ಆತೋಲೋಪಇಟಿ ಚ' ಸೂತ್ರದಿಂದ ಲೋಪ. ಸ್ತ್ರೀತ್ವದಲ್ಲಿ ಟಾಪ್. ತನ್ನವರಿಗೆ ಕೊಡಲ್ಪಡುವುದು, ತನ್ನಲ್ಲಿ ಧರಿಸಿರುವುದು' ತನ್ನ ಧನದಿಂದಲೇ ಶೇಖರಿಸಲ್ಪಡುವುದು ಅನ್ನ. ಉದಾ:—**'ವಿಶ್ವಾ ಹಿ ಮಾಯಾ ಅವಸಿ ಸ್ವಧಾವಃ'** (ಋ. ಸಂ, ೪–೮–೨೪–೧) **'ಆದಹ ಸ್ವಧಾಮನು'** (ಋ.–ಸಂ. ೧–೧–೧೧–೪) ||

(೧೮) **ಅರ್ಕಃ** || ಅರ್ಚ–ಪೂಜಾಯಾಂ. ಧಾತು. 'ಕೃದಾಧಾರಾರ್ಚಿಕಹಿಭ್ಯಃ ಕಃ' (ಉ-೩–೨೮) ಸೂತ್ರದಿಂದ ಕಪ್ರತ್ಯಯ. 'ಚೋಃ ಕುಃ' ಧಾತುಚಕಾರಕ್ಕೆ ಕುತ್ವ. ಅರ್ಕಃ ಪೂಜಿಸಲ್ಪಡುವುದು ಅನ್ನ. ನಿಗಮ ಹುಡುಕಬೇಕು.

(೧೯) **ಕ್ಷದ್ಮ** || ಇದು ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೩) ಹಸಿವೆ ಹೋಗಲಾಡಿಸುವುದೇ ಮುಂತಾದ ತನ್ನ ಕಾರ್ಯದಲ್ಲಿ ಸ್ಥಿರವಾಗಿರುವುದು, ಇದನ್ನು ತಿಂದವನು ದೃಢಕಾಯನಾಗಿ ಸ್ಥಿರವಾಗಿರುತ್ತಾನೆ, 'ಅಹಮನ್ನ–ಮಹಮನ್ನಮದಂತಮದ್ಮಿ' ಎಂದು ಶ್ರುತಿಯಲ್ಲಿಯೂ ಹೇಳಿದೆ. ಮಾಧವರು ಕ್ಷದಿಧಾತುವಿಗೆ ಅಶನಾರ್ಥವನ್ನು ಹೇಳಿರುತ್ತಾರೆ. ಹಸಿದವನಿಂದ ತಿನ್ನಲ್ಪಡುವುದು ಎಂದರ್ಥ. ಉದಾ:—**'ಸ್ವಾದು ಕ್ಷದ್ಮಾಪೋ ವಸತೋ ಸ್ಯೋನಕೃತ್** ||

(೨೦) **ನೇಮಃ** || ಣೀಞ್ ಪ್ರಾಪಣೇ ಧಾತು 'ಅರ್ತಿಸ್ತುಸುಹು— (ಉ–೧–೧೩೭) ಸೂತ್ರದಿಂದ ಮನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಈಕಾರಕ್ಕೆ ಗುಣ. ನೇಮಃ. ದಾನಮಾಡುವವನಿಗೆ ಸುಗತಿಯನ್ನು ಹೊಂದಿಸುತ್ತದೆ, ಇದರಿಂದ ದೇಹಯಾತ್ರೆ ಕಳೆಯಲ್ಪಡುತ್ತದೆ.

"ನೇಮಾ" ಎಂದು ಕೆಲವರು ನಕಾರಾಂತವಾಗಿ ಪಾಠಮಾಡುತ್ತಾರೆ. ಆಗ ಬಹುಲಗ್ರಹಣದಿಂದ ಮನ್‌ಪ್ರತ್ಯಯದ ನಕಾರಕ್ಕೆ ಇತ್ಸಂಜ್ಞೆ ಬರುವುದಿಲ್ಲವೆಂದು ತಿಳಿಯಬೇಕು. ಆ ಸೂತ್ರದಲ್ಲಿ ವೃತ್ತಿಕಾರನೂ ಹಾಗೆಯೇ ಹೇಳಿರುತ್ತಾನೆ. ಅಥವಾ ಮನಿನ್ ಪ್ರತ್ಯಯದಿಂದ ರೂಪಸಿದ್ಧಿಯಾಗುತ್ತದೆ. ನಿಗಮವನ್ನು ಹುಡುಕಿ ಪಾಠನಿರ್ಣಯ ಮಾಡಿಕೊಳ್ಳಬೇಕು.

(೨೧) **ಸಸಮ್** || ಸಸ-ಸ್ವಪ್ನೇ ಧಾತು 'ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' ಸೂತ್ರದಿಂದ ಘ ಪ್ರತ್ಯಯ ಊಟಮಾಡಿದವನಿಗೆ ನಿದ್ರೆ ಚನ್ನಾಗಿ ಬರುವುದರಿಂದ ನಿದ್ರಾಸಾಧನವಾದದ್ದು ಅನ್ನ. ಹಸಿದವನಿಗೆ ಚನ್ನಾಗಿ ನಿದ್ರೆಬರುವುದಿಲ್ಲ. ಉದಾ—**"ಸಸೇನ ಚಿದ್ವಿಮ ದಾಯಾನಹೋ ವಸು"** (ಋ. ಸಂ. ೧.೪.೯.೩)

[೨೨] **ನಮಃ** || 'ಣಮು. ಪ್ರಹ್ವತ್ವೇ, ಶಬ್ದೇ ಚ' ಧಾತು. ಅಸುನ್ ಪ್ರತ್ಯಯ ಬಂದಾಗ ನಮಸ್ ಎಂದು ಸಾಂತಪದವಾಗುತ್ತದೆ. ಹುಟ್ಟಿದೊಡನೆಯೇ ಪೂರ್ವಜನ್ಮಸುಕೃತದಿಂದ ತಾನಾಗಿ ಬಂದು ಸೇರುತ್ತದೆ. ದೇವತೆಯಾದುದರಿಂದ ನಮಸ್ಕರಿಸಲ್ಪಡುತ್ತದೆ. ಅನ್ನವುಳ್ಳವರನ್ನು ಅನ್ನಹೇತುವಿನಿಂದ ನಮಸ್ಕರಿಸುತ್ತಾರೆ. ಉದಾ—ಪ್ರವೋ ಮಹೇ ಮಹಿ ನಮೋ ಭರಧ್ವಮ್ (ಋ. ಸಂ. ೧–೫–೧–೨) 'ಏನಾವೋ ಅಗ್ನಿಂ' ನಮಸಾ (ಋ. ಸಂ. ೫-೨-೨೧–೧]

[೨೩] ಆಯುಃ॥ ಇದರಿಂದ ಪ್ರಾಣ ಇರುತ್ತವೆ. ಅನ ಪ್ರಾಣನೇ. ಔಣಾದಿಕ ಉಣ್ ಪ್ರತ್ಯಯ ಉದಾ— ಪಾಹಿ ಸದಮಿದ್ ವಿಶ್ವಾಯುಃ [ಋ. ಸ. ೧.೨-೨೨-೩]

(೨೪) ಸೂನೃತಾ॥ ಉಷೋನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೮-೧೪) "ಸುಷ್ಠು ನಯನ್ತಿ ಕ್ಷುತ್ತ್ರ-ಯುಕ್ತಾನ್' ಕ್ಷುಧಿತರಾದವರಿಗೆ ಅಧಿಕವಾಗಿ ಕೊಡುತ್ತಾರೆ, ಅವರಿಂದ ಪ್ರಾರ್ಥಿಸಲ್ಪಡುತ್ತವೆ ಎಂದರ್ಥ. ಅಥವಾ 'ಶೋಭನಾ ನರಃ ಸುನರಃ' ಪುಣ್ಯಶಾಲಿಗಳಾದ ಮನುಷ್ಯರು. 'ಅನ್ಯೇಷಾಮಪಿ ದೃಶ್ಯತೇ' ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. 'ಸೂನೃಷು ತಾಯತೇ ವಿಸ್ತೀರ್ಯತೇ' ಪುಣ್ಯವಂತರಲ್ಲಿ ಅನ್ನವು ಅಭಿವೃದ್ಧವಾಗುತ್ತದೆ. ತನು ವಿಸ್ತಾರೇ. ಧಾತು. ಡಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. ಉದಾಹರಣೆ—"ಪುರುಣೀಥೇ ಜರತೇ ಸೂನೃತಾವಾನ್" (ಋ. ಸಂ. ೩-೪-೨೫-೭) "ಅಶ್ವಿನಾ ಸೂನೃತಾ-ವತೀ" (ಋ. ಸಂ- ೧-೨-೪-೩) ॥

(೨೫) ಬ್ರಹ್ಮ॥ ಬೃಹಿ-ವೃದ್ಧೌ. ಧಾತು. 'ಬೃಂಹೇರ್ನಲೋಪಶ್ಚ' (ಉ-೪-೧೪೧) ಸೂತ್ರದಿಂದ ಮನಿನ್ ಪ್ರತ್ಯಯ. ಇದಿತ್ ಪ್ರಯುಕ್ತವಾಗಿ ಬಂದಿರುವ ನುಮಿನ ನಕಾರಕ್ಕೆ ಲೋಪ. ಬ್ರಹ್ಮನ್ ನಾಂತಪದವಾಗುತ್ತದೆ. ಪ್ರಾಣಿಗಳಿಂದ ಇದು ಅಧಿಕವಾಗುತ್ತದೆ. ಯಾವಾಗಲೂ ಪ್ರಾಣಿಗಳಿಂದ ತಿನ್ನಲ್ಪಟ್ಟರೂ ಇದು ಕ್ಷೀಣವಾಗುವುದಿಲ್ಲ. 'ಜಾತಾನ್ಯನ್ನೇನ ವರ್ಧಂತೇ. ಎಂಬ ಶ್ರುತಿವಚನವಂತೆ ಅನ್ನದಿಂದ ಭೂತಗಳು ಅಭಿವೃದ್ಧವಾಗುತ್ತವೆ. ಉದಾಹರಣೆ—"ಉಪ ಬ್ರಹ್ಮಾಣಿ ವಾಘತಃ" (ಋ. ಸಂ. ೧-೧-೫-೫)

(೨೬) ವರ್ಚಃ॥ ವರ್ಚ-ದೀಪ್ತೌ. ಧಾತು. ಅಸುನ್‌ಪ್ರತ್ಯಯ ಬಂದರೆ ವರ್ಚಸ್ ಸಾಂತಪದವಾಗುತ್ತವೆ' ಶರೀರಾದಿಗಳಿಗೆ ಅನ್ನವು ದೀಪ್ತಿದಾಯಕವಾಗಿವೆ. ಉದಾಹರಣೆ—'ತಮಾ ಸಂಸೃಜ ವರ್ಚಸಾ' (ಋ. ಸಂ. ೧-೨-೧೨-೩) 'ಸಂ ಮಾಗ್ನೇ ವರ್ಚಸಾ ಸೃಜ' (ಋ. ಸಂ.೧-೨-೧೩-೪) 'ಆಯುಷಾ ಸಹ ವರ್ಚಸಾ' (ಋ.ಸಂ.೮-೩-೨೭-೪)

(೨೭) ಕೀಲಾಲಮ್॥ ಕಲ-ಗತೌ. ಚುರಾದಿಗಣಪಠಿತಧಾತು. ಕೀಲಬಂಧನೇ. ಖಂಡನಾರ್ಥವೂ ಹೇಳಿದೆ. ಅಥವಾ ಕೀಲಾ ಎಂದರೆ ಜಠರಾಗ್ನಿ. 'ತಂ ಲಾತಿ' ಅದನ್ನು ಹೆಚ್ಚಿಸುವುದು. ಕೀಲಾಉಪಪದವಾಗಿರುವಾಗ ಧಾತುವಿಗೆ "ಕರ್ಮಣ್ಯಣ್" (ಪಾ. ಸೂ. ೩-೨-೧) ಸೂತ್ರದಿಂದ ಅಣ್‌ಪ್ರತ್ಯಯ. ಬಂಧನಾರ್ಥದಲ್ಲಿ ಹಸಿವೆಯಿಂದ ಸಾಯುವ ಪ್ರಾಣಿಗಳನ್ನು ಇದು ಕಟ್ಟುತ್ತದೆ ಅಂದರೆ ಜೀವಿಸಿರುವಂತೆ ಮಾಡುತ್ತದೆಂದರ್ಥ. ಖಂಡನಾರ್ಥದಲ್ಲಿ ಅನ್ನವು ಮೃದುವಾದುದರಿಂದ ಸುಖವಾಗಿ ಛೇದ್ಯವಾದುದು ಎಂದರ್ಥ. ಉದಾ :—'ಕೀಲಾಲಪೇ ಸೋಮಪೃಷ್ಠಾಯ ವೇದಸೇ' (ಋ. ಸಂ. ೮-೪-೨೨-೪)

(೨೮) ಯಶಃ॥ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೫೫) ದೀಪ್ತಿದಾಯಕವಾದದ್ದು, ಕೀರ್ತಿಕರವೆಂದು ಮಾಧವರ ಮತ. ಉದಾ:—

'ಯಶೋ ನ ಪಕ್ವಂ ಮಧುಗೋಷ್ವಂತರಾ' (ಋ. ಸಂ. ೮-೬-೨-೫) 'ತುವಿದ್ಯುಮ್ನ ಯಶಸ್ವತಾ' (ಋ. ಸಂ. ೩-೧-೧೬-೬) ॥

ಹೀಗೆ ಇಪ್ಪತ್ತೆಂಟು ಅನ್ನನಾಮಗಳು ॥೭॥

———

ಅನ್ನಂ ಕಸ್ಮಾದಾನತಂ ಭೂತೇಭ್ಯೋಽತ್ತೇರ್ವಾ ॥

ಅನ್ನಕ್ಕೆ ಅನ್ನವೆಂಬ ಹೆಸರು ಹೇಗೆ ಬಂದಿತು ಎಂದರೆ **ಆನತಂ ಭೂತೇಭ್ಯಃ** ಪ್ರಾಣಿಗಳು ಆಹಾರಾದಿಗಳನ್ನು ತಿನ್ನುವಾಗ ಅಥವಾ ಮನುಷ್ಯರು ಭೋಜನಮಾಡುವಾಗ (ಆನತಂ) ಮುಖವನ್ನು ತಗ್ಗಿಸಿ ಎಂದರೆ ಬಗ್ಗಿ ತಿನ್ನುವುದರಿಂದ ಅನ್ನಕ್ಕೆ ಅನ್ನವೆಂದು ಹೆಸರು. ಅಥವಾ **ಅದ-ಭಕ್ಷಣೇ** ತಿನ್ನು ಎಂಬರ್ಥವಿರುವ ಅದ್ ಎಂಬ ಧಾತುವಿನಿಂದ ಅನ್ನವೆಂಬ ಶಬ್ದವು ನಿಷ್ಪನ್ನವಾಗಿದೆ. ಎಂದರೆ ತಿನ್ನಲ್ಪಡುವ ಆಹಾರಕ್ಕೆ ಅನ್ನವೆಂದು ಹೆಸರು. ಈ ವಿಷಯದಲ್ಲಿ—**ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ** (ತೈ-ಉ-೨) ಎಂಬ ಶ್ರುತಿ ವಾಕ್ಯವೂ ಇರುವುದು.

॥ ಅತ್ತಿಕರ್ಮಾಣ ಉತ್ತರೆ ಭಾತವೋ ದಶ ॥

ತಿನ್ನು ಎಂಬರ್ಥವಿರುವ ಅತ್ತಿ ಇತ್ಯಾದಿ ಧಾತುಗಳ ನಾಮಗಳು. ಈ ಧಾತುನಾಮಗಳು ಹತ್ತು ಇರುವವು.

---

(೧) ಆವಯತಿ (೨) ಭರ್ವತಿ (೩) ಬಭಸ್ತಿ (೪) ವೇತಿ (೫) ವೇವೇಷ್ಟಿ
(೬) ಅವಿಷ್ಯನ್ (೭) ಒಪ್ಸತಿ (೮) ಭಸಥಃ (೯) ಬಬ್ಧಾಮ್ (೧೦) ಹ್ವರತಿ.

ಇತಿ ದಶಾತ್ತಿಕರ್ಮಾಣಃ ॥ ೮ ॥

(೧) **ಆವಯತಿ** ॥ ಹತ್ತು ತಿನ್ನುವ ಕ್ರಿಯೆಯನ್ನು ಹೇಳುವ ಧಾತುಗಳನ್ನು ಹೇಳುತ್ತಾನೆ. ಆಙ್. ಉಪಸರ್ಗ. ವೀಧಾತು. ಅದಾದಿಯಲ್ಲಿ ಹೇಳಿದ್ದರೂ 'ಬಹುಲಂ ಛಂದಸಿ' ಸೂತ್ರದಿಂದ ಶಪಿಗೆ ಲುಕ್ ಬರುವುದಿಲ್ಲ, ಶಪ್‌ನಿಮಿತ್ತವಾಗಿ ಗುಣ, ಅಯಾದೇಶ. ಅಥವಾ ವೇಙ್-ತಂತುಸಂತಾನೇ. ಭ್ವಾದಿ. ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಇಲ್ಲಿ ಭಕ್ಷಣಾರ್ಥ ತೋರುತ್ತದೆ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಉದಾಹರಣೆ—**"ಆ ತು ನಃ ಸ ವಯತಿ ಗವ್ಯಮಶ್ವ್ಯಮ್" (ಋ. ಸಂ. ೬-೨-೨-೧೦)** ॥

(೨) **ಭರ್ವತಿ**॥ ಭರ್ವ-ಹಿಂಸಾಯಾಮ್ ಭ್ವಾದಿ. ಪರಸ್ಮೈಪದೀ. ಲಟ್. ಇಲ್ಲಿ ಭಕ್ಷಣಾರ್ಥ. ಉದಾ-**ಪೃಥೂನ್ಯಗ್ನಿರನು ಯಾತಿ ಭರ್ವನ್** (ಋ. ಸಂ. ೪-೫-೮-೨)**ತೇನ ಸೂಭರ್ವಂ ಶತವತ್ ಸಹಸ್ರಮ್** (ಋ.ಸಂ.೮-೫-೨೦-೫)

(೩) **ಬಭಸ್ತಿ** ॥ ಭಸ-ಭರ್ತ್ಸನದೀಪ್ತ್ಯೋಃ. ಜುಹೋತ್ಯಾದಿಯಾದುದರಿಂದ ಶಪಿಗೆ ಶ್ಲುವಿಕರಣ ಬಂದು ದ್ವಿತ್ವಾದಿಗಳು ಬರುತ್ತವೆ. ಉದಾ—**' ಹರೀ ಇವಾಂಧಾಂಸಿ ಬಪ್ಸತಾ (ಋ. ಸಂ. ೧-೨-೨೬-೨)**

(೪) **ದೇವೇಷ್ಟಿ** ॥ ವಿಷ್ಲೃ-ವ್ಯಾಪ್ತೌ ಧಾತು. ಜುಹೋತ್ಯಾದಿಯಲ್ಲಿ ಶ್ಲುವಿಕರಣ ' ಶ್ಲೌ ' ಸೂತ್ರದಿಂದ ಗುಣ 'ಣಿಜಾಂ ತ್ರಯಾಣಾಂ ಗುಣಃ ಶ್ಲೌ" ಸೂತ್ರದಿಂದ ಅಭ್ಯಾಸಕ್ಕೆ ಗುಣ. ಷ್ಟುತ್ವ- ಉದಾ:—**ಸ್ವತ್ಯೈದಯೋ ಯಥಾತಿಥಿ ಜ್ಯೋತಿಷ್ಕೃತ್ವಾ ಪರಿವೇವೇಷ್ಟಿ " 'ಯದಾ ತ್ವಾ ಅತಿಥಯಃ ಪರಿವೇಷ್ಟಿ ' ಮರುತಃ ಪರಿವೇಷ್ಟಾರಃ ॥** ಇಲ್ಲಿ ಪ್ರಯೋಜಕವ್ಯಾಪಾರ ತೋರುತ್ತದೆ.

೫ (ವೇತಿ) ॥ ವೀ ಧಾತುವಿಗೆ ಗತ್ಯಾದ್ಯರ್ಥ ಹಿಂದೆ ಹೇಳಿದೆ. ಅದಾದಿಯಾದುದರಿಂದ ಶಪಿಗೆ ಲುಕ್ ಗುಣ. ಉದಾ— **ವೀತಂ ಪಾತಂ ಪಯಸ ಉಸ್ರಿಯಾಯಾಃ** (ಋ. ಸ. ೨-೨-೨೩-೪) ॥

(೬) **ಅವಿಷ್ಯನ್** ॥ ಅವ ಧಾತುವಿಗೆ ರಕ್ಷಣಾದಿ ಅನೇಕಾರ್ಥ ಹಿಂದೆ ಹೇಳಿದೆ. ವ್ಯತ್ಯಯದಿಂದ ವರ್ತಮಾನಕಾಲದಲ್ಲಿ ಲೃಟ್. ಅದಕ್ಕೆ " ಲೃಟಃ ಸದ್ವಾ " ಸೂತ್ರದಿಂದ ಶತೃಪ್ರತ್ಯಯ. ಸ್ಯವಿಕರಣ. ಅದಕ್ಕೆ ಇಡಾಗಮ. ಷತ್ವ. ಏಕವಚನದಲ್ಲಿ ಸುಮಾದಿಗಳು ಬಂದು ಉಕ್ತರೂಪವಾಗಿದೆ. ಉದಾ—· **ಸೃಷ್ವವಿಷ್ಯನ್ನತಸೇಷು ತಿಷ್ಠತಿ** (ಋ. ಸಂ. ೧-೪-೨೩-೨)

(೭) **ಬಪ್ಸತಿ** ॥ ಬಸಧಾತು ಹಿಂದೆ ಹೇಳಿದೆ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಬಂದಾಗ ಅದಕ್ಕೆ ಅತಾದೇಶ. 'ಘಸಿಭಸೋರ್ಹಲಿ ಚ' (ಪಾ. ಸೂ. ೬-೪-೧೦೦) ಸೂತ್ರದಿಂದ ಧಾತುವಿನ ಉಪಧೆಗೆ ಲೋಪ. 'ಖರಿಚ' ಸೂತ್ರದಿಂದ ಬಕಾರಕ್ಕೆ ಚರ್ತ್ವ. ಉದಾಹರಣೆ—**"ದದ್ಭಿರ್ವನಾನಿ ಬಪ್ಸತಿ"** (ಋ. ಸಂ. ೬-೩-೨೯-೩)॥

(೮) **ಭಸಥಃ** ॥ ಹಿಂದೆ ಹೇಳಿದ ಧಾತುವಿಗೇ ಲಟ್ ಬಂದು ಅದಕ್ಕೆ ಥಸ್ ಬಂದಾಗ 'ಬಹುಲಂ ಛಂದಸಿ' ಸೂತ್ರದಿಂದ ಶಪಿಗೆ ಶ್ಲು ಆದೇಶ ಬರುವುದಿಲ್ಲ. ಶ್ಲು ಬಾರದಿದ್ದರೆ ದ್ವಿತ್ವವೂ ಇಲ್ಲ. ಉದಾ :—' **ನಥ ದೇವಾ ಭಸಥಶ್ಚನ** ' (ಋ. ಸಂ. ೪-೮-೨೫-೪).

(೯) **ಬಬ್ಧಾನ್** ॥ ಪೂರ್ವೋಕ್ತವಾದ ಧಾತುವಿಗೆ ಲೇಟ್. ತಸಿಗೆ ' ತಸ್‌ಥಸ್—' ಸೂತ್ರದಿಂದ ತಾಮಾದೇಶ ಉಪಧಾಲೋಪ ಛಾಂದಸವಾದುದರಿಂದ ಬರುವುದಿಲ್ಲ. ' ಶ್ಲು ' ದ್ವಿತ್ವ. ಇದು ಬಂದಮೇಲೆ ' ಘಸಿಬಸೋರ್ಹಲಿ 'ಸೂತ್ರದಿಂದ ಉಪಧಾಲೋಪ. ' ಝಲ ' ಸೂತ್ರದಿಂದ ಸಿಚ್‌ಲೋಪ ಪಕ್ಷದಲ್ಲಿ ಛಾಂದಸವಾಗಿ ಸಲೋಪ. ಸಕಾರಮಾತ್ರ ಲೋಪ ಪಕ್ಷದಲ್ಲಿ 'ಝಲೋಝಲಿ' ಸೂತ್ರದಿಂದ ಸಲೋಪ. ಭಷ್ತ್ವ ಜಶ್ತ್ವ. ಉದಾ :—' **ಬಬ್ಧಾಂ ತೇ ಹರೀಧಾನಾ** ' ॥

(೧೦) **ಹ್ವರತಿ** ॥ ಹ್ವೃ-ಕೌಟಿಲ್ಯೇ. ಧಾತು. ಭ್ವಾದಿ. ಪರಸ್ಮೈಪದೀ. ಶಪ್‌ನಿಮಿತ್ತವಾಗಿ ಗುಣ. ರಪರವಾಗಿ ವಾಗಿ ಬರುತ್ತದೆ. ಉದಾ :—' **ಅಪಾಮುತಿಷ್ಠದ್ಧರುಣಹ್ವರಂತನುಃ** ' (ಋ. ಸಂ. ೧-೪-೧೮-೫) ' **ಉಪಹ್ವರೇ ಯದುಪರಾ ಅಪಿನ್ವನ್** (ಋ. ಸಂ. ೧-೫-೨-೧)

ಹೀಗೆ ಹತ್ತು ಭಕ್ಷಣಾರ್ಥವನ್ನು ಕೊಡುವ ಧಾತುಗಳು.

---

## ॥ ಅಥ ಬಲನಾಮಾನಿ । ಬಲನಾಮಾನ್ಯುತ್ತರಾಣ್ಯಷ್ಟಾವಿಂಶತಿಃ॥

ಬಲ, ಶಕ್ತಿ ಎಂಬರ್ಥವಿರುವ ನಾಮಗಳನ್ನು ವಿವರಿಸಲಾಗುವುದು. ಈ ಬಲನಾಮಗಳು ಇಪ್ಪತ್ತೆಂಟು ಇರುವವು.

[೧] ಓಜಃ [೨] ಪಾಜಃ [ಪಾ] ಪಾಜಃ [೩] ಶವಃ [೪] ತರಃ [೫] ತವಃ [೬] ತ್ವಕ್ಷಃ [೭] ಶರ್ಧಃ [೮] ಬಾಧಃ [೯] ನೃಮ್ಣಮ್ [೧೦] ತವಿಷೀ [೧೧] ಶುಷ್ಮಮ್ [೧೨] ಶುಷ್ಣಮ್ [೧೩] ಶೂಷಮ್ [೧೪] ದಕ್ಷಃ [೧೫] ವೀಲು [೧೬] ಚ್ಯೌತ್ನಮ್ [೧೭] ಸಹಃ [೧೮] ಯಹಃ

[೧೯] ವಧಃ [೨೦] ವರ್ಗಃ [೨೧] ವೃಜನಮ್ [೨೨] ವೃಕ್ [೨೩]ಮಜ್ಮನಾ [೨೪] ಪೌಂಸ್ಯಾನಿ [೨೫] ಧರ್ಣಸಿಃ [೨೬] ದ್ರವಿಣಮ್ [೨೭] ಸ್ಯನ್ದ್ರಾಸಃ [೨೮] ಶಮ್ಬರಮ್ ॥

ಇತ್ಯಷ್ಟಾವಿಂಶತಿರ್ಬಲನಾಮಾನಿ ॥ ೯ ॥

**ಓಜಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೨-೪೩) 'ಉಬ್ಜಂತಿ ಅನೇನ ಇತಿ ಓಜಃ' ಬಲವುಳ್ಳವರ ಸನ್ನಿಧಿಯಲ್ಲಿ ಜನರು ಭೀತಿಯಿಂದ ಋಜುಸ್ವಭಾವವುಳ್ಳವರಾಗುತ್ತಾರೆ. ಆರ್ಜವಕ್ಕೆ ಇದು ಸಾಧನ. ಶತ್ರುಗಳನ್ನು ಇದರಿಂದ ಬಗ್ಗಿಸುತ್ತಾರೆ. ಇದರಿಂದ ಐಶ್ವರ್ಯಾದಿಗಳು ಹೆಚ್ಚುತ್ತವೆ, ವ್ಯಾಯಾಮಾದಿಗಳಿಂದ ಇದು ಹೆಚ್ಚಾಗುತ್ತದೆ, ಇದರಿಂದ ಶತ್ರುಗಳು ಹಿಂಸಿಸಲ್ಪಡುತ್ತಾರೆ ಎಂದರ್ಥ. 'ಉಷೇರ್ಜುಟ್ ಚ' ಎಂದು ಭೋಜಸೂತ್ರ. ಅಸುನ್ ಬಂದಾಗ ಗುಣ. ಬಲವು ಶತ್ರುಗಳನ್ನು ಸುಡುತ್ತದೆ. ಉಷ-ದಾಹೇ. ಧಾತು. ಉದಾ:—

**"ವಸೂನಿ ಜಾತೇ ಜನಮಾನ ಓಜಸಾ" (ಋ. ಸಂ. ೬-೭-೩-೩)**

(೩) **ವಾಜಃ** ॥ ಅನ್ನನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೭-೨) ಇದರಿಂದ ಜಯವನ್ನು ಬಯಸುವವರು ಶತ್ರುವನ್ನು ಕುರಿತು ಹೋಗುತ್ತಾರೆ, ವ್ಯಾಯಾಮಾದಿಗಳಿಂದ ಹೊಂದಲ್ಪಡುತ್ತದೆ. ಮುಂದೆಯೂ ಗತ್ಯರ್ಥಧಾತು ನಿಷ್ಪನ್ನವಾದರೆ ಈ ಎರಡು ಅರ್ಥ ಹೇಳಲೇಬೇಕು. ಪ್ರೇರಣಾರ್ಥಕ ಧಾತುವಿನಿಂದ ವಾಜಪದವಾಗಿದೆಯೆಂದು ಮಾಧವರ ಮತ. ಇದರಿಂದ ಶತ್ರುಗಳನ್ನು ಓಡಿಸುತ್ತಾನೆ ಎಂದರ್ಥ. ಉದಾ:—**"ಪರಿವಾಜೇಷು ಭೂಷಥಃ" (ಋ. ಸಂ. ೩-೧-೧೨-೪)** ॥

**ಪಾಜಃ** ॥ (ಪಾಠಾಂತರ) ಪಾ-ರಕ್ಷಣೇ. ಧಾತು. 'ಪಾತೇರ್ಜುಟ್ ಚ' ಸೂತ್ರದಿಂದ ಅಸುನ್ ಬಂದಾಗ ಜುಡಾಗಮ. ಉದಾ:—**"ಕೃಣುಷ್ವ ಪಾಜಃ ಪ್ರಸಿತಂ ನ ಪೃಥ್ವೀಮ್"** (ಋ. ಸಂ. ೩-೪-೨೩-೧) 'ಸಮಿದ್ಧಸ್ಯ ರುಶದದರ್ಶ ಪಾಜಃ' ಮಂತ್ರದಲ್ಲಿ ಸ್ಕಂದಸ್ವಾಮಿಯು 'ಪಾಜವೆಂದರೆ ಬಲ' ಎಂದು ಮಾತ್ರ ಹೇಳಿರುತ್ತಾನೆ. ಬಲನಾಮವೆಂದು ಹೇಳಲಿಲ್ಲ. 'ಪರಿವಾಜೇಷು ಭೂಷಥ' ಎಂಬ ಮಂತ್ರದಲ್ಲಿ ಬಲನಾಮವೆಂದು ಹೇಳಿದೆ. "ಅತ್ಯಂ ನ ಮಿಹೇ ವಿನಯನ್ತಿ ವಾಜಿನಮ್" ಎಂಬಲ್ಲಿಯೂ ಬಲನಾಮ ವಾಜವೆಂದೇ ಹೇಳಿದೆ. ಆದುದರಿಂದ ವಾಜಪಾಜ ಎರಡು ಶಬ್ದಗಳಿಗೂ ಬಲನಾಮತ್ವ ಸ್ಪಷ್ಟವಾಗಿದೆ. ಅನೇಕ ನಿಯಮ ಪರಿಶೀಲನೆಯಿಂದ ವಿದ್ವಾಂಸರು ನಿರ್ಣಯಿಸಿಕೊಳ್ಳಬೇಕು.

(೩) **ಶವಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೨-೪೧) ಉದಾ:—**"ಮಾ ಭೇಮ ಶವಸಸ್ಪತೇ" (ಋ. ಸಂ. ೧-೩-೩-೨-೧)** ॥

(೪) **ತರಃ** ॥ ತೄ-ಪ್ಲವನತರಣಯೋಃ ಭ್ವಾದಿ. ಪರಸ್ಮೈಪದೀ. ಅಸುನ್‌ಪ್ರತ್ಯಯ ಬಂದಾಗ ಧಾತುವಿಗೆ ಗುಣ. ತರಸ್ ಸಾಂತಪದ. ಇದರಿಂದ ಆಪತ್ತನ್ನು ದಾಟುತ್ತಾರೆ. ಉದಾ:—**"ಯಾವತ್ತರೋ ಮಘವನ್ ಯಾವದೋಜಃ" (ಋ. ಸಂ. ೧-೧-೧-೨೧)** ॥

(೫) **ತವಃ** ॥ ತವಧಾತು ವಧಾರ್ಥದಲ್ಲಿ ಹೇಳಿದೆ. ಅಸುನ್‌ಪ್ರತ್ಯಯ. ಬಲವು ವಧಸಾಧನವಾಗುತ್ತದೆ. ಉದಾ:— **"ಅಸಾದಮಿಂದ್ರ ತವಸಾ ಜಘನ್ಥ" (ಋ. ಸಂ. ೩-೨-೨-೩) "ಯೋಗೇ ಯೋಗೇ ತವಸ್ತರಮ್" (ಋ. ಸಂ. ೧-೨-೨೯-೨)**

(೬) ತ್ವಕ್ಷಃ ॥ ತ್ವಕ್ಷೂ-ತನೂಕರಣೇ. ಧಾತು. ಹಿಂದಿನಂತೆ ಅಸುನ್‌ಪ್ರತ್ಯಯ. ಸಾಂತಪದ. ಇದರಿಂದ ಶತ್ರುಗಳು ಕೃಶರಾಗಿಮಾಡಲ್ಪಡುತ್ತಾರೆ. ಉದಾಹರಣೆ—

**"ಸ ಪ್ರ ರಿಕ್ವೋ ತ್ವಕ್ಷಸಾ ಕ್ಷ್ಮೋ ದಿವಶ್ಚ" (ಋ. ಸಂ. ೧-೭-೧೦-೫)** ॥

(೭) **ಶರ್ಧಃ** ॥ ಶರ್ಧಧಾತುವಿಗೆ ಉತ್ಸಾಹಾರ್ಥವನ್ನು ಸ್ಕಂದಸ್ವಾಮಿಯು ಹೇಳಿರುತ್ತಾನೆ. ಅಸುನ್. ಶತ್ರು ಜಯಾದಿಗಳಲ್ಲಿ ಇದು ಉತ್ಸಾಹಕೊಡುತ್ತದೆ. ಉದಾ—**"ಅಭ್ರಾಜಿ ಶರ್ಧೋ ಮರುತೋ ಯದರ್ಣಸಮ್ (ಋ. ಸಂ. ೪-३-೧೫-೭)** ॥

(೮) **ಬಾಧಃ** ॥ 'ಬಾಧೃ-ವಿಲೋಡನೇ' ಧಾತು. 'ಅಕರ್ತರಿ ಚ ಕಾರಕೇ ಸಂಜ್ಞಾಯಾಂ(ಪಾ.ಸೂ. ३-३.೧೯) ಸೂತ್ರದಿಂದ ಘಞ್. ಇದರಿಂದ ಶತ್ರುಗಳು ಬಾಧಿಸಲ್ಪಡುತ್ತಾರೆ. ಬಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೯) **ನೃಮ್ಣಮ್**॥ 'ನೃಮ್ಣಂ ನೄನ್ ನತಹಮ್ (ನಿರು.-೧೧-೯) ಎಂದು ಭಾಷ್ಯ. ಶತ್ರುಗಳಾದ ಜನರನ್ನು ಕುರಿತು ಬಗ್ಗುತ್ತಾರೆ, ಅಥವಾ ಶತ್ರುಗಳನ್ನು ಬಗ್ಗುವಂತೆ ಮಾಡುತ್ತದೆಂದು ಣಿಜಂತಾರ್ಥ ತೋರುತ್ತದೆ. 'ಇಂದ್ರ ನೃಮ್ಣಂ ಹಿ ತೇ ಶವಃ' ಎಂಬ ಋಕ್ ಭಾಷ್ಯದಲ್ಲಿ ಯಾವಕಾರಣದಿಂದ ಶತ್ರುಗಳಾದ ಮನುಷ್ಯರನ್ನೂ ನಮಸ್ಕರಿಸುವಂತೆ ಮಾಡುವೆಯೋ ಅದು ನಿನ್ನ ಬಲವೆಂದು ಹೇಳಿದೆ. ನೃನಮನ ಪದವು ಪೃಷೋದರಾದಿಯಲ್ಲಿ ಪಠಿತವಾದುದರಿಂದ ವರ್ಣಲೋಪಾದಿಗಳು ಬಂದು ನೃಮ್ಣ ಎಂದಾಗಿದೆ. ಉದಾ—**'ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ'(ಋ. ಸಂ. ೮-೧-೯-೧) 'ಮಹಿಶ್ರವಸ್ತುವಿನೃಮ್ಣಮ್ (ಋ. ಸಂ. ೧-३-೨೭-೧)** ॥

(೧೦) **ತವಿಷೀ** । ವೃದ್ಧ್ಯರ್ಥದಲ್ಲಿ "ತವಿ" ಎಂದು ಸೌತ್ರಧಾತು ಹೇಳಿದೆ. ಅದಕ್ಕೆ ಔಣಾದಿಕ ಟಿಷಚ್ ಪ್ರತ್ಯಯ ಟಿತ್ತಾದುದರಿಂದ ಟಿಡ್ಢಾಣಞ್-ಸೂತ್ರದಿಂದ ಙೀಪ್. ಉದಾ—**"ಕೃಷ್ಣಾ ರಜಾಂಸಿ ತವಿಷೀಂ ದಧಾನಃ (ಋ. ಸಂ.೧-३-೬.೪) ಯುಷ್ಮಾಕಮಸ್ತು ತವಿಷೀ ಪನೀಯಸೀ "(ಋ. ಸಂ. ೧-३-೧೮-೨]** ॥

(೧೧) **ಶುಷ್ಮಮ್** ॥ ಶುಷ-ಶೋಷಣೇ ಧಾತು. 'ಅವಿಸಿವಿಸಿಶುಷಿಭ್ಯಃ-ಉದಾ-(ಉ-೧.೧೪೧) ಸೂತ್ರದಿಂದ ಮಕ್‌ಪ್ರತ್ಯಯ. ಕಿತ್ತ್ವಾತಿದೇಶದಿಂದ್ಲಘೂಪಧಗುಣ ಬರುವುದಿಲ್ಲ. ಇದರಿಂದ ಶತ್ರುಗಳು ಒಣಗುತ್ತಾರೆ ಎಂದರ್ಥ. ಶುಷಧಾತುವಿಗೆ ಮಾಧವರು ಪ್ರೀಣನಾರ್ಥವನ್ನು ಹೇಳಿರುತ್ತಾನೆ. ಪ್ರೀತಿದಾಯಕವಾದದ್ದು ಬಲ, ಶುಷ್ಮಮಿತಿ ಬಲನಾಮ, ಶೋಷಯತೀತಿ ಸತಃ" [ನಿರು ೨-२४] ಎಂದು ಭಾಷ್ಯ. ಆಗ ಣಿಜಂತದಮೇಲೆ ಮಕ್ ಎಂದು ತಿಳಿಯಬೇಕು ಉದಾ—**ಶುಷ್ಮ ಇಂದ್ರಮವಾತಾ ಅಹ್ರುತಪ್ಸವಃ (ಋ. ಸಂ. ೧-೪-೧೨-೪) 'ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಮ್ (ಋ. ಸಂ. ೨-೬-೭-೧)** ॥

(೧೨) **ಶುಷ್ಣಮ್** ॥ (೧३) **ಶೂಷಮ್** ॥ ಪೂರ್ವೋಕ್ತವಾದ ಧಾತುವಿಗೆ 'ಪ್ಲುಷಮುಷಕುಲಷ—' ಸೂತ್ರದಿಂದ ಕಾರ್ಯಬಂದು ನಿಪಾತಿತವಾಗಿದೆ. ಹಿಂದಿನಂತೆಯೇ ಅರ್ಥವಾಗುತ್ತದೆ. ಉದಾಹರಣೆ—**"ಇಂದ್ರಾಯ ಶೂಷಮರ್ಚತಿ" (ಋ. ಸಂ. ೧-೧-೧೮-೫) "ಇನತಮಃ ಸತ್ವಭಿ ರ್ಯೋಹ ಶೂಷೈಃ" (ಋ. ಸಂ. ३-३-೧३-೨)** ॥

(೧೪) **ದಕ್ಷಃ** ॥ 'ದಕ್ಷ-ಶೈಘ್ರ್ಯೇ ಚ' ಧಾತು ಚಕಾರದಿಂದ ವೃದ್ಧ್ಯರ್ಥವೂ ಇದೆ. ಚುರಾದಿಯಲ್ಲಿ ಗತಿಹಿಂಸಾರ್ಥವೂ ಹೇಳಿದೆ. ಸ್ಕಂದಸ್ವಾಮಿಯು ಉತ್ಸಾಹಾರ್ಥವನ್ನು ಹೇಳಿರುತ್ತಾನೆ. ಅಚ್‌ಪ್ರತ್ಯಯ ಬಂದರೆ ಅಕಾರಾಂತವೂ, ಅಸುನ್

ಬಂದರೆ ಸಕಾರಾಂತವೂ ಆಗುತ್ತದೆ. ದಕ್ಷ ಎಂಬುದು ಸಕಾರಾಂತವಾಗಿ ಬಲನಾಮವಾಗಿದೆಯೆಂದು ಸ್ಕಂದಸ್ವಾಮಿ. ಇದರಿಂದ ಶತ್ರುವಿಜಯದಲ್ಲಿ ವೇಗಶಾಲಿಯಾಗುತ್ತಾನೆ, ಇದರಿಂದ ಶತ್ರುಗಳು ಹಿಂಸಿಸಲ್ಪಡುತ್ತಾರೆ, ಶತ್ರುವಿಜಯದಲ್ಲಿ ಇದರಿಂದ ಪ್ರೋತ್ಸಾಹಗೊಳ್ಳುತ್ತಾನೆ ಎಂದರ್ಥ. ಉದಾಹರಣೆ—“ **ಮಿತ್ರಂ ಹುವೇ ಪೂತದಕ್ಷಮ್** ” ॥ “ **ಜಜ್ಞಾನಾ ಪೂತದಕ್ಷಸಾ** ” **(ಋ. ಸಂ. ೧–೨-೮-೪)**

(೧೫) **ವೀಲು** ॥ ಸಂಸ್ತಂಭನಾರ್ಥದಲ್ಲಿ ವೀಲಧಾತು ನಿರುಕ್ತದಲ್ಲಿ ಹೇಳಿದೆ. ‘ಭೃಮೃಶೀತೃಚರಿ—’(ಉ–೧–೭) ಸೂತ್ರವಿಹಿತವಾದ ಉಪ್ರತ್ಯಯವು ಬಹುಲಗ್ರಹಣದಿಂದ ಉಪ್ರತ್ಯಯ. ಇದರಿಂದ ದೃಢರಾಗುತ್ತಾರೆ. ಶತ್ರುಗಳು ಇದರಿಂದ ಸ್ತಬ್ಧರಾಗುತ್ತಾರೆ, ಬಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೧೬) **ಚ್ಯೌತ್ನಮ್** ॥ ಚ್ಯುಙ್–ಗತೌ ಧಾತು. ಣಿಜಂತಾರ್ಥವನ್ನೂ ಹೇಳಬಹುದು. ಔಣಾದಿಕ ತ್ನಪ್‌ಪ್ರತ್ಯಯ ಣಿದ್ವದ್ಭಾವದಿಂದ ವೃದ್ಧಿ. ಇದರಿಂದ ಶತ್ರುಗಳನ್ನು ರಾಜ್ಯದಿಂದ ಪ್ರಚ್ಯುತಿಗೊಳಿಸುತ್ತಾರೆ. ಉದಾ :—‘ **ಪ್ರಚ್ಯೌತ್ನೇನ ಷುಷುವಾ ಸತ್ಯರಾಧಾಃ (ಋ. ಸಂ. ೮–೧–೮–೬)** ॥

(೧೭) **ಸಹಃ** ॥ ಷಹ–ಮರ್ಷಣೇ. ಧಾತ್ವಾದಿಗೆ ಸತ್ವ. ಛಂದಸ್ಸಿನಲ್ಲಿ ತಿರಸ್ಕರಿಸುವುದು ಎಂಬರ್ಥವೂ ಇದೆ. ಅಸನ್ ಬಂದರೆ ಸಾಂತಪದವಾಗುತ್ತದೆ. ಇದರಿಂದ ಶತ್ರುಗಳನ್ನು ತಿರಸ್ಕರಿಸುತ್ತಾರೆ. ಉದಾ:—‘ **ಯೋ ಸಹಾಂಸಿ ಸಹಸಾ ಸಹನ್ತೇ** ’ **(ಋ. ಸಂ. ೫–೧–೮–೪)**

(೧೮) **ಯಹಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೧೨–೪೨) ಈ ಬಲದಿಂದ ಶತ್ರುವು ಹೊಂದಲ್ಪಡುತ್ತಾನೆ, ಕರೆಯಲ್ಪಡುತ್ತಾನೆ ಎಂದರ್ಥ. ಬಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೧೯) **ವಧಃ** ॥ ಹನ–ಹಿಂಸಾಗತ್ಯೋಃ ಧಾತು. ‘ಹನಶ್ಚ ವಧಃ’ (ಪಾ. ಸೂ. ೩–೩–೭೬) ಸೂತ್ರದಿಂದ ಅಪ್ ಪ್ರತ್ಯಯ ಬಂದಾಗ ಧಾತುವಿಗೆ ವಧಾದೇಶ. ಇದರಿಂದ ಶತ್ರುವು ಹಿಂಸಿಸಲ್ಪಡುತ್ತಾನೆ. ಉದಾಹರಣೆ ಹುಡುಕಬೇಕು.

(೨೦) **ವರ್ಗಃ** ॥ (೨೧) **ವೃಜನಮ್** ॥ (೨೩) **ವೃಕ್** ॥ ವೃಜೀ–ವರ್ಜನೇ ಧಾತು. ಘಞ್‌ಪ್ರತ್ಯಯ ಲಘೂಪಧ ಗುಣ. ‘ ಚಜೋಃ ಕುಘಿಣ್ಯತೋಃ ’ ಸೂತ್ರದಿಂದ ಜಕಾರಕ್ಕೆ ಕುತ್ವ. ವರ್ಗ ಎಂದಾಗುತ್ತದೆ. ‘ ಕೃಪೃವೃಜಿ ಮನ್ದಿ—’ (ಉ–೨–೭೬) ಸೂತ್ರದಿಂದ ಕ್ಯುಪ್ರತ್ಯಯ. ‘ ಯುವೋರನಾಕೌ ” ಸೂತ್ರದಿಂದ ಅನಾದೇಶ. ಕಿತ್ತಾದುದರಿಂದ ಗುಣವಿಲ್ಲ. ವೃಜನಮ್. ಕ್ವಿಪ್ ಬಂದರೆ ಸರ್ವಲೋಪ. ‘ ಚೋಃ ಕುಃ ’ ಪದಾಂತದಲ್ಲಿ ಕುತ್ವ. ವೃಕ್ ಬಲದಿಂದ ಪ್ರಾಣಿಗಳು ತೆಗೆಯಲ್ಪಡುತ್ತವೆ. ಶತ್ರುಪ್ರಾಣವಿಯೋಗವಾಗುತ್ತದೆಂದರ್ಥ. ಉದಾ :— ‘ **ಜರಯಂತೀ ವೃಜನಂ ಯದ್ವದೀಯತೇ** ’ **(ಋ. ಸಂ. ೧–೪–೩–೫)** ‘ **ಪ್ರತೀಚೀನಂ ವೃಜನಂ ದೋಹಸೇ ಗಿರಾ** ’ (ಋ. ಸಂ. ೪–೨-**೨೩–೧)** ಮಾಧವರು ಮಧ್ಯೋದಾತ್ತವಾದ ವೃಜನಪದವು ಬಲ ಮತ್ತು ಯುದ್ಧಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ಹೇಳಿರುತ್ತಾರೆ. ‘ **ವೃಜನೇನ ವೃಜಿನಾನ್ತ್ಸಿಮ್ಪಿಪೇಷ** ’ ॥ ‘ **ತ್ವಂ ಶುಷ್ಣ ವೃಜನೇ ಪೃಕ್ಷ ಆಣೌ । ಜರಯನ್ತೀ ವೃಜನಮ್** ’ **(ಋ. ಸಂ- ೧–೪–೩–೫)** ॥

**(೨೩) ಮಜ್ಮನಾ** ॥ ‘ಟು ಮಸ್ಜೋ ರುದ್ಧೌ.’ ಧಾತು. ಔಣಾದಿಕ ಮನಿನ್‌ಪ್ರತ್ಯಯ. “ಝಲಾಂ ಜಶ್ ಝಶಿ”ಸೂತ್ರದಿಂದ ಸಕಾರಕ್ಕೆ ಜಶ್ತ್ವ. ಮಜ್ಜ್ಮನ್ ನಾಂತಪದವಾಗುತ್ತದೆ. ನಿಗಮದಲ್ಲಿ ಸಾಮಾನ್ಯವಾಗಿ ತೃತೀಯೈಕವಚನಾಂತವಾಗಿಯೇ ದೃಷ್ಟವಾದುದರಿಂದ ಹಾಗೆಯೇ ಪಾಠಮಾಡಿದೆ. ಶತ್ರುಗಳನ್ನು ಮುಳಗಿಸುವುದು ಬಲ. ಉದಾಹರಣೆ—

**"ನಾಭಾ ಪೃಥಿವ್ಯಾ ಭುವನಸ್ಯ ಮಜ್ಮನಾ (ಋ.ಸಂ.೨.೨.೧೨.೪) 'ಸ ಇಸ್ಮಹಾನಿ ಸಮಿಥಾನಿ ಮಜ್ಮನಾ' (ಋ-ಸಂ-೧-೪-೧೯-೫) "ವಿ ರೋದಸೀ ಮಜ್ಮನಾ ಬಾಧ್ಯತೇ ಶವಃ"**

(೨೪) **ಪೌಂಸ್ಯಾನಿ** ॥ ಪುಂಸಿ-ಅಭಿವರ್ಧನೇ. ಧಾತು. 'ಅಘ್ನ್ಯಾದಯಶ್ಚ (ಉ-೪-೧೦೮) ಸೂತ್ರದಿಂದ ಯತ್ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪುಂಸ್ತ್ವದಾಯಕವಾದದ್ದು ಬಲ. ಉದಾ:—

**"ಪೌಂಸ್ಯಾನಿ ನಿಯುತಃ ಸಶ್ಚುರಿಂದ್ರಮ್" (ಋ-ಸಂ-೪-೭-೮-೩) "ಯಸ್ಮಿನ್ ವಿಶ್ವಾನಿ ಪೌಂಸ್ಯಾ" (ಋ-ಸಂ-೧-೧-೧೦-೪) "ಮಹತ್ತದಸ್ಯ ಪೌಂಸ್ಯಮ್ ॥ (ಋ-ಸಂ-೧-೫-೩೦-೫)**

(೨೫) **ಧರ್ಣಸಿ** ॥ ಧೃ-ಧಾರಣೇ. ಧಾತು. 'ಸಾನಸಿ ವರ್ಣಸಿಪರ್ಣಸಿ—' (ಉ-೪-೧೦೪) ಸೂತ್ರದಿಂದ ಅಸಿಪ್ರತ್ಯಯ, ನುಡಾಗಮ, ಗುಣ ನಿಪಾತಿತವಾಗಿವೆ. ಇದರಿಂದ ರಾಜ್ಯಾದಿಗಳು ಧರಿಸಲ್ಪಡುತ್ತವೆ. ಬಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೨೬) **ದ್ರವಿಣಮ್** ॥ ದ್ರು-ಗತೌ. ಧಾತು. 'ದ್ರುದಕ್ಷಿಭ್ಯಾಮಿನನ್' (ಉ-೨-೫೨) ಸೂತ್ರದಿಂದ ಇನಪ್ರತ್ಯಯ. ಧಾತುವಿಗೆ ಗುಣ. ಅವಾದೇಶ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. **ಉದಾ:— "ಸನೋ ವದಾತ್ ದ್ರವಿಣಮ್"**

(೨೭) **ಸ್ಯನ್ದ್ರಾಸಃ** ॥ 'ಸ್ಯದಿ-ಕಿಂಚಿಚ್ಚಲನೇ' ಧಾತು ಇದಿತ್ತಾದುದರಿಂದ ನುಮ್. 'ಅನ್ದ್ರಗನ್ದ್ರಸಿಲಿಂಧ-' ಎಂಬ ಸೂತ್ರದಿಂದ ರನ್‌ಪ್ರತ್ಯಯ. ಸ್ಯನ್ದ್ರಶಬ್ದದಮೇಲೆ ಜಸ್‌ಬಂದಾಗ ಆದಕ್ಕೆ 'ಆಜ್ಜಸೇರಸುಕ್' ಸೂತ್ರದಿಂದ ಅಸುಗಾಗಮ. ಇದರಿಂದ ಶತ್ರುವು ಚಲಿಸುವಂತೆ ಮಾಡುತ್ತಾನೆ. ಬಲಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೨೮) **ಶಮ್ಬರಮ್** ॥ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೮೮) ಇದರಿಂದ ಶತ್ರುವು ಆವರಿಸುತ್ತಾನೆ, ಆಪತ್ತನ್ನು ಹೋಗಲಾಡಿಸುತ್ತವೆ, ಉಪದ್ರವ ಶಮನಮಾಡುವುದು, ಯುದ್ಧಾದಿಗಳಲ್ಲಿ ಉತ್ಕೃಷ್ಟವಾದದ್ದು. ಇಂದ್ರನು ಬಲಾಧಿದೇವತೆಯಾದುದರಿಂದ ಅವನಿಂದ ಕೊಡಲ್ಪಡುವುದು. 'ಯಾ ಚ ಕಾ ಚ ಬಲಕೃತಿರಿಂದ್ರ ಕರ್ಮೈವ ತತ್' ಎಂದು ಈ ವಿಷಯ ಭಾಷ್ಯದಲ್ಲಿ ಹೇಳಿದೆ. ಬಲಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು. ॥

ಹೀಗೆ ಇಪ್ಪತ್ತೆಂಟು ಬಲದ ಹೆಸರು.

॥ ಬಲಂ ಕಸ್ಮಾದ್ಬಲಂ ಭರಂ ಭವತಿ ಬಿಭರ್ತೇಃ॥

ಬಲಶಬ್ದಕ್ಕೆ ಅರ್ಥವೇನು ? ಬಲವೆಂಬ ಶಬ್ದವು ಧರಿಸು, ಸ್ವಾಮಿಯಾಗು ಎಂಬರ್ಥವಿರುವ ಬಿಭರ್ತಿ ಧಾತುವಿನಿಂದ ನಿಷ್ಪನ್ನವಾಗಿದೆ. ಬಲಯುತನಾದ ಪುರುಷನು ಇತರರಿಗೂ ತನ್ನ ಶಕ್ತಿಸಾಮರ್ಥ್ಯಗಳಿಂದ ಒಡೆಯನಾಗಿರುವನು. ಅಥವಾ ಇತರರನ್ನು ಪೋಷಿಸುವನು.

## ॥ ಅಥ ಧನನಾಮಾನಿ ॥

[೧] ಮಘಮ್ [೨] ರೇಕ್ಣಃ [೩] ರಿಕ್ಥಮ್ [೪] ವೇದಃ [೫] ವರಿವಃ
[೬] ಶ್ವಾತ್ರಮ್ [೭] ರತ್ನಮ್ [೮] ರಯಿಃ [೯] ಕ್ಷತ್ರಮ್ [೧೦] ಭಗಃ

[೧೧] ಮೀಳ್ಹುಷಮ್ [೧೨] ಗಯಃ [೧೩] ದ್ಯುಮ್ನಮ್ [೧೪] ಇಂದ್ರಿಯಮ್ [೧೫] ವಸು [೧೬] ರಾಯಃ [೧೭] ರಾಧಃ (೧೮) ಭೋಜನಮ್ (೧೯) ತನಾ (೨೦) ನೃಮ್ಣಮ್ (೨೧) ಬನ್ಧುಃ (೨೨) ಮೇಧಾ (೨೩) ಯಶಃ (೨೪) ಬ್ರಹ್ಮ (೨೫) ದ್ರವಿಣಮ್ (೨೬) ಶ್ರವಃ (೨೭) ವೃತ್ರಮ್ (೨೮) ವೃತಮ್

ಇತ್ಯಷ್ಟಾವಿಂಶತಿರೇವ ಧನನಾಮಾನಿ ॥ ೧೦ ॥

(೧) **ಮಘಮ್॥** ದಾನಕ್ರಿಯಾರ್ಥಕವಾಗಿ ಮಂಹಧಾತು ಹೇಳಿದೆ. 'ಘಞರ್ಥೇ ಕವಿಧಾನಮ್' ಎಂಬಲ್ಲಿ ಪರಿಗಣನ ಉಪಲಕ್ಷಣವಾದುದರಿಂದ ಇದಕ್ಕೂ ಕಪ್ರತ್ಯಯ ಬಂದರೆ; ಪೃಷೋದರಾದಿಪಠಿತವಾದುದರಿಂದ ನಲೋಪ. ಹಕಾರಕ್ಕೆ ಘಕಾರಾದೇಶಬರುತ್ತದೆ. ಯಾಚಕರಿಗೆ ಕೊಡಲ್ಪಡುವುದು ಹಣ. ಉದಾ—**ತೇಭಿರಿಂದ್ರಂ ಚೋದಯ ದಾತವೇ ಮಘಮ್ (ಋ. ಸಂ. ೭-೨-೩-೫೬) 'ಯದಿಂದ್ರ ದಕ್ಷಿಣಾ ಮಘೋನೌ ' (ಋ. ಸಂ. ೨-೬-೬-೬)**

(೨) **ರೇಕ್ಣಃ ॥** ರಿಚಿರ್-ವಿರೇಚನೇ ಇರಿತ್. 'ರಿಚೇರ್ಧನೇ ಘಿಚ್ಚ ' (ಉ-೪-೧೯೪) ಸೂತ್ರದಿಂದ ಅಸುನ್ ಪ್ರತ್ಯಯ. ನುಡಾಗಮ, ಗುಣ- ಘಿತ್ತ್ವಾತಿದೇಶದಿಂದ 'ಚಜೋಃ ಕುಘಿಣ್ಯತೋಃ' (ಪಾ. ಸೂ.-೭-೩-೫೨) ಸೂತ್ರದಿಂದ ಕುತ್ವ ' ರೇಕ್ಣ ಇತಿ ಧನನಾಮರಿಚ್ಯತೇ ಪ್ರಯತಃ(ನಿರು-೩-೨)ಎಂದು ಭಾಷ್ಯ. ಸಾಯುವವನ ಧನವು ಉಳಿಯುತ್ತದೆ. ಅವನೊಡನೆ ಅವನ ಹಣ ಹೋಗುವುದಿಲ್ಲ. ಮಾಧವರು ರಿಚ್‌ಧಾತುವಿಗೆ ಪ್ರೇರಣಾರ್ಥ ಹೇಳಿರುತ್ತಾರೆ. ಹಣಕೊಡುವುದರಿಂದ ಸೇವಕರು ಕಾರ್ಯಗಳಲ್ಲಿ ಪ್ರೇರೇಪಿಸಲ್ಪಡುತ್ತಾರೆ. ಉದಾ—'**ಸ್ವಾರ್ಹಂ ಯದ್ರೇಕ್ಣಃ ಪರಮಂ ವನೋಷಿ ತತ್** (ಋ. ಸಂ.೧-೨೩-೪-೪] ' **ಪರಿಷದ್ಯಂ ಹ್ಯರಣಸ್ಯ ರೇಕ್ಣಃ [ಋ. ಸಂ. ೫-೨-೬-೨] ॥ "**

[೩] **ರಿಕ್ಥಮ್** ॥ ಪೂರ್ವೋಕ್ತವಾದ ಧಾತುವಿಗೆ " ಪಾತೃತುದಿವಚಿರಿಚಿ " (ಉ-೨-೬) ಸೂತ್ರದಿಂದ ಥಕ್ ಪ್ರತ್ಯಯ. ಅರ್ಥ ಹಿಂದಿನಂತೆಯೇ ತಿಳಿಯಬೇಕು. ಉದಾ–**ನ ಜಾಮಯೇ ತನ್ವೋ ರಿಕ್ಥಮಾರೈಕ್ (ಋ.ಸಂ.೩-೨-೫೨)**

(೪) **ವೇದಃ** ॥ ವಿದ್ಲ–ಲಾಭೇ. ಧಾತು. ಅಸುನ್‌ಪ್ರತ್ಯಯ ಬಂದಾಗ ಧಾತುವಿನ ಲಘೂಪಧೆಗೆ ಗುಣ. ವೇದಸ್ ಸಾಂತಪದ. ಎಲ್ಲರಿಂದಲೂ ಹೊಂದಲ್ಪಡುವುದು, ಇದರಿಂದ ಧರ್ಮಾದಿಗಳು ಹೊಂದಲ್ಪಡುತ್ತವೆ. ಉದಾಃ– **ಹೋತಾರಂ ವಿಶ್ವವೇದಸಮ್** (ಋ. ಸಂ. ೧-೧-೨೨-೧) ॥

(೫) **ವರಿವಃ ॥** ವೃಞ್–ವರಣೇ. ಯಙ್‌ಲುಗಂತದ ಮೇಲೆ ಅಸುನ್‌ಪ್ರತ್ಯಯ. ದ್ವಿತ್ವಾದಿ. ಬಹುಲಗ್ರಹಣದಿಂದ ಇಕಾರಲೋಪ. ಅಧಿಕವಾಗಿ ಹೊಂದಲ್ಪಡುವುದು, ಗೌರವಕ್ಕೆ ಕಾರಣವಾಗಿರುವುದು. 'ಹಣ, ಬಂಧು, ವಯಸ್ಸು, ಕರ್ಮ, ವಿದ್ಯಾ ಇವು ಉತ್ತರೋತ್ತರ ಅಧಿಕವಾಗಿ ಗೌರವಕ್ಕೆ ಕಾರಣವೆಂದು ಮನುಸ್ಮೃತಿಯಲ್ಲಿ ಹೇಳಿದೆ. ಉದಾಹರಣೆ—'**ಯುಧಾ ದೇವೇಭ್ಯೋ ವರಿವಶ್ಚಕರ್ಥ'** (ಋ. **ಸಂ. ೧-೪-೨೫-೫**) **"ಅಂಹೋ ರಾಜನ್ ವರಿವಃ ಪೂರವೇ"** (**ಋ. ಸಂ. ೧-೫-೫-೨**) ॥

(೬) **ಶ್ವಾತ್ರಮ್ ॥** ಆಶುಶಬ್ದ ಉಪಪದವಾಗಿರುವಾಗ 'ಅತ-ಸಾತತ್ಯಗಮನೇ' ಧಾತುವಿಗೆ 'ಆದಿತ್ಯಶ್ಚಿದಶಿ—' ಸೂತ್ರದಿಂದ ಕೃತ್ಪ್ರತ್ಯಯ. ಪೃಷೋದರಾದಿಪಠಿತವಾದುದರಿಂದ ಅಭಿಮತರೂಪವಾಗುತ್ತವೆ. ಬೇಗ ಹೋಗುವುದು. ಹಣವು ಚಂಚಲವಾದುದರಿಂದ ಬೇಗನೆ ನಾಶವಾಗುತ್ತದೆ. ಧನಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೭) ರತ್ನಮ್ ॥ ರಮು-ಕ್ರೀಡಾಯಾಮ್. 'ರಮೇಸ್ತ್ರಚ '(ಉ-೩-೧೩) ಸೂತ್ರದಿಂದ ಈ ಧಾತುವಿಗೆ ನಪ್ರತ್ಯಯ, ತಕಾರ ಅಂತಾದೇಶವಾಗಿ ಬರುತ್ತದೆ. ರಮಣೀಯವಾದದ್ದು. 'ಇದರಲ್ಲಿ ಕ್ರೀಡಿಸುತ್ತಾರೆ' ಎಂದು ಕ್ಷೀರಸ್ವಾಮಿ. ವಿತ್ತೇ ರಮಸ್ವ ಬಹುಮನ್ಯಮಾನಃ' ಎಂದು ಶ್ರುತಿ. ಉದಾಹರಣೆ :—

**"ಹೋತಾರಂ ರತ್ನಧಾತಮಮ್"** (ಋ. ಸಂ- ೧-೧-೧-೧) ॥ **"ಧಾ ರತ್ನಂ ಮಹಿಸ್ಥೂರಂ ಬೃಹನ್ತಮ್" (ಋ. ಸಂ. ೬-೬-೮-೫)** ॥

(೮) ರಯಿಃ ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೨-೭೩) **ಪುಣ್ಯದಿಂದ** ಹೊಂದಲ್ಪಡುವುದು, ಭೋಗಸಾಧನವಾದುದರಿಂದ ಇದರಿಂದ ತೃಪ್ತಿಹೊಂದುತ್ತಾರೆ, ಕೀರ್ತಿಯನ್ನು ಕೊಡುವುದು, ಅರ್ಥಿಗಳಿಗೆ ಕೊಡಲ್ಪಡುವುದು ಎಂದರ್ಥ. ಉದಾ:—**ಅಗ್ನಿನಾ ರಯಿಮಶ್ನವತ್ (ಋ. ಸಂ. ೧-೧-೧-೩)** ॥

(೯) **ಕ್ಷತ್ರಮ್** ॥ ಇದೂ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೪೫) ಪೂರ್ವಜನ್ಮದ ಸುಕೃತದಿಂದ ಹೊಂದಿದವನಲ್ಲಿ ಸ್ಥಿರವಾಗಿರುತ್ತದೆ. ಉಪಭೋಗಸಾಧನವಾದುದರಿಂದ ಹೊಂದಲ್ಪಡುತ್ತದೆ, ದಾರಿದ್ರ್ಯವನ್ನು ಹೋಗಲಾಡಿಸುವುದು. ಗತ್ಯರ್ಥದಲ್ಲಿಯೂ ಇದೇ ಅರ್ಥವನ್ನು ಹೇಳಬೇಕು. ಪಾಪದಿಂದ ಇದು ರಕ್ಷಿಸುತ್ತದೆ. ಧನದಿಂದಲೇ ಮನುಷ್ಯರು ಪಾಪವನ್ನು ಕಳೆದುಕೊಳ್ಳುತ್ತಾರೆಂದು ಪ್ರಸಿದ್ಧಿ. ಉದಾ :—**' ನ ಹಿ ತೇ ಕ್ಷತ್ರಂ ನ ಸಹೋನ ಮನ್ಯುಮ್ (ಋ. ಸಂ. ೧-೨-೧-೧) ' ಸುಕ್ಷತ್ರಾಸೋ ರಿಶಾದಸಃ ' (ಋ. ಸಂ. ೧-೧-೨೬-೫)** ॥

(೧೦) ಭಗಃ ॥ ' ಭಜ-ಸೇವಾಯಾಮ್ ' ' ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ ' ಸೂತ್ರದಿಂದ ಘ ಪ್ರತ್ಯಯ. ಘಿತ್ತಾದುದರಿಂದ ' ಚಜೋಃ ಕುಘಿಣ್ಯತೋಃ ' (ಪಾ. ಸೂ. ೭-೩-೫೨) ಸೂತ್ರದಿಂದ ಜಕಾರಕ್ಕೆ ಕುತ್ವ. ಭೋಗಾಪೇಕ್ಷಿಗಳಿಂದ ಸೇವಿಸಲ್ಪಡುವುದು. ಹಣವಿರುವುದರಿಂದ ಸೇವಿಸಲ್ಪಡುವವನು. ಇದು ಪುಲ್ಲಿಂಗದಲ್ಲಿ ಧನವಾಚಕವಾಗಿರುತ್ತದೆ. ಉದಾ :—**' ಶಿಕ್ಷಾಸ್ತೋತೃಭ್ಯೋ ಮಾತಿಧಗ್ಭಗೋ ನಃ ' (ಋ. ಸಂ. ೨-೬-೬-೬) ' ಯದ್ಧಿತ.... ಸ್ಥೋಭಗಃ '** ॥

(೧೧) **ಮೀಳ್ಹುಷಮ್** ॥ ಮಿಹ-ಸೇಚನೇ ಧಾತು. ಕ್ವಸುಪ್ರತ್ಯಯ ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ದಾನಿಗಳಿಂದ ಅರ್ಥಿಗಳಿಗೆ ಕೊಡಲ್ಪಡುತ್ತದೆ ಎಂದರ್ಥ ಇದು ಉಕಾರಾಂತವಾಗಿಯೂ ಅಕಾರಾಂತವಾಗಿಯೂ ದೃಷ್ಟವಾದುದಲ್ಲದೆ ಸಾಂತಪದವಾಗಿಯೂ ಇದೆಯೆಂದು ಕೆಲವರ ಮತ. ಬಹುನಿಗಮದರ್ಶನದಿಂದ ನಿಶ್ಚಯಿಸಬೇಕು. ಉದಾ :—**' ರುದ್ರಸ್ಯ ಯೇ ಮೀಳ್ಹುಷಃ ಸಂತಿಪುತ್ರಾ (ಋ. ಸಂ. ೫-೧-೭-೩)**॥

(೧೨) **ಗಯಃ** ॥ ಅಪತ್ಯನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೩-೩-೮) ಅಲ್ಲಿ ಹೇಳಿದ ಅರ್ಥವನ್ನೇ ತಿಳಿಯಬೇಕು. ಹೋತೃಗಳಿಂದ ಸ್ತುತಿಸಲ್ಪಡುವುದು. ಉದಾ :—**' ಅಪಕ್ಷದ್ದಾಶುಷೇ ಗಯಮ್ '** (ಋ. ಸಂ. ೧-೫-೨೧-೨) ॥

(೧೩) **ದ್ಯುಮ್ನಮ್** ॥ ದ್ಯುತ-ದೀಪ್ತೌ. " ದ್ಯುಮ್ನ ಸುಮ್ನ ನಿಮ್ನ "-ಸೂತ್ರದಿಂದ ನಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರಕಾಶವುಳ್ಳದ್ದು ಹಣ. ' ದ್ಯು ಅಭಿಗಮನೇ "ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಕ್ಷೀರಸ್ವಾಮಿಯ ಮತ. ಎಲ್ಲರಿಂದಲೂ ಹೊಂದಲ್ಪಡುವುದು ಎಂದರ್ಥ. ಉದಾ—' **ದ್ಯುಮ್ನಂ ಸಹಸ್ರಸಾತಮ್** (ಋ. ಸಂ. ೧-೧-೧೮-೩) **ದುಮ್ನಾ ವಾಜೇಭಿರಾಗತಮ್** ॥

(೧೪) ಇಂದ್ರಿಯಮ್ ‘ ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಮಿಂದ್ರ ಸೃಷ್ಟ (ಪಾ. ಸೂ. ೫-೩-೯೩) ಸೂತ್ರದಿಂದ ಘಪ್ರತ್ಯಯಾಂತವಾಗಿಯೂ ಅಂತೋದಾತ್ತವಾಗಿಯೂ ನಿಪಾತಿತವಾಗಿದೆ. ‘ ಇದಿ-ಪರಮೈಶ್ವರ್ಯೇ ’ ಧಾತುವಿನಿಂದ ಇಂದ್ರ ಶಬ್ದವಾಗಿದೆ. ಪರಮೈಶ್ವರ್ಯ ಉಳ್ಳವನೆಂದರ್ಥ “ ‘ಇಂದ್ರಸ್ಯ ಲಿಂಗಮ್ ” ಧನದಿಂದ ಇವನು ಐಶ್ವರ್ಯವುಳ್ಳವನೆಂದು ವ್ಯಕ್ತವಾಗುತ್ತದೆ. ಲಿಂಗಾರ್ಥದಲ್ಲಿ ಘಞ್‌ಬಂದಿದೆ. ಅದಕ್ಕೆ ಇಯಾದೇಶ. ಅಥವಾ ಇಂದ್ರನಿಂದ ಸೃಷ್ಟವಾದದ್ದು ಧನ. ಅಥವಾ ಇಂದ್ರ ಅಂದರೆ ಆತ್ಮಾ ಅವನಿಂದ ಮಾಡಲ್ಪಟ್ಟ ಶುಭಾಶುಭಕಾರ್ಯದಿಂದ ಸೃಷ್ಟವಾದದ್ದು, ಆತ್ಮನಿಂದ ಸೇವಿತವಾದದ್ದು, ಎಂದರ್ಥ ಉದಾ— **ದಕ್ಷಿಣಂ. ಪಾದಮವನೇ ನಿಜೇಽಸ್ಮಿನ್ನಾಷ್ಟ್ರ ‘ ಇಂದ್ರಿಯಂ ದಧಾಮಿ ’** (ಐ. ಬ್ರಾ. ೮-೫-೪)

(೧೫) **ವಸು:** ॥ ರಾತ್ರಿನಾಮದಲ್ಲಿ ವಸ್ತೀ ಎಂಬಲ್ಲಿ ವ್ಯಾಖ್ಯಾತವಾಗಿದೆ ‘ವಸ್ತೇ ದಾರಿದ್ರ್ಯಮ್’ ಬಡತನವನ್ನು ಮುಚ್ಚುತ್ತದೆ. ನಾಶಮಾಡುವುದೆಂದು ತಾತ್ಪರ್ಯ. ಉದಾಹರಣೆ—**“ಅಹಂ ಭುವಂ ವಸುನಃ ಪೂರ್ವ್ಯಸ್ಪತಿಃ” (ಋ-ಸಂ-೮-೧-೫-೧)** ॥

(೧೬) **ರಾಯಃ** ॥ ರಾ-ದಾನೇ. ಧಾತು. ‘ರಾತೇರ್ಡೈಃ’ (ಉ-೨-೬೭) ಸೂತ್ರದಿಂದ ಡೈಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ರೈಶಬ್ದ. ಜಸಿನಲ್ಲಿ ಆಯಾದೇಶ ಬಂದು ‘ರಾಯಃ’ ಎಂದಾಗುತ್ತದೆ. ಅರ್ಥಿಗಳಿಗೆ ದಾನಮಾಡಲ್ಪಡುವುದು, ಪೂರ್ವಸುಕೃತದಿಂದ ಹೊಂದಲ್ಪಡುವುದು. ಉದಾಹರಣೆ—

**“ಅನಾಮೃಣಃ ಕುವಿದಾದಸ್ಯ ರಾಯಃ”** (ಋ-ಸಂ-೧-೩-೧-೧) ॥

(೧೭) **ರಾಧಃ** ॥ ‘ರಾಧ-ಸಂಸಿದ್ಧೌ.’ ಅಸುನ್ ಬಂದರೆ ರಾಧಸ್ ಸಾಂತಪದವಾಗುತ್ತದೆ. ಧರ್ಮಾದಿಪುರುಷಾರ್ಥಗಳನ್ನು ಇದರಿಂದ ಸಾಧಿಸುತ್ತಾರೆ ಎಂದರ್ಥ. ಹಿಂಸಾರ್ಥದಲ್ಲಿಯೂ ಈ ಧಾತುವಿರುವುದರಿಂದ ದಾರಿದ್ರ್ಯವನ್ನು ನಾಶಮಾಡುತ್ತದೆ. ಎಂದೂ ಅರ್ಥವಾಗುತ್ತದೆ. ಉದಾ:—**‘ರಾಧ ಇಂದ್ರ ವರೇಣ್ಯಮ್’** (ಋ. ಸಂ. ೧-೧-೧೭-೫) **“ರಾಧಸ್ತನ್ನೋ ವಿದದ್ವಸೋ”** (ಋ-ಸಂ-೪-೭-೧೦-೧) ॥

(೧೮) **ಭೋಜನಮ್** ॥ ಭುಜ-ಪಾಲನಾಭ್ಯವಹಾರಯೋಃ. ಧಾತು. ‘ಕೃತ್ಯಲ್ಯುಟೋ ಬಹುಲಮ್’ ಸೂತ್ರದಿಂದ ಲ್ಯುಟ್. ‘ಯುವೋರನಾಕೌ.’ ಅದಕ್ಕೆ ಅನಾದೇಶ. ಧಾತುಲಘೂಪಧೆಗೆ ಗುಣ. ಇದರಿಂದ ವಿಷಯಗಳು ಅನುಭವಿಸಲ್ಪಡುತ್ತವೆ, ಇದರಿಂದ ರಕ್ಷಿಸಲ್ಪಡುತ್ತಾರೆ. ಉದಾಹರಣೆ—

**“ಶತ್ರೂಯತಾಮಾ ಭರಾ ಭೋಜನಾನಿ”** (ಋ-ಸಂ-೩-೮-೧೮-೫) **‘ಮಾನಃ ಪ್ರಿಯಾಭೋಜನಾನಿ ಪ್ರಮೋಷೀಃ’** (ಋ-ಸಂ-೧-೭-೧೯-೩) ॥

(೧೯) **ತನಾ** ॥ ತನು-ವಿಸ್ತಾರೇ. ಧಾತು. ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ತ್ರಿವರ್ಗಸಾಧನವನ್ನು ಹಣ ವಿಸ್ತಾರಮಾಡುತ್ತದೆ. ತೃತೀಯಾ ಏಕವಚನ ಬಂದಾಗ ಅದಕ್ಕೆ ‘ಸುಪಾಂ ಸುಲುಕ್—’ (ಪಾ. ಸೂ. ೭-೧-೩೯) ಸೂತ್ರದಿಂದ ಆಕಾರಾದೇಶ. ಉದಾಹರಣೆ—

**“ವಿಶ್ವಯನ್ವೇ ತನಾ ಗಿರಾ’** (ಋ-ಸಂ-೬-೩-೨೫-೧) **“ಆ ವೋ ಮಕ್ಷೂ ತನಾಯ ಕಮ್”** (ಋ-ಸಂ-೧-೩-೧೯-೨) ॥

(೨೦) ನೃಮ್ಣಮ್ ‖ ಬಲನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೭-೯, ಬಗ್ಗುವಂತೆ ಮಾಡುವುದು ಧನ. ಉದಾಹರಣೆ—**"ಹಸ್ತೇ ದಧಾನೋ ನೃಮ್ಣಾ ವಿಶ್ವಾನಿ" (ಋ-ಸಂ-೧-೫-೧೧-೨)** ‖

(೨೧) ಬನ್ಧುಃ ‖ ಬಂಧ-ಬಂಧನೇ. 'ಶೃಸ್ವೃಸ್ನಿಹಿತ್ರಪ್ಯಸಿ—' ಸೂತ್ರದಿಂದ ಉಪ್ರತ್ಯಯ. ಇದರಿಂದ ಸೇವಕ ಮುಂತಾದವರು ಕಟ್ಟಿಗೆ ಬೀಳುತ್ತಾರೆ, ಬಂಧುವಿನಂತೆ ಹಿತಕರವಾದುದರಿಂದ ಇದೂ ಬಂಧುಶಬ್ದವಾಚ್ಯವಾಗುತ್ತದೆ. ಉದಾ:—

**"ಆಬಂಧುನಾ ಸುಶ್ರವಸೋಪ ಜಗ್ಮುಷಃ" (ಋ-ಸಂ-೧-೪-೧೬-೪)** ‖

(೨೨) **ಮೇಧಾ** ‖ 'ಮಿಧೃಮೇಧೃ-ಸಂಗಮೇಚ' ಚಕಾರದಿಂದ ಪೂರ್ವೋಕ್ತವಾದ ಹಿಂಸಾಮೇಧಾ ಅರ್ಥಗಳೂ ಉಪಸ್ಥಿತವಾಗುತ್ತವೆ. ಮಾಧವನು ಸಂಗತ್ಯರ್ಥವನ್ನು ಹೇಳಿರುತ್ತಾನೆ. ಘಞ್‌ಪ್ರತ್ಯಯ ಬಂದಾಗ ಲಘೂಪಧಗುಣ. ಹಣವುಳ್ಳವನಿಂದ ಎಲ್ಲಾ ಪದಾರ್ಥಗಳೂ ಹೊಂದಲ್ಪಡುತ್ತವೆ. **'ಘ್ನನ್ತಿ ಜೈವಾರ್ಥಕಾರಣಾತ್'** ಎಂದು ಮಹಾಭಾರತದಲ್ಲಿ ಹೇಳಿದಂತೆ ಹಣವುಳ್ಳವನು ಕಳ್ಳಕಾಕರಿಂದ ಹಿಂಸಿಸಲ್ಪಡುತ್ತಾನೆ ಎಂದರ್ಥವಾಗುತ್ತದೆ. ಅಥವಾ **'ಮತೌ ಧೀಯತೇ ಇತಿ ಮೇಧಾ'** ಇದನ್ನು ಸಂಪಾದಿಸಬೇಕು, ರಕ್ಷಿಸಬೇಕು, ಕೊಡಬೇಕು, ಎಂದು ಧನನಂತರ ಬುದ್ಧಿಯಲ್ಲಿ ಇದು ಧರಿಸಲ್ಪಡುತ್ತದೆ. ಮತಿಶಬ್ದ ಉಪಪದವಾಗಿರುವಾಗ ಧಾಧಾತುವಿಗೆ ಘಞರ್ಥದಲ್ಲಿ ಕಪ್ರತ್ಯಯ. ಪೃಷೋದರಾದಿಪಠಿತವಾದುದರಿಂದ ಮತಿಪದಕ್ಕೆ ಮೇ ಆದೇಶ. ಉದಾಹರಣೆ—**"ಮೇಧಾಕಾರಂ ವಿದಥಸ್ಯ ಪ್ರಸಾಧನಮ್" (ಋ. ಸಂ. ೮-೪-೨೧-೩)** ‖

(೨೩) **ಯಶಃ** ‖ ಅನ್ನನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೭-೨೮) ಉದಾಹರಣೆ—**"ಉತ ತ್ಯಾ ನೋ ಯಶಸಾ ಶ್ವೇತನಾಯ್ಯೈ' (ಋ. ಸಂ. ೨-೧-೧-೪)** ‖

(೨೪) ಬ್ರಹ್ಮ ‖ ಇದೂ ಅನ್ನನಾಮದಲ್ಲಿ ವ್ಯಾಖ್ಯಾತವಾಗಿದೆ. (೨-೭-೨೫) ಇದರಿಂದ ಧನರ್ಸಾದಿಗಳು ಅಭಿವೃದ್ಧವಾಗುತ್ತವೆ, ಭೋಗಗಳಿಗೆ ಅಭಿವರ್ಧಕವಾದದ್ದು. ಉದಾ—**'ಅಸ್ಮಾಕಂ ಬ್ರಹ್ಮ ಪೃತನಾಸು ಸಹ್ಯಾ' (ಋ. ಸಂ. ೨-೨-೨೨-೭)** ‖

(೨೫) ದ್ರವಿಣಮ್ ‖ ಬಲನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೯-೨೬) ಪೂರ್ವ ಸುಕೃತದಿಂದ ಹೊಂದಲ್ಪಡುವುದು, ಅರ್ಥಿಗಳಿಗೆ ಕೊಡಲ್ಪಡುವುದು ಎಂದರ್ಥ. ಉದಾ:—**'ತ ಆಯಜಂತ ದ್ರವಿಣಂ ಸಮಸ್ಮೈ'** ‖

(೨೬) ಶ್ರವಃ ‖ ಅನ್ನನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೭-೪) ಉದಾ:—**"ಅಸ್ಮೇ ಪೃಥುಶ್ರವೋ ಬೃಹತ್"** (ಋ. ಸಂ. ೧-೧-೧೮-೨) **"ಬೃಹಚ್ಛ್ರವಾ ಅಸುರೋ ಬರ್ಹಣಾಕೃತಃ"** (ಋ. ಸಂ. ೧-೪-೧೬-೫) ‖

(೨೭) ವೃತಮ್ ‖ ಮೇಘನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೦-೨೮) ದಾರಿದ್ರ್ಯವನ್ನು ಮುಚ್ಚುವುದು.(ಟ್ಯಾಕ್ಸ್)ಕರಾದಿಭಯದಿಂದ ರಾಜನಿಗೆ ತೋರದಂತೆ ಮುಚ್ಚಿಡುವುದು, ಗತ್ಯರ್ಥದಲ್ಲಿ ರಯಿಶಬ್ದದಂತೆಯೂ ಅರ್ಥತಿಳಿಯಬೇಕು. ಉದಾ—**ವೃತ್ರಂ ಪುರುಕುತ್ಸಾಯ ರನ್ಧೀಃ (ಋ. ಸಂ. ೨-೪-೧೬-೨)** ಕೆಲವರು ಇಲ್ಲಿ ವಿತ್ತಂ ಎಂದು ಪಾಠ ಮಾಡುತ್ತಾರೆ. ಆದರೆ ಸ್ಕಂದಸ್ವಾಮಿಯು 'ವ್ರತಂ ಧನನಾಮ' ಎಂದು ವ್ಯಾಖ್ಯಾನಮಾಡಿರುವುದರಿಂದ ಹೀಗೆ ಹೇಳಿದೆ.

(೨೮) **ವೃತಮ್** ॥ ವೃಜ್–ಸಂಭಕ್ತೌ ಧಾತು. ದುತನಿಭ್ಯಾಂ ದೀರ್ಘಶ್ಚ ವಾ (ಉ-೩-೮೭) ಇಲ್ಲಿ ಚಕಾರ ಅನುಕ್ತ ಸಮುಚ್ಚಾಯಕವಾದುದರಿಂದ ಕ್ತ ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಎಲ್ಲರಿಂದಲೂ ಸೇವಿಸಲ್ಪಡುವುದು ಧನ ಉದಾ— **'ವೃತಂಚಯಃ ಸಹುರಿರ್ವಿಕ್ಷ್ವಾರಿತಃ' (ಋ. ಸಂ ೨.೬–೨೭-೩)** ॥

ಈ ಇಪ್ಪತ್ತೆಂಟು ಧನಗಳ ಹೆಸರುಗಳು.

ಅನಂತರ ಧನನಾಮಗಳನ್ನು ಹೇಳಲಾಗುವುದು. ಧನ ಎಂಬರ್ಥವನ್ನು ಸೂಚಿಸುವ ನಾಮಗಳು ಇಪ್ಪತ್ತೆಂಟು

॥ ಧನಂ ಕಸ್ಮಾದ್ಧಿನೋತೀತಿ ಸತಃ

ಧನಶಬ್ದವು **ಧಿನೋತೀತಿ ಸತಃ** ತೃಪ್ತಿಪಡಿಸು ಎಂಬರ್ಥವಿರುವ ಧಿನೋತಿಧಾತುವಿನಿಂದ ನಿಷ್ಪನ್ನವಾಗಿದೆ. ಧನ ಅಥವಾ ದ್ರವ್ಯವು ಎಲ್ಲರನ್ನೂ ತೃಪ್ತಿ ಅಥವಾ ಸಂತೋಷಪಡಿಸುವುದು.

———

॥ಅಥ ಗೋನಾಮಾನಿ । ಗೋಮಾನ್ಯುತ್ತರಾಣಿ ನವ ॥

ಈಗ ಗೋನಾಮಗಳನ್ನು ವಿವರಿಸಲಾಗುವುದು. ಗೋವುಗಳ ಹೆಸರುಗಳನ್ನು ಸೂಚಿಸುವ ಗೋನಾಮಗಳು ಒಂಭತ್ತು ಇರುವವು

(೧) ಅಘ್ನ್ಯಾ (೨) ಉಸ್ರಾ (೩) ಉಸ್ರಿಯಾ (೪) ಅಹೀ
(೫) ಮಹೀ (೬) ಅದಿತಿಃ (೭) ಇಲಾ (೮) ಜಗತೀ (೯) ಶಕ್ವರೀ

ಇತಿ ನವ ಗೋನಾಮಾನಿ

**(೧) 'ಅಹಂತವ್ಯಾ ಭವತೀತ್ಯಘಘ್ನೀತಿ ವಾ' (ನಿರು. ೧೧–೪೩)** ॥

ಅಘ ಎಂದರೆ ದುರ್ಭಿಕ್ಷ. ಇದು ಹೋಗಲಾಡಿಸುವುದು. ಅಥವಾ ಕೊಲ್ಲಲ್ಪಡದಿರುವುದು. ಗೋವಧೆ ನಿಷಿದ್ಧವಾದ ಕರ್ಮ. ಅಘ ಶಬ್ದ ಅಥವಾ ನಞ್ ಉಪಪದವಾಗಿರುವಾಗ ಹಿಂಸಾರ್ಥಕ ಹನ ಧಾತುವಿಗೆ 'ಅಘ್ನ್ಯಾದಯಶ್ಚ' ಸೂತ್ರದಿಂದ ಯತ್ ಪ್ರತ್ಯಯ ಬಂದು ನಿಪಾತಿತವಾಗಿದೆ. ಉದಾಹರಣೆ—**'ನಹಿ ಮೇ ಅಸ್ತ್ಯಘ್ನ್ಯಾ' (ಋ. ಸಂ. ೬-೭-೧೨-೪)** **'ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ' (ಋ. ಸಂ. ೨-೩-೨೧-೫)** ॥

(೨) **ಉಸ್ರಾ** ॥ ರಶ್ಮಿನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೫–೯) ಇದರಲ್ಲಿ ಕ್ಷೀರಾದಿರೂಪವಾದ ಹವಿಸ್ಸು ವಾಸವಾಗಿರುತ್ತದೆ, ಉಸ್ರಿಯೇತಿ ಗೋನಾಮೋತ್ಸ್ರಾವಿಣೋಽಸ್ಯಾ ಭೋಗಾ ಉಸ್ರೇತಿ ಚ (ನಿ–೪–೧೯) ಎಂದು ನಿರುಕ್ತ ಭಾಷ್ಯ. ಮೇಲಿಂದ ಮೇಲೆ ಉತ್ತಮವಾದ ಹಾಲು, ಮೊಸರು, ಬೆಣ್ಣೆ, ತುಪ್ಪ ಎಂದು ಭೋಗಸಾಧನ ಇದರಲ್ಲಿರುತ್ತದೆ. ಉದಾ– **ಮಯೋಭೂರ್ವಾತೋ ಅಭಿವಾತೂಸ್ರಾಃ(ಋ. ಸಂ. ೮-೮-೨೭-೧) ಉಸ್ರಃ ಪಿತೇವ ಜಾರಯಾಯಿ ಯಜ್ಞೈಃ (ಋ. ಸಂ. ೪–೫–೧೪-೪)** ॥

(೩) ಉಸ್ರಿಯಾ ॥ ಪೃಷೋದರಾದಿ ಪಠಿತವಾದುದರಿಂದ ಉಸ್ರಶಬ್ದದಮೇಲೆ ಸ್ವಾರ್ಥದಲ್ಲಿ ಘಪ್ರತ್ಯಯ ಆದಕ್ಕೆ 'ಆಯನೇ'-ಸೂತ್ರದಿಂದ ಇಯಾದೇಶ. ಹಿಂದಿನಂತೆಯೇ ಅರ್ಥತಿಳಿಯಬೇಕು. ಉದಾ-: **ವಿಪ್ರ ಉಸ್ರಿಯಾ ಅಸು** (ಋ. ಸಂ. ೧-೧-೧೧-೫) **ಸಮುಸ್ರಿಯಾಭಿರ್ವಾವಶಂತ ನರಃ** (ಋ. ಸಂ. ೧-೫-೧-೩) ॥

(೪) ಅಹೀ॥ ನೇಘನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೦-೨೧) ಇಕಾರಾಂತವಾದ ಕೃದಂತವಾದ ಅಹಿ ಶಬ್ದಕ್ಕೆ ಸ್ತ್ರೀತ್ವದಲ್ಲಿ 'ಕೃದಿಕಾರಾದಿಕ್ತಿನಃ' ಸೂತ್ರದಿಂದ ಜೀಪ್, ಇದರಿಂದ ಕ್ಷೀರಾದಿ ಹವಿಸ್ಸು ಹೊಂದಲ್ಪಡುತ್ತದೆ. ಇದರ ದಾನ ದಿಂದ ಪುಣ್ಯ ಹೊಂದಲ್ಪಡುತ್ತದೆ, ಕೊಂಬಿನಿಂದ ಮನುಷ್ಯರನ್ನು ಹಾಯುತ್ತದೆ, ಕೊಲ್ಲಲ್ಪಡದಿರುವುದು. ಈಕ್ಷೇಣ್ಯಾ ಸೋ ಅಹ್ಯೋ ೩ ನಚಾರವ: ॥ ಮಂತ್ರದ ಭಾಷ್ಯದಲ್ಲಿ ಇದು ಸಷ್ಟವಾಗಿದೆ. ಗೋಪರ್ಯಾಯದಲ್ಲಿ ಇದಕ್ಕೆ ಸ್ಥಾನ ಹುಡುಕಬೇಕು.॥

(೫) ಮಹೀ (೬) ಅದಿತಿಃ (೭) ಇಲಾ ॥ ಮೂರು ಪದಗಳೂ ಪೃಥಿವೀನಾಮದಲ್ಲಿ ವ್ಯಾಖ್ಯಾತವಾಗಿವೆ. (೧-೧-೧೨-೧೪-೧೫) ' ಮಹ್ಯತೇ ಇತಿ ಮಹೀ ' ಸರ್ವದೇವತಾ ಸ್ವರೂಪವಾದುದರಿಂದ, ಉಪಭೋಗಸಾಧನವಾದುದರಿಂದ ಪೂಜಿಸಲ್ಪಡುವುದು, ಕ್ಷೀರಾದಿಗಳು ಗೋವಿನ ಅಧೀನವಾದುದರಿಂದ ಗೋವಿನಿಂದ ದೇವತೆಗಳು ಪೂಜಿಸಲ್ಪಡುತ್ತಾರೆ. ' ದೇವಾಶ್ಚ ಯಾಭಿರ್ಯಜತೇ ದದಾತಿ ಚ ' ಎಂದು ಶ್ರುತಿ. ' ನ ದ್ಯತಿ ಇತಿ ಅದಿತಿಃ ' ಪುನಃ ಪುನಃ ಹಾಲು ಕರೆದರೂ ಕ್ಷಯಿಸದಿರುವುದು, ಅಖಂಡನೀಯವಾದದ್ದು ' ಈಡ್ಯತೇ ಇತಿ ಇಲಾ ' ದೇವತಾಸ್ವರೂಪಿಯಾದುದರಿಂದ ಸ್ತುತಿಸಲ್ಪಡುವುದು, ಸುಂದರವಾದುದರಿಂದ ಪ್ರಕಾಶಿಸಲ್ಪಡುವುದು, ಗೋವಿನ ಅಭಿಲಾಷೆಯುಳ್ಳವರಿಂದ ಹೊಂದಲ್ಪಡುವುದು ಎಂದು ಆಯಾಯ ಧಾತ್ವರ್ಥದ ಮೂಲಕ ಆಯಾಯ ಅರ್ಥ ತೋರುತ್ತದೆ. ಉದಾಹರಣೆ—**' ಮಹೀನಾಂ ಪಯೋಽಸಿ' (ಯ. ವಾ. ಸಂ. ೪-೩) ' ಅದಿತ ಏಹಿ ಸರಸ್ವತ್ಯೇಹಿ '** (ಯ. ವಾ. ಸಂ. ೩೮-೨) **' ಮಿಮಿಕ್ಷ್ವಾ ಸಾಮಿಲಾಭಿರಾ '** (ಋ. ಸಂ. ೧-೪-೫-೬) **' ಇಡೇ ರಂತೇ ಹವ್ಯೇ ಕಾಮ್ಯೇ ' (ಯ. ವಾ. ಸಂ. ೮-೪೩)** ॥

(೮) ಜಗತೀ॥ ಮನುಷ್ಯನಾಮದಲ್ಲಿ 'ಜಗತಃ' ಎಂಬಲ್ಲಿ ವ್ಯಾಖ್ಯಾತವಾಗಿದೆ. (೩-೩-೨೧) ಶತೃಪ್ರತ್ಯಯ ಬಂದು ಉಗಿತ್ತಾದುದರಿಂದ 'ಉಗಿತಶ್ಚ' ಸೂತ್ರದಿಂದ ಜೀಪ್ ಬಂದಿದೆ, ಅರ್ಥಿಗಳಿಂದ ಹೊಂದಲ್ಪಡುವುದು, ಜಗತೀಛಂದಸ್ಸಿನಿಂದ ಆಹಾರ್ಯವಾದುದರಿಂದ ಅಭೇದವಿವಕ್ಷೆಯಿಂದ ಗೋವಿಗೂ ಜಗತೀ ಎಂದು ಹೆಸರು. 'ಜಾಗತಾ ಹಿ ಪಶವೋ ಜಗತೀ ಹಿ ತಾನನಾಹರತ'' 'ಜಾಗತಾಃ ಪಶವಃ' ಎಂದು ಬ್ರಾಹ್ಮಣ. ಉದಾ:—**'ಸಮೋಷಧಯೋ ರಸೇನ ಸ ರೇವತೀರ್ಜ-ಗತೀಭಿಃ'** ॥

(೯) ಶಕ್ವರೀ ॥ ಬಾಹುನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೪-೧೧) ಕ್ಷೀರಾದಿದಾನದಿಂದ ಯಜ ಮಾನನನ್ನು ಸಂತೋಷಪಡಿಸಲು ಶಕ್ತವಾಗುತ್ತದೆ. ಅಥವಾ ಸ್ಪರ್ಶದಿಂದ ಪಾಪನಾಶಮಾಡಲು ಶಕ್ತವಾಗುತ್ತದೆ. ಹಿಂದಿನಂತೆ ಶಕ್ವರೀಶಬ್ದಸಂಬಂಧವಿರುವುದರಿಂದ ಇದೂ ಶಕ್ವರೀಪದವಾಚ್ಯವಾಗುತ್ತದೆ. 'ಪಶವೋ ವೈ ಶಕ್ವರ್ಯಃ ಪಶೂನೇವಾವರುಂಧತೇ' ಎಂದು ಶ್ರುತಿಯಲ್ಲಿಯೂ ಇದೇ ಅರ್ಥ ಹೇಳಿದೆ. ಉದಾಹರಣೆ ಹುಡುಕಬೇಕು.

ಹೀಗೆ ಒಂಬತ್ತು ಹಸುವಿನ ಹೆಸರು ॥ ೧೧ ॥

---

## ಅಥ ಕ್ರುಧ್ಯತಿಕರ್ಮಾಣಃ। ಕ್ರುಧ್ಯತಿಕರ್ಮಾಣ ಉತ್ತರೆ ಧಾತವೋ ದಶ॥

ಕ್ರುಧ್ಯತಿ—ಕೋಪಗೊಳ್ಳುವುದು ಎಂಬ ಧಾತುಗಳನ್ನು ಹೇಳಲಾಗುವುದು. ಈ ಕ್ರುಧ್ಯತಿ ನಾಮುಗಳು ಎಂದರೂ ಕೋಪಗೊಳ್ಳು ಎಂಬರ್ಥವನ್ನು ಸೂಚಿಸುವ ಧಾತುಗಳು ಹತ್ತು ಇವೆ. ಅವುಗಳನ್ನು ಕೆಳಗೆ ಕೊಟ್ಟಿದೆ.

(೧) ರೇಲತೇ (೨) ಹೇಲತೇ (೩) ಭಾಮತೇ (೪) ಹೃಣೀಯತೇ (೫) ಭ್ರೀಣಾತಿ (೬) ಭ್ರೇಷತಿ (೭) ದೋಧತಿ (೮) ವನುಷ್ಯತಿ (೯) ಕಮ್ಪತೇ (೧೦) ಭೋಜತೇ ॥

ಇತಿ ದಶ ಕ್ರುಧ್ಯತಿಕರ್ಮಾಣಃ ॥ ೧೨ ॥

(೧) ರೇಲತೇ ॥ ಹತ್ತು 'ಸಿಟ್ಟಾಗುವುದು' ಎಂಬ ಕ್ರಿಯೆಯನ್ನು ಹೇಳುವ ಧಾತುಗಳನ್ನು ಹೇಳುತ್ತಾನೆ. ರೇಲಧಾತು ಕೇವಲ ನಿರುಕ್ತದಲ್ಲಿ ಪಠಿತವಾದದ್ದು. ಉದಾ:—**ಅರೇಲತಾ ಮನಸಾ ದೇವಾನಾಂ ಪತೇಃ** ॥

(೨) **ಹೇಲತೇ** ॥ 'ಹೇಡೃ-ಅನಾದರೇ ಕ್ರೋಧೇ ಚ.' ಭ್ವಾದಿ. ಆತ್ಮನೇಪದೀ. ಲಟ್. ಶಪ್‌ವಿಕರಣ. ಉದಾಹರಣೆ—"**ಅಹೇಲಮಾನೋಉರರಿವಾ೦ ಅಜಾಶ್ವ** (ಋ. **ಸಂ.** ೨-೨-೨-೪) '**ಅಹೇಲಮಾನೋ ವರುಣೇಹ ಬೋಧಿ**' (**ಋ. ಸಂ.** ೧-೨-೧೫-೧) ॥

(೩) **ಭಾಮತೇ**॥ 'ಭಾಮ ಕ್ರೋಧೇ' ಭ್ವಾದಿ ಆತ್ಮನೇಪದೀ ಲಟ್. ಉದಾ-: **ದೇವಜುಷ್ಟೋಽಜ್ಯತೇ ಭಾಮಿನೇ ಗೋಃ** (ಋ.ಸಂ. ೧-೫-೨೫-೧) **ಸ್ವಯಮ್ಬುಭಿರ್ಭಾಮೋ ಅಭಿಮಾತಿಷಾಹಃ** [ಋ.ಸಂ-೮-೩-೧೮-೪] ॥

[೪] **ಹೃಣೀಯತೇ** ॥ 'ಹುಣೀಙ್-ರೋಷೇ ವೈಮನಸ್ಯೇಚ' ಕಂಡ್ವಾದಿಗಣದಲ್ಲಿ ಪಠಿತವಾಗಿದೆ. 'ಕಂಡ್ವಾದಿಭ್ಯೋ ಯಕ್' ಎಂದು ವಿಕರಣಸ್ಥಾನದಲ್ಲಿ ಯಕ್ ಬರುತ್ತದೆ. ಙಿತ್ತಾದುದರಿಂದ ಆತ್ಮನೇಪದೀ ಉದಾ-**ಪುನಃ ಪ್ರಾಯಚ್ಛದಹೃಣೀಯಮಾನಃ** (**ಋ. ಸಂ.** ೮-೬-೭-೩) **ಹೃಣೀಯಮಾನೋ ಅಪ ಹಿಮದ್ಯೈಯೋಃ** (**ಋ. ಸಂ.** ೩-೮-೧೫-೨) ॥

(೫) **ಭ್ರೀಣಾತಿ** ॥ 'ಭ್ರೀ-ಭಯೇ ಕ್ರ್ಯಾದಿ- ಪರಸ್ಮೈಪದೀ. ಶ್ನಾವಿಕರಣ ಅ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಕೋಪಾರ್ಥ ತೋರುತ್ತದೆ. ಮುಂದೆಯೂ ಹೀಗೆಯೇ ತಿಳಿಯಬೇಕು. ಉದಾಹರಣೆ—'**ಏನಃ ಕೃಣ್ವಸ್ತ ಮಸುರಭ್ರೀಣನ್ತಿ**' (ಋ. ಸಂ. ೨-೭-೧೦-೨ ॥

(೬) **ಭ್ರೇಷತಿ** ॥ ಭ್ರೇಷು-ಚಲನೇ. ಭ್ವಾದಿ. ಸ್ವರಿತೇತ್ತಾದುದರಿಂದ ಉಭಯಪದೀ. ಇದಕ್ಕೆ ನಿಗಮ ಹುಡುಕಬೇಕು. ॥

(೭) **ದೋಧತೇ** ॥ ಇದು ಕೇವಲ ನಿರುಕ್ತದಲ್ಲಿ ಹೇಳಿದ ಧಾತು. ಉದಾಹರಣೆ—'**ಇಂದ್ರೋ ವೃಸ್ರಸ್ಯ ದೋಧತಃ** (**ಋ. ಸಂ.** ೧-೫-೨೯-೫) ॥

(೮) ವನುಷ್ಯತಿ ‖ 'ವನುಷ್ಯತಿರ್ಹನ್ತಿಕರ್ಮಾ' (ನಿರು. ೫–೨) ಹಿಂಸಾರ್ಥದಲ್ಲಿ ನಿರುಕ್ತಕಾರನಾದ ಧಾತು. ಕಂಡ್ವಾದಿಯಲ್ಲಿ ಸೇರಿಸುವುದರಿಂದ ಯಕ್‌ಪ್ರತ್ಯಯ ಬರುವುದಲ್ಲದೆ ವನು ಎಂದು ಉತ್ವವೂ ಬರುತ್ತದೆ. ಕೋಪಾರ್ಥದಲ್ಲಿ ನಿಗಮ ಹುಡುಕಬೇಕು.

(೯) ಕಂಪತೇ ‖ ಕಪಿ–ಕಿಂಚಿಚ್ಚಲನೇ. ಭ್ವಾದಿ. ಆತ್ಮನೇಪದೀ. ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಇದಕ್ಕೂ ನಿಗಮ ಹುಡುಕಬೇಕು.

(೧೦) **ಭೋಜತೇ** ‖ ಭುಜ–ಕೌಟಿಲ್ಯೇ. ತುದಾದಿ. ಪರಸ್ಮೈಪದೀ. ಶನಿಕರಣ. ಅದು ಙಿತ್ತಾಗುವುದರಿಂದ ಲಘೂಪಧಗುಣ ಬರುವುದಿಲ್ಲ. ಆದರೂ 'ಛಂದಸ್ಯುಭಯಥಾ' ಸೂತ್ರದಿಂದ ಅದಕ್ಕೆ ಆರ್ಧಧಾತುಕ ಸಂಜ್ಞೆ ಬರುವುದರಿಂದ ಇಲ್ಲಿ ಗುಣ ಬಂದಿದೆ. ಉದಾಹರಣೆ ಹುಡುಕಬೇಕು.

ಹೀಗೆ ಹತ್ತು ಕ್ರೋಧಾರ್ಥಕಧಾತುಗಳು

---

## ಅಥ ಕ್ರೋಧನಾಮಾನಿ । ಕ್ರೋಧನಾಮಾನ್ಯುತ್ತರಾಣ್ಯೇಕಾದಶ ‖

ಕೋಪ ಎಂಬ ಹೆಸರುಳ್ಳ ಕ್ರೋಧನಾಮಗಳನ್ನು ವಿವರಿಸಲಾಗುವುದು. ಈ ಕ್ರೋಧನಾಮಗಳು ಹನ್ನೊಂದು ಇವೆ. ಇವುಗಳನ್ನು ಕೆಳಗೆ ಕೊಟ್ಟಿದೆ—

(೧) ಹೇಲಃ (೨) ಹರಃ (೩) ಘೃಣಿಃ (೪) ತ್ಯಜಃ (೫) ಭಾಮಃ (೬) ರಾಹಃ (೭) ಹ್ವರಃ (೮) ತಪುಷೀ (೯) ಜೂರ್ಣಿಃ (೧೦) ಮನ್ಯುಃ (೧೧) ವ್ಯಥಿಃ ‖

## ಇತ್ಯೇಕಾದಶ ಕ್ರೋಧನಾಮಾನಿ ‖೧೩‖

(೧) ಹೇಲಃ ‖ ಹೇಡೃ–ಅನಾದರೇ ಧಾತು. ಭಾವಾರ್ಥದಲ್ಲಿ ಅಸುನ್‌ಪ್ರತ್ಯಯ ಸಿಟ್ಟಿಗೆ ಹನ್ನೊಂದು ನಾಮಗಳನ್ನು ಹೇಳುತ್ತಾನೆ. ಉದಾ—'**ದೇವಸ್ಯ ಹೇಲೋಽವ ಯಾಸಿಸೀಷ್ಠಾಃ**' (ಋ. ಸ. ೩–೪–೧೨–೪)

(೨) ಹರಃ‖ ಹರಣಾರ್ಥಕಹೃಞ್‌ಧಾತುವಿಗೆ ಅಸುನ್‌ಪ್ರತ್ಯಯ ಬಂದಾಗ ಗುಣ. ಸಾಂತಪದ. ಕೃತ್ಯಾಕೃತ್ಯವಿವೇಕವನ್ನು ಅಪಹರಿಸುತ್ತದೆ. ಇದರಿಂದ ಪುರುಷನು ವಶಮಾಡಿಕೊಳ್ಳಲ್ಪಡುತ್ತಾನೆ. ಸಿಟ್ಟು ಅಂತಃಶತ್ರುವಾಗಿ ಜಯಿಸಲಶಕ್ಯವಾದದ್ದು. ಇದಕ್ಕೆ ಉದಾಹರಣೆ ನಿಗಮ ಹುಡುಕಬೇಕು.

(೩) ಘೃಣಿಃ ‖ ಜ್ವಲನ್ನಾಮಧೇಯದಲ್ಲಿ ವ್ಯಾಖ್ಯಾತವಾಗಿದೆ. (೧–೧೭–೧೦) ಇದರಿಂದ ಬೆವರು ಮುಂತಾದುವುಗಳು ಸುರಿಯುತ್ತವೆ. ಇದರಿಂದ ಪ್ರಕಾಶಿಸುತ್ತಾನೆ, ಕೋಪಿಷ್ಟನು ಬೆಂಕಿಯಂತೆ ಜ್ವಲಿಸುತ್ತಾನೆಂದು ಪ್ರಸಿದ್ಧಿ. ಉದಾ—“ **ಅಘೃಣೇ ಸಂಸಚಾವಹೈ** ” (ಋ. ಸಂ. ೪–೮–೨೧–೧) ‖

(೪) **ತ್ಯಜಃ** || ತ್ಯಜ–ಹಾನೌ.ಧಾತು. ಅಸುನ್‌ಪ್ರತ್ಯಯ ಸತ್ಪುರುಷರಿಂದ ಬಿಡಲ್ಪಡುವುದು, ಇದರಿಂದ ಪ್ರಾಣಗಳು ಬಿಡಲ್ಪಡುತ್ತವೆ. ಇದರಿಂದ ಸ್ವಧರ್ಮಾದಿಗಳು ಬಿಡಲ್ಪಡುತ್ತವೆ. ಕ್ರುದ್ಧಃ ಪಾಪಂ ಕಿಂ ನಕುರ್ಯಾತ್ ಕ್ರುದ್ಧೋ ಹನ್ಯಾತ್ ಗುರೂನಪಿ ‘ ಕ್ರುದ್ಧಃ ಪರುಷಯಾ ವಾಚಾ ನರಃ ಸಾಧೂನಪಿ ಕ್ಷಿಪೇತ್’ ಎಂದು ಮಹಾಭಾರತದಲ್ಲಿ ಹೇಳಿದೆ ಉದಾ– **“ ಮಹಶ್ಚಿದಸಿ ತ್ಯಜಸೋ ವರೂತಾ ”** (ಋ. ಸಂ. ೨–೪–೮–೧) ‘ **ಕಿಂ ದೇವೇಷು ತ್ಯಜ ಏನಶ್ಚಕರ್ಥ** (ಋ.ಸಂ ೮–೩–೧೪–೩) ||

(೫) **ಭಾಮಃ** || ಕ್ರೋಧಾರ್ಥಕ ಭಾಮಧಾತುವಿಗೆ ಭಾವಾರ್ಥದಲ್ಲಿ ಘಞ್‌ಪ್ರತ್ಯಯ ಅಥವಾ ದೀಪ್ತ್ಯರ್ಥಕ ಭಾ–ಧಾತುವಿಗೆ ‘ ಅರ್ತಿಸ್ತುಸುಹು ’–(ಪಾ.ಸೂ. ೧–೧೩೭) ಸೂತ್ರದಿಂದ ಮನ್‌ಪ್ರತ್ಯಯ. ಕ್ರೋಧದಿಂದ ಪ್ರಕಾಶಿಸುತ್ತಾನೆ. ಉದಾ—‘ **ದೇವಜುಷ್ಟೋಚ್ಯತೇ ಭಾಮಿನೇಗೋಃ** (ಋ.ಸಂ. ೧–೫–೨೫–೧) **ಸ್ವಯಂಭೂರ್ಭಾಮೋ ಅಭಿಮಾತಿ ಷಾಹಃ** (ಋ. ಸಂ. ೮–೩–೧೮–೪)

(೬) **ಏಹಃ** || ಹನ–ಹಿಂಸಾಗತ್ಯೋಃ. ಅಸುನ್‌ಪ್ರತ್ಯಯ ಬಂದು ಸಾಂತಪದವಾಗುತ್ತದೆ. ಬಹುಲಗ್ರಹಣದಿಂದ ‘ನಞಿ ಹನ ಏಹಚ’ (ಉ. ೪–೨೧೮) ಸೂತ್ರದಲ್ಲಿ ನಞ್ ಉಪಪದವಾಗಿರುವಾಗ ಹೇಳಿದ ಏಹಾದೇಶವು ನಞ್ ಇಲ್ಲದಿದ್ದರೂ ಇಲ್ಲಿ ಬರುತ್ತದೆ. ಉದಾ:—**“ಅನೇಹಸಸ್ತೇ ಹರಿವೋ ಅಭಿಷ್ಟೌ”** (ಋ. ಸಂ. ೮–೧–೩೦–೨) ||

(೭) **ಹ್ವರಃ** || ಹ್ವೃ–ಕೌಟಿಲ್ಯೇ. ಅಸುನ್ ಬಂದಾಗ ಧಾತುವಿಗೆ ಗುಣ. ಹ್ವರಸ್ ಸಾಂತಪದವಾಗುತ್ತದೆ. ಕೋಪದಿಂದ ಕುಟಿಲನಾಗುತ್ತಾನೆ. ಭಕ್ಷಣಾರ್ಥವೂ ಇರುವುದರಿಂದ ಕಡಿಯುತ್ತಾನೆ ಎಂದರ್ಥ. ನಿಗಮ ಹುಡುಕಬೇಕು.

(೮) **ತಪುಷೀ** (೯) **ಜೂರ್ಣಿಃ** || ‘ಜೂರ್ಣಿರ್ಜವತೇರ್ವಾ ದ್ರವತೇರ್ವಾ ಜೀರ್ಯತೇರ್ವಾ’ (ನಿರು–೬–೪) ಎಂದು ಭಾಷ್ಯ ಇರುವುದರಿಂದ, ಇದರಿಂದ ದುಃಖ ಹೊಂದುತ್ತಾನೆ, ಲೋಕನಿಂದೆಯನ್ನು ಹೊಂದುತ್ತಾನೆ, ಇತರರನ್ನು ಹಿಂಸಿಸುತ್ತಾನೆ ಎಂದು ಆಯಾಯ ಧಾತ್ವರ್ಥವನ್ನನುಸರಿಸಿ ಅರ್ಥವಾಗುತ್ತದೆ. ನಿಗಮ ಹುಡುಕಬೇಕು.

(೧೦) **ಮನ್ಯುಃ** || ಮನ–ಜ್ಞಾನೇ. ಧಾತು. ‘ಯಜಿಮನಿಶುನ್ಧಿದಸಿಜನಿಭ್ಯೋ ಯುಚ್’ (ಉ. ೩–೧೮) ಸೂತ್ರದಿಂದ ಯುಚ್‌ಪ್ರತ್ಯಯ. ಬಹುಲಗ್ರಹಣದಿಂದ ಅದಕ್ಕೆ ಅನಾದೇಶ ಬರುವುದಿಲ್ಲ. ‘ತ್ಯಾಜ್ಯತ್ವೇನ ಜ್ಞಾಯತೇ’ ಅವಶ್ಯ ತ್ಯಾಜ್ಯನೆಂದು ತಿಳಿಯಲ್ಪಡುತ್ತದೆ. ಮನಧಾತುವಿಗೆ ದೀಪ್ತ್ಯರ್ಥವೂ ಇರುವುದರಿಂದ ‘ಇದರಿಂದ ಪ್ರಕಾಶಿಸುತ್ತಾನೆ’ ಎಂದೂ ಅರ್ಥ ತೋರುತ್ತದೆ. ಉದಾಹರಣೆ—**“ನ ಹಿ ತೇ ಕ್ಷತ್ರಂ ನ ಸಹೋ ನ ಮನ್ಯುಮ್”** (ಋ. ಸಂ. ೧–೨–೧೪–೧) **‘ಆ ಹೃಣಾನಸ್ಯ ಮನ್ಯವಃ’** (ಋ. ಸಂ. ೧–೨–೧೬–೨) ||

(೧೧) **ವ್ಯಥಿಃ** || ‘ವ್ಯಥ–ಭಯಚಲನಯೋಃ.’ ‘ಇನ್ ಸರ್ವಧಾತುಭ್ಯಃ’ (ಉ. ೪–೧೧೪) ಸೂತ್ರದಿಂದ ಇನ್‌ಪ್ರತ್ಯಯ. ಇದರಿಂದ ಸಜ್ಜನರು ಭಯಪಡುತ್ತಾರೆ, ಇದರಿಂದ ಸ್ವಧರ್ಮವನ್ನು ಬಿಡುತ್ತಾರೆ. ಉದಾಹರಣೆ—

**‘ಪತತ್ರಿಭಿರಶ್ರಮೈರವ್ಯಥಿಭಿಃ’** (ಋ. ಸಂ. ೫–೫–೧೬–೯೭) **“ಅಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್”** (ಋ. ಸಂ. ೩–೪–೨೩–೩)

ಹೀಗೆ ಹನ್ನೊಂದು ಕೋಪದ ಹೆಸರು.

———

॥ ಅಥ ಗತಿಕರ್ಮಾಣಿ । ಗತಿಕರ್ಮಾಣಿ ಉತ್ತರೇ ಧಾತವೋ ದ್ವಾವಿಂಶಶತಂ

ಗತ್ಯರ್ಥವನ್ನು (ಹೋಗು ಎಂಬರ್ಥವನ್ನು) ಸೂಚಿಸುವ ಧಾತುಗಳನ್ನು ಹೇಳಲಾಗುವುದು. ಈ ಗತ್ಯರ್ಥಕಧಾತುಗಳ ನೂರಇಪ್ಪತ್ತೆರಡು ಇರುವವು. ಅವುಗಳನ್ನು ಕೆಳಗೆ ಕೊಟ್ಟಿದೆ—

(೧) ವರ್ತತೇ (೨) ಅಯತೇ (೩) ಲೋಟತೇ (೪) ಲೋಠತೇ (೫) ಸನ್ದತೇ (೬) ಕಸತಿ (೭) ಸರ್ಪತಿ (೮)ಸ್ಯಮತಿ (೯) ಸ್ರವತಿ (೧೦) ಸ್ರಂಸತಿ (೧೧) ಅವತಿ (೧೨) ಶ್ಚ್ಯೋತತಿ (೧೩)ಧ್ವಂಸತಿ (೧೪) ವೇನತಿ (೧೫) ಮಾರ್ಷ್ಟಿ (೧೬) ಭುರಣ್ಯತಿ (೧೭) ಶವತಿ (೧೮) ಕಾಲಯತಿ (೧೯) ಪೇಲಯತಿ (೨೦) ತಣ್ಟತಿ (೨೧) ಪಿಸ್ಯತಿ (೨೨) ಬಿಸ್ಯತಿ (೨೩) ಮಿಸ್ಯತಿ (೨೪) ಪ್ರವತೇ (೨೫) ಪ್ಲವತೇ (೨೬) ಚ್ಯವತೇ (೨೭) ಕವತೇ (೨೮) ಗವತೇ (೨೯) ನವತೇ (೩೦) ಕ್ಷೋದತಿ (೩೧) ನಕ್ಷತಿ (೩೨) ಸಕ್ಷತಿ (೩೩) ಮ್ಯಕ್ಷತಿ (೩೪) ಸಚತಿ (೩೫) ಋಚ್ಛತಿ (೩೬) ತುರೀಯತಿ (೩೭) ಚತತಿ (೩೮) ಅತತಿ (೩೯) ಗಾತಿ (೪೦) ಇಯಕ್ಷತಿ (೪೧) ಸಶ್ಚತಿ (೪೨) ತ್ಸರತಿ (೪೩) ರಹಂತಿ (೪೪) ಯತತೇ (೪೫) ಭ್ರಮತಿ (೪೬) ಧ್ರಜತಿ (೪೭) ರಜತಿ (೪೮) ಲಜತಿ (೪೯) ಕ್ಷಿಯತಿ (೫೦) ಧಮತಿ (೫೧) ಮಿನಾತಿ (೫೨) ಋಣ್ವತಿ (೫೩) ಋಣೋತಿ (೫೪) ಸ್ವರತಿ (೫೫) ಸಿಸರ್ತಿ (೫೬) ವಿಷಿಷ್ಟಿ (೫೭) ಯೋಷಿಷ್ಟಿ (೫೮) ರಿಣಾತಿ (೫೯) ರೀಯತೇ (೬೦) ರೇಜತಿ (೬೧) ದಘ್ಯತಿ (೬೨) ದಘ್ನೋತಿ (೬೩) ಯುಧ್ಯತಿ (೬೪) ಧನ್ವತಿ (೬೫) ಅರುಷತಿ (೬೬) ಆರ್ಯತಿ (೬೭) ಸೀಯತೇ (೬೮) ತಕತಿ (೬೯) ದೀಯತಿ (೭೦) ಈಷತಿ (೭೧) ಫಣತಿ (೭೨) ಹನತಿ (೭೩)ಅರ್ದತಿ (೭೪) ಮರ್ದತಿ (೭೫) ಸರ್ತತೇ (೭೬) ನಸತೇ (೭೭) ಹರ್ಯತಿ (೭೮) ಇಯರ್ತಿ (೭೯) ಈರ್ತೇ (೮೦) ಈಙ್ಖತೇ (೮೧) ಜ್ರಯತಿ (೮೨) ಶ್ವಾತ್ರತಿ (೮೩) ಗನ್ತಿ (೮೪) ಆಗನೀಗನ್ತಿ (೮೫) ಜಙ್ಗನ್ತಿ (೮೬) ಜಿನ್ವತಿ (೮೭) ಜಸತಿ (೮೮) ಗಮತಿ (೮೯)ಧ್ರತಿ (೯೦) ಧ್ರಾತಿ (೯೧) ಧ್ರಯತಿ (೯೨) ವಹತೇ (೯೩) ರಘರ್ಯತಿ (೯೪) ಜೇಹತೇ (೯೫) ಷ್ವಃಕತಿ (೯೬) ಕ್ಷಮ್ಪತಿ (೯೭) ಪ್ಸಾತಿ (೯೮) ಪಾತಿ (೯೯) ಯಾತಿ (೧೦೦) ಇಷತಿ (೧೦೧) ದ್ರಾತಿ (೧೦೨) ದ್ರೂಲತಿ (೧೦೩) ಏಜತಿ (೧೦೪) ಜಮತಿ (೧೦೫) ಜವತಿ (೧೦೬) ವಂಚತಿ (೧೦೭) ಅನಿತಿ

(೧೦೮) ಪವತೇ (೧೦೯) ಹನ್ತಿ (೧೧೦) ಸೇಘತಿ (೧೧೧) ಅಗನ್ (೧೧೨) ಅಜಗನ್ (೧೧೩) ಜಿಗಾತಿ (೧೧೪) ಪತತಿ (೧೧೫) ಇನ್ವತಿ (೧೧೬) ದ್ರಮತಿ (೧೧೭) ದ್ರವತಿ (೧೧೮) ವೇತಿ (೧೧೯) ಹನ್ತಾತ್ (೧೨೦) ಏತಿ (೧೨೧) ಜಗಾಯಾತ್ (೧೨೨) ಅಯಥುಃ ||

ಇತಿ ದ್ವಾವಿಂಶಶತಂ ಗತಿಕರ್ಮಾಣಃ || ೧೪ ||

ನೂರ ಇಪ್ಪತ್ತೆರಡು ಗತ್ಯರ್ಥಧಾತುಗಳನ್ನು ಹೇಳುತ್ತಾನೆ. ' ವರ್ತತೇ ' ಮುಂತಾದ ಗತ್ಯರ್ಥಧಾತುಗಳಿಗೆ ಗಮನಾರ್ಥವನ್ನು ಸ್ಕಂದಸ್ವಾಮಿಯು ಪ್ರತಿಪಾದಿಸಿರುವುದರಿಂದ ಹೇಳಿವೆ. ಧಾತುಗಳಿಗೆ ಅನೇಕಾರ್ಥವನ್ನು ಅಂಗೀಕರಿಸಿರುವುದರಿಂದ ಇಲ್ಲಿ ಗತ್ಯರ್ಥತೋರುತ್ತವೆಂದು ಹೇಳಬಹುದು. ಇವುಗಳಿಗೆ ಉದಾಹರಣೆ ನಿಗಮ ತೋರಿಸದಿರುವ ಸ್ಥಳದಲ್ಲಿ ನಿಗಮ ಹುಡುಕಬೇಕು. ಎಲ್ಲಿ ವಿಕರಣ ಹೇಳಿಲ್ಲವೋ ಅಲ್ಲಿ ಭ್ವಾದಿಗಣ, ಶಬ್ವಿಕರಣವೆಂದು ತಿಳಿಯಬೇಕು. ಆತ್ಮನೇಪದ್ಯಾದಿಗಳನ್ನು ಹೇಳದಿರುವಾಗ ಪರಸ್ಮೈಪದಿಯೆಂದೂ ತಿಳಿಯಬೇಕು.

(೧) **ವರ್ತತೇ** || ವೃತು–ವರ್ತನೇ. ಭ್ವಾದಿ. ಆತ್ಮನೇಪದೀ. ಶಪ್‌ವಿಕರಣ ಬಂದಾಗ ಧಾತುವಿನ ಲಘೂಪಧೆಗೆ ಗುಣ.

(೨) **ಆಯತೇ** || (೩) **ಲೋಟತೇ** || (೪) **ಲೋಠತೇ** || ಗತ್ಯರ್ಥದಲ್ಲಿ ಭ್ವಾದಿಯಲ್ಲಿ ಆತ್ಮನೇಪದಿಯಾಗಿ ಹೇಳಿವೆ.

(೫) **ಸನ್ದತೇ** || 'ಸ್ಯನ್ದೂ–ಪ್ರಸ್ರವಣೇ.' ಭ್ವಾದಿ. ಆತ್ಮನೇಪದೀ. ಉದಾಹರಣೆ—**"ಸ್ಯನ್ದನ್ತಾಂ ಕುಲ್ಯಾ ವಿಷಿತಾಃ ಪುರಸ್ತಾತ್" (ಋ. ಸಂ. ೪-೪-೨೮-೩)** ||

(೬) **ಕಸತಿ** || ಕಸ–ಗತೌ. ಅದಾದಿ. ಪರಸ್ಮೈಪದೀ. ವ್ಯತ್ಯಯದಿಂದ ಶಪಿಗೆ ಲುಕ್ ಬರುವುದಿಲ್ಲ. ಲಟ್ ||

(೭) **ಸರ್ಪತಿ** || ಸೃಪ್ಲೃ–ಗತೌ. (ಭ್ವಾ–ಪ) ಶಪ್ ಬಂದಾಗ ಲಘೂಪಧಗುಣ, ಉದಾಹರಣೆ—**'ನಮೋ ಅಸ್ತು ಸರ್ಪೇಭ್ಯಃ'** || **'ಅಹಿರ್ನ ಜೂರ್ಣಾಮತಿ ಸರ್ಪತಿ ತ್ವಚಮ್' (ಋ. ಸಂ. ೭-೩-೨೦-೪)**||

(೮) **ಸ್ಯಮತಿ** ||

(೯) **ಸ್ರವತಿ** || ಸ್ರು–ಗತೌ. (ಭೂ–ಪ) **ಶಪ್.** ಗುಣ. ಅವಾದೇಶ. ಉದಾಹರಣೆ—**"ಅವಸ್ರ ನೇದ ಘಶಂಸೋವತರಮ್"** (ಋ. ಸಂ. ೨-೧-೧೭-೧) ||

(೧೦) ಸ್ರಂಸತೇ ॥ ಸ್ರಂಸು-ಅವಸ್ರಂಸನೇ. (ಭ್ವಾ.) ಆತ್ಮನೇಪದೀ. ಶಪ್. ಉದಾಹರಣೆ—"**ಜಾತೇಸ ಜಾತಮತಿ ಸ ಪ್ರ ಸರ್ಸ್ರತೇ** (ಋ. ಸಂ. ೨-೭-೪-೧) ॥ ಇಲ್ಲಿ ಅಂತರ್ಭಾವಿತಣ್ಯರ್ಥವನ್ನು ಹೇಳಬೇಕೆಂದು ಹರದತ್ತನ ಮತ ॥

(೧೧) **ಅವತಿ** ॥ 'ಅವ-ರಕ್ಷಣಗತ್ಯಾದೌ' (ಭೂ-ಪ). ಉದಾಹರಣೆ—'**ಪ್ರಾವನ್ ವಾಣೀಃ ಪುರುಹೂತಂ ಧಮನ್ತೀಃ**' (ಋ. ಸಂ. ೩-೨-೨-೫) '**ತಂ ಘೋಷನಗ್ನಿರ್ವೃಧಾವತಿ**' (ಋ. ಸಂ. ೩-೧-೨೧-೫) ॥

(೧೨) **ಶ್ಚೋತತಿ** ॥ 'ಶ್ಚುತಿರ್-ಕ್ಷರಣೇ' (ಭ್ವಾ-ಪ) **ಶ್ಚೋತಂತಿ ತೇ ವಸೋ ಸ್ತೋಕಾಃ** ॥ (ಋ-ಸಂ-೩-೧-೨೧-೫)॥

(೧೩) **ಧ್ವಂಸತಿ** ॥ (೧೪) **ವೇನತಿ** ॥ ಇದು ಕೇವಲ ನಿರುಕ್ತ ಪಠಿತವಾದ ಧಾತು. ಉದಾಹರಣೆ—

"**ಆ ಪ್ರ ದ್ರವ ಪರಿವೋ ಮಾ ವಿ ವೇನಃ**" (**ಋ. ಸಂ. ೪-೧-೨೯-೨**) "**ನಾಸತ್ಯಾ ಮಾ ವಿ ವೇನತಮ್**' (**ಋ. ಸಂ. ೪-೪--೧೬-೨**)

(೧೫) **ಮಾರ್ಷ್ಟಿ** ॥ ಮೃಜೂ-ಶುದ್ಧೌ. ಅದಾದಿ. ಪರಸ್ಮೈಪದೀ. ಶಪಿಗೆ ಲುಕ್. 'ವ್ರಶ್ಚ—' ಸೂತ್ರದಿಂದ ಜಕಾರಕ್ಕೆ ಷಕಾರಾದೇಶ ಬಂದಾಗ ಷ್ಟುತ್ವ. ಉದಾಹರಣೆ—

"**ಮೃಗೋ ನ ಭೀಮಃ**" (ಋ. ಸಂ. ೨-೨-೨೪-೨) "**ಉರಾವಂತರಿಕ್ಷೇ ಮರ್ಜಯನ್ತ**" ((**ಋ. ಸಂ. ೫-೪-೬-೩**)

(೧೬) **ಭುರಣ್ಯತಿ** ॥ "ಭುರಣ-ಧಾರಣಪೋಷಣಯೋಃ" ಕಂಡ್ವಾದಿಗಣಪಠಿತವಾದುದರಿಂದ ಯಕ್ ಬರುತ್ತದೆ. ಇಲ್ಲಿ ಗತ್ಯರ್ಥ. ಉದಾಹರಣೆ—

"**ಭುರಣ್ಯನ್ತಂ ಜನಾ ಅನು** (ಋ. ಸಂ. ೧-೪-೮-೧) "**ಶಚಿ ರ್ವಾಂ ಸ್ತೋಮೋ ಭುರಣಾವಜೀಗಃ**" (**ಋ. ಸಂ. ೭-೭-೨೨-೧**)

(೧೭) **ಶವತಿ** ॥ 'ಶವ-ಗತೌ' ಸ್ಕಂದಸ್ವಾಮಿಯು 'ಶು-ಗತೌ' ಎಂದು ಹೇಳಿರುತ್ತಾನೆ. ಆಗ ಗುಣ, ಅವಾದೇಶ ಹೇಳಬೇಕು. ಉದಾಹರಣೆ—"**ಮಾ ಭೇಮ ಶವಸಸ್ಪತೇ**" (**ಋ. ಸಂ. ೧-೧-೨೧-೨**)

(೧೮) **ಕಾಲಯತಿ** ॥ ಕಲ-ಕ್ಷೇಪೇ-ಚುರಾದಿ. ಅದಂತಧಾತು ಸ್ವಾರ್ಥದಲ್ಲಿ ಣಿಚ್ ಅದನ್ನು ನಿಮಿತ್ತೀಕರಿಸಿ ಧಾತುವಿನ ಕೊನೆಯ ಅಕಾರಕ್ಕೆ ಲೋಪ. ವ್ಯತ್ಯಯದಿಂದ ಸ್ಥಾನಿವದ್ಭಾವವಿಲ್ಲದಿರುವುದರಿಂದ ಧಾತುವಿನ ಉಪಧೆಗೆ ವೃದ್ಧಿ ಕಾಲಿ+ಅ+ತೇ. ಗುಣ, ಅಯಾದೇಶ. ಉದಾ-' **ತಂ ಕಾಲೇ ಕಾಲ ಆಗತೇ ಯತೇ** ॥ ಗತ್ಯರ್ಥಕ ಕಲಧಾತುವಿನಿಂದ ಕಾಲಪದ ನಿಷ್ಪನ್ನವಾಗಿದೆಯೆಂದು ಯಾಸ್ಕರು (ನಿರು.-೨-೨೫) ಹೇಳಿರುತ್ತಾರೆ.

(೧೯) **ಪೇಲಯತಿ** ॥ ಪೇಲೃ-ಗತೌ.(ಭ್ವಾ-ಪ) ಉದಾ—' **ವಯಾಂಸಿ ಪಕ್ವಾ ಗಂಧೇನ ಪಿಪೀಲಿಕಾಃ ಪ್ರಶಾದ** ॥ ಪಿಪೀಲಿಕಾಪದವು ಗತ್ಯರ್ಥಕವಾದ ಈ ಧಾತುವಿನಿಂದ ಆಗಿದೆಯೆಂದು ಯಾಸ್ಕನಿರುಕ್ತ. (೭-೧೩)

(೨೦) **ಕಣ್ಟತಿ** ॥ ಕಟಿ ಗತೌ, (ಭ್ವಾ-ಪ) ಇದಿತ್ತ್ವಾದುದರಿಂದ ನುಮ್ ಅದಕ್ಕೆ ಅನುಸ್ವಾರ, ಪರಸವರ್ಣ. ಉದಾ— **'ಯಾತುಧಾನೇಭ್ಯಃ ಕಣ್ಟಕೀಕಾರೀಮ್** (ಯ.ವಾ-ಸಂ. ೩೧-೮) **'ಕಣ್ಟಕಃ ಕಂತಪೋ ವಾ ಕೃತಂತೇರ್ವಾ ಕಣ್ಟತೇರ್ವಾ ಸ್ಯಾತ್ ಗತಿಕರ್ಮಣಃ"** (ನಿರು.೯-೨೨) ಎಂದು ನಿರುಕ್ತವಿರುವುದರಿಂದ ಕಂಟಕೀಪದವು ಕಟ ಧಾತುವಿನಿಂದಲಾಗಿದೆ.

(೨೧) ॥ **ಪಿಸ್ಯತಿ** ॥ ಪಿಸ್ಯ, ಪೇಸೃ-ಗತೌ. ಭ್ವಾ.ಪ 'ವ್ಯತ್ಯಯೋ ಬಹುಲಮ್' ಎಂಬುದರಿಂದ ಶಪಿಗೆ ಶ್ಯನ್‌ಬಂದಿದೆ ಲಟ್ ॥

(೨೩) **ಬಿಸ್ಯತಿ** ॥ **ಮಿಸ್ಯತಿ** ॥ ಬಿಸ-ಪ್ರೇರಣೆ. ಮಸಿ-ಪರಿಮಾಣೇ ದಿವಾದಿ ಶ್ಯನ್‌ವಿಕರಣ. ಮಿಸ್ಯತಿ ಎಂಬಲ್ಲಿ ಛಾಂದಸವಾಗಿ ಅಕಾರಕ್ಕೆ ಇಕಾರಾದೇಶ ಬಂದಿದೆ. ಋಗ್‌ಭಾಷ್ಯದಲ್ಲಿ ಇವೆರಡೂ ನೈರುಕ್ತಧಾತುವೆಂದು ಹೇಳಿದೆ. ಬಿಸಧಾತು ಗತ್ಯರ್ಥದಲ್ಲಿ ಹೇಳಿದೆಯೆಂದು ಸ್ಕಂದಸ್ವಾಮೀ ಉದಾ— **"ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್"** (ಋ.ಸಂ-೪-೮-೩೦-೨) ॥

(೨೪) **ಪ್ರವತೇ** ॥ (೨೫) **ಪ್ಲವತೇ** (೨೬) **ಚ್ಯವತೇ** ॥ ಚ್ಯುಙ್, ಪ್ರುಙ್, ಪ್ಲುಙ್, ಮ್ಲುಙ್-ಗತೌ. ಭ್ವಾದಿ. ಆತ್ಮನೇಪದೀ. ಶಪ್. ಗುಣ. ಅವಾದೇಶ. ಉದಾಹರಣೆ—**"ಅಭಿ ಪ್ರವನ್ತ ಸಮನೇವ ಯೋಷಾಃ"** (ಋ. ಸಂ. ३-೮-೧೧-೩) **"ತಿಸ್ರಃ ಪೃಥಿವ್ಯಾ ಮೀರುಪರಿ ಪ್ರವಾದಿವಃ"** (ಋ. ಸಂ. ೧-೩-೫-೨)

(೨೭) **ಕವತೇ** ॥ "ಕುಙ್-ಗತಿಶೋಷಣಯೋಃ." (ಭ್ವಾ-ಆ) ಶಬ್‌ನಿಮಿತ್ತವಾಗಿ ಗುಣ ಅವಾದೇಶ. ಉದಾಹರಣೆ—**"ನೀ ಚೀನ ಬಾರಂ ವರುಣಃ ಕಬನ್ಧಮ್"** (ಋ. ಸಂ. ೪-೪-೩೦-೩)

(೨೮) **ಗವತೇ** ॥ (೨೯) **ನವತೇ** ॥ ಣು-ಸ್ತುತೌ. ಅದಾದಿ. 'ಣೋ ನಃ' ಧಾತ್ವಾದಿಗೆ ನತ್ವ. ಬಹುಲಮ್ ಛಂದಸಿ' ಸೂತ್ರದಿಂದ ಶಪಿಗೆ ಲುಕ್ ಬರುವುದಿಲ್ಲ. ವ್ಯತ್ಯಯದಿಂದ ಆತ್ಮನೇಪದಿಯಾಗುತ್ತದೆ. ಉದಾಹರಣೆ—

**"ಪ್ರಥೇನವ ಉದಪ್ರುತೋ ನವನ್ತ"** (ಋ. ಸಂ. ೫-೪-೯-೧)

(೩೦) **ಕ್ಷೋದತಿ** ॥ ಕ್ಷುದಿರ್-ಸಂಪೇಷಣೇ. ರುಧಾದಿ. ಸ್ವರಿತೇತ್ತ್ವಾಗುವುದರಿಂದ ಉಭಯಪದೀ. ವ್ಯತ್ಯಯದಿಂದ ಶ್ನಮ್‌ವಿಕರಣಕ್ಕೆ ಶಪ್ ಬರುತ್ತದೆ. ಉದಾಃ—**"ಕ್ಷೋದನ್ತ ಆಪೋ ರಿಣತೇ ವನಾನಿ"** (ಋ-ಸಂ-೪-೩-೨೩-೬) ॥

(೩೧) **ನಕ್ಷತಿ** ॥ ನಕ್ಷ-ಗತೌ. (ಭ್ವಾ-ಪ) ಲಟ್- ಉದಾಹರಣೆ—**"ಶಫಚ್ಯುತೋ ರೇಣುರ್ನಕ್ಷತ ದ್ಯಾಮ್"** (ಋ. ಸಂ. ೧-೩-೩-೪)

(೩೨) **ಸಕ್ಷತಿ** ॥ ಷಚ-ಸಮವಾಯೇ. ಸ್ವರಿತೇತ್ತ್ವಾದುದರಿಂದ ಉಭಯಪದೀ. ಭ್ವಾದಿ. 'ಸಿಬ್ಬಹುಲಂ ಲೇಟಿ' (ಪಾ. ಸೂ. ३-೪-೯೪) ಸೂತ್ರದಿಂದ ತಿಪಿಗೆ ಅಡಾಗಮ. ಇದು ನೈರುಕ್ತ ಧಾತುವೆಂದೂ ಕೆಲವರ ಮತ. ಉದಾಹರಣೆ—

**"ಸಕ್ಷ್ವಾಬೇವ ಪುಣಸ್ಯುರಃ"** (ಋ. ಸಂ. ೧-೩-೨೪-೧)

(೩೩) **ಮ್ಯಕ್ಷತಿ** ॥ ಇದೂ ನಿರುಕ್ತಪಠಿತವಾದ ಧಾತು. ಗತಿಕ್ರಿಯಾವಾಚಕವಾದ ಮ್ಯಕ್ಷಧಾತುವಿನ ರೂಪವೆಂದು ಸ್ಕಂದಸ್ವಾಮೀ.

(೩೪) ಸಚತಿ ॥ ಷಚ–ಸಮವಾಯೇ. (ಭ್ವಾ–ಪ) ಧಾತ್ವಾದಿಗೆ ಸತ್ವ. ಸಚತಿ ಯಚ್ಛತಿ ಎಂದು ಗತಿಕರ್ಮದಲ್ಲಿ ಪಠಿತವಾಗಿದೆಯೆಂದು ಸ್ಕಂದಸ್ವಾಮೀ. ಉದಾಹರಣೆ—

**"ಅಚ್ಛಿನ್ನಪತ್ರಾಃ ಸಚತಾಮ್" (ಋ. ಸಂ. ೧–೨–೬–೧) "ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚನ್ತೇ" (ಋ. ಸಂ. ೧–೫–೧೬–೧)**

(೩೫) **ಋಚ್ಛತಿ** ॥ 'ಋ–ಗತಿಪ್ರಾಪಣಯೋಃ' ಲಟಿನಲ್ಲಿ ಶಪ್ ಬಂದಾಗ 'ಪಾಘ್ರಾಧ್ಮಾ—' (ಪಾ–೭–೩–೭೮) ಸೂತ್ರದಿಂದ ಧಾತುವಿಗೆ ಋಚ್ಛಾದೇಶ. ಉದಾ:—**"ವಾಚಾ ಸ್ತೇನ ಶರವ ಋಚ್ಛನ್ತು"**। (ಋ.ಸಂ. ೮–೪–೭-೪)

(೩೬) **ತುರೀಯತಿ** ॥ ಇದು ಕೇವಲ ನಿರುಕ್ತಪಠಿತವಾದ ಧಾತು.

(೩೭) **ಚತತಿ** ॥ ಚತೇ–ಯಾಚನೇ. ಸ್ವರಿತೇತ್ತ್ವಾದುದರಿಂದ ಉಭಯಪದೀ. 'ಚತತಿರ್ಗತ್ಯರ್ಥೇ' ಎಂದು ಭಟ್ಟ ಭಾಸ್ಕರಮಿಶ್ರರ ಮತ. ಲಟ್. ಉದಾಹರಣೆ—**'ದೂರಾದ್ದೂರಮುಚೀಚತಮ್'** ॥

(೩೮) **ಅತತಿ** ॥ ಅತ–ಸಾತತ್ಯಗಮನೇ । ಲಟ್. (ಭ್ವಾ–ಪ) ಉದಾ :—**'ಅಯಮುತೇ ಸಮತಸಿ' (ಋ. ಸಂ. ೧–೨–೨೮–೪)**

(೩೯) **ಗಾತಿ** ॥ ಗಾಙ್–ಗತೌ. ಅದಾದಿ ಪರಸ್ಮೈಪದೀ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಶಪಿಗೆ ಲುಕ್. ಉದಾ :—**'ನಿರ್ಯತ್ ಪೂತೇವ ಸ್ವಧಿತಿ ಶುಚಿರ್ಗಾತ್' (ಋ. ಸಂ. ೫–೨–೪–೫)**

(೪೦) **ಇಯಕ್ಷತಿ** ॥ 'ಯಜ–ಪೂಜಾಯಾಮ್. ತುದಾದಿ. ಆತ್ಮನೇಪದೀ. ಶವಿಕರಣ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಸನ್ ಬಂದಾಗ ದ್ವಿತ್ವಾದಿ. ವ್ಯತ್ಯಯದಿಂದ ಅಭ್ಯಾಸಕ್ಕೆ ಸಂಪ್ರಸಾರಣ. ಪೂರ್ವರೂಪ. ಉದಾಹರಣೆ—**'ಕವಿಮಿಯಕ್ಷಸಿ ಪ್ರಯಜ್ಯುಃ'** (ಋ. ಸಂ. ೪–೮–೫–೪) ಯಜಧಾತುವಿಗೆ ಗತ್ಯರ್ಥವೂ ಇದೆಯೆಂದು ಹರದತ್ತನ ಮತ.

(೪೧) **ಸಶ್ಚತಿ** ॥ ಹಿಂದೆ ಹೇಳಿದ ಷಚಧಾತುವಿಗೇ ಛಾಂದಸವಾಗಿ ಶಕಾರ ಅಧಿಕವಾಗಿ ಬಂದಿದೆ. ಉದಾಹರಣೆ—**'ಅಸಶ್ಚಂತೀ ಭೂರಿಧಾರೇ ಪಯಸ್ವತೀ' (ಋ. ಸಂ. ೫–೧–೧೪–೨) 'ಋಜೀಷಿಣ ವೃಷಣಂ ಸಶ್ಚತಃ ಶ್ರಿಯೇ' (ಋ. ಸಂ. ೧–೫–೮–೩)** ॥

(೪೨) **ತ್ಸರತಿ** ॥ 'ತ್ಸರ–ಛದ್ಮಗತೌ. ಲಟ್. ಉದಾ :—**'ಅಭಿತ್ಸರಂತಿ ಧೇನುಭಿಃ' 'ಅವತ್ಸರತ್ ಸ್ಪೃಶತ್ಯಶ್ಚಿಕಿತ್ವಾನ್' (ಋ. ಸಂ. ೧–೫–೧೫–೫)** ॥

(೪೩) **ರಹಂತಿ** ॥ ರಹಿ–ಗತೌ ಇದಿತ್ತ್ವಾದುದರಿಂದ ನುಮ್, ಲಟ್. ಉದಾ—**ಸಹಸ್ರಾಃ ಶತಸಾ ಅಸ್ಯ ರಂಹಿಃ** (ಋ. ಸಂ. –೮–೮–೩೬–೩) **ಪುರೋ ಹರಿಭ್ಯಾಂ ವೃಷಭೋ ರಥೋ ಹಿಷಃ (ಋ. ಸಂ. ೧-೪–೧೭–೩) ಗತ್ಯರ್ಥಕ ವಾದ ರಂಹಧಾತುವಿನಿಂದ** ರಥಶಬ್ದವಾಗಿದೆಯೆಂದು ಭಾಷ್ಯ (ನಿ–೯–೧೧) ॥

(೪೪) **ಯತತೇ** ॥ ಯತೀ–ಪ್ರಯತ್ನೇ. ಭ್ವಾದಿ ಆತ್ಮನೇಪದೀ. ಲಟ್ ಉದಾ–**ಹಂಸಾ ಇವ ಶ್ರೇಣಿಶೋ ಯತನ್ತೇ** (ಋ. ಸ.. ೨-೩-೧೦–೫) **ಮಿತ್ರಂ ನ ಯಾತ ಯಜ್ಞನಮ್** (ಋ. ಸಂ. ೬-೭–೧೧–೨)॥

(೪೫) **ಭ್ರಮತಿ** ॥ ಭ್ರಮು–ಚಲನೇ (ಭ್ವಾ–ಪ) ಉದಾ–‘ **ಭ್ರಮಿರಸ್ಯ ಸಿಕ್ವನ್ಮರ್ತಾನಾಮ್**’ ॥

**(೪೬) ಧ್ರಜತಿ**॥ ಧ್ರಜಿ, ಧ್ರಜ–ಗತೌ (ಭ್ವಾ ಪ) ಲಟ್ ಉದಾ–**ಧ್ರಾಜಿರೇಕಸ್ಯ ದದೃಶೇ ನರೂಪಮ್** (**ಋ.ಸಂ- ೨–೩–೨೨–೪**) ‘ **ಅಹಿರ್ಧು**–**ನಿರ್ವಾತ ಇವ ಧ್ರಜೀಮಾನ್** (**ಋ. ಸಂ. ೧–೫–೨೭–೧**) ॥

(೪೭) **ರಜತಿ** (೪೮) **ಲಜತಿ**॥(೪೯) **ಕ್ಷಿಯತಿ** ॥ ಕ್ಷಿ–ನಿವಾಸಗತ್ಯೋಃ. ಶ್ಯನ್ ವಿಕರಣ. ಅದು ಙಿತ್ತಾಗುವುದರಿಂದ ಗುಣ ಬರುವುದಿಲ್ಲ

(೫೦) **ಧಮತಿ**॥ ಧಮಿಯೆಂಬುದು ಸೌತ್ರಧಾತುವೆಂದು ಸ್ಕಂದಸ್ವಾಮಿಯ ಮತ ಧ್ಮಾ–ಶಬ್ದಾಗ್ನಿಸಂಯೋಗಯೋಃ ಶಪ್ ವಿಕರಣಬಂದಾಗ ‘ಪಾಘ್ರಾಧ್ಮಾ’– (ಪಾ.ಸೂ.೭–೩–೭೮) ಸೂತ್ರದಿಂದ ಧಮಾದೇಶ. ಉದಾ–**ಸ್ವಾನನ್ವಾಣೀಃ ಪುರುಹೂತಂ ಧಮನ್ತಿಃ**(ಋ ಸಂ.೩–೨–೨–೫)**ನಿಃಷೀಮದ್ಭ್ಯಃ ಧಮಥೋ ನಿಃಷಧಸ್ಥಾತ್** (ಋ.ಸಂ.೪–೧–೬೦–೪)॥

**(೫೧) ಮಿನಾತಿ** ॥ ಮೀಞ್–ಹಿಂಸಾಯಾಮ್ ‘ಮಿನಾತೇರ್ನಿಗಮೇ’ (ಪಾ–ಸೂ–೭–೩–೮೧) ಸೂತ್ರದಿಂದ ಹ್ರಸ್ವ. ‘ಮಿನೋತಿ’ ಎಂದು ಪಾಠಾಂತರವಿದೆ. ಆಗ ‘ಡುಮಿಞ್–ಕ್ಷೇಪಣೇ. ಸ್ವಾದಿ. ಶ್ನು ವಿಕರಣ ಗುಣ. ಉದಾ– **ಸಪ್ತ ಚಕ್ರಂ ರಥ ಮವಿಶ್ವಮಿನ್ವನ್**’ (ಋ- ಸಂ ೨–೮–೬–೩) ॥

**(೫೨) ಋಣ್ವತಿ** ॥ “ಋವಿ ರವಿ ಗತೌ”. (ಭ್ವಾ–ಪ). ಇದಿತ್ತಾದುದರಿಂದ ನುಮಾಗಮ. ‘ರಯೇರ್ಮತೌ ಬಹುಲಮ್’ ವಾರ್ತಿಕದಲ್ಲಿ ಬಹುಲಗ್ರಹಣದಿಂದ ಇಲ್ಲಿ ವಕಾರಕ್ಕೆ ಉಕಾರರೂಪ ಸಂಪ್ರಸಾರಣ ಬರುತ್ತದೆ. ‘ಋಣ್ವತಿರ್ಗತಿ ಕರ್ಮಾ, ಅಂತರ್ಣೀತಣ್ಯರ್ಥಃ’ ಎಂದು ಸ್ಕಂದಸ್ವಾಮಿ. ಇಲ್ಲಿ ವಿವಿಧರೀತಿಯಿಂದ ಹೋಗುವಂತೆ ಮಾಡುತ್ತಾನೆಂದು ಣ್ಯಂತಾರ್ಥ ಹೇಳಬೇಕೆಂದರ್ಥ. ಉದಾಹರಣೆ—**“ವ್ಯಸುಷಗ್ ವಾರ್ಯಾ ದೇವ ಋಣ್ವತಿ” (ಋ. ಸಂ. ೧–೪–೨೩–೩)** ॥

**(೫೩) ಋಣೋತಿ** ॥ ಋಣ–ಗತೌ. ತನಾದಿ. ಉವಿಕರಣ. ಅದಕ್ಕೆ ಗುಣ. ಸ್ವರಿತೇತ್ತಾದುದರಿಂದ ಉಭಯ ಪದಿಯಾಗುತ್ತದೆ. ‘ಸಂಜ್ಞಾ ಪೂರ್ವಕೋ ವಿಧಿರನಿತ್ಯಃ’ ಎಂಬ ವಾಕ್ಯದಿಂದ ಇಲ್ಲಿ ಉಪ್ರತ್ಯಯ ನಿಮಿತ್ತವಾಗಿ ಲಘೂಪಧ ಗುಣ ಬರುವುದಿಲ್ಲ. ಉದಾಹರಣೆ—**“ಅಭಿ ಕೃಷ್ಣೇನ ರಜಸಾ ದ್ಯಾಮೃಣೋತಿ”** (**ಋ. ಸಂ. ೧–೩–೭–೪**) **“ಋಣೋರಪೋ ಅನವದ್ಯಾರ್ಣಾಃ” (ಋ. ಸಂ. ೨–೪–೧೬–೨)** ॥

**(೫೪) ಸ್ವರತಿ**॥ ‘ಸ್ವೃ–ಶಬ್ದೋಪತಾಪಯೋಃ’ ಇಲ್ಲಿ ಗತ್ಯರ್ಥವೆಂದು ಸ್ಕಂದಸ್ವಾಮೀ. ಶಪ್‌ನಿಮಿತ್ತವಾಗಿ ಗುಣ. ರಪರವಾಗಿ ಬರುತ್ತದೆ. ಉದಾಹರಣೆ—**“ಹರೀ ಇಂದ್ರಪ್ರತದ್ವಸೂ ಅಭಿಸ್ವರ” (ಋ. ಸಂ. ೬–೧–೧೨–೨)** ॥

**(೫೫) ಸಿಸರ್ತಿ** ॥ ಸೃ–ಗತೌ. ಜುಹೋದಿತ್ಯಾದಿ. ಶ್ಲು ವಿಕರಣ ಬರುವುದರಿಂದ ದ್ವಿತ್ವ. ‘ಅರ್ತಿಪಿಪರ್ತ್ಯೋಶ್ಚ’ ಸೂತ್ರವಿಹಿತವಾದ ಇತ್ವವು ‘ಬಹುಲಂ ಛಂದಸಿ’ ಸೂತ್ರದಿಂದ ಇದರ ಅಭ್ಯಾಸಕ್ಕೂ ಬರುತ್ತದೆ. ತಿಪ್‌ನಿಮಿತ್ತವಾಗಿ ಧಾತು ಋಕಾರಕ್ಕೆ ಗುಣ. ಉದಾಹರಣೆ—**“ಪ್ರ ಬಾಹವಾ ಸಿಸೃತಂ ಜೀವಸೇ ನ (ಋ. ಸಂ. ೫–೫–೪–೫)**

**(೫೬) ವಿಷಿಷ್ಟಿ** ॥ ವಿಷ್ಲೃ–ವ್ಯಾಪ್ತೌ. ಜುಹೋತ್ಯಾದಿ. ಶ್ಲುನಿಮಿತ್ತವಾಗಿ ದ್ವಿತ್ವಾದಿ. ಲೇಟ್. ‘ಸಿಬ್ಬಹುಲಂ ಲೇಟಿ’ ಸಿಪ್ ಬರುತ್ತದೆ. ಉದಾಹರಣೆ—

'ಅಗ್ನೇ ಸಂವೇಷಿಷೋರಯಿವರ್' (ಋ. ಸಂ. ೬-೫-೨೬-೧) ಸುತ್ತಲೂ ಹೊಂದಿಸು ಎಂದರ್ಥ.

(೫೭) **ಯೋಷಿಷ್ಟ** | ಯುಷ-ಹಿಂಸಾಯಾಮ್. ಲೇಟ್. ಹಿಂದಿನಂತೆ ಸಿಪ್. ವ್ಯತ್ಯಯದಿಂದ ಅಭ್ಯಾಸಕ್ಕೆ ಗುಣ ||

(೫೮) **ರೀಣಾತಿ** || 'ರೀ- ಗತಿರೇಷಣಯೋಃ' ಕ್ರ್ಯಾದಿ, ಸ್ವಾದಿ· ಗಣಪಠಿತವಾದುದರಿಂದ ಹ್ರಸ್ವ. ವಿಕರಣ ಙಿತ್ತಾಗುವುದರಿಂದ ಗುಣವಿಲ್ಲ. ಉದಾ :— **'ಋಘಾಯಮಾಣೋ ನಿರಿಣಾತಿ ಶತ್ರೂನ್'** (ಋ. ಸಂ.೧-೪-೨೯-೩ **'ಲೋಪಾಮುದ್ರಾ ವೃಷಣಂ ನೀರಿಣಾತಿ'** (ಋ. ಸಂ. ೨-೪-೨೨-೪) ||

(೫೯) **ರೀಯತೇ** || "ರೀಙ್-ಶ್ರವಣೇ' ದಿವಾದಿ. ಶ್ಯನ್‌ವಿಕರಣ. ಅದು ಙಿತ್ತಾಗುವುದರಿಂದ ಗುಣವಿಲ್ಲ. ಉದಾ :— **ಏಮ ನಿಮ್ನಂ ನ ರೀಯತೇ** ' (ಋ. ಸಂ. ೧-೨-೨೮-೨) 'ರೀಯತೇ, ರೇಜತಿ ' ಎಂದು ಗತ್ಯರ್ಥದಲ್ಲಿ ಪಾಠಮಾಡಿರುವುದರಿಂದ ಇಲ್ಲಿ ಗತ್ಯರ್ಥ ಹೇಳಬೇಕೆಂದು ಸ್ಕಂದಸ್ವಾಮಿಯ ಭಾಷ್ಯ.

(೬೦) **ರೇಜತಿ** || ನಿರುಕ್ತಪಠಿತವಾದ ಧಾತು. ಉದಾ :— **'ಹವ್ಯೋ ನಯ ಇಷವಾನ್ ಮನ್ಮ ರೇಜತಿ'** (ಋ. ಸಂ. ೨-೧-೧೭-೧) ಹೋಗುತ್ತದೆ ಎಂದರ್ಥ.

(೬೧) **ದಧ್ಯತಿ** || ದಧ-ಪಾಲನೇ. ಸ್ವಾದಿ. ವ್ಯತ್ಯಯದಿಂದ ಶ್ಯನ್‌ವಿಕರಣ ಬರುತ್ತದೆ. ಉದಾಹರಣೆ— **'ಪಶ್ವಾದಘಾ ಯೋ ಅಘಸ್ಯ ಧಾತಾ'** (ಋ. ಸಂ. ೨-೮-೪-೫)

(೬೨) **ದಭ್ನೋತಿ** || 'ದನ್ಭು-ದಂಭೇ' ಸ್ವಾದಿ. ಶ್ನುವಿಕರಣ· ಲಟ್.

(೬೩) **ಯುಧ್ಯತಿ** || 'ಯುಧ-ಸಂಪ್ರಹಾರೇ' ದಿವಾದೀ. ಆತ್ಮನೇಪದೀ. ವ್ಯತ್ಯಯದಿಂದ ಇಲ್ಲಿ ಪರಸ್ಮೈಪದೀ

(೬೪) **ಧನ್ವತೀ** || ರಿವಿ, ರವಿ, ಧವಿ ಗತ್ಯರ್ಥಾಃ. (ಭ್ವಾ. ಪ.) ಇದಿತ್ತಾದುದರಿಂದ ನುಮಾಗಮ. ಉದಾ:— **'ಪರಿ ಸೋಮ ಪ್ರ ಧನ್ವಾ ಸ್ವಸ್ತಯೇ'** (ಋ. ಸಂ. ೭-೨-೩೩-೫) **'ನ ಯಸ್ಯ ದ್ಯಾವಾಪೃಥಿವೀ ನ ಧನ್ವ'** (ಋ. ಸಂ. ೮-೪-೧೫-೧)

(೬೫) **ಅರುಷತಿ** || ಇದು ಕೇವಲ ನಿರುಕ್ತಪಠಿತವಾದ ಧಾತು. ಉದಾ :— **'ವಿ ಧೂಮ ಮಗ್ನೇ ಅರುಷಂ ಮಿಯೇಧ್ಯ'** (ಋ. ಸಂ. ೧-೩-೯-೪) **'ಸ್ವಸಾರಃ ಶ್ಯಾವೀ ಮರುಷೀ ಮಜುಷನ್'** (ಋ. ಸಂ. ೧-೫-೧೫-೧) **'ಅರುಷ್ಯತಿರ್ಗತಿಕರ್ಮಾ'** ಎಂದು ಭಾಷ್ಯದಲ್ಲಿ ಹೇಳಿದೆ.

(೬೬) **ಆರ್ಯನ್ತಿ** || ನಿರುಕ್ತಧಾತು. **'ಮಾಮಾರ್ಯನ್ತಿ ಕೃತೇನ ಕರ್ತ್ವೇನ ಚ'** (ಋ-ಸಂ-೮-೧-೫-೩) **'ತಮಿಚ್ಚ್ಯೌತ್ನೈರಾರ್ಯನ್ತಿ'** (ಋ-ಸಂ-೬-೧-೨೧-೬) ||

(೬೭) **ಸೀಯತೇ** || ಷಿಞ್-ಬಂಧನೇ. ಸ್ವಾದಿ, ಕ್ರ್ಯಾದಿ. ವ್ಯತ್ಯಯದಿಂದ ಶ್ಯನ್ ವಿಕರಣ ಬಂದಿದೆ. ಧಾತ್ವಾದಿಗೆ ಸತ್ವ. 'ಡೀಯತೇ' ಎಂದೂ ಪಾಠಾಂತರವಿದೆ. ಆಗ ಡೀಙ್-ವಿಹಾಯಸಾಗತೌ. ದಿವಾದಿ. ನಿಗಮವನ್ನು ಹುಡುಕಿ ನಿರ್ಣಯಿಸಬೇಕು. ||

(೬೮) ತಕತಿ ॥ ತಕ–ಹಸನೇ. ಧಾತು. (ಭ್ವಾ. ಪ.) ಉದಾ :—‘ **ಯಃ ಶೂರಸಾತಾಪರಿತಕ್ಮ್ಯೇ ಧನೇ** ’ (**ಋ–ಸಂ–೧–೨–೩೩–೧**)‘ **ಅನ್ಯೋನ್ಯಾನ್ಮತ್ಸರ್ಗ ಪ್ರತಕ್ತೇ** ’ ॥

(೬೯) **ದೀಯತಿ** ॥ ದೀಙ್–ಕ್ಷಯೇ. ದಿವಾದಿ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಉದಾ :— ‘ **ಶ್ಯೇನೋ ನ ದೀತನ್ನನ್ವೇತಿ ಪಾಥಃ** ’(**ಋ–ಸಂ–೫–೫–೫–೫**)

(೭೦) **ಈಷತಿ** ॥ ‘ ಈಷ–ಗತಿಹಿಂಸಾದಾನೇಷು ’ ಆತ್ಮನೇಪದೀ. ವ್ಯತ್ಯಯದಿಂದ ಇಲ್ಲಿ ಪರಸ್ಮೈಪದಿಯಾಗಿದೆ. “ **ಉತಾನೋಗಾ ಈಷತೇ ವೃಷ್ಣಾವತಃ** ”(**ಋ–ಸಂ–೪–೪–೨೭–೨**) ಅಧಿಕವಾಗಿ ಗಮನಕ್ರಿಯೆಯಲ್ಲಿಯೇ ಇದು ಪ್ರಯೋಗಿಸಲ್ಪಡುತ್ತದೆ ಎಂದು ಸ್ಕಂದಸ್ವಾಮೀ ॥

(೭೧) **ಫಣತಿ** ॥ ಫಣ–ಗತೌ. (ಭ್ವಾ–ಪ–) ‘ **ಯಥಾಮುಜ್ಮಾಂಸ್ಯ ನ್ವಾಪನೀ ಫಣತ್** ’ (**ಋ–ಸಂ. ೩–೭–೧೪–೪**)

(೭೨) **ಹನತಿ** ॥ ‘ ಹನ–ಹಿಂಸಾಗತ್ಯೋಃ’ ಅದಾದಿ. ‘ ಬಹುಲಂ ಛಂದಸಿ ’ ಸೂತ್ರದಿಂದ ಶಪಿಗೆ ಲುಕ್ ಬರುವುದಿಲ್ಲ. **ಲಟ್.** ‘ **ಸಂ ಯದ್ಧನಂತ ಮನ್ಯುಭಿರ್ಜನಾಸಃ** ’(**ಋ–ಸಂ–೫–೪–೨೬–೨**) ॥

(**೭೩**) **ಅರ್ದತಿ** ॥ ‘ ಅರ್ದ–ಗತೌ. ಯಾಚನೇ ಚ ’ ॥

(೭೪) **ಮರ್ದತಿ** ॥ ಮೃದ–ಮರ್ದನೇ. ಧಾತು. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ.

(**೭೫**) **ಸಸ್ರೃತೇ** ॥ ‘ಋ–ಸೃ–ಗತೌ.’ ಜಹೋತ್ಯಾದಿ. ಪರಸ್ಮೈಪದೀ. ವ್ಯತ್ಯಯದಿಂದ ಇಲ್ಲಿ ಆತ್ಮನೇಪದಿಯಾಗುತ್ತದೆ. ಶ್ಲು ವಿಕರಣ ನಿಮಿತ್ತವಾಗಿ ದ್ವಿತ್ವಾದಿ. ಪೃಷೋದರಾದಿಪಠಿತವಾದುದರಿಂದ ಅಭ್ಯಾಸಕ್ಕೆ ರುಗಾಗಮ, ಉದಾ:— “**ಪ್ರ ಸಸ್ರಾತೇ ದೀರ್ಘಮಾಯುಃ ಪ್ರಯಕ್ಷೇ**” (**ಋ. ಸಂ. ೩–೧–೧–೧**) ‘**ಜಾತೇನ ಜಾತ ಮತಿ ಸ ಪ್ರಸ್ರೃತೇ**’ (**ಋ. ಸಂ. ೨–೭–೪–೧**) ॥

(**೭೬**) **ನಸತೇ** ॥ ನಸ–ಕೌಟಿಲ್ಯೇ. (ಭ್ವಾ–ಆ) ‘**ಅಕ್ಷೀಭ್ಯಾಂ ತೇ ನಾಸಿಕಾಭ್ಯಾಮ್**’ (**ಋ. ಸಂ. ೮–೮–೨೧–೧**) ॥

(**೭೭**) **ಹರ್ಯತಿ** ॥ ಹರ್ಯ–ಗತಿ ಕಾಂತ್ಯೋಃ. (ಭ್ವಾ–ಪ) ॥

(೭೮) **ಇಯರ್ತಿ** ॥ ಋ, ಸೃ–ಗತೌ. ಜುಹೋತ್ಯಾದಿ. ಶ್ಲು ವಿಕರಣ ನಿಮಿತ್ತವಾಗಿ ದ್ವಿತ್ವ. ‘ಅರ್ತಿಪಿಪರ್ತ್ಯೋಶ್ಚ’ (ಪಾ. ಸೂ. ೭–೪–೭೭) ಸೂತ್ರದಿಂದ ಅಭ್ಯಾಸಕ್ಕೆ ಇತ್ವ, ಧಾತು ಋಕಾರಕ್ಕೆ ಗುಣ. ‘ಕೃಷ್ಟೀ ರಿಯರ್ತ್ಯೋಜಸಾ” (**ಋ. ಸಂ. ೧–೧–೧೪–೩**) ॥

(೭೯) **ಈರ್ತೇ** ॥ ‘ಈರ–ಗತೌ ಕಂಪನೇಚ’ ಅದಾದಿ. ಆತ್ಮನೇಪದೀ. ಶಪಿಗೆ ಲುಕ್. “**ಮತ್ಸರಾಸಃ ಪ್ರಸುಪಃ ಸಾಕಮೀರತೇ**” (**ಋ. ಸಂ. ೭–೨–೨೨–೧**) ॥

(೮೦) **ಈಙ್ಖತೇ** ॥ ಈಖಿ–ಗತೌ. ಭ್ವಾದಿ. ಆತ್ಮನೇಪದೀ. ಇದಿತ್ತಾದುದರಿಂದ ನುಮ್. ಅದಕ್ಕೆ ಅನುಸ್ವಾರ, ಪರಸವರ್ಣ. ‘**ಯ ಈಙ್ಖಯಂತಿ ಪರ್ವತಾನ್**’ (**ಋ. ಸಂ. ೧–೧–೩೭–೨**) ॥

(೮೧) **ಷ್ವಯತಿ** (೮೨) **ಶ್ವಾತ್ರತಿ** ॥ ಇವೆರಡೂ ಗತ್ಯರ್ಥದಲ್ಲಿ ಕೇವಲ ನಿರುಕ್ತಪಠಿತವಾದ ಧಾತುಗಳು.

(೮೩) **ಗನ್ತಿ** ॥ ಗಮ್ಲೃ-ಗತೌ. (ಭ್ವಾ-ಪ) ವ್ಯತ್ಯಯದಿಂದ ಶಪಿಗೆ ಲುಕ್. ಬಹುವಚನದಲ್ಲಿ ಝಿಗೆ ಅನ್ತಾದೇಶ. ಉದಾಹರಣೆ—**'ಅಙ್ಗಿರೋಭಿ ರಾಗಹಿ ಯಜ್ಞಿಯೇಭಿಃ'** (ಋ. ಸಂ. ೭-೬-೧೪-೫)

(೮೪) **ಆಗನೀಗನ್ತಿ** ॥ ಪೂರ್ವೋಕ್ತವಾದ ಧಾತುವಿಗೆ ಆಙ್‌ಪೂರ್ವದಲ್ಲಿರುವಾಗ 'ದಾರ್ಧರ್ತಿದರ್ಧರ್ತಿ–' (ಪಾ–ಸೂ-೭-೪-೬೫) ಸೂತ್ರದಿಂದ ಲಟನಲ್ಲಿ ಅಭ್ಯಾಸಕ್ಕೆ ಚುತ್ವಾಭಾವ, ನೀಗಾಗಮ ಬಂದು ನಿಪಾತಿತವಾಗಿದೆ. ಯಙ್‌ಲುಗಂತದಮೇಲೂ ನಿಪಾತಿತವಾಗುತ್ತದೆ. ಉದಾ:—**'ವಕ್ಷ್ಯನ್ತೀ ವೇದಾ ಗನೀಗನ್ತಿ ಕರ್ಣಮ್'** (ಋ. ಸಂ. ೫-೧-೧೯-೩) ॥

(೮೫) **ಜಙ್ಘನ್ತಿ** ॥ ಗಮ್‌ಧಾತುವಿಗೆ ಯಙ್‌ಲುಕ್‌ಬಂದಾಗ ದ್ವಿತ್ವ. 'ನುಗತೋನುನಾಸಿಕಾನ್ತಸ್ಯ' (ಪಾ-ಸೂ-೭-೪-೮೫) ಅಭ್ಯಾಸಕ್ಕೆ ನುಕ್, ಲಟ್. ಉದಾ:—**'ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್'** (ಋ. ಸಂ. ೯-೪-೨೪-೪) ಇಲ್ಲಿ ಜಗಮ್ಯಾತ್ ಎಂಬುದು ಜಙ್ಘನ್ತಿಯ ರೂಪವೆಂದು ಸ್ಕಂದಸ್ವಾಮಿ ಭಾಷ್ಯ ॥

(೮೬) **ಜಿನ್ವನ್ತಿ** ॥ 'ಇವಿ, ಧಿವಿ, ಜಿವಿ—ಪ್ರೀಣನಾರ್ಥಃ' (ಭ್ವಾ-ಪ-). ಇದಿತ್ತಾದುದರಿಂದ ನುಮಾಗಮ. ॥

(೮೭) **ಜಸತಿ** ॥ 'ಜಸು–ಮೋಕ್ಷಣೇ'. ದಿವಾದಿ. ಪರಸ್ಮೈಪದೀ. ವ್ಯತ್ಯಯದಿಂದ ಶ್ಯನ್ನಿಗೆ ಬದಲಾಗಿ ಶಪ್‌ವಿಕರಣ॥

(೮೮) **ಗಮತಿ** ॥ ಗಮ್ಲೃ–ಗತೌ. (ಭ್ವಾ–ಪ) ಲೇಟ್. 'ಲೇಟೋ ಡಾಟೌ' (ಪಾ. ಸೂ. ೩–೪–೮೪) ಸೂತ್ರದಿಂದ ತಿಪಿಗೆ ಅಡಾಗಮ. ಬಹುಲಗ್ರಹಣದಿಂದ 'ಸಿಬ್ಬಹುಲಂ ಲೇಟಿ' ಸೂತ್ರದಿಂದ ಸಿಪ್ ಬರುವುದಿಲ್ಲ. 'ಸರ್ವೇ ವಿಧಯಃ ಛಂದಸಿ ವಿಕಲ್ಪ್ಯನ್ತೇ' ಎಂದುದರಿಂದ 'ಇಷುಗಮಿ—' ಸೂತ್ರದಿಂದ ಛಾದೇಶ ಬರುವುದಿಲ್ಲ. ಉದಾ–**ತ ಆ ಗಮನ್ತು ತ ಇಹ ಶ್ರುವನ್ತು'** (ಋ. ಸಂ. ೪–೮–೫–೧)

(೮೯) **ಧ್ರತಿ** ॥ (೯೦) **ಧ್ರಾತಿ** ॥ (೯೧) **ಧ್ರಯತಿ** ॥ ಈ ಮೂರೂ ನಿರುಕ್ತದಲ್ಲಿ ಮಾತ್ರ ಪಠಿತವಾದ ಧಾತುಗಳು.

(೯೨) **ವಹತೇ**॥ 'ವಹ–ಪ್ರಾಪಣೇ'. (ಭ್ವಾ-ಪ-) ಸ್ವರಿತೇತ್ತಾದುದರಿಂದ ಉಭಯಪದೀ. ಉದಾ:—**'ವೈಶ್ವಾನರಂ ಮಾತರಿಶ್ವಾ ಪರಾವತಃ'** (ಋ ಸಂ. ೪–೫–೧೦–೪) ಇಲ್ಲಿ ಪರಾ ಉಪಸರ್ಗಪೂರ್ವಕವಾದ ಗತ್ಯರ್ಥಕ ವಹಧಾತುವಿನಿಂದ ಪರಾವಚ್ಛಬ್ದವಾಗಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ ॥

(೯೩) **ರಥರ್ಯತಿ** ॥ ಇದು ನೈರುಕ್ತಪಠಿತವಾದ ಧಾತು. ರಂಹ ಧಾತುವಿನಿಂದ ರಥ ಶಬ್ದವಾಗಿದೆ. ರಥವೆಂದರೆ ಗಮನ. 'ರಥಮಾತ್ಮನಃ ಇಚ್ಛತಿ' ಗಮನವನ್ನು ಬಯಸುತ್ತಾನೆ ಎಂದು ಅರ್ಥ ವಿವಕ್ಷಾ ಮಾಡಿದಾಗ ಕ್ಯಚ್‌ಪ್ರತ್ಯಯ. ರಥೀಯತಿ ಎಂದಾಗಬೇಕು. ಆದರೆ ಪೃಷೋದರಾದಿಪಠಿತವಾದುದರಿಂದ ರೇಫ ಹೆಚ್ಚಾಗಿ ಬಂದು ರಥರ್ಯತಿ ಎಂದಾಗುತ್ತದೆ. ಉದಾಹರಣೆ—**'ವಿಷ ದೇವೋ ರಥರ್ಯತಿ'** (ಋ. ಸಂ. ೬–೭–೨೦–೫)

(೯೪) ಜೇಹತೇ ‖ 'ಜೇಹ, ಜೇಹ, ವಾಹ-ಪ್ರಯತ್ನೇ' ಆತ್ಮನೇಪದೀ. ಲಟ್. ಉದಾಹರಣೆ—"ಯೋ ತಾತೃ ಷುರ್ದೇವತ್ರಾ ಜೇಹಮಾನಾ" (ಋ. ಸಂ. ೭-೬-೧೮-೪) ಓ ಹಾಜ್‌ಗತೌ. ಧಾತುವಿನಿಂದ ಈ ರೂಪವಾಗಿದೆಯೆಂದು ಸ್ಕಂದಸ್ವಾಮಿಭಾಷ್ಯ. ‖

(೯೫) ಷ್ವಃಕತಿ ‖ (೯೬) ಕ್ಷುಮ್ಪತಿ ‖ (೯೭) ಪ್ಸಾತಿ ‖ (೯೮) ವಾತಿ ‖ (೯೯) ಯಾತಿ ‖ ಎರಡು ಸೌತ್ರಧಾತುಗಳು. 'ಪ್ಸಾ-ಭಕ್ಷಣೇ.' ಅದಾದಿ. 'ವಾ-ಗತಿಗಂಧನಯೋಃ' ಯಾ ಪ್ರಾಪಣೆ.

(೧೦೦) ಇಷತಿ ‖ ಇಷ-ಗತೌ. ದಿವಾದಿ. ಪರಸ್ಮೈಪದೀ. ವ್ಯತ್ಯಯದಿಂದ ಶ್ಯನ್ನಿಗೆ ಶವಿಕರಣ ಬಂದಿದೆ. ಉದಾಹರಣೆ—"ತತ್ರಾಸ್ಮಭ್ಯಮಿಷವಃ ಶರ್ಮ ಯಂಸನ್" (ಋ. ಸಂ. ೫-೧-೨೧-೧) ಇಷು ಶಬ್ದ ಗತ್ಯರ್ಥಕ ಇಷು ಧಾತುವಿನಿಂದ ಆಗಿದೆಯೆಂದು ನಿರುಕ್ತ. (೯-೧೮)

(೧೦೧) ದ್ರಾತಿ ‖ ದ್ರಾ-ಕುತ್ಸಾಯಾಂ ಗತೌ. ಅದಾದಿ. "ವಸೂ ಯುವೋಽಮತಯೋ ದಸ್ಮದದ್ರುಃ" (ಋ. ಸಂ. ೧-೫-೩-೧) ‖

(೧೦೨) ದ್ರುಲತಿ ‖ ಇದು ನಿರುಕ್ತಪಠಿತ ಧಾತು.

(೧೦೩) ಏಜತಿ ‖ ಏಜೃ-ಕಂಪನೇ (ಭ್ವಾ-ಪ) '' ಯೂಥೇನ ವೃಷ್ಣಿರಜತಿ "(ಋ. ಸಂ. ೧-೧-೧೯-೨) ' ಯಥಾ ಸಮುದ್ರ ಏಜತಿ " (ಋ. ಸಂ- ೪-೪-೨೦-೪) ‖

(೧೦೪) ಜಮತಿ ‖ ಜಮು-ಅದನೇ (ಭ್ವಾ-ಪ) ' ನ ಜಾಮಯೇ ತಾನ್ವೋರಿಕ್ಥ ಮಾರೈಕ್ ' (ಋ. ಸಂ. ೩-೨-೫-೨) ಗತ್ಯರ್ಥಕ ಜಮುಧಾತುವಿನಿಂದ ಜಾಮಿಪದವಾಗಿದೆಯೆಂದು ಸ್ಕಂದಸ್ವಾಮಿ ಭಾಷ್ಯ.‖

(೧೦೫) ಜವತಿ ‖ ಜು-ಗತೌ. ಧಾತು (ಕ್ಷೀರಸ್ವಾಮಿಯ ಮತ) ಉದಾ 'ನ ಪಾತವ ಇಂದ್ರ ಜುಜುರ್ತ್ಸರ್ಜ ನಃ ‖ ವಿಪಾಟ್ ಶತುದ್ರೀ ಪಯಸಾ ಜವೇತೇ' (ಋ ಸಂ. ೩-೨-೧೨-೧)

(೧೦೬) ವಞ್ಚತಿ ‖ ವಞ್ಚು-ಗತೌ. (ಭ್ವಾ-ಪ) 'ನಮೋ ವಂಚತೇ ಪರಿವಂಚತೇ ( ಯು-ವಾ-ಸಂ-೧೬-೨೧)

(೧೦೭) ಅನಿತಿ ‖ ''ಶ್ವಸ-ಪ್ರಾಣನೇ ಅನಚ" ಅದಾದಿ ಪರಸ್ಮೈಪದೀ. ಉದಾ-'ಅತ್ರ ಮಾತಯಾರ್ತ್ವನಿತಿ' ಅನಿತಿರ್ಗತಿಕರ್ಮಾ ಎಂದು ಮಾಧವಭಾಷ್ಯ.

(೧೦೮) ಪವತೇ ‖ ಪೂಙ್-ಪವನೇ ಗುಣ ಅವಾದೇಶ. ಉದಾ-'ನೇಂದ್ರಾದೃತೇ ಪವತೇ ಧಾಮ ಕಿಂಚನ (ಋ.ಸಂ. ೭.೨-೨೨-೧) ಸೃಕಂ ಸಂಶಾಪ ಪವಿಮಿಂದ್ರ ತಿಗ್ಮಮ್'

(೧೦೯) ಹನ್ತಿ ‖ ಹನ ಹಿಂಸಾಗತ್ಯೋಃ. ಅದಾದಿ (ಪ) ನಿ ಯೇನ ಸೃಷ್ಟಿಹತ್ಯಯಾ (ಋಂ. ಸಂ. ೧-೧-೧೫-೨) 'ಆಸ್ಯ ವಜ್ರ ಮಧಿಸಾನೌ ಜಘಾನ' (ಋ- ಸಂ ೧-೨-೩೭-೨)

(೧೧೦) ಸೇಧತಿ ‖ 'ಷಿಧು-ಗತ್ಯಾಮ್ ' ಲಘೂಪಧಗುಣ ಉದಾ-' ಸೇಧತಂ ದ್ವೇಷೋ ಭವತಂ ಸಚಾ ಭುವಾ ' (ಋ. ಸಂ- ೧-೩-೫.೫)

(೧೧೧) **ಜಗನ್** ॥ ಗಮ್ಲೃ–ಗತೌ–(ಭ್ವಾ–ಪ) ಲುಙ್‌ನಲ್ಲಿ ತಿಪ್ ಬಂದಾಗ ಚ್ಲಿಗೆ ' ಮಂತ್ರೇ ಘಸ–' (ಪಾ-ಸೂ ೨–೪-೮೦) ಸೂತ್ರದಿಂದ ಲುಕ್. 'ಇತಶ್ಚ' ತಿಪಿನ ಇಕಾರಕ್ಕೆ ಲೋಪ. ಸಂಯೋಗಾಂತಲೋಪ. ' ಮೋನೋ ಧಾತೋಃ (ಪಾ–ಸೂ–೮-೨–೬೪)ಸೂತ್ರದಿಂದ ಧಾತುವಿನ ಮಕಾರಕ್ಕೆ ನಕಾರಾದೇಶ. ಉದಾ–**ಯದಾಮಾಗನ್ ಪ್ರಥಮಜಾ ಋತಸ್ಯ** (ಋ- **ಸಂ. ೨–೩.೨೧-೨**)

(೧೧೨) **ಅಜಗನ್** ॥ ಗಮ್‌ಧಾತುವಿಗೆ ಲುಙ್ ಬಂದಾಗ 'ಬಹುಲಂ ಛಂದಸಿ' ಸೂತ್ರದಿಂದ ಶಪಿಗೆ ಶ್ಲುವಿಕರಣ. ದ್ವಿತ್ವಾದಿ. ಹಿಂದಿನಂತೆ ಮಕಾರಕ್ಕೆ ನಕಾರಾದೇಶ. **'ಯಸ್ಮಾತ್ತ್ವಾರಜಗನ್ನಪಃ'** (ಋ. ಸಂ. ೩–೯–೫–೨)

(೧೧೩) **ಜಿಗಾತಿ** ॥ ಗಾ–ಸ್ತುತೌ. (ಅದಾ–ಪ) ವ್ಯತ್ಯಯದಿಂದ ಶ್ಲುವಿಕರಣ. ದ್ವಿತ್ವಾದಿ. 'ಅರ್ತಿಪಿಪರ್ತ್ಯೋಶ್ಚ', 'ಬಹುಲಂ ಛಂದಸಿ' ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಉದಾಹರಣೆ—**'ಧೇನಾ ಜಿಗಾತಿ ದಾಶುಷೇ'** (**ಋ. ಸಂ. ೧–೧–೩–೩**) 'ಜಗತಿ ಎಂದು ಪಾಠಾಂತರವಿದೆಯೆಂದು ಸ್ಕಂದಸ್ವಾಮಿಭಾಷ್ಯ. ॥**

(೧೧೪) **ಪತತಿ** ॥ ಪತ್ಲೃ–ಗತೌ, (ಭ್ವಾ-ಪ) **'ಗೋಭಿಃ ಸನ್ನದ್ಧಾ ಪತತಿ ಪ್ರಸೂತಾ'** (ಋ-ಸಂ-೫-೧-೨೧-೧) ॥

(೧೧೫) **ಇನ್ವತಿ** ॥ 'ಇವಿ–ಗತೌ.' (ಭ್ವಾ-ಪ) ಇದಿತ್ತಾದುದರಿಂದ ನುಮಾಗಮ. ಉದಾಹರಣೆ—**'ದೇವೀ ದ್ವಾರೋ ಬೃಹತೀರ್ವಿಶ್ವಮಿನ್ವಾ' (ಯ. ವಾ. ಸಂ. ೨೯–೩೦)** ॥

(೧೧೬) **ದ್ರಮತಿ** ॥ ದ್ರಮ.ಗತೌ. (ಭ್ವಾ–ಪ). **"ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ'** (ಋ. **ಸಂ. ೮-೩-೨೩.೪**) ದ್ರಮಧಾತುವಿನಿಂದ ಚಂದ್ರಮಾ ಪದವಾಗಿದೆಯೆಂದು ನಿರುಕ್ತ ಭಾಷ್ಯ. (೧೧.೫)

(೧೧೭) **ದ್ರವತಿ** ॥ ಟು, ದ್ರು.ಗತೌ. ಗುಣ, ಅವಾದೇಶ. **'ಯತ್ರಾ ನರಃ ಸಂ ಚ ವಿಚ ದ್ರವನ್ತಿ'** (**ಋ. ಸಂ. ೫**-೧-೨೧-೧) ॥

(೧೧೮) **ವೇತಿ** ॥ ವೀ–ಗತಿಪ್ರಜನನಕಾಂತ್ಯಶನ ಖಾದನೇಷು. ಅದಾದಿ. ಗುಣ. **"ಅಪಾಮೀವಾಂ ಬಾಧತೇ ವೇತಿ ಸೂರ್ಯಮ್" ॥ 'ಪದಂ ನ ವೇತ್ಯೋದತೀ" (ಋ. ಸಂ. ೧–೪–೪–೧)** ॥

(೧೧೯) **ಹನಾತ್ತಾತ್** ॥ ಹನಧಾತುವಿಗೆ ಲೋಟ್. ತಿಪಿಗೆ ತಾತಙಾದೇಶ. ' ಹಯನ್ತಾತ್ ' ಎಂದು ಕೆಲವರು ಪಾಠಮಾಡುತ್ತಾರೆ. ಆಗ ಹಯ–ಗತೌ ಧಾತುವಿಗೆ ತಾತಙ್ ಬಂದಾಗ ರೂಪವೆಂದು ತಿಳಿಯಬೇಕು.

(೧೨೦) **ಏತಿ** ॥ ಇಣ್–ಗತೌ. ಅದಾದಿ. (ಪ) ಶಪಿಗೆ ಲುಕ್. ಗುಣ. **' ವಿಚಾಕಶಚ್ಚಂದ್ರಮಾ ನಕ್ಷತ್ರಮೇತಿ '** (ಋ. ಸಂ. ೧–೨–೧೪-೫)

(೧೨೧) **ಜಗಾಯಾತ್** ॥ ಗಾ–ಸ್ತುತೌ–ಜುಹೋತ್ಯಾದಿ. (ಪ) ಶ್ಲು ನಿಮಿತ್ತವಾಗಿ ದ್ವಿತ್ವಾದಿ. ಲಿಙ್. ' ಛಂದಸ್ಯುಭಯಥಾ ' (ಪಾ. ಸೂ. ೩–೪–೧೧೭) ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಬರುವುದರಿಂದ ' **ಈಹಲ್ಯಘೋಃ** ' (ಪಾ. ಸೂ. ೬–೪–೧೧೩) ಸೂತ್ರದಿಂದ ಈತ್ವ ಬರುವುದಿಲ್ಲ. ಉದಾ :—**' ಸ್ವಾಶಿತಃ ಪುನರಸ್ತಂ ಜಗಾಯಾತ್ '** (**ಋ. ಸಂ. ೭-೭-೨೦-೧**) ॥

(೧೨೨) **ಅಯಥುಃ**॥ ಧಾತುಮಧ್ಯದಲ್ಲಿ ನಾಮಪದವನ್ನೂ ಅಲ್ಲಲ್ಲಿ ಹೇಳಿದೆ. ಅಯ ಗತೌ. ಬಹುಲಗ್ರಹಣದಿಂದ '**ಟ್ವಿತೋಽಥುಚ್**' (ಪಾ. ಸೂ. ೩-೩-೮೯) ಸೂತ್ರದಿಂದ ಅಥುಚ್‌ಪ್ರತ್ಯಯ.

ಹೀಗೆ ನೂರಿಪ್ಪತ್ತೆರಡು ಗಮನ ಕ್ರಿಯೆಯನ್ನು ಹೇಳುವ ಧಾತುಗಳು.

---

## ॥ ಅಥ ಕ್ಷಿಪ್ರನಾಮಾನಿ । ಷಡ್ವಿಂಶತಿಃ ಕ್ಷಿಪ್ರನಾಮಾನಿ ॥

ಕ್ಷಿಪ್ರ ಎಂದರೆ ಸಮೀಪ ಎಂಬರ್ಥವನ್ನು ಸೂಚಿಸುವ ನಾಮಗಳು ಇಪ್ಪತ್ತಾರು ಇರುವವು ಅವುಗಳನ್ನು ಕೆಳಗೆ ವಿವರಿಸಲಾಗಿದೆ—

(೧) ನು (೨) ಮಕ್ಷು (೩) ದ್ರವತ್ (೪) ಓಷಮ್ (೫) ಜೀರಾಃ
(೬) ಜೂರ್ಣಿಃ (೭) ಶೂರ್ತ್ರಾಃ (೮) ಶೂಘನಾಸಃ (೯) ಶೀಭಮ್
(೧೦) ತೃಷು (೧೧) ತೂಯಮ್ (೧೨) ತೂರ್ಣಿಃ (೧೩) ಅಜಿರಮ್
(೧೪) ಭುರಣ್ಯುಃ (೧೫) ಶು (೧೬) ಆಶು (೧೭) ಪ್ರಾಶುಃ (೧೮) ತೂತುಜಿಃ
(೧೯) ತೂತುಜಾನಃ (೨೦) ತೂಜ್ಯಮಾನಾಸಃ (೨೧) ಅಜ್ರಾಃ (೨೨) ಸಾಚಿವಿತ್
(೨೩) ದ್ಯುಗತ್ (೨೪) ತಾಜತ್ (೨೫) ತರಣಿಃ (೨೬) ವಾತರಂಹಾ ॥

### ಇತಿ ಷಡ್ವಿಂಶತಿಃ ಕ್ಷಿಪ್ರನಾಮಾನಿ ॥ ೧೫ ॥

'ಕ್ಷಿಪ್ರನಾಮಾನ್ಯುತ್ತರಾಣಿ ಷಡ್ವಿಂಶತಿಃ (ನಿರು-೩-೯) ಇಲ್ಲಿ ಸಂದಸ್ವಾಮಿಯ ಭಾಷ್ಯ. ಇವು ವೇಗದ ಹೆಸರು. ಇವು ಗುಣವಾಚಕವಾದುದಲ್ಲದೆ ಗುಣವುಳ್ಳವುಗಳನ್ನೂ ಹೇಳುತ್ತವೆ. ಭುರಣ್ಯುಪದವು ಕ್ಷೈಪ್ರ್ಯವನ್ನು ಹೇಳಿದರೂ ಕ್ಷೈಪ್ರ್ಯವುಳ್ಳ ಪಕ್ಷಿ ಮುಂತಾದವುಗಳನ್ನೂ ಹೇಳುತ್ತದೆ. ಗುಣವೂ ಕೂಡಾ ಚಿರಕಾಲವಿಶಿಷ್ಟ ಅಥವಾ ಸ್ವಲ್ಪಕಾವಿಶಿಷ್ಟವಾದ ಕ್ರಿಯೆ ಆಗುತ್ತದೆ. ಅಲ್ಪಕ್ರಿಯಾವೈಶಿಷ್ಟ್ಯಮೂಲಕ ಕರ್ತೃವಿನಲ್ಲಿಯೂ ಅಲ್ಪಕಾಲವೈಶಿಷ್ಟ್ಯ ಬರುತ್ತದೆ. ಮಕ್ಷು ಮುಂತಾದುವುಗಳು ಕ್ರಿಯಾವಿಶೇಷಣವಾದುದರಿಂದ ಕ್ರಿಯಾರೂಪಗಳು. ಗುಣವು ವ್ಯವಚ್ಛೇದಕವಾದರೂ ಇಲ್ಲಿ ಕರ್ತೃವಿಶೇಷವಾದ ಕ್ರಿಯಾವ್ಯವಚ್ಛೇದಕಗಳಾಗಿರುತ್ತವೆ.

(೧) **ನು** ॥ ಇದು ನಿಪಾತ ಉದಾ—'**ಇಂದ್ರಸ್ಯ ನು ವೀರ್ಯಾಣಿ ಪ್ರವೋಚಮ್**' (ಋ.ಸಂ. ೧-೨-೩೬-೧)॥

(೨) **ಮಕ್ಷು** ॥ 'ಟುಮಸ್ಜೋ(-ಶುದ್ಧೌ' (ತು ಪ) 'ಮಸ್ಜೇರ್ಮೋ ಮುಕ್' ಎಂಬ ಭೋಜಸೂತ್ರದಿಂದ ಮುಕ್ ಪ್ರತ್ಯಯ 'ಸ್ಕೋಃಸಂಯೋ'-ಸೂತ್ರದಿಂದ ಸಂಯೋಗಾದಿಯಾದ ಸಕಾರಕ್ಕೆಲೋಪ. ಜಕಾರಕ್ಕೆ ಷತ್ವ. ಕತ್ವ. ಇಲ್ಲಿ ಅಂತರ್ಭಾವಿಣ್ಯರ್ಥಹೇಳಬೇಕು ಕ್ರಿಯೆಯಿಂದ ಅಥವಾ ಪಾಪದಿಂದ ಬಹುಕಾಲ ಮುಳುಗಿಸುತ್ತದೆ. ಎಂದರ್ಥ ಉದಾ-'**ಮಕ್ಷು ಕೃಣು ಹಿ ಗೋಜಿತೌ ನಃ** ॥

(೩) **ದ್ರವತ್** ॥ ದ್ರು-ಗತೌ. (ಭ್ವಾ-ಪ-) 'ಸಂಶ್ಚತ್‌ತೃಪ್ಪದ್‌ವೇಹತ್—' (ಉ-೨-೭೯) ಸೂತ್ರದಿಂದ, ಬಹುಲ ಗ್ರಹಣದಿಂದ ಅತಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಗುಣ, ಅವಾದೇಶ. 'ದ್ರವತ್ಯಸೇನ' ಇದರಿಂದ ಬೇಗ ಹೋಗುವುದು. ಉದಾ:—**'ದ್ರವತ್ಪಾಣೀ ಶುಭಸ್ಪತೀ'** (ಋ. ಸಂ. ೧-೧-೩-೧) ॥

(೪) **ಓಷಮ್** ॥ ಇದೂ ನಿಪಾತ. **"ಓಷಮಿತ್ ಪೃಥೀವಮುಹನ್"** (ಋ. ಸಂ. ೮-೬-೨೭-೪) **"ಓಷಃ ಪಾತ್ರಂ ನ ಶೋಚಿಷಾ"** (ಋ. ಸಂ. ೨-೪-೧೮-೨). ಅಂತೋದಾತ್ತವಾದರೆ ನಿಪಾತವೂ ಆದ್ಯುದಾತ್ತ ವಾದರೆ ಆಖ್ಯಾನವಾಚಕವೂ ಆಗುವುದೆಂದು ಮಾಧವ ಭಾಷ್ಯ ॥

(೫) **ಜೀರಾಃ** ॥ ಗತ್ಯರ್ಥಕವಾದ ಜು ಧಾತುವಿಗೆ 'ಜೋರೀಚ' (ಉ-೨-೨೫) ಸೂತ್ರದಿಂದ ರಕ್‌ಪ್ರತ್ಯಯ, ಧಾತುವಿಗೆ ಈಕಾರಾಂತಾವೇಶ. ಜಸ್ ಬಂದಾಗ ಜೀರಾಃ ಎಂದಾಗುತ್ತದೆ. ಉದಾಹರಣೆ—**'ಜೀರಾ ಅಜಿರಾ ಶೋಚಿಷಃ'** (ಋ. ಸಂ. ೭-೨-೧೧-೫) **'ಜೀರಂ ದೂತಮಮರ್ತ್ಯಮ್'** (ಋ. ಸಂ. ೧-೩-೩-೩೦-೧೧)

(೬) **ಜೂರ್ಣಿಃ** ॥ ಕ್ರೋಧನಾಮದಲ್ಲಿ ಇದು ವ್ಯಾಖ್ಯಾತವಾಗಿದೆ (೧-೧೩-೯) ಉದಾ-ನಿಗಮ ಹುಡುಕಬೇಕು.

(೭) **ಶೂರ್ತಾಃ** ॥ "ತಾತವ್ರಾತಸುತ"-ಎಂಬ ಭೋಜಸೂತ್ರದಲ್ಲಿ ಆದಿಪದವಿರುವುದರಿಂದ ಅದರಿಂದ 'ಶೃಣಾತಿ. ಅಸ್ಮಾತ್' ಎಂಬರ್ಥದಲ್ಲಿ ಕ್ತಪ್ರತ್ಯಯಾಂತವಾಗಿ ನಿಪಾತಿತವಾಗುತ್ತದೆ. ಫಲಲಾಭವನ್ನು ಬೇಗ ನಾಶಮಾಡುವುದು. ಉದಾ- **ತ್ವಯಾ ಶೂರ್ತಾ ವಹಮಾನಾ ಅಪತ್ಯಮ್** (ಋ. ಸಂ.-೨-೪-೧೭-೧) ಶೂರ್ತಾಃ ಅಂದರೆ ತ್ವರೆಮಾಡುವವರು ಎಂದು ಭಟ್ಟಭಾಸ್ಕರಮಿಶ್ರರ ವ್ಯಾಖ್ಯಾನ. ॥

(೮) **ಶೂಘನಾಸಃ** ॥ ಸುಶಬ್ದ ಉಪಪದವಾಗಿರುವಾಗ ಹಿಂಸಾಗತ್ಯರ್ಥಕ ಹನ್‌ಧಾತುವಿಗೆ ಬಹುಲಗ್ರಹಣದಿಂದ ಣಿಲೋಪ, ಹಕಾರಕ್ಕೆ ಕುತ್ವ, ಸುವಿಗೆ ಶಕಾರದೀರ್ಘ ಬಂದು ನಿಪಾತಿತವಾಗುತ್ತದೆ. ಇದರಿಂದ ಕ್ರಿಯಾಫಲವು ಬೇಗ ಬರುತ್ತದೆ. ಜಸ್‌ಬಂದಾಗ "ಆಜ್ಜಸೇರಸುಕ್" ಸೂತ್ರದಿಂದ ಅದಕ್ಕೆ ಅಸುಕ್ ಆಗಮ. ಉದಾ-**ಸಿಂಧೋರಿವ ಪ್ರಾಧ್ವನೇ ಶೂಘನಾಸಃ** (**ಯ. ವಾ. ಸಂ** ೧೭-೯೫) ಶೂಘನಾಸಃ ಎಂದರೆ ಕ್ಷಿಪ್ರಗಮನವುಳ್ಳವರೆಂದು ಉವಟರ ವ್ಯಾಖ್ಯಾನ. ॥

(೯) **ಶೀಭಮ್** ॥ 'ಶೀಭ-ಕತ್ಥನೇ' (ಭ್ವಾ-ಆ) ಶ್ಲಾಘಿಸುವುದೆಂದರ್ಥ. ಘಞ್‌ಪ್ರತ್ಯಯ. ಇದರಿಂದ ವೇಗವುಳ್ಳವನು ಶ್ಲಾಘಿಸಲ್ಪಡುತ್ತಾನೆ. ಉದಾಹರಣೆ—**'ಪ್ರಯಾತ ಶೀಭನಾಶುಭಿಃ'** (ಋ. ಸಂ. ೧-೩-೧೪-೪) **'ಆವಕ್ಷಣಾಃ ಪೃಣಧ್ವಂ ಯಾತ ಶೀಭಮ್'** (ಋ. ಸಂ. ೩-೨-೧೪-೨) ॥

(೧೦) **ತೃಷು** ॥ 'ಞಿ ತ್ವರಾ-ಸಂಭ್ರಮೇ' (ಭ್ವಾ-ಆ) ಬಹುಲಗ್ರಹಣದಿಂದ 'ಮಸ್ಜೇರ್ಮೋ ಷುಕ್' ಸೂತ್ರವಿಹಿತ ವಾದ ಷುಕ್‌ಪ್ರತ್ಯಯ, ಧಾತುವಿಗೆ ತೃಆದೇಶ. ಫಲಲಾಭವನ್ನು 'ಇದರಿಂದ ದಾಟುತ್ತಾನೆ, ಫಲವನ್ನು ಹೊಂದಲು ಇದರಿಂದ ತ್ವರೆಗೊಳಿಸುತ್ತಾನೆ ಎಂದರ್ಥ. ಉದಾಹರಣೆ—**'ತೃಷ್ವವಿಷ್ಯನ್ನತಸೇಷು ತಿಷ್ಠತಿ'** (ಋ-ಸಂ-೧-೪-೨-೨) **'ತೃಷ್ವೀ ಮನುಪ್ರಸಿತಿಂ ದ್ರುಣಾನಃ'** (ಋ. ಸಂ. ೩-೪-೨೩-೧) ॥

(೧೧) **ತೂಯುವಮ್** ॥ ಇದು ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೯೩) ಇದರಿಂದ ವೇಗವುಳ್ಳವರು ಶ್ಲಾಘಿಸಲ್ಪಡುತ್ತಾರೆ, ಅಭಿವೃದ್ಧಿ ಹೊಂದುತ್ತಾರೆ. ಉದಾಹರಣೆ—**'ಆಪಿತ್ವೇ ನಃ ಪ್ರಪಿತ್ವೇ ತೂಯುವಮಾ ಗಹಿ'** (ಋ. ಸಂ. ೫-೭-೩೦-೩) ॥

(೧೨) **ತೂರ್ಣಿ** ॥ 'ಞಿತ್ವರಾ ಸಂಭ್ರಮೇ.' ಧಾತು. 'ವಹಿಶ್ರಿಶ್ರುಯುದ್ರು—' (ಉ-೪-೫೧) ಸೂತ್ರದಿಂದ ನಿಪ್ರತ್ಯಯ, ಸಂಪ್ರಸಾರಣ, ದೀರ್ಘ. ಇದರಿಂದ ಫಲವನ್ನು ಹೊಂದಲು ತ್ವರೆಪಡುತ್ತಾನೆ. ಉದಾಹರಣೆ—**'ಅಪೋ ಯತ್ತೂರ್ಣಿಶ್ಚರತಿ ಪ್ರಜಾನನ್'** (ಋ. ಸಂ. ೮-೪-೧೧-೧) **'ಸುತಮಾ ಗಂತ ತೂರ್ಣಯಃ'** (ಋ. ಸಂ. ೧-೧-೬-೨)

(೧೩) **ಅಜಿರಮ್** ॥ 'ಅಜ-ಗತಿಕ್ಷೇಪಣಯೋಃ' (ಭ್ವಾ-ಪ) 'ಅಜಿರ ಶಿಶಿರಶಿಥಿಲ—' (ಉ. ೧.೫೩) ಸೂತ್ರದಿಂದ ಕಿರಚ್‌ಪ್ರತ್ಯಯ, ಜಿಭಾವವೂ ನಿಪಾತಿತವಾಗುತ್ತದೆ. ಮೊದಲನೆಯ ಫಲೋತ್ಪತ್ತಿಯನ್ನು ಕೊಡುತ್ತದೆ. ಉದಾಹರಣೆ— **'ತ್ವಾ ಮೀಲತೇ ಅಜಿರಂ ದತ್ಯಾಯ'** (ಋ- ಸಂ. ೫-೨-೧೪-೨)

(೧೪) **ಭುರಣ್ಯುಃ** ॥ ಗತ್ಯರ್ಥದಲ್ಲಿ ಭುರಣ್ಯಧಾತು ಹೇಳಿದೆ. 'ಮೃಗಯ್ವಾದಯಶ್ಚ' (ಉ. ೧-೩೬) ಸೂತ್ರದಿಂದ ಕ್ಯುಪ್ರತ್ಯಯ. **'ಯೇನಾ ಪಾವಕ ಚಕ್ಷಸಾ'** (**ಋ. ಸಂ.** ೧-೪-೮-೧) ಎಂಬಲ್ಲಿ ಭುರಣ್ಯಧಾತುವು ಶೀಘ್ರಕರಣಾರ್ಥದಲ್ಲಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ. ಶೀಘ್ರವಿಶಿಷ್ಟಗಮನಾದಿಕ್ರಿಯಾವಶಿಷ್ಟಕರ್ತೃರೂಪ ಸತ್ವಾರ್ಥವನ್ನು ಹೇಳುತ್ತದೆ. ಉದಾಹರಣೆ—**'ಶ್ರೀಣಾನ್ನುಪಸ್ಥಾದ್ದಿವಂ ಭುರಣ್ಯುಃ'** (ಋ. ಸಂ. ೧-೫-೧೨-೧) ಗತಿಕ್ರಿಯಾವಾಚಿ ಭುರಣ್ಯಧಾತುವಿನ ರೂಪ 'ಭುರಣ್ಯುಃ' ಎಂದೂ ಇದು ಕ್ಷಿಪ್ರನಾಮವೆಂದೂ ಸ್ಕಂದಸ್ವಾಮಿಯ ಭಾಷ್ಯ.

(೧೫) **ಶುಃ** ॥ ಇದು ನಿಪಾತ. 'ಶು ಆಶುಗಾಮೀ' ಎಂದು ನಿರುಕ್ತ. (೬-೧) ಬೇಗ ಹೋಗುವವನೆಂದರ್ಥ ಉದಾ :—**'ಶ್ವಾನಂ ವಸ್ತೋ ಬೋಧಯಿತಾರಮಬ್ರವೀತ್'** (**ಋ. ಸಂ.** ೨-೩-೬-೩) ॥

(೧೬) **ಆಶುಃ** ॥ ಅಶು-ವ್ಯಾಪ್ತೌ ಧಾತು. 'ಕೃವಾಪಾಜಿಮಿ—' (ಉ.೧-೧) ಸೂತ್ರದಿಂದ ಉಣ್‌ಪ್ರತ್ಯಯ. ಣಿತ್ತಾದುದರಿಂದ ಉಪಧಾವೃದ್ಧಿ. ಇತರ ನರವೈಲಕ್ಷಣ್ಯದಿಂದ ಇದರಿಂದ ಹೊಂದಬೇಕಾದುದನ್ನು ಹೊಂದುತ್ತಾನೆ. ಆಶುಪದವು ಕ್ಷಿಪ್ರನಾಮ, ಕ್ಷಿಪ್ರಗಾಮಿಯೂ ಆಗುವುದೆಂದು ಸ್ಕಂದಸ್ವಾಮಿಯ ಭಾಷ್ಯ. ಶಬ್ದಸ್ವರೂಪದಿಂದ ಇದು ನಪುಂಸಕಲಿಂಗ. ಆಶು ನಿಪಾತವೂ ಆಗುತ್ತದೆ. 'ಆಶುಃ' ಎಂದು ದ್ರವ್ಯವಾಚಿಯೂ ಆಗುತ್ತದೆ. ಉದಾ :—**'ತ್ವಮಗ್ನೇದ್ಯುಭಿಸ್ತ್ವಮಾಶು-ಶುಕ್ಷಣಿಃ'** (**ಋ. ಸಂ.** ೨-೫-೧೭-೧)

(೧೭) **ಪ್ರಾಶುಃ** ॥ ಹಿಂದಿನ ಶಬ್ದವೇ ಇದು. ಇಲ್ಲಿ ಸತ್ವವಾಚಿಯಾಗಿ ಪ್ರಶಬ್ದ ಅಧಿಕವಾಗಿರುವುದರಿಂದ ಪ್ರಕಾರ್ಷಾರ್ಥ ಅಧಿಕವಾಗಿ ತೋರುತ್ತದೆಂದು **ಭಾಷ್ಯ.** 'ಹಸ್ತೋ ಹಂತೇಃ ಪ್ರಾಶುರ್ಹನನೇ' ಎಂಬ ನಿರುಕ್ತ (೧-೭) ಭಾಷ್ಯದಲ್ಲಿ ಸ್ಕಂದಸ್ವಾಮಿಯು ಪ್ರಾಶುಪದಕ್ಕೆ ಕ್ಷಿಪ್ರ ಎಂದರ್ಥವೆಂದು ಹೇಳಿರುತ್ತಾನೆ. ಉದಾಹರಣೆ-**'ಸುಪ್ರಾವ್ಯಾಃ ಪ್ರಾಶು-ಷಾಲೇಷ ವೀರಃ** ॥ (ಋ. ಸಂ. ೩-೬-೧೪-೧) ॥

(೧೮) **ತೂತುಜಿಃ** ॥ ತುಜ-ಹಿಂಸಾಯಾಮ್ ಧಾತು (ಭ್ವಾ-ಪ) 'ಛಂದಸಿ ಸದಾದಿಭ್ಯೋ ದರ್ಶನಾತ್' ಎಂಬ ವಚನದಿಂದ ಕಿನ್‌ಪ್ರತ್ಯಯ. ಇದಕ್ಕೆ ಲಿಟ್ವದ್ಭಾವಾತಿದೇಶಮಾಡಿರುವುದರಿಂದ ದ್ವಿತ್ವಾದಿ 'ತುಜಾದೀನಾಂ ದೀರ್ಘೋಽಭ್ಯಾಸಸ್ಯ

(ಪಾ. ಸೂ. ೬-೧-೨) ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ. ತೂರ್ಣಪದದಂತೆ ಅರ್ಥತಿಳಿಯಬೇಕು. ಉದಾ-'**ಆಯುಕ್ತ್ವಾತಾ-ಮಶ್ವಿನಾ ತೂತುಜಿಂ ರಥಮ್** ' (ಋ. ಸಂ. ೭-೮-೭-೧) ||

(೧೯) **ತೂತುಜಾನಃ** || ತುಜಧಾತುವಿಗೆ ಲಿಟ್‌ಬಂದಾಗ ಅದಕ್ಕೆ ಕಾನಜಾದೇಶ ದ್ವಿತ್ವಾದಿ ಹಿಂದಿನಂತೆ ದೀರ್ಘ. ಉದಾ-'**ಇಂದ್ರಾ ಯಾಹಿ ತೂತುಜಾನಃ** ' (ಋ. ಸಂ. ೧-೧-೫-೬) ||

(೨೦) **ತುಜ್ಯಮಾನಾಸಃ** || ಪೂರ್ವೋಕ್ತವಾದ ಧಾತುವಿಗೆ ಕರ್ಮಣಿಯಲ್ಲಿ ಲಟ್ ಬಂದಾಗ ಆದಕ್ಕೆ ಶಾನಜಾದೇಶ ಯಕ್ ಜಸಿಗೆ ಅಸುಗಾಗಮ ಉದಾ-'**ತುಜ್ಯಮಾನಾಸ ಆವಿಷುಃ** ' (ಋ. ಸಂ. ೧-೧-೨೧-೫) ||

(೨೧) **ಅಜ್ರಾಃ** || ಪೂರ್ವೋಕ್ತವಾದ ಅಜಧಾತುವಿಗೆ 'ಸ್ಫಾಯಿತಂಚಿವಂಚಿ ' -(ಉದಾ-೨-೧೨) ಸೂತ್ರದಿಂದ ರಕ್‌ಪ್ರತ್ಯಯ 'ಬಾಹುಲಕಾರ್ಧಧಾತುಕೇ ವಿಕಲ್ಪ ಇಷ್ಯತೇ' ಎಂದು ವಿಕಲ್ಪಹೇಳಿರುವುದರಿಂದ ಧಾತುವಿಗೆ ವೀಭಾವ ಬರುವುದಿಲ್ಲ. ಅಜಿರಪದದಂತೆ ಅರ್ಥತಿಳಿಯಬೇಕು. ಉದಾ-'**ದ್ಯೌರ್ನ ಭೂಮಿಂ ಗಿರಯೋ ನಾಜ್ರಾನ್** '(ಋ. ಸಂ. ೮-೧-೨೨-೩)

(೨೨) **ಸಾಚೀವಿತ್** (೨೩) **ದ್ಯುಗತ್** (೨೪) **ತಾಜತ್** || ಇವು ಮೂರೂ ನಿಪಾತಗಳು. ಸಾಚೀವಿತ್‌ಪದಕ್ಕೆ ನಿಗಮಹುಡುಕಬೇಕು.' **ಅತಸ್ತ್ವಾ ಗೀರ್ಭಿರ್ದ್ಯು ಗದಿಂದ್ರಕೇಶಿಭಿಃ** (ಋ.ಸಂ. ೬-೬-೩೬-೪) ಇಲ್ಲಿ ಮಾಧವನು' ದ್ಯುಗತ್ ಎಂಬುದಕ್ಕೆ ದೀಪ್ತಿಯನ್ನು, ದ್ಯುಲೋಕವನ್ನು ಹೋಗು ' ಎಂದು ವ್ಯಾಖ್ಯಾನಮಾಡಿರುತ್ತಾನೆ. ಆದರೆ ಕ್ಷಿಪ್ರನಾಮದಲ್ಲಿ ' ತೂತುಜಾನಃ, ತರಣೀಃ, ದ್ಯುಗತ್ ಎಂದು ಪಾಠಮಾಡಿರುತ್ತಾನೆ' '**ತಾಜತ್....ನಾರ್ಚ್ಛತಿ**' || **ತಾಜತ್ ಪ್ರಮೀಯತೇ** ಎಂದು ತಾಜತ್‌ಪದಕ್ಕೆ ನಿಗಮ. |

(೨೫) **ತರಣಿಃ** || ತೃ-ಪ್ಲವನತರಣಯೋಃ ಧಾತು. "ಅರ್ತಿಸುಸೃ"—(ಉ-೨-೯೫)ಸೂತ್ರದಿಂದ ಅನಿಪ್ರತ್ಯಯ. ಗುಣ. ರಪರವಾಗಿ ಬರುತ್ತದೆ. ತೃಷುಪದದಂತೆ ಅರ್ಥ ತಿಳಿಯಬೇಕು. ಉದಾ:—"**ವಿಷ್ಟ್ವೀ ಶಮೀ ತರಣಿತ್ವೇನ ವಾಘತಃ**" (ಋ-ಸಂ-೧-೭-೩೦-೩) "**ತರಣಿರ್ವಿಶ್ವದರ್ಶತಃ**" (ಋ-ಸಂ-೧-೪-೭-೪) ||

(೨೬) **ವಾತರಂಹಾ** || "**ವಾ-ಗತಿಗಂಧನಯೋಃ**" ಧಾತು. (ಅದಾ-ಪ) 'ಹಸಿಸೃಗ್ರಿ—' (ಉ. ೩-೮೪) ಸೂತ್ರದಿಂದ ತನ್‌ಪ್ರತ್ಯಯ. ವಾತ ಎಂದಾಗುತ್ತದೆ. 'ರಮು-ಕ್ರೀಡಾಯಾಮ್' 'ರಮೇಶ್ಚ (ವೇಗೇ)' (ಉ. ೪-೨೦೮) ಸೂತ್ರದಿಂದ ಅಸುನ್‌ಪ್ರತ್ಯಯ, ಹುಗಾಗಮ. ಮಕಾರಕ್ಕೆ ಅನುಸ್ವಾರ. 'ವಾತವತ್ ರಂಹಃ ಯಸ್ಯ ಸಃ' ಗಾಳಿಯಂತೆ ವೇಗವುಳ್ಳದ್ದು. ಉದಾಹರಣೆ—'**ವಾತರಂಹಸೋ ದಿವ್ಯಾಸೋ ಅತ್ಯಾಃ**' (ಋ. ಸಂ. ೨-೪-೨೫-೨) ||

ಹೀಗೆ ಇಪ್ಪತ್ತಾರು ಕ್ಷಿಪ್ರ (ವೇಗ) ನಾಮಗಳು ||

———

## || ಅಥಾಂತಿಕನಾಮಾನಿ | ಅಂತಿಕನಾಮಾನ್ಯುತ್ತರಾಣ್ಯೇಕಾದಶ ||

ಅಂತಿಕ ಎಂದರೆ ಸಮೀಪ ಎಂಬರ್ಥವನ್ನು ಸೂಚಿಸುವ ನಾಮಗಳನ್ನು ವಿವರಿಸಲಾಗುವುದು. ಈ ಅಂತಿಕನಾಮಗಳು ಹನ್ನೊಂದು ಇರುವವು. ಇವುಗಳನ್ನು ಕೆಳಗೆ ಕೊಟ್ಟಿದೆ—

[೧] ತಲಿತ್ [೨] ಆಸಾತ್ [೩] ಅಮ್ಬರಮ್ [೪] ತುರ್ವಶೇ
[೫] ಅಸ್ತಮೀಕೇ [೬] ಆಕೇ [೭] ಉಪಾಕೇ [೮] ಅರ್ವಾಕೇ
[೯] ಅಂತಮಾನಾಮ್ [೧೦] ಅವಮೇ [೧೧] ಉಪಮೇ

ಇತ್ಯೇಕಾದಶಾಂತಿಕನಾಮಾನಿ ॥ ೧೬ ॥

(೧) **ತಲಿತ್** ॥ ' ತಡ-ಆಘಾತೇ ' ಚುರಾದಿ. ' ತಾಡೇರ್ಣಿಲುಕ್ ಚ ' (ಉ-೧-೯೫) ಸೂತ್ರದಿಂದ ಇತಿ ಪ್ರತ್ಯಯ. ಸ್ವಾರ್ಥದಲ್ಲಿ ಬಂದ ಣಿಚಿಗೆ ಲುಕ್. ಡಲಗಳಿಗೆ ಅಭೇದ. ತಲಿತ್ ಎಂದಾಗುತ್ತದೆ. ಉದಾ :— **' ದೂರೇ ಚಿತ್ ಸಂತಲಿದಿವಾತಿ ರೋಚಸೇ '** (ಋ-ಸಂ-೧-೬-೩೧-೨) **' ಯೊ ನೋ ದದೇ ತಲಿತೋಯ ಅರಾತಯಃ '** (ಋ-ಸಂ-೨-೬-೩೦-೪) ॥

(೨) **ಆಸಾತ್** ॥ ' ಆಸ-ಉಪವೇಶನೇ ' ಧಾತು. (ಅದಾ-ಪ-) ' ಪುಂಸಿಸಂಜ್ಞಾಯಾಂ ಘಃ ಪ್ರಾಯೇಣ ' (ಪಾ-ಸೂ-೩-೩-೧೧೮) ಸೂತ್ರದಿಂದ ಘಪ್ರತ್ಯಯ. ಪಂಚಮ್ಯಂತರೂಪ. ಉದಾ :— **ಆನ ಇಂದ್ರೋ ದೂರಾದಾನ ಆಸಾತ್** (ಋ-ಸಂ-೩-೬-೩-೧) **' ಸ ನೋ ದೂರಾಚ್ಚಾಸಾಚ್ಚಾ—'** (ಋ-ಸಂ-೧-೨-೨೨-೩) ಹತ್ತಿರದಲ್ಲಿ ಇರುವುದೆಂದರ್ಥ. ಆಸಾತ್ ಎಂಬುದು ಅಂತಿಕನಾಮ (ಹತ್ತಿರ ಎಂದು ಹೇಳುವಪದ) ಎಂದು ಸ್ಕಂದಸ್ವಾಮಿಯ ಭಾಷ್ಯ. ಆಸಧಾತುವಿನಿಂದ ಆಸಾತ್ ಪದವಾಗಿದೆಯೆಂದು ಮಾಧವ ಭಾಷ್ಯ ॥

(೩) **ಅಮ್ಬರಮ್** ॥ ಆಪ್ಲೃ-ವ್ಯಾಪ್ತೌ. ಧಾತು. ' ಕ್ವದರಾದಯಶ್ಚ ' ಸೂತ್ರದಿಂದ ಅರನ್ ಪ್ರತ್ಯಯ, ಮುಗಾಗಮ, ಹ್ರಸ್ವಾದಿಗಳು ಬಂದು ನಿಪಾತಿತವಾಗಿದೆ. ಹತ್ತಿರದಲ್ಲಿದ್ದದ್ದು ಹೊಂದಲ್ಪಡುತ್ತದೆ ಎಂದರ್ಥ. ಉದಾ :— **' ಯನ್ನಾಸತ್ಯಾ ಪರಾವತಿ ಯದ್ವಾ ಸ್ಥೋ ಅಧ್ಯಮ್ಬರೇ'** (ಋ-ಸಂ-೬-೮-೨೭-೪) ಸ್ಕಂದಸ್ವಾಮಿ ವ್ಯತಿರಕ್ತ ಭಾಷ್ಯದಲ್ಲಿ ಈ ನಿರ್ವಚನ. ಸ್ಕಂದಸ್ವಾಮಿಯು ಇದು ಕೇವಲ ಅಂಬರನಾಮವೆಂದು ಹೇಳಿರುತ್ತಾನೆ. ॥

(೪) **ತುರ್ವಶೇ** ॥ ಇದು ಮನುಷ್ಯನಾಮದಲ್ಲಿ ವ್ಯಾಖ್ಯಾತವಾಗಿದೆ. (೨-೩-೧೫) ಬೇಗ ಹತ್ತಿರವನ್ನು ವ್ಯಾಪಿಸುತ್ತದೆ ಎಂದರ್ಥ. ಉದಾ :— **' ಯನ್ನಾಸತ್ಯಾ ಪರಾವತಿ ಯದ್ವಾ ಸ್ಥೋ ಅಧಿತುರ್ವಶೇ'** ॥ (ಋ-ಸಂ-೧-೪-೨-೨)

(೫) **ಅಸ್ತಮೀಕೇ** ॥ ' ಅಸ್ತಮ್ ' ಎಂಬ ಪದವು ಉಪಪದವಾಗಿರುವಾಗ ಮಾಧಾತುವಿಗೆ ' ಅಲೀಕಾದಯಶ್ಚ ' (ಉ-೪-೨೫) ಸೂತ್ರದಿಂದ ಕೀಕನ್‌ಪ್ರತ್ಯಯ, ಧಾತುಲೋಪ ಬಂದು ನಿಪಾತಿತವಾಗುತ್ತದೆ. ಇದರಲ್ಲಿ ಅಸ್ತಹೊಂದಲ್ಪಡುತ್ತದೆ, ಹತ್ತಿರದಲ್ಲಿರುವುದು ನಾಶಹೊಂದಲ್ಪಡುತ್ತದೆ ಎಂದರ್ಥ. ಉದಾ :—**ಸಚಶ್ಸ ನ ಪರಾಕ ಆ ಸಚಸ್ವಾಸ್ತಮೀಕಃ ಆ"** (ಋ. ಸಂ. ೨-೧-೧೭-೪) ॥

(೬) **ಆಕೇ** ॥ (೭) **ಉಪಾಕೇ** ॥ (೮) **ಅರ್ವಾಕೇ** ॥ ಆಙ್, ಉಪ, ಅರ್ವತ್ ಶಬ್ದಗಳು ಉಪಪದವಾಗಿರುವಾಗ ಪಾದವಿಕ್ಷೇಪಾರ್ಥಕ ಕ್ರಮು ಧಾತುವಿಗೆ ' ವಲಾಕಾದಯಶ್ಚ ' (ಉ. ೪-೧೪) ಸೂತ್ರದಿಂದ ಆಕಪ್ರತ್ಯಯ, ಧಾತುವಿಗೆ ಲೋಪ ಬಂದು ನಿಪಾತಿತವಾಗುತ್ತದೆ. ಅಡ್ಡವಾಗಿ ಹೋಗುವವನು, ಹೋಗುವವರಿಂದ ಆಕ್ರಮಿಸಲ್ಪಡುತ್ತದೆ,

ಆರಂಭಿಸಲ್ಪಡುತ್ತವೆ, ಸಮೀಪದಲ್ಲಿರುವುದು ಹೊಂದಲ್ಪಡುತ್ತದೆ ಎಂದರ್ಥ. ಉದಾಹರಣೆ—**'ಆಕೇ ನಿಯಾಸೋ ಅಹಭಿರ್ವಿದ್ಯುತಃ'** (ಋ. ಸಂ. ೩–೭–೨೧–೬) **'ಸಿಂಧೋರೂರ್ಮಾ ಉಪಾಕ'** (ಋ. ಸಂ. ೧–೨–೨೩–೧) **'ಯನ್ನಾಸತ್ಯಾ ಪರಾಕೇ ಅರ್ವಾಕೇ ಅಸ್ತಿ ಭೇಷಜಮ್'** (ಋ. ಸಂ. ೫–೮–೩೨–೫) ||

(೯) **ಅಂತಮಾನಾಮ್** || ಅಂತಿಕ ಶಬ್ದದಮೇಲೆ ತಮಪ್‌ಪ್ರತ್ಯಯ ಬಂದಾಗ 'ತಮೋದಶ್ಚ' ಎಂಬುದರಿಂದ ತಾದಿಗೆ ಲೋಪ. ಅತಿ ಹತ್ತಿರವಾದದ್ದು ಎಂದರ್ಥ. ಉದಾಹರಣೆ—**"ಅಥಾತೇ ಅಂತಮಾನಾಮ್"** (ಋ–ಸಂ–೧–೧–೭–೩) **"ಶಿಕ್ಷಾ ವಸ್ವೋ ಅಂತಮಸ್ಯ"** (ಋ–ಸಂ–೧–೨–೨೨–೫) ಅಂತಿಕಂ ಎಂಬುದು ಆದ್ಯುದಾತ್ತವೂ, ತೃತೀಯಾ ಬಹುವಚನವು ಅಂತೋದಾತ್ತವೂ ಆಗುವುದೆಂದು ಮಾಧವಮತ.

(೧೦) **ಅವಮೇ** || ಅವ ಧಾತು. ರಕ್ಷಣಾದಿ ಅನೇಕಾರ್ಥ ಹೇಳಿದೆ. (ಭ್ವಾ–ಪ) 'ಅವೇ ಶ್ಚ ವಾ' ಸೂತ್ರದಿಂದ ಮುಪ್ರತ್ಯಯ. ಸಮೀಪದಲ್ಲಿರುವುದು ಹೊಂದಲ್ಪಡುತ್ತದೆ ಎಂದರ್ಥ. ಉದಾಹರಣೆ—**"ಅಸ್ಮೈ ಬಹೂನಾಮವಮಾಯ ಸಖ್ಯೇ"** (ಋ. ಸಂ. ೨–೭–೨೪–೨) **"ಮಧ್ಯಮಸ್ಯಾಮವಮಸ್ಯಾಮುತಸ್ಥಃ"** (ಋ. ಸಂ. ೧–೭–೨೭–೫) ||

(೧೧) **ಉಪಮೇ** || ಉಪಪೂರ್ವಕವಾದ ಮೀಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' (ಪಾ. ಸೂ. ೩–೨–೧೦೧) ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಸಮೀಪದಲ್ಲಿರುವುದು ಪರಿಮಿತಿಗೊಳಿಸಲ್ಪಡುತ್ತವೆ ಎಂದರ್ಥ. ಉದಾಹರಣೆ—**ಉಪಮೇ ರೋಚನೇ ದಿವಃ** (ಋ. ಸಂ. ೬–೬–೧–೪) **"ಅಸ್ಮಾ ಇದುತ್ಯಮುಪಮಂ ಸ್ವರ್ಷಾಮ್"** (ಋ. ಸಂ. ೧–೪–೨೭–೩) ||

ಹೀಗೆ ಹನ್ನೊಂದು ಅಂತಿಕ (ಹತ್ತಿರ) ನಾಮುಗಳು || ೧೬ ||

---

## ಅಥ ಸಂಗ್ರಾಮನಾಮಾನಿ । ಸಂಗ್ರಾಮನಾಮಾನ್ಯುತ್ತರಾಣಿ ಷಟ್-ಚತ್ವಾರಿಂಶತ್

ಸಂಗ್ರಾಮ (ಯುದ್ಧ) ಎಂಬರ್ಥವಿರುವ ನಾಮುಗಳನ್ನು ವಿವರಿಸಲಾಗುವುದು. ಈ ಸಂಗ್ರಾಮ ನಾಮುಗಳು **ನಲವತ್ತಾರು ಇರುವವು.** ಇವುಗಳನ್ನು ಕೆಳಗೆ ಕೊಟ್ಟಿದೆ—

[೧] ರಣಃ [೨] ವಿವಾಕ್ [೩] ವಿಖಾದಃ [೪] ನದನುಃ [೫] ಭರೇ
[೬] ಆಕ್ರನ್ದೇ [೭] ಆಹವೇ (೮) ಅಜಾ [೯] ಪೃತನಾಜ್ಯಮ್ [೧೦] ಅಭೀಕೇ
[೧೧] ಸಮೀಕೇ [೧೨] ಮಮಸತ್ಯಮ್ [೧೩] ನೇಮಧಿತಾ [೧೪] ಸಙ್ಕಾಃ
[೧೫] ಸಮಿತಿಃ [೧೬] ಸಮನಮ್ [೧೭] ಮೀಳ್ಹೇ [೧೮] ಪೃತನಾಃ
[೧೯] ಸ್ಪೃಧಃ [೨೦] ಮೃಧಃ (೨೧) ಪೃತ್ಸು [೨೨] ಸಮತ್ಸು [೨೩] ಸಮರ್ಯೇ

[೨೪] ಸಮರಣೇ [೨೫] ಸಮೋಹೇ [೨೬] ಸಮಿಥೇ [೨೭] ಸಙ್ಖ್ಯೇ (೨೮) ಸಙ್ಗೇ [೨೯] ಸಂಯುಗೇ [೩೦] ಸಙ್ಗಥೇ [೩೧] ಸಙ್ಗಮೇ [೩೨] ವೃತ್ರತೂರ್ಯೇ [೩೩] ಪೃಕ್ಷೇ [೩೪] ಆಣೌ [೩೫] ಶೂರಸಾತೌ [೩೬] ವಾಜಸಾತೌ [೩೭] ಸಮನೀಕೇ [೩೮] ಖಲೇ [೩೯] ಖಜೇ [೪೦] ಪೌಂಸ್ಯೇ [೪೧] ಮಹಾಧನೇ [೪೨] ವಾಜೇ [೪೩] ಅಜ್ಮ [೪೪] ಸದ್ಮ [೪೫] ಸಂಯತ್ [೪೬] ಸಂವತಃ ॥

ಇತಿ ಷಟ್‌ಚತ್ವಾರಿಂಶತ್ ಸಂಗ್ರಾಮನಾಮಾನಿ ॥ ೧೭ ॥

(೧) **ರಣಃ** ॥ 'ಅಣ, ರಣ, ಕ್ವಣ-ಶಬ್ದಾರ್ಥಾಃ' (ಭ್ವಾ-ಪ) 'ವಶಿರಣ್ಯೋರುಪಸಂಖ್ಯಾನಮ್' ವಾರ್ತಿಕದಿಂದ ಅಪ್‌ಪ್ರತ್ಯಯ. ರಣಃ ಅಂದರೆ ಯುದ್ಧ. ಇದರಲ್ಲಿ ದುಂದುಭಿ ಮುಂತಾದವುಗಳು ಶಬ್ದಮಾಡುತ್ತವೆ, ಯೋಧರು ಪರಸ್ಪರ ಯುದ್ಧಮಾಡಲು ಗರ್ಜನೆ ಮಾಡುತ್ತಾರೆ ಎಂದರ್ಥ. ಅಥವಾ ಕ್ರೀಡಾರ್ಥಕ ರಮು ಧಾತುವಿಗೆ 'ರಾಸ್ನಾಸಾಸ್ನಾಸ್ಥೂ—' (ಉ. ೩-೧೩) ಸೂತ್ರದಿಂದ ನಪ್ರತ್ಯಯ, ಧಾತುವಿನ ಮಕಾರಕ್ಕೆ ಲೋಪ ನಿಪಾತಿತವಾಗುತ್ತದೆ. 'ಅಟ್-ಕುಪ್ವಾಙ್—' ಸೂತ್ರದಿಂದ ಣತ್ವ. ವಿಚಿತ್ರಕರ್ಮಗಳಿಗೆ ಆಶ್ರಯವಾದುದರಿಂದ ಯುದ್ಧವು ರಮಣೀಯವಾಗಿರುತ್ತದೆ. ಉದಾಹರಣೆ—'**ಮರುತ್ವಾಂ ಇಂದ್ರ ವೃಷಭೋ ರಣಾಯ**' (ಋ. ಸಂ. ೩-೩-೧೧-೧) ॥

(೨) **ವಿವಾಕ್** ॥ ವಿವಿಧವಾದ, ವಿರುದ್ಧವಾದ ಮಾತುಗಳಿಂದ ಕೂಡಿರುವುದು ಸಂಗ್ರಾಮ. ಉದಾ—'**ಹವನ್ತ ಉ ತ್ವಾ ಹವ್ಯಂ ವಿವಾಚಿ' (ಋ. ಸಂ. ೫-೩-೧೪-೨)** ॥

(೩) **ವಿಖಾದಃ** ॥ 'ಖದ-ಸ್ಥೈರ್ಯೇ ಹಿಂಸಾಯಶ್ಚ' (ಭ್ವಾ-ಪ) ಘಞ್‌ಪ್ರತ್ಯಯ. ಖಾದ ಎಂದಾಗುತ್ತದೆ. ಶೂರರ ವಿವಿಧವಾದ ಸ್ಥೈರ್ಯ, ಹಿಂಸಾದಿಗಳು ಯುದ್ಧದಲ್ಲಿ ಇರುತ್ತವೆ. ಉದಾಹರಣೆ—'**ತಂ ವಿಖಾದೇ ಸಸ್ರಿಮದ್ಯ ಶ್ರುತಂ ನರಮ್**' (ಋ. ಸಂ. ೭-೮-೧೪-೪)

(೪) **ನದನುಃ** ॥ 'ಣದ-ಅವ್ಯಕ್ತೇ ಶಬ್ದೇ' (ಭ್ವಾ. ಪ.) ಧಾತ್ವಾದಿಗೆ ನತ್ವ. 'ಅನುಙ್ ನದೇಶ್ಚ' (ಉ. ೩-೪೯) ಸೂತ್ರದಿಂದ ಅನುಙ್‌ಪ್ರತ್ಯಯ. ನದನುಃ ಎಂದಾಗುತ್ತದೆ. ಶಬ್ದಕ್ಕೆ ಆಶ್ರಯವಾದದ್ದು ಯುದ್ಧ. ಉದಾ-'**ಯದಾ ಕೃಣೋಷಿ ನದನುಂ ಸಮೂಹಸಿ (ಋ. ಸಂ. ೬-೨-೩-೪)**

(೫) **ಭರೇ** ॥ 'ಡುಭೃಞ್-ಧಾರಣಪೋಷಣಯೋಃ (ಜು-ಉಭ) ಪಚಾದಿ ಗಣದಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ. ಅಲ್ಲಿ ಪಚಾದಿಗಣಪಾಠದಲ್ಲಿ 'ಪಚ, ವಚ, ವಪ, ವದ, ಲಪ, ತಜ, ಭರಾ:—ಎಂದು ಪಾಠ ಮಾಡಿವೆ. "ಬಿಭರ್ತಿ ಧೈರ್ಯಂ ಯಶೋ ವಾ ಭರಃ" ಯುದ್ಧವು ಭಟರಿಗೆ ಧೈರ್ಯವನ್ನು ಅಥವಾ ಯಶಸ್ಸನ್ನು ಅಧಿಕಗೊಳಿಸುತ್ತದೆ ಅಥವಾ 'ಪುಂಸಿ ಸಂಜ್ಞಾಯಾಂ ಘಃ—' ಸೂತ್ರದಿಂದ ಕರಣಾರ್ಥದಲ್ಲಿ ಘ ಪ್ರತ್ಯಯ. ಇದರಿಂದ ಭಟರು ಜಯಲಕ್ಷ್ಮಿಯನ್ನು ಹೊಂದುತ್ತಾರೆ ಎಂದರ್ಥ. ಎರಡು ರೀತಿಯಿಂದಲೂ ಪೃಷೋದರಾದಿಗಣ ಪಠಿತವಾದುದರಿಂದ ಆದ್ಯುದಾತ್ತವಾಗುತ್ತದೆ. ಅಥವಾ 'ಭೃ-ಭರ್ತ್ಸನೇ' ಕ್ರ್ಯಾದಿ. ಪ್ವಾದಿ. ಇದರಲ್ಲಿ ಶತ್ರುಗಳು ಪರಸ್ಪರ

ಗದರಿಸುತ್ತಾರೆ. ಹೃಙ್ ಧಾತುವಿಗೆ ಘಪ್ರತ್ಯಯ ಬಂದರೂ 'ಹೃಗ್ರಹೋರ್ಭಃ ಛಂದಸಿ' ಎಂಬುದರಿಂದ ಹಕಾರಕ್ಕೆ ಭಕಾರ ಬರುವುದರಿಂದ ಭರ ಎಂದಾಗುತ್ತದೆ. ಇಲ್ಲಿ ಯೋಧರ ಧನ ಅಥವಾ ಆಯುಸ್ಸು ಅಪಹರಿಸಲ್ಪಡುತ್ತದೆ ಎಂದರ್ಥ. ಉದಾ:— **"ಅಸ್ಮಿನ್ ಭರೇ ನೃತಮಂ ವಾಜಸಾತೌ" (ಋ. ಸಂ. ೩-೨-೪-೭) "ಅನು ಕ್ರೋಶಂತಿ ಕ್ಷಿತಯೋ ಭರೇಷು" (ಋ. ಸಂ. ೩-೭-೧೧-೫)**

(೬) **ಆಕ್ರನ್ದೇ** ‖ 'ಕದಿ, ಕ್ರದಿ, ಕ್ಲದಿ,-ಆಹ್ವಾನೇ, ರೋದನೇ ಚ' (ಭ್ವಾ-ಆ) ಇದಿತ್ತಾದುದರಿಂದ ನುಮಾಗಮ. ಘಪ್ರತ್ಯಯ. ಇಲ್ಲಿ ಅನ್ಯೋನ್ಯವಾಗಿ ಕರೆದುಕೊಳ್ಳುತ್ತಾರೆ, ಇದರಿಂದ ಬಂಧುವಿನಾಶವಾಗುವುದರಿಂದ ಅಳುತ್ತಾರೆ ಎಂದರ್ಥ. ಯುದ್ಧಪರ್ಯಾಯದಲ್ಲಿ ನಿಗಮ ಹುಡುಕಬೇಕು.

(೭) **ಆಹವೇ** ‖ 'ಹ್ವೇಞ್-ಸ್ಪರ್ಧಾಯಾಮ್.' (ಭ್ವಾ-ಉಭ) ಈ ಧಾತುವಿಗೆ 'ಆಜೌ ಯುದ್ಧೇ' (ಪಾ-ಸೂ-೩-೩-೭೩) ಸೂತ್ರದಿಂದ ಅಪ್‌ಪ್ರತ್ಯಯ. 'ಬಹುಲಂ ಛಂದಸಿ' (ಪಾ-ಸೂ-೬-೧-೩೪) ಸೂತ್ರದಿಂದ ಧಾತು ವಕಾರಕ್ಕೆ ಸಂಪ್ರಸಾರಣ. (ಉ) ಪೂರ್ವರೂಪ. ಉಕಾರಕ್ಕೆ ಪ್ರತ್ಯಯ ನಿಮಿತ್ತವಾಗಿ ಗುಣ. ಅವಾದೇಶ. ಪರಸ್ಪರ ಸ್ಪರ್ಧೆಯಿಂದ ಇಲ್ಲಿ ಕರೆಯುತ್ತಾರೆ ಎಂದರ್ಥ. ಉದಾ:— **"ನ ಕಷ್ಟನ ಸಹತ ಆಹವೇಷು" (ಋ. ಸಂ. ೪-೭-೩೦-೧)**

(೮) **ಆಜೌ** ‖ 'ಅಜ-ಗತಿಕ್ಷೇಪಣಯೋಃ' ಧಾತು. (ಭ್ವಾ-ಪ) 'ಅಜ್ಯತಿಭ್ಯಾಂಇಣ್' (ಉ-೪-೧೨೭) ಸೂತ್ರದಿಂದ ಇಣ್‌ಪ್ರತ್ಯಯ. ಣಿತ್ತಾದುದರಿಂದ ಧಾತುವಿನ ಉಪಧೆಗೆ ವೃದ್ಧಿ. ಬಹುಲಗ್ರಹಣದಿಂದ ಧಾತುವಿಗೆ ವೀಭಾವ ಬರುವುದಿಲ್ಲ. ಇಲ್ಲಿ ಭಟರು ವಿಜಯಲಕ್ಷ್ಮಿಯನ್ನು ಹೊಂದುತ್ತಾರೆ, ಹೇಡಿಗಳು ಸೋಲನ್ನು ಪಡೆಯುತ್ತಾರೆ, ಕ್ಷೇಪಣಾರ್ಥದಲ್ಲಿ-ಪರಸ್ಪರ ಅಸ್ತ್ರಗಳನ್ನು ಎಸೆಯುತ್ತಾರೆ, ಅನ್ಯೋನ್ಯ ವೀರ್ಯತಾರತಮ್ಯವನ್ನು ಪರಸ್ಪರವಾಗಿ ಆಕ್ಷೇಪಿಸುತ್ತಾರೆ ಎಂದರ್ಥ. ಉದಾಹರಣೆ— **"ತೇನ ವಾಜಂ ಸನಿಷದಸ್ಮಿನ್ನಾಜೌ" (ಋ. ಸಂ. ೮-೩-೭-೪)** ‖

(೯) **ಪೃತನಾಜ್ಯಮ್** ‖ ಪೃತನಾಪದ ಉಪಪದವಾಗಿರುವಾಗ ಅಜ್ಜಧಾತುವಿಗೆ ಅಘ್ನ್ಯಾದಿಗಣಪಠಿತವಾದುದರಿಂದ ಯತ್‌ಪ್ರತ್ಯಯ. ಕಿತ್ತ್ವಾತಿದೇಶದಿಂದ ನಲೋಪ. ಪೃತನಾ=ಸೇನೆ. ಸೇನೆಯ ಗಮನವುಳ್ಳದ್ದು ಯುದ್ಧ. ಉದಾ ;— **'ಗವಾಂ ಸುದ್ಗಲಃ ಪೃತನಾಜ್ಯೇಷು'** (ಋ-ಸಂ-೮-೫-೨೧-೩) ‖

(೧೦) **ಅಭೀಕೇ** ‖ ಇಣ್-ಗತೌ. ಧಾತು. ಇದಕ್ಕೆ ಅಭಿ ಉಪಸರ್ಗಪೂರ್ವದಲ್ಲಿರುವಾಗ 'ಅಲೀಕಾದಯಶ್ಚ' (ಉ-೪-೨೫) ಸೂತ್ರದಿಂದ ಈಕಪ್ರತ್ಯಯ. ಧಾತುವಿಗೆ ಲೋಪವೂ ನಿಪಾತಿತವಾಗುತ್ತದೆ. ಅಥವಾ 'ನವಿದ್ಯತೇಭೀರ್ಯೇಷಾಂತೇ ಅಭೀಕಾಃ' ಭಯವಿಲ್ಲದಿರುವವರು ಎಂದರ್ಥ. ಅಭೀಕರಿಂದ (ಭಟರಿಂದ) ಮಾಡಲ್ಪಡುವುದಾದುದರಿಂದ ಯುದ್ಧವೂ ಅಭೀಕವಾಗುತ್ತದೆ. ಉದಾಹರಣೆ— **'ಪಾಹಿ ವಜ್ರಿವೋ ದುರಿತಾದಭೀಕೇ'** (ಋ. ಸಂ. ೧-೮-೨೬-೩) ‖

(೧೧) **ಸಮೀಕೇ** ‖ ಹಿಂದಿನಂತೆ ಇಣ್‌ಧಾತುವಿಗೆ ಸಮ್ ಉಪಸರ್ಗಪೂರ್ವದಲ್ಲಿರುವಾಗ ಈಕಪ್ರತ್ಯಯ. ಯುದ್ಧಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು.

(೧೨) **ಮಮಸತ್ಯಮ್** ‖ 'ಮಮ ಸತ್ಯಂ ಜಯಃ' ಇತಿ ಯೋದ್ಧೄಣಾಂ ವಾಕ್ಯವಿಷಯತ್ವಾತ್ ಮಮಸತ್ಯಂ ಯುದ್ಧಮ್. ನನಗೇ ನಿಜವಾದ ಜಯವೆಂಬ ಮಾತಿಗೆ ವಿಷಯವಾದುದರಿಂದ ಯುದ್ಧಕ್ಕೆ ಮಮಸತ್ಯಂ ಎಂದು ಹೆಸರು ಬಂದಿದೆ

ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ಉದಾ:—**‘ ತ್ವಾಂ ಜನಾ ಮಮಸತ್ಯೇಷ್ವಿನ್ದ್ರ (ಋ. ಸಂ. ೭-೮-೨೨-೪)** ||

(೧೩) **ನೇಮಧಿತಾ** || ‘ಸುಧಿತ ವಸುಧಿತ ನೇಮಧಿತ ಧಿಷ್ವದಿಷೀಯ ಚ’ (ಪಾ. ಸೂ. ೭-೪-೪೫) ಸೂತ್ರದಿಂದ ನೇಮಪದ ಉಪಪದವಾಗಿರುವಾಗ ಧಾಞ್‌ಧಾತುವಿಗೆ ತಪ್ರತ್ಯಯ, ಇತ್ವ ಅಥವಾ ಇಡಾಗಮವು ನಿಪಾತಿತವಾಗುತ್ತದೆ. ದಾನಾರ್ಥದಲ್ಲಿ ನೇಮಶಬ್ದ ಹೇಳಿದೆ. ಸಪ್ತಮ್ಯೇಕವಚನಕ್ಕೆ ‘ಸುಪಾಂ ಸುಲುಕ್—’ (ಪಾ. ಸೂ. ೭-೧-೩೯) ಸೂತ್ರದಿಂದ ಆಕಾರಾದೇಶ. ಉದಾಹರಣೆ—**‘ಇಂದ್ರಸ್ನಗೋ ನೇಮಧಿತಾ ಹವನ್ತೇ’ (ಋ. ಸಂ. ೫-೩-೧೧-೧) ‘ವಿದನ್ಮತೋರ್ ನೇಮಧಿತಾ ಚಿಕಿತ್ವಾನ್’ (ಋ. ಸಂ. ೧-೫-೧೭-೫) ‘ನೇಮಧಿತಾ ನ ಪೌಂಸ್ಯಾ’ (ಋ. ಸಂ. ೮-೪-೨೮-೧೩)** ||

(೧೪) **ಸಙ್ಕಾಃ** || ಗತ್ಯರ್ಥಕವಾದ ಸಚ ಧಾತುವಿಗೆ ಬಹುಲಗ್ರಹಣದಿಂದ ಅಂಕಪ್ರತ್ಯಯ, ಧಾತುವಿನ ಟಿಗೆ ಲೋಪ (ಅಚ್). ಅಥವಾ ಸಮ್ ಉಪಸರ್ಗಪೂರ್ವಕವಾದ ಕ್ಯಾಧಾತು, ಅಥವಾ ಕೃಂತಧಾತುವಿಗೆ ‘ಅನ್ಯೇಷ್ವಪಿ ದೃಶ್ಯತೇ ಸೂತ್ರದಿಂದ ಡಪ್ರತ್ಯಯ ಬಂದಾಗ ಟಿಗೆ ಲೋಪ. ಇಲ್ಲಿ ಭಟರು ಹೊಗಳಿಕೊಳ್ಳುತ್ತಾರೆ, ಆಯುಧಗಳಿಂದ ಕತ್ತರಿಸಲ್ಪಡುತ್ತಾರೆ ಎಂದರ್ಥ. ಉದಾಹರಣೆ—**‘ಇಷುಧಿಃ ಸಂಙ್ಕಾಃ ಪೃತನಾಶ್ಚ ಸರ್ವಾಃ’ (ಋ. ಸಂ. ೫-೧-೯-೫)** ||

(೧೫) **ಸಮಿತಿಃ** || ಸಮ್ ಉಪಸರ್ಗಪೂರ್ವಕವಾದ ಇಣ್‌ಧಾತುವಿಗೆ ಕ್ತಿನ್‌ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಇಲ್ಲಿ ಪರಸ್ಪರ ಶತ್ರುಗಳು ಸೇರುತ್ತಾರೆ. ಉದಾಹರಣೆ—**‘ರಾಜಾನಃ ಸಮಿತಾವಿವ’ (ಋ-ಸಂ-೮-೫-೯-೧)**

(೧೬) **ಸಮನಮ್** || ‘ಸಮ, ಷ್ಟಮ–ಅವೈಕಲ್ಯೇ’ (ಭ್ವಾ-ಪ) ಅಧಿಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯ. ಅದಕ್ಕೆ ಅನಾದೇಶ. ಶೂರರು ಇದರಲ್ಲಿ ವ್ಯಾಕುಲಗೊಳ್ಳುವುದಿಲ್ಲವೆಂದರ್ಥ. ಉದಾಹರಣೆ—**‘ಜ್ಯಾ ಇಯಂ ಸಮನೇ ಪಾರಯನ್ತೀ’ (ಋ. ಸಂ. ೫-೧-೯-೩) ‘ವಿ ಯೊ ಸೃಜತಿ ಸಮನಮ್’ (ಋ. ಸಂ. ೧-೪-೪-೧)** ||

(೧೭) **ಮೀಳಹಮ್** || ಧನನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೧೦-೧೧) ಧನನಿಮಿತ್ತವಾದುದರಿಂದ ಯುದ್ಧವೂ ಮೀಳಹಶಬ್ದ ವಾಚ್ಯವಾಗುತ್ತದೆ. ಅಥವಾ ಧನವುಳ್ಳದ್ದು ಸಮರು. ಮತ್ವರ್ಥೀಯಪ್ರತ್ಯಯಕ್ಕೆ ‘ಲುಗಾಕಾರೇ—’ ವಾರ್ತಿಕದಿಂದ ಲೋಪ. ನಾನಾ ಆಭರಣಗಳು ಯುದ್ಧದಲ್ಲಿ ಪ್ರಸರಿಸಲ್ಪಡುತ್ತವೆ. ಉದಾಹರಣೆ—**‘ಸ್ವಮೀಳ್ಹೇ ನರ ಆಜಾ ಹವನ್ತೇ’** (ಋ. ಸಂ. ೧-೫-೫-೧) **‘ಸ ಜಾಮಿಭಿರ್ಯತ್ಸಜಾತಿಮೀಳಹೇ’** (ಋ. ಸಂ. ೧-೭ ೧೦-೧) || ಸ್ವರ್ ಅಂದರೆ ನೀರು. ನೀರಿಗೋಸ್ಕರ ಸಂಗ್ರಾಮ. ಆಜೌ= ಇತರ ನಿಮಿತ್ತವಾಗಿಯೂ ಸಂಗ್ರಾಮವೆಂದು ಸ್ಕಂದಸ್ವಾಮಿಯ ಭಾಷ್ಯ.

(೧೮) **ಪೃತನಾ** || ‘ ಪೃಙ್–ವ್ಯಾಯಾಮೇ ’. ಧಾತು (ತು-ಆ-) ‘ ಪೃಪೂಸಾಂ ಕಿತ್ ’ ಸೂತ್ರದಿಂದ ತನನ್ ಪ್ರತ್ಯಯ. ಕಿತ್ತ್ವ ಅತಿದೇಶಮಾಡಿರುವುದರಿಂದ ಗುಣ ಬರುವುದಿಲ್ಲ. ಇಲ್ಲಿ ಭಟರು ವಿಶೇಷವ್ಯಾಯಾಮಮಾಡುತ್ತಾರೆ. ಉದಾ :— **‘ ರಣಾಯ ನಿಘ್ನನ್ ಪೃತನಾಸು ಶತ್ರೂನ್ || ’**

(೧೯) **ಸ್ಪೃಧಃ** || ‘ ಸ್ಪರ್ಧ–ಸಂಘರ್ಷೇ ’. (ಭ್ವಾ-ಆ-) ‘ ಕ್ವಿಬ್ವಚಿಪ್ರಚ್ಛಿ— ’ (ಪಾ-ಸೂ-೩-೨-೧೭೮ ವಾ) ಇಲ್ಲಿ ಪ್ರತ್ಯಯ ಮೊದಲು ಹೇಳಿರುವುದರಿಂದ ಇಷ್ಟಸಿದ್ಧಿಯಾಗುತ್ತದೆಂದು ಭಾಷ್ಯದಲ್ಲಿ ಹೇಳಿರುವುದರಿಂದ ಈ ಧಾತುವಿಗೆ ಕ್ವಿಪ್ ಬರುತ್ತದೆ. ಸರ್ವಲೋಪವಾದಿಗ ಪೃಷೋದರಾದಿಪಠಿತವಾದುದರಿಂದ ಮೊದಲನೆಯ ಅಕಾರಕ್ಕೆ ಋಕಾರವೂ ಎರಡನೆಯ

ಅಕಾರಕ್ಕೆ ಲೋಪವೂ ಬರುತ್ತದೆ. ಸ್ಪೃಧ್ ಎಂದು ಧಾಂತಪದ. ಇಲ್ಲಿ ದ್ವಿತೀಯಾ ಬಹುವಚನ. ಇಲ್ಲಿ ಭಟರು ಪರಸ್ಪರವಾಗಿ ಸ್ಪರ್ಧಿಸುತ್ತಾರೆ ಎಂದರ್ಥ. ಉದಾಹರಣೆ—**"ಜಯೇಮ ಸಂಯುಧಿ ಸ್ಪೃಧಃ"** (ಋ. ಸಂ. ೧-೧-೧೫-೩) ॥ ಸ್ಪೃಧ ಎಂಬುದು ಯುದ್ಧದ ಹೆಸರು. ಇದನ್ನು ಮಾಡುತ್ತಾರೆ ಎಂಬರ್ಥದಲ್ಲಿ 'ತತ್ಕರೋತಿ ತದಾ—' ಎಂಬುದರಿಂದ ಣಿಚ್ ಬಂದು ಅದರ ಮೇಲೆ ಕ್ವಿಪ್ ಬಂದಿದೆಯೆಂದು ಸ್ಕಂದಸ್ವಾಮಿ ಭಾಷ್ಯ ॥

[೨೦] **ಮೃಧಃ** ॥ ಮೃಧಧಾತುವು ಹಿಂಸಾರ್ಥದಲ್ಲಿ ಹೇಳಿದೆಯೆಂದು ಸ್ಕಂದಸ್ವಾಮಿ ಭಾಷ್ಯ. ಹಿಂದಿನಂತೆ ಕ್ವಿಪ್‌ಪ್ರತ್ಯಯ. ದ್ವಿತೀಯಾ ಬಹುವಚನದಲ್ಲಿ 'ಮೃಧಃ' ಎಂದು ರೂಪ. ಹಿಂಸೆಯಿಂದ ಕೂಡಿರುವುದು ಯುದ್ಧ. ಉದಾಹರಣೆ—**"ಅಯಂ ಸುತಃ ಸುಮುಖಮಾ ಮೃಧಸ್ಕಃ"** [ಋ. ಸಂ. ೨-೬-೨೧-೪] **'ವಿನ ಇಂದ್ರ ಮೃಧೋ ಜಹಿ'** (ಋ. ಸಂ. ೮-೮-೧೦-೪) ॥

(೨೧) **ಪೃತ್ಸು** ॥ ಪೃತನಾಶಬ್ದ ಸಂಗ್ರಾಮನಾಮದಲ್ಲಿಯೇ ಹೇಳಿದೆ. [೧೮] ಆದರೂ **'ನಾಸಿಕಾ ಪೃತನಾ** ಸಾನೂನಾಂ ನಸ್‌ಪೃತ್‌ಸ್ನವೋ ವಾಚ್ಯಾಃ' [ಪಾ. ಸೂ. ೬-೧-೬೩ ವಾ] ಎಂಬುದರಿಂದ ಶಸಾದಿಗಳಲ್ಲಿ ಪೃದಾದೇಶ ಹೇಳಿರುವುದ ರಿಂದ ಪುನಃ ಹೇಳಿದೆ. ಉದಾಹರಣೆ—**'ಯಮುಗ್ರೇ ಪೃತ್ಸು ಮರ್ತ್ಯಮ್'** [ಋ. ಸಂ. ೧-೨-೨೩-೨] ॥

(೨೨) **ಸಮತ್ಸು** ॥ ಸಮ್‌ಉಪಸರ್ಗಪೂರ್ವಕವಾದ ಭಕ್ಷಣಾರ್ಥಕ ಅದ್‌ಧಾತುವಿಗೆ ಕ್ವಿಪ್‌ಪ್ರತ್ಯಯ. ಸಮದ್ ಶಬ್ದ. ಯುದ್ಧಮಾಡುವವರ ಆಯುಸ್ಸನ್ನು ಯುದ್ಧವು ಭಕ್ಷಿಸುತ್ತದೆ. ಅಥವಾ ಮದೀ-ಹರ್ಷೇ. ಧಾತು- ಸಮ್‌ಪೂರ್ವದಲ್ಲಿ ರುವಾಗ ಇದಕ್ಕೆ ಹಿಂದಿನಂತೆ ಕ್ವಿಪ್. ಸಮಿನ ಮಕಾರಕ್ಕೆ ಲೋಪ. ಶೂರಭಟರು ಇಲ್ಲಿ ಹರ್ಷಪಡುತ್ತಾರೆ ಎಂದರ್ಥ. ಉದಾ :— **' ಸಮತ್ಸು ತ್ವಾ ಹವಾಮಹೇ '** (ಋ-ಸಂ-೫-೮-೩೬-೩) **' ಧನ್ವನಾ ತೀವ್ರಾಃಸಮದೋ ಜಯೇಮ '** (ಋ-ಸಂ-೫-೧-೧೯-೩) ॥

(೨೩) **ಸಮರ್ಯೇ** ॥ ಮರ್ಯ ಶಬ್ದವು ಮನುಷ್ಯಪರ್ಯಾಯದಲ್ಲಿ ವ್ಯಾಖ್ಯಾತವಾಗಿದೆ. (೨-೩-೧೧) ' ಮರ್ಯೈಃ ಸಹ ವರ್ತತೇ ಇತಿ ಸಮರ್ಯಮ್ ' ಮರಣಶೀಲರಿಂದ ಕೂಡಿರುವುದು ಯುದ್ಧ. ಸಹಶಬ್ದಕ್ಕೆ ಸಭಾವ ಬಂದಿದೆ. ಉದಾ :— **' ಮಾಸ್ಮೇ ತಾದೃಗಪಗೂಹಃ ಸಮರ್ಯೇ '** (ಋ-ಸಂ-೭-೭-೧೯-೪) **ತವ ಸಧಾವ ಇಯಮಾಸ ಮರ್ಯೇ '** (ಋ-ಸಂ-೧-೫-೭-೧) ॥

(೨೪) **ಸಮರಣೇ** ॥ ಋ, ಸೃ-ಗತೌ. (ಭ್ವಾ-ಪ-) ಸಮ್‌ಉಪಸರ್ಗಪೂರ್ವದಲ್ಲಿರುವಾಗ ಇದಕ್ಕೆ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ಇಲ್ಲಿ ಪರಸ್ಪರಸಂಗತರಾಗುತ್ತಾರೆ. ಉದಾ :— **' ಮಾಂ ವೃತಾಃ ಸಮರಣೇ ಹವನ್ತೇ'** **(ಋ-ಸಂ-೩-೭-೧೭-೫)**

(೨೫) **ಸಮೋಹೇ** ॥ ' ಉಹಿರ್, ದುಹಿರ್-ಅರ್ದನೇ ' **(ಭ್ವಾ-ಪ-) ಸಮ್‌ಪೂರ್ವದಲ್ಲಿರುವಾಗ ಇದಕ್ಕೆ ಘಞ್** ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆಗುಣ. ಸಪ್ತಮ್ಯೇಕವಚನಾಂತರೂಪ. ಇಲ್ಲಿ ಚನ್ನಾಗಿ ಪರ ಸ್ಪರ ಪೀಡಿಸಲ್ಪಡುತ್ತಾರೆ. ' ಅಧ್ರಿಗವ ಓಹಮ್ ' ಎಂಬಲ್ಲಿ ವಹಧಾತುವಿನ ರೂಪವೆಂದು ಸ್ಕಂದಸ್ವಾಮಿಯ ಭಾಷ್ಯ. ಆಗ ಸಮ್‌ಪೂರ್ವಕವಹ್‌ಧಾತುವಿಗೆ ಘಞ್ ಬಂದಾಗ ಪೃಷೋದರಾದಿಪಠಿತವಾದುದರಿಂದ ಸಂಪ್ರಸಾರಣ. (ವಕಾರಕ್ಕೆ ಉಕಾರ) ಲಘೂಪಧಗುಣ ಹೇಳಬೇಕು. ಸುಭಟರು ರಥಾದಿಗಳಿಂದ ಇಲ್ಲಿ ಹೋಗುತ್ತಾರೆ, ಅಥವಾ ಅವರಿಂದ ಕವಚಾದಿಗಳು ಧರಿಸಲ್ಪ

ಡುತ್ತದೆ ಎಂದರ್ಥವಾಗುತ್ತದೆ. ಉದಾ :— **‘ ಸಮೋಹೇ ವಾ ಯ ಆಶತ ’** (ಋ–ಸಂ–೧–೧–೧೬–೧) ಅಂತೋದಾತ್ತ ವಾದದ್ದು ಸಂಗ್ರಾಮವೆಂದೂ, ಮಧ್ಯೋದಾತ್ತವು ಣಮುಲಂತವಾಗಿರುವುದೆಂದೂ ಮಾಧವರ ಮತ. **‘ ಇಯರ್ತಿ ರೇಣುಂ ಮಘವಾ ಸಮೋಹಮ್ ’** (ಋ–ಸಂ–೩–೫–೨೩–೩) ಎಂಬಲ್ಲಿ ಣಮುಲಂತವಾಗಿರುತ್ತದೆ.

(೨೬) **ಸಮಿಥೇ** ॥ ಸಮ್ ಉಪಸರ್ಗಪೂರ್ವಕವಾದ ಗತ್ಯರ್ಥಕ ಇಣ್ ಧಾತುವಿಗೆ ‘ಸಮೀಣಃ’ (ಉ–೨–೧೦) ಸೂತ್ರದಿಂದ ಥಕ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಸಪ್ತಮ್ಯಂತರೂಪ. ಉದಾ:—**“ಯುವನ್ಯರೂಪಃ ಸಮಿಥೇ ಬಭೂಥ”** (ಋ–ಸಂ–೫–೬–೨೫–೬) **“ಸ ಇನ್ಮಹಾನಿ ಸಮಿಥಾನಿ ಮಜ್ಮನಾ”** [ಋ–ಸಂ–೧–೪–೧೯–೫]

[೨೭] **ಸಙ್ಖೇ** ॥ ‘ಚಕ್ಷಿಙ್–ವ್ಯಕ್ತಾಯಾಂ ವಾಚಿ.’ ಧಾತು. ಸಮ್ ಪೂರ್ವದಲ್ಲಿರುವಾಗ ‘ಅನ್ಯೇಷ್ವಪಿ ದೃಶ್ಯತೇ’ ಸೂತ್ರದಿಂದ ಡಪ್ರತ್ಯಯ. ‘ಬಹುಲಂ ಸಂಜ್ಞಾಛಂದಸೋಃ’ (ಪಾ–ಸೂ. ೨–೪–೫೪) ಸೂತ್ರದಿಂದ ಧಾತುವಿಗೆ ಖ್ಯಾಞಾದೇಶ. ಪ್ರತ್ಯಯ ಡಿತ್ತಾದುದರಿಂದ ಟಿ (ಆ) ಲೋಪ. ಪೃಷೋದರಾದಿಗಣಪಠಿತವಾದುದರಿಂದ ಯಕಾರಕ್ಕೆ ಲೋಪ ಮಕಾರಕ್ಕೆ ಅನುಸ್ವಾರ ಪರಸವರ್ಣ. ಧಾತುಗಳಿಗೆ ಅನೇಕಾರ್ಥವಿರುವುದೆಂದುದರಿಂದ ಇಲ್ಲಿ ಸಮ್ಪೂರ್ವಕ ಚಕ್ಷಿಧಾತುವಿಗೆ ವರ್ಜನಾರ್ಥ (ಬಿಡುವುದು) ಹೇಡಿಗಳಿಂದ ಇದು ಬಿಡಲ್ಪಡುತ್ತದೆ. ಶೂರರಿಗೆ ಮಾತ್ರ ಯುದ್ಧ. ಅಥವಾ ಸಮ್ಪೂರ್ವಕ ವ್ಯಾಪ್ತ್ಯರ್ಥಕ ಅಸುಧಾತುವಿಗೆ ‘ ಡಿಚ್ಚ ’ ಎಂಬುದರಿಂದ ಖಪ್ರತ್ಯಯ. ಡಿತ್ತ್ವ ಹೇಳಿರುವುದರಿಂದ ಟಿಗೆ (ಅಶ್) ಲೋಪ. ಪ್ರತ್ಯಯ ಮಾತ್ರ ಉಳಿಯುತ್ತದೆ. ಇಲ್ಲಿ ಅನ್ಯೋನ್ಯಸ್ಪರ್ಧೆಗೆ ಭಟರು ಸೇರುತ್ತಾರೆ ಎಂದರ್ಥ. ಯುದ್ಧಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು.

(೨೮) **ಸಙ್ಗೇ** ॥ ಸಮ್‌ಪೂರ್ವಕ ಗಮ್‌ಧಾತುವಿಗೆ ‘ ಅನ್ಯೇಷ್ವಪಿ ದೃಶ್ಯತೇ ’ ಸೂತ್ರದಿಂದ ಡ ಪ್ರತ್ಯಯ. ಟಿಲೋಪ. ಹಿಂದಿನಂತೆ ಖಪ್ರತ್ಯಯ ಬಂದರೂ ಇದೇ ರೂಪವಾಗುತ್ತದೆ. ಅರ್ಥ ಹಿಂದಿನಂತೆಯೇ ತಿಳಿಯಬೇಕು. ಉದಾ:— **‘ ಸಂಙ್ಗೇ ಸಮತ್ಸು ವೃತ್ರಹಾ ’ (ಋ. ಸಂ. ೮–೭–೨೧–೧) ॥**

(೨೯) **ಸಂಯುಗೇ** ॥ ‘ಯುಜಿರ್–ಯೋಗೇ’ ಧಾತು. (ರು–ಉ) ಘಞ್‌ಪ್ರತ್ಯಯ. ಉಕ್ಥಾದಿಗಣದಲ್ಲಿ ಯುಗಶಬ್ದ ಪಾಠಮಾಡಿರುವುದರಿಂದ ನಿಪಾತದಿಂದ ಗುಣ ಬರುವುದಿಲ್ಲವೆಂದು ತಿಳಿಯಬೇಕು. ವಿಶೇಷಾರ್ಥದಲ್ಲಿ ಈ ನಿಪಾತ ವೆಂದುದರಿಂದ ರಥಾದ್ಯುಪಕರಣಾರ್ಥದಲ್ಲಿ ಬಂದಿವೆಯೆಂದು ತಿಳಿಯಬೇಕು. ಉದಾಹರಣೆ ನಿಗಮ ಹುಡುಕಬೇಕು. ॥

(೩೦) **ಸಂಗಥೇ** ॥ ‘ಗೂಥಯೂಥ ಪ್ರೋಥಪೃಷ್ಠಾದಯಃ’ ಎಂಬುದರಿಂದ ಸಮ್‌ಪೂರ್ವಕ ಗಮ್‌ಧಾತುವಿಗೆ ಥಪ್ರತ್ಯಯ ಬಂದು ನಿಪಾತಿತವಾಗಿದೆ. ಇಲ್ಲಿ ಪರಸ್ಪರ ಸೇರುತ್ತಾರೆ ಎಂದರ್ಥ. ಉದಾಹರಣೆ—**‘ಆ ಯೇ ವಾಮಸ್ಯ ಸಂಗಥೇ’ (ಋ. ಸಂ. ೨–೮–೬–೫) ॥**

(೩೧) **ಸಙ್ಗಮೇ** ॥ ಸಮ್ಪೂರ್ವಕ ಗಮ್‌ಧಾತುವಿಗೆ ‘ಗ್ರಹವೃದೃನಿಶ್ಚಿಗಮಶ್ಚ’ (ಪಾ. ಸೂ. ೩–೩–೫೧) ಸೂತ್ರದಿಂದ ಅಪ್‌ಪ್ರತ್ಯಯ. ಸಪ್ತಮ್ಯಂತರೂಪ. ಉದಾಹರಣೆ—**“ಜೈತ್ರಂ ಯನ್ತೇ ಅನುಮಾದಾಮ ಸಂಗಮೇ” (ಋ. ಸಂ. ೧–೭–೧೪–೩) ॥**

(೩೨) ವೃತ್ರತೂರ್ಯೇ ॥ ಮೇಘನಾಮದಲ್ಲಿ ವೃತ್ರಶಬ್ದ ವ್ಯಾಖ್ಯಾತವಾಗಿದೆ. (೧-೧೦-೩೮) ಇಲ್ಲಿ ರಾಕ್ಷಸರೂಪಶತ್ರು ಅರ್ಥ. 'ತುರಿ-ಗತಿತ್ವರಹಿಂಸಯೋಃ' (ದಿ-ಆ) ಧಾತು. ಅಘ್ನ್ಯಾದಿಗಣಪಠಿತವಾದುದರಿಂದ ಯತ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ರಾಕ್ಷಸರೂಪಶತ್ರುವು ಇಲ್ಲಿ ಹಿಂಸಿಸಲ್ಪಡುತ್ತಾನೆ ಎಂದರ್ಥ. ಉದಾಹರಣೆ—**'ಇಂದ್ರೋ ವೃಣೀತ ವೃತ್ರತೂರ್ಯೇ—' 'ಯೂಯಮಿಂದ್ರ ಮವೃಣೀಧ್ವಂ ವೃತ್ರತೂರ್ಯೇ'** ॥

(೩೩) ಪೃಕ್ಷೇ ॥ 'ಪೃಚೀ-ಸಂಪರ್ಕೇ.' ಧಾತು. 'ಸ್ರುವೃಶ್ಚಿಕೃತ್ಯೃಷಿಭ್ಯಃ ಕಿತ್' (ಉ. ೩-೬೬) ಸೂತ್ರದಿಂದ ವಿಹಿತವಾದ ಸಪ್ರತ್ಯಯ ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ. ಚಕಾರಕ್ಕೆ ಕುತ್ವ ಬಂದಾಗ ಸಕಾರಕ್ಕೆ ಷತ್ವ. ಇಲ್ಲಿ ಭಟರು ಪರಸ್ಪರ ಸಂಪರ್ಕ ಹೊಂದುತ್ತಾರೆ ಎಂದರ್ಥ. ಯುದ್ಧ ಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು.

(೩೪) ಆಣೌ ॥ ಅಣ ಧಾತುವಿಗೆ ಶಬ್ದಾರ್ಥ ಹೇಳಿದೆ. (ಭ್ವಾ. ಪ.) 'ಸರ್ವಧಾತುಭ್ಯ ಇನ್—' ಸೂತ್ರದಿಂದ ಇಣ್ ಪ್ರತ್ಯಯ. ಣಿತ್ತಾದುದರಿಂದ ಉಪಧಾವೃದ್ಧಿ. ಆಣಿ ಎಂದಾಗುತ್ತದೆ. ಸಪ್ತಮ್ಯಂತರೂಪ. ರಣಶಬ್ದದಂತೆಯೇ ಅರ್ಥ. ಉದಾಹರಣೆ—**ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ' (ಋ. ಸಂ. ೧-೫-೪-೩)** ॥ ಆಣೌ ಎಂಬುದು ಸಂಗ್ರಾಮನಾಮವೆಂದು ಸ್ಕಂದಸ್ವಾಮಿ ಭಾಷ್ಯ.

(೩೫) ಶೂರಸಾತೌ ॥ ಶು-ಗತೌ. ಇದು ಸೂತ್ರಪಠಿತಧಾತು. 'ಶುಸಿಚಿಮೀನಾಂ ದೀರ್ಘಶ್ಚ' (ಉ. ೨-೨೪) ಸೂತ್ರದಿಂದ ರನ್‌ಪ್ರತ್ಯಯ, ಧಾತುವಿಗೆ ದೀರ್ಘ. ಶೂರ ಎಂದಾಗುತ್ತದೆ. ಷಣು-ದಾನೇ. ಧಾತ್ವಾದಿಗೆ ಸತ್ವ. 'ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ' (ಪಾ. ಸೂ. ೩-೩-೯೭) ಸೂತ್ರದಿಂದ ಸ್ವರಕ್ಕೋಸ್ಕರ ಸಾತಿ ಎಂದು ನಿಪಾತಿತವಾಗುತ್ತದೆ. ಅಥವಾ ಷೋಧಾತುವಿಗೂ 'ದ್ಯತಿಸ್ಯತಿ—' (ಪಾ. ಸೂ. ೭-೪-೪೦) ಸೂತ್ರದಿಂದ ಈತ್ವಾಭಾವ ಬಂದು ನಿಪಾತಿತವಾಗುತ್ತದೆ. ಶೂರರಿಗೆ ಇಲ್ಲಿ ವೇತನದಾನ ಅಥವಾ ಮರಣವಿರುತ್ತದೆ. ಸಪ್ತಮೀರೂಪ. ಉದಾಹರಣೆ—**'ಯಃ ಶೂರಸಾತಾ ಪರಿತಕ್ಮ್ಯೇ (ಋ. ಸಂ. ೧-೨-೩೩-೧)**

(೩೬) ವಾಜಸಾತೌ ॥ ವಾಜವೆಂದರೆ ಅನ್ನವೆಂದು ವ್ಯಾಖ್ಯಾತವಾಗಿದೆ. ಯುದ್ಧದಿಂದ ಭಟರಿಗೆ ಅನ್ನ ಕೊಡಲ್ಪಡುತ್ತವೆ. ಅವರಿಗೆ ಯುದ್ಧವೇ ಜೀವಿಕೆಯಾಗಿದೆ. ಉದಾಹರಣೆ—**'ವೃಧೇ ಚ ನೋ ಭವತಂ ವಾಜಸಾತೌ' (ಋ. ಸಂ. ೧-೩-೫-೬)** ॥

(೩೭) **ಸಮನೀಕೇ** ॥ ಅನ-ಪ್ರಾಣನೇ (ಅದಾ-ಪ) 'ಅನಿಹೃಷಿಭ್ಯಾಂ ಕಿಚ್ಚ (ಉ. ೪-೧೭) ಸೂತ್ರದಿಂದ ಈಕನ್‌ಪ್ರತ್ಯಯ. ಸಮ್ ಉಪಸರ್ಗ. ಜೀವಿಸಿರುವಂತೆ ಮಾಡುವುದು ಅನೀಕ ಅಥವಾ ನಞ್‌ಪೂರ್ವವಾದ ಣೀಞ್-ಪ್ರಾಪಣೇ. ಧಾತುವಿಗೆ 'ಪಿನಾಕಾದಯಶ್ಚ' (ಉ. ೪-೨೫) ಸೂತ್ರದಿಂದ ಅನೀಕವೆಂದು ನಿಪಾತಿತವಾಗುತ್ತದೆ. ಚಲಿಸಲ್ಪಡದಿರುವುದು ಅನೀಕ ಸೇನಾವಿಶೇಷವೆಂದರ್ಥ. ಸಂಗತಾನಿ ಅನೀಕಾನಿ ಯಸ್ಮಿನ್. ಯುದ್ಧದಲ್ಲಿ ಸೇನೆಗಳ ಸಮಾವೇಶವಿರುತ್ತದೆ. ಉದಾಹರಣೆ—**'ಭೋಜಃ ಶತ್ರೂನ್ ಸಮನೀ ಕೇಷು ನೇತಾ' (ಋ. ಸಂ. ೮-೬-೪-೫)**

(೩೮) **ಖಲೇ** ॥ ಖಜ-ಮನ್ಥೇ. (ಭ್ವಾ-ಪ) ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ' (ಪಾ-ಸೂ-೩-೩-೧೧೮) ಸೂತ್ರದಿಂದ ಘಪ್ರತ್ಯಯ. ವ್ಯತ್ಯಯದಿಂದ ಧಾತು ಜಕಾರಕ್ಕೆ ಲಕಾರಾದೇಶ. ಇಲ್ಲಿ ಭಟರು ಮರ್ದಿಸಲ್ಪಡುತ್ತಾರೆ. ಸಂಚಲನಾರ್ಥಕ ಸ್ಖಲಧಾತುವಿಗೆ ಘ ಬಂದರೂ ಈ ರೂಪವಾಗುತ್ತದೆ. ಆಗ ವ್ಯತ್ಯಯದಿಂದ ಸಕಾರಲೋಪ ಹೇಳಬೇಕು.

ಹೇಡಿಗಳು ಅಲ್ಲಿ ಸ್ಖಲನಹೊಂದುತ್ತಾರೆ (ಹೆದರಿ ಓಡುತ್ತಾರೆ) ಉದಾಹರಣೆ—**'ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ'** [ಋ. ಸಂ. ೮-೧೬-೨]

**(೩೯) ಖಜೇ** ॥ ಪೂರ್ವೋಕ್ತವಾದ ಧಾತುವಿಗೆ ಹಿಂದಿನಂತೆ ಪ್ರತ್ಯಯ, ಅರ್ಥ ತಿಳಿಯಬೇಕು. ಉದಾಹರಣೆ—**'ಕರ್ಮನ್ ಕರ್ಮನ್ ಇಾಸ್ವತಭೂತಿಃ ಖಜಙ್ಕರಃ'** [ಋ. ಸಂ. ೧-೭-೧೫-೧] ॥

**[೪೦] ಪೌಂಸ್ಯೇ** ॥ ಬಲನಾಮಗಳಲ್ಲಿ ಇದು ವ್ಯಾಖ್ಯಾತವಾಗಿದೆ. [೧-೧೦-೨೪]. ಈ ಯುದ್ಧದಿಂದ ಅಧಿಕ ವಾಗುತ್ತದೆ ಎಂದರ್ಥ. ಸಂಗ್ರಾಮಪರ್ಯಾಯದಲ್ಲಿ ನಿಗಮ ಹುಡುಕಬೇಕು.

**(೪೧) ಮಹಾಧನೇ** ॥ ಮಹ–ಪೂಜಾಯಾಮ್. [ಭ್ವಾ-ಪ] 'ವರ್ತಮಾನೇ ಪೃಷದ್—' [ಉ. ೨–೭೮] ಸೂತ್ರದಿಂದ ಮಹತ್ ಎಂದು ನಿಪಾತಿತವಾಗುತ್ತದೆ. ಪ್ರೀಣನಾರ್ಥಕ ಧಿವಿ ಧಾತುವಿಗೆ ಪಚಾದಿಗಣಪಠಿತವಾದುದ ರಿಂದ ಅಚ್‌ಪ್ರತ್ಯಯ ಇದಿತ್ತಾದುದರಿಂದ ನುಮಾಗಮ. ಪೃಷೋದರಾದಿಗಣಪಠಿತವಾದುದರಿಂದ ವಕಾರ, ಧಕಾರೋತ್ತರೇಕಾರಗಳಿಗೆ ಲೋಪ. ಸಂತೋಷಪಡಿಸುವುದು ಧನ. ಇದರ ಮೂಲಕವಾಗಿ ಯುದ್ಧವೂ ಹರ್ಷದಾಯಕ ವಾಗಿದೆ. ಮಹಚ್ಚಾಸೌ ಧನಞ್ಚ. ಮಹಾಧನಮ್. ಅಧಿಕ ಹರ್ಷದಾಯಕವಾದದ್ದು. ಇದರಿಂದ 'ಅಧಿಕ ಧನಲಾಭ ವಾಗುವುದು ಎಂದರ್ಥ. ಉದಾ:—**'ಇಂದ್ರಂ ವಯಂ ಮಹಾಧನೇ'** (ಋ. ಸಂ. ೧-೧-೧೩-೫) **'ನಾಸ್ಯ ವರ್ತಾ ನ ತರುತಾ ಮಹಾಧನೇ'** (ಋ ಸಂ. ೧-೩-೨೧-೩) ॥

**(೪೨) ವಾಜೇ** ॥ ಇದ ಬಲನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೭-೩) ' ಇಂದ್ರವಾಜೇಸು ನೋ ಅವ ' (ಋ–ಸಂ–೧–೧–೧೩–೪) **' ತಂ ತ್ವಾ ವಾಜೇಷು ವಾಜಿನಮ್ '** (ಋ-ಸಂ-೧-೧-೮-೩) ॥

**(೪೩) ಅಜ್ಮ** ॥ ' ಅಜ–ಗತಿಕ್ಷೇಪಣಯೋಃ ' (ಭ್ವಾ-ಪ-) ಔಣಾದಿಕಮನಿನ್‌ಪ್ರತ್ಯಯ. ಪರಸ್ಪರ ಸಂಗತರಾ ಗುತ್ತಾರೆ, ಆಯುಧಪ್ರಕ್ಷೇಪವಿರುತ್ತದೆ. ಉದಾ :— **'ಅಗ್ನಿರ್ನಾದೀದೇಚ್ಚಿತ ಇದ್ಧೋ ಅಜ್ಮನ್ನಾ'** (ಋ. ಸಂ. ೧–೭-೧೬–೨) ಯಜ್ಞಗೃಹದಲ್ಲಿ ಅಥವಾ ಯುದ್ಧದಲ್ಲಿ ಎಂದು ಮಾಧವರ ಭಾಷ್ಯ. ॥

**(೪೪) ಸದ್ಮ** ॥ ಗತ್ಯಾದ್ಯರ್ಥಕ ಸದ್ ಧಾತುವಿಗೆ ಹಿಂದಿನಂತೆ ಮನಿನ್‌ಪ್ರತ್ಯಯ. ಇಲ್ಲಿ ಪ್ರಾಣಿಗಳು ನಾಶ ಹೊಂದುತ್ತವೆ ಎಂದರ್ಥ. ಉದಾಹರಣೆ ನಿಗಮ ಹುಡುಕಬೇಕು.

**(೪೫) ಸಂಯತ್** ॥ ಸಮ್‌ಉಪಸರ್ಗ. ಯಮಧಾತು ಅಥವಾ ಪ್ರಯತ್ನಾರ್ಥಕಯತೀಧಾತುವಿಗೆ ಔಣಾಧಿಕ ಕ್ವಿಪ್‌ಪ್ರತ್ಯಯ. ಯಮಿನ ಅನುನಾಸಿಕಕ್ಕೆ ಲೋಪಬಂದಾಗ ತುಗಾಗಮ. ಜಯಿಸಲು ಅಧಿಕ ಪ್ರಯತ್ನಿಸುತ್ತಾರೆ, ಕುದುರೆ ಮುಂತಾದವುಗಳನ್ನು ಚನ್ನಾಗಿ ಪ್ರೇರೇಪಿಸುತ್ತಾರೆ. ಉದಾಹರಣೆ—**'ಇಲಾನ್ನಃ ಸಂಯತಃ ಕರತ್'** (ಋ-ಸಂ-೫-೭-೨-೨) **ಸಂಯತ್ ಅಂದರೆ ಸಂಗ್ರಾಮವೆಂದು ಹರದತ್ತನ ವ್ಯಾಖ್ಯಾನ.**

**(೪೬) ಸಂವತಃ** ॥ ಸಮ್ ಉಪಸರ್ಗಪೂರ್ವಕವಾದ ವನಧಾತುವಿಗೆ ಸಂಪದಾದಿಗಣಪಠಿತವಾದುದರಿಂದ ಕ್ವಿಪ್‌ಪ್ರತ್ಯಯ. 'ಅನುದಾತ್ತೋಪ—' ಸೂತ್ರದಿಂದ ಅನುನಾಸಿಕ (ನ) ಲೋಪ ಬಂದಾಗ ಹ್ರಸ್ವವಿರುವುದರಿಂದ ತುಗಾಗಮ.

ಸಂವತ್ ಪದವಾಗುತ್ತದೆ. ಶೂರರಿಂದ ಹೊಂದತಕ್ಕದ್ದು ಸಂಗ್ರಾಮ. ಉದಾಹರಣೆ—**'ಪರಸ್ಯಾ ಅಧಿ ಸಂವತಃ'** [ಋ. ಸಂ. ೬-೫-೨೬-೫] **"ಸ ಸಂವತೋ ನವಜಾತಸ್ತು ತುರ್ಯಾತ್"** [ಋ. ಸಂ. ೪-೧-೭-೩] ||

ಹೀಗೆ ನಲವತ್ತಾರು ಸಂಗ್ರಾಮದ ಹೆಸರು. || ೧೭ ||

---

ಸಂಗ್ರಾಮಃ ಕಸ್ಮಾತ್ ಸಂಗಮನಾದ್ವಾ ಸಂಗರಣಾದ್ವಾ ಸಂಗತೌ ಗ್ರಾಮಾವಿತಿ ವಾ ||

ಸಂಗ್ರಾಮ (ಯುದ್ಧ) ಎಂದರೇನು ? ಸಂಗ್ರಾಮವೆಂದರೆ–**ಸಂಗಮನಾದ್ವಾ** ಯುದ್ಧ ಮಾಡುವ ಯೋಧರೂ ಹೋಗಿ ಒಂದೆಡೆ ಸೇರುವುದರಿಂದ ಯುದ್ಧಕ್ಕೆ ಸಂಗ್ರಾಮವೆಂದು ಹೆಸರು; **ಸಂಗರಣಾದ್ವಾ. ಸಂಗೃಣಂತೇ ಸಂಶಬ್ದಾಯಂತೇ ಶೂರಾ ಯತ್ರ ಪರಸ್ಪರೇಣ.** ಯುದ್ಧದಲ್ಲಿ ಶೂರರಾದ ಯೋಧರು ವೀರಾಲಾಪಗಳಿಂದ ಪರಸ್ಪರ ನಿಂದಿಸುತ್ತಾ ಗಟ್ಟಿಯಾಗಿ ಶಬ್ದ ಮಾಡುವವು. ಆದ್ದರಿಂದ ಯುದ್ಧಕ್ಕೆ ಸಂಗ್ರಾಮವೆಂದು ಹೆರರು; **ಸಂಗತೌ ಗ್ರಾಮಾವಿತಿ ವಾ** ಇಲ್ಲಿ ಗ್ರಾಮವೆಂದರೆ ಜನಾಂಗವು ಬೇರೆ ಬೇರೆ ದೇಶದವರು. ಎರಡು ಊರಿನವರು ಅಥವಾ ಜನಾಂಗದವರು ಒಂದೆಡೆ ಸೇರಿ ಯುದ್ಧಮಾಡುವುದರಿಂದ ಯುದ್ಧಕ್ಕೆ ಸಂಗ್ರಾಮವೆಂದು ಹೆಸರು.

ತತ್ರ ಖಿಲ ಇತ್ಯೇತಸ್ಯ ನಿಗಮಾ ಭವಂತಿ ||

ಈ ನಲವತ್ತಾರು ಸಂಗ್ರಾಮಗಳಲ್ಲಿ **ಖಿಲ** ಎಂಬ ಶಬ್ದವೂ ಇರುವುದು ಈ ಶಬ್ದದ ಅರ್ಥವಿವರಣೆಮಾಡುವುದಕ್ಕಾಗಿ ಮುಂದಿನ ಋಕ್ಕನ್ನು ಇಲ್ಲಿ ಉದಾಹರಣೆಯಾಗಿ ಕೊಟ್ಟಿದೆ.

**ಇತಿ ನವಮಃ ಖಂಡಃ**

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು.

---

## ಅಥ ದಶಮಃ ಖಂಡಃ

### ಹತ್ತನೆಯ ಖಂಡವು

ಅಭೀ ೩ ದಮೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮು ತ್ರಯಃ ಕರಂತಿ । ಖಲೇ ನ ಪರ್ಷಾನ್ಪ್ರತಿಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ || (ಋ. ಸಂ. ೧೦-೪೮-೭) ಅಭಿಭವಾಮಿದ-ಮೇಕಮೇಕೋಽಸ್ಮಿ ನಿಃಷಹಮಾಣಃ ಸಪತ್ನಾನಭಿಭವಾಮಿ ದ್ವಾ

ಕಿಂ ಮಾ ತ್ರಯಃ ಕುರ್ವಂತ್ಯೇಕ ಇತಾ ಸಂಖ್ಯಾ ದ್ವೌ ದ್ರುತತರಾ ಸಂಖ್ಯಾ ತ್ರಯಸ್ತ್ರೀರ್ಣತಮಾ ಸಂಖ್ಯಾ ಚತ್ವಾರಶ್ಚಲಿತತಮಾ ಸಂಖ್ಯಾ-ಷ್ಟಾವಶ್ನೋತೇರ್ನವ ನ ವನನೀಯಾ ನವಾಪ್ತಾ ವಾ ದಶ ದಸ್ತಾ ದೃಷ್ಟಾರ್ಥಾ ವಾ ವಿಂಶತಿರ್ದ್ವಿರ್ದಶತಃ ಶತಂ ದಶದಶತಃ ಸಹಸ್ರಂ ಸಹಸ್ವದಯುತಂ ನಿಯುತಂ ಪ್ರಯುತಂ ತತ್ತದಭ್ಯಸ್ತಮಂಬುದೋ ಮೇಘೋ ಭವತ್ಯರಣಮಂಬು ತದ್ದೋಽಮ್ಬುದೋಽಮ್ಬುಮದ್ಭಾತೀತಿ ವಾಮ್ಬುಮದ್ಭವತೀತಿ ವಾ ಸ ಯಥಾ ಮಹಾನ್ ಬಹುರ್ಭವತಿ ವರ್ಷಂಸ್ತದಿವಾರ್ಬುದಂ । ಖಲೇನ ಪರ್ಷಾನ್ಪ್ರತಿ ಹನ್ಮಿ ಭೂರಿ ಖಲ ಇವ ಪರ್ಷಾನ್ಪ್ರತಿಹನ್ಮಿ ಭೂರಿ ಖಲ ಇತಿ ಸಂಗ್ರಾಮನಾಮ ಖಲತೇರ್ವಾ ಸ್ಖಲತೇರ್ವಾಯಮಪೀತರಃ ಖಲ ಏತಸ್ಮಾದೇವ ಸಮಾಸ್ಕನ್ನೋ ಭವತಿ । ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ । ಯ ಇಂದ್ರಂ ನ ವಿವಿದುರಿಂದ್ರೋ ಹ್ಯಹಮಸ್ಮ್ಯನಿಂದ್ರಾ ಇತರ ಇತಿ ವಾ ವ್ಯಾಪ್ತಿಕರ್ಮಾಣ ಉತ್ತರೇ ಧಾತವೋ ದಶ ತತ್ರ ದ್ವೇ ನಾಮನೀ ಆಕ್ಷಾಣ ಆಕ್ಷುವಾನ ಆಪಾನ ಆಪ್ನುವಾನೋ ವಧಕರ್ಮಾಣ ಉತ್ತರೇ ಧಾತವಸ್ತ್ರಯಸ್ತ್ರಿಂಶತ್ತನ್ನ ವಿಯಾತ ಇತ್ಯೇತದ್ವಿಯಾತಯತ ಇತಿ ವಾ ವಿಯಾತಯೇತಿ ವಾ । ಆಖಂಡಲ ಪ್ರಹೂಯಸೇ ಆಖಂಡಾ-ಯಿತಃ ಖಂಡಂ ಖಂಡಯತೇಸ್ತಡಿದಿತ್ಯಂತಿಕವಧಯೋಃ ಸಂಸೃಷ್ಟಕರ್ಮ ತಾಡಯತೀತಿ ಸತಃ ॥೧೦॥

---

**ಅಭೀಇದಮೇಕಮೇಕೋ ಅಸ್ಮಿ ಎಂಬ ಋಕ್ಕಿನ ಅರ್ಥವು—**

ಇಂದ್ರನಾದ ನಾನು ಈಗ ಇನ್ನೊಬ್ಬರ ಸಹಾಯವಿಲ್ಲದೆ ನಾನೊಬ್ಬನೇ ಒಬ್ಬ ಶತ್ರುವನ್ನು ಪರಾಭವಗೊಳಿಸುವೆನು. ಶತ್ರುಗಳನ್ನು ಪರಾಭವಗೊಳಿಸುವ ನಾನು ಬಲಶಾಲಿಯಾದ ಇಬ್ಬರು ಶತ್ರುಗಳನ್ನು ಸಹ ಏಕಕಾಲದಲ್ಲಿ ಸೋಲಿಸಬಲ್ಲೆನು. ಅಷ್ಟೇ ಏಕೆ ? ಮೂರು ಮಂದಿ ಶತ್ರುಗಳು ಇದ್ದರೂ ನನ್ನನ್ನು ಏನು ಮಾಡಬಲ್ಲರು ? ರೈತನು ಧಾನ್ಯದ ತೆನೆಯಲ್ಲಿರುವ ಕಾಳುಗಳನ್ನು ಅನಾಯಾಸವಾಗಿ ಬಡಿದು ಉದುರಿಸುವಂತೆ ಶಕ್ತಿಯಿಂದ ಮತ್ತರಾದ ಅನೇಕಮಂದಿ ಶತ್ರುಗಳನ್ನುನಾನು ಕೊಲ್ಲುವೆನು. ನನ್ನ ಶಕ್ತಿಸಾಮರ್ಥ್ಯಗಳನ್ನು ಅರಿಯದ ವಿರೋಧಿಗಳು ನನ್ನನ್ನು ನಿಂದಿಸಲು ಸಮರ್ಥರೇ ?

ಅಭಿಭವಾಮಿದಮೇಕಮೇಕೋಽಸ್ಮಿ ನಿಷ್ಷಹಮಾಣಃ ಸಪತ್ನಾ
ನಭಿಭವಾಮಿ । ದ್ವೌ ಕಿಂ ಮಾ ತ್ರಯಃ ಕುರ್ವಂತಿ । ಏಕ ಇತಾ
ಸಂಖ್ಯಾ ದ್ವೌ ದ್ರುತತರಾ ಸಂಖ್ಯಾ । ತ್ರಯಸ್ತೀರ್ಣತಮಾ ಸಂಖ್ಯಾ ।
ಚತ್ವಾರಶ್ಚಲಿತತಮಾ ಸಂಖ್ಯಾ । ಅಷ್ಟಾವಶ್ನೋತೇಃ । ನವ ನ
ವನನೀಯಾ ನಾವಾಪ್ತಾ ವಾ । ದಶ ದಸ್ತಾ ದೃಷ್ಟಾರ್ಥಾ ವಾ ।
ವಿಂಶತಿರ್ದ್ವಿರ್ದಶತಃ । ಶತಂ ದಶದಶತಃ । ಸಹಸ್ರಂ ಸಹಸ್ವತ್ ।
ಅಯುತಂ ನಿಯುತಂ ಪ್ರಯುತಂ ತತ್ತದಭ್ಯಸ್ತಂ ।

ನನ್ನ ಎದುರಿಗಿರುವ ಒಬ್ಬ ಶತ್ರುವನ್ನು ನಾನೊಬ್ಬನೇ ಇತರರ ಸಹಾಯವಿಲ್ಲದೆ ಸೋಲಿಸಬಲ್ಲೆನು. ಹಾಗೆಯೇ ಅನೇಕ ಶತ್ರುಗಳ ಪ್ರಹಾರಗಳನ್ನು ತಡೆದು ತಪ್ಪಿಸಿಕೊಂಡು ಅವರನ್ನೆಲ್ಲಾ ಸೋಲಿಸುತ್ತೇನೆ ಎಂದು ಇಂದ್ರನ ವಾಕ್ಯವು. ಇಲ್ಲಿ **ಏಕ** ಎಂಬ ಶಬ್ದವು ಸಂಖ್ಯಾವಾಚಕವು. **ಇಣ್-ಗತೌ** ಎಂಬ ಧಾತುವಿನಿಂದ ಏಕ ಎಂಬ ಶಬ್ದವು ನಿಷ್ಪನ್ನವಾಗಿದೆ. ಒಂದು ಎಂದು ಎಣಿಸುವಾಗ ಒಂದು ಎಂಬ ಸಂಖ್ಯೆಯು ಕಳೆದುಹೋಗುವುದು ಎಂದರೆ ಅದನ್ನು ಬಿಟ್ಟು ಮುಂದಿನ ಎರಡು ಎಂಬ ಸಂಖ್ಯೆಯನ್ನು ಪಠಿಸುತ್ತೇವೆ. **ದ್ವೌ-ದ್ರುತತರಾ ಸಂಖ್ಯಾ** । ದ್ವೌ ಎಂದರೆ ಎರಡು. ಈ ಶಬ್ದವು ಓಡು ಎಂಬರ್ಥವಿರುವ **ದ್ರು** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಒಂದಾದ ಕೂಡಲೇ ಎರಡು ಎಂದು ಬೇಗನೆ ಎಣಿಸುವುದರಿಂದ ದ್ವೌ ಎಂಬ ಶಬ್ದಕ್ಕೆ ಎರಡು ಎಂಬರ್ಥ ಬಂದಿದೆ.

**ತ್ರಯಸ್ತೀರ್ಣತಮಾ ಸಂಖ್ಯಾ** ! ತ್ರಯಃ ಮೂರು ಎಂಬ ಶಬ್ದವು ತೄ ದಾಟು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಎರಡು ಎಂಬ ಸಂಖ್ಯೆಯು ದಾಟಿಹೋದ ಮೇಲೆ **ತ್ರಯಃ** ಮೂರು ಎಂಬ ಸಂಖ್ಯೆಯು ನಿರ್ದೇಶವಿರುವುದು. **ಚತ್ವಾರಶ್ಚಲಿತತಮಾ ಸಂಖ್ಯಾ**-ಚತ್ವಾರಃ ನಾಲ್ಕು ಎಂಬ ಸಂಖ್ಯೆಯು ಚಲಿಸು ಎಂಬರ್ಥವುಳ್ಳ ಚಲತಿ ಧಾತುವಿನಿಂದ ನಿಷ್ಪನ್ನವಾಗಿ, ಮೂರಾದ ಕೂಡಲೇ ನಾಲ್ಕು. ನಾಲ್ಕಾದ ಕೂಡಲೇ ಐದು, ಎಂದು ಚಲನಾರ್ಥವನ್ನು ಸೂಚಿಸುವುದು. **ಅಷ್ಟಾವಶ್ನೋತೇಃ ಅಷ್ಟೌ** ಎಂಟು ಎಂಬ ಶಬ್ದವು ಅಶ್-ವ್ಯಾಪಿಸು ಎಂಬರ್ಥವುಳ್ಳ ಅಶ್ನೋತಿಧಾತುವಿನಿಂದ ನಿಷ್ಪನ್ನವಾಗಿ ಈ ಶಬ್ದವು (ಅಥವಾ ಸಂಖ್ಯೆಯು) ಒಂದರಿಂದ ಏಳರವರೆಗೆ ಇರುವ ಸಂಖ್ಯೆಗಳನ್ನು ಒಳಗೊಂಡಿರುವುದರಿಂದ ಅಷ್ಟೌ ಎಂದರೆ ಎಂಟು ಎಂಬರ್ಥವನ್ನು ಸೂಚಿಸುವುದಾಗಿದೆ. **ನವ ನ ವನನೀಯಾ ನವಾಪ್ತಾ ವಾ.** **ನವ** ಒಂಭತ್ತು ಎಂಬ ಶಬ್ದವು **ವನ್**-ಗೆಲ್ಲು ಅಥವಾ ನ+ಅ+ಆಪ್ಲೃ ಹೊಂದದಿರು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ, ಎಂದರೆ ಈ ಸಂಖ್ಯಾಕವಾದ ನವಮೀತಿಥಿಯು ಒಳ್ಳೆಯ ಕಾರ್ಯಕ್ಕೂ ಪ್ರಶಸ್ತವಾಗಿರುವುದಿಲ್ಲವಾದ್ದರಿಂದ ಇದಕ್ಕೆ ನವ ಎಂಬ ಹೆಸರು. **ದಶ ದಸ್ತಾ ದೃಷ್ಟಾರ್ಥಾ ವಾ**-**ದಶ** ಹತ್ತು ಎಂಬ ಶಬ್ದವು **ದಸ್** ಮುಗಿದುಹೋಗು ನ ಎಂಬರ್ಥವುಳ್ಳ **ದಸ್** ಧಾತುವಿನಿಂದಾಗಲಿ **ದೃಶಿರ್-ಪ್ರೇಕ್ಷಣೇ** ನೋಡು ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಏಕೆಂದರೆ, ಹತ್ತು ಸಂಖ್ಯೆಯು ಕಳೆದನಂತರ ಮುಂದೆ ಬರುವ ೧೧, ೧೨, ೧೩ ಮುಂತಾದ ಸಂಖ್ಯೆಗಳಲ್ಲಿ ಹಿಂದೆ ಬಂದ ೧, ೨, ೩ ಮೊದಲಾದ ಸಂಖ್ಯೆಗಳೇ ಮತ್ತೆ ಮತ್ತೆ ಬರುವುದನ್ನು ನಾವು ನೋಡುತ್ತೇವೆ. ಆದ್ದರಿಂದ ಪುನಃ ಪುನಃ ನೋಡುವುದರಿಂದ ಈ ಸಂಖ್ಯೆಗೆ **ದಶ** ಎಂಬ ಹೆಸರು ಬಂದಿದೆ. **ವಿಂಶತಿರ್ದ್ವಿರ್ದಶತಃ**—ವಿಂಶತಿ ಇಪ್ಪತ್ತು ಎಂದರೆ ಎರಡು ಹತ್ತುಗಳು ಎಂದರ್ಥವು. **ಶತಂ ದಶದಶತಃ ಶತಂ**—ನೂರು ಎಂದರೆ ಹತ್ತು ಸಲ ಹತ್ತು ಸಂಖ್ಯೆಗಳು.

**ಸಹಸ್ರಂ ಸಹಸ್ವತ್**—ಸಹಃ ಎಂದರೆ, ಬಲವು ಅಥವಾ ಶಕ್ತಿಯು. **ಸಹಸ್ರಂ**-ಸಾವಿರ ಎಂದರೆ ಸಾವಿರ (ಅನೇಕ) ಸಂಖ್ಯೆಗಳ ನ್ನೊಳಗೊಂಡಿರುವುದರಿಂದ ಬಹಳ ಬಲವುಳ್ಳದ್ದು. ಬಲವುಳ್ಳದ್ದರಿಂದಲೇ **ಸಹಸ್ರಂ** ಎಂದು ಹೆಸರು. **ಅಯುತಂ** ಎಂದರೆ, ಹತ್ತುಸಾವಿರ. ಅದರಂತೆ, **ಅಯುತಂ ನಿಯುತಂ ಪ್ರಯುತಂ ತತ್ತದಭ್ಯಸ್ತಂ । ಅಯುತಂ ನಿಯುತಂ ಪ್ರಯುತಂ** ಎಂಬ ಶಬ್ದಗಳು ಒಂದಕ್ಕಿಂತ ಮತ್ತೊಂದು ಹತ್ತು ಪಾಲಿನಷ್ಟು ಸಂಖ್ಯೆಯನ್ನು ಸೂಚಿಸುತ್ತವೆ. **ಅಯುತಂ** ಎಂದರೆ ಹತ್ತುಸಾವಿರ. **ನಿಯುತಂ** ಎಂದರೆ ಒಂದುಲಕ್ಷ, **ಪ್ರಯುತಂ** ಎಂದರೆ ಹತ್ತುಲಕ್ಷ ಇತ್ಯಾದಿ.

ಅರ್ಬುದೋ ಮೇಘೋ ಭವತಿ ಅರಣಮಂಬು ತದ್ದೋಽಮ್ಬುದಃ । ಅಂಬುಮದ್ಭಾತೀತಿ ವಾ। ಅಂಬುಮದ್ಭವತೀತೀ ವಾ । ಸ ಯಥಾ ಮಹಾನ್ ಬಹುರ್ಭವತಿ ವರ್ಷಂಸ್ತದಿವಾರ್ಬುದಂ। ಖಲೇ ನ ವರ್ಷಾ-ನ್ಪ್ರತಿಹನ್ಮಿ ಭೂರಿ। ಖಲ ಇವ ವರ್ಷಾನ್ ಪ್ರತಿಹನ್ಮಿ ಭೂರಿ । ಖಲ ಇತಿ ಸಂಗ್ರಾಮನಾಮ । ಖಲತೇರ್ವಾ ಸ್ಖಲತೇರ್ವಾ । ಅಯಮಪೀತರಃ ಖಲ ಏತಸ್ಮಾದೇವ ಸಮಾಸ್ಕನ್ನೋ ಭವತಿ । ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ । ಯ ಇಂದ್ರಂ ವಿವಿದುರಿಂದ್ರೋ ಹ್ಯಹಮಸ್ಮ್ಯ ನಿಂದ್ರಾ ಇತರ ಇತಿ ವಾ ।

ಅರ್ಬುದಶಬ್ದಕ್ಕೆ ಮೇಘನೆಂದರ್ಥವು. ಅರಣ ಅಥವಾ ಅಂಬು ಎಂದರೆ, ಉದಕವು. ಉದಕವನ್ನು ಕೊಡುವುದು-ಎಂದರೆ ಸುರಿಸುವುದರಿಂದ ಅರ್ಬುದ ನೆಂದರೆ ಮೇಘವು. ಮೇಘವು ಯಾವ ರೀತಿ ಬಹುದೊಡ್ಡದಾಗಿ ಅಂತರಿಕ್ಷದಲ್ಲಿ ವೃದ್ಧಿಯಾಗಿ ಪ್ರಸರಿಸುವುದೋ ಅದರಂತೆ ಮೇಘನೆಂಬ ಅರ್ಥವನ್ನು ಸೂಚಿಸುವ ಅರ್ಬುದಶಬ್ದಕ್ಕೆ ಕೋಟಿ ಎಂಬ ಸಂಖ್ಯಾವಾಚಕ ಅರ್ಥವಿರುವುದು. ಅಥವಾ ಅರ್ಬುದಶಬ್ದಕ್ಕೆ **ಅಂಬುಮದ್ಭಾತೀತಿ** ವಾ ನೀರಿನಂತೆ ಪ್ರಕಾಶಿಸುವುದರಿಂದ ಮೇಘನೆಂಬ ಹೆಸರು. ಅಥವಾ **ಅಂಬುಮದ್ಭವತೀತಿ ವಾ** ನೀರಿನಂತೆಯೇ ಇರುವುದರಿಂದ ಮೇಘನೆಂದು ಹೆಸರು ಎಂದು ಅರ್ಬುದಶಬ್ದಕ್ಕೆ ಎರಡುವಿಧವಾದ ಅರ್ಥಗಳನ್ನು ಹೇಳಬಹುದು. ಮಳೆಗಾಲದಲ್ಲಿ ಅರ್ಬುದ ಎಂದರೆ ಮೇಘವು ಯಾವ ರೀತಿ ಬಹಳವಾದ್ದವೃಷ್ಟಿಯನ್ನುಸುರಿಸುವುದೋ ಅದರಂತೆ ಅರ್ಬುದಶಬ್ದಕ್ಕೆ ಸಂಖ್ಯಾವಾಚಕ ಅರ್ಥವನ್ನು ಹೇಳುವಾಗ ಅತ್ಯಧಿಕವಾದ ಸಂಖ್ಯೆ ಎಂದರೆ ಕೋಟಿ ಎಂಬರ್ಥವಿರುವುದು. **ಖಲೇ ನ ಪರ್ಷಾನ್ ಪ್ರತಿಹನ್ಮಿ ಭೂರಿ** ಎಂಬ ವಾಕ್ಯದಲ್ಲಿ **ಖಲ** ಶಬ್ದಕ್ಕೆ ಸಂಗ್ರಾಮ ಅಥವಾ ಯುದ್ಧವೆಂದರ್ಥವು ಈ ಖಲಶಬ್ದವು ಬೀಳು ಎಂಬರ್ಥವುಳ್ಳ ಖಲತಿಧಾತುವಿನಿಂದಾಗಲಿ, ಕೊಲ್ಲು ಎಂಬರ್ಥವುಳ್ಳ ಸ್ಖಲಿತಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಕಣದಲ್ಲಿ ಧಾನ್ಯಗಳ ಹೊಟ್ಟನ್ನು ತೂರುವಂತೆ ಯುದ್ಧದಲ್ಲಿ ಶತ್ರುಗಳನ್ನು ಚದುರಿಸಿ ಕೊಲ್ಲುತ್ತೇನೆ ಎಂದು ಇದು ಇಂದ್ರನ ವಾಕ್ಯವು. ಆದ್ದರಿಂದ ಈ ಯುದ್ಧಭೂಮಿಯಲ್ಲಿ ಯುದ್ಧಭಟರು ಸತ್ತುಬೀಳುವುದರಿಂದ ಬೀಳುಎಂಬರ್ಥವುಳ್ಳ ಖಲತಿ ಧಾತುವಿನಿಂದ ಖಲಶಬ್ದವು ನಿಷ್ಪನ್ನವಾಗಿದೆ. ಅಥವಾ ಯುದ್ಧದಲ್ಲಿ ಒಬ್ಬರನ್ನೊಬ್ಬರು ಕೊಲ್ಲುವುದರಿಂದ ಕೊಲ್ಲು ಎಂಬರ್ಥವುಳ್ಳ ಸ್ಖಲಧಾತುವಿನಿಂದ ಖಲ ಎಂಬ ಶಬ್ದವು ನಿಷ್ಪನ್ನವಾಗಬಹುದು. ಈ ಅರ್ಥದಲ್ಲಿ ಖಲಶಬ್ದಕ್ಕೆ ಸಂಗ್ರಾಮ ಅಥವಾ ಯುದ್ಧ ವೆಂಬರ್ಥ ವಿರುವುದು. ಇದಲ್ಲದೆ, ಧಾನ್ಯಗಳನ್ನು ಬಡಿಯುವುದು, ಎಂಬರ್ಥದಲ್ಲಿಯೂ ಈ ಶಬ್ದಪ್ರಯೋಗವಿರುವುದು **ಕಿಂ ಮಾ ನಿಂದತಿ ಶತ್ರವೋಽನಿಂದ್ರಾಃ** ಎಂಬ ವಾಕ್ಯದಲ್ಲಿ ಅನಿಂದ್ರಾಃ ಎಂಬ ಶಬ್ದಕ್ಕೆ ಇಂದ್ರನೊಡನಿಲ್ಲದಿರುವವರುಅಥವಾ ಇಂದ್ರನನ್ನು

ಘಟಿಸದಿರುವವರು ಎಂದರ್ಥವು. ಇಂದ್ರನು ತಮ್ಮ ಕಡೆಗೆ ಇಲ್ಲದ ಎಂದರೆ ಇಂದ್ರನ ಅನುಗ್ರಹವಿಲ್ಲದ ಶತ್ರುಜನರು ಇಂದ್ರನಾದ ನನ್ನನ್ನು ಹೇಗೆ ನಿಂದಿಸಬಲ್ಲರು ಅಥವಾ ಇಂದ್ರನ ಅನುಗ್ರಹವಿಲ್ಲದಿರುವವರು ನಾನೇ ಇಂದ್ರನೆಂದು ಹೇಗೆತಾನೇ ತಿಳಿಯಬಲ್ಲರು.? ಇಂತಹ ಜನರು ನನ್ನನ್ನು ಹೇಗೆತಾನೇ ನಿಂದಿಸಬಲ್ಲರು?

ಅಥ ವ್ಯಾಪ್ತಿಕರ್ಮಾಣಃ । ವ್ಯಾಪ್ತಿಕರ್ಮಾಣ ಉತ್ತರೇ ಧಾತವೋ
ದಶ ||

ಅನಂತರವ್ಯಾಪ್ತಿ ಎಂಬರ್ಥವನ್ನು ಸೂಚಿಸುವ ಹತ್ತು ಧಾತುನಾಮುಗಳನ್ನು ಈಗ ಹೇಳಲಾಗುವುದು.

(೧) ಇನ್ವತಿ (೨) ನಕ್ಷತಿ (೩) ಆಕ್ಷಾಣಃ (೪) ಆನಟ್
(೫) ಆಷ್ಟ (೬) ಆಪಾನಃ (೭) ಅಶತ್ (೮) ನಶತ್
(೯) ಆನಶೇ (೧೦) ಅಶ್ನುತಃ

ಇತಿ ದಶ ವ್ಯಾಪ್ತಿಕರ್ಮಾಣಃ || ೧೮ ||

(೧) **ಇನ್ವತಿ ||** ಹತ್ತು ವ್ಯಾಪ್ತಿಕ್ರಿಯೆಯನ್ನು ಹೇಳುವ ಧಾತುಗಳನ್ನು ಹೇಳುತ್ತಾನೆ. ಇವಿ-ವ್ಯಾಪ್ತೌ ಭ್ವಾದಿ, ಪರಸ್ಮೈಪದೀ. ಇದಿತ್ತಾದುದರಿಂದ ನುಮಾಗಮ. ಲಟ್. ಪಥಕ್ರಿಯಾದಿಗಳಲ್ಲಿ ಹೇಳಿದರೂ ಧಾತುಗಳಿಗೆ ಅನೇಕಾರ್ಥ ವಿರುವುದರಿಂದ ಆಯಾಯ ಅರ್ಥಗಳಲ್ಲಿ ಹೇಳಬಹುದು. ಉದಾಹರಣೆ:—**‘ ಸಖೀನಾಂ ಯೋಗಮಿನ್ವತಿ ’ (ಋ. ಸಂ. ೧-೧-೩೫-೨) ||**

(೨) **ನಕ್ಷತಿ ||** ನಕ್ಷ, ಣಕ್ಷ, ಗತೌ-ಭ್ವಾದಿ. ಪರಸ್ಮೈಪದೀ. ಶಪ್. **‘ ನಕ್ಷದ್ದಾಭಂ ತತುರಿಂ ಪರ್ವತೇ ಷ್ಠಾಮ್ ’ (ಋ. ಸಂ. ೪-೬-೧೩-೨)‘ ವೃದ್ಧಸ್ಯ ಚಿದ್ವರ್ಧತೋ ದ್ಯಾಮಿನಕ್ಷತ’ (ಋ. ಸಂ ೧-೪-೧೦-೪) ||**

(೩) ಆಕ್ಷಾಣಃ || ಅಶೂ-ವ್ಯಾಪ್ತೌ-ಧಾತು. ಲಟ್ ಬಂದಾಗ ಅದಕ್ಕೆ ಶಾನಜಾದೇಶ. ‘ ಸಿಬ್ಬಹುಲಂ ಲೇಟಿ ’ (ಪಾ. ಸೂ. ೩-೧-೩೪) ಸೂತ್ರದಿಂದ ಸಿಪ್. ಬಹುಲಗ್ರಹಣದಿಂದ ಉಪಧಾದೀರ್ಘ. ಆಶ್ + ಸಾನ ಎಂದಿರುವಾಗ ‘ ವ್ರಶ್ಚಭ್ರಸ್ಜ—ಸೂತ್ರದಿಂದ ಶಕಾರಕ್ಕೆ ಷತ್ವ. ಸಕಾರಪರದಲ್ಲಿರುವುದರಿಂದ ಷಢೋಃಕಸಿ (ಪಾ. ಸೂ. ೮-೨-೪೧) ಸೂತ್ರ ದಿಂದ ಕತ್ವ. ಸಕಾರಕ್ಕೆ ‘ ಆದೇಶಪ್ರತ್ಯಯಯೋಃ ’ ಸೂತ್ರದಿಂದ ಷತ್ವ ಅಟ್‌ಕುಪ್ವಾ. — ಸೂತ್ರದಿಂದ ಣತ್ವ. ಉದಾಹರಣೆ:—‘ ಆಕ್ಷಾಣೇ ಶೂರ ವಜ್ರಿವಃ ’ (ಋ. ಸಂ. ೭-೭-೮-೧)

(೪) ಆನಟ್ || ಣಶ-ಅದರ್ಶನೇ. ದಿವಾದಿ, ಪರಸ್ಮೈಪದೀ. ಲುಙ್ ಬಂದಾಗ ಚ್ಲಿ ಬಂದರೆ ಅದಕ್ಕೆ ‘ಮಂತ್ರೇ ಘಸಹ್ವರಣ—’ (ಪಾ. ಸೂ. ೨-೪-೮೦) ಸೂತ್ರದಿಂದ ಲುಕ್. ಧಾತ್ವಾದಿಗೆ ನತ್ವ. ತಿಪ್‌ಬಂದಾಗ ಅದಕ್ಕೆ ಸಂಯೋಗಾಂತಲೋಪ. ‘ಛಂದಸ್ಯಪಿ ದೃಶ್ಯತೇ’ (ಪಾ. ಸೂ. ೬-೪-೭೩) ಸೂತ್ರದಿಂದ ಆಡಾಗಮ. ವ್ರಶ್ಚಾದಿ ಸೂತ್ರದಿಂದ ಶಕಾರಕ್ಕೆ ಷಕಾರ ಬಂದಾಗ ಅದಕ್ಕೆ ಜಶ್ತ್ವದಿಂದ ಡಕಾರ. ಚರ್ತ್ವವಿಕಲ್ಪ. ಅಥವಾ ಅಶೂ-ವ್ಯಾಪ್ತೌ ಧಾತುವಿಗೆ ಲಿಟ

ಬಂದಾಗ ತಕ್ಕೆ ಏಕಾದೇಶ. ವ್ಯತ್ಯಯದಿಂದ ಅದಕ್ಕೆ ಲುಕ್. ಹಿಂದಿನಂತೆ ವ್ರಶ್ಚಾದಿ ಸೂತ್ರದಿಂದ ಷತ್ವಾದಿ. ಉದಾಹರಣೆ— **'ಕಿಮಿಚ್ಛನ್ತೀ ಸರಮಾ ಪ್ರೇದಮಾನಟ್'** (ಋ. ಸಂ. ೮-೬-೫-೧) **'ಘರ್ಮ ಸ್ವೇದೇಭಿರ್ದ್ರವಿಣಂ ವ್ಯಾನಟ್'** (ಋ. ಸಂ. ೮-೨-೧೬-೧) **"ಉಪಾಂಶುನಾ ಸಮಮಸೃತತ್ವಮಾನಟ್ "**(ಋ. ಸಂ. ೩-೮-೧೦-೧) ॥

(೫) **ಆಷ್ಟ** ॥ ಪೂರ್ವೋಕ್ತವಾದ ಧಾತುವಿಗೆ ಲುಙ್ ಬಂದಾಗ ಅದಕ್ಕೆ ತಾದೇಶ. ಚ್ಲಿಗೆ ಲುಕ್. ಶಕಾರಕ್ಕೆ ಷತ್ವ ಬಂದಾಗ ಅದನ್ನು ನಿಮಿತ್ತೀಕರಿಸಿ ಷ್ಟುತ್ವ. ಉದಾ:—**'ಆಷ್ಟ ಮವಿದಾರ್ಥಗಾಧಮ್'** ॥

(೬) **ಆಪಾನಃ** ॥ ಆಪ್ಲೃ-ವ್ಯಾಪ್ತೌ. ಸ್ವಾದಿ. ಪರಸ್ಮೈಪದೀ. ವ್ಯತ್ಯಯದಿಂದ ಲಟಿಗೆ ಶಾನಚ್. ವಿಕರಣ ಬರುವುದಿಲ್ಲ. ವಧಾರ್ಥಕವಾದ ಅತಥಾತುವಿನ ರೂಪವೆಂದು ಸ್ಕಂದಸ್ವಾಮಿಯ ಮತ. ಉದಾಹರಣೆ—**'ಆಪಾನಾಸೋ ವಿವಸ್ವತಃ'** (ಋ. ಸಂ. ೬-೭-೩೪-೫) ನಿರುಕ್ತಭಾಷ್ಯ ನೋಡಬೇಕು. ॥

(೭) **ಅಶತ್** ॥ ಪೂರ್ವೋಕ್ತವಾದ ಅಶೂಧಾತುವಿಗೆ ವ್ಯತ್ಯಯದಿಂದ ಲುಙ್ ಬಂದಾಗ ಚ್ಲಿಗೆ ಹಿಂದಿನಂತೆ ಲುಕ್. 'ಬಹುಲಂ ಛಂದಸ್ಯಮಾಙ್ಯೋಗೇಽಪಿ' (ಪಾ. ಸೂ. ೬-೪-೭೫) ಸೂತ್ರದಿಂದ ಆಡಾಗಮ ಬರುವುದಿಲ್ಲ. ಇದಕ್ಕೆ ನಿಗಮ ಹುಡುಕಬೇಕು.

(೮) **ನಶತ್** ॥ ಅದರ್ಶನಾರ್ಥಕ ಣಶಧಾತುವಿಗೆ ಲೇಟ್ 'ಲೇಟೋಡಾಟೌ' ಸೂತ್ರದಿಂದ ಆದಕ್ಕೆ ಅಡಾಗಮ. 'ಇತಶ್ಚಲೋಪಃ ಪರಸ್ಮೈಪದೇಷು' (ಪಾ. ಸೂ. ೩-೪-೯೭) ಸೂತ್ರದಿಂದ ತಿಪಿನ ಇಕಾರಕ್ಕೆ ಲೋಪ. ಉದಾಹರಣೆ— **'ಸ ಧೀತಯೇ ತೇ ನಶತ್'** ॥ **"ನ ಕಿಃ ಶವಾಂಸಿ ತೇ ನಶತ್"** (ಋ. ಸಂ. ೬-೫-೨-೩)

(೯) **ಆನಶೇ** ॥ ಪೂರ್ವೋಕ್ತವಾದ ಅಶಧಾತುವಿಗೆ ಲಟ್ ಬಂದಾಗ ದ್ವಿತ್ವಾದಿ. ಉದಾಹರಣೆ—**'ನ ಕಿಃ ಸ್ವಶ್ವ ಆನಶೇ'** (ಋ. ಸಂ. ೧-೬-೬-೧) ॥

(೧೦) **ಅಶ್ನುತೇ** ॥ ಪೂರ್ವೋಕ್ತ ಧಾತುವಿನ ಲಟಿನರೂಪ. ಶ್ನುವಿಕರಣ. ಉದಾಹರಣೆ—**'ಅತಪ್ತತನೂ ರ್ನತದಾಮೋ ಅಶ್ನುತೇ'** (ಋ. ಸಂ. ೭-೩-೮-೧) **'ವ್ಯಶ್ನುಹಿ ತರ್ಪಯಾಕಾಮ ಮೇಷಾಮ್'** (ಋ. ಸಂ. ೧-೪-೧೮-೪) ॥

ಹೀಗೆ ಹತ್ತು ವ್ಯಾಪ್ತಿಕ್ರಿಯೆ ಹೇಳುವ ಧಾತುಗಳು ॥ ೧೮ ॥

---

## ತತ್ರ ದ್ವೇ ನಾಮನೀ ಆಕ್ಷ್ಣಾಣ ಅಶ್ನುವಾನ ಆಪಾನ ಆಪ್ನುವಾನಃ ॥

ಈ ಹತ್ತು ಧಾತುನಾಮಗಳಲ್ಲಿ **ಆಕ್ಷ್ಣಾಣಾ ಎಂಬುದು** ಧಾತುವಲ್ಲ. ವ್ಯಾಪಿಸಿರುವವನು ಎಂಬ ಅಶ್ನುವಾನ ವಿಶೇಷಣ ವಾಚಕದ ಅರ್ಥವನ್ನು ಹೇಳುವುದು. ಅದರಂತೆ **ಆಪಾನ** ಹೊಂದಿರುವವನು (ಆಪ್ನುವಾನ) ಎಂಬ ವಿಶೇಷಣಾರ್ಥವನ್ನು ಸೂಚಿಸುವುದು.

॥ ಅಥ ವಧಕರ್ಮಾಣಃ । ವಧಕರ್ಮಾಣಿ ಉತ್ತರೇ ಧಾತವಸ್ತ್ರಯಸ್ತ್ರಿಂಶತ್ ॥

ಈಗ ಕೊಲ್ಲು, ಸಂಹಾರಮಾಡು ಎಂಬರ್ಥವಿರುವ ವಧಕರ್ಮನಾಮಗಳು ಮುಂದೆ ಹೇಳುವಂತೆ ಮೂವತ್ತಮೂರು ಧಾತುಗಳಿವೆಯೆಂಬುದನ್ನು ಹೇಳುತ್ತಾರೆ.

(೧) ದಭ್ನೋತಿ (೨) ಶ್ನಥತಿ (೩) ಧ್ವರತಿ (೪) ಧೂರ್ವತಿ (೫) ವೃಣಕ್ತಿ (೬) ವೃಶ್ಚತಿ (೭) ಕೃಣ್ವತಿ (೮) ಕೃನ್ತತಿ ॥ (೯) ಶ್ವಸಿತಿ (೧೦) ನಭತೇ (೧೧) ಅರ್ದಯತಿ (೧೨) ಸ್ತೃಣಾತಿ (೧೩) ಸ್ನೇಹಯತಿ (೧೪) ಯಾತಯತಿ (೧೫) ಸ್ಫುರತಿ (೧೬) ಸ್ಫುಲತಿ (೧೭) ನಿವಪನ್ತು (೧೮) ಅವತಿರತಿ (೧೯) ವಿಯಾತಃ (೨೦) ಆತಿರತ್ (೨೧) ತಲಿತ್ (೨೨) ಆಖಣ್ಡಲ (೨೩) ದ್ರೂಣಾತಿ (೨೪) ರಮ್ಣಾತಿ (೨೫) ಶೃಣಾತಿ (೨೬) ಶಮ್ನಾತಿ (೨೭) ತೃಣೇಢ್ಬಿಹಿ (೨೮) ತಾಡ್ವಿಹಿ । (೨೯) ನಿತೋಶತೇ (೩೦) ನಿಬರ್ಹಯತಿ (೩೧) ಮಿನಾತಿ (೩೨) ಮಿನೋತಿ (೩೩) ಧಮತಿ ॥

ಇತಿ ತ್ರಯಸ್ತ್ರಿಂಶತ್ ವಧಕರ್ಮಾಣಃ

(೧) **ದಭ್ನೋತಿ** ॥ ಮೂವತ್ತಾರು ಹಿಂಸಾರ್ಥಕ ಧಾತುಗಳನ್ನು ಹೇಳುತ್ತಾನೆ. 'ದಮ್ಭು–ದಮ್ಭೇ'. ಸ್ವಾದಿ. ಪರಸ್ಮೈಪದೀ. ಶ್ನುವಿಕರಣ. ತಿಪ್‌ನಿಮಿತ್ತವಾಗಿ ಅದಕ್ಕೆ ಗುಣ. ಉದಾಹರಣೆ—**'ನ ತ್ವಾ ಕೇತಾ ಆ ದಭ್ನುವನ್ತಿ ಭೂರ್ಣಯಃ' (ಋ. ಸಂ. ೧–೪–೨೦–೨)** ॥

(೨) **ಶ್ನಥತಿ** ॥ ಶ್ನಥ, ಕ್ನಥ, ಕ್ರಥ—ಹಿಂಸಾಯಾಮ್. (ಭ್ವಾ–ಪ) ಶಪ್. ಲಟ್. ಉದಾಹರಣೆ—**'ಶ್ನಥದ್ ವೃತ್ರಮುತ ಸನೋತಿ ವಾಜಮ್'** (೪–೮–೨೭–೧) **'ನವ ಪುರೋ ನವತಿಂ ಚ ಶ್ನಥಿಷ್ಟಮ್'** (**ಋ. ಸಂ. ೫–೬–೨೩–೫**) ॥

(೩) **ಧ್ವರತಿ** ॥ ಹಿಂಸಾರ್ಥದಲ್ಲಿ ಧ್ವರಧಾತು ಹೇಳಿದೆ.

(೪) **ಧೂರ್ವತಿ** ॥ **'ತುರ್ವ, ಧುರ್ವ, ದುರ್ವ, ಥುರ್ವ–ಹಿಂಸಾರ್ಥಾಃ'** (ಭ್ವಾ–ಪ) 'ಉಪಧಾಯಾಞ್ಚ' (ಪಾ. ಸೂ. ೮–೨–೭೮) ಸೂತ್ರದಿಂದ ಧಾತುವಿನ ರೇಫವ ಉಪಧೆಗೆ ದೀರ್ಘ. ಉದಾಹರಣೆ–**'ಧೂರಸಿ ಧೂರ್ವ ಧೂರ್ವನ್ತಂ ಧೂರ್ವ' (ಯ. ವಾ. ಸಂ. ೧–೮)**

(೫) **ವೃಣಕ್ತಿ** ॥ ವೃಜೀ–ವರ್ಜನೇ. ರುಧಾದಿ. ಶ್ನಮ್‌ವಿಕರಣ. ಇದು ಙಿತ್ತಾಗುವುದರಿಂದ ಗುಣ ಬರುವುದಿಲ್ಲ. ಜಕಾರಕ್ಕೆ ತಕಾರ ನಿಮಿತ್ತವಾಗಿ ಕುತ್ವ, ಚರ್ತ್ವ. ಉದಾಹರಣೆ—**'ನಿ ಚಕ್ರೇಣ ರಥ್ಯಾ ದುಷ್ಪದಾ ವೃಣಕ್' (ಋ. ಸಂ. ೧–೪–೧೬–೪)**



(೬) **ವೃಶ್ಚತಿ** ॥ 'ವ್ರಶ್ಚ–ಛೇಧನೇ.' ತುದಾದಿ. ಶವಿಕರಣ. ಇದು ಜಿತ್ತಾದುದರಿಂದ 'ಗ್ರಹಿಜ್ಯಾವಯಿ—' (ಪಾ. ಸೂ. ೬–೧–೧೬) ಸೂತ್ರದಿಂದ ಧಾತುವಿನ ರೇಫಕ್ಕೆ ಋಕಾರರೂಪ ಸಂಪ್ರಸಾರಣ. ಪೂರ್ವರೂಪ. ಉದಾಹರಣೆ— **'ವೃಶ್ಚಾ ಮಧ್ಯಂ ಪ್ರತ್ಯಗ್ರ್ಯಂ ಶೃಣೀಹಿ'** (ಋ. ಸಂ. ೩–೨–೪–೨) **'ವಿವೃಶ್ಚ ವಜ್ರೇಣ ವೃತ್ರಮಿಂದ್ರಃ'** (ಋ. ಸಂ. ೧–೪–೨೮–೫) ॥

(೭) **ಕೃಣ್ವತಿ** ॥ 'ಕೃವಿ–ಹಿಂಸಾಕರಣಯೋಃ' ಧಾತು. (ಭ್ವಾ–ಪ) ಇದಿತ್ತಾದುದರಿಂದ ನುಮಾಗಮ. ವ್ಯತ್ಯಯ ದಿಂದ 'ಧಿನ್ವಿಕೃಣ್ವ್ಯೋರಚ' (ಪಾ. ಸೂ. ೩–೧–೮೦) ಸೂತ್ರದಿಂದ ಶ್ನು, ಅತ್ವ ಬರುವುದಿಲ್ಲ. ನಿಗಮ ಹುಡುಕಬೇಕು.

(೮) **ಕೃನ್ತತಿ** ॥ ಕೃತೀ–ಛೇದನೇ. ತುದಾದಿ. 'ಶೇಮುಚಾದೀನಾಮ್' (ಪಾ–ಸೂ–೮೧–೫೯) ಸೂತ್ರದಿಂದ ನುಮಾಗಮ ಬರುತ್ತದೆ. ಅದಕ್ಕೆ ಅನುಸ್ವಾರ, ಪರಸವರ್ಣ. ಉದಾಹರಣೆ— **'ವಿ ದಸ್ಯೂಂ ಯೋನಾವಕೃತೋ ವೃಥಾ ಷಾಟ್'** (ಋ. ಸಂ. ೧–೫–೪–೪)

(೯) **ಶ್ವಸಿತಿ** ॥ ಶ್ವಸ–ಪ್ರಾಣನೇ. ಲಟ್. ॥

(೧೦) **ನಭತೇ** ॥ 'ಣಭ-ತುಭ–ಹಿಂಸಾಯಾಮ್' ಭ್ವಾದಿ, ಆತ್ಮನೇಪದೀ. ಲಟ್–ಉದಾ–**'ನಭನ್ತಾಮನ್ಯಕೇ ಸಮೇ'** (ಋ. ಸಂ. ೬–೩–೨೨–೧) ॥

(೧೧) **ಅರ್ದಯತಿ** ॥ 'ಅರ್ದ–ಹಿಂಸಾಯಾಮ್' (ಭ್ವಾ-ಪರ) ಲಟ್. **'ವೃತಂ ವಿಪರ್ವಮರ್ದಯತ್'** (ಋ. ಸಂ. ೨–೫–೬–೧) ॥

(೧೨) **ಸ್ತೃಣಾತಿ** ॥ 'ಸ್ತೃಞ್–ಆಚ್ಛಾದನೇ' ಕ್ರ್ಯಾದಿ ಮತ್ತು ರುಧಾದಿ. ಶ್ನಾವಿಕರಣ. **'ಕದು ವೃತ್ರಘ್ನೋ ಅಸ್ತೃತನ್'** (ಋ. ಸಂ. ೬–೪–೪೯–೫) ॥

(೧೩) **ಸ್ನೇಹಯತಿ** ॥ 'ಷ್ಣಿಹ–ಸ್ನೇಹನೇ' ಚುರಾದಿ. ಧಾತ್ವಾದಿಗ್ಷಸತ್ವಬಂದಾಗ ಣಕಾರಕ್ಕೆ ನಕಾರ. ಸ್ವಾರ್ಥದಲ್ಲಿ ಣಿಚ್‌ಬಂದಾಗ ಲಘೂಪಧಗುಣ. ಣಿಚಿನ ಇಕಾರಕ್ಕೆ ಗುಣ, ಅಯಾದೇಶ **'ಯಃ ಸ್ನೇಹಿತೇಷು ಪೂರ್ವ್ಯ'** (ಋ.ಸಂ. ೧–೫ ೨೧–೨) ಇಲ್ಲಿ ವಧಾರ್ಥವೆಂದು ಸ್ಕಂದಸ್ವಾಮಿಯ ಭಾಷ್ಯ.

(೧೪) **ಯಾತಯತಿ** ॥ 'ಯತಿ–ನಿಕಾರೋಪಸ್ಕಾರಯೋಃ' ಚುರಾದಿ. ಣಿಚ್. ಹಿಂದಿನಂತೆ ಣಿಚ್ ಬಂದಾಗ ಣಿತ್ತಾದುದರಿಂದ ಉಪಧಾದೀರ್ಘ. **'ಅಯಾತಯನ್ತ ಕ್ಷಿತಯೋ ನವಗ್ವಾಃ'** (ಋ. ಸಂ. ೧–೩–೨–೧) ॥

(೧೫) **ಸ್ಫುರತಿ** ॥ (೧೬) **ಸ್ಫುಲತಿ** ॥ 'ಸ್ಫುರ–ಸ್ಫುರಣೇ' ಸ್ಫುಲ–ಸಂಚಲನೇ 'ತುದಾದಿ. ಕುಟಾದಿಪಠಿತವಾದುದ ರಿಂದ ಗುಣ ಬರುವುದಿಲ್ಲ. ಉದಾ–ಸದಾ **ಕ್ಷುಮ್ಪಮಿವ ಸ್ಫುರತ್** (ಋ. ಸಂ. ೧–೬–೬–೩) **'ಅಶ್ನೀರ್ ಇವೋ ವಿಸ್ಫುರಂತೀ ಅಮಿತ್ರಾನ್** (ಋ. ಸಂ. ೫–೧–೧೦–೪) ವಧಕ್ರಿಯಾಧಾತುಮಧ್ಯದಲ್ಲಿ ಪಾಠಮಾಡಿರುವುದರಿಂದ ವಧಾರ್ಥ ಹೇಳಬೇಕು.

(೧೭) **ನಿವಪನ್ತು** ॥ ನಿಉಪಸರ್ಗ. 'ಟುವಪ್-ಬೀಜಸನ್ತಾನೇ' (ಭ್ವಾ–ಉ–) 'ಆದಿರ್ಞಿಟುಡವಃ' ಸೂತ್ರ ದಿಂದ ಆದಿಯ ಟು ಇತ್ತಾಗುತ್ತದೆ. ಲೋಟ್ ಪ್ರಥಮ ಪುರುಷ ಬಹುವಚನಾಂತರೂಪ. ಉದಾಃ—**'ಅನ್ಯಂತೇ ಅಸ್ಮಿನ್ನಿವಪನ್ತು ಸೇನಾಃ'** (ಋ. ಸಂ. ೨–೭–೧೮–೧)

(೧೮) ಅವತಿರತಿ ॥ ಅವ ಉಪಸರ್ಗ. 'ತೄ-ಪ್ಲವನತರಣಯೋಃ'. ಲಟ್. ಶಪ್. ಗುಣ. ರ ಪರವಾಗಿ ಬಂದರೆ ತರತಿ ಎಂದಾಗುತ್ತದೆ. 'ಬಹುಲಂ ಛಂದಸಿ' (ಪಾ-ಸೂ-೭-೪-೭೮) ಸೂತ್ರದಿಂದ ಇಲ್ಲಿ ಗುಣಕ್ಕೆ ಅಪವಾದವಾಗಿ ಇತ್ವರಪರವಾಗಿ ಬಂದಿದೆ. ಉದಾ:—**'ಅವಾತಿರಜ್ಜ್ಯೋತಿಷಾಗ್ನಿಸ್ತಮಾಂಸಿ'** (**ಋ. ಸಂ. ೪-೫-೧೧-೧**) **'ಯದಿಂದ್ರ ಶಾರದೀರವಾತಿರಃ (ಋ. ಸಂ. ೨-೧-೨೦-೪)** ॥

(೧೯) **ವಿಯಾತಃ** ॥ 'ತತ್ರ ವಿಯಾತ ಇತ್ಯೇತದ್ ವಿಯಾತಯುನ ಇತಿ ವಿಯಾತಯೇತಿ ವಾ' (ನಿರು-೩-೧೦) ಭಾಷ್ಯದಲ್ಲಿ ಸ್ಕಂದಸ್ವಾಮಿಯು ಹೀಗೆ ಸಮಾಧಾನ ತೋರಿಸಿರುತ್ತಾನೆ. ಯಾತಯತಿ ಹಿಂದೆ ಹೇಳಿದೆ. ವಿ ಉಪ ಸರ್ಗಪೂರ್ವದಲ್ಲಿರುವಾಗ ಯಪ್ರತ್ಯಯ ಬಂದಾಗ ಯಾತಯ ಎಂದಾಗುತ್ತದೆ. ಧಾರಯುಃ ಇದರಂತೆಯೇ ಆಗಿ ಪ್ರಸಿದ್ಧವಾಗಿವೆ. ಸಂಬೋಧನಾವಿಭಕ್ತಿಯಲ್ಲಿ 'ಹೇ ವಿಯಾತಯ' ಎಂದು ರೂಪ. 'ವಿಯಾತಯಿತರ್' ಎಂದು ಪಾಠಾಂತರವೂ ಇದೆ. ಧಾರಯು ಇತ್ಯಾದಿ ದೃಷ್ಟಾಂತರ್ದರ್ಶನದಿಂದ 'ವ್ಯತ್ಯಯೋ ಬಹುಲಮ್' ಎಂಬುದರಿಂದ ಇದರ ಮೇಲೆ 'ಅನುಪಸರ್ಗಾಲ್ಲಿಂಪವಿಂದ—' (ಪಾ. ಸೂ. ೩-೧-೧೩೮) ಸೂತ್ರದಿಂದ ಶಪ್ರತ್ಯಯವೂ ಬರುತ್ತದೆಂದು ತೋರಿಸಿದಂತಾಗುತ್ತದೆ. ಇದಕ್ಕೆ ಉದಾಹರಣೆ ಹುಡುಕಬೇಕು.

(೨೦) **ಆತಿರತ್** ॥ ಆಙ್ ಉಪಸರ್ಗಪೂರ್ವಕವಾದ ತೄಧಾತುವಿಗೆ ಲಙ್ ಬಂದಿದೆ. ಹಿಂದಿನಂತೆ ವ್ಯತ್ಯಯದಿಂದ ಇತ್ವ ಬಂದಿದೆ. ಉದಾಹರಣೆ—**"ಇಂದ್ರಃ ಪೂರ್ಭಿರಾತಿರತ್ ದಾಸಮರ್ಕೈಃ"**

(೨೧) **ತಲಿತ್** ॥ ಅಂತಿಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೨-೧೬-೧)

(೨೨) **ಆಖಣ್ಡಲ** ॥ ಖಡ, ಖಡಿ, ಕಡಿ-ಭೇದೇ. ಚುರಾದಿಪರಸ್ಮೈಪದೀ. ಆಙ್‌ಉಪಸರ್ಗಪೂರ್ವದಲ್ಲಿರುವಾಗ ಇವಕ್ಕೆ 'ಮಂಗೇರಲಚ್' (ಉ. ೫-೭೨) ಸೂತ್ರದಿಂದ ವಿಹಿತವಾದ ಅಲಚ್‌ಪ್ರತ್ಯಯವು ಬಹುಲಗ್ರಹಣದಿಂದ ಬರುತ್ತದೆ. ಇದಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ, ಪರಸವರ್ಣ. ಉದಾಹರಣೆ—**"ಆಖಣ್ಡಲ ಪ್ರಹೂಯಸೇ"** **(ಋ. ಸಂ. ೬-೧-೨೪)**

(೨೩) **ದ್ರೂಣಾತಿ** ॥ 'ದ್ರೂ-ಹಿಂಸಾಯಾಮ್.' ಕ್ರ್ಯಾದಿ. ಶ್ನಾವಿಕರಣ. ರೇಫವಿರುವುದರಿಂದ ಣತ್ವ ಬಂದಿದೆ. **'ಶೃಷ್ಟೀಃ ಪುನು ಪ್ರಸಿತಿಂ ದ್ರೂಣಾನಃ'** (ಋ. ಸಂ. ೩-೪-೨೩-೧)

(೨೪) **ರಮ್ಣಾತಿ** ॥ 'ರಮು-ಕ್ರೀಡಾಯಾಮ್' ಇಲ್ಲಿ ವಧಾರ್ಥ. (ಛ್ವಾ-೮) ವ್ಯತ್ಯಯದಿಂದ ಶಪಿಗೆ ಬದಲಾಗಿ ಶ್ನಾವಿಕರಣ, ಪರಸ್ಮೈಪದ ಬರುತ್ತದೆ. ಉದಾಹರಣೆ ಹುಡುಕಬೇಕು.

(೨೫) **ಶೃಣಾತಿ** ॥ 'ಶೄ-ಹಿಂಸಾಯಾಮ್' ಕ್ರ್ಯಾದಿ. ಶ್ನಾವಿಕರಣ. ಪ್ವಾದಿಗಣದಲ್ಲಿ ಸೇರಿರುವುದರಿಂದ ಹ್ರಸ್ವ. ಋವರ್ಣಪರದಲ್ಲಿ ನಕಾರವಿದ್ದರೂ ಣತ್ವ ಬರುತ್ತದೆ. ಉದಾಹರಣೆ—**'ಶೃಣಾತಿ ವೀಲುರುಜತಿ ಸ್ಥಿರಾಣಿ'** (**ಋ. ಸಂ. ೮-೪-೧೫-೧**) ॥

(೨೬) **ಶಮ್ನಾತಿ** ॥ 'ಶಮು-ಉಪಶಮೇ. ದಿವಾದಿ. ವ್ಯತ್ಯಯದಿಂದ ಶವಿಕರಣಕ್ಕೆ ಶ್ನಾ ಬರುತ್ತದೆ. ಉದಾ:— **"ಶಿಶಿರಂ ಜೀವನಾಯಕಮ್'** (ನಿರು-೧-೧೦) ಎಂಬಲ್ಲಿ ಹಿಂಸಾರ್ಥಕ ಶೄಧಾತು ಅಥವಾ ಶಮುಧಾತುವಿನ ರೂಪ ಶಿಶಿರ ವೆಂದಾಗುತ್ತದೆಂದು ಸ್ಕಂದಸ್ವಾಮಿ ಭಾಷ್ಯ.

(೨೭) **ತೃಣೇಷ್ವಹಿ** ‖ 'ತೃಹಿ–ಹಿಂಸಾಯಾಮ್.' ರುಧಾದಿ. ಶ್ನಮ್‌ವಿಕರಣ. ಲಟನಲ್ಲಿ ತಿಪ್ ಬಂದಾಗ ಛಾಂದಸವಾದುದರಿಂದ ಏತ್ವ ಬರುತ್ತದೆ. ಉದಾಹರಣೆ ಹುಡುಕಬೇಕು.

(೨೮) **ತಾಷ್ವಹಿ** ‖ 'ತಡ–ಆಘಾತೇ' ಧಾತು. ಚುರಾದಿ. ಲಟ್ ಮಧ್ಯಮಪುರುಷ ಏಕವಚನ. ಪೃಷೋದರಾದಿ ಗಣಪಠಿತವಾದುದರಿಂದ ಅಭಿಮತ ರೂಪಸಿದ್ಧಿಯಾಗಿದೆ. ಉದಾಹರಣೆ—**"ವಿ ಶತ್ರೂನ್ತಾಷ್ವಹಿ ವಿ ಮೃಧೋ ನುದಸ್ವ"** (ಋ. ಸಂ. ೮–೮–೩೮–೨)

(೨೯) **ನಿತೋಶತೇ** ‖ ಇದು ಕೇವಲ ನಿರುಕ್ತ ಪಠಿತವಾದ ಧಾತು. ಉದಾಹರಣೆ—**"ಮನ್ದೀ ಮದಾಯ ತೋಶತೇ"** (ಋ–ಸಂ–೭–೫–೧೩–೪) **"ಇಂದುರಿಂದ್ರಾಯ ತೋಶತೇ ನಿತೋಶತೇ"** (ಋ–ಸಂ೧೭–೫–೨೧–೧೧) **"ಸುನಾಸೀರಾ ಹವಿಷಾ ತೋಶಮಾನಾಃ"** ‖

(೩೦) **ನಿಬರ್ಹಯತಿ** ‖ ನಿ ಉಪಸರ್ಗ 'ಬರ್ಹ–ಹಿಂಸಾಯಾಮ್' ಚುರಾದಿ. ಣಿಚ್. ಗುಣ. ಅಯಾದೇಶ ಉದಾ–**ಬರ್ಹಿಷ್ಯತೇ ನಿ ಸಹಸ್ರಾಣಿ ಬರ್ಹಯಃ** (ಋಂ. ಸಂ. ೧–೪–೧೬–೧) ‖

(೩೧) **ಮಿನಾತಿ** (೩೨) **ಮಿನೋತಿ** (೩೩) **ಧನುತಿ** ಇವು ಮೂರೂ ಗತಿಕರ್ಮ ಧಾತುನಾಮಗಳಲ್ಲಿ ವ್ಯಾಖ್ಯಾತ ವಾಗಿವೆ. (೨-೧೪–೫೦–೫೧) ಉದಾಹರಣೆ—**ನ ತಾ ಮಿನಂತಿ ಮಾಯಿನೋ ನಧೀರಾಃ** (ಋ. ಸಂ. ೩–೪–೯–೧) **'ನ ಮಿನಂತಿ ವೇಧಸಃ' 'ಉಶಿಗ್ಮ್ಯೇ ನಾಮಿಮೀತ ವರ್ಣಾವ್'** (ಋ. ಸಂ. ೨–೫–೨೪–೫) ‖ **'ದ್ಯಾವಾ ವರ್ಣಂ ಚರತ ಆಮಿನಾನೇ'**(ಋ. ಸಂ. ೧–೮–೧–೨) **'ಉತ ದ್ವಿಬರ್ಹಾ ಅಮಿನಃ ಸಹೋಭಿಃ'** (ಋ. ಸಂ. ೪–೬–೭–೧) ‖ **ವಿ ಸಪ್ತರಶ್ಮಿರಧಮತ್ತಮಾಂಸಿ** (ಋ. ಸಂ. ೩–೭–೨೬–೪) ‖

ಹೀಗೆ ಮೂವತ್ತಮೂರು ವಧಾರ್ಥವನ್ನು ಹೇಳುವ ಧಾತುಗಳು ‖೧೯ ‖

### ತತ್ರ ವಿಯಾತ ಇತ್ಯೇತತ್ ವಿಯಾತಯತ ಇತಿ ವಾ ವಿಯಾತಯೇತಿ ವಾ ‖

ಈ ವಧನಾಮಗಳ ಮಧ್ಯದಲ್ಲಿ **ವಿಯಾತಃ** ಎಂಬ ಶಬ್ದವು ಎರಡು ವಿಧವಾದ ಅರ್ಥವನ್ನು ಸೂಚಿಸುವುದು. ಶತ್ರುಗಳನ್ನು ನಾನಾಪ್ರಕಾರವಾಗಿ ಹಿಂಸಿಸಿ ನಾಶಮಾಡುವವನು ಅಥವಾ ಯಾವ ಪುರುಷನು ತನ್ನ ಶತ್ರುಗಳನ್ನು ಸ್ತೋತೃಜನರಿಂದ ಬೇರ್ಪಡಿಸಿ ನಾಶಮಾಡುವವನು ಎಂದರ್ಥವು.

### ಆಖಂಡಲಪ್ರಹೂಯಸೇ । ಆಖಂಡಯಿತಃ ಖಂಡಂ ಖಂಡಯತೇಃ ‖

ಆಖಂಡಲ ಮತ್ತು ಆಖಂಡಯಿತಃ ಎಂಬಿವು ಪ್ರಥಮಾವಿಭಕ್ತಿಯಲ್ಲಿ ಸಂಬೋಧನವು. ಖಂಡ ಎಂದರೆ ತುಂಡು ಎಂದರ್ಥವು. ಮೇಘವನ್ನು (ಪ್ರಹರಿಸಿ) ತುಂಡುಮಾಡುವವನು, ಇಂದ್ರನು. ಎಲೈ ಮೇಘವನ್ನು ವಜ್ರಾಯುಧದಿಂದ ತುಂಡುಮಾಡಿ ಕತ್ತರಿಸುವ ಇಂದ್ರನೇ, ಎಂದಭಿಪ್ರಾಯವು. **ಖಂಡಂ** ಎಂಬ ಶಬ್ದವು ತುಂಡುಮಾಡು ಎಂಬರ್ಥವುಳ್ಳ **ಖಂಡಯತಿ** ಧಾತುವಿನಿಂದ ನಿಷ್ಪನ್ನವಾಗಿದೆ.

ಈ ಕೆಳಗಿನ ಋಕ್ಕು ಇದಕ್ಕೆ ಉದಾಹರಣೆಯಾಗಿದೆ—

**ಶಾಚಿಗೋ ಶಾಚಿಪೂಜನಾಯಂ ರಣಾಯ ತೇ ಸುತಃ ।**
**ಆಖಂಡಲ ಪ್ರಹೂಯಸೇ ॥**

**(ಋ. ಸಂ. ೮-೧೭-೧೨)**

ಈ ಋಕ್ಕಿನ ಅರ್ಥವು-ಮೇಘವನ್ನು ವಜ್ರಾಯುಧದಿಂದ ಸೀಳಿ ಕತ್ತರಿಸುವವನೂ ಪ್ರಖ್ಯಾತವಾದ ಪೂಜೆಯುಳ್ಳವನೂ ಆದ ಎಲೈ ಇಂದ್ರನೇ, ನಿನ್ನ ಹರ್ಷಕ್ಕಾಗಿ ಈ ಸೋಮರಸವು ಹಿಂಡಲ್ಪಟ್ಟಿದೆ. ಶತ್ರುನಾಶಕನಾದ ಎಲೈ ಇಂದ್ರನೇ, ನೀನು ಉತ್ತಮವಾದ ಸ್ತುತಿಗಳಿಂದ ಕರೆಯಲ್ಪಡುತ್ತೀಯೆ.

॥ ತಳಿದಿತ್ಯಂತಿಕವಧಯೋಃ ಸಂಸೃಷ್ಟಕರ್ಮ ತಾಡಯತೀತಿ ಸತಃ ॥

**ತಳಿತ್** (**ತಡಿತ್**) ಎಂಬ ಶಬ್ದವು ಸಮೀಪದಲ್ಲಿ ಮತ್ತು ಕೊಲ್ಲುವದು **ಎಂಬೆರಡುವಿಧ** ಅರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು ಈ ಶಬ್ದಕ್ಕೆ ಪ್ರಹರಿಸು ಎಂಬರ್ಥವಿರುವುದರಿಂದ ವಧಶಬ್ದಕ್ಕೆ ಇದು ಅನುಸಾರವಾಗಿದೆ. ವಿದ್ಯುತ್ತಿಗೂ (ಸಿಡಿಲು) ತಡಿತ್ ಎಂಬ ಅರ್ಥವಿರುವುದು ಏಕೆಂದರೆ ಸಿಡಿಲೂ ಸಹ ಪ್ರಹರಿಸಿ ಕೊಲ್ಲುವುದು.

**ಇತಿ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು.

---

## ಅಥ ತೃತೀಯಾಧ್ಯಾಯೇ ಏಕಾದಶಃ ಖಂಡಃ

### ಹನ್ನೊಂದನೆಯ ಖಂಡವು

ತ್ವಯಾ ವಯಂ ಸುವೃಧಾ ಬ್ರಹ್ಮಣಸ್ಪತೇ ಸ್ಪಾರ್ಹಾ ವಸು ಮನುಷ್ಯಾದದೀಮಹಿ । ಯಾ ನೋ ದೂರೇ ತಡಿತೋ ಯಾ ಅರಾತಯೋಽಭಿ ಸಂತಿ ಜಮ್ಭಯಾ ತಾ ಅನಪ್ನಸಃ । ತ್ವಯಾ ವಯಂ ಸುವರ್ಧಯಿತ್ರಾ ಬ್ರಹ್ಮಣಸ್ಪತೇ ಸ್ಪೃಹಣೀಯಾನಿ ವಸೂನಿ ಮನುಷ್ಯೇಭ್ಯ ಆದದೀಮಹಿ ಯಾಶ್ಚ ನೋ ದೂರೇ ತಡಿತೋ ಯಾಶ್ಚಾನ್ತಿಕೇಽರಾತಯೋಽದಾನಕರ್ಮಾಣೋ ವಾ ದಾನಪ್ರಜ್ಞಾ ವಾ ಜಮ್ಭಯ ತಾ ಅನಪ್ನಸೋಽಪ್ನ ಇತಿ ರೂಪನಾಮಾಪ್ನೋತೀತಿ ಸತೋ ವಿದ್ಯುತ್ತ-

ಡಿಧ್ಭವತೀತಿ ಶಾಕಪೂಣಿಃ ಸಾ ಹ್ಯವತಾಡಯತಿ ದೂರಾಚ್ಚ ದೃಶ್ಯತೇಽಪಿ ತ್ವಿದಮನ್ತಿಕನಾಮ್ನೈವಾಭಿಪ್ರೇತಂ ಸ್ಯಾತ್ । ದೂರೇ ಚಿತ್ ಸನ್ತಡಿದಿವಾತಿ-ರೋಚಸೇ । ದೂರೇಽಪಿ ಸನ್ನನ್ತಿಕ ಇವ ಸನ್ದೃಶ್ಯಸ ಇತಿ ವಜ್ರನಾಮಾನ್ಯುತ್ತರಾಣ್ಯಷ್ಟಾದಶ ವಜ್ರಃ ಕಸ್ಮಾತ್ ವರ್ಜಯತೀತಿ ಸತಸ್ತತ್ರ ಕುತ್ಸ ಇತ್ಯೇತತ್ ಕೃಂತತೇರ್ಋಷಿಃ ಕುತ್ಸೋ ಭವತಿ ಕರ್ತಾ ಸ್ತೋಮಾನಾಮಿತ್ಯೌಪಮನ್ಯವೋಽತ್ರಾಪ್ಯಸ್ಯ ವಧಕರ್ಮೈವ ಭವತಿ ತತ್ಸಖ ಇಂದ್ರಃ ಶುಷ್ಣಂ ಜಘಾನೇತ್ಯೈಶ್ವರ್ಯಕರ್ಮಾಣ ಉತ್ತರೇ ಧಾತವಶ್ಚತ್ವಾರ ಈಶ್ವರನಾಮಾನ್ಯುತ್ತರಾಣಿ ಚತ್ವಾರಿ ತತ್ರೇನ ಇತ್ಯೇತತ್ ಸನಿತ ಐಶ್ವರ್ಯೇಣೇತಿ ವಾ ಸನಿತಮನೇನೈಶ್ವರ್ಯಮಿತಿ ವಾ ॥ ೧೧ ॥

———

'ತ್ವಯಾ ವಯಂ ಸುವೃಧಾ ಬ್ರಹ್ಮಣಸ್ಪತೇ ಸ್ಪಾರ್ಹಾ ವಸು ಮನುಷ್ಯಾ ದದೀಮಹಿ। ಯಾ ನೋ ದೂರೇ ತಳಿತೋ ಯಾ ಅರಾತಯೋಽಭಿ ಸಂತಿ ಜಮ್ಭಯಾ ತಾ ಅನಪ್ನಸಃ। ತ್ವಯಾ ವಯಂ ಸುವರ್ಧಯಿತ್ರಾ ಬ್ರಹ್ಮಣಸ್ಪತೇ ಸ್ಪಹಣೀಯಾನಿ ವಸೂನಿ ಮನುಷ್ಯೇಭ್ಯ ಆದದೀಮಹಿ । ಯಾಶ್ಚ ನೋ ದೂರೇ ತಳಿತೋ ಯಾಶ್ಚಾಂತಿಕೇಽರಾತ-ಯೋಽದಾನ ಕರ್ಮಾಣೋ ವಾಽದಾನಪ್ರಜ್ಞಾ ವಾ ಜಮ್ಭಯ ತಾ ಅನಪ್ನಸಃ ॥ ಅಪ್ನ ಇತಿ ರೂಪನಾಮಾಪ್ನೋತೀತಿ ಸತಃ ॥ ೧ ॥

**ತ್ವಯಾ ವಯಂ** (ಋ. ಸಂ. ೨-೨೩-೯) ಎಂಬ ಋಕ್ಕಿನ ಅರ್ಥವು—

ಎಲೈ ಬ್ರಹ್ಮಣಸ್ಪತಿಯೇ, ನಮ್ಮನ್ನು ವೃದ್ಧಿಗೆ ತರುವವನಾದ ನಿನ್ನ ಸಹಾಯದಿಂದಲೇ ನಾವು ಅತ್ಯಂತ ಅಪೇಕ್ಷಿತವಾದ ಧನಗಳನ್ನು ದಾತರಾದ ಮಾನವರಿಂದ ಪಡೆಯುತ್ತೇವೆ. ದೂರದಲ್ಲಿರುವ ಯಾವ ಶತ್ರುಗಳಾಗಲೀ ಹತ್ತಿರದಲ್ಲಿರುವ ಶತ್ರುಗಳಾಗಲಿ ನಮ್ಮನ್ನು ಸೋಲಿಸಿ ಹಿಂಸಿಸುವರೋ ಕರ್ಮಹೀನರಾದ ಆ ಶತ್ರುಗಳನ್ನು ನಾಶಮಾಡು.

**ತ್ವಯಾ ವಯಂ ಸುವರ್ಧಯಿತ್ರಾ ಬ್ರಹ್ಮಣಸ್ಪತೇ**—ಎಲೈ ಬ್ರಹ್ಮಣಸ್ಪತಿಯೇ ನಾವು ನಿನ್ನಿಂದ ಯಾವಾಗಲೂ ಅಭಿವೃದ್ಧಿಯಾಗುತ್ತಿರುವ **ಸ್ಪಾರ್ಹಾ ವಸು ಮನುಷ್ಯಾ ದದೀಮಹಿ**—ಮತ್ತು ನಾವು ಅಪೇಕ್ಷಿಸುವ ಧನಾದಿಗಳನ್ನು ನಿನ್ನ ಅನುಗ್ರಹದಿಂದ ಮನುಷ್ಯರ ಮೂಲಕ ಪಡೆಯುವಂತಾಗಲಿ. **ಯಾಶ್ಚ ನೋ ದೂರೇ ತಳಿತೋ ಯಾಶ್ಚಾಂತಿಕೇ** ನಮ್ಮ ಬಳಿಯಿಂದ ದೂರದಲ್ಲಿರುವ ಅಥವಾ ಸಮೀಪದಲ್ಲಿರುವ **ಅರಾತಯಃ ಅದಾನಕರ್ಮಾಣೋ ವಾದಾನಪ್ರಜ್ಞಾ ವಾ**—

ಯಾವುದನ್ನೂ ಕೊಡದಿರುವ ಅಥವಾ ನಮಗೆ ಏನನ್ನಾಗಲಿ ಕೊಡಲು ಮನಸ್ಸಿಲ್ಲದ ನಮ್ಮ ಶತ್ರುಗಳನ್ನು **ಜಂಭಯ ವಾ ಅನಪ್ನಸಃ**—ಸ್ತಂಭನಗೊಳಿಸು ಮತ್ತು ರೂಪರಹಿತರನ್ನಾಗಿ ಮಾಡು. **ಅಪ್ನ** ಎಂದರೆ ರೂಪಕ್ಕೆ ಹೆಸರು ಏಕೆಂದರೆ—**ಆಪ್ನೋತೀತಿ ಸತಃ**—(ಶರೀರದ ಆಕಾರವನ್ನು) ಹೊಂದುವುದರಿಂದ ಅಪ್ನವೆಂದರೆ ರೂಪವು.

ವಿದ್ಯುತ್ತಳಿದ್ಭವತೀತಿ ಶಾಕಪೂಣಿಃ । ಸಾ ಹ್ಯವತಾಡಯತಿ ದೂರಾಚ್ಚ ದೃಶ್ಯತೇ ॥ ಅಪಿ ತ್ವಿದಮನ್ತಿಕನಾಮೈವಾಭಿಪ್ರೇತಂ ಸ್ಯಾತ್–'ದೂರೇ ಚಿತ್ ಸನ್ತಳಿದಿವಾತಿರೋಚಸೇ । ದೂರೇಽಪಿ ಸನ್ನಂತಿಕ ಇವ ಸನ್ದೃಶ್ಯಸ ಇತಿ ॥ ೨ ॥

**ತಡಿಶ್** ಶಬ್ದಕ್ಕೆ ವಿದ್ಯುತ್ (ಸಿಡಿಲು) ಎಂದೂ ಹೆಸರೆಂದು ಶಾಕಪೂಣಿ ಎಂಬ ಆಚಾರ್ಯರ ಅಭಿಪ್ರಾಯವು ಏಕೆಂದರೆ, ವಿದ್ಯುತ್ತು (ಸಿಡಿಲು) ತಾಡಿಸುತ್ತದೆ ಅಥವಾ ಪ್ರಹರಿಸುತ್ತದೆ. ಮತ್ತು ದೂರದಲ್ಲಿದ್ದರೂ ಸಮೀಪದಲ್ಲಿರುವಂತೆ ಕಾಣುತ್ತದೆ. ಆದ್ದರಿಂದ ಈ ಶಬ್ದವನ್ನು ಅಂತಿಕನಾಮಗಳಲ್ಲಿ (ಹತ್ತಿರವಿರುವ ವಸ್ತುಗಳ ಹೆಸರುಗಳಲ್ಲಿ) ಸೇರಿಸಲಾಗಿದೆ. **ದೂರೇ ಚಿತ್ ಸಂತಳಿ ದಿವಾತಿರೋಚಶೇ** ಎಂಬ ಋಕ್ಕು ಈ ಅರ್ಥವನ್ನು ಎಂದರೆ, ದೂರದಲ್ಲಿದ್ದರೂ ಹತ್ತಿರದಲ್ಲಿರುವಂತೆ ಕಾಣಿಸುತ್ತದೆ ಎಂಬರ್ಥವನ್ನು ಸೂಚಿಸುತ್ತದೆ.

ಉದಾಹರಣೆಯಾಗಿ ಕೊಟ್ಟಿರುವ ಋಕ್ಕು—

**ಯೋ ವಿಶ್ವತಃ ಸುಪ್ರತೀಕಃ ಸದೃಜ್ಜಸಿ ದೂರೇ ಚಿತ್ಸಂತಳಿದಿವಾತಿರೋಚಸೇ ।**
**ರಾತ್ರ್ಯಾಶ್ಚಿದಂಧೋ ಅತಿ ದೇವ ಪಶ್ಯಸ್ಯಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥**

(ಋ. ಸಂ. ೧–೯೪–೭)

ಇದರ ಅರ್ಥವು—ಎಲೈ ಅಗ್ನಿಯೇ, ನೀನು ರಮ್ಯವಾದ ದೇಹವುಳ್ಳವನಾಗಿ ಎಲ್ಲಾ ಕಡೆಗಳಲ್ಲಿಯೂ ಒಂದೇ ಸಮನಾಗಿ ಯಾವ ವ್ಯತ್ಯಾಸವೂ ಇಲ್ಲದೆ ಪ್ರಕಾಶಿಸುತ್ತೀಯೆ. ನೀನು ಅತಿ ದೂರದಲ್ಲಿದ್ದರೂ ಹತ್ತಿರದಲ್ಲಿರುವಂತೆಯೇ ಬೆಳಗುತ್ತೀಯೆ. ನಿನ್ನ ಪ್ರಭೆಯಿಂದ ರಾತ್ರಿಕಾಲದ ಕಗ್ಗತ್ತಲೆಯನ್ನೂ ಸಹ ಭೇದಿಸಿ ಪ್ರಕಾಶಿಸುತ್ತೀಯೆ. ನಿನ್ನ ಸ್ನೇಹವಿರುವುದರಿಂದ ನಾವು ಯಾವ ವಿಧವಾದ ಹಿಂಸೆಯನ್ನೂ ಅನುಭವಿಸದಿರುವಂತಾಗಲಿ.

(೧) ದಿದ್ಯುತ್ (೨) ನೇಮಿಃ (೩) ಹೇತಿಃ (೪) ನಮಃ (೫) ಪವಿಃ (೬) ಸೃಕಃ (೭) ವೃಕಃ (೮) ಬಧಃ (೯) ವಜ್ರಃ (೧೦) ಅರ್ಕಃ (೧೧) ಕುತ್ಸಃ (೧೨) ಕುಲಿಶಃ (೧೩) ತುಜಃ (೧೪) ತಿಗ್ಮಮ್ (೧೫) ಮೇನಿಃ (೧೬) ಸ್ವಧಿತಿಃ (೧೭) ಸಾಯಕಃ (೧೮) ಪರಶುಃ ॥

ಇತ್ಯಷ್ಟಾದಶ ವಜ್ರನಾಮಾನಿ ॥ ೨೦ ॥

(೧) **ದಿದ್ಯುತ್** ॥ ದ್ಯುತ–ದೀಪ್ತೌ. ಧಾತು. (ಭ್ವಾ. ಆ.) 'ದ್ಯುತಿಗಮಿ ಜುಹೋತೀನಾಂ ದ್ವೇ ಚ' (ಪಾ. ಸೂ. ೩–೨–೧೭೮. ವಾ. ೨)ವಾರ್ತಿಕದಿಂದ ಕ್ವಿಪ್ ಬಂದಾಗ ಧಾತುವಿಗೆ ದ್ವಿತ್ವ. 'ದ್ಯುತಿಸ್ವಾಪ್ಯೋಃ ಸಂಪ್ರಸಾರಣಮ್' (ಪಾ. ಸೂ. ೭–೪–೬೭) ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ. (ಇತಾರ) ಉಜ್ವಲಕಾಂತಿಯುಳ್ಳದ್ದಾದುದರಿಂದ ಪ್ರಕಾಶಿಸುತ್ತದೆ. ದೋ. ಅವಖಂಡನೇ. ಧಾತುವಿಗೂ ಕ್ವಿಪ್ ಬಂದರೆ ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಅಭಿಮತ ರೂಪವಾಗುತ್ತದೆ. ದ್ಯತಿ ಇತಿ ದಿದ್ಯುತ್. ಶತ್ರುಗಳನ್ನು ಕತ್ತರಿಸುವುದರಿಂದ ವಜ್ರವು ದಿದ್ಯುತ್‌ಪದವಾಚ್ಯವಾಗುತ್ತದೆ. ಉದಾಹರಣೆ :—**ಅಸ್ತುರ್ನ ದಿದ್ಯುತ್ತ್ವೇಷ ಪ್ರತೀಕಾ** (**ಋ. ಸಂ. ೧–೫–೧೦–೪**) '**ಯತ್ರಾ ವೋ ದಿದ್ಯುದ್ರದತಿ**' (**ಋ. ಸಂ. ೨–೪–೨–೧**) '**ಯಾತೇದಿದ್ಯುದವಸೃಷ್ಯ**' (**ಋ. ಸಂ. ೫–೪–೧೩–೩**) ॥

(೨) **ನೇಮಿಃ** ॥ ಣೀಞ್–ಪ್ರಾಪಣೇ ಧಾತು. 'ನಿಯೋ ಮಿಃ' (ಉ–೪–೪೩) ಸೂತ್ರದಿಂದ ಮಿಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತು ಇಕಾರಕ್ಕೆ ಗುಣ. 'ನಯತಿ ಶತ್ರೂನ್ ವಿನಾಶಮ್' ಶತ್ರುನಾಶವನ್ನುಂಟುಮಾಡುತ್ತದೆ, ಇದರಿಂದ ಶತ್ರು ಐಶ್ವರ್ಯ ಹೊಂದಲ್ಪಡುತ್ತದೆ ಎಂದರ್ಥ. ಅಥವಾ ಣಮು–ಪ್ರಹ್ವತ್ವೇ. ಧಾತು. ಛಂದಸಿ' ಗಮಾದಿಭ್ಯೋ ದರ್ಶನಾತ್' ಎಂಬ ಭಾಷ್ಯವಾರ್ತಿಕದಿಂದ ಇದಕ್ಕೆ ಕಿಪ್ರತ್ಯಯ. ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವಬಂದಾಗ 'ಅತ ಏಕಹಲ್ಮಧ್ಯೇ'—(ಪಾ. ಸೂ. ೬–೪–೧೨೦) ಸೂತ್ರದಿಂದ ಏತ್ವ, ಅಭ್ಯಾಸಲೋಪ. ಇಲ್ಲಿ ಣ್ಯಂತಾರ್ಥ ಗರ್ಭೀಕೃತ ವಾಗಿದೆ. ಶತ್ರುಗಳನ್ನು, ಬಗ್ಗಿಸುತ್ತದೆ. ಉದಾಹರಣೆ — **ಅರಿಷ್ಟನೇಮಿಂ ಪೃತನಾಜಮಾಶುಮ್**' (ಋ. ಸಂ. **೮–೮–೩೬–೧**) ॥

(೩) **ಹೇತಿಃ** ॥ ಹಿಂಸಾರ್ಥಕ ಹನಧಾತು ಅಥವಾ ಹಿಧಾತುವಿಗೆ 'ಊತಿಯೂತಿ ಜೂತಿ ಸಾತಿಹೇತಿ ಕೀರ್ತಿಯಶ್ಚ' (ಪಾ. ಸೂ. ೩–೩–೯೭) ಸೂತ್ರದಿಂದ ಕ್ತಿನ್‌ಬಂದಾಗ ಹನ್ ಧಾತುವಿನಕಾರಕ್ಕೆ ಇಕಾರಾದೇಶ, ಹಿಧಾತುವಿಗೆ ಗುಣವು ನಿಪಾತಿತವಾಗುತ್ತದೆ. ಇದರಿಂದ ಶತ್ರುಗಳು ಕೊಲ್ಲಲ್ಪಡುತ್ತಾರೆ, ಇದರಿಂದ ಜಯ ಹೊಂದಲ್ಪಡುತ್ತದೆ, ಅಥವಾ ಐಶ್ವರ್ಯ ಅಭಿವೃದ್ಧವಾಗುತ್ತದೆ ಎಂದರ್ಥ. ಉದಾಹರಣೆ :—**ಬ್ರಹ್ಮದ್ವಿಷೇ ತಪುಷಿ ಹೇತಿಮಸ್ಯ** (**ಋ. ಸಂ- ೩.೨.೪.೨**)

(೪) **ನಮಃ** ॥ ನಮ್‌ಧಾತುವಿಗೆ ಅಸುನ್‌ಪ್ರತ್ಯಯ. ನಮಸ್ ಸಾಂತಪದವಾಗುತ್ತದೆ. ನೇಮಿಪದದಂತೆಯೇ **ಅರ್ಥ ತಿಳಿಯಬೇಕು. ಉದಾಹರಣೆ ವಜ್ರಪರ್ಯಾಯದಲ್ಲಿ ಹುಡುಕಬೇಕು.**

(೫) **ಪವಿಃ** ॥ ಗತ್ಯರ್ಥಕವಾದ ಪವಿಧಾತುವಿಗೆ 'ಅಚಇಃ' (ಉ–೪–೧೩೪) ಸೂತ್ರದಿಂದ ಇಪ್ರತ್ಯಯ. ಶತ್ರುವನ್ನು ಕುರಿತು ಹೋಗುವುದು, ಇದರಿಂದ ಕೀರ್ತಿ ಹೊಂದಲ್ಪಡುತ್ತದೆ ಎಂದರ್ಥವಾಗುತ್ತದೆ. ಉದಾಹರಣೆ—'**ಸೃಕಂ ಸಂಶಾಯ ಪವಿಮಿಂದ್ರ ತಿಗ್ಮಮ್**' (ಋ. ಸಂ. ೮–೮–೩೮–೨) ಸೃಕ, ತಿಗ್ಮಪದಗಳು ಇಲ್ಲಿ ಕ್ರಿಯಾವಾಚಕಗಳು.

(೬) **ಸೃಕಃ** ॥ ಗತ್ಯರ್ಥಕವಾದ ಸೃಧಾತುವಿಗೆ 'ಸೃವೃಭೂಸುಷಿಮುಷಿಭ್ಯಃ ಕಕ್' (ಉ. ೩–೩೯) ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಹಿಂದೆ ಹೇಳಿದ ನಿಗಮವೇ ಉದಾಹರಣೆ.

(೭) **ವೃಕಃ** ॥ 'ವೃಕ–ಆದಾನೇ' (ಭ್ವಾ–ಆ) 'ಇಗುಪಧಜ್ಞಾಪ್ರೀಕಿರಃ ಕಃ' (ಪಾ. ಸೂ. ೩–೧–೧೩೫) ಸೂತ್ರದಿಂದ ಇಗುಪಧವಾದುದರಿಂದ ಕಪ್ರತ್ಯಯ. ಕ ಇತ್ತಾಗಿ ಅ ಉಳಿಯುತ್ತದೆ. ಕಿತ್ತಾದುದರಿಂದ ಗುಣವಿಲ್ಲ. ಶತ್ರು ಪ್ರಾಣವನ್ನು ಸ್ವೀಕರಿಸುತ್ತದೆ. ವೃಜ್‌ಧಾತುವಿಗೆ ಕ ಬಂದರೂ ಪೃಷೋದರಾದಿಯಲ್ಲಿ ಸೇರಿರುವುದರಿಂದ ಅಭಿಮತರೂಪ ವಾಗುತ್ತದೆ. ಹೇತಿಪದದಂತೆ ಅರ್ಥ ತಿಳಿಯಬೇಕು. ಉದಾಹರಣೆ ಹುಡುಕಬೇಕು.

(೮) ಬಧಃ ॥ ಬಧಧಾತುವಿಗೆ ಘಞ್. 'ಜನಿವಧ್ಯೋಶ್ಚ' (ಪಾ. ಸೂ. ೭-೩-೩೫) ಸೂತ್ರದಿಂದ ವೃದ್ಧಿನಿಷೇಧ ಬರುತ್ತದೆ. ಹೇಳಿಸಿದವಂತೆ ಅರ್ಥ ತಿಳಿಯಬೇಕು. ಉದಾಹರಣೆ—**'ವೃತ್ರಸ್ಯ ಯದ್ ಭೃಷ್ಟಿಮತಾ ಬಧೇನ' (ಋ. ಸಂ. ೧-೪-೧೪-೫) 'ಇಂದ್ರೋ ಅಸ್ಯಾ ಅವನಧರ್ಜಭಾರ ॥**

(೯) ವ್ರಜಃ ॥ ವಜ್ರ-ಗತೌ. ಧಾತು. (ಭ್ವಾ-ಪ) 'ಋಜ್ರೇಂದ್ರ—' (ಉ. ೨-೨೭) ಸೂತ್ರದಿಂದ ರನ್‌ಪ್ರತ್ಯಯ ಬಂದು ನಿಪಾತಿತನಾಗಿದೆ. ಅಥವಾ ವೃಧಾತುವಿಗೆ ಹೇತುಮಣ್ಣಿಚ್ ಬಂದು ಅವರ ಮೇಲೆ ರಕ್‌ಪ್ರತ್ಯಯ. ಗುಣ. ರಪರವಾಗಿ ಬಂದಾಗ ರೇಫಕ್ಕೆ ಲೋಪ. ಶತ್ರುಗಳನ್ನು ಪ್ರಾಣಗಳಿಂದ ವಿಯೋಗಗೊಳಿಸುತ್ತದೆ. ಕೆಲವರು ಈ ಧಾತುವಿಗೆ ವಿನಾಶಾರ್ಥವನ್ನು ಹೇಳುತ್ತಾರೆ. ಆಗ ಶತ್ರುಗಳನ್ನು ನಾಶಗೊಳಿಸುತ್ತದೆಂದರ್ಥ. ಉದಾಹರಣೆ—**'ತ್ವಷ್ಟಾಸ್ಮೈ ವಜ್ರಂ ಸ್ವರ್ಯಂತತಕ್ಷ' (ಋ. ಸಂ. ೧-೨-೩೬-೨) ॥**

(೧೦) **ಅರ್ಕಃ ॥ ಅರ್ಚ-ಪೂಜಾಯಾಮ್** ' ಧಾತು ' ಕೃದಾಧಾರಾರ್ಚಿಕಲಿಭ್ಯಃ ಕಃ (ಉದಾ-೩-೩೮) ಸೂತ್ರದಿಂದ ಕಪ್ರತ್ಯಯ ' ಚೋಃ ಕುಃ ' (ಪಾ. ಸೂ ೮-೨-೩೦) ಸೂತ್ರದಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ ಉದಾ- **ಇಂದ್ರಃ ಪರ್ಭಿದಾತಿರದ್ದಾಸಮರ್ಕೈಃ (ಋ. ಸಂ. ೩-೨-೧೫-೧)**

(೧೧) **ಕುತ್ಸಃ ॥** ಛೇದನಾರ್ಥಕ ಕೃತೀಧಾತುವಿಗೆ **' ಸ್ತುವೃಶ್ಚಿಕೃತ್ಯೃಪಿಭ್ಯಃ ಕಿತ್ ' (ಉ-೩-೬೩)** ಸೂತ್ರದಿಂದ ಸಪ್ರತ್ಯಯ ಬಹುಲಗ್ರಹಣದಿಂದ ಧಾತುವಿನ ಅಕಾರಕ್ಕೆ ಉತ್ವ. ಶತ್ರುಗಳನ್ನು ಕತ್ತರಿಸುವುದು ವಜ್ರಾಯುಧ ಅಥವಾ ' ಕುತ್ಸಕ್ಷೇಪಣೇ " ಧಾತು ಚುರಾದಿ ಆತ್ಮನೇಪದೀ. ಘಞ್ ಇದರಿಂದ ಶತ್ರುಗಳನ್ನು ದೂರ ಎಸೆಯುತ್ತಾನೆ. ಉದಾ-**ಸದ್ಯೋ ದಸ್ಯೂನ್ ಪ್ರಮೃಣ ಕುತ್ಸೇನ** (ಋ- ಸಂ. ೩-೫-೧೯-೨) ಇಲ್ಲಿ ಛಾಂದಸವಾದುದರಿಂದ ಯಕಾರ ಅಧಿಕವಾಗಿ ಬಂದಿದೆ- ॥

(೧೨) **ಕುಲಿಶಃ ॥** ಕುಲಪರ್ವತಗಳನ್ನೂ ಪಕ್ಷಚ್ಛೇದದಿಂದ ಚಿಕ್ಕದಾಗಿ ಮಾಡುತ್ತದೆ ಎಂಬರ್ಥದಲ್ಲಿ ಕುಲಶಬ್ದ ಉಪಪದವಾಗಿರುವಾಗ ' ಶೋ-ತನೂಕರಣೇ ಧಾತುವಿಗೆ ' ಆತೋನುಪಸರ್ಗೇ ಕಃ (ಪಾ-ಸೂ-೩-೨-೩) ಸೂತ್ರದಿಂದ ಕಪ್ರತ್ಯಯ ಧಾವಿಗೆ ಆತ್ವಬಂದಾಗ · ಆತೋಲೋಪಃ '-ಸೂತ್ರದಿಂದ ಲೋಪ. ಪೃಷೋದರಾದಿಗಣಪಠಿತವಾದುದರಿಂದ ಲಕಾರದ ಅಕಾರಕ್ಕೆ ಇಕಾರಾದೇಶ. ಅಥವಾ ಶದ್ಲೃ-ಶಾತನೇ (ಭ್ವಾ-ತು-ಪ) ಣ್ಯಂತಾರ್ಥಗರ್ಭೀಕೃತವಾಗಿರುವಾಗ ಕುಲಪದ ಉಪಪದವಾಗಿರುವಾಗ ' ಅನ್ಯೇಷ್ವಪಿ ದೃಶ್ಯತೇ (ಪಾ-ಸೂ-೩.೨-೧೦೧) ಸೂತ್ರದಿಂದ ಡಪ್ರತ್ಯಯ ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ(ಅದ್) ಹಿಂದಿನಂತೆ ಅಕಾರಕ್ಕೆ ಇಕಾರ. ಮೇಘದ ಕೊನೆ, ಪರ್ವತದ ಉನ್ನತ ಭಾಗಕ್ಕೆ ಕುಲವೆಂದು ಹೆಸರು. ಅದನ್ನು ತೀಕ್ಷ್ಣಗೊಳಿಸುವುದು ವಜ್ರ. ಉದಾ- **' ಸ್ಕಂಧಾಂಸೀವ ಕುಲಿಶೇನಾವಿವೃಕ್ಣಹಿ: (ಋ. ಸಂ.)**

(**೧೩) ತುಜಃ** ॥ ಹಿಂಸಾರ್ಥಕ ತುಜಧಾತುವಿಗೆ ಪಚಾದಿಗಣಪಠಿತವಾದುದರಿಂದ ಅಚ್ ಪ್ರತ್ಯಯ. ಹೇಳಿ ಪದದಂತೆ ಅರ್ಥತಿಳಿಯಬೇಕು. ಉದಾಹರಣೆ ಹುಡುಕಬೇಕು.

(೧೪) **ತಿಗ್ಮಮ್** ॥ 'ತಿಜ-ನಿಶಾನೇ' ಚುರಾದಿ. 'ಯುಜಿರುಚಿ ತಿಜಾಂ ಕುಶ್ಚ (ಉ-೧-೧೪೩) ಸೂತ್ರದಿಂದ ಮಕ್‌ಪ್ರತ್ಯಯ. ಕುತ್ವ. (ಗಕಾರ). ಹರಿತವಾಗಿಮಾಡಲ್ಪಡುವುದು. 'ಉತ್ಸಾಹಾರ್ಥಕವಾದ ತಿಜಧಾತುವಿನಿಂದ ತಿಗ್ಮ ಪದವಾಗಿದೆ. ಯುದ್ಧಮಾಡುವವರನ್ನು ಉತ್ಸಾಹಗೊಳಿಸುತ್ತದೆ' ಎಂದು ಮಾಧವನ ವ್ಯಾಖ್ಯಾನ. ಉದಾ:— **'ವಿ ತಿಗ್ಮೇನ ವೃಷಭೇಣಾ ಪುರೋಭೇತ್' (ಋ. ಸಂ. ೧-೩-೩-೪) ॥**

(೧೫) **ಮೇನಿಃ** ॥ ಕಾಂತ್ಯರ್ಥಕ ಮನಧಾತುವಿಗೆ 'ಉತ್ಸರ್ಗತಶ್ಛಂದಸಿ ಗಮಾದಿಭ್ಯೋ ದರ್ಶನಾತ್' ಎಂಬ ಭಾಷ್ಯವಾರ್ತಿಕದಿಂದ ಕಿಪ್ರತ್ಯಯ. ಲಿಡ್ವದ್ಭಾವದಿಂದ ದ್ವಿತ್ವ, ಅಭ್ಯಾಸಲೋಪ, ಏತ್ವ. ಆಯುಧವಾದುದರಿಂದ ಬಯಸಲ್ಪಡುವುದು. ಅಥವಾ ಹಿಂಸಾರ್ಥಕ ಮಿಞ್‌ಧಾತುವಿಗೆ 'ವೀಜ್ಯಾತ್ವರಿಭ್ಯಃ' (ಉ.೪-೪೮) ಸೂತ್ರವಿಹಿತವಾದ ನಿಪ್ರತ್ಯಯ ಬಹುಲ ಗ್ರಹಣದಿಂದ ಇದಕ್ಕೆ ಬರುತ್ತದೆ. ಗುಣ. ಹೇತಿಪದದಂತೆ ಅರ್ಥವಾಗುತ್ತದೆ. ಉದಾಹರಣೆ ಹುಡುಕಬೇಕು.

(೧೬) **ಸ್ವಧಿತಿಃ** ॥ ಸ್ವಶಬ್ದ ಉಪಪದವಾಗಿರುವಾಗ ಧಾರಣಾರ್ಥಕ ಧಿಧಾತುವಿಗೆ ಕ್ತಿನ್‌ಪ್ರತ್ಯಯ. ಇದರಿಂದ ತನ್ನ ಧನವು ಧರಿಸಲ್ಪಡುತ್ತದೆ. ಉದಾಹರಣೆ—**'ನ ಸ್ವದಿತಿರ್ವನನ್ವತಿ'** (ಋ. ಸಂ. ೬-೭-೧೨-೪)

(೧೭) **ಸಾಯಕಃ** ॥ **'ಷೋಽನ್ತಕರ್ಮಣಿ.'** (ದಿ-ಪ) ಣ್ವುಲ್‌ಪ್ರತ್ಯಯ. ಅದಕ್ಕೆ ಅಕಾದೇಶ. ಣಿತ್ತಾದುದರಿಂದ ವೃದ್ಧಿ. **'ಆತೋಯುಕ್ ಚಿಣ್‌ಕೃತೋಃ'** (ಪಾ- ಸೂ. ೭-೩-೩೩) ಸೂತ್ರದಿಂದ ಯುಗಾಗಮ. ಶತ್ರುಗಳಿಗೆ ಅಂತಕರವಾದದ್ದು (ನಾಶಕ) ಅಥವಾ ಬಂಧನಾರ್ಥಕ ಷಿಞ್‌ಧಾತುವಿಗೆ ಣ್ವುಲ್. ವೃದ್ಧಿ. ಆಯಾದೇಶ. ಐಶ್ವರ್ಯಾದಿಗಳನ್ನು ಕಟ್ಟಿದಂತೆ ಸ್ಥಿರವಾಗಿ ಮಾಡುತ್ತದೆ. ಉದಾಹರಣೆ—**"ಪುರೀಷಿಣಂ ಸಾಯಕೇನಾ ಹಿರಣ್ಯಯಮ್"** (ಋ. ಸಂ. ೮-೧-೫-೫)

(೧೮) **ಪರಶುಃ** ॥ **'ಶ್ಯಾ-ಹಿಂಸಾಯಾಮ್'** (ಕ್ರ್ಯಾ-ಪ-) 'ಖನಿಶ್ಯಾಭ್ಯಾಂ ಡಿಚ್ಚ' (ಉ-೧-೩೨) ಸೂತ್ರದಿಂದ ಪರ ಪದ ಉಪಪದವಾಗಿರುವಾಗ ಕುಪ್ರತ್ಯಯ. ಡಿತ್ತಾದುದರಿಂದ ಟಿಲೋಪ. (ಖಕಾರ) ಶತ್ರುಗಳನ್ನು ಹಿಂಸಿಸುವುದು. 'ಪರಾನ್ ಶ್ಯತಿ ಇತಿ ಪರಶುಃ' ಎಂದು ಕ್ಷೀರಸ್ವಾಮಿ ಮತ. ಇತರರನ್ನು ಕ್ಷೀಣಿಸುವಂತೆ ಮಾಡುತ್ತದೆಂದರ್ಥ. ಆಗ ಮೃಗಯ್ವಾದಿಗಣಪಠಿತವಾದುದರಿಂದ ಕುಪ್ರತ್ಯಯ ಹೇಳಬೇಕು. ಉದಾ:—**'ಶಿಶೀತೇ ನನಂ ಪರಶು ಸ್ವಾಯಸಮ್'** (ಋ. ಸಂ. ೮-೧-೧೪-೩) **'ಅಭೀದುಶಕ್ರಃ ಪರಶುರ್ಯಥಾವನಮ್'** (ಋ. ಸಂ. ೫-೭-೬-೧-೪) ॥

ಹೀಗೆ ಹದಿನೆಂಟು ವಜ್ರಾಯುಧದ ಹೆಸರು ॥೨೦॥

---

ವಜ್ರನಾಮಾನ್ಯುತ್ತರಾಣ್ಯಷ್ಟಾದಶ ॥೩॥ ವಜ್ರಃ ಕಸ್ಮಾತ್ ವರ್ಜಯತೀತಿ ಸತಃ ॥೪॥

ವಜ್ರ ಅಥವಾ ವಜ್ರಾಯುಧವೆಂಬ ಹೆಸರು ಏತಕ್ಕೆ ಬಂದಿತೆಂದರೆ ಈ ವಜ್ರಾಯುಧವು ಪ್ರಾಣಿಯೇ ಮೊದಲಾದವುಗಳನ್ನೂ ಅವುಗಳ ಪ್ರಾಣಗಳಿಂದ ವರ್ಜಿಸುವುದರಿಂದ(ಬೇರ್ಪಡಿಸುವುದರಿಂದ)ಎಂದರೆ ಸಂಹಾರ ಮಾಡುವುದರಿಂದ ಈ ಆಯುಧಕ್ಕೆ ವಜ್ರವೆಂಬ ಹೆಸರು ಬಂದಿದೆ.

ತತ್ರ ಕುತ್ಸ ಇತ್ಯೇತತ್ ಕೃಂತತೇಃ ॥ ಋಷಿಃ ಕುತ್ಸೋ ಭವತಿ ಕರ್ತ್ತಾ<br>ಸ್ತೋಮಾನಾಮಿತ್ಯೌಪಮನ್ಯವಃ ॥ ಅತ್ರಾಪ್ಯಸ್ಯ ವಧಕರ್ಮೈವ<br>ಭವತಿ, ತತ್ಸಖ ಇಂದ್ರಃ ಶುಷ್ಣಂ ಜಘಾನೇತಿ ॥ ೫ ॥

ಈ ವಜ್ರನಾಮಗಳಲ್ಲಿ ಕುತ್ಸ ಎಂಬ ಹೆಸರೂ ಸೇರಿದೆಯಷ್ಟೆ ಕುತ್ಸ ಎಂಬ ಶಬ್ದವು ಕತ್ತರಿಸು ಎಂಬರ್ಥವುಳ್ಳ ಕೃಂತತಿ ಧಾತುವಿನಿಂದ ನಿಷ್ಪನ್ನವಾಗಿದೆ ಮತ್ತು ಇದಲ್ಲದೆ ಕುತ್ಸ ಎಂಬ ಹೆಸರಿನ ಒಬ್ಬ ಋಷಿಯೂ ಇರುವನು ಇಲ್ಲಿ ಕುತ್ಸ ಎಂದರೆ ಸ್ತೋಮ ಅಥವಾ ಸ್ತೋತ್ರಗಳ ಕರ್ತನು (ರಚಿಸುವವನು) ಎಂದರ್ಥಮಾಡಬೇಕೆಂದು ಔಪಮನ್ಯವ ಎಂಬ ಆಚಾರ್ಯರ ಮತವು. ಇಲ್ಲಿಯೂ ಸಹ ಕುತ್ಸ ಶಬ್ದವು ಸಂಹರಿಸು ಎಂಬರ್ಥದಲ್ಲಿಯೂ ಉಪಯೋಗಿಸಲ್ಪಡುವದು. ಕುತ್ಸಋಷಿಗೆ ಇಂದ್ರನ

ಸ್ನೇಹಿತನು ತನಗೆ ಸ್ನೇಹಿತನಾದ ಈ ಕುತ್ಸಋಷಿಯ ಶತ್ರುವಾದ ಶುಷ್ಣನೆಂಬ ಅಸುರನನ್ನು ಇಂದ್ರನು ಸಂಹಾರಮಾಡಿದನು ಆದ್ದರಿಂದ ಕುತ್ಸಶಬ್ದವು ಇಲ್ಲಿ ವಧ ಎಂಬ ಅರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿರುವುದು.

## (೧) ಇರಜ್ಯತಿ (೨) ಪತ್ಯತೇ (೩) ಕ್ಷಯತಿ (೪) ರಾಜತಿ ಇತಿ ಚತ್ವಾರ ಐಶ್ವರ್ಯಕರ್ಮಾಣಃ ॥ ೨೧ ॥

(೧) **ಇರಜ್ಯತಿ** ॥ ಐಶ್ವರ್ಯಕ್ರಿಯಾವಾಚಕ ಧಾತುಗಳನ್ನು ಹೇಳುತ್ತಾನೆ. ಇದು ಕಂಡ್ವಾದಿಪಠಿತವಾದ ಧಾತು. 'ಕಂಡ್ವಾದಿಭ್ಯೋ ಯಕ್' ಸೂತ್ರದಿಂದ ಯಕ್ ಬರುತ್ತದೆ. ಲಟ್. ಉದಾಹರಣೆ—**'ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯತಿ' (ಋ. ಸಂ. ೧-೧-೧೪-೪) 'ಮಹೋ ನೃಮ್ಣಸ್ಯ ಧರ್ಮಣಾಮಿರಜ್ಯಸಿ' (ಋ. ಸಂ. ೧-೪-೧೯-೩)** ॥

(೨) **ಪತ್ಯತೇ** ॥ ಇದು ಕೇವಲನಿರುಕ್ತಪಠಿತವಾದ ಧಾತು. ದಿವಾದಿಗಣದಲ್ಲಿ 'ತಪ-ಐಶ್ವರ್ಯೇವಾ' ಎಂಬಲ್ಲಿ ಕೆಲವರು 'ಪತ-ಐಶ್ವರ್ಯೇ' ಎಂದು ಪಾಠಮಾಡುತ್ತಾರೆ. ಆಗ ಶ್ಯನ್‌ವಿಕರಣ ಬಂದು ಈ ರೂಪವಾಗುತ್ತದೆ. ಉದಾ— **'ಉಗ್ರಂ ಶವಃ ಪತ್ಯತೇ ಧೃಷ್ಣ್ವೋಜಃ' (ಋ. ಸಂ. ೩-೨-೧೯-೪) 'ದ್ಯುಶದ್ಯಾಮಾನಿಯುತಃ ಪತ್ಯಮಾನಃ' (ಋ. ಸಂ. ೪-೮-೫-೪)** ॥

(೩) **ಕ್ಷಯತಿ** ॥ ಧಾತುಗಳಿಗೆ ಅನೇಕಾರ್ಥ ಹೇಳಿರುವುದರಿಂದ ಇಲ್ಲಿ ಐಶ್ವರ್ಯಾರ್ಥ. ಉದಾಹರಣೆ—**'ಸೇದು ರಾಜಾ ಕ್ಷಯತಿ ಚರ್ಷಣೀನಾಮ್' (ಋ. ಸಂ. ೧-೨-೩೮-೫)** ॥

(೪) **ರಾಜತಿ** ॥ ರಾಜೃ-ದೀಪ್ತೌ. ಸ್ವರಿತೇತ್ತ್ವಾದುದರಿಂದ ಉಭಯಪದಿಯಾಗುತ್ತದೆ. **'ಧಿಯೋ ವಿಶ್ವಾ ವಿರಾಜತಿ' (ಋ. ಸಂ. ೧-೧-೬-೩) 'ರಾಜಂತಾಮಧ್ವರಾಣಾಮ್' (ಋ. ಸಂ. ೧-೧-೨.೩)** ॥

ಹೀಗೆ ನಾಲ್ಕು ಐಶ್ವರ್ಯಕ್ರಿಯಾವಾಚಕಧಾತುಗಳು ॥ ೨೧ ॥

---

## (೧) ರಾಷ್ಟ್ರೀ (೨) ಅರ್ಯಃ (೩) ನಿಯುತ್ವಾನ್ (೪) ಇನ ಇನ ಇತಿ ಚತ್ವಾರೀಶ್ವರನಾಮಾನಿ

(೧) **ರಾಷ್ಟ್ರೀ** ॥ ನಾಲ್ಕು ಐಶ್ವರ್ಯದಿಂದ ಕೂಡಿದವನ ಹೆಸರನ್ನು ಹೇಳುತ್ತಾನೆ. 'ರಾಜೃ ದೀಪ್ತೌ. ಧಾತು. **'ಷ್ಟ್ರನ್ ಸರ್ವಧಾತುಭ್ಯಃ'** (ಉ. ೪-೧೫೪) **ಸೂತ್ರದಿಂದ** ಷ್ಟ್ರನ್‌ಪ್ರತ್ಯಯ. 'ರಾಜತೇರೈಶ್ವರ್ಯಕರ್ಮಣಃ' ಎಂದು ನಿರುಕ್ತದಲ್ಲಿಯೂ ಇದೇ ಹೇಳಿದೆ. 'ವ್ರಶ್ಚಭ್ರಸ್ಜ—' ಸೂತ್ರದಿಂದ ಧಾತುವಿಗೆ ಷತ್ವ. ಷಿತ್ತ್ವಾದುದರಿಂದ ಸ್ತ್ರೀತ್ವದಲ್ಲಿ 'ಷಿದ್ಗೌರಾದಿಭ್ಯಶ್ಚ' (ಪಾ. ಸೂ. ೪-೧-೪೧) ಸೂತ್ರದಿಂದ ಙೀಷ್. ಉದಾಹರಣೆ-**'ರಾಷ್ಟ್ರೀ ದೇವಾನಾಂ ನಿಷಸಾದ ಮನ್ದ್ರಾ' (ಋ-ಸಂ-೬-೭-೫-೫)**

(೨) **ಅರ್ಯಃ** ॥ 'ಋ-ಗತೌ.' (ಭ್ವಾ-ಪ) 'ಋಹಲೋರ್ಣ್ಯತ್' ಸೂತ್ರದಿಂದ ಣ್ಯತ್ ಪ್ರಾಪ್ತವಾದರೆ ಅದನ್ನು ಬಾಧಿಸಿ 'ಅರ್ಯಃ ಸ್ವಾಮಿವೈಶ್ಯಯೋಃ' (ಪಾ. ಸೂ. ೩-೧-೧೦೩) ಸೂತ್ರದಿಂದ ಯತ್‌ಪ್ರತ್ಯಯ ಬಂದು ನಿಪಾತಿತವಾಗುತ್ತದೆ.

ಎಲ್ಲರಿಂದ ಹೊಂದಲ್ಪಡುವವನು ಈಶ್ವರ. **'ಸಮರ್ಯೋ ಗಾ ಅಜತಿ ಯಸ್ಯ ವಷ್ಟಿ'** (ಋ. ಸಂ. ೧-೩-೧-೧) **'ಮಂಹಿಷ್ಠೋ ಅರ್ಯಃ ಸತ್ಪತಿಃ'** (ಋ. ಸಂ. ೬-೧-೨೫-೬) ॥

(೩) **ನಿಯುತ್ವಾನ್** ॥ ನಿಯುತ್ ಶಬ್ದ ಹಿಂದೆ ವ್ಯಾಖ್ಯಾತವಾಗಿದೆ. (೧-೧೫-೧೦) ಕುದುರೆಗಳಿಗೆ ನಿಯುತಃ ಎಂದು ಹೆಸರು. ಅವುಗಳುಳ್ಳವನು ನಿಯುತ್ವಾನ್. ಮತುಪ್‌ಪ್ರತ್ಯಯ. 'ತಸೌ ಮತ್ವರ್ಥೇ' (ಪಾ-ಸೂ-೧-೪-೧೯) ಸೂತ್ರದಿಂದ ಭಸಂಜ್ಞೆ ಬರುವುದರಿಂದ ಪದಸಂಜ್ಞಾನಿಮಿತ್ತಕವಾದ ಜಶ್ತ್ವವು ಬರುವುದಿಲ್ಲ. ಉದಾ:—**'ಅತೋ ನೋ ಯಜ್ಞಮವಸೇ ನಿಯುತ್ವಾನ್'** (ಋ. ಸಂ. ೪-೭-೧೨-೫) ॥

ಈ ಪದವ ಸ್ಥಾನದಲ್ಲಿ ' ಪತಿಃ ' ಎಂದು ಪಾಠಮಾಡುತ್ತಾರೆ. ಆಗ ' ಪಾ-ರಕ್ಷಣೇ ' ಧಾತು(ಅದಾ-ಪ)ಪಾತೇರ್ಡತಿಃ (ಉ-೪-೫೨) ಸೂತ್ರದಿಂದ ಡತಿಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ (ಅ) ರಕ್ಷಣೆಮಾಡುವವನು ಈಶ್ವರ. ' ಪಿತಾ ಪಾತಾವಾ ಪಾಲಯಿತಾ ವಾ ' (ನಿರು-೪-೨೧) ಭಾಷ್ಯದಲ್ಲಿ ಪಾಧಾತುವಿಗೆ ಣ್ಯಂತದಮೇಲೆ ಬಹುಲಗ್ರಹಣದಿಂದ ಡತಿಪ್ರತ್ಯಯ ಬಂದು ರೂಪಸಿದ್ಧಿಯಾಗುತ್ತದೆಂದು ಸ್ಕಂದಸ್ವಾಮಿಯಿಂದ ಹೇಳಿದೆ. ಉದಾ-**ಶಿಪ್ರಿನ್ ವಾಜಾನಾಂ ಪತ್ತೇ** (**ಋ. ಸಂ. ೧.೨.೨೭-೨**)

(೪) **ಇನಃ** ॥ ಸಂಭಾಜನ(ಗೌರವ) ಅರ್ಥಕೊಡುವ ಅಥವಾ ಸಮುಪಸರ್ಗ ವಿಶಿಷ್ಟಾರ್ಥಕೊಡದ ಇಣ್‌ಧಾತುವಿಗೆ **' ಇಣ್‌ಸಿಞ್‌ಜಿದೀಙ್‌ಷ್ಯವಿಭ್ಯೋನಕ್** (ಉ-೩-೨) ಸೂತ್ರದಿಂದ ನಕ್‌ಪ್ರತ್ಯಯ ಇದರ ಅರ್ಥ ' ತತ್ರೇನ ಇತ್ಯೇತ್ಸನಿತಃ (ನಿರು-೩-೧೧)ಎಂಬ ನಿರುಕ್ತಭಾಷ್ಯದಲ್ಲಿ ಸ್ಕಂದಸ್ವಾಮಿಯಿಂದ ವಿಸ್ತಾರವಾಗಿ ಹೇಳಿದೆ. ಸಕಲರಿಂದಹೊಂದಲ್ಪಡುವವನು ಈಶ್ವರ. ಅಧ್ಯಾಯಸಮಾಪ್ತಿಗೋಸ್ಕರ ದ್ವಿರುಕ್ತಿ ಹೇಳಿದೆ ಉದಾ-**ಇನೋವಿಶ್ವಸ್ಯ ಭುವನಸ್ಯ ಗೋಪಾಃ** (ಋ-ಸಂ-೨-೩-೧೮.೧)

ಹೀಗೆ ನಾಲ್ಕು ಈಶ್ವರನಾಮಗಳು ॥೨॥



———

ತತ್ರೇನ ಇತ್ಯೇತತ್ ಸನಿತ ಐಶ್ವರ್ಯಣೇತಿ ವಾ ಸನಿತಮನೇ-
ನೈಶ್ವರ್ಯಮಿತಿ ವಾ ॥

ಈ ಐಶ್ವರ್ಯನಾಮಗಳಲ್ಲಿ **ಇನ** ಎಂಬ ಶಬ್ದನಿರುವುದು. ಇದಕ್ಕೆ ಸಂ ಎಂಬ ಉಪಸರ್ಗವನ್ನು ಸೇರಿಸಿದರೆ ಸನಿತಃ ಎಂದಾಗುವುದು. ಸನಿತಃ ಎಂದರೆ ತನ್ನಲ್ಲಿರುವ ಐಶ್ವರ್ಯಾದಿಗಳನ್ನು ಇತರರಿಗೆ ವಿಭಾಗಿಸಿ ಅಥವಾ ಹಂಚಿಕೊಡುವವನು ಎಂದರ್ಥವಾಗುವುದು. ಐಶ್ವರ್ಯ ಅಥವಾ ಧನವನ್ನು ಯಾರೂ ಸುಮ್ಮನೆ ಕೊಡುವುದಿಲ್ಲ. ಇತರರಿಂದ ಕೆಲಸಮಾಡಿಸಿಕೊಡು ಅದಕ್ಕೆ ಪ್ರತಿಫಲವಾಗಿ ತನ್ನಲ್ಲಿರುವ ಧನವನ್ನು ಇತರರಿಗೆ ಕೊಡುವರು. ಈ ವಿಧವಾದ ವಿಭಜನೆಯನ್ನು ಅಥವಾ ಹಂಚಿಕೆಯನ್ನು ಮಾಡುವ ಪುರುಷನನ್ನು ಸನಿತಃ ಎಂದು ಕರೆಯುವರು.

**ಇತಿ ಏಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು

## ಅಥ ದ್ವಾದಶಃ ಖಂಡಃ

## ಹನ್ನೆರಡನೆಯ ಖಂಡವು

ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರನ್ತಿ । ಇನೋ ವಿಶ್ವಸ್ಯ ಭುವನಸ್ಯ ಗೋಪಾಃ ಸ ಮಾ ಧೀರಃ ಪಾಕಮತ್ರಾ ವಿವೇಶ ॥ ಯತ್ರ ಸುಪರ್ಣಾಃ ಸುಪತನಾ ಆದಿತ್ಯರಶ್ಮಯೋಽಮೃತಸ್ಯ ಭಾಗಮುದಕಸ್ಯಾನಿಮಿಷಂತೋ ವೇದನೇನಾಭಿಸ್ವರಂತೀತಿ ವಾಭಿಪ್ರಯಂತೀತಿ ವೇಶ್ವರಃ ಸರ್ವೇಷಾಂ ಭೂತಾನಾಂ ಗೋಪಾಯಿತಾದಿತ್ಯಃ ಸ ಮಾ ಧೀರಃ ಪಾಕಮತ್ರಾ ವಿವೇಶೇತಿ ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆದಿತ್ಯ ಇತ್ಯುಪನಿಷದ್ವರ್ಣೋ ಭವತೀತ್ಯಧಿದೈವತಮಥಾಧ್ಯಾತ್ಮಂ ಯತ್ರ ಸುಪರ್ಣಾಃ ಸುಪತನಾನೀಂದ್ರಿಯಾಣ್ಯಮೃತಸ್ಯ ಭಾಗಂ ಜ್ಞಾನಸ್ಯಾನಿಮಿಷನ್ತೋ ವೇದನೇನಾಭಿಸ್ವರಂತೀತಿ ವಾಭಿಪ್ರಯನ್ತೀತಿ ವೇಶ್ವರಃ ಸರ್ವೇಷಾಮಿಂದ್ರಿಯಾಣಾಂ ಗೋಪಾಯಿತಾತ್ಮಾ ಸ ಮಾ ಧೀರಃ ಪಾಕಮತ್ರಾ ವಿವೇಶೇತಿ ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆತ್ಮೇತ್ಯಾತ್ಮಗತಿಮಾಚಷ್ಟೇ ॥ ೧೨ ॥

---

**ಯತ್ರಾ ಸುಪರ್ಣಾ ಎಂಬ ಋಕ್ಕಿನ ಅರ್ಥವು**

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾ ಭಿಸ್ವರಂತಿ ।**
**ಇನೋ ವಿಶ್ವಸ್ಯ ಭುವನಸ್ಯ ಗೋಪಾ ಸ ಮಾ ಧೀರಃ ಪಾಕಮತ್ರಾ ವಿವೇಶ ॥**

(ಋ. ಸಂ. ೧-೧೬೪-೨೧)

ಅರ್ಥವು-ಯಾವ ಆದಿತ್ಯಮಂಡಲದಲ್ಲಿ ಶ್ರೇಷ್ಠವಾದ ಪ್ರಸರವುಳ್ಳ ರಶ್ಮಿಗಳು ತಮ್ಮ ಕರ್ತವ್ಯಜ್ಞಾನದಿಂದ ಉದಕದ ಭಾಗವನ್ನು ಸರ್ವದಾ ಸ್ರವಿಸುವಂತೆ ಮಾಡುತ್ತವೆಯೋ ಮತ್ತು ಯಾವನು ಸಮಸ್ತವಾದ ವಿಶ್ವಕ್ಕೂ ಸ್ವಾಮಿಯಾಗಿಯೂ ರಕ್ಷಕನಾಗಿಯೂ ಆಗಿದ್ದಾನೆಯೋ ಅಂತಹ ಆದಿತ್ಯರೂಪನಾದಪರಮೇಶ್ವರನು ಅನುಗ್ರಹಾತ್ಮಕವಾದ ಬುದ್ಧಿಯುಳ್ಳವನಾಗಿ ನಾನು ಅಪರಿಪಕ್ವವಾದ ಜ್ಞಾನದಿಂದ ಕೂಡಿದ್ದರೂ ಸಹ ನನ್ನನ್ನೂ ಈ ತನ್ನ ಮಂಡಲದಲ್ಲಿ ಪ್ರವೇಶಿಸುವಂತೆ ಮಾಡುತ್ತಾನೆ.

**ಯತ್ರ ಸುಪರ್ಣಾಃ ಸುಪತನಾ ಆದಿತ್ಯರಶ್ಮಯಃ ಅಮೃತಸ್ಯ ಭಾಗಂ ಉದಕಸ್ಯ ಅನಿಮಿಷಂತೋ ವೇದನೇನಾಭಿಸ್ವರಂತೀತಿ ವಾಭಿಪ್ರಯಂತೀತಿ ವಾ । ಈಶ್ವರಃ ಸರ್ವೇಷಾಂ ಭೂತಾನಾಂ ಗೋಪಾಯಿತಾದಿತ್ಯಃ । ' ಸ ಮಾ ಧೀರಃ ಪಾಕಮತ್ರಾ ವಿವೇಶ ' । ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ " ವಿಪಕ್ವಪ್ರಜ್ಞ ಆದಿತ್ಯಃ " ಇತ್ಯುಪನಿಷದ್ವರ್ಣೋ ಭವತೀತ್ಯಧಿದೈವತಂ ।**

ಅತ್ಯಂತ ಆಕರ್ಷಕವಾದ ಪತನವುಳ್ಳ ಆದಿತ್ಯರಶ್ಮಿಗಳು ಪೂರ್ಣವಾದ ಜ್ಞಾನದಿಂದ ಉದಕದ ಕಡೆಗೆ ಪ್ರಸರಿಸಿ ಯಾವ ಆದಿತ್ಯನಲ್ಲಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತವೆಯೋ ಅಂತಹ ಸಕಲಲೋಕಕ್ಕೂ ಪಾಲಕನಾದವನೂ, ಪೂರ್ಣವಾಗಿ ಪಕ್ವವಾದ ಪ್ರಜ್ಞೆಯುಳ್ಳವನೂ ಆದ ಆದಿತ್ಯನು ಅಪರಿಪಕ್ವವಾದ ಜ್ಞಾನವುಳ್ಳ ನನ್ನನ್ನು ಅನುಗ್ರಹಾತ್ಮಕವಾದ ಬುದ್ಧಿಯಿಂದ ಸಮೀಪಿಸಿದ್ದಾನೆ. ಇದು ಅಧಿದೈವತವಾದ ವಿವರಣೆಯು.

**ಅಥಾಧ್ಯಾತ್ಮಂ । ಯತ್ರ ಸುಪರ್ಣಾಃ ಸುಪತನಾನೀಂದ್ರಿಯಾಣ್ಯಮೃತಸ್ಯ ಭಾಗಂ ಜ್ಞಾನಸ್ಯಾನಿಮಿಷಂತೋ ವೇದನೇನಾಭಿಸ್ವರಂತೀತಿ ವಾಭಿಪ್ರಯಂತೀತಿ ವಾ । ಈಶ್ವರಃ ಸರ್ವೇಷಾಮಿಂದ್ರಿಯಾಣಾಂ ಗೋಪಾಯಿತಾತ್ಮಾ ಸ ಮಾ ಧೀರಃ ಪಾಕಮತ್ರಾವಿವೇಶೇತಿ ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆತ್ಮೇತ್ಯಾತ್ಮಗತಿಮಾಚಷ್ಟೇ ॥**

ಆಧ್ಯಾತ್ಮಪರವಾದ ವಿವರಣೆಯು ಈ ರೀತಿಯಿದೆ. ಯಾವ ಶರೀರದಲ್ಲಿ (ತಮ್ಮನ್ನು ಆಕರ್ಷಿಸುವ ವಿಷಯಗಳಕಡೆಗೆ ಸುಲಭವಾಗಿ ಪ್ರಸರಿಸುವ ಇಂದ್ರಿಯಗಳು ತಮ್ಮ ಸ್ವರೂಪವನ್ನು ತಿಳಿದುಕೊಂಡು ಅಮೃತಸಾಧನವಾದ ಜ್ಞಾನದ ಕಡೆಗೆ ಸರಿಯುತ್ತವೆಯೋ, ಅಂತಹ ಶರೀರದಲ್ಲಿ ಸಕಲೇಂದ್ರಿಯಗಳಿಗೂ ಪ್ರಭುವಾದವನೂ, ಪೂರ್ಣಪ್ರಜ್ಞನೂ ಆದ ಆತ್ಮನು (ಪರಮಾತ್ಮನು) ಅಪರಿಪಕ್ವವಾದ ಜ್ಞಾನವುಳ್ಳ ನನ್ನನ್ನು ಅನುಗ್ರಹಾತ್ಮಕವಾದ ಬುದ್ಧಿಯಿಂದ ಸಮೀಪಿಸಿದ್ದಾನೆ. ಎಂದು ಎರಡುವಿಧವಾಗಿ ವಿವರಿಸಿ ಅನುಷಂಗಿಕವಾಗಿ **ಸುಪರ್ಣ**, ಮತ್ತು **ಧೀರ** ಎಂಬ ಪದಗಳಿಗೆ ನಿರ್ವಚನವನ್ನೂ ಹೇಳಲಾಗಿದೆ.

**ಧೀರೋ ಧೀಮಾನ್** । ಪ್ರಜ್ಞಾವಂತನೆಂದರ್ಥ. ಈ ಪದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ–೩–೯) ಈಗಿನ ರೂಢಿಯಲ್ಲಿ **ಧೀರ**ಶಬ್ದಕ್ಕೆ ಧೈರ್ಯವುಳ್ಳವನೆಂದರ್ಥವಾಗುತ್ತದೆ. ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಸಹ **ಪ್ರಾಜ್ಞ**, **ವಿವೇಕಿ** ಎಂಬರ್ಥದಲ್ಲಿಯೇ ಈ ಪದವು ಉಪಯೋಗಿಸಲ್ಪಟ್ಟಿದೆ. ಅಲ್ಲಿಯೂ ಸಹ **ಧೀರ**ನು ಪ್ರಾಜ್ಞನಾದುದರಿಂದಲೂ ಭಯವನ್ನು ಜಯಿಸಿ ನಿರ್ಭಯನಾಗಿರುವುದೂ ಆಪತ್ಕಾಲದಲ್ಲೂ ಪ್ರಶಾಂತಚಿತ್ತನಾಗಿರುವುದು ಇತ್ಯಾದಿ ಗುಣಗಳಿರುವುದರಿಂದಲೂ ಧೈರ್ಯವುಳ್ಳವನೆಂದು ತಾತ್ಪರ್ಯವಾಗುತ್ತದೆ.

**ಯುವಾ ಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ ।**
**ತಂ ಧೀರಾಸಃ ಕವಯಃ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ ।**

(ಋ. ಸಂ. ೩–೮–೪)

ಇತ್ಯಾದಿ ಋಕ್ಕುಗಳಲ್ಲೂ, ಮತ್ತು

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯ ಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।**
**ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾದ್ವೃ-**
**ಣೀತೇ ॥**

(ಕಠ.–೨–೨)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲೂ ಸಹ ಧೀರಶಬ್ದಕ್ಕೆ ಧೀಮಾನ್ ಪ್ರಾಜ್ಞಃ ಎಂದರ್ಥವಾಗುತ್ತದೆ.

**ಸುಪರ್ಣಾಃ**:–ಸುಪರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨–೧೫) ಅಶ್ವನಾಮಗಳಲ್ಲಿಯೂ (ನಿ. ೨–೩೭) ಪಠಿತವಾಗಿದೆಯಾದರೂಸಹ **ಪಕ್ಷಿ, ಬಾಣ** ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನುಹೇಳಿದರೂ **ಶೋಭನಪತನ** ಎಂದರೆ ಮನೋಹರವಾಗಿ ಸಂಚರಿಸತಕ್ಕದ್ದು ಎಂಬ ಅಭಿಪ್ರಾಯವನ್ನೇ ಕೊಡುತ್ತದೆ. ಉದಾಹರಣೆಗೆ,

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
**ಕ್ವೇದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ॥**

(ಋ ಸಂ ೧–೩೫–೭)

ಎಂಬ ಋಕ್ಕಿನಲ್ಲಿ ಗಂಭೀರವಾದ ಕಂಪನವುಳ್ಳವೂ ಅಂತರಿಕ್ಷವನ್ನೆಲ್ಲಾ ವ್ಯಾಪಿಸುವುವೂ, ಚಿತ್ತಾಕರ್ಷಕವೂ ಆದ ರಶ್ಮಿಯ ವರ್ಣನೆಯಿದೆ. **ಸುಪರ್ಣ**ಶಬ್ದವು ಇಲ್ಲಿ ರಶ್ಮಿಪರವಾಗಿದೆ. **ಶೋಭನಪತನಾ ರಶ್ಮಯಃ** ಎಂದು ರಶ್ಮಿಯವಿಶೇಷ ಗುಣವನ್ನು ತೋರಿಸುತ್ತದೆ. ಇದರಂತೆಯೇ,

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

(ಋ ಸಂ ೧-೧೬೪-೪೬)

ಎಂಬ ಇವೇ ಸೂಕ್ತದ ೪೬ನೇ ಋಕ್ಕಿನಲ್ಲಿ **ಸುಪರ್ಣಃ ಗರುತ್ಮಾನ್** ಆಕರ್ಷಕವಾದ ಗಗನಸಂಚಾರವುಳ್ಳ ಗರುಡನೆಂದು ಪಕ್ಷಿಯಪರವಾಗಿದೆ. ಮತ್ತು ಹಿಂದೆ ವಿವರಿಸಿದ (೧೬೪–೨೦) ಋಕ್ಕಿನಲ್ಲಿಯೂ ಲೌಕಿಕವಾದ ಪಕ್ಷಿಯ ವಿಶೇಷ ಗುಣವನ್ನು ವರ್ಣಿಸುವುದಾಗಿ ತಿಳಿಸಿದೆ. ಹೀಗೆಯೇ,

**ಉಕ್ಷಾ ಸಮುದ್ರೋ ಅರುಷಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾ ವಿವೇಶ ।**
**ಮಧ್ಯೇ ದಿವೋ ನಿಹಿತಃಪೃಶ್ನಿರಶ್ಮಾ ವಿ ಚಕ್ರಮೇ ರಜಸಸ್ಪಾತ್ಯಂತಾ ॥**

(ಋ. ಸಂ. ೫–೪೭–೩)

ಎಂಬಲ್ಲಿ ಸುಗಮನವುಳ್ಳ **ಸಮುದ್ರ** ( ಅಂತರಿಕ್ಷ)ವೆಂದೂ,

**ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸನ್ನದ್ಧಾ ಪತತಿ ಪ್ರಸೂತಾ ।**

(ಋ. ಸಂ. ೬–೭೫–೧೧)

ಎಂಬ ನಿರುಕ್ತದಲ್ಲಿ ಉದಾಹೃತವಾಗಿರುವ (೯-೧೯) ಋಕ್ಕಿನಲ್ಲಿ ಸುಪತನವುಳ್ಳ ಬಾಣವೆಂದೂ ಅರ್ಥ ಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಅಧಿದೈವತಪಕ್ಷದಲ್ಲಿ ಶೋಭನಪತನಗಳಾದ ರಶ್ಮಿಗಳೆಂದೂ, ಅಧ್ಯಾತ್ಮಪಕ್ಷದಲ್ಲಿ ಶೋಭನಪತನಗಳಾದ ಇಂದ್ರಿಯ ಗಳೆಂದೂ ಅರ್ಥಮಾಡಿದೆ. **ಸುಪರ್ಣಾ ಅಭಿಸ್ವರಂತಿ** ಎನ್ನುವಾಗ ಅಧಿದೈವತಪಕ್ಷದಲ್ಲಿಯೂ ಮತ್ತು ಅಧ್ಯಾತ್ಮಪಕ್ಷದಲ್ಲಿಯೂ ಸೂಚಿತವಾಗುವ ಅಭಿಪ್ರಾಯಗಳೇನೆಂಬುದನ್ನು ಪರಿಶೀಲಿಸಬೇಕು.

**ಅಭಿಸ್ವರಂತಿ** ಎನ್ನುವ ಪದಕ್ಕೆ ನಿರುಕ್ತಕಾರರು **ಅಭಿಪ್ರಯಂತಿ** ಎಂದರ್ಥಮಾಡಿದ್ದಾರೆ. ದುರ್ಗಾಚಾರ್ಯರು ಇದನ್ನು ವಿವರಿಸುತ್ತಾ (**ಸ್ವೃ ಶಬ್ದೋಪತಾಪಯೋಃ**, ಉಪತಾಪಾರ್ಥಕವಾದ ಸ್ವೃ ಧಾತುವಿನಿಂದ ನಿಷ್ಪನ್ನವಾಗಿ ಸರ್ವ ಭೂತಗಳನ್ನೂ ತಪಿಸುವಂತೆ ಮಾಡುತ್ತಾವೆ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಎಂದರೆ ಪೃಥ್ವಿಯಲ್ಲಿರುವ ರಸವನ್ನು ಹೀರಿವುದ ರಿಂದ ಪೃಥ್ವಿಯನ್ನು ತಪಿಸುವಂತೆ ಮಾಡುತ್ತವೆಂದು ಅರ್ಥವಾಗುತ್ತದೆ. ಇದು ಅಷ್ಟು ಸ್ಪಷ್ಟವಾಗಿ ಕಾಣುವುದಿಲ್ಲ. ಅದುದರಿಂದ ಇನ್ನೊಂದು ವಿಧವಾಗಿಯೂ ಇದರ ನಿರ್ವಚನವನ್ನು ತೋರಿಸಿ, **ಅಥ ಅಭಿಮುಖ್ಯೇನ ರಸಾನ್ ಗೃಹೀತ್ವಾ ಆದಿತ್ಯ ಮಂಡಲಂ ಪ್ರಯಾಂತಿ ।** ರಸವನ್ನು ಹೀರಿ ಆದಿತ್ಯ ಮಂಡಲದ ಅಭಿಮುಖವಾಗಿ ಹೋಗುತ್ತವೆ ಎಂದು ಎರಡನೆಯ ಅರ್ಥವನ್ನು ಹೇಳಿದ್ದಾರೆ. ಈ ಎರಡು ಅರ್ಥಗಳಲ್ಲೂ ರಸಗ್ರಹಣವೇ ಮುಖ್ಯತಾತ್ಪರ್ಯವಾದರೂ, ಮೊದಲನೆಯ ವಿವರಣೆಯಂತೆ ಪೃಥ್ವಿಯನ್ನು ತಪಿಸುವುದರಲ್ಲಿ ಅನ್ವಯವಾಗುತ್ತದೆ. ಆದರೆ ಇಲ್ಲಿ **ರಶ್ಮಿಗಳ** ಲೋಕರಕ್ಷಣೆಯ ತತ್ಪರತೆಯನ್ನು ವರ್ಣಿಸಿರುವುದರಿಂದ ಆ ಕರ್ತವ್ಯ ನಿರ್ವಹಣಕ್ಕಾಗಿಯೂ ಕರ್ತವ್ಯಜ್ಞಾನದಿಂದಲೂ (ವಿದಥ) ಪುನಃ ವೃಷ್ಟಿಪತನಕ್ಕೆ ಅನುಕೂಲವಾಗುವಂತೆ ಆ ರಸವನ್ನು ಆದಿತ್ಯ ನಲ್ಲಿಗೆ ತೆಗೆದುಕೊಂಡು ಹೋಗಿ ಸೇರಿಸುತ್ತವೆಯೆಂಬುದೇ ಉಚಿತವಾಗಿರುತ್ತದೆ. ಋಕ್ಸಂಹಿತೆಯಲ್ಲಿ ಈ ಪದಕ್ಕೆ ಎರಡು ಅರ್ಥ ಗಳಲ್ಲಿ ಪ್ರಯೋಗವಿರುತ್ತದೆ. ಮೊದಲನೆಯದಾಗಿ,

**ರಥಾನಾಂ ನ ಯೇ೭ರಾಃ ಸನಾಭಯೋ ಜಿಗೀವಾಂಸೋ ನ ಶೂರಾ ಅಭಿದ್ಯವಃ ।**
**ವರೇಯವೋ ನ ಮರ್ಯಾ ಘೃತಪ್ರುಷೋಽಭಿಸ್ವರ್ತಾರೋ ಅರ್ಕಂ ನ ಸುಷ್ಟುಭಃ ॥**

(ಋ. ಸಂ ೧೦-೭೮-೪ )

ಎಂಬ ಋಕ್ಕಿನಲ್ಲಿ **ಅಭಿಸ್ವರ್ತಾರ ಅಭಿತಃ ಶಬ್ದಯಿತಾರಃ ।** ಸ್ತುತಿವಚನವನ್ನು ಪಠಿಸುವವರು ಎಂಬರ್ಥಮಾಡಿರುವುದರಿಂದ **ಅಭಿಸ್ವರ** ಪದಕ್ಕೆ ಸ್ತುತಿವಚನವೆಂದರ್ಥವಾಗುತ್ತದೆ. ಇದರಂತೆಯೇ,

**ನೇಮಿಂ ನಮಂತಿ ಚಕ್ಷಸಾ ಮೇಷಂ ವಿಪ್ರಾ ಅಭಿಸ್ವರಾ ।**
**ಸುದೀತಯೋ ವೋ ಅದ್ರುಹೋಽಪಿ ಕರ್ಣೇ ತರಸ್ವಿನಃ ಸಮೃಕ್ವಭಿಃ ॥**

(ಋ. ಸಂ. ೮-೯೭-೧೨)

ಎಂಬಲ್ಲಿಯೂ ಸಹ **ಅಭಿಸ್ವರಾ ಅಭಿಸ್ವರಣೇನ ಸ್ತೋತ್ರೇಣ ।** ಸ್ತೋತ್ರದಿಂದ ಎಂದರ್ಥವಾಗುತ್ತದೆ. ಇದಲ್ಲದೆ ಪರಸ್ಪರಾ ನುಸರಣವನ್ನು ಸೂಚಿಸುವ ಅರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ.

**ಏಕಪಾದ್ಭೂಯೋ ದ್ವಿಪದೋ ವಿ ಚಕ್ರಮೇ ದ್ವಿಪಾತ್ತ್ರಿಪಾದಮಭ್ಯೇತಿ ಪಶ್ಚಾತ್ ।**
**ಚತುಷ್ಪಾದೇತಿ ದ್ವಿಪದಾಮಭಿಸ್ವರೇ ಸಂಪಶ್ಯನ್ ಪಂಕ್ತೀರುಪತಿಷ್ಠಮಾನಃ ॥**

(ಋ. ಸಂ. ೧೦-೧೧೭-೮)

ಎಂಬ ಋಕ್ಕಿನಲ್ಲಿ ಉತ್ತಮಾಧಮರು ಅನ್ಯೋನ್ಯಾಪೇಕ್ಷೆಯಿಂದಲೂ ಪರಸ್ಪರವಾದ ಅನುಸರಣೆಯಿಂದಲೂ ಇರುತ್ತಾರೆ ಎಂಬು ದನ್ನು ವಿವರಿಸಲು **ಅಭಿಸ್ವರೇ ಸಂಪಶ್ಯನ್**ಎಂದು ವರ್ಣಿಸಿದೆ. ಇಲ್ಲಿ ಅಭಿಸ್ವರ ಶಬ್ದಕ್ಕೆ **ಅಭಿಗಮನ** ವೆಂದರ್ಥ. ಎದುರುಗೊಂಡು ಹೋಗು ಅಥವಾ ಅನುಸರಿಸಿ ಹೋಗು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಈ ಎರಡರ್ಥಗಳಲ್ಲಿಯೂ ಅನ್ವ ಯಿಸಬಹುದು. ಹೇಗೆಂದರೆ,

**ಶೀರ್ಷ್ಣಃ ಕ್ಷೀರಂ ದುಹ್ರತೇ ಗಾವೋ ಅಸ್ಯ ವವ್ರಿಂ ವಸಾನಾ ಉದಕಂ ಪದಾಪುಃ ।**

(ಋ. ಸಂ. ೧-೧೬೪-೭)

ಎಂಬ ಇದೇ ಸೂಕ್ತದ ಹಿಂದಿನ ಋಕ್ಕಿನಲ್ಲಿ ವಿವರಿಸಿರುವಂತೆ ಆದಿತ್ಯರಶ್ಮಿಗಳು ಆದಿತ್ಯನ ಕರ್ತವ್ಯವನ್ನು ನಿರ್ವಹಿಸುವಾಗ ಉದಕವನ್ನು ಸುರಿಸುತ್ತಲೂ ಪುನಃ ಉದಕವನ್ನು ಹೀರಿ ಸೂರ್ಯನಲ್ಲಿಗೆ ಸೇರಿಸುತ್ತಲೂ ಅವನನ್ನು ಸೇವಿಸುತ್ತವೆ. ಮತ್ತು ಅವನು ಮನೋಗತವನ್ನರಿತು ತಮ್ಮ ಕರ್ತವ್ಯಗಳನ್ನು ಮಾಡುತ್ತವೆ. ಉದಕವನ್ನು ಪೃಥ್ವಿಯಿಂದ ಹೀರಿ ಅವನ ಅಭಿಮುಖವಾಗಿ ಹೋಗಿ ಪುನಃ ವೃಷ್ಟಿಪತನಕ್ಕೆ ಅನುಕೂಲಮಾಡುತ್ತವೆ ಇತ್ಯಾದಿಯಾಗಿ ವರ್ಣಿಸಿರುವಂತೆ ಇಲ್ಲಿಯೂ ಸಹ **ಅಮೃತಸ್ಯ ಭಾಗಂ ಅಭಿಸ್ವರಂತಿ** ಉದಕದ ಅಂಶವನ್ನು ಹೀರಿಕೊಂಡು (ತಮ್ಮ ಕರ್ತವ್ಯ ಜ್ಞಾನವನ್ನರಿತು) ಅವನಲ್ಲಿಗೆ ಸೇರಿಸುತ್ತವೆ ತಾತ್ಪರ್ಯ ವಾಗಬಹುದು ಅಥವಾ ತಮ್ಮ ಸೇವಾರೂಪವಾದ ಸ್ತೋತ್ರದಿಂದಲೂ, ಉದಕದೊಡನೆ ಅವನನ್ನು ಸಮೀಪಿಸುವುದರಿಂದಲೂ ಪುನಃ ವೃಷ್ಟಿಯನ್ನು ಸುರಿಸಲು ಅವನನ್ನು ಪ್ರೇರಿಸಿದವು ಎಂದಾಗಲಿ ಆಗಬಹುದು.

**ಅಮೃತಸ್ಯ**—ಅಧಿದೈವತಪಕ್ಷದಲ್ಲಿ ಅಮೃತಶಬ್ದಕ್ಕೆ ಉದಕವೆಂದು ಅರ್ಥಮಾಡಿದೆ. ನಿರುಕ್ತಕಾರರು ಈ ಪದವನ್ನು ಉದಕನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೨೪) ಮತ್ತು ಈ ಋಕ್ಕಿನ ವಿವರಣೆನ್ನು ಹೇಳುವಾಗಲೂ ಸಹ **ಉದಕಸ್ಯ** ಎಂದೇ ಅರ್ಥಮಾಡಿದ್ದಾರೆ. (ನಿ. ೩-೧೨).

**ತಸ್ಯ ಯೇ ಪ್ರಾಂಚೋ ರಶ್ಮಯಃ .... .... .... .... .... .... ತಾ ಅಮೃತಾ ಆಪ್ತಃ ।**

(ಛಾ. ಉ. ೨-೧-೨)

ಎಂದು ಛಾಂದ್ಯೋಗ್ಯೋಪನಿಷತ್ತಿನಲ್ಲಿ ಆದಿತ್ಯನಿಗೂ ಅಪ್ಪು ಗಳಿಗೂ ಇರುವ ಸಂಬಂಧವನ್ನು ತಿಳಿಸುವಾಗ **ಆಪಃ** ಎಂಬ ಪದಕ್ಕೆ **ಅಮೃತಾಃ** ಎಂಬ ವಿಶೇಷಣವಿದೆ. ಇದನ್ನು ಶಂಕರ್ಯಾಚಾರ್ಯರು **ವಿಮೃತರ್ಾತ್ವಾದಸ್ಯಂತರಸವತ್ಯ ಆಪೋ ಭವಂತಿ** ಎಂದು ವಿವರಿಸಿದ್ದಾರೆ. ಇದನ್ನು ಮುಂದುವರಿಸುತ್ತಾ,

ಅಧ್ಯಾತ್ಮಪಕ್ಷದಲ್ಲಿ; — **ಅಮೃತಸ್ಯ** ( ಅಮರಧರ್ಮಣಃ ) **ಜ್ಞಾನಸ್ಯ** ಎಂದು ನಿರುಕ್ತಕಾರರು ಅರ್ಥ ಮಾಡಿರುವಂತೆಯೇ ಸಾಯಣರೂ ಅರ್ಥಮಾಡಿ ಒಂದು ವಿಶೇಷಣವನ್ನೂ ಹೇಳಿದ್ದಾರೆ. **ಅತ್ರವಿಷಯಾವಚ್ಛಿನ್ನ-ಚೈತನ್ಯಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಈ ವಿವರಣೆಯು,

**ದ್ವೇ ಅಕ್ಷರೇ ಬ್ರಹ್ಮಪರೇ ತ್ವನಂತೇ ವಿದ್ಯಾವಿದ್ಯೇ ನಿಹಿತೇ ಯತ್ರ ಗೂಢೇ ।**
**ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ ।**

(ಶ್ವೇ. ಉ.೫-೧)

ಅಕ್ಷರವೂ ಅನಂತರವೂ ಆದ ಪರಬ್ರಹ್ಮನಲ್ಲಿ ವಿದ್ಯಾವಿದ್ಯೆಗಳು ಸಿಹಿತವಾಗಿವೆ. ಅದರಲ್ಲಿ ಅವಿದ್ಯೆಯು ಕ್ಷರವು ; ವಿದ್ಯೆಯು ಅಮೃತವು, ಎಂಬ ವ್ಯತ್ಯಾಸವನ್ನು ತೋರಿಸುವಂತೆ ಇಲ್ಲಿಯೂ ಸಹ ವಿಷಯಾವಚ್ಛಿನ್ನವಾದ ಚೈತನ್ಯಕ್ಕೂ, ವೃತ್ತ್ಯವಚ್ಛಿನ್ನವಾದ ಚೈತನ್ಯಕ್ಕೂ ವ್ಯತ್ಯಾಸವನ್ನು ತೋರಿಸಿದೆ. ಎರಡಕ್ಕೂ ಆತ್ಮನೇ ಆಧಾರವು- ಆದುದರಿಂದಲೇ **ಯತ್ರ ಯಸ್ಮಿನ್ನಾತ್ಮನಿ ಅಭಿಸ್ಸರಂತಿ** ಎಂದು ಎರಡಕ್ಕೂ ಒಂದೇ ಆಧಾರವಾದ ಆತ್ಮವು ವರ್ಣಿತವಾಗಿದೆ.

**ಅನಿಮೇಷಂ**—ಎಂಬಪದಕ್ಕೆ ಉದಕಪರವಾದ ಅರ್ಥದಲ್ಲಿ ಅನವರತವಾಗಿ ಎಂದೂ, ಜ್ಞಾನಪರವಾದ ಅರ್ಥದಲ್ಲಿ ನಿಮೇಷರಹಿತವಾದುದು ಎಂದೂ ಅರ್ಥವು.

**ಧೀರಃ ಪಾಕಮತ್ರಾ ವಿವೇಶ**—ಎಂಬುದಕ್ಕೆ ಸಾಯಣರು ಎರಡು ವಿಧವಾಗಿ ಅರ್ಥಮಾಡಿದ್ದಾರೆ ಮೊದಲನೆಯದಾಗಿ; – **ಸ ಪರಮೇಶ್ವರಃ ಧೀರಃ ಸಮಾಧಿನಿಷ್ಠಃ ಸರ್ವದಾ ಅವಿಕ್ರಿಯೋ ಮಾಂ ಪಾಕಂ ಪರಿಪಕ್ವಮನಸ್ಕಂ ಯಾಗಾದಿನಾ ಅಪಗತರಜಸ್ತಮಸ್ಕತ್ವೇಜನ ದರ್ಪಣವದತಿನಿರ್ಮಲಸತ್ತ್ವೋಸ್ರಿಕ್ತಮನಸ್ಕಂ ಮಾಂ ಆ ವಿವೇಶ ।** ಸಮಾಧಿನಿಷ್ಠನಾದ ಪರಮೇಶ್ವರನು ಯಾಗಾದಿಸತ್ಕಾರ್ಯಗಳಿಂದ ರಜಸ್ತಮೋಗುಣಗಳನ್ನು ನಾಶಮಾಡಿ ಪರಿಪಕ್ವವಾದುದೂ. ಸತ್ವಗುಣದಿಂದ ಪೂರಿತವಾದುದೂ, ಕನ್ನಡಿಯಂತೆ ಅತಿಶುದ್ಧವಾದುದೂ ಆದ ನನ್ನನ್ನು ಪ್ರವೇಶಿಸಿದನು ಎಂದೂ, ಎರಡನೆಯದಾಗಿ,

**ಯದ್ವಾ, ಅಪರಿಪಕ್ವಮನಾಃ ಅಹಂ ಪೂರ್ವಂ ಅಜ್ಞಾನದಶಾಯಾಂ ಮದನ್ಯಃ ಈಶ್ವರೋಽಸ್ತೀತಿ ಅವಿದ್ವಾನ್ ತತಃ ಪರಮಸ್ತಿ ಕಶ್ಚಿತ್ಸರ್ವಜ್ಞಃ .... .... ....ಪಶ್ಚಾದ್ಗುರುಶಾಸ್ತ್ರಾಭ್ಯಾಂ ।ಸ ಏವಾಹಮಸ್ಮೀತಿ ಮತ್ವಾ.... .... ಪರಿಪೂರ್ಣಃ ಪರಮಾತ್ಮಾಭವಂ ।** ಜ್ಞಾನಸಾಧನೆಯ ಪೂರ್ವಾವಸ್ಥೆಯಲ್ಲಿ ನಾನು ಬೇರೆ, ಈಶ್ವರನು ಬೇರೆ ಎಂಬ ಭೇದಬುದ್ಧಿಯನ್ನಿಟ್ಟುಕೊಂಡು ಅನಂತರ ಶಾಸ್ತ್ರಾಭ್ಯಾಸದಿಂದಲೂ, ಗುರುಗಳ ಉಪದೇಶದಿಂದಲೂ ಭೇದಭಾವವನ್ನು ತ್ಯಜಿಸಿ **ಅಹಮಸ್ಮಿ** ಎಂಬ ಭಾವನೆಯಿಂದ ಈಶ್ವರನಲ್ಲಿ ಐಕ್ಯವನ್ನು ಹೊಂದಿದೆನು ಎಂಬರ್ಥವೆಂದೂ ತಿಳಿಸಿದ್ದಾರೆ. ಎರಡನೆಯ ಅರ್ಥದ ಮೇರೆ, ಪಾಕಶಬ್ದಕ್ಕೆ ಅಪರಿಪಕ್ವಮನಸುಳ್ಳವನೆಂಬುದು ಹೇಗೆಂಬುದನ್ನು ಇದೇ ಸೂಕ್ತದ ೫ ನೇ ಋಕ್ಕಿನಲ್ಲಿ **ಪಾಕಃ ಪೃಚ್ಛಾಮಿ ಮನಸಾ ವಿಜಾನನ್** ಎಂಬವಾಕ್ಯವನು ವಿವರಿಸುವಾಗ ತಿಳಿಸಿದೆ. ಇದನ್ನೇ ನಿರುಕ್ತಕಾರರೂ ವಿವರಿಸುತ್ತಾ **ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರ ಆತ್ಮೇತ್ಯಾತ್ಮಗತಿಮಾಚಷ್ಟೇ** ಎಂದುತಿಳಿಸಿದ್ದಾರೆ.

**ಇತಿ ದ್ವಾದಶಃ ಖಂಡಃ**

ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು.

———

## ಅಥ ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ಬಹುನಾಮಾನ್ಯುರಾಣಿ ದ್ವಾದಶ ಬಹು ಕಸ್ಮಾ ಪ್ರಭವತೀತಿ
ಸತೋ ಹ್ರಸ್ವನಾಮಾನ್ಯುತ್ತರಾಣ್ಯೇಕಾದಶ ಹ್ರಸ್ವೋ ಹ್ರಸತೇರ್ಮಹ—
ನ್ನಾಮಾನ್ಯುತ್ತರಾಣಿ ಪಂಚವಿಂಶತಿರ್ಮಹಾನ್ ಕಸ್ಮಾನ್ ಮಾನೇನಾತ್ಯ

ಜ್ಞಹಾತೀತಿ ಶಾಕಪೂಣಿರ್ಮಂಹನೀಯೋ ಭವತೀತಿ ವಾ ತತ್ರ ವವಕ್ಷಿತ ವಿವಕ್ಷಸ ಇತ್ಯೇತೇ ವಕ್ತೇರ್ವಾ ವಹತೇರ್ವಾ ಸಾಭ್ಯಾ-ಸಾದ್ ಗೃಹನಾಮಾನ್ಯುತ್ತರಾಣಿ ದ್ವಾವಿಂಶತಿರ್ಗೃಹಾಃ ಕಸ್ಮಾದ್ ಗೃಹ್ಣಂತೀತಿ ಸತಾಂ ಪರಿಚರಣಕರ್ಮಾಣ ಉತ್ತರೇ ಧಾತವೋ ದಶ ಸುಖನಾಮಾನ್ಯುತ್ತರಾಣಿ ವಿಂಶತಿಃ ಸುಖಂ ಕಸ್ಮಾತ್ ಸಹಿತಂ ಖೇಭ್ಯಃ ಖಂ ಪುನಃ ಖನತೇ ರೂಪನಾಮಾನ್ಯುತ್ತರಾಣಿ ಷೋಡಶ ರೂಪಂ ರೋಚತೇಃ ಪ್ರಶಸ್ಯನಾಮಾನ್ಯುತ್ತರಾಣಿ ದಶ ಪ್ರಜ್ಞಾ-ನಾಮಾನ್ಯುತ್ತರಾಣ್ಯೇಕಾದಶ ಸತ್ಯನಾಮಾನ್ಯುತ್ತರಾಣಿ ಷಟ್ ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವನ್ತೀತಿ ವಾ ಅಷ್ಟಾ ಉತ್ತರಾಣಿ ಪದಾನಿ ಪಶ್ಯತಿಕರ್ಮಾಣ ಉತ್ತರೇ ಧಾತವಶ್ಚಾಯತಿ ಪ್ರಭೃತೀನಿ ಚ ನಾಮಾನ್ಯಾಮಿಶ್ರಾಣಿ ನವೋತ್ತರಾಣಿ ಪದಾನಿ ಸರ್ವಪದ ಸಮಾಮ್ನಾಯಾಥಾತ ಉಪಮಾ ಯದತತ್ತತ ಸದೃ-ಶಮಿತಿ ಗಾರ್ಗ್ಯಸ್ತದಾಸಾಂ ಕರ್ಮ ಜ್ಯಾಯಸಾ ವಾ ಗುಣೇನ ಪ್ರಖ್ಯಾತತ ಮೇನವಾ ಕನೀಯಾಂಸಂ ವಾ ಪ್ರಖ್ಯಾತಂ ವೋಪಮಿಮೀತೇಥಾಪಿ ಕನೀಯಸಾ ಜ್ಯಾಯಾಂಸಮ್ ॥ ೧೩ ॥



ಬಹುನಾಮಾನ್ಯುತ್ತರಾಣಿ ದ್ವಾದಶ ॥ ೧ ॥

(೧) ಉರು (೨) ತುವಿ (೩) ಪುರು (೪) ಭೂರಿ (೫) ಶಶ್ವತ್ (೬) ವಿಶ್ವಮ್ (೭) ಪರೀಣಸಾ (೮) ವ್ಯಾನಶಿಃ (೯) ಶತಮ್ (೧೦) ಸಹಸ್ರಮ್ (೧೧) ಸಲಿಲಮ್ (೧೨) ಕುವಿತ್

ಇತಿ ದ್ವಾದಶ ಬಹುನಾಮಾನಿ ॥ ೧ ॥

(೧) **ಉರು** ॥ ಅಧಿಕಾರ್ಥಕೊಡುವ ಹನ್ನೆರಡು ನಾಮಗಳನ್ನು ಹೇಳುತ್ತಾನೆ. ಉರುಶಬ್ದ ಪೃಥ್ವೀನಾಮದಲ್ಲಿ ವ್ಯಾಖ್ಯಾತವಾಗಿದೆ. ಇದರಿಂದ ಅಲ್ಪವು ಮುಚ್ಚಲ್ಪಡುತ್ತದೆ ಎಂದರ್ಥ. ಉದಾಹರಣೆ—(ಋ. ಸಂ. ೬-೫-೨೬-೧) **"ಉರುಕೃದುರುಣಸ್ಕೃಧಿ"** ॥

(೨) ತುವಿ ॥ ಇದು ಸೌತ್ರಧಾತು. ವೃದ್ಧ್ಯರ್ಥದಲ್ಲಿ ಹೇಳಿದೆ. 'ಅಚ ಇಃ' (ಉ. ೪–೧೩೪) ಸೂತ್ರದಿಂದ ಇಪ್ರತ್ಯಯ. ವೃದ್ಧಿಹೊಂದಿರುವುದೆಂದರ್ಥ. **'ತುವಿಜಾತಾ ಉರುಕ್ಷಯಾ'** (ಋ. ಸಂ. ೧–೧–೪–೪) ॥

(೩) ಪುರು ॥ 'ಪೄ–ಪಾಲನಪೂರಣಯೋಃ' 'ಪೄಭಿದಿವ್ಯಧಿಗಧಿ—' (ಉ. ೧–೨೩] ಸೂತ್ರದಿಂದ ಕುಪ್ರತ್ಯಯ. ಕಕಾರ ಇತ್ತಾಗಿಲೋಪವಾಗುತ್ತದೆ. 'ಉಮೋಷ್ಠ್ಯಪೂರ್ವಸ್ಯ' (ಪಾ. ಸೂ- ೭–೧–೧೦೨) ಸೂತ್ರದಿಂದ ಉತ್ವ. ರ ಪರವಾಗಿ ಬಂದರೆ ಪುರು ಎಂದಾಗುತ್ತದೆ- ತುಂಬಿರುವುದು ಎಂದರ್ಥ. **"ಪುರುಭುಜಾ ಚನಸ್ಯತಮ್"** (ಋ. ಸಂ. ೧–೧–೫–೧) ॥

(೪) ಭೂರಿ ॥ ಭೂಧಾತುವಿಗೆ 'ಅದಿಶದಿ ಭೂಶುಭಿಭ್ಯಃ ಕ್ರಿನ್' (ಉ. ೪–೬೫) ಸೂತ್ರದಿಂದ ಕ್ರಿನ್‌ಪ್ರತ್ಯಯ. ಕಿತ್ತಾಗುವುದರಿಂದ ಗುಣ ಬರುವುದಿಲ್ಲ. ಎಲ್ಲರಿಗೂ ಅನುಗ್ರಹದಾಯಕವಾಗುತ್ತದೆ. **"ಯತ್ರ ಗಾವೋ ಭೂರಿಶೃಂಗಾ ಅಯಾಸಃ"** (ಋ. ಸಂ. ೨–೨–೨೪–೫) ॥

(೫) ಶಶ್ವತ್ ॥ 'ಟು ಓಶ್ವಿ–ಗತಿವೃದ್ಧ್ಯೋಃ' ಧಾತು. ಟು' ಓ ಇತ್ತಾಗುತ್ತವೆ. 'ಸಂಶ್ಚತೃಂಪ—' (ಉ. ೨–೮೯) ಸೂತ್ರದಿಂಪ ದ್ವಿತ್ವ; ಅಭ್ಯಾಸದ ಇಕಾರವಕಾರಗಳಿಗೆ ಅಕಾರಾದೇಶ, ಡಿತ್ವ, ಆದ್ಯುದಾತ್ತ ಕಾರ್ಯಗಳು ನಿಪಾತಿತವಾಗುತ್ತವೆ. ವೃದ್ಧಿಹೊಂದುವುದು, ಎಲ್ಲರಿಂದಲೂ ಹೊಂದಲ್ಪಡುವುದು. **"ಅಹಂ ಧನಾನಿ ಸಂಜಯಾಮಿ ಶಶ್ವತಃ"** (ಋ. ಸಂ. ೮–೧–೫–೧) **"ಯಾಶ್ಚಿದ್ಧಿ ಶಶ್ವತಾ ತನಾ'** (ಋ. ಸಂ. ೧–೨–೨೧–೧) ॥

(೬) ವಿಶ್ವಮ್ ॥ (೭) ಪರೀಣಸಾ ॥ (೮) ವ್ಯಾನಶಿಃ ॥ ಅಶೂ–ವ್ಯಾಪ್ತೌ. ಧಾತು. ವಿಉಪಸರ್ಗ ಪೂರ್ವದಲ್ಲಿರುವಾಗ ' ಉತ್ಸಗತಃ ಛಂದಸಿ ಗಮಾದಿಭ್ಯೋ ದರ್ಶನಾತ್ ' ಎಂಬ ಭಾಷ್ಯವಾರ್ತಿಕದಿಂದ ಕಿಪ್ರತ್ಯಯ. ಲಿಡ್ವದ್ಭಾವದಿಂದ ದ್ವಿತ್ವಾದಿ. 'ಅತ ಆದೇಃ' ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ ಬಂದಾಗ 'ಅಶ್ನೋತೇಶ್ಚ' ಸೂತ್ರದಿಂದ ನುಡಾಗಮ. ವಿವಿಧರೀತಿಯಿಂದ ವ್ಯಾಪಿಸುವುದೆಂದರ್ಥ. **' ವ್ಯಾನಶಿಃ ಪವಸೇ ಸೋಮಧರ್ಮಭಿಃ** (ಋ. ಸಂ. ೭.೩.೧೨.೫)

(೯) ಶತಮ್ ॥ ' ಪಂಕ್ತಿವಿಂಶತಿಸ್ತ್ರಿಂಶತ್ ಚತ್ವಾರಿಂಶತ್ ಪಂಚಾಶತ್‌ಷಷ್ಠಿ ಸಪ್ತತ್ಯಶೀತಿನವತಿ ಶತಮ್ ' (ಪಾ. ಸೂ. ೫–೧–೫೯) ಸೂತ್ರದಿಂದ ಹತ್ತರಿಂದ ಹತ್ತುಸಂಖ್ಯೆ ಹೆಚ್ಚಾಗಿರುವ ಸಂಖ್ಯೆಗಳು ನೂರರವರೆಗೆ ನಿಪಾತಿತವಾಗಿವೆ. ' ದಶದಶತಃ ' ಎಂದು ನಿರುಕ್ತ (೩–೧೦) ನಿಪಾತಮಾಡಿರುವುದರಿಂದ ಬಹು ಎಂಬರ್ಥದಲ್ಲಿಯೂ ಶತಶಬ್ದ ಇದೆ. ಉದಾ– **' ವಾಜಯಾಮಃ ಶತಕ್ರತೋ '** (ಋ. ಸಂ. ೧–೧–೮–೪) ॥

(೧೦) ಸಹಸ್ರಮ್ ॥ ' ಸಹಸ್ ' ಪದ ಬಲನಾಮದಲ್ಲಿ ವ್ಯಾಖ್ಯಾತವಾಗಿದೆ. (೩–೭–೧೭) ಸಹಸ್‌ಪದದಮೇಲೆ ಮತ್ವರ್ಥದಲ್ಲಿ ರಪ್ರತ್ಯಯ ಬಂದಿದೆ. ಅಲ್ಪವಾದರೂ ಭಾವಿಯಾದ (ಮುಂದೆಆಗುವ) ಶಕ್ತಿ ಇದರಲ್ಲಿರುತ್ತದೆ. ಉದಾ– **' ಸಹಸ್ರಾಕ್ಷರಾ ಪರಮೇ ವ್ಯೋಮನ್** (ಋ. ಸಂ. ೨–೩-೨೨–೧) ॥

(೧೧) ಸಲಿಲಮ್ ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೧೨–೭) ನೀರಿನಂತೆ ಎಲ್ಲಿದರಿಂದಲೂ ಹೊಂದಲ್ಪಡುವುದು. **' ಅಪ್ರಕೇತಂ ಸಲಿಲಂ ಸರ್ವಮಾ ಇದಮ್** (ಋ. ಸಂ. ೮.೭-೧೭–೩) ಸಲಿಲವೆಂಬುದು ಬಹು ವೆಂದು ಹರದತ್ತನು ಹೇಳಿರುತ್ತಾನೆ.

(೧೩) ಕುವಿತ್ । ಇದು ನಿಪಾತ ' ಕುವಿತ್ ಸೋಮಸ್ಯಾ ಪ್ರಾಮಿತಿ ' (ಋ. ಸಂ. ೮-೬-೨೬-೨)

ಹೀಗೆ ಹನ್ನೆರಡು ಬಹುನಾಮಗಳು ॥ ೧ ॥

---

ಬಹು ಕಸ್ಮಾತ್ ಪ್ರಭವತೀತಿ ಸತಃ ॥ ೨ ॥

**ಬಹು** ಎಂಬ ಶಬ್ದವು ಪ್ರಭಾವವನ್ನು ಬೀರುತ್ತದೆಯಾದ್ದರಿಂದ ಇದಕ್ಕೆ ಬಹು ಎಂದು ಹೆಸರು. ಹಾಗೆಯೇ ಉರು-ವಿಸ್ತಾರ, ತುವಿ-ಅಭಿವೃದ್ಧೀ ಪುರು-ಪೂರ್ಣವಾಗಿ ಇತ್ಯಾದ್ಯರ್ಥಗಳು ಬಹು-ಬಹಳವಾಗಿ ಎಂದರ್ಥವನ್ನು ಸೂಚಿಸುವವು.

ಹ್ರಸ್ವನಾಮಾನುತ್ತರಾಣ್ಯೇಕಾದಶ ॥೩॥

(೧) ಋಹನ್ (೨) ಹ್ರಸ್ವಃ (೩) ನಿಘೃಷ್ವಃ (೪) ಮಾಯುಕಃ (೫) ಪ್ರತಿಷ್ಠಾ (೬) ಕೃಧು (೭) ವಭ್ರಕಃ (೮) ದಭ್ರಮ್ (೯) ಅರ್ಭಕಃ (೧೦) ಕ್ಷುಲ್ಲಕಃ (೧೧) ಅಲ್ಪಃ

ಇತ್ಯೇಕಾದಶ ಹ್ರಸ್ವನಾಮಾನಿ ॥ ೨ ॥

(೧) **ಋಹನ್** ॥ ಹನ್ನೊಂದು ಹ್ರಸ್ವ (ಅಲ್ಪ) ನಾಮಗಳನ್ನು ಹೇಳುತ್ತಾನೆ, 'ರುಹ-ಬೀಜಜನ್ಮನಿ ಪ್ರಾದುರ್ಭಾವೇಚ' (ಭ್ವಾ-ಪ) ಇವೆರಡು ಧಾತುಗಳಿಗೆ 'ಸಂಶ್ಚತ್ತೃಂಪದ್ವೇಹತ್—' (ಉ. ೨-೮೯) ಸೂತ್ರದಿಂದ ರೇಫಕ್ಕೆ ಸಂಪ್ರಸಾರಣ (ಋ). ಶತೃವದ್ಭಾವ ನಿಪಾತಿತವಾಗುತ್ತದೆ. ಹ್ರಸ್ವವಾದ ವೃಕ್ಷಾದಿಗಳು ಏರಲ್ಪಡುತ್ತವೆ' ದೀರ್ಘಾಪೇಕ್ಷೆಗಳಿಂದ ಬಿಡಲ್ಪಡುತ್ತದೆ ಎಂದರ್ಥ. ಉದಾಹರಣೆ—**"ಬೃಹನ್ತಂ ಚಿದೃಹತೆ, ರಂಧಯಾನಿ"** (ಋ. ಸಂ. ೭-೭-೨೧-೩) ॥

(೨) **ಹ್ರಸ್ವಃ** ॥ ಶಬ್ದಾರ್ಥದಲ್ಲಿ ಹ್ರಸಧಾತು ಹೇಳಿದೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ನ್ಯೂನಾರ್ಥದಲ್ಲಿ 'ಸರ್ಪ ನಿಘೃಷ್ವ ಹ್ರಸ್ವ—' ಇತ್ಯಾದಿ ಸೂತ್ರದಿಂದ ನಿಪಾತಿತವಾಗಿದೆ. ಉದಾಹರಣೆ—**"ನಮೋ ಹ್ರಸ್ವಾಯ ಚ ವಾಮನಾಯ ಚ"** (ಯ. ವಾ. ಸಂ. ೧೬-೩೦) ॥

(೩) **ನಿಘೃಷ್ವ** ॥ 'ಘೃಷು-ಸಂಘರ್ಷೇ.' ಧಾತು. ಇಲ್ಲಿ ನ್ಯೂನಾರ್ಥ. 'ಇಗುಪಧಜ್ಞಾಪ್ರೀಕಿರಃ ಕಃ' ಸೂತ್ರದಿಂದ ನಿಉಪಸರ್ಗಪೂರ್ವದಲ್ಲಿರುವಾಗ ಕಪ್ರತ್ಯಯ. ಛಾಂದಸವಾದುದರಿಂದ ಧಾತು ಉಕಾರ ಇತ್ತಾಗದಿರುವುದರಿಂದ ಯಣ್. ಉದಾಹರಣೆ ಹುಡುಕಬೇಕು.

(೪) **ಮಾಯುಕಃ** ॥ 'ಡು ಮಿಞ್-ಪ್ರಕ್ಷೇಪಣೇ.' ಡು ಇತ್ತಾಗುತ್ತದೆ. 'ಕೃವಾಪಾ—' (ಉ. ೧-೧) ಸೂತ್ರದಿಂದ ಉಣ್‌ಪ್ರತ್ಯಯ. ಣಿತ್ತಾದುದರಿಂದ ಇಕಾರಕ್ಕೆ ವೃದ್ಧಿ, ಆಯಾದೇಶ. ಮಾಯು ಎಂದಾದಾಗ ಸ್ವಾರ್ಥದಲ್ಲಿ ಕಪ್ರತ್ಯಯ- ಅನಾಯಾಸದಿಂದ ಹ್ರಸ್ವವಾದುದರಿಂದ ಎಸೆಯಲ್ಪಡುತ್ತದೆ. ನಿಗಮ ಹುಡುಕಬೇಕು.

(೫) **ಪ್ರತಿಷ್ಠಾ** ॥ ಪ್ರತಿ ಉಪಸರ್ಗ. ನ್ಯೂನಾರ್ಥಕೊಡುವ ಷ್ಠಾಧಾತುವಿಗೆ ಘಞರ್ಥದಲ್ಲಿ ಕಪ್ರತ್ಯಯ. ಇಲ್ಲಿ ಬಹುಲಗ್ರಹಣದಿಂದ ಕರ್ತ್ರರ್ಥದಲ್ಲಿ ಬಂದಿದೆ. ನ್ಯೂನವಾಗಿರುವುದೆಂದರ್ಥ. ಇದಕ್ಕೂ ನಿಗಮ ಹುಡುಕಬೇಕು.

(೬) **ಕೃಧು** ॥ 'ಕೃತೀ–ಛೇದನೇ.' ಧಾತು. ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ... ಪ್ರಭಿವಿವ್ಯಧಿಗೃಧಿಧೃಷಿಭ್ಯಃ (ಉ–೧–೨೨) ಸೂತ್ರದಿಂದ ವಿಹಿತವಾದ ಕುಪ್ರತ್ಯಯ ಬಹುಲಗ್ರಹಣದಿಂದ ಇದಕ್ಕೂ ಬರುವುದಲ್ಲದೆ ತಕಾರಕ್ಕೆ ಧಕಾರಾದೇಶ. ಹ್ರಸ್ವವಾದುದರಿಂದ ಕತ್ತರಿಸುವಂತಿರುತ್ತದೆಂದು ಸ್ಕಂದಸ್ವಾಮಿಯ ಭಾಷ್ಯ ಉದಾ.-'**ಯೋ ಅಸ್ಕೃಧೋಯುರಜರಃ ಸ್ವರ್ವಾನ್** (ಋ. ಸ- ೪-೬-೧೩-೩)

(೭) **ವಮ್ರಕಃ** ॥ 'ಟು, ವಮು–ಉದ್ಗಿರಣೇ.' ಟು ಇತ್ತಾಗುತ್ತದೆ. ಇಲ್ಲಿ ನ್ಯೂನಾರ್ಥ ಹೇಳಬೇಕು. 'ಸ್ಫಾಯಿ-ತಂಚಿವಂಚಿ'-(ಉ-೨-೧೨) ಸೂತ್ರದಿಂದ 'ರಕ್‌ಪ್ರತ್ಯಯವನ್ನು ಎಂಬುದರಮೇಲೆ ಸ್ವಾರ್ಥದಲ್ಲಿ ಕಪ್ರತ್ಯಯ: (ಪಾ. ಸೂ. ೫-೩-೭೭) ಉದಾ–ವಮ್ರಕಃ **ಪದ್ಭಿರುಪಸರ್ಪದಿಂದ್ರಮ್** (ಋ. ಸಂ. ೮-೫-೧೫-೬) '**ಸ್ತವಾನೋ ವಮ್ರೀ ವಿಜಘಾನಸಂದಿಹಃ**' (ಋ. ಸಂ. ೧-೪-೧೦-೪) ವಮ್ರಕ ಎಂದು ಸ್ವಾರ್ಥದಲ್ಲಿ ಕಪ್ರತ್ಯಯ ಬಂದು ಹ್ರಸ್ವನಾಮಗಳಲ್ಲಿ ಮಧ್ಯದಲ್ಲಿ ಪಠಿತವಾಗಿದೆಯೆಂದು ಸ್ಕಂದಸ್ವಾಮೀ ಭಾಷ್ಯ ॥

(೮) **ದಭ್ರಮ್** ॥ ನ್ಯೂನಾರ್ಥಕ ದಭ ಧಾತುವಿಗೆ 'ಸ್ಫಾಯಿತಂಚಿವಂಚಿ'–(ಉ–೨–೧೨) ಸೂತ್ರದಿಂದ ರಕ್ ಪ್ರತ್ಯಯ 'ನೇಡ್ವಶಿಕೃತಿ (ಪಾ. ಸೂ. ೭–೨–೮) ಸೂತ್ರದಿಂದ ವಶಾದಿಕೃತ್‌ಪ್ರತ್ಯಯವಾದುದರಿಂದ ಇಡಾಗಮ ಬರುವುದಿಲ್ಲ. ಉದಾ–'**ದಭ್ರಂ ಪಶ್ಯದ್ಭ್ಯ ಉರ್ವಿಯಾ ವಿಚಕ್ಷ**' (ಋ. ಸಂ. ೧-೮-೧-೫) ॥

(೯) **ಅಭ್ರಕಃ** ॥ ಮುಂದೆ ನಿರ್ವಚನಮಾಡುತ್ತಾನೆ.

(೧೦) **ಕ್ಷುಲ್ಲಕಃ** ॥ ಕ್ಷುದಂಲಾತಿ ಇತಿ ॥ ಕ್ಷುತ್‌ಪದ ಉಪಪದವಾಗಿರುವಾಗ ಲಾಧಾತುವಿಗೆ 'ಆತೋऽನುಪಸರ್ಗೇ ಕಃ' (ಪಾ–ಸೂ–೩–೨–೩) ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಆಕಾರಕ್ಕೆ ಲೋಪ. ಕ್ಷುತ್+ಲ ಎಂದಿರುವಾಗ 'ತೋರ್ಲಿ' ಸೂತ್ರದಿಂದ ತಕಾರಕ್ಕೆ ಲಕಾರ. ಕ್ಷುಲ್ಲಎಂಬುದರಮೇಲೆ ಸ್ವಾರ್ಥದಲ್ಲಿ ಕಪ್ರತ್ಯಯ. ಹ್ರಸ್ವವಾದುದರಿಂದ ಹಸಿವೆಯನ್ನುಂಟುಮಾಡುವುದು. ಉದಾ:—'**ನಮೋ ಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚ**' । '**ಕ್ಷುಲ್ಲಕಾ ಶಿಪಿವಿಷ್ಟಕಾ**' ॥

(೧೧) **ಅಲ್ಪಃ** ॥ 'ಅಲಂ–ಭೂಷಣಪರ್ಯಾಪ್ತವಾರಣೇಷು' ಧಾತುವಿಗೆ 'ಅಲಿ–ತಲಿಶೀಙ್‌ನೃಪಾಭ್ಯಃ ಪಃ' ಸೂತ್ರದಿಂದ ಪಪ್ರತ್ಯಯ. ಉದಾ:—'**ಅಲ್ಪಾ ಏನಂ ಪಶವೋ ಮೂಙ್ಜಂತ ಉಪತಿಷ್ಠೇರನ್**' ॥

ಹೀಗೆ ಹನ್ನೊಂದು ಹ್ರಸ್ವನಾಮಗಳು ॥ ೨ ॥

———

ಹ್ರಸ್ವೋ ಹ್ರಸತೇಃ ॥ ೪ ॥

ಹ್ರಸ್ವಶಬ್ದವು ಕಿರಿದಾಗು, ಚಿಕ್ಕದಾಗು ಎಂಬರ್ಥವುಳ್ಳ ಹ್ರಸತಿಧಾತುವಿನಿಂದ ನಿಷ್ಪನ್ನವಾಗಿವೆ.

## ಮಹನ್ನಾಮಾನ್ಯುತ್ತರಾಣಿ ಪಂಚವಿಂಶತಿಃ ॥ ೫ ॥

(೧) ಮಹತ್ (೨) ಬ್ರಧ್ನಃ (೩) ಋಷ್ವಃ (೪) ಬೃಹತ್ (೫) ಉಕ್ಷಿತಃ (೬) ತವಸಃ (೭) ತವಿಷಃ (೮) ಮಹಿಷಃ (೯) ಅಭ್ವಃ (೧೦) ಋಭುಕ್ಷಾಃ (೧೧) ಉಕ್ಷಾಃ (೧೨) ವಿಹಾಯಾಃ (೧೩) ಯಹ್ವಃ (೧೪) ವವಕ್ಷಿಥಃ (೧೫) ವಿವಕ್ಷಸೇ (೧೬) ಅಮ್ಭೃಣಃ (೧೭) ಮಾಹಿನಃ (೧೮) ಗಭೀರಃ (೧೯) ಕಕುಹಃ (೨೦) ರಭಸಃ (೨೧) ವ್ರಾಧನ್ (೨೨) ವಿರಪ್ಶೀ (೨೩) ಅದ್ಭುತಮ್ (೨೪) ಬಂಹಿಷ್ಠಃ (೨೫) ಬರ್ಹಿಷತ್

## ಇತಿ ಪಂಚವಿಂಶತಿರ್ಮಹನ್ನಾಮಾನಿ ॥ ೩ ॥

(೧) ಮಹತ್ ॥ ಇಪ್ಪತ್ತೈದು ದೊಡ್ಡದು ಎಂಬರ್ಥಕೊಡುವ ನಾಮಗಳನ್ನು ತೋರಿಸುತ್ತಾನೆ. ಮಾನದಿಂದ, ಪ್ರಮಾಣದಿಂದ ಇತರ ಅಲ್ಪಗಳನ್ನು ಬಿಡುತ್ತದೆ ಎಂಬರ್ಥ ತೋರುವುದರಿಂದ ಮಾನ, ಹಾ ಧಾತುಗಳಿಂದ ಈ ಪದವಾಗಿದೆಯೆಂದು ಶಾಕಪೂಣಿಯೆಂಬುವರ ಮತ. ಯಾಸ್ಕರ ಮತದಲ್ಲಿ ' ಮಂಹನೀಯಃ ಮಹತ್ ' ಎಂದುದರಿಂದ ಪೂಜಾರ್ಥಕ ಮಹಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಸ್ಕಂದಸ್ವಾಮೀಭಾಷ್ಯ. ಎರಡುಮತದಲ್ಲಿಯೂ ' ವರ್ತಮಾನೇ ಪೃಷತ್‌ಮಹತ್ ' (ಉ-೨-೨೮) ಸೂತ್ರದಿಂದ ನಿಪಾತನಾದ ರೂಪವನ್ನೇ ಅಂಗೀಕರಿಸಬೇಕು. ಉದಾಹರಣೆ—' **ಮಹತ್ತದುಲ್ಬಂ ಸ್ಥವಿರಂ ತದಾಸೀತ್** ' (**ಋ. ಸಂ. ೮-೧-೧೦-೧**)

(೨) ಬ್ರಧ್ನಃ ॥ ಅಶ್ವನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೪-೧೬) ಎಲ್ಲಾ ಸೇವಕ ಮುಂತಾದವರನ್ನು ವೇತನದಾನದಿಂದ ಕಟ್ಟುತ್ತದೆ. (ವಶೀಕರಿಸುತ್ತದೆ.) ಎಂದರ್ಥ " **ಯುಞ್ಜನ್ತಿ ಬ್ರಧ್ನಮರುಷಂ ಚರನ್ತಮ್** " (**ಋ. ಸಂ. ೧-೧-೧೧-೧**) ॥

(೩) **ಋಷ್ವ** ॥ '' ಋಷ-ಗತೌ " (ತು-ಪ) ' ಸರ್ವನಿಘೃಷ್ಟ–' (ಉ-೧-೧೫೧) ಸೂತ್ರದಿಂದ ವನ್‌ಪ್ರತ್ಯಯ ಬಂದು ಗುಣಾಭಾವವು ನಿಪಾತಿತವಾಗಿದೆ. ದೊಡ್ಡದು ಎಲ್ಲರಿಂದಲೂ ಹೊಂದಲ್ಪಡುತ್ತದೆ. ಭೂಮಿಯನ್ನು ಹೊಂದಿರುವುದು ಎಂದು ಗತ್ಯರ್ಥದಲ್ಲಿ ಅರ್ಥ ' ಋಷಿರ್ದರ್ಶನಾತ್ (ನಿರು-೪-೧೧) ಎಂಬ ಭಾಷ್ಯದಿಂದ ದರ್ಶನಾರ್ಥವೂ ಹೇಳಿರುವುದರಿಂದ ಮಹತ್ತಾದದ್ದು ಎಲ್ಲರಿಂದಲೂ ದರ್ಶನೀಯವಾಗಿರುತ್ತದೆಂದೂ ಅರ್ಥವಾಗುತ್ತದೆ. ಉದಾ-' **ಯಷ್ವಾತ ಇಂದ್ರ ಸ್ಥವಿರಸ್ಯ ಬಾಹೂ** (**ಋ. ಸಂ. ೪-೭-೩೧-೩**) ॥

(೪) **ಬೃಹತ್** ॥ ' ಬೃಹಿ-ವೃದ್ಧೌ (ಭಾ.ಪ) 'ವರ್ತಮಾನೇ ಪೃಷತ್‌ಬೃಹತ್' (ಉ-೨-೭೮) ಸೂತ್ರದಿಂದ ಶತ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ದೊಡ್ಡದು ಯಾವಾಗಲೂ ಪರಿವೃದ್ಧವಾಗಿರುತ್ತದೆ. ಇದು ಇರುವಾಗ ಐಶ್ವರ್ಯಾದಿಗಳು ಹೆಚ್ಚುತ್ತವೆ. ಇದರಿಂದ ಆಶ್ರಯಿಸಿದವನು ವೃದ್ಧಿಹೊಂದುತ್ತಾನೆ. ಎಂದು ವೃದ್ಧ್ಯರ್ಥದಲ್ಲಿ ಅರ್ಥ. ಉದಾ–**ಬೃಹದ್ವದೇಮ ವಿದಥೇ ಸುವೀರಾಃ** (**ಋ. ಸಂ. ೨-೫-೧೯-೬**) **ಉರೋಋಷ್ವರ್ಸ್ಯ ಬೃಹತಃ** (**ಋ. ಸಂ. ೧-೨-೧೭-೪**) ಋಷ್ವ-

ವೆಂಬುದೂ ಮಹನ್ನಾಮವೇ ಆದರೂ ಬಲದಿಂದ ಮಹತ್ತಾಗುತ್ತದೆ., ಬೃಹತಃ ಎಂಬುದು ವೇಗದಿಂದ ಮಹನ್ನಾಮವಾಗುತ್ತದೆಂದು ಭೇದ ತಿಳಿಯಬೇಕು.

(೫) **ಉಕ್ಷಿತಃ** ॥ ವೃದ್ಧ್ಯರ್ಥಕವಾದ ಉಕ್ಷಧಾತುವಿಗೆ ಕ್ತಪ್ರತ್ಯಯ ಆರ್ಧಧಾತುಕ ನಿಮಿತ್ತವಾಗಿ ಇಡಾಗಮ. ಇದಕ್ಕೆ ನಿಗಮ ಹುಡುಕಬೇಕು.

(೬) ತವಸಃ ॥ ವೃದ್ಧ್ಯರ್ಥಕವಾದ ತವಧಾತುವಿಗೆ 'ಅತ್ಯವಿಚಮಿತಮಿನ—' (ಉ. ೩–೧೧೩) ಸೂತ್ರದಿಂದ ಅಸಚ್‌ಪ್ರತ್ಯಯ. ಉದಾಹರಣೆ—**"ತನ್ತ್ವಾ ಗೃಣಾಮಿ ತವಸ ಮತವ್ಯಾನ್" (ಋ. ಸಂ. ೫–೬–೨೫–೫)** ॥

(೭) **ತವಿಷಃ** ॥ ಪೂರ್ವೋಕ್ತಧಾತುವಿಗೆ 'ತವೇಣಿದ್ವಾ' (ಉ. ೧–೪೮) ಸೂತ್ರದಿಂದ ಟಿಷಚ್‌ಪ್ರತ್ಯಯ. ಟಕಾರ ಇತ್ತಾಗುತ್ತದೆ. ಉದಾಹರಣೆ—**"ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ" (ಋ. ಸಂ. ೪–೮–೩೦–೨)** ॥

(೮) **ಮಹಿಷಃ** ॥ 'ಮಹ–ಪೂಜಾಯಾಮ್.' ಧಾತು. 'ಅವಿಮಹ್ಯೋಷ್ಟಿಷಚ್' (ಉ. ೧–೪೫) ಸೂತ್ರದಿಂದ ಟಿಷಚ್‌ಪ್ರತ್ಯಯ. ಮಹಚ್ಛಬ್ದದಂತೆಯೇ ಅರ್ಥ ತಿಳಿಯಬೇಕು. ಅಥವಾ ಮಹಧಾತುವಿಗೆ ಕ್ವಿಪ್ ಬಂದರೆ ಮಹ್ ಎಂದಾಗುತ್ತದೆ. ಸಪ್ತಮ್ಯೇಕವಚನದಲ್ಲಿ ಮಹಿ ಎಂದು ರೂಪ. ಇದು ಉಪಪದವಾಗಿರುವಾಗ ಸದ್‌ಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆಲೋಪ. 'ತತ್ಪುರುಷೇ ಕೃತಿ ಬಹುಲಮ್' (ಪಾ. ಸೂ. ೬–೩–೧೪) ಸೂತ್ರದಿಂದ ಕೃದಂತ ಉತ್ತರಪದಪರದಲ್ಲಿರುವಾಗ ಅಲುಕ್ ಬರುತ್ತದೆ. (ಸಪ್ತಮಿಗೆ ಲೋಪ ಬರುವುದಿಲ್ಲ.) ಸುಷಾಮಾದಿಗಣಪಠಿತವಾದುದರಿಂದ ಷತ್ವ. ಮಹಿ=ಮಹತಿಸ್ಥಾನೇ ಸೀದನ್=ಆಸ್ತೇ ದೊಡ್ಡಸ್ಥಾನದಲ್ಲಿರುತ್ತದೆಂದರ್ಥ. ಉದಾಹರಣೆ—**"ಮಹಿಷಾಸೋ ಮಾಯಿನಶ್ಚಿತ್ರಭಾನವಃ" (ಋ. ಸಂ. ೧–೫–೭–೨)** ॥

(೯) **ಅಭ್ವಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೧೨–೮೯) 'ಆ=ಸಮಂತಾತ್ ಭವತಿ ಇತಿ' ಕೀರ್ತಿಮತ್ತಾದುದರಿಂದ ಸುತ್ತಲೂ ಇರುತ್ತದೆಂದರ್ಥ. ಅಥವಾ ನಞ್ ಪೂರ್ವದಲ್ಲಿರುವಾಗ ಸತ್ತಾರ್ಥಕ, ಪ್ರಾಪ್ತ್ಯರ್ಥಕ ಭೂಧಾತುವಿಗೆ 'ನಞಿ ಭುವೋ ಡಿತ್' ಸೂತ್ರದಿಂದ ಕ್ವನ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಇದು ಇರುವಾಗ ಯಾವ ಉಪದ್ರವವೂ ಆಗುವುದಿಲ್ಲ, ಹೊಂದಲ್ಪಡುವುದಿಲ್ಲವೆಂದರ್ಥ. ಉದಾಹರಣೆ—**"ನ ಯೋ ವಾತಸ್ಯ ಪ್ರಮಿನಂತ್ಯಭ್ವಮ್ ಆ ಯೋ ನಾ ಅಭ್ವ ಈಶತೇ" (ಋ. ಸಂ. ೧–೩–೧೯–೩)** ॥

(೧೦) **ಋಭುಕ್ಷಾಃ** ॥ ಋ–ಗತೌ. ಧಾತು. (ಭ್ವಾ–ಪ–) 'ಅರ್ತೇರ್ಭುರ್ಕ್ಷಿನಕ್' ಸೂತ್ರದಿಂದ ಭುಕ್ಷಿನಕ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಋಭುಕ್ಷಿನ್ ನಾಂತಪದವಾಗುತ್ತದೆ. ಪ್ರಥಮಾವಿಭಕ್ತಿ ಏಕವಚನದಲ್ಲಿ 'ಪಥಿಮಥ್ಯೃಭುಕ್ಷಾಮಾತ್' (ಪಾ–ಸೂ–೭–೧–೮೫) ಸೂತ್ರದಿಂದ ಆಕಾರಾದೇಶ. 'ಇತೋಽತ್‌ಸರ್ವನಾಮಸ್ಥಾನೇ' (ಪಾ–ಸೂ–೭–೧–೮೬) ಸೂತ್ರದಿಂದ ಇಕಾರಕ್ಕೆ ಅಕಾರ. ಸಕಾರಕ್ಕೆ ರುತ್ವ, ವಿಸರ್ಗ. ಉರು=ಅಧಿಕವಾಗಿ ಭಾತಿ=ಶೋಭಿಸುತ್ತದೆ, ಋತೇನ=ಸತ್ಯದಿಂದ, ಯಜ್ಞದಿಂದ ಶೋಭಿಸುವುದು' ಇರುವುದು ಋಭ. ಮೇಧಾವಿ' ಅಥವಾ ಮಹತ್‌ಸ್ಥಾನವೆಂದು ತಾತ್ಪರ್ಯ. ಉರು ಶಬ್ದ ಉಪಪದವಾಗಿರುವಾಗ ಭಾಧಾತು ಅಥವಾ ಭೂಧಾತುವಿಗೆ ಮೃಗಯ್ವಾದಯಶ್ಚ' ಸೂತ್ರದಿಂದ ಕುಪ್ರತ್ಯಯ. ಪೂರ್ವದಲ್ಲಿ ಉವರ್ಣ, ಟಿಲೋಪ, ಸಂಪ್ರಸಾರಣಾದಿಗಳು ನಿಪಾತಿತವಾಗುತ್ತವೆ. ಐಶ್ವರ್ಯಾರ್ಥಕಕ್ಷಿಧಾತುವಿಗೆ ವೃತೇಶ್ಛಂದಸಿ (ಉ–೪–೧೩೬) ಸೂತ್ರದಿಂದ ವಿಹಿತವಾದ ಇನಿಪ್ರತ್ಯಯ

ಬಹುಲಗ್ರಹಣದಿಂದ ಇವಕ್ಕೂ ಬಂದು ಟಿಲೋಪನಿಪಾತಿತವಾಗುತ್ತದೆ. 'ಋಭೂಣಾಂ ಕ್ಷಯತಿ=ಈಷ್ಟೇ, ಋಭೌ ಮಹತಿ-ಸ್ಥಾನೇ ನಿವಸಿತಿ ವಾ' ಉದಾ:—**'ತ್ವಮೃಭುಕ್ಷಾನರ್ಯಸ್ತ್ವಂ ಷಾಟ್' (ಋ. ಸಂ. ೧-೫.೪.೩)** ॥

(೧೧) **ಉಕ್ಷಾ** ॥ ವೃದ್ಧ್ಯರ್ಥಕವಾದ ಉಕ್ಷಧಾತುವಿಗೆ 'ಶ್ವನ್ನುಕ್ಷನ್ಪೂಷನ್—' (ಉ-೧-೧೫೫) ಸೂತ್ರದಿಂದ ಕನ್‌ಪ್ರತ್ಯಯ ಬಂದು ನಿಪಾತಿತವಾಗುತ್ತದೆ. ಅಧಿಕವೃದ್ಧಿಹೊಂದಿರುವುದೆಂದರ್ಥ. ಉದಾಹರಣೆ ಹುಡುಕಬೇಕು.

(೧೨) **ವಿಹಾಯಃ** ॥ ಔಹಾಕ್-ತ್ಯಾಗೇ. ಧಾತು. 'ವಹಿಹಾಧಾಞ್ಭ್ಯಶ್ಛಂದಸಿ' (ಉ-೩-೨೧೫) ಸೂತ್ರದಿಂದ ವಿಉಪಸರ್ಗಪೂರ್ವದಲ್ಲಿರುವಾಗ ಯುಗಾಗಮ ಬಂದು ನಿಪಾತಿತವಾಗಿದೆ. ಅಲ್ಪವನ್ನು ಬಿಡುವುದು ಎಂದರ್ಥ:—**'ಕೃಷ್ಣಾ-ದುದಸ್ಥಾದರ್ಯಾ ೩ ವಿಹಾಯಾಃ' (ಋ. ಸಂ.೨-೧-೪-೧)** ॥

(೧೩) **ಯಹ್ವಃ** ॥ 'ಯಜ-ಪೂಜಾಯಾಮ್' 'ಶೇವಯಹ್ವಜಿಹ್ವಾಗ್ರೀವಾ—' (ಉ. ೧-೧೫೨) ಸೂತ್ರದಿಂದ ವನ್‌ಪ್ರತ್ಯಯಾಂತವಾಗಿ ನಿಪಾತಿತವಾಗುತ್ತದೆ. ಜಕಾರಕ್ಕೆ ಹಕಾರವೂ ಬರುತ್ತದೆ. ದೇವಪೂಜಾದಿಗಳನ್ನು ಮಾಡುವುದು. ಅಥವಾ 'ಯಸು-ಪ್ರಯತ್ನೇ' (ದಿ-ಪ) ಧಾತುವಿಗೆ 'ಯಸೋಶ್ಚ-' ಸೂತ್ರದಿಂದ ಕ್ವನ್‌ಪ್ರತ್ಯಯವೆಂದು ಭೋಜಸೂತ್ರ. ಜಯಾದಿಗಳಲ್ಲಿ ಪ್ರಯತ್ನಿಸುವುದು. 'ಯಹ್ವ ಇತಿ ಮಹತೋ ನಾಮಧೇಯಮ್ ಯಾತಶ್ಚ ಹೂತಶ್ಚ ಭವತಿ' (ನಿ. ೮-೮) ಎಂಬ ಭಾಷ್ಯದಲ್ಲಿ ಎರಡು ಧಾತುಗಳಿಂದ ಈ ರೂಪವಾಗಿದೆಯೆಂದು ಹೇಳಿವೆ. ಯಾ, ಹ್ವೇಞ್ ಈ ಎರಡು ಧಾತುಗಳಿಗೆ 'ಗೇಹೇ ಕಃ' (ಪಾ. ಸೂ. ೩-೧-೧೪೪) ಸೂತ್ರವಿಹಿತವಾದ ಕ ಪ್ರತ್ಯಯವು ಬಹುಲಗ್ರಹಣದಿಂದ ಭೂತಾರ್ಥದಲ್ಲಿ ಬಂದು ಸಂಪ್ರಸಾರಣಾಭಾವವೂ ನಿಪಾತಿತವಾಗುತ್ತದೆ. ಉದಾಹರಣೆ-**'ಪ್ರವೋ ಯಹ್ವಂ ಪುರೂಣಾಮ್' (ಋ. ಸಂ ೧-೩-೮-೧)**

(೧೪) **ವವಕ್ಷಿಥ** (೧೫) **ವಿವಕ್ಷಸೇ** ॥ 'ತತ್ರ ವವಕ್ಷಿಥ ವಿವಕ್ಷಸ ಇತ್ಯೇತೇ ಸನ್ಯತ' (ನಿರು-೩-೧೩) ಎಂಬ ಭಾಷ್ಯದಲ್ಲಿ ಸ್ಕಂದಸ್ವಾಮಿಯು ಇವೆರಡೂಪದಗಳೂ ಮಹನ್ನಾಮದಲ್ಲಿ ಹೇಳಲ್ಪಟ್ಟುದರಿಂದ ಇವುಗಳು ಮಹದ್ವಾಚಕಗಳಾಗುತ್ತವೆಯೆಂದು ಹೇಳಿರುತ್ತಾನೆ. ವವಕ್ಷಿಥ ಎಂಬಲ್ಲಿ 'ಸನ್ಯತಃ' (ಪಾ. ಸೂ. ೮-೪-೭೯) ಸೂತ್ರದಿಂದು ಅಭ್ಯಾಸಕ್ಕೆ ಇತ್ವ ಬರಬೇಕಾದದ್ದು ಬರಲಿಲ್ಲ. ಏಕವಚನಸ್ಥಾನದಲ್ಲಿ ಬಹುವಚನವೂ, ಅಕಾರದಸ್ಥಾನದಲ್ಲಿ ಇಕಾರವೂ ವ್ಯತ್ಯಯದಿಂದ ಬಂದಿದೆ. ಉದಾಹರಣೆ—**'ಅತಿವಿಶ್ವಂ ವವಕ್ಷಿಥ' (ಋ. ಸಂ. ೧-೬-೧-೫)** **'ಶೀರಂ ಪಾವಕಶೋಷಂ ವಿವಕ್ಷಸೇ' (ಋ ಸಂ. ೭-೭-೪-೧)** ॥

(೧೬) **ಅಮ್ಭೃಣಃ** ॥ ಅಮಧಾತುವಿಗೆ ಕ್ವಿಪ್ ಬಂದರೆ ಅಮ್ ಎಂದಾಗುತ್ತದೆ. ಭರಣಾರ್ಥ ಭೃಧಾತುವಿಗೆ 'ಇಣ್‌ಸಿಞ್‌ಜಿದಿ—' (ಉ. ೩-೨) ಸೂತ್ರದಿಂದ ವಿಹಿತವಾದ ನಕ್‌ಪ್ರತ್ಯಯ ಬಹುಲಗ್ರಹಣದಿಂದ ಬರುತ್ತದೆ. ಋಕಾರದ ಪರದಲ್ಲಿರುವುದರಿಂದ ಣತ್ವ. ಮಹತ್ತಾದ ಫಲಕ್ಕೆ ಕಾರಣವಾದದ್ದು ಎಂದು ಸ್ಕಂದಸ್ವಾಮಿಯ ಭಾಷ್ಯ. ಉದಾಹರಣೆ—**'ಶಿಶಂಗಭೃಷ್ಟಿಮಮ್ಭೃಣಮ್' (ಋ. ಸಂ. ೨-೧-೨೨-೫)**

(೧೭) **ಮಾಹಿನಃ** ॥ ಪೂಜಾರ್ಥಕ ಮಹಧಾತುವಿಗೆ 'ಮಹೇರಿನಣ್ ಚ' (-೫೩) ಸೂತ್ರದಿಂದ ಇನಣ್‌ಪ್ರತ್ಯಯ ಣಿತ್ತಾದುದರಿಂದ ಉಪಧಾವೃದ್ಧಿ. ಉದಾ-**ಪ್ರಯೋ ನ ಹರ್ವಿ ಸ್ತೋಮಂ ಮಾಹಿನಾಯ" (ಋ-ಸಂ-೧-೪-೨೭-೧)** ॥

(೧೮) **ಗಭೀರಃ** ॥ ವಾಜ್ನಿಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೧-೭) ಮಹತ್ತಾದ ಸ್ಥಾನದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಉದಾ-ಉರು-**ಉರುವ್ಯಚಾ ನರಿಮತಾ ಗಭೀರಮ್** (**ಋ. ಸಂ. ೧-೭-೨೬-೨**) ॥

(೧೯) **ಕಕುಹಃ** ॥ 'ಕಕು-ಸಹನೇ' ಧಾತುವಿಗೆ 'ಕಕೇರುಹಃ' ಸೂತ್ರದಿಂದ ಉಹಪ್ರತ್ಯಯ. ಶತ್ರುಗಳನು ತಿರಸ್ಕರಿಸುವುದು, ಅಪರಾಧಗಳನ್ನು ಕ್ಷಮಿಸುವುದು. ಉದಾ:—**ನಚ್ಯಂತೇ ವಾ ಕಕುಹಾಸಿಸಃ**' (**ಋ. ಸಂ. ೧-೩-೩೩-೩**) ಇದು ಮಹನ್ನಾಮವೆಂದು ಸ್ಕಂದಸ್ವಾಮಿಯ **ಭಾಷ್ಯ.** ॥

(೨೦) **ರಭಸಃ** ॥ ರಭ-ರಾಭಸ್ಯೇ. ಧಾತು. 'ಅತ್ಯವಿಚಮಿತಮಿನ—' (ಉ-೩-೧೧೩) ಸೂತ್ರದಿಂದ ಅಸಚ್ ಪ್ರತ್ಯಯ. ಅಧಿಕಕಾರ್ಯಗಳನ್ನು ಆರಂಭಿಸುವುದು, ಶತ್ರುಗಳನ್ನು ತಡೆಯುವುದೆಂದರ್ಥ. ಉದಾ:—'**ಅಧ್ವೈನಂ ವೃಕಾ ರಭಸಾಸೋ ಅದ್ಯುಃ**' (**ಋ. ಸಂ. ೮-೫-೩-೪**) ॥

(೨೧) **ವ್ರಾಧತ್** ॥ ವ್ರನ್ದಧಾತುವಿಗೆ 'ಸಂಶ್ಚತೃಂಪದ್ವೇಹ—'(ಉ-೨-೭೯) ಸೂತ್ರದಂದ ಇತಿಪ್ರತ್ಯಯ, ಅಕಾರಾಗಮ ಬಂದು ನಿಪಾತಿತವಾಗುತ್ತದೆ. ಉದಾ:—'**ಸ ವ್ರಾಧತೋ ನಹುಷೋ ದಂಸುಜೂನಃ**' (**ಋ. ಸಂ. ೨-೧-೨-೪**) ॥

(೨೨) **ವಿರಪ್ಶೀ** ॥ 'ರಪ-ವ್ಯಕ್ತಾಯಾಂ ವಾಚಿ' (ಭ್ವಾ-ಪ) ವಿಉಪಸರ್ಗಪೂರ್ವದಲ್ಲಿರುವಾಗ 'ರಪಭೃಕಮ್ಯಭಿಕುಭ್ಯಃ ಶಕ್' ಸೂತ್ರವಿಹಿತವಾದ ಶಕ್‌ಪ್ರತ್ಯಯ. ಇದಕ್ಕೆ ಬರುತ್ತದೆ. ವಿವಿಧ ರೀತಿಯಿಂದ ಹೇಳುವವರು ಸ್ತೋತ್ರಮಾಡುವವರು ವಿರಪ್ಶಾಃ ಅವರಿಂದ ಕೂಡಿರುವುದು ವಿರಪ್ಶೀ. ಅಥವಾ ವಿವಿಧವಾದ ರಪಣ, ವಿರಪಣ. ಅದು ಉಳ್ಳದ್ದು ಎಂದರ್ಥ. ಉದಾ:—"**ವಿರಪ್ಶೀ ಗೋಮತೀ ಮಹೀ**" (**ಋ. ಸಂ. ೧-೧-೧೬-೩**) "**ಕೃತ್ವೇ ಅಪಿವೋ ವಿರಪ್ಶೀನ್**" (**ಋ. ಸಂ. ೪-೭-೧೨-೨**)

(೨೩) **ಅದ್ಭುತಮ್** ॥ 'ಭೂ-ಸತ್ತಾಯಾಮ್' ಇದಕ್ಕೆ 'ಅದಿ ಭುವೋ ಡುತಚ್' (ಉ. ೫-೧) ಸೂತ್ರದಿಂದ ಡುತಚ್‌ಪ್ರತ್ಯಯ. ಅದು ಎಂಬುದು ಉಪಪದವಾಗಿರಬೇಕು. ಡಿತ್ತಾದುದರಿಂದ ಟಿಲೋಪ. ಆಶ್ಚರ್ಯಾರ್ಥವನ್ನು ಕೊಡುವ ಅದ್ ಎಂಬುದು ಅವ್ಯಯವೆಂದು ಕ್ಷೀರಸ್ವಾಮಿ ಮತ. ಅಥವಾ ಸಮ್‌ಪೂರ್ವಕವಾದ ಭೃಧಾತುವಿಗೆ ಬಹುಲಗ್ರಹಣದಿಂದ ಪೂರ್ವೋಕ್ತವಾದ ಡುತಚ್‌ಪ್ರತ್ಯಯ, ಸಮಿಗೆ ಅದ್ಭಾವ. ಟಿಲೋಪದಿಂದ ಅದ್ಭುತಂ ಎಂದಾಗುತ್ತದೆ. ಧನಾದಿಗಳಿಂದ ಚನ್ನಾಗಿ (ಪೋಷಿಸಲ್ಪಟ್ಟದ್ದು, ಆಶ್ರಯಿಸಲ್ಪಟ್ಟವನಿಂದ ಚನ್ನಾಗಿ ಪೋಷಿಸುವುದು ಎಂದರ್ಥ. ಉದಾಹರಣೆ-"**ಸದಸಸ್ಪತಿಮದ್ಭುತಮ್**" **ಋ. ಸಂ. ೧-೧-೩೫-೧**) "**ವಷಟ್‌ಕೃತಸ್ಯಾದ್ಭುತಸ್ಯ ದಸ್ರಾ**" (**ಋ. ಸಂ. ೧-೨-೨೨-೪**) ಇಲ್ಲಿ ಮಹನ್ನಾಮವು ಆದ್ಯುದಾತ್ತವಾಗಿಯೂ, ಆಶ್ಚರ್ಯವಾದದ್ದೆಂಬುದು ಅಂತೋದಾತ್ತವಾಗಿಯೂ ಇರುತ್ತದೆಂದು ಮಾಧವರ ಭಾಷ್ಯ.

(೨೪) **ಬಂಹಿಷ್ಠಃ** ॥ ಬಹಿ, ಮಹಿ-ವೃದ್ಧೌ. (ಭ್ವಾ-ಪ) 'ಲಂಘಿಬಂಹ್ಯೋರ್ನಲೋಪಶ್ಚ' (ಉ. ೧-೨೮) ಎಂಬುದರಿಂದ ಬಹು ಎಂದು ನಿಪಾತಿತವಾಗುತ್ತದೆ. ಇದಕ್ಕೆ ಇಷ್ಠನಪ್ರತ್ಯಯ ಬಂದು ಬಂಹಿಷ್ಠ ಎಂದಾಗಿದೆ. ಮತ್ವರ್ಥದಲ್ಲಿ ಈ ಪ್ರತ್ಯಯವೆಂದು ಕ್ಷೀರಸ್ವಾಮಿ 'ಅತಿಶಯೇನ ಬಹುಲಃ ಬಂಹಿಷ್ಠಃ' ಎಂಬರ್ಥದಲ್ಲಿ ಇಷ್ಠನ್ ಬಂದಾಗ 'ಪ್ರಿಯಸ್ಥಿರ—' (ಪಾ. ಸೂ. ೬-೪-೧೫೭) ಸೂತ್ರದಿಂದ ಬಹುಲಪದಕ್ಕೆ ಬಂಹಾದೇಶ. ಅಥವಾ 'ನಿಚುಲವಂ ಜುಲವಕುಲ—' ಸೂತ್ರದಿಂದ ಬಂಹ್‌ಧಾತುವಿಗೆ ಉಲಚ್‌ಪ್ರತ್ಯಯ ಬಂದು ನಲೋಪ ನಿಪಾತಿತವಾಗುತ್ತದೆ. ಉದಾಹರಣೆ—"**ಯದ್‌ಬಂಹಿಷ್ಠಂ ನಾತಿ ವಿಧೇ ಸುದಾನೂ**" (**ಋ. ಸಂ. ೪-೪-೩೧-೩**) ॥

(೨೫) **ಬರ್ಹಿಷತ್** ‖ ಬೃಹ, ಬೃಹಿ–ವೃದ್ಧೌ. (ಭ್ವಾ–ಪ) 'ಬೃಂಹೇರ್ನಲೋಪಶ್ಚ' (ಉ. ೨–೧೦೨) ಸೂತ್ರದಿಂದ ಇಸಿಪ್ರತ್ಯಯ. ಬರ್ಹಿಸ್ ಎಂದು ಸಾಂತಪದವು ಉಪಪದವಿರುವಾಗ ಸದ್‌ಧಾತುವಿಗೆ 'ಸತ್ಸೂದ್ವಿಷ—' (ಪಾ. ಸೂ. ೩–೨–೬೧) ಸೂತ್ರದಿಂದ ಕ್ವಿಪ್‌ಪ್ರತ್ಯಯ. ಪೃಷೋದರಾದಿಗಣಪಠಿತವಾದುದರಿಂದ ಬರ್ಹಿಸ್‌ಶಬ್ದದ ಸಕಾರಕ್ಕೆ ಲೋಪ. ಸುಷಾಮಾದಿ ಗಣಪಠಿತವಾದುದರಿಂದ ಷತ್ವ. ಅಭಿವೃದ್ಧಸ್ಥಾನದಲ್ಲಿ ಇರುವುದು ಮಹಾನ್. ಮಹತ್ಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು.

ಹೀಗೆ ಇಪ್ಪತ್ತೈದು ಮಹನ್ನಾಮಗಳು ‖ ೩ ‖

———

ಮಹಾನ್ ಕಸ್ಮಾನ್ ಮಾನೇನಾನ್ಯಾಞ್ಜಹಾತೀತಿ ಶಾಕಪೂಣಿಃ।

ಮಂಹನೀಯೋ ಭವತೀತಿ ವಾ ‖ ೬ ‖

ಮಹಾನ್ ಎಂದರೇನು ? ಇದು ಅಳತೆಗಿಂತ ಮೀರಿರುವುದರಿಂದ ದೊಡ್ಡ ಎಂದು ಹೆಸರು. ಇದು ಶಾಕಪೂಣಿ ಯವರ ಅಭಿಮತವು, ಅಥವಾ (ದೊಡ್ಡದು ಯಾವಾಗಲೂ) ಪೂಜ್ಯವಾದದ್ದು, ಶ್ರೇಷ್ಠವಾದದ್ದು ಎಂದೂ ಅರ್ಥವಾಗ ಬಹುದು.

ತತ್ರ ವವಕ್ಷಿತ ವಿವಕ್ಷಸ ಇತ್ಯೇಸೇ ವಕ್ತೇರ್ವಾ ವಹತೇರ್ವಾ
ಸಾಭ್ಯಾಸಾದ್

**ಈ** ಮಹಾನ್ **(ಮಹತ್)** ಮೊದಲಾದ ಶಬ್ದಗಳ ಮಧ್ಯದಲ್ಲಿ **ವವಕ್ಷಿಥ** ಮತ್ತು **ವಿವಕ್ಷಸೇ** ಎಂಬ ಶಬ್ದಗಳಿ ರುವವು. ಈ ಎರಡು ಶಬ್ದಗಳೂ **ವಕ್ತಿ** ಅಥವಾ **ವಹತಿ** ಎಂಬ ಧಾತುಗಳಿಂದ ನಿಷ್ಪನ್ನವಾಗಿವೆ.

ಗೃಹನಾಮಾನ್ಯುತ್ತರಾಣಿ ದ್ವಾವಿಂಶತಿಃ ‖೮‖

(೧) ಗಯಃ (೨) ಕೃದರಃ (೩) ಗರ್ತ್ರಃ (೪) ಹರ್ಮ್ಯವಮ್
(೫) ಅಸ್ತಮ್ (೬) ಪಸ್ತ್ಯಮ್ (೭) ದುರೋಣೇ (೮) ನೀಲವತ್ (೯) ದುರ್ಯಾಃ
(೧೦) ಸ್ವಸರಾಣಿ (೧೧) ಅಮಾ (೧೨) ದಮೇ (೧೩) ಕೃತ್ತಿಃ (೧೪) ಯೋನಿಃ
(೧೫) ಸದ್ಮ (೧೬) ಶರಣಮ್ (೧೭) ವರೂಥಮ್ (೧೮) ಛರ್ದಿಃ
(೧೯) ಛದಿಃ (೨೦) ಛಾಯಾಃ (೨೧) ಶರ್ಮ (೨೨) ಅಜ್ಮ

ಇತಿ ದ್ವಾವಿಂಶತಿಗೃಹನಾಮಾನಿ ‖ ೪‖

(೧) **ಗಯಃ** ॥ ಇಪ್ಪತ್ತೆರಡು ಮನೆಯ ಹೆಸರನ್ನು ಹೇಳುತ್ತಾನೆ. ಅಪತ್ಯನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೨-೮) ವಾಸಕೋಸ್ಕರ ಹೊಂದಲ್ಪಡುತ್ತದೆ, ಇದರಿಂದ ಸುಖ ಹೊಂದುತ್ತಾರೆ ಎಂದು ಗತ್ಯರ್ಥಧಾತುವಿನಿಂದ ಆದಾಗ ತೋರುವ ಅರ್ಥ. ಸ್ವಾಸ್ಥ್ಯಾತಿಶಯದಿಂದ ಮನೆಯು ಸ್ತುತಿಸಲ್ಪಡುತ್ತದೆ ಅಥವಾ ಇದರಲ್ಲಿದ್ದು ದೇವತೆಗಳನ್ನು ಸ್ತುತಿಸುತ್ತಾರೆ ಎಂದು ಶಬ್ದಾರ್ಥದಲ್ಲಿ ಅರ್ಥ. ಉದಾಹರಣೆ....**"ಅರಕ್ಷದ್ದಾಶುಷೇ ಗಯಮ್"** (ಋ. ಸಂ- ೧-೫-೨೧-೨)

(೨) **ಕೃದರಃ** ॥ ಕೃತೀ-ಛೇದನೇ. (ತು, ರು, -ಪ-) 'ಕೃದರಾದಯಶ್ಚ' (ಉ-೫-೪೪) ಸೂತ್ರದಿಂದ ಅರನ್‌ಪ್ರತ್ಯಯ, ಗುಣಾಭಾವ, ತಕಾರಕ್ಕೆ ದಕಾರಗಳು ಬಂದು ನಿಪಾತಿತವಾಗಿದೆ. 'ಕೃತ್ಯತೇ ಕ್ಲೇಶಃ' ಇದರಿಂದ ಕಷ್ಟವು ಹೋಗಲಾಡಿಸಲ್ಪಡುತ್ತದೆ, ಸುಶಾಸ್ತ್ರಮರ್ಯಾದೆಯಿಂದ ಪರಿಚ್ಛಿನ್ನನಾದದ್ದು ಮನೆ. ಅಥವಾ 'ದೃಙ್‌ಅನಾದರೇ.' ಧಾತು (ತು-ಆ). 'ಗೃಹಿವೃದೃನಿಶ್ಚಗಮಶ್ಚ' (ಪಾ-ಸೂ-೩-೩-೫೮) ಸೂತ್ರದಿಂದ ಅಪ್‌ಪ್ರತ್ಯಯ. ಗುಣ ಬಂದರೆ ದರ ಎಂದಾಗುತ್ತದೆ. ಕೃತ: ದರಃ ಅತ್ರ ಕೃದರಃ ಮಾಡಲ್ಪಟ್ಟ ಆದರವುಳ್ಳದ್ದು ಮನೆ. ಪೃಷೋದರಾದಿಯಿಂದ ತಕಾರಲೋಪವಾಗುತ್ತದೆ. ಗೃಹಪರ್ಯಾಯದಲ್ಲಿ ಇದಕ್ಕೆ ನಿಗಮ ಹುಡುಕಬೇಕು. ॥

(೩) **ಗರ್ತಃ** ॥ ಗೄ-ಶಬ್ದೇ. (ಕ್ರ್ಯಾ-ಪ) ಸ್ತುತ್ಯರ್ಥದಲ್ಲಿಯೂ ಇದು ಹೇಳಿದೆ. 'ಹಸಿಮೃಗ್ರಿ—' (ಉ. ೩-೮೩) ಸೂತ್ರದಿಂದ ತನ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತು ಋಕಾರಕ್ಕೆ ಗುಣ. ಇದರಲ್ಲಿ ಶಬ್ದಮಾಡಲ್ಪಡುತ್ತದೆ, ಸ್ತುತಿಸಲ್ಪಡುತ್ತದೆ ಎಂದರ್ಥ. ನಿಗಮ ಹುಡುಕಬೇಕು.

(೪) **ಹರ್ಮ್ಯಮ್** ॥ ಹೃಙ್-ಹರಣೇ. ಧಾತು. 'ಮಧ್ಯವಿಧ್ಯಶಿಕ್ಯ—' ಸೂತ್ರದಿಂದ ಕ್ಯನ್‌ಪ್ರತ್ಯಯ, ಮುಡಾಗಮ, ಗುಣಗಳು ನಿಪಾತಿತವಾಗುತ್ತವೆ. ಇಲ್ಲಿ ಧಾನ್ಯಾದಿಗಳು ಕೂಡಿಡಲ್ಪಡುತ್ತವೆ, ತಂದಿಡಲ್ಪಡುತ್ತವೆ. ಅಥವಾ 'ಅಮ, ದ್ರಮ, ಹಮ್ಮ, ಮೀವೃ-ಗತೌ. (ಭ್ವಾ-ಪ) ಈ ಧಾತುವಿಗೆ ಅಘ್ನ್ಯಾದಿಗಣಪಠಿತವಾದುದರಿಂದ ಯಕ್‌ಪ್ರತ್ಯಯ. ಉದಾಹರಣೆ—**"ಮನ್ಯೋರಿಯಾಯ ಹರ್ಮ್ಯೇಷು ತಸ್ಥೌ"** (ಋ. ಸಂ. ೮-೩-೪-೪)॥

(೫) **ಅಸ್ತಮ್** ॥ 'ಅಸ-ಭುವಿ' (ಅದಾ-ಪ-) 'ಅಸ-ಗತಿದೀಪ್ತ್ಯಾದಾನೇಷು' 'ಅಸು-ಕ್ಷೇಪಣೇ' ಈ ಧಾತುಗಳಿಗೆ 'ಹಸಿಮೃಗ್ರಿಣ್ವಾಮಿ-' (ಉ-೩-೮೩) ಸೂತ್ರವಿಹಿತವಾದ ತನ್‌ಪ್ರತ್ಯಯ ಬರುತ್ತದೆ. ದ್ವಿತೀಯೈಕವಚನಾಂತ ರೂಪ. ಅಂಗನಾಸುಖಾದಿಗಳನ್ನು ಕೊಡುವುದು, ಪ್ರಕಾಶಿಸುವುದು ಮನೆ, ಗೃಹಾಭಿಲಾಷಿಗಳಿಂದ ಹೊಂದಲ್ಪಡುವುದು, ಪದಾರ್ಥಗಳು ಇದರಲ್ಲಿ ಇಡಲ್ಪಡುತ್ತವೆ ಎಂದರ್ಥ. ಉದಾ:—**'ಅಸ್ತಂ ನ ಗಾವೋ ನಕ್ಷಂತ ಇದ್ಧಮ್'** (ಋ. ಸಂ. ೧.೫-೧೦-೫) ॥

(೬) **ಪಸ್ತ್ಯಮ್** ॥ ಪಸಧಾತುವಿಗೆ 'ಮಧ್ಯವಿಧ್ಯ' ಇತ್ಯಾದಿ ಸೂತ್ರದಿಂದ ಔಣಾದಿಕಕ್ಯಾಚ್‌ಪ್ರತ್ಯಯ ಬಂದು, ತುಗಾಗಮದಿಂದ ನಿಪಾತಿತವಾಗಿದೆ. ಅಥವಾ ಗತ್ಯರ್ಥಕ ಪತಧಾತುವಿಗೆ ನಿಪಾತದಿಂದ ಸಕಾರ ಅಧಿಕವಾಗಿ ಬಂದು ಈರೂಪ ನಿಪಾತಿತವಾಗಿದೆ. ಇದರಲ್ಲಿ ಸೇರಿರುತ್ತಾರೆ ಎಂದರ್ಥ. ಉದಾ:—**'ವರುಣಃ ಪಸ್ತ್ಯಾಸ್ವಾ'** (ಋ. ಸಂ. ೧-೨ ೧೩-೫) **ಪ್ರಪ್ರದಾಶ್ವಾನ್ ಪಸ್ತ್ಯಾಭಿರಸ್ಥಿತ '** (ಋ. ಸಂ. ೧-೩-೨೧-೨) ಪಸ್ತ್ಯವೆಂಬುದು ಗೃಹನಾಮ. ಅಜಾದಿಯಾದುದರಿಂದ ಸ್ತ್ರೀತ್ವದಲ್ಲಿ ಟಾಪ್ ಬಂದಿದೆಯೆಂದು ಸ್ಕಂದಸ್ವಾಮಿ ಭಾಷ್ಯ.

(೭) **ದುರೋಣೇ** ॥ 'ರಾಸ್ನಾಸಾಸ್ನಾ—' ಇತ್ಯಾದಿ ಭೋಜಸೂತ್ರದಲ್ಲಿ ಆದಿಗ್ರಹಣದಿಂದ ದುರೋಣಾದಿ ಪದಗಳೂ ಸಿದ್ಧವಾಗಿದೆಯೆಂದು ವೃತ್ತಿಯಲ್ಲಿ ಹೇಳಿದೆ. ದುರ್ ಉಪಸರ್ಗಪೂರ್ವದಲ್ಲಿರುವಾದ ಅವಧಾತುವಿಗೆ ನಕ್. ಊಠ್

ಗಣ ನಿಪಾತಿತವಾಗುತ್ತದೆ. ‘ ದುರೋಣ ಇತಿ ಗೃಹನಾಮ ’ (ನಿರು. ೪–೫) ಎಂಬ ಭಾಷ್ಯದಲ್ಲಿ ದುಃ ಶಬ್ದಪೂರ್ವಕವಾದ ಅವಧಾತುವಿಗೆ ಲ್ಯುಟ್ ಬಂದಾಗ ಛಾಂದಸವಾದುದರಿಂದ, ಸಂಪ್ರಸಾರಣ, ಗುಣ ಬಂದಿದೆಯೆಂದು ಹೇಳಿದೆ. ದುಃಖವನ್ನು ದೂರಮಾಡುವುದು, ರಕ್ಷಿಸುವುದು ಎಂದರ್ಥ. ಉದಾಹರಣೆ—**‘ ಜುಷ್ಟೋದಮೂನಾ ಅತಿಥಿರ್ದುರೋಣೇ ’** (**ಋ.ಸಂ. ೩–೪–೧೪–೫**) **‘ ಮಧ್ಯೇ ನಿಷತ್ತೋರಣೋ ದುರೋಣೇ ’** (**ಋ. ಸಂ. ೧–೫–೧೩–೨**)

(೮) **ನೀಲಮ್** ॥ ಪ್ರಾಪಣಾರ್ಥಕ ನೀಧಾತುವಿಗೆ ‘ವ್ಯಾಡಕ್ರೋಡ ಕುಹೋಡಾದಯಃ’ ಸೂತ್ರದಿಂದ ಉಡಚ್ ಪ್ರತ್ಯಯ ಬಂದು, ಪ್ರತ್ಯಯಾದಿಗೆ ಲೋಪವೂ, ಗುಣಾಭಾವವೂ ನಿಪಾತಿತವಾಗಿದೆ. ಇಲ್ಲಿ ಪದಾರ್ಥಗಳು ಬಯಸಲ್ಪಡುತ್ತವೆ, ಆಯಾಸವನ್ನು ಹೋಗಲಾಡಿಸುತ್ತದೆ. ಉದಾಹರಣೆ—**“ಆಯೋ ಮಹಃ ಶೂರಃ ಸನಾದನೀಲಃ”** (**ಋ. ಸಂ. ೮–೧–೧೭–೧**) ॥

(೯) **ದುರ್ಯ್ಯಾಃ** । ‘ ದುವೀ–ಹಿಂಸಾಯಾಮ್ ’ (ಭ್ವಾ–ಪ) ಅಘ್ನ್ಯಾದಿಗಣಪಠಿತವಾದುದರಿಂದ ಯತ್ ಪ್ರತ್ಯಯ, ವಕಾರಲೋಪ, ದೀರ್ಘಾಭಾವ ಬಂದು ನಿಪಾತಿತವಾಗಿದೆ. ಮನೆಯು ದುಃಖವನ್ನು ಹೋಗಲಾಡಿಸುತ್ತದೆ. ಅಥವಾ ದುಃ ಶಬ್ದಪೂರ್ವಕವಾದ ಯಾ ಧಾತುವಿಗೆ ಘಞರ್ಥದಲ್ಲಿ ಕಪ್ರತ್ಯಯ. ದುಃಖದಿಂದ ಹೊಂದಲ್ಪಡುವುದು, ಗೃಹದ್ವಾರವನ್ನು ಹೊಂದಿರುವುದು ಎಂದರ್ಥ. ಉದಾಹರಣೆ—**‘ ಅವೀರಹಾ ಪ್ರಚರಾ ಸೋಮ ದುರ್ಯಾತ್ ’** (**ಋ. ಸಂ. ೧–೬–೨೨–೪**)

(೧೦) **ಸ್ವಸರಾಣಿ** । ಅಹರ್ನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧–೯–೫) ಶಬ್ದದಿಂದ ಮನೆಯು ಬಂಧುಗಳಿಂದ ಆಶ್ರಯಿಸಲ್ಪಡುತ್ತದೆ, ಇದರಲ್ಲಿ ಪದಾರ್ಥಗಳು ಚನ್ನಾಗಿ ಇಡಲ್ಪಡುತ್ತವೆ ಎಂದರ್ಥ. ಇದಕ್ಕೆ ಉದಾಹರಣೆ ನಿಗಮ ಹುಡುಕಬೇಕು.

(೧೧) **ಅಮಾ** । ‘ಅಮ–ಗತಿ ಭಕ್ಷಶಬ್ದೇಷು ’ (ಭ್ವಾ-ಪ-) ’ **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** (ಪಾ-ಸೂ-೩-೩-೧೧೮) ಸೂತ್ರದಿಂದ ಘಪ್ರತ್ಯಯ. ಇದು ಹೊಂದಲ್ಪಡುತ್ತದೆ, ಇದರಲ್ಲಿ ತಿನ್ನಲ್ಪಡುತ್ತದೆ, ಶಬ್ದಮಾಡಲ್ಪಡುತ್ತದೆ ಎಂದರ್ಥ. ಅಮಾ ಎಂಬ ಅವ್ಯಯವೂ ಇದೆ. ಇದು ಗೃಹಾರ್ಥವನ್ನೂ, ಒಟ್ಟಿಗೆ ಎಂಬರ್ಥವನ್ನೂ ಕೊಡುತ್ತದೆ, ‘ಅವ್ಯಯಾತ್ತ್ಯಪ್’ ಸೂತ್ರದಿಂದ ತ್ಯಪ್ ಬಂದು ಅಮಾತ್ಯ ಎಂದಾಗಿದೆ. ಉದಾ–**ಸ ನೋ ಅಮಾ ಸೋ ಅರಣೇ ನಿಪಾತು’** (**ಋ. ಸಂ. ೮–೨–೫–೭**) **ಅಮಾ ಸತೇ ವಹಸಿ ಭೂರಿವಾಮಮ್** (**ಋ. ಸಂ. ೨–೧-೯–೨**)

(೧೨) **ದಮೇ** ॥ **‘ ದಮು–**ಉಪಶಮನೇ (ದಿ–ಪ) ಘಞ್‌ಪ್ರತ್ಯಯ. ಇಂತ್ತಾದರೂ ‘ ನೋದಾತ್ತೋಪದೇಶ’— (ಪಾ–ಸೂ–೭.೨–೩೪) ಸೂತ್ರದಿಂದ ವೃದ್ಧಿನಿಷೇಧ ಬರುತ್ತವೆ. ಇದರಿಂದ ಶೀತಾದಿಗಳು ಹೋಗಲಾಡಿಸಲ್ಪಡುತ್ತವೆ. ಕ್ಲೇಶ ನಿವಾರಣೆಯಾಗುತ್ತದೆ. ಉದಾ–**‘ ವರ್ಧಮಾನಂ ಸ್ವೇ ದಮೇ ’** (**ಋ. ಸಂ. ೧.೧–೨–೩**) **“ಹಸ್ಕರ್ತಾರಂ ದಮೇ ದಮೇ ”** (**ಋ. ಸಂ. ೩–೫–೬–೩**) ॥

(೧೩) ಕೃತಿಃ ॥ ಕೃತೀ–ಛೇದನೇ (ತು, ರು–ಪ) ಕ್ತಿನ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಕೃದರ ಶಬ್ದದಂತೆ ಅರ್ಥಹೇಳಬೇಕು. ಉದಾಹರಣೆ ಹುಡುಕಬೇಕು.

(೧೪) **ಯೋನಿಃ** ॥ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೨-೬೯) ಇದರಿಂದ ಸುಖವು ಮಿಶ್ರಿತವಾಗುತ್ತದೆ. ಇದರಿಂದ ಅನಿಷ್ಟಾದಿಗಳು ಬೇರ್ಪಡಿಸಲ್ಪಡುತ್ತದೆ. ಹೆಂಡತಿ ರಕ್ಷಿಸಲ್ಪಟ್ಟಂತೆ ಪ್ರಾಕಾರಾದಿಗಳಿಂದ (ಕಂಪೌಂಡ್) ರಕ್ಷಿಸಲ್ಪಡುವುದು ಎಂದರ್ಥ. ಉದಾ–" **ಜಾಯೇವ ಯೋನಾವರಂ ವಿಶ್ವಸ್ಮೈ** " (ಋ. ಸಂ. ೧–೫–೧೦–೩) ॥

(೧೫) **ಸದ್ಮ** ॥ **ಸದ್**'ಧಾತುವಿಗೆ ಮನಿನ್‌ಪ್ರತ್ಯಯ. ಇದರಲ್ಲಿ ಇರುತ್ತಾರೆ, ನಾಶಹೊಂದುತ್ತಾರೆ. ಉದಾಹರಣೆ—**ಸದ್ಮೇವ ಧೀರಾಃ ಸಸ್ಮಾಯ ಚಕ್ರುಃ** "(ಋ. ಸಂ. ೧-೫-೧೧-೫)

'ವರ್ಮ' ಎಂದು ಕೆಲವರು ಪಾಠಮಾಡುತ್ತಾರೆ. ಆಗ ವೃಧಾತುವಿಗೆ ಮನ್‌ಪ್ರತ್ಯಯ. ಇದರಿಂದ ಹೊಂದಲ್ಪಡುವುದು, ಗೃಹಸ್ಥರಿಂದ ಸೇವಿಸಲ್ಪಡುವುದೆಂದರ್ಥ. ಇದಕ್ಕೆ ನಿಗಮ ಹುಡುಕಬೇಕು.

(೧೬) **ಶರಣಮ್** ॥ 'ಯುಚ್ ಬಹುಲಮ್' (ಉ-೨-೭೪) ಸೂತ್ರದಿಂದ ಶೃಧಾತುವಿಗೆ ಯುಚ್‌ಪ್ರತ್ಯಯ. ಅದಕ್ಕೆ ಅನಾದೇಶ, ಣತ್ವ. ಶೀತಾದಿಕ್ಲೇಶವನ್ನು ಹಿಂಸಿಸುತ್ತದೆ. ಕ್ಲೇಶಾದಿಗಳಿಂದ ರಕ್ಷಿಸುವುದು. ಎಂದರ್ಥ. ಪ್ರಾಪ್ತ್ಯರ್ಥವೂ ತೋರುತ್ತದೆಂದು ಮಾಧವಭಾಷ್ಯ ಜನರಿಂದ ಹೊಂದಲ್ಪಡುವುದು. ಉದಾ–"**ತೋದಸ್ಯೇವ ಶರಣ ಆ ಮಹಸ್ಯ**" (ಋ. ಸಂ. ೨-೨-೧೯-೧) ॥

(೧೭) **ವರೂಥಮ್** ॥ 'ವೃಞ್–ವರಣೇ' (ಸ್ವಾ–ಉ) 'ಜೃವೃಞ್‌ಭ್ಯಾಮೂಥನ್' (ಉ-೨-೫) ಸೂತ್ರದಿಂದ ಊಥನ್‌ಪ್ರತ್ಯಯ. ಋಕಾರಕ್ಕೆ ಗುಣರಪರವಾಗಿ ಬರುತ್ತದೆ. ಎಲ್ಲರಿಂದಲೂ ಬಯಸಲ್ಪಡುವುದು. ಉದಾ–"**ಭವಾ ವರೂಥಂ ಗೃಣತೇ ವಿಭಾವೋ**" (ಋ. ಸಂ. ೧–೪–೨೪–೪) ॥

(೧೮) **ಛರ್ದಿಃ** ॥ 'ಛರ್ದ–ಸಂದೀಪನೇ' (ಚು–ಪ) 'ಅರ್ಚಿಶುಚಿಹುಸೃ-(ಉ-೨-೧೦೧) ಸೂತ್ರದಿಂದ ಇಸಿಪ್ರತ್ಯಯ. ಆಯಾಯ ಕೊಠಡಿಗಳಿಂದ ಪ್ರಕಾಶಿಸುವುದು. ಮನೆ ಉದಾ-' **ಪ್ರಣೋ ಯಚ್ಛತಾದವಕಂ ಪೃಥು ಛರ್ದಿಃ** (ಋ. ಸಂ. ೧-೪-೫-೫) ॥ ' **ವರೂಥಂ ಮಸ್ತ ಯಚ್ಛರ್ದಿಃ** (ಋ. ಸಂ. ೬.೪-೫೨-೧)

(೧೯) **ಛದಿಃ** ॥ 'ಛದ-ಅಪವಾರಣೇ' (ಚು–ಉ) ಣಿಚ್ ಬಂದಾಗ ಛಾದಿ ಎಂದಾಗುತ್ತದೆ. ಹಿಂದಿನಂತೆ, ಇದರಮೇಲೆ ಇಸ್‌ಪ್ರತ್ಯಯ ಬಂದಾಗ 'ಇಸ್‌ಮನ್‌ವನ್ ಕ್ವಿ—' (ಪಾ. ಸೂ. ೬–೪–೯೭) ಸೂತ್ರದಿಂದ ಣಿಚಿಗೆ ಲೋಪ ಧಾತುವಿಗೆ ಹ್ರಸ್ವ. ಮುಚ್ಚಲ್ಪಡುವುದು ಎಂದರ್ಥ. ಇದಕ್ಕೆ ನಿಗಮ ಹುಡುಕಬೇಕು.

(೨೦) **ಛಾಯಾ** ॥ 'ಛೋ–ಛೇದನೇ' (ದಿ–ಪ) 'ಮಾಸ್ಥಾಸಮೀಸೂಭ್ಯೋಯಃ' ಸೂತ್ರದಿಂದ ಯ ಪ್ರತ್ಯಯ. ಧಾತುವಿಗೆ ಆತ್ವ. ಸ್ತ್ರೀತ್ವದಲ್ಲಿ ಟಾಪ್. ಛಾಯಾಕಾರದಂತಿರುವುದರಿಂದ ಮನೆಯೂ ಛಾಯಾಪದವಾಚ್ಯವಾಗುತ್ತದೆ. **ಉದಾ—' ಯಸ್ಯ ಛಾಯಾಮೃತಮ್** ' (ಋ. ಸಂ. ೮–೭–೩–೨)

(೨೧) **ಶರ್ಮ** ॥ ಶೃಧಾತು ಅಥವಾ ಶ್ರಿಞ್‌ಧಾತುವಿಗೆ ಔಣಾದಿಕ ಮನ್‌ಪ್ರತ್ಯಯ. ಶೃಧಾತುವಿಗೆ ಗುಣ. ಶ್ರಿಞ್ ಆದರೆ ಬಹುಲಗ್ರಹಣದಿಂದ ಅಭಿಮತರೂಪವನ್ನು ಹೇಳಬೇಕು. ಎಲ್ಲರಿಂದಲೂ ಸೇವಿಸಲ್ಪಡುವುದು. ಶೀತಾದಿಗಳನ್ನು ಹೋಗಲಾಡಿಸುವುದು. ಉದಾಹರಣೆ—"**ಸ್ಯಾಮೇದಿಂದ್ರಸ್ಯ ಶರ್ಮಣಿ**" (ಋ. ಸಂ. ೧–೧–೮–೧) "**ತ್ರಿಧಾತು ಶರ್ಮ ವಹತಂ ಶುಭಸ್ಪತೀ**" (ಋ. ಸಂ. ೧–೩–೪–೬) ॥

(೨೨) ಅಜ್ಮ || ಗತಿಕ್ಷೇಪಣಾರ್ಥಕವಾದ ಅಜಧಾತುವಿಗೆ 'ಅರ್ತಿಸ್ತುಸುಹು—' (ಉ. ೧–೧೩೭) ಸೂತ್ರದಿಂದ ವಿಹಿತವಾದ ಮನ್ ಬಹುಲಗ್ರಹಣದಿಂದ ಬರುತ್ತದೆ. ಅಸ್ತ್ರಶಬ್ದದಂತೆ ಅರ್ಥ ತೋರುತ್ತದೆ. ಉದಾಹರಣೆ—**"ಯೇಷಾಮಜ್ಮೇಷು ಪೃಥಿವೀ"** (ಋ. ಸಂ, ೧–೩–೧೩–೩) ||

ಹೀಗೆ ಇಪ್ಪತ್ತೆರಡು ಗೃಹನಾಮಗಳು

———

ಗೃಹಾಃ ಕಸ್ಮಾತ್ ಗೃಹ್ಣಂತೀತಿ ಸತಾಂ || ೯ ||

ಗೃಹಾಃ ಎಂಬ ಏಕ ಹೆಸರು ಬಂತು ಎಂದರೆ, ಯಾವುದನ್ನಾದರೂ ಪರಿಗ್ರಹಿಸಿ (ತಂದು) ಮನೆಯಲ್ಲಿ ಇಡುವುದರಿಂದ ಮನೆಗೆ ಗೃಹವೆಂದು ಹೆಸರು.

ಪರಿಚರಣಕರ್ಮಾಣ ಉತ್ತರೇ ಧಾತವೋ ದಶ ||೧೦||

[೧] ಇರಜ್ಯತಿ [೨] ವಿಧೇಮ [೩] ಸಪರ್ಯತಿ [೪] ನಮಸ್ಯತಿ [೫] ದುವಸ್ಯತಿ [೬] ಋಧ್ನೋತಿ [೭] ಋಣದ್ಧಿ [೮] ಋಚ್ಛತಿ [೯] ಸಪತಿ [೧೦] ವಿವಾಸತಿ||

ಇತಿ ದಶ ಪರಿಚರಣಕರ್ಮಾಣಃ ||೫ ||

(೧) ಇರಜ್ಯತಿ || ಸೇವಾರ್ಥಕಗಳಾದ ಹತ್ತು ಧಾತುಗಳನ್ನು ಹೇಳುತ್ತಾನೆ. 'ಇರಜ್–ಈರ್ಷ್ಯಾಯಾಮ್' ಕಂಡ್ವಾದಿಗಣಪಠಿತವಾದುದರಿಂದ ಯಕ್. ಧಾತುಗಳಿಗೆ ಅನೇಕಾರ್ಥಗಳಿವೆಯೆಂದು ಹಿಂದೆ ಹೇಳಿರುವುದರಿಂದ ಇಲ್ಲಿ ಪರಿಚರಣಾರ್ಥ ಹೇಳಬೇಕು. ನಿಗಮ ಹುಡುಕಬೇಕು.

(೨) ವಿಧೇಮ || 'ವಿಧ–ವಿಧಾನೇ, (ತು-ಅ) ಲಿಙ್. ಉತ್ತಮಪುರುಷ ಬಹುವಚನಾಂತರೂಪ. **'ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ'** (ಋ. ಸಂ. ೧–೭–೨೪–೨)

(೩) ಸಪರ್ಯತಿ || ಸಪರ–ಪೂಜಾಯಾಮ್. ಕಂಡ್ವಾದಿ. ಯಕ್–ಲಟ್ **'ದೂತಂ ದೇವ ಸಪರ್ಯತಿ'** (ಋ.ಸಂ.೧–೧–೨೩–೨)

(೪) ನಮಸ್ಯತಿ || 'ನಮಸಃ ಸಂಜ್ಞಾಯಾಮ್ '(ಪಾ–ಸೂ-೩-೧-೧೯-ವಾ)ಎಂಬುದರಿಂದ ಕ್ಯಚ್. ನಮಸ್ಕಾರ ಮಾಡುತ್ತಾನೆಂದರ್ಥ ' **'ಯಂ ನಮಸ್ಯನ್ತಿ ಕೃಷ್ಟಯಃ'** (ಋ. ಸಂ. ೧–೩–೧೧–೪)

(೫) ದುವಸ್ಯತಿ || 'ದುವಸ್–ಪರಿಚರಣೇ, ಪರಿತಾಪೇಚ' ಕಂಡ್ವಾದಿಗಣಪಠಿತಧಾತು. **'ದುವಸ್ಯನ್ತಿ ಸ್ವಸಾರೋ ಅಹ್ರಯಾಣಾಮ್'** (ಋ. ಸಂ. ೧–೫–೨-೨)

**(೬) ಋಧ್ನೋತಿ** || ಋಧು–ವೃದ್ಧೌ. ಸ್ವಾದಿ. ಶ್ನುವಿಕರಣ. ಗುಣ. ಲಟ್. **'ಆ ಋಧ್ನೋತಿ ಹವಿಷ್ಕೃತಿಮ್'** **(ಋ. ಸಂ. ೧–೧–೩೫.೩)**

(೭) **ಋಣದ್ಧಿ** || ಪೂರ್ವೋಕ್ತಧಾತುವಿಗೆ ವ್ಯತ್ಯಯದಿಂದ ಶ್ನಮ್‌ವಿಕರಣ ಬಂದಿದೆ.

(೮) **ಋಚ್ಛತಿ** || 'ಋಚ್ಛ-ಗತೀಂದ್ರಿಯಪ್ರಲಯ ಮೂರ್ತಿಭಾವೇಷು' (ತು–ಪ) ಶವಿಕರಣ.

(೯) **ಸಪತಿ** || 'ಷಪ–ಸಮವಾಯೇ' ಧಾತ್ವಾದಿಗೆ ಸತ್ವ. **'ಅವಿದ್ವಾಂಸೋ ವಿಧುಷ್ಟರಂ ಸಪೇಮ'** (ಋ. ಸಂ. **೪**–೫–೧೮–೫)

**(೧೦) ವಿವಾಸತಿ** || ನಿರುಕ್ತಪಠಿತವಾದ ಧಾತು. ಅಥವಾ ವಿಪೂರ್ವಕವಾದ ವಸಧಾತುವಿಗೆ ಣಿಚ್ 'ಛಂದಸ್ಯುಭಯಥಾ' ಸೂತ್ರದಿಂದ ಶಪ್ ಬಂದಾಗ ಆರ್ಧಧಾತುಕಸಂಜ್ಞೆ ಬರುವುದರಿಂದ ಣಿಲೋಪ. **'ಹವಿಷ್ಮಾಂ ಆವಿವಾಸತಿ' (ಋ. ಸ. ೧–೧-೨೩-೩)** ||

ಹೀಗೆ ಹತ್ತು ಪರಿಚರಣಾರ್ಥಕೊಡುವ ಧಾತುಗಳು

---

## ಸುಖನಾಮಾನ್ಯುತ್ತರಾಣಿ ಪಂಚವಿಂಶತಿಃ || ೫ ||

**ಈ** ಇಪ್ಪತ್ತು ಶಬ್ದಗಳೂ ಸುಖವೆಂಬ ಅರ್ಥವನ್ನು ಸೂಚಿಸುವ ಶಬ್ದಗಳು

(೧) ಶಿಮ್ಬಾತಾ (೨) ಶತರಾ (೩) ಶಾತಪನ್ತಾ :(೪) ಶರ್ಮ (೫) ಸ್ಯೂಮಕಮ್ (೬) ಶೇವೃಧಮ್ (೭) ಮಯಃ (೮) ಸುಗ್ಮ್ಯಮ್ (೯) ಸುದಿನಮ್ (೧೦) ಶೂಷಮ್ (೧೧) ಶುನಮ್ (೧೨) ಶಗ್ಮಮ್ (೧೩) ಭೇಷಜಮ್ (೧೪) ಜಲಾಷಮ್ (೧೫) ಸ್ಯೋನಮ್ (೧೬) ಸುಮ್ನಮ್ (೧೭) ಶೇವಮ್ (೧೮) ಶಿವಮ್ (೧೯) ಶಮ್ (೨೦) ಕಮ್ ||

|| ಇತಿ ವಿಂಶತಿಃ ಸುಖನಾಮಾನಿ || ೬ ||

(೧) **ಶಿಮ್ಬಾತಾ** || 'ಶಿಞ್-ನಿಶಾನೇ' (ಸ್ವಾ–ಉ) 'ನಿಂಬಶಿಂಬ—' ಇತ್ಯಾದಿ ಸೂತ್ರದಿಂದ ವಪ್ರತ್ಯಯ ಮುಮಾಗಮ ನಿಪಾತಿತವಾಗುತ್ತದೆ. ಶಿಂಬ ಉಪಪದವಾಗಿರುವಾಗ ಅತಧಾತುವಿಗೆ ಘಞ್. ಸ್ತ್ರೀತ್ವದಲ್ಲಿ ಟಾಪ್. ದುಃಖವನ್ನು ಕಡಿಮೆಮಾಡುವುದರಿಂದ ಪ್ರಾರ್ಥಿಸಲ್ಪಡುತ್ತದೆ.

(೨) **ಶತರಾ** ‖ ಆದಾನಾರ್ಥಕ ರಾಧಾತುವಿಗೆ ಶತಶಬ್ದ ಉಪಪದವಾಗಿರುವಾಗ ಆತೋಽನುಪಸರ್ಗೇ ಕಃ (ಪಾ.ಸೂ, ೪-೨-೩) ಸೂತ್ರದಿಂದ ಕಪ್ರತ್ಯಯ ಶತವೆಂದರೆ ಬಹಳವೆಂದರ್ಥ. ಅನೇಕ ಇಂದ್ರಿಯ ಸುಖಾದಿಗಳನ್ನು ಕೊಡುವುದು.

(೩) **ಶಾತಪನ್ತಾ** ‖ ‘ ಶೋ-ತನೂಕರಣೇ ’ (ದಿ-ಪ) ಕ್ತಪ್ರತ್ಯಯ ಬಂದರೆ ಶಾತ ಎಂದಾಗುತ್ತದೆ. ಇದು ಉಪ ಪದವಾಗಿರುವಾಗ ಪತಧಾತುವಿಗೆ ‘ ಹಸಿಮೃಗ್ರಿಣ್ವಾಮಿ- ’ (ಉ-೩-೮೬) ಸೂತ್ರದಿಂದ ವಿಹಿತವಾದ ತನ್‌ಪ್ರತ್ಯಯ. ಬಹುಲ ಗ್ರಹಣದಿಂದ ನುಮಾಗಮ. ದುಃಖವನ್ನು ಕಡಿಮೆಮಾಡುವುದರಿಂದ ಸ್ತುತಿಸಲ್ಪಡುತ್ತದೆ. ಮೂರುಶಬ್ದಗಳಲ್ಲಿಯೂ ‘ ಸುಪಾಂ ಸುಲುಕ್–’ ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ ಬಂದಿದೆ. ಉದಾ-‘ **ಮಿತ್ರೇವ ಋತಾ ಶತರಾ ಶಾತಪನ್ತಾ** (**ಋ. ಸಂ ೮-೬-೧-೫**)

(೪) **ಶರ್ಮ** ‖ ಗೃಹನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೪-೨೧)‘ **ತಾನೋ ದೇವೀಃ ಸಹವಾಃ ಶರ್ಮ ಯಚ್ಛತ** ’(**ಋ. ಸಂ. ೪-೨-೨೮-೭**)ಇಲ್ಲಿ ಶಿಲ್ಗು ಎಂದು ಪಾಠಾಂತರವಿದೆ. ಆಗ ಗತ್ಯರ್ಥಕ ಶಲಧಾತುವಿಗೆ ‘ ವಿಲಫಲ್ಗೋ ಗುರ್ಕ್‌ಚ’ ಸೂತ್ರವಿಹಿತವಾದ ಕುಪ್ರತ್ಯಯ. ಅಕಾರಕ್ಕೆಲೋಪ ಪುಣ್ಯವಂತರಿಂದ ಹೊಂದಲ್ಪಡುವುದು. ಇದರಿಂದ ತೃಪ್ತಿಹೊಂದ ತ್ತಾನೆ. ಅನಿತ್ಯವಾದುದರಿಂದ ಅಂತಹೊಂದುವುದು. ಎಂದು ಗತ್ಯರ್ಥದಲ್ಲಿ ಅರ್ಥ ತಿಳಿಯಬೇಕು.

(೫) **ಸ್ಯೂಮುಕಮ್** ‖ ‘ಷಿವು-ತಂತುಸಂತಾನೇ’ (ದಿ-ಪ-) ಧಾತ್ವಾದಿಗೆ ಸತ್ವ. ‘ಅವಿಸಿವಿಸಿಶುಷಿಭ್ಯಃ ಕಿತ್’ (ಉ-೧-೧೪೧) ಸೂತ್ರದಿಂದ ಮನ್‌ಪ್ರತ್ಯಯ. ಕಿತ್ತ್ವಹೇಳಿರುವುದರಿಂದ ‘ಛ್ವೋಃ ಶೂಡನುನಾಸಿಕೇ ಚ’ (ಪಾ-ಸೂ-೬ ೪-೧೯) ಸೂತ್ರದಿಂದ ಸಂಪ್ರಸಾರಣ. ಯಣ್. ಸ್ವಾರ್ಥದಲ್ಲಿ ಕಪ್ರತ್ಯಯ. ಪುಣ್ಯವಂತನಲ್ಲಿ ಸಂಬದ್ಧವಾಗಿರುವುದು ಪುಣ್ಯ.

(೬) **ಶೇವೃಧಮ್** ‖ ಶೇಶಬ್ದ ಉಪಪದವಾಗಿರುವಾಗ ವೃಧುಧಾತುವಿಗೆ ಇಗುಪಧನಿಮಿತ್ತಕವಾದ ಕಪ್ರತ್ಯಯ. ಸುಖವರ್ಧಕವಾದದ್ದು. ‘**ಸ ಶೇವೃಧಮಧಿ ಧಾದ್ಯುಮ್ನಮಸ್ಮೇ**’ (**ಋ. ಸಂ. ೧-೪-೧೮-೬**) ‖

(೭) **ಮಯಃ** ‖ ‘ಮಿಞ್-ಹಿಂಸಾಯಾಮ್ (ಸ್ವಾ-ಉ-) ಅಸುನ್ ಬಂದಾಗ ಗುಣ, ಅಯಾದೇಶ. ಸಾಂತ ಪದವಾಗುತ್ತದೆ. ದುಃಖವನ್ನು ಹಿಂಸಿಸುವುದು ಸುಖ, ‘**ಮಯಃ ಕೃಣೋಷಿ ಪ್ರಯ ಆಚ ಸೂರಯೇ**’ (**ಋ. ಸಂ. ೧-೨-೩೨-೨**)

(೮) **ಸುಗ್ಮ್ಯಮ್** ‖ ಸುಪೂರ್ವದಲ್ಲಿರುವಾಗ ಗಮ್‌ಧಾತುವಿಗೆ ಅಘ್ನ್ಯಾದಿಗಣಪಠಿತವಾದುದರಿಂದ ಯತ್ ಪ್ರತ್ಯಯ. ಉಪಧಾಲೋಪ. ಜನರಿಂದ ಸುಖವಾಗಿ ಹೊಂದಲ್ಪಡುವುದು. ‘**ಉಷಾ ದದಾತು ಸುಗ್ಮ್ಯಮ್** ’ (**ಋ. ಸಂ. ೧-೪-೫-೩**)

(೯) **ಸುದಿನಮ್** ‖ ಅಹರ್ನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೭-೯) ಇಲ್ಲಿ ಸುಪೂರ್ವಕವಾಗಿದೆ. ಚನ್ನಾಗಿ ದುಃಖವನ್ನು ಹೋಗಲಾಡಿಸುವುದು, ಭಾಗ್ಯವಿಪರ್ಯಯದಿಂದ ಖಂಡಿಸಲ್ಪಡುವುದು.

(೧೦) **ಶೂಷಮ್** ‖ ಬಲನಾಮದಲ್ಲಿ ವ್ಯಾಖ್ಯಾತವಾಗಿದೆ. (೨-೯-೧೩) ಇದರಿಂದ ದುಃಖವು ಒಣಗುತ್ತದೆ. ಪ್ರೀತಿಯನ್ನುಂಟುಮಾಡುವುದು ಸುಖ. ‘**ಸಾಸ್ಮಾ ಕೇಭಿರೇತರೀ ನ ಶೂಷೈಃ**’ (**ಋ. ಸಂ. ೪-೫-೧೪-೪**)

(೧೧) **ಶೂನಮ್** ॥ 'ಶುನ-ಗತೌ' (ತು-ಗ-) ಇದಕ್ಕೆ ಬಹುಲಗ್ರಹಣದಿಂದ 'ಗೇಹೇ ಕಃ' ಸೂತ್ರದಿಂದ ವಿಹಿತವಾದ ಕಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. **'ಶುನಂ ನಃ ಫಾಲಾ ವಿಕೃಷನ್ತು ಭೂಮಿಮ್'** (**ಋ. ಸಂ. ೩-೮-೯-೮**)

(೧೨) **ಶಗ್ಮಮ್** ॥ ಶಂ ಶಬ್ದ ಉಪಪದವಾಗಿರುವಾಗ ಗಮ್‌ಧಾತುವಿಗೆ 'ಗೇಹೇ ಕಃ' (ಪಾ. ಸಅ. ೩-೧-೧೪೪) ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ 'ಗಮುಹನ—' ಸೂತ್ರದಿಂದ ಉಪಧಾಲೋಪ. ಪೃಷೋದರಾದಿಗಣಪಠಿತವಾದುದ ರಿಂದ ಶಮ್‌ನ ಮಕಾರಕ್ಕೆ ಲೋಪ. ದುಷ್ಕೃತಾದಿಗಳನ್ನು ನಾಶಗೊಳಿಸಿ ಇದರಿಂದ ಸುಖವು ಹೊಂದಲ್ಪಡುತ್ತದೆ. ಅಥವಾ ಶಕ್ತ್ಯರ್ಥಕ ಶಕ್‌ಧಾತುವಿಗೆ 'ಯುಜಿತಿಜಿರುಜಾಂ ಕುಶ್ಚ' (ಉ. ೧-೧೪೩) ಸೂತ್ರದಿಂದ ವಿಹಿತವಾದ ಮಕ್‌ಪ್ರತ್ಯಯ, ಕಕಾರಕ್ಕೆ ಗಕಾರಾದೇಶ. ತೃಪ್ತಿಯನ್ನುಂಟುಮಾಡಲು ಸಮರ್ಥವಾದದ್ದು. **"ವಾಸ್ತೋಷ್ಪತೇ ಶಗ್ಮಯಾ ಸಂಸದಾ—"** (**ಋ. ಸಂ. ೫-೪-೨೧-೩**)

(೧೩) **ಭೇಷಜಮ್** ॥ (೧೪) **ಜಲಾಷಮ್** ॥ ಉದಕನಾಮದಲ್ಲಿ ವ್ಯಾಖ್ಯಾತವಾಗಿವೆ. (೧-೧೩-೯೯-೧೦೦) ಇಲ್ಲಿ ಧಾತುವಿಗೆ ಸುಖಾರ್ಥ ಹೇಳಬೇಕು. **"ಹ್ರದಂ ಜಲಾಷಭೇಷಜಮ್"** (**ಋ. ಸಂ. ೧-೩-೨೭-೪**)

(೧೫) **ಸ್ಯೋನಮ್** ॥ 'ಷಿವು-ತಂತುಸಂತಾನೇ' (ದಿ-ಪ) ಧಾತ್ವಾದಿಗೆ ಸತ್ವ. 'ಸಿವೇಷ್ಟೇರ್ಯೂಟ್ ಚ' (ಉ ೩-೮) ಸೂತ್ರದಿಂದ ನಪ್ರತ್ಯಯ ಬಂದಾಗ ಗುಣ. ಸ್ಯೂಮ ಪದದಂತೆ ಅರ್ಥ ತಿಳಿಯಬೇಕು. ಸ್ಯೋನಂ ಸುಖನಾಮ ಎಂಬ ನಿರುಕ್ತಭಾಷ್ಯದಲ್ಲಿ ಸ್ಯೋನಪದ ಷೋ, ಷಿವು ಧಾತುಗಳಿಂದ ನಿಷ್ಪನ್ನವಾಗಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ. ಬಹುಲ ಗ್ರಹಣದಿಂದ ಧಾತುವಿನ ಟಿಗೆ ಯೂಟ್ ಬಂದಿದೆ. **"ದೇವೇಭ್ಯೋ ಅದಿತಯೇ ಸ್ಯೋನಮ್"** (**ಋ. ಸಂ. ೮-೬-೮-೪**)

(೧೬) **ಸುಮ್ನಮ್** ॥ 'ರಾಸ್ನಾಸಾಸ್ನಾಸುಮ್ನದ್ಯುಮ್ನ—' ಎಂಬ ಭೋಜಸೂತ್ರದಿಂದ ನಿಪಾತಿತವಾಗಿದೆ. ಶೋಭನಕರ್ಮದಿಂದ ಇಷ್ಟಿಡೆಯೆಂದು ಅಳೆಯಲ್ಪಡುತ್ತದೆ. **"ಕ್ವ ವಃ ಸುಮ್ನಾ ನವ್ಯಾಂಸಿ"** **"ಸುಮ್ನಾಯ ವರ್ತಯಾಮಸಿ** (**ಋ. ಸಂ. ೬-೪-೫೫-೧**)

(೧೭) **ಶೇವಮ್** ॥ (೧೮) **ಶಿವಮ್** ॥ 'ಶೀಙ್-ಸ್ವಪ್ನೇ' (ಅದಾ-ಆ) 'ಇಣ್‌ಶೀಭ್ಯಾಂ ವನ್' (ಉ. ೧-೧೫೦) ಸೂತ್ರದಿಂದ ವನ್‌ಪ್ರತ್ಯಯ. 'ಸರ್ವನಿಘೃಷ್ವ—' (ಉ. ೧-೧೫೧) ಸೂತ್ರದಿಂದ ಶೀಙ್‌ಧಾತುವಿಗೆ ಹ್ರಸ್ವವೂ, ವನ್‌ಪ್ರತ್ಯಯ. ಗುಣಾಭಾವವೂ ನಿಪಾತಿತವಾಗುತ್ತವೆ. 'ಶೇವಮಿತಿ ಸುಖನಾಮ' ಎಂಬ ನಿರುಕ್ತ ಭಾಷ್ಯದಲ್ಲಿ ಶಿಷಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಿವೆ. ಆಗ ಕ್ಲೇಶವನ್ನು ಹಿಂಸಿಸುವುದು ಸ್ವಾಶ್ರಯವನ್ನು ಇರುವಂತೆ ಮಾಡುವುದೆಂದರ್ಥ. **"ಜನೇ ನ ಶೇವ ಆಹೂರ್ಯಃ ಸನ್"** (**ಋ. ಸಂ. ೧-೫-೧೩-೨**) **"ಶಿವಾಭಿರ್ನ ಸ್ಮಯಮಾನಾಭಿರಾಗಾತ್"** (**ಋ. ಸಂ. ೧-೫-೨೭-೨**) ॥

(೧೯) **ಶಮ್** ॥ ಇದು ನಿಪಾತ. ಶಮುಧಾತುವಿಗೆ ವಿನ್ ಬಂದರೂ ಸರ್ವಲೋಪವಾಗುವುದರಿಂದ ಈರೂಪವಾಗು ತ್ತದೆ. ಕ್ಲೇಶಶಮನಮಾಡುವುದು ಸುಖ ' **ಶಂ ತೇ ಸಂತು ಪ್ರಚೇತಸೇ** (**ಋ. ಸಂ. ೧-೧-೧೦-೨**)

(೨೦) ಕಮ್ ॥ ಇದೂ ನಿಪಾತ. ಕಂ ಎಂಬುದು ಸುಖವಾಚಕವಾದ ಅವ್ಯಯವೆಂದೂ ಹರದತ್ತನು ಹೇಳಿರುತ್ತಾನೆ. **ಶ್ರಿಯಂ ಮೇ ಕಂ ಭಾನುಭಿಃ ಸಂಮಿಮಿಕ್ಷಿರೇ** ' (ಋ. ಸಂ- ೧-೬- ೧೩- ೬)

ಹೀಗೆ ಇಪ್ಪತ್ತು ಸುಖನಾಮಗಳು ॥ ೬ ॥

---

ಸುಖಂ ಕಸ್ಮಾತ್ ಸುಹಿತಂ ಖೇಭ್ಯಃ ॥ ೧೨ ॥

ಸುಖವೆಂಬ ಶಬ್ದಕ್ಕೆ ಅರ್ಥವೇನು ? ಎಂದರೆ ಇಂದ್ರಿಯಗಳಿಗೆ (ಅಂಗಗಳಿಗೆ) ಹಿತವನ್ನು ಉಂಟುಮಾಡುವುದರಿಂದ ಈ ಕಾರ್ಯಕ್ಕೆ ಸುಖವೆಂದು ಹೆಸರು.

ಖಂ ಪುನಃ ಖನತೇಃ ॥ ೧೩ ॥

ಇಂದ್ರಿಯ (ಖಂ) ಎಂದರೇನು ? ಇದು ಈ ಅಂಗ ಅಥವಾ ಅವಯವವು ಹಳ್ಳಮಾಡು ಎಂಬರ್ಥವುಳ್ಳ **ಖನತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಕಿವಿಯೇ ಮೊದಲಾದ ಅವಯವಗಳು ಶರೀರದಲ್ಲಿ ಹಳ್ಳವಾಗಿ ಹುದುಗಿರುವುದರಿಂದ **ಖಂ** ಎಂಬ ಶಬ್ದಕ್ಕೆ ಇಂದ್ರಿಯವೆಂದು ಹೆಸರು ಬಂದಿದೆ.

ರೂಪನಾಮಾನ್ಯುತ್ತರಾಣಿ ಷೋಡಶ ॥ ೧೪ ॥

ಈ ಹದಿನಾರು ನಾಮಗಳೂ ರೂಪವೆಂಬ ಅರ್ಥವನ್ನು ಸೂಚಿಸುವ ಪದಗಳು

(೧) ನಿರ್ಣಿಕ್ (೨) ವವ್ರಿಃ (೩) ವರ್ಪಃ (೪) ವಪುಃ (೫) ಅಮತಿಃ (೬) ಅಪ್ಸಃ (೭) ಪ್ಸುಃ (೮) ಅಪ್ನಃ (೯) ಪಿಷ್ಟಮ್ (೧೦) ಪೇಶಃ (೧೧) ಕೃಶನಮ್ (೧೨) ಪ್ಸರಃ (೧೩) ಅರ್ಜುನಮ್ (೧೪) ತಾಮ್ರಮ್ (೧೫) ಅರುಷಮ್ (೧೬) ಶಿಲ್ಪಮ್ ॥

ಇತಿ ಷೋಡಶ ರೂಪನಾಮಾನಿ ॥ ೭ ॥

(೧) **ನಿರ್ಣಿಕ್** ॥ ಶೌಚಪೋಷಣಾರ್ಥಕ ಣಿಜಿರ್‌ಧಾತುವಿಗೆ ನಿ ಉಪಸರ್ಗಪೂರ್ವದಲ್ಲಿರುವಾಗ ಕ್ವಿಪ್. ಪದಾಂತದಲ್ಲಿ ಕುತ್ವ. ಪುಷ್ಟವಾದದ್ದು, ಪ್ರೀತಿಯನ್ನು ಅಧಿಕಗೊಳಿಸುವುದು ರೂಪ. ‹ **ವರುಣೋ ಬಸ್ತ ನಿರ್ಣಿಜಮ್**' (ಋ- ಸಂ. ೧-೨ ೧೮-೩)

(೨) ವವ್ರಿಃ ॥ ' ಆದೃಗಮಹನಜನಃ ಕಿಕಿನೌ ಲಿಟ್‌ಚ (ಪಾ-ಸೂ ೩-೨-೧೭೧) ಸೂತ್ರದಿಂದ ವರಣಾರ್ಥಕ ವೃಞ್‌ಧಾತುವಿಗೆ ಕಿಪ್ರತ್ಯಯ. ಲಿಡ್ವದ್ಭಾವದಿಂದ ದ್ವಿತ್ವ. ಅಭ್ಯಾಸಕ್ಕೆ ಅತ್ವ. ಕಿತ್ತ್ವಾದುದರಿಂದ ಋಕಾರಕ್ಕೆ ಗುಣವಿಲ್ಲ. ಯಣ್. ತನ್ನಆಶ್ರಯವನ್ನು ಆಶ್ರಯಿಸಿರುವುದು ರೂಪ. ‹**ವಿದ್ಯುದ್ ಭವನ್ತೀ ಪ್ರತಿ ವವ್ರಿ ಮಾಹತ**' [ಋ. ಸಂ. ೨-೩-೧೯-೪]

(೩) **ವರ್ಪಃ** ‖ ‘ವೃಜ್‌ಶೀಜ್‌ಭ್ಯಾಂ ರೂಪಸ್ವಾಂಗಯೋರ್ಪುಟ್‌ಚ’ (ಉ-೪-೧೯೬)ಸೂತ್ರದಿಂದ ವೃಧಾತುವಿಗೆ ಅಸುನ್‌ಪ್ರತ್ಯಯ, ಪಕಾರಾಗಮ. ಧಾತು ಋಕಾರಕ್ಕೆ ಗುಣ. ಪೃಥಕ್ಕಾಗಿ ತೋರುವುದು ರೂಪ **ಮಾ ವರ್ಪೋ ಅಸ್ಮದಪ ಗೂಹ ಏತತ್ (ಋ. ಸಂ. ೫-೬-೨೫-೬)**

(೪) **ವಪುಃ** ‖ ಉದಕನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೧೨-೯೦) ರೂಪದಿಂದ ತನ್ನ ಆಶ್ರಯವು ಅಧಿಕವಾಗುತ್ತದೆ. **“ವಪುರ್ಭಿರಾಚರತೋ ಅನ್ಯಾನ್ಯಾ” (ಋ. ಸಂ. ೧-೫-೨-೩)**

(೫) **ಅಮತಿಃ** ‖ (೬) **ಅಪ್ಸಃ** ‖ ‘ಅಪ್ಸ ಇತಿ ರೂಪನಾಮಾಪ್ಸಾತೇಃ’ (ನಿರು. ೫-೧೩) ಎಂಬ ನಿರುಕ್ತ ಭಾಷ್ಯದಲ್ಲಿ ಸ್ಕಂದಸ್ವಾಮಿಯು ಈ ರೀತಿ ನಿರ್ವಚನ ಮಾಡಿರುತ್ತಾನೆ. ನಞ್‌ಪೂರ್ವಕವಾದ ಪ್ಸಾಧಾತುವಿಗೆ ಅಸುನ್ ಬಂದಾಗ ಬಹುಲಗ್ರಹಣದಿಂದ ಆಕಾರಲೋಪ. ವ್ಯಾಪ್ತ್ಯರ್ಥಕ ಅಪ್‌ಧಾತುವಿಗೂ ‘ವೃತ್ಯಾವದಿ—’ (ಉ. ೩-೫೯) ಸೂತ್ರದಿಂದ ಸಪ್ರತ್ಯಯ ಬಂದಾಗ ಹ್ರಸ್ವ- **“ಉಷಾಹಸ್ತೇವ ನಿರಿಣೀತೇ ಅಪ್ಸಃ” (ಋ. ಸಂ. ೨-೧-೮-೨) “ಅಪ್ಸರಸಃ ಪರಿಜಜ್ಞೇ ವಸಿಷ್ಠಃ” (ಋ. ಸಂ. ೫-೩-೨೪-೨)**

(೭) **ಪ್ಸುಃ** ‖ ‘ಸ್ಫುರ-ಸ್ಫುಲನೇ’ (ತು-ಪ) ‘ಮೃಗಯ್ವಾದಯಶ್ಚ’ (ಉ. ೧-೩೬) ಸೂತ್ರದಿಂದ ಡುನ್‌ಪ್ರತ್ಯಯ. ಸಕಾರಪಕಾರಫಕಾರಗಳಿಗೆ ವ್ಯತ್ಯಯ ನಿಪಾತಿತವಾಗಿದೆ. ಡಿತ್ತಾದುದರಿಂದ ಟಿಲೋಪ. ಪ್ರಕಾಶಿಸುವುದು ರೂಪ. **“ವಹನ್ತೇ ಅಹ್ರುತ ಪ್ಸವಃ” (ಋ. ಸಂ ೬-೧-೩೭-೨)**

(೮) **ಅಪ್ನಃ** ‖ ಅಪತ್ಯನಾಮದಲ್ಲಿ ವ್ಯಾಖ್ಯಾತವಾಗಿದೆ. (**೩-೩-೭**) ರೂಪದಿಂದ ಸಕಲಾಶ್ರಯವೂ ವ್ಯಾಪಿಸಲ್ಪಡುತ್ತದೆ. **“ಅಭಿಸಂತಿ ಜಂಭಯಾ ತಾ ಅನಪ್ಸವಃ” (ಋ. ಸಂ. ೨-೬-೩೦-೪)**

(೯) **ಪಿಷ್ಟಮ್** । ‘ಪಿಶ-ಅವಯವೇ.’ ‘ಪಿಶೇಃ ಕಿಚ್ಚ’ (ಉ. ೩-೯೨) ಸೂತ್ರದಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ‘ತಿತುತ್ರಥ—’ ಸೂತ್ರದಿಂದ ಇಡಾಗನು ಬರುವುದಿಲ್ಲ. ಪ್ರತಿ ಅವಯವದಿಂದ ವಿಭಕ್ತವಾಗಿ ತೋರುವುದು ರೂಪ ಮಾಧವರು ಆಶ್ಲೇಷಣಾರ್ಥ ಹೇಳಿ ಆಶ್ರಯವನ್ನಂಟಿರುವುದು ರೂಪವೆಂದು ಹೇಳುತ್ತಾರೆ. **‘ಪಿಷ್ಟಂ ರುಕ್ಮಾಭಿರಂಜಿಭಿಃ’** (ಋ. ಸಂ. ೪-೩-೧೯-೧) ‖

(೧೦) **ಕೃಶನಮ್** ‖ (೧೧) **ಪೇಶಃ** ‖ ಹಿರಣ್ಯನಾಮದಲ್ಲಿ ವ್ಯಾಖ್ಯಾತವಾಗಿವೆ. (೧-೨-೭) ಪ್ರಕಾಶಿಸುವುದು, ಅಥವಾ ರೂಪದಿಂದ ಪ್ರಕಾಶಿಸುತ್ತಾನೆ. ಪೇಶಸ್‌ಪದಕ್ಕೆ ಪಿಪ್ಸಪದದಂತೆ ಅರ್ಥ. ಕೃಶನಕ್ಕೆ ನಿಗಮ ಹುಡುಕಬೇಕು. **“ಪೇಶೋ ಮರ್ಯಾ ಅಪೇಶಸೇ”** (ಋ. ಸಂ. ೧-೧-೧೧-೩)

(೧೨) **ಪ್ಸರಃ** ‖ ಸ್ಫುರಧಾತುವಿಗೆ ಅಸುನ್ ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಸಕಾರಪಕಾರಗಳಿಗೆ ವ್ಯತ್ಯಯ ಬಂದಿದೆ. ಪ್ರಕಾಶಿಸುವುದು ರೂಪ. **‘ಮಹಿ ಪ್ಸರೋ ವರುಣಸ್ಯ’** (ಋ. ಸಂ. ೧.೩.೨೩.೨) **‘ವಚೋ ದೇವ ಪ್ಸರಸ್ತಮರ್’** (**ಋ. ಸಂ.** ೧-೫.೨೩-೧) ‖ ಕೆಲವರು ಇಲ್ಲಿ ಮರುಚ್ಛಬ್ದಪಾಠಮಾಡುತ್ತಾರೆ. ಅದು ಹಿರಣ್ಯನಾಮದಲ್ಲಿ ವ್ಯಾಖ್ಯಾತವಾಗಿದೆ.

(೧೩) **ಅರ್ಜುನಮ್** ‖ ಉಷೋನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೮-೬) **‘ಅಹಶ್ಚ ಕೃಷ್ಣ ಮಹರರ್ಜುನಂ ಚ’ (ಋ ಸಂ. ೪-೫-೧೧೦-೧)** ‖

(೧೪) **ತಾಮ್ರಮ್** ॥ 'ತಮು-ಕಾಂಕ್ಷಾಯಾಮ್'. 'ಅಮಿತಮ್ಯೋರ್ದೀರ್ಘಶ್ಚ' (ಉ-೨-೧೪) ಸೂತ್ರದಿಂದ ರಕ್‌ಪ್ರತ್ಯಯ, ಧಾತುವಿಗೆ ದೀರ್ಘ. ಎಲ್ಲರಿಂದಲೂ ಬಯಸಲ್ಪಡುವುದು ರೂಪ. **ಆಪೋ ದಿವಾದಾ ತಾಮ್ರಃ ॥ 'ಅಸೌ ಯಸ್ತಾಮ್ರೋ ಅರುಣೇ' (ಯ-ವಾ-ಸಂ-೧೬-೬) ॥**

(೧೫) **ಅರುಷಮ್** ॥ ಉಷೋನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೮-೧೩)

(೧೬) **ಶಿಲ್ಪಮ್** ॥ 'ಶಿಷ್‌ಲೃ-ವಿಶೇಷಣೇ'. 'ಖಷ್ಪಶಿಲ್ಪ—' (ಉ-೩-೨೬) ಸೂತ್ರದಿಂದ ಪಪ್ರತ್ಯಯ. ಬಹುಲಗ್ರಹಣದಿಂದ ಷಕಾರಕ್ಕೆ ಲಕಾರ, ಗುಣಾಭಾವ ಬರುತ್ತದೆ. ರೂಪವು ಆಶ್ರಿತನಿಗೆ ವಿಶೇಷವನ್ನುಂಟುಮಾಡುತ್ತದೆ. **'ಯಕ್ಷ್ಮಾಮಯೋ ಶಿಲ್ಪೇ ಸ್ಥಃ' (ಯ-ವಾ-ಸಂ-೪-೯) ॥**

ಹೀಗೆ ಹದಿನಾರು ರೂಪನಾಮಗಳು. ॥ ೭ ॥

---

ರೂಪಂ ರೋಚತೇಃ ॥ ೧೫ ॥

ರೂಪವೆಂದರೇನು ? ಮನಸ್ಸಿಗೆ ಸರಿತೋರುವುದರಿಂದ ಈ ಅರ್ಥವುಳ್ಳ ರೋಚತಿ ಧಾತುವಿನಿಂದ ನಿಷ್ಪನ್ನವಾಗಿದೆ. ಒಳ್ಳೆಯ ಆಕಾರ ಎಂದರ್ಥವು.

ಪ್ರಶಸ್ಯಶಿನಾಮಾನ್ಯುತ್ತರಾಣಿ ದಶ ॥ ೧೬ ॥

ಈ ಹತ್ತು ಶಬ್ದಗಳೂ ಪ್ರಶಸ್ಯ (ಶ್ರೇಷ್ಠ, ಉತ್ತಮ) ಎಂಬರ್ಥವನ್ನು ಸೂಚಿಸುವ ಪದಗಳು

[೧] ಅಸ್ರೋಮಾಃ [೨] ಅನೇಮಾಃ [೩] ಅನೇದ್ಯಃ [೪] ಅನವದ್ಯಃ [೫] ಅನಭಿಶಸ್ತಾ [೬] ಉಕ್ಥ್ಯಃ [೭] ಸುನೀಥಃ [೮] ಪಾಕಃ [೯] ವಾಮಃ [೧೦] ವಯುನವಮ್

ಇತಿ ದಶ ಪ್ರಶಸ್ಯನಾಮಾನಿ ॥ ೮ ॥

(೧) **ಅಸ್ರೋಮಾಃ** ॥ 'ಸ್ರಿವು ಗತಿಶೋಷಣಯೋಃ' (ದಿ- ಪ.) 'ಮನಿನ್‌ಸರ್ವಧಾತುಭ್ಯಃ' (ಉ. ೪-೧೪೦) ಸೂತ್ರದಿಂದ ಮನಿನ್ ಬಂದಾಗ ಬಹುಲಗ್ರಹಣದಿಂದ ಅಡಾಗಮ. 'ಲೋಪೋವ್ಯೋರ್ವಲಿ' ಸೂತ್ರದಿಂದ ಧಾತುವಕಾರ ಲೋಪ. ಗುಣ. ಅಕೀರ್ತಿಯನ್ನು ಹೊಂದುವುದಿಲ್ಲ, ಸತ್ಪುರುಷರಿಗೂ ಅಗಮ್ಯನು. ಇವನಿಂದ ಗುಣಗಳು ಹೋಗುವುದಿಲ್ಲ. **'ಅಸ್ರೇಮಾಣಂ ತರಣಿಂ ವೀಲುಜಂಭಮ್' (ಋ. ಸಂ. ೩-೧-೩೪-೩) ॥**

(೨) **ಅನೇಮಾಃ** ॥ ನಞ್‌ಪೂರ್ವಕವಾದ ಸೀಧಾತುವಿಗೆ ಮನಿನ್. ಗುಣ. ದುರ್ಮಾರ್ಗವನ್ನು ಹೊಂದಿಸಲ ಶಕ್ಯನೆಂದರ್ಥ ॥

(೩) **ಅನೇದ್ಯಃ** ॥ 'ಣಿದಿ–ಕುತ್ಸಾಯಾಮ್' (ಭ್ವಾ–ಉ) ಧಾತ್ವಾದಿಗೆ ನತ್ವ. ಆಗಮಶಾಸ್ತ್ರ ಅನಿತ್ಯವಾದುದರಿಂದ ನುಮಾಗನು ಬರುವುದಿಲ್ಲ. ನಞ್‌ಪೂರ್ವದಲ್ಲಿರುವಾಗ 'ಋಹಲೋರ್ಣ್ಯತ್' (ಪಾ–ಸೂ ೩–೧–೧೨೪) ಸೂತ್ರದಿಂದ ಣ್ಯತ್‌ಪ್ರತ್ಯಯ. ಲಘೂಪಧಗುಣ. **'ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ'** (ಋ–ಸಂ–೬–೩–೧೯-೧) ॥

(೪) **ಅನವದ್ಯಃ** (೫) **ಅನಭಿಶಸ್ತಾಃ** ॥ ನಞ್, ಅಭಿಪೂರ್ವದಲ್ಲಿರುವಾಗ ಹಿಂಸಾರ್ಥಕ ಶಸ್ತಧಾತುವಿಗೆ ಅಚ್‌ಪ್ರತ್ಯಯ. ನಿಗಮ ಹುಡುಕಬೇಕು.

(೬) **ಉಕ್ಥ್ಯಃ** ॥ 'ವಚ–ಪರಿಭಾಷಣೇ. (ಅದಾ–ಪ) 'ಪಾತ್ಯಾತುದಿವಿ—' (ಉ–೨–೯) ಸೂತ್ರದಿಂದ ಥಕ್‌ಪ್ರತ್ಯಯ. ಸಂಪ್ರಸಾರಣ. (ವಕಾರಕ್ಕೆ ಉಕಾರ.) ಸ್ತುತಿಪರ್ಯಾಯದಲ್ಲಿ ಉಕ್ಥಶಬ್ದ ಹೇಳಿದೆ. ಉಕ್ಥಮರ್ಹತಿ ಎಂಬರ್ಥದಲ್ಲಿ 'ಛಂದಸಿ ಚ' (ಪಾ–ಸೂ–೫–೧–೬೭) ಸೂತ್ರದಿಂದ ಯಪ್ರತ್ಯಯ. 'ಯಸ್ಯೇತಿ ಚ' ಅಕಾರಲೋಪ. ಸ್ತುತ್ಯರ್ಹ ಪ್ರಶಸ್ಯನು. **'ಕ್ರತುರ್ಭೃತ್ಯುಕ್ಥ್ಯಃ'** (ಋ–ಸಂ–೧–೧–೩೨–೫) **'ಗಾಯ ಗಾಯತ್ರಮುಕ್ಥ್ಯಮ್'** (ಋ–ಸಂ–೧–೩-೧೭-೪)

(೭) **ಸುನೀಥಃ** ॥ ಸುಉಪಪದವಾಗಿರುವಾಗ ನೀಧಾತುವಿಗೆ 'ಹನಿಕುಷಿ'—(ಉ–೨–೨) ಸೂತ್ರದಿಂದ ಕ್ಥನ್‌ಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಶೋಭನಾ ನೀಥಾ ಯಸ್ಯ ಸಃ ಪ್ರಶಸ್ತನಡತೆಯುಳ್ಳವನು. **ಹಿರಣ್ಯಹಸ್ತೋ ಅಸುರಃ ಸುನೀಥಃ** " (ಋ-ಸಂ–೧–೩-೭–೫)

(೮) **ಪಾಕಃ** ॥ ರಕ್ಷಣಾರ್ಥಕ ಪಾಧಾತುವಿಗೆ 'ಇಣ್‌ಭೀಕಾಪಾ—' (ಉ-೩-೪೧) ಸೂತ್ರದಿಂದ ಕನ್‌ಪ್ರತ್ಯಯ. ಗುಣವಂತನಾದುದರಿಂದ ರಾಜಾದಿಗಳಿಂದ ರಕ್ಷಿಸಲ್ಪಡುವವನು. **'ತಂ ಪಾಕೇನ ಮನಸಾ ಪಶ್ಯಮಂತಿನಃ'** (ಋ. ಸಂ. ೮–೬–೧೬–೪) **'ಅಪಾಕೋ ವಿಷ್ಣುರ್ಯಶಸೇ ಪುರೂಣಿ'** ॥

(೯) **ವಾಮಃ** ॥ 'ವನ–ಸಂಭಕ್ತೌ.' ಧಾತುವಿಗೆ 'ಇಷಿಯುಧೀಂಧಿ—' (ಉ-೧–೧೪೨) ಸೂತ್ರದಿಂದ ಮಕ್‌ಪ್ರತ್ಯಯ, ನಕಾರಕ್ಕೆ ಆಕಾರಾದೇಶ. ಸೇವಾಯೋಗ್ಯನಾದವನು ಎಂದರ್ಥ. **ನ ದೂಢ್ಯೋ ೩ ಅನುದದಾಸಿ ವಾಮಮ್** " (ಋ. ಸಂ. ೨–೫–೧೨–೫) ॥

(೧೦) **ವಯುನಮ್** ॥ ಗತಿಕ್ಷೇಪಣಾರ್ಥಕ ಅಜಧಾತುವಿಗೆ ' ಅಜಿಯಮಿ–' (ಉ–೩–೫೮) ಸೂತ್ರದಿಂದ ಉನನ್‌ಪ್ರತ್ಯಯ. ಧಾತುವಿಗೆ ವೀಭಾವಬಂದಾಗ ಗುಣ, ಅಯಾದೇಶ. ಅಸ್ರೇಮಪದದಂತೆ ಅರ್ಥ ತಿಳಿಯಬೇಕು. " ವಯುನ ಪದವು ವೀಧಾತುವಿನಿಂದ ಆಗಿ ಕಾಂತಿ ಅಥವಾ ಪ್ರಜ್ಞಾರ್ಥವನ್ನು ಕೊಡುತ್ತದೆಂದು ಭಾಷ್ಯ. ಮತ್ವರ್ಥಪ್ರತ್ಯಯಕ್ಕೆ ಲುಕ್‌ಬಂದಿದೆ ಕಾಂತಿ ಅಥವಾ ಪ್ರಜ್ಞಾ ಉಳ್ಳವನೆಂದರ್ಥ ' **ವಿಮಾನ ಮಗ್ನಿರ್ವಯುನಂ ಚ ವಾಘತಾಮ್** (ಋ. ಸ. ೨-೮–೨೦–೪)

ಹೀಗೆ ಹತ್ತು ಪ್ರಶಸ್ತವಾದುದರ ನಾಮ ॥ ೮ ॥

———

## ಪ್ರಜ್ಞಾನಾಮಾನ್ಯುತ್ತರಾಣ್ಯೇಕಾದಶ ॥ ೧೭ ॥

ಈ ಹನ್ನೊಂದು ಶಬ್ದಗಳೂ ಪ್ರಜ್ಞಾ (ತಿಳುವಳಿಕೆ) ಎಂಬರ್ಥವನ್ನು ಸೂಚಿಸುವ ಶಬ್ದಗಳು.

(೧) ಕೇತಃ (೨) ಕೇತುಃ (೩) ಚೇತಃ (೪)ಚಿತ್ತಮ್ (೫)ಕ್ರತುಃ (೬)ಅಸುಃ (೭) ಧೀಃ (೮) ಶಚೀ (೯) ಮಾಯಾ (೧೦) ವಯುನಮ್ (೧೧) ಅಭಿಖ್ಯಾ. ॥

ಇತ್ಯೇಕಾದಶ ಪ್ರಜ್ಞಾನಾಮಾನಿ ॥ ೯ ॥

(೧) **ಕೇತಃ** ॥ 'ಚಾಯ್ಯ-ಪೂಜಾನಿಶಾಮನಯೋಃ' (ಭ್ವಾ-ಉ) ಚಾಯಃ ಕೀ (ಉ-೧-೭೫) ಸೂತ್ರದಿಂದ ತಪ್ರತ್ಯಯಧಾತುವಿಗೆ ಕೀ ಆದೇಶ ಗುಣ. ಪೂಜಿಸಲ್ಪಡುವುದೆಂದರ್ಥ. **ಪುರೂರವೋನುತೇ ಕೇತಮಾಯಮ್ (ಋ. ಸಂ. ೮-೫-೧-೫)** ॥

(೨) **ಕೇತುಃ** (೩) **ಚೇತಃ** (೪) **ಚಿತ್ತಮ್** ॥ 'ಚಿತೀ-ಸಂಜ್ಞಾನೇ'-ಧಾತು. ಅಂಜಿಘೃಸಿಭ್ಯಃ ಉದಾ-೩-೮೬) ಸೂತ್ರದಿಂದ ಕ್ತಪ್ರತ್ಯಯ ಪೂಜಿಸಲ್ಪಡುವುದೆಂದರ್ಥ. **ಋತಾನಾನಂ ವಿಚೇತಸಮ್ (ಋ. ಸಂ. ೩-೫-೬-೩) 'ಸಂತ್ಯಾಚಿತ್ತಂ ಚಿತ್ತೇನ ಮಸ್ಸೃತಮ್** ॥

(೫) **ಕ್ರತುಃ** ॥ ಕರ್ಮನಾಮದಲ್ಲಿ ವಾಖ್ಯಾತವಾಗಿದೆ (೩-೧.೧೦) ಇದರಿಂದ ಧರ್ಮಾದಿವಿಚಾರಮಾಡಲ್ಪಡುತ್ತದೆ **'ಅಗ್ನಿಹೋ್ರತಾ ಕವಿಕ್ರತುಃ' (ಋ. ಸಂ. ೧-೧-೧-೫)**

(೬) **ಅಸುಃ** ॥ ಕ್ಷೇಪಣಾರ್ಥಕ ಅಸುಧಾತುವಿಗೆ 'ಶ್ಯಾಸ್ತ್ಯೃಸ್ನಿಹಿ—' (ಉ. ೧-೧೦) ಸೂತ್ರದಿಂದ ಉಪ್ರತ್ಯಯ. 'ಅಸುರಿತಿ ಪ್ರಾಣನಾಮ' ಎಂಬ ನಿರುಕ್ತಭಾಷ್ಯದಲ್ಲಿ—ಪ್ರಜ್ಞೆಯು ಅನರ್ಥಗಳನ್ನು ಹೋಗಲಾಡಿಸುವುದು, ಇದರಲ್ಲಿ ಅರ್ಥಗಳು ಪ್ರಕ್ಷಿಪ್ತವಾಗುತ್ತವೆ ಎಂದು ಅರ್ಥಪ್ರಾಪ್ತಿ, ಅನರ್ಥ ಪರಿಹಾರ ಈ ಎರಡೂ ಅರ್ಥ ಹೇಳಿದೆ.

(೭) **ಧೀಃ** ॥ (೮) **ಶಚೀ** ॥ ಇವೆರಡೂ ಕರ್ಮನಾಮದಲ್ಲಿ ವ್ಯಾಖ್ಯಾತವಾಗಿವೆ. (೨-೧-೨೧-೨೨) ಪ್ರನ್ಯಗಳಲ್ಲಿ ಇಡಲ್ಪಡುವುದು, ಅರ್ಥವನ್ನು ಧರಿಸುತ್ತವೆ, ಇದರಿಂದ ದೇವತೆಗಳು ಧ್ಯಾನಿಸಲ್ಪಡುತ್ತವೆ, ಇದರಿಂದ ಅರ್ಥ ತಿಳಿಯಲ್ಪಡುತ್ತವೆ, ಇದರಿಂದ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರ ಹೊಂದಲ್ಪಡುತ್ತದೆಂದರ್ಥ. **"ಚಿದಸಿ ಮನಾಮಿ ಧೀರಮಿ" (ಯ. ವಾ. ಸಂ. ೪-೧೯) "ಋಣೋರಕ್ಷಂ ನ ಶಚೀಭಿಃ" (ಋ. ಸಂ. ೧-೨-೩೧-೫)** ॥

(೯) **ಮಾಯಾ** ॥ 'ಮಾಙ್-ಮಾನೇ' (ಅದಾ-ಆ) 'ಮಾ ಛಾಸಸಿಭ್ಯೋ ಯಃ' (ಉ. ೪-೧೦೬) ಸೂತ್ರದಿಂದ ಯಪ್ರತ್ಯಯ. ಇದರಿಂದ ಪದಾರ್ಥಗಳು ಪರಿಚ್ಛೇದಗೊಳಿಸುತ್ತವೆ. **"ಮಾಯಾಭಿರಿಂದ್ರ ಮಾಯಿನಮ್ (ಋ. ಸಂ. ೧-೧-೨೧-೭)**

(೧೦) **ವಯುನಮ್** ॥ ಪ್ರಶಸ್ಯನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೩-೬-೧೦) ಗತ್ಯರ್ಥದಲ್ಲಿ ಶಚೀಪದದಂತೆ ಅರ್ಥ. ಕ್ಷೇಪಣಾರ್ಥದಲ್ಲಿ ಅಸುವಿನಂತೆ ಅರ್ಥ. **"ವಿದ್ವಾಂ ಅಗ್ನೇ ವಯುನಾನಿ ಕ್ಷಿತೀನಾಮ್" (ಋ. ಸಂ. ೧-೫-೧೭-೨)** ॥

(೧೧) ಅಭಿಖ್ಯಾ ॥ ಅಭಿಉಪಸರ್ಗ. 'ಖ್ಯಾ-ಪ್ರಕಥನೇ' (ಅದಾ-ಪ) -ಆತಶ್ಚೋಪಸರ್ಗೇ' (ಪಾ. ಸೂ. ೩-೩-೧೦೬) ಸೂತ್ರದಿಂದ ಅಙ್. ಇದರಿಂದ ಅರ್ಥಗಳು ಚನ್ನಾಗಿ ಹೇಳಲ್ಪಡುತ್ತವೆ. **"ಅಭಿಖ್ಯಾ ಭಾಸಾ ಬೃಹತಾ ಶುಶುಕ್ವನಿಃ" (ಋ. ಸಂ. ೬-೨-೯-೫)**

ಹೀಗೆ ಹನ್ನೊಂದು ಪ್ರಜ್ಞೆಯ ಹೆಸರು ॥ ೯ ॥

---

## ಸತ್ಯನಾಮಾನ್ಯುತ್ತರಾಣಿ ಷಟ್ ॥ ೨೮॥

ಈ ಆರು ಶಬ್ದಗಳೂ ಸತ್ಯ (ನಿಜ) ವೆಂಬ ಅರ್ಥವನ್ನು ಸೂಚಿಸುವ ಪದಗಳು

(೧) ಬಟ್ (೨) ಶ್ರತ್ (೩) ಸತ್ರಾ (೪)ಅದ್ಧಾ (೫) ಇತ್ಥಾ (೬) ಋತಮ್

### ಇತಿ ಷಟ್ ಸತ್ಯನಾಮಾನಿ ॥೧೦॥

ಬಟ್ ಶಬ್ದದಿಂದ ಇತ್ಥಾಪದದವರೆಗೆ ನಿಪಾತಗಳು. ಉದಾ:—**'ಬಣ್ಮಹಾಂ ಅಸಿ ಸೂರ್ಯ' (ಋ. ಸಂ. ೬-೨-೮-೧) 'ಶ್ರದ್ಧಯಾಗ್ನಿಃ ಸಮಿಧ್ಯತೇ' (ಋ. ಸಂ. ೮-೮-೯-೧) 'ಸತ್ರಾದಾವನ್ನಸಾ ಪೃಥಿ' (ಋ. ಸಂ. ೧-೧-೧೪-೧) 'ಸತ್ಯಮದ್ಧಾ ನಕಿರನ್ಯಸ್ತ್ವಾವಾನ್ '(ಋ. ಸಂ. ೧-೪-೧೪-೩) 'ಮಕಿಷ್ಟ್ವಾ೧ತ್ಥಾ ಧಿಯಾ ನರಾ (ಋ. ಸಂ. ೧-೧-೧೪-೧) ॥**

(೬) ಋತಮ್ ॥ ಉದಕನಾಮದಲ್ಲಿ ವ್ಯಾಖ್ಯಾವಾಗಿದೆ. (೧-೧೨-೬೮) ಇದರಿಂದ ಸುಗತಿಯನ್ನು ಹೊಂದುತ್ತಾನೆ. **'ಋತೇನ ಮಿತ್ರಾವರುಣಾ' (ಋ. ಸಂ. ೧-೧-೪-೨)**

ಹೀಗೆ ಆರು ಸತ್ಯದ ನಾಮುಗಳು ॥ ೧೦ ॥

## ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ ॥ ೧೯ ॥

ಸತ್ಯವೆಂದರೇನು ? ಇದು ಇದ್ದಂತೆ ಹೇಳಲ್ಪಡುವುದು ಎಂದರೆ ನಿಜವನ್ನೇ ಅಥವಾ ಯಥಾಸ್ಥಿತಿಯನ್ನೇ ಹೇಳುವುದು ಅಥವಾ ಇದು (ಸತ್ಯವು) ಒಳ್ಳೆಯ ಪ್ರಭಾವವನ್ನು ಬೀರುವುದರಿಂದ ಅಥವಾ ಒಳ್ಳೆಯ ಪರಿಣಾಮ ಮಾಡುವುದರಿಂದ ಇದಕ್ಕೆ (ಈ ಪದಕ್ಕೆ) ಸತ್ಯವೆಂದು ಹೆಸರು ಬಂದಿದೆ.

—=—

(೧) ಚಿಕ್ಯತ್ (೨) ಚಾಕನತ್ (೩) ಆಚಕ್ಷ್ಮ (೪) ಚಷ್ಟೇ (೫) ವಿಚಷ್ಟೇ
(೬) ವಿಚರ್ಷಣಿಃ (೭) ವಿಶ್ವಚರ್ಷಣಿಃ (೮) ಅವಚಾಕಶತ್ ||

ಇತ್ಯಷ್ಟೌ ಪಶ್ಯತಿಕರ್ಮಾಣಃ || ೧೧ ||

(೧) **ಚಿಕ್ಯತ್** (೨) **ಚಾಕನತ್** (೩) **ಆಚಕ್ಷ್ಮ** (೪) **ಚಷ್ಟೇ** (೫) **ವಿಚಷ್ಟೇ**—ಇವು ಐದೂ ಚಕ್ಷಿಙ್ ವ್ಯಕ್ತಾಯಾಂ ವಾಚಿ, ಧಾತುವಿನರೂಪಗಳು. ಇಲ್ಲಿ ದರ್ಶನಾರ್ಥದಲ್ಲಿ ಹೇಳಿದ್ದರೂ ಹಿಂದೆ ವ್ಯಾಖ್ಯಾತವಾಗಿವೆ. ಇವುಗಳಿಗೆ ನಿಗಮ ಹುಡುಕಬೇಕು.

(೩) **ಆಚಕ್ಷ್ಮ** || ಆಙ್‌ಪೂರ್ವಕವಾದ ಚಕ್ಷಿಙ್‌ಧಾತುವಿಗೆ ಲಙ್ ಬಂದಾಗ ಉತ್ತಮಪುರುಷದ ಮಹಿಙ್‌ಪ್ರತ್ಯಯಕ್ಕೆ ವ್ಯತ್ಯಯದಿಂದ ಮಸಾದೇಶ. ನೋಡುವುದು ಅರ್ಥ .**ಅತಶ್ಚಕ್ಷ್ಮಾಥೇ ಅದಿತಿಂ ದಿತಿಶ್ಚ (ಋ. ಸಂ. ೪-೩-೩೧-೩)**

(೪) **ಚಷ್ಟೇ** || (೫) **ವಿಚಷ್ಟೇ** || ಕೇವಲ ಧಾತು, ವಿಪೂರ್ವಕ ಚಕ್ಷಿಙ್‌ಧಾತುವಿಗೆ ಆತ್ಮನೇಪದ ಪ್ರಥಮಪುರುಷೈಕವಚನದಲ್ಲಿ ಸಂಯೋಗಾದಿಲೋಪ ಬಂದಾಗ, ಷ್ಟುತ್ವ. **"ತೇಭಿಶ್ಚಷ್ಟೇ ವರುಣೋ ಮಿತ್ರೋ ಅರ್ಯಮಾ"** (ಋ ಸಂ. ೮-೪-೨೪-೧) **"ಇತೋ ಜಾತೋ ವಿಶ್ವಮಿದಂ ವಿಚಷ್ಟೇ (ಋ. ಸಂ. ೧-೭-೬-೧)** ||

(೬) **ವಿಚರ್ಷಣಿಃ** || (೭) **ವಿಶ್ವಚರ್ಷಣಿಃ** || ವಿಉಪಸರ್ಗಪೂರ್ವಕವಾದ, ವಿಶ್ವಶಬ್ದಪೂರ್ವಕವಾದ ವಿಲೇಖನಾರ್ಥಕ ಕೃಷಧಾತುವಿಗೆ 'ಕೃಷೇರಾದೇಶ್ಚ ಚ' (ಉ. ೨-೯೭) ಸೂತ್ರದಿಂದ ಅಣಿಪ್ರತ್ಯಯ, ಧಾತ್ವಾದಿಗೆ ಚತ್ವ. ಅಥವಾ ಚಾಯೃಧಾತುವಿಗೆ ಬಹುಲಗ್ರಹಣದಿಂದ ಅನಿಪ್ರತ್ಯಯ, ಧಾತುವಿಗೆ ಹ್ರಸ್ವ, ಷಭಾವ. ವಿವಿಧ ರೀತಿಯಿಂದ ನೋಡುವವನು ವಿಚರ್ಷಣಿ. ವಿಶ್ವವನ್ನು ನೋಡುವವನು **"ಸಕ್ಮನ್ಸ್ ಪಿಪರ್ಷಿ- ವಿದಥೇ ವಿಚರ್ಷಣೇ"** (ಋ-ಸಂ-೧-೨-೩೩-೧) **'ಸ್ತೋಮೇಭಿರ್ವಿಶ್ವಚರ್ಷಣೇ'** (ಋ. ಸಂ. ೧-೧-೧೭-೩) ||

(೮) **ಅವಚಾಕಶತ್** || ಕಾಶೃ-ದೀಪ್ತೌ. ಅವಪೂರ್ವದಲ್ಲಿರುವಾಗ ಯಙ್‌ಲುಗಂತದಮೇಲೆ ಶತೃಪ್ರತ್ಯಯ. ವ್ಯತ್ಯಯದಿಂದ ಹ್ರಸ್ವ. **'ಜನಾನಾಂ ಧೇನಾ ಅವ ಚಾಕಶದ್ ವೃಷಾ'** (ಋ. ಸಂ. ೭-೮-೨೫-೧) ||

ಹೀಗೆ ಎಂಟು ದರ್ಶನಕ್ರಿಯೆ ಹೇಳುವವುಗಳು || ೧೧ ||

———

ಅಷ್ಟಾ ಉತ್ತರಾಣಿ ಪದಾನಿ ಪಶ್ಯತಿಕರ್ಮಾಣ ಉತ್ತರೇ ಧಾವತ-
ಶ್ಚಾಯತಿಪ್ರಭೃತೀನಿ ಚ || ನಾಮಾನ್ಯಾಮಿಶ್ರಾಣಿ || ೨೦ ||

ಈ ಎಂಟು ಪದಗಳೂ ನೋಡು ಎಂಬರ್ಥವನ್ನು ಸೂಚಿಸುವ ಧಾತುಗಳು. ಇವಲ್ಲದೆ **ಚಕ್ಯತ್, ವಿಚರ್ಷಣಿಃ, ವಿಶ್ವಚರ್ಷಣಿಃ** ಇತ್ಯಾದಿ ಪದಗಳು ನೋಡು ಎಂಬ ಅರ್ಥದ ಜತೆಗೆ ಇತರ ಅರ್ಥವನ್ನೂ ಸೂಚಿಸುವುದರಿಂದ ಇವುಗಳಿಗೆ **ಆಮಿಶ್ರಾಣಿ ಪದಾನಿ** ಎಂದು ಕೆಲವರ ಅಭಿಪ್ರಾಯ.

(೧) ಹಿಕಮ್ (೨) ನುಕಮ್ (೩) ಸುಕಮ್ (೪) ಆಹಿಕಮ್ (೫) ಆಕೀಮ್ (೬) ನಕಿಃ (೭) ಮಾಕಿಃ (೮) ನಕೀಮ್ (೯) ಆಕೃತಮ್

ಇತಿ ನವೋತ್ತರಾಣಿ ಪದಾನಿ ಸರ್ವಪದ ಸಮಾಮ್ನಾಯೇ ॥ ೧೨ ॥

ಇವು ಒಂಭತ್ತು ಸರ್ವಾರ್ಥ ಹೇಳುವ ನಿಪಾತಗಳು. ಆಕೃತಂ ಎಂಬಲ್ಲಿ ಕೃಧಾತುವಿಗೆ ನಿಷ್ಠಾಪ್ರತ್ಯಯ ಹೇಳಿದ್ದರೂ ನಿಪಾತಸಮಾಹಾರರೂಪ ನಿಪಾತನೆಂದೇ ತಿಳಿಯಬೇಕು. ಕೃತನೆಂಬುದು ವಿಭಕ್ತಿ ಪ್ರತಿರೂಪಕ ಅವ್ಯಯವೆಂದು ಕೆಲವರ ಮತ. 'ಆಕೃತಮ್' ಎಂಬುದಕ್ಕೆ ಮಾತ್ರ ನಿಗಮ ಹುಡುಕಬೇಕು. **'ವಸುರ್ವಸು ಪತಿರ್ಹಿಕಮ್'** (ಋ. ಸಂ. ೬-೩-೪೦-೪) **'ಇಮಾ ನುಕಂಭುವನಾ'** (ಋ. ಸಂ. ೮-೮-೧೫-೧) **'ಸೀಷಧಾಮಾತಿಷ್ಠತೇಲವತಾ ಸುಕಮ್'** ॥ **'ಪೃಙ್ಕ್ತಂ ಹವೀಂಷಿ ಮಧುನಾ ಹಿ ಕಂ ಗತಮ್'** (ಋ. ಸಂ. ೨-೮-೧-೫) **'ಆಕೀಂ ಸೂರ್ಯಸ್ಯ ರೋಚನಾತ್'** (ಋ. ಸಂ. ೧-೧-೨೭-೩) **'ನ ಕಿರಿಂದ್ರ ತ್ವ ದುತ್ತರೋ'** (ಋ. ಸಂ. ೩-೬-೧೯-೧) **'ಮಾಕಿರ್ನೇಶನ್ಮಾ ಕೀಂ ರಿಷತ್'** (ಋ. ಸಂ. ೪-೮-೨೦-೨) **'ನ ಕೀಂ ವೃಧೀಕ ಇಂದ್ರ ತೇ'** (ಋ. ಸಂ. ೬-೫-೩೧-೪)

ಹೀಗೆ ಒಂಭತ್ತು ಸರ್ವಪದವಾಚಕ ನಿಪಾತಗಳು ॥ ೧೨ ॥

---

ನವೋತ್ತರಾಣಿ ಪದಾನಿ ಸರ್ವಪದಸಮಾಮ್ನಾನಾಯ ॥ ೨೧ ॥

ಈ ಒಂಭತ್ತೂ ಸರ್ವಪದಸಮಾಮ್ನಾತ ಪದಗಳು (ಎಂದರೆ) ಇವು ನಿಪಾತ, ಉಪಸರ್ಗ ಎಂಬೆರಡು ವಿಧಗಳನ್ನು ಒಳಗೊಂಡಿರುವವು.

ಅಥಾತ ಉಪಮಾಃ। ಯದತತ್ತತ್ಸದೃಶಮಿತಿ ಗಾರ್ಗ್ಯಃ ॥೨೨॥

ಈ ಕೆಳಗೆ ಹೇಳಿರುವ ಪದಗಳು ಉಪಮ ಎಂದು ಸಾದೃಶ್ಯ (ಹೋಲಿಕೆ) ಯನ್ನು ಸೂಚಿಸುವವು. ಸಾದೃಶ್ಯವೆಂದರೆ ಒಂದರಂತೆ ಇನ್ನೊಂದು ಇರುವುದು ಎಂದು ಗಾರ್ಗ್ಯ ಎಂಬಾಚಾರ್ಯರ ಅಭಿಪ್ರಾಯವು. **ಅಗ್ನಿರಿವ ಖದ್ಯೋತಃ** ಅಗ್ನಿಯಂತೆ (ದೀಪದಂತೆ) ದೀಪದ ಹುಳುವಿರುವುದು ಇತ್ಯಾದಿ.

(೧) ಇದಮಿವ (೨) ಇದಂಯಥಾ (೩) ಅಗ್ನಿರ್ನಯೇ (೪) ಚತುರ ಶ್ಚಿದ್ದದಮಾನಾತ್ (೫) ಬ್ರಾಹ್ಮಣಾವ್ರತಚಾರಿಣಃ (೬) ವೃಕ್ಷಸ್ಯ ನು ತೇ ಪುರುಹೂತವಯಾಃ (೭) ಜಾರ ಆಭಗಮ್ (೮) ಮೇಷೋ ಭೂತೋ೩ ಭಿಯಂನಯಃ (೯) ತದ್ರೂಪಃ (೧೦) ತದ್ವರ್ಣಃ (೧೧) ತದ್ವತ್ (೧೨) ತಥಾ

ಇತ್ಯುಪಮಾಃ ॥ ೧೩ ॥

ಇವಮಾದಿಗಳು ಉಪಮಾನವಾಚಕಗಳು. ಭಾಷ್ಯಕಾರರಿಂದಲೂ ಸ್ಕಂದಸ್ವಾಮಿಯಿಂದಲೂ ಇವು ವಿಸ್ತಾರವಾಗಿ ವ್ಯಾಖ್ಯಾತವಾಗಿವೆ (ನಿರು-೩-೧೩-೧೮). ಇವು ನಿಪಾತಗಳಾದುದರಿಂದ ಶಬ್ದನಿರ್ವಚನಮಾಡಬೇಕಾಗಿಲ್ಲ. ಉದಾಹರಣೆ ಮಾತ್ರ ತೋರಿಸಿದೆ.

(೧) ಇದಮಿವ ॥ (೨) ಇದಂ ಯಥಾ ॥ ಉಪಮಾನನ ಸನ್ನಿಧಿತೋರಿಸಲು ಇದಂ ಶಬ್ದ ಹೇಳಿದೆ. ಇವು ಯಥಾ ನಿಪಾತಗಳು. ಪರಾಶ್ರಯ ಸಾದೃಶ್ಯಪ್ರತಿಪಾದಕಗಳಾಗಿವೆ. **'ಇಂದ್ರ ಇವೇಹ ಧ್ರುವಸ್ತಿಷ್ಠ' (ಋ. ಸಂ. ೮–೮–೩೧–೨) 'ಯಥಾ ವಾತೋ ಯಥಾ ವನಮ್' (ಋ. ಸಂ. ೪–೪–೨೦–೩)**

(೩) ಅಗ್ನಿರ್ನಯೇ ॥ ಇಲ್ಲಿ ನ ಎಂಬುದು ಉಪಮಾನವಾಚಕವಾದ ನಿಪಾತ. **'ಅಗ್ನಿರ್ನ ಯೇ ಭ್ರಾಜಸಾ ರುಕ್ಮವಕ್ಷಸಃ' (ಋ. ಸಂ. ೮–೩–೧೨–೨)**

(೪) **ಚಿತ್ ॥ 'ಚತುರಶ್ಚಿದ್ದದಮಾನಾತ್'** (ಋ. ಸಂ. ೧–೩–೨೩–೪) ಇಲ್ಲಿ ಚಿತ್‌ಉಪಮಾನವಾಚಕ.

(೫) **'ಬ್ರಾಹ್ಮಣಾ ವ್ರತಚಾರಿಣಃ'** (ಋ. ಸಂ. ೫–೭–೩–೧) ಇಲ್ಲಿ ಉಪಮಾನ ತೋರುವುದರಿಂದ ಸಾದೃಶ್ಯ ವಾಚಕ ಇವಾದಿಗಳು ಲುಪ್ತವಾಗಿವೆಯೆಂದು ತಿಳಿಯಬೇಕು.

(೬) **'ವೃಕ್ಷಸ್ಯ ನು ತೇ ಪುರುಹೂತ ವಯಾಃ'** (ಋ. ಸಂ. ೪–೬-೧೭–೩) ಇಲ್ಲಿ ನು ಶಬ್ದ ಉಪಮಾನವಾಚಕ.

(೭) **"ಉದೀರಯ ಪಿತರಾ ಜಾರ ಆ ಭಗಮ್" (ಋ. ಸಂ. ೭–೬–೧೦–೧)** ಇಲ್ಲಿ ಆಕಾರಸಾದೃಶ್ಯವಾಚಕ.

(೮) **"ಮೇಷೋ ಭೂತೋ ೩ ಭಿ ಯನ್ನಯಃ" (ಋ. ಸಂ. ೫–೭–೨೪–೫)** ಇಲ್ಲಿ ಭೂತ ಎಂಬುದರಿಂದ ಉಪಮಾ ಹೇಳಿದೆ.

(೯) **ತದ್ರೂಪಃ ॥** (೧೦) **ತದ್ವರ್ಣಃ ॥** ಇಲ್ಲಿ ಉತ್ತರಪದವಾದ ರೂಪ ಮತ್ತು ವರ್ಣಪದದಿಂದ ಸಮಾಸದಲ್ಲಿ ಉಪಮಾ ಹೇಳಿದೆ.

(೧೧) **ತದ್ವತ್ ॥** 'ತೇನ ತುಲ್ಯಂ ಕ್ರಿಯಾ ಚೇದ್ವತಿಃ' (ಪಾ–ಸೂ–೫–೧–೧೧೫) ಸೂತ್ರದಿಂದ ಸಾದೃಶ್ಯಾರ್ಥದಲ್ಲಿ ವತಿಪ್ರತ್ಯಯ ಬಂದಿದೆ. **'ಪ್ರಿಯಮೇಧವದತ್ರಿವತ್' (ಋ. ಸಂ. ೧–೩–೩೧–೩)**

(೧೨) ತಥಾ ॥ 'ಪ್ರತ್ನಪೂರ್ವವಿಶ್ವೇಮಾತ್ ಥಾಲ್ ಛಂದಸಿ' (ಪಾ–ಸೂ–೫–೩–೧೧೧) ಸೂತ್ರದಿಂದ ಇವಾರ್ಥದಲ್ಲಿ ಥಾಲ್‌ಪ್ರತ್ಯಯ ಬಂದಿದೆ. **'ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ' (ಋ. ಸಂ. ೪.೨.೨೩.೧)**

ಹೀಗೆ ಹನ್ನೆರಡು ಉಪಮಾವಾಚಕ ನಿಪಾತಗಳು ॥ ೧೩ ॥

———

ತದಾಸಾಂ ಕರ್ಮ ಜ್ಯಾಯಸಾ ವಾ ಗುಣೇನ ಪ್ರಖ್ಯಾತತಮೇನ
ವಾ ಕನೀಯಾಂಸಂ ವಾಽಪ್ರಖ್ಯಾತಂ ವೋಪಮಿಮಾತೇ ॥೨೩॥ ೧೩॥

ಉಪಮಾನವನ್ನು ಕೆಲವು ಸಂದರ್ಭದಲ್ಲಿ ಉತ್ಕೃಷ್ಟ ಗುಣವಿರುವ ವಸ್ತುವಿಗೂ ಹೋಲಿಸಿ ಹೇಳುವುದುಂಟು. **ಸಿಂಹೋ ಮಾಣವಕಃ** ಈ ಬಾಲಕನು ಸಿಂಹಸದೃಶನು ಎಂದರೆ ಸಿಂಹದ ಶೌರ್ಯದಂತೆ ಈ ಬಾಲಕನು ಶೌರ್ಯವಂತನಾಗಿರುವನು. ಸಿಂಹದ ಕಾರ್ಯವು ಉತ್ಕೃಷ್ಟ ಎಂದರೆ ಅತಿ ಹೆಚ್ಚಾಗಿರುವುದು. ಬಾಲಕನಿಗೆ ಶೌರ್ಯವಿದ್ದರೂ ಸಿಂಹದಷ್ಟಿರುವುದಿಲ್ಲ, ಕಮ್ಮಿಯಾಗಿರುವುದು. ಆದರೂ ಬಾಲಕನ ಶೌರ್ಯವನ್ನು ಸಿಂಹದ ಶೌರ್ಯಕ್ಕೆ ಹೋಲಿಸಲಾಗಿದೆ. ಅದರಂತೆ ಪ್ರಖ್ಯಾತವಾದ ಗುಣವುಳ್ಳ ವಸ್ತುವನ್ನು ಪ್ರಖ್ಯಾತವಲ್ಲದ ಗುಣವುಳ್ಳ ವಸ್ತುವಿನೊಡನೆ ಹೋಲಿಸುವುದೂ ಉಂಟು. ಹೇಗೆಂದರೆ **ಚಂದ್ರೋ ಮಾಣವಕಃ** ಈ ಬಾಲಕನು ಚಂದ್ರನಂತೆ ಇದಾನೆ ಎಂಬಲ್ಲಿ ಚಂದ್ರನಲ್ಲಿರುವ ಕಾಂತಿಯಂತೆ ಈ ಬಾಲಕನ ಮುಖಕಾಂತಿಯೂ ಇದೆ ಎಂಬಲ್ಲಿ ಚಂದ್ರನ ಕಾಂತಿಯು ಪ್ರಖ್ಯಾತವಾಗಿದೆ ಎಂದರೆ ಅಧಿಕ ಅಥವಾ ಪ್ರಸಿದ್ಧವಾಗಿದೆ. ಬಾಲಕನ ಮುಖಕಾಂತಿಯು ಚಂದ್ರನಂತಿಲ್ಲದಿದ್ದರೂ ನೋಡುವುದಕ್ಕೆ ಆಹ್ಲಾದಕರವಾಗಿರುವುದರಿಂದ ಚಂದ್ರನಿಗೂ ಬಾಲಕನಿಗೂ ಕಾಂತಿವಿಷಯದಲ್ಲಿ ಸಾದೃಶ್ಯವನ್ನು ಇಲ್ಲಿ ಹೇಳಲಾಗಿದೆ.

ಅಥಾಪಿ ಕನೀಯಸಾ ಜ್ಯಾಯಾಂಸಮ್

ಕೆಲವು ಸಂದರ್ಭಗಳಲ್ಲಿ ನಿಕೃಷ್ಟಗುಣವುಳ್ಳ ವಸ್ತುವಿನೊಡನೆ ಉತ್ಕೃಷ್ಟಗುಣವುಳ್ಳ ವಸ್ತುವನ್ನು ಹೋಲಿಸುವುದುಂಟು. ಇದನ್ನು ಮುಂದಿನ ಖಂಡದಲ್ಲಿ ಹೇಳಿದೆ.

**ಇತಿ ತ್ರಯೋದಶಃ ಖಂಡಃ**

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು



———

ಅಥ ಚತುರ್ದಶಃ ಖಂಡಃ

**ಹದಿನಾಲ್ಕನೆಯ ಖಂಡವು**

———

ತನೂತ್ಯಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯಧೀತಾಮ್ ।
ತನೂತ್ಯಕ್ತನೂತ್ಯಕ್ತಾ ವನರ್ಗೂ ವನಗಾಮಿನಾವಗ್ನಿಮನ್ಥನೌ ಬಾಹೂ
ತಸ್ಕರಾಭ್ಯಾಮುಪಮಿಮಾತೇ ತಸ್ಕರಸ್ತತ್ಕರೋತಿ ಯತ್ ಪಾಪಕಮಿತಿ
ನೈರುಕ್ತಾಸ್ತನೋತೇರ್ವಾ ಸ್ಯಾತ್ ಸನ್ತತಕರ್ಮಾ ಭವತ್ಯಹೋರಾ-

ತ್ರಕರ್ಮಾ ವಾ ರಶನಾಭಿರ್ದಶಭಿರಭ್ಯಧೀತಾಮಭ್ಯಧಾತಾಂ ಜ್ಯಾಯಾಂ
ಸ್ತತ್ರ ಗುಣೋऽಭಿಪ್ರೇತಃ ॥ ೧೪ ॥

---

"ತನ್ಯೂತಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯಧೀತಾಮ್"
ಕನೂತ್ಯಕ್ ತನೂತ್ಯಕ್ತಾ । ವನರ್ಗೂ ವನಗಾಮಿನೌ ಅಗ್ನಿ-
ಮಂಥನೌ ಬಾಹೂ ತಸ್ಕರಾಭ್ಯಾಮುಪಮಿಮಾತೇ ॥

ತಸ್ಕರಸ್ತತ್ಕರೋ ಭವತಿ, ಕರೋತಿ ಯತ್ ಪಾಪಕಮಿತಿ ನೈರುಕ್ತಾಃ।
ತನೋತೇರ್ವಾ ಸ್ಯಾತ್ ಸಂತತಕರ್ಮಾ ಭವತಿ। ಅಹೋರಾತ್ರ-
ಕರ್ಮಾ ವಾ ।" ರಶನಾಭಿರ್ದಶಭಿರಭ್ಯಧೀತಾಮ್ ". ಇತಿ
ಅಭ್ಯಧಾತಾಮ್ ॥ ಜ್ಯಾಯಾಂಸ್ತತ್ರ ಗುಣೋऽಭಿಪ್ರೇತಃ॥೧೪॥

**ತನೂತ್ಯಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯಧೀತಾಮ್।**
**ಇಯಂ ತೇ ಅಗ್ನೇ ನವ್ಯಸೀ ಮನೀಷಾ ಯುಕ್ಷ್ವಾ ರಥಂ ನ ಶುಚಿಯದ್ಭಿರಂಗೈಃ॥**

(ಋ. ಸಂ. ೧೦-೪-೬)

ಇದರ ಅರ್ಥವು–ಎಲೈ ಅಗ್ನಿಯೇ, ಕಾಡಿನಲ್ಲಿ ಸಂಚರಿಸುವವರೂ ತಮ್ಮ ಪ್ರಾಣವನ್ನೇ ಬಿಡಲು ಸಿದ್ಧರಾಗಿರುವವರೂ ಆದ ಚೋರರು ತಮ್ಮ ಹಗ್ಗಗಳಿಂದ ಜನರನ್ನು ಹಿಡಿದು ಕಟ್ಟುವಂತೆ ಹತ್ತು ಅಂಗುಲಿಗಳಿಂದಲೂ ಬಾಹುಗಳು ನಿನ್ನ ಉಪವನ್ನು (ಅರಣಿಯನ್ನು) ಹಿಡಿಯುತ್ತವೆ. ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ನೂತನವಾದ ಈ ಸ್ತುತಿಯು ನಿರ್ಮಿತವಾಗುತ್ತದೆ. ರಥವು ಅಶ್ವಗಳೊಡನೆ ಸೇರಿಕೊಳ್ಳುವಂತೆ ಜಗತ್ತನ್ನು ಪ್ರಕಾಶಗೊಳಿಸುತ್ತ ನಿನ್ನ ತೇಜಸ್ಸುಗಳೊಡನೆ ಸೇರಿಕೋ.

ಉಪಮಾರ್ಥವನ್ನು, ಅದರಲ್ಲಿಯೂ ಶ್ರೇಷ್ಠವಸ್ತುವಿನೊಡನೆ ಕನಿಷ್ಠವಸ್ತುವನ್ನು ಹೋಲಿಸಿ ಅರ್ಥವಿವರಣೆ ಮಾಡುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿನ ಪೂರ್ವಾರ್ಧವನ್ನು ಉದಾಹರಣೆಗಾಗಿ ಕೊಟ್ಟು ಅದಕ್ಕೆ ನಿರ್ವಚನ ವನ್ನು ಹೇಳಿದಾರೆ—

ಅಥಾಪಿ ಕನೀಯಸಾ ಜ್ಯಾಯಾಂಸಂ । ತನೂತ್ಯಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯ–ಧೀತಾಂ । ತನೂತ್ಯಕ್ ತನೂತ್ಯಕ್ತಾ । ವನರ್ಗೂ ವನಗಾಮಿನೌ । ಅಗ್ನಿಮಂಥನೌ ಬಾಹೂ ತಸ್ಕರಾಭ್ಯಾಮುಪಮಿಮೀತೇ । ತಸ್ಕರಸ್ತತ್ಕರೋ ಭವತಿ । ಕರೋತಿ ಯತ್ಪಾಪಕಮಿತಿ ನೈರುಕ್ತಾಃ । ತನೋತೇರ್ವಾ ಸ್ಯಾತ್ ಸಂತತಕರ್ಮಾ ಭವತಿ । ಅಹೋರಾತ್ರಕರ್ಮಾ ವಾ । ರಶನಾಭಿರ್ದಶಭಿರಭಧೀತಾಂ ಇತಿ ಅಭ್ಯಧಾತಾಂ । ಜ್ಯಾಯಾಂಸ್ತತ್ರ ಗುಣೋऽಭಿಪ್ರೇತಃ ॥

(ನಿ. ೩-೧೪ )

ಈವಾಕ್ಯದಲ್ಲಿ ಅಗ್ನಿ ಮಥನಮಾಡುವಾಗ ಋತ್ವಿಗ್ಜನರ ಎರಡು ಕೈಗಳನ್ನು ಕಳ್ಳತನ ಮಾಡುವ ಇಬ್ಬರು ಚೋರರಿಗೆ ಹೋಲಿಸಲಾಗಿದೆ. ಇಲ್ಲಿ ಕಳ್ಳತನಮಾಡುವ ಚೋರರೆಂದರೆ ಸಾಮಾನ್ಯವಾಗಿ ರಾತ್ರೆಕಾಲದಲ್ಲಿ ಮನೆಗೆ ಯಾರೂಕಾಣದಂತೆ ನುಗ್ಗಿ ಅಥವಾ ಪ್ರವೇಶಿಸಿ ಧನಾದಿಗಳನ್ನು ಅಪಹರಿಸುವವರೆಂದು ತಿಳಿಯಕೂಡದು. ಈ ತರಹ ಕಳ್ಳರೂ ಕೆಲವರಿರುವರು. ಆದರೆ ಇಲ್ಲಿ **ವನರ್ಗೂ** ಎಂದಿರುವುದರಿಂದ ಇವರು ಬೇರೆವಿಧವಾದ ಕಳ್ಳರು. ಈ ವಿಧವಾದ ಕಳ್ಳ ಕಾಡಿನಲ್ಲಿ ವಾಸಿಸುತ್ತಾ ಊರಿಂದೂರಿಗೆ ಪ್ರಯಾಣಮಾಡುತ್ತಿರುವ ಮಾರ್ಗಸ್ಥರನ್ನು ಹಿಂಸಿಸಿ ಎಂದರೆ ಹಗ್ಗಗಳಿಂದ ಕಟ್ಟಿಹಾಕಿ ಅವರಲ್ಲಿರುವ ಸರ್ವಸ್ವವನ್ನೂ ದೋಚಿಕೊಂಡು ಹೋಗುವವರು ಎಂದು ತಿಳಿಯಬೇಕು. ಈ ವಿಧವಾದ ಕಳ್ಳರು ಅನೇಕವೇಳೆ ತಮಗಿಂತಲೂ ಬಲಿಷ್ಠರಾದ ಮಾರ್ಗಸ್ಥರ ಗುಂಪನ್ನು ಎದುರಿಸುವಾಗ ತಮ್ಮ ಪ್ರಾಣಕ್ಕೆ ಅಪಾಯವಾಗುವ ಸಂಭವವುಂಟು. ಆದ್ದರಿಂಲೇ ಇಲ್ಲಿ **ತನೂತ್ಯಜೇವ—** ಕದಿಯುವಾಗ ತಮ್ಮ ಪ್ರಾಣದ ಮೇಲೆಯೂ ಆಸೆಯಿಲ್ಲದೆ ಹೋರಾಡುವವರು ಎಂದು ಸೂಚಿಸಿದೆ. ಮತ್ತು **ವನರ್ಗೂ** ಎಂಬ ಶಬ್ದವು ವನ ಅಥವಾ ಕಾಡಿನಲ್ಲಿ ಮಾರ್ಗಮಧ್ಯದಲ್ಲಿ ಹೊಂಚುಕಾಯುತ್ತಿರುವವರು. ದಾರಿಹೋಕರು ಎಂಬರ್ಥವನ್ನು ಸೂಚಿಸುವುದು. ಇಲ್ಲಿ **ತನೂತ್ಯಜಾ** ಮತ್ತು **ವನರ್ಗೂ** ಎಂಬ ಶಬ್ದಗಳು ದ್ವಿವಚನಾಂತಪದಗಳಾದ್ದರಿಂದ ಇಬ್ಬರು ಚೋರರು ವಿಷಯದಲ್ಲಿ **ರಶನಾಭಿಃ** ಎಂಬ ಶಬ್ದಕ್ಕೆ ಹಗ್ಗಗಳಿಂದ ಎಂದೂ ಋತ್ವಿಗ್ಜನರ ಪರವಾಗಿ ಬೆರಳುಗಳೆಂದೂ ಅರ್ಥಮಾಡಬೇಕು. ಆದ್ದರಿಂದ ಕಾಡಿನಲ್ಲಿ ಮಾರ್ಗಸ್ಥರ ಧನವನ್ನು ಅಪಹರಿಸುವುದಕ್ಕಾಗಿ ಪ್ರಾಣದ ಮೇಲಿನ ಆಶೆಯನ್ನು ತೊರೆದು ದಾರಿಕಾಯುತ್ತಿರುವ ಇಬ್ಬರು ಕಳ್ಳರು ಯಾವ ರೀತಿ ಪಥಿಕರನ್ನು ಹಗ್ಗಗಳಿಂದಲೂ, ತಮ್ಮ ಬೆರಳುಗಳಿಂದಲೂ ಧನಾಪಹರಣಾರ್ಥವಾಗಿ ಕಟ್ಟಿಹಾಕುವರೋ ಅದರಂತೆ ಯಜ್ಞಕರ್ಮದಲ್ಲಿ ಅಧ್ವರ್ಯುವಿನ ಎರಡು ಬಾಹುಗಳು ಅರಣಿಗಳಲ್ಲಿ ಅಗ್ನಿಯನ್ನು ಕಡೆಯುವುದಕಾಗಿ ಮೇಲಿನ ಅರಣಿಯನ್ನು ಹಗ್ಗದಿಂದ ಬಿಗಿದು ತನ್ನ ಕೈಯ್ಯ ಹತ್ತು ಬೆರಳುಗಳಿಂದಲೂ ಕಡೆದು ಅಗ್ನಿಯನ್ನು ಉತ್ಪಾದನೆ ಮಾಡುತ್ತಾನೆ ಎಂದು ನಿರ್ವಚನದ ಮುಖ್ಯಾಭಿಪ್ರಾಯ.

**ಇಲ್ಲಿ ತಸ್ಕರ ಎಂದರೆ ತತ್ಕರಂ ಕರೋತಿ ಯತ್ಪಾಪಕಮಿತಿ ನೈರುಕ್ತಾಃ** | ಯಾವುದು ಪಾಪಕೆಲಸವೋ ಅದನ್ನೇ ಮಾಡುವವನು ಎಂದು ತಸ್ಕರಶಬ್ದಕ್ಕೆ ನಿರುಕ್ತಕಾರರ ಅರ್ಥವಿರುವುದು. ಅಥವಾ ತಸ್ಕರಶಬ್ದವು ತನುವಿಸ್ತಾರೇ ಎಂಬ ಧಾತುವಿನಿಂದಲೂ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ ಯಾವಾಗಲೂ ಎಂದರೆ ರಾತ್ರೆಕಾಲದಲ್ಲಿಯೂ, ಹಗಲಿನಲ್ಲಿಯೂ ಕಳ್ಳತನವನ್ನು ಮಾಡುವವನು ಎಂದು ತಸ್ಕರಶಬ್ದಕ್ಕೆ ಅರ್ಥವನ್ನು ಹೇಳಬಹುದು. ಈ ದೃಷ್ಟಾಂತದಲ್ಲಿ ಉತ್ತಮಕಾರ್ಯವಾದ ಅಗ್ನಿಮರ್ಥನವನ್ನು ನೀಚಕಾರ್ಯವಾದ ತಸ್ಕರನ ಕಾರ್ಯಕ್ಕೆ ಹೋಲಿಸಿ ಅರ್ಥವನ್ನು ವಿಶದಪಡಿಸಲಾಗಿದೆ ಎಂದು ಯಾಸ್ಕರು ವಿವರಿಸಿರುವರು.

**ಇತಿ ಚತುರ್ದಶಃ ಖಂಡಃ**

ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು

---

## ಪಂಚದಶಃ ಖಂಡಃ

### ಹದಿನೈದನೆಯ ಖಂಡವು

ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕೂಹಾಭಿಪಿತ್ವಂ ಕರತಃ
ಕುಹೋಷತುಃ | ಕೋ ವಾಂ ಶಯತ್ರಾ ವಿಧವೇವ ದೇವರಂ ಮರ್ಯಂ

ನ ಯೋಷಾ ಕೃಣತೇ ಸಧಸ್ಥ ಆ । ಕ್ವ ಸ್ವಿದ್ರಾತ್ರೌ ಭವಥಃ ಕ್ವ ದಿವಾ ಕ್ವಾಭಿಪ್ರಾಪ್ತಿಂ ಕುರುಥಃ ಕ್ವ ವಸಥಃ ಕೋ ವಾಂ ಶಯನೇ ವಿಧವೇವ ದೇವರಂ (ದೇವರಃ ಕಸ್ಮಾದ್ ದ್ವಿತೀಯೋ ವರ ಉಚ್ಯತೇ) ವಿಧವಾ ವಿಧಾತೃಕಾ ಭವತಿ ವಿಧವನಾದ್ವಾ ವಿಧಾವನಾದ್ವೇತಿ ಚರ್ಮಶಿರಾ ಅಪಿ ವಾ ಧವ ಇತಿ ಮನುಷ್ಯನಾಮ ತದ್ವಿಯೋಗಾದ್ವಿಧವಾ ದೇವರೋ ದೀವ್ಯತಿಕರ್ಮಾ ಮರ್ಯೋ ಮನುಷ್ಯೋ ಮರಣಧರ್ಮಾ ಯೋಷಾ ಯೌತೇರಾಕುರುತೇ ಸಹಸ್ಥಾನೇಽಥ ನಿಪಾತಾಃ ಪುರಸ್ತಾದೇವ ವ್ಯಾಖ್ಯಾತಾ ಯಥೇತಿ ಕರ್ಮೋಪಮಾ। ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ । ಭ್ರಾಜಂತೋ ಅಗ್ನಯೋ ಯಥಾ । ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ । ಆತ್ಮಾತತೇರ್ವಾಪ್ತೇರ್ವಾಪಿ ವಾಪ್ತ ಇವ ಸ್ಯಾದ್ ಯಾವದ್ವ್ಯಾಪ್ತಿಭೂತ ಇತಿ । ಅಗ್ನಿರ್ನ ಯೇ ಭ್ರಾಜಸಾ ರುಕ್ಮವಕ್ಷಸಃ। ಅಗ್ನಿರಿವ ಯೇ (ಮರುತೋ ಭ್ರಾಜಮಾನಾ ರೋಚಿಷ್ಣೂರಸ್ಕಾ) ಭ್ರಾಜಸ್ವಂತೋ ರುಕ್ಮವಕ್ಷಸಃ ॥೧೫॥

———

'ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ । ಕೋ ವಾಂ ಶಯುತ್ರಾ ವಿಧವೇನ ದೇವರಂ ಮರ್ಯಂ ನ ಯೋಷಾ ಕೃಣುತೇ ಸದಸ್ಥ ಆ' ॥

ಕ್ವ ಸ್ವಿದ್ರಾತ್ರೌ ಭವಥಃ, ಕ್ವ ದಿವಾ, ಕ್ವಾಭಿಪ್ರಾಪ್ತಿಂ ಕುರುಥಃ ಕ್ವ ವಸಥಃ, ಕೋ ವಾಂ ಶಯನೇ 'ವಿಧವೇವ ದೇವರಂ" (ದೇವರಃ ಕಸ್ಮಾದ್ ದ್ವಿತೀಯೋ ವರ ಉಚ್ಯತೇ) ವಿಧವಾ ವಿಧಾತೃಕಾ ಭವತಿ । ವಿಧವನಾದ್ವಾ । ವಿಧಾವನಾದ್ವೇತಿ ಚರ್ಮಶಿರಾಃ ॥ ಅಪಿ ವಾ ಧವ ಇತಿ ಮನುಷ್ಯನಾಮ, ತದ್ವಿಯೋಗಾದ್ವಿಧವಾ ॥ ದೇವರೋ ದೀವ್ಯತಿಕರ್ಮಾ ॥ ಮರ್ಯೋ ಮನುಷ್ಯೋ ಮರಣಧರ್ಮಾ ॥ ಯೋಷಾ ಯೌತೇಃ ॥ ಆಕುರುತೇ ಸಹಸ್ಥಾನೇ ॥

**ಕುಹಸ್ವಿದ್ದೋಷಾ (ಋ. ಸಂ. ೧೦-೪೦-೨)** ಎಂಬ ಋಕ್ಕಿನ ಅರ್ಥವು—

ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರಿಯಲ್ಲಿ ಎಲ್ಲಿರುತ್ತೀರಿ? ಹಗಲಿನಲ್ಲಿ ಎಲ್ಲಿರುತ್ತೀರಿ ? ಎಲ್ಲೆಲ್ಲಿ ಸಂಚಾರವನ್ನು ಹೊಂದುತ್ತೀರಿ? (ಮಾಡುತ್ತೀರಿ?) ಎಲ್ಲಿ ವಾಸಮಾಡುತ್ತೀರಿ? ವಿಧವೆಯು ತನ್ನ ಹಾಸಿಗೆಗೆ ಮೈದುನನ್ನು ಬರಮಾಡಿಕೊಳ್ಳುವಂತೆಯೂ ಸ್ತ್ರೀಯು ಪುರುಷನನ್ನು ಎದುರುಗೊಳ್ಳುವಂತೆಯೂ ಯಾವ ಯಜಮಾನನು ನಿಮ್ಮನ್ನು ಯಜ್ಞಸ್ಥಾನದಲ್ಲಿ ಎದುರಿಗೆ ಬರಮಾಡಿಕೊಳ್ಳುತ್ತಾನೆ.

**ಕ್ವ ಸ್ವಿದ್ರಾತ್ರೌ ಭವತಃ, ಕ್ವ ದಿವಾ, ಕ್ವಾಭಿಪ್ರಾಪ್ತಿಂ ಕುರುಥಃ, ವಸಥಃ ಕೋ ವಾಂಶಯನೇ ವಿಧವೇವ ದೇವರಂ । ದೇವರಃ ಕಸ್ಮಾತ್ ದ್ವಿತೀಯೋ ವರ ಉಚ್ಯತೇ । ವಿಧವಾ ವಿಧಾತೃಕಾ ಭವತಿ । ವಿಧವನಾದ್ವಾ ವಿಧಾವನಾದ್ವೇತಿ ಪ್ರಚರ್ಮಶಿರಾಃ । ಅಪಿ ವಾ ಧವ ಇತಿ ಮನುಷ್ಯನಾಮ ತದ್ವಿಯೋಗಾದ್ವಿಧವಾ ।ದೇವರೋ ದೀವ್ಯತಿಕರ್ಮಾ । ಮರ್ಯೋ ಮನುಷ್ಯೋ ಮರಣಧರ್ಮಾ । ಯೋಷಾ ಯೌತೇಃ । ಆಕುರುತೇ ಸಹಸ್ಥಾನೇ ॥**

(ನಿ. ೩-೧೫)

ಈ ಸೂಕ್ತದ ಋಷಿಯಾದ ಘೋಷಾ ಎಂಬ ಸ್ತ್ರೀಯು ಅಶ್ವಿನೀದೇವತೆಗಳನ್ನು ಸ್ತುತಿಸುವಾಗ ಅವರನ್ನು ಈರೀತಿ ಪ್ರಶ್ನೆ ಮಾಡುತ್ತಾಳೆ—ಎಲೈ ಅಶ್ವಿನೀದೇವತೆಗಳೇ, ನೀವು ರಾತ್ರಿಕಾಲದಲ್ಲಿ ಎಲ್ಲಿರುತ್ತೀರಿ ? ಹಗಲು ಎಲ್ಲಿರುತ್ತೀರಿ? (ಸ್ನಾನಭೋಜನಾದಿ ನಿಮ್ಮ) ಕಾರ್ಯನಿರ್ವಹಣೆಯನ್ನು ಎಲ್ಲಿ ಮಾಡುತ್ತೀರಿ ? ಎಲ್ಲಿ ವಾಸಮಾಡುತ್ತೀರಿ ? ಗಂಡನಿಲ್ಲದವಿಧವೆಯು ತನ್ನ ಮೈದನನ್ನು (ರಾತ್ರಿಕಾಲದಲ್ಲಿ) ತನ್ನ ಹಾಸಿಗೆಯಲ್ಲಿ ಎದುರಾಗಿ ಕೂರಿಸಿಕೊಳ್ಳುವಂತೆಯೂ, ಹೆಂಡತಿಯು ತನ್ನ ಗಂಡನನ್ನು ಏಕಾಂತದಲ್ಲಿ ಎದುರಾಗಿ ಕೂರಿಸಿಕೊಂಡು ವಿಹರಿಸುವಂತೆಯೂ ನೀವು ಯಜ್ಞಮಾಡುವ ಯಾವ ಯಜಮಾನನ ಯಜ್ಞಗೃಹದಲ್ಲಿ ಅವನಿಂದ ಸತ್ಕರಿಸಲ್ಪಡುತ್ತೀರಿ.

**ದೇವರ** ಶಬ್ದವು ಹೇಗೆ ನಿಷ್ಪನ್ನವಾಗಿದೆ ? ದೇವರ ಎಂದರೆ ಎರಡನೇ ವರ. ಸ್ತ್ರೀಗೆ ಮದುವೆಯಾದ ಗಂಡನೇ ಮೊದಲನೆಯ ವರ. ಮಕ್ಕಳಾಗುವುದಕ್ಕೆ ಮುಂಚೆಯೇ ಆ ಗಂಡನು ಮೃತನಾದಲ್ಲಿ (ಆ ಕಾಲದಲ್ಲಿ ರೂಢಿಯಲ್ಲಿದ್ದಂತೆ) ಆ ಗಂಡನ ತಮ್ಮನು ಎಂದರೆ ಮೈದನನು ಆ ಸ್ತ್ರೀಯಲ್ಲಿ ಪುತ್ರೋತ್ಪತ್ತಿಗಾಗಿ ಸಂಭೋಗಮಾಡಬಹುದಾದ್ದರಿಂದ ಆ ಮೈದನನೇ ಆಸ್ತ್ರೀಗೆ ದ್ವಿತೀಯ ವರ (ಎರಡನೆಯ ದೇವರ ಶಬ್ದಕ್ಕೆ ಮೈದುನ ಎಂದರ್ಥವು.

**ವಿಧವಾ** ಎಂಬ ಶಬ್ದಕ್ಕೆ (೧) **ವಿಧಾತೃಕಾ** ಎಂದರ್ಥವು. ಪತಿಯು ಮೃತನಾದಮೇಲೆ ಆ ಸ್ತ್ರೀಯನ್ನು ಧರಿಸುವವರು ಎಂದರೆ (ಅನ್ನವಸ್ತ್ರಾದಿಗಳನ್ನು ಕೊಟ್ಟು) ಪೋಷಿಸುವವರು ಯಾರೂ ಇರುವುದಿಲ್ಲವಾದ್ದರಿಂದ ಗಂಡನಿಲ್ಲದ ಸ್ತ್ರೀಯನ್ನು ವಿಧವಾ ಎಂದು ಕರೆಯುವರು. (೨) ಅಥವಾ **ವಿಧವನಾದ್ವಾ** ಪತಿಯ ಮರಣದಿಂದ ದುಃಖಿತಳಾಗಿ ಶೋಕದಿಂದ ನಡಗುತ್ತಿರುವವಳಾದ್ದರಿಂದ ಪತಿಯಿಲ್ಲದ ಸ್ತ್ರೀಗೆ ವಿಧವಾ ಎಂದು ಹೆಸರು. (೩) ಅಥವಾ **ವಿಧಾವನಾದ್ವಾ** ಪತಿಯಮರಣದಿಂದ ಶೋಕಸಂತಪ್ತಳಾಗಿ ಇಲ್ಲಿಂದಲ್ಲಿಗೆ ಯಾರ ನಿರ್ಬಂಧವೂ ಇಲ್ಲದೆ ಓಡಾಡುವವಳಾದ್ದರಿಂದ ಪತಿರಹಿತಳಾದ ಸ್ತ್ರೀಗೆ ವಿಧವಾ ಎಂದು ಹೆಸರು ಎಂದು ಚರ್ಮಶಿರಾಃ ಎಂಬ ಆಚಾರ್ಯರಮತವು. (೪) ಅಥವಾ ಧವಶಬ್ದಕ್ಕೆ ಮನುಷ್ಯನೆಂದರ್ಥವು. ಆದ್ದರಿಂದ ತನ್ನಪತಿಯನ್ನು (ವಿಧವ) ಕಳೆದುಕೊಂಡಿರುವ ಸ್ತ್ರೀಗೆ ವಿಧವಾ ಎಂದು ಹೆಸರು.

**ದೇವರಃ ದೀವ್ಯತಿಕರ್ಮಾ ।** ದೇವರ ಶಬ್ದವು ಕ್ರೀಡಿಸು ಎಂಬರ್ಥವುಳ್ಳ ದೀವ್ಯತಿ ಧಾತುವಿನಿಂದ ನಿಷ್ಪನ್ನವಾಗಿದೆ ಇಲ್ಲಿ ತನ್ನ ಸಹೋದರನ ಪತ್ನಿಯೊಡನೆ ರತಿಕ್ರೀಡೆಯಲ್ಲಿ ಆಸಕ್ತನಾಗಿರುವವನೆಂದಭಿಪ್ರಾಯವು.

**ಮರ್ಯಃ ಮನುಷ್ಯಃ ।** **ಮರ್ಯಃ** ಎಂದರೆ ಮನುಷ್ಯನು ಮರಣಧರ್ಮಕ್ಕೆ ಈಡಾಗುವವನು, ಎಂದಾದರೊಂದು ದಿವಸ ಮೃತನಾಗುವವನು.

**ಯೋಷಾ ಯೌತೇಃ ।** **ಯೋಷಾ** ಎಂದರೆ ಸ್ತ್ರೀಯು. ಈ ಶಬ್ದವು ಯು ಮಿಶ್ರಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪುರುಷನೊಡನೆ ಮಿಶ್ರವಾಗಿ ಎಂದರೆ ಸಂಪರ್ಕಮಾಡಿ ಸಂಭೋಗಿಸುವವಳಾದ್ದರಿಂದ ಸ್ತ್ರೀಗೆ ಯೋಷಾ ಎಂದು ಹೆಸರು.

**ಆಕುರುತೇ ಸಹಸ್ಥಾನೇ- ಸಮಾನಸ್ಥಾನೇ ಅಭಿಮುಖ್ಯೇನ ಆತ್ಮನಃ ಕುರುತೇ ಪರಿಚರಣಾಯ । ಕೃಣುತೇ ಸಧಸ್ಥ** ಆ ಎಂಬ ಶಬ್ದಗಳಿಗೆ ಸಮಾನಸ್ಥಾನದಲ್ಲಿ ಎಂದರೆ ಸ್ತ್ರೀಪುರುಷರು (ಸಂಭೋಗಕ್ಕಾಗಿ ಸೇರುವ) ಇಬ್ಬರಿಗೂ ಸಾಮಾನ್ಯವಾದ ಸ್ಥಳದಲ್ಲಿ ಅಥವಾ ಗೃಹದ ರಹಸ್ಯಪ್ರದೇಶದಲ್ಲಿ ಒಬ್ಬರಿಗೊಬ್ಬರು ಎದುರುಬದರಾಗಿ ಕುಳಿತುಕೊಳ್ಳುವುದು ಎಂದರ್ಥ.

ಅಥ ನಿಪಾತಾಃ ಪುರಸ್ತಾದೇವ ವ್ಯಾಖ್ಯಾತಾಃ ॥ ಯಥೇತಿ ಕರ್ಮೋಪಮಾ— ' ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।' 'ಭ್ರಾಜಂತೋ ಅಗ್ನಯೋ ಯಥಾ ।' 'ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ ।' ಆತ್ಮಾತತೇರ್ವಾಪ್ತೇರ್ವಾಪಿ ವಾಪ್ತ ಇವ ಸ್ಯಾದ್ ಯಾವದ್ವ್ಯಾಪ್ತಿಭೂತ ಇತಿ ॥ ೨ ॥

ಈಗ ನಿಪಾತ ಎಂದರೆ ಅವ್ಯಯಗಳ ವಿಷಯವನ್ನು ಹೇಳುವರು. ಅವ್ಯಯಗಳನ್ನು ಹಿಂದೆಯೇ ವಿವರಿಸಿದ್ದಾಗಿದೆ. (ಅಧ್ಯಾಯ ೧ ಖಂಡ ೪-೧೧)- ಹಿಂದೆ ಸಾಮಾನ್ಯವಾಗಿ ವಿವರಿಸಿದ್ದರೂ ಈಗ ವಿಶೇಷ ರೀತಿಯಿಂದ ವಿವರಿಸಲಾಗುವುದು. **ಯಥಾ** ಮೊದಲಾದ ಕರ್ಮೋಪಮದ ವಿಷಯವಾಗಿ ಉದಾಹರಣೆಯನ್ನು ಇಲ್ಲಿ ಕೊಡಲಾಗಿದೆ—

**ಯಥಾ ವಾತೋ ಯಥಾ ವನಂ ಯಥಾ ಸಮುದ್ರ ಏಜತಿ ।**
**ಏವಾ ತ್ವಂ ದಶಮಾಸ್ಯ ಸಹಾವೇಹಿ ಜರಾಯುಣಾ ॥**

(ಋ. ಸಂ. ೫-೭೮-೫)

ಇದರ ಅರ್ಥವು—ಬೀಸುತ್ತಿರುವ ಗಾಳಿಯು ಯಾವ ರೀತಿ ವೃಕ್ಷಗಳನ್ನೂ, ಸಮುದ್ರವನ್ನೂ ಕಂಪಿಸುವಂತೆ ಮಾಡುವುದೋ ಅದೇ ರೀತಿ ಗರ್ಭದ ಚಲನೆಯಿಂದ ಹತ್ತು ತಿಂಗಳು ಗರ್ಭಸ್ಥವಾಗಿದ್ದ ಎಲೈ ಶಿಶುವೇ, ಗರ್ಭಕೋಶದ ಪೊರೆಯೊಡನೆ ಹೊರಕ್ಕೆ ಬಾ. ಇನ್ನೊಂದು ಉದಾಹರಣೆ—

**ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾँ ಅನು ।**
**ಭ್ರಾಜಂತೋ ಅಗ್ನಯೋ ಯಥಾ ॥**

(ಋ. ಸಂ. ೧-೫೦-೩)

ಇದರ ಅರ್ಥವು—

ಸೂರ್ಯನಿಗಿಂತಲೂ ಪೂರ್ವಭಾವಿಯಾಗಿ ಪ್ರಸರಿಸಿ ಸೂರ್ಯನ ಆಗಮನವನ್ನು ಲೋಕಕ್ಕೆ ಸೂಚಿಸುವ ಅವನ ಕಿರಣಗಳು ಪ್ರಜ್ವಲಿಸುವ ಅಗ್ನಿಗಳಂತೆ ಉತ್ಪನ್ನವಾದ ಸಮಸ್ತವನ್ನೂ ಅನುಕ್ರಮವಾಗಿ ಪ್ರಕಾಶಿಸುವಂತೆ ಮಾಡುತ್ತವೆ.

ಮತ್ತೊಂದು ಉದಾಹರಣೆಯು—

**ಯದಿಮಾ ವಾಜಯನ್ನಹಮೋಷಧೀರ್ಹಸ್ತ ಆದಧೇ ।**
**ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ ॥**

(ಋ. ಸಂ. ೧೦-೯೭-೧೧)

ಇದರ ಅರ್ಥವು—

ಬೇಡನು ಹಿಡಿದೊಡನೆಯೇ ಪಕ್ಷಿ ಮೊದಲಾದ ಪ್ರಾಣಿಗಳ ಪ್ರಾಣವು ಹಾರಿಹೋಗುವಂತೆ ತಾನು ಯಾವಾಗ ರೋಗಿಯನ್ನು ಬಲಿಷ್ಠನನ್ನಾಗಿ ಮಾಡುವುದಕ್ಕಾಗಿ ಈ ಓಷಧಿಗಳನ್ನು ಕೈಯಲ್ಲಿ ಹಿಡಿಯುವೆನೋ ಆಗ ಅದನ್ನು ಪ್ರಯೋಗಿಸುವುದಕ್ಕೆ ಮೊದಲೇ ರೋಗದ ಶಕ್ತಿಯು ನಾಶವಾಗುತ್ತದೆ.

'ಅಗ್ನಿರ್ನ ಯೇ ಭ್ರಾಜಸಾ ರುಕ್ಮವಕ್ಷಸಃ।' ಅಗ್ನಿರಿವ ಯೇ ಮರುತೋ ಭ್ರಾಜಮಾನಾ ರೋಚಿಷ್ಣೂರಸ್ಕಾ ಭ್ರಾಜಸ್ವಂತೋ ರುಕ್ಮವಕ್ಷಸಃ ॥೩॥

ಇದುವರೆಗೂ **ಯಥಾ** ಮೊದಲಾದ ಅವ್ಯಯಗಳು ಸೂಚಿಸುವ ಉದಾಹರಣೆಗಳನ್ನು ವಿವರಿಸಿದ್ದಾಯಿತು. ಈಗ **ನ** ಎಂಬ (ಅವ್ಯಯ) ನಿಪಾತವು ಸೂಚಿಸುವ ಉಪಮಾರ್ಥವುಳ್ಳ ಉದಾಹರಣೆಯು ಈ ರೀತಿ ಇದೆ—

**ಅಗ್ನಿರ್ನ ಯೇ ಭ್ರಾಜಸಾ ರುಕ್ಮವಕ್ಷಸೋ ವಾತಾಸೋ ನ ಸ್ವಯುಜಃ ಸದ್ಯಊತಯಃ ।**
**ಪ್ರಜ್ಞಾತಾರೋ ನ ಜ್ಯೇಷ್ಠಾಃ ಸುನೀತಯಃ ಸುಶರ್ಮಾಣೋ ನ ಸೋಮಾ ಋತಂ ಯತೇ ॥**

(ಋ. ಸಂ. ೧೦-೭೮-೨)

ಈ ಋಕ್ಕಿನಲ್ಲಿರುವ **ನ** ಎಂಬ ನಿಪಾತಗಳು ಉಪಮಾರ್ಥವನ್ನು (ಇವ-ಅಂತೆ) ಸೂಚಿಸುತ್ತವೆ. ಇಲ್ಲಿ ನಾಲ್ಕು **ನ** ಎಂಬ ನಿಪಾತಗಳಿವೆ. ನ ಎಂಬ ನಿಪಾತವು ಉಪಮಾರ್ಥವನ್ನು ಸೂಚಿಸುವಾಗ ಯಾವಾಗಲೂ ಉಪಮಾನಾನಂತರ ಉಪಯೋಗಿಸಲ್ಪಡುವುದು.

ಅಗ್ನಿಯಂತೆ ಪ್ರಕಾಶಿಸುತ್ತಿರುವ ಯಾವ ಮರುದ್ದೇವತೆಗಳಿರುವರೋ ಅವರು ಬೆಳ್ಳಿಯಲ್ಲಿ ಪ್ರಕಾಶಿಸುವ ಎದೆಯನ್ನು ಹೊಂದಿರುತ್ತಾರೆ ಇತ್ಯಾದಿ.

**ಇತಿ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು.

ಷೋಡಶಃ ಖಂಡಃ

**ಹದಿನಾರನೆಯ ಖಂಡವು**

———

ಚತುರಶ್ಚಿದ್ದದಮಾನಾದ್ ಬಿಭೀಯಾದಾ ನಿಧಾತೋಃ । ನ ದುರುಕ್ತಾಯ ಸ್ಪೃಹಯೇತ್ । ಚತುರೋಽಕ್ಷಾನ್ ಧಾರಯತ ಇತಿ ತದ್ಯಥಾ ಕಿತವಾದ್ ಬಿಭೀಯಾದೇವಮೇವ ದುರುಕ್ತಾದ್ ಬಿಭೀಯಾನ್ನ ದುರುಕ್ತಾಯ ಸ್ಪೃಹಯೇತ್ ಕದಾಚಿದಾ ಇತ್ಯಾಕಾರ ಉಪಸರ್ಗಃ ಪುರಸ್ತಾದೇವ ವ್ಯಾಖ್ಯಾತೋಽಥಾಪ್ಯುಪಮಾರ್ಥೇ ದೃಶ್ಯತೇ । ಜಾರ ಆ ಭಗಮ್ । ಜಾರ ಇವ ಭಗಮಾದಿತ್ಯೋಽತ್ರ ಜಾರ ಉಚ್ಯತೇ ರಾತ್ರೇರ್ಜರಯಿತಾ ಸ ಏವ ಭಾಸಾಂ ತಥಾಪಿ ನಿಗಮೋ ಭವತಿ। ಸ್ವಸುರ್ಜಾರಃ ಶೃಣೋತು ನ ಇತ್ಯುಷಸಮಸ್ಯ ಸ್ವಸಾರಮಾಹ ಸಾಹಚರ್ಯಾದ್ರಸಹರಣಾದ್ವಾಪಿ ತ್ವಯಂ ಮನುಷ್ಯಜಾರ ಏವಾಭಿಪ್ರೇತಃ ಸ್ಯಾತ್ ಸ್ತ್ರೀಭಗಸ್ತಥಾ ಸ್ಯಾದ್ ಭಜತೇರ್ಮೇಷ ಇತಿ ಭೂತೋಪಮಾ । ಮೇಷೋ ಭೂತೋಽಭಿಯನ್ನಯಃ । ಮೇಷೋ ಮಿಷತೇಸ್ತಥಾ ಪಶುಃ ಪಶ್ಯತೇರಗ್ನಿರಿತಿ ರೂಪೋಪಮಾ । ಹಿರಣ್ಯರೂಪಃ ಸ ಹಿರಣ್ಯಸನ್ದೃಗಪಾನ್ನಪಾತ್ಸೇದು ಹಿರಣ್ಯವರ್ಣಸ್ಯೇ- ವಾಸ್ಯರೂಪಂ ಥಾ ಇತಿ ಚ । ತಂ ಪ್ರತ್ನಥಾ ವಿಶ್ವಥೇಮಥಾ । ಪ್ರತ್ನ ಇವ ಪೂರ್ವ ಇವ ವಿಶ್ವ ಇವೇಮ ಇವೇತ್ಯಯಮೇತತರೋಽಮುಷ್ಮಾದಸಾವಸ್ತತರೋಽಸ್ಮಾದಮುಥಾ ಯಥಾಸಾವತಿ ವ್ಯಾಖ್ಯಾತಂ ವದತಿ ಸಿದ್ಧೋಪಮಾ । ಬ್ರಾಹ್ಮಣವತ್ ವೃಷಲವತ್ । ಬ್ರಾಹ್ಮಣಾ ಇವ ವೃಷಲಾ ಇವೇತಿ ವೃಷಲೋ ವೃಷಶೀಲೋ ಭವತಿ ವೃಷಾಶೀಲೋ ವಾ ॥ ೧೬ ॥

'ಚತುರಶ್ಚಿದ್ದದಮಾನಾದ್ಬಿಭೀಯಾದಾ ನಿಧಾತೋಃ । ನ ದುರುಕ್ತಾಯ ಸ್ಪೃಹಯೇತ್' । ಚತುರೋಽಕ್ಷಾನ್ ಧಾರಯತ ಇತಿ ತದ್ಯಥಾ

ಕಿತವಾದ್ ಬಿಭೀಯಾದೇವಮೇವ ದುರುಕ್ತಾಯ ಸ್ಪೃಹಯೇತ್
ಕದಾಚಿತ್ ॥ ೧-೩ ॥

**ಚತುರಶ್ಚಿದ್ದದಮಾನಾದ್ಬಿಭೀಯಾದಾ ನಿಧಾತೋಃ ।**
**ನ ದುರುಕ್ತಾಯ ಸ್ಪೃಹಯೇತ್ ॥**

ಇದರ ಅರ್ಥವು—

ಇತರರ ಮೇಲೆ ದೋಷಾರೋಪಣೆಮಾತುಗಳನ್ನು ಆಡಲು ಆಸೆಪಡಬಾರದು. (ಅದರಿಂದ ಅನೇಕ ಅನರ್ಥಗಳು ಸಂಭವಿಸುವವು.) ದ್ಯೂತದಲ್ಲಿ ಜೂಜುಕಾರನು ಎದುರಾಳಿ ಕೈಯಲ್ಲಿರುವ ದಾಳಗಳಾಗಲಿ, ಕವಡೆಗಳಾಗಲಿ ಕೆಳಗೆ ಬೀಳುವ ವರೆಗೆ ತನಗೆಲ್ಲಿ ಅಪಜಯ ಸಂಭವಿಸುವುದೋ ಎಂಬ ಹೆದರಿಕೆಯನ್ನು ಹೇಗೆ ಇಟ್ಟುಕೊಂಡಿರುವನೋ ಅದೇ ರೀತಿ ಇತರರ ಮೇಲೆ ದೋಷಾರೋಪಣೆ ಮಾಡುವವನೂ ಸಹ ತನಗೆಲ್ಲಿ ತೊಂದರೆಯಾಗುವುದೋ ಎಂದು ಹೆದರಬೇಕು.

ಜೂಜಾಡುವಾಗ ತನ್ನ ಪ್ರತಿಸ್ಪರ್ಧಿಯ ಕೈಯಲ್ಲಿ ನಾಲ್ಕು ದಾಳಗಳನ್ನು ಇಟ್ಟುಕೊಂಡು ಅವನ್ನು ನೆಲದ ಮೇಲೆ ಹಾಕಿ ಆಡುವವರೆಗೂ ತನಗೆ ಪ್ರತಿಕೂಲವಾದ ಗರವು ಎಲ್ಲಿ ಬೀಳುವುದೋ ಎಂದು ಭಯಪಡುತ್ತಿರುವಂತೆ, ಇತರರ ವಿಷಯ ದಲ್ಲಿ ಯಾವಾಗಲೂ ನಾವು ದುರ್ಭಾಷೆಗಳನ್ನಾಡಲು ಅಪೇಕ್ಷಿಸಬಾರದು.

ಇತ್ಯಾಕಾರ ಉಪಸರ್ಗಃ ಪುರಸ್ತಾದೇವ ವ್ಯಾಖ್ಯಾತಃ ॥ ೪ ॥

**ಆ** ಎಂಬ ಉಪಸರ್ಗವು ಹಿಂದೆಯೇ ವಿವರಿಸಲ್ಪಟ್ಟಿರುತ್ತದೆ. (ನಿರುಕ್ತ ೧-೩)

ಅಥಾಪ್ಯುಪಮಾರ್ಥೇ ದೃಶ್ಯತೇ-ಜಾರ ಆ ಭಗಮ್ । ಜಾರ ಇವ
ಭಗಮ್॥ ಆದಿತ್ಯೋಽತ್ರ ಜಾರ ಉಚ್ಯತೇ-ರಾತ್ರೇರ್ಜರಯಿತಾ। ಸ ಏವ
ಭಾಸಾಮ್ ॥ ೫ ॥

**ಆ** ಎಂಬ ಉಪಸರ್ಗವು ಕೆಲವು ಸಂದರ್ಭಗಳಲ್ಲಿ(ನಿಪಾತದಂತೆ)ಉಪಮಾರ್ಥದಲ್ಲಿಯೂ ಉಪಯೋಗಿಸಲ್ಪಡುವುದು.
ಉದಾಹರಣೆಯ ಋಕ್ಕು—

**ಉದೀರಯ ಪಿತರಾ ಜಾರ ಆ ಭಗಮಿಯಕ್ಷತಿ ಹರ್ಯತೋ ಹೃತ್ತ ಇಷ್ಯತಿ ।**
**ವಿವಕ್ತಿ ವಹ್ನಿಃ ಸ್ವಪಸ್ಯತೇ ಮುಖಸ್ತವಿಷ್ಯತೇ ಅಸುರೋ ವೇಪತೇ ಮತೀ ॥**

(ಋ.-ಸಂ-೧೦-೧೧-೬)

ಇದರ ಅರ್ಥವು—

ಎಲೈ ಅಗ್ನಿಯೇ, ಆದಿತ್ಯನು ಪೂಜ್ಯವಾದ ತನ್ನ ತೇಜಸ್ಸನ್ನು ಪ್ರಸರಿಸುವಂತೆ ದ್ಯಾವಾಪೃಥಿವಿಗಳಿಗಭಿಮುಖವಾಗಿ ನಿನ್ನ ತೇಜಸ್ಸನ್ನು ಪ್ರಸರಿಸು. ಯಜ್ಞಾಪೇಕ್ಷಿಗಳಾದ ದೇವತೆಗಳನ್ನು ಯಜಮಾನನು ಪೂಜಿಸಲಿಚ್ಛಿಸುತ್ತಾನೆ. ಸ್ತುತಿಯನ್ನು ಪಠಿಸಲಿಚ್ಛಿ

ಸುತ್ತಾನೆ. ಹೋತೃವು ಉತ್ತಮವಾದ ಕರ್ಮಮಾಡಲಿಚ್ಛಿಸುತ್ತಾನೆ. ಅಧ್ವರ್ಯುವು ಸ್ತುತಿಯನ್ನು ಅಧಿಕಗೊಳಲಿಚ್ಛಿಸುತ್ತಾನೆ. ಬ್ರಹ್ಮನು ತನ್ನ ಬುದ್ಧಿಯೊಡಗೂಡಿ ಕರ್ಮನಿರತನಾಗುತ್ತಾನೆ.

**ಆ** ಎಂಬ ಉಪಸರ್ಗಕ್ಕೆ ಉಪಮಾರ್ಥದಲ್ಲಿಯೂ ಎಂದರೆ ಹೋಲಿಕೆಯಲ್ಲಿಯೂ ಪ್ರಯೋಗವಿದೆ. ಪ್ರಕೃತಋಕ್ಕಿನಲ್ಲಿರುವ **ಜಾರ ಆ ಭಗಂ** ಎಂಬ ವಾಕ್ಯದಲ್ಲಿ ಆದಿತ್ಯನಂತೆ ಪೂಜ್ಯವಾದ ಎಂದು **ಆ** ಎಂಬ ಶಬ್ದಕ್ಕೆ ಅಂತೆ ಎಂದು ಉಪಮಾರ್ಥವಿರುವುದು. ಇಲ್ಲಿ ಜಾರ ಶಬ್ದಕ್ಕೆ ಆದಿತ್ಯನೆಂದರ್ಥವು. **ರಾತ್ರೇರ್ಜರಯಿತಾ ತಮುದಯೇ ಹಿ ರಾತ್ರಿರ್ಜೀರ್ಯತೇ ವಿಪರಿಣಮತೀತ್ಯರ್ಥಃ**—ಎಂದರೆ ರಾತ್ರಿಯನ್ನು ಕೊನೆಗಾಣಿಸುವವನಾದ್ದರಿಂದ ಆದಿತ್ಯನಿಗೆ ಜಾರನೆಂದು ಹೆಸರು. ಸೂರ್ಯನು ಉದಯಿಸುವುದರಿಂದ ರಾತ್ರಿಕಾಲವು ಕೊನೆಗೊಳ್ಳುವುದು ಎಂದಭಿಪ್ರಾಯವು.

ತಥಾಪಿ ನಿಗಮೋ ಭವತಿ 'ಸ್ವಸುರ್ಜಾರಃ ಶೃಣೋತು ನಃ' ಇತಿ ||
ಉಪಸಮಸ್ಯ ಸ್ವಸಾರಮಾಹ ಸಾಹಚರ್ಯಾದ್ವಾ ರಸಹರಣಾದ್ವಾ ||
ಅಪಿ ತ್ವಯಂ ಮನುಷ್ಯಜಾರ ಏವಾಭಿಪ್ರೇತಃ ಸ್ಯಾತ್ | ಸ್ತ್ರೀಭಗಸ್ತಥಾ
ಸ್ಯಾದ್ ಭಜತೇಃ || ೬ ||

ಈ ವಿಷಯದಲ್ಲಿ ವೇದವಾಕ್ಯವು ಈ ರೀತಿ ಇದೆ—

**ಮಾಹುರ್ದಿಧಿಷುಮಬ್ರವಂ ಸ್ವಸುರ್ಜಾರ ಶೃಣೋತು ನಃ |**
**ಭ್ರಾತೇಂದ್ರಸ್ಯ ಸಖಾ ಮಮ ||**

(ಋ.ಸ. ೬–೫೫-೫)

ಇದರ ಅರ್ಥವು—ಜಗನ್ನಿರ್ಮಾತ್ರಿಯಾದ ರಾತ್ರಿಗೆ ಪತಿಯಾದ ಪೂಷನನ್ನು ನಾನು ಸ್ತುತಿಸುತ್ತೇನೆ. ಸಹೋದರಿಯಾದ ಉಷಸ್ಸಿಗೆ ಉಪಪತಿಯಾದ ಪೂಷನು ನಮ್ಮ ಸ್ತೋತ್ರಗಳನ್ನು ಕೇಳಲಿ. ಇಂದ್ರನಿಗೆ ಸಹೋದರನಾದ ಪೂಷನು ಸ್ತೋತೃವಾದ ನನಗೆ ಮಿತ್ರನಾಗಿರಲಿ.

ಈ ಋಕ್ಕಿನಲ್ಲಿರುವ ಪೂಷಶಬ್ದಕ್ಕೆ ಆದಿತ್ಯನೆಂದರ್ಥವು. ಆದಿತ್ಯನ ದ್ವಾದಶನಾಮಗಳಲ್ಲಿ ಪೂಷಶಬ್ದವೂ ಒಂದು, ಆದಿತ್ಯನು (ಸೂರ್ಯನು) ಉಷಸ್ಸಿಗೆ ಸಹೋದರನಂತಿರುವನು, ಏಕೆಂದರೆ ಉಷಃಕಾಲಾನಂತರ ಸೂರ್ಯನು ಉದಯಿಸುವುದರಿಂದ ಉಷಸ್ಸಿಗೂ ಸೂರ್ಯನಿಗೂ ಸಹಚರ್ಯ (ಸಹೋದರಭಾವ) ವಿದ್ದಂತಾಯಿತು, ಅಥವಾ ಉಷಃಕಾಲದಲ್ಲಿ ಬೀಳುವ ಹಿಮ (ರಸ) ಬಿಂದುಗಳನ್ನು ಸೂರ್ಯನು ಹೀರುವವನಾದ್ದರಿಂದ ಆದಿತ್ಯನಿಗೆ (ಸೂರ್ಯನಿಗೆ) ಉಷಸ್ಸನ್ನು ಸ್ವಸೃವೆಂದು ಹೇಳಬಹುದು. ಅಥವಾ ಮನುಷ್ಯಜಾರನಂತೆ ಎಂದರೆ ತನ್ನ ಪತ್ನಿಯಲ್ಲದ ಮತ್ತೊಬ್ಬ ಸ್ತ್ರೀಗೆ ಜಾರನಾದ ಪುರುಷನು ಸುಖಭೋಗಾದಿಗಳನ್ನು ನೀಡುವಂತೆ ಆದಿತ್ಯನು ಉಷೋದೇವಿಗೆ (ಉಷಃಕಾಲಕ್ಕೆ) ಸೇವೆಯನ್ನುಂಟುಮಾಡುವುದರಿಂದ ಆದಿತ್ಯನನ್ನೂ ಜಾರಶಬ್ದದಿಂದ ಸಂಬೋಧಿಸಬಹುದು.

**ಮೇಷ ಇತಿ ಭೂತೋಪಮಾ- "ಮೇಷೋ ಭೂತೋ ಽ ಭಿಯನ್ನಯಃ" । ಮೇಷೋ ಮಿಷತೇಃ ತಥಾ ಪಶುಃ ಪಶ್ಯತೇಃ ॥೭॥**

ಇಲ್ಲಿ ಇಂದ್ರನ ವಿಷಯದಲ್ಲಿ ಭೂತೋಪಮಕ್ಕಾಗಿ ಈ ಋಕ್ಕನ್ನು ಕೊಟ್ಟಿರುವರು—

**ಇತ್ಥಾ ಧೀಯಂತಮದ್ರಿವಃ ಕಾಣ್ವಂ ಮೇಧಾತಿಥಿಂ ।**
**ಮೇಷೋ ಭೂತೋ ಽ ಭಿಯನ್ನಯಃ ॥**

(ಋ. ಸಂ. ೮-೨-೪೦)

ಇದರ ಅರ್ಥವು—

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಇದೇ ರೀತಿ ಅನೇಕ ಪ್ರಕಾರವಾಗಿ ನಿನ್ನನ್ನು ಪ್ರಶಂಸಿಸುವ ಸ್ತುತಿಗಳನ್ನು ಪಠಿಸುವವನೂ ಕಣ್ವಪುತ್ರನೂ ಆದ ಮೇಧಾತಿಥಿಯಲ್ಲಿಗೆ ಮೇಷರೂಪದಲ್ಲಿ ಸಮೀಪಿಸಿ ಅವನನ್ನು ಅನುಗ್ರಹಿಸಲು ಬಂದಿರುವೆ.

ಇಲ್ಲಿ ಮೇಷ-ಆಡು ಎಂದರೆ ಒಂದು ಮೃಗ (ಭೂತ) ಈ ಪ್ರಾಣಿಯನ್ನು ಉಪಮಾರ್ಥವಾಗಿ ಇಲ್ಲಿ ಇಂದ್ರನಿಗೆ ಹೋಲಿಸಿದೆ. **ಮೇಷೋ ಮಿಷತೇಃ** ಎಂದರೆ ಮೇಷವು (ಆಡು) ಕಣ್ಣಿಗೆ ಕಾಣಿಸುವುದರಿಂದ ಇದಕ್ಕೆ ಮೇಷವೆಂದು ಹೆಸರು. ಹಾಗಯೇ **ಪಶುಃ ಪಶ್ಯತೇಃ** ಪಶುಶಬ್ದವೂ ಸಹ ಪಶ್ಯತಿಧಾತುವಿನಿಂದ ನಿಷ್ಪನ್ನವಾಗಿದೆ.

ಅಗ್ನಿರಿತಿ ರೂಪೋಪಮಾ - "ಹಿರಣ್ಯಸನ್ದೃಗಪಾನ್ನಪಾತ್ಸೇದು ಹಿರಣ್ಯವರ್ಣಃ । ಹಿರಣ್ಯವರ್ಣಸ್ಯೇವಾಸ್ಯ ರೂಪಮ್ ॥ ೮ ॥

ಅಗ್ನಿಯನ್ನು ಉತ್ತಮವಾದ ರೂಪಕ್ಕೆ ಹೋಲಿಸುವುದುಂಟು—

**ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ ।**
**ಹಿರಣ್ಯಯಾತ್ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥**

**(ಋ. ಸಂ. ೨-೩೫-೧೦)**

ಇದರ ಅರ್ಥವು—

ಅಪಾಂನಪಾತ್ ದೇವತೆಯು (ಅಗ್ನಿಯು) ಸುವರ್ಣಮಯವಾದ ಸ್ವರೂಪವುಳ್ಳವನೂ, ಆಕರ್ಷಕವಾದ ಇಂದ್ರಿಯವುಳ್ಳವನೂ, ಹೊಂಬಣ್ಣವುಳ್ಳವನೂ ಆಗಿ ಸುವರ್ಣಮಯವಾದ ಸ್ಥಾನದ ಮೇಲೆ ಕುಳಿತು ಪ್ರಕಾಶಿಸುತ್ತಾನೆ. ಈ ಅಗ್ನಿಯನ್ನುದ್ದೇಶಿಸಿ ಸುವರ್ಣವನ್ನು ದಕ್ಷಿಣಾರೂಪದಲ್ಲಿ ಅರ್ಪಿಸುವ ಯಜಮಾನರು ಹವಿಸ್ಸಿನ ರೂಪದ ಅನ್ನವನ್ನೂ ಅರ್ಪಿಸುತ್ತಾರೆ.

**ಹಿರಣ್ಯವರ್ಣಸ್ಯೇವಾಸ್ಯರೂಪಂ**—ಈ ಅಗ್ನಿಯ ವರ್ಣವು ಎಂದರೆ ಕಾಂತಿಯು ಸುವರ್ಣ (ಚಿನ್ನದಂತೆ) ಥಳಥಳಿಸುತ್ತಾ ಆಕರ್ಷಕವಾಗಿದೆ ಎಂದಭಿಪ್ರಾಯವು.

**ಸಃ ಅಪಾಂ ನಪಾತ್ ಹಿರಣ್ಯರೂಪಃ —ರೂಪ್ಯತ ಇತಿ ರೂಪಂ ಶರೀರಂ । ಸುವರ್ಣಮಯಶರೀರಃ ಹಿತರಮಣೀಯಶರೀರೋ ವಾ ।** ಇಲ್ಲಿ ರೂಪಶಬ್ದವೂ ಶರೀರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಅಪಾಂ ನಪಾತ್ ದೇವನು ಸುವರ್ಣಮಯವಾದ ಎಂದರೆ ಚಿನ್ನದ ಕಾಂತಿಯನ್ನು ಹೊಂದಿರುವ ಶರೀರವನ್ನು ಧರಿಸಿರುವನು ಅಥವಾ ಸರ್ವರಿಗೂ ಸುಖಕರವಾದ ಮತ್ತು ಮನೋಹರವಾದ ಶರೀರವನ್ನು ಎಂದು ವಿವರಿಸಿದೆ.

**ಹಿರಣ್ಯಸಂದೃಕ್—ಸಮ್ಯಕ್ ಪಶ್ಯಂತೀತಿ ಸಂದೃಶ ಇಂದ್ರಯಾಣಿ । ಸುವರ್ಣಮಯೇಂದ್ರಿಯೋ ಹಿತರಮಣೀಯೋಂದ್ರಿಯೋ ವಾ ।** ಸಂದೃಶ ಶಬ್ದವೂ ಪೂರ್ಣವಾಗಿ ತಿಳಿಯುವ ಸಾಧನಗಳಾದ ಇಂದ್ರಿಯಗಳೆಂಬ ಅರ್ಥದಲ್ಲಿ ಪ್ರಯುಕ್ತವಾಗಿವೆ. ಈ ದೇವನ ಇಂದ್ರಿಯಗಳು ಸುವರ್ಣದ ಹಾಗೆ ಕಾಂತಿಯುಳ್ಳವುಗಳೂ ಅಥವಾ ಸುಖಜನಕವಾಗಿ ಮನೋಹರವಾಗಿಯೂ ಇರುವುವು ಎಂದೂ ಈ ರೀತಿಯಾದ ಇಂದ್ರಿಯಗಳನ್ನು ಈ ದೇವನು ಹೊಂದಿರುವನೆಂದೂ ವಿವರಿಸಿದೆ.

**ಹಿರಣ್ಯಯಾತ್ ಯೋನೇಃ ಪರಿನಿಷದ್ಯ—ಸುವರ್ಣಯಾತ್ ಸ್ಥಾನಾದುಪರಿ ಉಪವಿಶ್ಯ ರಾಜತೇ ।** ಈ ದೇವನು ಸುವರ್ಣದ ಕಾಂತಿಯನ್ನು ಹೊಂದಿರುವ ಪ್ರದೇಶದ ಮೇಲುಭಾಗದಲ್ಲಿ ಸುಖವಾಗಿ ಉಪವಿಷ್ಟನಾಗಿರುತ್ತಾ ಪ್ರಕಾಶಿಸುತ್ತಿರುವನು.

**ಅಸ್ಮೈ ಹಿರಣ್ಯದಾಃ ಅನ್ನಂ ದದತಿ—ಈದೃಗ್ವಿಧಾಯ ಅಪಾಂ ನಪಾತೇ ದಕ್ಷಿಣಾರೂಪಸ್ಯ ದಾತಾರಃ ಯಜಮಾನಾಃ ಹವಿರ್ಲಕ್ಷಣಮನ್ನಂ ಪ್ರಯಚ್ಛಂತಿ ।** ಈ ಪ್ರಕಾರವಾದ ಪ್ರಭೂತವಾದ ಪ್ರಭಾವದಿಂದ ಇರುವ ಈ ದೇವನನ್ನು ಉದ್ದೇಶಿಸಿ ಯಜಮಾನರು ಯಾಗಗಳಲ್ಲಿ ದಕ್ಷಿಣೆಯನ್ನು ಸುವರ್ಣರೂಪದಿಂದ ದಾನಮಾಡುವವರಾಗಿಯೂ. ಹವಿಸ್ಸಿನ ರೂಪದಿಂದ ಅನ್ನವನ್ನು ಅರ್ಪಿಸುವವರಾಗಿಯೂ ಇರುತ್ತಾರೆ ಎಂದು ವರ್ಣಿಸಿದೆ.

ಥಾ ಇತಿ ಚ - "ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ ।"
ಪ್ರತ್ನ ಇವ ಪೂರ್ವ ಇವ ವಿಶ್ವ ಇವೇಮ ಇವೇತಿ' ಅಯಮೇತ-
ತರೋಽಮುಷ್ಮಾತ್ । ಅಸಾವಸ್ತತರೋಽಸ್ಮಾತ್ । "ಅಮುಥಾ"
ಯಥಾಸಾವಿತಿ ವ್ಯಾಖ್ಯಾತಮ್ ॥ ೯ ॥

**ಥಾ** ಎಂಬ ಶಬ್ದವೂ ಉಪಮಾರ್ಥದಲ್ಲಿ ಉಪಯೋಗಿಸಲ್ಪಡುವುದು. ಈ ಅರ್ಥದಲ್ಲಿ ಥಾ ಶಬ್ದವು ಉಪಯೋಗಿಸಲ್ಪಟ್ಟಿರುವ ಋಕ್ಕಿನ ಉದಾಹರಣೆಯು—

**ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ ಜ್ಯೇಷ್ಠತಾತಿಂ ಬರ್ಹಿಷದಂ ಸ್ವರ್ವಿದಂ ।**
**ಪ್ರತೀಚೀನಂ ವೃಜನಂ ದೋಹಸೇ ಗಿರಾಶುಂ ಜಯಂತಮನು ಯಾಸು ವರ್ಧಸೇ**

(ಋ. ಸಂ. ೫-೪೪-೧)

ಇದರ ಅರ್ಥವು—ಪುರಾತನರಾದ ಯಜಮಾನರೂ ನಮ್ಮ ಹಿಂದಿನ ಪಿತೃಪಿತಾಮಹಾದಿಗಳೂ, ಸಕಲಯಜಮಾನರೂ, ಈಗಿರುವ ಮಹಾತ್ಮರೂ ಆ ಇಂದ್ರನನ್ನೇ ಸ್ತುತಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದರು, ಎಲೈ ಅಂತರಾತ್ಮನೇ, ನೀನೂ ಸಹ

ಯಾವ ಸ್ತುತಿಗಳಿಂದ ಇಂದ್ರನನ್ನು ಪ್ರವೃದ್ಧನನ್ನಾಗಿಮಾಡಿ ನೀನೂ ತತ್ಫಲವಾದ ವೃದ್ಧಿಯನ್ನು ಹೊಂದುವೆಯೋ ಅಂತಹ ಸ್ತುತಿರೂಪವಾದ ಸಾಧನದಿಂದ ಎಲ್ಲರಿಗಿಂತಲೂ ಅತ್ಯಂತ ಜ್ಯೇಷ್ಠನೂ, ದರ್ಭಾಸನಸ್ಥನೂ, ಸರ್ವಜ್ಞನೂ ನಮಗಭಿಮುಖನಾಗಿರುವವನೂ, ಬಲಶಾಲಿಯೂ, ಶೀಘ್ರಗಾಮಿಯೂ, ಜಯಶಾಲಿಯೂ ಆದ ಇಂದ್ರನನ್ನೇ ಆರಾಧಿಸಿ ಅವನಿಂದ ನಿನ್ನ ಇಷ್ಟಾರ್ಥಗಳೆಲ್ಲಾ ವರ್ಷಿತವಾಗುವಂತೆ ಮಾಡು.

ಇಲ್ಲಿ **ಥಾ** ಎಂಬ ಶಬ್ದದ ಅಥವಾ ಉಪಸರ್ಗದ ಅರ್ಥವನ್ನು ವಿವರಿಸುವುದಕ್ಕಾಗಿ ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಈ ಋಕ್ಕಿನಲ್ಲಿರುವ **ಪ್ರತ್ನಥಾ, ಪೂರ್ವಥಾ, ವಿಶ್ವಥಾ, ಇಮಥಾ** ಎಂಬ ಶಬ್ದಗಳಲ್ಲಿರುವ **ಥಾ** ಎಂಬ ಉಪಸರ್ಗವು ಏನನ್ನು ತಿಳಿಸುತ್ತದೆ ಎಂಬ ವಿಷಯವನ್ನು ವಿವರಿಸಿದ್ದಾರೆ. ಅನುಥಾ ಎಂದರೆ **ಯಥಾಸೌ**—ಇದರಂತೆ ಎಂದು ಅರ್ಥವನ್ನು ಹಿಂದೆಯೇ ಹೇಳಿದೆಯಷ್ಟೆ. ಈಗಲೂ **ಥಾ** ಎಂಬ ಉಪಸರ್ಗಕ್ಕೆ **ಅಂತೆ** ಎಂಬರ್ಥವನ್ನು ಹೇಳಬೇಕು. **ಪ್ರತ್ನಥಾ** ಎಂಬ ಶಬ್ದದಲ್ಲಿ ಪ್ರತ್ನ ಎಂದರೆ ಪುರಾತನ. ಆದ್ದರಿಂದ ಪ್ರತ್ನಥಾ ಎಂದರೆ ಪುರಾತನರಂತೆ ಅಥವಾ ಹಿಂದಿನಂತೆ ಎಂದರ್ಥವು. ಇದರಂತೆ **ಪೂರ್ವಥಾ**–ಪೂರ್ವದಂತೆ, **ವಿಶ್ವಥಾ**–ಎಲ್ಲದರಂತೆ, **ಇಮಥಾ**–ಈಗಿನಂತೆ ಎಂದು ಈ ಶಬ್ದಗಳ ಅರ್ಥವು. ಈಗ **ಅಯಂ** ಎಂಬ ಶಬ್ದಕ್ಕೆ **ಅಯಂ ಏತರಃ** ಇನ್ನೊಂದು ವಸ್ತುವಿಗಿಂತ ಸಮೀಪದಲ್ಲಿರುವುದು ಎಂದರೆ ಇದು, ಈ ವಸ್ತುವು ಎಂದರ್ಥವು; ಆದ್ದರಿಂದಲೇ ನಾವು ಸಮೀಪದಲ್ಲಿರುವ ವಸ್ತುವನ್ನು ನಿರ್ದೇಶಿಸುವಾಗ **ಅಯಂ**—ಇದು, ಈ (ವಸ್ತುವು) ಎಂದು ಹೇಳುವೆವು. ಹೀಗೆಯೇ **ಅಸೌ** ಎಂಬ ಶಬ್ದಕ್ಕೆ **ಅಸೌ ಅಸ್ತತರಃ** ಇದಕ್ಕಿಂತ (ಸಮೀಪದಲ್ಲಿರುವ ವಸ್ತುವಿಗಿಂತ ದೂರದಲ್ಲಿರುವುದು ಎಂದರ್ಥವು. ಆದ್ದರಿಂದ ದೂರದಲ್ಲಿರುವ ವಸ್ತುವನ್ನು ನಾವು ಅಸೌ–ಅದು, ಆ (ವಸ್ತುವು) ಎಂದು ನಿರ್ದೇಶಿಸಿ ಹೇಳುವೆವು.

ವದಿತಿ ಸಿದ್ಧೋಪಮಾ – ಬ್ರಾಹ್ಮಣವತ್, ವೃಷಲವತ್ ।
ಬ್ರಾಹ್ಮಣಾ ಇವ ವೃಷಲಾ ಇವೇತಿ ॥ ವೃಷಲೋ ವೃಷಶೀಲೋ
ಭವತಿ ವೃಷಾಶೀಲೋ ವಾ ॥ ೧೦ ॥ ೧೬ ॥

**ವತ್** ಎಂಬ ಉಪಸರ್ಗವು ಸಿದ್ಧೋಪಮಾ ಎಂದು ಹೇಳಲ್ಪಡುವದು. ವತ್ ಎಂದರೆ—ಅಂತೆ; ಬ್ರಾಹ್ಮಣವತ್–ಬ್ರಾಹ್ಮಣನಂತೆ, ವೃಷಲವತ್—ನಿಕೃಷ್ಟನಂತೆ ಎಂದರ್ಥವು. **ವತ್** ಮತ್ತು ಇವ ಎಂಬ ಶಬ್ದದ ಅರ್ಥವು. **ಬ್ರಾಹ್ಮಣಾ ಇವ, ವೃಷಲಾ ಇವ** ಎಂದೇ ಅರ್ಥವು. **ವೃಷಲ** ಎಂದರೆ **ವೃಷಶೀಲೋ ಭವತಿ ವೃಷಾಶೀಲೋ** ವಾ ನೀಚನಂತೆ, ಕೆಟ್ಟಮನುಷ್ಯನಂತೆ ಕೋಪಗೊಳ್ಳುವವನು ಎಂದರ್ಥವು.

**ಇತಿ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು.

———

## ಅಥ ಸಪ್ತದಶಃ ಖಂಡಃ

### ಹದಿನೇಳನೆಯ ಖಂಡವು

ಪ್ರಿಯಮೇಧವದತ್ರಿವಜ್ಜಾತವೇದೋವಿರೂಪವತ್ । ಅಙ್ಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಮ್ । ಪ್ರಿಯಮೇಧಃ ಪ್ರಿಯಾ ಅಸ್ಯ ಮೇಧಾ ಯಥೈತೇಷಾಮೃಷೀಣಾಮೇವಂ ಪ್ರಸ್ಕಣ್ವಸ್ಯ ಶೃಣು ಹ್ವಾನಂ ಪ್ರಸ್ಕಣ್ವಃ ಕಣ್ವಸ್ಯ ಪುತ್ರಃ ಕಣ್ವಪ್ರಭವೋ ಯಥಾ ಪ್ರಾಗಮರ್ಚಿಷಿ ಭೃಗುಃ ಸಮ್ಬಭೂವ ಭೃಗುರ್ಭೃಜ್ಯಮಾನೋ ನ ದೇಹೇಽಙ್ಗಾರೇಷ್ವಙ್ಗಿರಾಃ । ಅಙ್ಗಾರಾ ಅಙ್ಕನಾ (ಅಞ್ಚನಾ) ಅತ್ರೈವ ತೃತೀಯಮೃಚ್ಛತೇತ್ಯೂಚುಸ್ತಸ್ಮಾದತ್ರಿರ್ನ ತ್ರಯ ಇತಿ ವಿಖನನಾದ್ವೈಖಾನಸೋ ಭರಣಾದ್ಭಾರದ್ವಾಜೋ ವಿರೂಪೋ ನಾನಾರೂಪೋ ಮಹಿವ್ರತೋ ಮಹಾವ್ರತ ಇತಿ ॥ ೧೭ ॥

"ಪ್ರಿಯಮೇಧವದತ್ರಿವಜ್ಜಾತವೇದೋವಿರೂಪವತ್ । ಅಙ್ಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಮ್"॥ ಪ್ರಿಯಮೇಧಃ ಪ್ರಿಯಾ ಅಸ್ಯ ಮೇಧಾ । ಯಥೈತೇಷಾಮೃಷೀಣಾಮೇವಂ ಪ್ರಸ್ಕಣ್ವಸ್ಯ ಶೃಣು ಹ್ವಾನಮ್ ॥ ಪ್ರಸ್ಕಣ್ವಃ ಕಣ್ವಸ್ಯ ಪುತ್ರಃ ಕಣ್ವಪ್ರಭವೋ ಯಥಾ ಪ್ರಾಗಮ್ ॥ ಅರ್ಚಿಷಿ ಭೃಗುಃ ಸಮ್ಬಭೂವ ಭೃಗುರ್ಭೃಜ್ಯಮಾನೋ ನ ದೇಹೇ ॥ ಅಙ್ಗಾರೇಷ್ವಙ್ಗಿರಾಃ । ಅಙ್ಗಾರಾ ಅಙ್ಕನಾಃ (ಅಞ್ಚನಾಃ) ॥ ಅತ್ರೈವ ತೃತೀಯಮೃಚ್ಛತ್ಯತೇತ್ಯೂಚುಸ್ತಸ್ಮಾದತ್ರಿರ್ನ ತ್ರಯ ಇತಿ ॥ ವಿಖನನಾದ್ವೈಖಾನಸಃ ॥ ಭರಣಾದ್ಭಾರದ್ವಾಜಃ ॥ ವಿರೂಪೋ ನಾನಾರೂಪಃ ॥ ಮಹಿವ್ರತೋ ಮಹಾವ್ರತ ಇತಿ ॥ ೧ ॥ ೧೭ ॥

**ವತ್**=ಇವ ಎಂಬ ಶಬ್ದಪ್ರಯೋಗವಿರುವ ಋಕ್ಕು—

**ಪ್ರಿಯಮೇಧವದತ್ರಿವಜ್ಜಾತವೇದೋ ವಿರೂಪವತ್ ।**
**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥**

(ಋ. ಸಂ. ೧-೪೫-೩)

ಇದರ ಅರ್ಥವು–ಎಲೈ ಅಗ್ನಿಯೇ, ನೀನು ಉತ್ಪನ್ನವಾದ ಸಕಲವನ್ನೂ ತಿಳಿಯುವವನು. ಪ್ರಿಯಮೇಧ, ಅತ್ರಿ ವಿರೂಪ ಮತ್ತು ಅಂಗಿರಸ್ಸು ಇವರುಗಳ ಆಹ್ವಾನವನ್ನು ಕೇಳಿರುವಂತೆ ಈಗಲೂ ಸಹ ಕಣ್ವಪುತ್ರನಾದ ಪ್ರಸ್ಕಣ್ವಋಷಿಯ ಆಹ್ವಾನವನ್ನು ಆಲಿಸಿ ಅವನನ್ನನುಗ್ರಹಿಸು

**ಪ್ರಿಯಮೇಧಃ**-**ಪ್ರಿಯಾ ಅಸ್ಯ ಮೇಧಾ** । ಯಜ್ಞ ಮಾಡುವುದರಲ್ಲಿ ತುಂಬಾ ಆಸಕ್ತಿ (ಪ್ರೀತಿ) ಯುಳ್ಳವನು ಎಂದು **ಅರ್ಥವು**. ಮೇಲೆ ಹೇಳಿದಂತೆ, ಪ್ರಿಯಮೇಧ, ಅತ್ರಿ, ವಿರೂಪ, ಅಂಗಿರಾಃ ಎಂಬ ಋಷಿಗಳ ಆಹ್ವಾನವನ್ನು ಕೇಳಿದಂತೆ ಕಣ್ವಪುತ್ರನಾದ ಪ್ರಸ್ಕಣ್ವಋಷಿಯು (ನನ್ನ) ಆಹ್ವಾನವನ್ನು ಕೇಳು ಎಂದಭಿಪ್ರಾಯವು. ಪ್ರಸ್ಕಣ್ವನೆಂದರೆ ಕಣ್ವಋಷಿಯ ಪುತ್ರನಿಗೆ ಹೆಸರು. ಕಣ್ವಋಷಿಗೆ ಪ್ರಸ್ಕಣ್ವನು ಅಗ್ರ ಎಂದರೆ ಶ್ರೇಷ್ಠ (ಮೊದಲ) ಪುತ್ರನು. ಭೃಗು ಎಂಬ ಋಷಿಯು ಅಗ್ನಿಯ ಜ್ವಾಲೆಯಲ್ಲಿ ಪ್ರಾದುರ್ಭೂತನಾದವನು, ಯಾರ ದೇಹದಲ್ಲಿಯೂ ಉತ್ಪನ್ನನಾದವನಲ್ಲ. ಪೂರ್ವದಲ್ಲಿ ಪ್ರಜಾಪತಿಯ ವೀರ್ಯವು ಅಗ್ನಿಯಲ್ಲಿ ಹೋಮಮಾಡಲ್ಪಟ್ಟು ಅದರ ಜ್ವಾಲೆಯಿಂದ ಭೃಗುಋಷಿಯು ಉತ್ಪನ್ನನಾದನೆಂದು ಪೂರ್ವೇತಿಹಾಸವಿದೆ. ಅಂಗಾರ (ಕೆಂಡ)ಗಳಲ್ಲಿ ಉತ್ಪನ್ನನಾದ್ದರಿಂದ ಅಂಗಿರಾಃ ಎಂಬ ಹೆಸರು ಅಂಗಿರಾ ಋಷಿಗೆ ಬಂದಿದೆ. **ಅಂಗಾರ** ಎಂಬ ಹೆಸರು ಅಂಕನಾಃ (ಅಂಜನಾಃ) ಎಂಬ ಶಬ್ದದಿಂದ ಬಂದಿದೆ. ಏಕೆಂದರೆ ಅಂಗಾರದಿಂದ (ಇಜ್ಜಲಿನಿಂದ ಅಥವಾ ಕೆಂಡದಿಂದ) ಗುರುತು ಮಾಡಲ್ಪಡುವುದು. **ಅತ್ರಿ** ಶಬ್ದವು **ಅ+ತ್ರಿ**=ಮೂರಲ್ಲ ಎಂಬುದರಿಂದ ನಿಷ್ಪನ್ನವಾಗಿದೆ. ಎಂದರೆ ಕೆಲವರು ಮೂರನೆಯವನನ್ನು ಹುಡುಕಿ, ಇವನು (ಅತ್ರಿಯು) ಮೂರನೆಯವನಲ್ಲ (ಅ+ತ್ರಿ=ಮೂರನೆಯವನಲ್ಲ) ಎಂಬ ಐತಿಹ್ಯದಿಂದ ಅತ್ರಿಋಷಿಗೆ **ಅತ್ರಿ** ಎಂಬ ಹೆಸರು ಬಂದಿರುವುದು. **ವಿಖನನಾದ್ವೈಖಾನಸಃ**—ಅಗಿಯುವುದು (dig) ಎಂಬ ಶಬ್ದದಿಂದ ವೈಖಾನಸಶಬ್ದವು ನಿಷ್ಪನ್ನವಾಗಿದೆ· **ಭರಣಾದ್ಭಾರದ್ವಾಜಃ** ಧರಿಸಿ ಪೋಷಿಸಲ್ಪಟ್ಟವನಾದ್ದರಿಂದ ಈ ಋಷಿಗೆ ಭರದ್ವಾಜನೆಂಬ ಹೆಸರು ಬಂದಿದೆ, **ವಿರೂಪೋ ನಾನಾರೂಪಃ** ವಿರೂಪ ಎಂದರೆ ನಾನಾ ರೂಪವುಳ್ಳವನು ಎಂದರ್ಥವು. **ಮಹಿವ್ರತಃ ಮಹಾವ್ರತಃ** ವ್ರತ ಎಂದರೆ ಕರ್ಮ. ನಾನಾ ಕಾರ್ಯಗಳನ್ನು ಅಥವಾ ಅನೇಕ ಮಹಾಕಾರ್ಯಗಳನ್ನೂ ಮಾಡುವವನಾದ್ದರಿಂದ ಈ ಋಷಿಗೆ ಮಹಿವ್ರತ ಎಂದು ಹೆಸರು ಬಂದಿತು. ಇವರೆಲ್ಲರೂ ಎಂದರೆ, ಕಣ್ವಋಷಿ, ಪ್ರಿಯಮೇಧ, ಭೃಗು, ಅಂಗಿರಾಃ, ಅತ್ರಿ, ವೈಖಾನಸ, ಭರಧ್ವಾಜ ವಿರೂಪ, ಮಹಿವ್ರತ ಎಂಬುವರೆಲ್ಲರೂ ಪ್ರಾಚೀನರೂ, ಪ್ರಸಿದ್ಧರೂ ಆದ ಋಷಿಗಳು.

**ಸಪ್ತದಶ ಖಂಡಃ**

ಇಲ್ಲಿಗೆ ಹದಿನೇಳನೆಯ ಖಂಡವು ಸಮಾಪ್ತವು



## ಅಥ ಅಷ್ಟಾದಶಃ ಖಂಡಃ

**ಹದಿನೆಂಟನೆಯ ಖಂಡವು**



ಅಥ ಲುಪ್ತೋಪಮಾನ್ಯರ್ಥೋಪಮಾನೀತ್ಯಾಚಕ್ಷತೇ ಸಿಂಹೋ ವ್ಯಾಘ್ರ ಇತಿ ಪೂಜಾಯಾಂ ಶ್ವಾ ಕಾ ಕ ಇತಿ ಕುತ್ಸಾಯಾಂ ಕಾಕ

ಇತಿ ಶಬ್ದಾನುಕೃತಿಸ್ತದಿದಂ ಶಕುನಿಷು ಬಹುಲಂ ನ ಶಬ್ದಾನುಕೃತಿರ್ವಿದ್ಯತ ಇತ್ಯೌಪಮನ್ಯವಃ ಕಾಕೋಽಪಕಾಲಯಿತವ್ಯೋ ಭವತಿ ತಿತ್ತಿರಿಸ್ತರಣಾತ್ತಿಲಮಾತ್ರಚಿತ್ರ ಇತಿ ವಾ ಕಪಿಞ್ಜಲಃ ಕಪಿರಿವ ಜೀರ್ಣಃ ಕಪಿರಿವ ಜವತ ಈಷತ್ಪಿಂಗಲೋ ವಾ ಕಮನೀಯಂ ಶಬ್ದಂ ಪಿಞ್ಜಯತೀತಿ ವಾ ಶ್ವಾ ಶುಯಾಯಿೞ ಶವತೇರ್ವಾ ಸ್ಯಾದ್ಗತಿಕರ್ಮಣಃ ಶ್ವಸಿತೇರ್ವಾ ಸಿಂಹಃ ಸಹನಾದ್ಧಿಂಸೇರ್ವಾ (ಸ್ಯಾತ್) ವಿಪರೀತಸ್ಯ ಸಮ್ಪೂರ್ವಸ್ಯ ವಾ ಹನ್ತೇಃ ಸಂಹಾಯ ಹನ್ತೀತಿ ವಾ ವ್ಯಾಘ್ರೋ ವ್ಯಾಘ್ರಾಣಾದ್ ವ್ಯಾದಾಯ ಹನ್ತೀತಿ ವಾ ॥ ೧೮ ॥

———

ಅಥ ಲುಪ್ತೋಪಮಾನ್ಯರ್ಥೋಪಮಾನೀತ್ಯಾಚಕ್ಷತೇ ॥ ೧ ॥

ಈಗ ಉಪಮಾನಗಳವಿಷಯವನ್ನು ಪ್ರಸ್ತಾಪಿಸುತ್ತಾ ಲುಪ್ತೋಪಮಾ ಎಂದರೇನು ಎಂಬುವುದನ್ನು ವಿವರಿಸುತ್ತಾರೆ. **ಲುಪ್ತೋಪಮಾ** ಎಂದರೆ ಯಾರನ್ನು ಕುರಿತು ಹೋಲಿಸಲ್ಪಡುವುದೋ ಅವರ ಹೆಸರು ವಾಕ್ಯದಲ್ಲಿ ಇಲ್ಲದಿರುವುದು. ಆದರೆ ವಾಕ್ಯದಲ್ಲಿ ಅಥವಾ ಶಬ್ದದಲ್ಲಿ ಭಾಸವಾಗುವ ಅರ್ಥದಿಂದ ಹೋಲಿಸಲ್ಪಡುವವರನ್ನು ಊಹಿಸಲು ಸಾಧ್ಯವಾಗುವುದು. ಇಂತಹ ಉಪಮಾನಗಳಿಗೆ ಅರ್ಥೋಪಮಾ ಎಂದೂ ಹೇಳಲ್ಪಡುವುದು. ಹೇಗೆಂದರೆ—**ಅಗ್ನಿರ್ನಯೇ** ವಸ ಎಂಬ ಋಕ್ಕಿನಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ಇಲ್ಲಿ ಅಗ್ನಿಯಂತೆ ಪ್ರಕಾಶಮಾನರಾದ ಮರುದ್ದೇವತೆಗಳು ಎಂದು ವರ್ಣಿಸಲಾಗಿದೆ. ಆದರೆ ಮರುದ್ದೇವತೆಗಳ ಹೆಸರನ್ನೇ ಈ ಋಕ್ಕಿನಲ್ಲಿ ಹೇಳಿಲ್ಲ ಆದರೆ ಮರುದ್ದೇವತೆಗಳಿಗೆ ಕೊಟ್ಟಿರುವ ಉಪಮಾನಶಬ್ದಗಳ ಅರ್ಥದಿಂದ ಈ ವಾಕ್ಯದಲ್ಲಿ ಮರುದ್ದೇವತೆಗಳು ಸ್ತುತಿಸಲ್ಪಟ್ಟಿದ್ದಾರೆ ಎಂದು ಸುಲಭವಾಗಿ ಊಹಿಸಬಹುದು. ಇಂತಹ ಅರ್ಥದಿಂದ ತಿಳಿಯಲ್ಪಡುವ ಉಪಮಾನಗಳಿಗೆ ಲುಪ್ತೋಪಮಾ ಎಂದು ಹೆಸರು.

ಪೂಸಿಂಹೋ ವ್ಯಾಘ್ರ ಇತಿ ಪೂಜಾಯಾಮ್ ॥ ೨ ॥

ಸಿಂಹ, ವ್ಯಾಘ್ರ ಎಂಬ ಪ್ರಾಣಿಗಳನ್ನು ಮನುಷ್ಯಾದಿಗಳಿಗೆ ಹೋಲಿಸುವಾಗ ಅಂತಹ ಉಪಮಾನವು ಪೂಜ್ಯ, ಅಥವಾ ಗೌರವ ಭಾವವನ್ನು ಸೂಚಿಸುತ್ತದೆ. ಹೇಗೆಂದರೆ **ಸಿಂಹೋ ದೇವದತ್ತಃ**—ದೇವದತ್ತನೆಂಬ ಪುರುಷನು ಸಿಂಹದಂತ್ರ ಶೌರ್ಯವುಳ್ಳವನು, ಎಂದರ್ಥವು. ಶೌರ್ಯವು ಉತ್ತಮ ಗುಣವೆಂದು ಪರಿಗಣಿಸಲ್ಪಡುವುದರಿಂದ ಸಿಂಹದ ಅಥವಾ ವ್ಯಾಘ್ರದ ಉಪಮಾನವು ಗೌರವ ಅಥವಾ ಪೂಜ್ಯಭಾವವನ್ನು ಸೂಚಿಸುವುದು.

ಶ್ವಾ ಕಾಕ ಇತಿ ಕುತ್ಸಾಯಾಮ್ ॥ ೩ ॥

ನಾಯಿ ಮತ್ತು ಕಾಗೆ ಮುಂತಾದ ಪ್ರಾಣಿಗಳು ನಿಕೃಷ್ಟವೆಂದು ಪರಿಗಣಿಸಲ್ಪಡುವುದರಿಂದ ಅವುಗಳ ಉಪಮಾನವು ನೀಚ ಭಾವವನ್ನು ಸೂಚಿಸುವುದು.

ಕಾಕ ಇತಿ ಶಬ್ದಾನುಕೃತಿಃ ॥ ೪ ॥

ಕಾಗೆಯನ್ನು ಕೆಲವು ಸಂದರ್ಭಗಳಲ್ಲಿ ಅದು ಮಾಡುವ ಕಾಕಾ ಎಂಬ ಶಬ್ದದೊಡನೆ ಹೋಲಿಸುವುದುಂಟು. ಈ ಪುರುಷನ ಧ್ವನಿಯು ಕಾಗೆಯಂತಿರುತ್ತದೆ ಎಂಬಲ್ಲಿ ಅವನ ಧ್ವನಿಯು ಕಾಕಾ ಎಂಬ ಶಬ್ದವನ್ನು ಅನುಸರಿಸುತ್ತದೆ ಎಂದಭಿಪ್ರಾಯವು.

ತದಿದಂ ಶಕುನಿಷು ಬಹುಲಮ್ ॥೫॥

ಶಕುನಿಯೆಂಬ ಪಕ್ಷಿಯ ವಿಷಯದಲ್ಲಿಯೂ ಅದು ಮಾಡುವ ಧ್ವನಿಯನ್ನು ಹೋಲಿಸುವುದಕ್ಕಾಗಿ ಈ ಪಕ್ಷಿಯ ಉಪಮಾನವು ಸಾಧಾರಣವಾಗಿ ಉಪಯೋಗಿಸಲ್ಪಡುತ್ತದೆ.

ನ ಶಬ್ದಾನುಕೃತಿರ್ವಿದ್ಯತ ಇತ್ಯೌಪಮನ್ಯವಃ ॥ ಕಾಕೋಽಪಕಾಲ-
ಯಿತವ್ಯೋ ಭವತಿ ॥ ೬ ॥

ಕಾಗೆಯು ಮಾಡುವ ಶಬ್ದಕ್ಕಾಗಿ ಅದರ (ಕಾಗೆಯ) ಉಪಮಾನವನ್ನು ಹೇಳುವುದಿಲ್ಲ. ಕಾಗೆಯು ನಿಕೃಷ್ಟ ಪ್ರಾಣಿಯಾದ್ದರಿಂದ ಅದು ಹತ್ತಿರಕ್ಕೆ ಬಂದಾಗ ಜನರು ಅದನ್ನು ಅಟ್ಟುವುದರಿಂದ ಅಂತಹ ಸಂದರ್ಭದಲ್ಲಿ ಕಾಗೆಯ ಉಪಮಾನವನ್ನು ಹೇಳುವರು ಎಂದು ಔಪಮನ್ಯವ ಎಂಬ ಆಚಾರ್ಯರ ಮತವು.

ತಿತ್ತಿರಿಸ್ತರಣಾತ್ತಿಲಮಾತ್ರಚಿತ್ರ ಇತಿ ವಾ ॥೭ ॥

**ತಿತ್ತಿರಿ** ಎಂಬ ಪಕ್ಷಿಗೆ ಆ ಹೆಸರು ಬರಲು ಕಾರಣವೇನೆಂದರೆ ಈ ಪಕ್ಷಿಯು ಸ್ವಲ್ಪ ಸ್ವಲ್ಪ ಹಾರುತ್ತಾ ಕುಪ್ಪಳಿಸುತ್ತ ಹೋಗುವುದರಿಂದ ಈ ಹೆಸರು ಬಂದಿದೆ ಅಥವಾ ಈ ಪಕ್ಷಿಯ ಶರೀರದಲ್ಲಿ ಎಳ್ಳುಕಾಳಿನಂತೆ ಸಣ್ಣ ಸಣ್ಣ ಚಿತ್ರಗಳು ಕಾಣಿಸುವುದರಿಂದಲೂ ಈ ಹೆಸರು ಬಂದಿದೆ.

ಕಪಿಞ್ಜಲಃ ಕಪಿರಿವ ಜೀರ್ಣಃ ಕಪಿರಿವ ಜವತ ಈಷತ್ಪಿಙ್ಗಲೋ
ವಾ ಗಮನೀಯಂ ಶಬ್ದಂ ಪಿಞ್ಜಯತೀತಿ ವಾ ॥ ೮ ॥

**ಕಪಿಂಜಲ** ಪಕ್ಷಿಗೆ ಈ ಹೆಸರು ಹೇಗೆ ಬಂತೆಂದರೆ ಇದು ಕಪಿಯಂತೆ (ಕೋತಿಯಂತೆ) ಜೀರ್ಣವಾದ ಅಥವಾ ಸುಕ್ಕು ಸುಕ್ಕಾದ ಶರೀರ ಉಳ್ಳದ್ದರಿಂದ ಈ ಹೆಸರು ಬಂದಿದೆ. ಅಥವಾ ಇದು ಕಪಿಯಂತೆ ವೇಗದಿಂದ ಚಲಿಸುವುದರಿಂದಲೂ ಈ ಹೆಸರು ಬಂದಿರಬಹುದು. ಅಥವಾ ಇದರ ಶರೀರದ ಬಣ್ಣವು ಸ್ವಲ್ಪಹಳದಿಯಾಗಿರುವುದರಿಂದಲೂ ಈ ಹೆಸರು ಬಂದಿರಬಹುದು ಅಥವಾ ಒಂದು ವಿಧವಾಗಿ ಶಬ್ದಮಾಡುತ್ತಿರುವುದರಿಂದಲೂ ಈ ಹೆಸರು ಬಂದಿರ ಬಹುದು.

ಶ್ವಾ ಶುಯಾಯಿೀ ಶವತೇರ್ವಾ ಸ್ಯಾದ್ಗತಿಕರ್ಮಣಃ ಶ್ವಸತೇ-
ರ್ವಾ ॥ ೯ ॥

**ಶು** ಎಂಬ ಶಬ್ದವು ಸಂಚರಿಸು, ತಿರುಗಾಡು, ಎಂಬ ಅರ್ಥವುಳ್ಳ ಶವತಿ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಶು ಎಂಬ ಶಬ್ದದಿಂದ **ಶ್ವಾ** ನಾಯಿ ಎಂಬ ಶಬ್ದವು ನಿಷ್ಪನ್ನವಾಗಿದೆ. ಅಥವಾ ಕೊಲ್ಲು ಪಕ್ಷಿ ಮೊದಲಾದುವುಗಳನ್ನು ಎಂಬರ್ಥ ವಿರುವ ಶ್ವಸಿತಿ ಎಂಬ ಧಾತುವಿನಿಂದಾಗಲಿ **ಶ್ವಾ** ನಾಯಿ ಎಂಬ ಶಬ್ದವು ನಿಷ್ಪನ್ನವಾಗಬಹುದು.

ಸಿಂಹಃ ಸಹನಾದ್ಧಿಂಸೇರ್ವಾ ಸ್ಯಾತ್ ವಿಪರೀತಸ್ಯ ಸಮ್ಪೂರ್ವಸ್ಯ ವಾ
ಹನ್ತೇಃ ಸಂಹಾಯ ಹನ್ತೀತಿ ವಾ ॥ ೧೦ ॥

**ಸಿಂಹ** ಎಂಬ ಹೆಸರು ಬರಲು ಕಾರಣವೇನೆಂದರೆ—ಈ ಮೃಗವು ಸಹನೆಯಿಂದಲೂ ಶೌರ್ಯದಿಂದಲೂ ಕೂಡಿರು ವುದರಿಂದ ಈ ಹೆಸರು ಬಂದಿದೆ. ಅಥವಾ ಸಿಂಹ ಎಂಬ ಶಬ್ದದಲ್ಲಿರುವ ಅಕ್ಷರಗಳನ್ನು ಹಿಂದು ಮುಂದು ಮಾಡುವುದರಿಂದ **ಹಂಸಿ** ಎಂದಾಗುವುದು. **ಹಂಸಿ** ಎಂದರೆ ಕೊಲ್ಲು ಎಂದರ್ಥವು. ಈ ಸಿಂಹವು ತನ್ನ ಆಹಾರಕ್ಕಾಗಿ ಇತರ ಮೃಗ ಗಳನ್ನು ಕೊಲ್ಲುವುದರಿಂದ ಈ ಹೆಸರು ಬಂದಿದೆ.

ವ್ಯಾಘ್ರೋ ವ್ಯಾಘ್ರಾಣಾದ್ ವ್ಯಾದಾಯ ಹನ್ತೀತಿ ವಾ ॥ ೧೧ ॥ ॥ ೧೮ ॥

**ವ್ಯಾಘ್ರ** ಎಂಬ ಹೆಸರು ಬರಲು ಕಾರಣವೇನೆಂದರೆ ಈ ವ್ಯಾಘ್ರವು ತನ್ನ ಆಹಾರಕ್ಕಾಗಿ ಇತರ ಪ್ರಾಣಿಗಳನ್ನು ಹುಡುಕುವಾಗ **ವ್ಯಾಘ್ರಾಣಾತ್** ಮೂಸಿನೋಡಿ **ತಿಳಿದು ಕೊಂಡು** ಕೊಲ್ಲುವುದರಿಂದ ಇದಕ್ಕೆ ವ್ಯಾಘ್ರವೆಂದು ಹೆಸರಾ ಯಿತು.

**ಇತ್ಯಷ್ಟಾದಶಃ ಖಂಡಃ**

ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು

—=—

## ಅಥೈಕೋನವಿಂಶಃ ಖಂಡಃ

### ಹತ್ತೊಂಭತ್ತನೆಯ ಖಂಡವು

ಅರ್ಚತಿಕರ್ಮಾಣಿ ಉತ್ತರೇ ಧಾತವಶ್ಚತ್ವಾರಿಂಶನ್ಮೇಧಾವಿನಾಮಾ ನ್ಯುತ್ತರಾಣಿ ಚತುರ್ವಿಂಶತಿರ್ಮೇಧಾವಿಃ ಕಸ್ಮಾನ್ಮೇಧಯಾ ತದ್ವಾನ್ ಭವತಿ ಮೇಧಾ ಮತೌ ಧೀಯತೇ ಸ್ತೋತೃನಾಮಾನ್ಯುತ್ತರಾಣಿ ತ್ರಯೋದಶ ಯಜ್ಞನಾಮಾನ್ಯುತ್ತರಾಣಿ ಪಂಚದಶ ಯಜ್ಞಃ ಕಸ್ಮಾತ್ ಪ್ರಖ್ಯಾತಂ ಯಜತಿಕರ್ಮೇತಿ ನೈರುಕ್ತಾ ಯಾಚ್ಞೋ ಭವತೀತಿ ವಾ ಯಜುರುನ್ನೋ ಭವತೀತಿ ವಾ ಬಹುಕೃಷ್ಣಾಜಿನ ಇತ್ಯೌಪಮನ್ಯವೋ

ಯಜೂಂಷ್ಯೇನಂ ನಯನ್ತೀತಿ ವರ್ತ್ರಿರ್ಜ್ಞಾಮಾನ್ಯುತ್ತರಾಣ್ಯಷ್ಟಾವೃತ್ವಿಕ್ ಕಸ್ಮಾದೀರಣ ಋಗ್ಯಷ್ಟಾ ಭವತೀತಿ ಶಾಕಪೂಣಿರ್ಋತುಯಾಜೀ ಭವತೀತಿ ವಾ ಯಚ್ಞಾ ಕರ್ಮಾಣ ಉತ್ತರೇ ಧಾತವಃ ಸಪ್ತದಶ ದಾನ-ಕರ್ಮಾ ೧ ಉತ್ತರೇ ಧಾತವೋ ದಶಾಧ್ಯೇಷಣಾಕರ್ಮಾಣ ಉತ್ತರೇ ಧಾತವಶ್ಚತ್ವಾರಃ ಸ್ವಪಿತಿಸಸ್ತೀತಿ ದ್ವೌ ಸ್ವಪಿತಿಕರ್ಮಾಣೌ ಕೂಪ-ನಾಮಾನ್ಯುತ್ತರಾಣಿ ಚತುರ್ದಶ ಕೂಪಃ ಕಸ್ಮಾತ್ ಕುಪಾನಂ ಭವತಿ ಕುಪ್ಯತೇರ್ವಾ ಸ್ತೇನನಾಮಾನ್ಯುತ್ತರಾಣಿ ಚತುರ್ದುಶೈವ ಸ್ತೇನಃ ಕಸ್ಮಾತ್ ಸಂಸ್ತ್ಯಾನಮಸ್ಮಿನ್ ಪಾಪಕಮಿತಿನೈರುಕ್ತಾ ನಿರ್ಣೀತಾನ್ತರ್ಹಿ-ತನಾಮಧೇಯಾನ್ಯುತ್ತರಾಣಿ ಷಟ್ (ನಿರ್ಣೀತಂ ಕಸ್ಮಾನ್ನಿರ್ಣಿಕ್ತಂ ಭವತಿ) ದೂರನಾಮಾನ್ಯುತ್ತರಾಣಿ ಪಂಚ ದೂರಂ ಕಸ್ಮಾದ್ ದ್ರುತಂ ಭವತಿ ದುರಯಂ ವಾ ಪುರಾಣನಾಮಾನ್ಯುತ್ತರಾಣಿ ಷಟ್ ಪುರಾಣಂ ಕಸ್ಮಾತ್ ಪುರಾ ನವಂ ಭವತಿ ನವನಾಮಾನ್ಯುತ್ತರಾಣಿ ಷಡೇವ ನವಂ ಕಸ್ಮಾದಾನೀತಂ ಭವತಿ ||೧೯||

---

ಅರ್ಚತಿಕರ್ಮಾಣ ಉತ್ತರೇ ಧಾತವಶ್ಚತುಶ್ಚತ್ವಾರಿಂಶತ್ || ೧ ||

ಈಗ ನಲವತ್ತನಾಲ್ಕು ಪೂಜಾರ್ಥಕ ಧಾತುಗಳನ್ನು ಹೇಳುತ್ತಾನೆ.

(೧) ಅರ್ಚತಿ (೨) ಗಾಯತಿ (೩) ರೇಭತಿ (೪) ಸ್ತೋಭತಿ (೫) ಗೂರ್ಧಯತಿ (೬) ಗೃಣಾತಿ (೭) ಜರತೇ (೮) ಹ್ವಯತೇ (೯) ನದತಿ (೧೦) ಪೃಚ್ಛತಿ (೧೧) ರಿಹತಿ (೧೨) ಧಮತಿ (೧೩) ಕೃಪಾಯತಿ (೧೪) ಕೃಪಣ್ಯತಿ (೧೫) ಪನಸ್ಯತಿ (೧೬) ಪನಾಯತೇ (೧೭) ವಲ್ಗೂಯತಿ (೧೮) ಮನ್ದತೇ (೧೯) ಭನ್ದತೇ (೨೦) ಛನ್ದತಿ (೨೧) ಛದಯತೇ (೨೨) ಶಶಮಾನಃ (೨೩) ರಂಜಯತಿ (೨೪) ರಜಯತಿ (೨೫) ಶಂಸತಿ (೨೬) ಸ್ತೌತಿ || (೨೭) ಯೌತಿ (೨೮) ರೌತಿ (೨೯) ನೌತಿ (೩೦) ಭನತಿ (೩೧)ಪಣಾ-ಯತಿ (೩೨) ಪಣತೇ । (೩೩) ಸಪತಿ (೩೪) ಪಪೃಕ್ಷಾಃ (೩೫) ಮಹಯತಿ

(೩೬) ವಾಜಯತಿ (೩೭) ಪೂಜಯತಿ (೩೮) ಮನ್ಯತೇ (೩೯) ಮದತಿ (೪೦) ರಸತಿ (೪೧) ಸ್ವರತಿ (೪೨) ವೇನತಿ (೪೩) ಮನ್ದಯತೇ (೪೪) ಜಲ್ಪತಿ

ಇತಿ ಚತುಶ್ಚತ್ವಾರಿಂಶದರ್ಚತಿ ಕರ್ಮಾಣಃ ।

(೧) ಅರ್ಚತಿ ॥ 'ಅರ್ಚ-ಪೂಜಾಯಾಮ್' (ಭ್ವಾ-ಪ) ಲಟ್ "**ಅರ್ಚನ್ತ್ಯರ್ಕಮರ್ಕಿಣಃ**" (ಋ. ಸಂ. ೧-೧-೧೯-೧)

(೨) **ಗಾಯತಿ** ॥ 'ಕೈ,-ಗೈಶಬ್ದೇ' (ಭ್ವಾ ಪ) ಶಪ್ ಆಯಾದೇಶ. **ಗಾಯನ್ತಿ ತ್ವಾ ಗಾಯತ್ರಿಣಃ**(ಋ-ಸಂ ೧-೧-೧೯-೧)

(೩) ರೇಭತಿ ॥ (೪) **ಸ್ತೋಭತಿ** ॥ ರೇಭೃ-ಶಬ್ದೇ, 'ಷ್ಟುಭ-ಸ್ತಂಭೇ' (ಭ್ವಾ-ಆ) ಧ್ವಾತ್ವಾದಿಗೆ ಸತ್ವ ಬಂದಾಗ ಟಕಾರಕ್ಕೆ ತಕಾರ. ವ್ಯತ್ಯಯದಿಂದ ಇಲ್ಲಿ ಪರಸ್ಮೈಪದಿಯಾಗಿವೆ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪೂಜಾರ್ಥ. '**ರೇಭನ್ತೋ ವೈ ದೇವಾಶ್ಚ ಋಷಯಶ್ಚ ಸ್ವರ್ಗಂ ಲೋಕಮಾಯತ್**' (ಐ-ಬ್ರಾ-೬-೫-೬)**ಸೋಮಃ ಪವಿತ್ರಮಭ್ಯೇತಿ ರೇಭನ್**' (ಋ. ಸಂ. ೭-೪-೭-೧) **ಪರಿಷ್ಟೋಭತ ವಿಂಶತಿಃ**' (**ಋ. ಸಂ. ೧-೫-೩೦-೪**)

(೫) **ಗೂರ್ಧಯತಿ** ॥ ಇದು ನಿರುಕ್ತಪಠಿತವಾದ ಧಾತು. **ತಂ ಗೂರ್ಧಯಾ ಸ್ವರ್ಣರಮ್** (**ಋ. ಸಂ. ೧-೪ -೨೯-೧**)

(೬) ಗೃಣಾತಿ ॥ ಗೄ-ಶಬ್ದೇ. ಕ್ರ್ಯಾದಿ ಶ್ನಾವಿಕರಣ ಬಂದಿದೆ. '**ಕಣ್ವತಮೋ ನಾಮ ಗೃಣಾತಿ ನೃಣಾಮ್** (**ಋ. ಸಂ. ೧-೪-೩-೪**)

(೭) ಜರತೇ ॥ ಇದೂ ನಿರುಕ್ತಪಠಿತಧಾತು. '**ಪುರುಣೀಯೋ ಜರತೇ ಸೂನೃತಾವಾನ್**' (**ಋ.ಸಂ.೧-೪ ೨೫-೭**)

(೮) ಹ್ವಯತೇ॥ 'ಹ್ವೇಞ್-ಸ್ಪರ್ಧಾಯಾಮ್ (ಭ್ವಾ-ಉ) ಶಪ್ ಬಂದಾಗ ಆಯಾದೇಶ. '**ವಾಹಿಷ್ಠೋ ವಾಂ ಹವಾನಾಮ್** (**ಋ. ಸಂ.-೬-೨-೨೯-೧**)

(೯) ನದತಿ ॥ 'ಣದ-ಅವ್ಯಕ್ತೇ ಶಬ್ದೇ' (ಭ್ವಾ-ಪ) ಧಾತ್ವಾದಿಗೆ ನತ್ವ '**ನದಸ್ಯ ಮಾ ರುಧತಃ ಕಾಮ ಆಗನ್**' (**ಋ. ಸಂ. ೨-೪-೨೨-೪**)

(೧೦) ಪೃಚ್ಛತಿ ॥ 'ಪ್ರಚ್ಛ-ಜ್ಞೀಪ್ಸಾಯಾಮ್' ತುದಾದಿ 'ಗ್ರಹಿಜ್ಯಾವಯಿ'-(ಪಾ-ಸೂ-೬-೧-೧೬) ಸೂತ್ರದಿಂದ ಸಂಪ್ರಸಾರಣ (ರೇಫಕ್ಕೆ ಋಕಾರ) ॥

(೧೧) **ರಿಹತಿ** ॥ 'ರಿಹ-ಕತ್ಥನಾದೌ' ತುದಾದಿ. ಅರ್ಚನಕ್ರಿಯಾವಾಚಕಗಳ ಮಧ್ಯದಲ್ಲಿ ಹೇಳಿರುವುದರಿಂದ ಅರ್ಚನಕ್ರಿಯಾ ಹೇಳಬೇಕೆಂದು ಕ್ಷೀರಸ್ವಾಮಿಮತ. ಶ ಙಿತ್ತಾಗುವುದರಿಂದ ಗುಣವಿಲ್ಲ. **'ಶಿಶುಂ ನ ವಿಪ್ರಾ ಮತಿಭೀ ರಿಹನ್ತಿ (ಋ.ಸಂ.-೮-೭-೭-೧)**

(೧೨) **ಧಮತಿ** ॥ ಗತಿ ಕರ್ಮದಲ್ಲಿ ವ್ಯಾಖ್ಯಾತವಾಗಿದೆ. (೧-೧೪-೫೦) ॥

(೧೩) **ಕೃಪಾಯತಿ** (೧೪) **ಕೃಪಣ್ಯತಿ** (೧೫) **ಪನಸ್ಯತಿ** ॥ ಇವು ಮೂರೂ ನೈರುಕ್ತಧಾತುಗಳು **' ಮರ್ತಾತಾ ಯೇ ಕೃಪಣಂತ ರತ್ನಮ್ (ಋಂ. ಸಂ. ೮-೩-೫-೩)** **'ತ್ವೇಷಂ ಪನಸ್ಯುಮರ್ಕಿಣಮ್** (ಋ. ಸ. (೧-೩-೧೭-೫) ॥

(೧೬) ' ಪನಾಯತೇ । ಪಣ- ವ್ಯವಹಾರೇ, ಸ್ತುತೌ ಚ ' 'ಪನ ಚ' (ಭ್ವಾ. ಆ.) ' ಗುಪೂಧೂಪವಿಚ್ಛಿ- (ಪಾ. ಸೂ. ೩-೧-೩೮) ಸೂತ್ರದಿಂದ ಸ್ವಾರ್ಥದಲ್ಲಿ ಆಯಪ್ರತ್ಯಯ ಬರುತ್ತದೆ. **'ಅಭಿಶೂನಾಂ ಮಹಿಮಾನಂ ಪನಾಯತ'** (ಋ. ಸಂ.೫-೧-೨೦-೧)

(೧೭) **ವಲ್ಗೂಯತಿ** ॥ ' ವಲ್ಗು-ಪೂಜಾಧುರ್ಯಯೋಃ ' ಕಂಡ್ವಾದಿಪಠಿತವಾದುದರಿಂದ ಯಕ್ ಬರುತ್ತದೆ. **'ವಲ್ಗೂಯತಿ ವನ್ದತೇ ಪೂರ್ವಭಾಜಮ್'** (ಋ. ಸಂ. ೩-೭-೨೭-೨)

(೧೮) **ಮನ್ದತೇ** ॥ ' ಮದಿ-ಸ್ತುತಿ ಮೋದ ಮದ ಸ್ವಪ್ನಕಾಂತಿಗತಿಷು ' (ಭ್ವಾ, ಆ.) ಇದಿತ್ತಾದುದರಿಂದ ನುಮಾಗಮ. **'ಪ್ರ ವೋ ಮಹೇ ಮಂದಮಾನಾಯಾನ್ಧಸಃ (ಋ. ಸಂ. ೮-೧೯-೧)'**

(೧೯) **ಭನ್ದತೇ** ॥ ' ಭದಿ - ಕಲ್ಯಾಣೇ ಸುಖೇ ಚ ' (ಭ್ವಾ. ಆ.) ಹಿಂದಿನಂತೆ ನುಮ್. **'ಪುರುಪ್ರಿಯೋ ಭನ್ದತೇ ಧಾಮಭಿಃ ಕವಿಃ'** (ಋ. ಸಂ. ೨-೮-೨೦-೪)

(೨೦) **ಛನ್ದತಿ** ॥ ' ಛದಿ ಸಂವರಣೇ ' ಚುರಾದಿ ಣಿಚ್‌ಬಂದಾಗ ಛಾಂದಸವಾಗಿ ಲುಕ್. **ವೃಷಾ ಚ್ಛನ್ದುರ್ಭವತಿ ಹರ್ಯತೋ ವೃಷಾ'** (ಋ. ಸಂ. ೧-೪-೧೯-೪)

(೨೧) **ಛದಯತೇ** ॥ ' ಛದ-ಅಪವಾರಣೇ ' ಚುರಾದಿ ಣಿಚ್. ಸಂಜ್ಞಾಪೂರ್ವಕೋ ವಿಧಿರನಿತ್ಯಃ ' ಎಂಬುದರಿಂದ ಉಪಧಾವೃದ್ಧಿ ಬರುವುದಿಲ್ಲ. ಅದಂತವಾದುದರಿಂದ ವೃದ್ಧಿ ಇಲ್ಲವೆಂದು ಭಟ್ಟಭಾಸ್ಕರಮಿಶ್ರರು.

(೨೨) **ಶಶಮಾನಃ** ॥ ' ಶಶಮಾನಃ ಶಂಸಮಾನಃ (ನಿರು-೬-೮-)ಎಂಬ ಭಾಷ್ಯದಲ್ಲಿ "ಶಂಸು-ಸ್ತುತೌ" ಎಂಬುದರಿಂದ ಈ ಪದವಾಗಿದೆಯೆಂದು ಸ್ಕಂದಸ್ವಾಮೀ. ಶಂಸುಧಾತುವಿಗೆ ಲಟ್‌ಬಂದಾಗ ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪವಾಗುತ್ತದೆ. ಅಥವಾ ಗತ್ಯರ್ಥಕವಾದ ಶಶಧಾತುವಿಗೆ ' ತಾಚ್ಛೀಲ್ಯವಯೋವಚನ ಶಕ್ತಿಷು ಚಾನಶ್ (ಪಾ-ಸೂ-೩-೨-೧೨೯) ಸೂತ್ರದಿಂದ ಚಾನಶ್‌ಪ್ರತ್ಯಯ **'ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ (ಋ.ಸಂ. ೨-೨-೨೧-೨)**

(೨೩) **ರಂಜಯತಿ** ॥ (೨೪) **ಜರಯತಿ** । " ರಂಜ-ರಾಗೇ ' ' ಜ್ಯಾಷ್-ವಯೋಹಾನೌ ' (ದಿ. ಪ.) ಈ ಎರಡು ಧಾತುಗಳಿಗೆ ಹೇತುಮಣ್ಣಿಚ್ ಬಂದಾಗ ಅದಕ್ಕೆ ಗುಣ, ಆಯಾದೇಶ ।

(೨೫) **ಶಂಸತಿ** ‖ ಶಂಸು-ಸ್ತುತೌ ' (ಭ್ವಾ.ಪ) **ಮಾ ಚಿದನ್ಯದ್ವಿ ಶಂಸತ** (ಋ. ಸಂ. ೫-೭-೧೦-೧)

(೨೬) **ಸ್ತೌತಿ** ‖ 'ಷ್ಟು-ಸ್ತುತೌ.' ಅದಾದಿ. ಧಾತ್ವಾದಿಗೆ ಸತ್ವ ಬಂದಾಗ ಟಕಾರಕ್ಕೆ ತಕಾರ. ತಿಪ್ ಪರವಾದಾಗ 'ಉತೋ ವೃದ್ಧಿರ್ಲುಕಿ ಹಲಿ' (ಪಾ. ಸೂ. ೭-೩-೮೯) ಸೂತ್ರದಿಂದ ಉಕಾರಕ್ಕೆ ವೃದ್ಧಿ. **"ಇದಮಿತ್ ಸ್ತೋತಾರಂ ವೃಷಣಂ ಸಚಾಸುತಃ"**‖

(೨೭) **ಯೌತಿ** ‖ (೨೮) **ರೌತಿ** ‖ (೨೯) **ನೌತಿ** ‖ 'ಯು-ಮಿಶ್ರಣೇ' 'ರು-ಶಬ್ದೇ' 'ಣು-ಸ್ತುತೌ' ಮೂರು ಅದಾದಿಗಣದಲ್ಲಿ ಹೇಳಿದೆ. ಹಿಂದಿನಂತೆ ಲಟ್ ಬಂದಾಗ ವೃದ್ಧಿ. **'ರುವದ್ಧೋಕ್ಷಾಪಪ್ರಥಾನೇಭಿರೇವೈಃ'** (ಋ. ಸಂ. ೩-೮-೮-೧) **'ದ್ಯುಮ್ನೈರಭಿ ಪ್ರಣೋ ನುನುಃ'** (ಋ. ಸಂ. ೧-೫-೨೬-೧) ‖

(೩೦) **ಭನತಿ** ‖ ಕೇವಲ ನಿರುಕ್ತಪಠಿತ ಧಾತು.

(೩೧) **ಪಣಾಯತಿ** ‖ (೩೨) **ಪಣತೇ** ‖ 'ಪಣ-ವ್ಯವಹಾರೇ, ಸ್ತುತೌ ಚ' (ಭ್ವಾ-ಆ) 'ಗುಪೂಧೂಪ—' (ಪಾ. ಸೂ. ೩-೧-೨೮) ಸೂತ್ರದಿಂದ ಆಯಪ್ರತ್ಯಯ. ಛಾಂದಸವಾದುದರಿಂದ ಅದು ವಿಕಲ್ಪವಾದುದರಿಂದ ಪಣತೇ ಎಂಬ ರೂಪವೂ ಆಗುತ್ತದೆ. **'ದೇವೋ ನಯತ್ ಸವಿತಾ ಸುಪಾಣಿಃ'** (ಋ. ಸಂ. ೩-೨-೧೩-೧) ಪೂಜಾರ್ಥಕ ಪಣಧಾತುವಿನಿಂದ ಪಾಣಿಯಾಗಿದೆಯೆಂದು ನಿರುಕ್ತ. (೨-೨೬)

(೩೩) **ಸಪತಿ** ‖ 'ಷಪ-ಸಮವಾಯೇ.' ಲಟ್. **'ಮತ್ಸರಾಸಃ ಪ್ರಸುಪಃ ಸಾಕಮೀರತೇ'** (ಋ. ಸಂ. ೭-೨-೨೨-೨) ಪೂಜಾರ್ಥಕ ಸಪಧಾತುವಿನಿಂದ ಪ್ರಸುಪಃ ರೂಪವಾಗಿದೆ. **'ವಿಯೇ ಚೃತಂತ್ಯೃತಾ ಸಂಪತಃ** (ಋ.ಸಂ. ೧-೫-೧೧-೪) ‖

(೩೪) **ಪಪೃಕ್ಷಾ** ‖ ಇದು ನೈರುಕ್ತ ಧಾತು. ಪೃಚಧಾತುವಿಗೆ ಸನ್ ಬಂದಾಗ 'ಹಲಂತಾಚ್ಚ' ಸೂತ್ರದಲ್ಲಿ ಹಲ್ ಪದ ಜಾತಿಪರನೆಂದು ಹೇಳಿರುವುದರಿಂದ 'ಅನಿದಿತಾಂ—' (ಪಾ. ಸೂ. ೬-೪-೨೪) ಸೂತ್ರದಿಂದ ನಲೋಪ, ಗುಣಾಭಾವ. ಸನಂತದ ಮೇಲೆ ಲೇಟ್. ಸಿಪ್. ಅಡಾಗಮ. 'ಇತಶ್ಚಲೋ'—ಸೂತ್ರದಿಂದ ಸಿಪಿ ನ ಇಕಾರಕ್ಕೆ ಲೋಪ ಉದಾಹರಣೆ— **'ವಾಯೋ ತವ ಪ್ರಪೃಞ್ಚತೀ'** (ಋ. ಸಂ. ೧-೧-೩-೩) ‖

(೩೫) **ಮಹಯತಿ** ‖ 'ಮಹ-ಪೂಜಾಯಾಮ್.' ಚುರಾದಿ. ಅದಂತವಾದುದರಿಂದ ಣಿಚ್ ಬಂದರೂ ಉಪಧಾ ವೃದ್ಧಿ ಬರುವುದಿಲ್ಲ. **'ತ್ಯಂ ಸು ಮೇಷಂ ಮಹಯಾ ಸ್ವರ್ವಿದಮ್'** (ಋ. ಸಂ. ೧-೪-೧೧-೧)

(೩೬) **ವಾಜಯತಿ** ‖ 'ವಜ-ಗತೌ.' ಣಿಚ್. ಉಪಧಾವೃದ್ಧಿ. **'ವಾಜಯಾಮಃ ಶತಕ್ರತೋ'** (ಋ. ಸಂ. ೧-೧-೮-೪) ‖

(೩೭) **ಪೂಜಯತಿ** ‖ 'ಪೂಜ-ಪೂಜಾಯಾಮ್.' ಚುರಾದಿ. ಣಿಚ್. ಲಟ್. ‖

(೩೮) **ಮನ್ಯತೇ** ‖ 'ಮನ-ಜ್ಞಾನೇ'. ದಿವಾದಿ. ಶ್ಯನ್‌ವಿಕರಣ. **'ಇಮಾಂ ಉ ವಾಂ ಭೃಮಯೋ ಮನ್ಯಮಾನಾಃ'** (ಋ. ಸಂ. ೩-೪-೯-೧)

(೩೯) **ಮದತಿ** ॥ 'ಮದೀ-ಹರ್ಷಗ್ಲೇಪನಯೋಃ' (ದಿ-ಪ-). ಲಟ್. ವ್ಯತ್ಯಯದಿಂದ ಶಪ್. **'ಕ್ಷುಮಂತೋ ಯಾಭಿರ್ಮದೇಮ'** (ಋ. ಸಂ. ೧-೨-೩೦-೩) 'ಮದತಿ, ರಸತಿ' ಎಂದು ಪೂಜಾರ್ಥದಲ್ಲಿ ಹೇಳಿರುವುದರಿಂದ ಇಲ್ಲಿ ಪೂಜಾಕ್ರಿಯಾವಾಚಕವಾಗಿದೆಯೆಂದು ಸ್ಕಂದಸ್ವಾಮಿಯ ಭಾಷ್ಯ.

(೪೦) **ರಸತಿ** ॥ 'ರಸ-ಶಬ್ದೇ' (ಭ್ವಾ-ಪ-)ಲಟ್ ॥

(೪೧) **ಸ್ವರತಿ** ॥ 'ಸ್ವೃ-ಶಬ್ದೋಪತಾಪಯೋಃ' (ಭ್ವಾ-.ಪ-) ಶಪ್. ಗುಣರಪರವಾಗಿ ಬರುತ್ತದೆ. **'ಸ್ವರೇಣಾದ್ರಿಂ ಸ್ವರ್ಯೋರ್ಣ ನವಗ್ವೈಃ** (ಋ. ಸಂ. ೧-೫-೧೪) **'ಋಷಿಸ್ಸ್ವರಂ ಚರತಿ ಯಾಸು ನಾಮತೇ'** (ಋ. ಸಂ ೪-೨-೨೪-೩) ॥

(೪೨) **ವೇನತಿ** ॥ (೪೩) **ಮನ್ದ್ರಯತೇ** ॥ ಇವೆರಡೂ ನೈರುಕ್ತಧಾತುಗಳು. **'ಅನರ್ವಾಣಂ ವೃಷಭಂ ಮಂದ್ರಜಿಹ್ವಮ್'** (ಋ. ಸಂ. ೨-೫೯೧೨-೧) ॥

(೪೪) **ಜಲ್ಪತಿ** ॥ 'ಜಲ್ಪ-ವ್ಯಕ್ತಾಯಾಂ ವಾಚಿ' (ಭ್ವಾ-ಪ) ಇಲ್ಲಿ ಪೂಜಾರ್ಥ ಹೇಳಬೇಕು.

ಹೀಗೆ ನಲವತ್ತನಾಲ್ಕು ಪೂಜಾರ್ಥ ಹೇಳುವ ಧಾತುಗಳು ॥ ೧೪ ॥

---

## ಮೇಧಾವಿನಾಮಾನ್ಯುತ್ತರಾಣಿ ಚತುರ್ವಿಂಶತಿಃ ॥ ೨ ॥

**ಮೇಧಾ** ಎಂಬ ಶಬ್ದಕ್ಕೆ ಬುದ್ಧಿ ಎಂದರ್ಥ. ಈ ಮೇಧಾವಿನಾಮಗಳು ಇಪ್ಪತ್ತನಾಲ್ಕು ಇರುವವು.

(೧) **ವಿಪ್ರಃ** (೨) **ವಿಗ್ರಃ** (೩) **ಗೃತ್ಸಃ** (೪) **ಧೀರಃ** (೫) **ವೇನಃ** (೬) **ವೇಧಾಃ** (೭) **ಕಣ್ವಃ** (೮) **ಋಭುಃ** (೯) **ನವೇದಾಃ** (೧೦) **ಕವಿಃ** (೧೧) **ಮನೀಷೀ** (೧೨) **ಮನ್ಧಾತಾ** (೧೩) **ವಿಧಾತಾ** (೧೪) **ವಿಪಃ** (೧೫) **ಮನಶ್ಚಿತ್** (೧೬) **ವಿಪಶ್ಚಿತ್** (೧೭) **ವಿಪನ್ಯವಃ** (೧೮) **ಆಕೇನಿಪಃ** (೧೯) **ಉಶಿಜಃ** (೨೦) **ಕೀಸ್ತಾಸಃ** (೨೧) **ಅದ್ಧಾತಯಃ** (೨೨) **ಮತಯಃ** (೨೩) **ಮತುಥಾಃ** (೨೪) **ವಾಘತಃ**

ಇತಿ ಚತುರ್ವಿಂಶತಿ ರ್ಮೇಧಾವಿನಾಮಾನಿ ॥ ೧೫ ॥

(೧) **ವಿಪ್ರಃ** ॥ "ಟು ವಪ್-ಬೀಜಸಂತಾನೇ" (ಭ್ವಾ-ಉ) 'ವಿಪ-ಕ್ಷೇಪೇ' ಎಂದು ಕ್ಷೀರಸ್ವಾಮಿಯ ಮತ. 'ಋಜ್ರೇಂದ್ರಾಗ್ರವಜ್ರವಿಪ್ರ=' (ಉ-೧-೨೭) ಸೂತ್ರದಿಂದ ರನ್‌ಪ್ರತ್ಯಯ ಬಂದಾಗ ಇತ್ವ, ಗುಣಾಭಾವಗಳು ನಿಪಾತಿತ ವಾಗುತ್ತವೆ. ಇವನಲ್ಲಿ ಅಧಿಕ ಪ್ರಜ್ಞೆಯು ಸೇರಿರುತ್ತದೆ, ಇದರಿಂದ ಪಾಪವು ಹೋಗಲಾಡಿಸಲ್ಪಡುತ್ತದೆ. ಅಥವಾ 'ವಿಪ್' ಸಂಗ್ರಾಮನಾಮದಲ್ಲಿ ವ್ಯಾಖ್ಯಾತವಾಗಿದೆ. (೨-೫-೯) ವಿಪ್ ಉಳ್ಳದ್ದು ವಿಪ್ರ. ಮೇಧಾ ವಾಙ್ಮಯವಾಗಿದೆ. ಮತ್ವರ್ಥದಲ್ಲಿ

ರ ಪ್ರತ್ಯಯ ಛಾಂದಸವಾದುದರಿಂದ ಜಶ್ತ್ವವಿಲ್ಲ. ಅಥವಾ ಪೂರಣಾರ್ಥಕ ಪ್ರಾಧಾತುವಿಗೆ ವಿಉಪಸರ್ಗಪೂರ್ವದಲ್ಲಿರುವಾಗ 'ಆತೋಽನುಪಸರ್ಗೇ—' (ಪಾ-ಸೂ-೩-೨-೨) ಸೂತ್ರದಿಂದ ಕಪ್ರತ್ಯಯ. 'ಆತೋಲೋಪಇಟಿಚ' ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ. ವಿದ್ಯಾರ್ಥಿಗಳ ಅಪೇಕ್ಷೆಗಳನ್ನು ವಿಶೇಷವಾಗಿ ಪೂರ್ಣಮಾಡುವವನು ವಿಪ್ರ. ಉದಾ:—**'ಗೃಣಂತಿ ವಿಪ್ರ ತೇ ಧಿಯಃ' (ಋ. ಸಂ. ೧-೧-೨೬-೨)** ‖

(೨) **ವಿಗ್ರಃ** ‖ ವಿಪೂರ್ವವಾದ ಗೃಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ವಿವಿಧ ರೀತಿಯಿಂದ ಅರ್ಥ ಗ್ರಹಣಮಾಡುವವನು. **'ಪರೇ ಹಿ ವಿಗ್ರನು ಸ್ತೃತವ್' (ಋ. ಸಂ. ೧-೧-೭-೪)** ‖

(೩) **ಗೃತ್ಸಃ** ‖ 'ಗೃಧು-ಅಭಿಕಾಂಕ್ಷಾಯಾಮ್' (ದಿ-ಪ) 'ಋಚಿರುಷಿರುದಿ—' ಸೂತ್ರದಿಂದ ಸಪ್ರತ್ಯಯ ಧಕಾರಕ್ಕೆ ಚರ್ತ್ವ. ಅದಕ್ಕೆ ಕಿಪ್ವದ್ಭಾವ ಹೇಳಿರುವುದರಿಂದ ಗುಣವಿಲ್ಲ. ಎಲ್ಲರಿಂದಲೂ ಬಯಸಲ್ಪಡುವವನು. ಅಥವಾ ಸ್ತುತ್ಯರ್ಥಕ ಗೃಧಾತುವಿಗೆ ಸಕ್‌ಪ್ರತ್ಯಯ, ಹ್ರಸ್ವ, ತುಗಾಗಮ. ದೇವತೆಗಳನ್ನು ಸ್ತುತಿಸುವವನು, ಲೋಕಕ್ಕೆ ಸ್ತುತ್ಯನು. **"ಗೃತ್ಸಸ್ಯ ಧೀರಾ ಸ್ತವಸೋ ವಿವೋ ಮದೇ" (ಋ. ಸಂ. ೭-೭-೧೧-೫) "ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚ" (ಯ. ವಾ. ಸಂ. ೧೬-೨೫)** ‖

(೪) **ಧೀರಃ** ‖ ಧಾಧಾತುವಿಗೆ 'ಸುಸೂಧೀಗೃಧಿಭ್ಯಃ ಕ್ರನ್ (ಉ-೨-೨೩) ಸೂತ್ರದಿಂದ ಕ್ರನ್‌ಪ್ರತ್ಯಯ. ಕಿತ್ತಾದುದರಿಂದ "ಘುಮಾಸ್ಥಾಗಾಪಾ—" (೬-೪-೬೬) ಸೂತ್ರದಿಂದ ಧಾತುವಿನ ಆಕಾರಕ್ಕೆ ಈತ್ವ. ಶ್ರುತವಾದ ಅರ್ಥವನ್ನು ಧರಿಸುತ್ತಾನೆ, ಶಿಷ್ಯರಿಗೆ ವಿದ್ಯಾದಾನಮಾಡುವವನು. ಅಥವಾ ಧೀಃ ಅಂದರೆ ಪ್ರಜ್ಞಾ, ಅಥವಾ ಕರ್ಮ. ಮತ್ವರ್ಥದಲ್ಲಿ ರಪ್ರತ್ಯಯ. ಬುದ್ಧಿ ಪ್ರಚೋದನೆಮಾಡುವವನೆಂದರ್ಥ. ಧೀ ಶಬ್ದ ಉಪಪದವಾಗಿರುವಾಗ ಈರಧಾತುವಿಗೆ 'ಕರ್ಮಣ್ಯಣ್' (ಪಾ-ಸೂ-೩-೨-೧) ಸೂತ್ರದಿಂದ ಅಣ್‌ಪ್ರತ್ಯಯ. **"ಸಮಾಧೀರಃ ಪಾಕಮತ್ರಾವಿವೇಶ" (ಋ-ಸಂ-೨-೩-೧೮-೧)** ‖

(೫) **ವೇನಃ** ‖ ಅಜಧಾತುವಿಗೆ 'ಧಾಪ್ಯಾವಸ್ಯಜ್ಯತಿಭ್ಯೋ ನಃ' (ಉ-೩-೬) ಸೂತ್ರದಿಂದ ನಪ್ರತ್ಯಯ ಧಾತುವಿಗೆ ವೀ ಭಾವ ಬಂದಾಗ ಅದಕ್ಕೆ ಗುಣ. ಲೋಕದಲ್ಲಿ ಸತ್ಕಾರವನ್ನು ಹೊಂದುವವನು, ಅರ್ಥವನ್ನು ತಿಳಿಯುವವನು, ಇವನಿಂದ ಅರ್ಥಸಂಶವನ್ನು ನಿಶ್ಚಯಿಸುತ್ತಾರೆ, ವಿದ್ಯಾರ್ಥಿಗಳು ಇವನನ್ನು ಹೊಂದುತ್ತಾರೆ, ಅನರ್ಥ ಅಥವಾ ಪಾಪವನ್ನು ದೂರಮಾಡುವವನು ಎಂದರ್ಥ. ಅಥವಾ ಕಾಂತ್ಯರ್ಥಕ ವೇನಧಾತುವಿಗೆ 'ಪುಂಸಿ ಸಂಜ್ಞಾಯಾಂ ಘಃ' ಸೂತ್ರದಿಂದ ಘಪ್ರತ್ಯಯ. **"ಗಿರಿಂ ನ ವೇನಾ ಅಧಿರೋಹ ತೇಜಸಾ" (ಋ. ಸಂ. ೧-೪-೨೧-೨)** ‖

(೬) **ವೇಧಾಃ** ‖ ವಿ ಉಪಸರ್ಗಪೂರ್ವಕವಾದ ಧಾತುವಿಗೆ 'ವಿಧಾಞೋ ವೇಧ ಚ' (ಉ-೪-೨೨೫) ಸೂತ್ರದಿಂದ ಅಸನ್, ವೇಧಾದೇಶ. ಕಾವ್ಯಾದಿಗಳನ್ನು ಮಾಡುವವನು. **'ಮೋಷಥಾ ವೃಕ್ಷಂ ಕಪನೇವ ವೇಧಸಃ' (ಋ. ಸಂ. ೪-೩.೧೫.೧) 'ಆ ಪೃಚ್ಛ್ಯೋ ವಿಶ್ವತಿರ್ವಿಕ್ಷುವೇಧಾಃ' (ಋ. ಸಂ. ೧.೪-೨೬.೨)**

(೭) **ಕಣ್ವಃ** ‖ ಶಬ್ದ ಅಥವಾ ನಿಮೀಲನಾರ್ಥಕ ಕಣಧಾತುವಿಗೆ 'ಅಶುಪ್ರುಷಿಲಟಿ—' (ಉ-೧-೧೫೯) ಸೂತ್ರದಿಂದ ಕ್ವನ್‌ಪ್ರತ್ಯಯ. ವ ಉಳಿಯುತ್ತದೆ. ಸ್ತೋತ್ರರೂಪಶಬ್ದಮಾಡುವವನು, ಸ್ತುತಿಸಲ್ಪಡುವವನೆಂದರ್ಥ. **'ಕಣ್ವಾ ಅಭಿ ಪ್ರಗಾಯತ' (ಋ. ಸಂ. ೧-೪.೧೨-೧)**

(೮) **ಋಭವಃ** ॥ 'ಋಭುಕ್ಷಾ' ಎಂಬಲ್ಲಿ ವ್ಯಾಖ್ಯಾತವಾಗಿದೆ. (೩-೩-೧೦) **'ಋಭುರ್ಋಭುಭಿರಭಿವಃ ಸ್ಯಾಮ' (ಋ. ಸಂ. ೫-೪-೧೫.೨)**

(೯) **ನವೇದಾಃ** ॥ 'ನವೇದ' ಎಂಬುದು ನವೇತ್ತಿ ಎಂಬರ್ಥದಲ್ಲಿ ಇದೆ. ನಿಪಾತದಿಂದ ಈ ರೂಪ ಸಿದವಾಗಿದೆ. ವೈಯಾಕರಣರಾದರೋ 'ನಭ್ರಾಣ್‌ನಪಾನ್ನವೇದಾ—' (ಪಾ.ಸೂ.-೬-೩-೭೫) ಎಂಬ ಸೂತ್ರದಿಂದ ನವೇದಾಃ ಎಂದು ನಿಪಾತಮಾಡಿರುತ್ತಾರೆ. ಎರಡು ನಞ್‌ಪೂರ್ವದಲ್ಲಿರುವಾಗ ವಿದಧಾತುವಿಗೆ ಅಸುನ್ ಬಂದಾಗ ಪೂರ್ವದ ಒಂದು ನಞಿಗೆ ಲೋಪ, ಇನ್ನೊಂದು ನಞಿನ ನಕಾರಕ್ಕೆ ಲೋಪಬಾರದೆ ಪ್ರಕೃತಿಭಾವವೂ ನಿಪಾತಿತವಾಗಿದೆ. ಉದಾಹರಣೆ—
**"ತ್ರಿಶ್ಚಿನ್ನೋ ಅದ್ಯಾ ಭವತಂ ನವೇದ ಸಾ" (ಋ. ಸಂ. ೧-೩-೪-೧)**

(೧೦) **ಕವಿಃ** ॥ "ಕವಿಃ ಕ್ರಾಂತದರ್ಶಿನೋ ಭವತಿ ಕವತೇರ್ವಾ" (ನಿರು-೧೨, ೧೩) ಎಂಬ ನಿರುಕ್ತ ಭಾಷ್ಯದಲ್ಲಿ ಗತ್ಯರ್ಥಕವಾದ ಕ್ರಮು, ಅಥವಾ ಕು ಧಾತುವಿನಿಂದ ಈ ರೂಪವಾಗಿದೆಯೆಂದು ಹೇಳಿದೆ. 'ಇನ್ ಸರ್ವಧಾತುಭ್ಯಃ' ಸೂತ್ರದಿಂದ ಕ್ರಮುಧಾತುವಿಗೆ ಇನ್ ಬಂದರೆ ಬಹುಲಗ್ರಹಣದಿಂದ ಮಕಾರಕ್ಕೆ ವತ್ವ, ರೇಫಲೋಪ ಬರುತ್ತದೆ. ಕುಧಾತುವಿಗೆ ಗುಣ, ಅವಾದೇಶ. 'ಕವಿಃ ಕ್ರಾಂತದರ್ಶನಃ' ಅತೀತಾನಾಗತವಿಪ್ರಕೃಷ್ಟ ವಿಷಯಗಳನ್ನು ಏಕಕಾಲದಲ್ಲಿ ತಿಳಿಯುವವನು ಕ್ರಾಂತದರ್ಶಿಯೆಂದು ಉವಟರ ಮತ. **'ಕವೀ ನೋ ಮಿತ್ರಾವರುಣಾ' (ಋ. ಸಂ. ೧-೧-೪-೩)**

(೧೧) **ಮನೀಷಿಣಃ** ॥ 'ಮನು-ಅವಬೋಧನೇ' (ದಿ-ಆ) 'ಕೃತ್ವೃಭ್ಯಾಮೀಷನ್' (ಉ-೪-೨೬) ಸೂತ್ರವಿಹಿತವಾದ ಈಷನ್‌ಪ್ರತ್ಯಯ. ಮನೀಷಾ ಎಂದಾಗುತ್ತದೆ. ಮನೀಷಾ ಅಸ್ಯ ಅಸ್ತಿ ಇತಿ ಮನೀಷೀ. ವ್ರೀಹ್ಯಾದಿಗಣಪಠಿತವಾದುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ. ಅಥವಾ 'ಮನಸಃ ಈಷಾ=ಸ್ತುತಿಃ' (ಪ್ರಜ್ಞಾವಾ) ಮನೀಷಾ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪ ಸಿದ್ಧಿಯಾಗುತ್ತದೆ. **'ಘೃತಪೃಷ್ಠಂ ಮನೀಷಿಣಃ' (ಋ. ಸಂ. ೧-೧-೨೪-೫)**

(೧೨) **ಮನ್ಧಾತಾ** ॥ ಮನ ಧಾತುವಿಗೆ ಲ್ಯುಟ್, ಧಾಧಾತುವಿಗೆ ತೃಚ್. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪವಾಗುತ್ತದೆ. ಮಾನ=ಜ್ಞಾನವನ್ನು ಅಧಿಕಗೊಳಿಸುವವನು. **'ಮನ್ಧಾತಾಸಿ ದ್ರವಿಣೋದಾ ಋತಾ ವಾ' (ಋ. ಸಂ. ೭-೫-೩೦-೨)** ॥

(೧೩) **ವಿಧಾತಾ** ॥ ವಿ ಉಪಸರ್ಗಪೂರ್ವಕವಾದ ಧಾಧಾತುವಿಗೆ ತೃಚ್‌ಪ್ರತ್ಯಯ. ಕಾವ್ಯಾದಿಗಳನ್ನು ಮಾಡುವವನು. ನಿಗಮ ಹುಡುಕಬೇಕು. ॥

(೧೪) **ವಿಪಃ** ॥ 'ವಿಪ-ಕ್ಷೇಪೇ' (ಚು-ಪ-) 'ಇಗುಪಧಜ್ಞಾ—' ಸೂತ್ರದಿಂದ ಕಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ವಿಪ್ರಪದದಂತೆ ಅರ್ಥ. **ಅಸ್ತೃಣಾತ್ ಬರ್ಹಣಾ ವಿಪೋ (ಋ. ಸಂ. ೬-೪-೪೩-೧)**

(೧೫) **ಮನಶ್ಚಿತ್** ॥ ಮನಃಶಬ್ದ ಉಪಪದವಾಗಿರುವಾಗ ಸಂಜ್ಞಾನಾರ್ಥಕ ಚಿತೀಧಾತುವಿಗೆ ಔಣಾದಿಕ ಕ್ವಿಪ್ ಪ್ರತ್ಯಯ. ಮನಸ್ಸಿನಿಂದಲೇ ತಿಳಿಯುವವನು. ॥

(೧೬) **ವಿಪಶ್ಚಿತ್** ॥ ವಿಪಃ ಉಪಪದವಾಗಿರುವಾಗ ಚಿತ್‌ಧಾತುವಿಗೆ ಕ್ವಿಪ್. 'ವಿಪಃ ಚೇತಯತೇ' ಮಾತನ್ನು ತಿಳಿದವನು. "ತತ್ಪುರುಷೇ ಕೃತಿ ಬಹುಲಮ್" (ಪಾ-ಸೂ-೬-೩-೧೪) ಸೂತ್ರದಿಂದ ಷಷ್ಠಿಗೆ ಲುಕ್ ಬರುವುದಿಲ್ಲ. ಚನ್ನಾಗಿ

ನೋಡಿ ತಿಳಿಯುವನೆಂದು ಕ್ಷೀರಸ್ವಾಮಿ ಮತ. ಪೃಷೋದರಾದಿಪಠಿತವಾದುದರಿಂದ ದೃಶ್ ಧಾತುವಿನ ರೂಪವಾಗುತ್ತದೆ. **'ಧರ್ಮಕೃತೇ ವಿಪಶ್ಚಿತೇ ಪನಸ್ಯವೇ'** (ಋ. ಸಂ. ೬–೭–೧–೧) ||

(೧೭) **ವಿಪನ್ಯವಃ** || 'ಕತ್ಯುಚ್ ಕ್ಷಿಪೇಶ್ಚ' (ಉ–೩–೪೮) ಸೂತ್ರದಲ್ಲಿ ಮೊದಲು ಪ್ರತ್ಯಯ ನಿರ್ದೇಶಮಾಡಿರುವುದು ಅಧಿಕಾರ್ಥ ತಿಳಿಸುವುದಕ್ಕೋಸ್ಕರ ಎಂದುದರಿಂದ ವಿಪೂರ್ವಕಪನಧಾತುವಿಗೂ ಕತ್ಯ+ಚ್ ಪ್ರತ್ಯಯ ಬರುತ್ತದೆ. ಅಥವಾ 'ವಿವಿಧಂ ಪನನಂ (ಸ್ತುತಿಃ) ಎಂದಿರುವಾಗ ಮೃಗಯ್ವಾದಿಗಣಪಠಿತವಾದುದರಿಂದ ಕುಪ್ರತ್ಯಯ. ಸ್ತುತಿಸಲ್ಪಡುವವನು. **"ವಿಪನ್ಯವೋ ವಿಪ್ರಾಸೋ ವಾಜಸಾತಯೇ"** (ಋ. ಸಂ. ೬–೬–೧೦–೬)

(೧೮) **ಆಕೇನಿಪಃ** || ಆಙ್, ಕೇ ನಿ ಮೂರು ಉಪಪದವಾಗಿರುವಾಗ ಪತಧಾತುವಿಗೆ ' ಅನ್ಯೇಷ್ವಪಿ ದೃಶ್ಯತೇ ' ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿ ಲೋಪ (ಅತ್) ಕೇಪತಂತಿ. ಅಧ್ಯಾತ್ಮಜ್ಞಾನದಲ್ಲಿ ಮುಳುಗಿರುವರು ' ತತ್ಪುರುಷೇ ಕೃತಿ ಬಹುಲಮ್ ' ಎಂಬುದರಿಂದ ಸಪ್ತಮಿಗೆ ಅಲುಕ್ ಬಂದಿದೆ. **' ಅಮೀ ಯಥಾ ಕೇನಿಪಾನಾಮಿನೋ ವೃಧೇ '** (ಋ. ಸಂ. ೭–೮–೨೬–೪) ||

(೧೯) **ಉಶಿಜಃ** || ಕಾಂತ್ಯರ್ಥಕವಾದ ವಶಧಾತುವಿಗೆ 'ವಶೇಃ ಕಿಚ್ಚ' (ಉ–೨–೬೮) ಸೂತ್ರದಿಂದ ಇಜಿ–ಪ್ರತ್ಯಯ. ಇದು ಕಿತ್ತಾದುದರಿಂದ 'ಗ್ರಹಿಜ್ಯಾ—' (ಪಾ–ಸೂ–೬–೧–೧೬) ಸೂತ್ರದಿಂದ ಸಂಪ್ರಸಾರಣ (ಉ) ಶಾಸ್ತ್ರಾಭ್ಯಾಸವನ್ನು ಅಥವಾ ವ್ಯಾಖ್ಯಾನಮಾಡಲು ಬಯಸುವವನೆಂದರ್ಥ. **'ಕಕ್ಷೀವಂತಂ ಯ ಔಶಿಜಃ'** (ಋ. ಸಂ ೧–೧-೨೪-೧) ||

(೨೦) **ಕೀಸ್ತಾಸಃ** || ಕೀರ್ತಧಾತುವಿಗೆ ಪಚ್ಯಾದ್ಯಚ್ ಅಥವಾ ಘಞ್ ಬಂದು ಉಕ್ತರೂಪವಾಗಿದೆ. ಜಸಿಗೆ ಅಸುಗಾಗಮ. ಪ್ರಶಸ್ತವಾದ ಅರ್ಥಗಳನ್ನು ಹೇಳುವವರು. **'ಕಿಸ್ತಾಸೋ ಅಭಿದ್ಯವಃ'** (ಋ. ಸಂ. ೧-೧–೧೩-೫)

(೨೧) **ಅದ್ಧಾತಯಃ** || ಆದ್ಧಾ ಎಂಬ ಅವ್ಯಯ ಸತ್ಯಾರ್ಥವನ್ನು ಹೇಳುತ್ತದೆ. ಇದು ಉಪಪದವಾಗಿರುವಾಗ ಅತಧಾತುವಿಗೆ ಇಪ್ರತ್ಯಯ. ಸತ್ಯವನ್ನು ಹೊಂದುವವನು, ಗತ್ಯರ್ಥಧಾತುಗಳಿಗೆ ಜ್ಞಾನಾರ್ಥಇರುವುದರಿಂದ ಸತ್ಯವನ್ನು ತಿಳಿಯುವವನು ಎಂದರ್ಥ. **'ತತದ್ಧಾತಯದ್ವಿದುಃ'** (ಋ. ಸಂ. ೮–೨-೨೩–೧)

(೨೨) **ಮತಯಃ** || ಮನಧಾತುವಿಗೆ ಕ್ತಿನ್. ಕಿತ್ತಾದುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ. ಇವರಿಂದ ಅರ್ಥ ತಿಳಿಯಲ್ಪಡುತ್ತದೆ, ಅಥವಾ 'ಮತಿಃ ಅಸ್ಯ ಅಸ್ತಿ' ಎಂಬರ್ಥದಲ್ಲಿ ಮತಿಶಬ್ದದ ಮೇಲೆ ಮತ್ವರ್ಥೀಯ ಪ್ರತ್ಯಯ ಬಂದು ಲುಕ್ಕಾಗಿದೆ. ಪ್ರಶಸ್ತ ಬುದ್ಧಿಯುಳ್ಳವನು. **" ಅದ್ರೋಘವಾಚಂ ಮತಿಭಿಃ ಶವಿಷ್ಠಮ್ "** (ಋ. ಸಂ. ೪–೬–೧೩–೨)

(೨೩) **ಮತುಥಾಃ** || ಮನ ಧಾತುವಿಗೆ 'ಗೂಥಪ್ರೋಥಪೃಷ್ಠಾದಯಃ—' ಸೂತ್ರದಿಂದ ಥಕ್‌ಪ್ರತ್ಯಯ ಬಂದಾಗ ನಕಾರಕ್ಕೆ ತುಕಾರ ನಿಪಾತಿತವಾಗುತ್ತದೆ. **'ತುಥೋಽಸಿ ವಿಶ್ವವೇದಾಃ'** (ಯ. ವಾ. ಸಂ. ೫–೩೧)

**(೨೪) ವಾಘತಃ** ‖ ಪ್ರಾಪಣಾರ್ಥಕ ವಹಧಾತುವಿಗೆ 'ಸಂಶ್ಚತೃಂಪ—' (ಉ–೨–೮೮) ಸೂತ್ರದಿಂದ ಇತಿಪ್ರತ್ಯಯ ಬಂದು, ಉಪಧಾವೃದ್ಧಿ, ಘತ್ವ ನಿಪಾತಿತವಾಗುತ್ತದೆ. ಗ್ರಂಥಾರ್ಥವನ್ನು ಧರಿಸಿರುವವನು. **"ವಿಷ್ಟ್ವೀಷಮೀಃ ತರಣಿತ್ವೇನ ವಾಘತಃ" (ಋ. ಸಂ. ೧–೭–೩೦–೪)** ‖

ಹೀಗೆ ಇಪ್ಪತ್ತನಾಲ್ಕು ಮೇಧಾವಿ (ಬುದ್ಧಿವಂತ)ಯ ಹೆಸರು ‖ ೧೫ ‖

ಮೇಧಾವೀ ಕಸ್ಮಾನ್ಮೇಧಯಾ ತದ್ವಾನ್ ಭವತಿ ‖ ಮೇಧಾ ಮತೌ ಧೀಯತೇ ‖ ೩ ‖

**ಮೇಧಾವಿ** ಎಂದರೆ ಮೇದಸ್ಸು ಅಥವಾ ಬುದ್ಧಿಶಕ್ತಿಯುಳ್ಳವನು ಎಂದರ್ಥವು.

---

## ಸ್ತೋತೃನಾಮಾನ್ಯುತ್ತರಾಣಿ ತ್ರಯೋದಶ

ಈ ಸ್ತೋತ್ರನಾಮುಗಳು ಹದಿಮೂರು 'ಇರುವುದು—ಅದನ್ನು ಈ ಕೆಳಗೆ ವಿವರಿಸಲಾಗಿದೆ.

(೧) ರೇಭಃ (೨) ಜರಿತಾ (೩) ಕಾರುಃ (೪) ನದಃ (೫) ಸ್ತಾಮುಃ (೬) ಕೀರಿಃ (೭) ಗೌಃ (೮) ಸೂರಿಃ (೯) ನಾದಃ (೧೦) ಛಂದಃ (೧೧) ಸ್ತುಪ್ (೧೨) ರುದ್ರಃ (೧೩) ಕೃಪಣ್ಯುಃ

ಇತಿ ತ್ರಯೋದಶ ಸ್ತೋತೃನಾಮಾನಿ‖ ೧೬ ‖

(೧) **ರೇಭಃ** ‖ ಸ್ತುತ್ಯರ್ಥಕ ರೇಭ ಧಾತುವಿಗೆ ಅಚ್‌ಪ್ರತ್ಯಯ. ಸ್ತುತಿಸುವವನೆಂದರ್ಥ. ನಿಗಮ ಹುಡುಕ ಬೇಕು.

(೨) **ಜರಿತಾ** ‖ ಪೂಜಾರ್ಥಕ ಜ್ಯಾಧಾತುವಿಗೆ ತೃಚ್‌ಪ್ರತ್ಯಯ. ಧಾತು ಋಕಾರಕ್ಕೆ ಗುಣ. ಪ್ರಥಮಾ ಏಕ ವಚನದಲ್ಲಿ ಈ ರೂಪವಾಗುತ್ತದೆ. **'ತ್ವಾಮುಚ್ಛಾ ಜರಿತಾರಃ' (ಋ. ಸಂ. ೧–೧–೩–೨)**

(೩) **ಕಾರುಃ** ‖ ಡುಕೃಞ್–ಕರಣೇ. ಇದಕ್ಕೆ 'ಕೃವಾಪಾಜಿ—' (ಉ. ೧–೧) ಸೂತ್ರದಿಂದ ಉಣ್‌ಪ್ರತ್ಯಯ ಣಿತ್ತಾದುದರಿಂದ ವೃದ್ಧಿ. (ಆರ್). ಸ್ತೋತ್ರಮಾಡುವವನು. **'ವಿದುಷ್ಟೇ ತಸ್ಯ ಕಾರವಃ (ಋ. ಸಂ. ೧–೧–೨೧–೬)**

(೪) **ನದಃ** ‖ ನದಧಾತುವಿಗೆ ಸ್ತುತ್ಯರ್ಥ ಹೇಳಿದೆ. ಅಚ್‌ಪ್ರತ್ಯಯ. **'ನದಸ್ಯ ಮಾ ರುಧತ ಕಾಮು ಆಗನ್ (ಋ. ಸಂ. ೨–೪–೨೨–೪)**

(೫) **ಸ್ತಾಮುಃ** ‖ 'ಷಮು, ಷ್ಟಮು–ಅವೈಕಲ್ಯೇ' (ಭ್ವಾ. ಪ.) ಧಾತ್ವಾದಿಗೆ ಸತ್ವ. ಆಗ ಟಕಾರಕ್ಕೆ ತತ್ವ 'ಛಂದಸೀಣಃ' (**ಉ.** ೧–೨) ಸೂತ್ರವಿಹಿತನಾದ ಉಣ್‌ಪ್ರತ್ಯಯ ಬಂದರೆ ಉಪಧಾವೃದ್ಧಿ. ಕೆಲವರು ತಾಮು ಎಂದು

ಪಡಿಸುತ್ತಾರೆ. ಆಗ 'ತಮು-ಕಾಂಕ್ಷಾಯಾಮ್' ಧಾತು ಹೇಳಬೇಕು. ಸ್ತುತಿಸಲು ಬಯಸುವವನು. ಎರಡಕ್ಕೂ ನಿಗಮ ಹುಡುಕಬೇಕು.

**(೬) ಕೀರಿಃ ||** ಕೈ, ಗೈ, ರೈ–ಶಬ್ದೇ (ಭ್ವಾ. ಪ). ಇದಕ್ಕೆ ಔಣಾದಿಕ ರಿ ಪ್ರತ್ಯಯ ಬಂದಾಗ ಧಾತುವಿಗೆ ಕೀ ಆದೇಶ. ಸ್ತೋತ್ರರೂಪ ಶಬ್ದಮಾಡುವವನು. **'ಕೀರೇಶ್ಚನ್ಮಂತ್ರಂ ಮನಸಾ ವನೀಷಿ ತಮ್'** (ಋ. ಸಂ. ೧–೨–೩೪–೩) ||

**(೭) ಗೌಃ ||** ಇದು ಪೃಥಿವೀನಾಮದಲ್ಲಿ ವ್ಯಾಖ್ಯಾತವಾಗಿದೆ. (೧–೧–೧) ಇವನಿಂದ ದೇವತೆಗಳು ಗಾನ ಮಾಡಲ್ಪಡುತ್ತಾರೆ, ಅಥವಾ ಸ್ತುತಿಸಲ್ಪಡುತ್ತಾರೆ. **'ಯೋ ಅಶ್ವಾನಾಂ ಗವಾಂ ಗೋಪತಿರ್ವಶೀ'** (ಋ. ಸಂ. ೧–೭–೧೨–೪) ಗೋಪತಿಯೆಂದರೆ ಸ್ತೋತ್ರಪತಿಯೆಂದು ಕ್ಷೀರಸ್ವಾಮೀ.

**(೮) ಸೂರಿಃ ||** 'ಸೂ–ಪ್ರೇರಣೇ' (ತು–ಪ) 'ಸೂಜಃ ಕ್ರಿಃ' (ಉ–೪–೬೪) ಸೂತ್ರದಿಂದ ಕ್ರಿಪ್ರತ್ಯಯ. ಕಿತ್ತಾದುದರಿಂದ ಗುಣವಿಲ್ಲ. ಅಧಿಕವಾಗಿ ಸ್ತೋತ್ರಗಳನ್ನು ಹೇಳುವವನು. **"ಸದಾ ಪಶ್ಯಂತಿ ಸೂರಯಃ"** (ಋ. ಸಂ. ೧–೨–೭–೫) ||

**(೯) ನಾದಃ ||** ಶಬ್ದಾರ್ಥಕ ನದಧಾತುವಿಗೆ ಘಞ್. ಉಪಧಾವೃದ್ಧಿ. ಇವನಿಂದ ಸ್ತುತಿಯುಂಟಾಗುತ್ತದೆಯೆಂದರ್ಥ.

**(೧೦) ಛನ್ದಃ ||** ಪೂಜಾರ್ಥಕ ಛನ್ದಧಾತುವಿಗೆ ಅಸುನ್‌ಪ್ರತ್ಯಯ. ಅಥವಾ ಆಚ್ಛಾದನಾರ್ಥಕ ಛದಧಾತುವಿಗೆ ಅಸುನ್. ಸಾಂತಪದವಾಗುತ್ತದೆ. ಸ್ತೋತ್ರಗಳಿಂದ ಮುಚ್ಚುವವನು ಎಂದರ್ಥ.

**(೧೧) ಸ್ತುಪ್ ||** ಅರ್ಚನಾರ್ಥಕ ಸ್ತುಭಧಾತುವಿಗೆ ಕ್ವಿಪ್. ಪದಾಂತದಲ್ಲಿ ಚರ್ತ್ವ.

**(೧೨) ರುದ್ರಃ ||** ಶಬ್ದಾರ್ಥಕ ಧಾತುವಿಗೆ ಕ್ವಿಪ್. ರುತ್ ಎಂದಾಗುತ್ತದೆ. ಶಬ್ದವುಳ್ಳದ್ದು ಎಂಬ ಮತ್ವರ್ಥದಲ್ಲಿ ರಪ್ರತ್ಯಯ. ಸ್ತೋತ್ರಲಕ್ಷಣ ಶಬ್ದವುಳ್ಳವನೆಂದರ್ಥ. **"ಕ್ರಾಣಾ ರುದ್ರೇಭಿರ್ವಸುಭಿಃ ಪುರೋಹಿತಃ'** (ಋ. ಸಂ. ೧–೪–೨೩–೩) ||

**(೧೩) ಕೃಪಣ್ಯಃ ||** ನಿರುಕ್ತ ಪಠಿತಧಾತುವಿಗೆ ಔಣಾದಿಕಪ್ರತ್ಯಯ.

ಹೀಗೆ ಹದಿಮೂರು ಸ್ತುತಿಸುವವನ ಹೆಸರು || ೧೬ ||

(ಸ್ತೋತಾ ಸ್ತವನಾತ್) ||೪||

**ಸ್ತೋತ್ರ** ಎಂದರೆ ಪ್ರಶಂಸಿಸು ಅಥವಾ ಪ್ರಾರ್ಥಿಸು ಎಂದರ್ಥ. ಈ ಸ್ತೋತ್ರವನ್ನು ಮಾಡುವ ಪುರುಷನಿಗೆ **ಸ್ತೋತಾ** ಎಂದ ಹೆಸರು. **ಸ್ತೋತಾ** ಎಂಬ ಶಬ್ದವು **ಸ್ತವನಾತ್**—ಪ್ರಾರ್ಥನೆಮಾಡು ಎಂಬುವುದರಿಂದ ನಿಷ್ಪನ್ನವಾಗಿದೆ.

———

ಯಜ್ಞನಾಮಾನ್ಯುತ್ತರಾಣಿ ಪಂಚದಶ ||೫||

ಯಜ್ಞನಾಮವು ಹದಿನೈದು ಇರುವುದು. ಅವುಗಳನ್ನು ಈ ಕೆಳಗೆ ಕೊಟ್ಟಿದೆ

(೧) ಯಜ್ಞಃ (೨) ವೇನಃ (೩) ಅಧ್ವರಃ (೪) ಮೇಧಃ (೫) ವಿದಥಃ (೬) ನಾರ್ಯ್ಯಃ (೭) ಸವನಂ (೮) ಹೋತ್ರಾ (೯) ಇಷ್ಟಿಃ (೧೦) ದೇವತಾತಾ (೧೧) ಮಖಃ (೧೨) ವಿಷ್ಣುಃ (೧೩) ಇನ್ದುಃ (೧೪) ಪ್ರಜಾಪತಿಃ (೧೫) ಘರ್ಮಃ

|| ಇತಿ ಪಂಚದಶ ಯಜ್ಞನಾಮಾನಿ || ೧೭ ||

(೧) **ಯಜ್ಞಃ** || ದೇವಪೂಜಾದಿ ಯಜಧಾತ್ವರ್ಥ ಪ್ರಸಿದ್ಧವಾಗಿದೆ. 'ಯಜಯಾಚಯತವಿಚ್ಛ ಪ್ರಚ್ಛ್ರೋ ನಙ್' (ಪಾ. ಸೂ. ೩-೩-೯೦) ಸೂತ್ರದಿಂದ ನಙ್‌ಪ್ರತ್ಯಯ. ಇದರಲ್ಲಿ ದೇವತೆಗಳು ಪೂಜಿಸಲ್ಪಡುತ್ತವೆಯೆಂದರ್ಥ. **"ಯಜ್ಞೇ ಯಜ್ಞೇ ನ ಉದಿವ" (ಋ. ಸಂ. ೩-೮-೨೧-೪)**

(೨) **ವೇನಃ** || ಮೇಧಾವಿನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೨೫-೫) ಇದರಿಂದ ಸ್ವರ್ಗವನ್ನು ಹೊಂದುತ್ತಾರೆ, ದೇವತಾ ಉದ್ದೇಶದಿಂದ ಇದರಲ್ಲಿ ಹವಿಸ್ಸು ಪ್ರಕ್ಷಿಪ್ತವಾಗುತ್ತದೆ, ಆದುದರಿಂದ ಇಲ್ಲಿ ದೇವತೆಗಳು ಇಷ್ಟಪಡುತ್ತಾರೆ ಎಂದರ್ಥ. ||

(೩) **ಅಧ್ವರಃ** || 'ಧ್ವರ-ಹಿಂಸಾಯಾಮ್' 'ಪುಂಸಿ, ಸಂಜ್ಞಾಯಾಮ್ ಘಃ' ಸೂತ್ರದಿಂದ ಘಪ್ರತ್ಯಯ ನಞ್‌ಪೂರ್ವದಲ್ಲಿದೆ. ಧ್ವರವೆಂದರೆ ಹಿಂಸಾ. ಇದು ಯಜ್ಞದಲ್ಲಿ ಇಲ್ಲ. 'ಓಷಧ್ಯಃ ಪಶವೋ ವೃಕ್ಷಾಸ್ತಿರ್ಯಞ್ಚಃ ಪಕ್ಷಿಣಸ್ತಥಾ । ಯಜ್ಞಾರ್ಥಂ ನಿಧನಂ ಪ್ರಾಪ್ತಾಃ ಪ್ರಾಪ್ನುವಂತ್ಯುಚ್ಛ್ರಿತಾಂ ಗತಿಮ್' ಎಂದು ಸ್ಮೃತಿ. ಪಶುಮುಂತಾದವುಗಳು ಯಾಗದಲ್ಲಿ ಹಿಂಸಿಸಲ್ಪಟ್ಟರೂ ಉತ್ತಮಗತಿ ಹೊಂದುತ್ತವೆಯೆಂದುದರಿಂದ ಹಿಂಸಾರಹಿತವಾದದ್ದು ಯಜ್ಞ. ಅಥವಾ ರಾಕ್ಷಸರಿಂದ ಹಿಂಸಿಸಲ್ಪಡದಿರುವುದು ಎಂದರ್ಥ. **ರಾಜನ್ತಮಧ್ವರಾಣಾಮ್ (ಋ. ಸಂ. ೧-೧-೨-೩)**

(೪) **ಮೇಧಃ** || ಧನ ನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೧೧-೩೩) ಇಲ್ಲಿಗೆ ದೇವತೆಗಳು ಹವಿಸ್ಸ್ವೀಕಾರಕ್ಕೆ ಹೋಗುತ್ತಾರೆ, ದಕ್ಷಿಣೆಗೋಸ್ಕರ ಹೋಗುತ್ತಾರೆ, ಇದರಿಂದ ಪಾಪವು ನಶಿಸಲ್ಪಡುತ್ತದೆ. **" ಮೇಧಂ ಜುಷನ್ತ ವಹ್ನಯಃ " (ಋ. ಸಂ.-೧-೧-೬-೩) ||**

(೫) **ವಿದಥಃ** || 'ವಿದ-ಜ್ಞಾನೇ' (ಅ-ಪ) 'ವಿದ-ವಿಚಾರಣೇ' (ರು-ಆ) 'ವಿದ್ಲೃ-ಲಾಭೇ' (ತು-ಉ) ವಿದ ಸತ್ತಾಯಾಮ್ (ದಿ.ಆ) ಇವುಗಳಿಗೆ 'ರುದಿವಿದಿಭ್ಯಾಂ ಙ್ತ್' (ಉ-೩-೧೧೧) ಸೂತ್ರದಿಂದ ಅಥಪ್ರತ್ಯಯತ್. ಙಿತ್ವವಿಧಾನದಿಂದ ಗುಣವಿಲ್ಲ. ತಿಳಿಯಲ್ಪಡುವುದು ಯಜ್ಞ, ಇಲ್ಲಿ ದಕ್ಷಿಣಾದಿಗಳನ್ನು ಹೊಂದುತ್ತಾರೆ, ವಿದ್ವಾಂಸರಿಂದ ವಿಚಾರಿಸಲ್ಪಡುತ್ತದೆ. ಇದರಿಂದ ಸ್ವರ್ಗಾದಿಫಲಕಲ್ಪಿತವಾಗುತ್ತದೆ, ಎಂದು ಆಯಾಯ ಧಾತುಗಳಿಂದ ಅರ್ಥ ತೋರುತ್ತದೆ. **' ಅಧಾ ಜಿವ್ರೀ ವಿದಥ-ಮಾವದಾಥಃ ' (ಋ. ಸಂ. ೮-೩-೨೫-೨)**



(೬) **ನ್ಯಾರ್ಯಃ** ॥ ' ನ್ಯ-ನಯೇ ' (ಕ್ರ್ಯಾ-ಪ) ' ಋಹಲೋರ್ಣ್ಯತ್ ' (ಪಾ. ಸೂ.) ೩-೧-೧೨೪) ಸೂತ್ರ ದಿಂದ ಣ್ಯತ್‌ಪ್ರತ್ಯಯ. ಣಿತ್ತಾದುದರಿಂದ ವೃದ್ಧಿ. ಯಾಗನಾಡಿದವರನ್ನು ಸ್ವರ್ಗಕ್ಕೆ ಒಯ್ಯುತ್ತದೆ, ಇದರ ಅನುಷ್ಠಾನದಿಂದ ಅನ್ನ ಹೊಂದಿಸಲ್ಪಡುತ್ತದೆ.

(೭) **ಸವನಮ್** ॥ 'ಷುಞ್-ಅಭಿಷವೇ' (ಸ್ವಾ.ಉ.)'ಸುಯುರುವೃಭ್ಯೋ ಯುಚ್' (ಉ-೨-೭೦)ಸೂತ್ರದಿಂದ ಯುಚ್‌ಪ್ರತ್ಯಯ. ಅದಕ್ಕೆ ಅನಾದೇಶ. ಧಾತುವಿಗೆ ಗುಣ, ಅವಾದೇಶ. ಇದರಲ್ಲಿ ಸೋಮರಸ ಹಿಂಡಲ್ಪಡುತ್ತದೆ. **' ಉಪ ನಃ ಸವನಾ ಗಹಿ ' (ಋ. ಸಂ. ೧-೧-೭-೨)**

(೮) **ಹೋತ್ರಾ** ॥ ವಾಙ್ನಾಮವಲ್ಲಿ ವ್ಯಾಖ್ಯಾತವಾಗಿದೆ. (೧-೧೧-೩೫) ಇದರಲ್ಲಿ ಹವಿಸ್ಸು ಕೊಡಲ್ಪಡುತ್ತದೆ. **' ಹೋತ್ರವಿದಃ ಸ್ತೋಮತಷ್ಟಾಸೋ ಅರ್ಕೈಃ (ಋ. ಸಂ. ೭-೬-೧೮-೪ ॥)**

(೯) **ಇಷ್ಟಿಃ** ॥ ಪೂಜಾದ್ಯರ್ಥಕ ಯಜಧಾತುವಿಗೆ ಕ್ತಿನ್ ಬಂದಾಗ ಯಕಾರಕ್ಕೆ ಸಂಪ್ರಸಾರಣ, ಪೂರ್ವರೂಪ. ಅಥವಾ ಇಚ್ಛಾರ್ಥಕ ಇಷುಧಾತುವಿಗೆ ಕ್ತಿನ್. ಯಜ್ಞದಂತೆ ಅರ್ಥ. ಎಲ್ಲರಿಂದಲೂ ಬಯಸಲ್ಪಡುವುದು. ಹವಿರ್ಯಜ್ಞದಲ್ಲಿ ಇದು ಆದ್ಯುದಾತ್ತವೂ, ಕೇವಲಯಜ್ಞದಲ್ಲಿ ಉದಾತ್ತವಾಗುವುದಿಲ್ಲವೆಂದು ಮಾಧವನಮತ; **'ಯಥಾತ ಉಶ್ಮಸೀಷ್ಟಯೇ' (ಋ. ಸಂ. ೧-೨-೩೦-೨)** ॥

(೧೦) **ದೇವತಾತಾ** ॥ ದಿವು ಧಾತುವಿಗೆ ಕ್ರೀಡಾದಿ ನಾನಾ ಅರ್ಥಗಳಿವೆ. ಅಚ್. ಇಲ್ಲಿ ದೇವತೆಗಳು ಸ್ತುತಿ ಸಲ್ಪಡುತ್ತಾರೆ. ದೇವಾ ಏವ ದೇವತಾ. 'ಸರ್ವದೇವಾತ್ತಾತಿಲ್' (ಪಾ-ಸೂ-೪-೪-೧೪೩) ಸೂತ್ರದಿಂದ ಸ್ವಾರ್ಥದಲ್ಲಿ ತಾತಿಲ್. 'ಸುಪಾಂ ಸುಲುಕ್—' ಸೂತ್ರದಿಂದ ಸಪ್ತಮಿಗೆ ಆಕಾರ ಬಂದಿದೆ. **'ತ್ರಿರ್ದೇವತಾತಾ ತ್ರಿರುತಾವೃತಂ ಧಿಯಾಃ' (ಋ. ಸಂ. ೧-೩-೪-೫)** ॥

(೧೧) **ಮಖಃ** ॥ ಪೂಜಾರ್ಥಕ ಮಹಧಾತುವಿಗೆ 'ಮಹೇಃ ಖ ಚ' ಸೂತ್ರದಿಂದ ಖಪ್ರತ್ಯಯ, ಹಕಾರಕ್ಕೆ ಲೋಪ. ಇಲ್ಲಿ ದೇವತೆಗಳು ಪೂಜಿಸಲ್ಪಡುತ್ತವೆಯೆಂದರ್ಥ. ಅಥವಾ ಗತ್ಯರ್ಥಕ ಮಖಧಾತುವಿಗೆ ಘಪ್ರತ್ಯಯ. ಶ್ಯೇನ ಶಬ್ದದಂತೆ ಅರ್ಥ. **'ಮಖಃ ಸಹಸ್ವದರ್ಚತಿ' (ಋ. ಸ. ೧-೧-೧೨-೩)**

(೧೨) **ವಿಷ್ಣುಃ** ॥ 'ವಿಷ್ಲೃ-ವ್ಯಾಪ್ತೌ.' (ಜು-ಉ.) 'ವಿಷೇಃ ಕಿಚ' (ಉ-೩-೩೨) ಸೂತ್ರದಿಂದ ನುಪ್ರತ್ಯಯ. ಕಿತ್ತ್ವಹೇಳಿರುವುದರಿಂದ ಗುಣವಿಲ್ಲ. ಷಕಾರಯೋಗದಿಂದ ಣತ್ವ. ವಿಶೇಷವಾಗಿ ಸ್ವರ್ಗವನ್ನು ಹೊಂದುವುದು. **'ಜುಹೋರಸಿ ಘೃತಮಾನಸಾಜುಷ್ಟಾ ವಿಷ್ಣವೇ ತಸ್ಯಾಸ್ತೇ'** ॥

(೧೩) **ಇನ್ದುಃ** ॥ 'ಉನ್ದೀ-ಕ್ಲೇದನೇ' (ರು-ಪ-) 'ಉನ್ದೇರಿಚ್ಚಾದೇಃ' (ಉ-೧-೧೨) ಸೂತ್ರದಿಂದ ಉ ಪ್ರತ್ಯಯ. ಆದಿಗೆ ಇಕಾರಾದೇಶ. ಇದರಲ್ಲಿ ಸೋಮ ಅರೆಯಲ್ಪಡುತ್ತದೆ.

(೧೪) **ಪ್ರಜಾಪತಿಃ** ॥ ಪ್ರಜಾಶಬ್ದ, ಪತಿಶಬ್ದಗಳು ಅಪತ್ಯನಾಮಗಳಲ್ಲಿ ವ್ಯಾಖ್ಯಾತವಾಗಿವೆ. (೧-೩-೧೪) ವೃದ್ಧ್ಯಾದಿಗಳಿಗೆ ಯಜ್ಞವು ಕಾರಣವಾಗುವುದರಿಂದ ಪ್ರಜಾಪತಿಶಬ್ದ ವಾಚ್ಯವಾಗುತ್ತದೆ. ॥

(೧೫) ಘರ್ಮಃ ॥ 'ಘೃ-ಕ್ಷರಣದೀಪ್ತ್ಯೋಃ' (ಭ್ವಾ-ಪ-) ಔಣಾದಿಕ ಮಪ್ರತ್ಯಯ. ಧಾತುಋಕಾರಕ್ಕೆ ಗುಣ. ಇದರಲ್ಲಿ ಸೋಮರಸ ಸುರಿಸಲ್ಪಡುತ್ತದೆ, ಇಲ್ಲಿ ಅಗ್ನಿಗಳು ಪ್ರಕಾಶಿಸುತ್ತವೆ. '**ಘರ್ಮಸ್ವೇದೇಭಿರ್ದ್ರವಿಣಂ ವ್ಯಾನಟ್ (ಋ. ಸಂ ೮-೨-೧೬-೨)** ॥

ಹೀಗೆ ಹದಿನೈದು ಯಜ್ಞದ ನಾಮಗಳು ॥೧೭॥

---

ಯಜ್ಞಃ ಕಸ್ಮಾತ್ ಪ್ರಖ್ಯಾತಂ ಯಜತಿ ಕರ್ಮೇತಿ ನೈರುಕ್ತಾಃ ॥
ಯಾಚ್ಞೋ ಭವತೀತಿ ವಾ ಯಜುರುನ್ನೋ ಭವತೀತಿ ವಾ ಬಹು-
ಕೃಷ್ಣಾಜಿನ ಇತ್ಯೌಪಮನ್ಯವೋ ಯಜೂಂಷ್ಯೇನಂ ನಯನ್ತೀತಿ ವಾ ॥೬॥

**ಯಜ್ಞ**ವೆಂದರೆ ಇದು ಪ್ರಸಿದ್ಧಿಯಾದ ಕರ್ಮವಾದ್ದರಿಂದ ಇದನ್ನು ನಿರುಕ್ತಕಾರರು ಹೇಳುವರು. ಅಥವಾ ಈ ಯಜ್ಞದಲ್ಲಿ ಪ್ರಾರ್ಥನೆ ಮಾಡುವುದರಿಂದಲೂ ಅಥವಾ ಯಜುರ್ವೇದದಂತೆ ಕರ್ಮಗಳನ್ನು ಮಾಡುವುದರಿಂದಲೂ ಅಥವಾ ಕೃಷ್ಣಾಜಿನಗಳನ್ನು ಅಂದರೆ ಜಿಂಕೆಯ ಚರ್ಮಗಳನ್ನು ಉಪಯೋಗಿಸುವುದರಿಂದಲೂ ಅಥವಾ ಯಜುರ್ವೇದ ಮಂತ್ರಗಳನ್ನು ಉಪಯೋಗಿಸಿ ಕಾರ್ಯರೂಪಗಳನ್ನು ನಡೆಸುವುದರಿಂದ ಈ ಕರ್ಮಕ್ಕೆ ಯಜ್ಞವೆಂಬ ಹೆಸರು ಬಂದಿತು.

ಋತ್ವಿಜ್ನಾಮಾನ್ಯುತ್ತರಾಣ್ಯಷ್ಟೌ ॥೭॥

ಈ ಋತ್ವಿಕ್ ನಾಮಗಳು ಎಂಟು ಇದೆ. ಇದನ್ನು ಕೆಳಗೆ ನಿರೂಪಿಸಿದೆ.

(೧) ಭಾರತಾಃ (೨) ಕುರವಃ (೩) ವಾಘತಃ (೪) ವೃಕ್ತಬರ್ಹಿಷಃ
(೫) ಯತಸ್ರುಚಃ (೬) ಮರುತಃ (೭) ಸಬಾಧಃ (೮) ದೇವಯವಃ

॥ ಇತ್ಯಷ್ಟಾವೃತ್ವಿಜ್‌ನಾಮಾನಿ ॥

(೧) **ಭಾರತಾಃ** ॥ 'ಭೃಞ್-ಭರಣೇ' (ಭ್ವಾ-ಉ) 'ಭೃಮೃದೃಶಿ—' (ಉ-೩-೧೦೭) ಸೂತ್ರದಿಂದ ಅತಚ್ ಪ್ರತ್ಯಯ. ಧಾತುವಿಗೆ ವೃದ್ಧಿ. ಯಜ್ಞ ಮೂಲಕವಾಗಿ ಜನರನ್ನು ಪೋಷಿಸುತ್ತಾನೆ ಎಂದು ಸ್ಕಂದಸ್ವಾಮಿ ಭಾಷ್ಯ. ಧಾರಣಾರ್ಥಕ ಭೃಞ್‌ಧಾತುವಿಗೂ ಈಪ್ರತ್ಯಯ ಬಂದರೆ ಉಕ್ತರೂಪವಾಗುತ್ತದೆ. ದಕ್ಷಿಣಾದಿಗಳಿಂದ ಪೋಷಿಸಲ್ಪಡುವುದೆಂದರ್ಥ. **"ಅನುನ್ನಿಷ್ಟಾಂ ಭಾರತಾ" (ಋ. ಸಂ. ೩-೧-೨೩-೨)** ॥

(೨) **ಕುರವಃ** ॥ 'ಕೃ-ವಿಕ್ಷೇಪಣೇ' (ತು-ಪ) 'ಕೃಗ್ರೋರುಚ್ಚ' (ಉ-೧-೨೪) ಸೂತ್ರದಿಂದ ಕುಪ್ರತ್ಯಯ. ಋಕಾರಕ್ಕೆ ಉಕಾರ ರ ಪರವಾಗಿ ಬರುತ್ತದೆ. ಹಗಲನ್ನು ಕರ್ಮದಿಂದ ಕಳೆಯುತ್ತಾನೆ. ಅಥವಾ ಬಹುಲಗ್ರಹಣದಿಂದ ಕೃಞ್‌ಧಾತುವಿಗೇ ಉತ್ವ. ಕಾರ್ಯಮಾಡುವವರು. ॥

(೩) **ವಾಘತಃ** ॥ ಮೇಧಾವಿನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೧೬-೨೪) ಹವಿಸ್ಸನ್ನು ಧರಿಸಿರುವವನು. **"ಉಪ ಬ್ರಹ್ಮಾಣಿಂ ವಾಘತಃ"** (**ಋ. ಸಂ. ೧-೧-೫-೨** ॥

(೪) **ವೃಕ್ತಬರ್ಹಿಷಃ** ॥ ಛೇದನಾರ್ಥಕ ವೃಜೀಧಾತುವಿಗೆ ಕ್ತಪ್ರತ್ಯಯ. 'ಶ್ವೀದಿತೋ ನಿಷ್ಠಾಯಾಮ್' ಸೂತ್ರದಿಂದ ಇಡಾಗಮ ನಿಷೇಧ ಬರುತ್ತದೆ. ಕುತ್ವ, ಚರ್ತ್ವ. ಬರ್ಹಿಶಬ್ದ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. 'ವೃಕ್ತಂ ಬರ್ಹಿಃ ಯೈಃ' ಕತ್ತರಿಸಲ್ಪಟ್ಟ ದರ್ಭೆಯುಳ್ಳವರು. **"ನಾಸತ್ಯೋ ವೃಕ್ತಬರ್ಹಿಷಃ"** (**ಋ. ಸಂ. ೧-೧-೫-೩**)

(೫) **ಯತಸ್ರುಚಃ** ॥ 'ಯಮು-ಉಪರಮೇ' (ಭ್ವಾ-ಪ) ಕ್ತಪ್ರತ್ಯಯ. ಕಿತ್ತಾದುದರಿಂದ ಅನುನಾಸಿಕ ಲೋಪ. ಯತ ಎಂದಾಗುತ್ತದೆ. ಸ್ರು-ಗತೌ. ಇದಕ್ಕೆ 'ಸ್ರುವಃ ಕಃ, ಚಿಕ್‌ಚ' (ಉ-೨-೫೭-೫೮) ಸೂತ್ರದಿಂದ ಚಿಕ್‌ಪ್ರತ್ಯಯ. ಇಕಾರ ಕಕಾರಗಳು ಇತ್ತಾಗುತ್ತದೆ. ಸ್ರುಚ್ ಎಂದಾಗುತ್ತದೆ. ಎತ್ತಲ್ಪಟ್ಟ ಜುಹೂ ಮುಂತಾದ ಪಾತ್ರಗಳುಳ್ಳವರು.

(೬) **ಮರುತಃ** ॥ ಹಿರಣ್ಯನಾಮದಲ್ಲಿ ಇದು ವ್ಯಾಖ್ಯಾತವಾಗಿದೆ. (೧-೨-೧೩) **"ಬೃಹದಿಂದ್ರಾಯ ಗಾಯತ ಮರುತಃ"** (**ಋ. ಸಂ. ೬-೬-೧೨-೧**)

(೭) **ಸಬಾಧಃ** ॥ 'ಬಾಧೃ-ಲೋಡನೇ' (ಭ್ವಾ-ಆ) ಕ್ವಿಪ್‌ಪ್ರತ್ಯಯ. 'ಬಾಧಾ ಸಹವರ್ತತ ಇತಿ ಸಬಾಧಃ' ರಕ್ಷೋಘ್ನ ಮಂತ್ರೋಚ್ಚಾರಣೆಯಿಂದ ರಾಕ್ಷಸರ ಬಾಧೆಯನ್ನು ಹೋಗಲಾಡಿಸುವವರು ಋತ್ವಿಜರು. **'ತಂ ಸಬಾಧೋ ಯತಸ್ರುಚೋ'** (**ಋ. ಸಂ. ೩-೧-೨೯-೧**) ॥

(೮) **ದೇವಯವಃ** ॥ ದೇವಶಬ್ದ ಉಪಪದವಾಗಿರುವಾಗ ಯಾಧಾತುವಿಗೆ 'ಮೃಗಯ್ವಾದಯಶ್ಚ' (ಉ-೧-೩೭) ಸೂತ್ರದಿಂದ ಕುಪ್ರತ್ಯಯ ಬಂದು ನಿಪಾತಿತವಾಗುತ್ತದೆ. ಹವಿಃ ಪ್ರದಾನ ಸಮಯದಲ್ಲಿ ಮನಸ್ಸಿನಿಂದ ದೇವತೆಗಳನ್ನು ಹೊಂದುವವನು. ನಿಗಮ ಹುಡುಕಬೇಕು. ॥

ಹೀಗೆ ಎಂಟು ಋತ್ವಿಜ್‌ನಾಮಗಳು ॥ ೧೮ ॥

---

ಋತ್ವಿಕ್ ಕಸ್ಮಾದೀರಣಃ ॥೮॥

**ಋತ್ವಿಕ್** ಎಂದರೆ ಪುರೋಹಿತನು ಎಂದರ್ಥವು. ಋಗ್ವೇದದ ಮಂತ್ರಗಳನ್ನು ಯಜ್ಞಾದಿಗಳಲ್ಲಿ ಉಚ್ಚರಿಸುವುದರಿಂದ ಈ ಪುರುಷನಿಗೆ ಋತ್ವಿಕ್ ಎಂದು ಹೆಸರು.

ಋಗ್ಯಷ್ಟಾ ಭವತೀತಿ ಶಾಕಪೂಣಿಃ ॥೯॥

ಋಗ್ವೇದ ಮಂತ್ರಗಳಿಂದ ಅಥವಾ ಋಕ್ಕುಗಳಿಂದ ಈ ಋತ್ವಿಕ್ ಎಂಬ ಪುರುಷನು ಯಜ್ಞಮಾಡುವುದು ಅರ್ಥ ಯಜ್ಞ ಮಾಡಿಸುವುದರಿಂದ ಋತ್ವಿಕ್ ಎಂಬ ಹೆಸರು ಬಂದಿದೆ ಎಂದು ಶಾಕಪೂಣಿ ಎಂಬ ಆಚಾರ್ಯರ ಅಭಿಪ್ರಾಯವು.

ಋತುಯಾಜೀ ಭವತೀತಿ ವಾ ॥ ೧೦ ॥

ಸಂವತ್ಸರದಲ್ಲಿರುವ ವಸಂತಾದಿ ಋತುಗಳನ್ನೂ ಅಥವಾ ಈ ಋತುಗಳ ಅಭಿಮಾನ ದೇವತೆಗಳನ್ನೂ ಉದ್ದೇಶಿಸಿ ಹೋಮಮಾಡುವುದರಿಂದ ಋತ್ವಿಕ್ ಎಂಬ ಹೆಸರಾಯಿತು.

ಯಾಚ್ಞಾ ಕರ್ಮಾಣ ಉತ್ತರೇ ಧಾತವಃ ಸಪ್ತದಶ ॥ ೧೧ ॥

[೧] ಈಮಹೇ [೨] ಯಾಮಿ [೩] ಮನ್ಮಹೇ [೪] ದದ್ಧಿ [೫] ಶಗ್ಧಿ [೬] ಪೂರ್ಧಿ [೭] ಮಿಮಿದ್ಧಿ [೮] ಮಿಮೀಹಿ [೯] ರಿರಿಡ್ಢಿ [೧೦] ರಿರೀಹಿ [೧೧] ಪೀಪರತ್ [೧೨] ಯನ್ತಾರಃ [೧೩] ಯನ್ಧಿ [೧೪] ಇಷುಧ್ಯತಿ [೧೫] ಮದೇಮಹಿ [೧೬] ಮನಾಮಹೇ [೧೭] ಮಾಯತೇ ॥

ಇತಿ ಸಪ್ತದಶ ಯಚ್ಞಾಕರ್ಮಾಣಃ ॥ ೧೯ ॥

**(೧) ಈಮಹೇ** ॥ ಈ –ಗತೌ ದಿವಾದಿ. 'ಬಹುಲಂ ಛಂದಸಿ' (ಪಾ–೩-೪–೭೩) ಸೂತ್ರದಿಂದ ಶ್ಯನ್‌ವಿಕರಣಕ್ಕೆ ಲುಕ್. ಉತ್ತಮಪುರುಷ ಬಹುವಚನಾಂತರೂಪ. 'ಇತೋ ವಾ ಸಾಸಿ ಮೀಮಹೇ' (ಋ. ಸಂ. ೧–೧–೧೨.೫) ॥

**(೨) ಯಾಮಿ** ॥ 'ಯಾ–ಪ್ರಾಪಣೇ'. ಅದಾದಿ. ಶಪಿಗೆ ಲುಕ್. ಉತ್ತಮಪುರುಷ ಏಕವಚನಾಂತರೂಪ '**ತತ್ತ್ವಾಯಾಮಿಬ್ರಹ್ಮಣಾ ವಂದಮಾನಃ**' (ಋ. ಸಂ. ೧–೨-೧೫–೧)

**(೩) ಮನ್ಮಹೇ** ॥ 'ಮನು–ಅವಬೋಧನೇ' ತನಾದಿ. ಉತ್ತಮಪುರುಷಮಹಿಙ್‌ಪರವಾದಾಗ 'ಲೋಪಶ್ಚಾಸ್ಯಾನ್ಯತರಸ್ಯಾಮ್ವ್ಮೋಃ' (ಪಾ–ಸೂ-೬–೪–೧೦೭) ಸೂತ್ರದಿಂದ ಉಕಾರಕ್ಕೆ ಲೋಪ. '**ವಯಂ ಹಿತೇ ಅಮನ್ಮಹಿ** (ಋ. ಸಂ. ೧–೨–೨೧–೬) ಈ ಧಾತುಗಳಿಗೆ ಬೇರೆ ಅರ್ಥಹೇಳಿದ್ದರೂ ಅನೇಕಾರ್ಥವಿರುವುದರಿಂದ ಯಾಚನಾರ್ಥವಲ್ಲಿ ಪಾಠಮಾಡುವುದರಿಂದ ಯಾಚನಾರ್ಥ ಹೇಳಬೇಕು.

**(೪) ದದ್ಧಿ** ॥ 'ದದ–ದಾನೇ' ಭ್ವಾದಿ. ವ್ಯತ್ಯಯದಿಂದ ಶಪಿಗೆ ಶ್ಲುವಿಕರಣ ಬಂದಿದೆ. ಲೋಟ್‌ಮಧ್ಯಮಪುರುಷದಲ್ಲಿ ಸಿಪಿಗೆ ಹಿ ಆದೇಶ ಬಂದಾಗ 'ಹುಝಲ್ಭ್ಯೋ ಹೇರ್ಧಿಃ' (ಪಾ–ಸೂ–೬–೪–೧೦೧) ಸೂತ್ರದಿಂದ ಅದಕ್ಕೆ ಧಿ ಆದೇಶ. ॥

**(೫) ಶಗ್ಧಿ** ॥ 'ಶಕ್ಲೃ–ಶಕ್ತೌ.' ಸ್ವಾದಿ ಹಿಂದಿನಂತೆ ವಿಕರಣಕ್ಕೆ ಲುಕ್. ಹೀಗೆ ಧಿ ಆದೇಶ ಬಂದಾಗ ಝಲಾಂ ಜಶ್‌ಝಶಿ" ಸೂತ್ರದಿಂದ ಕಕಾರಕ್ಕೆ ಗಕಾರಾದೇಶ ॥

**(೬) ಪೂರ್ಧಿ** ॥ 'ಪೄ–ಪಾಲನಪೂರಣಯೋಃ' ಕ್ರ್ಯಾದಿ, ವ್ಯತ್ಯಯದಿಂದ ಶಪ್‌ಬಂದಾಗ "ಬಹುಲಂ ಛಂದಸಿ" ಎಂಬುದರಿಂದ ಲುಕ್. ಶ್ರುಶೃಣು—(ಪಾ–ಸೂ.೬–೪–೧೦೨) ಸೂತ್ರದಿಂದ ಹೀಗೆ ಧಿ ಆದೇಶ. 'ಉದೋಷ್ಠ್ಯಪೂರ್ವಸ್ಯ' ಉತ್ವ ದೀರ್ಘ. **ಶಗ್ಧಿ ಪೂರ್ಧಿ ಪ್ರಯಂಸಿಚ** (ಋ. ಸಂ- ೧–೩-೨೪-೪) ॥

(೭) ಮಿಮಿಡ್ಢಿ ॥ " ಮಿಹ-ಸೇಚನೇ " (ಭ್ವಾ-ಪ) ' ಬಹುಲಂ ಛಂದಸಿ ' ಸೂತ್ರದಿಂದ ಶಪಿಗೆ ಶ್ಲುವಿಕರಣ ದ್ವಿತ್ವಾದಿ. ಛಾಂದಸವಾದುದರಿಂದ ಢಲೋಪ ಬರುವುದಿಲ್ಲ. ॥

(೮) ಮಿಮೀಹಿ ॥ 'ಮೃಜ್-ಮಾರ್ಜನೇ.' ಜುಹೋತ್ಯಾದಿ. ಶ್ಲುನಿಮಿತ್ತವಾಗಿ ದ್ವಿತ್ವಾದಿ. ವ್ಯತ್ಯಯದಿಂದ ಸಿಪಿಗೆ ಹಿ ಆದೇಶ. 'ಭೃಞಾಮಿತ್' ಸೂತ್ರದಿಂದ ಅಭ್ಯಾಸಕ್ಕೆ. ಇತ್ವ. 'ಈ ಹಲ್ಯಘೋಃ' (ಪಾ-ಸೂ-೬-೪-೧೧೩) ಸೂತ್ರದಿಂದ ಧಾತುಪಿಗೆ ಈತ್ವ. **'ಯತ್‌ಸೀಂ ವರಿಷ್ಮೇ ವೃಹತೀ ವಿಮಿನ್ವನ್' (ಋ-ಸಂ-೩-೮-೮-೧)**

(೯) ರಿರಿಡ್ಢಿ ॥ 'ರಿಹ-ಕತ್ಥನೇ' ತುದಾದಿ. ವ್ಯತ್ಯಯದಿಂದ ಶ್ಲುಬಂದಾಗ ದ್ವಿತ್ವಾದಿ. ಢಲೋಪ. ಹಿಂದಿನಂತೆ ಬರುವುದಿಲ್ಲ.

(೧೦) ರಿರೀಹಿ ॥ 'ರೀಙ್-ತೌ.' ಙಿತ್ತಾದರೂ ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. ಸಿಪಿಗೆ ಹಿ ಆದೇಶ ಬಂದಾಗ ವ್ಯತ್ಯಯದಿಂದ ಶಪಿಗೆ ಶ್ಲು ಆದೇಶ. ದ್ವಿತ್ವಾದಿ. **'ಪ್ರಜಾವತೀರಿಂದ್ರಾ ಗೋಷ್ಮೇ ರಿರೀಹಿ(ಋ-ಸಂ-೮-೮-೨೭-೩)**

(೧೧) ಪೀಪರತ್ ॥ ಪೂರ್ವೋಕ್ತವಾದ ಪೃಥಾತುವಿಗೆ ಣಿಚ್ ಬಂದಾಗ ಅದರಮೇಲೆ ಲುಙ್. ಉಪಧಾಹ್ರಸ್ವ ಸನ್ವಲ್ಲಘುನಿ—' ಸೂತ್ರದಿಂದ ಸನ್ವದ್ಭಾವ ಅತಿದೇಶಮಾಡುವುದರಿಂದ ದ್ವಿತ್ವ. ಅಭ್ಯಾಸಕ್ಕೆ ಇತ್ವ, ದೀರ್ಘ. ಬಹುಲಂ **'ಛಂದಸ್ಯಮಾ—'** (ಪಾ-ಸೂ-೬-೪-೭೫.) ಸೂತ್ರದಿಂದ ಅಡಾಗಮ ಬರುವುದಿಲ್ಲ.

(೧೨) ಯನ್ತಾರಃ ॥ 'ಯಮು-ಉಪರಮೇ' (ಭ್ವಾ-ಪ-) ತೃಚ್‌ಪ್ರತ್ಯಯ. ಜಸಿನಲ್ಲಿ 'ಅಪ್‌ತೃನ್—' ಸೂತ್ರದಿಂದ ದೀರ್ಘ. **'ಇಂದ್ರ ಇಂದ್ರಾಯ ಕ್ಷಯತಿ ಶ್ರಯನ್ತಾ' (ಋ-ಸಂ-೧-೪-೧೧-೪)**॥

(೧೩) ಯನ್ಧಿ ॥ ಪೂರ್ವೋಕ್ತಧಾತುವಿಗೆ ಲೋಟನಲ್ಲಿ ಸಿಪ್‌ಬಂದಾಗ ಅದಕ್ಕೆ ಹಿ ಆದೇಶ. ಶಪಿಗೆಲುಕ್. 'ವಾಛಂದಸಿ' ಸೂತ್ರದಿಂದ ಹಿಗೆ ಅಪಿತ್ವಬರುವುದಿಲ್ಲ. 'ಅಜಿತಶ್ಚ' (ಪಾ-ಸೂ-೬-೪-೧೦೩) ಸೂತ್ರದಿಂದ ಹಿಗೆ ಧಿ ಆದೇಶ. ಮಕಾರ ಲೋಪನಿಷೇಧ. **'ಉರುಣೋ ಯನ್ಧಿ ಜೀವಸೇ' (ಋ-ಸಂ-೬-೫-೩-೨)**

(೧೪) ಇಷುಧ್ಯತಿ ॥ 'ಇಷು-ಚರಣೇ. ಕಂಡ್ವಾದಿಗಣಪಠಿತವಾದುದರಿಂದ ಯಕ್. **'ವಿಶ್ವೋರಾಯ ಇಷುಧ್ಯತಿ' (ಋ-ಸಂ-೪-೩-೪-೧)** ಇಲ್ಲಿ ಯಾಚನಾರ್ಥ ತೋರುತ್ತದೆ. ॥

(೧೫) ಮದೇಮಹಿ ॥ 'ಮದೀ-ಹರ್ಷಗ್ಲೇಪನಯೋಃ' ಸ್ವರಿತೇತ್. ಲಿಙ್. ॥

(೧೬) ಮನಾಮಹೇ ॥ 'ಮ್ನಾ-ಅಭ್ಯಾಸೇ.' ವ್ಯತ್ಯಯದಿಂದ ಆತ್ಮನೇಪದೀ. 'ಪಾಘ್ರಾಧ್ಮಾ—' (ಪಾ. ಸೂ. ೭-೩-೭೮) ಸೂತ್ರದಿಂದ ಮನಾದೇಶ. **'ಸ್ವಗ್ನಯೋ ಮನಾಮಹೇ' (ಋ. ಸಂ. ೧-೨-೨೧-೧)**

(೧೭) ಮಾಯತೇ ॥ ಇದು ಕೇವಲ್ಲ ನಿರುಕ್ತಪಠಿತವಾದ ಧಾತು.

ಹೀಗೆ ಹದಿನೇಳು ಯಾಚನಾರ್ಥ ಹೇಳುವ ಧಾತುಗಳು ॥ ೧೯ ॥

———

ದಾನಕರ್ಮಾಣಿ ಉತ್ತರೇ ಧಾತವೋ ದಶ ॥ ೧೨ ॥

(೧) ದಾತಿ (೨) ದಾಶತಿ (೩) ದಾಸತಿ (೪) ರಾತಿ (೫) ರಾಸತಿ (೬) ಪೃಣಕ್ಷಿ (೭) ಪೃಣಾತಿ (೮) ಶಿಕ್ಷತಿ (೯) ತುಂಜತಿ (೧೦) ಮಂಹತೇ

॥ ಇತಿ ದಶ ದಾನಕರ್ಮಾಣಃ ॥ ೨೦ ॥

**(೧) ದಾತಿ ॥** ದಾನಾರ್ಥಕಧಾತುಗಳನ್ನು ಹೇಳುತ್ತಾನೆ- 'ದಾಪ್-ಲವನೇ' ಅದಾದಿ. ಶಪಿಗೆಲುಕ್. ದಾನಾರ್ಥಕ ದಾಞ್ಧಾತುವಿಗೆ 'ಬಹುಲಂ ಛಂದಸಿ' ಸೂತ್ರದಿಂದ ಶಪಿಗೆ ಲುಕ್ ಹೇಳಬೇಕು. **'ದಾತಿ ಪ್ರಿಯಾಣಿ ಚಿದ್ವಸು' (ಋ. ಸಂ. ೩-೫.೮-೩)**

**(೨) ದಾಶತಿ ॥** 'ದಾಶೃ-ದಾನೇ'. ಸ್ವರೀತೇತ್. ಲಟ್. **'ಧನಂ ಯಸ್ಮೈ ದದಾಶಮರ್ತ್ಯಃ'** (**ಋ. ಸಂ.** ೧-**೩-೮-೪**)

**(೩) ದಾಸತಿ ॥** 'ದಾಸೃ-ದಾನೇ' **ಲಟ್**

**(೪) ರಾತಿ ॥** 'ರಾ-ದಾನೇ' ಅದಾದಿ. ಶಪಿಗೆ ಲುಕ್. **ತಸ್ಯ ಮೇ ರಾಸ್ವ ತೇ ಭಕ್ಷಣಾಯ' ॥**

**(೫) ರಾಸತಿ ॥** 'ರಾಸೃ-ದಾನೇ'. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತತೆ. ಲಟ್. **ಸ ನೋ ರಾಸಚ್ಛುರುಧಶ್ಚಂದ್ರಾಗ್ರಾಃ' (ಋ. ಸಂ. ೪-೮-೬-೩) ॥**

**(೬) ಪೃಣಕ್ಷಿ ।** 'ಪೃಚೀ-ಸಂಪರ್ಕೇ'- ರುಧಾದಿ. ಶ್ನಮ್‌ವಿಕರಣ. **'ಪೃಣಕ್ಷಿ ಸಾನಸಿಂ ಕ್ರತುಮ್' (ಋ. ಸಂ. ೮-೨-೨೮-೪)**

**(೭) ಪೃಣಾತಿ ॥ 'ಪೄ-ಪಾಲನಪೂರಣಯೋಃ'** ಕ್ರ್ಯಾದಿ. ಶ್ನಾವಿಕರಣ. **'ಯಃ ಪೃಣಾತಿ ಸಹ ದೇವೇಷು ಗಚ್ಛತಿ'** (ಋ. ಸಂ. ೨.೧-೧೦-೫) ॥

**(೮) ಶಿಕ್ಷತಿ ॥** ಶಕಧಾತುವಿಗೆ ಸನ್ ಬಂದಾಗ 'ಸನಿ ಮೀಮಾ—' ಸೂತ್ರದಿಂದ ಧಾತುವಿಗೆ ಇತ್ವ. ಕುತ್ವ ಷತ್ವ. 'ಅತ್ರಲೋಪೋಭ್ಯಾಸಸ್ಯ' (ಪಾ-ಸೂ-೭-೪-೫೮) ಸೂತದಿಂದ ಅಭ್ಯಾಸಕ್ಕೆ ಲೋಪ. 'ಅಸ್ತುಭ್ಯಂ ದಾಶಾದ್ **ಯೋ ವಾ ತೇ ಶಿಕ್ಷಾದ್' (ಋ. ಸಂ. ೧-೫-೧೨.೩)**

**(೯) ತುಞ್ಜತಿ ॥** 'ತುಜಿ-ಹಿಂಸಾಯಾಮ್. ಪಾಲನೇ ಚ'. ಇದಿತ್ತ್ವಾದುದರಿಂದ ನುಮಾಗಮ. **'ತು ಞ್ಜೇ ತುಞ್ಜೇ ಯ ಉತ್ತರೇ' (ಋ. ಸಂ ೧-೧-೧೪.೨) ॥**

(೧೦) **ಮಂಹತೇ** ॥ 'ಮೃಹಿ, ಮಹಿ–ವೃದ್ಧೌ. ಆತ್ಮನೇಪದೀ. ಇದಿತ್ತ್ವಾದುದರಿಂದ ನುಮ್. **'ಸ್ತೋತೃಭ್ಯೋ ಮಂಹತೇ ಮಘವಾ' (ಋ. ಸಂ. ೧–೧–೨೧–೩)**

ಹೀಗೆ ಹತ್ತು ದಾನಾರ್ಥಕ ಧಾತುಗಳು ॥ ೨೦ ॥

---

ಅಧ್ಯೇಷಣಾಕರ್ಮಾಣ ಉತ್ತರೇ ಧಾತವಶ್ಚತ್ವಾರಃ ॥೧೩॥

(೧) ಪರಿಸ್ರುವ (೨) ಪವಸ್ವ (೩) ಅಭ್ಯರ್ಷ (೪) ಆಶಿಷಃ॥

## ಇತಿ ಚತ್ವಾರೋಽಧ್ಯೇಷಣಾ ಕರ್ಮಾಣಃ

(೧) **ಪರಿಸ್ರುವ** ॥ ಸತ್ಕಾರಾರ್ಥಕ ಧಾತುಗಳನ್ನು ಹೇಳುತ್ತಾನೆ. ಇತರಾರ್ಥದಲ್ಲಿ ಹೇಳಿದ್ದರೂ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಅಧ್ಯೇಷಣಾರ್ಥ ಹೇಳಬೇಕು. ಪರಿ ಉಪಸರ್ಗ. 'ಸ್ರು–ಗತೌ' ಲೋಟ್. ಮಧ್ಯಪುರುಷೈಕವಚನ **'ಇಂದ್ರಾಯೇಂದೋ ಪರಿಸ್ರುವ' (ಋ. ಸಂ. ೬–೬–೧೪–೩)**॥

(೨) **ಪವಸ್ವ** ॥ 'ಪೂಙ್–ಪವನೇ' ಸ್ವರಿತೇತ್. ಲೋಟ್. **'ಪವಸ್ವ ಸೋಮ ಮನ್ದಯನ್ (ಋ. ಸಂ. ೭–೨–೧೬–೧)**

(೩) **ಅಭ್ಯರ್ಷ** ॥ ಅಭಿ–ಉಪಸರ್ಗ. **'ಋಷ–ಗತೌ'** ತುದಾದಿ. 'ಛಂದಸ್ಯುಭಯಥಾ' ಸೂತ್ರದಿಂದ ಶವಿಕರಣಕ್ಕೆ ಆರ್ಧಧಾತುಕಸಂಜ್ಞೆ ಬರುವುದರಿಂದ ಙಿತ್ತ್ವವಿಲ್ಲದಿರುವುದರಿಂದ ಗುಣ ಬರುತ್ತದೆ. **'ಅಭ್ಯರ್ಷ ಸ್ವಾಯುಧಾ'** ॥

(೪) **ಆಶಿಷಃ** ॥ ಅಶಧಾತುವಿಗೆ ಲೇಟ್. 'ಸಿಬ್ಬಹುಲಂ ಲೇಟಿ' ಸೂತ್ರದಿಂದ ಸಿಪ್ ಬಂದಾಗ 'ಲೇಟೋಽಡಾಟೌ' (ಪಾ. ಸೂ. ೩–೪–೯೪) ಸೂತ್ರದಿಂದ ಆಡಾಗಮ. ॥

ಹೀಗೆ ನಾಲ್ಕು ಅಧ್ಯೇಷಣಾರ್ಥಕ ಧಾತುಗಳು ॥೨೦॥

---

ಸ್ವಪಿತಿಸಸ್ತೀತಿ ದ್ವೌ ಸ್ವಪಿತಿಕರ್ಮಾಣೌ ॥೧೪॥

(೧) ಸ್ವಪತಿ (೨) ಸಸ್ತಿ ಇತಿ ದ್ವೌ ಸ್ವಪತಿಕರ್ಮಾಣೌ ॥೨೨॥

(೧) **ಸ್ವಪತಿ**॥ 'ಞಿ ಷ್ವಪ್–ಶಯನೇ.' ಅದಾದಿ ಲಟ್. ತಿಪ್. 'ರುದಾದಿಭ್ಯಃ ಸಾರ್ವಧಾತುಕೇ' (ಪಾ. ಸೂ. ೭–೨–೭೬) ಸೂತ್ರದಿಂದ ತಿಪಿಗೆ ಇಡಾಗಮ. **'ಯೋ ದೀಕ್ಷಿತಃ ಸ್ವಪತಿ'** ॥

(೨) **ಸಸ್ತಿ** ॥ 'ಷಸ–ಸ್ವಪ್ನೇ'. ಧಾತ್ವಾದಿಗೆ ಸತ್ವ. ಅದಾದಿಯಾದುದರಿಂದ ಶಪಿಗೆ ಲುಕ್. ಲಟ್. **ಸಸ್ತು ಮಾತಾ ಸಸ್ತು ಪಿತಾ (ಋ. ಸಂ. ೫–೪–೨೨–೫)**

ಹೀಗೆ ಎರಡು ನಿದ್ರಾರ್ಥಕ ಧಾತುಗಳು ॥೨೨॥

ಕೂಪನಾಮಾನ್ಯುತ್ತರಾಣಿ ಚತುರ್ದಶ ॥೧೫॥

(೧) ಕೂಪಃ (೨) ಕಾತುಃ (೩) ಕರ್ತಃ (೪) ವವ್ರಃ (೫) ಕಾಟಃ (೬) ಖಾತಃ (೭) ಅವತಃ (೮) ಕ್ರಿವಿಃ (೯) ಸೂದಃ (೧೦) ಉತ್ಸಃ (೧೧) ಋಶ್ಯದಾತ್ (೧೨) ಕಾರೋತರಾತ್ (೧೩) ಕಶಯಃ (೧೪) ಕೇವಟಃ ॥

ಇತಿ ಚತುರ್ದಶ ಕೂಪನಾಮಾನಿ ॥೨೩॥

(೧) **ಕೂಪಃ** ॥ ಬಾವಿಯ ಹೆಸರನ್ನು ಹೇಳುತ್ತಾನೆ. ಕುಶಬ್ದ ಉಪಪದವಾಗಿರುವಾಗ ಪಾನಾರ್ಥಕ ಪಾಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. 'ಅನ್ಯೇಷಾಮಪಿ ದೃಶ್ಯತೇ' ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ಕುತ್ಸಿತ ಪಾನವುಳ್ಳದ್ದು ಬಾವಿ. ಕಷ್ಟಸಾಧ್ಯವಾದುದರಿಂದ, ಶೌಚಾದಿಗಳಿಗೆ ಉಪಯುಕ್ತವಾಗದಿರುವುದರಿಂದ ಕುತ್ಸಿತವೆಂದಿದೆ. ಅಥವಾ 'ಕುಪ–ಕ್ರೋಧೇ' ದಿವಾದಿ. 'ಇಗುಪಧಜ್ಞಾ—' ಸೂತ್ರದಿಂದ ಕಪ್ರತ್ಯಯ. ಪೃಷೋದರಾದಿಗಣಪಠಿತವಾದುದರಿಂದ ಪೂರ್ವಪದಕ್ಕೆ ದೀರ್ಘ. ನೀರು ಸೇದುವುದು ಕಷ್ಟವಾದುದರಿಂದ ಜನರು ಬಾವಿಯ ವಿಷಯದಲ್ಲಿ ಕೋಪಗೊಳ್ಳುತ್ತಾರೆ. ಅಥವಾ ಗತ್ಯರ್ಥಕ ಕುಧಾತುವಿಗೆ 'ಕುಯುಭ್ಯಾಞ್ಚ' (ಉ–೩–೨೫) ಸೂತ್ರದಿಂದ ಪಪ್ರತ್ಯಯ. ಕಿತ್ತ್ವಾತಿದೇಶದಿಂದ ದೀರ್ಘ. ಜಲಾಪೇಕ್ಷಿಗಳಿಂದ ಹೊಂದಲ್ಪಡುವುದು. **'ತ್ರಿತಃ ಕೂಪೇಽವಹಿತಃ'** (ಋ. ಸಂ. ೧–೭–೨೩–೨)

(೨) **ಕಾತುಃ** ॥ 'ಕೈ–ಶಬ್ದೇ.' ಧಾತು. 'ಸಿತನಿಗಮಿ ಮಸಿ—' (ಉ–೧–೬೭) ಸೂತ್ರದಿಂದ ವಿಹಿತವಾದ ತುನ್‌ಪ್ರತ್ಯಯ ಬಹುಲಗ್ರಹಣದಿಂದ ಇದಕ್ಕೆ ಬರುತ್ತದೆ. ನೀರಿರುವುದರಿಂದ ಶಬ್ದ ಮಾಡಲ್ಪಡುತ್ತದೆ. ಅಥವಾ ಕಶಬ್ದ ಉಪ ಪದವಾಗಿರುವಾಗ ಗಮನಾರ್ಥಕ ಅತಧಾತುವಿಗೆ 'ಛಂದಸೀಣಃ' (ಉ–೧–೨) ಸೂತ್ರವಿಹಿತವಾದ ಉಣ್‌ಪ್ರತ್ಯಯ. ಕಪದಕ್ಕೆ ನೀರೆಂದರ್ಥ. ಇದರಲ್ಲಿ ನೀರು ಹೊಂದಲ್ಪಡುತ್ತದೆಯೆಂದರ್ಥ. ॥

(೩) **ಕರ್ತಃ** ॥ ಹಿಂಸಾರ್ಥಕ ಕೃಧಾತುವಿಗೆ ಬಹುಲಗ್ರಹಣದಿಂದ 'ಹಸಿಮೃಗ್ರಿ—' (ಉ–೩–೮೬) ಸೂತ್ರವಿಹಿತ ವಾದ ತನ್‌ಪ್ರತ್ಯಯ. ಧಾತುವಿಗೆ ಗುಣ. ಪುರುಷರಿಂದ ಸೃಷ್ಟಿಸಲ್ಪಡುವುದು ಬಾವಿ. ಇಲ್ಲಿ ತಳ್ಳುವುದೇ ಮುಂತಾದ ಕಾರ್ಯಗಳಿಂದ ಚೋರರು ಪಥಿಕರನ್ನು ಹಿಂಸಿಸುತ್ತಾರೆ. ಇದರಿಂದ ಋತಪ್ರಾಪ್ತಿಯಾಗುತ್ತದೆ. **ಕರ್ತಮನ್ನಸ್ಯ ವಿತ್ತಮಾದಾಯ ಇನ್ನನ್ತಿ**

(೪) **ವವ್ರಃ** ॥ 'ವೃಞ್-ಸಂಭಕ್ತೌ' ಸ್ವಾದಿ 'ಘಞರ್ಥೇ ಕವಿಧಾನಮ್' ಎಂಬುದರಿಂದ ಕಪ್ರತ್ಯಯ. 'ಕೃಞಾದೀನಾಂ ಕೇ ದ್ವೇ ಭವತಃ' ವಾರ್ತಿಕದಿಂದ ದ್ವಿತ್ವ. ಯಣ್. ಜಲಾರ್ಥಿಗಳಿಂದ ಸೇವಿಸಲ್ಪಡುವುದು. **'ವವ್ರಾಃ ಅನಂತಾಃ ಅವಸಾ ಪದೀಷ್ಟ'** (ಋ. ಸಂ. ೫–೭–೮–೨) ॥

(೫) **ಕಾಟೇ** ॥ 'ಕಟೇ–ವರ್ಷಾವರಣಯೋಃ' ಈ ಧಾತುವಿಗೆ ಘಞ್ ಬಂದಾಗ ಉಪಧಾವೃದ್ಧಿ. ಜಲಾರ್ಥಿಗಳಿಂದ ಸುತ್ತಲ್ಪಡುವುದು. ಅಥವಾ ಗತ್ಯರ್ಥಕ ಅಟಧಾತುವಿಗೆ ಕಉಪಪದವಾದಾಗ ಘಞ್. **'ಕಾಟೇ ನಿಬಾಳ್ಹ ಋಷಿರಹ್ವ ಇತದ್ಯೇಃ'** (ಋ–ಸಂ–೧–೭–೨೪–೬) ॥

(೬) **ಖಾತಃ** ॥ 'ಖನು–ಅವಧಾರಣೇ.' ಇದಕ್ಕೆ ಕ್ತಪ್ರತ್ಯಯ ಬಂದಾಗ 'ಜನಸನಖನ—' ಸೂತ್ರದಿಂದ ಧಾತುವಿಗೆ ಆತ್ವ. ॥

(೭) **ಅವತಃ** ॥ ಅವ ಉಪಸರ್ಗ ಪೂರ್ವಕವಾದ ಅತಧಾತುವಿಗೆ ಪಚಾದಿಗಣ ಪಠಿತವಾದುದರಿಂದ ಅಚ್ ಪ್ರತ್ಯಯ. ಶಕಂಧ್ವಾದಿಗಣಪಠಿತವಾದುದರಿಂದ ಪರರೂಪ. ಅಗೆಯಲ್ಪಡುತ್ತಾ ಕೆಳಗೆ ಹೋಗುತ್ತದೆ. **'ದ್ರೋಣಾಹಾವ ಮವತಮಶ್ಮ ಚಕ್ರಮ್'** (ಋ. ಸಂ. ೮–೫–೧೯–೧೧)

(೮) **ಕ್ರಿವಿಃ** ॥ ಕೃಧಾತುವಿಗೆ 'ಕೃವಿಘೃಷ್ವಿ' —(ಉ–೪–೫೬) ಸೂತ್ರದಿಂದ ಇನ್‌ಪ್ರತ್ಯಯ, ರಿದಾದೇಶಬಂದು ಈ ರೂಪ ನಿಪಾತಿತವಾಗಿದೆ. ಕರ್ತಪದದಂತೆ ಅರ್ಥ ತಿಳಿಯಬೇಕು. **ಆವ ಇಂದ್ರಂ ಕ್ರಿವಿಂಯಥಾ** (ಋ.ಸಂ.೧.೨.೨೮೧) ಃ

(೯) **ಸೂದಃ** ॥ 'ಸೂದ–ಕ್ಷರಣೇ, ಹಿಂಸಾಯಾಂ ಚ' ಅಚ್‌ಪ್ರತ್ಯಯ. ಇದರಿಂದ ನೀರು ಪ್ರವಿಸುತ್ತದೆಯೆಂದರ್ಥ. ಹಿಂಸಾರ್ಥದಲ್ಲಿ ಕರ್ತಪದದಂತೆ ಅರ್ಥ. ಶೋಭನವಾದ ಅಥವಾ ಸ್ಥಿರವಾಗಿ ನೀರಿರುವುದು ಸೂದವೆಂದು ಹರದತ್ತಮಿಶ್ರರ ವ್ಯಾಖ್ಯಾನ. ಆಗ ಸುಉಪಪದವಾಗಿರುವಾಗ ಉದಕಪದಕ್ಕೆ 'ಉದಕಸ್ಯೋದಃ ಸಂಜ್ಞಾಯಾಮ್' (ಪಾ. ಸೂ. ೬–೩–೫೭) ಸೂತ್ರದಿಂದ ಉದಾದೇಶ ॥

(೧೦) **ಉತ್ಸಃ** ॥ ಉತ್ ಪೂರ್ವದಲ್ಲಿರುವಾಗ ಸೃ, ಸದ್, ಸ್ಯನ್ದ್ ಧಾತುಗಳಿಗೆ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಬಹುಲ ಗ್ರಹಣದಿಂದ ಸ್ಯನ್ದ್ ಧಾತುವಿನ ಯಕಾರಕ್ಕೆ ಲೋಪ. ಅಥವಾ 'ಉನ್ದೇರ್ನ ಲೋಪಶ್ಚ' ಸೂತ್ರದಿಂದ ಉನ್ದಿ ಧಾತುವಿಗೆ ಸಪ್ರತ್ಯಯ, ನಲೋಪ. ಇದರಿಂದ ನೀರು ಮೇಲಕ್ಕೆ ಬರುತ್ತದೆ, ನೀರು ಹರಿಯುತ್ತದೆ, ನೀರಿನಿಂದ ಒದ್ದೆಯಾಗಿರುತ್ತದೆಯೆಂದರ್ಥ. **'ಉತ್ಸಂ ನ ಕಂಚಿಜ್ಜನಪಾನಮಕ್ಷಿತಮ್** (ಋ. ಸಂ. ೭–೫–೨೨–೫) ॥

(೧೧) **ಋಶ್ಯದಾತ್** ॥ 'ಋಷೀ-ಗತೌ'. 'ಅಘ್ನ್ಯಾದಯಶ್ಚ' (ಉ.೪–೧೦೮) ಸೂತ್ರದಿಂದ ಯತ್‌ಪ್ರತ್ಯಯ, ಷಕಾರಕ್ಕೆ ಶಕಾರಾದೇಶ, ಗುಣಾಭಾವ ಬಂದು ನಿಪಾತಿತವಾಗುತ್ತದೆ. ಮೃಗಗಳಿಗೆ ಋಶ್ಯವೆಂದು ಹೆಸರು. ಋಶ್ಯಾನ್ ದ್ಯತಿ. ಅವಖಂಡನಾರ್ಥಕ ದೋಧಾತುವಿಗೆ 'ಆತೋನುಪಸರ್ಗೇಕಃ'. ಸೂತ್ರದಿಂದ ಕಪ್ರತ್ಯಯ. ಧಾತುವಿಗೆ ಆತ್ವ. ಲೋಪ. ಪಂಚಮ್ಯೇಕವಚನರೂಪ. ಬಾವಿಯು ಆಳವಾಗಿ ನೀರುಹೊಂದಿರುವುದರಿಂದ ಮೃಗಾದಿಗಳಿಗೆ ನಿರಪೇಕ್ಷಾರೂಪ ಖಂಡನವನ್ನುಂಟುಮಾಡುತ್ತದೆ. **'ಯುವಂ ವಂದನಮೃಶ್ಯದಾದುದೂಪಥುರ್ಯುವಮ್'** (ಋ.ಸಂ.೨–೮–೧೬–೩)

(೧೨) **ಕಾರೋತರಾತ್** ॥ 'ಕರಣಂಕಾರಃ' ಕೃಧಾತುವಿಗೆ ಘಞ್‌ಬಂದರೆ ವೃದ್ಧಿಬಂದು ಕಾರ ಎಂದಾಗುತ್ತದೆ. ಖನನ (ಅಗೆಯುವುದು) ಕ್ರಿಯಾರೂಪ ಕರಣದಿಂದ ಉತ್ತರವಾಗಿದೆ, ಇತರಪ್ರದೇಶಗಳಿಂದ ಉತ್ಕೃಷ್ಟವಾಗಿದೆ. ಅಥವಾ ಉತ್ಪಾತವಾದ ಉದಕವುಳ್ಳದ್ದು. ಪೃಷೋದರಾದಿ ಪಠಿತವಾದುದರಿಂದ ಅಭಿಮತರೂಪವಾಗುತ್ತದೆ ಪಂಚಮ್ಯೇಕವಚನಾಂತರೂಪ. ॥

(೧೩) **ಕುಶಯಃ ॥** 'ಕೌ ಶೇತೇ ಇತಿ' ನೀರಿನಲ್ಲಿ ಇರುವುದು. ಅಧಿಕರಣವಾಚಕಪದ ಉಪಪದವಾಗಿರುವಾಗ 'ಅಧಿಕರಣೇ ಶೇತೇಃ' (ಪಾ.ಸೂ.೩-೫-೧೫) ಸೂತ್ರದಿಂದ ಶೀಙ್‌ಧಾತುವಿಗೆ ಅಚ್‌ಪ್ರತ್ಯಯ. ಗುಣ, ಅಯಾದೇಶ॥

(೧೪) **ಕೇವಟಃ ॥** 'ಕೇವೃ-ಸೇವನೇ.' 'ಶಕಾದಿಭ್ಯೋಽಟನ್' (ಉ.೪-೩೯) ಸೂತ್ರದಿಂದ ಅಟನ್‌ಪ್ರತ್ಯಯ ಜಲಾಪೇಕ್ಷಿಗಳಿಂದ ಸೇವಿಸಲ್ಪಡುವುದು. **'ಮಾಕೀಂ ಸಂ ಶಾರಿ ಕೇವಟೇ' (ಋ.ಸಂ.೪-೮-೨೦-೨)॥**

ಹೀಗೆ ಹದಿನಾಲ್ಕು ಬಾವಿಯ ಹೆಸರು ॥೨೩॥

ಕೂಪಃ ಕಸ್ಮಾತ್ ಕು ಪಾನಂ ಭವತಿ ಕುಪ್ಯತೇರ್ವಾ ॥೧೬॥

ಕೂಪಃ ಎಂದರೆ ಬಾವಿಯು. ಇದರಲ್ಲಿ ದೊರೆಯುವ ಜಲವು ಕುಡಿಯುವುದಕ್ಕೆ ಉತ್ತಮವಲ್ಲವಾದ್ದರಿಂದ ಈ ಬಾವಿಗೆ **ಕೂಪಃ** ಎಂದು ಹೆಸರಾಯಿತು. ಅಥವಾ ಇದರಲ್ಲಿರುವ ನೀರನ್ನು ಇಳಿದು ತೆಗೆದುಕೊಳ್ಳಬೇಕಾಗಿರುವುದರಿಂದ ಇದಕ್ಕೆ ಕೂಪಃ ಎಂದು ಹೆಸರಾಯಿತು.

---

ಸ್ತೇನನಾಮಾನ್ಯುತ್ತರಾಣಿ ಚತುರ್ದಶೈವ ॥ ೭ ॥

(೧) ತೃಪುಃ (೨) ತಕ್ವಾ (೩) ರಿಭ್ವಾ (೪) ರಿಪುಃ (೫) ರಿಕ್ವಾ
(೬) ರಿಹಾಯಾಃ (೭) ತಾಯುಃ (೮) ತಸ್ಕರಃ (೯) ವನರ್ಗುಃ
(೧೦) ಹುರಶ್ಚಿತ್ (೧೧) ಮುಷೀವಾನ್ (೧೨) ಮಲಿಮ್ಲುಚಃ
(೧೩) ಅಘಶಂಸಃ (೧೪) ವೃಕಃ

ಇತಿ ಚತುರ್ದಶೈವ ಸ್ತೇನನಾಮಾನಿ ॥ ೨೪ ॥

(೧) **ತೃಪುಃ ॥** 'ತೃಪ-ಪ್ರೀಣನೇ' (ದಿ.ಪ) ಬಹುಲಗ್ರಹಣದಿಂದ 'ಈಷೇಃ ಕಿಚ್ಚ' (ಉ.೧-೧೩) ಸೂತ್ರದಿಂದ ವಿಹಿತವಾದ ಉಪ್ರತ್ಯಯ. ಅದು ಕಿತ್ತಾಗುವುದರಿಂದ ಗುಣವಿಲ್ಲ. ಪರದ್ರವ್ಯಾಪಹರಣದಿಂದ ಸಂತೋಷಪಡುವವನು ಕಳ್ಳನು. ನಿಗಮ ಹುಡುಕಬೇಕು. ॥

(೨) **ತಕ್ವಾಃ ॥** ಗತಿ, ಸಹನಾರ್ಥಕ ತಕಧಾತುವಿಗೆ 'ಅನ್ಯೇಭ್ಯೋಽಪಿ ದೃಶ್ಯಂತೇ' ಸೂತ್ರದಿಂದ ವನಿಪ್‌ಪ್ರತ್ಯಯ. ತಕ್ವನ್ ನಾಂತಪದವಾಗುತ್ತದೆ. ಕದಿಯಲು ಹೋಗುವವನು, ಕದಿಯುವುದನ್ನು ಪ್ರೀತಿಸುವವನು. **'ತಕ್ವಾ ನ ಭೂರ್ಣಿರ್ವನಾ ಸಿಷಕ್ತಿ (ಋ.ಸಂ.೧-೫-೧೦-೧) ॥**

(೩) **ರಿಭ್ವಾಃ ॥** 'ರಭ-ರಾಭಸ್ಯೇ.' ಹಿಂದೆ ಹೇಳಿದ ಸೂತ್ರದಿಂದ ವನಿಪ್. ಪೃಷೋದರಾದಿಗಣಪಠಿತವಾದುದರಿಂದ ಇತ್ವ, ಗುಣಾಭಾವ ಬರುತ್ತದೆ. ಕಳ್ಳತನವನ್ನು ವೇಗದಿಂದ ಆರಂಭಿಸುವವನು. ॥

(೪) **ರಿಪುಃ** ॥ 'ರಿಫ—ಕತ್ಥನಯುದ್ಧ ನಿಂದಾ ಹಿಂಸಾದಾನೇಷು' (ತು.ಪ.) 'ಇಷೇಃ ಕಿಚ್ಚ' ಸೂತ್ರವಿಹಿತವಾದ ಉಪ್ರತ್ಯಯ. ಬಹುಲಗ್ರಹಣದಿಂದ ಫಕಾರಕ್ಕೆ ಪಕಾರಾದೇಶ. ಕದಿಯುವುದಕ್ಕೋಸ್ಕರ ಯುದ್ಧ ಮಾಡುವವನು, ಹಿಂಸಿಸುವವನು, ಸತ್ಪುರುಷರಿಂದ ನಿಂದಿಸಲ್ಪಡುವವನು. **'ಮಾನಃ ಸ ರಿಪುರೀಶತ'** (ಋ.ಸಂ.೧-೩-೧೧-೧)

(೫) **ರಿಕ್ವಾ** ॥ 'ರಿಚಿರ್-ವಿಯೋಜನೇ (ರು. ಉ) 'ಅನ್ಯೇಭ್ಯೋಽಪಿ ದೃಶ್ಯಂತೇ' (ಪಾ-ಸೂ-೩-೨-೭೫) ಸೂತ್ರದಿಂದ ಕ್ವನಿಪ್‌ಪ್ರತ್ಯಯ ಕಿತ್ತಾಗುವುದರಿಂದ ಗುಣವಿಲ್ಲ. ರಿಕ್ವನ್ ನಾಂತಪದವಾಗುತ್ತದೆ. ವ್ಯತ್ಯಯದಿಂದ ಚಕಾರಕ್ಕೆ ಕಕಾರ. ಪದಾರ್ಥಗಳಿಂದ ಪದಾರ್ಥಗಳನ್ನು ಬೇರೆಮಾಡುವವನು, ಪ್ರಾಣದಿಂದ ವಿಯೋಗಗೊಳಿಸಲ್ಪಡುವವನು.

(೬) **ರಿಹಾಯಾಃ** ॥ 'ರಿಹ-ಕತ್ಥನಾದೌ' ಇದಕ್ಕೆ 'ಪರಸ್ಮೇಕೂ'-ಸೂತ್ರದಿಂದ ಅಸುನ್‌ಪ್ರತ್ಯಯ. ೀಯುಡಾಗಮ ಗುಣಾಭಾವ ಬಂದು ನಿಪಾತಿತವಾಗುತ್ತದೆ. ಸಾಂತಪದ ರಿಪುಪದದಂತೆ ಅರ್ಥ

(೭) **ತಾಯುಃ** '' ತಾಯೃ-ಸಂತಾನಪಾಲಯೋಃ " 'ಛಂದಸೀಣಃ' ಸೂತ್ರವಿಹಿತವಾದ ಉಪ್ರತ್ಯಯ. ಯಾವನಿಂದ ಎಲ್ಲವೂ ರಕ್ಷಿಸಲ್ಪಡುವುದೋ ಅಥವಾ ಉಪಕ್ಷಯಾರ್ಥಕ ತಸ್‌ಧಾತುವಿಗೆ ಹಿಂದಿನಂತೆ ಉಣ್‌ಪ್ರತ್ಯಯ ಬಂದಾಗ ಬಹುಲಗ್ರಹಣದಿಂದ ಸಕಾರಕ್ಕೆ ಯಕಾರಾದೇಶ. ಆಯುಸ್ಸಿನಿಂದ ಕ್ಷೀಣನಾದವನು. **ಅಪತ್ಯೇ ತಾಯವೋ ಯಥಾ** (ಋ. ಸಂ. ೧-೪-೭-೨)

(೮) **ತಸ್ಕರಃ** ॥ ''ತತ್‌ಕರೋತಿ "ತದ್‌ಉಪಪದವಾಗಿರುವಾಗ ಕೃಧಾತುವಿಗೆ 'ದಿವಾವಿಭಾ'(ಪಾ-ಸೂ-೩-೨-೨೧) ಸೂತ್ರದಿಂದ ಟಪ್ರತ್ಯಯ ಗುಣ. ಪಾಪಮಾಡುವವನು. ತತ್‌ಪದದಿಂದ ಪ್ರಕರಣಾನುಸಾರಿ ಅರ್ಥತೋರುವುದರಿಂದ ಪಾಪವೆಂದರ್ಥ- ವೈಯಾಕರಣರು ಶಬ್ದಪರವಾಗಿ ಅರ್ಥಹೇಳಿ ಸಾಮಾನ್ಯರೀತಿಯಿಂದ ವ್ಯುತ್ಪತ್ತಿ ಹೇಳುತ್ತಾರೆ. 'ತದ್‌ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್‌ತಲೋಪಶ್ಚ' ಎಂಬ ವಾರ್ತಿಕದಿಂದ ತತ್‌ಪದಕ್ಕೆ ಕರಪದಪರದಲ್ಲಿರುವಾಗ ಸುಡಾಗಮ ತಲೋಪ. ಸಂತಾನಕರ್ಮಾರ್ಥ ತನುಧಾತುವಿನಿಂದ ಈ ರೂಪವೆಂದು ಕೆಲವರ ಮತ ಹಗಲಿನಲ್ಲಿ ದಾರಿಯಲ್ಲಿ ಕದಿಯುವುದು, ರಾತ್ರಿಯಲ್ಲಿ ಕನ್ನಕೊರೆಯುವುದು ಕಳ್ಳನ ಕೆಲಸ. ತನುಧಾತುವಿಗೆ ಕ್ವಿಪ್ ಬಂದಾಗ ನಲೋಪ. ತುಕ್, ಚರ್ತ್ವ ಅಥವಾ 'ತ್ಯಜಿಯಜಿತನಿಭ್ಯೋ ಡಿತ್' ಸೂತ್ರದಿಂದ ಅದಿಪ್ರತ್ಯಯ ಕರ್ಮಶಬ್ದದಮಕಾರಕ್ಕೆ ಲೋಪ. ಪೃಷೋದರಾದಿಗಣದಲ್ಲಿ ಸೇರಿರುವುದರಿಂದ ಅಭಿಮತರೂಪವಾಗುತ್ತದೆ. **ತನೂತ್ಯಜೇವ ತಸ್ಕರಾ ವನರ್ಗೂ** (ಋ. ಸಂ. ೭-೫-೩೨-೬) ॥

(೯) **ವನರ್ಗೂಃ** ॥ ವನಶಬ್ದ ಉಪಪದವಾಗಿರುವಾಗ ಗಮ್‌ಧಾತುವಿಗೆ 'ಮೃಗಯ್ವಾದಯಶ್ಚ' ಸೂತ್ರದಿಂದ ಡುಪ್ರತ್ಯಯ, ರುಡಾಗಮಗಳು ನಿಪಾತಿತವಾಗುತ್ತವೆ. ಕಳ್ಳನು ಯಾವಾಗಲೂ ಕದಿಯಲು ವನವಾಸಿಯಾಗುತ್ತಾನೆ. ॥

(೧೦) **ಹುರಶ್ಚಿತ್** ॥ 'ಹ್ರೂರ್ಛಾ-ಕೌಟಿಲ್ಯೇ.' ಇದಕ್ಕೆ ಕ್ವಿಪ್. 'ರಾಲ್ಲೋಪಃ' (ಪಾ. ಸೂ. ೬-೪-೨೧) ಸೂತ್ರದಿಂದ ಛಕಾರಲೋಪ. ಹುರ್. 'ಚಿತೀ-ಸಂಜ್ಞಾನೇ.' ಇದಕ್ಕೆ ಕ್ವಿಪ್ ಬಂದಾಗ ಚಿತ್ ಎಂದಾಗುತ್ತದೆ. 'ಹುರಃ ಕೌಟಲ್ಯಾನಿ ಚೇತಯತೇ.' ಕುಟಿಲತನವನ್ನು ತಿಳಿದವನು. ಅಥವಾ ಹೃಧಾತುವಿಗೆ ವಿಚ್ ಬಂದಾಗ ಗುಣ. ಪೃಷೋದರಾದಿಪಠಿತವಾದುದರಿಂದ ಅಕಾರಕ್ಕೆ ಉಕಾರಾದೇಶ. ವಸ್ತುಗಳನ್ನು ತರುವವರನ್ನು ಜಾಗೃತಿಗೊಳಿಸುತ್ತಾನೆ. ಅಥವಾ ಅಪಹೃತ ಪದಾರ್ಥಗಳನ್ನು ಕೂಡಿ ಹಾಕುತ್ತಾನೆ. 'ತತ್ಪುರುಷೇ ಕೃತಿ ಬಹುಲಮ್' (ಪಾ. ಸೂ. ೬-೩-೧೪) ಸೂತ್ರದಿಂದ ಷಷ್ಠಿಗೆ ಅಲುಕ್. **'ಅಪಪ್ರೋಥನ್ತಃ ಸನುತರ್ಹುರಶ್ಚಿತಃ'** (ಋ. ಸಂ. ೭-೪-೨೪-೫) ॥

(೧೧) **ಮುಷೀವಾನ್** ॥ 'ಮುಷ–ಸ್ತೇಯೇ.' ಅಚ್‌ಪ್ರತ್ಯಯ. 'ಕೃದಿಕಾರಾದಕ್ತಿನಃ' ವಾರ್ತಿಕದಿಂದ ಜೀಷ್. ಮುಷೀ ಕಳ್ಳತನವೆಂದರ್ಥ. ಇದು ಉಳ್ಳವನು ಎಂಬರ್ಥದಲ್ಲಿ 'ಛಂದಸೀ ವನಿಪೌ' (ವಾ. ೫–೨–೧೨೨) ಸೂತ್ರದಿಂದ ವನಿಪ್. ಪರೋಕ್ಷವಾಗಿ ಅಪಹರಿಸುವವನು ಮುಷೀವಾನ್, ಪ್ರತ್ಯಕ್ಷವಾಗಿ ಅಪಹರಿಸುವವನು ಹುರಶ್ಚಿತ್ ಎಂದು ಮಾಧವರ ವ್ಯಾಖ್ಯಾನ. **"ಮುಷೀವಾಣಂ ಹುರಶ್ಚಿತಮ್"** (ಋ. ಸಂ. ೧–೩–೨೪–೩) ॥

(೧೨) **ಮಲಿಮ್ಲುಚಃ** ॥ ಮಲವುಳ್ಳವನು ಎಂಬರ್ಥದಲ್ಲಿ "ಜ್ಯೋತ್ಸ್ನಾತಮಿಸ್ರಾ—" (ಪಾ–ಸೂ–೫–೨–೧೧೪) ಸೂತ್ರದಿಂದ ಮಲಿನ ಶಬ್ದವು ನಿಪಾತಿತವಾಗುತ್ತದೆ. 'ಮ್ಲುಚ–ಸ್ತೇಯಕರಣೇ.' ಇಗುಪಧಲಕ್ಷಣ ಕಪ್ರತ್ಯಯ. ಮಲಿನಶ್ಚಾಸೌ ಮ್ಲುಚಶ್ಚಃ ಮಲಿಮ್ಲುಚಃ. ಪೃಷೋದರಾದಿಪಠಿತವಾದುದರಿಂದ ನಲೋಪ.

(೧೩) **ಅಘಶಂಸಃ** ॥ ಆಙ್‌ಪೂರ್ವಕವಾದ ಹಿಂಸಾರ್ಥಕ ಹನ್‌ಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' (ಪಾ. ಸೂ. ೩–೧–೧೦೧) ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಪೃಷೋದರಾದಿಪಠಿತವಾದುದರಿಂದ ಆಙಿಗೆ ಹ್ರಸ್ವ, ಹಕಾರಕ್ಕೆ ಘಕಾರ. ಅಘ ಎಂದಾಗುತ್ತದೆ. ಇದು ಉಪಪದವಾಗಿರುವಾಗ ಶಂಸಧಾತುವಿಗೆ ಅಚ್‌ಪ್ರತ್ಯಯ. ಕೊಲ್ಲುವ ಸ್ವಭಾವವುಳ್ಳವನಾಗಿ ಹೊಗಳಿ ಕೊಳ್ಳುವವನು. **"ಅಘಶಂಸಸ್ಯ ಕಸ್ಯಚಿತ್"** (ಋ. ಸಂ. ೧–೩––೨೪–೪) ॥

(೧೪) **ವೃಕಃ** ॥ ಋತ್ವಿಙ್‌ನಾಮದಲ್ಲಿ ವ್ಯಾಖ್ಯಾತವಾಗಿದೆ. (೩–೧೮–೪) ಮಾರ್ಗವನ್ನು ತಡೆಯುವವನು. **"ಯೋ ನಃ ಪೂಷನ್ನಘೋ ವೃಕಃ"** (ಋ. ಸಂ. ೧–೩–೨೪–೨)

ಹೀಗೆ ಹದಿನಾಲ್ಕು ಕಳ್ಳನ ಹೆಸರು ॥ ೨೪ ॥

ಸ್ತೇನಃ ಕಸ್ಮಾತ್ ಸಂಸ್ತ್ಯಾನಮಸ್ಮಿನ್ ಪಾಪಕಮಿತಿ ನೈರುಕ್ತಾಃ ॥ ೧೮ ॥

**ಸ್ತೇನಃ** :—ಎಂದರೆ ಕಳ್ಳನು. ಇವನು ಇತರರ ಸ್ವತ್ತನ್ನು ಅಪಹರಿಸುವ ಪಾಪ ಕೆಲಸವನ್ನು ಮಾಡುವುದರಿಂದ ಇವನಿಗೆ ಕಳ್ಳನೆಂದು ನಿರುಕ್ತಕಾರರು ಹೇಳುವರು.

———

ನಿರ್ಣೀತಾನ್ತರ್ಹಿತನಾಮಧೇಯಾನ್ಯುತ್ತರಾಣಿ ಷಟ್ ॥ ೧೯ ॥

(೧) ನಿಣ್ಯಮ್ (೨) ಸಸ್ವಃ (೩) ಸನುತಃ (೪) ಹಿರುಕ್
(೫) ಪ್ರತೀಚ್ಯಮ್ (೬) ಅಪೀಚ್ಯಮ್

ಇತಿ ಷಟ್‌ನಿರ್ಣೀತಾಂತರ್ಹಿತನಾಮಧೇಯಾನಿ ॥೨೫ ॥

(೧) **ನಿಣ್ಯಮ್** ॥ ನಿರ್ ಪೂರ್ವಕವಾದ ಣೀಞ್ ಧಾತುವಿಗೆ 'ಅಘ್ನ್ಯಾದಯಶ್ಚ' ಸೂತ್ರದಿಂದ ಯತ್‌ಪ್ರತ್ಯಯ, ಟಿಲೋಪ, ರೇಫಲೋಪಗಳು ಬಂದು ನಿಪಾತಿತವಾಗುತ್ತದೆ. ನಿಶ್ಚಯಿಸಲ್ಪಟ್ಟದ್ದು, ಹೊರಗೆಬಿಯ್ಯಲ್ಪಟ್ಟದ್ದು, ನಿರ್ಗತವಾದದ್ದು, ಅಡಗಿರುವುದು. **ವೃತ್ರಸ್ಯ ನಿಣ್ಯಂ ವಿಚರಂತ್ಯಾಪಃ'** (ಋ. ಸಂ. ೧-೨–೩೭-೫) ॥

(೨) **ಸಸ್ವಃ** ॥ ಸಮ್‌ಪೂರ್ವಕವಾದ ಗತ್ಯರ್ಥಕ ಸ್ವೃಧಾತುವಿಗೆ ವಿಚ್‌ಪ್ರತ್ಯಯ ಬಂದಾಗ ಗುಣ. ರಪರವಾಗಿ ಬರುತ್ತದೆ. ಬಹುಲಗ್ರಹಣದಿಂದ ಸಮಿನ ಮಕಾರಕ್ಕೆ ಲೋಪ. ಚನ್ನಾಗಿ ತಿಳಿಯಲ್ಪಟ್ಟದ್ದು, ಮೊರಗೆಹೋದದ್ದು ಎಂದರ್ಥ. **'ಸಸ್ವರ್ಹ ಯನ್ಮರುತೋ ಗೋತಮೋ ವಃ'** (**ಋ. ಸಂ. ೧-೬-೧೪-೪**)

(೩) **ಸುನತಂ**॥ (೪) **ಹಿರುಕ್**॥ ಇವೆರಡು ಸ್ವರಾದಿಗಳಲ್ಲಿ ಪಠಿತವಾದುದರಿಂದ ಅವ್ಯಯಗಳು. **'ಸನುತರ್ಯೇಹಿ ತಂ ತತಃ'** (**ಋ. ಸಂ. ೬-೬-೩೬-೩**) **'ಯ ಇಂ ದದರ್ಶ ಹಿರುಗಿನ್ನು ತಸ್ಮಾತ್'** (**ಋ. ಸಂ. ೨-೩-೨೦-೨**)

(೫) **ಪ್ರತೀಚ್ಯಮ್**॥ (೬) **ಅಪೀಚ್ಯಮ್**॥ ಪ್ರತಿ, ಅಪ ಉಪಸರ್ಗಗಳು ಪೂರ್ವದಲ್ಲಿರುವಾಗ ಚಿಧಾತುವಿಗೆ ಅಘ್ನ್ಯಾದಿಣಪಠಿತವಾದುದರಿಂದ ಯಪ್ರತ್ಯಯ, ಟಿಲೋಪಾದಿಗಳು ನಿಪಾತಿತವಾಗುತ್ತವೆ. ಪ್ರತೀಚ್ಯಕ್ಕೆ ನಿಗಮ ಹುಡುಕಬೇಕು. **'ನಾಮ ತ್ವಷ್ಟುರಪೀಚ್ಯಮ್'** (**ಋ-ಸಂ-೧-೬-೭-೫**) ಭಟ್ಟಭಾಸ್ಕರಮಿಶ್ರರು ಅಪಿಪೂರ್ವವಾದ ಅಂಚುಧಾತುವಿಗೆ 'ಋತ್ವಿಕ್‌ದಧೃಕ್-' ಸೂತ್ರದಿಂದ ಕ್ವಿನ್ ಬಂದಾಗ 'ಭವೇ ಛಂದಸಿ' (ಪಾ-ಸೂ-೪-೪-೧೧೦) ಸೂತ್ರದಿಂದ ಯತ್ ಪ್ರತ್ಯಯ. 'ಅಚಃ' ಸೂತ್ರದಿಂದ ಅಂಚುವಿನ ಅಕಾರಕ್ಕೆ ಲೋಪಬಂದಾಗ 'ಚೌ' (ಪಾ-ಸೂ-೬-೩-೧೩೮) ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ಅಪೀಚ್ಯ ಅಂದರೆ ಅಪ್ರಕಾಶವೆಂದು ವ್ಯಾಖ್ಯಾನಮಾಡಿರುತ್ತಾರೆ. ॥

ಹೀಗೆ ಆರು ನಿರ್ಣೀತ ಅಂತರ್ಹಿತನಾಮಗಳು ॥ ೨೫ ॥

---

## ನಿರ್ಣೀತಂ ಕಸ್ಮಾನ್ನಿರ್ಣಿಕ್ತಂ ಭವತಿ ॥೨೦॥

**ನಿರ್ಣೀತಂ** ಎಂದರೆ ನಿಶ್ಚಯಿಸಲ್ಪಟ್ಟಿರುವುದು ಎಂದು ಹೆಸರು. ಏಕೆಂದರೆ ಈ ಶಬ್ದಕ್ಕೆ ಸಂಶಯವಿಲ್ಲದಿರುವುದು ಎಂಬರ್ಥವಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

## ದೂರನಾಮಾನ್ಯುತ್ತರಾಣಿ ಪಂಚ ॥ ೨೧ ॥

ಮುಂದಿನ ಈ ಐದು ದೂರಾರ್ಥವನ್ನು ಹೇಳುವ ಪದಗಳು. ॥

(೧) ಆಕೇ (೨) ಪರಾಕೇ (೩) ಪರಾಚೈಃ (೪) ಆರೇ (೫) ಪರಾವತ

ಇತಿ ಪಂಚ ದೂರನಾಮಾನಿ । ೨೬ ।

(೧) **ಆಕೇ** (೨) **ಪರಾಕೇ** ॥ ಇಣ್-ಗತೌ. ಧಾತುವಿಗೆ ಆಙ್, ಪರಾ ಉಪಸರ್ಗಗಳು ಪೂರ್ವದಲ್ಲಿರುವಾಗ 'ಪಿನಾಕಾದಯಶ್ಚ' [ಉ-೪-೧೫] ಸೂತ್ರದಿಂದ ಆಕಪ್ರತ್ಯಯ,ಧಾತುಲೋಪ ಬಂದು ನಿಪಾತಿತವಾಗುತ್ತವೆ. ಅಥವಾ ಆಙ್, ಪರಾಉಪಸರ್ಗಪೂರ್ವಕ ಕೃಧಾತುವಿಗೆ 'ಅನ್ಯೇಷ್ವಪಿ ದೃಶ್ಯತೇ' ಸೂತ್ರದಿಂದ ಡಪ್ರತ್ಯಯ. ಡಿತ್ತಾದುದರಿಂದ ಟಿಲೋಪ.

ಸಂಕಲಿತವಾದಂತಿರುವುದು. ಆಕೇ ಎಂಬುದಕ್ಕೆ ನಿಗಮ ಹುಡುಕಬೇಕು. **'ಕ್ಷಯನ್ತಾನುಸ್ಯ ರಜಸಃ ಪರಾಕೇ' [ಋ. ಸಂ. ೫–೬–೨೫–೫]**

(೩) **ಪರಾಚೈಃ ||** ನೀಚೈಃ ಎಂಬುದೇ ಪರಾಚೈಃ ಎಂಬುದರಿಂದ ಹೇಳಲ್ಪಡುವುದೆಂದು ಭಟ್ಟಭಾಸ್ಕರಮಿಶ್ರರ ಮತ. ನಿಗಮ ಹುಡುಕಬೇಕು. ||

(೪) **ಆರೇ ||** ಇದು ಅವ್ಯಯ. **'ನ ಹಿ ತ್ವದಾರೇ ನಿಮಿಷಶ್ಚ ನೇಶೇ' (ಋ-ಸಂ-೨–೭–೧೦–೧) ||**

(೫) **ಪರಾವತಃ ||** ಈರ ಧಾತು ಅಥವಾ ಗತ್ಯರ್ಥಕ ವಹ ಧಾತು ಇವುಗಳಿಗೆ ಸಂಸಾಧನರೂಪಾರ್ಥದಲ್ಲಿ ಪ್ರ ಅಥವಾ ಪರಾ ಉಪಸರ್ಗಪೂರ್ವದಲ್ಲಿರುವಾಗ 'ಉಪಸರ್ಗಾಚ್ಛಂದಸಿ ಧಾತ್ವರ್ಥೇ' (ಪಾ–ಸೂ–೫–೧–೧೧೮) ಸೂತ್ರದಿಂದ ವತಿ ಪ್ರತ್ಯಯ. ಪೃಷೋದರಾದಿಗಣಪಠಿತವಾದುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ಹೋಗುವಂತೆ ಮಾಡುತ್ತದೆ. ಹೋದಂತೆ ಮುಗಿಯದಿರುವುದು. **'ಪರಾವತಂ ಪರಮಾಂ ಗನ್ತವಾ ಉ' (ಋ–ಸಂ–೮–೫–೩–೪)**||

ಹೀಗೆ ಐದು ದೂರನಾಮುಗಳು || ೨೬ ||

## ದೂರಂ ಕಸ್ಮಾದ್ ದ್ರುತಂ ಭವತಿ ದುರಯಂ ವಾ || ೨೨ ||

ದೂರ ಎಂದಾದು ಹೇಗೆ? ದಾರಿ ದೊಡ್ಡದಾದುದರಿಂದ ನಡೆದಂತೆ ಮುಂದೆ ಓಡಿದಂತಾಗುತ್ತದೆ, ಅಥವಾ ದುಃಖದಿಂದ ಹೊಂದಲ್ಪಡುವುದರಿಂದ ದೂರವೆಂದಾಗಿದೆ.

## ಪುರಾಣನಾಮಾನ್ಯುತ್ತರಾಣಿ ಷಟ್ || ೨೩ ||

ಮುಂದಿನ ಆರು ಪದಗಳು ಪುರಾಣನಾಮುಗಳು

## [೧] ಪ್ರತ್ನಮ್ [೨] ಪ್ರದಿವಃ [೩] ಪ್ರವಯಾಃ [೪] ಸನೇಮಿ [೫] ಪೂರ್ವ್ಯಮ್ [೬] ಅಹ್ನಾಯ

ಇತಿ ಷಟ್‌ಪುರಾಣನಾಮಾನಿ || ೨೭ ||

(೧) **ಪ್ರತ್ನಮ್ ||** 'ನಶ್ಚ ಪುರಾಣೇ ಪ್ರಾತ್' (ಪಾ–ಸೂ–೫–೪–೨೫–.ವಾ.) ಸೂತ್ರದಿಂದ ಪುರಾಣಾರ್ಥ ಕೊಡುವ ಪ್ರಶಬ್ದಕ್ಕೆ ನಪ್ರತ್ಯಯ. ಪೂರ್ವಸೂತ್ರದಿಂದ.ತಪ್. ಪ್ರತ್ನ ಎಂದಾಗುತ್ತದೆ. **'ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ'** (ಋ–ಸಂ–೪–೨–೨೩–೧)

(೨) **ಪ್ರದಿವಃ ||** 'ಯದೀಮನು ಪ್ರದಿವಃ' ಎಂಬಲ್ಲಿ ಪುಲ್ಲಿಂಗದ್ವಿವಚನಾಂತವಾಗಿಯೂ, 'ಕ್ಷತ್ರಂ ರಾಜಾನಾ ಪ್ರದಿವಃ' ಎಂಬಲ್ಲಿ ಷಷ್ಠ್ಯೇಕವಚನಾಂತವಾಗಿಯೂ, 'ಇಂದ್ರಾಯ ಸೋಮಾಃ ಪ್ರದಿವಃ' ಎಂಬಲ್ಲಿ ಪ್ರಥಮಾಬಹುವಚನಾಂತವಾಗಿಯೂ, ಶ್ರುತವಾದುದರಿಂದ ಇದು ಸಕಾರಾಂತವಾದ ಅವ್ಯಯವೆಂದು ಹೇಳುತ್ತಾರೆ. 'ಪ್ರಗತಾನಿ ದಿನಾನ್ಯಸ್ಯ ಎಂಬರ್ಥದಲ್ಲಿ ಪೃಷೋದರಾದಿಗಣಪಠಿತವಾದುದರಿಂದ ನಕಾರಕ್ಕೆ ವಕಾರಾದೇಶ. ನಿಗಮದಲ್ಲಿ ವಚನವ್ಯತ್ಯಯವನ್ನವಲಂಬಿಸಬೇಕು.

(೩) **ಪ್ರವಯಾಃ** || 'ಪ್ರಗತಂ ವಯಂ ಯಸ್ಯ ಬಹುಕಾಲಕಳೆದದ್ದು ಪುರಾಣ.

(೪) **ಸನೇಮಿ** || ಇದು ಪುರಾಣಾರ್ಥಕೊಡುವ ಅವ್ಯಯ. ' **ಸನೇಮಿ ಸಖ್ಯಂ ಸ್ವಪಸ್ಯಮಾನಃ** (ಋ. ಸಂ. ೧-೫-೨-೪)

(೫) **ಪೂರ್ವ್ಯಮ್** || " ಪೂರ್ವ-ಪೂರಣೇ " (ಭ್ವಾ-ಪ) ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ ವಯೋಪರಿಮಿತಿಯನ್ನು ಪೂರ್ಣಮಾಡಿರುವುದು. ಪೂರ್ವಕಾಲದಲ್ಲಿ ಉಂಟಾದ್ದು ಪೂರ್ವ್ಯ " ಭವೇ ಛಂದಸಿ " ಸೂತ್ರದಿಂದ ಪೂರ್ವಶಬ್ದದ ಮೇಲೆ ಯತ್‌ಪ್ರತ್ಯಯ. ಅಥವಾ ಪೂರ್ವಿಕರಿಂದ ಮಾಡಲ್ಪಟ್ಟದ್ದು ಎಂಬರ್ಥದಲ್ಲಿ "ಪೂರ್ವೈಃ ಕೃತಮಿನಯೌ ಚ (ಪಾ-ಸೂ-೪-೪-೧೩೩) ಸೂತ್ರದಿಂದ ಯಪ್ರತ್ಯಯ. **ಪೂರ್ವ್ಯಂ ಹೋತರಸ್ಯ ನಃ** (ಋ. ಸಂ. ೧-೨.೨೦-೫)।

(೬) **ಅಹ್ನಾಯ** || ಇದು ಪುರಾಣಾರ್ಥಕಾವ್ಯಯ. ನಿಗಮ ಹುಡುಕಬೇಕು.

ಹೀಗೆ ಆರು **ಪುರಾಣನಾಮಗಳು** ||೨೭||

**ಪುರಾಣಂ ಕಸ್ಮಾತ್ ಪುರಾ ನವಂ ಭವತಿ || ೨೪ ||**

ಪುರಾಣವೆಂದು ಹೇಗಾಗಿದೆ? ಹಿಂದೆ ಹೊಸದಾಗಿರುವುದು. ವರ್ತಮಾನಕಾಲದಲ್ಲಿ ಹೊಸತಾದುದಲ್ಲ.

**ನವನಾಮಾನ್ಯುತ್ತರಾಣಿ ಷಳೇವ ||೨೫||**

ಮುಂದಿನ ಈ ಆರು ಹೊಸದು ಎಂಬರ್ಥ ಹೇಳುವ ಪದಗಳು ||

[೧] ನವಮ್ [೨] ನೂತ್ನಮ್ [೪] ನವ್ಯಮ್ [೫] ಇದಾ [೬] ಇದಾನೀಮ್ ।

**ಇತಿ ಷಡೇವ ನವನಾಮಾನಿ ||೨೮||**

(೧) **ನವಮ್** || ' ಣು-ಸ್ತುತೌ ' ಧಾತ್ವಾದಿಗೆ ನತ್ವ " ಋದೋರಪ್ ' (ಪಾ-ಸೂ ೩-೩-೫೭) ಸೂತ್ರದಿಂದ ಅಪ್‌ಪ್ರತ್ಯಯ ಗುಣ, ಅವಾದೇಶ ಈಗತಾನೇಮಾಡಲ್ಪಟ್ಟದ್ದರಿಂದ ರಮಣೀಯವಾದುದರಿಂದ ಸ್ತುತಿಸಲ್ಪಡುವುದು ನೂತನ ವಾದುದು. " **ನವೇನ ಪೂರ್ವಂ ದಯಮಾನಾಸ್ಯ** "

(೨) **ನೂತ್ನಮ್**|| ಪೂರ್ವೋಕ್ತವಾದ ಧಾತುವಿಗೆ ' ರಾಸ್ನಾಸಾಸ್ನಾ-' (ಉ-೨-೧೩) ಸೂತ್ರದಿಂದ ನಪ್ರತ್ಯಯ ದೀರ್ಘ ಬಂದು ನಿಪಾತಿತವಾಗುತ್ತದೆ. ಹಿಂದಿನಂತೆಯೆ; ಅರ್ಥ. **ನೂಯತೇ " ನೂತ್ನಾ ಇದಿಂದ್ರ ತೇ ವಯಮೂತೀ "** (ಋ. ಸ. ೬-೨-೨-೨)

(೩ **ನೂತನಮ್** || ನವಪದಕ್ಕೆ ನೂ ಆದೇಶ ' ತ್ನಪ್ತನಪ್ಖಾಶ್ಚ ವಕ್ತವ್ಯಾಃ ವಾರ್ತಿಕದಿಂದ ತನಪ್‌ಪ್ರತ್ಯಯ. ಹೊಸತಾದುದು. **ಈಡ್ಯೋ ನೂತನ ನೈರುತ** (ಋಂ.ಸ. ೧-೧-೧-೩)

(೪) **ನವ್ಯಮ್** || ನವಮೇವ ನವ್ಯಮ್. ' ರಾಜಾದಿಭ್ಯೋ ಯತ್ ' (ಪಾ-ಸೂ-೫-೩-೧೦೩) ಸೂತ್ರದಿಂದ ಸ್ವಾರ್ಥದಲ್ಲಿ ಯತ್‌ಪ್ರತ್ಯಯ. ಅಥವಾ ನುಧಾತುವಿಗೆ 'ಅಚೋ ಯತ್' ಸೂತ್ರದಿಂದ ಯತ್‌ಪ್ರತ್ಯಯ ಬಂದಾಗ ಗುಣ.

' ವಾಂತೋ ಯಿ ಪ್ರತ್ಯಯೇ ' ಸೂತ್ರದಿಂದ ಅವಾದೇಶ. **'ಇಂದ್ರಾಗ್ನೀ ಸ್ತೋಮ ಜನಯಾಮಿ ನವ್ಯಮ್'** (ಋ–ಸಂ–೧–೭–೨೮–೨)

**(೫)** **ಇದಾ** ‖ 'ತಯೋರ್ದಾಹಿಲೌ ಚ ಛಂದಸಿ ' (ಪ್ರಾ–ಸೂ–೫–೩–೨೦) ಸೂತ್ರದಿಂದ ಇದಂ ಶಬ್ದದಮೇಲಿ ಸಪ್ತಮೀ ಬಂದಾಗ ಸಪ್ತಮ್ಯಂತದಮೇಲೆ ದಾಪ್ರತ್ಯಯ. **' ಇದಾ ಹಿ ವ ಉಪಸ್ತುತಿಮ್ '** (ಋ–ಸಂ–೬–೨–೩೩–೧) ‖

**(೬)** **ಇದಾನೀಮ್** ‖ 'ದಾನೀಞ್ಚ' (ಪ್ರಾ–ಸೂ–೫–೩–೧೮) ಸೂತ್ರದಿಂದ ಸಪ್ತಮ್ಯಂತ ಇದಂಶಬ್ದಕ್ಕೆ ದಾನೀಂ ಪ್ರತ್ಯಯ **' ಇದಾನೀಮಹ್ನ ಉಪವಾಚ್ಯೋ ನೃಭಿಃ '** (ಋ. ಸಂ ೩–-೮-೫–೧)

ಹೀಗೆ ಆರು (ನವ) ಹೊಸದು ಎಂಬರ್ಥಕೊಡುವ ಶಬ್ದಗಳು ‖ ೨೮ ‖

---

ನವಂ ಕಸ್ಮಾದಾನೀತಂ ಭವತಿ ‖೨೬‖ ‖೧೯‖

ನವ ಹೇಗಾಗಿದೆ ? ಆ=ಈಗ ತಾನೇ ನೀತಂ=ಹೊಂದಿದ್ದು. ಈಗ ತಾನೇ ನಿರ್ಮಿತವಾದುದರಿಂದ ಪ್ರಶಂಸಾರ್ಹವಾಗಿರುವುದು ಎಂದರ್ಥ. ಇದು ವಿಶೇಷ್ಯಾಧೀನ ಲಿಂಗವನ್ನು ಹೊಂದುತ್ತದೆ. ‖

**ಇತ್ಯೇಕೋನವಿಂಶಃ ಖಂಡಃ**

ಇಲ್ಲಿಗೆ ಹತ್ತೊಂಭತ್ತನೆಯ ಖಂಡವು ಸಮಾಪ್ತವು

---

## ಅಥ ವಿಂಶಃ ಖಂಡಃ

### ಇಪ್ಪತ್ತನೆಯ ಖಂಡವು

ದ್ವಿಶ ಉತ್ತರಾಣಿ ನಾಮಾನಿ ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ ಪ್ರಪಿತ್ವೇ ಪ್ರಾಪ್ತೇಽಭೀಕೇಽಭ್ಯಕ್ತೇ। ಆಪಿತ್ವೇ ನಃ ಪ್ರಪಿತ್ವೇ ತೂಯ ಮಾ ಗಹಿ । ಅಭೀಕೇ ಚಿದು ಲೋಕಕೃದಿತ್ಯಪಿ ನಿಗಮೌ ಭವತಃ। ದಭ್ರಮರ್ಭಕಮಿತ್ಯಲ್ಪಸ್ಯ । ದಭ್ರಂ ದಭ್ನೋತೇಃ ಸುದಮ್ಭಂ ಭವತ್ಯರ್ಭಕಮವಹತಂ ಭವತಿ ಉಪೋಪ ಮೇ ಪರಾ ಮೃಶ ಮಾ ಮೇ ದಭ್ರಾಣಿ ಮನ್ಯಥಾಃ ।ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯ ಇತ್ಯಪಿ ನಿಗಮೌ ಭವತಃ। ತಿರಃ ಸತ ಇತಿ ಪ್ರಾಪ್ತಸ್ಯ ತಿರಸ್ತೀರ್ಣಂ

ಭವತಿ ಸತಃ ಸಂಸೃತಂ ಭವತಿ। ತಿರಶ್ಚಿದರ್ಯಯಾ ಪರಿವರ್ತಿರ್ಯಾತ-
ಮದಾಭ್ಯಾ । ಪಾತ್ರೇವ ಭಿನ್ದನ್ ಸತ ಏತಿ ರಕ್ಷಸ ಇತ್ಯಪಿ ನಿಗಮೌ
ಭವತಃ । ತ್ವೋ ನೇಮ ಇತ್ಯರ್ಧಸ್ಯ ತ್ವೋಽಪತತೋ ನೇಮೋಽ-
ಪತೀತೋರ್ಧಂ ಹರತೇರ್ವಿಪರೀತಾದ್ಧಾರಯತೇರ್ವಾ ಸ್ಯಾದುದ್ಧೃತಂ
ಭವತ್ಯೃಧ್ನೋತೇರ್ವಾ ಸ್ಯಾದೃದ್ಧತಮೋ ವಿಭಾಗಃ ಪೀಯತಿ ತ್ವೋ
ಅನು ತ್ವೋ ಗೃಣಾತಿ । ನೇಮೋ ದೇವಾ ನೇಮೋಽಸುರಾ ಇತ್ಯಪಿ
ನಿಗಮೌ ಭವತಃ । ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಂ ನಕ್ಷತ್ರಾಣಿ
ನಕ್ಷತೇರ್ಗತಿಕರ್ಮಣಾ ನೇಮಾನಿ ಕ್ಷತ್ರಾಣೀತಿ ಚ ಬ್ರಾಹ್ಮಣಮೃಕ್ಷಾ
ಉದೀರ್ಣಾನೀವ ಖ್ಯಾಯಂತೇ ಸ್ತೃಭಿಸ್ತೀರ್ಣಾನೀವ ಖ್ಯಾಯಂತೇ ।
ಅಮೀ ಯ ಋಕ್ಷಾ ನಿಹಿತಾ ಚ ಉಚ್ಚಾ । ಪಶ್ಯನ್ತೋ ದ್ಯಾಮಿವ
ಸ್ತೃಭಿರಿತ್ಯಪಿ ನಿಗಮೌ ಭವತಃ । ವಮ್ರಾಭಿರುಪಜಿಹ್ವಿಕಾ ಇತಿ
ಸೀಮಿಕಾನಾಂ ವಮ್ರ್ಯೋ ವಮನಾತ್ ಸೀಮಿಕಾ ಸ್ಯಮನಾದುಪಜಿ-
ಹ್ವಿಕಾ ಉಪಜಿಘ್ರ್ಯಃ । ಯದತ್ತ್ಯುಪಜಿಹ್ವಿಕಾ ಯದ್ವಮ್ರೋ
ಅತಿಸರ್ಪತೀತ್ಯಪಿ ನಿಗಮೋ ಭವತ್ಯೂರ್ದರಂ ಕೃದರಮಿತ್ಯಾವಪನ
ಸ್ಯೋರ್ದರಮುದೀರ್ಣಂ ಭವತ್ಯೂರ್ಜೋ ದೀರ್ಣಂ ವಾ । ತಮೂರ್ದರಂ
ನ ಪೃಣತಾ ಯವೇನೇತ್ಯಪಿ ನಿಗಮೋ ಭವತಿ । ತಮೂರ್ದರಮಿವ
ಪೂರಯತಿ ಯವೇನ ಕೃತದರಂ ಕೃದರಂ ಭವತಿ। ಸಮಿದ್ಧೋ ಅಞ್ಜನ್
ಕೃದರಂ ಮತೀನಾಮಿತ್ಯಪಿ ನಿಗಮೋ ಭವತಿ ॥ ೨೦ ॥

———

ದ್ವಿಶ ಉತ್ತರಾಣಿ ನಾಮಾನಿ ಷಡ್ವಿಂಶತಿಃ ॥ ೧ ॥

ಪೃಥಿವಿಯಿಂದ ನವನಾಮವವರೆಗೆ ಒಂದರ್ಥಕ್ಕೆ ಅನೇಕ ನಾಮಗಳು ಹೇಳಿವೆ. ಈಗ 'ಪ್ರಪಿತ್ವೇ ಅಭೀಕೇ—' ಎಂದು ಆರಂಭಿಸಿ 'ದ್ಯಾವಾಪೃಥಿವೀ—' ನಾಮದವರೆಗೆ ಒಂದೊಂದಕ್ಕೆ ಎರಡೆರಡು ನಾಮಗಳು ವಾಚಕವಾಗುತ್ತವೆ.

[೧] ಪ್ರಪಿತ್ವೇ [೨] ಅಭೀಕೇ [೩] ದಭ್ರಮ್ [೪] ಅರ್ಭಕಮ್
[೫] ತಿರಃ [೬] ಸತಃ [೭] ತ್ವಃ [೮] ನೇಮಃ [೯] ಋಕ್ಷಾಃ

[೧೦] ಸ್ತೃಭಿಃ [೧೧] ವಮ್ರೀಭಿಃ [೧೨] ಉಪಜಿಹ್ವಿಕಾ [೧೩] ಊರ್ದರಮ್ [೧೪] ಕೃದರಮ್ [೧೫] ರಂಭಃ [೧೬] ಪಿನಾಕಮ್ [೧೭] ಮೇನಾ [೧೮] ಗ್ನಾಃ [೧೯] ಶೇಪಃ [೨೦] ವೈತಸಃ [೨೧] ಅಯಾ [೨೨] ಏನಾ [೨೩] ಸಿಷಕ್ತು [೨೪] ಸಚತೇ [೨೫] ಭ್ಯಸತೇ [೨೬] ರೇಜತೇ

ಇತಿ ಷಡ್ವಿಂಶತಿರ್ದ್ವಿಶ ಉತ್ತರಾಣಿ ನಾಮಾನಿ ॥ ೨೯ ॥

ಇವು ಭಾಷ್ಯಾಕಾರರಿಂದಲೇ ವ್ಯಾಖ್ಯಾತವಾಗಿವೆ.—

(೧) **ಪ್ರಪಿತ್ವೇ** ॥ (೨) **ಅಭೀಕೇ** ॥ ಇವೆರಡೂ ಹತ್ತಿರವಿರುವುದನ್ನು ಹೇಳುತ್ತವೆ. ಪ್ರಪೂರ್ವಕವಾದ ಆಪ್‌ಧಾತುವಿಗೆ ಕ್ತಪ್ರತ್ಯಯ ಬಂದಾಗ ಪ್ರಾಪ್ತ ಎಂದಾದಾಗ ಅದಕ್ಕೆ ಪ್ರಪಿತ್ವಭಾವ ಬರುತ್ತದೆ. ಅಥವಾ ‘ ಇತ್ವನಾದಯೋನನ್ಯೇಭ್ಯೋಪಿ ದೃಶ್ಯಂತೇ ’ ವಚನದಿಂದ ಆಪ್‌ಧಾತುವಿಗೆ ಇತ್ವನ್‌ಬಂದಾಗ ಧಾತುವಿನ ಆಕಾರಕ್ಕೆಲೋಪ. ಪಿತ್ವಪದಕ್ಕೆ ಆಸನ್ನ=ಹತ್ತಿರವೆಂದರ್ಥ. ಪ್ರಕೃಷ್ಟದೇಶಕಾಲಪ್ರಾಪ್ತಿಗೆ ಪ್ರಪಿತ್ವವೆಂದು ಹೆಸರು. ಅಭೀಕೇ ಎಂಬಲ್ಲಿ ಅಭಿ ಉಪಸರ್ಗ, ‘ ಅಲೀಕಾದಯಶ್ಚ ’ (ಉ—೪—೨೫) ಸೂತ್ರದಿಂದ ಅಂಚುಧಾತುವಿಗೆ ಈಕನ್‌ಪ್ರತ್ಯಯ, ಧಾತುಲೋಪ ನಿಪಾತಿತವಾಗುತ್ತದೆ. ಆಸನ್ನವೆಂದೇ ಅರ್ಥ. ಉಪಸರ್ಗಹಿತವಾಗಿ ಸಪ್ತಮ್ಯಂತವಾಗಿ ಮಂತ್ರಗಳಲ್ಲಿ ದೃಷ್ಟವಾದುದರಿಂದ ಹಾಗೆಯೇ ಹೇಳಿದೆ. **ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ** (ಋ. ಸಂ. ೫-೭-೩೦-೩) “ **ಅಭೀಕೇ ಚಿದು ಲೋಕಕೃತ್** ” (ಋ.ಸ. ೮.೭--೨೧-೧)

(೩) **ದಭ್ರಮ್** ॥ (೪) **ಅರ್ಭಕಮ್** ॥ ಇವೆರಡೂ ಅಲ್ಪನಾಮಗಳು. ವಧಾರ್ಥಕ ದನ್‌ಭ್‌ಧಾತುವಿಗೆ. ‘ಸ್ಫಾಯಿತಂಚಿ—’ (ಉ. ೨-೧೨) ಸೂತ್ರದಿಂದ ರಕ್‌ಪ್ರತ್ಯಯ. ಕಿತ್ತಾದುದರಿಂದ ‘ಅನಿದಿತಾಂ—’ (ಪಾ. ಸೂ. ೬—೪—೨೪) ಸೂತ್ರದಿಂದ ಧಾತುವಿನ ನಕಾರಕ್ಕೆ ಲೋಪ. ಅಲ್ಪವಾದುದರಿಂದ ಸುಲಭವಾಗಿ ಭೇದಯೋಗ್ಯವಾದದ್ದೆಂದರ್ಥ. ಹರಣಾರ್ಥಕ ಹೃಧಾತುವಿಗೆ ‘ಅರ್ಭಕಂ ಚ ಪೃಥುಕಪಾಕಾ ವಯಸಿ’ ಎಂಬುದರಿಂದ ಕಪ್ರತ್ಯಯ, ಹಕಾರಕ್ಕೆ ಭಕಾರ, ಗುಣ, ರ ಪರವಾಗಿ ಬಂದಾಗ ಅಕಾರ ಅಧಿಕವಾಗಿ ಬಂದು ನಿಪಾತಿತವಾಗಿದೆ. ನ್ಯೂನಪರಿಮಾಣವುಳ್ಳದ್ದೆಂದರ್ಥ. **“ಮಾ ಮೇ ದಭ್ರಾಣಿ ಮನ್ಯಥಾ”** (ಋ. ಸಂ. ೨—೧—೧೧—೭) **“ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ”** (ಋ. ಸಂ. ೧—೨—೨೪—೩) ॥

(೫) **ತಿರಃ** ॥ (೬) **ಸತಃ** ॥ ಪ್ರಾಪ್ತ=ಹೊಂದಲ್ಪಟ್ಟದ್ದು ಎಂಬರ್ಥ ಕೊಡುತ್ತವೆ. ಅಪ್ರಾಪ್ತದ ಹೆಸರೆಂದೂ ಕೆಲವರ ಮತ. ತ್ರೃಧಾತುವಿಗೆ ಅಸುನ್ ಬಂದಾಗ ಬಹುಲಗ್ರಹಣದಿಂದ ಗುಣದ ಅಕಾರಕ್ಕೆ ಇಕಾರಾದೇಶ. ದಾಟಲ್ಪಟ್ಟದ್ದು ಪ್ರಾಪ್ತ, ಆಗತವಾದದ್ದು ಎಂದರ್ಥ. ಸೃಧಾತುವಿಗೆ ಅಸುನ್ ಬಂದಾಗ ರೇಫಕ್ಕೆ ತಕಾರಾದೇಶ. ಪ್ರಸರಿಸಲ್ಪಟ್ಟದು ಎಂದರ್ಥ. ಸೃಧಾತುವಿಗೆ ಅಸುನ್ ಬಂದಾಗ ರೇಫಕ್ಕೆ ತಕಾರಾದೇಶ. ಪ್ರಸರಿಸಲ್ಪಟ್ಟದ್ದು ಎಂದರ್ಥ. **“ತಿರಶ್ಚಿದರ್ಯಯಾ ಪರಿ”** (ಋ. ಸಂ. ೪—೪—೧೬—೨) **“ಪಾತ್ರೇವಭಿನ್ದನ್ ತ್ಸತ ಏತಿ ರಕ್ಷಸಃ”** (ಋ. ಸಂ. ೫—೭—೯—೧)

(೭) ತ್ವಃ ॥(೮) ನೇಮಃ ॥ ಅರ್ಧದ ಹೆಸರು. ಸರಿಯಾಗಿ ಎರಡುಮಾಡಿರುವ ಅರ್ಧ. 'ತ್ವಃ' ಸಮುದಾಯದಿಂದ ಬೇರೆಯಾದದ್ದು ಎಂದರ್ಥ. ತನ್ ಧಾತುವಿನ ಉಪಧಾವರ್ಣದ (ಅ) ಪೂರ್ವಕ್ಕೆ ಉಕಾರ ಅಧಿಕವಾಗಿ ಬಂದಾಗ ಯಣಾದೇಶ. ತ್ವನ್ ಎಂಬಲ್ಲಿ ನಕಾರಕ್ಕೆ ವಿಸರ್ಗವೆಂದು ಸ್ಕಂದಸ್ವಾಮಿಯಭಾಷ್ಯ. 'ಸರ್ವನಿಘೃಷ್ವರಿಷ್ವ—' (ಉ–೧–೧೫೧) ಸೂತ್ರದಿಂದ ವನ್‌ಪ್ರತ್ಯಯ, ಟಿಲೋಪಗಳು ಬಂದು ತ್ವ ಎಂದು ನಿಪಾತಿತವಾಗಿದೆ.

ನೇಮಶಬ್ದ ಅನ್ನನಾಮದಲ್ಲಿ ವ್ಯಾಖ್ಯಾತವಾಗಿದೆ. ಸರ್ವಾದಿಗಣದಲ್ಲಿ ಇದು ಪಠಿತವಾಗಿದೆ. ಸಮುದಾಯದಿಂದ ಬೇರೆ ಮಾಡಲ್ಪಟ್ಟದೆಂದರ್ಥ. **'ಪೀಯತಿ ತ್ವೋ ಅನುತ್ವೋ ಗೃಣಾತಿ'** (ಋ. ಸಂ. ೨–೨–೧೬–೨) **'ಪ್ರ ನೇಮಸ್ಮಿನ್ ದದೃಶೇ ಸೋಮೋ ಅಂತಃ '(ಋ. ಸಂ. ೮.೧–೬–೫)**

[೯] **ಋಕ್ಷಾಃ** ॥ [೧೦] **ಸ್ತೃಭಿಃ** ॥ ಇವು ನಕ್ಷತ್ರನಾಮಗಳು. 'ಋಷ–ಗತೌ' [ತು–ಪ] ಇದಕ್ಕೆ 'ಇಗುಪಧಾತ್ ಕಿತ್' [ಉ–೪–೧೦೬] ಸೂತ್ರದಿಂದ ಕಿದಿನ್‌ಪ್ರತ್ಯಯ. ಉತ್‌ಉಪಸರ್ಗ ವಿಶಿಷ್ಟಾರ್ಥವನ್ನು ಧಾತುವೇ ಹೇಳುವುದರಿಂದ ಮೇಲಕ್ಕೆ ಎತ್ತಲ್ಪಟ್ಟವುಗಳಂತೆ ಪ್ರಕಾಶಿಸುತ್ತವೆಯೆಂದರ್ಥ. 'ಸ್ತೃಞ್–ಆಚ್ಛಾದನೇ' ಕರ್ಮಾರ್ಥದಲ್ಲಿ ಔಣಾದಿಕ ಕ್ವಿಪ್‌ಪ್ರತ್ಯಯ. ಬಹುಲಗ್ರಹಣದಿಂದ ಹ್ರಸ್ವವಿದ್ದರೂ ತುಗಾಗಮ ಬರುವುದಿಲ್ಲ. ಪ್ರಸರಿಸಿ ವಿಸ್ತೀರ್ಣವಾಗಿ ಪ್ರಕಾಶಿಸುತ್ತವೆಯೆಂದರ್ಥ. **"ಅಮೀ ಯ ಋಕ್ಷಾ ನಿಹಿತಾ ಸ ಉಚ್ಚಾ"** [ಋ. ಸಂ. ೧–೨–೧೪–೫] **"ಪಶ್ಯಂತೀ ದ್ಯಾಮಿವ ಸ್ತೃಭಿಃ"** [ಋ. ಸಂ. ೩–೫–೬–೩] ॥

[೧೧] **ವಮ್ರೀಭಿಃ** ॥ [೧೨] **ಉಪಜಿಹ್ವಿಕಾ** ॥ ಇವೆರಡೂ ಇರುವೆಗಳ ಹೆಸರು. ವಮ್ರಶಬ್ದ ಹ್ರಸ್ವನಾಮದಲ್ಲಿ ವ್ಯಾಖ್ಯಾತವಾಗಿದೆ. (೩–೩–೭) ನೀರನ್ನು ಕಕ್ಕಿ ವಸ್ತುವನ್ನು ಮೃದುವಾಗಿ ಮಾಡುತ್ತವೆ. ಇದು ಸ್ತ್ರೀಪುಲ್ಲಿಂಗವೆರಡರಲ್ಲಿ ಇದ್ದರೂ ಸ್ತ್ರೀಲಿಂಗದಲ್ಲಿ ಪ್ರಸಿದ್ಧವಾದುದರಿಂದ ಸ್ತ್ರೀಲಿಂಗಪದ ಇಲ್ಲಿ ಹೇಳಿದೆ. ಜಾತಿವಾಚಕವಾದುದರಿಂದ "ಜಾತೇರಸ್ತ್ರೀ—" ಸೂತ್ರದಿಂದ ಙೀಷ್. ತೃತೀಯಾ ಬಹುವಚನಾಂತರೂಪ. ಘ್ರಾಧಾತುವಿಗೆ 'ಶೇವಯಹ್ವ ಜಿಹ್ವಾ—' (ಉ. ೧–೧೫೨) ಸೂತ್ರದಿಂದ ವಪ್ರತ್ಯಯ ಬಂದು ನಿಪಾತಿತವಾಗಿದೆ. ಸಂಜ್ಞಾ ತೋರುವಾಗ ಕನ್‌ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್. 'ಕೇಣಃ' ಸೂತ್ರದಿಂದ ಹ್ರಸ್ವ. ಉಪಜಿಹ್ವಕಾ ಎಂದಿರುವಾಗ 'ಪ್ರತ್ಯಯಸ್ಥಾತ್'—' ಸೂತ್ರದಿಂದ ಕಕಾರದ ಪೂರ್ವದಲ್ಲಿರುವ ಅಕಾರಕ್ಕೆ ಇತ್ವ. ಇರುವೆಗಳಿಗೆ ಘ್ರಾಣೇಂದ್ರಿಯ ಪಟುವಾದುದರಿಂದ ಪದಾರ್ಥಗಳನ್ನು ಮೂಸಿ ತಿಳಿಯುತ್ತವೆ. ನೀರನು ರಕ್ಷಿಸುತ್ತವೆಯೆಂದರ್ಥ. **"ಯದತ್ಯುಪಜಿಹ್ವಿಕಾ ಯದ್ವಮ್ರೋ ಅತಿಸರ್ಪತಿ"** [**ಋ. ಸಂ. ೬–೭–೧೨–೬,** ಸ್ತ್ರೀಲಿಂಗಕ್ಕೆ **"ವಮ್ರೀಭಿಃ ಪುತ್ರಮಗ್ರುವೋ ಅದಾನಮ್"** (**ಋ. ಸಂ. ೩.೬.೨.೪**) ॥

[೧೩] **ಊರ್ದರಮ್** ॥ [೧೪] **ಕೃದರಮ್** ॥ ಇವೆರಡೂ ವಂದರಿಗೆ (ಜರಡಿ) ಹೆಸರು. ಉತ್ ಉಪಸರ್ಗ ಪೂರ್ವಕವಾದ ವಿದಾರಣಾರ್ಥಕ ದೃಧಾತುವಿಗೆ, ಅಥವಾ ಗತ್ಯರ್ಥಕ ಈರಧಾತುವಿಗೆ ಅಪ್‌ಪ್ರತ್ಯಯ. ಗುಣ. ಮಧ್ಯದಲ್ಲಿ] ತೂತಾಗಿ ಸುತ್ತಲೂ ಎತ್ತರವಾದದ್ದು. ಕೃದರವೆಂಬುದು ಗೃಹನಾಮದಲ್ಲಿ ವ್ಯಾಖ್ಯಾತವಾಗಿದೆ. (೩–೪–೨) ಮಾಡಲ್ಪಟ್ಟ ತೂತುಳ್ಳದ್ದು. **'ತಮೂರ್ದರಂ ನ ಪೃಣತಾ ಯವೇನ'** (ಋ. ಸಂ. ೨–೬–೧೪–೫) **"ಸಮಿದ್ಧೋ ಅಜ್ಜನ್ ಕೃದರಂ ಮತೀನಾಮ್"** (**ಯ–ವಾ–ಸಂ–೨೯–೧**)

(೧೫) **ರಂಭಃ॥ (೧೬) ಪಿನಾಕಮ್॥** ಇವು ದಂಡದ ಹೆಸರು. 'ರಭ-ರಾಭಸ್ಯೇ' (ಭ್ವಾ.ಆ) ಇಲ್ಲಿ ಆಲಂಬನಾರ್ಥ ಹೇಳಬೇಕು. ಕರ್ಮಾರ್ಥದಲ್ಲಿ ಘಞ್. 'ರಭೇರಶಬ್‌ಲಿಟೋಃ' (ಪಾ.ಸೂ.೭-೧-೬೩) ಸೂತ್ರದಿಂದ ನುಮಾಗಮ. ಅವಲಂಬನೆಗೋಸ್ಕರ ಆಶ್ರಯಿಸಲ್ಪಡುವುದು ದಂಡ. ಉದಾ:—**'ಆ ತ್ವಾ ರಂಭಂತ ಜಿವ್ರಯಃ'** (ಋ.ಸಂ.೬-೩-೪೫-೫) ಪಿನಾಕಮ್. ಪಿಷ-ಸಂಚೂರ್ಣನೇ. ಧಾತು. 'ಪಿನಾಕಾದಯಶ್ಚ' (ಉ.೪-೧೫) ಸೂತ್ರದಿಂದ ಆಕಪ್ರತ್ಯಯ, ಷಕಾರಕ್ಕೆ ನಕಾರ, ಗುಣಾಭಾವವೂ ನಿಪಾತಿತವಾಗುತ್ತದೆ. ಇದರಿಂದ ಶತ್ರುಗಳನ್ನು ಹಿಂಸಿಸುತ್ತಾನೆ. ದಂಡಾಕಾರವಾದ ಬಿಲ್ಲೂ ಪಿನಾಕವಾಗುತ್ತದೆ. ರೂಢಿಯಿಂದ ಮಹಾದೇವನ ಬಿಲ್ಲಿಗೇ ಪಿನಾಕವೆಂದು ಹೆಸರು. **ಉದಾ:—'ಅವತತಧನ್ವಾ ಪಿನಾಕವತಃ ಕೃತ್ತಿವಾಸಾ:' (ಯ. ವಾ. ಸಂ. ೩-೬ )॥**

(೧೭) **ಮೇನಾ (೧೮) ಗ್ನಾಃ** ॥ ಇವೆರಡು ಸ್ತ್ರೀಯರ ಹೆಸರು. ಇವೆರಡೂ ವಾಜ್ನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೧-೧೯,೪೦.) ಪತಿ,ಮಾವ,ಅತ್ತೆ ಮುಂತಾದವರು ಇವರಿಗೆ ಪೂಜ್ಯರಾಗಿರುತ್ತಾರೆ, ಅಲಂಕಾರಯೋಗ್ಯರು. ಮಕ್ಕಳನ್ನು ಬಯಸುವವರು ಇವರನ್ನು ಬಯಸುತ್ತಾರೆ. **ಉದಾ:—ಅಮೇನಾಂಶ್ಚಿಜ್ಜನಿವತಶ್ಚಕರ್ಥ.** (ಋ.ಸಂ.೪-೧-೨೯-೨.) **'ಗ್ನಾಸ್ತ್ವಾಕೃನ್ನಂ ತಪಸೋಽತನ್ವತ'** (ತಾ-ಬ್ರಾ)

(೧೯) **ಶೇಪಃ (೨೦) ವೈತಸಃ** ॥ ಪುರುಷಜನನಾಂಗದ ಹೆಸರು. ಶೇಪಃ ಸಪಧಾತುವಿಗೆ ಅಸುನ್‌ಬಂದಾಗ ಬಹುಲಗ್ರಹಣದಿಂದ ಸಕಾರಕ್ಕೆ ಶಕಾರಾದೇಶ. ಇದರಿಂದ ಸ್ತ್ರೀಯ ಇಂದ್ರಿಯವು ಮುಟ್ಟಲ್ಪಡುತ್ತದೆ. ಸ್ಪರ್ಶವೆಂದರೆ ವಿಶಿಷ್ಟಾನಂದಲಕ್ಷಣವಾದ ಸ್ತ್ರೀಸುಖವೆಂದರ್ಥ. ತ್ವಗಿಂದ್ರಿಯ ಸ್ಪರ್ಶಮಾತ್ರವುಳ್ಳದ್ದು ಶೇಪವೆಂದು ಕೆಲವರ ಮತ. ಆಗ ಅದು ಅಕಾರಾಂತವಾದ ಪದ. ಕರಣಾರ್ಥದಲ್ಲಿ ಘಞ್ ಬಂದಾಗ ಶತ್ವ. ಕೆಲವರು ಶೀಙ್‌ಧಾತುವಿಗೆ ಅಸುನ್ ಹೇಳಿ ಬಹುಕಷ್ಟದಿಂದ ಈರೂಪವನ್ನು ಸಾಧಿಸುತ್ತಾರೆ. ಆದರೆ ಅರ್ಥಸಾಮಂಜಸ್ಯ ಬರುವುದಿಲ್ಲ' ಅದಕ್ಕೋಸ್ಕರ ಸ್ಪರ್ಶಾರ್ಥಕ ಸಪಧಾತು ಹೇಳಿರುವುದು. ಕೇವಲರೂಪ ನಿಷ್ಪತ್ತಿಪ್ರಯೋಜನವಿಲ್ಲ. ಅರ್ಥಸಾಮಂಜಸ್ಯವನ್ನೂ ನೋಡಬೇಕೆಂದು ಭಾಷ್ಯದಲ್ಲಿ ಹೇಳಿದೆ. 'ವೈತಸಃ' ವಿ ಉಪಸರ್ಗ. 'ತಸು-ಉಪಕ್ಷಯೇ' (ದಿ-ಪ.) ಪಚಾದಿಗಣಪಠಿತವಾದುದರಿಂದ ಅಚ್‌ಪ್ರತ್ಯಯ. ವಿತಸಃ ಎಂದಾಗುತ್ತದೆ. ಪ್ರಜ್ಞಾದಿಗಣಪಠಿತವಾದುದರಿಂದ ಸ್ವಾರ್ಥದಲ್ಲಿ ಅಣ್‌ಪ್ರತ್ಯಯ. ಣಿತ್ತಾದುದರಿಂದ ಆದಿವೃದ್ಧಿ. ಸಂಭೋಗಕಾಲಕ್ಕಿಂತ ಮೊದಲು ಕ್ಷೀಣವಾಗಿರುವುದು. ಅಥವಾ ವಿ ಎಂಬುದು ಪ್ರತಿಷೇಧಾರ್ಥವನ್ನು ಕೊಡುತ್ತದೆ. 'ನ ತಸ್ಯತಿ' ಸೇಚನಸಾಮರ್ಥ್ಯದಿಂದ ಕ್ಷೀಣವಾಗದಿರುವುದೆಂದರ್ಥ. **'ಯಸ್ಯಾಮುಶಂತಃ ಪ್ರಹರಾಮ ಶೇಪಮ್** (ಋ. ಸಂ. ೮.೨-೨೭.೨) **'ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ'** (ಋ. ಸಂ. ೮-೫-೧-೫)

(೨೧) **ಅಯಾ (೨೨) ಏನಾ** ॥ ಇವು ಉಪದೇಶದ ಹೆಸರು. ಪ್ರತ್ಯಕ್ಷವಾಗಿ ಹೇಳುವುದು ಉಪದೇಶ. ಇವು ಮೂರು ಲಿಂಗಗಳಲ್ಲಿಯೂ ಇರುತ್ತವೆ. ಅನಯಾ ಎಂಬಲ್ಲಿ ನಲೋಪ ಬಂದ ಅಯಾ ಎಂದಾಗಿದೆ. ಉದಾ :- **ಅಯಾ ತೇ ಅಗ್ನೇ ಸಮಿಧಾ ವಿಧೇಮ** (ಋ. ಸಂ. ೩-೪-೨೫-೫) ಇಲ್ಲಿ ಸ್ತ್ರೀಲಿಂಗ. ಏನಾ. ದ್ವಿತೀಯಾಟೌಸ್ವೇನಃ (ಪಾ-ಸೂ-೨-೪-೩೪) ಸೂತ್ರದಿಂದ ಇದಮ್ ಶಬ್ದಕ್ಕೆ ಏನಾದೇಶ. ತೃತೀಯಾ ಏಕವಚನಕ್ಕೆ 'ಸುಪಾಂಸುಲುಕ್'—ಸೂತ್ರದಿಂದ ಆಕಾರಾದೇಶ. **ಏನಾ ವೋ ಅಗ್ನಿನ್ನಮಸಾ** (ಋ. ಸಂ.೫-೨-೨೧) ಇಲ್ಲಿ ನಪುಂಸಕಲಿಂಗ. **'ಏನಾ ಪತ್ಯಾ ತನ್ವಂ ಸಂಸೃಜಸ್ವ'** (ಋ. ಸಂ. ೮-೩-೨೫-೨) ಇಲ್ಲಿ ಪುಲ್ಲಿಂಗ



(೨೩) ಸಿಷಕ್ತು (೨೪) ಸಚತೇ ॥ ಪ್ರಕೃತಿ ಪ್ರತ್ಯಯಾರ್ಥಗಳಲ್ಲಿ ಪ್ರತ್ಯಯಾರ್ಥಕ್ಕೆ ಪ್ರಾಧಾನ್ಯವಿರುವುದರಿಂದ ಸೇವಾ ಕರ್ತೃವಿನ ಹೆಸರು. ನಿರುಕ್ತಕಾರರು ಧಾತ್ವರ್ಥಕ್ಕೆ ಪ್ರಾಧಾನ್ಯ ಹೇಳುವುದರಿಂದ (ಭಾವಪ್ರಧಾನಮಾಖ್ಯಾತಂ) ಇವು ಸೇವಾರ್ಥಕ ಧಾತುಗಳು. ಆಖ್ಯಾತವೆಂದರೆ ತಿಙಂತ. ಅದರಲ್ಲಿ ಮಾತ್ರ ಧಾತ್ವರ್ಥಕ್ಕೇ ಪ್ರಾಧಾನ್ಯ ಪ್ರತ್ಯಯಾರ್ಥ ಅಪ್ರಧಾನ. ‘ ಷಚ-ಸಮವಾಗಿಯೇ , ಭ್ವಾದಿ ಸ್ವರಿತೇತ್ ಇಲ್ಲಿ ಮಾತ್ರ ಸೇವಾರ್ಥ ತೋರುತ್ತದೆ. ಲೋಟ್ ತಿಪ್-ಶಪ್ ‘ ಬಹುಲಂ ಛಂದಸಿ ಸೂತ್ರದಿಂದ ಶಪಿಗೆ ಶ್ಲು ಆದೇಶ ಛಾಂದಸವಾದುದರಿಂದ ಅಭ್ಯಾಸಕ್ಕೆ ಇತ್ವ ಶ್ಲುನಿಮಿತ್ತವಾಗಿ ದ್ವಿತ್ವಾದಿ. ಉದಾ **ಸನಃ ಸಿಷಕ್ತು ಯಸ್ತುರಃ** (ಋ. ಸಂ. ೧-೧-೩೪-೨) **ಸಚಸ್ವಾನಃ ಸ್ವಸ್ತಯೇ** (ಋ. ಸಂ. ೧-೧-೨-೪) ॥
**೫-೧-೮-೪**

(೨೫) **ಭ್ಯಸತೇ** (೨೬) **ರೇಜತೇ** ॥ ಭಯ, ವೇಪನ (ನಡುಗುವುದು) ಎಂಬ ಎರಡು ಅರ್ಥಗಳಲ್ಲಿ ಭ್ಯಸಧಾತು ಹೇಳಿದೆ. ರೇಜತೇ ಎಂಬುದು ಕೇವಲ ನಿರುಕ್ತಪಠಿತವಾದಧಾತು. ಇದೂ ಪೂರ್ವೋಕ್ತಾರ್ಥದಲ್ಲಿಯೇ ಪ್ರಯುಕ್ತವಾಗಿದೆ. ಉದಾ- **ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಮ್** (ಋಸಂ. ೨-೬-೭-೧) **ರೇಜತೇ ಅಗ್ನೇ ಪೃಥಿವೀ ಮುಖೇಭ್ಯಃ** (ಋ.ಸಂ.

ಹೀಗೆ ಇಪ್ಪತ್ತಾರು ಒಂದರ್ಥದಲ್ಲಿ ಎರಡೆರಡು ನಾಮಗಳು ॥ ೨೯ ॥

---

ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ , ಪ್ರಪಿತ್ವೇ ಪ್ರಾಪ್ತೇ । ಅಭೀಕೇಽಭ್ಯಕ್ತೇ
“ ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ ॥ ” “ ಅಭೀಕೇಚಿದು
ಲೋಕಕೃತ್ ” ॥ ಇತ್ಯಪಿ ನಿಗಮೌ ಭವತಃ ॥೨॥

ಎಂದರೆ ಪ್ರಪಿತ್ವೇ ಅಭೀಕೇ ಎಂಬ ಎರಡು ಶಬ್ದಗಳೂ ಸಮೀಪದಲ್ಲಿ ಎಂದರ್ಥವನ್ನು ಸೂಚಿಸುವ ಪರ್ಯಾಯ ಪದಗಳು. ಪ್ರಪಿತ್ವೇ ಎಂದರೆ ಪ್ರಾಪ್ತವಾದ, ಹತ್ತಿರಕ್ಕೆ ಬಂದ ಎಂದೂ (Arrived of) ಅಭೀಕ ಎಂದರೆ ಸಮೀಪಿಸಿದ ಎಂದೂ (Approached) ಎಂದು ಅರ್ಥವು. ಈ ವಿಷಯದಲ್ಲಿ ಆಪಿತ್ವೇ, ಪ್ರಪಿತ್ವೇ ಎಂಬ ವಾಕ್ಯಬರುವ ಈ ಉದಾಹರಣೆಯನ್ನು ಕೊಟ್ಟಿದ್ದಾರೆ—

**ಯಥಾ ಗೌರೋ ಅಪಾ ಕೃತಂ ತೃಷ್ಯನ್ನೇತ್ಯವೇರಿಣಂ ।**
**ಆಪಿತ್ವೇ ನಃ ಪ್ರಪಿತ್ವೇ ತೂಯಮಾ ಗಹಿ ಕಣ್ವೇಷು ಸು ಸಚಾ ಪಿಬ ॥**

(ಋ. ಸಂ. ೮-೫-೪-೩)

ಇದರ ಅರ್ಥವು :—

ಎಲೈ ಇಂದ್ರನೇ, ಗೌರಮೃಗವು ಬಾಯಾರಿಕೆಯಿಂದ ಬಳಲಿ ಉದಕಗಳಿಂದ ತುಂಬಿದ ಸರೋವರ ಪ್ರದೇಶವನ್ನು ಯಾವ ರೀತಿ ವೇಗ ಹೋಗಿ ಸೇರುವುದೋ ಅದೇ ಪ್ರಕಾರ (ನಮ್ಮೊಡನೆ) ಕಣ್ವರೊಡನೆ ನಿನ್ನ ಬಂಧುತ್ವವು ಸ್ಥಿರವಾದಾಗ ನಮ್ಮಲ್ಲಿಗೆ ಶೀಘ್ರವಾಗಿ ದಯಮಾಡು. ಕಣ್ವಗೋತ್ರೋತ್ಪನ್ನರಾದ ನಮ್ಮಲ್ಲಿರುವ ಸೋಮವನ್ನೂ ಅತಿಶಯವಾಗಿ ಪಾನಮಾಡು.

**ಅಭೀಕೇ**—ಎಂಬ ಪದಕ್ಕೆ—

**ಪ್ರೋಷ್ವಸ್ಮೈ ಪುರೋರಥಮಿಂದ್ರಾಯ ಶೂಷಮರ್ಚತ ।**
**ಅಭೀಕೇಚಿದು ಲೋಕಕೃತ್ಸಂಗೇ ಸಮತ್ಸು ವೃತ್ರಹಾಸ್ಮಾಕಂ ಬೋಧಿ ಚೋದಿತಾ ನಭಂತಾಮನ್ಯಕೇಷಾಂ ಜ್ಯಾಕಾ ಅಧಿಧನ್ವಸು ॥**

ಎಂಬ ಋಕ್ಕಿನಿಂದ ಸಮೀಪಿಸಿದ ಎಂಬರ್ಥದಲ್ಲಿ ಸೂಚಿಸಿದ್ದಾರೆ.

ದಭ್ರಮರ್ಭಕಮಿತ್ಯಲ್ಪಸ್ಯ ದಭ್ರಂ ದಭ್ನೋತೇಃ ಸುದಮ್ಭಂ ಭವತಿ ॥ ಅರ್ಭಕಮವಹೃತಂ ಭವತಿ । "ಉಪೋಪ ಮೇ ಪರಾಮೃಶ ಮಾ ಮೇ ದಭ್ರಾಣಿ ಮನ್ಯಥಾಃ" ॥ "ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ" ॥ ಇತಪಿ ನಿಗಮೌ ಭವತಃ ॥೩॥

ದಭ್ರಂ, ಅರ್ಭಕಂ, ಇವೆರಡು ಅಲ್ಪನಾಮಗಳು. ಹಿಂಸಾರ್ಥಕ ದಂಭು ಧಾತುವಿನಿಂದ ದಭ್ರ ಪದವಾಗಿದೆ. ಅಲ್ಪವಾದುದರಿಂದ ಸುಖವಾಗಿ ಭೇದಮಾಡಲು ಯೋಗ್ಯವಾದದ್ದು. ಅವಹೃತಂ=ಹ್ರಸ್ವವೆಂದರ್ಥ.

**ದಭ್ರ**—ಶಬ್ದಕ್ಕೆ ಉದಾದರಣೆ—

**ಉಪೋಪ ಮೇ ಪರಾಮೃಶ ಮಾ ಮೇ ದಭ್ರಾಣಿ ಮನ್ಯಥಾಃ ।**
**ಸರ್ವಾಹಮಸ್ಮಿ ರೋಮಶಾ ಗಂಧಾರೀಣಾಮಿವಾವಿಕಾ ॥**

(ಋ. ಸಂ. ೧-೨-೧೨೬-೭)

**ಅರ್ಭಕ** ಶಬ್ದಕ್ಕೆ ಉದಾಹರಣೆ—

**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ।**
**ಯಜಾಮ ದೇವಾನ್ಯದಿ ಶಕ್ನ ವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ॥**

(ಋ. ಸಂ. ೧-೨-೨೭-೧೩)

ಶುನಃಶೇಪನು ವಿಶ್ವೇ ದೇವತೆಗಳನ್ನು ಕುರಿತು ಎಂದರೆ ಸಮಸ್ತ ದೇವತೆಗಳನ್ನೂ ಪ್ರಾರ್ಥಿಸುತ್ತಾನೆ—

ದೇವತೆಗಳಲ್ಲಿ ದೊಡ್ಡವರಾದ ಎಂದರೆ ಪೂಜ್ಯರಾದವರಿಗೆ ನಮಸ್ಕರಿಸುವೆನು. ಗುಣದಲ್ಲಿ ಸ್ವಲ್ಪಕಮ್ಮಿಯಾದ ಬಾಲ್ಯಾವಸ್ಥೆಯಲ್ಲಿರುವ ದೇವತೆಗಳನ್ನು ನಮಸ್ಕರಿಸುವೆನು. ಯುವಕರಾದ ದೇವತೆಗಳಿಗೂ ನಮಸ್ಕಾರವು. ವಯೋವೃದ್ಧರಾದ ಎಂದರೆ ಹಿರಿಯರಾದ ದೇವತೆಗಳನ್ನು ವಂದಿಸುವೆನು. ನಮ್ಮ ಶಕ್ತಿಯಿರುವಷ್ಟು ಎಂದರೆ ನಮ್ಮ ಕೈಲಾದಮಟ್ಟಿಗೆ ಶ್ರೇಷ್ಠರಾದ ಈ ದೇವತೆಗಳನ್ನು ಸ್ತೋತ್ರಮಾಡಿ ಆರಾಧಿಸುವೆನು. ಎಲೈ ದೇವತೆಗಳೇ ಈ ರೀತಿ ಸ್ತೋತ್ರಮಾಡುವುದನ್ನು ನಾನು ನಿಲ್ಲಿಸುವುದಿಲ್ಲ ಮಾಡುತ್ತಲೇ ಇರುವೆನು ಎಂದು ಈ ಮೇಲಿನ ಋಕ್ಕಿನ ತಾತ್ಪರ್ಯವು.

ತಿರಃ ಸತ ಇತಿ ಪ್ರಾಪ್ತಸ್ಯ । ತಿರಸ್ತೀರ್ಣಂ ಭವತಿ । ಸತಃ ಸಂಸೃತಂ ಭವತಿ ॥ "ತಿರಶ್ಚಿದರ್ಯಯಾ ಪರಿವರ್ತಿರ್ಯಾತಮದಾಭ್ಯಾ" ॥ "ಪಾತ್ರೇವ ಭಿನ್ದನ್ ಸತ ಏತಿ ರಕ್ಷಸಃ ॥" ಇತ್ಯಪಿ ನಿಗಮೌ ಭವತಃ ॥೪॥

ತಿರಃ, ಸತಃ ಇವೆರಡು ಹೊಂದಲ್ಪಟ್ಟದ್ದು ಎಂಬರ್ಥಕೊಡುತ್ತವೆ. ತಿರಃ=ದೂರವಾದ ದಾರಿ ಕಳೆಯಲ್ಪಟ್ಟದ್ದು ಸತಃ ಒಂದಾಗಿ ಹೋಗಿಬರುವುದು. ಇವಕ್ಕೆ ಕ್ರಮವಾಗಿ ಉದಾಹರಣೆ—

**ಅಶ್ವಿನಾವೇಹ ಗಚ್ಛತಂ ನಾಸತ್ಯಾ ಮಾ ವಿ ವೇನತಂ ।**
**ತಿರಶ್ಚಿದರ್ಯಯಾ ಪರಿವರ್ತಿರ್ಯಾತಮದಾಭ್ಯಾ ಮಾಧ್ವೀ ಮಮ ಶ್ರುತಂ ಹವಮ್ ॥**

**ಇನ್ದ್ರೋ ಯಾತೂನಾಮಭವತ್ಪರಾಶರೋ ಹವಿರ್ಮಥೀನಾಮಭ್ಯಾ೩ ವಿವಾಸತಾಂ ।**
**ಅಭೀದು ಶಕ್ರಃ ಪರಶುರ್ಯಥಾ ವನಂ ಪಾತ್ರೇವ ಭಿನ್ದನ್ಸತ ಏತಿ ರಕ್ಷಸಃ ॥**

ತ್ವೋ ನೇಮ ಇತ್ಯರ್ಧಸ್ಯ । ತ್ವೋಽಪತತಃ । ನೇಮೋಽಪನೀತಃ । ಅರ್ಧಂ ಹರತೇರ್ವಿಪರೀತಾದ್ಧಾರಯತೇರ್ವಾ ಸ್ಯಾದುದ್ಧೃತಂ ಭವತಿ । ಋಧ್ನೋತೇರ್ವಾ ಸ್ಯಾದೃದ್ಧಮೋ ವಿಭಾಗಃ ॥

"ಪೀಯತಿ ತ್ವೋ ಅನು ತ್ವೋ ಗೃಣಾತಿ" । "ನೇಮೋ ದೇವಾ ನೇಮೋಽಸುರಾಃ" ಇತ್ಯಪಿ ನಿಗಮೌ ಭವತಃ ॥೫॥

ತ್ವಃ, ನೇಮಃ ಇವೆರಡು ಅರ್ಧದ ಹೆಸರು ಅಪತತಃ ಎಂಬುದರಿಂದ ತ್ವಃ ಆಗಿ ಒಂದರಿಂದ ಎರಡಾಗಿ ವಿಸ್ತೃತವಾದದ್ದು. ಅಪನೀತ ಎಂಬುದರಿಂದ ನೇಮವಾಗಿದೆ. ಬೇರೆ ಮಾಡಲ್ಪಟ್ಟದ್ದೆಂದರ್ಥ. ಹೃಞ್‌ಧಾತುವು ಅರ್ಹವೆಂದು ರೂಪಹೊಂದಿರುವಾಗ ವರ್ಣವ್ಯತ್ಯಾಸದಿಂದ ಅರ್ಧವೆಂಬ ರೂಪವಾಗಿದೆ. ಅಥವಾ ವೃದ್ಧ್ಯರ್ಥಕ ಋಧು ಧಾತುವಿನಿಂದ ಈ ಅರ್ಧಪದವಾಗಿದೆ. ವಿಭಾಗದಿಂದ ವೃದ್ಧಿ ಹೊಂದಿರುವುದೆಂದರ್ಥ. ತ್ವಃ ಎಂಬ ಪದಕ್ಕೆ ಉದಾಹರಣೆ—

**ಬೋಧಾ ಮೇ ಅಸ್ಯ ವಚಸೋ ಯವಿಷ್ಠ ಮಂಹಿಷ್ಠಸ್ಯ ಪ್ರಭೃತಸ್ಯ ಸ್ವಧಾವಃ ॥**

**ಪೀಯತಿ ತ್ವೋ ಅನು ತ್ವೋ ಗೃಣಾತಿ ವನ್ದಾರುಸ್ತೇ ತನ್ವಂ ವಂದೇ ಅಗ್ನೇ ।**

**ಅರ್ಧ**-ಎಂಬ ಅರ್ಥದಲ್ಲಿ ನೇಮ ಶಬ್ದಕ್ಕೆ ಉದಾಹರಣೆ—

**ನೇಮೋ ದೇವಾ ನೇಮೋಽಸುರಾಃ**

ಅರ್ಧಭಾಗದಲ್ಲಿ ದೇವತೆಗಳೂ ಅರ್ಧಭಾಗದಲ್ಲಿ ಅಸುರರೂ ಇದರೆಂದು ಅರ್ಥ.

ಋಕ್ಷಾಃ ಸ್ತೃಭಿರಿತಿ ನಕ್ಷತ್ರಾಣಾಮ್ । ನಕ್ಷತ್ರಾಣಿ ನಕ್ಷತೇರ್ಗತಿ-
ಕರ್ಮಣಃ । ನೇಮಾನಿ ಕ್ಷತ್ರಾಣೀತಿ ಚ ಬ್ರಾಹ್ಮಣಮ್ । ಋಕ್ಷಾ
ಉದೀರ್ಣಾನೀವ ಖ್ಯಾಯನ್ತೇ । ಸ್ತೃಭಿಸ್ತೀರ್ಣಾನೀವ ಖ್ಯಾಯನ್ತೇ।
"ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ"।'ಪಶ್ಯನ್ತೋ
ದ್ಯಾಮಿವ ಸ್ತೃಭಿಃ"। ಇತ್ಯಪಿ ನಿಗಮೌ ಭವತಃ ॥ ೬ ॥

**ಋಕ್ಷಾಃ, ಸ್ತೃಭಿಃ** ಇವೆರಡು ನಕ್ಷತ್ರಗಳ ಹೆಸರು. ನಕ್ಷತ್ರಪದವು ಪರ್ಯಾಯವಾಚಕವಲ್ಲ. ಗತ್ಯರ್ಥಕವಾದ ನಕ್ಷ ಧಾತುವಿಗೆ ಅತ್ರನ್ ಪ್ರತ್ಯಯ ಬಂದು ನಕ್ಷತ್ರಪದವಾಗಿದೆ. ನಿತ್ಯಗಮನವುಳ್ಳದ್ದೆಂದರ್ಥ. ಇಮಾನಿ=ಇವುಗಳು ನಕ್ಷತ್ರಾಣಿ ಧನವಲ್ಲ. ಸೂರ್ಯರಶ್ಮಿ ಸಂಪರ್ಕದಿಂದ ಸುವರ್ಣದಂತೆ ಪ್ರಕಾಶಿಸುತ್ತವೆ ಎಂದು ಬ್ರಾಹ್ಮದಲ್ಲಿ ಹೇಳಿದೆ. ಋಕ್ಷಾಃ=ಯಾರಿಂದಲೋ ಮೇಲಕ್ಕೆ ತಳ್ಳಲ್ಪಟ್ಟವುಗಳಂತೆ ತೋರುತ್ತವೆ. ಸ್ತೃಭಿಃ=ಆಕಾಶದಲ್ಲಿ ಅಡ್ಡವಾಗಿ ಹೋದಂತೆ ತೋರುತ್ತದೆ.

ಋಕ್ಷಾಃ ಎಂಬುದಕ್ಕೆ ಉದಾಹರಣೆ—

**ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶೇ ಕುಹಚಿದ್ದಿವೇಯುಃ ।**
**ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚಂದ್ರಮಾ ನಕ್ತಮೇತಿ ॥**
(ಋ. ಸಂ. ೧-೨-೧೪-೫)

**ಸ್ತೃಭಿಃ**-ಎಂಬುದಕ್ಕೆ ಉದಾಹರಣೆ—
**ಋತಾವಾನಂ ವಿಚೇತಸಂ ಪಶ್ಯಂತೋ ದ್ಯಾಮಿವ ಸ್ತೃಭಿಃ ।**
**ವಿಶ್ವೇಷಾಮಧ್ವರಾಣಾಂ ಹಸ್ಕರ್ತಾರಂ ದಮೇ ದಮೇ ॥** (ಋ. ಸಂ. ೩-೫-೬-೩)

ವಮ್ರಾಭಿರುಪಜಿಹ್ವಿಕಾ ಇತಿ ಸೀಮಿಕಾನಾಮ್ । ವಮ್ರ್ಯೋ ವಮ-
ನಾತ್ । ಸೀಮಿಕಾ ಸ್ಯಮನಾತ್ ॥ ಉಪಜಿಹ್ವಿಕಾ ಉಪಜಿಘ್ರ್ಯಃ ॥
"ಯದತ್ತ್ಯುಪಜಿಹ್ವಿಕಾ ಯದ್ವಮ್ರೋ ಅತಿಸರ್ಪತಿ"॥ ಇತ್ಯಪಿ
ನಿಗಮೋ ಭವತಿ ॥ ೭ ॥

**ವಮ್ರೀಭಿಃ, ಉಪಜಿಹ್ವಿಕಾ** ಇವೆರಡು ಇರುವೆಯ ಹೆಸರು. ವಮ್ರೀಭಿಃ ತೃತೀಯಾಂತ ಪದ. ವಿಭಕ್ತಿ ವಿವಕ್ಷಿತವಲ್ಲ. ವಮನಾತ್=ನೀರನ್ನು ಕಕ್ಕುವುದರಿಂದ ವಮ್ರೀ ಎಂದಾಗಿದೆ. ಆ ನೀರಿನಿಂದ ಮಣ್ಣು ಒದ್ದೆಯಾಗುತ್ತದೆ. ಸ್ಯಮನಾತ್=ಯಾವಾಗಲೂ ಚಲಿಸುವುದರಿಂದ ಸೀಮಿಕಾ ಎಂದೆನಿಸುತ್ತವೆ. ಉಪಜಿಘ್ರ್ಯಃ=ಘ್ರಾಣೇಂದ್ರಿಯವು ಚುರುಕಾದುದರಿಂದ ಮೂಸಿ ತಿಳಿಯುವುದರಿಂದ "ಉಪಜಿಘ್ರಿಕಾ" ಎಂದಾಗಿದೆ. ಉದಾಹರಣೆ—

**ಯದತ್ತ್ಯುಪ ಜಿಹ್ವಿಕಾ ಯದ್ವಮ್ರೋ ಅತಿಸರ್ಪತಿ ।**
**ಸರ್ವಂ ತದಸ್ತು ತೇ ಘೃತಂ ॥** (ಋ. ಸಂ. ೬-೭-೧೨-೬)

ಊರ್ದರಂ ಕೃದರಮಿತ್ಯಾವಪನಸ್ಯ ॥ ಊರ್ದರಮುದ್ದೀರ್ಣಂ ಭವನ್ತಿ ಊರ್ಜೇ ದೀರ್ಣಂ ವಾ । "ತಮೂರ್ದರಂ ನ ಪೃಣತಾ ಯವೇನ" ಇತ್ಯಪಿ ನಿಗಮೋ ಭವತಿ ॥ ತಮೂರ್ದರಮಿವ ಪೂರಯತಿ ಯವೇನ ॥ ಕೃದರಂ ಕೃತದರಂ ಭವತಿ॥ "ಸಮಿದ್ಧೋ ಅಞ್ಜನ್ ಕೃದರಂ ಸತೀನಾಮ್ ॥ ಇತ್ಯಪಿ ನಿಗಮೋ ಭವತಿ ॥ ೮ ॥ ೨೦ ॥

**ಊರ್ದರಂ, ಕೃದರಂ** ಎಂಬಿವೆರಡು ಕಣಜದ ಹೆಸರು. ಆವಪನ=ಇದರಲ್ಲಿ ಶೇಕರಿಸಿಡುವುದು. ಉದ್ದೀರ್ಣಂ=ಉತ್=ತುಂಬಿಟ್ಟದ್ದು ಮೇಲಕ್ಕೆ ದೀರ್ಣಂ=ಭವತಿ ತೆಗೆಯಲ್ಪಡುವುದು. ಊರ್ಜೇ=ಅನ್ನಕೋಸ್ಕರ ದೀರ್ಣಂ=ತೂತುಕೊರೆದು ತೆಗೆಯಲ್ಪಡುತ್ತದೆ. ಉದಾಹರಣೆ—ತಂ=ಆ ಇಂದ್ರನನ್ನು ಯವೇನ=ಭತ್ತದಿಂದ ಊರ್ದರಮಿವ=ಕಣಜದಂತೆ (ಸೋಮದಿಂದ ತುಂಬಿರಿ=ತೃಪ್ತಿಪಡಿಸಿರಿ). ಕೃದರಂ=ಕೃತ=ಮಾಡಲ್ಪಟ್ಟ ದರಂ=ಛಿದ್ರವುಳ್ಳದ್ದು. ತುಂಬಿಟ್ಟ ಭತ್ತ ಮುಂತಾದವುಗಳನ್ನು ತೆಗೆಯುವುದಕೋಸ್ಕರ ಒಂದು ಚಿಕ್ಕ ಬಾಗಿಲಿನಿಂದ ಕೂಡಿರುವುದು ಎಂದರ್ಥ.

**ಊರ್ದರಂ** ಎಂಬ ಪದ ಬಂದಿರುವ ಉದಾಹರಣೆ—

**ಅಧ್ವರ್ಯವೋ ಯೋ ದಿವ್ಯಸ್ಯ ವಸ್ವೋ ಯಃ ಪಾರ್ಥಿವಸ್ಯ ಕ್ಷಮ್ಯಸ್ಯ ರಾಜಾ ।**
**ತಮೂರ್ದರಂ ನ ಪೃಣತಾ ಯವೇನೇಂದ್ರಂ ಸೋಮೇಭಿಸ್ತದಪೋ ವೋ ಅಸ್ತು ॥**

(ಋ. ಸಂ. ೨-೬-೧೪-೫)

**ಕೃದರ** ಪದ ಬಂದಿರುವ ಋಕ್ಕಿನ ಉದಾಹರಣೆ—

**ಸಮಿದ್ಧೋ ಅಞ್ಜನ್ಕೃದರಂ ಮತೀನಾಂ ಘೃತಮಗ್ನೇ ಮಧುಮತ್ಪಿನ್ವಮಾನಃ ।**
**ವಾಜೀನ್ವಾಜಿನಂ ಜಾತವೇದೋ ದೇವಾನಾಂ ವಕ್ಷಿ ಪ್ರಿಯಮಾ ಸದಸ್ಥಮ್ ॥**

(ಯ. ವಾ. ಸಂ. ೨೯-೧)

**ಇತಿ ವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತನೆಯ ಖಂಡವು ಸಮಾಪ್ತವು

---

## ಏಕವಿಂಶಃ ಖಂಡಃ

### ಇಪ್ಪತ್ತೊಂದನೆಯ ಖಂಡವು

———

ರಮ್ಭಃ ಪಿನಾಕಮಿತಿ ದಣ್ಡಸ್ಯ। ರಮ್ಭ ಆರಭನ್ತ ಏನಮ್। ಆ ತ್ವಾ ರಮ್ಭಂ ನ ಜಿವ್ರಯೋ ರರಮ್ಭೇತ್ಯಪಿ ನಿಗಮೋ ಭವತಿ। ಆರಭಾಮಹೇ ತ್ವಾ ಜೀರ್ಣಾ ಇವ ದಣ್ಡಂ ಪಿನಾಕಂ ಪ್ರತಿ ಪಿನಷ್ಟ್ಯನೇನ। ಕೃತ್ತಿವಾಸಾಃ ಪಿನಾಕಹಸ್ತೋಽವತತಧನ್ವೇತ್ಯಪಿ ನಿಗಮೋ ಭವತಿ। ಮೇನಾ ಗ್ನಾ ಇತಿ ಸ್ತ್ರೀಣಾಂ ಸ್ತ್ರಿಯ ಸ್ತ್ಯಾಯತೇರಪತ್ರಪಣಕರ್ಮಣೋ ಮೇನಾ ಮಾನಯನ್ತ್ಯೇನಾ ಗ್ನಾ ಗಚ್ಛನ್ತ್ಯೇನಾಃ। ಅಮೇನಾಂಶ್ಚಿಜ್ಜನಿವತಶ್ಚಕರ್ಥ। ಗ್ನಾಸ್ತ್ವಾ-ಕೃನ್ತನ್ನಪಸೋಽತನ್ವತೇತ್ಯಪಿ ನಿಗಮೌ ಭವತಃ। ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯ। ಶೇಪಃ ಶಪತೇಃ ಸ್ಪೃಶತಿಕರ್ಮಣೋ ವೈತಸೋ ವಿತಸ್ತಂ ಭವತಿ। ಯಸ್ಯಾಮುಶನ್ತಃ ಪ್ರಹರಾಮ ಶೇಪಮ್। ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನೇತ್ಯಪಿ ನಿಗಮೌ ಭವತಃ। ಅಯೈನೇತ್ಯುಪದೇಶಸ್ಯ। ಅಯಾ ತೇ ಅಗ್ನೇ ಸಮಿಧಾ ವಿಧೇಮೇತಿ ಸ್ತ್ರಿಯಾಃ। ಏನಾ ವೋ ಅಗ್ನಿಮಿತಿ ನಪುಂಸಕಸ್ಯ। ಏನಾ ಪತ್ಯಾ ತನ್ವಂ೦ಸಂಸೃಜಸ್ವೇತಿ ಪುಂಸಃ। ಸಿಷಕ್ತು ಸಚತ ಇತಿ ಸೇವಮಾನಸ್ಯ। ಸ ನಃ ಸಿಷಕ್ತು ಯಸ್ತುರಃ। ಸನಃ ಸೇವತಾಂ ಯಸ್ತುರಃ। ಸಚಸ್ವಾ ನಃ ಸ್ವಸ್ತಯೇ। ಸೇವಸ್ವ ನಃ ಸ್ವಸ್ತಯೇ। ಸ್ವಸ್ತೀತ್ಯವಿನಾಶಿನಾಮಾಸ್ತಿರಭಿ-ಪೂಜಿತಃ ಸು ಅಸ್ತೀತಿ ಭ್ಯಸತೇ ರೇಜತ ಇತಿ ಭಯವೇಪನಯೋಃ। ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ। ರೇಜತೇ ಅಗ್ನೇ ಪೃಥಿವೀ ಮಖೇಭ್ಯ ಇತ್ಯಪಿ ನಿಗಮೌ ಭವತಃ। ದ್ಯಾವಾಪೃಥಿವೀನಾಮಧೇಯಾ ನ್ಯುತ್ತರಾಣಿ ಚತುರ್ವಿಂಶತಿಸ್ತಯೋರೇಷಾ ಭವತಿ ॥೨೧॥

———

ರಮ್ಭಃ ಪಿನಾಕಮಿತಿ ದಣ್ಡಸ್ಯ । ರಮ್ಭ, ಆರಭನ್ತ ಏನಮ್ । " ಆ ತ್ವಾರಮ್ಭಂ ನ ಜಿವ್ರಯೋ ರರಮ್ಭ" ॥ ಇತ್ಯಪಿ ನಿಗಮೋ ಭವತಿ । ಆರಭಾಮಹೇ ತ್ವಾ ಜೀರ್ಣಾ ಇವ ದಣ್ಡಂ ॥ ಪಿನಾಕಂ ಪ್ರತಿಪಿನಷ್ಟ್ಯನೇನ । "ಅವತತ ಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ" । ಇತ್ಯಪಿ ನಿಗಮೋ ಭವತಿ ॥೧॥

ರಂಭಃ, ಪಿನಾಕಂ ಎರಡು ಕೋಲಿನ ಹೆಸರು. ಆರಂಭಂತ ಏನಂ=ಜಾರಿಬೀಳಬಾರದೆಂದು ಇದನ್ನು ಆಶ್ರಯಿಸುತ್ತಾರೆ ಎಂದು ರಂಭಪದಾರ್ಥ. ಉದಾಹರಣೆ—ಇಂದ್ರನೇ ಜೀರ್ಣರಾದ ನಾವು ದಂಡದಂತೆ ನಿನ್ನನ್ನು ಆಶ್ರಯಿಸುತ್ತೇವೆ. ಏನೇನ=ಇದರಿಂದ ಪ್ರತಿಪಿನಷ್ಟಿ=ಹೊಡೆಯುತ್ತಾರೆ. ಆದುದರಿಂದ ದಂಡ ಪಿನಾಕ ಪದವಾಚ್ಯವಾಗುತ್ತದೆ. ಪಿನಾಕಹಸ್ತಃ=ಕೈಯಲ್ಲಿ ಕೋಲುಳ್ಳವನು.

ರಂಭ ಪದಕ್ಕೆ ಉದಾಹರಣೆ—

**ಆ ತ್ವಾ ರಮ್ಭಂ ನ ಜಿವ್ರಿಯೋ ರರಮ್ಭಾ ಶವಸಸ್ಪತೇ ।**
**ಉಶ್ಮಸಿ ತ್ವಾ ಸದಸ್ಥ ಆ ॥**

(ಋ. ಸಂ. ೬-೩-೪೫-೫)

ಪಿನಾಕ ಪದಕ್ಕೆ ಉದಾಹರಣೆ—

**ಏಷ ತೇ ರುದ್ರ ಭಾಗಸ್ತಂ ಜುಷಸ್ವ ತೇನಾವಸೇನ ಪರೋ ಮೂಜವತೋಽತೀಹಿ ।**
**ಅವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ ॥**

(ಕೃ. ಯ. ಸಂ.)

ಮೇನಾ ಗ್ನಾ ಇತಿ ಸ್ತ್ರೀಣಾಮ್॥ ಸ್ತ್ರಿಯಃ ಸ್ತ್ಯಾಯತೇರಪತ್ರಪಣ ಕರ್ಮಣಃ॥ ಮೇನಾ ಮಾನಯನ್ತ್ಯೇನಾಃ । ಗ್ನಾ ಗಚ್ಛನ್ತ್ಯೇನಾಃ । "ಅಮೇನಾಂಶ್ಚಿಜ್ಜನಿವತಶ್ಚಕರ್ಥ।" ಗ್ನಾಸ್ತ್ವಾಕೃನ್ತನ್ನಪಸೋಽತನ್ವತ ಇತ್ಯಪಿ ನಿಗಮೌ ಭವತಃ ॥೨॥

ಮೇನಾಃ, ಗ್ನಾಃ ಎಂದು ಹೆಂಗಸರ ಹೆಸರು. ಅಪತ್ರಪಣಕರ್ಮಣಃ=ಲಜ್ಜಾರ್ಥಕವಾದ, ಸ್ತ್ಯಾಯತೇಃ=ಸ್ತ್ಯೈ ಧಾತುವಿನಿಂದ ಸ್ತ್ರೀಶಬ್ದವಾಗಿದೆ. ಸ್ವಚ್ಛಂದನಿದ್ದರೂ ಪುರುಷರಿಂದ ನಾಚಿಕೆಪಡುವವರು ಎಂದರ್ಥ. ಮೇನಾಃ=ಶುಭ ಕಾರ್ಯಗಳಲ್ಲಿ ಅಧಿಕವಾಗಿ ಪೂಜಿಸಲ್ಪಡುವವರು. ಗ್ನಾಃ=ಮೈಥುನಧರ್ಮದಿಂದ ಹೊಂದಲ್ಪಡುವವರು.

**ಮೇನಾ** ಪದಕ್ಕೆ ಉದಾಹರಣೆ—

**ಆ ಪ್ರ ದ್ರವ ಹರಿವೋ ಮಾ ವಿವೇನಃ ಪಿಶಙ್ಗರಾತೇ ಅಭಿ ನಃ ಸಚಸ್ವ ।**
**ನಹಿ ತ್ವದಿಂದ್ರ ವಸ್ಯೋ ಅನ್ಯದಸ್ತ್ಯಮೇ ನಾಂಶ್ಚಿಜ್ಜನಿವತಶ್ಚಕರ್ಥ ॥**

(ಋ. ಸಂ. ೪-೧-೨೯-೨)

ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯ । ಶೇಪಃ ಶಪತೇಃ ಸ್ಪೃಶತಿ–ಕರ್ಮಣಃ । ವೈತಸೋ ವಿತಸ್ತಂ ಭವತಿ ॥ "ಯಸ್ಯಾಮುಶನ್ತಃ ಪ್ರಹರಾಮ ಶೇಪಮ್" । "ತ್ರಿಃ ಸ್ಮ ಮಾಹ್ನಃ, ಶ್ನಥಯೋ ವೈತಸೇನ ।" ಇತ್ಯಪಿ ನಿಗಮೌ ಭವತಃ ॥೩॥

**ಶೇಪಃ ವೈತಸಃ** ಇವೆರಡು ಪುರುಷಲಿಂಗದ ಹೆಸರು. ಶೇಪಃ=ಮುಟ್ಟುವುದು ಎಂಬರ್ಥಕೊಡುವ ಶಪಧಾತುವಿನಿಂದ ಈ ರೂಪವಾಗಿದೆ. ಇದರಿಂದ ಸ್ತ್ರೀಯನ್ನು ಮುಟ್ಟುವುದು. ವೈತಸಃ=ಸ್ತ್ರೀಯರ ಸ್ಮರಣೆಗಿಂತ ಮೊದಲು ಅತಿ ಕ್ಷೀಣವಾಗಿರುವುದು.

**ಶೇಪ** ಪದಕ್ಕೆ ಉದಾಹರಣೆ—

**ತಾಂ ಪೂಷಞ್ಛಿವತಮಾ ಮೇರಯಸ್ವ ಯಸ್ಯಾಂ ಬೀಜಂ ಮನುಷ್ಯಾ ವಪಂತಿ ।**
**ಯಾ ನ ಊರೂ ಉಶತೀ ವಿಶ್ರಯಾತೇ ಯಸ್ಯಾಮುಶನ್ತಃ ಪ್ರಹರಾಮ ಶೇಪಮ್ ॥**

(ಋ. ಸಂ. ೮-೩-೨೭-೨)

**ವೈತಸ** ಪದಕ್ಕೆ ಉದಾಹರಣೆ—

**ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನೋತ ಸ್ಮ ಮೇಽವ್ಯತ್ಯೈ ಪೃಣಾಸಿ ।**
**ಪುರೂರವೋಽನು ತೇ ಕೇತಮಾಯಂ ರಾಜಾ ಮೇ ವೀರ ತನ್ವಸ್ತದಾಸೀಃ ॥**

(ಋ. ಸಂ. ೮-೫-೧-೫)

ಅಯೈನೇತ್ಯುಪದೇಶಸ್ಯ । "ಅಯಾ ತೇ ಅಗ್ನೇ ಸಮಿಧಾ ವಿಧೇಮ" ಇತಿ ಸ್ತ್ರಿಯಾಃ । "ಏನಾ ವೋ ಅಗ್ನಿಮ್" ಇತಿ ನಪುಂಸಕಸ್ಯ । "ಏನಾಪತ್ಯಾ ತನ್ವಂ ಸಂಸೃಜಸ್ವ" ಇತಿ ಪುಂಸಃ ॥೪॥

ಅಯಾ ಏನಾ ಇವೆರಡು ಉಪದೇಶದ ನಾಮಗಳು. ಇವು ಮೂರುಲಿಂಗಗಳಲ್ಲಿಯೂ ಬೇರೆಯಾಗುವುದಿಲ್ಲವೆಂದು ತೋರಿಸಲು ಮೂರು ಲಿಂಗಗಳಿಗೂ ಉದಾಹರಿಸುತ್ತಾನೆ.

ಸ್ತ್ರೀಲಿಂಗಕ್ಕೆ ಉದಾಹರಣೆ—

**ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಂ ಶಸ್ಯಮಾನಂ ಗೃಭಾಯ । ದಹಾಶಸೋ ರಕ್ಷಸಃ ಪಾಹ್ಯ೧ಸ್ಮಾನ್ ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್ ॥**

(ಋ. ಸಂ. ೩-೪-೨೫-೫)

ನಪುಂಸಕ ಲಿಂಗಕ್ಕೆ ಉದಾಹರಣೆ—

**ಏನಾ ವೋ ಅಗ್ನಿಂ ನಮಸೋರ್ಜೋನಪಾತಮಾಹುವೇ ।**
**ಪ್ರಿಯಂ ಚೇತಿಷ್ಠಮರತಿಂ ಸ್ವಧ್ವರಂ ವಿಶ್ವಸ್ಯ ದೂತಮಮೃತಮ್ ॥**

(ಋ.ಸಂ .-೫-೨-೨೧-೧)

ಸಿಷಕ್ತು ಸಚತ ಇತಿ ಸೇವಮಾನಸ್ಯ । 'ಸ ನಃ ಸಿಷಕ್ತು ಯಸ್ತುರಃ ।' ಸೇವತಾಂ ಯಸ್ತುರಃ । 'ಸಚಸ್ವಾ ನಃ ಸ್ವಸ್ತಯೇ । ಸೇವಸ್ವ ನಃ ಸ್ವಸ್ತಯೇ । ಸ್ವಸ್ತೀತ್ಯವಿನಾಶಿನಾಮ । ಅಸ್ತಿರಭಿಪೂಜಿತಃ ಸು ಅಸ್ತೀತಿ ॥೫॥

ಸಿಷಕ್ತು, **ಸಚತೇ** ಇವೆರಡು ಸೇವೆಮಾಡುವವನ ಹೆಸರು. ಇಲ್ಲಿ ಧಾತ್ವರ್ಥಕ್ಕೆ ಮಾತ್ರ ವಿವಕ್ಷಾ ಮಾಡಬೇಕು.

**ಯೋ ರೇವಾನ್ಯೋ ಅಮೀವಹಾ ವಸುವಿತ್ಪುಷ್ಟಿವರ್ಧನಃ ।**
**ಸನಃ ಸಿಷತ್ತು ಯಸ್ತುವರಃ ॥**

(ಋ. ಸ.-೧-೧-೩೪-೨)

ಯಃ = ನಿಮ್ಮ ಪ್ರಸಾದದಿಂದ ಯಾರು ತುರಃ = ಕ್ಷಿಪ್ರಕಾರಿಯೋ ಸಃ = ಅವನು. ನಃ = ನಮ್ಮನ್ನು ಸಿಷಕ್ತು (ಸೇವತಾಂ) ಸೇವಿಸಲಿ. ನಃ = ನಮ್ಮನ್ನು ಸ್ವಸ್ತಯೇ = ಮಂಗಳಕ್ಕೋಸ್ಕರ ಆ ಸಚಸ್ವ (ಸೇವಸ್ವ) = ಚನ್ನಾಗಿ ಸೇವಿಸು. ಸ್ವಸ್ತಿ ಇತಿ = ಸ್ವಸ್ತಿ ಎಂಬುದು ಅವಿನಾಶಿ ನಾಮ = ನಾಶಹೊಂದದ ಪದಾರ್ಥದ ಹೆಸರು. ಕೆಲವರು ಅವಿನಾಶದ ಹೆಸರೆನ್ನುತ್ತಾರೆ. ಸು ಎಂಬ ಉಪಸರ್ಗದಿಂದ ಕೂಡಿದ ಅಸ್ತಿ ಎಂಬುದು ಪೂಜಿತಾರ್ಥವನ್ನು ಹೇಳುತ್ತದೆ. ಇದು **ಸಿಷಕ್ತು** ಪದಕ್ಕೆ ಉದಾಹರಣೆ.

**ಸಚತೇ** ಎಂಬ ಪದಕ್ಕೆ ಉದಾಹರಣೆ—

**ಸನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ ।**
**ಸಚಸ್ವಾ ನಃ ಸ್ವಸ್ತಯೇ ॥**

(ಋ. ಸಂ. ೧-೧-೨-೪)

ಭ್ಯಸತೇ ರೇಜತ ಇತಿ ಭಯವೇಪನಯೋಃ । "ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಮ್ ।" "ರೇಜತೇ ಅಗ್ನೇ ಪೃಥಿವೀ ಮಖೇಭ್ಯಃ" ಇತ್ಯಪಿ ನಿಗಮೌ ಭವತಃ ॥೬॥

**ಭ್ಯಸತೇ, ರೇಜತೇ** ಇವೆರಡು ಹೆದರುವುದು ನಡುಗುವುದು ಎಂದರ್ಥಕೊಡುತ್ತವೆ.

**ಭ್ಯಸತೇ** ಎಂದು ಬಂದಿರುವ ಋಕ್ಕಿನ ಉದಾಹರಣೆ—

**ಯೋ ಜಾತ ಏವ ಪ್ರಥಮೋ ಮನಸ್ವಾದ್ದೇವೋ ದೇವಾನ್ಕ್ರತುನಾ ಪರ್ಯಭೂಷತ್ ॥**
**ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸಜನಾಸ ಇಂದ್ರಃ**

(ಋ. ಸ. ೨-೬-೭-೧)

**ರೇಜತೇ** ಎಂಬ ಪದ ಬಂದಿರುವ ಋಕ್ಕಿನ ಉದಾಹರಣೆ—

**ಪ್ರ ಚಿತ್ರಮರ್ಕಃ ಗೃಣತೇ ತುರಾಯ ಮಾರುತಾಯ ಸ್ವತವಸೇ ಭರಧ್ವಂ ।**
**ಯೇ ಸಹಾಂಸಿ ಸಹಸಾ ಸಹನ್ತೇ ರೇಜತೇ ಅಗ್ನೇ ಪೃಥಿವೀಮಖೇಭ್ಯಃ ।**

(ಋ. ಸಂ. ೫-೧-೮-೪)

———

ದ್ಯಾವಾಪೃಥಿವೀನಾಮಧೇಯಾನ್ಯುತ್ತರಾಣಿ ಚತುರ್ವಿಂಶತಿಃ ॥೭॥೨೧ ॥

ಇನ್ನು ಮುಂದೆ ಸ್ವಧೇ, ಪುರಂಧೀ ಮುಂತಾದ ದ್ವಿತ್ವಸಂಬಂಧ ಹೊಂದಿದ ೨೪ ದ್ಯಾವಾಪೃಥಿವೀ=ಭೂಮ್ಯಾಕಾಶಗಳ ನಾಮಗಳು. ॥೭॥

(೧) ಸ್ವಧೇ (೨) ಪುರನ್ಧೀ (೩) ಧಿಷಣೇ (೪) ರೋದಸೀ (೫) ಕ್ಷೋಣೀ (೬) ಅಮ್ಭಸೀ (೭) ನಭಸೀ (೮) ರಜಸೀ (೯) ಸದಸೀ (೧೦) ಸದ್ಮನೀ (೧೧) ಘೃತವತೀ (೧೨) ಬಹುಲೇ (೧೩) ಗಭೀರೇ (೧೪) ಗಂಭೀರೇ (೧೫) ಓಣ್ಯೌ (೧೬) ಚಮ್ವೌ (೧೭) ಪಾರ್ಶ್ವೇ ॥ (೧೮) ಮಹೀ

(೧೯) ಉರ್ವೀ (೨೦) ಪೃಥ್ವೀ (೨೧) ಅದಿತೀ (೨೨) ಅಹೀ
(೨೩) ದೂರೇಅನ್ತೇ (೨೪) ಅಪಾರೇ ॥

ಅಪಾರೇ ಇತಿ ಚತುರ್ವಿಂಶತಿರ್ದ್ಯಾವಾಪೃಥಿವ್ಯೋರ್ನಾಮಧೇಯಾನಿ ॥೩೦॥

(೧) **ಸ್ವಧೇ** ॥ ಭೂಮ್ಯಾಕಾಶಗಳಿಗೆ ಒಂದೇ ಹೆಸರನ್ನು ಹೇಳುತ್ತಾನೆ. ಈ ಪದವು ಅನ್ನನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೯೭) ತಸ್ಮಿಂದಲೇ ಪ್ರಾಣಿವರ್ಗವು ಧರಿಸಲ್ಪಡುವುದು, ಇವುಗಳಲ್ಲಿ ಸ್ವಕೀಯಧನವು ಇಡಲ್ಪಡುತ್ತದೆ. ಎರಡು ಹೆಸರಾಗುವುದರಿಂದ ಯಾವಾಗಲೂ ದ್ವಿವಚನಾಂತವಾಗಿಯೇ ಇರುತ್ತದೆ. ನಿಗಮ ಹುಡುಕಬೇಕು.

(೨) **ಪುರನ್ಧೀ** ॥ ‘ಪುರಾಣಿ ಧೀಯನ್ತೇಽನಯೋಃ’ ಇವೆರಡರಲ್ಲಿ ಪಟ್ಟಣಗಳು ಸ್ಥಿತಿಹೊಂದಿರುತ್ತವೆ. ‘ಕರ್ಮಣ್ಯಧಿಕರಣೇ ಚ’ ಸೂತ್ರದಿಂದ ಪುರ ಎಂಬ ಕರ್ಮವಾಚಕಪದವಿರುವಾಗ ಧಾಧಾತುವಿಗೆ ಕಿಪ್ರತ್ಯಯ. ಆಕಾರಲೋಪ. ಪೃಷೋದರಾದಿಪಠಿತವಾದುದರಿಂದ ಮಕಾರ ಅಧಿಕವಾಗಿ ಬರುತ್ತದೆ. ॥

(೩) **ಧಿಷಣೇ** ॥ ವಾಙ್ನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೧-೪೪). ತಮ್ಮನ್ನು ತಾವು ರಕ್ಷಿಸಲು ಸಮರ್ಥವಾಗಿರುತ್ತವೆ, ದೇವಮನುಷ್ಯಾದಿಗಳನ್ನು ಧರಿಸಿರುತ್ತವೆ, ಸ್ತುತಿಸಲ್ಪಡುವವುಗಳು. ॥

(೪) **ರೋದಸೀ** ॥ ಇದು ಸ್ತ್ರೀಲಿಂಗ ದ್ವಿವಚನಾಂತವಾಗಿಯೂ ಇದೆ. ದ್ಯಾವಾ ಪೃಥಿವಿಯಲ್ಲಿ ನಪುಂಸಕ ದ್ವಿವಚನಾಂತ. ಅವ್ಯಯವೂ ಇದೆ. ಎಲ್ಲದಕ್ಕೂ ನಿಗಮ ಇರುವುದರಿಂದ ಸಾಮಾನ್ಯವಾಗಿ ಹೇಳಿದೆ. ‘ರುಧಿರ್-ಆವರಣೇ.’ ಔಣಾದಿಕ ಅಸುನ್‌ಪ್ರತ್ಯಯ. ಲಘೂಪಧಗುಣ. ಪೃಷೋದರಾದಿಪಠಿತವಾದುದರಿಂದ ಧಕಾರಕ್ಕೆ ದಕಾರಾದೇಶ. ಸ್ತ್ರೀಲಿಂಗದಲ್ಲಿ ಉಗಿತ್ತಾಗುವುದರಿಂದ ಙೀಪ್. ‘ವಾ ಛಂದಸಿ’ ಸೂತ್ರದಿಂದ ಪೂರ್ವಸವರ್ಣದೀರ್ಘ. ಇವುಗಳಿಂದ ನಾನಾ ರೀತಿಯಾಗಿ ಭೂತಪ್ರಪಂಚ ತಡೆದಿರುತ್ತದೆ. **“ನಮೋ ದಿವೇ ವೃಹತೇ ರೋದಸೀಭ್ಯಾಂ’** (ಋ. ಸಂ. ೨-೧-೨೬-೬) **‘ಇಮೇ ಚಿದಿಂದ್ರ ರೋದಸೀ ಅಪಾರೇ’** (ಋ. ಸಂ. ೩-೨-೧-೫) ಅಂತೋದಾತ್ತವಾದ ರೋದಸೀಶಬ್ದವು ರುದ್ರಪತ್ನೀವಾಚಕವಾಗುವುದೆಂದು ಮಾಧವ ಭಾಷ್ಯ ॥

(೫) **ಕ್ಷೋಣೀ** ॥ ಪೃಥಿವೀನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧-೭) **‘ಆಯುಃ ಕ್ಷೋಣೀ ಸಚತೇ ಮಾಹಿನಾ ವಾಮ್’** (ಋ.ಸಂ.೨-೪-೨೩-೫)

(೬) ಅಂಭಸೀ ॥ ಉದಕನಾಮದಲ್ಲಿ ವ್ಯಾಖ್ಯಾತವಾಗಿದೆ. (೧-೧೨-೪). ಬಹುಲಗ್ರಹದಿಂದ ಇಲ್ಲಿಯೂ ನುಮಾಗಮ ಬಂದಿದೆ. ಅಥವಾ ‘ನೀರು ಇವುಗಳಲ್ಲಿರುತ್ತದೆ’ ಎಂಬರ್ಥವಾಗುವುದರಿಂದ ಮತ್ವರ್ಥಪ್ರತ್ಯಯ ಬಂದು ಲುಕ್ ಆಗಿದೆ. ॥

(೭) **ನಭಸೀ** ॥ ‘ಣಹ-ಬಂಧನೇ.’ ಧಾತ್ವಾದಿಗೆ ನತ್ವ. ‘ನಹೇರ್ದಿವಿ ಭಶ್ಚ’ (ಉ.೪-೨೦೫) ಸೂತ್ರದಿಂದ ಅಸುನ್, ಹಕಾರಕ್ಕೆ ಭಕಾರಾದೇಶ. ಆಕಾಶಸಂಬಂಧವಿರುವುದರಿಂದ ಪೃಥ್ವಿಯೂ ನಭಃಶಬ್ದವಾಚ್ಯವಾಗುತ್ತದೆ. ಪುಣ್ಯವಂತರಿಂದ ಸಂಬಂಧ ಹೊಂದಲ್ಪಡುವುದು ಎಂದರ್ಥ. ॥

(೮) ರಜಸೀ ‖ 'ರಞ್ಜ-ರಾಗೇ' (ಭ್ವಾ.ಉ) 'ಭೂರಞ್ಜಿಭ್ಯಾಂ ಕಿತ್' (ಉ.೪-೨೧೧) ಸೂತ್ರದಿಂದ ಅಸುನ್. ಕಿತ್ತಾದುದರಿಂದ ನಲೋಪ. ಪುಣ್ಯವಂತರಿಂದ ಹೊಂದಲ್ಪಡುವುದು. ‖

(೯) ಸದಸೀ ‖ ಗತ್ಯರ್ಥಕ ಸದ್‌ಧಾತುವಿಗೆ ಅಸುನ್ ಇವುಗಳಲ್ಲಿ ದೇವಮನುಷ್ಯಾದಿಗಳು ತಿರುಗುತ್ತಾರೆ. ‖

(೧೦) ಸದ್ಮನೀ ‖ ಪೂರ್ವೋಕ್ತಧಾತುವಿಗೆ ಔಣಾದಿಕಮನಿನ್‌ಪ್ರತ್ಯಯ. '**ಪುರಾಣ್ಯೋಃ ಸದ್ಮನೋ ಕೇತುರನ್ತಃ**' (ಋ.ಸಂ.೩-೩-೨೮.೨)

(೧೧) ಘೃತವತೀ ‖ ಘೃತವೆಂದರೆ ನೀರು. ನೀರಿನಿಂದ ಕೂಡಿರುವವುಗಳು. ‖

(೧೨) ಬಹುಲೇ ‖ ಮಹನ್ನಾಮದಲ್ಲಿ ವ್ಯಾಖ್ಯಾತವಾಗಿವೆ. (೩-೪-೨೪) . ಅನೇಕಪದಾರ್ಥಗಳಿಂದ ಕೂಡಿರುವವುಗಳು. '**ಉರ್ವೀ ಪೃಥ್ವೀ ಬಹುಲೇ ದರೇ ಅನ್ತೇ**' (ಋ.ಸಂ.೨-೫-೩-೨) ‖

(೧೩) ಗಭೀರೇ (೧೪) ಗಂಭೀರೇ ‖ ವಾಕ್‌ನಾಮದಲ್ಲಿ ವ್ಯಾಖ್ಯಾತವಾಗಿವೆ. (೧-೧೧-೭-೮) ಸತ್ಪುರುಷರಿಂದ ಹೊಂದಲ್ಪಡುವುದು, ದೇವಮನುಷ್ಯಾದಿಗಳು ಇರುತ್ತಾರೆ ಎಂದರ್ಥ. ‖

(೧೫) ಓಣ್ಯೌ ‖ 'ಓಣೃ-ಅಪನಯನೇ' (ಭ್ವಾ-ಪ-) 'ಇನ್ ಸರ್ವಧಾತುಭ್ಯಃ' ಎಂಬುದರಿಂದ ಇನ್ ಬಂದಾಗ ಸ್ತ್ರೀತ್ವದಲ್ಲಿ 'ಕೃದಿಕಾರಾದಕ್ತಿನಃ' ವಾರ್ತಿಕದಿಂದ ಙೀಷ್. ತಮ್ಮನ್ನು ಆಶ್ರಯಿಸಿದವರ ಕ್ಲೇಶವನ್ನು ದೂರಮಾಡುತ್ತವೆ. ಅಥವಾ ರಕ್ಷಣಾರ್ಥಕ ಅವಧಾತುವಿಗೆ ಉಟ್‌ಬಂದಾಗ ಛಾಂದಸವಾದುದರಿಂದ ಸಂಪ್ರಸಾರಣ, ಗುಣ ಬರುತ್ತದೆ. ಟಿತ್ತಾದುದರಿಂದ 'ಟಿಡ್ಢಾಣಞ'—ಸೂತ್ರದಿಂದ ಙೀಪ್ '**ಅಭಿ ತ್ಯಂ ದೇವಂ ಸವಿತಾರಮೋಣ್ಯೋಃ**' (**ಯ. ವಾ. ಸಂ. -೪-೨೫** ‖

(೧೬) ಚಮ್ವೌ ‖ 'ಚಮು-ಅದನೇ' (ಭ್ವಾ-ಪ) 'ಕೃಪಿಚಮಿತನಿ'—(ಉ-೧-೭೮-) ಸೂತ್ರದಿಂದ ಊ ಪ್ರತ್ಯಯ. ಇವುಗಳಲ್ಲಿದ್ದು ತಿನ್ನುತ್ತಾರೆ. '**ಉತ್ತಾನಯೋಶ್ಚಮ್ವೋ ೩ ರ್ಯೋರ್ನಿರಂತಃ**' (**ಋ. ಸಂ. ೨-೩-೨೦-೩**) ‖

(೧೭) ಪಾರ್ಶ್ವೌ ‖ 'ಸ್ಪೃಶ-ಸಂಸ್ಪರ್ಶನೇ' ತು-ಪ) 'ಸ್ಪೃಶೇಃ ಶ್ವಣ್ ಶುನೌ ಪೃಚ' (ಉ. ೫-೨೭) ಸೂತ್ರದಿಂದ ಶ್ವಣ್‌ಪ್ರತ್ಯಯ, ಧಾತುವಿಗೆ ಪೃಭಾವ. ಣಿತ್ತಾದುದರಿಂದ ವೃದ್ಧಿ. ವ್ಯತ್ಯಯದಿಂದ ಇಲ್ಲಿ ಪುಲ್ಲಿಂಗ. 'ಪಾರ್ಶ್ವೇ' ಎಂದು ಪಾಠಾಂತರವೂ ಇದೆ. ಸರ್ವ ಪದಾರ್ಥಗಳನ್ನು ವಾಪಿಸಿರುತ್ತವೆ. ‖

(೧೮) ಮಹೀ ‖ ಈ ಶಬ್ದದಿಂದ ನಾಲ್ಕು ಶಬ್ದದವರೆಗೆ ಪೃಥಿವೀನಾಮಗಳಲ್ಲಿ ವ್ಯಾಖ್ಯಾತವಾಗಿವೆ. ಅತಿದೊಡ್ಡದಾಗಿರುವವುಗಳು. ಪೂಜಾಯೋಗ್ಯಗಳು ಎಂದರ್ಥ. **ವೇಪೇತೇ ಭಿಯಸಾ ಮಹೀ** (**ಋ. ಸಂ.** ೧-೫-೩೧-೧)

(೧೯) **ಉರ್ವೀ** ॥ ಅತಿ ವಿಸ್ತಾರವಾದವುಗಳು. ಸ್ವರ್ಗಪಾತಾಳಗಳನ್ನು ಮುಚ್ಚಿರುವವುಗಳು.

(೨೦) **ಪೃಥ್ವೀ** ॥ ಬ್ರಹ್ಮನಿಂದ ಸೃಷ್ಟಿಕಾಲದಲ್ಲಿಯೇ ವಿಸ್ತಾರಗೊಳಿಸಲ್ಪಟ್ಟವುಗಳು.

(೨೧) **ಅದಿತೀ** ॥ ದೇವಮನುಷ್ಯಾದಿ ಸಕಲ ಪ್ರಪಂಚವನ್ನು ಧರಿಸಿದ್ದರೂ ಖಿನ್ನವಾಗದಿರುವವುಗಳು.

(೨೨) **ಅಹೀ** ॥ ಗೋನಾಮದಲ್ಲಿ ವ್ಯಾಖ್ಯಾತವಾಗಿದೆ. (೩-೧೩-೪) ಪ್ರಾಣಿಗಳಿಂದ ಹೊಂದಲ್ಪಡುವವುಗಳು.

**(೨೩) ದೂರೇಅನ್ತೇ** ॥ದುಃ ಶಬ್ದ ಉಪ ಪದವಾಗಿರುವಾಗ ಇಣ್ ಧಾತುವಿಗೆ 'ದುರೇಣೋ ಲೋಪಶ್ಚ' (ಉ-೨. ೧೮) ಸೂತ್ರದಿಂದ ರಕ್‌ಪ್ರತ್ಯಯ, ಧಾತುವಿಗೆ ಲೋಪ 'ರೋರಿ' (ಪಾ-ಸೂ-೮-೩-೧೪) ಸೂತ್ರದಿಂದ ಪೂರ್ವರೇಫಕ್ಕೆ ಲೋಪ. ಢ್ರಲೋಪೇ—'ಸೂತ್ರದಿಂದ ಪೂರ್ವದ ಉಕಾರಕ್ಕೆ ದೀರ್ಘ. ದೂರಪದವಾಗುತ್ತದೆ. 'ಅಂತೋ ಅತತೇಃ 'ಎಂದು ಭಾಷ್ಯ ಬಹುಲ ಗ್ರಣದಿಂದ ಅತಧಾತುವಿಗೆ ತನ್, ಮಕಾರ ಅಂತಾದೇಶವಾಗಿ ಬರುತ್ತದೆ. ದುಃಖದಿಂದ ಹೊಂದುವವುಗಳು. ಆದಿಮಧ್ಯಾಂತಗಳು ಇಲ್ಲದಿರುವುದರಿಂದ ಸತತಗಮನವುಳ್ಳವುಗಳೆಂದರ್ಥ. ದೂರದಲ್ಲಿ ಅವಸಾನವುಳ್ಳವುಗಳು. 'ತತ್ಪುರುಷೇ ಕೃತಿ ಬಹುಲಮ್' [ಪಾ. ಸೂ- ೬-೩-೧೪] ಸೂತ್ರದಿಂದ ದೂರೇ ಎಂಬಲ್ಲಿ ಅಲುಕ್ ಬಂದಿದೆ. **'ಸಮಾನ್ಯಾ ವಿಯುತೇ ದೂರೇ ಅನ್ತೇ'** [ಋ. ಸಂ. ೩-೩.೨೫-೨] ॥

(೨೪) **ಅಪಾರೇ** ॥ 'ಪಾರ–ಕರ್ಮಸಮಾಪ್ತೌ' ಜುಹೋತ್ಯಾದಿ. ಅದಂತಧಾತು. ಇದಕ್ಕೆ ಘಞ್‌ಪ್ರತ್ಯಯ. ಇದರಿಂದ ಸಮಾಪ್ತಿಹೊಂದುವುದು ಪಾರ. 'ಅವಿದ್ಯಮಾನಂ ಪಾರಮನ್ತಂ ಯಯೋಸ್ತೇ' ಎಲ್ಲಿ ಹೋದರೂ ಕೊನೆ ಇಲ್ಲದಿರುವವುಗಳು. 'ಅಪಾರೇ ದೂರಪಾರೇ' (ನಿರು. ೬-೧) ಎಂದು ಭಾಷ್ಯ. ದೂರಕಾರಣದಿಂದ ಪರಾಭವ ತೋರಿಸುವುದು ಅಪಾರವೆಂದು ಸ್ಕಂದಸ್ವಾಮಿಯ ವ್ಯಾಖ್ಯಾನ. ನಿಗಮ ಹುಡುಕಬೇಕು. ಅಧ್ಯಾಯ ಸಮಾಪ್ತಿಸೂಚನೆಗೆ ದ್ವಿರುಕ್ತಿ ಹೇಳಿದೆ.

**ಇತಿ ಏಕವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೊಂದನೆಯ ಖಂಡವು ಸಮಾಪ್ತವು

---

## ದ್ವಾವಿಂಶಃ ಖಂಡಃ

### ಇಪ್ಪತ್ತೆರಡನೆಯ ಖಂಡವು

ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ। ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿವರ್ತೇತೇ ಅಹನೀ ಚಕ್ರಿಯೇವ॥ ಕತರಾ ಪೂರ್ವಾ ಕತರಾ-ಪರೈನಯೋಃ ಕಥಂ ಜಾತೇ ಕವಯಃ ಕ ಏನೇ ವಿಜಾನಾತಿ

ಸರ್ವಮಾತ್ಮನಾ ಬಿಭೃತೋ ಯದ್ಧೈನಯೋಃ ಕರ್ಮ ವಿವರ್ತ್ರೇತೇ ಚೈನಯೋರಹನೀ ಅಹೋರಾತ್ರೇ ಚಕ್ರಯುಕ್ತೇ ಇವೇತಿ ದ್ಯಾವಾ-ಪೃಥಿವ್ಯೋರ್ಮಹಿಮಾನಮಾಚಷ್ಟ ಆಚಷ್ಟೇ ॥ ೨೨ ॥

ತಯೋರೇಷಾ ಭವತಿ—

ಈ ದ್ಯಾವಾಪೃಥಿವೀ ನಾಮಗಳು ಯಾವಾಗಲೂ ದ್ವಿವಚನದಿಂದ ಕೂಡಿರುತ್ತವೆ. ಅವೆರಡಕ್ಕೆ ಸಾಹಚರ್ಯವನ್ನು ತಿಳಿಸುವ ಋಕ್‌ಮಂತ್ರವು ಇದಾಗುತ್ತದೆ.

'ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ । ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿವರ್ತ್ರೇತೇ ಅಹನೀ ಚಕ್ರಿಯೇವ ॥'

ಕತರಾ ಪೂರ್ವಾ ಕತರಾಪರಾ । ಏನಯೋಃ ಕಥಂ ಜಾತೇ ಕವಯಃ ಕ ಏನೇ ವಿಜಾನಾತಿ । ಸರ್ವಮಾತ್ಮನಾ ಬಿಭೃತೋ ಯದ್ಧೈನಯೋಃ ಕರ್ಮ ವಿವರ್ತ್ರೇತೇ ಚೈನಯೋರಹನೀ ಅಹೋರಾತ್ರೇ ಚಕ್ರಿಯೇವ ಚಕ್ರಯುಕ್ತೇ ಇವೇತಿ ದ್ಯಾವಾಪೃಥಿವ್ಯೋರ್ಮಹಿಮಾನಮಾಚಷ್ಟ ಆಚಷ್ಟೇ ॥೧॥

**ಅನಯೋಃ** ಈ ದ್ಯಾವಾಪೃಥಿವಿಗಳಲ್ಲಿ, ಕತರಾ ಪೂರ್ವಾ=ಯಾವುದು ಮೊದಲಿರುವುದು? ಕತರಾ ಅಪರಾ?=ಯಾವುದು ಆಮೇಲಿರುವುದು? ಇವುಗಳ ಪೌರ್ವಾಪರ್ಯವನ್ನು ತಿಳಿಯಲು ಅಸಾಧ್ಯವೆಂದರ್ಥ. ಹೇ ಕವಯಃ=ಅತೀಂದ್ರಿಯವನ್ನು ತಿಳಿದವರೇ ನೀವು ಹೇಳಿರಿ. ಕಥಂ ಜಾತೇ?= ಇವು ಹೇಗಾದುವು? ಪೌರ್ವಾಪರ್ಯಕ್ರಮದಿಂದ ಉಂಟಾದವೇ? ಅಥವಾ ಏಕಕಾಲದಲ್ಲಿ ಎರಡೂ ಹುಟ್ಟಿದುವೇ? ಯಾರಾದರೂ ಇವುಗಳ ಪೌರ್ವಾಪರ್ಯವನ್ನಾಗಲೀ ಕಾರಣವನ್ನಾಗಲೀ ತಿಳಿಯಲು ಸಮರ್ಥರೇ? ಸರ್ವಂ=ಸಕಲಪ್ರಪಂಚವನ್ನು ಆತ್ಮನಾ=ತಮ್ಮಿಂದಲೇ ಯಾವ ಸಹಾಯಾಪೇಕ್ಷೆ ಇಲ್ಲದೆ ಬಿಭೃತಃ=ಧರಿಸುತ್ತವೆ. ಇವೆರಡರಲ್ಲಿಯೇ ಸಂತತ ಕ್ರಿಯೆಯೂ, ಹಗಲೂ ರಾತ್ರಿಗಳೂ ರಥದ ಎರಡು ಚಕ್ರಗಳಂತೆ ವಿಚ್ಛೇದವಿಲ್ಲದೆ ಸಂಬದ್ಧವಾಗಿರುತ್ತವೆ. ॥

**ಇತಿ ದ್ವಾವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೆರಡನೆಯ ಖಂಡವು ಸಮಾಪ್ತವು



**ಇತಿ ನಿರುಕ್ತೇ ಪೂರ್ವಷಟ್ಕೇ ತೃತೀಯೋಽಧ್ಯಾಯಃ**

ಇಲ್ಲಿಗೆ ಮೂರನೆಯ ಅಧ್ಯಾಯವು ಸಮಾಪ್ತವು

# ಅಥ ನೈಗಮಂ ಕಾಂಡಂ



## ಚತುರ್ಥಾಧ್ಯಾಯಃ

### ಪ್ರಥಮಃ ಖಂಡಃ

---

### ಮೊದಲನೆಯ ಖಂಡವು

ಓಂ॥ ಏಕಾರ್ಥಮನೇಕಶಬ್ದಮಿತ್ಯೇತದುಕ್ತಮಥ ಯಾನ್ಯನೇಕಾರ್ಥಾನ್ಯೇಕಶಬ್ದಾನಿ ತಾನ್ಯತೋಽನುಕ್ರಮಿಷ್ಯಾಮೋಽನವಗತಸಂಸ್ಕಾರಾಂಶ್ಚ ನಿಗಮಾಂಸ್ತದೈಕಪದಿಕಮಿತ್ಯಾಚಕ್ಷತೇ ಜಹಾ ಜಘಾನೇತ್ಯರ್ಥಃ॥ ೧ ॥

**॥ ಜಹಾ ॥ ॥ ೧ ॥**

**ಜಹಾ ಜಘಾನೇತ್ಯರ್ಥಃ ॥**

ಇದುವರೆಗೆ **ಏಕಾರ್ಥಮನೇಕಶಬ್ದಂ** ಒಂದೇ ಅರ್ಥವಿರುವ ಅನೇಕ ಶಬ್ದಗಳನ್ನು ವಿವರಿಸಿದ್ದಾಯಿತು. ಎಂದರೆ ಈ ನಿರುಕ್ತಗ್ರಂಥದಲ್ಲಿ ಎರಡನೆಯ ಮತ್ತು ಮೂರನೆಯ ಅಧ್ಯಾಯಗಳಲ್ಲಿ ಒಂದೇ ಅರ್ಥವಿರುವ ಅನೇಕಶಬ್ದಗಳನ್ನು ಒಟ್ಟಿಗೆ ಸೇರಿಸಿ ಅವುಗಳಿಗೆ ಎಂದರೆ ಆ ಶಬ್ದಗಳಿಗೆ ಆ ಅರ್ಥವು ಹೇಗೆ ಉಂಟಾಯಿತು ಎಂಬುದನ್ನು ಹೇಳಿದ್ದಾಯಿತು. ಈಗ ಈ ವಿಷಯಕ್ಕೆ ವ್ಯತಿರಿಕ್ತವಾಗಿ ಎಂದರೆ ಒಂದು ಶಬ್ದಕ್ಕೆ ಅನೇಕ ಅರ್ಥವಿರುವುದನ್ನು ವಿವರಿಸುತ್ತೇವೆ. ಸಂದರ್ಭಾನುಸಾರವಾಗಿ ಒಂದೇಶಬ್ದಕ್ಕೆ ಅನೇಕ ಅರ್ಥಗಳನ್ನು ಹೇಳಬಹುದು ಆ ಶಬ್ದಗಳಿಗೆ ವ್ಯಾಕರಣ ಬದ್ಧವಾದ ನಿಯಮಗಳನ್ನನುಸರಿಸಿ ನಾನಾರ್ಥಗಳನ್ನು ಹೇಳಬಹುದು. ಕೆಲವು ಸಂದರ್ಭಗಳಲ್ಲಿ ಮಾತ್ರ ಆ ಶಬ್ದಗಳ ಅರ್ಥವು ವ್ಯಾಕರಣನಿಯಮಗಳಿಗೆ ಒಳಪಡುವುದಿಲ್ಲ. ಆ ಶಬ್ದಗಳಿಗೆ ನಿಯಮಪ್ರಕಾರ ವಿಭಕ್ತಿವಚನ, ಪ್ರತ್ಯಯ ಮುಂತಾದ ವ್ಯತ್ಯಾಸಗಳೂ ಉಂಟಾಗುವುದಿಲ್ಲ ಕೇವಲ ರೂಢಿಯಲ್ಲಿ ಎಂದರೆ ಬಳಕೆಯಲ್ಲಿ (ಎಂದರೆ ಯಾವ ಅರ್ಥದಲ್ಲಿ) ಆ ಶಬ್ದಗಳ ಪ್ರಯೋಗವಿರುವುದೋ ಅಂತಹ ಕೆಲವು ಶಬ್ದಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವುದು. ಈ ಬಳಕೆಯಲ್ಲಿರುವ ಶಬ್ದಗಳಿಗೆ ಅನವಗತ ಸಂಸ್ಕಾರಶಬ್ದಗಳು ಎಂದು ಹೆಸರಿಡಬಹುದು. ಏಕೆಂದರೆ, ನಿಯಮದಂತೆ ಆ ಶಬ್ದಗಳಿಗೆ ಪ್ರತ್ಯಯ, ವಚನವಿಭಕ್ತಿಗಳ ವ್ಯತ್ಯಾಸ ಮೊದಲಾದ ಪರಿಣಾಮಗಳು ಅನ್ವಯಿಸುವುದಿಲ್ಲ. ಬಳಕೆಯಲ್ಲಿರುವ ಅರ್ಥಮಾತ್ರ ಅನ್ವಯಿಸುವುದು. ಉದಾಹರಣೆಗೆ **ಜಹಾ-ಜಘಾನೇತ್ಯರ್ಥಃ** ಎಂಬಲ್ಲಿ

**ಜಹಾ** ಎಂದರೆ **ಜಘಾನ** ಸಂಹಾರಮಾಡಿದ್ದೇನೆ. ಅಥವಾ ಸಂಹಾರಮಾಡಿದನು ಎಂಬರ್ಥದಲ್ಲಿ ಜಹಾ ಶಬ್ದದ ಪ್ರಯೋಗವಿದೆ.

**ಇತಿ ಪ್ರಥಮಃ ಖಂಡಃ**

ಇಲ್ಲಿಗೆ ಮೊದಲನೆಯ ಖಂಡವು ಸಮಾಪ್ತವು

———

## ಅಥ ದ್ವಿತೀಯಃ ಖಂಡಃ

**ಎರಡನೆಯ ಖಂಡವು**

ಕೋ ನು ಮರ್ಯಾ ಅಮಿಥಿತಃ ಸಖಾ ಸಖಾಯಮಬ್ರವೀತ್ । ಜಹಾ ಕೋ ಅಸ್ಮದೀಷತೇ ॥ (ಋ. ಸಂ. ೮–೪೫–೩೭) ಮರ್ಯಾ ಇತಿ ಮನುಷ್ಯನಾಮ । ಮರ್ಯಾದಾಭಿಧಾನಂ ವಾ ಸ್ಯಾತ್ । ಮರ್ಯಾದಾ ಮರ್ಯೈರಾದೀಯತೇ । ಮರ್ಯಾದಾಮರ್ಯಾದಿನೋರ್ವಿಭಾಗಃ । ಮೇಥತಿರಾಕ್ರೋಶಕರ್ಮಾ ॥ ಅಪಾಪಕಂ ಜಘಾನ ಕಮಹಂ ಜಾತು। ಕೋಽಸ್ಮದ್ಭೀತಃ ಪಲಾಯತೇ॥ ನಿಧಾ ಪಾಶ್ಯಾ ಭವತಿ ಯನ್ನಿಧೀಯತೇ ಪಾಶ್ಯಾ ಪಾಶಸಮೂಹಃ ಪಾಶಃ ಪಾಶಯತೇರ್ವಿಪಾಶನಾತ್ ॥೨॥

ಇಲ್ಲಿ **ಜಹಾ** ಶಬ್ದಕ್ಕೆ **ಜಘಾನ** ಕೊಂದನು ಎಂಬ ಅರ್ಥವು ವಿವೃತವಾಗಿದೆ. ಕೊಲ್ಲು ಎಂಬರ್ಥವಿರುವ ಹಂತಿಧಾತುವಿನಿಂದ ಜಹಾ ಶಬ್ದವು ನಿಷ್ಪನ್ನವಾಗಿದೆ, ಜಹಾತಿಧಾತುವಿನಿಂದ ಅಲ್ಲ. ಮೇಲೆ ನೋಡುವುದಕ್ಕೆ ಜಹಾತಿಧಾತುವಿನಿಂದ ಉತ್ಪನ್ನವಾಗಿದ್ದಂತೆ ಕಂಡರೂ ಜಹಾ ಶಬ್ದವು ಹಂತಿಧಾತುವಿನಿಂದಲೇ ನಿಷ್ಪನ್ನವಾಗಿದೆ ಇದು ಹೇಗೆ ಎಂದು ನಿಯಮಪ್ರಕಾರ ಹೇಳುವಂತಿಲ್ಲ. ಏಕೆಂದರೆ ಇದು ಸಂಸ್ಕಾರ ರಹಿತವಾದ ಶಬ್ದವೆಂದು ಪರಿಗಣಿಸಲ್ಪಟ್ಟಿದೆ.

**ಮರ್ಯಾ** ಎಂದರೆ ಮನುಷ್ಯರ ಹೆಸರು. ಮನುಷ್ಯರು ಸದಾಕಾಲದಲ್ಲಿಯೂ ಜೀವಿಸಿದೆ ಮರಣಕ್ಕೆ ಒಳಗಾಗುವುದರಿಂದ ಇವರಿಗೆ ಮರ್ಯಾ ಎಂಬ ಹೆಸರು ಬಂದಿದೆ. **ಮರ್ಯಾ** ಶಬ್ದಕ್ಕೆ ಸೀಮೆ ಅಥವಾ ಗಡಿ ಎಂಬರ್ಥವೂ ಇರುವುದು. ಎರಡು ನಿರ್ದಿಷ್ಟ ಪ್ರದೇಶಗಳಿಗೆ (ಎಂದರೆ ಎರಡು ದೇಶಗಳ ಮಧ್ಯೆ ಇರುವ) ಮಧ್ಯದಲ್ಲಿ ಇರುವ ಗಡಿ ಎಂದರ್ಥವು. ಏಕೆಂದರೆ ಮನುಷ್ಯರಿಂದಲೇ ಈ ಗಡಿಯು ನಿಷ್ಕರ್ಷಿಸಲ್ಪಡುತ್ತದೆ. ಆದ್ದರಿಂದಲೇ ಇದಕ್ಕೆ ಎಂದರೆ ಸೀಮೆಗೆ, ಗಡಿಗೆ **ಮರ್ಯಾದಾ** ಎಂದು ಹೆಸರು. ಈ ಗಡಿಯು ಸಿಟ್ಟಾಗು, ಕೋಪಮಾಡು ಎಂಬರ್ಥವುಳ್ಳ **ಮೇಥತಿ** ಧಾತುವಿನಿಂದ ನಿಷ್ಪನ್ನವಾಗಿದೆ. **ಅಪಾಪಕಂ ಜಘಾನ ಕಿಮಹಂ ಜಾತು**–ಪಾಪಿಷ್ಠನಲ್ಲದವನನ್ನು ನಾನು ಯಾವಾಗಲಾದರೂ ಕೊಂದಿದ್ದೇನೆಯೇ ಎಂದು ಇಂದ್ರನು ಪ್ರಶ್ನಿಸುವನು. ಯಾವ ಮನುಷ್ಯನು ತಾನೇ (ಪಾಪಿಷ್ಠನಲ್ಲದವನು) ನನಗೆ ಹೆದರಿ ನನ್ನಿಂದ ದೂರ ಓಡಿಹೋಗಿದ್ದಾನೆ ? ಎಂದೂ ಇಂದ್ರನ ಪ್ರಶ್ನೆಯು. ಉದಾಹರಣೆಗಾಗಿ ಈ ಋಕ್ಕಿನ್ನೂ ಕೊಟ್ಟಿದ್ದಾರೆ.

**ಕೋನು ಮರ್ಯಾ ಅಮಿಥಿತಃ ಸಖಾ ಸಖಾಯಮಬ್ರವೀತ್ ।**
**ಜಹಾ ಕೋ ಅಸ್ಮದೀಷತೇ ॥**

(ಋ. ಸಂ. ೮-೪೫-೩೭)

ಇದರ ಅರ್ಥವು—ಎಲೈ ಮಾನವರೇ, ಕ್ರೋಧವಶನಾಗದ ಯಾವ ಮಿತ್ರನು ತಾನೇ ತನ್ನ ಮಿತ್ರನನ್ನು ಕೊಂದಿದ್ದಾನೆ ? ಯಾರು ತಾನೇ ನನ್ನಿಂದ ಭೀತನಾಗಿ ಓಡಿಹೋಗಿದ್ದಾನೆ ? ಎಂಬುದಾಗಿ ಇಂದ್ರನು ಪ್ರಶ್ನಿಸಿದ್ದಾನೆ. ಅವನಿಂದ ಅವನ ಮಿತ್ರರಾರಿಗೂ ಭಯವಿಲ್ಲವೆಂದು ತಾತ್ಪರ್ಯವು.

**ನಿಧಾ ॥ ೨ ॥**

**ನಿಧಾ ಪಾಶ್ಯಾ ಭವತಿ । ಯನ್ನಿಧೀಯತೇ । ಪಾಶ್ಯಾ ಪಾಶಸಮೂಹಃ ।**
**ಪಾಶಃ ಪಾಶಯತೇರ್ವಿಪಾಶನಾತ್ ॥**

**ನಿಧಾ ಪಾಶ್ಯಾ ಭವತಿ ॥**–ನಿಧಾ ಎಂದರೆ ಪಾಶ್ಯಾ ಅಥವಾ ಬಲೆ ಎಂದರ್ಥವು. **ನೀಚೈರಾಧೀಯತೇ ಇತಿ ನಿಧಾ.** ನೀಚರಿಂದ ನೆಲದಮೇಲೆ ಹರಡಲ್ಪಡುವುದರಿಂದ ಇದಕ್ಕೆ **ನಿಧಾ** ಬಲೆ ಎಂದು ಹೆಸರು. ಪಕ್ಷಿ ಅಥವಾ ಪ್ರಾಣಿಗಳನ್ನೂ ಹಿಡಿಯುವುದಕ್ಕಾಗಿ ಬೇಡರು ಮೊದಲಾದವರು ನೆಲದ ಮೇಲೆ ಬಲೆಯನ್ನು ಹರಡಿ ಅವುಗಳನ್ನು ಹಿಡಿಯುವರು. ಆದ್ದರಿಂದ ಬಲೆಗಳಿಗೆ ನಿಧಾ ಎಂದೂ ಹೆಸರು ಪಾಶ್ಯಾ ಎಂದರೂ ಬಲೆಯೆಂದೇ ಅರ್ಥವು. ಅಥವಾ ಬಲೆಗಳ ಸಮೂಹ. ಪಾಶಗಳಿಂದ ಅಥವಾ ಹಗ್ಗಗಳಿಂದ ಕೂಡಿರುವ ಬಲೆಗೆ ಪಾಶ್ಯಾ ಎಂದು ಹೆಸರು. **ಪಾಶಃ** ಎಂಬ ಶಬ್ದವು **ಪಾಶ್**–ಕಟ್ಟು, ಬಂಧಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ.

**ಇತಿ ದ್ವಿತೀಯಃ ಖಂಡಃ**

ಇಲ್ಲಿಗೆ ಎರಡನೆಯ ಖಂಡವು ಸಮಾಪ್ತವು

---

## ಅಥ ತೃತೀಯಃ ಖಂಡಃ

### ಮೂರನೆಯ ಖಂಡವು

ವಯಃ ಸುಪರ್ಣಾ ಉಪಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ । ಅಪಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯ೧ ಸ್ಮಾನ್ನಿಧಯೇವ ಬದ್ಧಾನ್ ॥ (ಋ. ಸಂ. ೧೦-೭೩-೧೧) ವಯೋ ವೇರ್ಬಹುವಚನಂ ಸುಪರ್ಣಾಃ ಸುಪತನಾ ಆದಿತ್ಯರಶ್ಮಯ ಉಪಸೇದುರಿಂದ್ರಂ ಯಾಚಮಾನಾ ಅಪೋರ್ಣುಹ್ಯಾ-

ಧ್ವಸ್ತಂ ಚಕ್ಷುಶ್ಚಕ್ಷುಃ ಖ್ಯಾತೇರ್ವಾ ಚಷ್ಟೇರ್ವಾ ಪೂರ್ಧಿ ಪೂರಯ ದೇಹೀತಿ ವಾ ಮುಂಚಾಸ್ಮಾನ್ಪಾಶೈರಿವ ಬದ್ಧಾನ್ ಪಾರ್ಶ್ವತಃ ಶ್ರೋಣಿತಃ ಶಿತಾಮತಃ ಪಾರ್ಶ್ವಂ ಪರ್ಶುಮಯಮಂಗಂ ಭವತಿ ಪರ್ಶುಃ ಸ್ಪೃಶತೇಃ ಸಂಸ್ಪೃಷ್ಟಾ ಪೃಷ್ಠದೇಶಂ ಪೃಷ್ಠಂ ಸ್ಪೃಶತೇಃ ಸಂಸ್ಪೃಷ್ಟಮಂಗೈರಂಗಮಂಗನಾದಂಚನಾದ್ವಾ ಶ್ರೋಣಿಃ ಶ್ರೋಣತೇರ್ಗತಿ ಚಲಾಕರ್ಮಣಃ ಶ್ರೋಣಿಶ್ಚಲತೀವ ಗಚ್ಛತೋ ದೋಃ ಶಿತಾಮ ಭವತಿ ದೋರ್ದ್ರಪತೇರ್ಯೋನಿಃ ಶಿತಾಮೇತಿ ಶಾಕಪೂಣಿರ್ವಿಷಿತೋ ಭವತಿ ಶ್ಯಾಮತೋ ಯಕೃತ್ತ ಇತಿ ತೈಟೀಕಿಃ ಶ್ಯಾಮಂ ಶ್ಯಾಯತೇರ್ಯ-ಕೃದ್ಯಥಾಕಥಾ ಚ ಕೃತ್ಯತೇ ಶಿತಿಮಾಂಸತೋ ಮೇದಸ್ತ ಇತಿ ಗಾಲವಃ ಶಿತಿಃ ಶ್ಯತೇರ್ಮಾಂಸಂ ಮಾನನಂ ವಾ ಮಾನಸಂ ವಾ ಮನೋಽಸ್ಮಿನ್ಸೀ-ದತೀತಿ ವಾ ಮೇದೋ ಮೇದ್ಯತೇಃ ॥ ೩ ॥

**ವಯಃ ಸುಪರ್ಣಾ ಉಪಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ ।**
**ಅಪ ಧ್ವಾಂತಮೂರ್ಣುಹಿಪೂರ್ಧಿ ಚಕ್ಷುಮುಮುಗ್ಧ್ಯಸ್ಮಾನ್ನಿಧಯೇವ ಬದ್ಧಾನ್।**

(ಋ. ಸಂ. ೧೦-೭೩-೧೧)

**ವಯೋ ವೇರ್ಬಹುವಚನಂ । ಸುಪರ್ಣಾಃ ಸುಪತನಾ ಆದಿತ್ಯರಶ್ಮಯ ಉಪಸೇದುರಿಂದ್ರಂ ಯಾಚಮಾನಾಃ ॥ ಅಪೋರ್ಣುಹ್ಯಧ್ವಸ್ತಂ ಚಕ್ಷುಃ । ಚಕ್ಷುಃ ಖ್ಯಾತೇರ್ವಾ ಚಷ್ಟೇರ್ವಾ । ಪೂರ್ಧಿ ಪೂರಯ ದೇಹೀತಿ ವಾ । ಮುಂಚಾಸ್ಮಾನ್ ಪಾಶೈರಿವ ಬದ್ಧಾನ್ ॥**

**ನಿಧಾ** ಎಂಬ ಶಬ್ದದ ಪ್ರಯೋಗವಿರುವ ವಯಃ ಸುಪರ್ಣಾ ಎಂಬ ಋಕ್ಕನ್ನು ಇಲ್ಲಿ ಉದಾಹರಣೆಯಾಗಿ ಕೊಟ್ಟಿದ್ದಾರೆ.

**ವಯಃ** ಎಂಬ ಶಬ್ದವು ವಿಃ ಶಬ್ದದ ಬಹುವಚನವು ವಿಃ ಎಂಬ ಶಬ್ದವು ಗತ್ಯರ್ಥವಾದ ನಿ-ಗತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ವಯಃ ಎಂದರೆ ಪಕ್ಷಿಗಳು. ಸುಪರ್ಣಾಃ:- ಸುಪತನಾಃ (ಸೂರ್ಯನಿಂದ) ಕೆಳಗೆ ಬೀಳುವ ಸೂರ್ಯ ರಶ್ಮಿಗಳು. ಉಪಸೇದುರಿಂದ್ರ ಯಾಚಮಾನಾಃ— ಪ್ರಾರ್ಥಿಸುತ್ತಾ ಇಂದ್ರನ ಸಮೀಪವನ್ನೈದಿದವು

**ಅಪೋರ್ಣುಹ್ಯಧ್ವಸ್ತಂ ಚಕ್ಷುಃ**-ಕತ್ತಲೆಯಿಂದ ಮುಚ್ಚಲ್ಪಟ್ಟ ನಮ್ಮ ಕಣ್ಣನ್ನು ಕತ್ತಲೆಯಿಂದ ಬೇರ್ಪಡಿಸು. ಕಣ್ಣುಗಳಿಗೆ ಕತ್ತಲೆಯಿಲ್ಲದಂತೆ ಮಾಡು **ಚಕ್ಷುಃ**- ಎಂಬ ಶಬ್ದವು ಖ್ಯಾ (ತಿಳಿ) ಎಂಬ ಧಾತುವಿನಿಂದ ನಿಷ್ಪನ್ನವಾಗಿಲ್ಲ. ಏಕೆಂದರೆ ನಾವು ಕಣ್ಣಿನಿಂದ ನೋಡಿ ತಿಳಿಯುತ್ತೇವೆ. ಅಥವಾ ನೋಡು ಎಂಬರ್ಥವುಳ್ಳ ಚಕ್ಷತಿ ಧಾತುವಿನಿಂದಾಗಲಿ ನಿಷ್ಪನ್ನ ವಾಗಬಹುದು

**ಪೂರ್ಧಿ ಪೂರಯ ಜೇಹೀತಿ ವಾ**–ಪೂರ್ಧಿ ಎಂದರೆ, ತುಂಬು ಪೂರ್ಣಮಾಡು ಅಥವಾ ಕೊಡು ಎಂದರ್ಥವು

**ಮುಂಚಾಸ್ಮಾನ್ ಪಾಶೈರಿವ ಬದ್ಧಾನ್**–ಇಲ್ಲಿ ನಿಧಂಟುವ ಎಂಬ ಶಬ್ದಕ್ಕೆ ಪಾಶೈರಿವ ಎಂದು ಅರ್ಥವನ್ನು ಹೇಳಿದೆ. ಎಂದರೆ ಪಾಶಗಳಿಂದ ಕಟ್ಟಲ್ಪಟ್ಟವರು ನಾವು ಯಾವ ಕೆಲಸವನ್ನೂ ಮಾಡಲು ಶಕ್ತರಾಗಿರುವುದಿಲ್ಲವೋ ಹಾಗೆ ನಮ್ಮ ಕಣ್ಣುಗಳಿಗೆ ಕತ್ತಲೆಯೆಂಬ ಪಾಶಗಳಿಂದ ಬಿಗಿದು ನಮಗೆ ಏನೂ ಕಾಣಿಸದಿರುವುದರಿಂದ ಈಸ್ಥಿತಿಯನ್ನು ಪಾಶಗಳಿಂದ ಬದ್ಧರಾದವರು ಅಸಹಾಯಕರಾಗಿರುವಂತೆ ಕತ್ತಲೆಯೆಂಬ ಪಾಶದಿಂದ ಅಸಹಾಯಕವಾದ ನಮ್ಮ ಕಣ್ಣುಗಳು ಏನನ್ನೂ ನೋಡಲಾರವು. ಆದ್ದರಿಂದ ಕತ್ತಲೆಯೆಂಬ ಪಾಶಗಳನ್ನು ಪರಿಹರಿಸಿ ನಮ್ಮ ಕಣ್ಣುಗಳಿಗೆ ನೋಡುವ ಶಕ್ತಿಯನ್ನು ಕೊಡು ಎಂದು ಋಷಿಯುಪ್ರಾರ್ಥಿಸಿದ್ದಾನೆ.

ಶಿತಾಮ ॥ ೩ ॥

ಪಾರ್ಶ್ವತಃ ಶ್ರೋಣಿತಃ ಶಿತಾಮತಃ। ಪಾರ್ಶ್ವಂ ಪರ್ಶುಮಯಮಂಗಂ ಭವತಿ। ಪರ್ಶುಃ ಸ್ಪೃಶತೇಃ ಸಂಸ್ಪೃಷ್ಟಾ ಪೃಷ್ಠದೇಶಂ। ಪೃಷ್ಠಂ ಸ್ಪೃಶತೇಃ ಸಂಸ್ಪೃಷ್ಟಮಂಗೈಃ। ಅಂಗಮಂಗನಾದಂಚನಾದ್ವಾ। ಶ್ರೋಣಿಃ ಶ್ರೋಣತೇರ್ಗತಿಚಲಾಕರ್ಮಣಃ। ಶ್ರೋಣಿಶ್ಚಲತೀವ ಗಚ್ಛತಃ। ದೋಃ ಶಿತಾಮ ಭವತಿ। ಶ್ಯಾಮತೋ ಯಕೃತ್ತ ಇತಿ ತೈಟೀಕಿಃ। ಶ್ಯಾಮಂ ಶ್ಯಾಯತೇಃ। ಯಕೃತ್ ಯಥಾ ಕಥಾ ಚ ಕೃತ್ಯತೇ। ಶಿತಿಮಾಂಸತೋ ಮೇದಸ್ತ ಇತಿ ಗಾಲವಃ। । ಶಿತಿಃ ಶ್ಯತೇಃ ॥

ಶಿತಾಮ ॥ ೩ ॥

**ಪಾರ್ಶ್ವತಃ ಶ್ರೋಣಿತಃ ಶಿತಾಮತಃ।** ಶರೀರದಲ್ಲಿ ಮೂಳೆಗಳು ಸಂಧಿಯಾಗಿ ಸೇರುವ ಸ್ಥಳಕ್ಕೆ ಶಿತಾಮ ಎಂದು ಹೆಸರು. ಪಕ್ಕೆಲುಬುಗಳು ಎಂದರೆ ಹೃದಯದ ಅಸ್ಥಿಪಂಜರದ ಎಲುಬುಗಳು, ಸೊಂಟದ ಪ್ರದೇಶದಲ್ಲಿ ಮೂಳೆಗಳು ಸೇರುವ ಸಂಧಿಸ್ಥಳ ಇವುಗಳು.

**ಪಾರ್ಶ್ವಂ ಪರ್ಶುಮಯಮಂಗಂ ಭವತಿ। ಪರ್ಶುಃ ಸ್ಪೃಶತೇಃ ಸಂಸ್ಪೃಷ್ಟಾ ಪೃಷ್ಠದೇಶಂ**—ಶರೀರದ ಅಸ್ಥಿಗಳು ಪಾರ್ಶ್ವಗಳಲ್ಲಿ ಬೇರೆ ಅಸ್ಥಿಗೆ ಸೇರಿಕೊಂಡಂತಿದೆ. ಪರ್ಶುಃ ಎಂದರೆ ಸಂಧಿಸ್ಥಳ. ಮೂಳೆಗಳು ಒಂದಕ್ಕೊಂದು ಸೇರುವ ಸ್ಥಳ. **ಪರ್ಶು** ಶಬ್ದವು ಸ್ಪೃಶತಿ (ಸ್ಪರ್ಶಮಾಡು) ಧಾತುವಿನಿಂದ ನಿಷ್ಪನ್ನವಾಗಿದೆ. ಈ ಸಂಧಿಪ್ರದೇಶವು ಶರೀರದ ಪೃಷ್ಠ ಭಾಗವನ್ನು ಎಂದರೆ ಬೆನ್ನು ಅಥವಾ ಸೊಂಟದ ಸಂಧಿಪ್ರದೇಶವನ್ನು ಸ್ಪರ್ಶಿಸುವಂತಿದೆ.

**ಪೃಷ್ಠಂ ಸ್ಪೃಶತೇಃ ಸಂಸ್ಪೃಷ್ಟಮಂಗೈಃ** —ಪೃಷ್ಠಂ ಎಂದರೆ ಬೆನ್ನು ಅಥವಾ ಶರೀರದ ಮಧ್ಯಭಾಗ. ದೇಹದ ಈ ಭಾಗಕ್ಕೆ ಇತರ ಅವಯವಗಳು ಎಂದರೆ ಹಸ್ತಪಾದಾದಿಗಳು ಸೇರಿಕೊಂಡಿವೆ ಅಥವಾ ಅಂಟಿಕೊಂಡಿವೆ. ಆದ್ದರಿಂದ ಈ ಭಾಗಕ್ಕೆ ಪೃಷ್ಠ ಅಥವಾ ಸಂಸ್ಪೃಷ್ಟ ಎಂದು ಹೆಸರು.

**ಅಂಗಮಂಗನಾದಂಚನಾದ್ವಾ**—ಅಂಗವೆಂದರೆ ಅವಯವ. ದೇಹಕ್ಕೆ ಸೇರಿದ್ದರೂ ಪ್ರತ್ಯೇಕವಾಗಿ ಗುರುತಿಸಲ್ಪಡುವುದರಿಂದ ಅಥವಾ ಬಗ್ಗುವ ಶಕ್ತಿಯಿರುವುದರಿಂದ ಅವಯವಕ್ಕೆ ಅಂಗವೆಂದು ಹೆಸರು. ಹಸ್ತಪಾದಗಳು ಶರೀರಕ್ಕೆ ಅಂಟಿಕೊಂಡಿದ್ದರೂ ಅವು ಬೇರೆ ಭಾಗಗಳಂತೆ ಅಂಗಗಳೆಂದು ವ್ಯವಹರಿಸಲ್ಪಡುತ್ತವೆ ಮತ್ತು ಅವು ಕಾರ್ಯಗಳಲ್ಲಿ ನಿರತನಾದಾಗ ಬಗ್ಗಿ ಅಥವಾ ಬಗ್ಗಿಸಿ (ಮಡಿಸಿ) ಕೆಲಸಮಾಡುವವು. ಈ ಕಾರಣಗಳಿಂದ ಹಸ್ತಪಾದಾದ್ಯವಯವಗಳಿಗೆ ಅಂಗಗಳೆಂದು ಹೆಸರು.

**ಶ್ರೋಣಿಃ ಶ್ರೋಣತೇರ್ಗತಿಚಲಾಕರ್ಮಣಃ । ಶ್ರೋಣಿಶ್ಚಲತೀವ ಗಚ್ಛತಃ । ಶ್ರೋಣಿಃ** ಎಂಬ ಶಬ್ದವು ಮುಂದೆ ನಡೆ ಎಂಬರ್ಥವುಳ್ಳ ಶ್ರೋಣತಿ ಧಾತುವಿನಿಂದ ನಿಷ್ಪನ್ನವಾಗಿದೆ. ಇದಕ್ಕೆ ತೊಡೆ (ಕಟಿಪಶ್ಚಾದ್ಭಾಗ) ಎಂದರ್ಥ. ಏಕೆಂದರೆ ಪುರುಷನು ನಡೆಯುವಾಗ ಇದು ಚಲಿಸುತ್ತಿರುವಂತೆ ಕಾಣುವುದು.

**ದೋಃ ಶಿತಾಮ ಭವತಿ । ದೋರ್ದ್ರವತೇಃ । ಯೋನಿಃ ಶಿತಾಮೇತಿ ಶಾಕಪೂಣಿರ್ವಿಷಿತೋ ಭವತಿ—ಶಿತಾಮ** ಎಂದರೆ ಮೊಣಕಾಲು, ಮುಂಡಿ. ಈ ಶಬ್ದವು ಓಡು ಎಂಬರ್ಥವುಳ್ಳ ದ್ರುಧಾತುವಿನಿಂದ ನಿಷ್ಪನ್ನವಾಗಿದೆ. ಶಿತಾಮವೆಂದರೆ ಯೋನಿಪ್ರದೇಶ ಅಥವಾ ಗುದಪ್ರದೇಶವೆಂದು ಶಾಕಪೂಣಿಯವರ ಮತವು. ಈ ಪ್ರದೇಶವು ಮಾಂಸಾದಿಗಳಿಂದ ಹೆಚ್ಚು ನಿಬಿಡವಾಗಿ ಮುಚ್ಚಲ್ಪಟ್ಟಿರುವುದು, ಮಾಂಸದಿಂದ ತುಂಬಿರುವುದರಿಂದ ಇದಕ್ಕೆ ಶಿತಾಮ ಎಂಬ ಹೆಸರು ಬಂದಿದೆ ಎಂದರ್ಥವು.

**ಶ್ಯಾಮತೋ ಯಕೃತ್ತ ಇತಿ ತೈಟೀಕಿಃ । ಶ್ಯಾಮಂ ಶ್ಯಾಯತೇಃ । ಯಕೃದ್ಯಥಾ ಕಥಾ ಚ ಕೃತ್ಯತೇ**—ಇದು ಯಕೃತ್ತು (ಪಿತ್ತಕೋಶ) ಎಂಬ ಅಂಗ ವಿಶೇಷವೆಂದು ತೈಟೀಕಿ ಎಂಬ ಆಚಾರ್ಯರು ಹೇಳುತ್ತಾರೆ. ಏಕೆಂದರೆ ಈ ಯಕೃತ್ತು ಮಾಸಲು ಕೆಂಪುಬಣ್ಣದ್ದಾಗಿದೆ ಅಥವಾ ಕಪ್ಪುಮಿಶ್ರಿತವಾದ ಕೆಂಪುಬಣ್ಣದ್ದಾಗಿದೆ. ಹೆಪ್ಪುಗಟ್ಟು ಎಂಬ ಅರ್ಥವುಳ್ಳ ಶ್ಯೈ ಎಂಬ ಧಾತುವಿನಿಂದ ಶ್ಯಾಮಶಬ್ದವು ನಿಷ್ಪನ್ನವಾಗಿದೆ. ಯಕೃತ್ತೆಂದರೆ—ಇದನ್ನು ಶರೀರದಿಂದ ಕತ್ತರಿಸಿ ತೆಗೆಯುವುದು ಕಷ್ಟಸಾಧ್ಯವಾದುದರಿಂದ ಇದಕ್ಕೆ (ಪಿತ್ತಕೋಶಕ್ಕೆ) ಯಕೃತ್ತು ಎಂಬ ಹೆಸರಿದೆ.

**ಶಿತಿಮಾಂಸತೋ ಮೇದಸ್ತ ಇತಿ ಗಾಲವಃ । ಶಿತಿಃ ಶ್ಯತೇಃ** —ಶಿತಾಮವೆಂದರೆ ಮೇದಸ್ಸಿನಿಂದ (ಕೊಬ್ಬು) ಕೂಡಿದ ಮಾಂಸವೆಂದು ಗಾಲವರು ಹೇಳುವರು. ಶಿತಿಶಬ್ದವು ಶ್ಯತಿಧಾತುವಿನಿಂದ ನಿಷ್ಪನ್ನವಾಗಿದೆ.

**ಮಾಂಸಂ ಮಾನನಂ ವಾ ಮಾನಸಂ ವಾ ಮನೋಽಸ್ಮಿನ್ ಸೀದತೀತಿ ವಾ । ಮೇದೋ ಮೇದ್ಯತೇಃ** —ಮಾಂಸವೆಂಬ ಶಬ್ದಕ್ಕೆ ಗೌರವವೆಂಬ ಅರ್ಥವು ಸೂಚಿತವಾಗುವುದು. ಅಥವಾ ಇದು ಬಹಳ ರುಚಿಕರವಾಗಿರುವುದು. ಅಥವಾ ಇದರಲ್ಲಿ (ಮಾಂಸದಲ್ಲಿ) ಜನರ ಮನಸ್ಸು (ತಿನ್ನಬೇಕೆಂಬ ಮನಸ್ಸು) ಆಸಕ್ತವಾಗಿರುವುದು. ಮೇದಶ್ಶಬ್ದವು ಸ್ನೇಹ (ದ್ರವ)ದಿಂದ ಅಂಟಿಕೊಳ್ಳು ಅಥವಾ ಕೊಬ್ಬು ಎಂಬರ್ಥವುಳ್ಳ ಮೇದ್ಯತಿಧಾತುವಿನಿಂದ ನಿಷ್ಪನ್ನವಾಗಿದೆ. ಮೇದಸ್ಸು ಎಂದರೆ ಕೊಬ್ಬು ಎಂದರ್ಥವು.

**ಇತಿ ತೃತೀಯಃ ಖಂಡಃ**

ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು

———





## ಅಥ ಚತುರ್ಥಃ ಖಂಡಃ

## **ನಾಲ್ಕನೆಯ ಖಂಡವು**

ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ । ರಾಧ-ಸ್ತನ್ನೋ ವಿದದ್ವಸ ಉಭಯಾಹಸ್ತ್ಯಾಭರ ॥ (ಋ. ಸಂ. ೫–೩೯-೧) ಯದಿಂದ್ರ ಚಿತ್ರ ಚಾಯನೀಯಂ ಮಂಹನೀಯಂ ಧನಮಸ್ತಿ ಯನ್ಮ ಇಹ ನಾಸ್ತೀತಿ ವಾ ತ್ರೀಣಿ ಮಧ್ಯಮಾನಿ ಪದಾನಿ ತ್ವಯಾ ನಸ್ತದ್ದಾತವ್ಯಮದ್ರಿವನ್ನದ್ರಿರಾದೃಣಾತ್ಯೇತೇನಾಪಿ ವಾತ್ತೇಃ ಸ್ಯಾತ್ತೇ ಸೋಮಾದ ಇತಿ ಹ ವಿಜ್ಞಾಯತೇ ರಾಧ ಇತಿ ಧನನಾಮ ರಾಧ್ನುವಂತ್ಯೇನೇನ ತನ್ನಸ್ತ್ವಂ ವಿತ್ತಧನೋಭಾಭ್ಯಾಂ ಹಸ್ತಾಭ್ಯಾಮಾ-ಹರೋಭೌ ಸಮುಬ್ಧೌ ಭವತೋ ದಮೂನಾ ದಮಮಾನಾ ವಾ ದಾನಮನಾ ವಾ ದಾಂತಮನಾ ವಾಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾನ್ಮನೋ ಮನೋತೇಃ ॥ ೪ ॥

———

ಮೇಹನಾ ॥ ೪ ॥

ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ । ರಾಧ-ಸ್ತನ್ನೋ ವಿದದ್ವಸ ಉಭಯಾ ಹಸ್ತ್ಯಾಭರ ॥ ಯದಿಂದ್ರ ಚಿತ್ರಂ ಚಾಯನೀಯಂ ಮಂಹನೀಯಂ ಧನಮಸ್ತಿ । ಯನ್ಮ ಇಹ ನಾಸ್ತೀತಿ ವಾ ತ್ರೀಣಿ ಮಧ್ಯಮಾನಿ ಪದಾನಿ ತ್ವಯಾ ನಸ್ತದ್ದಾತವ್ಯಂ । ಅದ್ರಿವನ್ ಅದ್ರಿರಾದೃಣಾತ್ಯೇತೇನ । ಅಪಿ ವಾತ್ತೇಃ ಸ್ಯಾತ್ । ತೇ ಸೋಮಾದ ಇತಿ ಹ ವಿಜ್ಞಾಯತೇ । ರಾಧ ಇತಿ ಧನನಾಮ ರಾಧ್ನುವಂತ್ಯನೇನ । ತನ್ನಸ್ತ್ವಂ ವಿತ್ತಧನೋಭಾಭ್ಯಾಂ ಹಸ್ತಾಭ್ಯಾಮಾಹರ । ಉಭೌ ಸಮುಬ್ಧೌ ಭವತಃ ॥

**ಯದಿಂದ್ರ ಚಿತ್ರ** ಎಂಬ ಋಕ್ಕಿನ ಅರ್ಥವು—ಆಕರ್ಷಕವಾದ ರೂಪವುಳ್ಳವನೂ ವಜ್ರಾಯುಧಧಾರಿಯೂ ಧನಕ್ಕೆ ಪ್ರಭುವಾದ ಎಲೈ ಇಂದ್ರನೇ, ಪೂಜ್ಯವಾದುದೂ ನಿನ್ನಿಂದ ಕೊಡಲ್ಪಡತಕ್ಕುದೂ ಆದ ಯಾವ ಧನವಿದೆಯೋ ಆ ಧನವನ್ನು ನಮಗೆ ಎರಡು ಕೈಗಳಿಂದಲೂ ತುಂಬಿಕೊಡು.

**ಮೇಹನಾ** ಎಂಬ ಶಬ್ದವು **ಮೇ+ಇಹ+ನ** ಎಂಬ ಮೂರು ಬೇರೆ ಬೇರೆ ಶಬ್ದಗಳಿಂದ ಸೇರಿ ಆಗಿದೆ. ಎಂದರೆ **ಯತ್ ಮೇ ಇಹ ನಾಸ್ತಿ ಎಂಬ** ಐದು ಶಬ್ದಗಳಿರುವ ವಾಕ್ಯದಲ್ಲಿ ಮೇ ಇಹ ನ ಎಂಬ ಪದಗಳಿಂದ ಮೇಹನಾ ಎಂಬ ಶಬ್ದದ ರೂಪನಿಷ್ಪತ್ತಿಯಾಗಿದೆ. ನನ್ನಲ್ಲಿ ಯಾವುದು ಇರುವುದಿಲ್ಲವೋ ಅದನ್ನು ನನಗೆ ಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಯಾರಲ್ಲಿ ಯಾವ ಪದಾರ್ಥವಿರುವುದಿಲ್ಲವೋ ಅದನ್ನು ಅವರು ಮತ್ತೊಬ್ಬರಿಂದ ಯಾಚಿಸುತ್ತಾರೆ. ಎಂಬ ನಿಯಮವನ್ನನು ಸರಿಸಿ ಮೇಹನಾ ಎಂಬ ಶಬ್ದಕ್ಕೆ ಧನವೆಂದರ್ಥಮಾಡಿದೆ.

ಎಲೈ ಇಂದ್ರನೇ ನಿನ್ನಲ್ಲಿ ವಿಚಿತ್ರವೂ ಉತ್ತಮವೂ ಆದ ಯಾವ ಧನವಿದೆಯೋ ಮತ್ತು ನನ್ನಲ್ಲಿ ಇಲ್ಲದಿರುವ ಧನವಿದೆಯೋ ಅಂತಹ ಧನವನ್ನು, ಎಲೈ ವಜ್ರಾಯುಧಧಾರಿಯಾದ ಇಂದ್ರನೇ, ನಿನ್ನ ಎರಡು ಕೈಗಳಲ್ಲಿಯೂ ತುಂಬಿಕೊಂಡು ಬಂದು ನನಗೆ ಕೊಡು ಎಂದು ಮುಖ್ಯಾಭಿಪ್ರಾಯವು.

ಅದ್ರಿ ಎಂಬ ಶಬ್ದವು ಶೀಳು ಎಂಬರ್ಥವುಳ್ಳ ಆದೃಣಾತಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪರ್ವತಾದಿಗಳನ್ನು ಅಥವಾ ಶತ್ರುಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಶೀಳುವುದರಿಂದ ಇಂದ್ರನು ವಜ್ರಾಯುಧಕ್ಕೆ **ಅದ್ರಿ** ಎಂಬ ಹೆಸರು ಬಂದಿದೆ. ಆ ವಜ್ರಾಯುಧವನ್ನು ಕೈಯಲ್ಲಿ ಧರಿಸಿರುವ ಇಂದ್ರನನ್ನು ಇಲ್ಲಿ **ಅದ್ರಿವನ್** ಎಂಬ ಸಂಬುದ್ಧ್ಯಂತದಿಂದ ಸಂಬೋಧಿಸಲಾಗಿದೆ. ಅಥವಾ ಅದ್–ಭಕ್ಷಿಸು ಎಂಬ ಧಾತುವಿನಿಂದಲಾದರೂ ಅದ್ರಿಶಬ್ದವು ನಿಷ್ಪನ್ನವಾಗಬಹುದು. ಸೋಮಲತೆಯನ್ನು ಜಜ್ಜುವ ಕಲ್ಲುಗಳಿಗೆ ಅದ್ರಿಯೆಂದು ಹೆಸರು. ಅದು ಸೋಮಲತೆಯನ್ನು ಅಗಿದು ತಿನ್ನುವಂತೆ ಜಜ್ಜುವುದರಿಂದ ಆ ಕಲ್ಲಿಗೆ ಅದ್ರಿ ಎಂದೂ ಹೆಸರು. **ತೇ ಸೋಮಾದಃ** ಎಂಬ ವಾಕ್ಯದಲ್ಲಿ ಇದೇ ಅಭಿಪ್ರಾಯವು ಸೂಚಕವಾಗಿದೆ.

**ರಾಧಃ** ಎಂಬ ಶಬ್ದವು ಸಮಾಧಾನಪಡಿಸು ಸಂತೋಷಪಡಿಸು ಎಂಬರ್ಥವುಳ್ಳ ರಾಧ್ನುವಂತಿ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಧನವೆಂಬ ಅರ್ಥವನ್ನು ಸೂಚಿಸುವುದು ಏಕೆಂದರೆ. ಈ ಧನದಿಂದ ಇತರರನ್ನು ಸಮಾಧಾನ ಅಥವಾ ಸಂತೋಷ ಪಡಿಸಬಹುದಾದ್ದರಿಂದ ಇಂತಹ ವಸ್ತುವಿಗೆ **ರಾಧಃ** —ಧನವು ಎಂಬರ್ಥವು ವಿವೃತವಾಗಿದೆ.

ದಮೂನಾಃ ॥೫॥

ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾ
ಅಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್। ಮನೋ ಮನೋತೇಃ॥

ದಮುನಾ ಎಂದರೆ ಕ್ರೂರಿಯಲ್ಲದವನು, ಅಥವಾ ದಯವುಳ್ಳವನು ಅಥವಾ ದಾನವನ್ನು ಕೊಡಲು ಮನಸ್ಸುಳ್ಳವನಾಗಿರುವವನು. ಅಥವಾ ತನ್ನ ಮನಸ್ಸನ್ನು ತನ್ನ ನಿಯಮನ ಅಥವಾ ಸ್ವಾಧೀನದಲ್ಲಿಟ್ಟುಕೊಂಡಿರುವವನು. ಎಂದು ಮೂರುವಿಧವಾದ ಅರ್ಥವಿರುವುದು. ಅಥವಾ ದಮ ಎಂಬ ಶಬ್ದಕ್ಕೆ ಮನೆಯೆಂದು ಅರ್ಥವಿರುವುದರಿಂದ **ದಮೂನಾಃ** ಎಂದರೆ ಮನೆಯಲ್ಲಿ ವಾಸಮಾಡಲು ಆಸಕ್ತಿಯುಳ್ಳವನೆಂದೂ ಅರ್ಥವಾಗಬಹುದು. ಮನಶಬ್ದವು ಯೋಚಿಸು ಎಂಬರ್ಥವಿರುವ ಮನ್‌ಧಾತುವಿನಿಂದ ನಿಷ್ಪನ್ನವಾಗಿದೆ.

**ಇತಿ ಚತುರ್ಥಃ ಖಂಡಃ**

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು

———

## ಅಥ ಪಂಚಮಃ ಖಂಡಃ

### ಐದನೆಯ ಖಂಡವು

ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞ-ಮುಪ ಯಾಹಿ ವಿದ್ವಾನ್ । ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾಮಾ ಭರಾ ಭೋಜನಾನಿ ॥(ಋಮಂ ಸಂ. ೫-೪-೫)। ಅತಿಥಿರಭ್ಯತಿತೋ ಗೃಹಾನ್ ಭವತ್ಯಭ್ಯೇತಿ ತಿಥಿಷು ಪರಕುಲಾನೀತಿ ವಾ ಪರಗೃಹಾಣೀತಿ ವಾ ದುರೋಣ ಇತಿ ಗೃಹನಾಮ ದುರವಾ ಭವಂತಿ ದುಸ್ತರ್ಪಾ ಇಮಂ ನೋ ಯಜ್ಞಮುಪಯಾಹಿ ವಿದ್ವಾನ್ತ್ಸರ್ವಾ ಅಗ್ನೇ ಅಭಿಯುಜೋ ವಿಹತ್ಯ ಶತ್ರೂಯತಾಮಾಭರ ಭೋಜನಾನಿ ನಿಹತ್ಯಾನ್ಯೇಷಾಂ ಬಲಾನಿ ಶತ್ರೂಣಾಂ ಭವನಾದಾಹರ ಭೋಜನಾನೀತಿ ವಾ ಧನಾನೀತಿ ವಾ ಮೂಷೋ ಮೂಷಿಕಾ ಇತ್ಯರ್ಥೋ ಮೂಷಿಕಾಃ ಪುನರ್ಮುಷ್ಣಾತೇರ್ಮೂಷೋಽಪ್ಯೇತಸ್ಮಾದೇವ । ೫ ।

---

ಜುಷ್ಟೋ ದಮೂನಾ ಅತಿಥಿರ್ದುರೋಣ ಇಮಂ ನೋ ಯಜ್ಞಮುಪ-ಯಾಹಿ ವಿದ್ವಾನ್ ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯಾ ಶತ್ರೂಯತಾ-ಮಾಭರಾ ಭೋಜನಾನಿ ॥ ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ ಪರ ಗೃಹಾಣೀತಿ ವಾ(ಅಯಮ-ಪೀತರೋಽತಿಥಿರೇತಸ್ಮಾದೇವ) । ದುರೋಣ ಇತಿ ಗೃಹನಾಮ ದುರವಾ ಭವಂತಿ ದುಸ್ತರ್ಪಾಃ ॥ ಇಮಂ ನೋ ಯಜ್ಞಮುಪಯಾಹಿ ವಿದ್ವಾನ್ ಸರ್ವಾ ಅಗ್ನೇ ಅಭಿಯುಜೋ ವಿಹತ್ಯ ಶತ್ರೂಯತಾಮಾಭರ ಭೋಜನಾನಿ ವಿಹತ್ಯಾನ್ಯೇಷಾಂ ಬಲಾನಿ ಶತ್ರೂಣಾಂ ಭವನಾದಾಹರ ಭೋಜನಾನೀತಿ ವಾ ॥ ಧನಾನೀತಿ ವಾ ॥

[illegible] ದಮೂನಾ ಎಂಬ ಋಕ್ಕಿನ ಅರ್ಥವು—ಎಲೈ ಅಗ್ನಿಯೇ ನಮ್ಮ ಪೂಜೆಯಿಂದ ಸಂತೃಪ್ತಿಯನ್ನು ಹೊಂದು ನವ[illegible]ನಸ್ಕನಾಗಿಯೂ ನಮ್ಮ ಯಜ್ಞಗೃಹದಲ್ಲಿ ಅತಿಥಿಯಂತೆ ಪೂಜ್ಯನಾಗಿಯೂ ಇರುವ ನೀನು ನಮ್ಮ ಈ

ಯಜ್ಞವನ್ನರಿತವನಾಗಿ ಈ ಯಜ್ಞಕ್ಕೆ ದಯಮಾಡು. ಎಲೈ ಅಗ್ನಿಯೇ ಸಮಸ್ತ ಶತ್ರುಗಳನ್ನೂ ನಾಶಮಾಡಿ ಆ ಶತ್ರುಗಳಿಗೆ ಸೇರಿದ ಅನ್ನ (ಆಹಾರ) ಸಂಪತ್ತುಗಳನ್ನೆಲ್ಲಾ ನಮಗೆ ಕೊಡುವುದಕ್ಕಾಗಿ ತೆಗೆದುಕೊಂಡು ಬಾ.

**ಅತಿಥಿಃ** ಅತಿಥಿಯೆಂದರೆ ಒಬ್ಬರ ಮನೆಗೆ ಹೋಗುವವನು ಅಥವಾ ಒಬ್ಬ ಗೃಹಸ್ಥನ ಮನೆಗೆ ಕಾರ್ಯಾರ್ಥವಾಗಿ ಕರೆಯಲ್ಪಟ್ಟು ಹೋಗುವವನು. ಕರೆಯಲ್ಪಡದ ಕಾರಣಾಂತರದಿಂದ ಬಂದವನಿಗೆ ಅಭ್ಯಾಗತನೆಂದು ಹೆಸರು. **ದುರೋಣ** ಎಂದರೆ ಮನೆಯೆಂದರ್ಥ. ದುರೋಣಶಬ್ದವು ದುರ್ + ಅವ್ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಮನೆಯನ್ನು ಅಥವಾ ಮನೆಯವರನ್ನೂ ತೃಪ್ತಿಪಡಿಸಲು (ಸಂರಕ್ಷಿಸಲು) ಕಷ್ಟಸಾಧ್ಯವಾದ್ದರಿಂದ ಇದಕ್ಕೆ ದುರೋಣ ಎಂಬ ಹೆಸರು ಬಂದಿದೆ.

**ಇಮಂ ನೋ ಯಜ್ಞಮುಪ ಯಾಹಿ ವಿದ್ವಾನ್**—ಎಲೈ ಅಗ್ನಿಯೇ, ಸಕಲವನ್ನೂ ತಿಳಿದ ವಿದ್ವಾಂಸನಾದ ನೀನು ನಮ್ಮ ಯಜ್ಞಕ್ಕೆ ದಯಮಾಡಿಸು.

**ವಿಶ್ವಾ ಅಗ್ನೇ ಅಭಿಯುಜೋ ವಿಹತ್ಯ ಶತ್ರೂಯತಾಮಾ ಭರಾ ಭೋಜನಾನಿ**—ಎಲೈ ಅಗ್ನಿಯೇ ನೀನು ನಮ್ಮ ಸುತ್ತಲೂ ಇರುವ ನಮ್ಮ ಶತ್ರುಗಳನ್ನು ಸಂಹಾರಮಾಡಿ ಅವರಲ್ಲಿರುವ ಅನ್ನಾದ್ಯಾಹಾರಗಳನ್ನು ನಮಗೆ ತಂದುಕೊಡು. **ಭೋಜನಾನಿ** ಎಂದರೆ ಭೋಜನಸಾಮಗ್ರಿಗಳು, ಆಹಾರಕ್ಕಾಗಿ ಉಪಯೋಗಿಸುವ ವಸ್ತುಗಳು ಅಥವಾ ಭೋಜನಾರ್ಥವಾಗಿ ಅವಶ್ಯಕವಾಗಿ ಬೇಕಾಗುವ ಧನಗಳು.

ಮೂಷಃ ॥ ೬ ॥

ಮೂಷೋ ಮೂಷಿಕಾ ಇತ್ಯರ್ಥಃ ॥ ಮೂಷಿಕಾಃ ಪುನರ್ಮು-
ಷ್ಣಾತೇಃ । ಮೂಷೋಽಪ್ಯೇತಸ್ಮಾದೇವ ॥

**ಮೂಷಃ**—ಇದು ಬಹುವಚನಾಂತ ಪದವು. ಮೂಟ್ ಮೂಷೌ ಮೂಷಃ ಎಂದು ಪ್ರಥಮಾವಿಭಕ್ತಿಯು; ಮೂಷಃ ಎಂದರೆ **ಮೂಷಿಕಾಃ** ಇಲಿಗಳು ಎಂದರ್ಥ. ಮೂಷಿಕಾಃ ಎಂಬ ಶಬ್ದವು ಕದಿ ಎಂಬರ್ಥವುಳ್ಳ **ಮುಷ ಸ್ತೇಯೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಆಹಾರಾದಿಧಾನ್ಯಗಳನ್ನು ಇಲಿಗಳು ಕಳ್ಳತನದಿಂದ ತಿನ್ನುತ್ತವೆಯೆಂಬುದು ಪ್ರಸಿದ್ಧಿಯು ಮೂಷ=ಎಂಬ ಶಬ್ದವೂ ಸಹ **ಮುಷ-ಸ್ತೇಯೇ** ಎಂಬ ಧಾತುವಿನಿಂದಲೇ ನಿಷ್ಪನ್ನವಾಗಿದೆ.

**ಇತಿ ಪಂಚಮಃ ಖಂಡಃ**

ಇಲ್ಲಿಗೆ ಐದನೆಯ ಖಂಡವು ಸಮಾಪ್ತವು

————

## ಅಥ ಷಷ್ಠಃ ಖಂಡಃ

**ಆರನೆಯ ಖಂಡವು**

ಸಂ ಮಾ ತಪಂತ್ಯಭಿತಃ ಸಪತ್ನೀರಿವ ಪರ್ಶವಃ । ಮೂಷೋ ನ
ಶಿಶ್ನಾವ್ಯದಂತಿ ಮಾಧ್ಯಃ ಸ್ತೋತಾರಂ ತೇ ಶತಕ್ರತೋ ವಿತ್ತಂ ಮೇ ಅಸ್ಯ

ರೋದಸೀ ॥ (ಋ. ಸಂ. ೧–೧೦೫–೮) ಸಂತಪಂತಿ ಮಾಮಭಿತಃ ಸಪತ್ನ್ಯ ಇವೇಮಾಃ ಪರ್ಶವಃ ಕೂಪಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ । ಸ್ವಾಂಗಾಭಿಧಾನಂ ವಾ ಸ್ಯಾಚ್ಛಿಶ್ನಾತಿ ವ್ಯದಂತೀತಿ ವಾ ಸಂತಪಂತಿ ಮಾಧ್ಯಃ ಕಾಮಾಃ ಸ್ತೋತಾರಂ ತೇ ಶತಕ್ರತೋ, ವಿತ್ತಂ ಮೇ ಅಸ್ಯ ರೋದಸೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ । ತ್ರಿತಂ ಕೂಪೇಽವಹಿತಮೇತತ್ ಸೂಕ್ತಂ ಪ್ರತಿಬಭೌ । ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ । ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಾಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ ॥ ೬ ॥

———

**ಸಂ ಮಾ ತಪಂತಿ** ಎಂಬ ಋಕ್ಕಿನ ಅರ್ಥವು—

ಎಲೈ ಇಂದ್ರನೇ, ಸವತಿಯರು ಗಂಡನ ಸುತ್ತಲೂ ಮುತ್ತಿ ಹಿಂಸಿಸುವಂತೆ ಈ ಭಾವಿಯ ಅಡ್ಡಗೋಡೆಗಳು ನನ್ನನ್ನು ಮುತ್ತಿ ಸುತ್ತಲೂ ಪೀಡಿಸುತ್ತಿವೆ. ಅನೇಕಸಾಹಸಕರ್ಮವನ್ನು ಮಾಡಿದ ಎಲೈ ಇಂದ್ರನೇ ನಿನ್ನ ಭಕ್ತನಾದ ನನ್ನನ್ನು ಮಾನಸಿಕವಾದ ವ್ಯಥೆಗಳು, ಇಲಿಗಳು ನೆಯ್ಗೆಯವನ ಗಂಜಿಯಲ್ಲಿ ಅದ್ದಿದ ನೂಲನ್ನು ಅಗಿಯುವಂತೆ ಅಥವಾ ಘೃತಾದಿಗಳಲ್ಲಿ ಅದ್ದಿದ ತನ್ನ ಬಾಲವನ್ನು ಕಚ್ಚುವಂತೆ ನಾನಾವಿಧವಾಗಿ ಅಗಿದು ತಿನ್ನುತ್ತಿವೆ. ಎಲೈ ದ್ಯಾವಾಪೃಥಿವಿಗಳೇ ನನ್ನ ಈ ದುಃಖವನ್ನು ಚೆನ್ನಾಗಿ ಅರಿಯಿರಿ ಮತ್ತು ನನ್ನ ಈ ಸ್ತೋತ್ರವನ್ನು ಕೇಳಿ ನನ್ನನ್ನು ದುಃಖದಿಂದ ಪಾರುಮಾಡಿರಿ.

ಈ ಋಕ್ಕಿನಲ್ಲಿ ತ್ರಿತನ ವಿಷಯವಿದೆ-ಅದನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸುತ್ತೇನೆ. ಏಕತ ದ್ವಿತ ತ್ರಿತ ಎಂಬ ಮೂವರು ಋಷಿಗಳಿದ್ದರು. ಈ ಮೂವರೂ ಸಹೋದರರು ಒಂದುಸಲ ಅರಣ್ಯಮಧ್ಯದಲ್ಲಿ ಮರುಭೂಮಿಯಲ್ಲಿ ಸಿಕ್ಕಿಕೊಂಡು ಅತ್ಯಂತ ಬಾಯಾರಿಕೆಯಿಂದ ಹಿಂಸೆಪಡುತ್ತಿರುವಾಗ ಅಕಸ್ಮಾತ್ತಾಗಿ ಒಂದು ಭಾವಿಯನ್ನು ನೋಡಿ ಅದರ ಹತ್ತಿರ ಬಂದರು. ಆಗ ತ್ರಿತನು ಜಲಪಾನಕ್ಕಾಗಿ ಭಾವಿಗೆ ಇಳಿದನು. ನಂತರ ತಾನು ನೀರನ್ನು ಕುಡಿದು ಉಳಿದಿಬ್ಬರಿಗೂ ಸಹ ಭಾವಿಯಿಂದ ನೀರನ್ನು ತೆಗೆದುಕೊಂಡು ಮೇಲಕ್ಕೆ ಬಂದನು. ಮೇಲಿದ್ದ ಏಕತ ಮತ್ತು ದ್ವಿತರು ಆ ನೀರನ್ನು ಕುಡಿದು ತ್ರಿತನ ಸರ್ವಧನವನ್ನು ಅಪಹರಿಸಬೇಕೆಂದು ಅವನನ್ನು ಭಾವಿಗೆ ತಳ್ಳಿ ರಥಚಕ್ರದಿಂದ ಭಾವಿಯನ್ನು ಮುಚ್ಚಿ ಅಲ್ಲಿಂದ ಹೊರಟುಹೋದರು. ಭಾವಿಯಲ್ಲಿ ಬಿದ್ದಿದ ತ್ರಿತನಿಗೆ ಮೇಲಕ್ಕೆ ಬರಲಾಗದೆ ನಿಂತಲ್ಲಿಯೇ ವಿಶ್ವೇದೇವತೆಗಳ ಪ್ರಾರ್ಥನೆಯನ್ನುಮಾಡಿ ಅವರು ತನ್ನನ್ನುದ್ಧರಿಸಲಿ ಎಂದು ಮನಸ್ಸಿನಲ್ಲಿಯೇ ಸ್ಮರಿಸಿದನು. ಆಗ ಅವರನ್ನು ಸ್ತುತಿಸತಕ್ಕ ಈ ಸೂಕ್ತದ (ಋ.ಸಂ.೧–೧೦೫) ದರ್ಶನವನ್ನು ಪಡೆದನು. ಆಗಾಗಿನಲ್ಲಿ ಭಾವಿಯೊಳಕ್ಕೆ ಪ್ರಸರಿಸಿದ ಚಂದ್ರಕಿರಣಗಳನ್ನು ನೋಡಿ ತನ್ನ ವೇದನೆಯನ್ನು

ವ್ಯಕ್ತಪಡಿಸುತ್ತಾ ಪ್ರಾರ್ಥಿಸುತ್ತಿದ್ದಾನೆ. ಎಂದು ಪೂರ್ವಕಥೆ. ಇವೆ. ಈ ವಿಷಯವನ್ನೂ ತ್ರಿತನಿಗೆ ಸಂಬಂಧಪಟ್ಟ ಇತರ ವಿಷಯಗಳನ್ನೂ ನಾವು ಋಗ್ವೇದಸಂಹಿತೆಯ ಭಾಗ ೫-೨೩೦, ೮-೪೪೩, ೪೪೫, ೪೭೩, ೧೪-೬೨೫ ಇತ್ಯಾದಿಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

**ಸಂತಪಂತಿ ಮಾಮಭಿತಃ ಸಪತ್ನ್ಯ ಇವೇಮಾಃ ಪರ್ಶವಃ ಕೂಪಪರ್ಶವೋ ಮೂಷಿಕಾ ಇವಾಸ್ನಾತಾನಿ ಸೂತ್ರಾಣಿ ವ್ಯದಂತಿ** । ಭಾವಿಯಲ್ಲಿ ಬಿದ್ದಿರುವ ತ್ರಿತನು ಈ ರೀತಿ ದುಃಖಿಸುತ್ತಿದ್ದಾನೆ. ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಈ ಭಾವಿಯ ನಾಲ್ಕೂಕಡೆಯ ಗೋಡೆಗಳು ಸವತಿಯರಂತೆ ನನ್ನನ್ನು ಸುತ್ತಲೂ ಹಿಂಸಿಸುತ್ತವೆ. ಮತ್ತು ಇಲಿಗಳು ನೇಯಿಗೆಕಾರನ ಗಂಜಯಲ್ಲಿ ಅದ್ದಿದ ದರಗಳನ್ನು ಅಗಿದು ತಿನ್ನುವಂತೆ ನನ್ನನ್ನು ಹಿಂಸಿಸುತ್ತವೆ.

**ಸ್ವಾಂಗಾಭಿಧಾನಂ ವಾ ಸ್ಯಾಚ್ಛಿಶ್ನಾನಿ ವ್ಯದಂತೀತಿ ವಾ ಸಂತಪಂತಿ ಮಾಧ್ಯಃ ಕಾಮಾಃ.** ಅಥವಾ ಇಲಿಗಳು ತೈಲದಲ್ಲಿ ಅದ್ದಿರುವ ತಮ್ಮ ಸ್ವಂತ ಬಾಲವೊದಲಾದ ಅಂಗಗಳನ್ನೇ ನೆಕ್ಕುವಂತೆಯೂ ಕಚ್ಚಿತಿನ್ನುವಂತೆಯೂ ಈ ಭಾವಿಯ ಗೋಡೆಗಳು ನನ್ನ ಆಶೋತ್ತರಗಳೂ ಸಹ ನನ್ನ ಮನಸ್ಸಿಗೆ ಅತ್ಯಂತ ವ್ಯಥೆಯನ್ನುಂಟುಮಾಡುತ್ತವೆ.

**ಸ್ತೋತಾರಂ ತೇ ಶತಕ್ರತೋ । ವಿತ್ತಂ ಮೇ ಅಸ್ಯ ರೋದಸೀ । ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ?** ಎಲೈ ಶತಕ್ರತುನಾಮಕನಾದ ಇಂದ್ರನೇ, ನಿನ್ನನ್ನು ಸ್ತೋತ್ರಮಾಡುತ್ತಿರುವ ನನ್ನ ಪ್ರಾರ್ಥನೆಯನ್ನು ದಯವಿಟ್ಟು ಕೇಳು ; ಎಲೈ ದ್ಯಾವಾಪೃಥಿವಿಗಳೇ, ಈ ನನ್ನ ಪ್ರರ್ಥನೆಯನ್ನುಲಾಲಿಸಿ.

**ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ । ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ ।** ತ್ರಿತ ಋಷಿಯು ಭಾವಿಯಲ್ಲಿ ಬಿದ್ದಿದ್ದಾಗ ಅವನಿಗೆ ಈ ಸೂಕ್ತವು ಸ್ಫೂರ್ತಿಯಿಂದ ಮನಸ್ಸಿಗೆ ಗೋಚರವಾಯಿತು. ಈ ಸೂಕ್ತದಲ್ಲಿರುವ ಇತರ ಋಕುಗಳಲ್ಲಿ (ಋ. ಸಂ. ೧-೧೦೫-೧೭) ಒಂದು ಪೂರ್ವೇತಿಹಾಸದಿಂದಲೂ ಇತರ ವಿಷಯಗಳಿಂದಲೂ ಮಿಶ್ರಿತವಾದ ಅನೇಕ ವಿಷಯಗಳು ಉಕ್ತವಾಗಿವೆ.

**ತ್ರಿತಸ್ತೀರ್ಣತಮೋ ಮೇಧಯಾ ಬಭೂವ ಅಪಿ ವಾ ಸಂಖ್ಯಾನಮೈವಾಭಿಪ್ರೇತಂ ಸ್ಯಾದೇಕತೋ ದ್ವಿತಸ್ತ್ರಿತ ಇತಿ ತ್ರಯೋ ಬಭೂವುಃ**- ತ್ರಿತ ಶಬ್ದಕ್ಕೆ ಅತ್ಯಂತ ಬುದ್ಧಿವಂತನೆಂದು ಅರ್ಥವು. ಮತ್ತು ಮೂವರು ಸಹೋದರರಲ್ಲಿ ಒಬ್ಬನು, ಎಂದರೆ ಮೊದಲನೆಯವನು, ಎರಡನೆಯವನು, ಮೂರನೆಯವನು ಎಂದು ಸೂಚಿಸುವುದಕ್ಕಾಗಿ ಏಕತ, ದ್ವಿತ,, ತ್ರಿತ ಎಂದು ಹೆಸರುಗಳಿರುವವು. ಅವುಗಳಲ್ಲಿ ಇಲ್ಲಿ ತ್ರಿತ ಎಂದರೆ ಮೂರನೆಯವನು ಅಥವಾ ಕೊನೆಯವನು ಎಂದುಅರ್ಥ ಮಾಡಬೇಕು.

**ಇತಿ ಷಷ್ಠಃ ಖಂಡಃ**

ಇಲ್ಲಿಗೆ ಆರನೆಯ ಖಂಡವು ಸಮಾಪ್ತವು



## ಅಥ ಸಪ್ತಮಃ ಖಂಡಃ

### ಏಳನೆಯ ಖಂಡವು

ಇಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ। ಸೋಮ ರಾಜನ್ಪ್ರಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ॥ (ಋ. ಸಂ, ೮-೪೮-೭) ಈಷಣೇನ ವೈಷಣೇನ ವಾರ್ಷಣೇನ ವಾ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ಧನಸ್ಯ ಪ್ರವರ್ಧಯ ಚ ನ ಆಯೂಂಷಿ ಸೋಮ ರಾಜನ್। ಅಹಾನೀವ ಸೂರ್ಯೋ ವಾಸರಾಣಿ। ವಾಸರಾಣಿ ವೇಸರಾಣಿ ವಿವಾಸನಾನಿ ಗಮನಾನೀತಿ ವಾ ಕುರುತನೇತ್ಯನರ್ಥಕಾ ಉಪಜನಾ ಭವಂತಿ ಕರ್ತನ ಹಂತನ ಯಾತನೇತಿ ಜಠರಮುದರಂ ಭವತಿ ಜಗ್ಧಮಸ್ಮಿನ್ ಧ್ರಿಯತೇ ಧೀಯತೇ ವಾ ॥ ೭ ॥

---

ಇಷಿರೇಣ ॥ ೭ ॥

ಇಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ। ಸೋಮ ರಾಜನ್ಪ್ರಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ॥ ಈಷಣೇನ ವಾರ್ಷಣೇನ ವಾ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ಧನಸ್ಯ ಪ್ರವರ್ಧಯ ಚ ನ ಆಯೂಂಷಿ ಸೋಮ ರಾಜನ್। ಅಹಾನೀವ ಸೂರ್ಯೋ ವಾಸರಾಣಿ। ವಾಸರಾಣಿ ವೇಸರಾಣಿ ವಿವಾಸನಾನಿ ಗಮನಾನೀತಿ ವಾ ॥

ಇಷಿರೇಣ ತೇ ಎಂಬ ಋಕ್ಕಿನ ಅರ್ಥವು—ಪ್ರಭುವಾದ ಎಲೈ ಸೋಮನೇ, ಆದರದಿಂದ ಕೂಡಿದ ಮನಸ್ಸಿನಿಂದ ಪಿತೃಧನವನ್ನು ಭುಜಿಸುವಂತೆ ಹಿಂಡಲ್ಪಟ್ಟಿರುವ ನಿನ್ನನ್ನು (ಸೋಮರಸವನ್ನು) ಈಗ ಸಂತೋಷದಿಂದ ಭುಜಿಸುತ್ತೇನೆ. ಜಗತ್ತನ್ನು ವ್ಯಾಪಿಸಿರುವ ಅಹಸ್ಸುಗಳನ್ನು ಸೂರ್ಯನು ವೃದ್ಧಿಪಡಿಸುವಂತೆ ನಮ್ಮ ಆಯುಸ್ಸುಗಳನ್ನು ವೃದ್ಧಿಪಡಿಸು.

ಇಲ್ಲಿ ಇಷಿರೇಣ ಎಂಬ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಿದ್ದಾರೆ. ಈ ಶಬ್ದವು ಮನಸಾ ಎಂಬ ಶಬ್ದಕ್ಕೆ ವಿಶೇಷಣವಾಗಿದೆ.

(೧) **ಈಷಣೇನ ಈಷತಿ ಫಣತಿ ಇತಿ ಗತಿಕರ್ಮಸು ಪಠಿತಂ** ಈಷತಿ ಧಾತುವಿಗೆ ಗತ್ಯರ್ಥವಿರುವುದರಿಂದ ಈ ಧಾತುವಿನಿಂದ ನಿಷ್ಪನ್ನವಾದ ಈಷಣೇನ ಎಂಬ ಶಬ್ದಕ್ಕೆ ಅಲ್ಲಿಯೇ ಎಂದರೆ ನಿನ್ನಲ್ಲಿಯೇ ನೆಟ್ಟಿರುವ ಮನಸ್ಸಿನಿಂದ ಎಂದರ್ಥವು.

(೨) **ಏಷಣೇನ—ಇಚ್ಛಾವತಾ ಫಲಪ್ರಾರ್ಥನಾವತೇತ್ಯರ್ಥಃ** —ನಿನ್ನನ್ನು ಫಲಪ್ರಾಪ್ತಿಗಾಗಿ ಅಪೇಕ್ಷಿಸುತ್ತಿರುವ ಮನಸ್ಸಿನಿಂದ.

ಇಲ್ಲಿ **ವಾಸರಾಣಿ** ಎಂದರೆ ದಿನಗಳು—ಹಗಲುಗಳು ಎಂದರ್ಥವು. **ವಾಸರಾಣಿ** ಎಂದರೆ **ವೇಸರಾಣಿ ಶೀತೋಷ್ಣಾಭ್ಯಾಂ೧ ತಾನಿ ಸರಂತಿ ತೇಷು ಹಿ ಶೀತೋಷ್ಣಂ ಭವತಿ । ರಾತ್ರೌ ಶೀತಂ ದಿವಾ ಉಷ್ಣಂ ।** ವಾಸರಶಬ್ದವು **ಸೃ**—ಸರಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ದಿನದ ಕಾಲವು ಮುಂದು ಮುಂದಕ್ಕೆ ಸರಿಯುತ್ತಿರುವುದು ಈ ರೀತಿ ಸರಿಯುತ್ತಿರುವಾಗ ರಾತ್ರಿಕಾಲದಲ್ಲಿ ಶೀತವಾತಾವರಣದಿಂದಲೂ ಹಗಲಿನಲ್ಲಿ ಔಷ್ಣ್ಯದಿಂದಲೂ ಕೂಡಿ ದಿನದ ಕಾಲಮಾನವು ಸರಿದು ಹೋಗುತ್ತಿರುವುದು ಎಂದರೆ ಕಳೆದುಹೋಗುತ್ತಿರುವುದು. ಆದ್ದರಿಂದ ದಿನಗಳಿಗೆ (ಮುಖ್ಯವಾಗಿ ಹಗಲಿಗೆ) ವಾಸರಾಣಿ ಅಥವಾ ವೇಸರಾಣಿ ಎಂದು ಹೆಸರು. ಇದಲ್ಲದೆ, **ನಿವಾಸನಾನಿ—ತಾನಿ ಹಿ ತತ್ ಶೀತಂ ನಿವಾಸಯಂತಿ ನಾಶಯಂತೀತ್ಯರ್ಥಃ ।** ರಾತ್ರಿಕಾಲದಲ್ಲಿ ಉಂಟಾಗುವ ಶೈತ್ಯವನ್ನು ಹಗಲು ತನ್ನ (ಸೂರ್ಯನ) ಔಷ್ಣ್ಯದಿಂದ ನಾಶಮಾಡುವುದರಿಂದ ಹಗಲುಗಳಿಗೆ ನಿವಾಸನಾನಿ ಎಂಬರ್ಥವನ್ನು ಹೇಳಬಹುದು. **ಅಥವಾ ಗಮನಾನೀತಿ ವಾ ವಿಸೃತಾನಿ ವಿಸ್ತೀರ್ಣಾನಿ ಸಂತಿ ವಾಸರಾಣೀತಿ ಉಚ್ಯಂತೇ । ಯಥಾ ತಾನಿ ಸೂರ್ಯಃ ವರ್ಧಯತಿ ಮಂದಗತಿತ್ವಾತ್ ಏವಮಸ್ಮಾಕಂ ತ್ವಮಾಯುಃ ಪ್ರವರ್ಧಯೇತ್ಯಾಶೀಃ ।** ಹಗಲುಕಾಲವು-ಅದರಲ್ಲೂ ಬೇಸಿಗೆಯಲ್ಲಿ-ದೀರ್ಘವಾಗಿರುವುದರಿಂದ ವಿಸ್ತಾರವಾದ ಹಗಲುಗಳಿಗೆ ವಾಸರಾಣಿ ಎಂದು ಹೇಳಬಹುದು. ಸೂರ್ಯನು ಹಗಲಿನಲ್ಲಿ ಮಂದಗತಿಯಿಂದ ಸಂಚರಿಸುತ್ತಾ ಹಗಲಿನ ಕಾಲಪರಿಮಾಣವನ್ನು ಹೆಚ್ಚುಮಾಡುತ್ತಾನೆ. ಅದರಂತೆ ಎಲೈ ಸೋಮನೇ, ನೀನು **ನಮ್ಮ** ಆಯುಃ ಪ್ರಮಾಣವನ್ನು ಹೆಚ್ಚುಮಾಡು ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

ಕುರುತನ ||೮||

ಕುರುತನೇತ್ಯರ್ಥಕಾ ಉಪಜನಾ ಭವಂತಿ ಕರ್ತನಹಂತನಯಾತನೇತಿ ॥

**ಕರ್ತನ** ಎಂಬ ಶಬ್ದಪ್ರಯೋಗಕ್ಕೆ ಉದಾಹರಣೆಯಾಗಿ ಈ ಕೆಳಗಿನ ಮಂತ್ರವಿದೆ—

**ಶುನಂ ಸುಫಾಲಾ ವಿಕೃಷಂತು ಭೂಮಿಂ ಶುನಂ ಕೀನಾಶಾ ಅಭಿಯಂತು ವಾಹೈಃ ।**
**ಶುನಾ ಸೀರಾ ಹವಿಷಾ ತೋಶಮಾನಾ ಸುಪಿಪ್ಪಲಾ ಓಷಧೀಃ ಕರ್ತನಾಸ್ಮೇ ।।**

(ವಾ. ಸಂ. ೧೨-೬೯)

ಈ ಮಂತ್ರವನ್ನು ಅಗ್ನಿಚಯನಮಾಡುವಾಗ ಭೂಮಿಯನ್ನು ಉಳುವ ಸಂದರ್ಭದಲ್ಲಿ ಪ್ರಯೋಗಿಸಲ್ಪಡುವುದು.

**ಹಂತನ** ಎಂಬ ಶಬ್ದದ ಪ್ರಯೋಗವನ್ನು ತಿಳಿಸುವುದಕ್ಕಾಗಿ ಈ ಕೆಳಗಿನ ಮಂತ್ರವಿದೆ.—

**ಯೋ ನೋ ಮರುತೋ ಅಭಿ ದುರ್ಹೃಣಾಯುಸ್ತಿರಶ್ಚಿತ್ತಾನಿ ವಸವೋ ಜಿಘಾಂಸತಿ ।**
**ದ್ರುಹಃಪಾಶಾನ್ಪ್ರತಿ ಸಂಮುಚೀಷ್ಟ ತಪಿಷ್ಠೇನ ಹನ್ಮನಾ ಹಂತನಾ ತಂ ॥**

(ಋ. ಸಂ. ೭-೫೯-೮)

ಇದರ ಅರ್ಥವು—ಪ್ರಶಸ್ತರಾದ ಎಲೈ ಮರುತ್ತುಗಳೇ, ನಮ್ಮ ಮನಸ್ಸುಗಳನ್ನು ಯಾರು ಕ್ರೂರವಾಗಿ ನೋಯಿಸುವರೋ, ಯಾರು ನಮ್ಮನ್ನು ಕೊಲ್ಲಲಿಚ್ಛಿಸುವರೋ ಅಂತಹ ಜನರು ಪಾಪಿಗಳಿಗೆ ಹಿಂಸಕನಾದ ವರುಣನ ಪಾಶಗಳನ್ನೂ ನಮ್ಮ ಮೇಲೆ ಪ್ರಯೋಗಿಸಬಹುದು. ಅಂತಹ ಜನರನ್ನು ನಿಮ್ಮ ದಹನಾತ್ಮಕವಾದ ಆಯುಧಗಳಿಂದ ಕೊಲ್ಲಿರಿ.

**ಯಾತನ** ಎಂಬ ಶಬ್ದದ ಪ್ರಯೋಗವಿರುವ ಋಕ್ಕಿನ ಉದಾಹರಣೆ—

**ಕೋ ನ್ವತ್ರ ಮರುತೋ ಮಾಮಹೇ ವಃ ಪ್ರಯಾತನ ಸಖೀಁರಚ್ಛಾ ಸಖಾಯಃ ।**
**ಮನ್ಮಾನಿ ಚಿತ್ರಾ ಅಪಿ ವಾತಯಂತ ಏಷಾಂ ಭೂತ ನವೇದಾ ಮ ಋತಾನಾಂ ॥**

(ಋ. ಸಂ. ೧-೧೬೫-೧೩)

ಇದರ ಅರ್ಥವು—

ಎಲೈ ಮರುತ್ತುಗಳೇ, ಈ ಲೋಕದಲ್ಲಿ ಯಾವ ಮರ್ತ್ಯನು ತಾನೇ ನಿಮ್ಮನ್ನು ನನ್ನಂತೆ ಪೂಜಿಸುತ್ತಾನೆ ? ನೀವು ಸಕಲರಿಗೂ ಸುಖರಾಗಿದ್ದುಕೊಂಡು ನಿಮಗೆ ಸಖರಾದ ಯಜಮಾನರನ್ನೂ ಅಭಿಮುಖವಾಗಿ ಹೋಗಿ ಸೇರಲು ನಡೆಯಿರಿ. ಆಕರ್ಷಕರಾದ ಎಲೈ ಮರುತ್ತುಗಳೇ, ಧ್ಯಾನಕ್ಕೆ ವಿಷಯಗಳಾದ (ಅವರು ಬಯಸುತ್ತಿರುವ ಧನಗಳನ್ನು ಅವರಿಗೆ ಒದಗಿಸಿ ಕೊಡುತ್ತಾ ಇರಿ. ನನ್ನ ಈ ಸತ್ಯವಾದ ಭಕ್ತಿಯನ್ನು ತಿಳಿಯಿರಿ.

ಜಠರೇ ॥ ೯ ॥

ಜಠರಮುದರಂ ಭವತಿ ಜಗ್ಧಮಸ್ಮಿನ್ ಧ್ರಿಯತೇ ಧೀಯತೇ ವಾ ॥

**ಜಠರ**ವೆಂದರೆ ಉದರವು, ಹೊಟ್ಟೆಯು- ಏಕೆಂದರೆ ಊಟಮಾಡಿದ ಅನ್ನ ಅಥವಾ ಆಹಾರವು ಇದರಲ್ಲಿ ಇಡಲ್ಪಟ್ಟಿರುವುದು. ಅಥವಾ ಇದರಲ್ಲಿ ನಿಂತಿರುವುದು.

**ಇತಿ ಸಪ್ತಮಃ ಖಂಡಃ**

ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು

---

## ಅಥಾಷ್ಟಮಃ ಖಂಡಃ

**ಎಂಟನೆಯ ಖಂಡವು**

ಮರುತ್ವಾಁ ಇಂದ್ರ ವೃಷಭೋ ರಣಾಯ ಪಿಬಾ ಸೋಮ-
ಮನುಷ್ವಧಂ ಮದಾಯ । ಆ ಸಿಂಚ ಸ್ವಜಠರೇ ಮಧ್ವ ಊರ್ಮಿಂ
ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥ (ಋ. ಸಂ. ೨-೪೭-೧)
ಮರುತ್ವಾನಿಂದ್ರ ಮರುದ್ಭಿಸ್ತದ್ವಾನ್ ವೃಷಭೋ ವರ್ಷಿತಾಪಾಂ

ರಣಾಯ ರಮಣೀಯಾಯ ಸಂಗ್ರಾಮಾಯ ಪಿಬ ಸೋಮಮನುಷ್ವ- ಧಮನ್ನನ್ನಂ ಮದಾಯ ಮದನೀಯಾಯ ಜೈತ್ರಾಯಾಸಿಂಚ ಸ್ವಜಠರೇ ಮಧುನ ಊರ್ಮಿಂ ಮಧು ಸೋಮಮಿತ್ಯೌಪಮಿಕಂ ಮಾದ್ಯತೇರಿದ- ಮಪೀತರನ್ಮಧ್ವೇತಸ್ಮಾ ದೇವ ತ್ವಂ ರಾಜಾಸಿ ಪೂರ್ವೇಷ್ವಪ್ಯಹಸ್ಸು ಸುತಾನಾಂ ॥ ೮ ॥

---

ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮ- ಮನುಷ್ವಧಂ ಮಧಾಯ। ಆಸಿಂಚ ಸ್ವಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ॥ ಮರುತ್ವಾನಿಂದ್ರ ಮರುದ್ಭಿ- ಸ್ತದ್ವಾನ್ ವೃಷಭೋ ವರ್ಷಿತಾಪಾಂ ರಣಾಯ ರಮಣೀಯಾಯ ಸಂಗ್ರಾಮಾಯ ಪಿಬ ಸೋಮಮನುಷ್ವಧಮನ್ನನ್ನಂ ಮದಾಯ ಮದನೀಯಾಯ ಜೈತ್ರಾಯಾಸಿಂಚ ಸ್ವಜಠರೇ ಮಧುನ ಊರ್ಮಿಂ। ಮಧು ಸೋಮಮಿತ್ಯೌಪಮಿಕಂ ಮಾದ್ಯತೇಃ ಇದಮಪೀತರನ್ಮಧ್ವೇತಸ್ಮಾ ದೇವ। ತ್ವಂ ರಾಜಾಸಿ ಪೂರ್ವೇಷ್ವಪ್ಯಹಸ್ಸು ಸುತಾನಾಂ ॥

ಮರುತ್ವಾँ ಇಂದ್ರ ಎಂಬ ಋಕ್ಕಿನ ಅರ್ಥ–ಎಲೈ ಇಂದ್ರನೇ, ವೃಷ್ಟಿಯನ್ನು ಸುರಿಸುವವನೂ ಮರುತ್ತುಗಳೊಡಗೂಡಿದವನೂ ಆದ ನೀನು ಸ್ವಧಾರೂಪವಾದ ಅನ್ನದಿಂದ ಕೂಡಿದ ಸೋಮವನ್ನು ಸಂಗ್ರಾಮದಲ್ಲಿ ನಿನ್ನ ವೀರ್ಯವನ್ನು ವೃದ್ಧಿಗೊಳಿಸುವುದಕ್ಕಾಗಿ ಪಾನಮಾಡು. ಮದಕಾರಕವಾದುದೂ ಅಲೆಯರೂಪದಲ್ಲಿರುವುದೂ ಆದ ಸೋಮರಸವನ್ನು ನಿನ್ನ ಜಠರದಲ್ಲಿ ಪೂರ್ಣವಾಗಿ ಸುರಿ. ನೀನು ಹಿಂದಿನ ಅಹಸ್ಸುಗಳಲ್ಲಿ (ದಿನಗಳಲ್ಲಿ) ಹಿಂಡಲ್ಪಟ್ಟ ಸೋಮರಸಗಳಿಗೆಲ್ಲಾ ಪ್ರಭುವಾಗಿದ್ದೀಯೆ.

**ಮರುತ್ವಾನ್ ಇಂದ್ರ ವೃಷಭೋ** ಎಲೈ ಇಂದ್ರನೇ, ಮರುದ್ದೇವತೆಗಳಿಂದ ಸಹಿತನಾಗಿಯೂ, ಮೇಘಗಳಿಂದ ಉದಕಗಳನ್ನು ಸುರಿಸುವವನಾಗಿಯೂ ಇದ್ದೀಯೇ. **ಮರುದ್ಭಿಸ್ತದ್ವಾನ್**-ಮರುದ್ದೇವತೆಗಳಿಂದ ಕೂಡಿರುವವನು **ವೃಷಭೋ ವರ್ಷಿತಾಪಾಂ**–ವೃಷಭಃ ಎಂದರೆ ನೀರನ್ನು ಸುರಿಸುವವನು. **ರಣಾಯ ರಮಣೀಯಾಯ ಸಂಗ್ರಾಮಾಯ**-ಹರ್ಷವನ್ನು ಉಂಟುಮಾಡುವುದಕ್ಕಾಗಿ **ಪಿಬ ಸೋಮಂ**–ಸೋಮರಸವನ್ನು ಪಾನಮಾಡು- **ಅನುಷ್ವಧಂ** ಸ್ವಧನೆಂದರೆ ಅನ್ನವು: ಆಹಾರರೂಪವಾದ ಸೋಮವು. ಮದಾಯ–ಮದನೆಂದರೆ ಹರ್ಷವು. ಈ ಹರ್ಷವು ಎರಡು ವಿಧವಾಗಿರುವುದು. ಒಂದು ಮನಸ್ಸಿಗೆ ಉಲ್ಲಾಸವನ್ನುಂಟುಮಾಡುವುದು. ಇನ್ನೊಂದು **ಜೈತ್ರಾಯ** ಯುದ್ಧಾದಿಗಳಲ್ಲಿ ಉತ್ಸಾಹವನ್ನು ಉಂಟುಮಾಡಿ ಗೆಲ್ಲುವುದಕ್ಕೆ ಸಹಾಯಕವಾಗಿರುವುದು. **ಆಸಿಂಚ ಜಠರೇ**–ನಿನ್ನ ಉದರದಲ್ಲಿ ಇಂತಹಸೋಮರಸವನ್ನು ತುಂಬಿಕೋ. **ಮಧುನ ಊರ್ಮಿಂ ಮಧು ಸೋಮಮಿತ್ಯೌಪಮಿಕಂ ಮಾದ್ಯತೇರಿದಮಪೀತರನ್ಮಧ್ವೇತತ್**–ಇಲ್ಲಿ ಮಧ್ವಃ ಅಥವಾ ಮಧುನ ಊರ್ಮಿಂ

ಎಂದರೆ ಅಲಿಗಳಿಂದ ತುಳುಕುತ್ತಿರುವ ಸೋಮರಸವು ಮತ್ತು ಮಧುಬುಕ್ಕೆ ಸಿಹಿಯಾಗಿಯೂ ರುಚಿಕರವಾದುದೂ ಆದ ಎಂದು ಅರ್ಥವು. ಇದಲ್ಲದೆ ಈ ಸೋಮರಸವು **ಮಾದ್ಯತೇ** ಈ ಮದವನ್ನು ಉಲ್ಲಾಸವನ್ನು ಉಂಟುಮಾಡುತ್ತಿರುವುದಾಗಿರುವುದು ಎಂದೂ ಅರ್ಥವು. **ತ್ವಂ ರಾಜಾಸಿ ಪ್ರದಿವಃ ಸುತಾನಾಂ ತ್ವಂ ರಾಜಾಸಿ ಪೂರ್ವೇಷ್ವಪ್ಯಹಸ್ಸು ಸುತಾನಾಂ** ಎಲೈ ಇಂದ್ರನೇ, ನಾವು ಈಗ ನಿನಗಾಗಿ ಸಿದ್ಧಪಡಿಸಿರುವ ಸೋಮರಸಕ್ಕೆ ಪ್ರಭುವಾಗಿರುವೆಯಷ್ಟೇ ಅಲ್ಲ. ಈ ದಿನಕ್ಕೆ ಹಿಂದಿನ ದಿನಗಳಲ್ಲಿಯೂ ನಾವು ಹಿಂಡಿ ಸಿದ್ಧಪಡಿಸಿದ ಸೋಮರಸಗಳಿಗೆಲ್ಲಾ ನೀನು ಪ್ರಭುವಾಗಿದ್ದೀಯೆ. ಎಂದರೆ ನಿನ್ನ ಪ್ರೀತ್ಯರ್ಥವಾಗಿಯೇ ನಾವು ಹಿಂದಿನದಿನಗಳಲ್ಲಿಯೂ ಈ ದಿವಸವೂ ಸೋಮರಸವನ್ನು ಸಿದ್ಧಪಡಿಸಿ ಅರ್ಪಿಸುತ್ತೇವೆ ಎಂದಭಿಪ್ರಾಯವು.

**ಇತಿ ಅಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

---

## ಅಥ ನವಮಃ ಖಂಡಃ

### ಒಂಭತ್ತನೆಯ ಖಂಡವು

ತಿತಉ ಪರಿಪವನಂ ಭವತಿ ತತವದ್ವಾ ತುನ್ನವದ್ವಾ ತಿಲಮಾತ್ರ-
ತುನ್ನಮಿತಿ ವಾ ॥೯॥

**ತಿತಉ** ಎಂದರೆ ಮರದರಿ. ಏಕೆಂದರೆ ಇದರಿಂದ ಧಾನ್ಯಾದಿಗಳು ಶೋಧಿಸಲ್ಪಡುತ್ತವೆ ಮತ್ತು **ತತವದ್ವಾ**-ಚರ್ಮದಿಂದ ಸುತ್ತಲೂ ಬದ್ಧವಾಗಿದೆ. **ತುನ್ನವದ್ವಾ**-ರಂಧ್ರಗಳಿರುವುದು. **ತಿಲಮಾತ್ರತುನ್ನಮಿತಿ ವಾ**-ಎಳ್ಳಿನ ಕಾಳುಗಳಂತೆ ಸಣ್ಣ ಸಣ್ಣ ರಂಧ್ರಗಳಿರುವುವು. ಈ ಕಾರಣಗಳಿಂದ ಮರದರಿಗೆ ತಿತಉ ಎಂದು ಹೆಸರು.

**ಇತಿ ನವಮಃ ಖಂಡಃ**

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು.

---

## ಅಥ ದಶಮಃ ಖಂಡಃ

### ಹತ್ತನೆಯ ಖಂಡವು

ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚ-
ಮಕ್ರತ । ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ
ಲಕ್ಷ್ಮೀರ್ನಿಹಿತಾಧಿ ವಾಚಿ ॥ (ಋ. ಸಂ. ೧೦-೭೧-೨)

ಸಕ್ತುಮಿವ ಪರಿಪವನೇನ ಪುನಂತಃ ಸಕ್ತುಃ ಸಚತೇರ್ದುರ್ಧಾವೋ ಭವತಿ ಕಸತೇರ್ವಾ ಸ್ಯಾದ್ವಿಪರೀತಸ್ಯ ವಿಕಸಿತೋ ಭವತಿ ಯತ್ರ ಧೀರಾ ಮನಸಾ ವಾಚಮಕೃಷತ ಪ್ರಜ್ಞಾನಂ ಧೀರಾಃ ಪ್ರಜ್ಞಾನ-ವಂತೋ ಧ್ಯಾನವಂತಸ್ತತ್ರ ಸಖಾಯಃ ಸಖ್ಯಾನಿ ಸಂಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚೀತಿ ಭದ್ರಂ ಭಗೇನ ವ್ಯಾಖ್ಯಾತಂ ಭಜನೀಯಂ ಭೂತಾನಾಮಭಿದ್ರವಣೀಯಂ ಭವದ್ರ-ಮಯತೀತಿ ವಾ ಭಾಜನವದ್ವಾ ಲಕ್ಷ್ಮೀರ್ಲಾಭಾದ್ವಾ ಲಕ್ಷಣಾದ್ವಾ ಲಪ್ಸ್ಯನಾದ್ವಾ ಲಾಂಛನಾದ್ವಾ ಲಪತೇರ್ವಾ ಸ್ಯಾತ್ಪ್ರೇಪ್ಸಾಕರ್ಮಣೋ ಲಗ್ಯತೇರ್ವಾ ಸ್ಯಾದಾಶ್ಲೇಷಕರ್ಮಣೋ ಲಜ್ಜತೇರ್ವಾ ಸ್ಯಾದಶ್ಲಾ-ಘಾಕರ್ಮಣಃ ಶಿಪ್ರೇ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥೧೦॥



———

**ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ। ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ॥ (ಋ.ಸಂ.೧೦-೭೧-೨) ಸಕ್ತುಮಿವ ಪರಿಪವನೇನ ಪುನಂತಃ। ಸಕ್ತುಃ ಸಚತೇರ್ದುರ್ಧಾವೋ ಭವತಿ । ಕಸತೇರ್ವಾ ಸ್ಯಾದ್ವಿಪರೀತಸ್ಯ ವಿಕಸಿತೋ ಭವತಿ ಯತ್ರ ಧೀರಾ ಮನಸಾ ವಾಚಮಕೃಷತ ಪ್ರಜ್ಞಾನಂ। ಧೀರಾಃ ಪ್ರಜ್ಞಾನವಂತೋ ಧ್ಯಾನವಂತಃ । ತತ್ರ ಸಖಾಯಃ ಸಖ್ಯಾನಿ ಸಂಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾದಿ ವಾಚಿ ಇತಿ ।ಭದ್ರಂ ಭಗೇನ ವ್ಯಾಖ್ಯಾತಂ' ಭಜನೀಯಂ ಭೂತಾನಾಮಭಿದ್ರವಣೀಯಂ ಭವದ್ರಮಯತೀತಿ ವಾ ಭಾಜನವದ್ವಾ। ಲಕ್ಷ್ಮೀರ್ಲಾಭಾದ್ವಾ ಲಕ್ಷಣಾದ್ವಾ (ಲಪ್ಸ್ಯನಾದ್ವಾ) ಲಾಂಛನಾದ್ವಾ ಲಪತೇರ್ವಾ ಸ್ಯಾತ್ಪ್ರೇಪ್ಸಾ ಕರ್ಮಣೋ ಲಗ್ಯತೇರ್ವಾ ಸ್ಯಾದಾಶ್ಲೇಷಕಮಣೋ ಲಜ್ಜತೇರ್ವಾ ಸ್ಯಾದಶ್ಲಾಘಾಕರ್ಮಣಃ ॥**

**ಸಕ್ತುಮಿವ** ಎಂಬ ಋಕ್ಕಿನ ಅರ್ಥವು—ವಂದರಿಯಿಂದ ಯವಧಾನ್ಯವನ್ನು ಶೋಧಿಸುವಂತೆ ಪ್ರಾಜ್ಞರು ಯಾವಾಗ ಪ್ರಜ್ಞಾಯುಕ್ತವಾದ ತಮ್ಮ ಮನಸ್ಸಿನಿಂದ ವಾಕ್ಕನ್ನು ಸಂಸ್ಕರಿಸುವರೋ, ಆಗ ಮಿತ್ರರು ತಮ್ಮ ಮಿತ್ರತ್ವವನ್ನು ಅರಿಯುತ್ತಾರೆ. ಇವರ ವಾಕ್ಕಿನಲ್ಲಿ ಕಲ್ಯಾಣಾತ್ಮಕವಾದ ಶ್ರೇಯಸ್ಸು ಸ್ಥಾಪಿತವಾಗಿದೆ.

**ತಿತಉ । ತಿತಉ ಪರಿಪವನಂ ಭವತಿ ತತವದ್ವಾ ತುನ್ನವದ್ವಾ ತಿಲಮಾತ್ರ ತಿನ್ನಮಿತಿವಾ-ತಿತಉ** ಎಂದರೆ ವಂದರಿ (sieve) ಎಂದರ್ಥವು. ಧಾನ್ಯಾದಿಗಳನ್ನು ಅಥವಾ ಹಿಟ್ಟನ್ನು ಶೋಧಿಸುವುದಕ್ಕಾಗಿ ಇವನ್ನು ಉಪಯೋಗಿಸುವರು. ಈ ಹೆಸರು ಇದಕ್ಕೆ ಹೇಗೆ ಬಂತೆಂದರೆ—**ತತವದ್ವಾ । ತತೇನ ಚರ್ಮಣಾ ನದ್ಧಂ** ಈ ವಂದರಿಯನ್ನು ಯಾವುದಾದರೂ ತಗಡಿನಿಂದ ಮಾಡಿ ಅದರಲ್ಲಿ ಸಣ್ಣ ಸಣ್ಣ ರಂಧ್ರಗಳಿದ್ದು ಆ ತಗಡಿನ ಸುತ್ತಲೂ ಚರ್ಮದ ಕಟ್ಟನ್ನು ಹಾಕಿರುವುದರಿಂದ ವಂದರಿಗೆ **ತಿತಉ** ಎಂದು ಹೆಸರು. ಅಥವಾ **ತುನ್ನವದ್ವಾ ತುನ್ನೈರ್ವಾ ಛಿದ್ರೈರ್ವಾ ತದ್ವತ್** ಈ ವಂದರಿಯಲ್ಲಿ ಸಣ್ಣ ಸಣ್ಣ ಛಿದ್ರಗಳು ಅಥವಾ ರಂಧ್ರಗಳಿರುವುದರಿಂದ ವಂದರಿಗೆ ತಿತಉ ಎಂದು ಹೆಸರು. ಅಥವಾ **ತಿಲಮಾತ್ರ-**

**ತುನ್ನಮಿತಿ ವಾ ತಿಲಮಾತ್ರಾಣಿ ವಾ ತುನ್ನಾನಿ ತಸ್ಮಿನ್ನಿತಿ ।** ಇದರಲ್ಲಿರುವ ರಂಧ್ರಗಳು ಎಳ್ಳಿನಂತೆ ಬಹಳ ಸಣ್ಣಗಿರುವುದರಿಂದ ಜಂದರಿಗೆ **ತಿತಉ** ಎಂದು ಹೆಸರು.

(ಯಂದ) ಧಾನ್ಯವನ್ನು ಜಂದರಿಯಲ್ಲಿ ಹಾಕಿ ಶುದ್ಧಿ ಮಾಡುವಂತೆ ; ಸಕ್ತು ಶಬ್ದವು ಅಂಟಿಕೊಳ್ಳು ಎಂಬ ಅರ್ಥವಿರುವ ಸಜತಿ ಧಾತುವಿನಿಂದ ನಿಷ್ಪನ್ನವಾಗಿದೆ—ಏಕೆಂದರೆ, ಇದನ್ನು ತೊಳೆಯುವಾಗ ಇದು ಒಂದಕ್ಕೊಂದು ಅಂಟಿಕೊಂಡು ತೊಳೆಯುವುದು ಕಷ್ಟವಾಗುವುದು ಅಥವಾ ಇದನ್ನು ತೊಳೆಯುವಾಗ ಇದು ವಿಕಸಿತವಾಗುವುದು ಎಂದರೆ ಅರಳುವುದು. ಆದ್ದರಿಂದ ವಿಕಸಿತ ಶಬ್ದದ ಅಕ್ಷರಗಳು ಹಿಂದುಮುಂದು ಮಾಡುವುದರಿಂದ ಸಕ್ತುಶಬ್ದವು ನಿಷ್ಪನ್ನವಾಗಿದೆಯೆಂದೂ ಹೇಳಬಹುದು. ಜಂದರಿಯಿಂದ ಧಾನ್ಯವನ್ನು ಶೋಧಿಸಿ ಶುದ್ಧಿ ಮಾಡುವಂತೆ ಬುದ್ಧಿವಂತರೂ ಜ್ಞಾನವಂತರೂ ಆದ ಜನರು ತಾವು ಆಡುವ ಮಾತನ್ನು (ಅಥವಾ ಮಂತ್ರವನ್ನು) ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ಮಾತನಾಡುವರು. ಧಾನ್ಯವು ಜಂದರಿಯಲ್ಲಿ ಹಾಕುವುದರಿಂದ ಶುದ್ಧಿಯಾಗುವುದು. ಅದರಂತೆ ಬುದ್ಧಿವಂತರಾದ ಮನುಷ್ಯರ ಮನಸ್ಸೆಂಬ ಜಂದರಿಯಲ್ಲಿ ವಾಕ್ಯವೆಂಬ ಧಾನ್ಯವನ್ನು ಹಾಕಿ ಧಾನ್ಯವೆಂಬ ಚಲನೆಯಿಂದ ವಾಕ್ಯವು ಶುದ್ಧವಾಗುವುದು ಎಂದರೆ ಬುದ್ಧಿವಂತರು ಆಡುವ ಮಾತುಗಳು ಚೆನ್ನಾಗಿ ಆಲೋಚಿಸಲ್ಪಟ್ಟು ಆಡಲ್ಪಡುವುದರಿಂದ ಅವು ಯುಕ್ತಿಯುಕ್ತವಾಗಿಯೂ ಅರ್ಥಗರ್ಭಿತವಾಗಿಯೂ ಇರುವವು ಎಂದಭಿಪ್ರಾಯವು. **ಸಖಾಯಃ ಸಖ್ಯಾನಿ ಸಂಜಾನತೇ** ಎಂದರೆ ಈ ವಿಧವಾದ ಸುಸಂಸ್ಕೃತವಾಕ್ಯಗಳಿಂದ ಜನರು ಪರಸ್ಪರ ಸ್ನೇಹಭಾವವನ್ನು ಅರಿಯುತ್ತಾರೆ. **ಸಖಾಯಃ** ಎಂದರೆ **ಸಮಾನಖ್ಯಾನಾಃ** ಒಂದೇ ವಿಧವಾದ ಅಭಿಪ್ರಾಯ ಅಥವಾ ಸಂಸ್ಕಾರವುಳ್ಳವರಿಗೆ **ಸಖಾಯಃ** ಸ್ನೇಹಿತರು ಎಂದರ್ಥವು. ಎಂದರೆ ಸ್ನೇಹಿತರ ಮಾತುಗಳು, ಕಾರ್ಯಗಳು ಪರಸ್ಪರ ವಿರೋಧವಾಗಿಲ್ಲದೆ ಒಬ್ಬರಿಗೊಬ್ಬರು ಸಹಕರಿಸಿರುವವು. **ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ**—ಇಂತಹ ಸ್ನೇಹಿತರ ವಾಕ್ಯಗಳಲ್ಲಿ ಉತ್ತಮ ಅಥವಾ ಮಂಗಳಕರವಾದ ಚಿಹ್ನೆಯು (ಲಕ್ಷಣವು) ಕಂಡು ಬರುವುದು. ಭದ್ರಶಬ್ದಕ್ಕೆ ಭಗವೆಂದರ್ಥವು. **ಭಗೋ ಭಜತೇಃ** (ನಿ-೧-೭) ಭದ್ರಶಬ್ದಕ್ಕೆ ಹೊಂದಲ್ಪಡುವ, ಮಂಗಳಕರವಾದ. ಅಥವಾ ಪ್ರಾಣಿಗಳಿಂದ ಅನುಭವಿಸಲ್ಪಡುವ ಎಂದರ್ಥವು. ಅಥವಾ ಇದರ ಉತ್ಪತ್ತಿಯೂ ಸುಖಾನುಭವಕ್ಕೆ ಕಾರಣಭೂತವಾಗಿರುವುದು. ಅಥವಾ ಇದನ್ನು ಹೊಂದಲು ಅರ್ಹರಾದವರನ್ನು ಹೋಗಿ ಸೇರುವುದು. ಅರ್ಹರಾದವರಿಗೆ ಮಾತ್ರ ಇದು ಸಿಕ್ಕುವುದು. **ಲಕ್ಷ್ಮೀಃ** ಎಂಬ ಶಬ್ದಕ್ಕೆ ಈ ಹೆಸರು **ಲಾಭಾದ್ವಾ** (ಹೊಂದುವುದು) ಎಂಬರ್ಥದಿಂದಾಗಲಿ, **ಲಕ್ಷಣಾದ್ವಾ** ನಿರ್ದೇಶಿಸುವುದರಿಂದಾಗಲಿ, **ಲಪ್ಸ್ಯನಾತ್** ಅಪೇಕ್ಷಿಸುವುದರಿಂದಾಗಲಿ, **ಲಾಂಛನಾದ್ವಾ** ಚಿಹ್ನೆಯನ್ನು ಸೂಚಿಸುವುದರಿಂದಾಗಲಿ ಅಥವಾ ಅಪೇಕ್ಷಿಸು ಎಂಬರ್ಥವುಳ್ಳ **ಲಷ್** ಧಾತುವಿನಿಂದಾಗಲಿ ಅಥವಾ ಹಿಂಜರಿ ಎಂಬರ್ಥವುಳ್ಳ **ಲಜ್** ಧಾತುವಿನಿಂದಾಗಲಿ ಲಕ್ಷ್ಮಿಶಬ್ದವು ನಿಷ್ಪನ್ನವಾಗಬಹುದು ಅಥವಾ **ಅಶ್ಲಾಘಾಕರ್ಮಣಃ** ಸ್ವಯಂ ಪ್ರಶಂಸೆಮಾಡಿಕೊಳ್ಳದ ಎಂಬರ್ಥವಿರುವ **ಲಜ್ಜತಿ** ಧಾತುವಿನಿಂದ ನಿಷ್ಪನ್ನವಾಗಬಹುದು.

ಶಿಪ್ರೇ ॥೧೧॥

ಶಿಪ್ರೇ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥

**ಶಿಪ್ರೇ** ಎಂಬ ಶಬ್ದದ ಅರ್ಥವಿವರಣೆಯನ್ನು ಮುಂದೆ ಮಾಡಲಾಗುತ್ತದೆ. (ನಿ. ೬-೧೭). **ಶಿಪ್ರೇ** ಎಂದರೆ ನಾಸಿಕ ಅಥವಾ ಗಲ್ಲ, ಕೆನ್ನೆಗಳು.

**ಇತಿ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು

---

## ಅಥೈಕಾದಶಃ ಖಂಡಃ

## ಹನ್ನೊಂದನೆಯ ಖಂಡವು

---

ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂ ಜಭಾರ । ಯದೇದಯುಕ್ತ ಹರಿತಃ ಸಧಸ್ಥಾನಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ॥ (ಋ. ಸಂ. ೧–೧೧೫–೪) ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯೇ ಯತ್ಕರ್ಮಣಾಂ ಕ್ರಿಯಾಮಾಣಾನಾಂ ವಿತತಂ ಸಂಹ್ರಿಯತೇ ಯದಾಸಾವಯುಂಕ್ತೇ ಹರಣಾನಾದಿತ್ಯರಶ್ಮೀನ್ ಹರಿತೋಽಶ್ವಾನಿತಿ ವಾಥ ರಾತ್ರೀ ವಾಸಸ್ತನುತೇ ಸಿಮಸ್ಮೈ ವೇಸರಮಹರವಯುವತೀ ಸರ್ವಸ್ಮಾದಪಿ ವೋಪಮಾರ್ಥೇ ಸ್ಯಾದ್ರಾತ್ರೀವ ವಾಸಸ್ತನುತ ಇತಿ ತಥಾಪಿ ನಿಗಮೋ ಭವತಿ । ಪುನಃ ಸಮವ್ಯದ್ವಿತತಂ ವಯಂತೀ ಸಮನಾತ್ಸೀತ್ ॥ ೧೧ ॥

---

ಮಧ್ಯಾ ॥ ೧೨ ॥

ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂ ಜಭಾರ। ಯದೇದಯುಕ್ತ ಹರಿತಃ ಸಧಸ್ಥಾನಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ॥ (ಋ. ಸಂ. ೧-೧೧೫-೪) ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯೇ ಯತ್ಕರ್ಮಣಾಂ ಕ್ರಿಯಾಮಾಣಾನಾಂ ವಿತತಂ ಸಂಹ್ರಿಯತೇ ಯದಾಸಾವಯುಂಕ್ತೇ ಹರಣಾನಾದಿತ್ಯರಶ್ಮೀನ್ ಹರಿತೋಽಶ್ವಾನಿತಿ ವಾಥ ರಾತ್ರೀ ವಾಸಸ್ತನುತೇ ಸಿಮಸ್ಮೈ ವೇಸರಮಹರವಯುವತೀ ಸರ್ವಸ್ಮಾದಪಿ ವೋಪಮಾರ್ಥೇ ಸ್ಯಾದ್ರಾತ್ರೀವ ವಾಸಸ್ತನುತ ಇತಿ ತಥಾಪಿ ನಿಗಮೋ ಭವತಿ । ಪುನಸಮವ್ಯತ್ವಿತತಂ ವಯಂತೀ ಸಮನಾತ್ಸೀತ್ ॥

ಈ ಋಕ್ಕಿನ ಅರ್ಥವು—ಸೂರ್ಯನು ತನ್ನ ಕಿರಣಗಳನ್ನು ತನ್ನಲ್ಲಿ ಉಪಸಂಹರಿಸಿ ಕೊಂಡನಂತರ ಅಸಂಪೂರ್ಣವಾದ ಕೃಷ್ಯಾದಿಕರ್ಮಗಳೆಲ್ಲವೂ ಹಾಗೆಯೇ ಉಳಿಯುತ್ತವೆ. ಇದೇ ಸೂರ್ಯನ ಸ್ವಾಮಿತ್ವ, ಇದೇ ಅವನ ಮಾಹಾತ್ಮೆ. ಮತ್ತು ಅವನು ಈ ಭೂಲೋಕದಿಂದ ಕಿರಣಗಳನ್ನು ಸೆಳೆದುಕೊಂಡಮೇಲೆ ರಾತ್ರಿಯು ಅಂಧಕಾರವನ್ನು ಬೀರುವುದು

**ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ**–ಸೂರ್ಯನ ದೇವಭಾವವು ಮತ್ತು ಮಾಹಾತ್ಮೆಯೂ ಇದೇ ಆಗಿದೆ. ಇದು ಎಂದರೆ ಯಾವುದು ? **ಮಧ್ಯೇ ಯತ್ಕರ್ಮಣಾಂ ಕ್ರಿಯಮಾಣಾನಾಂ ವಿತತಂ ಸಂಹ್ರಿಯತೇ ಯದಾಸಾನಯುಂಕ್ತೇ**–ಸೂರ್ಯನು ಉದಯವಾದಾಗ ತನ್ನ ರಶ್ಮಿಗಳನ್ನು (ಬೆಳಕನ್ನು) ಪ್ರಪಂಚದ ಮೇಲೆಲ್ಲಾ ಹರಡುವನಷ್ಟೆ. ಅಸ್ತಮಾನಕಾಲದಲ್ಲಿ ಆ ರಶ್ಮಿಗಳನ್ನು ಹಿಂದಕ್ಕೆ ತೆಗೆದುಕೊಳ್ಳುವನು. ಅದರಿಂದ ಕತ್ತಲೆಯು ಕವಿಯುವುದು, ಹೀಗೆ ಬೆಳಕನ್ನು ಹರಡುವುದೂ ಅದನ್ನು ಹಿಂದಕ್ಕೆ ತೆಗೆದುಕೊಳ್ಳುವುದೂ ಈ ಸೂರ್ಯದೇವನ ದೇವತ್ವವು ಮತ್ತು ಮಹಿಮೆಯು. **ಹರಿತಃ ಸೂರ್ಯಸ್ಯ**–**ಹರಣಾನಾದಿತ್ಯರಶ್ಮೀನ್**–ಸೂರ್ಯನ ರಶ್ಮಿಗಳು ಅಥವಾ ಹರಿದ್ವರ್ಣವುಳ್ಳ ಸೂರ್ಯನ ಅಶ್ವಗಳು. **ವೇಸರಮಹರವಯುವತೀ ಸರ್ವಸ್ಮಾದಪಿ ವೋಪಮಾರ್ಥೆ ಸ್ಯಾದ್ರಾತ್ರೀವ ವಾಸಸ್ತನುತೇ**–ಅಸ್ತಮಾನಕಾಲದಲ್ಲಿ ರಾತ್ರಿಯೆಂಬ ಯುವತಿಯು ಸೂರ್ಯನನ್ನು ಕತ್ತಲೆಯೆಂಬ ತನ್ನ ವಸ್ತ್ರದಿಂದ ಆಚ್ಛಾದಿಸುವಳು ಎಂದು ಉಪಮಾನವನ್ನು ಹೇಳಿದೆ.

**ಪುನಸ್ಸಮವ್ಯದ್ವಿತತಂ ವಯಂತೀ ಮಧ್ಯಾ ಕರ್ತೋರ್ನ್ಯಧಾಚ್ಛಕ್ಮ ಧೀರಃ ।**
**ಉತ್ಸಂಹಾಯಾಸ್ಥಾದ್ವ್ಯ೧ ತೂರದರ್ಧರರಮತಿಃ ಸವಿತಾ ದೇವ ಆಗಾತ್ ॥**

(ಋ.ಸಂ.೨-೩೮-೪)

ಇದರ ಅರ್ಥವು–ವಸ್ತ್ರವನ್ನು ಹೆಣೆಯುವ ಸ್ತ್ರೀಯಂತೆ ರಾತ್ರಿಯು ವಿಸ್ತೃತವಾದ ಲೋಕವನ್ನು ಪುನಃ ಆವರಿಸುತ್ತದೆ. ಪ್ರಜ್ಞಾವಂತನು ತನಗೆ ಕಾರ್ಯಮಾಡುವ ಶಕ್ತಿಯಿದ್ದರೂ ಸಹ ರಾತ್ರಿಯು ಆಗಮಿಸಿದನಂತರ ಕಾರ್ಯವನ್ನು ಅರ್ಧದಲ್ಲಿಯೇ ನಿಲ್ಲಿಸುತ್ತಾನೆ. ಪುನಃ ಸವಿತೃವಿನ ಉದಯಾನಂತರ ಶಯ್ಯೆಯನ್ನು ಬಿಟ್ಟು ಮೇಲೇಳುತ್ತಾನೆ. ಲೋಕಕ್ಕೆ ಪ್ರಸವಿತೃವಾದ (ಕಾರಣನಾದ) ಸೂರ್ಯನು ಕೊಂಚವೂ ನಿಲುವಿಲ್ಲದೆ ಪ್ರಕಾಶಮಾನನಾಗಿ ಪುನಃ ಆವಿರ್ಭವಿಸುತ್ತಾನೆ. ಕಾಲವಿಶೇಷಗಳನ್ನು ಬಿಡಿಸಿ ವಿಭಾಗಮಾಡುತ್ತಾನೆ.

**ಇತ್ಯೇಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು

## ಅಥ ದ್ವಾದಶಃ ಖಂಡಃ

### ಹನ್ನೆರಡನೆಯ ಖಂಡವು

ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಬಿಭ್ಯುಷಾ । ಮಂದೂ ಸಮಾನವರ್ಚಸಾ ॥ (ಋ. ಸಂ. ೧-೬-೭) ಇಂದ್ರೇಣ ಹಿ ಸಂದೃಶ್ಯಸೇ ಸಂಗಚ್ಛಮಾನೋಽಬಿಭ್ಯುಷಾ ಗಣೇವ ಮಂದೂ ಮದಿಷ್ಣೂ ಯುವಾಂ ಸ್ಥೋಽಪಿ ವಾ ಮಂದುನಾ ತೇನೇತಿ ಸ್ಯಾತ್ಸಮಾನವರ್ಚಸೇ-ತ್ಯೇತೇನ ವ್ಯಾಖ್ಯಾತಂ ॥೧೨॥

---

ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಬಿಭ್ಯುಷಾ । ಮಂದೂ ಸಮಾನವರ್ಚಸಾ ॥ (ಋ. ಸಂ.-೧-೬-೭) ಇಂದ್ರೇಣ ಹಿ ಸಂದೃಶ್ಯಸೇ ಸಂಗಚ್ಛಮಾನೋಽಬಿಭ್ಯುಷಾ ಗಣೇನ ಮಂದೂ ಮದಿಷ್ಣೂ ಯುವಾಂ ಸ್ಥೋಽಪಿ ವಾ ಮಂದುನಾ ತೇನೇತಿ ಸ್ಯಾತ್ಸಮಾನವರ್ಚಸೇತ್ಯೇತೇನ ವ್ಯಾಖ್ಯಾತಂ ॥

ಮಂದೂ ॥೧೩॥

ಈ ಋಕ್ಕಿನ ಅರ್ಥವು -ಎಲೈ ಮರುದ್ದೇವತೆಗಳೇ, ನೀವು ಭಯರಹಿತನಾದ ಇಂದ್ರನೊಡನೆ ಸಂಚರಿಸುತ್ತಿರುವುದು ಎಲ್ಲರಿಗೂ ಗೋಚರಿಸುತ್ತಿರುವುದು. ನೀವಿಬ್ಬರೂ ಯಾವಾಗಲೂ ಸಂತೋಷ ಭರಿತರಾಗಿರುವುದಲ್ಲದೆ. ನಿಮ್ಮಿಬ್ಬರ ವರ್ಚಸ್ಸು ಶಕ್ತಿ ಸಾಮರ್ಥ್ಯಗಳು ಸಮವಾಗಿರುವವು. ಎಂದರೆ ಇಂದ್ರನೂ ಮರುದ್ದೇವತೆಗಳಾದ ನೀವೂ ಇಬ್ಬರೂ ವರ್ಚಸ್ವಿಗಳು, ಶಕ್ತಿ ಸಾಮರ್ಥ್ಯಗಳಲ್ಲಿ ಸಮಾನರು

**ಇಂದ್ರೇಣ ಹಿ ಸಂ ದೃಶ್ಯಸೇ ಸಂಗಚ್ಛಮಾನೋಽಬಿಭ್ಯುಷಾ ಗಣೇನ—**

ಎಲೈ ಇಂದ್ರನೇ, ಭಯರಹಿತನಾದ ನಿನ್ನೊಡನೆ ಮರುದ್ಗಣವೊಡನೆಯೂ ಎಂದರೆ ಭಯರಹಿತನಾದ ನೀನೂ ಮರುದ್ಗಣಗಳೂ ಸಂಚರಿಸುತ್ತಿರುವುದು ಎಲ್ಲರಿಂದಲೂ ನೋಡಲ್ಪಡುವುದು ಎಂದರೆ ಎಲ್ಲರೂ ನೋಡುತ್ತಾರೆ.

**ಮಂದೂ ಮದಿಷ್ಣೂ ಯುವಾಂ ಸ್ಥೋಽಪಿ ವಾ ಮಂದುನಾ ತೇನೇತಿ ಸ್ಯಾತ್ಸಮಾನವರ್ಚಸೇತ್ಯೇತೇನ ವ್ಯಾಖ್ಯಾತಂ—**

ನೀವಿಬ್ಬರೂ ಯಾವಾಗಲೂ **ಮಂದೂ-ಮದಿಷ್ಣೂ**-ಸಂತೋಷ ಚಿತ್ತರಾಗಿರುವಿರಿ ಆದ್ದರಿಂದಲೇ ನಿಮ್ಮಿಬ್ಬರ ವರ್ಚಸ್ಸು ಎಂದರೆ ಮುಖಕಾಂತಿಯು ಸಮಾನವಾಗಿರುವುದು.

**ಇತಿ ದ್ವಾದಶಃ ಖಂಡಃ**

ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು

---

## ಅಥ ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಂ ಶೂರಣಾಸೋ ದಿವ್ಯಾಸೋ ಅತ್ಯಾಃ । ಹಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ । (ಋ. ಸಂ. ೧-೧೬೩-೧೦) ಈರ್ಮಾಂತಾಃ ಸಮೀರಿತಾಂತಾಃ ಸುಸಮೀರಿತಾಂತಾಃ ಪೃಥ್ವಂತಾ ವಾ ಸಿಲಿಕಮಧ್ಯಮಾಃ ಸಂಸೃತಮಧ್ಯಮಾಃ ಶೀರ್ಷಮಧ್ಯಮಾ ವಾಪಿ ವಾ ಶಿರ ಆದಿತ್ಯೋ ಭವತಿ ಯದನುಶೇತೇ ಸರ್ವಾಣಿ ಭೂತಾನಿ ಮಧ್ಯೇ ಚೈಷಾಂ ತಿಷ್ಠತೀದಮಪೀತರಚ್ಛಿರ ಏತಸ್ಮಾದೇವ ಸಮಾಶ್ರಿತಾನ್ಯೇತ-ದಿಂದ್ರಿಯಾಣಿ ಭವಂತಿ । ಸಂಶೂರಣಾಸಃ ದಿವ್ಯಾಸೋ ಅತ್ಯಾಃ । ಶೂರಃ ಶವತೇರ್ಗತಿಕರ್ಮಣೋ ದಿವ್ಯಾ ದಿವಿಜಾ ಅತ್ಯಾ ಅತನಾಃ । ಹಂಸಾ ಇವ ಶ್ರೇಣಿಶೋ ಯತಂತೇ । ಹಂಸಾ ಹಂತೇರ್ಘ್ನಂತ್ಯಧ್ವಾನಂ ಶ್ರೇಣಿಶ ಇತಿ ಶ್ರೇಣಿಃ ಶ್ರಯತೇಃ ಸಮಾಶ್ರಿತಾ ಭವಂತಿ । ಯದಾಕ್ಷಿ-ಷುರ್ಯದಾಪನ್ ದಿವ್ಯಮಜ್ಮಮಜನಿಮಾಜಿಮಶ್ವಾ ಅಸ್ಯಾದಿತ್ಯಸ್ತುತಿ-ರಶ್ವಸ್ಯಾದಿತ್ಯಾದಶ್ವೋ ನಿಸ್ತಷ್ಟ ಇತಿ । ಸೂರಾದಶ್ವಂ ವಸವೋ ನಿರತಷ್ಟೇತ್ಯಪಿ ನಿಗಮೋ ಭವತಿ ॥ ೧೩ ॥

---

ಈರ್ಮಾಂತಾಸಃ ಸಿಲಿಕಮಧ್ಯಮಾಸಃ ಸಂ ಶೂರಣಾಸೋ ದಿವ್ಯಾಸೋ
ಅತ್ಯಾಃ । ಹಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯ-
ಮಜ್ಮಮಶ್ವಾಃ । (ಋ. ಸಂ. ೧-೧೬೩-೧೦) ಈರ್ಮಾಂತಾಃ

ಸುಸಮಿಾರಿತಾಂತಾಃ ಪೃಥ್ವಂತಾ ವಾ ಸಿಲಿಕಮಧ್ಯಮಾಃ ಸಂಸೃತ-
ಮಧ್ಯಮಾಃ ಶೀರ್ಷಮಧ್ಯಮಾ ವಾಪಿ ವಾ ಶಿರ ಆದಿತ್ಯೋ ಭವತಿ
ಯದನುಶೇತೇ ಸರ್ವಾಣಿ ಭೂತಾನಿ ಮಧ್ಯೇ ಚೈಷಾಂ ತಿಷ್ಠತೀದ-
ಮಪೀತರಚ್ಛಿರ ಏತಸ್ಮಾದೇವ ಸಮಾಶ್ರಿತಾನ್ಯೇತದಿಂದ್ರಿಯಾಣಿ
ಭವಂತಿ । ಸಂ ಶೂರಣಾಸಃ ದಿವ್ಯಾಸೋ ಅತ್ಯಾಃ ಶೂರಃ ಶವತೇ-
ರ್ಗತಿಕರ್ಮಣೋ ದಿವ್ಯಾ ದಿವಿಜಾ ಅತ್ಯಾ ಅತನಾಃ । ಹಂಸಾ ಇವ
ಶ್ರೇಣಿಶೋ ಯತಂತೇ । ಹಂಸಾ ಹಂತೇರ್ಘ್ನಂತ್ಯಧ್ವಾನಂ ಶ್ರೇಣಿಶ
ಇತಿ ಶ್ರೇಣಿಃ ಶ್ರಯತೇಃ ಸಮಾಶ್ರಿತಾ ಭವಂತಿ । ಯದಾಕ್ಷಿಷುರ್ಯ-
ದಾಪನ್ ದಿವ್ಯಮಜ್ಮಮಜನಿಮಾಜಿಮಶ್ವಾ ಅಸ್ತ್ಯಾದಿತ್ಯಸ್ತುತಿರಶ್ವ-
ಸ್ಯಾದಿತ್ಯಾದಶ್ವೋ ನಿಸ್ತೃಷ್ಟ ಇತಿ । ಸೂರಾದಶ್ವಂ ವಸವೋ ನಿರತಷ್ಟೇ-
ತ್ಯಪಿ ನಿಗಮೋ ಭವತಿ

ಈರ್ಮಾಂತಾಸಃ ॥ ೧೪ ॥

**ಈರ್ಮಾಂತಾಸಃ ಎಂಬ ಋಕ್ಕಿನ ಅರ್ಥವು—**

ಸೂರ್ಯನ ಕುದುರೆಗಳು ಯಾವಾಗ ದೇವಲೋಕದ ಮಾರ್ಗವನ್ನು ವ್ಯಾಪಿಸುತ್ತವೆಯೋ ಆಗ ಪುಷ್ಟವಾದ ತೊಡೆ ಕಟ್ಟುಳ್ಳವೂ ಸಮವರ್ತ್ತಿಯಾದ ಸೊಂಟದ ಪಾರ್ಶ್ವವುಳ್ಳವೂ ವೀರ್ಯವುಳ್ಳವೂ ದೇವಲೋಕೋತ್ಪನ್ನವೂ ಆದ ಅಶ್ವಗಳು ಸಾಲುಕಟ್ಟಿಕೊಂಡು ಹಾರುತ್ತಿರುವ ಹಂಸ ಪಕ್ಷಿಗಳಂತೆ ಹಾರಲು ಪ್ರಯತ್ನಿಸುತ್ತವೆ.

ಸೂರ್ಯನ ಅಶ್ವಗಳು ಏಳು. (ಸಪ್ತಾಶ್ವಾ ಹರಿತಃ ಸೂರ್ಯಸ್ಯ) ಅವುಗಳು ಅಂತರಿಕ್ಷದಲ್ಲಿ ಸಾಲುಕಟ್ಟಿಕೊಂಡು ಹೋಗುತ್ತವೆ. ಒಂದರ ಪಕ್ಕದಲ್ಲಿ ಇನ್ನೊಂದು ರೀತಿ ಏಳು ಅಶ್ವಗಳು ಸಾಲಾಗಿರುವವು. ಅವು ಹೇಗೆ ಕಾಣುತ್ತವೆ ಎಂಬುದನ್ನು ಋಷಿಯು ಇಲ್ಲಿ ವರ್ಣಿಸಿದಾನೆ.

**ಈರ್ಮಾಂತಾಸಃ ಸಮಿಾರಿತಾಂತಾಃ ಸುಸಮಿಾರಿತಾಂತಾಃ ಪೃಥ್ವಂತಾ ವಾ—**

ಪುಷ್ಟವಾಗಿಯೂ ದುಂಡಾಗಿಯೂ ಚೆನ್ನಾಗಿ ಬೆಳೆದಿರುವ ಪೃಷ್ಠಭಾಗಗಳುಳ್ಳ ಅಶ್ವಗಳು ಎಂದರ್ಥವು. ಒಳ್ಳೆಯ ಅಶ್ವಗಳ ಹಿಂಭಾಗವು ಯಾವಾಗಲೂ ಪುಷ್ಟವಾಗಿರುವವು.

**ಸಿಲಿಕಮಧ್ಯಮಾಃ ಸಂಸೃತಮಧ್ಯಮಾಃ ಶೀರ್ಷಮಧ್ಯಮಾ ವಾ**—ಪುಷ್ಟವಾದ ತೊಡೆಗಳುಳ್ಳವೂ, ಒಂದೇಸಮವಾದಶರೀರವುಳ್ಳವೂ ಆದ ಈ ಏಳು ಅಶ್ವಗಳಲ್ಲಿ ಮಧ್ಯದಲ್ಲಿರುವ ಅಶ್ವವು. ಇವುಗಳ ಶಿರಸ್ಸಿನಂತಿರುವುದು. ಶಿರಸ್ಸು ಶರೀರಕ್ಕೆ ಹೇಗೆ ಪ್ರಾಧಾನ್ಯವೋ ಹಾಗೆ ಏಳು ಕುದುರೆಗಳಲ್ಲಿ ಮಧ್ಯದ ಕುದುರೆಯು ಶಿರಸ್ಥಾನೀಯವಾಗಿರುವುದು.

**ಅಪಿ ವಾ ಶಿರ ಆದಿತ್ಯೋ ಭವತಿ ಯದನುಶೇತೇ ಸರ್ವಾಣಿ ಭೂತಾನಿ ಮಧ್ಯೇಚೈಷಾಂ ತಿಷ್ಠತಿ** ಅಥವಾ ಈ ಮಧ್ಯದಲ್ಲಿರುವ ಅಶ್ವದ ಶಿರಸ್ಸೇ ಆದಿತ್ಯನೆಂದು ಅಥವಾ ಆದಿತ್ಯಸ್ಥಾನೀಯನೆಂದು ಹೇಳಲ್ಪಡುತ್ತದೆ. ಏಕೆಂದರೆ, ಆದಿತ್ಯನು ಸಕಲ ಜೀವರಾಶಿಗಳ ಮಧ್ಯದಲ್ಲಿದ್ದು ಅವುಗಳು ಸಾಯಂಕಾಲದಲ್ಲಿ ವಿಶ್ರಾಂತಿಯನ್ನು ಪಡೆಯುವಾಗ ತಾನೂ ವಿಶ್ರಾಂತಿಯನ್ನು ಪಡೆಯುವನು ಎಂದರೆ ಅಸ್ತಮಯ ನಾಗುವನು ಆದ್ದರಿಂದ ಆದಿತ್ಯನು ಸಕಲ ಭೂತಗಳಿಗೂ ಶಿರಸ್ಸಿನಂತೆ ಪ್ರಧಾನಭೂತನು.

**ಅಪೀತರಚ್ಛಿರ ಏತಸ್ಮಾದೇವ ಸಮಾಶ್ರಿತಾನ್ಯೇತದಿಂದ್ರಿಯಾಣಿ ಭವಂತಿ**-ಮತ್ತು ಶರೀರದ ಸಮಸ್ತ ಇಂದ್ರಿಯಗಳೂ ಶಿರಸ್ಸನ್ನೇ ಆಶ್ರಯಿಸಿರುವವು ಎಲ್ಲಾ. ಇಂದ್ರಿಯಗಳೂ ಶಿರಸ್ಸನ್ನು (ಎಂದರೆ ಶಿರಸ್ಸಿನಲ್ಲಿರುವ ಮಿದುಳನ್ನೂ) ಆಶ್ರಯಿಸಿರುವುದರಿಂದ ಶರೀರಕ್ಕೆ ಶಿರಸ್ಸೇ ಪ್ರಧಾನವದುದು.

**ಸಂಶೂರಣಾಸಃ ದಿವ್ಯಾಸೋ ಅತ್ಯಾಃ । ಶೂರಃ ಶವತೇರ್ಗತಿಕರ್ಮಣೋ ದಿವ್ಯಾ ದಿವಿಜಾ ಅತ್ಯಾ ಅತನಾಃ**—ಉತ್ಸಾಹಶಾಲಿಗಳಾದ ದೇವಲೋಕದ ಅಶ್ವಗಳು ಎಂದರ್ಥವು. **ಶೂರಶಬ್ದವು** ಗತ್ಯರ್ಥಕವಾದ ಶವತಿಧಾತುವಿನಿಂದ ನಿಷ್ಪನ್ನವಾಗಿದೆ. **ದಿವ್ಯಾಸಃ ದಿವಿಜಾಃ**-ದೇವಲೋಕದಲ್ಲಿ (ಸ್ವರ್ಗದಲ್ಲಿ) ಜನಸಿದವೋ ; **ಅತ್ಯಾಃ ಅತನಾಃ** ವೇಗಶಾಲಿಗಳಾದ ಅಶ್ವಗಳು.

**ಹಂಸಾ ಇತ ಶ್ರೇಣಿಶೋ ಯತಂತೇ । ಹಂಸಾ ಹಂತೇರ್ಘ್ನಂತ್ಯಧ್ವಾನಂ ।** ಈ ದೇವಲೋಕದ ಅಶ್ವಗಳು ಅಂತರಿಕ್ಷದಲ್ಲಿ ಸಾಲುಸಾಲಾಗಿ (ಗುಂಪಾಗಿ) ಹಾರುತ್ತಿರುವ ಹಂಸಪಕ್ಷಿಗಳನ್ನು ಅನುಕರಿಸುತ್ತವೆ ಎಂದರೆ ಹೋಲುತ್ತವೆ. ಮಾರ್ಗವನ್ನು ಧ್ವಂಸಮಾಡುವುದರಿಂದ ಎಂದರೆ ಅತಿಕ್ರಮಿಸುವುದರಿಂದ ಈ ಪಕ್ಷಿಗಳಿಗೆ ಹಂಸಾಃ ಎಂದು ಹೆಸರು.

**ಶ್ರೇಣಿಶಃ ಇತಿಃ ಶ್ರೇಣಿಃ ಶ್ರಯತೇಃ ಸಮಾಶ್ರಿತಾ ಭವಂತಿ**-**ಶ್ರೇಣಿ** ಎಂಬ ಶಬ್ದವು ಆಶ್ರಯಿಸು, ಒಂದರ ಪಕ್ಕದಲ್ಲಿರು ಎಂಬ ಅರ್ಥವುಳ್ಳ ಶ್ರಯತಿ ಧಾತುವಿನಿಂದ ನಿಷ್ಪನ್ನವಾಗಿದೆ. **ಶ್ರೇಣಿಶಃ** ಎಂದರೆ ಸಾಲುಗಟ್ಟಿ ಎಂದರ್ಥವು. ಒಂದರ ಪಕ್ಕದಲ್ಲಿ ಇನ್ನೊಂದರಿಂದ ಪರಸ್ಪರ ಆಶ್ರಯವುಳ್ಳವು ಒಂದೇ ಸಾಲಾಗಿ ಒಂದೇ ಪಕ್ತಿಯಲ್ಲಿ ಇರುವವು ಎಂದಭಿಪ್ರಾಯವು

**ಯದಾಕ್ಷಿಷುರ್ಯ ದಾಪನ್ ದಿವ್ಯಮಜ್ಮಮಜನಿಮಾಜಿಮಶ್ವಾಃ**—

ಈ ಅಶ್ವಗಳು ಯಾವಾಗ ದೇವಲೋಕದ ಮಾರ್ಗವನ್ನು ಆಶ್ರಯಿಸಿದವೋ ಎಂದರೆ ಅಂತರಿಕ್ಷದಲ್ಲಿ ಮಾರ್ಗಾತಿಕ್ರಮಣ ಮಾಡುವಾಗ (ಸಾಲುಗಟ್ಟಿ ಹಾರುತ್ತಿರುವ ಹಂಸಪಕ್ಷಿಗಳಂತೆ ಕಾಣುವವು )

**ಅಸ್ತ್ಯಾದಿತ್ಯಸ್ತುತಿರಶ್ವಸ್ಯಾದಿತ್ಯಾದಶ್ವೋ ನಿಸ್ತೃಷ್ಟ ಇತಿ । ಸೂರಾದಶ್ವಂ ವಸವೋ ನಿರತಷ್ಟ**—ಈ ಅಶ್ವಸ್ತುತಿಯು ಆದಿತ್ಯಸ್ತುತಿಯೇ ಆಗಿರುವುದು. ಏಕೆಂದರೆ ಆದಿತ್ಯನಿಂದಲೇ, ಅಶ್ವವು ನಿರ್ಮಿತವಾಗಿರುವುದು. ಹಿಂದೆ ವಸುಗಳು ಆದಿತ್ಯನಿಂದಲೇ, ಆದಿತ್ಯನನ್ನು ಅನುಕರಿಸಿಯೇ ಅಶ್ವರ್ಯವನ್ನು ನಿರ್ಮಿಸಿದರು ಎಂದು ಶ್ರುತಿವಾಕ್ಯವು ಹೇಳುವುದು.

**ಇತಿ ತ್ರಯೋದಶಃ ಖಂಡಃ**

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು



### ಅಥ ಚತುರ್ದಶ ಖಂಡಃ

### **ಹದಿನಾಲ್ಕನೆಯ ಖಂಡವು**

ಕಾಯಮಾನೋ ವನಾ ತ್ವಂ ಯನ್ಮಾತೄರಜಗನ್ನಪಃ । ನ ತತ್ತೇ ಅಗ್ನೇ ಪ್ರಮೃಷೇ ನಿವರ್ತನಂ ಯದ್ದೂರೇ ಸನ್ನಿಹಾಭವಃ ॥ (ಋ.ಸಂ.೩-೯-೨) ಕಾಯಮಾನಶ್ಚಾಯಮಾನ ಕಾಮಯಮಾನ ಇತಿ ವಾ ವನಾನಿ ತ್ವಂ ಯನ್ಮಾತೄರಪೋಽಗಮ ಉಪಶಾಮ್ಯನ್ ನ ತತ್ತೇ ಅಗ್ನೇ ಪ್ರಮೃಷ್ಯತೇ ನಿವರ್ತನಂ ದೂರೇ ಯತ್ಸನ್ನಿಹ ಭವಸಿ ಜಾಯಮಾನಃ । ಲೋಧಂ ನಯಂತಿ ಪಶು ಮನ್ಯಮಾನಾಃ । ಲುಬ್ಧಮೃಷಿಂ ನಯಂತಿ ಪಶುಂ ಮನ್ಯಮಾನಾಃ । ಶೀರಂ ಪಾವಕಶೋಚಿಷಂ । ಪಾವಕದೀಪ್ತಿಂ । ಅನುಶಾಯಿನಮಿತಿ ವಾಶಿನಮಿತಿ ವಾ ॥ ೧೪॥

———

ಕಾಯಮಾನಃ ॥ ೧೫ ॥

ಕಾಯಮಾನೋ ವನಾ ತ್ವಂ ಯನ್ಮಾತೄರಜಗನ್ನಪಃ । ನ ತತ್ತೇ ಅಗ್ನೇ ಪ್ರಮೃಷೇ ನಿವರ್ತನಂ ಯದ್ದೂರೇ ಸನ್ನಿಹಾಭವಃ ॥(ಋ.ಸ. ೩-೯-೨) ಕಾಯಮಾನಶ್ಚಾಯಮಾನಃ ಕಾಯಮಾನ ಇತಿ ವಾ ವನಾನಿ ತ್ವಂ ಯನ್ಮಾತೄರಪೋಽಗಮ ಉಪಶಾಮ್ಯನ್ ನ ತತ್ತೇ ಅಗ್ನೇ ಪ್ರಮೃಷ್ಯತೇ ನಿವರ್ತನಂ ದೂರೇ ಯತ್ಸನ್ನಿಹ ಭವಸಿ ಜಾಯಮಾನಃ ॥

ಕಾಯಮಾನಃ=ಎಂಬ ಋಕ್ಕಿನ ಅರ್ಥವು-ಎಲೈ ಅಗ್ನಿಯೇ ವನದಲ್ಲಿರಬೇಕೆಂಬ ಇಚ್ಛೆಯುಳ್ಳ ನೀನು ಅವುಗಳನ್ನು ಬಿಟ್ಟು ಉದಕವನ್ನು ಸೇರಿ ಶಾಂತನಾದ ಮತ್ತು ಹಾಗೆ ಉದಕದಲ್ಲಿ ಅದೃಶ್ಯನಾಗಿದ್ದರೂ ನಮ್ಮ ಅರಣಿಗಳಲ್ಲಿ(ಮಥಿಸಿದ ಕೂಡಲೇ) ಕಾಣಿಸಿಕೊಳ್ಳುತ್ತಿಯೇ. ಆದುದರಿಂದ ನಿನ್ನ ಆ ದೂರದ (ಉದಕದ ಮಧ್ಯದಲ್ಲಿ) ವಾಸವು ನನಗೆ ರುಚಿಸುವದು.

**ಕಾಯಮಾನಃ ಚಾಯಮಾನಃ ಕಾಮಯಮಾನ ಇತಿ ವಾ**—ಕಾಯಮಾನಃ=ಎಂದರೆ, ಅಪೇಕ್ಷಿಸುವವನು; **ವನಾನಿ ತ್ವಂ ಕಾಯಮಾನಃ**=ವನಗಳನ್ನು ಅಥವಾ ವೃಕ್ಷಗಳಿಂದ ನಿಬಿಡವಾದ ಅರಣ್ಯಗಳನ್ನು ನೀನು ಅಪೇಕ್ಷಿಸುವನಾದರೂ ಎಂದರೆ ದಹಿಸುವ ಸ್ವಭಾವವುಳ್ಳ ನೀನು (ಅಗ್ನಿಯು) ವನಗಳನ್ನು ಅಪೇಕ್ಷಿಸುವುದು ಸಹಜವು ಎಂದಭಿಪ್ರಾಯವು

**ಯನ್ಮಾತೃ ರಪೋಽಗಮಃ ಉಪಶ್ಯಾಮನ್**—ನಿನ್ನ ಮಾತೃಸ್ವರೂಪವಾದ ಉದಕಗಳನ್ನು ಸೇರಿ ಶಾಂತನಾಗುವೆ. **ಆಪೋ ವಾ ಅಗ್ನೇರ್ಯೋನಿ=** (ಮೈ. ಸಂ. ೩-೨-೩) ಉದಕಗಳೇ ಅಗ್ನಿಯ ಉತ್ಪತ್ತಿಸ್ಥಾನವು ಎಂದು ಶ್ರುತಿ ವಾಕ್ಯವಿರುವುದು. ಆದರೆ ಅಗ್ನಿಯು ಉದಕಗಳಲ್ಲಿದ್ದಾಗ ಅವನು ಶಾಂತನಾಗಿರುವನು. ದಹಿಸುವ ಅಥವಾ ಪ್ರಕಾಶಿಸುವ ಸ್ವಭಾವವಿಲ್ಲದೆ ಸೌಮ್ಯನಾಗಿ ಅದೃಶ್ಯನಾಗಿರುವನು ಎಂದರ್ಥ.

**ನ ತತ್ತೇ ಅಗ್ನೇ ಪ್ರಮೃಷ್ಯತೇ ನಿವರ್ತನಂ ದೂರೇ ಯತ್ಸನ್ನಿಹ ಭವಸಿ ಜಾಯಮಾನಃ**:-ಎಲೈ ಅಗ್ನಿಯೇ, ನೀರಿನಿಂದ ಹಿಂತಿರುಗಿ ಬರುವ ನಿನ್ನ ಪುನರಾಗಮನವು ಎಂದಿಗೂ ಮರೆಯಲ್ಪಡತಕ್ಕದ್ದಲ್ಲ. ಏಕೆಂದರೆ ದೂರದಲ್ಲಿ ನೀನು (ಮಿಂಚಿನರೂಪದಲ್ಲಿ) ಉತ್ಪನ್ನನಾಗಿ ಕಾಣಿಸಿಕೊಳ್ಳುತ್ತೀಯೆ. ಅಥವಾ ಅರಣಿಗಳಲ್ಲಿ ನಮ್ಮ ಸಮೀಪದಲ್ಲಿಯೇ ಉತ್ಪನ್ನನಾಗುವೆ.

ಲೋಧಂ ॥೧೬॥

ಲೋಧಂ ನಯಂತಿ ಪಶು ಮನ್ಯಮಾನಃ । ಲುಬ್ಧಮೃಷಿಂ ಪಶುಂ ಮನ್ಯಮಾನಃ ।

**ಲೋಧಂ** ಎಂದರೆ ಲುಬ್ಧನು ಜಿಪುಣನು. ಲುಬ್ಧನಾದ ಋಷಿಯನ್ನು ಪಶುವನ್ನಾಗಿ, ಪಶುವಿಗೆ ಸೇವಕನನ್ನಾಗಿ ತಿಳಿದು ಒಯ್ಯುತ್ತಾರೆ. ಉದಾಹರಣೆಗಾಗಿ **ನ ಸಾಯಕಸ್ಯ** ಎಂಬ ಋಕ್ಕನು ಕೊಟ್ಟಿದಾರೆ.

**ನ ಸಾಯಕಸ್ಯ ಚಿಕಿತೇ ಜನಾಸೋ ಲೋಧಂ ನಯಂತಿ ಪಶು ಮನ್ಯಮಾನಃ ।**
**ನಾವಾಜಿನಂ ವಾಜಿನಾ ಹಾಸಯಂತಿ ನ ಗರ್ದಭಂ ಪುರೋ ಅಶ್ವಾನ್ನಯಂತಿ ॥**

(ಋ-ಸಂ-೩-೫೩-೨೩)

ಇವರ ಅರ್ಥವು — ಎಲೈ ಜನರೇ, ವಿಶ್ವಾಮಿತ್ರನ ನಾಶಕಾರಕವಾದ ಮಂತ್ರಸಾಮರ್ಥ್ಯವನ್ನು ನೀವು ಅರಿಯಲಾರಿರಿ. ತನ್ನ ತಪಸ್ಸು ವ್ಯರ್ಥವಾಗಬಾರದೆಂದು ಮೌನವನ್ನಾಶ್ರಯಿಸಿದ್ದ ಋಷಿಯನ್ನು ಪಶುವಿಗೆ ಸಮಾನವಾಗಿ ತಿಳಿದುಕೊಂಡ ಈ ಜನರು ಋಷಿಯನ್ನು ತಮ್ಮ ಸ್ಥಾನಕ್ಕೆ ಕೊಂಡೊಯ್ಯುತ್ತಿದ್ದಾರೆ. ಅವಿವೇಕಿಯಾದ ಪುರುಷನನ್ನು ಪ್ರಾಜ್ಞರು ಅವಹೇಳನಮಾಡುವುದಿಲ್ಲ. ರಾಸಭವನ್ನೂ (ಕತ್ತೆಯನ್ನೂ) ಶ್ರೇಷ್ಠವಾದ ಅಶ್ವದ ಮುಂಭಾಗದಲ್ಲಿಡುವುದಿಲ್ಲ.

ಶೀರಂ । ೧೭ ।

ಶೀರಂ ಪಾವಕಶೋಚಿಷಂ । ಪಾವಕದೀಪ್ತಿಂ । ಅನುಶಾಯಿನಮಿತಿ ವಾ ॥

**ಶೀರಂ** ಮತ್ತು **ಪಾವಕಶೋಚಿಷಂ** ಎಂಬ ಎರಡು ಶಬ್ದಗಳೂ ಅಗ್ನಿಯ ಸ್ವಭಾವಸಿದ್ಧವಾದ ಗುಣಗಳನ್ನು ವರ್ಣಿಸುವವು. ಶೀರಂ ಎಂದರೆ **ಅನುಶಾಯಿನಂ**. ಅಥವಾ ಆಶಿನಂ ಅಗ್ನಿಯು ಕಾಷ್ಠಾದಿಗಳಲ್ಲಿ ಗೂಢವಾಗಿ ಸುಪ್ತನಾಗಿರುವನು. ಎಂದರೆ ಕಾಷ್ಠಾದಿಗಳಲ್ಲಿ ಅಗ್ನಿಯು ನೆಲೆಸಿದ್ದರೂ ಯಾರಿಗೂ ಗೋಚರವಾಗುವುದಿಲ್ಲ. ಅದರ ಒಳಗೇ ವಿಲೀನವಾಗಿ ಇರುವನು. ಮಥನಾದಿ ಕ್ರಿಯೆಯಿಂದ ಮಾತ್ರ ಎಲ್ಲರಿಗೂ ಗೋಚರಿಸುವನು.

**ಶೀರಂ ಪಾವಕಶೋಚಿಷಂ ಜ್ಯೇಷ್ಠೋ ಯೋ ದಮೇಷ್ವಾ ।**
**ದೀದಾಯ ದೀರ್ಘ ಶ್ರುತ್ತಮಃ**

(ಋ. ಸಂ. ೮-೧೦೨-೧೧)

'ಇದರ ಅರ್ಥವು—ಯಾವ ಅಗ್ನಿಯು ದೇವತೆಗಳಿಗೆಲ್ಲಾ ಮುಖ್ಯನೂ ಅತ್ಯಂತ ವಿಸ್ತೃತವಾದ ಜ್ಞಾನವುಳ್ಳವನೂ ಆಗಿ ಯಜ್ಞಗೃಹಗಳಲ್ಲಿ ಪ್ರಕಾಶಿಸುವನೋ ಅಂತಹ ಯಜ್ಞಗೃಹಗಳಲ್ಲಿ ಸ್ಥಿತನಾಗಿರುವವನೂ ಶುದ್ಧಿಕಾರಕವಾದ ಜ್ವಾಲೆಯುಳ್ಳವನೂ ಆದ ಅಗ್ನಿಯನ್ನೂ ಸ್ತುತಿಸು

ಮೇಲೆ ಹೇಳಿದ ಅರ್ಥಗಳಲ್ಲದೆ, ಅಗ್ನಿಯು ಸರ್ವಪ್ರಾಣಿಗಳಲ್ಲಿಯೂ ವ್ಯಾಪಿಸಿರುವನು. ಸರ್ವಪ್ರಾಣಿಗಳ ಉದರಗಳಲ್ಲಿ ಸ್ಥಿತನಾಗಿ ಜಾಠರಾಗ್ನಿ ಎಂಬಭಿಧಾನದಿಂದ ಪ್ರಾಣಿಗಳು ಭಕ್ಷಿಸುವ ಆಹಾರಾದಿಗಳನ್ನು ಪಚನಮಾಡುತ್ತಾ ಶರೀರದ ಸಮಸ್ತ ಭಾಗಗಳಲ್ಲಿಯೂ ಔಷ್ಣ್ಯದಿಂದ ವ್ಯಾಪಿಸಿರುವನು. ಈ ಕಾರಣದಿಂದಲೇ ಪ್ರಾಣಿಗಳ ಶರೀರವೆಲ್ಲವೂ ಒಂದು ಕ್ಲ್ರುಪ್ತಪ್ರಮಾಣದ ಔಷ್ಣ್ಯದಿಂದ ವ್ಯಾಪಿಸಿ ಬೆಚ್ಚಗಿರುವುದು. ಎಲ್ಲರಿಗೂ ತಿಳಿದ ವಿಷಯವಾಗಿದೆ. ಎಂದು ಶೀರಂ ಎಂಬ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ವಿವರಿಸಿರುವರು. **ಪಾವಕಶೋಚಿಷಂ** ಎಂದರೆ ಶುದ್ಧವಾದ ತೇಜಸ್ಸಿನಿಂದ ಬೆಳಗುತ್ತಿರುವ ಎಂದರ್ಥವು.

**ಇತಿ ತ್ರಯೋದಶಃ ಖಂಡಃ**

ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು.

———

## ಅಥ ಪಂಚದಶಃ ಖಂಡಃ

### ಹದಿನೈದನೆಯ ಖಂಡವು

ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ । ಬಭ್ರೂ ಯಾಮೇಷು ಶೋಭೇತೇ ॥ (ಋ. ಸಂ. ೪-೩೨-೨೩) ಕನೀನಕೇ ಕನ್ಯಕೇ ಕನ್ಯಾ ಕಮನೀಯಾ ಭವತಿ ಕೇಯಂ ನೇತವ್ಯೇತಿ ವಾ ಕಮನೇನಾನೀಯತ ಇತಿ ವಾ ಕನತೇರ್ವಾ ಸ್ಯಾತ್ಕಾಂತಿಕರ್ಮಣಃ ಕನ್ಯಯೋರಧಿಷ್ಠಾನ ಪ್ರವಚನಾನಿ ಸಪ್ತಮ್ಯಾ ಏಕವಚನಾನೀತಿ ಶಾಕಪೂಣಿರ್ವಿದ್ಧಯೋರ್ದಾರುಪಾದೋರ್ದಾರು ॥ ದೃಣಾತೇರ್ವಾ ದ್ರೂಣಾತೇರ್ವಾ ತಸ್ಮಾದೇವ ದ್ರು ನವೇ ನವಜಾತೇ ಅರ್ಭಕೇ ಅವೃದ್ಧೇ ತೇ ಯಯಾ ತದಾಧಿಷ್ಠಾನೇಷು ಶೋಭೇತೇ ಏವಂ ಬಭ್ರೂ ಯಾಮೇಷು ಶೋಭೇತೇ ಬಭ್ರ್ವೋರಶ್ವಯೋಃ ಸಂಸ್ತವ ಇದಂ ಚ ಮೇಽದಾದಿದಂ ಚ ಮೇಽದಾದಿತ್ಯೃಷಿಃ ಪ್ರಸಂಖ್ಯಾಯಾಹ ।

ಸುವಾಸ್ತ್ವಾ ಅಧಿ ತುಗ್ವನಿ । ಸುವಾಸ್ತುರ್ನದೀ ತುಗ್ವ ತೀರ್ಥಂ ಭವತಿ ತೂರ್ಣಮೇತದಾಯಂತಿ । ಕುವಿನ್ನಂಸಂತೇ ಮರುತಃ ಪುನರ್ನಃ । ಪುನರ್ನೋ ನಮಂತೇ ಮರುತೋ ನಸಂತ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ । ಯೇ ತೇ ಮದಾ ಆಹನಸೋ ವಿಹಾಯಸಸ್ತೇಭಿರಿಂದ್ರಂ ಚೋದಯ ದಾತವೇ ಮಘಂ। ಯೇ ತೇ ಮದಾ ಆಹನನವಂತೋ ವಚನವಂತಸ್ತೈರಿಂದ್ರಂ ಚೋದಯ ದಾನಾಯ ಮಘಂ ॥೧೫॥

———

ವಿದ್ರಧೇ ॥೧೮॥ ದ್ರುಪದೇ ॥೧೯॥

ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ । ಬಭ್ರೂ ಯಾಮೇಷು ಶೋಭೇತೇ ॥ (ಋ. ಸಂ. ೪–೩೨–೨೩) ಕನೀನಕೇ ಕನ್ಯಕೇ ಕನ್ಯಾ ಕಮನೀಯಾ ಭವತಿ ಕೇಯಂ ನೇತವ್ಯೇತಿ ವಾ ಕಮನೇನಾನೀಯತ ಇತಿ ವಾ ಕನತೇರ್ವಾ ಸ್ಯಾತ್ಕಾಂತಿಕರ್ಮಣಃ ಕನ್ಯಯೋಽಧಿಷ್ಠಾನ ಪ್ರವಚನಾನಿ ಸಪ್ತಮ್ಯಾ ಏಕವಚನಾನೀತಿ ಶಾಕಪೂಣಿರ್ವಿದ್ಧಯೋರ್ದಾರುಪಾದೋರ್ದಾರು ದೃಣಾತೇರ್ವಾ ದ್ರೂಣಾತೇರ್ವಾ ತಸ್ಮಾದೇವ. ದ್ರು ನವೇ ನವಜಾತೇ ಅರ್ಭಕೇ ಅವೃದ್ಧೇ ತೇ ಯಥಾ ತದಾಧಿಷ್ಠಾನೇಷು ಶೋಭೇತೇ ಏವಂ ಬಭ್ರೂ ಯಾಮೇಷು ಶೋಭೇತೇ ಬಭ್ರ್ವೋರಶ್ವಯೋಃ ಸಂಸ್ತವಃ ॥

ಕನೀನಕೇವ ಎಂಬ ಋಕ್ಕಿನ ಅರ್ಥವು—ಕೌಶಲ್ಯದಿಂದ ರಚಿಸಿದುದೂ ನೂತನವಾದುದೂ ಚಿಕ್ಕದಾಗಿರುವುದೂ ಆದ ರಂಗಭೂಮಿಯಲ್ಲಿ ನಿಂತಿರುವ ಆಕರ್ಷಕವಾದ ಗೊಂಬೆಗಳಂತೆ ಹೊಂಬಣ್ಣವುಳ್ಳ ನಿನ್ನ ಅಶ್ವಗಳೆರಡೂ ಯಜ್ಞಸ್ಥಾನಗಳಲ್ಲಿ ಪ್ರಕಾಶಿಸುತ್ತವೆ.

**ಕನೀನಿಕೇವ—ಕನ್ಯಕೇ.** ಕನೀನಿಕೆ ಎಂದರೆ ಇಬ್ಬರು ಕನ್ನೆಯರು. **ಕನ್ಯಾ ಕಮನೀಯಾ ಭವತಿ** ನೋಡುವುದಕ್ಕೆ ಆಕರ್ಷಕವಾಗಿರುವುದರಿಂದ ಕನ್ಯೆಯೆಂದು ಹೆಸರು ಅಥವಾ ಎಲ್ಲರೂ ಇವಳನ್ನು ಅಪೇಕ್ಷಿಸುವುದರಿಂದ ಕನ್ಯೆಯೆಂದು ಹೆಸರು **ಕಮನೇನಾನೀಯತ ಇತಿವಾ**–ಪ್ರೀತಿಯಿಂದ ಒಯ್ಯಲ್ಪಡುವುದರಿಂದ ಕನ್ಯೆಯು; **ಕನತೇರ್ವಾ ಸ್ಯಾತ್ಕಾಂತಿಕರ್ಮಣಃ** ಅಪೇಕ್ಷಿಸು ಪ್ರೀತಿಸು ಎಂಬರ್ಥವುಳ್ಳ ಕನತಿಧಾತುವಿನಿಂದ ಕನ್ಯಾ ಎಂಬ ಶಬ್ದವು ನಿಷ್ಪನ್ನವಾಗಿದೆ **ಕನ್ಯಯೋಽಧಿಷ್ಠಾನಪ್ರವಚನಾನಿ ಸಪ್ತಮ್ಯಾ ಏಕವಚನಾನೀತಿ ಶಾಕಪೂಣಿಃ** ಕನೀನಿಕೇ ಎಂಬ ಶಬ್ದವೂ ಕನ್ಯೆಯು ಕೂಡುವ ಅಥವಾ ಬೊಂಬೆಗಳನ್ನು ಕೂಡಿಸುವ ಮರದ ಪೀಠವು. ಈ ಶಬ್ದವು ಮತ್ತು **ವಿದ್ರಧೇ ನವೇ ದ್ರುಪದೇ ಅರ್ಭಕೇ** ಎಂಬ ನಾಲ್ಕು ಶಬ್ದಗಳೂ ಸಪ್ತಮೀ ವಿಭಕ್ತಿಯ ಏಕವಚನಾಂತ ಪದವು ಎಂದು ಶಾಕಪೂಣಿಯವರ ಮತವು. ಆದರೆ ಈ ಶಬ್ದಗಳು ಕನ್ಯಕೇ ಎಂಬ ಶಬ್ದಕ್ಕೆ ವಿಶೇಷಣಪದಗಳೆಂದು ಯಾಸ್ಕರ ಮತವು.

**ವಿಧ್ಯಯೋರ್ದಾರುಪಾತ್ರ್ಯೋರ್ದಾರು ದೃಣಾತೇರ್ವಾ ದ್ರೂಣಾತೇರ್ವಾತಸ್ಮಾದೇವಾ ದ್ರು ನವೇ**-ಕೆತ್ತಿಮಾಡಿದ ಮರದಬೊಂಬೆಗಳು ಎಂದೂ ಕನೀನಿಕೇ ಎಂಬ ಶಬ್ದಕ್ಕೆ ಅರ್ಥವಾಗುವುದು. ದಾರು (ಮರ) ಶಬ್ದವು ಶೀಳು, ಕೆತ್ತು ಎಂಬರ್ಥವುಳ್ಳ ದೃಣಾತಿಧಾತುವಿನಿಂದ ನಿಷ್ಪನ್ನವಾಗಿದೆ. **ದ್ರು** ಎಂಬ ಶಬ್ದದ ನಿಷ್ಪತ್ತಿಯೂ ಅದರಂತೆಯೇ ಇರುವುದು. **ನವೇ** ಎಂದರೆ ಹೊಸದಾಗಿ ಮಾಡಿದ.

**ನವೇ ನವಜಾತೇ ಅರ್ಭಕೇ ಅವೃದ್ಧೇ ತೇ ಯಥಾ ತದಧಿಷ್ಠಾನೇಷು ಶೋಭೇತೇ ಏವಂ ಬಭ್ರೂಯಾಮೇಷು ಶೋಭೇತೇ**—ಹೊಸದಾಗಿ ನಿರ್ಮಿತವಾದ ಎರಡು ಮರದ ಬೊಂಬೆಗಳು ತಮ್ಮ ಪೀಠದಲ್ಲಿ ಯಾವರೀತಿ ಶೋಭಿಸುತ್ತವೆಯೋ ಅದರಂತೆ ಇಂದ್ರನ ಬಭ್ರುವರ್ಣವುಳ್ಳ ಅಶ್ವಗಳು ತಮ್ಮ ಪಥದಲ್ಲಿ ಶೋಭಿಸುತ್ತವೆ ಎಂದರ್ಥವು. ಇದು ಇಂದ್ರನ ಎರಡು ಅಶ್ವಗಳ ಸ್ತುತಿಯು.

ತುಗ್ವನಿ || ೨೦ ||

ಇದಂ ಚ ಮೇऽದಾದಿದಂ ಚ ಮೇऽದಾದಿತ್ಯೃಷಿಃ ಪ್ರಸಂಖ್ಯಾಯಾಹ |
ಸುವಾಸ್ತ್ವಾ ಅಧಿ ತುಗ್ವನಿ | ಸುವಾಸ್ತುರ್ನದೀ ತುಗ್ವ ತೀರ್ಥಂ ಭವತಿ |
ತೂರ್ಣಮೇತದಾಯಂತಿ ||

ಸೌಭರಿಯೆಂಬ ಋಷಿಯು ತನಗೆ ದಾನಕೊಟ್ಟ ತ್ರಸದಸ್ಯು ಎಂಬ ರಾಜನನ್ನು ಸ್ತುತಿಸುತ್ತ ಆ ರಾಜನು ನನಗೆ ಅದನ್ನು ಕೊಟ್ಟನು, ಇದನ್ನೂ ಕೊಟ್ಟನು ಎಂದು ಹೇಳಿರುವನು. ಆ ಋಕ್ಕಿನ ಉದಾಹರಣೆಯು—

**ಅದಾನ್ಮೇ ಪೌರುಕುತ್ಸ್ಯಃ ಪಂಚಾಶತಂ ತ್ರಸದಸ್ಯುರ್ವಧೂನಾಂ |**
**ಮಂಹಿಷ್ಠೋ ಅರ್ಯಃ ಸತ್ಪತಿಃ ||**

(ಋ. ಸಂ. ೮-೧೯-೩೬)

ಇದರ ಅರ್ಥವು-ಉದಾರವಾದ ದಾನಿಯೂ ಸಜ್ಜನರ ಪಾಲಕನೂ, ಪುರುಕುತ್ಸನ ಪುತ್ರನೂ ಆದ ತ್ರಸದಸ್ಯುವು ನನಗೆ ಐನೂರು ಸಂಖ್ಯೆಯುಳ್ಳ ವಧುಗಳನ್ನು ಕೊಟ್ಟಿದ್ದಾನೆ.

**ಉತ ಮೇ ಪ್ರಯಿಯೋರ್ವಯಿಯೋಃ ಸುವಾಸ್ತ್ವಾ ಅಧಿ ತುಗ್ವನಿ |**
**ತಿಸೃಣಾಂ ಸಪ್ತತೀನಾಂ ಶ್ಯಾವಃ ಪ್ರಣೇತಾ ಭುವದ್ವಸುರ್ದಿಯಾನಾಂ ಪತಿಃ ||**

(ಋ. ಸಂ. ೮-೧೯-೩೭)

ಇದರ ಅರ್ಥವು—ದಾನಿಗಳಲ್ಲೆಲ್ಲಾ ಶ್ರೇಷ್ಠನೂ ಯಜ್ಞಕ್ಕೆ ನೇತೃವೂ ಆದ ಶ್ಯಾವನು ನನಗೆ ಸುವಾಸ್ತುವೆಂಬ ನದಿಯ ದಡದ ಮೇಲೆ ಗವಾದಿಗಳ ಮತ್ತು ವಸ್ತ್ರಾದಿಗಳ ಎಪ್ಪತ್ತು ಸಂಖ್ಯೆಯ ಮೂರರಷ್ಟು (ಇನ್ನೂರ ಹತ್ತರಷ್ಟು) ಧನಗಳನ್ನು ದಾನಮಾಡಿದನು.

**ಸುವಾಸ್ತ್ವಾ ಅಧಿ ತುಗ್ವನಿ | ಸುವಾಸ್ತುರ್ನದೀ ತುಗ್ವ ತೀರ್ಥಂ ಭವತಿ ತೂರ್ಣಮೇತದಾಯಂತಿ**—ಸುವಾಸ್ತು ಎಂಬುದು ಒಂದು ನದಿಯ ಹೆಸರು. ತುಗ್ವ ಎಂದರೆ ನದಿಯನ್ನು ದಾಟುವುದಕ್ಕೆ ಅನುಕೂಲವಾದ ಆಳವಿಲ್ಲದ

ಪ್ರದೇಶ. ನದಿಯನ್ನು ಹಾಯುವ ಪ್ರದೇಶ, ಹೊಳೆ ಕೆರೆ. ಇದಕ್ಕೆ ತುಗ್ವ ಎಂದು ಹೆಸರು. ಏಕೆಂದರೆ ಇಂತಹ ಸ್ಥಳದಲ್ಲಿ ಜನರು ನದಿಯನ್ನು ಬೇಗನೆ ದಾಟುವರು. **ಸುವಾಸ್ತ್ವಾ ಅಧಿ ತುಗ್ವನಿ**—ಸುವಾಸ್ತು ಎಂಬ ನದಿಯ ಹಾಯುಗಡೆ (ದಡ) ಯಲ್ಲಿ ತ್ರಸದಸ್ಯುರಾಜನು ತನಗೆ ಅನೇಕ ವಿಧವಾದ ದಾನಗಳನ್ನು ಕೊಟ್ಟನೆಂದು ಋಷಿಯು ವರ್ಣಿಸಿದ್ದಾನೆ.

ನಂಸಂತೇ ॥೨೧॥

ಕುವಿನ್ನಂಸಂತೇ ಮರುತಃ ಪುನರ್ನಃ। ಪುನರ್ನೋ ನಮಂತೇ ಮರುತಃ ॥

**ತಾ ಆ ರುದ್ರಸ್ಯ ಮೀಳ್ಹುಷೋ ವಿವಾಸೇ ಕುವಿನ್ನಂಸಂತೇ ಮರುತಃ ಪುನರ್ನಃ ।**
**ಯತ್ಸಸ್ವರ್ತಾ ಜಿಹೀಳಿರೇ ಯದಾವಿರವ ತದೇನ ಈಮಹೇ ತುರಾಣಾಂ ॥**

(ಋ. ಸಂ. ೭-೫೮-೫)

ಇದರ ಅರ್ಥವು—ಇಷ್ಟಾರ್ಥ ಪ್ರದನಾದ ರುದ್ರನ ಪುತ್ರರಾದ ಮರುದ್ದೇವತೆಗಳನ್ನು ಆರಾಧಿಸಿ ಪೂಜಿಸುತ್ತೇನೆ. ಅದೇ ಮರುತ್ತುಗಳು ಅನುಗ್ರಹಿಸಿ ನಮ್ಮ ಕಡೆಗೆ ಅನೇಕವೇಳೆ ಬರಲಿ. ಹೊರಗಡೆ ಪ್ರಕಾಶವಾಗದಿರುವುದೂ ಪ್ರಕಾಶಿತ ವಾಗುವುದೂ ಆದ ಯಾವ ಎರಡು ವಿಧವಾದ (ಅಂತರಂಗ ಬಹಿರಂಗಗಳೆಂಬ) ಪಾಪದಿಂದ ಮರುತ್ತುಗಳು ಆಗ್ರಹಗೊಳ್ಳುವರೋ ಅವರ ವಿಷಯದಲ್ಲಿ ಆಚರಿಸುವ ಆ ಎರಡು ವಿಧವಾದ ಪಾಪಗಳನ್ನು ನಾವು ಪರಿಹರಿಸುತ್ತೇವೆ.

**ನಂಸಂತೇ** ಎಂದರೆ ಬಗ್ಗುತ್ತಾರೆ ಎಂದರ್ಥವು. ಇದಲ್ಲದೆ **ನಸರಿರಾಪ್ನೋತಿಕರ್ಮಾ ವಾ ನವತಿಕರ್ಮಾ ವಾ—ನಂಸಂತೇ** ಎಂದರೆ ಹೊಂದುತ್ತಾರೆ ಎಂದೂ ಅರ್ಥವಾಗುವುದು ಈ ಶಬ್ದವನ್ನು ನಾವು ಮುಂದೆ (ನಿ-೭-೧೭) ವಿವರಿಸುತ್ತೇವೆ.

ನಸಂತ ॥೨೨॥

ನಸಂತ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ॥

**ನ ಸಂತ** ಎಂಬ ಶಬ್ದವನ್ನು ನಾವು ಮುಂದೆ ವಿವರಿಸುತ್ತೇವೆ. (೭-೧೭)

ಆಹನಸಃ ॥೨೩॥

ಯೇ ತೇ ಮದಾ ಆಹನಸೋ ವಿಹಾಯಸಸ್ತೇಭಿರಿಂದ್ರ ಚೋದಯ ದಾತವೇ ಮಘಂ। ಯೇ ತೇ ಮದಾ ಆಹನನವಂತೋ ವಂಚನ-ವಂತಸ್ತೈರಿಂದ್ರಂ ಚೋದಯ ದಾನಾಯ ಮಘಂ ॥

**ಪರಿ ಸೋಮ ಪ್ರಧನ್ವಾ ಸ್ವಸ್ತಯೇ ನೃಭಿಃ ಪುನಾನೋ ಅಭಿ ವಾಸಯಾಶಿರಂ ।**
**ಯೇ ತೇ ಮದಾ ಆಹನಸೋ ವಿಹಾಯಸಸ್ತೇಭಿರಿಂದ್ರಂ ಚೋದಯ ದಾತವೇ ಮಘಂ॥**

(ಋ. ಸಂ. ೯-೭೫-೫)

ಇದರ ಅರ್ಥವು—ಎಲೈ ಸೋಮದೇವನೇ, ನಮ್ಮ ಕಲ್ಯಾಣಕ್ಕಾಗಿ ಸುತ್ತಲೂ ಪ್ರವಹಿಸು. ಋತ್ವಿಕ್ಕುಗಳಿಂದ ಶುದ್ಧಿಗೊಳಿಸಲ್ಪಟ್ಟ ನೀನು ಕ್ಷೀರಾದ್ಯಾಶ್ರಯಣ ದ್ರವ್ಯಗಳನ್ನೂ ಹೊದ್ದಿಸಿಕೋ (ಸೇರಿಸಿಕೋ) ಶಬ್ದಮಾಡುವನೂ ಮಹತ್ತಾದವನೂ ಆದ ನಿನ್ನ ಯಾವ ರಸಗಳಿರುವವೋ ಅವುಗಳೊಡನೆ ಧನವನ್ನು ನಮಗೆ ಕೊಡಲು ಇಂದ್ರನನ್ನು ಪ್ರೇರಿಸು.

**ಆಹನಸಃ ವಂಚನವಂತಃ** ಮೋಹಗೊಳಿಸುವ, ಹರ್ಷಗೊಳಿಸುವ ಎಂದರ್ಥವು.

**ಇತಿ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು

---

## ಅಥ ಷೋಡಶಃ ಖಂಡಃ

### ಹದಿನಾರನೆಯ ಖಂಡವು

ಉಷೋ ಅದರ್ಶಿ ಶುಂಧ್ಯುವೋ ನ ವಕ್ಷೋ ನೋಧಾ ಇವಾವಿರಕೃತ ಪ್ರಿಯಾಣಿ । ಅದ್ಮಸನ್ನ ಸಂಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ । (ಋ. ಸಂ. ೧-೧೨೪-೪) ಉಪಾದರ್ಶಿ ಶುಂಧ್ಯುವಃ ಶುಂಧ್ಯುರಾದಿತ್ಯೋ ಭವತಿ ಶೋಧನಾತ್ತಸ್ಯೈವ ವಕ್ಷೋ ಭಾಸೋಧ್ಯೂಢಮಿದಮಪೀತರದ್ವಕ್ಷ ಏತಸ್ಮಾದೇವಾಧ್ಯೂಢಂ ಕಾಯೇ ಶಕುನಿರಪಿ ಶುಂಧ್ಯುರುಚ್ಯತೇ ಶೋಧನಾದೇವೋದಕಚರೋ ಭವತ್ಯಾಪೋಽಪಿ ಶುಂಧ್ಯವ ಉಚ್ಯಂತೇ ಶೋಧನಾದೇವ ನೋಧಾ ಋಷಿರ್ಭವತಿ ನವನಂ ದಧಾತಿ ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತ ಏವಮುಷಾರೂಪಾಣ್ಯಾವಿಷ್ಕುರುತೇಽದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ । ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ । ಸ್ವಪತೋ ಬೋಧಯಂತೀ ಶಾಶ್ವತಿಕತಮಾಗಾತ್ಪುನರಾಗಾಮಿನೀನಾಂ । ತೇ ವಾಶೀಮಂತ ಇಷ್ಮಿಣಃ ॥ ಈಷಣಿನ ಇತಿ ವೈಷಣಿನ ಇತಿ ವಾರ್ಷಣಿನ ಇತಿ ವಾಶೀತಿ ವಾಜ್ನಾಮ ವಾಶ್ಯತ ಇತಿ ಸತ್ಯಾಃ । ಶಂಸಾವಾಧ್ವರ್ಯೋ ಪ್ರತಿ ಮೇ ಗೃಣೀಹೀಂದ್ರಾಯ ವಾಹಃ ಕೃಣವಾವ ಜುಷ್ಟಂ ।

ಅಭಿವಹನಸ್ತುತಿ ಮಧಿಷವಣಪ್ರವಾದಾಂ ಸ್ತುತಿಂ ಮನ್ಯಂತ ಐಂದ್ರೀ
ತ್ವೇವ ಶಸ್ಯತೇ ಪರಿತಕ್ಮ್ಯೇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥ ೧೬ ॥

———

ಅದ್ಮಸತ್ ॥ ೨೪ ॥

ಉಷೋ ಅದರ್ಶಿ ಶುಂಧ್ಯುವೋ ನ ವಕ್ಷೋ ನೋಧಾ ಇವಾವಿರಕೃತ ಪ್ರಿಯಾಣಿ । ಅದ್ಮಸನ್ನ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ । (ಋ. ಸಂ. ೧-೧೨೪-೪) ಉಪಾದರ್ಶಿ ಶುಂಧ್ಯುವಃ ಶುಂಧ್ಯುರಾದಿತ್ಯೋ ಭವತಿ ಶೋಧನಾತ್ತಸ್ಯೈವ ವಕ್ಷೋ ಭಾಸೋಧ್ಯೂಢಮಿದಮಪೀತರದ್ವಕ್ಷ ಏತಸ್ಮಾದೇವಾಧ್ಯೂಢಂ ಕಾಯೇ ಶಕುನಿರಪಿ ಶುಂಧ್ಯುರುಚ್ಯಂತೇ ಶೋಧನಾದೇವೋದಕಚರೋ ಭವತ್ಯಾಪೋಽಪಿ ಶುಂಧ್ಯವ ಉಚ್ಯಂತೇ ಶೋಧನಾದೇವ ನೋಧಾ ಋಷಿರ್ಭವತಿ ನವನಂ ದಧಾತಿ ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತ ಏವಮುಷಾರೂಪಾಣ್ಯಾವಿಷ್ಕುರುತೇಽದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ ॥ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ॥ ಸ್ವಪತೋ ಬೋಧಯಂತೀ ಶಾಶ್ವತಿಕತಮಾಗಾತ್ಪುನರಾಗಾಮಿನೀನಾಂ ॥

**ಉಷೋ ಅದರ್ಶಿ** ಎಂಬ ಋಕ್ಕಿನ ಅರ್ಥವು–ಉಷೋದೇವಿಯು ಸೂರ್ಯನ ಕಿರಣಗಳಂತೆ ಪವಿತ್ರವಾಗಿ ಎಲ್ಲರಿಗೂ ಕಾಣಿಸುತ್ತಾಳೆ. ನೋಧಾ ಎಂಬ ಋಷಿಯಂತೆ ಜನರಿಗೆ ಪ್ರಿಯವಾದ ನಾನಾರೂಪಗಳನ್ನು ಧರಿಸುತ್ತಾಳೆ. ಮನೆಯಲ್ಲಿ ಅನ್ನಾದಿಗಳನ್ನು ಪಕ್ವಮಾಡಿ ತಾಯಿಯು ಮಕ್ಕಳನ್ನು ಏಳಿಸುವಂತೆ ಸುಪ್ತವಾದ ಪ್ರಾಣಿಗಳನ್ನು ಎಚ್ಚರಗೊಳಿಸುತ್ತಾ ಉಷಃಕಾಲದಲ್ಲಿಯೇ ಎದ್ದು ಬರುವ ಅಭ್ಯಾಸವುಳ್ಳ ಸ್ತ್ರೀಯರೆಲ್ಲರಿಗಿಂತ ನಿಯತವಾಗಿ ಪುನಃ ಪುನಃ ಉದಯಿಸುತ್ತಾಳೆ.

**ಉಪಾದರ್ಶಿ ಶುಂಧ್ಯುವಃ ನ**—ಉಷೋದೇವಿಯು ಸೂರ್ಯನ ಕಿರಣಗಳಂತೆ ಎಲ್ಲರಿಗೂ ಗೋಚರಿಸುತ್ತಾಳೆ. **ಶುಂಧ್ಯುರಾದಿತ್ಯೋ ಭವತಿ ಶೋಧನಾತ್**—ಶುಂಧ್ಯು ಎಂದರೆ ಆದಿತ್ಯನು. ಏಕೆಂದರೆ ಆದಿತ್ಯನು ತನ್ನ ಕಿರಣಗಳಿಂದ ಎಲ್ಲವನ್ನೂ ಶುದ್ಧಿಗೊಳಿಸುತ್ತಾನೆ.

**ತಸ್ಯೈವ ವಕ್ಷೋ ಭಾಸೋಧ್ಯೂಢಮಿದಮಪೀತರದ್ವಕ್ಷ ಏತಸ್ಮಾದೇವಾಧ್ಯೂಢಂ ಕಾಯೇ**—ಸೂರ್ಯನ ಪ್ರಕಾಶಮಾನವಾದ ವಕ್ಷಸ್ಥಲ ಅಥವಾ ವಕ್ಷಸ್ಥಲದಂತಿರುವ ಮಂಡಲವನ್ನು ಉಷೋದೇವಿಯು ಆಲಿಂಗನಮಾಡಿಕೊಂಡಿರುವಂತೆ ಕಾಣಿಸುತ್ತಾಳೆ. ಅಥವಾ ವಕ್ಷಃ ಎಂದರೆ ಶರೀರದಲ್ಲಿ ಸ್ತ್ರೀಯ ಎದೆಗೆ ವಕ್ಷಃ ಎಂದು ಹೆಸರು. ಈ ವಕ್ಷಃ ಶಬ್ದವು, ಪುರುಷ ಅಥವಾ ಸ್ತ್ರೀ ಅಥವಾ ಪಶುಗಳ ವಿಷಯದಲ್ಲಿ ಉಪಯೋಗಿಸಲ್ಪಡಬಹುದು. ಈ ವಕ್ಷಃ ಶಬ್ದವು ವಹತಿ ಧಾತುವಿನಿಂದ ನಿಷ್ಪನ್ನವಾಗಿದೆ.

**ಶಕುನಿರಪಿ ಶುಂಧ್ಯುರುಚ್ಯತೇ ಶೋಧನಾದೇವೋದಕಚರೋ ಭವತಿ**–ಶಕುನಿ ಎಂಬ ಹೆಸರಿನ ಜಲಚರಪಕ್ಷಿಗೂ ಶುಂಧ್ಯು ಎಂದು ಹೆಸರು. ಏಕೆಂದರೆ ಈ ಪಕ್ಷಿಯು ನೀರಿನ ಮೇಲೆ ಸಂಚರಿಸುತ್ತಾ (ಈಜುತ್ತಾ) ಆಹಾರಾರ್ಥವಾಗಿ ಜಲವನ್ನು ಶೋಧಿಸುತ್ತಿರುವುದು (ಹುಡುಕುತ್ತಿರುವುದು)

**ಆಪೋಽಪಿ ಶುಂಧ್ಯವ ಉಚ್ಯಂತೇ ಶೋಧನಾದೇವ**—ಉದಕಗಳಿಗೂ **ಶುಂಧ್ಯವಃ** ಎಂಬ ಹೆಸರಿರುವುದು ಏಕೆಂದರೆ ಉದಕವು ಬಟ್ಟೆ ಮೊದಲಾದ ಇತರ ವಸ್ತುಗಳಲ್ಲಿರುವ ಕೊಳಕನ್ನು ತೆಗೆದು ಶುದ್ಧಿಗೊಳಿಸುವುದು. ಶುದ್ಧಿಮಾಡುವ ಸ್ವಭಾವವು ಉದಕಕ್ಕಿದೆ. ಆದ್ದರಿಂದ **ಶುಂಧ್ಯವಃ** ಎಂದರೆ ಉದಕಗಳೂ ಎಂದರ್ಥವಾಗುವುದು.

**ನೋಧಾ ಋಷಿರ್ಭವತಿ ನವನಂ ದಧಾತಿ ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತ ಏವಮುಷಾ ರೂಪಾಣ್ಯಾವಿಷ್ಕುರುತೇ**—ನೋಧಾ ಎಂಬುದು ಒಬ್ಬ ಋಷಿಯ ಹೆಸರು. ಈ ಋಷಿಯು ದೇವತೆಯನ್ನುದ್ದೇಶಿಸಿ ಒಂದು ಸ್ತುತಿಯನ್ನು ನಿರ್ಮಿಸಿ ಅದರ ಫಲದಿಂದ ಯಾವ ರೀತಿ ತನ್ನ ಇಷ್ಟಾರ್ಥಗಳನ್ನು ಪ್ರಕಾಶಪಡಿಸಿದನೋ ಎಂದರೆ ಹೊಂದಿದನೋ ಅದರಂತೆ ಉಷಾದೇವಿಯೂ (ಉಷಸ್ಸು) ಸಹ ತನ್ನ ಪ್ರಕಾಶದಿಂದ (ಕತ್ತಲೆಯಿಂದ ಆವರಿಸಲ್ಪಟ್ಟು ಕಾಣಿಸದಿರುವ) ಎಲ್ಲಾ ವಸ್ತುಗಳ ಮತ್ತು ಪ್ರಾಣಿಗಳ ರೂಪಗಳನ್ನು (ಆಕಾರಗಳನ್ನು) ಎಲ್ಲರಿಗೂ ಕಾಣಿಸುವಂತೆ ಪ್ರಕಾಶಪಡಿಸುತ್ತಾಳೆ.

**ಅದ್ಮಸದದ್ಮಾನ್ನಂ ಭವತ್ಯತ್ಮಸಾದಿನೀತಿ ವಾನ್ನಸಾನಿನೀತಿ ವಾ**—ಅದ್ಮವೆಂದರೆ ಭಕ್ಷಿಸಲು ಯೋಗ್ಯವಾದ ಅನ್ನವೆಂದರ್ಥ. **ಅದ್ಮಸತ್** ಎಂದರೆ ಅದನ್ನು ಪಾಕಮಾಡುವುದಕ್ಕಾಗಿ ಗೃಹದಲ್ಲಿ ಕುಳಿತಿರುವ ಸ್ತ್ರೀಯೆಂದಾಗುತ್ತದೆ. ಅಥವಾ ಅದ್ಮಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ ಗೃಹದಲ್ಲಿಯೇ ಇರತಕ್ಕವುಗಳು **ಜನನೀ** ಎಂದು ಎರಡುವಿಧವಾಗಿ ಈ ಪದದ ಅರ್ಥವನ್ನು ಹೇಳಿದ್ದಾರೆ. ನಕಾರವು ಇಲ್ಲಿ ಉಪಮಾರ್ಥೀಯವಾಗಿರುವುದು.

**ಸಾ ಜನನೀ ಯಥಾ ಸ್ವಪತಃ ಪುತ್ರಾದೀನುಷಃಕಾಲೇ ಪ್ರಬೋಧಯತಿ ತಥಾ ಭುವನಾಖ್ಯೇ ಗೃಹೇ ಸೀದಂತೀ ತತ್ರತ್ಯಾನ್ಪ್ರಾಣಿನಃ ಪ್ರಬೋಧಯಂತೀಯಮುಷಾಃ**—ಜನನಿಯು ಗೃಹದಲ್ಲಿರುವ ಎಲ್ಲರಿಗಿಂತಲೂ ಮುಂಚೆ ಎದ್ದು ತನ್ನ ಮಕ್ಕಳನ್ನು ಎಬ್ಬಿಸುವಂತೆ ಜಗಜ್ಜನನಿಯಾದ ಉಷೋದೇವಿಯೂ ಕೂಡ ಪ್ರಾತಃಕಾಲದಲ್ಲಿ ಬಹಳ ಮುಂಚೆ ಆವಿರ್ಭೂತಳಾಗಿ ಜಗತ್ತಿನ ಸಕಲ ಪ್ರಾಣಿಗಳನ್ನೂ ಎಬ್ಬಿಸುತ್ತಾಳೆಂದಭಿಪ್ರಾಯವು.

**ಅದ್ಮಸದದ್ಮಾನ್ನಂ ಭವತ್ಯದ್ಮಸಾದಿನೀತಿ ವಾನ್ನಸಾನಿನೀತಿ ವಾ**—ಅದ್ಮವೆಂದರೆ ಅನ್ನ. **ಅದ್ಮಸಾದಿನೀ** ಎಂದರೆ ಗೃಹದಲ್ಲಿ ಅಧಿಕಾರಿಣಿಯೂ ಜನನಿಯು. ತನ್ನ ಮಕ್ಕಳು ಮುಂತಾದವರಿಗೆ ಅನ್ನವನ್ನು ಪಕ್ವಮಾಡುವವಳು ಅಥವಾ **ಅನ್ನಸಾನಿನೀತಿ ವಾ** ಗೃಹದಲ್ಲಿರುವವರಿಗೆ ಅನ್ನವನ್ನು ನೀಡುವವಳು ಎಂದರ್ಥವು.

ಇಷ್ಮಿಣಃ ||೨೫||

ತೇ ವಾಶೀಮಂತ ಇಷ್ಮಿಣಃ। ಈಷಣಿನ ಇತಿ ವೈಷಣಿನ ಇತಿ
ವಾರ್ಷಣಿನ ಇತಿ ವಾ। ವಾಶೀತಿ ವಾಙ್ನಾಮ ವಾಶ್ಯತ
ಇತಿ ಸತ್ಯಾಃ॥

**ಶ್ರಿಯಸೇ ಕಂ ಭಾನುಭಿಃ ಸಂಮಿಮಿಕ್ಷಿರೇ ತೇ ರಶ್ಮಿಭಿಸ್ತ ಋಕ್ವಭಿಃ ಸುಖಾದಯಃ ।**
**ತೇ ವಾಶೀಮಂತ ಇಷ್ಮಿಣೋ ಅಭೀರವೋ ವಿದ್ರೇ ಪ್ರಿಯಸ್ಯ ಮಾರುತಸ್ಯ ಧಾಮ್ನಃ ॥**

(ಋ. ಸಂ. ೧-೮೭-೬)

ಇದರ ಅರ್ಥವು—ಮರುತ್ತುಗಳು ಪ್ರಕಾಶಮಾನಗಳಾದ ಸೂರ್ಯಕಿರಣಗಳೊಡನೆ ಸೇರಿಕೊಂಡು ಪ್ರಾಣಿಗಳ ಸೇವನೆಗಾಗಿ ಮಳೆಯ ನೀರನ್ನು ಪ್ರಭೂತವಾಗಿ ಸುರಿಸುತ್ತಾರೆ. ಅನಂತರ ಸ್ತೋತ್ರಮಾಡುವ ಋತ್ವಿಕ್ಕುಗಳೊಡನೆ ರುಚಿಕರವಾದ ಹವಿಸ್ಸುಗಳನ್ನು ಭಕ್ಷಿಸುತ್ತಾರೆ. ಸ್ತುತಿರೂಪವಾದ ವಾಕ್ಕುಗಳೊಡನೆ ಕೂಡಿದವರೂ ಸಂಚಾರ ಸ್ವಭಾವವುಳ್ಳವರೂ ಭಯರಹಿತರೂ ಆದ ಆ ಮರುದ್ದೇವತೆಗಳು ಎಲ್ಲರಿಗೂ ಹಿತಕರವಾದುದೂ ಅವರಿಗೆ ಯೋಗ್ಯವಾದುದೂ, ಶ್ರೇಷ್ಠವಾದುದೂ ಆದ ಸ್ಥಾನವನ್ನು ಪಡೆದರು.

**ತೇ ವಾಶೀಮಂತಃ —ವಾಶೀತಿ ವಾಙ್ನಾಮ** ವಾಶೀ ಎಂದರೆ ವಾಕ್ಯವು. ವಾಶೀಮಂತಃ ಎಂದರೆ ಮಾತನಾಡುವವರು ಅಥವಾ ಮಾತುಗಳಿಂದ, ಸ್ತೋತ್ರಗಳಿಂದ ಪ್ರೀತರಾಗುವವರು.

**ಇಷ್ಮಿಣಃ ಈಷಣಿನಃ** —ಉಪಗಮನವಂತಃ ಸಮೀಪಕ್ಕೆ ಬರತಕ್ಕವರು **ಏಷಣಿನೋ ವಾ—**ಇಚ್ಛಾವಂತಃ ಅಪೇಕ್ಷಿಸತಕ್ಕವರು. **ಅರ್ಷಣಿನೋ ವಾ** ಆಭಿಮುಖ್ಯೇನ ಸರ್ವಾರ್ಥಾನಾಂ ದ್ರಷ್ಟಾರಃ ಮುಖ್ಯವಾಗಿ ಸ್ತೋತ್ರಮಾಡುವವರ ಸರ್ವಾರ್ಥಗಳನ್ನು ನೋಡಿ ಪೂರೈಸುವವರು.

**ವಾಶೀ** ಎಂದರೆ ವಾಣಿ, ವಾಕ್ಕು, ಮಾತು-**ವಾಶ್ಯತ** ಎಂಬ ಶಬ್ದವು ಕರ್ಮಣಿ ಪ್ರಯೋಗದ ಧಾತುರೂಪವು.

ವಾಹಃ ॥ ೨೬ ॥

ಶಂಸಾವಾಧ್ವರ್ಯೋ ಪ್ರತಿ ಮೇ ಗೃಣೀಹೀಂದ್ರಾಯ ವಾಹಃ ಕೃಣವಾವ ಜುಷ್ಟಂ। ಅಭಿವಹನಸ್ತುತಿಮಭಿಷವಣಪ್ರವಾದಾಂ ಸ್ತುತಿಂ ಮನ್ಯಂತ ಐಂದ್ರೀತ್ಯೇವ ಶ್ಯತೇ ॥

**ಶಂಸಾವಾಧ್ವರ್ಯೋ ಪ್ರತಿ ಮೇ ಗೃಣೀಹೀಂದ್ರಾಯ ವಾಹಃ ಕೃಣವಾವ ಜುಷ್ಟಂ ।**
**ಏದಂ ಬರ್ಹಿರ್ಯಜಮಾನಸ್ಯ ಸೀದಾಥಾ ಚ ಭೂದುಕ್ಥಮಿಂದ್ರಾಯ ಶಸ್ತಂ ॥**

(ಋ. ಸಂ.೩-೫೩-೩)

ಇದರ ಅರ್ಥವು—ಎಲೈ ಅಧ್ವರ್ಯುವೇ, ನಾವಿಬ್ಬರೂ ಇಂದ್ರನನ್ನು ಸ್ತುತಿಸೋಣ. ನೀನು ನನ್ನೊಡನೆ ಅನುಮೋದಿಸು. ಇಂದ್ರನನ್ನುದ್ದೇಶಿಸಿ ಪ್ರೀತಿ ಯುಕ್ತವಾದ ಸ್ತುತಿಯನ್ನು ನಿರ್ಮಿಸೋಣ. ಯಜಮಾನನ ಈ ದರ್ಭಾಸನದ ಮೇಲೆ ಕುಳಿತುಕೋ- ಅನಂತರ ಇಂದ್ರನಿಗಾಗಿ ನಿರ್ಮಿತವಾಗುವ ಶಸ್ತ್ರಮಂತ್ರ ಪಠನವು ಸಾಗಲಿ

**ವಾಹಃ-ಸ್ತೋಮ ಏವಹಿ ದೇವಾನಾಂ ವೋಢಾ ಭವತಿ**-ಸ್ತೋತ್ರವು ದೇವತೆಗಳನ್ನುದ್ದೇಶಿಸಿ ಪಠಿಸುವ ಸ್ತೋತ್ರವು. ಅವುಗಳನ್ನೂ ಪಠಿಸುವ ಜನರ ಇಷ್ಟಾರ್ಥಗಳನ್ನು ದೇವತೆಗಳಿಗೆ ವಹಿಸಿ ತಿಳಿಸುವುದು. **ವಾಹಃ** ಎಂದರೆ ವಹಿಸುವ, ಒಯ್ಯುವ ಎಂದರ್ಥವು.

ಪರಿತಕ್ಮ್ಯ ॥೨೭॥

ಪರಿತಕ್ಮ್ಯೇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥

ಪರಿತಕ್ಮ್ಯ ಎಂಬ ಶಬ್ದವನ್ನು ಮುಂದೆ ವಿವರಿಸುವೆವು. ಉದಾಹರಣೆಗಾಗಿ—

**ಕಿಮಿಚ್ಛಂತೀ ಸರಮಾ ಪ್ರೇದಮಾನಟ್ ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।**

**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ॥**

(ಋ. ಸಂ. ೧೦–೧೦೮–೧)

ಇದರ ಅರ್ಥವು—ಸರಮೆಯು ಏನನ್ನು ಅಪೇಕ್ಷಿಸಿ ಇಲ್ಲಿಗೆ ಬಂದಿದ್ದಾಳೆ? ಇಲ್ಲಿಗೆ ಬರುವ ದಾರಿಯು ಅತಿ ದೀರ್ಘವಾದುದು. ಅನುಸ್ಯೂತವಾಗಿ (ಎಲ್ಲಿಯೂ ನಿಲ್ಲದೆ ಒಂದೇ ಸಮನಾಗಿ) ನಡೆಯುವವರಿಗೂ ಈ ದಾರಿಯನ್ನು ನಡೆದು ಬರಲು ಸಾಧ್ಯವಿಲ್ಲ. ಆದ್ದರಿಂದ ಎಲೌ ಸರಮೆಯೇ, ನಮ್ಮಲ್ಲಿಗೆ ನೀನು ಬಂದಿರುವ ಉದ್ದಿಶ್ಯವು ಏನು? ಯಾವ ರೀತಿಯ ಗಮನದಿಂದ ನೀನು ಇಲ್ಲಿಗೆ ಬಂದಿರುವೆ? ರಸಾ ನದಿಯ ಉದಕಗಳನ್ನು ಹೇಗೆ ದಾಟಿ ಬಂದೆ?

**ದೇವಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದ ಇತ್ಯಾಖ್ಯಾನಂ**—ಪಣಿಗಳೆಂಬ ಅಸುರರು ಒಂದು ಸಮಯದಲ್ಲಿ ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟುಕೊಂಡಿದ್ದರು. ಅದನ್ನು ಪತ್ತೆಮಾಡುವುದಕ್ಕಾಗಿ ಇಂದ್ರನು ಸರಮಾ ಎಂಬ ದೇವಲೋಕದ ನಾಯಿ (ಹೆಣ್ಣು)ಯನ್ನು ಕಳುಹಿಸಿದನು. ಅದು ಅನೇಕ ಕಡೆ ಅಲೆದು ಕೊನೆಗೆ ರಸಾ ಎಂಬ ಆಳವಾದ ನದಿಯನ್ನು ಈಜಿ ದಾಟಿ ಪಣಿಗಳಿದ್ದ ಸ್ಥಳಕ್ಕೆ ಬಂದು ಅವರೊಡನೆ ಸಂಭಾಷಣೆಮಾಡಿತೆಂದು ಒಂದು ಆಖ್ಯಾನವಿದೆ. ಅದನ್ನು (ಋ. ಸಂ. ೧೦–೧೦೮)ನೇ ಸೂಕ್ತದಲ್ಲಿ ಹೇಳಲಾಗಿದೆ. ಸರಮೆಯನ್ನು ಕಂಡ ಕೂಡಲೇ ಪಣಿಗಳು ಅದನ್ನು ಮೇಲೆ ಹೇಳಿದ ಋಕ್ಕಿನಲ್ಲಿರುವಂತೆ ಪ್ರಶ್ನೆಮಾಡಿದರು.

**ಸರಮಾ ಸರಣಾತ್**—ಸೃ ಸರಿ ಎಂಬ ಧಾತುವಿನಿಂದ ನಿಷ್ಪನ್ನವಾದ ಸರಣ ಎಂಬ ಶಬ್ದವನ್ನನುಸರಿಸಿ **ಸರಮಾ** ಎಂಬ ಶಬ್ದದ ವ್ಯುತ್ಪತ್ತಿಯಾಗಿದೆ. ಸರಿಯುವ ಅಥವಾ ಸಂಚರಿಸುವ ಎಂದು ಅರ್ಥವು.

**ಕಿಮಿಚ್ಛಂತೀ ಸರಮೇದಂ ಪ್ರಾನಟ್**—ಸರಮೆಯು ನಮ್ಮಿಂದ ಏನನ್ನು ಬಯಸಿ ಬಂದಿರಬಹುದು ಎಂದು ಅಸುರರು ತಮ್ಮಲ್ಲಿಯೇ ಮಾತನಾಡಿಕೊಂಡು ಬಳಿಕ ಸರಮೆಯನ್ನು ನೇರವಾಗಿ ಕೇಳುವರು.

**ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನೈರಚಿತಃ**—ಅದು ನಡೆದು ಬಂದಿರುವ ರಸ್ತೆಯು ಬಹು ದೂರವಾಗಿರುವುದು. **ಜಗುರಿ** ಎಂಬ ಶಬ್ದವು **ಗಮ್ಲೃ**-ಗತೌ ಹೋಗು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಜಗುರಿಯೆಂದರೆ, ಹೋಗುವುದು, ಸಂಚರಿಸುವುದು. **ಪರ ಅಂಚನೈಃ ಪರಾಙ್ಮುಖೈರ್ಗಮನೈಃ ವಿಪ್ರಕೃಷ್ಟೋ ದೇವನಿವಾಸಾತ್**—ಪರಾಂಚನನೆಂದರೆ ಒಂದು ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕಾಗಿ ಗಮನ. ಒಂದು ಪ್ರದೇಶವನ್ನು ಹಿಂದಕ್ಕೆ ಹಾಕಿ ಮುಂದಿರುವ ಪ್ರದೇಶಕ್ಕೆ ಹೋಗುವುದು ಎಂದರ್ಥವು. ಎಂದರೆ ಸರಮೆಯು ಇಂದ್ರನ ನಿವಾಸಸ್ಥಾನದಿಂದ ಹೊರಟು ಪಣಿಗಳ ಪಟ್ಟಣಕ್ಕೆ ಬಂದಿರುವುದು ಎಂದಭಿಪ್ರಾಯವು.

**ಕಾ ತವಾಸ್ಮಾಸ್ವರ್ಥಹಿತಿರಾಸೀತ್**—ನಮ್ಮಲ್ಲಿ ನಿನಗೆ ಏನು ಕೆಲಸ? ಯಾವ ಕಾರ್ಯಾರ್ಥವಾಗಿ ನೀನು ನಮ್ಮಲ್ಲಿಗೆ ಬಂದಿರುವೆ?

**ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ । ತಕ್ಮೇತ್ಯುಷ್ಣನಾಮ ತಕತ ಇತಿ ಸತಃ ।** ಹೋಗು ಎಂಬರ್ಥವುಳ್ಳ ತಕತಿಧಾತುವಿನಿಂದ ತಕ್ಮಶಬ್ದವು ನಿಷ್ಪನ್ನವಾಗಿದೆ. ತಕ್ಮವೆಂದರೆ ಉಷ್ಣವು, ತಾಪವು, ರಾತ್ರಿಯ ಎರಡು ಕಡೆಗಳಲ್ಲಿಯೂ ಎಂದರೆ ರಾತ್ರಿಯ ಪೂರ್ವದಲ್ಲಿಯೂ ರಾತ್ರಿಯ ಕೊನೆಯಲ್ಲಿಯೂ ಉಷ್ಣವಿರುವುದು. ರಾತ್ರಿಗೆ ಪೂರ್ವದಲ್ಲಿ ಎಂದರೆ ಸೂರ್ಯಾಸ್ತಮಯಕ್ಕೆ ಮೊದಲು ಬಿಸಲು (ಉಷ್ಣ) ಇರುವುದು. ರಾತ್ರಿಗೆ ಕೊನೆಯಲ್ಲಿ ಎಂದರೆ ರಾತ್ರಿಯು ಮುಗಿದು ಪ್ರಾತಃ ಕಾಲದಲ್ಲಿ ಸೂರ್ಯೋದಯವಾದ ಮೇಲೆ ಬಿಸಿಲು (ಉಷ್ಣ) ಇರುವುದು. ಆದ್ದರಿಂದ ಎರಡು ಕೊನೆಗಳಲ್ಲಿಯೂ ಉಷ್ಣವು (ಬಿಸಲು) ಆವರಿಸಲ್ಪಟ್ಟ ಕಾಲಕ್ಕೆ ಎಂದರೆ ರಾತ್ರಿಗೆ **ಪರಿತಕ್ಮ್ಯಾ** ಎಂದು ಹೆಸರು.

**ಕಥಂ ರಸಾಯಾ ಅತರಃ ಪಯಾಂಸೀತಿ ರಸಾ ನದೀ ರಸತೇಃ ಶಬ್ದಕರ್ಮಣಃ ಕಥಂ ರಸಾನಿ ತಾನ್ಯುದಕಾನೀತಿ ವಾ**—ಎಲೈ ಸರಮೆಯೇ, ನೀನು ರಸಾ ನದಿಯ ಅಗಾಧವಾದ ಜಲವನ್ನು ಹೇಗೆ ದಾಟಿದೆ? ರಸಾ ಎಂಬುದು ಒಂದು ನದಿಯ ಹೆಸರು, ಶಬ್ದಮಾಡು ಎಂಬರ್ಥವುಳ್ಳ ರಸತಿಧಾತುವಿನಿಂದ ರಸಾ ಎಂಬ ಶಬ್ದವು ನಿಷ್ಪನ್ನವಾಗಿದೆ. ರಸಾ ಎಂದರೆ ನೀರು ಹರಿಯುವಾಗ ಭೋರ್ಗರೆಯುವಂತೆ ಶಬ್ದಮಾಡುತ್ತಾ ಹರಿಯುವ ನದಿ ಎಂದರ್ಥವು. ಅಥವಾ ರಸವೆಂದರೆ ಉದಕವೆಂದೂ ಹೆಸರು. ಅಗಾಧವಾದ ಜಲರಾಶಿಯಿಂದ ಕೂಡಿದ ನದೀ ಎಂದೂ ಅರ್ಥವು.

**ಇತಿ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು

---

## ಅಥ ಸಪ್ತದಶಃ ಖಂಡಃ

### ಹದಿನೇಳನೆಯ ಖಂಡವು

ಸುವಿತೇ ಸು ಇತೇ ಸೂತೇ ಸುಗತೇ ಪ್ರಜಾಯಾಮಿತಿ ವಾ। ಸುವಿತೇ ಮಾಧಾ ಇತ್ಯಪಿ ನಿಗಮೋ ಭವತಿ । ದಯತಿರನೇಕಕರ್ಮಾ । ನವೇನ ಪೂರ್ವಂ ದಯಮಾನಾಃ ಸಾಮೇತ್ಯುಪದಯಾಕರ್ಮಾ । ಯ ಏಕ ಇದ್ವಿದಯತೇ ವಸ್ವಿತಿ ದಾನಕರ್ಮಾ ವಾ ವಿಭಾಗಕರ್ಮಾ ವಾ । ದುರ್ವರ್ತುರ್ಭೀಮೋ ದಯತೇ ವನಾನೀತಿ ದಹತಿಕರ್ಮಾ ದುರ್ವರ್ತುರ್ದುರ್ವಾರಃ । ವಿದದ್ವಸುರ್ದಯಮಾನೋ ವಿ ಶತ್ರೂನಿತಿ ಹಿಂಸಾಕರ್ಮಾ । ಇಮೇ ಸುತಾ ಇಂದ್ರವಃ ಪ್ರಾತರಿತ್ವನಾ ಸಜೋಷಸಾ ಪಿಬತಮಶ್ವಿನಾ ತಾನ್ । ಅಯಂ ಹಿ ವಾಮೂತಯೇ ವಂದನಾಯ

ಮಾಂ ವಾಯಸೋ ದೋಷಾ ದಯಮಾನೋ ಅ ಬೂಬುಧತ್ ।
ದಯಮಾನ ಇತಿ । ನೂಚಿದಿತಿ ನಿಪಾತಃ । ಪುರಾಣನವಯೋರ್ನೂ-
ಚೇತಿ ಚ । ಅದ್ಯಾ ಚಿನ್ನು ಚಿತ್ತದಪೋ ನದೀನಾಂ । ಅದ್ಯ ಚ ಪುರಾ
ಚ ತದೇವ ಕರ್ಮ ನದೀನಾಂ । ನೂಚ ಪುರಾ ಚ ಸದನಂ
ರಯೀಣಾಂ । ಅದ್ಯ ಚ ಪುರಾ ಚ ರಯೀಣಾಂ ರಯಿರತಿ ಧನನಾಮ
ರಾತೇರ್ದಾನಕರ್ಮಣಃ ॥ ॥ ೧೭ ॥

---

ಸುವಿತೇ ॥ ೨೮ ॥

ಸುವಿತೇ ಸು ಇತೇ ಸೂತೇ ಸುಗತೇ ಪ್ರಜಾಯಾಮಿತಿ ವಾ ।
ಸುವಿತೇ ಮಾ ಧಾ ಇತ್ಯಪಿ ನಿಗಮೋ ಭವತಿ ॥

**ಶ್ರುತಿವಾಕ್ಯದ ಉದಾಹರಣೆಯು—**

**ಅನು ಮೇ ದೀಕ್ಷಾಂ ದೀಕ್ಷಾಪತಿರ್ಮನ್ಯತಾಮನು ತಪಸ್ತಪಸ್ಯತಿರಂಜಸಾ**
**ಸತ್ಯಮುಪಗೇಷಾಂ ಸುವಿತೇ ಮಾ ಧಾಃ (ತೈ-ಸಂ)**

**ಸುವಿತೇ** ಎಂಬ ಶಬ್ದವು **ಸು+ಇತೇ=** ಸುವಿತೇ ಎಂದಾಗಿದೆ **ಸುಗತೇ ಇತ್ಯರ್ಥಃ** ಚೆನ್ನಾಗಿ ಹೋಗುವುದು ಎಂದರ್ಥವು. ಅಥವಾ **ಸು+ಇತೇ=ಸೂತೇ ಸೂತೇ ದೇವದತ್ತಾ ಪುತ್ರಮಿತಿ—** ದೇವದತ್ತೆ ಎಂಬ ಸ್ತ್ರೀಯು ಪುತ್ರನನ್ನು ಹಡೆದಳು ಎಂದು. ಸೂತೆ ಅಥವಾ ಸುವಿತೆ ಎಂದರೆ ಹಡೆದಳು ಪ್ರಸವಿಸಿದಳು ಎಂಬರ್ಥವೂ ಇರುವುದು. ಇವಕ್ಕೆ ಉದಾಹರಣೆಯಾಗಿ **ಸುವಿತೇ ಮಾ ಧಾಃ** ಎಂಬ ಶ್ರುತಿವಾಕ್ಯವನ್ನು ಇಲ್ಲಿ ಕೊಟ್ಟಿರುವುದು.

ದಯತೇ ॥೨೯॥

ದಯತಿರನೇಕಕರ್ಮಾ ॥ ನವೇನ ಪೂರ್ವಂ ದಯಮಾನಾಃ ಸ್ಯಾಮ
ಇತ್ಯುಪದಯಾಕರ್ಮಾ॥ ಯ ಏಕ ಇದ್ವಿದಯತೇ ವಸು ಇತಿ ದಾನ-
ಕರ್ಮಾ ವಾ ವಿಭಾಗಕರ್ಮಾ ವಾ । ದುರ್ವರ್ತ್ನುರ್ಭೀಮೋ
ದಯತೇ ವನಾನಿ ಇತಿ ದಹತಿಕರ್ಮಾ । ದುರ್ವರ್ತುರ್ದುರ್ವಾರಃ
ವಿದದ್ವಸುರ್ದಯಮಾನೋ ವಿಶತ್ರೂನ್ ಇತಿ ಹಿಂಸಾಕರ್ಮಾ ।
ಇಮೇ ಸುತಾ ಇಂದವಃ ಪ್ರಾತರಿತ್ವನಾ ಸಜೋಷಸಾ ಪಿಬತಮ-

ಶ್ವಿನಾ ತಾನ್ । ಅಯಂ ಹಿ ವಾಮೂತಯೇ ವಂದನಾಯ
ಮಾಂ ವಾಯಸೋ ದೋಷಾ ದಯಮಾನೋ ಅಬೂಬುಧತ್ ।
ದಯಮಾನ ಇತಿ ॥

**ದಯತೇ** ಎಂಬ ಶಬ್ದಕ್ಕೆ ಅನೇಕ ಅರ್ಥಗಳಿರುವುವು. **ನವೇನ ಪೂರ್ವಂ ದಯಮಾನಾಃ ಇತ್ಯುಪದಯಾ ಕವರ್ನಾ** ಎಂಬ ವಾಕ್ಯವಲ್ಲಿ ದಯಮಾನಾಃಎಂಬ ಶಬ್ದಕ್ಕೆ ರಕ್ಷಣೆಯೆಂಬರ್ಥವಿರುವುದು.

**ಯ ಏಕ ಇದ್ವಿ ದಯತೇ ವಸು ಮರ್ತಾಯ ದಾಶುಷೇ ।**
**ಈಶಾನೋ ಅಪ್ರತಿಷ್ಕುತ ಇಂದ್ರೋ ಅಂಗ ॥**

(ಋ-ಸಂ-೧-೮೪-೭) ॥

ಇದರ ಅರ್ಥವು-ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ವಿಶೇಷವಾಗಿ ಧನವನ್ನು ಅನುಗ್ರಹಿಸುವವನು. ಯಾಕೆಂದರೆ ಅವನು ವಿರೋಧಿವಚನವಿಲ್ಲದಿರುವವನೂ ಮತ್ತು ಸಕಲ ಜಗತ್ತಿಗೂ ಸ್ವಾಮಿಯಾದವನೂ ಆದ ಇಂದ್ರನೊಬ್ಬನಲ್ಲದೆ ಇನ್ನಾರೂ ಆಗಲಾರರು. ಇದು ಖಂಡಿತ.

ಮೇಲಿನ ಋಕ್ಕಿನಲ್ಲಿ **ದಯತೇ** ಎಂಬ ಪದಕ್ಕೆ ಅನುಗ್ರಹಿಸು ಅಥವಾ ಕೊಡು ಎಂಬ ದಾನಾರ್ಥವಿರುವುದು. ಇಲ್ಲಿ **ವಿದಯತೇ ದಾಶುಷೇ** ಎಂದರೆ ಯಜ್ಞದಲ್ಲಿ ಹವಿಸ್ಸನ್ನರ್ಪಿಸುವ ಯಜಮಾನನಿಗೆ (ಅಥವಾ ಯಜಮಾನರಿಗೆ) ವಸು ಧನವನ್ನು **ವಿದಯತೇ** ಹಂಚಿಕೊಡುವನು. ಎಂಬರ್ಥವಿರುವುದು. ಆದ್ದರಿಂದ ದಯತೇ ಎಂಬ ಶಬ್ದಕ್ಕೆ ವಿಭಾಗಮಾಡು ಎಂದೂ ಅರ್ಥ ವಿರುವುದು.

**ಅಧ ಜಿಹ್ವಾ ಪಾಪತೀತಿ ಪ್ರ ವೃಷ್ಣೋ ಗೋಷುಯುಧೋ ನಾಶನಿಃ ಸೃಜಾನಾ ।**
**ಶೂರಸ್ಯೇವ ಪ್ರಸಿತಿಃ ಕ್ಷಾತಿರಗ್ನೇರ್ದುರ್ವರ್ತುರ್ಭೀಮೋ ದಯತೇ ವನಾನಿ ।**

(ಋ ಂಸ.-೬-೬-೫)

ಇದರ ಅರ್ಥವು-ವೃಷ್ಟಿಕಾರಕನಾದ ಅಗ್ನಿಯ ಜ್ವಾಲೆಯು ಗೋಪಾಲಕನಾದ ಇಂದ್ರನಿಂದ ಪ್ರಹತವಾದ ವಜ್ರಾಯುಧ್ನ ವಂತೆ ಅತಿಶಯವಾದ ವೇಗವಲ್ಲಿ ಪ್ರಸರಿಸುತ್ತದೆ. ವೀರನ ಪ್ರಹಾರದಂತೆ ಅಗ್ನಿಯ ಜ್ವಾಲೆಯು ಸಹಿಸಲಸಾಧ್ಯವಾದುದಾಗಿದೆ. ಯಾರಿಂದಲೂ ತಡೆಯಲಾಗದ ಶಕ್ತಿಯುಳ್ಳವನೂ ಭಯಂಕರನೂ ಆದ ಅಗ್ನಿಯು ವನವೃಕ್ಷಗಳನ್ನೂ ದಹಿಸುತ್ತಾನೆ.

ಇಂದ್ರಃ **ಪೂರ್ಭಿದಾತಿರದ್ದಾಸಮರ್ಕೈರ್ವಿದದ್ವಸುರ್ದಯಮಾನೋ ವಿ ಶತ್ರೂನ್ ।**
ಬ್ರಹ್ಮಜೂತಸ್ತನ್ವಾ ವಾವೃಧಾನೋ **ಭೂರಿದಾತ್ರ ಆಪೃಣದ್ರೋದಸೀ ಉಭೇ ॥**

(ಋ. ಸಂ. ೩-೩೪-೧)

ಇದರ ಅರ್ಥವು-ಶತ್ರುಪಟ್ಟಣಗಳನ್ನು ನಾಶಮಾಡುವವನೂ ಪ್ರಖ್ಯಾತಧನವುಳ್ಳವನೂ ಶತ್ರುಗಳನ್ನು ಅತಿಯಾಗಿ ಹಿಂಸಿಸುವವನೂ ಆದ ಇಂದ್ರನು ಅಹಸ್ಸನ್ನು ತನ್ನ ಪೂಜ್ಯನಾದ ತೇಜಸ್ಸುಗಳಿಂದ ಸುತ್ತಲೂ ಬೆಳಗಿಸಿ ವೃದ್ಧಿಪಡಿಸಿದನು. ಸ್ತುತಿ

ಗಳಿಂದ ಆಕರ್ಷಿತನಾಗಿ ಸ್ವಶರೀರದಿಂದ ವೃದ್ಧಿ ಹೊಂದುವವನೂ ಬಹುವಿಧವಾದ ಆಯುಧೋಪೇತನೂ ಆದ ಇಂದ್ರನು ದ್ಯಾವಾ ಪೃಥಿವಿಗಳೆರಡನ್ನೂ ತೃಪ್ತಿಗೊಳಿಸಿದನು.

ಇಲ್ಲಿ **ದಯಮಾನಃ** ಎಂಬ ಶಬ್ದಕ್ಕೆ ಹಿಂಸಿಸು ಎಂದು ಹಿಂಸಾಕರ್ಮಾರ್ಥವಿರುವುದು.

ಎಲೈ ಅಶ್ವಿನೀದೇವತೆಗಳೇ, ಈ ಸೋಮರಸಗಳು ನಿಮಗಾಗಿ ಸಿದ್ಧಪಡಿಸಲ್ಪಟ್ಟಿದೆ. ಈ ಪ್ರಾತಃಕಾಲದಲ್ಲಿ ನೀವಿಬ್ಬರೂ ಒಟ್ಟಿಗೆ ಬಂದು ಈ ಸೋಮರಸಗಳನ್ನು ಪಾನಮಾಡಿರಿ. ನಾನು ನಿಮ್ಮಿಬ್ಬರನ್ನೂ ನನ್ನ ರಕ್ಷಣೆಗಾಗಿಯೂ ನಮಸ್ಕರಿಸುವುದಕ್ಕಾಗಿಯೂ ಇಲ್ಲಿಗೆ ಬಂದಿದ್ದೇನೆ. (ಈ ಪ್ರಾತಃಕಾಲದಲ್ಲಿ) ಹಾರುತ್ತಿರುವ ಕಾಗೆಗಳನ್ನೂ ನನ್ನನ್ನೂ ಎಚ್ಚರಗೊಳಿಸಿವೆ.

ಈ ಋಕ್ಕಿನಲ್ಲಿ **ದಯಮಾನಃ** ಎಂಬ ಶಬ್ದವು ಗತ್ಯರ್ಥವನ್ನು ಎಂದರೆ ಹೋಗುವುದು ಎಂಬರ್ಥವನ್ನು ಸೂಚಿಸುತ್ತದೆ. ಇಲ್ಲಿ **ದಯಮಾನಃ** ಎಂಬ ಪದವು (ಹಾರಿ) ಹೋಗುತ್ತಿರುವ ಎಂಬರ್ಥದಲ್ಲಿ ವಾಯಸಃ (ಕಾಗೆ) ಶಬ್ದಕ್ಕೆ ವಿಶೇಷಣಪದವಾಗಿದೆ.

ನೂಚಿತ್ ॥೩೦॥ ನೂಚ ॥೩೧॥



ನೂಚಿದಿತಿ ನಿಪಾತಃ ಪುರಾಣನವಯೋರ್ನೂಚೇತಿ ಚ। ಅದ್ಯಾ ಚಿನ್ನೂ-ಚಿತ್ತದಪೋ ನದೀನಾಂ। ಅದ್ಯ ಚ ಪುರಾ ಚ ತದೇವ ಕರ್ಮ ನದೀನಾಂ। ನೂ ಚ ಪುರಾ ಚ ಸದನಂ ರಯೀಣಾಂ। ಅದ್ಯ ಚ ಪುರಾ ಚ ಸದನಂ ರಯೀಣಾಂ। ರಯಿರಿತಿ ಧನನಾಮ ರಾತೇರ್ದಾನ-ಕರ್ಮಣಃ ॥

**ನೂಚಿತ್** ಅಥವಾ **ನೂಚ** ಎಂಬ ನಿಪಾತಗಳು (ಅವ್ಯಯಗಳು) ಹಿಂದಿನ ಮತ್ತು ಈಗ ಎಂಬ ಎರಡು ಕಾಲಗಳನ್ನು ಸೂಚಿಸುತ್ತವೆ. ಕೆಳಗೆ ಕೊಟ್ಟಿರುವ ಅದ್ಯಾಚಿನ್ನೂ ಎಂಬ ಋಕ್ಕಿನಲ್ಲಿ ಹೇಳಿರುವಂತೆ–ಹಿಂದಿನ ಕಾಲಗಳಲ್ಲಿಯೂ ಈಗಲೂ ನದಿಗಳಿಗೆ ನೀರನ್ನು ಪ್ರವಹಿಸುವುದೇ (ನೀರಿನಿಂದ ತುಂಬಿ ಬರಿಯುವುದೇ) ಕೆಲಸವು. ಇದು ಅವುಗಳ ನಿತ್ಯಕರ್ಮವು. ಪೂರ್ವಕಾಲಗಳಲ್ಲಿ ನದಿಗಳು ಹರಿಯುತ್ತಿದ್ದಂತೆಯೇ ಈಗಲೂ ಹರಿಯುತ್ತಿರುವವು ಎಂದಭಿಪ್ರಾಯವು.

**ಅದ್ಯಾ ಚಿನ್ನೂ ಚಿತ್ತದಪೋ ನದೀನಾಂ ಯದಾಭ್ಯೋ ಅರದೋ ಗಾತುಮಿಂದ್ರ ।**
**ನಿ ಪರ್ವತಾ ಅದ್ಮಸದೋ ನ ಸೇದುಸ್ತ್ವಯಾ ದೃಳ್ಹಾನಿ ಸುಕ್ರತೋ ರಜಾಂಸಿ ॥**

(ಋ. ಸಂ. ೬–೩೦–೩)

ಇದರ ಅರ್ಥವು—ಎಲೈ ಇಂದ್ರನೇ, ನದಿಗಳಿಗೆ ಪ್ರವಹಿಸಲು ಮಾರ್ಗವನ್ನು ಕಲ್ಪಿಸಿದೆಯೆಂಬ ಯಾವ ಕರ್ಮವುಂಟೋ ಅಂತಹ ನಿನ್ನ ಕರ್ಮಗಳು ಈಗಿರುವಂತೆಯೇ ಹಿಂದೆಯೂ ಪ್ರಸಿದ್ಧವಾಗಿದ್ದಿತು. ಅನ್ನವನ್ನು ಭುಜಿಸಲು ನಿಶ್ಚಲರಾಗಿ ಕುಳಿತಿರು ಮಾನವರಂತೆ ಪರ್ವತಗಳು ಅಚಲವಾಗಿ ನಿಂತಿವೆ. ಶ್ರೇಷ್ಠಕರ್ಮಕರ್ತನಾದ ಎಲೈ ಇಂದ್ರನೇ, ನಿನ್ನಿಂದಲೇ ಲೋಕಗಳೆಲ್ಲವೂ ಸ್ಥಿರವಾಗಿ ನಿಲ್ಲಿಸಲ್ಪಟ್ಟಿವೆ.

ಈ ಋಕ್ಕಿನಲ್ಲಿ **ನೂಚಿತ್** ಎಂಬ ಪದಗಳಿಗೆ ಹಿಂದಿನ ಕಾಲದಲ್ಲಿ ಎಂಬರ್ಥವಿರುವುದು. ಈ ಋಕ್ಕಿನಲ್ಲಿರುವ ಅದ್ಮಸದಃ ಎಂಬ ಸಬ್ದಕ್ಕೆ ಮೇಘವೆಂದು ಅರ್ಥಮಾಡಿದ್ದಾರೆ. ಹೇಗೆಂದರೆ ಅದ್ಮವೆಂದರೆ ಅನ್ನ, ಆಹಾರ. ಇಂತಹ ಆಹಾರವನ್ನು (ಧಾನ್ಯಾದಿಗಳನ್ನು) ಉತ್ಪತ್ತಿಮಾಡಲು ನೀರನ್ನು ಒದಗಿಸಿಕೊಡಲು ಅಂತರಿಕ್ಷದಲ್ಲಿ ಕುಳಿತಿರುವ ಮೇಘಗಳಿಗೆ **ಅದ್ಮಸದಃ** ಎಂದು ಅರ್ಥಮಾದಿದ್ದಾರೆ.

**ನೂಚ ಪುರಾ ಚ ಸದನಂ ರಯಿಣಾಂ ಜಾತಸ್ಯ ಚ ಜಾಯಮಾನಸ್ಯ ಚ ಕ್ಷಾಂ ।**
**ಸತಶ್ಚ ಗೋಪಾ ಭವತಶ್ಚ ಭೂರೇರ್ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥**

(ಋ. ಸಂ. ೧-೯೬-೭)

ಇದರ ಅರ್ಥವು—ವರ್ತಮಾನ ಮತ್ತು ಭೂತಕಾಲಗಳಲ್ಲಿರುವ ಮತ್ತು ಇದ್ದ ಸಕಲ ಧನಗಳಿಗೂ ಆವಾಸಸ್ಥಾನನಾದವನೂ, ಹಿಂದೆ ಹುಟ್ಟಿದವೂ ಮುಂದೆ ಹುಟ್ಟತಕ್ಕವೂ ಆದ ಸಕಲ ಭೂತಜಾತಕ್ಕೂ ನಿವಾಸಸ್ಥಾನನಾಗಿರ ತಕ್ಕವನೂ, ಸಕಲ ದೇಶಕಾಲಗಳಲ್ಲಿಯೂ ಅನಾದಿಯಾಗಿರುವ ಆಕಾಶಾದಿಗಳಿಗೂ ಮತ್ತು ಇತರ ಅಸಂಖ್ಯಾತವಾದ ಭೂತಗಳಿಗೂ ರಕ್ಷಕನಾದವನೂ ಮತ್ತು ಧನಪ್ರದಾತನೂ ಆದ ಅಗ್ನಿಯನ್ನು ದೇವತೆಗಳು ಹವಿಸ್ಸನ್ನು ಹಂಚುವ ತಮ್ಮ ದೂತನನ್ನಾಗಿ ಇರಿಸಿಕೊಂಡರು.

ಈ ಋಕ್ಕಿನಲ್ಲಿ **ನೂಚ** ಎಂಬ ಪದಗಳಿಗೆ ಈಗ ಅಥವಾ ವರ್ತಮಾನಕಾಲ ಎಂಬರ್ಥವಿರುವುದು. **ನೂಚ**—ಈಗ **ಪುರಾ ಚ**—ಪೂರ್ವದಲ್ಲಿ ಎಂಬರ್ಥವು ಸ್ಪಷ್ಟವಾಗಿರುವುದು.

**ಇತಿ ಸಪ್ತದಶಃ ಖಂಡ**

ಇಲ್ಲಿಗೆ ಹದಿನೇಳನೆಯ ಖಂಡವು ಸಮಾಪ್ತವು

———

## ಅಥಾಷ್ಟಾದಶಃ ಖಂಡಃ

### ಹದಿನೆಂಟನೆಯ ಖಂಡವು

ವಿದ್ಯಾಮ ತಸ್ಯ ತೇ ವಯಮಕೂಪಾರಸ್ಯ ದಾವನೇ।
ವಿದ್ಯಾಮ ತಸ್ಯತೇ ವಯಮಕುಪರಣಸ್ಯ ದಾನಸ್ಯಾದಿತ್ಯೋಽಪ್ಯ-
ಕೂಪಾರ ಉಚ್ಯತೇಽಕೂಪಾರೋ ಭವತಿ ದೂರಪಾರಃ ಸಮುದ್ರೋಽ-
ಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ಮಹಾಪಾರಃ ಕಚ್ಛಪೋಽ-
ಪ್ಯಕೂಪಾರ ಉಚ್ಯತೇಽಕೂಪಾರೋ ನ ಕೂಪಮೃಚ್ಛತೀತಿ ಕಚ್ಛಪಃ
ಕಚ್ಛಂ ಪಾತಿ ಕಚ್ಛೇನ ಪಾತೀತಿ ವಾ ಕಚ್ಛೇನ ಪಿಬತೀತಿ ವಾ ಕಚ್ಛಃ
ಖಚ್ಛಃ ಖಚ್ಛದೋಽಯಮಪೀತರೋ ನದೀಕಚ್ಛ ಏತಸ್ಮಾದೇವ

ಕಮುದಕಂ ತೇನ ಛಾದ್ಯತೇ । ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ । ನಿಶ್ಯತಿ ಶೃಂಗೇ ರಕ್ಷಸೋ ವಿನಿಕ್ಷಣಾಯ ರಕ್ಷೋ ರಕ್ಷಿತವ್ಯಮಸ್ಮಾದ್ರಹಸಿ ಕ್ಷಣೋತೀತಿ ವಾ ರಾತ್ರೌ ನಕ್ಷತ ಇತಿ ವಾ । ಅಗ್ನಿಃ ಸುತುಕಃ ಸುತುಕೇಭಿರಶ್ವೈಃ । ಸುತುಕನಃ ಸುತುಕನೈರಿತಿ ವಾ ಸುಪ್ರಜಾಃ ಸುಪ್ರಜೋಭಿರಿತಿ ವಾ । ಸುಪ್ರಾಯಣಾ ಅಸ್ಮಿನ್ಯಜ್ಞೇ ವಿಶ್ರಯಂತಾಂ । ಸುಪ್ರಗಮನಾಃ ॥ ೧೮ ॥

———

ದಾವನೇ ॥೩೨॥ ಅಕೂಪಾರಸ್ಯ ॥೩೩॥

ವಿದ್ಯಾಮ ತಸ್ಯ ತೇ ವಯಮಕೂಪಾರಸ್ಯ ದಾವನೇ ।
ವಿದ್ಯಾಮ ತಸ್ಯ ತೇ ವಯಮಕುಪರಣಸ್ಯ ದಾನಸ್ಯ ॥

**ಯನ್ಮನ್ಯಸೇ ವರೇಣ್ಯಮಿಂದ್ರ ದ್ಯುಕ್ಷಂ ತದಾಭರ ।**
**ವಿದ್ಯಾಮ ತಸ್ಯ ತೇ ವಯಮಕೂಪಾರಸ್ಯ ದಾವನೇ ॥**

(ಋ. ಸಂ. ೫–೩೯–೨)

ಇದರ ಅರ್ಥವು—ಎಲೈ ಇಂದ್ರನೇ, ಯಾವ ಅನ್ನವನ್ನು ನೀನು ಅತ್ಯಂತ ಆದೃತವೆಂದು ತಿಳಿಯುವೆಯೋ ಆ ಅನ್ನವನ್ನು ನಮಗೆ ತುಂಬಿಕೊಡು. ನಿನಗೆ ಸೇರಿದವರಾದ ನಾವು ಅಂತಹ ಅಕುತ್ಸಿತವಾದುದೂ, ಅಂತರಹಿತವಾದುದೂ ಆದ ಅನ್ನದ (ಆಹಾರದ) ದಾನಕ್ಕೆ ಯೋಗ್ಯರಾಗಿರುವೆವು.

ಇಲ್ಲಿ **ದಾವನೇ** ಎಂಬ ಶಬ್ದಕ್ಕೆ **ದಾನಸ್ಯ** (ನಮಗೆ) ಕೊಡುವುದಕ್ಕಾಗಿ ಎಂದರ್ಥವು.

ಆದಿತ್ಯೋಽಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ದೂರಪಾರಃ । ಸಮುದ್ರೋಽಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ಮಹಾಪಾರಃ । ಕಚ್ಛಪೋಽಪ್ಯಕೂಪಾರ ಉಚ್ಯತೇಽಕೂಪಾರೋ ನ ಕೂಪಮೃಚ್ಛತೀತಿ । ಕಚ್ಛಪಃ ಕಚ್ಛಂ ಪಾತಿ ಕಚ್ಛೇನ ಪಾತೀತಿ ವಾ ಕಚ್ಛೇನ ಪಿಬತೀತಿ ವಾ । ಕಚ್ಛಃ ಖಚ್ಛಃ ಖಚ್ಛದಃ ಅಯಮಪೀತರೋ ನದೀಕಚ್ಛ ಏತಸ್ಮಾದೇವ । ಕಮುದಕಂ ತೇನ ಛಾಯತೇ ॥

**ಅಕೂಪಾರಸ್ಯ**–ಎಂಬ ಶಬ್ದಕ್ಕೆ ನಾನಾರ್ಥಗಳಿರುವವು. **ಅಕೂಪಾರಸ್ಯ** ಎಂದರೆ ಅಕುಪರಣಸ್ಯ ಎಂದರ್ಥವೆಂದು ನಿರುಕ್ತಕಾರರ ವಚನವು. **ಅಕುಪರಣಸ್ಯ** ಎಂದರೆ ಏನು ? **ಕು** ಎಂದರೆ ಕುತ್ಸಿತ ಸ್ವಲ್ಪ ; **ಪರಣ** ಎಂದರೆ ಪೂರಣ, ತುಂಬಿರುವುದು. ಕುಪರಣ ಎಂದರೆ ಸ್ವಲ್ಪಮಾತ್ರವಿರುವುದು : ಅಕುಪರಣ ಎಂದರೆ ಸ್ವಲ್ಪವಲ್ಲದ ಎಂದರೆ ಹೆಚ್ಚಾದ ಅಪಾರವಾದ, ಕೊನೆ

ಯಿಲ್ಲದ ಎಂದರ್ಥವು. **ಅಕೂಪಾರಸ್ಯ** ಎಂಬ ಶಬ್ದಕ್ಕೂ ಇದೇ ಅರ್ಥವಿರುವುದು. ಈ ಅರ್ಥವು ಯಾವ ಯಾವ ಸಂದರ್ಭಗಳಲ್ಲಿ ಉಪಯೋಗಿಸಲ್ಪಡುವುದು ಎಂಬುದನ್ನು ಇಲ್ಲಿಯೇ ವಿವರಿಸಲಾಗಿದೆ.

**ಆದಿತ್ಯೋಽಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ದೂರಪಾರಃ**—ಅಕೂಪಾರಶಬ್ದಕ್ಕೆ ಆದಿತ್ಯ ಅಥವಾ ಸೂರ್ಯನೆಂದೂ ಅರ್ಥವಾಗುವುದು. ಹೇಗೆಂದರೆ ಸೂರ್ಯನು ಉದಯಕಾಲದಿಂದ ಅಸ್ತಮಯಕಾಲದವರೆಗೆ ಅಳೆಯುವುದಕ್ಕೆ ಸಾಧ್ಯವಿಲ್ಲವಷ್ಟು ಬಹುದೂರ ಸಂಚರಿಸುವವನಾದ್ದರಿಂದ ಆದಿತ್ಯನಿಗೂ ಅಕೂಪಾರ ಎಂದು ಹೆಸರು.

**ಸಮುದ್ರೋಽಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ಮಹಾಪಾರಃ**–ಸಮುದ್ರಕ್ಕೂ ಅಕೂಪಾರವೆಂದು ಹೆಸರು. ಏಕೆಂದರೆ, ಇದು ಬಹುದೂರ ವ್ಯಾಪಿಸಿರುವುದು. ಇದಕ್ಕೆ ಅಂತ್ಯವು (ಕೊನೆಯು)ಸಮೀಪದಲ್ಲಿ ಕಾಣುವಂತಿಲ್ಲ. ಅಥವಾ ಪಾರವೆಂದರೆ ದಡ, ತೀರ ಎಂದು ಅರ್ಥಮಾಡಿದರೆ, **ಮಹಾಪಾರಃ** ಸಮುದ್ರತೀರವು ಕೊನೆಯಿಲ್ಲದ್ದು, ಅತ್ಯಂತ ದೀರ್ಘವಾದುದು. ಇಂತಹ ಅಪಾರವಾದ ತೀರಪ್ರದೇಶವಿರುವುದರಿಂದ ಸಮುದ್ರಕ್ಕೂ ಅಕೂಪಾರವೆಂದು ಹೆಸರು.

**ಕಚ್ಛಪೋಽಪ್ಯಕೂಪಾರ ಉಚ್ಯತೇ ನ ಕೂಪಮೃಚ್ಛತಿ**–ಆಮೆಗೂ ಅಕೂಪಾರವೆಂದು ಹೆಸರು. ಏಕೆಂದರೆ ಅಲ್ಪ ಉದಕವಿರುವ ಭಾವಿಯಲ್ಲಿ ವಾಸಮಾಡುತ್ತಾ ಹೆಚ್ಚಾದ ಸಂಚಾರಕ್ಕೆ ಅವಕಾಶವಿಲ್ಲದೆ. ಅಲ್ಪಸ್ಥಳದಲ್ಲಿಯೇ ಇರುವುದು. ಇಲ್ಲಿ ಅಕೂಪಾರಶಬ್ದಕ್ಕೆ ಅ+ಕೂಪ+ಅರ ಎಂದು ಪದಚ್ಛೇದಮಾಡಿ ಅರ್ಥಮಾಡಬೇಕು.

**ಕಚ್ಛಪಃ ಕಚ್ಛಂ ಪಾತಿ ಕಚ್ಛೇನ ಪಾತೀತಿ ವಾ ಕಚ್ಛೇನ ಪಿಬತೀತಿ ವಾ । ಕಚ್ಛಃ ಖಚ್ಛಃ ಖಚ್ಛದಃ**–ಇಲ್ಲಿ ಆಮೆಯನ್ನು ನಿರ್ದೇಶಿಸುವುದಕ್ಕೆ ಕಚ್ಛಪಎಂಬ ಶಬ್ದವನ್ನು ಉಪಯೋಗಿಸಲಾಗಿದೆಯಷ್ಟೆ. ಪ್ರಸಂಗವಶದಿಂದ ಆ ಕಚ್ಛಪಶಬ್ದಕ್ಕೂ ಇಲ್ಲಿ ನಿರ್ವಚನವನ್ನು ಹೇಳಿದೆ.

(೧) ಕಚ್ಛವೆಂದರೆ ಆಮೆಯ ಮುಖ (ಮೂತಿ). **ಕಚ್ಛಂ ಪಾತೀತಿ ಕಚ್ಛಪಃ** ತನ್ನ ಮುಖ ಅಥವಾ ಶಿರಸ್ಸನ್ನು ವಿಶೇಷರೀತಿಯಿಂದ ರಕ್ಷಿಸಿಕೊಳ್ಳುವುದರಿಂದ ಆಮೆಗೆ ಕಚ್ಛಪವೆಂದು ಹೆಸರು. ಈ ಅರ್ಥದಲ್ಲಿ **ಪಾತಿ** ಎಂಬ ಶಬ್ದಕ್ಕೆ **ಪಾ ರಕ್ಷಣೇ** ರಕ್ಷಿಸು ಎಂಬರ್ಥ.

(೨) ಅಥವಾ **ಕಚ್ಛೇನ ಪಾತೀತಿ ವಾ ಕಚ್ಛಪಃ**—ಈ ವಾಕ್ಯದಲ್ಲಿ **ಪಾ ಪಾನೇ** ಪಾನಮಾಡು, ಕುಡಿ ಎಂಬರ್ಥವಿರುವುದು. ಆಮೆಯು ತನ್ನ ಬಾಯಿಯಿಂದ (ಮೂತಿಯಿಂದ) ಕುಡಿಯುವುದರಿಂದ ಆಮೆಗೆ ಕಚ್ಛಪವೆಂದು ಹೆಸರು.

(೩) ಅಥವಾ ಕಚ್ಛ ಎಂದರೆ ಖಚ್ಛ ಎಂದೂ ಹೇಳಬಹುದು. ಎರಡು ಶಬ್ದಗಳಿಗೂ ಒಂದೇ ಅರ್ಥವು. **ಕ** ಎಂದರೆ ಉದಕ, **ಖ** ಎಂದರೆ ಆಕಾಶ, ಸ್ಥಳ. **ಛಾದಯತೀತಿ ಛಃ** ಛ ಎಂದರೆ ಹೊದಿಕೆ, ಆಚ್ಛಾದನೆ, ಆವರಣ, ಚಿಪ್ಪು ಇತ್ಯಾದಿ. ಆದುದರಿಂದ ಕಚ್ಛಪ ಎಂದರೆ ನೀರಿನಲ್ಲಿಯೇ ವಾಸಮಾಡುತ್ತಾ ನೀರನ್ನೇ ಮರೆಮಾಡಿಕೊಂಡು ಎಂದರೆ ನೀರಿನಲ್ಲಿ ಮುಳುಗಿ ತನ್ನನ್ನು ರಕ್ಷಿಸಿಕೊಳ್ಳುವುದರಿಂದ ಆಮೆಗೆ ಕಚ್ಛಪ ಎಂದು ಹೆಸರು ; ಅಥವಾ **ಖಚ್ಛಪ** ಎಂಬ ಶಬ್ದಕ್ಕೆ ಆಚ್ಛಾದನೆ ಚಿಪ್ಪು ಎಂದರ್ಥಮಾಡಿದರೆ ಅಪಾಯಕಾಲದಲ್ಲಿ ತನ್ನ ಶಿರಸ್ಸನ್ನು ಚಿಪ್ಪಿನೊಳಗೆ ಎಳೆದುಕೊಂಡು ತನ್ನನ್ನು ರಕ್ಷಿಸಿಕೊಳ್ಳುವುದರಿಂದ ಆಮೆಗೆ| ಖಚ್ಛಪ ಅಥವಾ ಕಚ್ಛಪ ಎಂದು ಹೆಸರು.

(೪) **ಅಯಮಪಿತರೋ ನದೀಕಚ್ಛ ಏತಸ್ಮಾದೇವ । ಕಮುದಕಂ ತೇನ ಛಾದ್ಯತೇ**—ಕಚ್ಛ ಎಂದರೆ ನದೀ ತೀರಕ್ಕೂ ಹೆಸರು. ಇಲ್ಲಿ ಕ ಎಂದರೆ ಉದಕ, ನೀರು. ಚ್ಛ ಎಂದರೆ ಛಾದ್ಯತೇ—ಆವರಿಸಲ್ಪಡುವುದು. ನದೀತೀರವು ನೀರಿನಿಂದ ಆವರಿಸಲ್ಪಟ್ಟಿರುವುದರಿಂದ ಅದಕ್ಕೆ ಕಚ್ಛ ಎಂದು ಹೆಸರು.

ಶಿಶೀತೇ ॥ ೩೪ ॥

ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥ ನಿಶ್ಯತಿ ಶೃಂಗೇ ರಕ್ಷಸೋ ವಿನಿಕ್ಷಣನಾಯ । ರಕ್ಷೋ ರಕ್ಷಿತವ್ಯಮಸ್ಮಾತ್ । ರಹಸಿ ಕ್ಷಣೋತೀತಿ ವಾ ರಾತ್ರೌ ನಕ್ಷತ ಇತಿ ವಾ ।

ಉದಾಹರಣೆಯ ಋಕ್ಕು—

**ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।**
**ಪ್ರಾದೇವೀರ್ಮಾಯಾಃ ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥**

**(ಋ. ಸಂ. ೫-೨-೯)**

ಇದರ ಅರ್ಥವು—ಅಗ್ನಿಯು ತನ್ನ ಅತ್ಯಧಿಕವಾದ ತೇಜಸ್ಸಿನಿಂದ ಪ್ರಕಾಶಿಸುತ್ತಾನೆ. ತನ್ನ ಮಾಹಾತ್ಮ್ಯದಿಂದ ಸಮಸ್ತ ಭೂತಗಳನ್ನೂ ಪ್ರಕಾಶಪಡಿಸುತ್ತಾನೆ. ಆಸುರೀಸ್ವಭಾವವುಳ್ಳವೂ ದುಃಖಕಾರಕವೂ ಆದ ದುಷ್ಟಶಕ್ತಿಗಳನ್ನು ಮೆಟ್ಟಿ ತುಳಿಯುತ್ತಾನೆ. ಶೃಂಗಗಳಂತಿರುವ ತನ್ನ ಜ್ವಾಲೆಗಳನ್ನು ರಾಕ್ಷಸಶಕ್ತಿಯ ನಾಶಕ್ಕಾಗಿ ತೀಕ್ಷ್ಣವಾಗಿ ಮಾಡಿಕೊಳ್ಳುತ್ತಾನೆ.

**ಶಿಶೀತೇ** ಎಂದರೆ ತೀಕ್ಷ್ಣೀಕರೋತಿ, ಹರಿತವನ್ನಾಗಿ ಮಾಡುತ್ತಾನೆ. ತನ್ನ ಆಯುಧವಾದ ಶೃಂಗ ಅಥವಾ ಕೊಂಬನ್ನು ಹರಿತವನ್ನಾಗಿ (ಚೂಪಾಗಿ) ಮಾಡುತ್ತಾನೆ. ತನ್ನ ಶತ್ರುಗಳನ್ನು ಕೊಲ್ಲಲು ದುಷ್ಟಮೃಗವು ತನ್ನ ಕೊಂಬನ್ನು ಕಲ್ಲಿನ ಮೇಲೆ ಉಜ್ಜಿ ಹರಿತವನ್ನಾಗಿ ಮಾಡುವಂತೆ, ಅಗ್ನಿಯು ಶತ್ರುಗಳ ವಿನಾಶಕ್ಕಾಗಿ ತನ್ನ ಕೊಂಬಿನಂತಿರುವ ಜ್ವಾಲೆಗಳನ್ನು ಕಟ್ಟಿಗೆಗಳನ್ನು ದಹಿಸುವುದರಿಂದ ತೀಕ್ಷ್ಣವನ್ನಾಗಿ (ಎಂದರೆ ಜಾಜ್ವಲ್ಯಮಾನವಾಗಿ ಉರಿಯುವಂತೆ) ಮಾಡುತ್ತಾನೆ.

**ರಕ್ಷಸಃ**—ರಾಕ್ಷಸರು. **ವಿನಿಕ್ಷೇ**—ಎಂದರೆ ಹಿಂಸೆ ಅಥವಾ ವಿನಾಶಕರ್ಮ **ರಕ್ಷೋ ರಕ್ಷಿತವ್ಯಂ ಹಿ ಶರೀರಂ ಅಸ್ಮಾತ್**—ನಮ್ಮ ಶರೀರವನ್ನು ಈ ರಾಕ್ಷಸರಿಂದ ಕೆಡಕಾಗದಂತೆ ರಕ್ಷಿಸಿಕೊಳ್ಳಬೇಕಾಗಿರುವುದರಿಂದ ಈ ದುಷ್ಟಜನರಿಗೆ ರಕ್ಷಃ ಎಂದು ಹೆಸರು ಅಥವಾ **ತದ್ಧಿ ರಕ್ಷೋ ಮಾನುಷಾನ್ ಭಕ್ಷಯತಿ**–ಈ ರಾಕ್ಷಸನೆಂಬುವನು ಮನುಷ್ಯರನ್ನು ಭಕ್ಷಿಸುವುದರಿಂದ ರಕ್ಷಃ ಎಂದು ಹೆಸರು. ಅಥವಾ **ರಹಸಿ ವಾ ವಿವಿಕ್ತೇ ಪ್ರದೇಶೇ ಕ್ಷಣೋತಿ ಹಿನಸ್ತೀತ್ಯರ್ಥಃ**:–ರಹಸ್ಯ ಪ್ರದೇಶದಲ್ಲಿ ಎಂದರೆ ಇತರರು ಇಲ್ಲದಿರುವ ಒಬ್ಬಂಟಿಗನಾಗಿರುವ ಸ್ಥಳದಲ್ಲಿ ಬಂದು ಹಿಂಸಿಸುವವನಾದ್ದರಿಂದ ಇವನಿಗೆ ರಕ್ಷಃ ಎಂಬ ಹೆಸರು ಬಂದಿದೆ. ಅಥವಾ **ರಾತ್ರೌ ನಕ್ಷತೇ ಗಚ್ಛತಿ ಇತಿ ವಾ** ರಾತ್ರಿಕಾಲದಲ್ಲಿ ಸಂಚರಿಸುವವನಾದ್ದರಿಂದ (ನಿಶಾಚರ) ಇವನಿಕ ರಕ್ಷಃ ಎಂದೂ ಹೆಸರಿರುವುದು.

ಸುತುಕಃ ॥೩೫॥

ಅಗ್ನಿಃ ಸುತುಕಃ ಸುತುಕೇಭಿರಶ್ವೈಃ॥ ಸುತುಕನಃ ಸುತುಕನ್ಯೈರಿತಿ ವಾ।
ಸುಪ್ರಜಾಃ ಸುಪ್ರಜೋಭಿರಿತಿ ವಾ॥

**ಸ ಆ ವಕ್ಷಿ ಮಹಿ ನ ಆ ಚ ಸತ್ಸಿ ದಿವಸ್ಪೃಥಿವ್ಯೋರರತಿರ್ಯುವತ್ಯೋಃ ।**
**ಅಗ್ನಿಃ ಸುತುಕಃ ಸುತುಕೇಭಿರಶ್ವೈರಭಸ್ವದ್ಭೀ ರಭಸ್ವಾ ಏಹ ಗಮ್ಯಾಃ ॥**

(ಋ. ಸಂ. ೧೦-೩-೭) .

ಇದರ ಅರ್ಥವು—ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ನಮ್ಮ ಯಜ್ಞಕ್ಕೆ ಮಹಾತ್ಮರಾದ ದೇವತೆಗಳನ್ನು ಕರೆದುಕೊಂಡು ಬಾ. ಪರಸ್ಪರ ಸೇರಿಕೊಂಡಿರುವ ದ್ಯಾವಾಪೃಥಿವಿಗಳಲ್ಲೆಲ್ಲ ಸೂರ್ಯರೂಪದಲ್ಲಿ ಸಂಚರಿಸುವ ನೀನು ನಮ್ಮ ಯಜ್ಞಕ್ಕೆ ಬಾ. ಸುಖವಾದ ಪ್ರವೇಶಕ್ಕೆ ಅರ್ಹನೂ ವೇಗವಂತನೂ ಆದ ಅಗ್ನಿಯು ಉತ್ತಮವಾದ ಗಮನವುಳ್ಳವೂ ವೇಗವುಳ್ಳವೂ ಆದ ಅಶ್ವಗಳೊಡಗೂಡಿ ನಮ್ಮ ಯಜ್ಞಕ್ಕೆ ಬರಲಿ.

**ಸುತುಕಃ ಅಗ್ನಿಃ ಸುತುಕಃ ಸುತುಕನಃ ಕುತುಕನ್ಯೈರಿತಿ ವಾ ಸುಪ್ರಜಾಃ ಸುಪ್ರಜೋಭಿರಿತಿ ವಾ**—ಸುತುಕಃ ಎಂದರೆ ವೇಗಶಾಲಿಯಾದ ಅಗ್ನಿಯು. ಅಗ್ನಿಯು ದಹಿಸುವುದಕ್ಕೆ ಉಪಕ್ರಮಮಾಡಿದರೆ ಬಹುಬೇಗ ಎಲ್ಲವನ್ನೂ ವ್ಯಾಪಿಸಿ ದಹಿಸುತ್ತಾನೆ. ಆದ್ದರಿಂದ ಅತಿ ವೇಗವಾದ ಗಮನವುಳ್ಳವನು. ಇವನ ಅಶ್ವಗಳೂ ಸಹ ವೇಗಗಮನವುಳ್ಳವು. ಅಥವಾ ಉತ್ತಮ ಜಾತಿಯಲ್ಲಿ ಹುಟ್ಟಿದವು. ಎಂದರೆ ಒಳ್ಳೆಯ ಜಾತ್ಯಶ್ವಗಳು, ಇವು ವೇಗವಾಗಿ ಓಡುವುದರಲ್ಲಿ ಪ್ರಸಿದ್ಧಿಯು.

ಸುಪ್ರಾಯಣಾಃ ॥೩೬॥

ಸುಪ್ರಾಯಣಾ ಅಸ್ಮಿನ್ ಯಜ್ಞೇ ವಿಶ್ರಯಂತಾಂ। ಸುಪ್ರಗಮನಾಃ॥

**ಸುಪ್ರಾಯಣಾಃ** ಎಂದರೆ ಸುಪ್ರಗಮನಾಃ ಒಳ್ಳೆಯ ಗಮನವುಳ್ಳ; **ಅಪ್ರಾಯುವಃ ಅಪ್ರಮಾದ್ಯಂತಃ ಪ್ರಮಾದಮಕುರ್ವಾಣಾಃ ಅಸಯುಚ್ಛ್ಯಮಾನಾ ಇತ್ಯರ್ಥಃ** ಮಾರ್ಗಾತಿಕ್ರಮಣಮಾಡುವಾಗ ಎಂದರೆ ಓಡುವಾಗ ಪ್ರಮಾದವಿಲ್ಲದೆ ಭಯಪಡದೆ ಏನೊಂದೂ ತೊಂದರೆಯಿಲ್ಲದೆ ಎಂದರ್ಥವು. **ಅಪ್ರಾಯುವೋ ರಕ್ಷಿತಾರಶ್ಚ** ಪ್ರಮಾದರಹಿತವಾಗಿರುವುದರಿಂದ ತೊಂದರೆಗಳಿಂದ ರಕ್ಷಿಸುವವುಗಳಾದ ಎಂದರ್ಥವು. ರಕ್ಷಣೆ ಎಂದರೆ ಪ್ರಮಾದ, ತೊಂದರೆ ಇವುಗಳು ಸಂಭವಿಸದಂತೆ ಕಾಪಾಡುವವು ಎಂದರ್ಥವು.

ಉದಾಹರಣೆಗಾಗಿ ಈ ಋಕ್ಕನ್ನು ಕೊಟ್ಟಿದ್ದಾರೆ—

**ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತೋಽದಬ್ಧಾಸೋ ಅಪರಿತಾಸ ಉದ್ಭಿದಃ ।**
**ದೇವಾನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇದಿವೇ ॥**

(ಋ. ಸಂ. ೧-೮೯-೧)

ಇದರ ಅರ್ಥವು—ಭಕ್ತರಾದ ಯಜ್ಞಕರ್ತರನ್ನು ತ್ಯಜಿಸದೆ ಪ್ರತಿ ದಿನವೂ ಅವರನ್ನು ರಕ್ಷಿಸುವ ದೇವತೆಗಳು ಯಾವ ರೀತಿ ಯಾವಾಗಲೂ ತಮ್ಮ ಅಭಿವೃದ್ಧಿಗೆ ಕಾರಣರಾಗಿ ಆಗುವರೋ ಆ ರೀತಿಯಲ್ಲಿ ಮಂಗಳಕರವಾದವೂ, ಶತ್ರುಗಳಿಂದ

ಹಿಂಸಿಸಲ್ಪಡದಿರುವವೂ, ಶತ್ರುಗಳಿಂದ ತಡೆಯಲ್ಪಡದಿರುವವೂ ಮತ್ತು ಶತ್ರುನಾಶಕಗಳೂ ಆದ ಅಗ್ನಿಷ್ಟೋಮಾದಿ ಮಹಾ ಯಜ್ಞಗಳು ನಮ್ಮನ್ನು ಲಕ್ಷಿಸಿ ಸಕಲ ದಿಕ್ಕುಗಳಿಂದಲೂ ಬರಲಿ.

**ಇತಿ ಅಷ್ಟಾದಶಃ ಖಂಡಃ**

ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು

---

## ಅಥ ಏಕೋನವಿಂಶಃ ಖಂಡಃ

### ಹತ್ತೊಂಭತ್ತನೆಯ ಖಂಡವು

ದೇವಾ ನೋ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇ ದಿವೇ । ದೇವಾ ನೋ ಯಥಾ ಸದಾ ವರ್ಧನಾಯ ಸ್ಯುರಪ್ರಾಯುವೋಽಪ್ರಮಾದ್ಯಂತೋ ರಕ್ಷಿತಾರಶ್ಚಾಹನ್ಯಹನಿ ಚ್ಯವನ ಋಷಿರ್ಭವತಿ ಚ್ಯಾವಯಿತಾ ಸ್ತೋಮಾನಾಂ ಚ್ಯವಾನಮಿತ್ಯಪ್ಯಸ್ಯ ನಿಗಮಾ ಭವಂತಿ । ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ । ಯುವಾಂ ಚ್ಯವನಂ ಸನಯಂ ಪುರಾಣಂ ಯಥಾ ರಥಂ ಪುನರ್ಯುವಾನಂ ಚರಣಾಯ ತತಕ್ಷಥುರ್ಯುವಾ ಪ್ರಯೌತಿ ಕರ್ಮಣಿ ತಕ್ಷತಿಃ ಕರೋತಿಕರ್ಮಾ ರಜೋ ರಜತೇರ್ಜ್ಯೋತೀ ರಜ ಉಚ್ಯತ ಉದಕಂ ರಜ ಉಚ್ಯತೇ ಲೋಕಾ ರಜಾಂಸ್ಯುಚ್ಯಂತೇಽಸೃಗಹನೀ ರಜಸೀ ಉಚ್ಯೇತೇ । ರಜಾಂಸಿ ಚಿತ್ರಾ ವಿಚರಂತಿ ತನ್ಯವ ಇತ್ಯಪಿ ನಿಗಮೋ ಭವತಿ ಹರೋ ಹರತೇರ್ಜ್ಯೋತಿರ್ಹರ ಉಚ್ಯತೇ ಉದಕಂ ಹರ ಉಚ್ಯತೇ ಲೋಕಾ ಹರಾಂಸ್ಯುಚ್ಯಂತೇಽಸೃಗಹನೀ ಹರಸೀ ಉಚ್ಯೇತೇ । ಪ್ರತ್ಯಗ್ನೇ ಹರಸಾ ಹರಶ್ಶೃಣೀಹೀತ್ಯಪಿ ನಿಗಮೋ ಭವತಿ । ಜುಹುರೇ ವಿ ಚಿತಯಂತಃ। ಜುಹ್ವಿರೇ ವಿಚೇತಯಮಾನಾ ವ್ಯಂತ ಇತ್ಯೇಷೋಽನೇಕಕರ್ಮಾ ಪದಂ ದೇವಸ್ಯ ನಮಸಾ ವ್ಯಂತ ಇತಿ ಪಶ್ಯತಿಕರ್ಮಾ ವೀಹಿ ಶೂರ ಪುರೋಳಾಶಮಿತಿ ಸ್ವಾದತಿಕರ್ಮಾ । ವೀತಂ ಪಾತಂ ಪಯಸ ಉಸ್ರಿಯಾಯಾಃ । ಅಶ್ನೀತಂ ಪಿಬತಂ ಪಯಸ ಉಸ್ರಿಯಾಯಾ ಉಸ್ರಿಯೇತಿ ಗೋನಾಮೋಸ್ರಾವಿ-

ಣೋಽಸ್ಯಾರ್ ಭೋಗಾ ಉಸ್ರೇತಿ ಚ । ತ್ವಾಮಿಂದ್ರ ಮತಿಭಿಃ ಸುತೇ ಸುನೀಥಾಸೋ ವಸೂಯವಃ । ಗೋಭಿಃ ಕ್ರಾಣಾ ಅನೂಷತ ಗೋಭಿಃ ಕುರ್ವಾಣಾ ಅಸ್ತೋಷತ । ಆ ತೂ ಷಿಂಚ ಹರಿಮೀಂ ದ್ರೋರುಪಸ್ಥೇ ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ । ಆ ಸಿಂಚ ಹರಿಂ ದ್ರೋರುಪಸ್ಥೇ ದ್ರುಮಮಯಸ್ಯ ಹರಿಃ ಸೋಮೋ ಹರಿತವರ್ಣೋಽಯಮಪೀತರೋ ಹರಿರೇತಸ್ಮಾದೇವ । ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ । ವಾಶೀಭಿರಶ್ಮಮಯೀಭಿರತಿ ವಾ ವಾಗ್ಭಿರಿತಿ ವಾ । ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ । ಸ ಉತ್ಸಾಹತಾಂ ವೋ ವಿಷುಣಸ್ಯ ಜಂತೋರ್ವಿಷಮಸ್ಯ ಮಾ ಶಿಶ್ನದೇವಾ ಅಬ್ರಹ್ಮಚರ್ಯಾಃ ಶಿಶ್ನಂ ಶ್ನಥತೇಃ । ಅಪಿ ಗುರ್ಋತಂ ನಃ । ಸತ್ಯಂ ವಾ ಯಜ್ಞಂ ವಾ ॥೧೯॥

---

ಅಪ್ರಾಯುವಃ ॥೩೭॥

ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇ ದಿವೇ । ದೇವಾ ನೋ ಯಥಾ ಸದಾ ವರ್ಧನಾಯ ಸ್ಯುರಪ್ರಾಯುವೋಽಪ್ರಮಾದ್ಯಂತೋ ರಕ್ಷಿತಾರಶ್ಚಾಹನ್ಯಹನಿ ।

ಉದಾಹರಣೆಯ ಋಕ್ಕು—

ಆ ನೋ ಭದ್ರಾ ಕ್ರತವೋ ಯಂತು ವಿಶ್ವತೋಽದಬ್ಧಾಸೋ ಅಪರೀತಾಸ ಉದ್ಭಿದಃ ॥
ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇ ದಿವೇ ॥

(ಋ. ಸಂ. ೧-೮೯-೧)

ಇದರ ಅರ್ಥವು—ಭಕ್ತರಾದ ಮತ್ತು ಯಜ್ಞಕರ್ತರನ್ನು ತ್ಯಜಿಸದೆ ಪ್ರತಿದಿನವೂ ಅವರನ್ನು ರಕ್ಷಿಸುವ ದೇವತೆಗಳು ಯಾವರೀತಿ ಯಾವಾಗಲೂ ತಮ್ಮ ಅಭಿವೃದ್ಧಿಗೆ ಕಾರಣರಾಗಿ ಆಗುವರೋ ಆ ರೀತಿಯಲ್ಲಿ ಮಂಗಳಕರವಾದವೂ ಶತ್ರುಗಳಿಂದ ಹಿಂಸಿಸಲ್ಪಡದಿರುವವೂ ಶತ್ರುಗಳಿಂದ ತಡೆಯಲ್ಪಡದಿರುವವೂ ಮತ್ತು ಶತ್ರುನಾಶಕಗಳೂ ಆದ ಅಗ್ನಿಷ್ಟೋಮಾದಿ ಮಹಾಯಜ್ಞಗಳು ನಮ್ಮನ್ನು ಉದ್ದೇಶಿಸಿ ಸಕಲ ದಿಕ್ಕುಗಳಿಂದಲೂ ನಮ್ಮ ಬಳಿಗೆ ಬರಲಿ.

**ಅಪ್ರಾಯುವಃ** ಎಂಬ ಪದದ ಅರ್ಥವಿವರಣೆಯು ಹಿಂದಿನ **ಸುಪ್ರಾಯಣಾಃ** ಎಂಬ ಶಬ್ದದ ವಿವರಣೆಯ ಜೊತೆಯಲ್ಲಿಯೇ ವಿವರಿಸಲಾಗಿದೆ.

ಚ್ಯವನಃ ॥೩೮॥

ಚ್ಯವನ ಋಷಿರ್ಭವತಿ ಚ್ಯಾವಯಿತಾ ಸ್ತೋಮಾನಾಂ ಚ್ಯವಾನಮಿತ್ಯ-ಪ್ಯಸ್ಯ ನಿಗಮಾ ಭವಂತಿ । ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ । ಯುವಾಂ ಚ್ಯವನಂ ಸನಯಂ ಪುರಾಣಂ ಯಥಾ ರಥಂ ಪುನರ್ಯುವಾನಂ ಚರಣಾಯ ತತಕ್ಷಥುಃ । ಯುವಾ ಪ್ರಯೌತಿ ಕರ್ಮಾಣಿ । ತಕ್ಷತಿಃ ಕರೋತಿ-ಕರ್ಮಾ ॥

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ । ನಿಷ್ಟೌಗ್ರ್ಯಮೂಹಥುರದ್ಭ್ಯಸ್ಪರಿ ವಿಶ್ವೇತ್ತಾ ವಾಂ ಸವನೇಷು ಪ್ರವಾಚ್ಯಾ ॥**

(ಋ. ಸಂ. ೧೦-೩೯-೪)

ಇದರ ಅರ್ಥವು- ಎಲೈ ಅಶ್ವಿನೀದೇವತೆಗಳೇ, ಜೀರ್ಣವಾದ ರಥವನ್ನು ಹೊಸದಾಗಿ ಮಾಡುವಂತೆ ನೀವು ವೃದ್ಧನಾದ ಚ್ಯವನ (ಚ್ಯವಾನ) ನೆಂಬ ಋಷಿಯನ್ನು, ಅವನಿಗೆ ಸಂಚರಿಸಲು ಅನುಕೂಲವಾಗುವಂತೆ ಮಾಡಿದಿರಿ. ತುಗ್ರಪುತ್ರನನ್ನು ಉದಕ ದಿಂದ ಹೊರಕ್ಕೆ ತೆಗೆದಿರಿ. ನಿಮ್ಮ ಈ ಎಲ್ಲ ಅಸಾಧಾರಣಕಾರ್ಯಗಳೂ ಯಜ್ಞಕಾಲಗಳಲ್ಲಿ ಉತ್ತಮವಾಗಿ ಪ್ರಶಂಸಿಸಲ್ಪಡ ಬೇಕಾಗಿದೆ.

ಚ್ಯವನ ಎಂಬ ಶಬ್ದವು ಒಬ್ಬ ಋಷಿಯ ಹೆಸರು. ಈ ಪದವು ಚ್ಯವಾನ ಎಂದಾದರೂ ಆಗಬಹುದು. ಈ ಚ್ಯವನನು ಭೃಗುಪುತ್ರನಾದ ಓರ್ವ ಋಷಿಯು. ಇವನಿಗೆ ವಯಸ್ಸಾಗಿ ಶರೀರವು ಜೀರ್ಣವಾಗಿ ಹೋಗಿ ವೃದ್ಧಾಪ್ಯ ಬಂದಿರುವಾಗ ಈತನು ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿ ಅವರು ಬಂದು ಇವನ ವೃದ್ಧತ್ವವನ್ನು ಹೋಗಲಾಡಿಸಿ ನವಯೌವನವನ್ನು ಅನುಗ್ರಹಿಸಿ ಉಂಟುಮಾಡಿದರೆಂದು ಋಗ್ವೇದದ **ಯುವಂ ಚ್ಯವಾನಂ ಸನಯಂ (ಋ. ಸಂ. ೧೦-೩೯-೪), ಯುವಂ ಚ್ಯವಾನಂ ಜರಸೋ ಮುಮುಕ್ತಂ (ಋ. ಸಂ. ೭-೭೧-೫), ಯುವಂ ಚ್ಯವಾನಮಶ್ವಿನಾ ಜರಂತಂ (ಋ. ಸಂ. ೧-೧೧೭-೧೩), ಇತ್ಯಾದಿ ಋಕ್ಕುಗಳಲ್ಲಿ ಹೇಳಿದೆ.**

ರಜಃ ॥೩೯ ॥

ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ । ಅಸೃಗಹನೀ ರಜಸೀ ಉಚ್ಯೇತೇ । ರಜಾಂಸಿ ಚಿತ್ರಾ ವಿಚರಂತಿ ತಾನ್ಯವಃ ಇತ್ಯಪಿ ನಿಗಮೋ ಭವತಿ ॥

**ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ ಸಚಸೇ ಶಿವಾಭಿಃ ॥ ದಿವಿ ಮೂರ್ಧಾನಂ ದಧಿಷೇ ಸ್ವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಂ ॥**

(ಋ. ಸಂ. ೧೦-೮-೬)

ಇದರ ಅರ್ಥವು—ಎಲೈ ಅಗ್ನಿಯೇ, ಯಾವ ಅಂತರಿಕ್ಷದಲ್ಲಿ ಮಂಗಳಕರಗಳಾದ ಅಪ್ಪುಗಳಿಂದ ಕೂಡಿದ ವಾಯುವನ್ನು ಸೇರಿಕೊಳ್ಳುವಿಯೋ ಅಲ್ಲಿ ಯಜ್ಞಾರ್ಥವಾದ ಉದಕಕ್ಕೆ ನೀನು ಪ್ರಾಪಕನಾಗುತ್ತೀಯೆ. ದ್ಯುಲೋಕಕ್ಕೆ ಶಿರಸ್ಸಿನಂತೆ ಪ್ರಧಾನನಾದವನೂ ಸರ್ವತ್ರ ವ್ಯಾಪಿಸುವವನೂ ಆದ ಆದಿತ್ಯನನ್ನು ಧರಿಸಿದ್ದೀಯೆ. ಎಲೈ ಅಗ್ನಿಯೇ, ನಿನ್ನ ಜ್ವಾಲಾರೂಪವಾದ ನಾಲಗೆಯನ್ನು ನೀನು ಹವಿರ್ವಾಹಕವಾಗುವಂತೆ ಮಾಡುತ್ತೀಯೆ.

ರಜಃ ಶಬ್ದವು ಬೆಳಕನ್ನುಂಟುಮಾಡು ಎಂಬರ್ಥವುಳ್ಳ ರಜತಿಧಾತುವಿನಿಂದ ನಿಷ್ಪನ್ನವಾಗಿದೆ. ರಜಃ ಎಂದರೆ ಬೆಳಕು. ರಜಃ ಎಂದರೆ ನೀರಿಗೂ ಹೆಸರು. ಏಕೆಂದರೆ ನೀರು ಎಲ್ಲಾ ಪ್ರಾಣಿಗಳಿಗೂ ಅತ್ಯವಶ್ಯಕವಾಗಿ ಬೇಕಾಗಿರುವುದರಿಂದ ಇದನ್ನು ಎಲ್ಲರೂ ತೆಗೆದುಕೊಂಡು ಹೋಗುವರು. ಲೋಕಗಳಿಗೂ ರಜಾಂಸಿ ಎಂದು ಹೆಸರಿರುವುದು. ಏಕೆಂದರೆ ಮನುಷ್ಯಾದಿ ಪ್ರಾಣಿಗಳು ತಮ್ಮ ತಮ್ಮ ಕರ್ಮಫಲಾನಂತರ ಆಯಾಲೋಕಗಳನ್ನು ಬಿಟ್ಟು ಹೋಗುವರು. **ಅಸೃಗಹನೀ ರಜಸೀ ಉಚ್ಯೇತೇ** ಹಗಲುರಾತ್ರಿಗಳಿಗೂ **ರಜಸೀ** ಎಂದು ಹೆಸರು. ಏಕೆಂದರೆ ಹಗಲು ರಾತ್ರಿಗಳು ಒಂದಾಗುತ್ತಲೊಂದು ಬರುತ್ತಿರುವವು. ಇದಲ್ಲದೆ ಬೆಳಕು ಕತ್ತಲೆಯನ್ನು ಹೋಗಲಾಡಿಸುವುದು. **ರಜಾಂಸಿ ಚಿತ್ರಾ ವಿಚರಂತಿ ತಾನ್ಯವಃ** ಎಂದು ಶ್ರುತಿವಾಕ್ಯವೂ ಇರುವುದು.

ಹರಃ ॥ ೪೦ ॥

ಹರೋ ಹರತೇರ್ಜ್ಯೋತಿರ್ಹರ ಉಚ್ಯತೇ । ಉದಕಂ ಹರ ಉಚ್ಯತೇ । ಲೋಕಾ ಹರಾಂಸ್ಯುಚ್ಯಂತೇ । ಅಸೃಗಹನೀ ಹರಸೀ ಉಚ್ಯೇತೇ ।ಪ್ರತ್ಯಗ್ನೇ ಹರಸಾ ಹರಃ ಶೃಣೀಹಿ ಇತ್ಯಪಿ ನಿಗಮೋ ಭವತಿ ॥

**ಹರಃ** ಎಂಬ ಶಬ್ದವು ಅಪಹರಿಸು ಎಂಬರ್ಥವುಳ್ಳ ಹರತಿಧಾತುವಿನಿಂದ ನಿಷ್ಪನ್ನವಾಗಿದೆ. **ಹರಃ** ಎಂದರೆ ಜ್ಯೋತಿ:–ಬೆಳಕಿಗೆ ಹೆಸರು. ಈ ಬೆಳಕು ಕತ್ತಲೆಯನ್ನು ಹೋಗಲಾಡಿಸುವುದರಿಂದ ಇದಕ್ಕೆ ಈ ಹೆಸರು ಬಂದಿದೆ, **ಹರಃ** ಎಂದರೆ ನೀರಿಗೂ ಹೆಸರು. ಏಕೆಂದರೆ ಸರ್ವಪ್ರಾಣಿಗಳಿಗೂ ನೀರು ಅತ್ಯವಶ್ಯಕವಾಗಿ ಬೇಕಾಗಿರುವುದರಿಂದ ಅವುಗಳು ನೀರನ್ನು ತೆಗೆದುಕೊಳ್ಳುತ್ತವೆ.

**ಹರಾಂಸಿ ಲೋಕಾ ಉಚ್ಯಂತೇ** ಲೋಕಗಳಿಗೂ ಹರಾಂಸಿ ಎಂಬ ಹೆಸರಿದೆ. ಏಕೆಂದರೆ, ಮನುಷ್ಯಾದಿ ಪ್ರಾಣಿಗಳು ತಮ್ಮ ತಮ್ಮ ಕರ್ಮಫಲಮುಗಿದೊಡನೆಯೇ ಈ ಲೋಕಗಳಿಂದ ಬೇರೆಕಡೆಗೆ ಒಯ್ಯಲ್ಪಡುತ್ತಾರೆ. **ಅಸೃಗಹನೀ ಹರಸೀ ಉಚ್ಯೇತೇ** ಹರಸೀ ಎಂದರೆ ಹಗಲು ಮತ್ತು ರಾತ್ರಿಕಾಲವು. ಏಕೆಂದರೆ ಹಗಲು ಮತ್ತು ರಾತ್ರಿ ಎಂಬ ಕಾಲಗಳು ಒಂದಾಗುತ್ತಲೊಂದು ಬಂದು ಹೋಗುತ್ತಲೇ ಇರುವುವು. **ಪ್ರತ್ಯಗ್ನೇ ಹರಸಾ ಹರಃ ಶೃಣೀಹಿ** ಎಂಬುದು ಈ ವಿಷಯದಲ್ಲಿ ವೇದವಾಕ್ಯಕ್ಕೆ ಉದಾಹರಣೆಯಾಗಿದೆ.

ಜುಹುರೇ ॥೪೧॥

ಜುಹುರೇ ವಿಚಿತಯಂತಃ । ಜುಹ್ವಿರೇ ವಿಚೇಯಮಾನಾಃ ॥

**ಜುಹುರೇ ವಿಚಿತಯಂತೋಽನಿಮಿಷಂ ನೃಮ್ಣಂ ಪಾಂತಿ ।**
**ಆ ದೃಳ್ಹಾಂ ಪುರೇ ವಿವಿಶುಃ ॥**

(ಋ. ಸಂ. ೫-೧೯-೨)

ಇದರ ಅರ್ಥವು—ಎಲೈ ಅಗ್ನಿಯೇ ನಿನ್ನ ಪ್ರಭಾವವನ್ನು ಪೂರ್ಣವಾಗಿ ಅರಿತ ಜನರು ಸರ್ವದಾ ಯಜ್ಞವನ್ನಾಚರಿಸುತ್ತಾ ನಿನ್ನನ್ನು ಯಜ್ಞಕ್ಕೆ ಕರೆಯುತ್ತಾರೆ. ಸ್ತೋತ್ರಾದಿಗಳಿಂದ ನಿನ್ನ ಶಕ್ತಿಯನ್ನು ವೃದ್ಧಿಪಡಿಸುತ್ತಾ ರಕ್ಷಿಸುತ್ತಾರೆ. ಶತ್ರುಗಳಿಂದ ಮುತ್ತಲು ಸಾಧ್ಯವಿಲ್ಲದ ಪಟ್ಟಣವನ್ನು ಜಯಿಸಿ ಪ್ರವೇಶಿಸುತ್ತಾರೆ.

**ಜುಹುರೇ, ಜುಹ್ವಿರೇ** ಎಂಬೆರಡು ಶಬ್ದಗಳಿಗೂ ಅಗ್ನಿಯಲ್ಲಿ ಹೋಮ ಮಾಡುತ್ತಾರೆ ಎಂದೇ ಅರ್ಥವು. ಈ ಶಬ್ದವನ್ನು ಸಾಧಾರಣವಾಗಿ ಹೋಮ ಮಾಡುವ ಸಂದರ್ಭಗಳಲ್ಲಿ ಉಪಯೋಗಿಸುತ್ತಾರೆ.

ವ್ಯಂತಃ ||೪೨||

ವ್ಯಂತ ಇತ್ಯೇಷೋಽನೇಕಕರ್ಮಾ । ಪದಂ ದೇವಸ್ಯ ನಮಸಾ ವ್ಯಂತಃ।
ಇತಿ ಪಶ್ಯತಿಕರ್ಮಾ । ವ್ರೀಹಿ ಶೂರ ಪುರೋಳಾಶಂ ಇತಿ ಸ್ವಾದತಿ-
ಕರ್ಮಾ । ವೀತಂ ಪಾತಂ ಪಯಸ ಉಸ್ರಿಯಾಯಾಃ। ಅಶ್ನೀತಂ
ಪಿಬತಂ ಪಯಸ ಉಸ್ರಿಯಾಯಾಃ । ಉಸ್ರಿಯೇತಿ ಗೋನಾಮ।
ಉಸ್ರಾವಿಣೋಽಸ್ಯಾಂ ಭೋಗಾಃ । ಉಸ್ರೇತಿ ಚ॥

**ವ್ಯಂತಃ** ಎಂಬ ಶಬ್ದಕ್ಕೆ ಅನೇಕ ಅರ್ಥಗಳಿರುವವು. **ಪದಂ ದೇವಸ್ಯ ನಮಸಾ ವ್ಯಂತಃ** ಎಂಬ ವಾಕ್ಯದಲ್ಲಿ ವ್ಯಂತಃ ಎಂಬ ಶಬ್ದಕ್ಕೆ ನೋಡುವುದು ಎಂಬರ್ಥವಿರುವುದು.

**ಪದಂ ದೇವಸ್ಯ ನಮಸಾ ವ್ಯಂತಃ ಶ್ರವಸ್ಯವಃ ಶ್ರವ ಆಪನ್ನಮೃಕ್ತಂ ।**
**ನಾಮಾನಿ ಚಿದ್ದಧಿರೇ ಯಜ್ಞಿಯಾನಿ ಭದ್ರಾಯಾಂ ತೇ ರಣಯಂತ ಸಂದೃಷ್ಟೌ ॥**

(ಋ. ಸಂ. ೬-೧-೪)

ಇದರ ಅರ್ಥವು—ಎಲೈ ಅಗ್ನಿಯೇ, ಪೂಜ್ಯವಾದುದೂ, ಆಹವನೀಯ। ರೂಪವಾದುದೂ ಆದ ನಿನ್ನ ಸ್ಥಾನವನ್ನು ಹವಿಸ್ಸಿನ ರೂಪವಾದ ಅನ್ನದೊಡನೆ ನಿನ್ನ ಪೂಜೆಗಾಗಿ ಬಂದು ಸೇರುವವರೂ ಅನ್ನಾಪೇಕ್ಷಿಗಳೂ ಆದ ಯಜಮಾನರು ಯಾರಿಂದಲೂ ಅಪಹರಿಸಲಾಗದ ಅನ್ನವನ್ನು ಸಿದ್ಧಪಡಿಸಿದ್ದಾರೆ. ನಿನ್ನ ಮಂಗಳಕರವಾದ ದರ್ಶನದ ನಿಮಿತ್ತವಾಗಿ ಹರ್ಷಿಸುತ್ತಾರೆ. ಪೂಜಾಯೋಗ್ಯವಾದ ಜಾತವೇದಾ ಇತ್ಯಾದಿ ನಿನ್ನ ನಾಮಗಳನ್ನು ಸಹ ಪಠಿಸುತ್ತಾರೆ.

**ಇಮಾ ಬ್ರಹ್ಮ ಬ್ರಹ್ಮವಾಹಃ ಕ್ರಿಯಂತ ಆ ಬರ್ಹಿಃ ಸೀದ ।**
**ವ್ರೀಹಿ ಶೂರ ಪುರೋಳಾಶಂ ॥**

(ಋ. ಸಂ. ೩-೪೧-೩)

ಇದರ ಅರ್ಥವು—ಸ್ತುತಿಗಳಿಂದ ತೃಪ್ತನಾಗಿ ನಮ್ಮನ್ನು ಸಮೀಪಿಸತಕ್ಕ ಎಲೈ ಇಂದ್ರನೇ, ನಮ್ಮಿಂದ ಈ ಸ್ತುತಿಗಳು ನಿರ್ಮಿತವಾಗಿವೆ. ಆದುದರಿಂದ ನೀನು ದರ್ಭಾಸನದ ಮೇಲೆ ಕುಳಿತುಕೋ. ಸಮರ್ಥನಾದ ಎಲೈ ಇಂದ್ರನೇ- ಪುರೋಡಾಶ ರೂಪವಾದ ಈ ಹವಿಸ್ಸನ್ನು ಭಕ್ಷಿಸು.

ವ್ರೀಹಿ ಶೂರ ಪುರೋಳಾಶಂ—ಎಂಬ ವಾಕ್ಯದಲ್ಲಿ ವ್ರೀಹಿಶಬ್ದಕ್ಕೆ ಭಕ್ಷಿಸು ಎಂಬರ್ಥವಿರುವುದು.

**ಉತ ವಾಂ ವಿಕ್ಷು ಮದ್ಯಾಸ್ವಂಧೋ ಗಾವ ಆಪಶ್ಚ ಪೀಪಯಂತ ದೇವೀಃ ।**
**ಉತೋ ನೋ ಅಸ್ಯ ಪೂರ್ವ್ಯಃ ಪತಿರ್ದನ್ವೀತಂ ಪಾತಂ ಪಯಸ ಉಸ್ರಿಯಾಯಾಃ॥**

(ಋ. ಸಂ. ೧-೧೫೩-೪)

ಇದರ ಅರ್ಥವು—ಎಲೈ ಮಿತ್ರಾವರುಣರೇ, ಪ್ರಕಾಶಮಾನಗಳಾದ ಗೋವುಗಳೂ ಉದಕಗಳೂ ಸಹ ನಿಮ್ಮನ್ನು ಹರ್ಷಗೊಳಿಸತಕ್ಕ ಯಜಮಾನ ರೂಪವಾದ ಪ್ರಜೆಗಳ ಅಭಿವೃದ್ಧಿಗಾಗಿ ಭಕ್ಷಿಸಲು ಯೋಗ್ಯವಾದ ಅನ್ನದಿಂದ ನಿಮ್ಮಿಬ್ಬರನ್ನೂ ತುಂಬಿಸಲಿ. ಅಲ್ಲದೆ ನಮ್ಮ ಈ ಯಜ್ಞದ ಪಾಲಕನೂ, ಪ್ರಾಚೀನನಾದವನೂ ಆದ ಅಗ್ನಿಯು ಹವಿಸ್ಸನ್ನು ದಾನಮಾಡುವವನಾಗಲಿ. ಪುರೋಡಾಶಾದಿಗಳನ್ನು ಭಕ್ಷಿಸಲಿ. ಮತ್ತು ಗೋವಿನ ಹಾಲನ್ನು ಕುಡಿಯಲಿ.

ಇಲ್ಲಿ **ವೀತಂ** ಎಂದರೆ **ಪಾತಂ** ಎಂದರ್ಥವು. **ಪಾತಂ ಪಯಸ ಉಸ್ರಿಯಾಯಾಃ** ಹಸುವಿನ ಹಾಲನ್ನು ಕುಡಿಯಿರಿ.

**ಉಸ್ರಿಯೇತಿ ಗೋನಾಮ । ಉಸ್ರಾವಿಣೋಽಸ್ಯಾಂ ಭೋಗಾಃ** —ಉಸ್ರಾ, ಉಸ್ರಿಯಾ ಎಂಬ ಪದಗಳು ಗೋನಾಮಗಳಲ್ಲಿ ಪಠಿತವಾಗಿದೆ. (೨-೩-೮) ಸುಖಸಾಧನವಾದ ಕ್ಷೀರವು ಹರಿಯುವುದರಿಂದ ಗೋವಿಗೆ ಉಸ್ರಾ ಅಥವಾ ಉಸ್ರಿಯಾ ಎಂಬ ಹೆಸರು ಪ್ರಸಿದ್ಧವಾಗಿದೆ.

ಕ್ರಾಣಾಃ ॥ ೪೩ ॥

ತ್ವಾಮಿಂದ್ರ ಮತಿಭಿಃ ಸುತೇ ಸುನೀಥಾ ಸೋ ವಸೂಯವಃ ।
ಗೋಭಿಃ ಕ್ರಾಣಾ ಅನೂಷತ ॥ ಗೋಭಿಃ ಕುರ್ವಾಣಾ(ಗಾಃ)
ಅಸ್ತೋಷತ ॥

**ತಾಮಿಂದ್ರ ಮತಿಭಿಃ ಸುತೇ ಸುನೀಥಾಸೋ ವಸೂಯವಃ ।**
**ಗೋಭಿಃ ಕ್ರಾಣಾ ಅನೂಷತ ॥**

ಈ ಋಕ್ಕಿನಲ್ಲಿ **ಕ್ರಾಣಾಃ** ಎಂದರೆ **ಕುರ್ವಾಣಾಃ** ಸ್ತೋತ್ರಮಾಡಿದರು ಎಂದರ್ಥವು. ಮುಖ್ಯಾರ್ಥವು–ಎಲೈ ಇಂದ್ರನೇ, ಮೇಧಾವಿಗಳಾದ ಎಂದರೆ ಬುದ್ಧಿವಂತರಾದ ಪುರುಷರಿಂದ ನಿನಗಾಗಿ ಸೋಮರಸವು ಹಿಂಡಲ್ಪಟ್ಟು ಸಿದ್ಧವಾಗಿದೆ. ಆದ್ದರಿಂದ ಈಗ ನಾವು ಧನಾಪೇಕ್ಷಿಗಳಾಗಿ ನಿನ್ನನ್ನು ಉತ್ತಮವಾದ ಸ್ತೋತ್ರಗಳಿಂದ ಸ್ತುತಿಸುತ್ತೇವೆ. ಎಂದರ್ಥವು.

ವಾಶೀ ॥೪೪॥

ಆ ತೂ ಷಿಂಚ ಹರಿಮೀಂ ದ್ರೋರುಪಸ್ಥೇ ವಾಶೀಭಿಸ್ತಕ್ಷತಾಶ್ಮನ್ಮ-
ಯೀಭಿಃ । ಆ ಷಿಂಚ ಹರಿಂ ದ್ರೋರುಪಸ್ಥೇ । ದ್ರುಮಮಯಸ್ಯ
ಹರಿಃ ಸೋಮೋ ಹರಿತವರ್ಣಃ । ಅಯಮಪೀತರೋ ಹರಿರೇತಸ್ಮಾ

ಸ್ತುತಿಸಿದೆಯೆಂದೂ ಹೇಳುವುದಾದರೆ ಆಗ **ಸಪ್ತಚಕ್ರೇ** ಎಂಬ ಪದಕ್ಕೆ ಇನ್ನೂ ವಿಸ್ತೃತವಾದ ಅರ್ಥವನ್ನು ಹೇಳಬೇಕಾಗುತ್ತದೆ.

**ಅಥವಾ ಏಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾಸಾವಾದಿತ್ಯೋ ವಿಹಿತಃ ಸಪ್ತಸು ದೇವಲೋಕೇಷು ಪ್ರತಿಷ್ಠಿತಃ ಸಪ್ತ ವೈ ದೇವಲೋಕಾಶ್ಚತಸ್ರೋ ದಿಶಸ್ತ್ರಯ ಇಮೇ ಲೋಕಾ ಏತೇ ವೈ ಸಪ್ತ ದೇವಲೋಕಸ್ತೇಷ್ವೇವ ಪ್ರತಿಷ್ಠಿತಃ ॥**

(ಶ. ಬ್ರಾ. ೧೦-೨-೪-೪)

ಅಗ್ನಿರೂಪನಾದ ಆದಿತ್ಯನು ಏಕಶತವಿಧನಾಗಿದ್ದಾನೆ. (೧೦೧), ಅವನ ರಶ್ಮಿಗಳು ಶತವಿಧಗಳಾಗಿವೆ. ಅವನ ಸ್ವರೂಪವನ್ನೂ ಸೇರಿಸಿದರೆ ಏಕಶತವಿಧವಾಗುತ್ತದೆ. ಆದರೆ ಈ ಏಕಶತವಿಧವನ್ನೂ ಸಪ್ತವಿಧವೆಂದು ಸಂಗ್ರಹಿಸಿ ಹೇಳಬಹುದು. ಏಳು ಮಡಿಯಾದ ಈ ವಿಶ್ವದಲ್ಲಿ ಆದಿತ್ಯನು ಸ್ಥಾಪಿತನಾಗಿದ್ದಾನೆ. ನಾಲ್ಕು ದಿಕ್ಕುಗಳೂ ಪೃಥಿವ್ಯಾದಿ ಮೂರು ಲೋಕಗಳೂ ಸೇರಿ ಏಳು ವಿಧವಾದ ದೇವಲೋಕಗಳಾಗುತ್ತವೆ. ಈ ಸಪ್ತವಿಧವಾದ ಲೋಕಗಳಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ.

**ಯದ್ವೇವೈಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಸ್ವೃತುಷು ಸಪ್ತಸು ಸ್ತೋಮೇಷು ಸಪ್ತಸು ಪೃಷ್ಠೇಷು ಸಪ್ತಸು ಛಂದಸ್ಸು ಸಪ್ತಸು ಪ್ರಾಣೇಷು ಸಪ್ತಸು ದಿಕ್ಷು ಪ್ರತಿಷ್ಠಿತಃ ॥**

(ಶ. ಬ್ರಾ. ೧೦-೨-೪-೫)

ಏಕಶತವಿಧರೂಪನಾದ ಈ ಆದಿತ್ಯನು ವಿಶ್ವದಲ್ಲಿ ಸಪ್ತವಿಧವಾಗಿ ಪ್ರತಿಷ್ಠಿತನಾಗಿದ್ದಾನೆ. ಇವು ಏಳು ಋತುಗಳು (ಏಳು ಋತುಗಳು ಯಾವುವೆಂದು ಹಿಂದೆ ತಿಳಿಸಿದೆ) ಸಪ್ತಸ್ತೋಮಗಳು, ಸಪ್ತಪೃಷ್ಠಗಳು (ಸಾಮ), ಸಪ್ತಛಂದಸ್ಸುಗಳು, ಸಪ್ತಪ್ರಾಣಗಳು ಮತ್ತು ಸಪ್ತದಿಕ್ಕುಗಳು.

**ಯದ್ವೇವೈಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಾಕ್ಷರೇ ಬ್ರಹ್ಮನ್ ಪ್ರತಿಷ್ಠಿತಃ ಸಪ್ತಾಕ್ಷರಂ ವೈ ಬ್ರಹ್ಮರ್ಗಿತ್ಯೇಕಮಕ್ಷರಂ ಯಜುರಿತಿ ದ್ವೇ ಸಾಮೇತಿ ದ್ವೇಽಥ ಯದತೋಽನ್ಯದ್ಬ್ರಹ್ಮೈವೈತದ್ದ್ವ್ಯಕ್ಷರಂ ವೈ ಬ್ರಹ್ಮ ತದೇತತ್ಸರ್ವ ಸಪ್ತಾಕ್ಷರಂ ಬ್ರಹ್ಮ ತಸ್ಮಿನ್ನೇಷ ಪ್ರತಿಷ್ಠಿತಃ ॥**

(ಶ. ಬ್ರಾ. ೧೦-೨-೪-೬)

ಏಕಶತವಿಧನಾದ ಆದಿತ್ಯನು ಸಪ್ತಾಕ್ಷರಗಳುಳ್ಳ ಬ್ರಹ್ಮನಲ್ಲಿ ಪ್ರತಿಷ್ಠಿತನಾಗಿದ್ದಾನೆ. ಬ್ರಹ್ಮನು ಸಪ್ತಾಕ್ಷರರೂಪನೇ ಆಗಿರುವನು. ಋಗ್ರೂಪವಾದುದು ಒಂದು, ಯಜೂರೂಪವಾದುದು ಎರಡು, ಸಾಮವೆರಡು ಮತ್ತು ಬ್ರಹ್ಮಾತ್ಮಕವಾದುವೇ ಎರಡು, ಒಟು ಸಪ್ತಾಕ್ಷರಸ್ವರೂಪನಾದ ಬ್ರಹ್ಮನೇ ವಿಶ್ವವು. ಈ ವಿಶ್ವವ್ಯಾಪಿಯಾದ ಬ್ರಹ್ಮನಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ ಎಂದು ಸಪ್ತವಿಧವಾದ ಆದಿತ್ಯನ ನಾನಾ ಸ್ವರೂಪಗಳನ್ನೂ ವರ್ಣಿಸಿದೆ. ಇಲ್ಲಿ ಉದಾಹೃತವಾದ ಶತಪಥಬ್ರಾಹ್ಮಣದ ಈ ಅಧ್ಯಾಯದ ನಾಲ್ಕನೇ ಬ್ರಾಹ್ಮಣದ ಸಾರಾಂಶವನ್ನು ಸಂಗ್ರಹಿಸಿದರೆ ;

**ಸಂವತ್ಸರೋ ವೈ ಪ್ರಜಾಪತಿಃ । ಅಗ್ನಿರು ಸರ್ವೇ ಕಾಮಾಃ ಸೋಽಯಂ ಸಂವತ್ಸರಃ ।............**
**ಸ ಯಃ ಸ ಸಂವತ್ಸರೋಽಸೌ ಸ ಆದಿತ್ಯಃ.................... (ಸ) ಸಪ್ತವಿಧಮಭಿಸಂಪದ್ಯತೇ ।**
**....................ಸಪ್ತವಿಧೋ ವಾ ಅಗ್ರೇ ಪ್ರಜಾಪತಿರಸಜ್ಯತ ॥**

(ಶ. ಬ್ರಾ. ೧೦-೨-೪)

ಸಂವತ್ಸರವೇ ಪ್ರಜಾಪತಿಯು ; ಅಗ್ನಿಯೇ ಸಂವತ್ಸರವು ; ಸಂವತ್ಸರವೇ ಆದಿತ್ಯನು, ಪ್ರಜಾಪತಿಯು ಆದಿಯಲ್ಲಿ ಸಪ್ತವಿಧವಾಗಿ ಸೃಷ್ಟನಾದುದರಿಂದ ಸಂವತ್ಸರರೂಪನಾದ ಆದಿತ್ಯನೂ ಸಹ ಸಪ್ತ ಸಂಖ್ಯಾಕವಾದ ಋತ್ವಾದಿಗಳಲ್ಲಿ ಸ್ಥಾಪಿತನಾಗಿ ವಿಶ್ವವ್ಯಾಪಿಯಾಗಿದ್ದಾನೆಂಬ ಅಂಶವನ್ನು **ಸಪ್ತಚಕ್ರೇ ಅರ್ಪಿತಂ ಆಹುಃ** ಎಂದು ತಿಳಿಸಿದೆಯೆಂದು ಹೇಳಬಹುದು.

**ವಿಚಕ್ಷಣಂ—ವಿವಿಧದರ್ಶನಕರಮಾದಿತ್ಯಂ** ॥ ಬೇರೆ ಬೇರೆ ರೀತಿಯಲ್ಲಿ ತನ್ನ ರೂಪಾಂತರಗಳಿಂದ ಜಗತ್ತನ್ನು ವೀಕ್ಷಿಸುವನೆಂದು ಅರ್ಥಮಾಡಿದೆ. **ವಿಚಕ್ಷತೇಽಭಿವಿಪಶ್ಯಂತಿ** ಎಂದು ನಿರುಕ್ತಕಾರರು ಅರ್ಥಮಾಡಿದ್ದಾರೆ. (ನಿ. ೧೨-೨೭) **ನಿರುಕ್ತಕಾರರು,**

ದ್ವಾದಶಾರಂ ನಹಿ ತಜ್ಜರಾಯ । ದ್ವಾದಶ ಪ್ರಧಯಶ್ಚಕ್ರಮೇಕಮಿತಿ ಮಾಸಾನಾಂ । ಮಾಸಾ ಮಾನಾತ್ । ಪ್ರಧಿಃ ಪ್ರಹಿತೋ ಭವತಿ । ತಸ್ಮಿನ್ ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿರ್ನ ಚಲಾಚಲಾಸಃ । ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನಿ ಸಂವತ್ಸರಸ್ಯಾಹೋರಾತ್ರಾಃ ಇತಿ ಚ ಬ್ರಾಹ್ಮಣಂ ಸಮಾಸೇನ । ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ । ಸಪ್ತ ಚ ವೈ ಶತಾನಿ ವಿಂಶತಿಶ್ಚ ಸಂವತ್ಸರಸ್ಯಾಹೋರಾತ್ರಾಃ ಇತಿ ಚ ಬ್ರಾಹ್ಮಣಂ ವಿಭಾಗೇನ ವಿಭಾಗೇನ ॥

**ದ್ವಾದಶ ಪ್ರಧಯಶ್ಚಕ್ರಮೇಕಂ ತ್ರೀಣಿ ನಾಭ್ಯಾನಿ ಕ ಉ ತಚ್ಚಿಕೇತ ।**
**ತಸ್ಮಿನ್ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿರ್ನ ಚಲಾಚಲಾಸಃ ॥**

(ಋ. ಸಂ. ೧-೧೬೪-೪೮)

ಇದರ ಅರ್ಥವು—ಸಂವತ್ಸರರೂಪವಾದ ಚಕ್ರಕ್ಕೆ ಪರಿಧಿಗಳು ಹನ್ನೆರಡು ಮಧ್ಯಭಾಗದ ಅಚ್ಚುಗಳು ಮೂರು. ಈ ಚಕ್ರದಲ್ಲಿ ಪರಿಭ್ರಮಣವನ್ನು ಮಾಡತಕ್ಕ ಮುನ್ನೂರ ಅರವತ್ತು ಅವಯವಗಳು ಶಂಕುಗಳಂತೆ ಒಟ್ಟಿಗೆ ಸೇರಿವೆ. ಈ ರಹಸ್ಯವನ್ನು ತಿಳಿದ ಮಹಾತ್ಮನು ಅಪರೂಪ.

ಈ ಋಕ್ಕಿನಲ್ಲಿ ವರ್ಣಿತವಾಗಿರುವುದು ಆದಿತ್ಯಚಕ್ರವಾಗಬಹುದು. ಅಥವಾ ಕಾಲಚಕ್ರವಾಗಬಹುದು. ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದುತ್ತಿರುವುದರಿಂದ ಆದಿತ್ಯ. ಸಂವತ್ಸರ ಎಂಬ ಎರಡು ತತ್ತ್ವಗಳಿಗೂ **ಚಕ್ರ**ವೆಂಬ ಪರ್ಯಾಯನಾಮವನ್ನು ಹೇಳಬಹುದು. ಎರಡಕ್ಕೂ ದ್ವಾದಶ ಪರಿಧಿಗಳಿವೆ, ನಾಭಿತ್ರಯಗಳಿಗೆ ಮೂನ್ನೂರ ಅರವತ್ತು ಶಂಕುಗಳಿವೆ. ಎರಡಕ್ಕೂ ತಾದಾತ್ಮ್ಯವನ್ನು ಹೇಳಿದರೂ ಸರಿಯಾಗುತ್ತದೆ.

**ದ್ವಾದಶ ಪ್ರಧಯಃ—ಪರಿಧಯಃ ತತ್ಸ್ಥಾನೀಯ ದ್ವಾದಶಮಾಸಾಃ** । ಪರಿಧಿರೂಪಗಳಾದ ಹನ್ನೆರಡು ಮಾಸಗಳೆಂದರ್ಥ. ಆದಿತ್ಯಮಂಡಲವನ್ನು ರಥದ ಚಕ್ರಕ್ಕೂ ದ್ವಾದಶಮಾಸಗಳನ್ನು ಪರಿಧಿಗಳಿಗೂ ಹೋಲಿಸಿದೆ. ಮೇಷ,

ವೃಷಭ ಇತ್ಯಾದಿ ಹನ್ನೆರಡು ರಾಶಿಗಳುಳ್ಳ ಸೂರ್ಯಮಂಡಲವಾಗುತ್ತದೆ. ಮುನ್ನೂರ ಅರವತ್ತು ಅಹೋರಾತ್ರಗಳ ಪರಿಗಣನೆಯಿರುವುದರಿಂದ ಇಲ್ಲಿ ಮಾಸಪರ್ಯಾಯವಾಗಿ ಅರ್ಥಮಾಡಿದರೆ ಹೆಚ್ಚು ಹೊಂದಿಕೊಳ್ಳುತ್ತದೆ. **ದ್ವಾದಶ** ಎಂಬ ಪದವನ್ನು ದ್ವಾದಶಮಾಸಗಳನ್ನು ಹೊಂದಿರುವ ಸಂವತ್ಸರದ ಪರ್ಯಾಯವಾಗಿಯೇ ಉಪಯೋಗಿಸಿರುವುದೂ ಉಂಟು. ಉದಾಹರಣೆಗೆ—

**ದೇವಹಿತಿಂ ಜುಗುಪುರ್ದ್ವಾದಶಸ್ಯ ಋತುಂ ನರೋ ನ ಪ್ರ ಮಿನಂತ್ಯೇತೇ।**
**ಸಂವತ್ಸರೇ ಪ್ರಾವೃಷ್ಯಾಗತಾಯಾಂ ತಪ್ತಾ ಘರ್ಮಾ ಅಶ್ನುವತೇ ವಿಸರ್ಗಂ ॥**

(ಋ. ಸಂ. ೭-೧೦೩-೯)

ಎಂಬಲ್ಲಿ **ದ್ವಾದಶ ಮಾಸಾತ್ಮಕಸ್ಯ ಸಂವತ್ಸರಸ್ಯ** ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗಬಹುದು. ನಿರುಕ್ತಕಾರರು ದ್ವಾದಶ **ಪ್ರಧಯಶ್ಚಕ್ರಮೇಕಂ** ಎಂಬ ಪಾದವನ್ನು ಉದಹರಿಸಿ “ **ಇತಿ ಮಾಸಾನಾಂ** ” ಈ ದ್ವಾದಶಮಾಸಗಳು ಮಾಸಪರ್ಯಾಯವಾದವು ಎಂದು ವಿವರಿಸಿದ್ದಾರೆ. (ನಿ. ೪-೨೭) ಇಂತಹ ಮಾಸಾತ್ಮಕವಾದ **ಚಕ್ರ**ವೆಂದರ್ಥ.

**ತ್ರೀಣಿ ನಾಭ್ಯಾನಿ—ನಾಭ್ಯಾಶ್ರಯಾಣಿ ಫಲಕಾನಿ ತತ್ಸ್ಥಾನಿಯಾನಿ ಗ್ರೀಷ್ಮವರ್ಷಾಹೇಮಂತಾಖ್ಯಾನ್ಯಾಶ್ರಿತಾನಿ ।** ನಾಭಿತ್ರಯವು ಇಲ್ಲಿ ಗ್ರೀಷ್ಮ, ವರ್ಷ ಮತ್ತು ಹೇಮಂತಋತುಗಳನ್ನು ತಿಳಿಸುತ್ತದೆ. ಅಥವಾ ನಾಭಿಸ್ಥಾನೀಯಗಳಾದ ಸಂಧ್ಯಾತ್ರಯಗಳಾಗಬಹುದು, ಅಥವಾ ಭೂತಭವಿಷ್ಯದ್ವರ್ತಮಾನಕಾಲಗಳಾಗಬಹುದು.

**ಕ ಉ ತಚ್ಚಿಕೇತ—ಕೋಽಪಿ ಮಹಾನ್ ಜಾನಾತಿ ।** ಯಾವ ಮಹಾತ್ಮನು ತಿಳಿಯುತ್ತಾನೆ. ಎಂಬುದರಲ್ಲ ಈ ರಹಸ್ಯವನ್ನು ತಿಳಿಯುವವನು ಯಾರು? ಎಂದು ಪ್ರಶ್ನಾರ್ಥಕವಾಗಿರಬಹುದು, ಅಥವಾ ಇದನ್ನು ತಿಳಿಯುವ ಮಹಾತ್ಮನು ಅಪರೂಪ ಎಂದರ್ಥವಾಗಬಹುದು. ಕಾಲತತ್ವದ ರಹಸ್ಯವು ಸಾಧಾರಣವಾದ ಬುದ್ಧಿಗೆ ಗೋಚರವಾಗತಕ್ಕದ್ದಲ್ಲವೆಂದರ್ಥ. ಈ ಭಾವದ ಅರ್ಥವನ್ನು **ಕೋ ದದರ್ಶ ಪ್ರಥಮಂ ಜಾಯಮಾನಂ** ಇತ್ಯಾದಿ ಭಾವಗಳನ್ನು ವಿವರಿಸುವಾಗ ಹಿಂದೆ ತಿಳಿಸಿದೆ. (cf. ೧-೧೬೪-೪)

**ಶಂಕವೋ ನ; ಷಷ್ಟಿರ್ನ....** ಈ ಎರಡು ಕಡೆಗಳಲ್ಲಿಯೂ **ನ** ಎಂಬ ನಿಪಾತವು ಉಪಯೋಗಿಸಲ್ಪಟ್ಟಿದೆ. **ಶಂಕವೋ ನ** ಎಂಬಲ್ಲಿ, **‘ದುರ್ಮದಾಸೋ ನ ಸುರಾಯಾಂ’** ಎಂಬ ಉದಾಹರಣೆಯನ್ನು ತೋರಿಸಿ ನಿರುಕ್ತಕಾರರು ವಿವರಿಸಿರುವಂತೆ ಉಪಮಾರ್ಥೀಯವಾಗುತ್ತದೆ. ಶಂಕುಗಳಂತೆ ಎಂದರ್ಥ. (ನಿ. ೧-೪) **ಷಷ್ಟಿರ್ನ** ಎಂಬಲ್ಲಿ **ನ ಶಬ್ದಃ ಚಾರ್ಥೇ ತ್ರಿಶತಾಃ ಷಷ್ಟಿಶ್ಚ । ನ**ಶಬ್ದವು ಸಮುಚ್ಚಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಮುನ್ನೂರು ಮತ್ತು ಅರವತ್ತು ಎಂದರೆ ಮುನ್ನೂರರವತ್ತು ಎಂದರ್ಥವೆಂದು ವಿವರಿಸಿದೆ. ಇಲ್ಲಿ ನಿರುಕ್ತಕಾರರು **ನ** ಎಂಬ ನಿಪಾತಕ್ಕೆ ಕೇವಲ ಪ್ರತಿಷೇಧಾರ್ಥದಲ್ಲಿಯೂ ಮತ್ತು ಉಪಮಾರ್ಥದಲ್ಲಿಯೂ ಉದಾಹರಣೆಗಳನ್ನು ಕೊಟ್ಟು ವಿವರಿಸಿದ್ದಾರೆ. ಸಮುಚ್ಚಯಾರ್ಥವು ಇಲ್ಲಿ ಹೇಗೆ ಸಾಧ್ಯ ಎಂಬ ಪ್ರಶ್ನೆಯು ಬಂದರೆ ಆಗ ಅದಕ್ಕೆ ಸಮರ್ಥನಮಾಡಿ ಸಾಯಣರು,—

**ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನಿ ಸಂವತ್ಸರಸ್ಯಾಹಾನಿ ।**

(ಶ. ಬ್ರಾ. ೯-೧-೧-೪೩)

ಎಂಬ ಶತಪಥಬ್ರಾಹ್ಮಣದ ವಾಕ್ಯವನ್ನುದಹರಿಸಿ ತಮ್ಮ ಅರ್ಥವನ್ನು ಸಮರ್ಥಿಸಿದ್ದಾರೆ.

**ಚಕ್ರಂ—ಚಕತೇರ್ವಾ ಚರತೇರ್ವಾ ಕ್ರಾಮತೇರ್ವಾ।** ಪ್ರತಿಘಾತಾರ್ಥಕವಾದ **ಚರ್** ಅಥವಾ **ಕ್ರಮು** ಧಾತುವಿನಿಂದ ಚಕ್ರಶಬ್ದವು ನಿಷ್ಪನ್ನವಾಗಿದೆ.

**ದ್ವಾದಶಾರಂ ನ ಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ॥**

(ಋ-ಸಂ-೧-೧೬೪-೧೧)

ಇವರ ಅರ್ಥವು—ಹನ್ನೆರಡು ರಾಶಿರೂಪಗಳಾದ ಅಥವಾ ಹನ್ನೆರಡು ಮಾಸರೂಪಗಳಾದ ಅರಗಳಿಂದ ಕೂಡಿದುದೂ ಮಂಡಲಾತ್ಮಕವೂ ಆದ ಆದಿತ್ಯನ ಚಕ್ರವು ಅಂತರಿಕ್ಷದ ಸುತ್ತಲೂ ಪುನಃಪುನಃ ಸುತ್ತುತ್ತಿದೆ. ಆ ಚಕ್ರವು ಕ್ಷಯುಸತಕ್ಕದ್ದೇ ಅಲ್ಲ. ಅಗ್ನ್ಯಾತ್ಮಕನಾದ ಎಲೈ ಆದಿತ್ಯನೇ, ಈ ಚಕ್ರದಲ್ಲಿ ಪರಸ್ಪರ ಒಟ್ಟಿಗೆ ಸೇರಿಕೊಂಡಿರುವವೂ ಏಳನೂರ ಇಪ್ಪತ್ತು ಸಂಖ್ಯಾಕವಾಗಿರುವವೂ ಪುತ್ರಾತ್ಮಕಗಳಾಗಿರುವವೂ ಆದ ಅಹೋರಾತ್ರಗಳು ಬಳಸಿಕೊಂಡಿವೆ.

**ಇತಿ ಸಪ್ತವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೇಳನೆಯಖಂಡವು ಸಮಾಪ್ತವು

———

**ಇತಿ ನಿರುಕ್ತೇ ಚತುರ್ಥೋಽಧ್ಯಾಯಃ**

ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಸಮಾಪ್ತವು



# ಅಥ ಪಂಚಮಾಧ್ಯಾಯೇ

## ಪ್ರಥಮಃ ಖಂಡಃ

**ಮೊದಲನೆಯ ಖಂಡವು**

ಓಂ । ಸಸ್ನಿಮವಿಂದಚ್ಚರಣೇ ನದೀನಾಮ್ । ಸಸ್ನಾತಂ ಮೇಘಮ್ । ವಾಹಿಷ್ಠೋ ವಾಂ ಹವಾನಾಂ ಸ್ತೋಮೋ ದೂತೋ ಹು ವನ್ನರಾ । ವೋಢೃತಮೋ ಹ್ವಾನಾನಾಂ ಸ್ತೋಮೋ ದೂತೋ ಹುವನ್ನರೌ ನರಾ ಮನುಷ್ಯಾ ನೃತ್ಯಂತಿ ಕರ್ಮಸು ದೂತೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ (ದೂತೋ ದೇವಾನಾಮಸಿ ಮರ್ತ್ಯಾನಾಮಿತ್ಯಪಿ ನಿಗಮೋ ಭವತಿ ।) ವಾವಶಾನೋ ವಷ್ಟೇರ್ವಾ ವಾಶ್ಯತೇರ್ವಾ । ಸಪ್ತ ಸ್ವಸ್ರೂರರುಷೀರ್ವಾವಶಾನ ಇತ್ಯಪಿ ನಿಗಮೋ ಭವತಿ। ವಾರ್ಯ್ಯಂ ವೃಣೋತೇರಥಾಪಿ ವರತಮಮ್ । ತದ್ವಾರ್ಯಂ ವೃಣೀಮಹೇ ವರಿಷ್ಠಂ ಗೋಪಯತ್ಯಮ್ । ತದ್ವಾರ್ಯಂ ವೃಣೀಮಹೇ ವರ್ಷಿಷ್ಠಂ ಗೋಪಾಯಿತವ್ಯಂ ಗೋಪಾಯಿತಾರಃ । ಯೂಯಂ ಸ್ಥ ಯುಷ್ಮಭ್ಯಮಿತಿ ವಾಥ ಇತ್ಯನ್ನನಾಮಾಧ್ಯಾನೀಯಂ ಭವತಿ ಆಮತ್ರೇಭಿಃ ಸಿಞ್ಚತಾ ದ್ಯಮದ್ರ್ಥಃ । ಆಸಿಞ್ಚತಾಮತ್ರೈರ್ಮದನೀಯಮಂಧೋಽಮತ್ರಂ ಪಾತ್ರಮಮಾ ಅಸ್ಮಿನ್ನದಂತ್ಯಮಾ ಪುನರನಿರ್ಮಿತಂ ಭವತಿ ಪಾತ್ರಂ ಪಾನಾತ್ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ ನ ದರ್ಶನಮಂಧನ್ತಮ ಇತ್ಯಭಿಭಾಷಂತೇಽಯಮಪಿತರೋಽನ್ಧ ಏತಸ್ಮಾದೇವ । ಪಶ್ಯದಕ್ಷಣ್ವಾನ್ ನ ವಿಚೇತದನ್ಧ ಇತ್ಯಪಿ ನಿಗಮೋ ಭವತಿ ॥ ೧ ॥



ಸಸ್ನಿವತ್ ||೧||
ಸಸ್ನಿಮವಿಂದಚ್ಚರಣೇ ನದೀನಾಂ । ಸಸ್ನಿಂ ಸಂಸ್ನಾತಂ ಮೇಘಂ ||೧||

ಉದಾಹರಣೆಯ ಋಕ್ಕು—

**ಸಸ್ನಿಮವಿಂದಚ್ಚರಣೇ ನದೀನಾಮಪಾವೃಣೋ ಅಶ್ಮವ್ರಜಾನಾಂ ।**
**ಪ್ರಾಸಾಂ ಗಂಧರ್ವೋ ಅಮೃತಾನಿ ವೋಚದಿಂದ್ರೋ ದಕ್ಷಂ ಪರಿಜಾನಾದಹೀನಾಂ ॥**
**(ಋ. ಸಂ. ೧೦–೧೩೯–೬)**

ಇದರ ಅರ್ಥವು—

ಸಿಡಿಲು, ಗುಡುಗು ಮೊದಲಾದ ಶಬ್ದಗಳನ್ನು ಮಾಡುತ್ತಿರುವ ಮತ್ತು ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಉದಕಗಳ ಮಧ್ಯದಲ್ಲಿ ಮಳೆಯನ್ನು ಹುಯಿದು ಸಮಸ್ತವನ್ನೂ ನೆನೆಸಬಲ್ಲ ಮೇಘವಿರುವುದನ್ನು ಇಂದ್ರನು ಕಂಡುಕೊಂಡನು. ಮತ್ತೆ ಆ ಮೇಘಗಳಲ್ಲಿರುವ ಉದಕಗಳು ಈಚೆಗೆ ಬರುವುದಕ್ಕಾಗಿ ದ್ವಾರಗಳನ್ನು ಬಿಡಿಸಿ ತೆರೆದನು. ಅಮೃತಸದೃಶವಾದ ಈ ವೃಷ್ಟ್ಯುದಕಗಳು ನದಿಗಳಾಗಿ ಪ್ರವಹಿಸುವಂತೆ ಮಾಡುವುದನ್ನು ವಿಶ್ವಾವಸುಗಂಧರ್ವರೂಪದಿಂದಿರುವ ಇಂದ್ರನು ತಿಳಿದಿದ್ದಾನೆ. ಮತ್ತು ಅಂತರಿಕ್ಷವಲ್ಲಿರುವ ಅನೇಕ ಮೇಘಗಳ ಮಧ್ಯದಲ್ಲಿ ಯಾವ ಮೇಘವು ಉದಕಪೂರ್ಣವಾಗಿ ವೃಷ್ಟಿಯನ್ನು ಸುರಿಸಬಲ್ಲದೆಂಬುದನ್ನು ತಿಳಿದಿದ್ದಾನೆ.

**ಸಸ್ನಿಂ** ಎಂದರೆ **ಸಂಸ್ನಾತಂ ಅದ್ಭಿಃ** ನೀರಿನಿಂದ ಆವರಿಸಲ್ಪಟ್ಟ ಮತ್ತು ನೀರಿನಿಂದ ನಿಬಿಡವಾದ ಎಂದರ್ಥವು.

**ಸಸ್ನಿಮವಿಂದಚ್ಚರಣೇ ನದೀನಾಂ । ಸಸ್ನಿಂ ಸಸ್ನಾತಂ ಮೇಘಂ ॥** (ನಿ. ೫–೧) ಉದಕಗಳಿಂದ ಸ್ನಾನಮಾಡಿದಂತಿರುವ- ನೆನೆದಿರುವ ಎಂದು ಸಸ್ನಿಶಬ್ದಕ್ಕೆ ಅರ್ಥವು. ಅಥವಾ ಉದಕಧಾರೆಗಳಿಂದ ಸರ್ವವನ್ನೂ ನೆನೆಯಿಸುವ ಸಾಮರ್ಥ್ಯವಿರುವುದರಿಂದ ಮೇಘಕ್ಕೆ ಸಸ್ನಿ ಎಂದು ಹೆಸರು. ನೆನೆಯಿಸುವ ಸಾಮರ್ಥ್ಯವು ನದಿ ಮೊದಲಾದ ಜಲಾಶಯಗಳಿಗೂ ಇರುವುದು. ಆದರೆ ಇಲ್ಲಿ—**ಪ್ರಕರಣಸಾಮರ್ಥ್ಯಾಚ್ಛಬ್ದೋಽಪ್ಯರ್ಥಾಂತರಂ ಭಜತೇ**—ಸಂದರ್ಭಾನುಸಾರವಾಗಿ ಶಬ್ದಗಳಿಗೆ ಅರ್ಥವನ್ನು ಅನೇಕವಿಧವಾಗಿ ಹೇಳಬಹುದು. ಆದ್ದರಿಂದ ಇಲ್ಲಿ ಸಸ್ನಿಶಬ್ದಕ್ಕೆ ಮೇಘವೆಂದೇ ಅರ್ಥಮಾಡಿದ್ದಾರೆ.

**ಸಸ್ನಿಂ ಅಂವಿದತ್ ಚರಣೇ ನದೀನಾಂ**—ಇಲ್ಲಿ ನದ–ಶಬ್ದೇ ಎಂಬ ಧಾತುವಿನಿಂದ ನದೀನಾಂ ಎಂಬ ಶಬ್ದವು ನಿಷ್ಪನ್ನವಾಗಿದೆಯೆಂದು ಭಾಷ್ಯಕಾರರು ಹೇಳಿದ್ದಾರೆ. ಅಂತರಿಕ್ಷದಲ್ಲಿ ಮೇಘರೂಪದಿಂದಿರುವ ಉದಕಗಳು ಸಿಡಿಲು, ಗುಡುಗು ಎಂಬ ಶಬ್ದಗಳನ್ನು ಮಾಡುವುದರಿಂದ ಶಬ್ದಮಾಡುವ ಉದಕಗಳು ಎಂದು ಇಲ್ಲಿ ಹೇಳಿದೆ. **ಸಸ್ನಿಂ** ಎಂದರೆ ನೆನೆಯಿಸುವ ಸಾಮರ್ಥ್ಯವುಳ್ಳ ಎಂದರೆ ನೀರಿನಿಂದ ಪೂರ್ಣವಾದ ಎಂದರ್ಥವು. ಅಂತರಿಕ್ಷದಲ್ಲಿ ಅನೇಕ ಮೇಘ ಸಮೂಹಗಳಿದ್ದರೂ ಅವೆಲ್ಲವೂ ಮಳೆಯನ್ನು ಹುಯ್ಯಲು ಸಮರ್ಥವಾಗಿರುವುದಿಲ್ಲ. ಅವುಗಳಲ್ಲಿ ಕೆಲವು ಮಾತ್ರ ಉದಕಪೂರ್ಣವಾಗಿ (ಕಪ್ಪಗೆ ಕಾಣುತ್ತಾ) ವೃಷ್ಟಿವರ್ಷಣಸಾಮರ್ಥ್ಯವನ್ನು ಹೊಂದಿರುವವು. ಅಂತಹ ಸಾಮರ್ಥ್ಯವನ್ನು ಪಡೆದಿರುವ ಮೇಘವು ಯಾವುದು ಎಂಬುದನ್ನು ಇಂದ್ರನು ತಿಳಿದಿರುವನು ಎಂದು ವಾಕ್ಯದ ಮುಖ್ಯಾಭಿಪ್ರಾಯವು.

**ಅಪಾವೃಣೋತ್ ದುರೋ ಅಶ್ಮವ್ರಜಾನಾಂ**—ಇಲ್ಲಿ ಅಶ್ಮಶಬ್ದವೂ, ವ್ರಜಶಬ್ದವೂ ಮೇಘನಾಮಗಳಲ್ಲಿ ಪಠಿತವಾಗಿವೆ, ಆದ್ದರಿಂದ ಅಶ್ಮಶಬ್ದಕ್ಕೆ ಮೇಘವೆಂದೂ ವ್ರಜಶಬ್ದಕ್ಕೆ ಸಮೂಹವೆಂದು ಅರ್ಥಮಾಡಬಹುದು. ಮೇಘಸಮೂಹಗಳು ಎಂದರ್ಥವು. ಮೇಘಗಳಲ್ಲಿರುವ ಉದಕಗಳು ವೃಷ್ಟಿರೂಪವಾಗಿ ಯಾವಾಗಲೂ ಬೀಳುವುದಿಲ್ಲ. ಬಹುಕಾಲ ಮೇಘ

ಗಳಲ್ಲಿಯೇ ಇರಬಹುದು. ಆದ್ದರಿಂದ ಇಂದ್ರನು ಅವುಗಳಲ್ಲಿರುವ ಉದಕಗಳು ಅಧೋಮುಖವಾಗಿ (ಕೆಳಕ್ಕೆ) ಭೂಮಿಯ ಮೇಲೆ ಬೀಳಲು ಅನುಕೂಲವಾಗುವಂತೆ ಮೇಘಗಳ ಕೆಳಭಾಗದಲ್ಲಿ ಕಂಡಿಯನ್ನು ಮಾಡಿ ಅದನ್ನು ವಿಶಾಲವಾಗಿ ತೆರೆದನೆಂದು ಇಲ್ಲಿ ಹೇಳಿದೆ.

**ಪ್ರ ಅಸಾಂ ಗಂಧರ್ವೋ ಅಮೃತಾನಿವೋಚತ್**—ಇಲ್ಲಿ ಗಂಧರ್ವಶಬ್ದಕ್ಕೆ ಇಂದ್ರ ಅಥವಾ ಗಂಧರ್ವರೂಪದಲ್ಲಿರುವ ಇಂದ್ರನೆಂದು ಅರ್ಥಮಾಡಿದೆ. **ಇಂದ್ರೋ ಗಂಧರ್ವಃ ತಸ್ಯ ಮರುತೋಽಪ್ಸರಸಃ**—ಗಂಧರ್ವರು ಯಾವಾಗಲೂ ಅಪ್ಸರಸ್ತ್ರೀಯರಿಂದ ಸಹಿತರಾಗಿರುವರು ಎಂದು ಪ್ರತೀತಿಯಿರುವುದಷ್ಟೆ. ಇಲ್ಲಿ ಇಂದ್ರನು ಗಂಧರ್ವನೆಂದರೆ ಮರುದ್ದೇವತೆಗಳೇ ಅವನೊಡನಿರುವುದರಿಂದ ಅವರೇ ಅಪ್ಸರಸ್ಸುಗಳು ಎಂದು ಭಾವಿಸಿ ಇಂದ್ರನನ್ನು ಗಂಧರ್ವ ಶಬ್ದದಿಂದ ವಿವರಿಸಲಾಗಿದೆ. ಅಮೃತಶಬ್ದಕ್ಕೆ ಉದಕಗಳು' ಸಿಹಿಯಾದ ಅಮೃತಸದೃಶವಾದ ಉದಕಗಳು ಎಂದರ್ಥವು. ಅಮೃತಶಬ್ದವೂ ಉದಕನಾಮಗಳಲ್ಲಿ ಪಠಿತವಾಗಿದೆ. **ಪ್ರ ವೋಚತ್** ಇಂದ್ರನು ಹೇಳಿದನು ಎಂದರೆ—**ಆಸಾಂ ಪ್ರಜಾನಾಂ ಜೀವಥ್ವನೇಭಿರುದಕೈರಸ್ಮದ್ದತ್ತೈರಿತಿ** । ಎಲೈ ಪ್ರಜೆಗಳೇ, ನಮ್ಮ ('ಇಂದ್ರ) ಅನುಗ್ರಹದಿಂದ ಲಬ್ಧವಾದ ಈ ಉದಕಗಳಿಂದ ನೀವು ಜೀವಿಸಿರಿ ಎಂದು ಇಂದ್ರನು ಹೇಳಿದನು ಎಂದು ಪ್ರ **ವೋಚತ್** ಎಂಬ ಶಬ್ದಗಳಿಗೆ ಅರ್ಥವು.

**ಇಂದ್ರೋ ದಕ್ಷಂ ಪರಿ ಜಾನಾದಹೀನಾಂ**—ಅಂತರಿಕ್ಷದಲ್ಲಿರುವ ಮೇಘಗಳಲ್ಲಿ ಕೆಲವು ಮಳೆಯನ್ನು ಸುರಿಸಲಾರವು, ಕೆಲವು ಉದಕಪೂರ್ಣವಾಗಿ ವೃಷ್ಟಿಯನ್ನು ಸುರಿಸಬಲ್ಲವು. ಆದ್ದರಿಂದ ಅನೇಕ ಮೇಘಗಳ ಮಧ್ಯದಲ್ಲಿ ಯಾವ ಮೇಘವು ವೃಷ್ಟಿಯನ್ನು ಸುರಿಸಬಲ್ಲುದು ಎಂಬುದನ್ನು ಇಂದ್ರನು ತಿಳಿಯಬಲ್ಲನು ಎಂದು ಈ ವಾಕ್ಯದ ಅಭಿಪ್ರಾಯವು. ದಕ್ಷ ಎಂಬ ಶಬ್ದಕ್ಕೆ ವೃಷ್ಟಿವರ್ಷಣಸಾಮರ್ಥ್ಯವುಳ್ಳ ಮೇಘವು ಎಂದರ್ಥವು.

ವಾಹಿಷ್ಠಃ ॥೧॥　ದೂತಃ ॥೨॥

ವಾಹಿಷ್ಠೋ ವಾಂ ಹವಾನಾಂ ಸ್ತೋಮೋ ದೂತೋ ಹುವನ್ನರಾ ।
ವೋಢೃತಮೋ ಹ್ವಾನಾನಾಂ ಸ್ತೋಮೋ ದೂತೋ ಹುವನ್ನತೌ ।
ನರಾ ಮನುಷ್ಯಾ ನೃತ್ಯಂತಿ ಕರ್ಮಸು ॥ ದೂತೋ ಜವತೇರ್ವಾ
ದ್ರವತೇರ್ವಾ ವಾರಯತೇರ್ವಾ । (ದೂತೋ ದೇವಾನಾಮಸಿ
ಮರ್ತ್ಯಾನಾಮ್ ಇತ್ಯಪಿ ನಿಗಮೋ ಭವತಿ) ॥೨॥

**ವಾಹಿಷ್ಠಃ**—ವಹಿಸತಕ್ಕವನು, **ದೂತಃ** ಎಂದರೂ ಅದೇ ಅರ್ಥವು. **ನರಾ ಮನುಷ್ಯಾ ನೃತ್ಯಂತಿ ಕರ್ಮಸು** ನರಾ: ಎಂದರೆ ಮನುಷ್ಯರು. ಏಕೆಂದರೆ ಇವರು ಕೆಲಸಮಾಡುವಾಗ **ನೃತ್ಯಂತಿ**— ಚಟುವಟಿಕೆಯಿಂದ ಕೆಲಸ ಮಾಡುತ್ತಾರೆ, ಕುಣಿದಾಡುವಂತೆ ಕಾಣುತ್ತಾರೆ. ಆದ್ದರಿಂದ ನರ ಎಂದರೆ ಮನುಷ್ಯರು.

ಉದಾಹರಣೆಯ ಋಕ್ಕು—

**ವಾಹಿಷ್ಠೋ ವಾಂ ಹವಾನಾಂ ಸ್ತೋಮೋ ದೂತೋ ಹುವನ್ನರಾ ।**
**ಯುವಾಭ್ಯಾಂ ಭೂತ್ವಶ್ವಿನಾ ॥**

(ಋ. ಸಂ. ೮-೨೬-೧೬)

ಇದರ ಅರ್ಥವು—

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಸ್ತುತಿಗಳ ಮಧ್ಯದಲ್ಲೆಲ್ಲಾ ನನ್ನ ಈ ಸ್ತೋಮವೇ ನಿಮ್ಮನ್ನು ಶ್ರೇಷ್ಠವಾಗಿ ವ್ಯಾಪಿಸಿ ನಿಮ್ಮನ್ನು. ನಿಮ್ಮದೂತನಂತೆ ಕರೆಯಲಿ. ನಿಮ್ಮಿಬ್ಬರಿಗೂ ಪ್ರೀತಿಕಾರಕವಾಗಿ ಆಗಲಿ.

**ವಾಹಿಷ್ಠಃ** ಎಂಬ ಶಬ್ದದ ಅರ್ಥದ ವಿಷಯದಲ್ಲಿ ಸಾಯಣಭಾಷ್ಯಕ್ಕೂ ಯಾಸ್ಕರ ನಿರ್ವಚನಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಭಾಷ್ಯಕಾರರು–**ವಾಹಿಷ್ಠಃ ಯುವಾಮತಿಶಯೇನ ವ್ಯಾಪ್ನುವನ್ ।** ನಿಮ್ಮನ್ನು (ಈ ಸ್ತೋತ್ರವು) ಅತಿಶಯವಾಗಿ ವ್ಯಾಪಿಸಿರುವ ಎಂದರ್ಥಮಾಡಿದಾರೆ. ಆದರೆ ಯಾಸ್ಕರು **ವಾಹಿಷ್ಠಃ** ಎಂದರೆ (ದೂತನಂತೆ ವಹಿಸುವ ಸ್ವಭಾವವುಳ್ಳ ನನ್ನ ಪ್ರಾರ್ಥನೆಯನ್ನು ನಿಮ್ಮ ಬಳಿಗೆ ವಹಿಸುವ ಸ್ತೋತ್ರವೆಂದು ಅರ್ಥಮಾಡಿದಾರೆ.

ವಾವಶಾನಃ ॥೪॥

ವಾವಶಾನೋ ವಷ್ಟೇರ್ವಾ ವಾಶ್ಯತೇರ್ವಾ । " ಸಪ್ತ ಸ್ವಸೄರಾರುಷೀ-
ರ್ವಾವಶಾನಃ " ಇತ್ಯಪಿ ನಿಗಮೋ ಭವತಿ ॥೩॥

**ವಾವಶಾನಃ** ಎಂದರೆ ಅಪೇಕ್ಷಿಸು ಎಂಬರ್ಥವುಳ್ಳ ವಷ್ಟಿಧಾತುವಿನಿಂದಾಗಲಿ, ಶಬ್ದವನ್ನುಮಾಡು ಎಂಬರ್ಥವುಳ್ಳ ವಾಶ್ಯತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು.

ಉದಾಹರಣೆಯ ಋಕ್ಕು—

**ಸಪ್ತಸ್ವಸೄರರುಷೀರ್ವಾವಶಾನೋ ವಿದ್ವಾನ್ಮಧ್ವ ಉಜ್ಜಭಾರಾ ದೃಶೇಕಂ ।**
**ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ವವ್ರಿಮವಿದತ್ಪೂಷಣಸ್ಯ ॥**

(ಋ. ಸಂ. ೧೦-೫-೫)

ಇದರ ಅರ್ಥವು—

ಸ್ತುತಿಕರ್ತರಿಂದ ಪ್ರಶಂಸಿತನೂ, ಸಕಲವನ್ನೂ ತಿಳಿದವನೂ ಆದ ಅಗ್ನಿಯು ಆಕರ್ಷಕಗಳಾದವೂ ಸಪ್ತಸಂಖ್ಯಾಕಗಳೂ ಸ್ವಯಂಪ್ರಸರಿಸುವವೂ ಆದ ಜ್ವಾಲೆಗಳನ್ನು ಎಲ್ಲರಿಗೂ ಸುಖವಾಗಿ ಕಾಣಿಸುವಂತೆ ಯಜ್ಞಶಾಲೆಯಿಂದ ಮೇಲೆತ್ತಿ ಹರಡಿದ್ದಾನೆ. ಪೂರ್ವೋತ್ಪನ್ನನಾದ ಅಗ್ನಿಯು ದ್ಯಾವಾಪೃಥಿವಿಗಳ ಮಧ್ಯಭಾಗವಾದ ಅಂತರಿಕ್ಷದಲ್ಲಿ ಸ್ಥಿತನಾಗಿ ತನ್ನ ಜ್ವಾಲೆಗಳನ್ನು ನಿಯಮಿಸಿದ್ದಾನೆ. ಯಜಮಾನರನ್ನು ಅನುಗ್ರಹಿಸಲಪೇಕ್ಷಿಸಿ ಪಾರ್ಥಿವಲೋಕಕ್ಕೆ ಪೃಶ್ನಿವರ್ಣದ (ನಾನಾವರ್ಣದ) ರೂಪವನ್ನು ಕೊಟ್ಟಿದ್ದಾನೆ.

ವಾರ್ಯಂ ॥ ೫ ॥

ವಾರ್ಯಂ ವೃಣೋತೇರಥಾಪಿ ವರತಮಮ್ । 'ತದ್ವಾರ್ಯಂ
ವೃಣೀಮಹೇ ವರಿಷ್ಠಂ ಗೋಪಯತ್ಯಮ್' । ತದ್ವಾರ್ಯಂ
ವೃಣೀಮಹೇ ವರಿಷ್ಠಂ ಗೋಪಾಯಿತವ್ಯಂ ಗೋಪಾಯಿತಾರೋ
ಯೂಯಂ ಸ್ಥ ಯಸ್ಮಭ್ಯಮಿತಿ ವಾ ॥ ೪ ॥

**ವಾರ್ಯಂ** ಎಂಬ ಶಬ್ದವು ಅಪೇಕ್ಷಿಸು ಎಂಬರ್ಥವುಳ್ಳ ವೃಣೋತಿ ಧಾತುವಿನಿಂದ ನಿಷ್ಪನ್ನವಾಗಿದೆ. ಕೆಲವು ಸಂದರ್ಭ ಗಳಲ್ಲಿ ಈ ಶಬ್ದಕ್ಕೆ **ವರತಮಂ** ಅತ್ಯಂತ ಶ್ರೇಷ್ಠವಾದ ಎಂದೂ ಅರ್ಥವಾಗಬಹುದು

ಉದಾಹರಣೆಯ ಋಕ್ಕು

**ತದ್ವಾರ್ಯಂ ವೃಣೀಮಹೇ ವರಿಷ್ಠಂ ಗೋಪಯತ್ಯಂ ।**
**ಮಿತ್ರೋ ಯತ್ಪಾಂತಿ ವರುಣೋ ಯದರ್ಯಮಾ ॥**

(ಋ. ಸಂ. ೮–೨೫–೧೩)

ಇದರ ಅರ್ಥವು—

ಯಾವ ಧನವನ್ನು ಮಿತ್ರನೂ, ವರುಣನೂ; ಅರ್ಯಮನೂ ರಕ್ಷಿಸುವರೋ, ಅಂತಹ ಅತ್ಯಂತ ಶ್ರೇಷ್ಠವಾದುದೂ, ಸರ್ವರಿಗೆ ರಕ್ಷಕವಾದುದೂ ಸರ್ವರಿಂದಲೂ ಅಪೇಕ್ಷಿತವಾದುದೂ ಆದ ಧನವನ್ನು ನಾವು ಹೊಂದುವಂತಾಗಲಿ.

**ವಾರ್ಯಂ** ಎಂಬ ಶಬ್ದವು ಆರಿಸಿಕೊಳ್ಳು ಎಂಬರ್ಥವುಳ್ಳ **ವೃ (ವೃಣೋತಿ)** ಧಾತುವಿನಿಂದ ನಿಷ್ಪನ್ನವಾಗಿದೆ. **ವಾರ್ಯಂ** ಎಂದರೆ ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಅಥವಾ ಅತ್ಯಂತ ಶ್ರೇಷ್ಠವಾದ ಎಂದರ್ಥವು. ಪ್ರಕೃತ ಋಕ್ಕಿನಲ್ಲಿ— ಎಲೈ ಮಿತ್ರಾವರುಣರೇ, ನಿಮ್ಮಲ್ಲಿ ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಅನೇಕ ವಸ್ತುಗಳಿವೆ. ಅವುಗಳಲ್ಲಿ ನಿಮ್ಮಿಂದ ರಕ್ಷಣೆ ಯನ್ನು ನಾವು ಆರಿಸಿಕೊಳ್ಳುತ್ತೇವೆ ಅಥವಾ ಅಪೇಕ್ಷಿಸುತ್ತೇವೆ. ಏಕೆಂದರೆ ರಕ್ಷಣೆಯು ನಿಮ್ಮಲ್ಲಿ ಮಾತ್ರ ಇದೆ. ಅದು ನಿಮ್ಮಿಂದ ಮಾತ್ರ ಸಾಧ್ಯವು. ಏಕೆಂದರೆ ನೀವು ರಕ್ಷಕರಾಗುತ್ತೀರಿ. ಆದ್ದರಿಂದ ನಿಮ್ಮಿಂದ ಮಾತ್ರ ಸಾಧ್ಯವಾದ ರಕ್ಷಣೆಯನ್ನು ಅಥವಾ ಶ್ರೇಷ್ಠವಾದ ರಕ್ಷಣೆಯನ್ನು ನಾವು ಅಪೇಕ್ಷಿಸುತ್ತೇವೆ ಎಂರ್ಥವು ಅಡಕ ವಾಗಿರುವುದು.

ಅಂಧಃ ॥೬॥

ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । 'ಆಮತ್ರೇಭಿಃ ಸಿಂಚತಾ ಮದ್ಯಮಂಧಃ' । ಆಸ್ಮಿಞ್ಞಾಮತ್ರೈರ್ಮದನೀಯಮನ್ನಃ ॥ ಅಮತ್ರಂ ಪಾತ್ರಮಮಾ ಅಸ್ಮಿನ್ನದನ್ತ್ಯಮಾ ಪುನರನಿರ್ಮಿತಂ ಭವತಿ ಪಾತ್ರಂ ಪಾನಾತ್ । ತಮೋಽಪ್ಯನ್ಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ । ನ ದರ್ಶನಮನ್ಧನ್ತಮ ಇತ್ಯಭಿಭಾಷಂತೇ । ಅಯಮಪೀ- ತರೋಽನ್ಧ ಏತಸ್ಮಾದೇವ । 'ಪಶ್ಯದಕ್ಷಣ್ವಾನ್ನ ವಿಚೇತದನ್ಧಃ' ಇತ್ಯಪಿ ನಿಗಮೋ ಭವತಿ ॥೫ ॥ ೧ ॥

**ಅಧ್ವರ್ಯವೋ ಭರತೇಂದ್ರಾಯ ಸೋಮಮಾಮತ್ರೇಭಿಃ ಸಿಂಚತಾ ಮದ್ಯಮಂಧಃ ।**
**ಕಾಮೀ ಹಿ ವೀರಃ ಸದಮಸ್ಯ ಪೀತಿಂ ಜುಹೋತ ವೃಷ್ಣೇ ತದಿದೇಷ ವಷ್ಟಿ ॥**

(ಋ. ಸಂ. ೨–೧೪–೧)

ಇದರ ಅರ್ಥವು—

ಎಲೈ ಅಧ್ವರ್ಯುಗಳೇ, ಇಂದ್ರನನ್ನುದ್ದೇಶಿಸಿ ಸೋಮರಸವನ್ನು ತೆಗೆದುಕೊಂಡು ಬನ್ನಿ. ಚಮಸಪಾತ್ರೆಗಳಿಂದ ಮದಕ ರವಾದ ಸೋಮರೂಪವಾದ ಅನ್ನವನ್ನು ಅಗ್ನಿಯ ಸುತ್ತಲೂ ಪ್ರೋಕ್ಷಣರೂಪದಲ್ಲರ್ಪಿಸಿ ಪರಾಕ್ರಮಿಯಾದ ಇಂದ್ರನು ಈ

ಸೋಮರಸವ ಪಾನವನ್ನು ಸರ್ವದಾ ಇಚ್ಛಿಸುತ್ತಾನೆ. ಆದುದರಿಂದ ಇಷ್ಟಾರ್ಥಪ್ರದನಾದ ಇಂದ್ರನಿಗೆ ಈ ಸೋಮವನ್ನರ್ಪಿಸಿ ಹೋಮಮಾಡಿ.

ಅಂಧಃ ಎಂಬ ಶಬ್ದಕ್ಕೆ ಅನ್ನವೆಂದು ಹೆಸರು. **ಅಮತ್ರೇಭಿಃ ಸಿಂಚತಾಮತ್ರಮಂಧಃ** ಎಂಬುದು ಶ್ರುತಿವಾಕ್ಯವು ಅಮತ್ರವೆಂದರೆ ಪಾತ್ರೆಯು ಪಾತ್ರವೆಂದರೆ ಪಾನಮಾಡುವುದಕ್ಕೆ ಉಪಯೋಗಿಸುವ ಪಂಚಪಾತ್ರೆ–**ಅಂಧ**ವೆಂದರೆ ಕತ್ತಲೆ ಯೆಂದೂ ಅರ್ಥವು. ಏಕೆಂದರೆ ಈ ಕತ್ತಲೆಯಲ್ಲಿ ಏನನ್ನು ನೋಡಲೂ ಆಗುವುದಿಲ್ಲ ಮತ್ತು ಯಾವುದನ್ನೂ ನೋಡಿ ತಿಳಿಯಲಾ ಗುವುದಿಲ್ಲ. ಈ ವಿಷಯದಲ್ಲಿ ಈ ಕೆಳಗೆ ಕೊಟ್ಟಿರುವುದು ಉದಾಹರಣೆಯ ಋಕ್ಕು—

**ಅಂಧಃ**—ಅಂಧಃ ಎಂಬ ಶಬ್ದವು ಅನ್ನ ನಾಮಗಳಲ್ಲಿ ಪಠಿತವಾಗಿದೆ. (ನಿ. ೩–೯) ಇದಲ್ಲದೆ ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ—

> **ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ । ನ ದರ್ಶನಮಂಧನ್ತಮ ಇತ್ಯಭಿಭಾಷಂತೇ । ಅಯಮಪೀತರೋಽನ್ಧ ಏತಸ್ಮಾ-ದೇವ । ಪಶ್ಯದಕ್ಷಣ್ವಾನ್ನ ವಿಜೇತಮಂಧಃ ಇತ್ಯಪಿ ನಿಗಮೋ ಭವತಿ ॥**
>
> (ನಿ. ೫–೧)

ಎಂದರೆ ಅಂಧಃ ಶಬ್ದಕ್ಕೆ ಅನ್ನವೆಂದು ಹೆಸರು. ಏತಕ್ಕೆಂದರೆ ಅನ್ನವು ಎಲ್ಲರಿಗೂ ಬೇಕಾಗಿರುವುದರಿಂದ ಅದು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವುದು (ಅಪೇಕ್ಷಿಸಲ್ಪಡುವುದು) ಆದುದರಿಂದ **ಅಂಧಃ** ಎಂದರೆ ಅನ್ನವು. **ಅಂಧಃ** ಎಂದರೆ ತಮಸ್ಸಿಗೂ (ಕತ್ತಲೆಗೂ) ಹೆಸರು. ಏತಕ್ಕೆಂದರೆ ಕತ್ತಲೆಯಲ್ಲಿ ಏನೂ ಕಾಣಿಸದಿರುವುದರಿಂದ ಯಾವುದನ್ನೂ ಮಾಡಲಾಗುವುದಿಲ್ಲ. ಲೋಕವ್ಯವಹಾರದಲ್ಲಿಯೂ ಕೂಡ ಜನರು ಕಣ್ಣಿಗೆ ಕಾಣಿಸದಿರುವಂತೆ ಕತ್ತಲೆ ಕವಿದಿರುವಾಗ ಅಂಧಂತಮವೆಂದು ಹೇಳು ವರು. ಈ ವಿಷಯದಲ್ಲಿ **ಪಶ್ಯ ದಕ್ಷಣ್ವಾನ್ನ ವಿಚೇತದಂಧಿಃ** (ಋ. ಸಂ. ೧–೧೬೪–೧೬) ಎಂದು ವೇದವಾಕ್ಯದ ಉದಾ ಹರಣೆಯೂ ಇರುವುದು ಎಂದು ಹೇಳಿದ್ದಾರೆ.

ಆ **ಅಮತ್ರೇಭಿಃ ಸಿಂಚತ ಮಧ್ಯಂ—ಅಂಧಃ—ಹೃತ್ವಾಮತ್ರೇಭಿಃ। ಅಮಾ ಸಹಾದಂತ್ಯತ್ರ ಹೋತ್ರಾದಯ ಇತ್ಯಮತ್ರಾಣಿ ಚಮಸಾಃ। ತೈರ್ಮದ್ಯಂ ಮದಕರಮಂಧಃ ಸೋಮಲಕ್ಷಣಮನ್ನಮಾಸಿಂಚತ । ಆಪಾ॰ ಪ್ರಕ್ಷಿ-ಪತ** । ಹಿಂದಿನ ವಾಕ್ಯದಲ್ಲಿ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಉತ್ತರವೇದಿಯ ಬಳಿಗೆ ತಂದಿರಬೇಕೆಂದ ಅಧ್ವರ್ಯುಗಳಿಗೆ ನಿರ್ದೇಶಿಸಲಾಗಿದೆಯಷ್ಟೆ. ಆರೀತಿ ತಂದ ಸೋಮವನ್ನು ಅಥವಾ ಸೋಮರೂಪದ ಅನ್ನವನ್ನು ಚಮಸ (ಮರದ ಸೌಟು) ಗಳಿಂದ ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಿರಿ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು. ಅಮತ್ರಶಬ್ದಕ್ಕೆ ಭಾಷ್ಯಕಾರರು—**ಅಮಾ ಸಹಾದಂತ್ಯತ್ರ ಹೋತ್ರಾದಯ ಇತ್ಯಮತ್ರಾಣಿ ಚಮಸಾಃ** । ಎಂದರೆ ಯಜ್ಞ ದಲ್ಲಿ ಸೋಮಪಾನಮಾಡುವಾಗ ಹೋತೃ ಮೊದಲಾದ ಋತ್ವಿಜರು ಒಟ್ಟಿಗೆ ಎಂದರೆ ಎಲ್ಲರೂ ಒಂದೇ ಪಾತ್ರೆಯಿಂದ ಭಕ್ಷಿಸು ವುದರಿಂದ ಅಥವಾ ಪಾನಮಾಡುವುದರಿಂದ ಅಂತಹ ಪಾತ್ರೆಗೆ ಚಮಸವೆಂದು ಹೆಸರು ಎಂದು ಹೇಳಿದ್ದಾರೆ. ಚಮಸವೆಂಬುದು ಮರದಿಂದ ಮಾಡಲ್ಪಟ್ಟು ಹಿಡಿಯಿಂದ ಕೂಡಿ ಸೌಟಿನ ಆಕಾರದಲ್ಲಿರುವುದು. ಈ ಚಮಸದಿಂದಲೇ ಎಲ್ಲಾ ಋತ್ವಿಜರೂ ಸೋಮಪಾನ ಮಾಡುವರು. ಪ್ರತಿಯೊಬ್ಬರೂ ಬೇರೆಬೇರೆ ಪಾತ್ರೆಗಳನ್ನು ಉಪಯೋಗಿಸುವುದಿಲ್ಲ. ಎಲ್ಲರಿಗೂ ಒಂದೇ ಪಾತ್ರೆಯು. ಯಾಸ್ಕರು **ಅಮತ್ರೇಭಿಃ** ಎಂಬ ಶಬ್ದಕ್ಕೆ ಇದೇ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು—

**ಅಮತ್ರೇಭಿಃ ಸಿಂಚತಾ ಮದ್ಯಮಂಧಃ । ಆಸಿಂಚತಾಮತ್ರೈರ್ಮದನೀಯಮಂಧಃ । ಅಮತ್ರ ಪಾತ್ರಮಮಾ ಅಸ್ಮಿನ್ನದಂತ್ಯಮಾ ಪುನರನಿರ್ಮಿತಂ ಭವತಿ ಪಾತ್ರಂ ಪಾನಾತ್ ।**

(ನಿ: ೧–೫)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ, ಅಮತ್ರವೆಂದರೆ ಪಾತ್ರೆಯು. ಏಕೆಂದರೆ, ಇದರಿಂದ (ಅನ್ನ ಅಥವಾ ಸೋಮವನ್ನು) ಸ್ವಲ್ಪಸ್ವಲ್ಪವಾಗಿ ತೆಗೆದುಕೊಂಡು ಭಕ್ಷಿಸುವುದರಿಂದ ಇಂತಹ ಸೌಟನಂತಿರುವ ಪಾತ್ರೆಗೆ ಅಮತ್ರವೆಂದು ಹೆಸರು ಅಮಾ ಎಂದರೆ ಪರಿಮಾಣರಹಿತವಾದದ್ದು. ಒಂದು ದೊಡ್ಡ ಪಾತ್ರೆಯಲ್ಲಿ ಸೋಮರಸವನ್ನು ಅಧಿಕವಾಗಿ (ಪರಿಮಾಣ ಅಥವಾ ಅಳತೆ ಮುಂತಾದದ್ದಿಲ್ಲದೆ) ತುಂಬಿರುವಾಗ ಅದನ್ನು ಕುಡಿಯಬೇಕಾದರೆ ಅಮತ್ರ ಅಥವಾ ಚಮಸವೆಂಬ ಮರದ ಸೌಟನಿಂದ ಸ್ವಲ್ಪಸ್ವಲ್ಪವಾಗಿ ತುಂಬಿಕೊಂಡು ಪಾನಮಾಡುವರು. (Like drinking tea or coffee by means of spoons) ಇಂತಹ ಪಾತ್ರೆಗೆ ಅಮತ್ರ ಅಥವಾ ಚಮಸವೆಂದು ಹೆಸರು. ಇಂತಹ ಚಮಸಗಳಿಂದ ಮದಕರವಾದ ಎಂದರೆ ಹರ್ಷವನ್ನುಂಟುಮಾಡುವ ಸೋಮರೂಪವಾದ ಅನ್ನವನ್ನು ತುಂಬಿಕೊಂಡು (ಇಂದ್ರನನ್ನುದ್ದೇಶಿಸಿ ಅಗ್ನಿಯಲ್ಲಿ) ಹಾಕಿರಿ ಎಂದು ವಾಕ್ಯಾಭಿಪ್ರಾಯವು. ಇಂದ್ರನು ಪ್ರತ್ಯಕ್ಷದೇವತೆಯಲ್ಲವಾದ್ದರಿಂದ ಅವನಿಗೆ ಸಮರ್ಪಿಸುವ ಹವಿರಾದಿಗಳೆಲ್ಲವೂ ಅವನನ್ನುದ್ದೇಶಿಸಿ ಮಂತ್ರಪೂರ್ವಕವಾಗಿ ಅಗ್ನಿಯಲ್ಲೇ ಹೋಮಮಾಡಬೇಕಾಗಿರುವುದರಿಂದ **ಆ ಸಿಂಚತ** ಎಂದರೆ ವಷಟ್ಕಾರ ಪೂರ್ವಕವಾಗಿ ಅಗ್ನಿಯಲ್ಲೇ ಹೋಮಮಾಡಿ ಎಂಬ ಅರ್ಥವು ಬೋಧ್ಯವಾಗುವುದು. ಇದಲ್ಲದೇ ಈ ಋಕ್ಕಿನ ಉತ್ತರಾರ್ಧದಲ್ಲಿ **ಜುಹೋತ**—ಅಗ್ನಿಯಲ್ಲಿ ಹೋಮಮಾಡಿ ಎಂಬ ಶಬ್ದ ಪ್ರಯೋಗವೇ ಇರುವುದು. ಈ ವಾಕ್ಯದಲ್ಲಿ **ಮದ್ಯಂ ಅಂಧಃ** ಎಂಬ ಎರಡು ಶಬ್ದಗಳೂ ಇರುವುದರಿಂದ ಮದಕರವಾದ ಸೋಮರಸರೂಪದ ಹವಿಸ್ಸೆಂದಾಗಲಿ (ಅನ್ನ) ಅಥವಾ ಮದಕರವಾದ ಸೋಮರಸ ಮತ್ತು ಹವೀರೂಪವಾದ ಅನ್ನ ಎಂಬ ಎರಡು ವಿಧವಾದ ದ್ರವ್ಯಗಳು ಎಂದಾಗಲಿ ಅರ್ಥವಾಗಬಹುದು. ಆದರೆ ಈ ಸೂಕ್ತದ ಎಲ್ಲಾ ಋಕ್ಕುಗಳಲ್ಲಿಯೂ ಇಂದ್ರನ ಪಾನಾರ್ಥವಾಗಿ ಸೋಮರಸದ ವಿಷಯ ಮಾತ್ರವೇ ಪ್ರಸ್ತಾಪಿಸಲ್ಪಟ್ಟಿರುವುದರಿಂದ ಮದ್ಯಮಂಧಃ ಎಂಬ ಶಬ್ದಗಳಿಗೆ ಸೋಮರೂಪದಲ್ಲಿರುವ ಹವಿಸ್ಸನ್ನು ಎಂದರೆ ಸೋಮವನ್ನು ಎಂದರ್ಥಮಾಡುವುದೇ ಸಮಂಜಸವಾಗಿರುವುದು.

**ಕಾಮೀ ಹಿ ವೀರಃ ಸದಂ ಅಸ್ಯ ಪೀತಿಂ—ವೀರೇ ಸ ಇಂದ್ರೋಽಸ್ಯ ಸೋಮಸ್ಯ ಪೀತಿಂ ಪಾನಂ ಪ್ರತಿ ಸದಂ ಸದೈವ ಕಾಮೀ ಹಿ ಕಾಮಯಮಾನೋ ಹಿ ।** ಪರಾಕ್ರಮಿಯಾದ ಇಂದ್ರನು ಸೋಮಪಾನವನ್ನು ಅಪೇಕ್ಷಿಸುವವನಲ್ಲವೇ ಎಂದು ಮುಖ್ಯಾಭಿಪ್ರಾಯವು. ಎಲ್ಲಾ ದೇವತೆಗಳಿಗಿಂತಲೂ ಇಂದ್ರನಿಗೆ ಸೋಮಪಾನದಲ್ಲಿ ಆಸಕ್ತಿಯು ಹೆಚ್ಚು. ಆದುದರಿಂದ ಎಲ್ಲಾ ಋಷಿಗಳು ತಾವು ಮಾಡುವ ಯಜ್ಞಗಳಲ್ಲಿ ಇಂದ್ರನು ಬಂದು ತಾವು ಅರ್ಪಿಸುವ ಸೋಮರಸವನ್ನು ಪಾನ ಮಾಡಬೇಕೆಂದು ಪ್ರಾರ್ಥಿಸಿದೆ.

**ಜುಹೋತ ವೃಷ್ಣೇ ತತ್ ಇತ್ ಏಷಃ ವೃಷ್ಟಿ—ತಸ್ಮಾದ್ವೃಷ್ಣೇ ವರ್ಷಿತ್ರ ಇಂದ್ರಾಯ ಸೋಮಂ ಜುಹೋತ । ಏಷ ಇಂದ್ರಸ್ತದಿತ್ ತದೇವ ಸೋಮದ್ರವ್ಯಂ ವಷ್ಟಿ ಕಾಮಯತೇ ।** ಆದುದರಿಂದ ವೃಷ್ಟಿಪ್ರದನಾದ ಅಥವಾ ಕಾಮಾರ್ಥಪ್ರದನಾದ ಇಂದ್ರನನ್ನುದ್ದೇಶಿಸಿ ಸೋಮರಸವನ್ನು ಅಗ್ನಿಯಲ್ಲಿ ಹೋಮಮಾಡಿರಿ. ಏಕೆಂದರೆ ಇದನ್ನೇ (ಎಂದರೆ ಸೋಮಪಾನವನ್ನೇ ಈ ಇಂದ್ರನು ಅಪೇಕ್ಷಿಸುತ್ತಾನೆ). ಈ ಋಕ್ಕಿನ ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಹೇಳಿರುವ ವಿಷಯವು ಒಂದೇ ಆದರೂ ಅರ್ಥವನ್ನು ಸ್ಪಷ್ಟವಾಗಿ ವಿವರಿಸುವುದಕ್ಕಾಗಿ ಬೇರೆ ಬೇರೆ ಶಬ್ದಗಳಿಂದಲೂ, ಬೇರೆ ವಾಕ್ಯಗಳಿಂದಲೂ ಅಭಿಪ್ರಾಯವನ್ನು ಋಷಿಯು ವ್ಯಕ್ತಪಡಿಸಿರುವನು.

ಈ ಋಕ್ಕಿಗೆ ನಿರುಕ್ತವ್ಯಾಖ್ಯಾಕಾರವಾದ ದುರ್ಗಾಚಾರ್ಯರು ಬರೆದಿರುವ ಭಾಷ್ಯವು ಕೆಲವು ಸ್ಪಷ್ಟವಾದ ವಿವರಣೆಗಳಿಂದ ಕೂಡಿರುವುದರಿಂದ ಅದನ್ನು ಇಲ್ಲಿ ಕೊಟ್ಟಿದೆ.

**ಗೃತ್ಸಮದಸ್ಯೇಯಮಾರ್ಷಂ । ರಾತ್ರಿಪರ್ಯಾಯೇ ಶಸ್ಯತೇ । ಹೋತುಃ ಶಸ್ತ್ರೇ ವಿನಿಯುಕ್ತಾ । ಅಸ್ಯೈವ ಚ ಶಸ್ತ್ರಸ್ಯ ಯಾಜ್ಯೇಷಾ ॥ ಹೇ ಅಧ್ವರ್ಯವಃ ಭರತ ಪ್ರಾಪಯತೇಮಂ ಸೋಮಂ । ಏತಸ್ಮಾದ್ಧವಿರ್ಧಾನಾದುತ್ತರವೇದಿಂ ಇಂದ್ರಾಯ ಇಂದ್ರಾರ್ಥಂ । ಅಥವಾ ಭರತ ಧಾರಾಯತಾ- ಗ್ನೇರುಪರಿ । ತತಶ್ಚೈನಂ ಆಮತ್ರೇಭಿಃ ಆಮತ್ರೈಃ ಪಾತ್ರೈಃ ಏಭಿಃ ಸೋಮಚಮಸೈಃ ವಷಟ್ಕಾರೇ ಪ್ರಾಪ್ತೇ ಆಸಿಂಚತ ತಸ್ಮಿನ್ನಗ್ನೌ । ಮದ್ಯಂ ಮದನೀಯಂ ಏತತ್ಸೋಮಾಖ್ಯಂ ಅಂಧಃ । ತಸ್ಮಾತ್ ಪುನರೇವಂ ಬ್ರವೀಮಿ । ಇತಃ ಯಸ್ಮಾತ್ ಕಾಮೀ ಹಿ ವೀರಃ ಕಾಮಯತ ಏವ ವೀರಃ ಇಂದ್ರಃ ಅಸ್ಯ ಸೋಮಸ್ಯ ಸದಂ ಸದೈವ ನಿತ್ಯಕಾಲಮೇವ ಪೀತಿಂ ಪಾನಮಿ- ತ್ಯರ್ಥಃ । ತಸ್ಮಾತ್ ಕಾರಣಾತ್ ಜುಹೋತ ತಸ್ಮೈ ವೃಷ್ಣೇ ವರ್ಷಿತ್ರೇ ಇಂದ್ರಾಯ ಏತಂ ಸೋಮಂ । ಕಿಮೇತಮೇವ ಕೇವಲಂ ಸೋಮಮೇಷ ಕಾಮಯತೇ ? ನೇತ್ಯುಚ್ಯತೇ । ತದಿದೇವ ವಷ್ಟಿ ತತ್ತತ್ಸೋಮಪ್ರದಾನಮೇಷ ಇಂದ್ರೋ ವಷ್ಟಿ ಕಾಮಯತ ಇತ್ಯರ್ಥಃ । ನ ಕೇವಲಂ ರಾತ್ರಿಪರ್ಯಾಯೇಷ್ವಿತ್ಯರ್ಥಃ । ತಸ್ಮಾದಾಸಿಂಚತ ಇಮಂ ಸೋಮಂ ಮಾ ವಿಲಂಬಧ್ವಮಿತ್ಯಭಿಪ್ರಾಯಃ । ಏವಮತ್ರ ದಾನಸಂಬಂಧಾತ್ ಅಂಧಃ ಶಬ್ದೋಽನ್ನಾರ್ಥ ಉಪಪದ್ಯತೇ । ಪಠಿತಮಪಿ ಚಾನ್ನನಾಮಸು । ಅನೇಕಾರ್ಥತ್ವಾತ್ ತು ಸಂದಿಹ್ಯತೇ ಇತ್ಯೇಷ ನಿಗಮ ಉಪಾತ್ತಃ ॥** (ನಿ. ೫-೧. ದು. ವ್ಯಾ.)

ಎಂದರೆ ಈ ಋಕ್ಕು ಗೃತ್ಸಮದಋಷಿದೃಷ್ಟವಾದುದು. ಅತಿರಾತ್ರವೆಂಬ ಯಾಗದಲ್ಲಿ ರಾತ್ರಿಪರ್ಯಾಯದಲ್ಲಿ ಹೋತೃವು ಪಠಿಸುವ ಶಸ್ತ್ರಮಂತ್ರಗಳಿಗಾಗಿಯೂ ಮತ್ತು ಶಸ್ತ್ರಮಂತ್ರದ ಯಾಜ್ಯಾಮಂತ್ರವನ್ನಾಗಿಯೂ ಈ ಋಕ್ಕನ್ನು ಪಠಿಸಬೇಕೆಂದು ಇದರ ವಿನಿಯೋಗವಿರುವುದು. ಎಲೈ ಅಧ್ವರ್ಯುನಾಮಕಋತ್ವಿಜರೇ, ಈ ಸೋಮವನ್ನು ಇಂದ್ರನ ಪಾನಾರ್ಥವಾಗಿ ಹವಿರ್ಧಾನಪ್ರದೇಶದಿಂದ ಉತ್ತರವೇದಿಯ ಬಳಿಗೆ ತೆಗೆದುಕೊಂಡುಹೋಗಿ. ಅನಂತರ ಚಮಸಪಾತ್ರೆಗಳಿಂದ ಮದಕಾರಕವಾದ ಈ ಸೋಮರಸರೂಪವಾದ ಅನ್ನವನ್ನು ತುಂಬಿಕೊಂಡು ಅಗ್ನಿಯಲ್ಲಿ ಹೋಮಮಾಡಿ. ಏಕೆಂದರೆ ಪರಾಕ್ರಮಶಾಲಿಯಾದ ಈ ಇಂದ್ರನು ಸರ್ವಕಾಲದಲ್ಲಿಯೂ ಸೋಮಪಾನದಲ್ಲಿ ಆಸಕ್ತನಾಗಿರುವನು. ಅದುದರಿಂದ ಸರ್ವಕಾಮಫಲಪ್ರದನಾದ ಇಂದ್ರ ನನ್ನುದ್ದೇಶಿಸಿ ಅಗ್ನಿಯಲ್ಲಿ, ಸೋಮವನ್ನು ಹೋಮಮಾಡಿ. ಅದನ್ನೇ ಇಂದ್ರನು ಅಪೇಕ್ಷಿಸುತ್ತಾನೆ. ರಾತ್ರಿಕಾಲಮಾತ್ರ ವಲ್ಲ, ಸದಾಕಾಲದಲ್ಲಿಯೂ ಇಂದ್ರನು ಸೋಮಪಾನವನ್ನಪೇಕ್ಷಿಸುತ್ತಾನೆ. ಆದುದರಿಂದ ವಿಳಂಬಮಾಡದೆ ಸೋಮವನ್ನು ಹೋಮಮಾಡಿರಿ. ಅಂಧಶಬ್ದಕ್ಕೆ ಅನ್ನವೆಂಬ ಅರ್ಥವೂ ಇರುವುದರಿಂದ ಪ್ರಕೃತ ಋಕ್ಕಿನಲ್ಲಿ ಅಂಧಃ ಶಬ್ದಕ್ಕೆ ಅನ್ನವೆಂಬ ಅರ್ಥವೇ ಇರುವುದೆಂಬುದನ್ನು ಸೂಚಿಸುವುದಕ್ಕಾಗಿ ನಿರುಕ್ತಕಾರರು **ಆಮತ್ರೇಭಿಃ ಸಿಂಚತಾ ಮದ್ಯಮಂಧಃ** ಎಂಬ ನಿಗಮ (ವೇದ) ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು ಎಂದು ಮೇಲಿನ ಭಾಷ್ಯದ ಮುಖ್ಯಾಭಿಪ್ರಾಯವು.

ಅಂಧ ಶಬ್ದಕ್ಕೆ ಕತ್ತಲೆಯೆಂಬ ಅರ್ಥವಿರುವ ವಿಚಾರದಲ್ಲಿ ಉದಾಹರಣೆಯ ಋಕ್ಕು—

**ಸ್ತ್ರಿಯಃ ಸತೀಸ್ತಾँ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿ ಚೇತದಂಧಃ ।**
**ಕವಿರ್ಯಃ ಪುತ್ರಃ ಸ ಇಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಷ್ಪಿತಾಸತ್ ॥**
(ಋ. ಸಂ. ೧-೧೬೪-೧೬)

ಇದರ ಅರ್ಥವು—

ನನಗೆ ಸಂಬಂಧಿಸಿದ ಈ ರಶ್ಮಿಗಳು ಉದಕರೂಪವಾದ ಗರ್ಭಧಾರಣದಿಂದ ಸ್ತ್ರೀರೂಪದಲ್ಲಿದ್ದರೂ ಸಹ, ವೃಷ್ಟಿರೂಪವಾದ ಉದಕವನ್ನು ಸೇಚನಮಾಡುವುದರಿಂದ ಅವುಗಳನ್ನೇ ಪುರುಷರೆಂಬ ನಿರ್ದೇಶದಿಂದ ಕರೆಯುತ್ತಾರೆ. ಈ ಗೂಢವಾದ ರಹಸ್ಯವನ್ನು ಜ್ಞಾನದೃಷ್ಟಿಯಿಂದ ಕೂಡಿದ ಮಹಾತ್ಮನು ಮಾತ್ರ ತಿಳಿಯುತ್ತಾನೆ. ಅಜ್ಞಾನ ದೃಷ್ಟಿಯಿಲ್ಲದೆ ಅಂಧನಂತಿರುವವನು ತಿಳಿಯಲಾರನು. ಯಾವನು ಮೇಧಾವಿಯಾದ, ಪುತ್ರನಾಗಿದ್ದಾನೆಯೋ ಅವನೇ ಈ ರಹಸ್ಯವನ್ನು ತಿಳಿಯುತ್ತಾನೆ ಯಾವನು ಅವೆಲ್ಲವನ್ನೂ ಪ್ರತಿಯೊಂದು ವಸ್ತುವಿನ ವಿಶೇಷಜ್ಞಾನದೊಡನೆ ತಿಳಿಯುತ್ತಾನೆಯೋ ಅವನು ಜಗತ್ಪಾಲಕನಾದ ರಶ್ಮಿಗಳಿಗೂ ಪಿತೃವಾದ ಆದಿತ್ಯನೇ ಆಗಿರುತ್ತಾನೆ.

**ಇತಿ ಪ್ರಥಮಃ ಖಂಡಃ**

ಇಲ್ಲಿಗೆ ಮೊದಲನೆಯ ಖಂಡವು ಸಮಾಪ್ತವು

———

## ಅಥ ದ್ವಿತೀಯಃ ಖಂಡಃ

## ಎರಡನೆಯ ಖಂಡವು

ಅಸಶ್ಚಂತೀ ಭೂರಿಧಾರೇ ಪಯಸ್ವತೀ । ಅಸಜ್ಯಮಾನೇ ಇತಿ ವಾವ್ಯುದಸ್ಯನ್ತ್ಯಾವಿತಿ ವಾ ಬಹುಧಾರೇ ಉದಕವತ್ಯೌ ವನುಷ್ಯತಿರ್ಹನ್ತಿಕರ್ಮಾನವಗತಸಂಸ್ಕಾರೋ ಭವತಿ । ವನುಯಾಮ ವನುಷ್ಯತ ಇತ್ಯಪಿ ನಿಗಮೋ ಭವತಿ । ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ । ದೀರ್ಘಪ್ರತತಯಜ್ಞಮಭಿಜಿಘಾಂಸತಿ ಯೋ ವಯಂ ತಂ ಜಯೇಮ ಪೃತನಾಸು ದೂಢ್ಯಂ ದುರ್ಧಿಯಂ ಪಾಪಧಿಯಂ ಪಾಪಃ ಪಾತಾಪೇಯಾನಾಂ ಪಾಪತ್ಯಮಾನೋಽವಾಙೇವ ಪತತೀತಿ ವಾ ಪಾಪತ್ಯತೇರ್ವಾ ಸ್ಯಾತ್ ತರುಷ್ಯತಿರಪ್ಯೇವಙ್ಕರ್ಮಾ । ಇಂದ್ರೇಣ ಯುಜಾ ತರುಷೇಮ ವೃತ್ರಮಿತ್ಯಪಿ ನಿಗಮೋ ಭವತಿ । ಭಂದನಾ ಭಂದತೇ ಸ್ತುತಿಕರ್ಮಣಃ । ಪುರುಪ್ರಿಯೋ ಭಂದತೇ ಧಾಮಭಿಃ ಕವಿರಿತ್ಯಪಿ ನಿಗಮೋ ಭವತಿ । ಸ ಭಂದನಾ ಉದಿಯರ್ತಿ ಪ್ರಜಾವತೀರಿತಿ ಚ । ಅನ್ಯೇನ ಮದಾಹನೋ ಯಾಹಿ ತೂಯಮ್ । ಅನ್ಯೇನ ಮದಹನೋ ಗಚ್ಛ ಕ್ಷಿಪ್ರಮೋಹಂಸೀವ ಭಾಷಮಾಣೇತ್ಯಸಭ್ಯ–

ಭಾಷಣಾದಾಹನಾ ಇವ ಭವ್ಯತ್ಯೇತಸ್ಮಾದಾಹನಃ ಸ್ಯಾದೃಷಿರ್ನದೋ ಭವತಿ ನದತೇಃ ಸ್ತುತಿಕರ್ಮಣಃ । ನದಸ್ಯ ಮಾ ರುಧತಃ ಕಾಮ ಆ ಗನ್ । ನದನಸ್ಯ ಮಾ ರುಧತಃ ಕಾಮ ಆಗಮತ್ ಸಂರುದ್ಧ-ಪ್ರಜನನಸ್ಯ ಬ್ರಹ್ಮಚಾರಿಣ ಇತ್ಯೃಷಿಪುತ್ರ್ಯಾ ವಿಲಪಿತಂ ವೇದ-ಯನ್ತೇ ॥ ೨ ॥

---

ಅಸಶ್ಚಂತೀ ॥ ೭ ॥

'ಅಸಶ್ಚಂತೀ ಭೂರಿಧಾರೇ ಪಯಸ್ವತೀ' । ಅಸಜ್ಯಮಾನೇ ಇತಿ ವಾ । ಅವ್ಯುದಸನ್ತ್ಯಾವಿತಿ ವಾ । ಬಹುಧಾರೇ ಉದಕವತ್ಯೌ ॥೧॥

**ಅಸಶ್ಚಂತೀ** ಎಂದರೆ **ಅಸಜ್ಯಮಾನೇ** ಎಡಬಿಡದೆ ಅನೇಕ ಉದಕ ಧಾರೆಗಳಿಂದ ಕೂಡಿರುವ ಎಂದರೆ ಅಂತರಿಕ್ಷದಿಂದ ಅನೇಕ ಧಾರೆಗಳಾಗಿ ಬೀಳುವ ವೃಷ್ಟ್ಯುದಕವು ಪೃಥಿವಿಗೆ ಬಂದು ಸೇರುವಾಗ ಪರಸ್ಪರ ಒಂದಕ್ಕೊಂದು ಸಂಬಂಧವಾಗಿರುತ್ತವೆ ಎಂದಭಿಪ್ರಾಯವು.

ಉದಾಹರಣೆಯ ಋಕ್ಕು—

**ಅಸಶ್ಚಂತೀ ಭೂರಿಧಾರೇ ಪಯಸ್ವತೀ ಘೃತಂ ದುಹಾತೇ ಸುಕೃತೇ ಶುಚಿವ್ರತೇ ।**
**ರಾಜಂತೀ ಅಸ್ಯ ಭುವನಸ್ಯ ರೋದಸೀ ಅಸ್ಮೇ ರೇತಃ ಸಿಂಚತಂ ಯನ್ಮನುರ್ಹಿತಂ ॥**

(ಋ. ಸಂ. ೬-೭೦-೨)

ಇದರ ಅರ್ಥವು—

ಪತನರಹಿತರೂ, ನಾನಾ ಸತ್ವಗಳನ್ನು ಧರಿಸಿರುವವರೂ, ಉದಕವತಿಯರೂ, ಶುದ್ಧವಾದ ಕ್ರಿಯಾವ್ರತವುಳ್ಳವರೂ ಆದ ದ್ಯಾವಾಪೃಥಿವಿಗಳು ಉತ್ತಮವಾದ ಕರ್ಮಕರ್ತನಾದ ಯಜಮಾನನಿಗೆ ಉದಕವನ್ನು ಕರೆಯುತ್ತಾರೆ. ಎಲೈ ದ್ಯಾವಾ ಪೃಥಿವಿಗಳೇ, ಸಕಲಭೂತಜಾತಗಳಿಗೂ ಒಡೆಯರಾದ ನೀವು ಯಾವ ರೇತಸ್ಸು ಮಾನವರಿಗೆ ಹಿತಕಾರಿಯೋ ಅಂತಹ ರೇತಸ್ಸನ್ನು (ಉದಕ ಅಥವಾ ಶಕ್ತಿಯನ್ನು) ನಮ್ಮಲ್ಲಿ ಸುರಿಸಿ ಸ್ಥಾಪಿಸಿರಿ.

ವನುಷ್ಯತಿ ॥ ೮ ॥

ವನುಷ್ಯತಿರ್ಹನ್ತಿಕರ್ಮಾನವಗತಸಂಸ್ಕಾರೋ ಭವತಿ । 'ವನು-ಯಾಮ ವನುಷ್ಯತಃ' ಇತ್ಯಪಿ ನಿಗಮೋ ಭವತಿ । 'ದೀರ್ಘ-ಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ।' ದೀರ್ಘಪ್ರತತಯಜ್ಞಮಭಿ ಜಿಘಾಂಸತಿ ಯೋ ವಯಂ

ತಂ ಜಯೇಮ ಪೃತನಾಸು ದೂಢ್ಯಃ ದುರ್ಧಿಯಂ ಪಾಪ-
ಧಿಯಮ್ । ಪಾಪಃ ಪಾತಾಽಪೇಯಾನಾಂ ಪಾಪತ್ಯಮಾನೋಽ-
ವಾಙೇವ ಪತತೀತಿ ವಾ ಪಾಪತ್ಯತೇರ್ವಾ ಸ್ಯಾತ್ ॥ ೨ ॥

ವನುಷ್ಯತಿ ಎಂದರೆ ಹಂತಿಕರ್ಮಾ-ಕೊಲ್ಲುವುದು ಎಂದರ್ಥ. **ದೂಢ್ಯಂ** ಎಂದರೆ ದುರ್ಧಿಯಂ, ಪಾಪಧಿಯಂ ಕೆಟ್ಟಬುದ್ಧಿಯುಳ್ಳವರನ್ನು ಪಾಪ (ಪಾಪಿಷ್ಠನು) ಎಂಬ ಶಬ್ದವು ಕುಡಿಯಬಾರದ್ದನ್ನು ಅಪೇಯು. ಪಾನವನ್ನು ಮಾಡುವುದರಿಂದ ಪಾಪ ಎಂದು ಹೆಸರು. ಅಥವಾ ಕೆಟ್ಟ ಕೆಲಸವನ್ನು ಮಾಡಿಕೆಳಗೆ ಬೀಳುವುದರಿಂದ ಪಾಪಿಷ್ಠನೆಂದು ಹೆಸರು. ಈ ಶಬ್ದವು ಬೀಳು ಎಂಬರ್ಥವುಳ್ಳ **ಪತ್** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಉದಾಹರಣೆಯ ಋಕ್ಕು—

**ಯದೀಂದ್ರಾಗ್ನೀ ಜನಾ ಇಮೇ ವಿಹ್ವಯಂತೇ ತನಾ ಗಿರಾ ।**
**ಅಸ್ಮಾಕೇಭಿರ್ನೃಭಿರ್ವಯಂ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತೋ ನಭಂತಾ-**
**ಮನ್ಯಕೇ ಸಮೇ**

(ಋ. ಸಂ. ೮-೪೦-೭)

ಇದರ ಅರ್ಥವು—

ಯಾವ ಈ ಯಜಮಾನರು ಧನದಿಂದಲೂ, ಸ್ತುತಿಯಿಂದಲೂ. ಇಂದ್ರಾಗ್ನಿಗಳನ್ನು ವಿಶೇಷರೀತಿಯಲ್ಲಿ ಪ್ರಾರ್ಥಿಸುವರೋ ಅವರ ನಡುವೆ ಇರುವ ನಾಭಾಕರದ ನಾವು ಶತ್ರುಗಳನ್ನು ಎದುರಿಸುತ್ತಾ ನಮಗೆ ಸೇರಿದ ವೀರಪುರುಷರೊಡನೆ ಶತ್ರುಗಳನ್ನು ಸೋಲಿಸೋಣ. ಸ್ತುತಿಪ್ರಿಯರನ್ನು ಸ್ತುತಿಸೋಣ. ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ. ಉದಾಹರಣೆಗಾಗಿ ಇನ್ನೊಂದು ಋಕ್ಕನ್ನು ಕೊಟ್ಟಿರುವರು—

**ಇಂದ್ರಾ ವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ**
**ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ॥**

(ಋ. ಸಂ. ೭-೮೨-೧)

**ಇದರ ಅರ್ಥವು—**

ಎಲೈ ಇಂದ್ರ ಮುತ್ತು ವರುಣದೇವತೆಗಳೇ ನಮಗಾಗಿ ಪೂಜೆಮಾಡತಕ್ಕ ಪುರುಷನಿಗೆ ಯಜ್ಞಕ್ಕೆ ಅನುಕೂಲವಾಗುವಂತೆ ಮಹತ್ತಾದ ಗೃಹವನ್ನು ಕೊಡಿರಿ. ದೀರ್ಘಕಾಲ ಯಜ್ಞದಲ್ಲಿ ನಿರತನಾಗಿರುವ ನಮ್ಮ ಪುರುಷನನ್ನು ಯಾವ ಶತ್ರುವು ಅತಿಯಾಗಿ ಹಿಂಸಿಸುವನೋ, ಸಂಗ್ರಾಮಗಳಲ್ಲಿ ದುಷ್ಟ ಬುದ್ಧಿಯನ್ನು ಪ್ರಕಟಿಸುವ ಅಂತಹ ಶತ್ರುಗಳನ್ನು ನಾವು ಜಯಿಸುವಂತಾಗಲಿ.

ತರುಷ್ಯತಿ ॥೯॥
ತರುಷ್ಯತಿರಪ್ಯೇವಙ್ಕರ್ಮಾ । ‘ಇಂದ್ರೇಣ ಯುಜಾ ತರುಷ್ಯೇಮ ವೃತ್ರಂ’
ಇತ್ಯಪಿ ನಿಗಮೋ ಭವತಿ ॥೩॥

**ತರುಷ್ಯತಿಃ** ಎಂಬ ಶಬ್ದಕ್ಕೆ **ವನುಷ್ಯತಿ** ಎಂಬ ಶಬ್ದದ ಅರ್ಥವೇ ಇರುವುದು ಎಂದರೆ ಕೊಲ್ಲುವುದು ಎಂಬರ್ಥವಿರುವುದು.

ಉದಾಹರಣೆಯ ಋಕ್ಕು—

**ಋಭುರ್ಋಭುಭಿರಭಿ ವಃ ಸ್ಯಾಮ ವಿಭ್ವೋ ವಿಭುಭಿಃ ಶವಸಾ ಶವಾಂಸಿ ।**
**ವಾಜೋ ಅಸ್ಮಾ೯ ಅವತು ವಾಜಸಾತಾವಿಂದ್ರೇಣ ಯುಜಾ ತರುಷೇಮ ವೃತ್ರಂ ॥**

(ಋ. ಸಂ. ೭-೪೮-೨)

ಇದರ ಅರ್ಥವು—

ಎಲೈ ಋಭುಗಳೇ, ಪ್ರಕಾಶಮಾನರಾದ ನಿಮ್ಮೊಡನೆ ಸೇರಿ ವಿಸ್ತೃತವಾದ ಪ್ರಕಾಶವುಳ್ಳವರಾಗಿಯೂ, ಸಂಪದ್ಯುಕ್ತರಾದ ನಿಮ್ಮೊಡನೆ ಸೇರಿ ಸಂಪದ್ವಿಭವಗಳಿಂದ ಕೂಡಿದವರಾಗಿಯೂ ಶತ್ರುಗಳ ಬಲವನ್ನು ನಮ್ಮ ಬಲದಿಂದ ನಾವು ಸೋಲಿಸುವಂತಾಗಲಿ. ನಿಮ್ಮಲ್ಲಿ ಪ್ರಭಾವಶಾಲಿಯಾದ ವಾಜನು ನಮ್ಮನ್ನು ರಕ್ಷಿಸಲಿ. ನಮಗೆ ಸಹಾಯಕನಾಗಿರುವ ಇಂದ್ರನೊಡಗೂಡಿ ನಿರೋಧಕನಾದ ಶತ್ರುವನ್ನು ನಾವು ನಾಶಪಡಿಸುವಂತಾಗಲಿ.

ಭಂದನಾಃ ॥ ೧೦ ॥

ಭಂದನಾ ಭಂದತೇಃ ಸ್ತುತಿಕರ್ಮಣಃ । 'ಪುರುಪ್ರಿಯೋ ಭಂದತ ಧಾಮಭಿಃ ಕವಿಃ' ಇತ್ಯಪಿ ನಿಗಮೋ ಭವತಿ । 'ಸ ಭಂದನಾ ಉದಿಯರ್ತಿ ಪ್ರಜಾವತೀಃ' ಇತಿ ಚ ॥೪॥

**ಭಂದನಾಃ** ಎಂಬ ಶಬ್ದವು ಸ್ತುತಿಮಾಡು ಎಂಬರ್ಥವಿರುವ ಭಂದತಿ ಧಾತುವಿನಿಂದ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

ಪಿತಾ ಯಜ್ಞಾನಾಮಸುರೋ ವಿಪಶ್ಚಿತಾಂ ವಿಮಾನಮಗ್ನಿರ್ವಯುನಂ ಚ ವಾಘತಾಂ ।
ಆ ವಿವೇಶ ರೋದಸೀ ಭೂರಿವರ್ಪಸಾ ಪುರುಪ್ರಿಯೋ ಭಂದತೇ ಧಾಮಭಿಃ ಕವಿಃ ॥

(ಋ. ಸಂ. ೩-೩-೪)

ಇದರ ಅರ್ಥವು—

ಯಜ್ಞಗಳಿಗೆ ಪಾಲಕನೂ, ವಿದ್ವಾಂಸರಾದ ಸ್ತೋತೃಗಳಿಗೆ ಬಲಪ್ರದನೂ, ಋತ್ವಿಕ್ಕುಗಳಿಗೆ ಜ್ಞಾನಸಾಧನನೂ, ಕರ್ಮಗಳಿಗೆ ಸಹಾಯಕನೂ ಆದ ಅಗ್ನಿಯು ಪಾರ್ಥಿವ, ವೈದ್ಯುತ ಇತ್ಯಾದಿ ನಾನಾವಿಧವಾದ ರೂಪಗಳಿಂದ ದ್ಯಾವಾಪೃಥಿವಿಗಳೆರಡನ್ನೂ ಪ್ರವೇಶಿಸಿ ವ್ಯಾಪಿಸಿದ್ದಾನೆ. ಅನೇಕರಿಗೆ ಪ್ರಿಯನೂ, ತೇಜಸ್ಸುಗಳಿಂದ ಯುಕ್ತನಾದವನೂ, ಮೇಧಾವಿಯೂ ಆದ ಅಗ್ನಿಯು ಯಜ್ಞಕರ್ತರಿಂದ ಸ್ತುತಿಸಲ್ಪಡುತ್ತಾನೆ.

ಉದಾಹರಣೆಗಾಗಿ ಕೊಟ್ಟಿರುವ ಇನ್ನೊಂದು ಋಕ್ಕು—

ಸ ಭಂದನಾ ಉದಿಯರ್ತಿ ಪ್ರಜಾವತೀರ್ವಿಶ್ವಾಯುರ್ವಿಶ್ವಾಃ ಸುಭರಾ ಅಹರ್ದಿವಿ ।
ಬ್ರಹ್ಮ ಪ್ರಜಾವದ್ರಯಿಮಶ್ವಪಸ್ತ್ಯಂ ಪೀತ ಇಂದವಿಂದ್ರಮಸ್ಮಭ್ಯಂ ಯಾಚತಾತ್ ॥

(ಋ. ಸಂ. ೯-೮೬-೪೧)

ಇದರ ಅರ್ಥವು—

ಸರ್ವಗಾಮಿಯಾದ ಸೋಮದೇವನು ಅಹೋರಾತ್ರಿಗಳೆಲ್ಲಾ ಪುತ್ರಾದಿ ಫಲಗಳನ್ನು ಪಡೆಯುವವೂ, ಉತ್ತಮವಾಗಿ ಅರ್ಪಿತವಾಗುವುದೂ ಆದ ಸಕಲ ಸ್ತುತಿಗಳನ್ನೂ ಪ್ರೇರಿಸುತ್ತಾನೆ. ಎಲೈ ಸೋಮದೇವನೇ, ಇಂದ್ರನಿಂದ ಪಾನಮಾಡ

ಳ್ಪಟ್ಟ ನೀನು ನಮಗಾಗಿ ಪ್ರಜಾಯುಕ್ತವೂ, ಪ್ರಭೂತವೂ ಆದ ಅನ್ನವನ್ನೂ; ವಿಸ್ತೃತವಾದ ಗೃಹವುಳ್ಳ ಧನವನ್ನೂ ಇಂದ್ರನಿಂದ ಯಾಚಿಸು.

ಆಹನಃ ॥೧೧॥

'ಅನ್ಯೇನ ಮದಾಹನೋ ಯಾಹಿ ತೂಯಂ' । ಅನ್ಯೇನ ಮದಹನೋ ಗಚ್ಛ ಕ್ಷಿಪ್ರಮಾಹಂಸೀವ ಭಾಷಮಾಣ್ಯೇತ್ಯಸಭ್ಯಭಾಷಣಾದಾಹನಾ ಇವ ಭವತ್ಯೇತಸ್ಮಾದಾಹನಃ ಸ್ಯಾತ್ ॥೫॥

**ಅಹನಃ** ಎಂದರೆ ಅಸಭ್ಯನಾದವನು. **ಅಯಜ್ಞಿಯೋ ವೈ ಪುರುಷೋಽಮೇಧ್ಯ ಆಹನಸ್ಯಾಜ್ಜಾಯತೇ** (ಮೈತ್ರಾಯಣೀಯ ಸಂಹಿತಾ ೧-೬-೪) ಎಂಬ ಶ್ರುತಿವಾಕ್ಯವೂ ಇರುವುದು.

ಉದಾಹರಣೆಯ ಶ್ರುತಿವಾಕ್ಯವು—

**ನ ತಿಷ್ಠಂತಿ ನ ನಿ ಮಿಷಂತ್ಯೇತೇ ದೇವಾನಾಂ ಸ್ಪಶ ಇಹ ಯೇ ಚರಂತಿ ।**
**ಅನ್ಯೇನ ಮದಾಹನೋ ಯಾಹಿ ತೂಯಂ ತೇನ ವಿವಹ ರಥ್ಯೇವ ಚಕ್ರಾ ॥**

(ಋ. ಸಂ. ೧೦-೧೦-೮)

ಇದರ ಅರ್ಥವು—

ಎಲೈ ಯಮಿಯೇ, ದೇವತೆಗಳಿಂದ ನಿಯಮಿತರಾದ ಯಾವ ಗೂಢಚಾರರುಂಟೋ ಅವರು ಎಲ್ಲೆಲ್ಲಿ (ಸರ್ವತ್ರ) ಸಂಚರಿಸುತ್ತಾರೆ. ಅವರು ಕೊಂಚವೂ ವಿಶ್ರಾಂತರಾಗುವುದಿಲ್ಲ. ಕಣ್ಣನ್ನು ಮುಚ್ಚದೇ ಎಲ್ಲವನ್ನೂ ವೀಕ್ಷಿಸುತ್ತಾರೆ. ನಿನ್ನ ಪಾಪೇಚ್ಛೆಯಿಂದ ನನ್ನನ್ನು ಹಿಂಸಿಸತಕ್ಕ ಎಲೈ ಯಮಿಯೇ, ನನಗಿಂತಲೂ ಬೇರೆಯಾದವನೊಡನೆ ಕ್ಷಿಪ್ರವಾಗಿ ಸಂಬಂಧವನ್ನು ಹೊಂದು. ರಥಚಕ್ರಗಳು ಒಟ್ಟಿಗೆ ರಥವನ್ನು ವಹಿಸುವಂತೆ ಅವರೊಡನೆ ಕೂಡಿ ನೀವಿಬ್ಬರೂ ಒಟ್ಟಿಗೆ ನಿಮ್ಮ ಕಾರ್ಯಗಳನ್ನು ನಿರ್ವಹಿಸಿ.

ನದಃ ॥ ೧೨ ॥

ಋಷಿರ್ನದೋ ಭವತಿ ನದತೇಃ । ಸ್ತುತಿಕರ್ಮಣಃ 'ನದಸ್ಯ ಮಾ ರುಧತಃ ಕಾಮ ಆಗನ್' । ನದನಸ್ಯ ಮಾ ರುಧತಃ ಕಾಮ ಆಗಮತ್ । ಸಂರುದ್ಧಪ್ರ ಜನನಸ್ಯಬ್ರಹ್ಮಚಾರಿಣ ಇತ್ಯೃಷಿಪುತ್ರ್ಯಾ ವಿಲಪಿತಂ ವೇದಯಂತೇ ॥ ೬ ॥ ೨ ॥

**ನದಃ** ಎಂದರೆ ಋಷಿಯು, ಈ ಶಬ್ದವು ಸ್ತುತಿಸು ಎಂಬರ್ಥವುಳ್ಳ ನದತಿ ಧಾತುವಿನಿಂದ ನಿಷ್ಪನ್ನವಾಗಿದೆ. ಸಂಯಮಿತವಾದ ಬುದ್ಧಿಯುಳ್ಳ ಋಷಿಯ ಅಪೇಕ್ಷೆಯು ನನಗೆ ಪ್ರಾಪ್ತವಾಗಿದೆ. ತನ್ನ ಬುದ್ಧಿಯುಳ್ಳ ಮೊದಲಾದ ಇಂದ್ರಿಯಗಳನ್ನು ಸ್ಥಿಮಿತದಲ್ಲಿಟ್ಟುಕೊಂಡಿರುವ ಋಷಿಯ ಅಪೇಕ್ಷೆಯಂತೆ ನನ್ನ ಅಪೇಕ್ಷೆಯೂ ಇರುವುದು. ಎಂದರೆ ಕಾಮಾಭಿಲಾಷೆಇಲ್ಲದೆ ಬ್ರಹ್ಮಚರ್ಯ ವ್ರತದಂತೆ ನಿಯಮದಲ್ಲಿರಬೇಕಾದ ಅವಸ್ಥೆಯು ನನಗೆ ಬಂದೊದಗಿರುವುದು ಎಂದು ಋಷಿಪುತ್ರಿಯು ಪ್ರಲಾಪಿಸುತ್ತಾಳೆ.

ಉದಾಹರಣೆಯ ಋಕ್ಕು—

**ನದಸ್ಯ ನೂ ರುಧತಃ ಕಾಮ ಆಗನ್ನಿತ ಆಜಾತೋ ಅಮುತಃ ಕುತಶ್ಚಿತ್ ।**
**ಲೋಪಾಮುದ್ರಾ ವೃಷಣಂ ನೀ ರಿಣಾತಿ ಧೀರಮಧೀರಾ ಧಯಂತಿ ಶ್ವಸಂತಂ ॥**

(ಋ. ಸಂ. ೧–೭೯–೪)

ಇದರ ಅರ್ಥವು—

ಎಲೈ ಲೋಪಾಮುದ್ರೆಯೇ, ಜಪಾಧ್ಯಯನಾಸಕ್ತನೂ, ಬ್ರಹ್ಮಚರ್ಯವ್ರತನಿಷ್ಠನೂ ಆದ ನನ್ನಲ್ಲಿ, ನಿನ್ನ ಸಾಮಿಪ್ಯಜನಿತವೋ ಅಥವಾ ಮತ್ಯಾವುದೋ ಕಾರಣದಿಂದ ಕಾಮವು ಉತ್ಪನ್ನವಾಗಿದೆ; ಆದುದರಿಂದ ರೇತಸ್ಸೇಚಕನಾದ ನನ್ನನ್ನು ಸಮೀಪಿಸು. ಎಂತಹ ಜ್ಞಾನಿಯೂ, ಬಲಶಾಲಿಯೂ ಆದರೂ ಪುರುಷರನ್ನು ಕಾತರಳಾದ ಸ್ತ್ರೀಯು ವಿಕಲ ಚಿತ್ತನನ್ನಾಗಿ ಮಾಡುತ್ತಾಳೆ.

ಈ ಋಕ್ಕಿನಲ್ಲಿ ಅಗಸ್ತ್ಯನು ತನ್ನ ಪತ್ನಿಯಾದ ಲೋಪಾಮುದ್ರೆಗೆ ಪುನಃ ಭರವಸೆಯನ್ನು ಕೊಟ್ಟು ಅವಳನ್ನು ತೃಪ್ತಿಪಡಿಸುವುದಾಗಿ ಹೇಳುತ್ತಾನೆ. ಮತ್ತು ತನ್ನ ಅಭಿಲಾಷೆಯನ್ನೂ ಸ್ಪಷ್ಟಪಡಿಸಿದ್ದಾನೆ.

ನಿರುಕ್ತಕಾರರು ಈ ಋಕ್ಕಿಗೆ ಕೆಳಗೆ ಕಂಡಂತೆ ವಿವರಣೆಯನ್ನು ಹೇಳಿದ್ದಾರೆ.

**"ನದನಸ್ಯ ಮಾ ರುಧತಃ ಕಾಮಾ ಆಗಮತ್ । ಸಂರುದ್ಧಪ್ರಜನನಸ್ಯ ಬ್ರಹ್ಮಚಾರಿಣ ಇತ್ಯೃಷಿಪುತ್ರ್ಯಾ ವಿಲಪಿತಂ ವೇದಯಂತೇ ॥**

(ನಿ. ೫–೨)

ಆತ್ಮಸಂಯಮಿಯಾದ ಋಷಿಯೊಂದಿಗೆ ನಾನು ವಿವಾಹಿತಳಾಗಿ ಅವನ ನಿಷ್ಕಾಮವಾದ ಪ್ರೀತಿಗೆ ಪಾತ್ರಳಾಗಬೇಕಾಯಿತು. ಅವನಿಗೆ ಕಾಮೇಚ್ಛೆಯೇ ಇಲ್ಲ. ಅವನು ಬ್ರಹ್ಮಚಾರಿಯಾಗಿಯೇ ಇದ್ದಾನೆ ಇತ್ಯಾದಿಯಾಗಿ ಋಷಿಪುತ್ರಿಯು ತನ್ನ ದುಃಖವನ್ನು ನಿವೇದನಮಾಡಿಕೊಂಡಳು ಎಂದಿದೆ. ಇಲ್ಲಿ ಬೃಹದ್ದೇವತಾವಾಕ್ಯಕ್ಕೂ ನಿರುಕ್ತವಾಕ್ಯಕ್ಕೂ ಕೊಂಚ ವಿರೋಧವು ಕಾಣುತ್ತದೆ. ಬೃಹದ್ದೇವತೆಯಲ್ಲಿ—

**ರಿರಂಸುಸ್ತಾಮಥಾಗಸ್ತ್ಯ ಉತ್ತರಾಭ್ಯಾಮತೋಷಯತ್ ।**

(ಬೃ. ದೇ. ೪–೫೮)

ಅಗಸ್ತ್ಯನು ಮುಂದಿನ ಎರಡು ಋಕ್ಕುಗಳಿಂದ ಎಂದರೆ ಪ್ರಕೃತವಾದ ಸೂಕ್ತದಲ್ಲಿ ೩ ಮತ್ತು ೪ ನೇ ಋಕ್ಕುಗಳಿಂದ ತನ್ನ ಅಭೀಷ್ಟವನ್ನು ತಿಳಿಸಿ ಪತ್ನಿಯಾದ ಲೋಪಾಮುದ್ರೆಯನ್ನು ಸಂತೋಷಪಡಿಸಿದನು ಎಂದಿದೆ. ಆದರೆ ಇಲ್ಲಿ ಎಂದರೆ ನಿರುಕ್ತವಾಕ್ಯದ ಪ್ರಕಾರ ಇದು ಲೋಪಾಮುದ್ರೆಯ ವಾಕ್ಯವೆಂದೂ, ಲೋಪಾಮುದ್ರೆಯು ತನ್ನ ಮನಃಖೇದವನ್ನು ಈ ವಾಕ್ಯಗಳಿಂದ ತಿಳಿಸುತ್ತಾಳೆಂದೂ ಅರ್ಥವಾಗುತ್ತದೆ. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ಈ ರೀತಿ ವ್ಯಾಖ್ಯಾನವನ್ನು ಹೇಳಿದ್ದಾರೆ.

ಅಗಸ್ತ್ಯಲೋಪಾಮುದ್ರಾಬ್ರಹ್ಮಚಾರಿಸೂಕ್ತಸಂವಾದೇ. ಲೋಪಾಮುದ್ರಯಾ ಇಯಮಾರ್ಷಂ । ಸಾ ಅಬ್ರವೀದಗಸ್ತ್ಯಂ ಭರ್ತಾರಮಭಿಪ್ರೇತ್ಯ " ನದಸ್ಯ ನದನಸ್ಯ.... .... .... .... .... ....' । ಇತ್ಯೇವಂ ವಿಲಪಮಾನಾ ಕಾಮಾರ್ತಾ ಲೋಪಾಮುದ್ರಾ ರಾಜರ್ಷಿಪುತ್ರಿಕಾ ।.....................ಏವಂ ಲೋಪಾಮುದ್ರಾವಾಕ್ಯೇ "ನದಸ್ಯ ರುಧತೋ ಮಾಮಾಗಮತ್ ಕಾಮಃ" ಇತಿ ಪ್ರಕರಣಾದೃಷಿರ್ನದಶಬ್ದೇನೋಚ್ಯತೇ ಇತ್ಯುಪಪದ್ಯತೇ ॥

(ನಿರುಕ್ತವಾಖ್ಯಾ. ೫–೨)

ನಿರುಕ್ತಕಾರರು ಲೋಪಾಮುದ್ರೆಯನ್ನು ಋಷಿಪುತ್ರಿಯೆಂದೂ, ದುರ್ಗಾಚಾರ್ಯರು ರಾಜರ್ಷಿಪುತ್ರಿಯೆಂದೂ ಕರೆದಿದ್ದಾರೆ. ಇವಳು ಅಗಸ್ತ್ಯಪುತ್ರಿಯೆಂದೂ, ತನಗೆ ಸುಂದರಳಾದ ಸ್ತ್ರೀಯು ದೊರಕಬೇಕೆಂಬ ಉದ್ದಿಶ್ಯದಿಂದ ಅಗಸ್ತ್ಯನೇ ಇವಳನ್ನು ನಿರ್ಮಿಸಿ ವಿದರ್ಭರಾಜನಲ್ಲಿ ಬಿಟ್ಟುಬಂದನೆಂದೂ ಒಂದು ಕಥೆಯಿದೆ. ಅದು ಮಹಾಭಾರತದಲ್ಲಿ ಈ ರೀತಿ ವರ್ಣಿತವಾಗಿದೆ. ಇದು ಬೃಹದ್ದೇವತಾವಾಕ್ಯಗಳಿಗನುಸಾರವಾಗಿರುವುದರಿಂದ ಇಲ್ಲಿ ಉದಾಹೃತವಾಗಿದೆ.

**ತತಃ ಪ್ರಸವಸಂತಾನಂ ಚಿಂತಯನ್ಭಗವಾನೃಷಿಃ । ಆತ್ಮನಃ ಪ್ರಸವಸ್ಯಾರ್ಥೇ ನಾಪಶ್ಯತ್ಸದೃಶೀಂ ಸ್ತ್ರಿಯಂ ॥ ಸ ತಸ್ಯ ತಸ್ಯ ಸತ್ವಸ್ಯ ತತ್ತದಂಗಮನುತ್ತಮಂ । ಸಂಗೃಹ್ಯ ತತ್ಸಮೈರಂಗೈರ್ನಿರ್ಮಮೇ ಸ್ತ್ರಿಯಮುತ್ತಮಾಂ॥ ಸ ತಾಂ ವಿದರ್ಭರಾಜಾಯ ಪುತ್ರಕಾಮಾಯ ಕಾಮ್ಯತೇ । ನಿರ್ಮಿತಾಮಾತ್ಮನೋಽರ್ಥಾಯ ಮುನಿಃ ಪ್ರಾದಾನ್ಮಹಾತಪಾಃ ॥ ಸಾ ತತ್ರ ಜಜ್ಞೇ ಸುಭಗಾ ವಿದ್ಯುತ್ಸೌದಾಮಿನೀ ಯಥಾ । ವಿಭ್ರಾಜಮಾನಾ ವಪುಷಾ ವ್ಯವರ್ಧತ ಶುಭಾನನಾ ॥ ಜಾತಮಾತ್ರಾಂ ಚ ತಾಂ ದೃಷ್ಟ್ವಾ ವೈದರ್ಭಃ ಪೃಥಿವೀಪತಿಃ । ಪ್ರಹರ್ಷೇಣ ದ್ವಿಜಾತಿಭ್ಯೋ ನ್ಯವೇದಯತ ಭಾರತ ॥ ಅಭ್ಯನಂದಂತ ತಂ ಸರ್ವೇ ಬ್ರಾಹ್ಮಣಾ ವಸುಧಾಧಿಪ । ಲೋಪಾಮುದ್ರೇತಿ ತಸ್ಯಾಶ್ಚ ಚಕ್ರಿರೇ ನಾಮ ತೇ ದ್ವಿಜಾಃ ॥ ವವೃಧೇ ಸಾ ಮಹಾರಾಜಾ ಬಿಭ್ರತೀ ರೂಪಮುತ್ತಮಂ । ಅಪ್ಸ್ವಿವೋತ್ಪಲಿನೀ ಶೀಘ್ರಮಗ್ನೇರಿವ ಶಿಖಾ ಶುಭಾ ।........ ವೈದರ್ಭೀಂ ತು ತಥಾಯುಕ್ತಾಂ ಯುವತೀಂ ಪ್ರೇಕ್ಷ್ಯ ವೈ ಪಿತಾ । ಮನಸಾ ಚಿಂತಯಾಮಾಸ ಕಸ್ಮೈ ದದ್ಯಾಮಿ ಮಾಂ ಸುತಾಂ ॥ ಯದಾ ತ್ವಮನ್ಯತಾಗಸ್ತ್ಯೋ ಗಾರ್ಹಸ್ಥ್ಯೇ ತಾಂ ಕ್ಷಮಾಮಿತಿ । ತದಾಭಿಗಮ್ಯ ಪ್ರೋವಾಚ ವೈದರ್ಭಂ ಪೃಥಿವೀಪತಿಂ ॥ ರಾಜನ್ನಿವೇಶೇ ಬುದ್ಧಿರ್ಮೇ ವರ್ತತೇ ಪುತ್ರಕಾರಣಾತ್ । ವರಯೇ ತ್ವಾಂ ಮಹೀಪಾಲ ಲೋಪಾಮುದ್ರಾಂ ಪ್ರಯಚ್ಛ ಮೇ ॥ ಏವಮುಕ್ತಃ ಸ ಮುನಿನಾ ಮಹೀಪಾಲೋ ವಿಚೇತನಃ । ಪ್ರತ್ಯಾಖ್ಯಾನಾಯ ಚಾಶಕ್ತಃ ಪ್ರದಾತುಂ ಚೈವ ನೈಚ್ಛತ ॥ ತತಃ ಸ ಭಾರ್ಯಾಮಭ್ಯೇತ್ಯ ಪ್ರೋವಾಚ ಪೃಥಿವೀಪತಿಃ । ಮಹರ್ಷಿರ್ವೀರ್ಯವಾನೇಷ ಕ್ರುದ್ಧಃ ಶಾಪಾಗ್ನಿನಾ ದಹೇತ್ ॥ ತಂ ತಥಾ ದುಃಖಿತಂ ದೃಷ್ಟ್ವಾ ಸಭಾರ್ಯಂ ಪೃಥಿವೀಪತಿಂ। ಲೋಪಾಮುದ್ರಾಭಿಗಮ್ಯೇದಂ ಕಾಲೇ ವಚನಮಬ್ರವೀತ್ ॥ ನ ಮತ್ಕೃತೇ ಮಹೀಪಾಲ ಪೀಡಾಮಭ್ಯೇತುಮರ್ಹಸಿ । ಪ್ರಯಚ್ಛ ಮಾಮಗಸ್ತ್ಯಾಯ ತ್ರಾಹ್ಯಾತ್ಮಾನಂ ಮಯಾ ಪಿತಃ ॥ ದುಹಿತುರ್ವಚನಾದ್ರಾಜಾಸೋಽಗಸ್ತ್ಯಾಯ ಮಹಾತ್ಮನೇ । ಲೋಪಾಮುದ್ರಾಂ ತತಃ ಪ್ರಾಪ್ಯ ಭಾರ್ಯಾಮಗಸ್ತ್ಯಸ್ತು ಲೋಪಾಮುದ್ರಾಮಭಾಷತ । ಮಹಾರ್ಹಾಣಿವಿಸೃಜೈತಾನಿ ವಾಸಾಂಸ್ಯಾಭರಣಾನಿ ಚ ॥ ತತಃ ಸಾ ದರ್ಶನೀಯಾನಿ ಮಹಾರ್ಹಾಣಿ ತನೂನಿ ಚ । ಸಮುತ್ಸಸರ್ಜ ರಂಭೋರೂರ್ವಸನಾನ್ಯಾಯತೇಕ್ಷಣಾ ॥ ತತಶ್ಚೀರಾಣಿ ಜಗ್ರಾಹ ವಲ್ಕಲಾನ್ಯಜಿನಾನಿ ಚ । ಸಮಾನವ್ರತಚರ್ಯಾ ಚ ಬಭೂವಾಯತಲೋಚನಾ ॥ ಗಂಗಾದ್ವಾರಮಥಾಗಮ್ಯ ಭಗವಾನೃಷಿಸತ್ತಮಃ । ಉಗ್ರಮಾತಿಷ್ಠತ ತಪಃ ಸಹ ಪತ್ನ್ಯಾನುಕೂಲಯಾ ॥ ಸಾ ಪ್ರೀತ್ಯಾ ಬಹುಮಾನಾಚ್ಚ ಪತಿಂ ಪರ್ಯಚರತ್ತದಾ । ಅಗಸ್ತ್ಯಶ್ಚ ಪರಾಂ ಪ್ರೀತಿಂ ಭಾರ್ಯಾಯಾಮಗಮತ್ಪ್ರಭುಃ ॥ ತತೋ ಬಹುತಿಥೇ ಕಾಲೇ ಲೋಪಮುದ್ರಾಂ ವಿಶಾಂಪತೇ ! ತಪಸಾ ದ್ಯೋತಿತಾಂ ಸ್ನಾತಾಂ ದದರ್ಶ ಭಗವಾನೃಷಿಃ ॥ ಸ ತಸ್ಯಾಃ ಪರಿಚಾರೇಣ ಶೌಚೇನ ಚ ದಮೇನ ಚ । ಶ್ರಿಯಾ ರೂಪೇಣ ಚ ಪ್ರೀತೋ ಮೈಥುನಾಯಾಜುಹಾವ ತಾಂ ॥**

(ಮಹಾಭಾರತ, ವನಪರ್ವ, ೯೭-೯೭)

ಅನಂತರ ಅಗಸ್ತ್ಯಋಷಿಯು ಸಂತಾನಫಲವನ್ನು ಪಡೆಯಬೇಕೆಂದಿಚ್ಛಿಸಿದನು. ಆದರೆ ತನಗೆ ಅನುರೂಪಳಾದ ಸ್ತ್ರೀಯು ಯಾರೂ ದೊರಕಲಿಲ್ಲ. ಅನಂತರ ತಾನೇ ತನಗನುರೂಪಳಾದ ಒಂದು ಕನ್ಯೆಯನ್ನು ಸೃಷ್ಟಿಮಾಡಿದನು. ಅವಳನ್ನು ಪುತ್ರೇಚ್ಛೆಯುಳ್ಳವನಾದ ವಿದರ್ಭರಾಜನಲ್ಲಿ ಪೋಷಣೆಗಾಗಿ ಬಿಟ್ಟನು. ವಿದರ್ಭರಾಜನು ಅವಳನ್ನು ಪಡೆದು ಸಂತುಷ್ಟನಾದನು. ಅವನ ಮಿತ್ರರೆಲ್ಲರೂ ಸಹ ಅವನನ್ನು ಇಂತಹ ಸುಂದರಳಾದ ಪುತ್ರಿಯ ಲಾಭಕ್ಕಾಗಿ ಅಭಿನಂದಿಸಿದರು. ಅವಳಿಗೆ ಲೋಪಾಮುದ್ರೆಯೆಂಬ ಹೆಸರನ್ನಿಟ್ಟರು. ಅವಳು ವಿದರ್ಭರಾಜನ ಅರಮನೆಯಲ್ಲಿ ಸುಖವಾಗಿ ಬೆಳೆದು ತಾರುಣ್ಯವನ್ನು ಪಡೆದಳು. ಆಗ ಅಗಸ್ತ್ಯನು ಬಂದು ತನ್ನ ಪತ್ನಿಯನ್ನಾಗಿ ಅವಳನ್ನು ಕೊಡಬೇಕೆಂದು ವಿದರ್ಭರಾಜನನ್ನು ಪ್ರಾರ್ಥಿಸಿದನು. ಆಗ ಅವನು ಅದಕ್ಕಿಷ್ಟಪಡಲಿಲ್ಲ. ಆದರೆ ಕ್ರುದ್ಧನಾದ ಋಷಿಯು ಶಪಿಸಬಿಡಬಹುದೆಂಬ ಭಯವುಂಟಾಗಿ ಆ ವಿಷಯದಲ್ಲಿ ತನ್ನ ಪತ್ನಿಯ ಅನುಮತಿಯನ್ನು ಕೇಳಲುಹೋದನು. ಆಗ ಲೋಪಾಮುದ್ರೆಯೇ ತಂದೆಯ ಹತ್ತಿರಕ್ಕೆ ಬಂದು ತನ್ನನ್ನು ಅಗಸ್ತ್ಯನಿಗೆ ಕೊಡಬೇಕೆಂಬುದಾಗಿ ಹೇಳಿದಳು. ಅನಂತರ ವಿದರ್ಭರಾಜನು ಅವಳನ್ನು ವಿಧಿಪೂರ್ವಕವಾಗಿ ಅಗಸ್ತ್ಯನಿಗೆ ವಿವಾಹಮಾಡಿಕೊಟ್ಟನು. ಅಗಸ್ತ್ಯನು ಲೋಪಾಮುದ್ರೆಯನ್ನು ಪತ್ನಿಯನ್ನಾಗಿ ಪಡೆದನಂತರ ಅವಳನ್ನೂ ಸಹ ಋಷಿನಿಯಮದಲ್ಲಿರಬೇಕೆಂದಿಚ್ಛಿಸಿ ಅವಳ ಆಭರಣಾದಿಗಳನ್ನು ಕಳೆದು, ಅವಳೂ ಯತಿವೇಷವನ್ನು ಧಂಸಬೇಕೆಂದು ಹೇಳಿದೊಡನೆಯೇ ಅವಳು ಪತಿಯ ಮಾತಿಗನುಸಾರವಾಗಿ ವಲ್ಕಲಗಳನ್ನು ಧರಿಸಿ ಪತಿಗನುಕೂಲಳಾಗಿದ್ದಳು. ಇಂತಹ ಅನುರೂಪಳಾದ ಪತ್ನಿಯನ್ನು ಪಡೆದು, ಅವಳ ಜೊತೆಯಲ್ಲಿ ಗಂಗಾತೀರದಲ್ಲಿ ಉಗ್ರವಾದ ತಪಸನ್ನಾಚರಿಸುತ್ತಿದ್ದನು. ಅವಳೂ ಸಹ ಪತಿಯ ಮೇಲಿನ ಪ್ರೀತಿಯಿಂದಲೂ ಗೌರವಬುದ್ಧಿಯಿಂದಲೂ ಅವನನ್ನುಪಚರಿಸುತ್ತಾ ಅವನಿಗೆ ಸಹಾಯಕಳಾಗಿದ್ದಳು. ಒಂದು ಸಲ ಲೋಪಾಮುದ್ರೆಯು ಋತುಸ್ನಾತಳಾದಾಗ ಅಗಸ್ತ್ಯನಿಗೆ ಅವಳ ಆತ್ಮಶುದ್ಧಿಯಿಂದಲೂ, ದೇಹ ಸೌಂದರ್ಯದಿಂದಲೂ ಮತ್ತು ಪತಿ ಪ್ರೇಮದಿಂದಲೂ ತುಷ್ಟನಾಗಿ, ಅವಳೊಡನೆ ಸಂಗವನ್ನು ಬಯಸಿದನು ಎಂದು ಮಹಾಭಾರತದಲ್ಲಿ ಕಥೆಯಿದೆ. ಆದರೆ ಲೋಪಾಮುದ್ರೆಯು ಕಠಿಣವಾದ ತಪಸ್ಸಿನಿಂದ ವಿಶ್ರಾಂತಿಯನ್ನು ಪಡೆದು, ಪತಿಯ ಸಂಗವನ್ನಪೇಕ್ಷಿಸಿದಳು ಎಂದು ಋಕ್ಸಂಹಿತೆಯಲ್ಲಿ ವರ್ಣಿತವಾಗಿದೆ. ಮಹಾಭಾರತದಲ್ಲಿ ಅಗಸ್ತ್ಯನೇ ಅಪೇಕ್ಷಿಸಿದನೆಂದಿದೆ. ಉಳಿದ ಕಥೆಯೆಲ್ಲವೂ ಸಮಾನವಾಗಿದೆ. ಬೃಹದ್ದೇವತೆಯಲ್ಲಿ **" ಋತುಸ್ನಾತಾಋಷಿರ್ಭಾರ್ಯಾಂ ಲೋಪಾಮುದ್ರಾಂ ಯಶಸ್ವಿನೀಂ। ಉಪಜಲ್ಪಿತುಮಾರೇಭೇ ರಹಃ ಸಂಯೋಗಕಾಮ್ಯಯಾ ॥** ಎಂದಿರುವಂತೆಯೇ ಮಹಾಭಾರತದಲ್ಲೂ ಸಹ **" ತಪಸಾ ದ್ಯೋತಿತಾಂ ಸ್ನಾತಾಂ ದದರ್ಶ ಭಗವಾನೃಷಿಃ "** ಎಂದಿದೆ. ಈ ಕಥೆಯ ಅನುಪೂರ್ವಿಯಲ್ಲಿ ವೇದದಲ್ಲಿರುವ ವರ್ಣನೆಗೂ, ಇತಿಹಾಸದ ವರ್ಣನೆಗೂ ಅಧಿಕವಾದ ವ್ಯತ್ಯಾಸವಿರುವುದಿಲ್ಲ. ಅದೇ ವಿಷಯವನ್ನು ನಿರುಕ್ತಕಾರರು **ಋಷಿಪುತ್ರ್ಯಾ ವಿಲಪಿತಂ** ಎಂದು ತಿಳಿಸಿದ್ದಾರೆ.

**ನದಸ್ಯ—ನದನಸ್ಯ ಜಪಶಬ್ದಯಿತುರ್ಜಪಾಧ್ಯಯನಕರ್ತುಃ ।** ಜಪ, ಸ್ತೋತ್ರ ಇತ್ಯಾದಿಗಳನ್ನು ಪಠಿಸುವ ರೂಪದಲ್ಲಿ ಶಬ್ದಮಾಡತಕ್ಕ ಸ್ತುತಿಕರ್ತನ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಈ ಋಕ್ಕಿನ ವಿವರಣೆಯನ್ನು ಹೇಳುವಾಗ ಈ ಪದದ ನಿರ್ವಚನವನ್ನು ಕೆಳಗೆ ಕಂಡಂತೆ ತಿಳಿಸಿದ್ದಾರೆ.

**"ಋಷಿರ್ನದೋ ಭವತಿ ನದತೇಃ ಸ್ತುತಿಕರ್ಮಣಃ''**

(ನಿ. ೫–೨)

ಸ್ತುತಿಸು ಎಂಬರ್ಥವನ್ನು ಕೊಡುವ **ನದ್** ಧಾತುವಿನಿಂದ ನಿಷ್ಪನ್ನವಾದ **ನದ** ಶಬ್ದಕ್ಕೆ ಸ್ತುತಿಕರ್ತನಾದ ಋಷಿಯೆಂದರ್ಥ. ಋಷಿಪರ್ಯಾಯವಾಗಿ ಹೀಗೆಯೇ ಈ ಪದವ ಅನೇಕಕಡೆಗಳಲ್ಲಿ ಉಪಯೋಗಿಸಿದೆ. ಉದಾಹರಣೆಗೆ—

**ರಪದ್ಗಂಧರ್ವೀರಪ್ಯಾ ಚ ಯೋಷಣಾ ನದಸ್ಯ ನಾದೇ ಪರಿ ಪಾತು ನೋ ಮನಃ ।**

(ಋ. ಸಂ. ೧೦-೧೧-೨)

ಎಂಬಲ್ಲಿ **ನದಸ್ಯ, ನಾದೇ** ಎಂಬ ಎರಡು ಪದಗಳಿವೆ. ಇವುಗಳಲ್ಲಿ **ನದಸ್ಯ** ಎಂಬ ಪದಕ್ಕೆ **ಸ್ತೋತುಃ** ಎಂದೂ, **ನಾದೇ** ಎಂಬ ಪದಕ್ಕೆ ಸ್ತುತಿರೂಪವಾದ ಶಬ್ದವೆಂದೂ ಅರ್ಥಮಾಡಿದೆ. ಆದರೆ ಈ ಪದವಿರುವ ಕಡೆಗಳಲ್ಲೆಲ್ಲಾ ಸ್ತೋತೃವೆಂಬ ಅರ್ಥವೇ ಇರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ—

**ಉಕ್ಷಂತೇ ಅಶ್ವಾ॑ ಅತಾ॑ ಇವಾಜಿಷು ನದಸ್ಯ ಕರ್ಣೈಸ್ತುರಯಂತ ಆಶುಭಿಃ ।**

(ಋ. ಸಂ. ೨-೩೪-೩)

ಎಂಬಲ್ಲಿ **ಶಬ್ದವತಃ ಮೇಘಸ್ಯ ।** ಶಬ್ದವನ್ನು ಮಾಡತಕ್ಕ ಮೇಘದ ಎಂದರ್ಥವೆಂದಿದ್ದಾರೆ.

**ನಿಃ ರಿಣಾತಿ—ರಿಣಾತಿ** ಎಂಬ ಪದವು ಗತ್ಯರ್ಥಕನಾಮುಗಳಲ್ಲಿ ಪಠಿತವಾಗಿದೆ. ಇಲ್ಲಿ ಸಮಾಪಿಸುತ್ತಾಳೆ ಎಂದರ್ಥ ಮಾಡಿದೆ. ಆದರೆ ಈ ಪದಕ್ಕೆ ಅರ್ಥವು ಒಟ್ಟು ಋಕ್ಕಿನ ಅನ್ವಯವನ್ನನುಸರಿಸುತ್ತದೆ. ಹೇಗೆಂದರೆ, ಸಾಯಣರು ಹೇಳಿರು ವಂತೆ ಈ ವಾಕ್ಯವು ಅಗಸ್ತ್ಯನಿಂದ ಪಠಿತವಾಗಿದ್ದರೆ ಆಗ ಸಮಾಪಿಸುತ್ತಾಳೆಂಬರ್ಥವುಳ್ಳದ್ದಾಗುತ್ತದೆ. ಅಥವಾ ನಿರುಕ್ತಕಾರರ ಮತದಂತೆ ಲೋಪಾಮುದ್ರೆಯ ವಾಕ್ಯವಾಗಿದ್ದರೆ ಆಗ ದಹಿಸುತ್ತದೆ ಎಂಬರ್ಥವುಳ್ಳದ್ದಾಗುತ್ತದೆ. ಸಾಧಾರಣವಾಗಿ ಈ ಪದವು ಶೋಷಿಸು, ದಹಿಸು ಎಂಬರ್ಥಗಳಲ್ಲಿಯೇ ಅಧಿಕವಾಗಿ ಉಪಯೋಗಿಸಲ್ಪಟ್ಟಿದೆ, ಉದಾಹರಣೆಗೆ—

**ಪೂರೂಣಿ ದಸ್ಮೋ ನಿ ರಿಣಾತಿ ಜಂಭೈರಾದ್ರೋಚತೇ ವನ ಆ ವಿಭಾವ ।**

(ಋ. ಸಂ. ೧-೧೪೮-೪)

ಇತ್ಯಾದಿ ಋಕ್ಕುಗಳಲ್ಲಿ ದಹಿಸು ಎಂಬರ್ಥವನ್ನು ಕೊಡುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸಂಯಮಿಯ ಪ್ರೇಮ ದಲ್ಲಿ ಕಾಮಸಂತೃಪ್ತಿಗೆ ಅವಕಾಶವಿಲ್ಲದುದರಿಂದ ದೇಹವನ್ನು ದಹಿಸುತ್ತದೆ ಎಂದು ಅರ್ಥಮಾಡಿದರೆ ಅದು ತಪ್ಪಾಗಲಾರದು. **ಇತಃ, ಅನುತಃ** ಎಂಬ ಪದಗಳಿಗೂ ಹೀಗೆಯೇ ಅರ್ಥವ್ಯತ್ಯಾಸವಾಗುತ್ತದೆ.

**ಇತಿ ದ್ವಿತೀಯ ಖಂಡಃ ॥**

ಇಲ್ಲಿಗೆ ಎರಡನೆಯ ಖಂಡವು ಸಮಾಪ್ತವು

---

## ಅಥ ತೃತಿಯಃ ಖಂಡಃ

### ನೂರನೆಯ ಖಂಡವು

ನ ಯಸ್ಯ ದ್ಯಾವಾಪೃಥಿವೀ ನ ಧನ್ವ ನಾನ್ತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ । ಅಶ್ನೋತೇರಿತ್ಯೇಕೇ। ಅನೂಪೇ ಗೋಮಾನ್ಗೋ-ಭಿರಕ್ಷಾಃ ಸೋಮೋ ದುಗ್ಧಾಭಿರಕ್ಷಾಃ । ಲೋಪಾಶಃ ಸಿಂಹಂ ಪ್ರತ್ಯಞ್ಚ ಮತ್ಸಾಃ । ಕ್ಷಿಯತಿನಿಗಮಃ ಪೂರ್ವಃ ಕ್ಷರತಿನಿಗಮ ಉತ್ತರ ಇತ್ಯೇಕೇ-

ನೂಪೇ ಗೋಮಾನ್ಗೋಭಿರ್ಯದಾ ಕ್ಷಿಯತ್ಯಥ ಸೋಮೋ ದುಗ್ಧಾಭ್ಯಃ ಕ್ಷರತಿ ಸರ್ವೇ ಕ್ಷಯತಿನಿಗಮಾ ಇತಿ ಶಾಕಪೂಣಿಃ ಶ್ವಾತ್ರಮಿತಿ ಕ್ಷಿಪ್ರನಾಮಾಶು ಅತನಂ ಭವತಿ । ಸ ಪತತ್ರೀತ್ವರಂ ಸ್ಥಾ ಜಗದ್ಯ ಚ್ಛ್ವಾತ್ರಮಗ್ನಿರಕೃಣೋಜ್ಜಾತವೇದಾಃ । ಸ ಪತತ್ರಿ ಚೇತ್ವರ ಸ್ಥಾವರಂ ಜಂಗಮಂ ಚ ಯತ್ತತ್ಕ್ಷಿಪ್ರಮಗ್ನಿರಕರೋಜ್ಜಾತವೇದಾ ಊತಿರವ- ನಾತ್ । ಆ ತ್ವಾ ರಥಂ ಯಥೋತಯ ಇತ್ಯಪಿ ನಿಗಮೋ ಭವತಿ ಹಾಸಮಾನೇ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮೋ ವಮ್ರಕಃ ಪಡ್ಭಿರುಪಸ ರ್ಪದಿಂದ್ರಂ । ಪಾನೈರಿತಿ ವಾ ಸ್ಪರ್ಶನೈರಿತಿ ವಾ ಸಸಂ ನ ಪಕ್ವಮವಿ- ದಚ್ಛುಚನ್ತಂ । ಸ್ವಪನಮೇತನ್ಮಾಧ್ಯಮಿಕಂ ಜ್ಯೋತಿರನಿತ್ಯದರ್ಶನಂ ತದಿವಾವಿದಜ್ಜಾಜ್ವಲ್ಯಮಾನಂ । ದ್ವಿತಾ ಚ ಸತ್ತಾಸ್ವಧಯಾ ಚ ಶಮ್ಭುಃ । ದ್ವೈಧಂ ಸತ್ತಾ ಮಧ್ಯಮೇ ಚ ಸ್ಥಾನಉತ್ತಮೇ ಚ ಶಮ್ಭುಃ ಸುಖಭೂಃ । ಮೃಗಂ ನ ವ್ರಾ ಮೃಗಯಂತೇ । ಮೃಗಮಿವ ವ್ರಾತ್ಯಾಃ ಪ್ರೇಷಾಃ ॥ ೩ ॥

---

ಸೋಮೋ ಅಕ್ಷಾಃ ॥೧೩॥

" ನ ಯಸ್ಯ ದ್ಯಾವಾಪೃಥಿವೀ ನ ಧನ್ವ ನಾನ್ತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ । "

ಅಶ್ನೋತೇರಿತ್ಯೇವಮೇಕೇ ।

" ಅನೂಪೇ ಗೋಮಾನ್ಗೋಭಿರಕ್ಷಾಃ ಸೋಮೋ ದುಗ್ಧಾಭಿರಕ್ಷಾಃ । ಲೋಪಾಶಃ ಸಿಂಹಂ ಪ್ರತ್ಯಞ್ಚ ಮತ್ಸಾಃ । "

ಕ್ಷಿಯತಿ ನಿಗಮಃ ಪೂರ್ವಃ ಕ್ಷರತಿ ನಿಗಮ ಉತ್ತರ ಇತ್ಯೇಕೇ ಅನೂಪೇ ಗೋಮಾನ್ ಗೋಭಿರ್ಯದಾ ಕ್ಷಿಯತ್ಯಥ ಸೋಮೋ ದುಗ್ಧಾಭ್ಯಃ ಕ್ಷರತಿ ಸರ್ವೇ ಕ್ಷಿಯತಿ ನಿಗಮಾ ಇತಿ ಶಾಕಪೂಣಿಃ ॥೪॥

ಉದಾಹರಣೆಯ ಋಕ್ಕು—

**ನ ಯಸ್ಯ ದ್ಯಾವಾಪೃಥಿವೀ ನ ಧನ್ವನಾಂತರಿಕ್ಷಂ ನಾದ್ರಯಃ ಸೋಮೋ ಅಕ್ಷಾಃ ।**
**ಯದಸ್ಯ ಮನ್ಯುರಧಿನೀಯಮಾನಃ ಶೃಣಾತಿ ವೀಳುಂ ರುಜತಿ ಸ್ಥಿರಾಣಿ ॥**

(ಋ–ಸಂ–೧೦–೮೯–೬)

ಇದರ ಅರ್ಥವು—

ಭೂಮ್ಯಂತರಿಕ್ಷಗಳು, ಪರ್ವತಗಳು, ಸ್ವರ್ಗಲೋಕವು ಇವು ಯಾವುವೂ ಸೋಮದೇವತೆಯ ಮಹಿಮೆಯನ್ನು ಹೊಂದಲಾರವು. ಇಂದ್ರನು ಸಹ ಸೋಮಪಾನದಿಂದ ಉತ್ಸಾಹಿತನಾದಕಾಲದಲ್ಲಿ ಮಾತ್ರವೇ ಕ್ರೋಧಾವಿಷ್ಟನಾಗಿ ಸ್ಥಿರವಾಗಿ ನಿಂತು ಎದುರಿಸುವ ಶತ್ರುಬಲಗಳನ್ನು ಸೋಲಿಸಿ ನಾಶಮಾಡಲು ಶಕ್ತನಾಗುತ್ತಾನೆ.

ಭೂಮ್ಯಂತರಿಕ್ಷಗಳು, ಉದಕಗಳು, ಅಂತರಿಕ್ಷವು, ಪರ್ವತಗಳು, ಇವುಗಳೆಲ್ಲವೂ ಹೊಂದಲಾರದ ಮಹಿಮೆಯನ್ನು ಸೋಮವು (ಸೋಮಲತೆಯು) ಹೊಂದಿರುವುದು. **ಅಕ್ಷಾಃ** ಎಂಬ ಶಬ್ದವು ಹೊಂದು, ವ್ಯಾಪಿಸು ಎಂಬರ್ಥವುಳ್ಳ ಅಶ್ನೋತಿ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಕೆಲವರು ಹೇಳುವರು.

ಕೆಲವರು **ಅಕ್ಷಾಃ** ಎಂಬ ಶಬ್ದವು ಪ್ರವಹಿಸು ಎಂಬರ್ಥವನ್ನು ಉಂಟುಮಾಡುವುದೆಂದು ಮುಂದಿನ ಋಕ್ಕಿನಲ್ಲಿ ಹೇಳಿರುವರು—

**ಅನೂಪೇ ಗೋಮಾನ್ಗೋಭಿರಕ್ಷಾಃ ಸೋಮೋ ದುಗ್ಧಾಭಿರಕ್ಷಾಃ ।**
**ಸಮುದ್ರಂ ನ ಸಂವರಣಾನ್ಯಗ್ಮನ್ಮಂದೀ ಮದಾಯ ತೋಶತೇ ॥**

(ಋ. ಸಂ. ೯-೧೦೭-೯)

ಇದರ ಅರ್ಥವು—ಕ್ಷೀರಯುಕ್ತನಾದ ಸೋಮದೇವತೆಯು (ಲತೆಯು) ನಿಮ್ನ ಪ್ರದೇಶದಲ್ಲಿರುವ ಕಲಶಕ್ಕೆ ಕ್ಷೀರಾದಿಗಳೊಡನೆ ಹೋಗಿ ಸೇರುತ್ತಾನೆ. ಕ್ಷೀರಾದಿಗಳೊಡನೆ ಮಿಶ್ರಿತನಾಗಿ ಪ್ರವಹಿಸುತ್ತಾನೆ. ಉದಕಗಳು ಸಮುದ್ರವನ್ನು ಹೋಗಿ ಸೇರುವಂತೆ ಪೂಜ್ಯವಾದ ಅವನ ರಸಗಳು ದ್ರೋಣಕಲಶಕ್ಕೆ ಹೋಗಿ ಸೇರುತ್ತವೆ. ಹರ್ಷಕಾರಕನಾದ ಸೋಮನು ದೇವತೆಗಳ ಹರ್ಷಕ್ಕಾಗಿ ಹಿಂಡಲ್ಪಡುತ್ತಾನೆ.

**ಲೋಪಾಶಃ ಸಿಂಹಂ ಪ್ರತ್ಯಂಚಮತ್ಸಾಃ**—ನರಿಯು ಯಾವಾಗಲೂ ಸಿಂಹವನ್ನು ಹಿಂಬಾಲಿಸಿ ಅನುಸರಿಸುತ್ತದೆ.

**ಅಕ್ಷಾಃ**—ಎಂಬ ಶಬ್ದಕ್ಕೆ ವ್ಯಾಪಿಸು, ವಾಸಿಸು ಎಂಬರ್ಥವು ಮೊದಲನೆಯ ಉದಾಹರಣೆಯಲ್ಲಿ ವ್ಯಕ್ತಪಡುವುದೆಂದು ಎರಡನೆಯ ಉದಾಹರಣೆಯಲ್ಲಿ ಪ್ರವಹಿಸು, ಪರಿ ಎಂಬರ್ಥವು ಸೂಚಿತವಾಗುವುದೆಂದು ಕೆಲವರ ಅಭಿಪ್ರಾಯವಿರುವುದೆಂದು ಶಾಕಪೂಣಿ ಎಂಬ ಆಚಾರ್ಯರ ಮತವು.

ಶ್ವಾತ್ರಮ್ ॥ ೧೪ ॥

ಶ್ವಾತ್ರಮಿತಿ ಕ್ಷಿಪ್ರನಾಮಾಶು ಅತನಂ ಭವತಿ । "ಸಪತತ್ರೀತ್ವರಂ ಸ್ಥಾ ಜಗದ್ಯಚ್ಛ್ವಾತ್ರಮಗ್ನಿರಕೃಣೋಜ್ಜಾತವೇದಾಃ।" ಸ ಪತತ್ರಿ ಜೇತ್ವರಂ ಸ್ಥಾವರಂ ಜಙ್ಗಮಞ್ಚ ಯತ್ತತ್ಕ್ಷಿಪ್ರಮಗ್ನಿರಕರೋಜ್ಜಾತವೇದಾಃ ॥ ೨ ॥

**ಶ್ವಾತ್ರಂ** ಎಂದರೆ ಕ್ಷಿಪ್ರಂ, ಬೇಗನೆ, ಶೀಘ್ರವಾಗಿ ಬೇಗನೆ ಚಲಿಸುವ ಎಂದರ್ಥವು. ಈ ಅಗ್ನಿಯು ರೆಕ್ಕೆಯುಳ್ಳವನಾದ್ದರಿಂದಜ್ವಾಲೆಯುಳ್ಳವನಾದ್ದರಿಂದ ಪಕ್ಷಿಗಳಂತೆ ವೇಗವಾಗಿ ಸಂಚರಿಸಬಲ್ಲನು ಮತ್ತು ಈ ಜಾತವೇದನೆಂಬ ಅಗ್ನಿಯು ಪೂರ್ವದಲ್ಲಿ ಸಕ್ಷ್ಯಾದಿಪ್ರಾಣಿಗಳನ್ನೂ ಅಚೇತನಗಳಾದ ರಥಾದಿಗಳನ್ನೂ ಸೃಷ್ಟಿಮಾಡಿದನು—

ಉದಾಹರಣೆಯು ಋಕ್ಕು—

**ಯೋ ಹೋತಾಸೀತ್ಪ್ರಥಮೋ ದೇವಜುಷ್ಟೋ ಯಂ ಸಮಾಂಜನ್ನಾಜ್ಯೇನಾ ವೃಣಾನಾಃ ।**
**ಸ ಪತತ್ರೀ ತ್ವರಂ ಸ್ಥಾ ಜಗದ್ಯಚ್ಛ್ವಾತ್ರಮಗ್ನಿರಕೃಣೋಜ್ಜಾತವೇದಾಃ ॥**

(ಋ. ಸಂ. ೧೦–೮೮–೪)

ಇದರ ಅರ್ಥವು—

ದೇವತೆಗಳಿಂದ ಸೇವಿತನೂ, ಅತ್ಯಂತಮುಖ್ಯನೂ, ಹೋಮಸಂಪಾದಕನೂ ಆದ ಯಾವ ವೈಶ್ವಾನರಾಗ್ನಿಯನ್ನು ಯಜಮಾನರು ಆಜ್ಯದಿಂದ ಸಂಸ್ಕರಿಸಿ ಪೂಜಿಸಿದರೋ ಅದೇ ಅಗ್ನಿಯು ಹಾರಾಡುವ ಪಕ್ಷಿಗಳನ್ನೂ, ನೆಲದ ಮೇಲೆ ನಡೆಯುವ ಸಕಲಪ್ರಾಣಿಗಳನ್ನೂ, ವೃಕ್ಷಾದಿಗಳನ್ನೂ ಕೂಡಿರುವ ಸಕಲ ಪ್ರಪಂಚವನ್ನು ಬೇಗನೆ ನಿರ್ಮಿಸಿದನು.

ಊತಿಃ ॥ ೧೫ ॥

ಊತಿವಾನ್ । “ ಆ ತ್ವಾ ರಥಂ ಯಥೋತಯೇ ” ಇತ್ಯಪಿ ನಿಗಮೋ ಭವತಿ ॥ ೩ ॥

**ಊತಿಃ** ಎಂದರೆ ರಕ್ಷಣೆ ಎಂದರ್ಥ—

ಉದಾಹರಣೆಯ ಋಕ್ಕು—

**ಆ ತ್ವಾ ರಥಂ ಯಥೋತಯೇ ಸುಮ್ನಾಯ ವರ್ತಯಾಮಸಿ ।**
**ತುವಿಕೂರ್ಮಿಮೃತೀಷಹಮಿಂದ್ರ ಶವಿಷ್ಠ ಸತ್ಪತೇ ॥**

(ಋ. ಸಂ. ೮–೬೮–೧)

ಅತ್ಯಂತ ಬಲಯುತನೂ, ಸಜ್ಜನರ ಪಾಲಕನೂ ಆದ ಎಲೈ ಇಂದ್ರನೇ, ಅನೇಕ ವಿಧವಾದ ಕರ್ಮಾಂತಕನೂ, ಹಿಂಸಕರಾದ ಶತ್ರುಗಳನ್ನು ಉರುಳಿಸುವವನೂ ಆದ ನಿನ್ನನ್ನು ನಮ್ಮ ರಕ್ಷಣಾರ್ಥಕವಾಗಿಯೂ ನಮ್ಮ ಸುಖಕ್ಕಾಗಿಯೂ ಸಹ ರಥವು ನಿನ್ನನ್ನು ಕರೆತರುವಂತೆ ನಾವೂ ಕರೆತರುತ್ತೇವೆ.

ಹಾಸಮಾನೇ ॥ ೧೬ ॥

ಹಾಸಮಾನೇ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥ ೪ ॥

**ಹಾಸಮಾನೇ** ಎಂಬ ಪದವನ್ನು ಮುಂದೆ (ನಿ. ೯–ನೇ ಅಧ್ಯಾಯ ೩೯ ನೇ ಖಂಡದಲ್ಲಿ ) ವಿವರಿಸುವೆವು.

ಪಡ್ಭಿಃ ॥ ೧೭ ॥

ವಮ್ರಕಃ ಪಡ್ಭಿರುಪಸರ್ಪದಿನ್ದ್ರಮ್ । ಪಾನ್ಯೈರಿತಿ ವಾ ಸ್ಪಾಶನೈರಿತಿ (ಸ್ಪಶನೈರಿತಿ ವಾ) । ೫ ।

**ಪಡ್ಭಿಃ** ಎಂದರೆ ಪಾನ್ಯೈಃ ಸೋಮಪಾನಗಳಿಂದ ಎಂದರ್ಥವು. ಅಥವಾ **ಸ್ಪಾಶನೈರಿತಿ ವಾ** ಸ್ತುತಿಗಳಿಂದ ಎಂತಲೂ ಅರ್ಥವಾಗಬಹುದು.

ಉದಾಹರಣೆಯ ಋಕ್ಕು—

**ಏವಾ ಮಹೋ ಅಸುರ ವಕ್ಷಥಾಯ ವಮ್ರಕಃ ಪಡ್ಭಿರುಪಸರ್ಪದಿಂದ್ರಂ ।**
**ಸ ಇಯಾನಃ ಕರತಿ ಸ್ವಸ್ತಿಮಸ್ಮಾ ಇಷಮೂರ್ಜಂ ಸುಕ್ಷಿತಂ ವಿಶ್ವಮಾಭಾಃ ॥**

(ಋ. ಸಂ. ೧೦-೯೯-೧೨)

ಇದರ ಅರ್ಥವು—

ಶಕ್ತಿಯುತನಾದ ಎಲೈ ಇಂದ್ರನೇ, ಈ ರೀತಿ ವಮ್ರಕನು ಮಹತ್ತಾದ ಹವಿಸ್ಸಿನ ಪ್ರಾಪ್ತಿಗಾಗಿ ಪ್ರಭುವಾದ ನಿನ್ನನ್ನು ಪಾದಗಳಿಂದ ಸಮೀಪಿಸುತ್ತಾನೆ. ಈ ರೀತಿ ಸಮೀಪಿಸಲ್ಪಟ್ಟ ವಮ್ರಕನಿಗೆ ಮಂಗಳವನ್ನುಂಟುಮಾಡು. ಅವನಿಗೆ ಸಕಲವಾದ ಅನ್ನವನ್ನೂ ರಸವನ್ನೂ, ಉತ್ತಮವಾದ ವಾಸಸ್ಥಾನವನ್ನೂ ಒದಗಿಸಲಿ.

ಎಂದರೆ ಸೋಮರಸವೇ ಮೊದಲಾದ ಪಾನಗಳಿಂದ ಅಥವಾ ಸ್ತೋತ್ರಗಳಿಂದ ಋಷಿಯು ಇಂದ್ರನನ್ನು ಸಮೀಪಿಸುವನು. ಎಂದರೆ ಇಂದ್ರನನ್ನೂ ಪ್ರಾರ್ಥಿಸಿ ಕರೆಯುವನು ಎಂದು ಅಭಿಪ್ರಾಯವು. ಇಂದ್ರನು ಪ್ರತ್ಯಕ್ಷ ಗೋಚರನಲ್ಲದ ದೇವತೆಯಾದ್ದರಿಂದ ಪಾದಗಳಿಂದ ಇಂದ್ರನನ್ನು ಸಮೀಪಿಸುವನು ಎಂದು ಹೇಳುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಪಾನಯೋಗ್ಯವಾದ ಸೋಮರಸದಿಂದ ಅಥವಾ ಸ್ತೋತ್ರಗಳಿಂದ ಇಂದ್ರನನ್ನೂ ಪ್ರಾರ್ಥಿಸಿ ಕರೆಯುವನು. ಎಂಬ ಯಾಸ್ಕರ ಅಭಿಪ್ರಾಯವೇ ಹೆಚ್ಚು ಗ್ರಾಹ್ಯವಾಗಿರುವುದು.

ಸಸಮ್ ॥೧೮॥

" ಸಸಂ ನ ಪಕ್ವಮವಿದಚ್ಛುಚನ್ತಮ್ " ॥ ಸ್ವಪನಮೇತನ್ಮಾಧ್ಯಮಿಕಂ ಜ್ಯೋತಿರನಿತ್ಯದರ್ಶನಂ ತದಿವಾವಿದಜ್ಜಾಜ್ವಲ್ಯಮಾನಮ್ ॥ ೬ ॥

ಸಸಂ ಎಂದರೆ **ಸ್ವಪನಂ** ಸ್ವಪ್ನದಲ್ಲಿ ಕಾಣುವಂತೆ ಎಂದರ್ಥವು, ಸ್ವಪ್ನದಲ್ಲಿ ಒಂದು ಕ್ಷಣಕಾಲಮಾತ್ರ ಕಾಣುವಂತೆ ಜಾಜ್ವಲ್ಯಮಾನವಾದ ಎಂದಭಿಪ್ರಾಯವು,

ಉದಾಹರಣೆಯ ಋಕ್ಕು—

**ಪ್ರ ಮಾತುಃ ಪ್ರತರಂ ಗುಹ್ಯಮಿಚ್ಛನ್ಕುಮಾರೋ ನ ವೀರುಧ ಉಪಸರ್ಪದುರ್ವೀಃ ।**
**ಸಸಂ ದ ಪಕ್ವಮವಿದಚ್ಛುಚಂತಂ ರಿರಿಹ್ವಾಂಸಂ ರಿಪ ಉಪಸ್ಥೇ ಅಂತಃ ॥**

(ಋ. ಸಂ. ೧೦-೭೯-೩)

**ಅದರ ಅರ್ಥವು—**

ಅಗ್ನಿಯು ಪೃಥ್ವಿಗೆ ಸಂಬಂಧಿಸಿದ ಬಹುವಾದ ಲತೆಗಳನ್ನು ಉತ್ಕೃಷ್ಟವಾಗಿ ಭೂಮಿಯೊಳಗೆ ಅಡಗಿರುವ ಆ ಲತೆಗಳ ಬೇರುಗಳನ್ನೂ ಅಪೇಕ್ಷಿಸುತ್ತ ಎಳೆಯ ಮಗುವಿನಂತೆ ತಿನಳುತ್ತಾನೆ. ಪಕ್ವವಾದ ಅನ್ನದಂತೆ ಪ್ರಕಾಶಿಸುವುದೂ ಅಂತರಿಕ್ಷವನ್ನು ಅಪ್ಪುತ್ತಿರುವುದೂ ಆದ ವೃಕ್ಷವನ್ನು ಪೃಥ್ವಿಯ ತೊಡೆಯ ಮೇಲೆ ಹೊಂದುತ್ತಾನೆ. ಎಂದರೆ ಭೂಮಿಯ ಮೇಲೆ ಒಣಗಿ ನಿಂತಿರುವ ವೃಕ್ಷವನ್ನು ತಕ್ಷಣವೇ ದಹಿಸುತ್ತಾನೆ.

ದ್ವಿತಾ ॥೧೯॥

"ದ್ವಿತಾ ಚ ಸತ್ತಾ ಸ್ವಧಯಾ ಚ ಶಮ್ಭುಃ " ॥ ದ್ವೈಧಂ ಸತ್ತಾ ಮಧ್ಯ-
ಮೇ ಚ ಸ್ಥಾನ ಉತ್ತಮೇ ಚ । ಶಮ್ಭುಃ ಸುಖಭೂಃ ॥ ೭ ॥

**ದ್ವಿತಾ** ಎಂದರೆ **ದ್ವೈಧಂ** ಎರಡು ವಿಧವಾದ ಎಂದರ್ಥವು. ಮಧ್ಯಮಸ್ಥಾನ ಮತ್ತು ದ್ಯುಸ್ಥಾನಗಳೆಂಬ ಎರಡರಲ್ಲಿಯೂ ಇರುವ ಈ ಋಕ್ಕಿನ ಉದಾಹರಣೆಯು—

**ಯಸ್ತ್ವದ್ಧೋತಾ ಪೂರ್ವೋ ಅಗ್ನೇ ಯಜೀಯಾನ್ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ ।**
**ತಸ್ಯಾನುಧರ್ಮ ಪ್ರಯಜಾ ಚಿಕಿತ್ವೋಽಥಾ ನೋ ಧಾ ಅಧ್ವರಂ ದೇವವೀತೌ ॥**

(ಋ. ಸಂ. ೩-೧೭-೫)

ಇದರ ಅರ್ಥವು—

ಧರ್ಮವಿಷಯವನ್ನರಿತಿರುವ ಎಲೈ ಅಗ್ನಿಯೇ, ನಿನಗಿಂತಲೂ ಪೂರ್ವಭಾವಿಯಾಗಿ ಯಜ್ಞಕರ್ತನಾದ ಯಾವನು ಹೋಮ ಸಂಪಾದಕನಾಗಿ ಮಧ್ಯಮಸ್ಥಾನ ಮತ್ತು ಉತ್ತಮಸ್ಥಾನ ಈ ಎರಡು ಸ್ಥಾನಗಳಲ್ಲೂ ಸೋಮರೂಪವಾದ ಅನ್ನದೊಡನೆ ಕುಳಿತುಕೊಂಡು ಸುಖಹೇತುವಾದನೋ, ಆ ಹೋತೃವಿನ ಅನುಷ್ಠಾನಾದಿ ಧರ್ಮಗಳಿಗನುಸಾರವಾಗಿ ನೀನೂ ಯಜ್ಞವನ್ನು ಮಾಡು. ಅನಂತರ ನಮ್ಮ ಈ ಯಜ್ಞವನ್ನು ದೇವತೆಗಳ ತೃಪ್ತ್ಯರ್ಥವಾಗಿ ಅರ್ಪಿಸು.

ಈ ಮಂತ್ರದ ಪೂರ್ವಾರ್ಧಕ್ಕೆ ಸಾಯಣರು ಒಂದು ವಿಧವಾಗಿಯೂ, ಯಾಸ್ಕರು ಒಂದು ವಿಧವಾಗಿಯೂ ಅರ್ಥವನ್ನು ವಿವರಿಸಿದ್ದಾರೆ. ಸಾಯಣರ ವಿವರಣೆಯಲ್ಲಿ ಅಗ್ನಿಯು **ತ್ವತ್‌ಪೂರ್ವಃ** ಯಜೀಯಾನ್ ಹೋತಾ–ತನಗಿಂತಲೂ ಮೊದಲು ಬಂದು ಕುಳಿತು ಪ್ರಭೂತವಾದ ಹೋಮಗಳನ್ನು ಆಚರಿಸಿ, ಹವಿಸ್ಸುಗಳನ್ನು ಅರ್ಪಿಸುವುದರಿಂದ ಯಷ್ಟೃವಾಗಿರುವನು ಎಂದು ಅರ್ಥವನ್ನು ವಿವರಿಸಿದೆ. ಅಗ್ನಿಯು ತನ್ನಲ್ಲಿಯೇ ಇರುವ ಭೇದಭಾವವನ್ನು ಉಪಪಾದನೆ ಮಾಡಿರುವ ಕ್ರಮವು, **ದ್ವಿತಾ ಚ ಸತ್ತಾ ಸ್ವಧಯಾ ಚ ಶಂಭುಃ** ಎಂಬ ವಾಕ್ಯದಿಂದ ವಿವೃತವಾಗಿರುತ್ತದೆ. **ದ್ವಿತಾ** ಎಂಬ ಪದಕ್ಕೆ **ದ್ವೈಧಂ ಮಧ್ಯಮೇ ಚೋತ್ತಮೇ ಚ ಸ್ಥಾನೇ** ಅಗ್ನಿಯು ಮಧ್ಯಮಸ್ಥಾನದಲ್ಲಿಯೂ, ಉತ್ತಮಸ್ಥಾನದಲ್ಲಿಯೂ ಎರಡು ವಿಧವಾಗಿರುತ್ತಾನೆಂದೂ, ಆವನು **ಸೋಮಾಖ್ಯೇನಾನ್ನೇನ ಸಹ ನಿಷಣ್ಣಃ ಯಷ್ಟೄಣಾಂ ಸುಖಭೂಃ** ಸೋಮರೂಪವಾದ ಅನ್ನದಿಂದ ಕೂಡಿದವನಾಗಿ ಎಂದು ಸ್ವಧಾಶಬ್ದಕ್ಕೆ ಅರ್ಥವನ್ನು ವಿವರಿಸಿ, ಯಾಗವನ್ನು ಆಚರಿಸುವವನಿಗೆ ಸುಖಕರನಾಗಿರುವನು ಎಂದು ಅರ್ಥವನ್ನು ವರ್ಣಿಸಿದೆ. ಇದರಿಂದ ಅರ್ಥವು ಸ್ಪಷ್ಟವಾಗಿ ತಿಳಿಯುವಂತೆ ಇಲ್ಲ.

ಯಾಸ್ಕರು ಇದೇ ಮಂತ್ರದ ಅರ್ಥವನ್ನು ವಿವರಿಸಿದ್ದಾರೆ—ಅಗ್ನೇ ಎಂದು ಸಂಬೋಧಿಸಿ ಅಗ್ನಿಯು ಪೃಥಿವೀಸ್ಥಾನದಲ್ಲಿರುವವನೆಂದು ವಿವರಿಸಿದೆ. **ತ್ವತ್ ಪೂರ್ವ ಯಃ ಹೋತಾ** ಎಂಬ ವಾಕ್ಯದಿಂದ **ಮಧ್ಯಮಸ್ಥಾನೋ ವಾಯುಃ** ಅಗ್ನಿಗಿಂತಲೂ ಪೂರ್ವದಲ್ಲಿ ಹೋತೃವಾಗಿರವ ವಾಯುವು ಮಧ್ಯಮಸ್ಥಾನದೇವತೆಯಾಗಿರುವದೆಂದು ಹೇಳಿದೆ. ಈ ವಾಯುವು " **ಅಸಾವಪಿ ಹಿ ದೂತೋ ದೇವಾನಾಮಿತಿ ಶ್ರೂಯತೇ** " ದೇವತೆಗಳ ದೂತನಾಗಿದ್ದಾನೆಂದು ಶ್ರುತಿಯಲ್ಲಿ ಉಕ್ತವಾಗಿದೆಯೆಂದು ವಿವರಿಸಿ " **ಆ ದೂತೋ ಅಗ್ನಿಮಭರತ್ ವಿವಸ್ವತಃ** " ಎಂಬ ಶ್ರುತಿಯನ್ನು ಉದಾಹರಿಸಿ **ವೈದ್ಯುತೋಗ್ನಿರಿತಿ ಕೇಚಿನ್ಮನ್ಯಂತೇ**—ಈ ವಾಯುವು ವೈದ್ಯುತಾಗ್ನಿಯಾಗಿರುವನು ಎಂದು ಕೆಲವರ ಮತವನ್ನು ನಿರ್ದೇಶಮಾಡಿದೆ. ಯಷ್ಟೃತರಃ ಎಂಬ ಅರ್ಥವು ಯಜೀಯಾನ್ ಎಂಬ ಪದಕ್ಕೆ ವಿವೃತವಾಗಿದೆ. ದ್ವಿತಾ ಚ ಸತ್ತಾ ಎಂಬ ಪದಗಳಿಗೆ ದ್ವೈಧಂ ಎಂದು ಅರ್ಥವು ವಿವೃತವಾಗಿ, **ಮಧ್ಯಮೇ ಚ ಸ್ಥಾನೇ ವೈದುತ**–

**ಭಾವೇನ ಉತ್ತಮೇ ಚ ಸ್ಥಾನೇ ಸೂರ್ಯಭಾವೇನ** ಅಗ್ನಿಯು ವೈದ್ಯುತಾಗ್ನಿರೂಪದಿಂದ ಮಧ್ಯಮಸ್ಥಾನದಲ್ಲಿರುವನು. ಉತ್ತಮಸ್ಥಾನದಲ್ಲಿ ಸೂರ್ಯರೂಪದಿಂದ ಇರುವನು ಎಂದು ಅಗ್ನಿರೂಪದ ದ್ವೈವಿಧ್ಯವು ಪ್ರದರ್ಶಿತವಾಗಿದೆ. **ಸ್ವಧಯಾ ಚ ಶಂಭುಃ** ಎಂಬ ವಾಕ್ಯದಲ್ಲಿ **ಸ್ವಧಯಾ ಅನ್ನೇನ ಸರ್ವಭೂತಾನಾಂ ವರ್ಷದ್ವಾರೇಣ** ಎಲ್ಲಾ ಪ್ರಾಣಿಗಳಿಗೂ ಪೋಷಕವಾಗಿರುವ ಅನ್ನವನ್ನು ಉತ್ಪನ್ನಮಾಡುವ ವೃಷ್ಟಿಯನ್ನು ಉಂಟುಮಾಡುವುದರಿಂದ **ಶಂಭುಃ** ಅಗ್ನಿಯು ಸುಖವನ್ನೂ ಉಂಟುಮಾಡುವನೆಂಬರ್ಥವನ್ನು ವಿವರಿಸಿದೆ.

ಈ ಮಂತ್ರದ ಉತ್ತರಾರ್ಧದ ವಿವರಣೆಯು ಸಾಯಣರು ಮತ್ತು ಯಾಸ್ಕರು ಹೇಳಿರುವುದು ಒಂದೇ ವಿಧವಾಗಿರುತ್ತದೆ **ಚಿಕಿತ್ವಃ** ಎಂಬ ಪದಕ್ಕೆ ಯಾಸ್ಕರು **ಚೇತನಾವನ್** ಜ್ಞಾನವಂತನೆಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು **ಧರ್ಮವಿಷಯಕಚೇತನಾವನ್** ಯಜ್ಞವೇ ಮೊದಲಾದ ಧರ್ಮಗಳನ್ನು ಆಚರಿಸುವ ಜ್ಞಾನವುಳ್ಳವನು ಎಂದು ಅರ್ಥವನ್ನು ವಿವರಿಸಿ, ಈ ಪದದಿಂದ ಅಗ್ನಿಯನ್ನು ಸಂಬೋಧಿಸಿದೆ ಎಂದು ಅರ್ಥಮಾಡಿ' ತಸ್ಯ **ಅನುಧರ್ಮ ಪ್ರಯಜ**—ಎಂಬ ವಾಕ್ಯಕ್ಕೆ ತ್ವತ್ತೋಽಸ್ತಿ **ಪೂರ್ವಭಾವೀ ಹೋತಾ** ನಿರೂಪಿತಃ **ತಸ್ಯ ಹೋತುಃ ಧರ್ಮಾನನು ತೇನಾನುಷ್ಠಿತಧರ್ಮಾನುಪಲಕ್ಷ್ಯ ದೇವಾನ್ ಪ್ರಕರ್ಷೇಣ ಪೂಜಯಃ**—ಅಗ್ನಿಗಿಂತಲೂ ಪೂರ್ವದಲ್ಲಿ ಹೋತೃವಾಗಿದ್ದ ವಾಯುವಿನ ಧರ್ಮಗಳನ್ನು ಅಂದರೆ, ಹೋತಕಾರ್ಯರೂಪವಾದ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಕಾರ್ಯವನ್ನು ಅನುಸರಿಸಿ ಅಗ್ನಿಯು ನಮ್ಮ ಯಜ್ಞದಲ್ಲಿ ದೇವತೆಗಳನ್ನು ಪೂಜಿಸಲಿ ಎಂಬ ಅರ್ಥವನ್ನು ವಿವರಿಸಿದೆ. ದುರ್ಗಾಚಾರ್ಯರು—**ತಸ್ಯಾನುಧರ್ಮ—ತಸ್ಯ ವಾಯೋರ್ವೃತ್ತಿಲಾಭಮನ್ವಾತ್ಮನೋ ದೀಪ್ತಿಲಕ್ಷಣಾಂ ವೃತ್ತಿಮತಿಲಾಭಮಾಪ್ನುವನ್** ॥ ತನಗಿಂತಲೂ ಮುಂಚಿತವಾಗಿ ಹೋತವಾಗಿದ್ದ ವಾಯುವಿನ ಕಾಂತಿ ಮತ್ತು ಜ್ಞಾನ ಇವುಗಳನ್ನು ಅಗ್ನಿಯು ಹೊಂದಿರುವನೆಂದು ಅರ್ಥವನ್ನು ಅವರಿಸಿ, **ವಾಯುರ್ವಾ ಅಗ್ನೇಸ್ತೇಜಃ ತಸ್ಮಾತ್ ವಾಯುರಗ್ನಿಮನ್ವೇತಿ ಇತಿ ಹ ವಿಜ್ಞಾಯತೇ** ಎಂದು ವಾಯ್ವಗ್ನಿಗಳಿಗೆ ತಾದಾತ್ಮ್ಯವನ್ನು ವರ್ಣಿಸಿರುವರು.

**ದೇವವೀತೌ—ದೇವನಾಂ ಪ್ರೀತ್ಯರ್ಥಂ** ಅಗ್ನಿಯು, ಯಜಮಾನರ ಯಜ್ಞವು ದೇವತೆಗಳ ಪ್ರೀತಿಯನ್ನು ಉಂಟುಮಾಡುವವರಿಗೆ ಆಚರಿಸಲಿ ಎಂದು ಅರ್ಥವು ವಿವೃತವಾಗಿದೆ. **ದೇವನಾಂ ವೀತ್ ಅಶನಂ ಯತ್ರಪ್ರೀತೌ ಸಾ ಪ್ರೀತಿಃ** ಎಂಬ ಪದಕ್ಕೆ ಪ್ರೀತಿಯನ್ನು ಉಂಟುಮಾಡುವ ಅನ್ನಾದಿಗಳನ್ನು ಅರ್ಪಿಸುವ ಕರ್ಮವೆಂದು ಅರ್ಥವು ವಿವೃತವಾಗಿದೆ.

**ಸ್ವಧಯಾ–ಸ್ವರ್ಗಂ ಲೋಕಂ ದಧಾತಿ ಯಜಮಾನಸ್ಯ** ಸ್ವರ್ಗಲೋಕವನ್ನು ಯಜಮಾನನಿಗೆ ಉಂಟುಮಾಡುವುದು ಎಂದು ಸ್ವಧಾಶಬ್ದವು ವರ್ಣಿತವಾಗಿದೆ.

ಶಂಭುಃ–ಶಂ **ಸುಖಂ ಅಸ್ಮಾದ್ಭವತಿ**-ಸುಖವನ್ನು ಉಂಟುಮಾಡುವುದು ಎಂದು ಶಬ್ದದ ಅರ್ಥವನ್ನು ವಿವರಿಸಿದೆ.

ವ್ರಾಃ ॥ ೨೦ ॥

"ಮೃಗಂ ನ ವ್ರಾ ಮೃಗಯನ್ತೇ ॥" ಮೃಗಮಿವ ವ್ರಾತ್ಯಾಃ
ಪ್ರೈಷಾಃ ॥೮॥೩॥

ವ್ರಾಃ ಎಂದರೆ **ಮೃಗಯಂತೇ** ಹುಡುಕುತ್ತಾರೆ ಎಂದರ್ಥವು.

ಉದಾಹರಣೆಯ ಋಕ್ಕು—

**ಗೋಭಿರ್ಯದೀಮನ್ಯೇ ಅಸ್ಮನ್ಮೃಗಂ ನ ವ್ರಾ ಮೃಗಯಂತೇ ।**
**ಅಭಿತ್ಸರಂತಿ ಧೇನುಭಿಃ ॥**

(ಋ. ಸಂ. ೮-೨-೬)

ಇದರ ಅರ್ಥವು—

ಬಲೆಗಳಿಂದ ಕೂಡಿದ ಬೇಟೆಗಾರರು ಜಿಂಕೆಯನ್ನಟ್ಟಿಸಿಕೊಂಡು ಓಡುವಂತೆ ನಮಗೆ ಸೇರಿದ ಯಾವ ಇತರ ಋತ್ವಿಗಾದಿಗಳು ಈ ಇಂದ್ರನನ್ನು ಕ್ಷೀರಾದಿಗಳೊಡನೆ ಮಿಶ್ರಿತವಾದ ಸೋಮಯುಕ್ತರಾಗಿ ಹುಡುಕುವರೋ, ಯಾರು ಸ್ತುತಿ ಯುಕ್ತರಾಗಿ ಈ ಇಂದ್ರನನ್ನು ಕುಟಿಲಮಾರ್ಗದಿಂದ ಸಮೀಪಿಸುವರೋ ಅಂತಹವರು ಈ ಇಂದ್ರನ ಅನುಗ್ರಹವನ್ನು ಪಡೆಯು ಲಾರರು. ಎಂದರೆ, ಕಠಿನಪ್ರವೃತ್ತಿಯುಳ್ಳವರೂ ವಂಚಕರೂ ಎಷ್ಟೇ ವಿಧವಾಗಿ ಪೂಜಿಸಿದರೂ ಇಂದ್ರನು ತೃಪ್ತನಾಗುವುದಿಲ್ಲ.

**ಇತಿ ತೃತೀಯಃ ಖಂಡಃ**

ಇಲ್ಲಿಗೆ ಮೂರನೆಯ ಖಂಡವು ಸಮಾಪ್ತವು

---

## ಅಥ ಚತುರ್ಥಃ ಖಂಡಃ

### ನಾಲ್ಕನೆಯ ಖಂಡವು

ವರಾಹೋ ಮೇಘೋ ಭವತಿ ವರಾಹಾರೋ ವರಮಾಹಾರ-ಮಾಹಾರ್ಷೀರಿತಿ ಚ ಬ್ರಾಹ್ಮಣಮ್। ವಿಧ್ಯದ್ವರಾಹನ್ತಿರೋ ಅದ್ರಿಮಸ್ತೇ ಇತ್ಯಪಿ ನಿಗಮೋ ಭವತ್ಯಯಮಪೀತರೋ ವರಾಹ ಏತಸ್ಮಾದೇವ ವೃಹತಿ ಮೂಲಾನಿ ವರಂ ವರಂ ಮೂಲಂ ವೃಹತೀತಿ ವಾ। ವರಾಹ-ಮಿನ್ದ್ರ ಏಮುಷಮಿತ್ಯಪಿ ನಿಗಮೋ ಭವತ್ಯಙ್ಗಿರಸೋಽಪಿ ವರಾಹಾ ಉಚ್ಯಂತೇ। ಬ್ರಹ್ಮಣಸ್ಪತಿರ್ವೃಷಭಿರ್ವರಾಹೈಃ। ಅಥಾಪ್ಯೇತೇ ಮಾಧ್ಯಮಕಾ ದೇವಗಣಾ ವರಾಹವ ಉಚ್ಯನ್ತೇ। ಪಶ್ಯನ್ ಹಿರಣ್ಯ-ಚಕ್ರಾನಯೋ ದಂಷ್ಟ್ರಾನ್ ವಿಧಾವತೋ ವರಾಹೂನ್ ॥೪॥

---

ವರಾಹಃ ॥ ೨೧ ॥

ವರಾಹೋ ಮೇಘೋ ಭವತಿ ವರಾಹಾರಃ "ವರಮಾಹಾರಮಾ-ಹಾರ್ಷೀಃ" ಇತಿ ಚ ಬ್ರಾಹ್ಮಣಮ್। "ವಿಧ್ಯದ್ವರಾಹಂ ತಿರೋ

ಅದ್ರಿಮಸ್ತಾ " ಇತ್ಯಪಿ ನಿಗಮೋ ಭವತಿ । ಅಯಮಪೀತರೋ
ವರಾಹ ಏತಸ್ಮಾದೇವ । ಬೃಹತಿ ಮೂಲಾನಿ ವರಂ ವರಂ ಮೂಲಂ
ಬೃಹತೀತಿ ವಾ ॥ " ವರಾಹಮಿನ್ದ್ರ ಏಮುಷಮ್ " ಇತ್ಯಪಿ
ನಿಗಮೋ ಭವತಿ ॥ ೧ ॥

**ವರಾಹಃ** ಎಂದರೆ ಮೇಘವು. ವರ—ಉತ್ತಮವಾದ (ಧಾನ್ಯಾದಿರೂಪವಾದ) **ಆಹಾರಃ—** ಆಹಾರವನ್ನು ಒದಗಿಸುವುದಾದ್ದರಿಂದ ಮೇಘಕ್ಕೆ ವರಾಹವೆಂದುಹೆಸರು. **ವರಮಾಹಾರಮಾಹಾರ್ಷೀಃ** ಎಂದು ಶ್ರುತಿವಾಕ್ಯವೂ (ಬ್ರಾಹ್ಮಣವಾಕ್ಯವೂ) ಇರುವುದು. **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬ ಇನ್ನೊಂದು ಶ್ರುತಿವಾಕ್ಯವೂ ಇರುವುದು ಇಂದ್ರನು ತನ್ನ ವಜ್ರಾಯುಧವನ್ನು ಮೇಘದ ಮೇಲೆ ಪ್ರಹರಿಸಿ ವೃಷ್ಟಿಯು ಸುರಿಯುವಂತೆ ಮಾಡಿದನು ಎಂದರ್ಥವು

ವರಾಹ ಶಬ್ದಕ್ಕೆ— ಕಾಡುಹಂದಿಯೆಂದೂ ಅರ್ಥವಿರುವುದು. ಏಕೆಂದರೆ ಇದು ಗಿಡಗಳ ಬೇರುಗಳನ್ನು ಕಿತ್ತುಹಾಕಿ ಹಾಳುಮಾಡುವುದರಿಂದ ಇದಕ್ಕೆ ಈ ಹೆಸರು ಬಂದಿತು. ಈ ಅರ್ಥವಿರುವ ಶಬ್ದವೂ ಸಹ ಹೃ ಎಂಬ ಧಾತುವಿನಿಂದಲೇ ನಿಷ್ಪನ್ನವಾಗಿದೆ. ಇದು ದೊಡ್ಡ ದೊಡ್ಡ ಗಿಡಗಳ ಬೇರನ್ನು ಅಗಿದು ಕಿತ್ತುಹಾಕುವುದು. **ವರಾಹಮಿಂದ್ರ ಏಮುಷಂ** ಎಂಬ ಶ್ರುತಿವಾಕ್ಯವೂ ಇರುವುದು.

**ಉದಾಹರಣೆಯ ಋಕ್ಕು—(ಮೇಘ ಪರವಾಗಿ)**

**ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಂಚಾರ್ವನ್ನಾ ।**
**ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥**

(ಋ. ಸಂ. ೧–೬೧–೭)

ಇದರ ಅರ್ಥವು—

ವೃಷ್ಟಿರೂಪದಿಂದ ಸಕಲ ಜಗತ್ತಿಗೂ ನಿರ್ಮಾತೃವಾದುದೂ ಮತ್ತು ಮಹತ್ತಾದದೂ ಆದ ಯಜ್ಞದ ಮೂರು ಸವನಕಾಲದಲ್ಲೂ ಇಂದ್ರನು ಸೋಮರಸವನ್ನು ಅರ್ಪಣ ಮಾಡಿದೊಡನೆಯೇ ಗಟಗಟನೆ ಕುಡಿದು ಬಿಟ್ಟನು. ಹಾಗೆಯೇ ಪುಷ್ಟಿಕರವಾದ ಹವಿಸ್ಸಿನ ಅನ್ನವನ್ನೂ ನುಂಗಿಬಿಟ್ಟನು. ಅಲ್ಲದೇ ಸರ್ವವ್ಯಾಪಕನೂ ಶತ್ರುಗಳನ್ನು ಮರ್ದನಮಾಡುವವನೂ ಮತ್ತು ವಜ್ರಾಯುಧವನ್ನು ಬೀಸಿ ತಿರಿಗಿಸುವವನೂ ಆದ ಇಂದ್ರನು ಅಸುರರ ಧನವನ್ನು ಅಪಹರಿಸಿದನು. ಮತ್ತು ಶತ್ರುವಿನ ಮೇಲೆ ಎದುರುಬಿದ್ದು ಮೇಘವನ್ನು ಸೀಳಿದನು.

ಹಂದಿ ಎಂಬ ಅರ್ಥವಿರುವ ಋಕ್ಕಿನ ಉದಾಹರಣೆಯು—

**ವಿಶ್ವೇತ್ತಾ ವಿಷ್ಣುರಾಭರದುರು ಕ್ರಮಸ್ತ್ವೇಷಿತಃ ।**
**ಶತಂ ಮಹಿಷಾನ್ ಕ್ಷೀರಪಾಕಮೋದನಂ ವರಾಹಮಿಂದ್ರ ಏಮುಷಂ ॥**

(ಋ. ಸಂ. ೮–೭೭–೧೦)

ಇದರ ಅರ್ಥವು—

ಎಲೈ ಇಂದ್ರನೇ, ವಿಸ್ತೃತವಾದ ಸಂಚಾರವುಳ್ಳವನೂ ನಿನ್ನಿಂದಲೇ ಪ್ರೇರಿತನೂ, ವ್ಯಾಪಕನೂ ಆದ ಆದಿತ್ಯನು ನಿನ್ನಿಂದ ಸೃಷ್ಟವಾದ ಸಕಲ ಉದಕಗಳನ್ನೂ ಭರಿಸುತ್ತಾನೆ. ಶತಸಂಖ್ಯಾತವಾದ ಪಶುಗಳನ್ನೂ ಕ್ಷೀರದಿಂದ ಪಕ್ವಮಾಡಿದ ಅನ್ನವನ್ನೂ ಅವನೇ ಭರಿಸುತ್ತಾನೆ. ಇಂದ್ರನು ಉದಕಪೂರ್ಣವಾದ ಮೇಘವನ್ನೂ ಸೀಳುತ್ತಾನೆ.

ಈ ಋಕ್ಕಿಗೆ ಎರಡು ವಿಧವಾದ ಅರ್ಥವಿವರಣೆ ಇದೆ. ಒಂದು ನೈರುಕ್ತಪಕ್ಷವು, ಮತ್ತೊಂದು ಐತಿಹಾಸಕ ಪಕ್ಷವು. ಈ ಎರಡು ವಿಧವಾದ ಅರ್ಥಗಳಲ್ಲದೆ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನೂ ಹೇಳಿದ್ದಾರೆ- ಇವುಗಳನ್ನೆಲ್ಲಾ ಇಲ್ಲಿ ಕ್ರಮವಾಗಿ ವಿವರಿಸುವುದು ಅವಶ್ಯಕವು

## ನೈರುಕ್ತ ಪಕ್ಷದ ಅರ್ಥವಿವರಣೆ

**(ಹೇ ಇಂದ್ರ—ಎಲೈ ಇಂದ್ರನೇ) । ಉರುಕ್ರಮಃ**—ಬಹುವಿಧವಾದ ಗಮನವುಳ್ಳ ಎಂದರೆ ಯಾವಾಗಲೂ ಸಂಚರಿಸುತ್ತಲೇ ಇರುವ । **ವಿಷ್ಣುಃ**—ತನ್ನ ಕಿರಣಗಳಿಂದ ಸರ್ವತ್ರ ವ್ಯಾಪಲನಶೀಲನಾದ ಆದಿತ್ಯನು । **ತ್ವೇಷಿತಃ**—ನಿನ್ನಿಂದ ಪ್ರೇರಿತನಾಗಿ । **ತಾ**—ನಿನ್ನಿಂದ ಸೃಷ್ಟಿಸಲ್ಪಟ್ಟ ಉದಕಗಳನ್ನು । **ಆ ಭರತ್**—ಲೋಕೋಪಕಾರಾರ್ಥವಾಗಿ ಧರಿಸುತ್ತಾನೆ. ಎಂದರೆ ಕೊಡುತ್ತಾನೆ । (ಮತ್ತು) **ಶತಂ ಮಹಿಷಾನ್**—ನೂರು ಪಶುಗಳನ್ನು ಅಥವಾ ಅನೇಕ ಪಶುಗಳನ್ನು । (**ಆ ಭರತ್**)—ಯಜ್ಞಮಾಡುವ ಯಜಮಾನರಿಗೆ ಕೊಡುತ್ತಾನೆ(ಮತ್ತು) । **ಕ್ಷೀರಪಾಕಂ**—ಹಾಲಿನಿಂದ ಪಕ್ವವಾದ । **ಓದನಂ**- -ಪಾಯಸವನ್ನು ಎಂದರೆ ಚರುಪುರೋಡಾಶಾದಿರೂಪವಾದ ಹವಿರಾದಿಗಳನ್ನು । (**ಆ ಭರತ್**)—ಯಜಮಾನರಿಗೆ ಕೊಡುತ್ತಾನೆ । [**ಅಥವಾ ಓದನಂ**—ಭೂಮಿಯ ಮೇಲೆ ವೃಷ್ಟಿಯನ್ನು ಸುರಿಸುವುದರ ಮೂಲಕ ಸಸ್ಯಾದಿಗಳನ್ನು ಉತ್ಪತ್ತಿಮಾಡಿ ಅದರಿಂದ ಅನ್ನದ್ಯಾಹಾರಗಳ ಉತ್ಪತ್ತಿಗೆ ಕಾರಣನಾಗಿ ಅವುಗಳನ್ನು ಯಜಮಾನರಿಗೆ ಕೊಡುವನು] । ( ಮತ್ತು ) **ಇಂದ್ರಃ**—ಇಂದ್ರನು **ಏಮುಷಂ**—ಜಲವನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಸುರಿಸದೆ ತಡೆದಿರತಕ್ಕ । **ವರಾಹಂ**—ಜಲಪೂರ್ಣವಾದ ಮೇಘವನ್ನು ಪ್ರಹರಿಸುತ್ತಾನೆ.

ಎಲೈ ಇಂದ್ರನೇ, ಸದಾಕಾಲದಲ್ಲಿಯೂ ಸಂಚರಿಸುತ್ತಲೇ ಇರುವ ಆದಿತ್ಯನು ತನ್ನ ರಶ್ಮಿಗಳ ಮೂಲಕ ಸಮುದ್ರಾದಿಜಲಾಶಯಗಳಲ್ಲಿರುವ ಉದಕವನ್ನು ಹೀರಿ ಆ ಉದಕವು ಮೇಘಗಳಾಗಿ ಪರಿವರ್ತಿತವಾಗುವಂತೆ ಮಾಡಿ ಭೂಮಿಯ ಮೇಲೆ ಲೋಕೋಪಕಾರಾರ್ಥವಾಗಿ ವೃಷ್ಟಿಯನ್ನು ಸುರಿಸುವನು. ಆದಿತ್ಯನು ಮಾಡುವ ಈ ಕಾರ್ಯವು ನಿನ್ನಿಂದ (ಇಂದ್ರನಿಂದ)ಲೇ ಪ್ರೇರಿತವಾಗಿರುವುದು ಎಂದರೆ ಇಂದ್ರನ ಆಜ್ಞೆಯಿಂದಲೇ ಆದಿತ್ಯನು ಲೋಕೋಪಕಾರಾರ್ಥವಾಗಿ ಭೂಮಿಯ ಮೇಲೆ ವೃಷ್ಟಿಯನ್ನು ಸುರಿಸುವನು. ಇದಲ್ಲದೆ ಯಜ್ಞಮಾಡುವ ಯಜಮಾನರ ಉಪಯೋಗಕ್ಕಾಗಿ ಅಸಂಖ್ಯಾತವಾದವೂ ಯಜ್ಞಾರ್ಹವಾದವೂ ಆದ ಪಶುಗಳನ್ನೂ ಕ್ಷೀರಪಕ್ವವಾದ ಅನ್ನಾದಿಗಳನ್ನೂ ಮಾಡುವನು. ಈ ಕೆಲಸಗಳನ್ನು ಇಂದ್ರನು ಆದಿತ್ಯನಿಂದ ಮಾಡಿಸಿ ತಾನೂ ಉದಕಗಳಿಂದ ಪೂರ್ಣವಾಗಿದ್ದರೂ ಅವುಗಳನ್ನು ಭೂಮಿಯಮೇಲೆ ವೃಷ್ಟಿರೂಪದಲ್ಲಿ ಬೀಳದಂತೆ ತಡೆದಿಟ್ಟುಕೊಂಡಿರುವ ಮೇಘಗಳನ್ನು ಪ್ರಹರಿಸಿ ವೃಷ್ಟಿಯನ್ನು ಸುರಿಸುವಂತೆ ಮಾಡುವನು. ಇವೆಲ್ಲವೂ ಇಂದ್ರನ ಪ್ರಭಾವವೇ ಆಗಿದೆ.

ಮೇಲೆ ಹೇಳಿದ ವಿವರಣೆಯೆಲ್ಲವೂ ನಿರುಕ್ತಪಕ್ಷಕ್ಕೆ ಸೇರಿಸಿದ್ದಾಗಿದೆ. ಇನ್ನು ಐತಿಹಾಸಿಕ ಪಕ್ಷದ ವಿವರಣೆಯೇನೆಂದು ವಿಮರ್ಶೆಮಾಡೋಣ. ಈ ವಿಷಯದಲ್ಲಿ ಚರಕಬ್ರಾಹ್ಮಣದಲ್ಲಿ ಒಂದು ಇತಿಹಾಸವು ಉಕ್ತವಾಗಿರುವುದು.

> ವಿಷ್ಣುರ್ಯಜ್ಞಃ । ಸ ದೇವೇಭ್ಯ ಆತ್ಮಾನಮುಂತರ್ದಧಾತ್ । ತಮನ್ಯದೇವತಾ ನಾಮಿದನ್ನಿಂದ್ರಸ್ತ್ವವೇತ್ । ಸ ಇಂದ್ರಮಬ್ರವೀತ್ಕೋ ಭವಾನಿತಿ । ತಮಿಂದ್ರಃ ಪ್ರತ್ಯಬ್ರವೀದಹಂ ದುರ್ಗಾಣಾಮಸುರಾಣಾಂ ಚ ಹಂತಾ ಭವಾಂಸ್ತು ಕ ಇತಿ । ಸೋಽಬ್ರವೀದಹಂ ದುರ್ಗಾದಾಹರ್ತಾ ತ್ವಂ ತು ಯದಿ ದುರ್ಗಾಣಾಮಸುರಾಣಾಂ ಹಂತಾ ತತೋಽಯಂ ವರಾಹೋ ವಾಮಮುಷ ಏಕವಿಂಶತ್ಯಾಃ ಪುರಾಂ ಪಾರೇಽಶ್ಮಮಯೀನಾಂ ವಸತಿ ತಸ್ಮಿನ್ನಸುರಾಣಾಂ ವಸು ವಾಮಮಸ್ತಿ ತಮಿಮಂ ಜಹೀತಿ । ತಸ್ಯೇಂದ್ರಸ್ತಾಃ ಪುರೋ ಭಿತ್ತ್ವಾ ಹೃದಯಮವಿಧ್ಯತ್ । ಅಧಿ ತತ್ರ ಯದಾಸೀತ್ತದ್ವಿಷ್ಣುರಾಹರದಿತಿ । ಸೋಽಯಮಿತಿಹಾಸಃ ॥

ಇದರ ಮುಖ್ಯಾಭಿಪ್ರಾಯವೇನೆಂದರೆ–ವಿಷ್ಣುವೇ ಯಜ್ಞವು. ಒಂದಾನೊಂದು ಕಾಲದಲ್ಲಿ ದೇವತೆಗಳನ್ನು ಬಿಟ್ಟು ಹೊರಟುಹೋಗಿ ಒಂದು ರಹಸ್ಯಸ್ಥಳದಲ್ಲಿದ್ದನು. ಇದು ಇತರದೇವತೆಗಳಿಗೆ ತಿಳಿಯಲಿಲ್ಲ, ಇಂದ್ರನಿಗೆ ಮಾತ್ರ ತಿಳಿಯಿತು. ಆಗ ಇಂದ್ರನು ವಿಷ್ಣುವಿದ್ದ ಸ್ಥಳಕ್ಕೆ ಹೋದಾಗ ವಿಷ್ಣುವು ಇಂದ್ರನನ್ನು ಕುರಿತು ನೀನು ಯಾರೆಂದು ಅವನನ್ನು ಕೇಳಿದನು. ವಿಷ್ಣುವಿಗೆ ಪ್ರತ್ಯುತ್ತರವಾಗಿ ಇಂದ್ರನು ನಾನು ದುರ್ಗಗಳನ್ನೂ ಅಸುರರನ್ನೂ ಧ್ವಂಸ ಮಾಡುವವನು ಆದರೆ, ನೀನು ಯಾರು ಎಂದನು. ವಿಷ್ಣುವು ನಾನು ದುರ್ಗಾದಿಗಳಿಂದ ಅಸುರರಿಗೆ ಸೇರಿದ ಧನಾದಿಗಳನ್ನು ಅಪಹರಿಸಿ ತರುವವನು ನೀನು ಯಾರು ? ನೀನು ಮಾಡುವ ಕೆಲಸವೇನು ? ಎಂದು ಪುನಃ ಕೇಳುಲು ಅದಕ್ಕಾ ವಿಷ್ಣುವು ಇಂತೆಂದನು—ನೀನು ಹೇಳಿದಂತೆ ದುರ್ಗಗಳ ಮತ್ತು ಅಸುರರ ಧನಾದಿಗಳನ್ನು ಧ್ವಂಸಮಾಡುವವನಾಗಿದ್ದಲ್ಲಿ, ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರನು ಇಲ್ಲಿಂದ ಇಪ್ಪತ್ತೊಂದು ಪುರಗಳ (ಕೋಟೆಗಳ) ಕೊನೆಯಲ್ಲಿ ಕಲ್ಲುಗಳಿಂದ ಭದ್ರವಾಗಿ ಕಟ್ಟಲ್ಪಟ್ಟಿರುವ ಕೋಟೆಯಲ್ಲಿ ವಾಸಮಾಡುತ್ತಿರುವನು. ಅವನಲ್ಲಿ ಅಸುರರ ಬಹಳವಾದ ಧನವಿರುವುದು. ಆದ್ದರಿಂದ ಆಸುರನನ್ನು ಸಂಹರಿಸು ಎಂದನು. ಅದನ್ನು ಕೇಳಿ ಇಂದ್ರನು ಅಸುರರ ಆ ಪಟ್ಟಣಗಳನ್ನು ಧ್ವಂಸಮಾಡಿ ವರಾಹ ಎಂಬ ಅಸುರನ ಹೃದಯವನ್ನು ಇರಿದು ಕೊಂದನು. ಆಗ ವಿಷ್ಣುವು ಅಸುರನಲ್ಲಿದ್ದ ಧನವನ್ನೆಲ್ಲಾ ಅಲ್ಲಿಂದ ತಂದನು ಇದೇ ಈ ಇತಿಹಾಸದ ಮುಖ್ಯಾಭಿಪ್ರಾಯವು ಈ ವಿಷಯವು ಈ ಪ್ರಕೃತ ಋಕ್ಕಿನಲ್ಲಿಯೂ,

> ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಞ್ಚಾರ್ವನ್ನಾ ।
> ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥
>
> (ಋ. ಸಂ. ೧–೬೧–೭)

ಎಂಬ ಋಕ್ಕಿನಲ್ಲಿಯೂ ಹೇಳಿದೆಯೆಂದು ಭಾಷ್ಯಕಾರರು ಹೇಳಿ ಪ್ರಕೃತಋಕ್ಕಿನಲ್ಲಿರುವ ಮತ್ತು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯಗಳಿಗೂ ಮೇಲೆ ಹೇಳಿದ ಇತಿಹಾಸಕ್ಕೂ ಹೊಂದಿಸಿ ಅರ್ಥವಿವರಣೆಮಾಡಿರುವರು.—

> ಅಸ್ಯೇದು ಮಾತುಃ । ಇತ್ಯತ್ರ ವಿಷ್ಣುನಾ ಹೇ ಇಂದ್ರ ತ್ವಂ ದುರ್ಗಾಣಾಂ ಹಂತೇತ್ಯಾತ್ಮಾನಂ ಕಥಯಸಿ ತರ್ಹಿ ವಾಮಮುಷಂ ವರಾಹಮಸುರಂ ಜಹೀತ್ಯುಕ್ತಾರ್ಥೋ ವಿಧದ್ವರಾಹಂ ಇತಿ ಪಾದೇನ ಪ್ರತಿಪಾದಿತಃ ।

ಮೇಲಿನ ಇತಿಹಾಸದಲ್ಲಿ ಹೇಳಿರುವ—" ಎಲೈ ಇಂದ್ರನೇ, ನೀನು ದುರ್ಗಗಳ ಮತ್ತು ಅಸುರರ ಸಂಹಾರಕನೆಂದು ಹೇಳಿಕೊಳ್ಳುವಿಯಷ್ಟೆ. ಹಾಗಾದರೆ ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರನನ್ನು ಸಂಹರಿಸು ಎಂಬ ವಿಷ್ಣುವಿನ ವಾಕ್ಯಾರ್ಥವು—ಮೇಲೆ ಹೇಳಿದ **ಅಸ್ಯೇದು ಮಾತುಃ** ಎಂಬ ಉದಾಹರಣೆಯ ಋಕ್ಕಿನ **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬ ಕೊನೆಯ ಪಾದದಲ್ಲಿ ಉಕ್ತವಾಗಿರುವುದು.

> **ಇಂದ್ರೇಣ ಚ ವಿಷ್ಣೋ ತ್ವಂ ದುರ್ಗಾದಾಹರ್ತೇತಿ ಬ್ರೂಷೇ ಮಯಾ ಪುರಾಣಿ ಜಿತಾನ್ಯಸುರಶ್ಚ ಘಾತಿತಸ್ತಸ್ಯ ವಾಮಂ ವಸ್ವಾನಯೇತ್ಯುಕ್ತೋ ವಿಷ್ಣುರ್ಮೂರ್ತಿಸ್ತಸ್ಯ ವರಾಹಾಸುರಸ್ಯ ಧನಂ ಮುಮೋಷ । ಸೋಽರ್ಥಃ ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ ಇತಿ ಪಾದೇನ ಸೂಚಿತಃ ॥**

ಮತ್ತು ಇಂದ್ರನು ವಿಷ್ಣುವನ್ನು ಕುರಿತು—ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಅವರ ಧನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿದ್ದೆಯಷ್ಟೆ. ಈಗ ನಾನು ಅನೇಕ ಶತ್ರುಪಟ್ಟಣಗಳನ್ನು ಜಯಿಸಿ ಅಸುರನನ್ನು ಕೊಂದಿರುವೆನು. ಆ ಅಸುರನಲ್ಲಿರುವ ಧನವನ್ನು ತೆಗೆದುಕೊಂಡು ಬಾ ಎಂದು ಹೇಳಲು ವಿಷ್ಣುವು ಅದಕ್ಕೆ ಒಪ್ಪಿ ಆ ವರಾಹಾಸುರನಲ್ಲಿದ್ದ ಧನವನ್ನು ಅಪಹರಿಸಿ ತಂದನು. ಈ ವಿವರವು—**ಮುಷಾಯದ್ವಿಷ್ಣುಃ ಪಚತಂ ಸಹೀಯಾನ್** ಎಂಬ ಉದಾಹೃತ ಋಕ್ಕಿನ ಪಾದದಿಂದ ವ್ಯಕ್ತಪಡುವುದು.

> **ಸ ಕಿಂ ಪುನರ್ಮುಷಿತವಾನಿತಿ ತದುಚ್ಯತೇ । ವಿಶ್ವೇತ್ತಾ ಇತಿ । ಹೇ ಇಂದ್ರ ತ್ವೇಷಿತಸ್ತ್ವಯಾ ಪ್ರೇರಿತೋ ವಿಷ್ಣುರ್ಯಜ್ಞರೂಪೀ ತ್ವೇಷಿತಸ್ತ್ವಂ ದುರ್ಗಾದಾಹರ್ತಾ ಕಿಲ ತರ್ಹಿ ತ್ವಂ ತಸ್ಯ ಧನಾನ್ಯಾಹರೇತಿ ತ್ವಯಾ ಪ್ರೇರಿತಃ ಸನ್ನುರುಕ್ರಮೋ ಭೂತ್ವಾ ವಿಶ್ವೇತ್ತಾ ಯಾನಿ ಚ ತತ್ರ ಸ್ಥಿತಾನಿ ತಾನಿ ಸರ್ವಾಣ್ಯಾಭರತ್ । ಆಭರತು । ಕಾನಿ ತಾನೀತಿ । ಶತಂ ಮಹಿಷಾನಪರಿಮಿತಾನ್ ಪ್ರಶಸ್ತಾನ್ ಪರಾರ್ಥಾನ್ ತೇಷಾಂ ವಾಹನರೂಪಾನ್ ಮಹಿಷಾನ್ವಾ ಕ್ಷೀರಪಾಕಮೋದನಂ ಚ ಪಕ್ವಮಾತ್ರಮೇವೌದನಂ ಚಾಭರತ್ ॥**

ಮತ್ತು ಆ ವಿಷ್ಣುವು ಪುನಃ ಇನ್ನೂ ಅನೇಕ ಪದಾರ್ಥಗಳನ್ನು ಅಪಹರಿಸಿ ತಂದನು ಎಂದು ಹೇಳಿದೆಯಷ್ಟೆ. ಅದರ ವಿವರವನ್ನು ವಿಶ್ವೇತ್ತಾ ಎಂಬ ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಹೇಳಲಾಗಿದೆ—ಎಲೈ ಇಂದ್ರನೇ, ನೀನು ಯಜ್ಞರೂಪಿಯಾದ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಧಾನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿರುವೆಯಷ್ಟೆ. ಹಾಗಾದರೆ ಈ ವರಾಹಾಸುರನಲ್ಲಿರುವ ಧಾನಾದಿಗಳನ್ನು ತೆಗೆದುಕೊಂಡು ಬಾ ಎಂಬುದಾಗಿ ನಿನ್ನಿಂದ (ಇಂದ್ರನಿಂದ) ಪ್ರೇರಿತನಾದಕೂಡಲೆ ವಿಷ್ಣುವು ಹಾಗೆ ಆಗಲೆಂದೊಪ್ಪಿ ಬೇಗಬೇಗನೆ ಅಸುರನ ಪಟ್ಟಣಕ್ಕೆ ಹೋಗಿ, ಅಸುರನಲ್ಲಿದ್ದ— ಎಂದರೆ ಯಾವ ಯಾವ ವಸ್ತುಗಳನ್ನು ತರಬೇಕೆಂದು ಹೇಳಿದ್ದೆಯೋ ಆ ಧಾನಾದಿಗಳನ್ನೆಲ್ಲಾ ಅಪಹರಿಸಿ ತಂದನು. ವಿಷ್ಣುವು ತಂದ ಆ ವಸ್ತುಗಳಾವವು ಎಂದರೆ ಅತ್ಯುತ್ತಮವಾದವೂ ಅಸಂಖ್ಯಾತವಾದವೂ ಆದ ಧನಾದಿ ಶ್ರೇಷ್ಠವಸ್ತುಗಳನ್ನೂ ಅವುಗಳನ್ನು ಹೊತ್ತು ತರುವ ಮಹಿಷಾದಿಪಶುಗಳನ್ನೂ ಕ್ಷೀರಾದಿಗಳಿಂದ ಪಕ್ವಮಾಡಿದ ಅನ್ನಾದ್ಯಾಹಾರಗಳನ್ನೂ ಎಲ್ಲವನ್ನೂ ಇಂದ್ರನು ಹೇಳಿದಂತೆ ಅಪಹರಿಸಿ ತಂದನು ಎಂಬ ವಿವರವು ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಸೂಚಿತವಾಗಿರುವುದು.

**ವಿಧ್ಯದ್ವರಾಹಂ ಇತ್ಯತ್ರೋಕ್ತೋಽರ್ಥಶ್ಚ ಚರಮಪಾದೇನೋಚ್ಯತೇ । ಇಂದ್ರಸ್ತು ವರಾಹಾರಂ ಸ್ವೀಕೃತಾಸುರಸರ್ವಸ್ವಂ ವರಾಹರೂಪಿಣಂ ನೈಮುಷನೇಮುಷನಾಮಾನಮುಥವೈಮುಷಂ ಧನಾನಾಮಾಮೋಷಕಂ ವರಾಹಮಸುರಂ ಹೃದಯೇಽವಿಧ್ಯದಿತಿ ಶೇಷಃ ॥**

ಇನ್ನು ವಿಧ್ಯಧ್ವರಾಹಮಿಂದ್ರ ಏಮುಷಂ ಎಂದು ಪ್ರಕೃತ ಋಕ್ಕಿನ ಕೊನೆಯ ಪಾದದ ಅರ್ಥವನ್ನು ವಿವರಿಸುವರು. ಈ ವರಾಹನೆಂಬ ಅಸುರನು ವರಾಹ (ಹಂದಿ) ರೂಪಿಯಾಗಿದ್ದು ಬಹಳ ಧನನನ್ನು ಅನೇಕರಿಂದ ಅಪಹರಿಸಲ್ಪಟ್ಟಿದ್ದನು. ಆದ್ದರಿಂದ ಇವನನ್ನು **ಏಮುಷಂ** ಎಂದರೆ **ಧನಾನಾಮಾಮೋಷಕಂ** ಧನವನ್ನು ಅಪಹರಿಸಿರುವವನು ಎಂಬ ಹೆಸರಿನಿಂದ ಕರೆಯುವುದು ರೂಢಿಯು. ಇಂತಹ ವರಾಹರೂಪಿಯಾದ ಏಮುಷನೆಂಬ ಅಸುರನನ್ನು ಇಂದ್ರನು ತನ್ನ ಶಕ್ತಿ ಸಾಮರ್ಥ್ಯಗಳಿಂದ ಅವನ ಎದೆಯನ್ನು ತಿವಿದುಕೊಂದನು ಎಂಬ ಅಭಿಪ್ರಾಯವು ಪ್ರಕೃತ ಋಕ್ಕಿನ ಕೊನೆಯ ಪಾದದಲ್ಲಿ ವಿವೃತವಾಗಿದೆ.

ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿಯೂ ಈ ವಿಷಯದ ವಿವರಣೆಯು ಇದೇ ರೀತಿಯಾಗಿ ಹೇಳಲ್ಪಟ್ಟಿದೆ.

**ಯಜ್ಞೋ ದೇವೇಭ್ಯೋ ನಿಲಾಯತ ವಿಷ್ಣೂರೂಪಂ ಕೃತ್ವಾ ಸ ಪೃಥಿವೀಂ ಪ್ರಾವಿಶತ್ತಂ ದೇವಾ ಹಸ್ತಾನ್ತ್ಸಣಂ ರಭ್ಯೈಚ್ಛನ್ತಮಿಂದ್ರ ಉಪಯುಪರ್ಯತ್ಯಕ್ರಾಮತ್ಸೋಽಬ್ರವೀತ್ಕೋಮಾಯ-ಮುಪರ್ಯುಪರ್ಯತ್ಯಕ್ರಮೀದಿತ್ಯಹಂ ದುರ್ಗೇ ಹಂತೇತ್ಯಥ ಕಸ್ತ್ವಮಿತ್ಯಹಂ ದುರ್ಗಾದಾಹರ್ತೇತಿ ಸೋಽಬ್ರವೀದ್ದುರ್ಗೇ ವೈ ಹಂತಾವೋಚಥಾವರಾಹೋಽಯಂ ವಾಮಮೋಷಃ ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತಿ ತಂ ಜಹಿ ಯದಿ ದುರ್ಗೇ ಹಂತಾಸೀತಿ ಸದರ್ಭಪುಂಜೀಲಮುದ್ವೃಹ್ಯ ಸಪ್ತಗಿರೀನ್ ಭಿತ್ವಾ ತಮಹನ್ತ್ಸೋಽಬ್ರವಿದ್ದುರ್ಗಾದ್ವಾ ಆಹರ್ತಾ ವೋಚಥಾ ಏತಮಾಹರೇರಿತಮೇಭ್ಯೋ ಯಜ್ಞ ಏವ ಯಜ್ಞಮಾಹರದ್ಯತ್ತದ್ವಿತ್ತಂ ವೇದ್ಯಮ-ಸುರಾಣಾಮವಿಂದಂತ ತದೇಕಂ ವೇದ್ಯೈವೇದಿತ್ವಂ ।**

(ತೈ. ಸಂ. ೬-೨-೪-೨, ३)

ಯಜ್ಞವೇದಿಗೆ ವೇದಿ ಎಂದು ಹೆಸರು ಹೇಗೆ ಬಂದಿತೆಂಬ ವಿಷಯವನ್ನು ವಿವರಿಸುವುದಕ್ಕಾಗಿ ಯಜುರ್ವೇದದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ—

ಪೂರ್ವದಲ್ಲಿ ಕಾರಣಾಂತರದಿಂದ ಯಜ್ಞವು ವಿಷ್ಣುರೂಪವನ್ನು ಧರಿಸಿ ದೇವತೆಗಳನ್ನು ಬಿಟ್ಟು ಹೊರಟುಹೋಯಿತು. ಅನಂತರ ಯಜ್ಞರೂಪನಾದ ಆ ವಿಷ್ಣುವು ಭೂಮಿಯನ್ನು ಪ್ರವೇಶಿಸಿ ಯಾರಿಗೂ ತಿಳಿಯದಂತೆ ಅಡಗಿಕೊಂಡಿದ್ದನು. ದೇವತೆಗಳು ಅವನನ್ನು ಕಾಣದೆ ಒಬ್ಬರ ಕೈಯನ್ನೊಬ್ಬರೂ ಹಿಡಿದುಕೊಂಡು ಎಲ್ಲೆಲ್ಲೂ ಹುಡುಕುತ್ತಿದ್ದರು. ಆದರೂ ಅವರಿಗೆ ವಿಷ್ಣುವಿರುವ ಸ್ಥಳವು ಸಿಕ್ಕಲಿಲ್ಲ. ಆದರೆ ಇಂದ್ರನು ವಿಷ್ಣುವು ಅಡಗಿಕೊಂಡಿದ್ದ ಪ್ರದೇಶದಮೇಲೆ ಹಾದುಹೋಗುವಾಗ, ಕೆಳಗಿದ್ದ ವಿಷ್ಣುವು—ಯಾರದು ? ನಾಸಿರುವ ಈ ಸ್ಥಳದ ಮೇಲೆ ಹಾದು ಹೋಗುವವರು ? ಎನ್ನಲು, ಅದನ್ನು ಕೇಳಿ ಇಂದ್ರನು—ನಾನು, ಅಸುರರ ದುರ್ಗಗಳನ್ನು ಪ್ರಹರಿಸಿ ಧ್ವಂಸಮಾಡುವ ಶೂರನೇ ನಾನು. ಆದರೆ ನೀನು ಯಾರು ? ಅದಕ್ಕೆ ವಿಷ್ಣುವು—ಅಸುರರ ದುರ್ಗಾದಿಗಳು ಧ್ವಂಸವಾದಮೇಲೆ ಅಲ್ಲಿರತಕ್ಕ

ಧನಾದಿವಸ್ತುಗಳನ್ನು ತರುವವನೇ ನಾನು ಎಂದು ಪ್ರತ್ಯುತ್ತರವಿತ್ತನು. ಮತ್ತು ಇಂದ್ರನನ್ನುದ್ದೇಶಿಸಿ—ಎಲೈ ಪುರುಷನೇ, ನೀನು ಹೇಳಿಕೊಳ್ಳುವಂತೆ ಶತ್ರುಪಟ್ಟಣಗಳನ್ನು ಧ್ವಂಸಮಾಡುವವನು ನೀನೇ ಆಗಿದ್ದರೆ ಇಲ್ಲಿಂದ ಮುಂದೆ ಏಳು ಪರ್ವತಗಳ ಆಚೆ ವರಾಹನೆಂಬ ಅಸುರನಿರುವನು. ಅವನು ಅಸುರರ ಧನಾದಿಗಳನ್ನು ಅಪಹರಿಸಿ ತನ್ನ ಬಲವಾದ ಕೋಟೆಯೊಳಗೆ ಇಟ್ಟುಕೊಂಡಿರುವನು. ನೀನು ಹೇಳಿಕೊಳ್ಳುವಂತೆ, ಅಸುರರ ದುರ್ಗಗಳನ್ನು ನಾಶಮಾಡುವ ಶಕ್ತಿ ನಿನಗಿದ್ದರೆ ಆ ವರಾಹನೆಂಬ ಅಸುರನನ್ನು ಪ್ರಹರಿಸಿ ಧ್ವಂಸಮಾಡು. ಆಗಮಾತ್ರ ನಿನ್ನ ಶಕ್ತಿಯು ಗೊತ್ತಾಗುವುದು ಎಂದನು. ಅದನ್ನು ಕೇಳಿ ಇಂದ್ರನು ಸಮೀಪದಲ್ಲಿದ್ದ ದರ್ಭೆಯ ಗೊಂಚಲೊಂದನ್ನು ತೆಗೆದುಕೊಂಡು ಅದನ್ನೇ ತನ್ನ ಆಯುಧವನ್ನಾಗಿ ಮಾಡಿಕೊಂಡು ಅಭೇದ್ಯವಾದ ಏಳು ಪರ್ವತಗಳನ್ನೂ ಚ್ಛೇದಿಸಿ ಆ ವರಹಾಸುರನನ್ನೂ ಹೊಡೆದು ಕೊಂದನು. ಬಳಿಕ ವಿಷ್ಣುವನ್ನುದ್ದೇಶಿಸಿ ಎಲೈ ಪುರುಷನೇ, ನೀನು ಹೇಳಿದಂತೆ ಸಪ್ತಪರ್ವತಗಳನ್ನು ಸೀಳಿಹಾಕಿ ಅಲ್ಲಿದ್ದ ಅಸುರನನ್ನು ಕೊಂದಿರುವೆನು. ಇದರಿಂದ ನನ್ನ ಶಕ್ತಿಸಾಮರ್ಥ್ಯಗಳು ಸ್ಪಷ್ಟವಾಯಿತಷ್ಟೆ. ನೀನು ಹಿಂದೆ ಧ್ವಂಸವಾದ ಅಸುರರ ದುರ್ಗಾದಿಗಳಿಂದ ಅಲ್ಲಿರುವ ಧನಾದಿಗಳನ್ನು ತೆಗೆದುಕೊಂಡು ಬಾ ಆಗ ನಿನ್ನ ಶಕ್ತಿಯು ವ್ಯಕ್ತವಾಗುವುದು ಎಂದು ಹೇಳಲು ವಿಷ್ಣುವು ಹಾಗೇ ಆಗಲೆಂದು ಹೇಳಿ ಯಜ್ಞರೂಪದಿಂದಲೇ ಆ ಅಸುರನಲ್ಲಿದ್ದ ಧನಾದಿವಸ್ತುಗಳನ್ನೂ ಅಪಹರಿಸಿ ದೇವತೆಗಳ ಸಮೀಪಕ್ಕೆ ತಂದನು. ಈ ರೀತಿ ಯಜ್ಞದಿಂದ ದೇವತೆಗಳು ಅಸುರರ ಧನಗಳನ್ನು ಪಡೆದದ್ದರಿಂದ ಯಜ್ಞಮಾಡುವ ಪ್ರದೇಶಕ್ಕೆ ವೇದಿ ಎಂದು ಬಂದಿತು ಎಂದು ಈ ಇತಿಹಾಸದ ಮುಖ್ಯಾಭಿಪ್ರಾಯವು.

ಯಾಸ್ಕರು ವರಾಹಃ ಎಂಬ ಶಬ್ದದ ಅರ್ಥವಿವರಣೆಮಾಡುವುದಕ್ಕಾಗಿ ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

**ವರಾಹಃ । ವರಾಹೋ ಮೇಘೋ ಭವತಿ ವರಾಹಾರಃ । ವರಮಾಹಾರಮಾಹಾರ್ಷೀಃ ಇತಿ ಚ ಬ್ರಾಹ್ಮಣಂ ॥ ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ಇತ್ಯಪಿ ನಿಗಮೋ ಭವತಿ । ಅಯಮಪೀತರೋ ವರಾಹ ಏತಸ್ಮಾದೇವ । ಬೃಹತಿ ಮೂಲಾನಿ ವರಂ ವರಂ ಮೂಲಂ ಬೃಹತೀತಿ ವಾ । ವರಾಹಮಿಂದ್ರ ಇತ್ಯಪಿ ನಿಗಮೋ ಭವತಿ ॥**

(ನಿ. ೫–೪)

ವರಾಹನೆಂದರೆ ಮೇಘವು ಈ ಮೇಘವು ವೃಷ್ಟಿಯನ್ನು ಸುರಿಸುವುದರ ಮೂಲಕ ಉತ್ತಮವಾದ ಆಹಾರವನ್ನು ಒದಗಿಸುವುದರಿಂದ ಮೇಘಕ್ಕೆ ವರಾಹಾರ ಅಥವಾ ವರಾಹ ಎಂಬ ಹೆಸರು ಬಂದಿದೆ. **ವರಮಾಹಾರಮಾಹಾರ್ಷೀಃ** ಎಂಬುದು ಈ ವಿಧವಾದ ಅರ್ಥಸಮರ್ಥನೆಯನ್ನು ಮಾಡುವ ಬ್ರಾಹ್ಮಣವಾಕ್ಯವು. **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬುದೂ ಇನ್ನೊಂದು ಶ್ರುತಿವಾಕ್ಯದ ಉದಾಹರಣೆಯು. ಇದರಲ್ಲಿ-ಇಂದ್ರನು ದೂರದಿಂದಲೇ ತನ್ನ ವಜ್ರಾಯುಧವನ್ನು ಪ್ರಯೋಗಿಸಿ ಮೇಘವನ್ನು ಸೀಳಿದನು ಎಂದು ಅಭಿಪ್ರಾಯವು ಸೂಚಿತವಾಗಿದೆ. ಎಂದರೆ ಈ ಉದಾಹರಣೆಯಲ್ಲಿ ವರಾಹಶಬ್ದಕ್ಕೆ ಮೇಘವೆಂಬ ಅರ್ಥವು ಸ್ಪಷ್ಟವಾಗಿದೆ. ವರಾಹಶಬ್ದಕ್ಕೆ ಹಂದಿ ಎಂಬ ಇನ್ನೊಂದು ಅರ್ಥವೂ ಇರುವುದು. ಈ ಶಬ್ದವೂ (ವರಾಹ ಶಬ್ದವೂ) ಇದೇ ಮೂಲಧಾತುವಿನಿಂದ ನಿಷ್ಪನ್ನವಾಗಿದೆ. ಗಿಡಗಳ ಎಂದರೆ ಸಸ್ಯಾದಿಗಳ ಬೇರುಗಳನ್ನು ತನ್ನ ಕೋರೆ ದಾಡೆಗಳಿಂದ ಈಚೆಗೆ ಕಿತ್ತು ಹಾಕುವುದರಿಂದಲೂ, ಉತ್ತಮವಾದ ಆ ಗೆಡ್ಡೆಗೆಣಸುಗಳನ್ನು ಬುಡಸಹಿತ ಕಿತ್ತು ಧ್ವಂಸಮಾಡುವುದರಿಂದಲೂ ಸೂಕರದ ಅಥವಾ ಹಂದಿಗೆ ವರಾಹ ಎಂಬ ಹೆಸರು ಬಂದಿದೆ. ಈ ವಿಷಯದಲ್ಲಿ ಪ್ರಕೃತ ಋಕ್ಕಿನಲ್ಲಿರುವ **ವರಾಹಮಿಂದ್ರ ಏಮುಷಂ**....ಇಂದ್ರನು ಆಹಾರಧ್ವಂಸಕವಾದ ಹಂದಿಯನ್ನು (ಅಸುರನನ್ನು) ಸೀಳಿ ಕೊಂದನು—ಎಂಬ ಶ್ರುತಿವಾಕ್ಯವು ಈ ವಿಧವಾದ ಅರ್ಥದ ಸಮರ್ಥನೆಗೆ ಉದಾಹರಣೆಯಾಗಿದೆ. ಇದೇ ನಿರುಕ್ತದ ಮುಖ್ಯಾಭಿಪ್ರಾಯವು.

ಅಙ್ಗಿರಸೋಽಪಿ ವರಾಹಾ ಉಚ್ಯಂತೇ । "ಬ್ರಹ್ಮಣಸ್ಪತಿರ್ವೃಷ-
ಭಿರ್ವರಾಹೈಃ" ॥ ೨ ॥

**ಅಂಗಿರಸ** ಋಷಿಗಳೂ ಅವರ ವಂಶಸ್ಥರೂ **ವರಾಹಾಃ** ಎಂಬ ಹೆಸರಿನಿಂದ ವ್ಯವಹರಿಸಲ್ಪಡುವುದು ರೂಢಿಯು

ಉದಾಹರಣೆಯ ಋಕ್ಕು—

**ಸ ಈಂ ಸತ್ಯೇಭಿಃ ಸಖಿಭಿಃ ಶುಚದ್ಭಿರ್ಗೋಧಾಯಸಂ ವಿ ಧನಸೈರದರ್ದಃ ।**
**ಬ್ರಹ್ಮಣಸ್ಪತಿರ್ವೃಷಭಿರ್ವರಾಹೈರ್ಘರ್ಮಸ್ವೇದೇಭಿರ್ದ್ರವಿಣಂ ವ್ಯಾನಟ್ ॥**

(ಋ. ಸಂ. ೧೦-೬೭-೭)

ಇದರ ಅರ್ಥವು—

ಸತ್ಯಾತ್ಮಕವಾದ ಶಕ್ತಿಯುಳ್ಳವರೂ, ಮಿತ್ರಭೂತರೂ, ಪ್ರಕಾಶಮಾನರೂ ಧನವನ್ನು ಹೊಂದಿರುವವರೂ ಆದ ಮರುತ್ತುಗಳೊಡಗೂಡಿ ಬೃಹಸ್ಪತಿಯು ಗೋವುಗಳನ್ನು ಬಚ್ಚಿಟ್ಟದ್ದ ವಲನನ್ನು ಸೀಳಿಹಾಕಿದನು. ಸ್ತುತಿಗಳಿಗೆ ಪ್ರಭುವಾದ ಬೃಹಸ್ಪತಿಯು, ಇಷ್ಟಾರ್ಥಪ್ರದರೂ, ಅಪೇಕ್ಷಿತವಾದ ಉದಕವನ್ನು ಸುರಿಸುವವರು, ಯಜ್ಞಗಾಮಿಗಳೂ ಆದ ಮರುತ್ತುಗಳೊಡಗೂಡಿ ಗೋರೂಪವಾದ ಧನವನ್ನು ಹೊಂದಿದನು.

ಇನ್ನೊಂದು ಋಕ್ಕಿನ ಉದಾಹರಣೆಯು—

**ಋತಂ ಶಂಸಂತ ಋಜು ದೀಧ್ಯಾನಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ ।**
**ವಿಪ್ರಂ ಪದಮಂಗಿರಸೋ ದಧಾನಾ ಯಜ್ಞಸ್ಯ ಧಾಮ ಪ್ರಥಮಂ ಮನಂತ ।**

(ಋ. ಸಂ. ೧೦-೬೭-೨)

ಇದರ ಅರ್ಥವು— ಸತ್ಯಾತ್ಮಕವಾದ ಸ್ತುತಿಯನ್ನು ಪಠಿಸುವವರೂ ಲೋಕಕಲ್ಯಾಣಕ್ಕಾಗಿ ಧ್ಯಾನಿಸುವವರೂ ಪ್ರಕಾಶಮಾನನೂ ಪ್ರಾಜ್ಞನೂ ಆದ ಅಗ್ನಿಯ ಪುತ್ರರೂ ಆದ ಅಂಗಿರಸ್ಸುಗಳು ಪರಕ್ರಮವುಳ್ಳವರಾಗಿ ಜಗತ್ತಿಗೆ ಪ್ರಜ್ಞಾಪವಾದದೂ, ಯಜ್ಞಧಾರವಾದುದೂ ಆದ ಬೃಹಸ್ಪತಿಸಂಜ್ಞಕವಾದ ಸ್ಥಾನವನ್ನು ತಮ್ಮ ಕರ್ಮದಿಂದ ಧರಿಸಿದವರಾಗಿ ಆರಂಭದಿಂದಲೇ ಸ್ತುತಿಸುತ್ತಾರೆ.

ಅಥಾಪ್ಯೇತೇ ಮಾಧ್ಯಮಿಕಾ ದೇವಗಣಾ ವರಾಹವ ಉಚ್ಯನ್ತೇ ।
"ಪಶ್ಯನ್ಹಿರಣ್ಯಚಕ್ರಾನಯೋದಂಷ್ಟ್ರಾನ್ವಿಧಾವತೋ ವರಾಹೂನ್" ॥೩॥

**ವರಾಹ** ಶಬ್ದಕ್ಕೆ ಇದುವರೆಗೆ ಹೇಳಿದ ಅರ್ಥಗಳಲ್ಲದೆ ಅಂತರಿಕ್ಷಸ್ಥಾನದೇವತೆಗಳೆಂದೂ ಅರ್ಥವಾಗುವುದು. ಮಧ್ಯಸ್ಥಾನ (ಅಂತರಿಕ್ಷಸ್ಥಾನ) ದೇವಗಣಗಳಾದ ಮರುದ್ದೇವತೆಗಳಿಗೂ ವರಾಹವ ಎಂದು ಹೇಳುವ ರೂಢಿಯಿದೆ.

ಉದಾಹರಣೆಯ ಋಕ್ಕು—

**ಏತತ್ತ್ಯನ್ನ ಯೋಜನಮಚೇತಿ ಸಸ್ವರ್ಹ ಯನ್ಮರುತೋ ಗೋತಮೋ ವಃ ।**
**ಪಶ್ಯನ್ಹಿರಣ್ಯಚಕ್ರಾನಯೋದಂಷ್ಟ್ರಾನ್ವಿಧಾವತೋ ವರಾಹೂನ್ ॥**

(ಋ. ಸಂ. ೧-೮೮-೫)

ಇದರ ಅರ್ಥವು—

ಎಲೈ ಮರುತ್ತುಗಳೇ ಚಿನ್ನದ ಚಕ್ರವುಳ್ಳ ರಥದಲ್ಲಿ ಕುಳಿತಿರುವವರೂ ಉಕ್ಕಿನ ಆಯುಧಗಳನ್ನು ಹಿಡಿದಿರುವವರೂ ಎಲ್ಲಾ ಕಡೆಯಲ್ಲಿಯೂ ರಭಸದಿಂದ ಓಡಾಡುವವರೂ ಮತ್ತು ಪ್ರಬಲವಾದ ಶತ್ರುಗಳನ್ನು ನಾಶಮಾಡುವವರೂ ಆದ ನಿಮ್ಮನ್ನು ಚೆನ್ನಾಗಿ ಗಮನಿಸುತ್ತಾ ಗೋತಮಋಷಿಯು ಯಾವ ನಿಮ್ಮನ್ನುದ್ದೇಶಿಸಿ ಸೂಕ್ತರೂಪವಾದ ಸ್ತೋತ್ರವನ್ನು ಪಠಿಸಿದನೋ ಈ ಸೂಕ್ತವೂ ಸಹ ಆ ಪ್ರಸಿದ್ಧವಾದ ಸ್ತೋತ್ರ. ಸಮವಾದುದೇ ಎಂದು ಎಲ್ಲರಿಗೂ ಚೆನ್ನಾಗಿ ಅರಿಕೆಯಾಗಿದೆ.

ಇನ್ನೊಂದು ಉದಾಹರಣೆಯು—

**ಆ ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈ ರಥೇಭಿರ್ಯಾತ ಋಷ್ಟಿಮದ್ಭಿರಶ್ವಪರ್ಣೈಃ ।**
**ಆ ವರ್ಷಿಷ್ಠಯಾ ನ ಇಷಾ ವಯೋ ನ ಪಪ್ತತಾ ಸುಮಾಯಾಃ ॥**

**(ಋ. ಸಂ. ೧-೮-೮-೧)**

ಇದರ ಅರ್ಥವು—

ಎಲೈ ಮರುತ್ತುಗಳೇ, ನಿಮ್ಮ ವಿಶೇಷವಾದ ಕಾಂತಿಯುಳ್ಳವೂ ಸುಲಭವಾದ ಗಮನವುಳ್ಳವೂ ಆಯುಧಗಳಿಂದ ಭರಿತವಾದವೂ ಕಟ್ಟಿದ ಕುದುರೆಗಳುಳ್ಳವೂ ಆದ ರಥಗಳೊಡನೆ ನಮ್ಮ ಯಜ್ಞಕ್ಕೆ ದಯಮಾಡಿ. ಶ್ರೇಷ್ಠವಾದ ಕರ್ಮಗಳುಳ್ಳ ಎಲೈ ಮರುತ್ತುಗಳೇ ನಮಗೆ ಕೊಡಬೇಕಾದುದೂ ಅತ್ಯಂತ ಪ್ರಭೂತವಾದುದೂ ಆದ ಅನ್ನವನ್ನು (ಆಹಾರವನ್ನು) ತುಂಬಿ ಕೊಂಡು ಪಕ್ಷಿಗಳಂತೆ ವೇಗವಾಗಿ ಸಂಚರಿಸುತ್ತ ನಮ್ಮ ಕಡೆಗೆ ಬನ್ನಿರಿ.

**ಮರುತಃ**—ಈ ಶಬ್ದಕ್ಕೆ ಭಾಷ್ಯಕಾರರು ಎರಡು ಮೂರು ವಿಧವಾದ ರೂಪನಿಷ್ಪತ್ತಿಗಳನ್ನು ಮಾಡಿ ಅರ್ಥ ವನ್ನು ವಿವರಿಸುವರು. **ಮಿತಂ ನಿರ್ಮಿತಮಂತರಿಕ್ಷಂ ಪ್ರಾಪ್ಯ ರುವಂತಿ ಶಬ್ದಂ ಕುರ್ವಂತೀತಿ ಮರುತಃ । ಯದ್ವಾ ಅಮಿತಂ ಭೃಶಂ ಶಬ್ದಕಾರಿಣಃ । ಅಥವಾ ಮಿತಂ ಸ್ವೈರ್ನಿರ್ಮಿತಂ ಮೇಘಂ ಪ್ರಾಪ್ಯ ವಿದ್ಯು-ದಾತ್ಮನಾ ರೋಚಮಾನಾಃ । ಅಥವಾ ಮಹತ್ಯಂತರಿಕ್ಷೇ ದ್ರವಂತೀತಿ ಮರುತಃ ।** ಅಂತರಿಕ್ಷದಲ್ಲಿ ಬೀಸುತ್ತಾ ಶಬ್ದ ಮಾಡುವುದರಿಂದ ಈ ದೇವತೆಗಳಿಗೆ ಮರುತ್ತುಗಳೆಂದು ಹೆಸರು. ಅಥವಾ ಬಹಳವಾಗಿ ಶಬ್ದ ಮಾಡುವುದರಿಂದ ಮರುತ್ತುಗಳೆಂದು ಹೆಸರು. ಅಥವಾ ಮೇಘಮಧ್ಯದಲ್ಲಿ ವಿದ್ಯುದ್ರೂಪದಿಂದ ಪ್ರಕಾಶಮಾನವಾದುದರಿಂದ ಮರುತ್ತು ಗಳೆಂದು ಹೆಸರು. ಅಥವಾ ವಿಸ್ತಾರವಾದ ಅಂತರಿಕ್ಷದಲ್ಲಿ ಸಂಚರಿಸುವುದರಿಂದ ಮರುತ್ತುಗಳೆಂದು ಹೆಸರು. ಇತ್ಯಾದಿ. ಯಾಸ್ಕರು ತಮ್ಮ ನಿರುಕ್ತದಲ್ಲಿ ದೇವತೆಗಳನ್ನು ಸ್ವರ್ಗ, ಅಂತರಿಕ್ಷ, ಭೂಲೋಕ ಇವುಗಳಲ್ಲಿರುವ ದೇವತೆಗಳೆಂದು ಮೂರು ವಿಧವಾಗಿ ವಿಂಗಡಿಸುವರು. ಈ ಮರುದ್ದೇವತೆಗಳು ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿ ಸಂಚರಿಸುವುದ ರಿಂದ ಅಂತರಿಕ್ಷದೇವತೆಗಳೆಂದು ಕರೆಯಲ್ಪಡುವರು. ಈ ವಿಷಯದಲ್ಲಿ—

**ಸರ್ವಾ ಸ್ತ್ರೀ ಮಧ್ಯಮಸ್ಥಾನಾ ಪುಮಾನ್ ವಾಯುಶ್ಚ ಸರ್ವಗಃ ।**
**ಗಣಾಶ್ಚ ಸರ್ವೇ ಮತ ಇತಿ ವೃದ್ಧಾನುಶಾಸನಂ ॥ ಇತಿ ॥**

ಸಮಸ್ತ ಸ್ತ್ರೀದೇವತೆಗಳೂ ಪುರುಷದೇವತೆಗಳಾದ ವಾಯು ಮತ್ತು ಮರದ್ಗಣಗಳು ಮಧ್ಯಮಸ್ಥಾನವಾದ ಅಂತರಿಕ್ಷದ ದೇವತೆಗಳೆಂದು ಹೇಳುವರು ಎಂದು ಪೂರ್ವಿಕರ ಮತವು. ಪೌರಾಣಿಕರು—ಮರೀಚಿಪುತ್ರನಾದ ಕಶ್ಯಪಋಷಿಯಿಂದ ನಲವತ್ತೊಂಬತ್ತು ಸಂಖ್ಯಾಕರಾದ ಮರುದ್ದೇವತೆಗಳು ಉತ್ಪನ್ನರಾದರು—ಎಂದು ಹೇಳುವರು. ಯಾಸ್ಕಮಹರ್ಷಿ

ಗಳು ಈಶಬ್ದದ ರೂಪನಿಷ್ಪತ್ತಿಯನ್ನು ಮಾಡುವಾಗ-**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ** (ನಿ. ೧೧-೧೩)ಎಂದು ಹೇಳಿರುವರು. ಇದರ ಅರ್ಥವಿವರಣೆಯನ್ನು ಮೇಲೆ ವಿವರಿಸಿದ್ದೇವೆ.

**ವಿದ್ಯುನ್ಮದ್ಭಿಃ**—ವಿಶಿಷ್ಟದೀಪ್ತಿಯುಕ್ತೈಃ ಅಥವಾ ವಿದ್ಯುತಾ ಸಂಯುಕ್ತೈಃ । ಸಮಸ್ತವಾದ ಕಾಂತಿಯಿಂದ ಕೂಡಿದವರು ಅಥವಾ ಮಿಂಚಿನಿಂದ ಕೂಡಿದವರು.

**ಸ್ವರ್ಕೈಃ —ಸ್ವರ್ಚನೈಃ ಶೋಭನಗಮನಯುಕ್ತೈಃ । ಯದ್ವಾ । ಶೋಭನಮರ್ಕೋಽರ್ಚನಂ ಸ್ತುತಿರ್ಯೇಷಾಮಸ್ತಿ ತಾದೃಶೈಃ ।** ಉತ್ತಮವಾದ ಗಮನಗಳಿಂದ ಕೂಡಿದವರು ಅಥವಾ ಅರ್ಕವೆಂದರೆ ಸ್ತುತಿಯು ಉತ್ತಮವಾದ ಸ್ತುತಿಗಳಿಂದ ಸ್ತುತಿಸಲ್ಪಡುವವರು ಎಂದರ್ಥವು.

**ಋಷ್ಟಿಮದ್ಭಿಃ** —ಶಕ್ತಿರೂಪವಾದ ಆಯುಧಗಳಿಂದ ಯುಕ್ತರಾದವರು ವೇಗವಾಗಿ ಬೀಸುವ ಮರುತ್ತುಗಳಿಗೆ ಅದ್ಭುತವಾದ ಶಕ್ತಿಯಿರುವುದು. ಈ ವಿಧವಾದ ಶಕ್ತಿಯೇ ಇವರ ಆಯುಧವು.

**ಅಶ್ವಪರ್ಣೈಃ —ಅಶ್ವಂ ವ್ಯಾಪ್ತಂ ಪರ್ಣಂ ಪತನಂ ಗಮನಂ ಯೇಷಾಂ ।** ಅಂತರಿಕ್ಷದಲ್ಲಿ ಗಮನವುಳ್ಳವರು ಎಂದರೆ ಅಂತರಿಕ್ಷದಲ್ಲಿ ಸಂಚರಿಸುವವರು.

**ಸುಮಾಯಾಃ** —ಮಾಯಾ ಎಂದರೆ ಕರ್ಮ ಅಥವಾ ಜ್ಞಾನವು. ಸುಮಾಯಾಃ ಎಂದರೆ ಉತ್ತಮವಾದ ಕರ್ಮಗಳನ್ನು ಮಾಡುವವರು ಅಥವಾ ಶ್ರೇಷ್ಠವಾದ ಜ್ಞಾನವುಳ್ಳವರು.

**ವರ್ಷಿಷ್ಠಯಾ**....ವೃಷ್ಟಿಪ್ರಧಾನದಿಂದ ಆಹಾರೋತ್ಪತ್ತಿಗೆ ಸಾಧನಭೂತವಾದ ಎಂದರ್ಥವು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿರುವರು—

**ಅಥಾತೋ ಮಧ್ಯಮಸ್ಥಾನಾ ದೇವಗಣಾಃ । ತೇಷಾಂ ಮರುತಃ ಪ್ರಥಮಗಾಮಿನೋ ಭವಂತಿ । ಮರುತಃ । ಮರುತೋ ಮಿತರಾವಿಣೋ ವಾ, ಮಿತರೋಚಿನೋ ವಾ, ಮಹದ್ದ್ರವಂತೀತಿ ವಾ । ವಿದ್ಯುನ್ಮದ್ಭಿರ್ಮರುತಃ ಸ್ವರ್ಕೈಃ ಸ್ವರ್ಚನೈರಿತಿ ವಾ, ಸ್ವರ್ಚನೈರಿತಿ ವಾ । ಸ್ವರ್ಚಿಭಿರಿತಿ ವಾ । ರಥೈರಾಯಾತ । ಋಷ್ಟಿಮದ್ಭಿರಶ್ವಪರ್ಣೈರಶ್ವಪತನೈರ್ವರ್ಷಿಷ್ಠೇನ ಚ ನೋಽನ್ನೇನ ವಯ ಇವಾಪತತ ಸುಮಾಯಾಃ ಕಲ್ಯಾಣಪ್ರಜ್ಞಾ ವಾ ॥**

(ನಿ. ೧೧-೧೩-೧೪)

ಇದರ ಅರ್ಥವಿವರಣೆಯು ಭಾಷ್ಯಕಾರರು ಮೇಲೆ ವಿವರಿಸಿದಂತೆಯೇ ಇರುವುದು.

ಸ್ವಸರಾಣ್ಯಹಾನಿ ಭವನ್ತಿ ಸ್ವಯಂ ಸಾರೀಣ್ಯಪಿ ವಾ ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ । ಉಸ್ರಾ ಇವ ಸ್ವಸರಾಣೀತ್ಯಪಿ ನಿಗಮೋ ಭವತಿ । ಶರ್ಯಾ ಅಙ್ಗುಲಯೋ ಭವನ್ತಿ [ಸೃಜನ್ತಿ

ಕರ್ಮಾಣಿ] ಶರ್ಯ್ಯಾ ಇಷವಃ ಶರಮಯ್ಯಃ ಶರಃ ಶೃಣಾತೇಃ ಶರ್ಯ್ಯಾಭಿರ್ನ ಭರಮಾಣೋ ಗಭಸ್ತ್ಯೋರಿತ್ಯಪಿ ನಿಗಮೋ ಭವತ್ಯರ್ಕೋ ದೇವೋ ಭವತಿ ಯದೇನಮರ್ಚನ್ತ್ಯರ್ಕೋ ಮನ್ತ್ರೋ ಭವತಿ ಯದನೇನಾರ್ಚನ್ತ್ಯರ್ಕಮನ್ನಂ ಭವತ್ಯರ್ಚತಿ ಭೂತಾನ್ಯರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ॥೫॥ ॥೪॥

---

ಸ್ವಸರಾಣಿ ॥೨೨॥

ಸ್ವಸರಾಣ್ಯಹಾನಿ ಭವನ್ತಿ ಸ್ವಯಂ ಸಾರೀಣ್ಯಪಿ ವಾ ॥ ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ ॥ "ಉಸ್ರಾ ಇವ ಸ್ವಸರಾಣಿ" ಇತ್ಯಪಿ ನಿಗಮೋ ಭವತಿ ॥೪॥

ಸ್ವಸರಾಣಿ ಎಂದರೆ ಹಗಲುಗಳು, ದಿನಗಳು. ಏಕೆಂದರೆ ಇವುಗಳು ಯಾವ ಪ್ರಯತ್ನವೂ ಇಲ್ಲದೆ ಒಂದಾಗುತ್ತಲು ಒಂದು ಸರಿದು ಮುಂದುಮುಂದಕ್ಕೆ ಹೋಗುತ್ತಿರುವುವು. ಅಥವಾ **ಸ್ವಃ** ಎಂದರೆ ಸೂರ್ಯನು. ಈ ಸೂರ್ಯನು ದಿನಗಳನ್ನ ಮುಂದಕ್ಕೆ ಹೋಗುವಂತೆ ತಳ್ಳುತ್ತಿರುವನು ಆದ್ದರಿಂದ ದಿನಗಳಿಗೆ ಸ್ವಸರಾಣಿ ಎಂದೂ ಹೆಸರು.

ಉದಾಹರಣೆಯ ಋಕ್ಕು—

**ವಿಶ್ವೇ ದೇವಾಸೋ ಅಪ್ತುರಃ ಸುತಮಾಗಂತ ತೂರ್ಣಯಃ ।**
**ಉಸ್ರಾ ಇವ ಸ್ವಸರಾಣಿ ॥**

(ಋ. ಸಂ. ೧-೩-೮)

ಇದರ ಅರ್ಥವು—ಎಲೈ ವಿಶ್ವೇದೇವತೆಗಳೇ, ನೀವು ವೃಷ್ಟಿಪ್ರದರು ಎಂದರೆ ಮಳೆ ಬರುವಂತೆ ಮಾಡುವಿರು. ನಿಮಗಾಗಿ ಸೋಮರಸವು ಸಿದ್ಧವಾಗಿರುವುದು. ಅದನ್ನು ಪಾನಮಾಡುವುದಕ್ಕಾಗಿ, ಹಗಲಿನಲ್ಲಿ (ಸೂರ್ಯೋದಯವಾದ ಕೂಡಲೆ) ಸೂರ್ಯನ ರಶ್ಮಿಗಳು ನಮ್ಮನ್ನು ಬಂದು ಸೇರುವಂತೆ ಬೇಗನೆ ಬನ್ನಿರಿ.

ಶರ್ಯಾಃ ॥೨೩॥

ಶರ್ಯಾ ಅಂಗುಲಯೋ ಭವನ್ತಿ [ಸೃಜನ್ತಿ ಕರ್ಮಾಣಿ] ॥ ಶರ್ಯಾ ಇಷವಃ ಶರಮಯ್ಯಃ ॥ ಶರಃ ಶೃಣಾತೇಃ ॥ "ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ" ಇತ್ಯಪಿ ನಿಗಮೋ ಭವತಿ ॥೫॥

**ಶರ್ಯಾಃ** ಎಂದರೆ **ಅಂಗುಲಯಃ** ಬೆರಳುಗಳು ಎಂದರ್ಥವು. ಬೆರಳುಗಳು ಕೆಲಸವನ್ನು ಮಾಡುತ್ತವೆ. ಆದ್ದರಿಂದ ಅವುಗಳಿಗೆ ಶರ್ಯಾಃ ಎಂದು ಹೆಸರು. ಶರ್ಯಾಃ ಎಂದರೆ ಇಷವಃ ಬಾಣಗಳೆಂದೂ ಹೆಸರು. ಶರ್ಯಾಃ ಅಥವಾ ಶರಃ ಎಂಬ ಶಬ್ದವು ಶೃಣಾತಿಧಾತುವಿನಿಂದ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

**ಅಭ್ಯಭಿ ಹಿ ಶ್ರವಸಾ ತತರ್ದಿಥೋತ್ಸಂ ನ ಕಂಚಿಜ್ಜನಪಾನಮಕ್ಷಿತಂ ॥**
**ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ ॥**

(ಋ. ಸಂ. ೯-೧೧೦-೫)

ಇದರ ಅರ್ಥವು—ಎಲೈ ಸೋಮದೇವನೇ, ಲೋಕದ ಜನರು ಪಾನಮಾಡಲು ಯೋಗ್ಯವಾದದೂ, ಅಶೋಷ್ಯವಾದುದೂ ಆದ ಒಂದು ನೀರಿನ ಬುಗ್ಗೆಯನ್ನು ಜಲವನ್ನು ಮೇಲಕ್ಕೆ ಬರಮಾಡಲು ಒಡೆಯುವಂತೆಯೂ, ಉದಕವನ್ನು ವಹಿಸಿರುವವನು ತನ್ನ ಬಾಹುಗಳ ಬೆರಳುಗಳಿಂದ ನೀರನ್ನು ಚಿಮ್ಮಿಸುವಂತೆಯೂ ನೀನು ಅನ್ನದ ಹೇತ್ವರ್ಥವಾಗಿ ಪವಿತ್ರವನ್ನು ಸುತ್ತಲೂ ಛಿನ್ನಮಾಡಿದ್ದೀಯೆ.

ಅರ್ಕಃ ॥೨೪॥

ಅರ್ಕೋ ದೇವೋ ಭವತಿ ಯದೇನಮರ್ಚತಿ। ಅರ್ಕೋ ಮಂತ್ರೋ
ಭವತಿ ಯದನೇನಾರ್ಚಂತಿ। ಅರ್ಕಮನ್ನಂ ಭವತ್ಯರ್ಚತಿ ಭೂತಾನಿ।
ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ—॥

ಅರ್ಕ ಶಬ್ದಕ್ಕೆ ನಾನಾರ್ಥಗಳಿವೆ.

**ಅರ್ಕ** ಎಂದರೆ ದೇವನು. ಏತಕ್ಕೆಂದರೆ, ಸ್ತೋತೃಗಳು ಈ ದೇವನನ್ನು ಋಕ್ಕುಗಳಿಂದ ಸ್ತೋತ್ರಮಾಡುತ್ತಾರೆ ಮತ್ತು ಪೂಜಿಸುತ್ತಾರೆ.

**ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ**—ಅರ್ಕ ಎಂದರೆ ಮಂತ್ರವೆಂದು ಅರ್ಥವು. ಏಕೆಂದರೆ ಈ ಮಂತ್ರವನ್ನು ಉಚ್ಚರಿಸುತ್ತಾ ದೇವನನ್ನು ಸ್ತೋತೃಗಳು ಪೂಜಿಸುತ್ತಾರೆ.

**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ**—ಅರ್ಕವೆಂದರೆ ಅನ್ನವು. ಅರ್ಕ (ದೇವನು ಅಥವಾ ಮಂತ್ರವು) ವು ಯಾವ ರೀತಿ ಪೂಜಾರ್ಹನಾಗಿರುವನೋ ಅನ್ನವು ಸಹ ಸರ್ವರಿಂದಲೂ ಆದರಣೀಯವಾಗಿರುವುದು.

**ಅರ್ಕೋ ವೃಕ್ಷೋ ಭವತಿ ಸಂವೃತಃ ಕಟುಕಿಮ್ನಾ**—ಅರ್ಕವೆಂದರೆ ಒಂದು (ಎಕ್ಕದ) ವೃಕ್ಷವಿಶೇಷವು. ಈ ವೃಕ್ಷವು ಬಹಳ ಕಹಿಯಾಗಿರುವುದು.

**ಇತಿ ಚತುರ್ಥಃ ಖಂಡಃ**

ಇಲ್ಲಿಗೆ ನಾಲ್ಕನೆಯ ಖಂಡವು ಸಮಾಪ್ತವು

---

## ಪಂಚಮಃ ಖಂಡಃ

## ಐದನೆಯ ಖಂಡವು

ಗಾಯನ್ತಿ ತ್ವಾ ಗಾಯತ್ರಿಣೋಽರ್ಚನ್ತ್ಯರ್ಕಮರ್ಕಿಣಃ ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ॥ ಗಾಯನ್ತಿ ತ್ವಾ ಗಾಯತ್ರಿಣಃ ಪ್ರಾರ್ಚನ್ತಿತೇಽರ್ಕಮರ್ಕಿಣೋ ಬ್ರಾಹ್ಮಣಾಸ್ತ್ವಾ ಶತಕ್ರತೋ ಉದ್ಯೇಮಿರೇ ವಂಶಮಿವ ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ ಪವಿಃ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಮ್ । ಉತ ಪವ್ಯಾ ರಥಾನಾಮದ್ರಿಂ ಭಿನ್ದನ್ತ್ಯೋಜಸಾ । ತಂ ಮರುತಃ ಕ್ಷುರಪವಿನಾ ವ್ಯಯುರಿತ್ಯಪಿ ನಿಗಮೌ ಭವತಃ । ವಕ್ಷೋ ವ್ಯಾಖ್ಯಾತಂ ಧನ್ವಾನ್ತರಿಕ್ಷಂ ಧನ್ವನ್ತ್ಯಸ್ಮಾದ್ರಾಪಃ। ತಿರೋ ಧನ್ವಾತಿರೋಽಚತ ಇತ್ಯಪಿ ನಿಗಮೋ ಭವತಿ । ಸಿನಮನ್ನಂ ಸಿನಾತಿ ಭೂತಾನಿ। ಯೇನ ಸ್ಮಾ ಸಿನಂ ಭರಥಃ ಸಖಿಭ್ಯ ಇತ್ಯಪಿ ನಿಗಮೋ ಭವತಿ। ಇತ್ಥಾಮುಥೇತ್ಯೇತೇನ ವ್ಯಾಖ್ಯಾತಂ ಸಚಾ ಸಹೇತ್ಯರ್ಥಃ । ವಸುಭಿಃ ಸಚಾಭುವಾ । ವಸುಭಿಃ ಸಹ ಭುವೌ । ಚಿದಿತಿ ನಿಪಾತೋಽನುದಾತ್ತಃ ಪುರಸ್ತಾದೇವ ವ್ಯಾಖ್ಯಾತೋಽಥಾಪಿ ಪಶುನಾಮೇಹ ಭವತ್ಯುದಾತ್ತಶ್ಚಿದಸಿ ಮನಾಸಿ ಚಿತಾಸ್ತ್ವಯಿ ಭೋಗಾಶ್ಚೇತಯಸ ಇತಿ ವಾ ಆ ಇತ್ಯಾಕಾರ ಉಪಸರ್ಗಃ ಪುರಸ್ತಾದೇವ ವ್ಯಾಖ್ಯಾತೋಽಥಾಪ್ಯಧ್ಯರ್ಥೇ ದೃಶ್ಯತೇ । ಅಭ್ರ ಆ ಅಪಃ ಅಭ್ರೇ ಆ ಅಪೋಽಪೋಽಭ್ರೇಽಧೀತಿ ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ । ಅಸ್ಮೇ ದ್ಯುಮ್ನಮಧಿರತ್ನಂ ಚ ಧೇಹಿ । ಅಸ್ಮಾಸು ದ್ಯುಮ್ನಂ ಚ ರತ್ನಂ ಚ ಧೇಹಿ ॥೬॥

---

"ಗಾಯನ್ತಿ ತ್ವಾ ಗಾಯತ್ರಿಣೋಽರ್ಚನ್ತ್ಯರ್ಕಮರ್ಕಿಣಃ ।ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ " ॥

ಗಾಯನ್ತಿ ತ್ವಾ ಗಾಯತ್ರಿಣಃ ಪ್ರಾರ್ಚನ್ತಿ ತೇಽರ್ಕಮರ್ಕಿಣೋ ಬ್ರಾಹ್ಮಣಾಸ್ತ್ವಾ ಶತಕ್ರತೋ ಉದ್ಯೇಮಿರೇ ವಂಶಮಿವ ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ ॥೬ ॥ ॥ ೪ ॥

ಅರ್ಕಶಬ್ದವನ್ನು ವಿವರಿಸುವ ಉದಾಹರಣೆಯ ಋಕ್ಕು

**ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**
**ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ॥**

(ಋ. ಸಂ. ೧-೧೦-೧)

ಇದರ ಅರ್ಥವು—ಎಲೈ ಇಂದ್ರನೇ, ನೀನು ಬಹು ಸಾಹಸಕೃತ್ಯಗಳನ್ನು ಮಾಡುವವನು ಅಥವಾ ಬಹುಪ್ರಜ್ಞಾಶಾಲಿಯು. ಇಂತಹ ನಿನ್ನನ್ನು ಯಜ್ಞಾದಿಕರ್ಮಗಳಲ್ಲಿ ಉದ್ಗಾತೃಗಳೆಂಬ ಋತ್ವಿಜರು ತಮ್ಮ ವೇದವಾದ ಋಗ್ವೇದಮಂತ್ರಗಳಿಂದ ಪೂಜಿಸಲ್ಪಡಲು ಯೋಗ್ಯನಾದ ನಿನ್ನನ್ನು ಸ್ತುತಿಸುವರು. ಬ್ರಹ್ಮನೇ ಮೊದಲಾದ ಇತರ ಬ್ರಾಹ್ಮಣರು ನಿನ್ನನ್ನು ಬೊಂಬನ್ನು ನೆಟ್ಟು ಮೇಲಕ್ಕೆತ್ತುವಂತೆ ಸ್ತೋತ್ರಾದಿಗಳಿಂದ ಹೊಗಳಿ ನಿನ್ನ ಕೀರ್ತಿಯನ್ನು ಅಭಿವೃದ್ಧಿಪಡಿಸುವರು. (ಹೆಚ್ಚು ಮಾಡುವರು)

ಅರ್ಕಶಬ್ದಕ್ಕೆ ನಾಲ್ಕು ವಿಧವಾದ ಅರ್ಥವನ್ನು ಹೇಳಿರುವರು—

**ದೇವ:—ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯತ್ ಯಸ್ಮಾತ್ ಏನಂ ದೇವಂ ಅರ್ಚಂತಿ ಸ್ತೋತಾರಃ** ಅರ್ಕ ಎಂದರೆ ದೇವತೆಯು. ಏಕೆಂದರೆ ಇದರಿಂದ ಭಕ್ತರು ಯಾರನ್ನು ಪೂಜಿಸುವುದಕ್ಕೆ ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು. ಎಂದರೆ ಭಕ್ತರು ಪೂಜಿಸುವ ವಸ್ತುವಿಗೇ (ದೇವತೆಗೆ) ಅರ್ಕವೆಂದು ಹೆಸರು.

**ಅರ್ಕೋ ಮಂತ್ರೋ ಭವತಿ-ಯತ್-ಯಸ್ಮಾತ್ ಅನೇನ-ಮಂತ್ರೇಣ, ಅರ್ಚಂತಿ ಸ್ತೋತಾರಃ ತಸ್ಮಾದರ್ಕಃ**-ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

**ಅರ್ಕಮನ್ನಂ ಭವತಿ-ತದ್ಧಿ ಅರ್ಚತಿ ಭೂತಾನಿ, ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ, ಪೂಜ್ಯಂ ಚ ಸರ್ವಸ್ಮೈವಾನ್ನಂ**—ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತ ಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಅದರಿಂದ ಗೌರವಿಸಿ ಅಪೇಕ್ಷಿಸುವರು. ಎಂದರೆ ಎಲ್ಲರೂ ಪ್ರೀತ್ಯಾದರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕಶಬ್ದಕ್ಕೆ ಅನ್ನವೆಂದೂ ಅರ್ಥವಾಗುವುದು.

**ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ । ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ**—ಇನ್ನು ಅರ್ಕಶಬ್ದಕ್ಕೆ ವೃಕ್ಷವೆಂಬ ಹೆಸರು ಪ್ರಸಿದ್ಧವಾಗಿಯೇ ಇವೆ. ಅರ್ಕವೃಕ್ಷವೆಂದರೆ ಎಕ್ಕದಗಿಡವೆಂದು ಕರ್ನಾಟಕ ಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು ಹೋಮಗಳಲ್ಲಿ ಉಪಯೋಗಿಸುವುದರಿಂದಲೂ ಇದನು ಔಷಧಾದಿಗಳಲ್ಲಿ ಬಳಸುವ ರೂಢಿಯಿರುವುದರಿಂದಲೂ ಅರ್ಕವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು.

ಅರ್ಕಶಬ್ದದ ವಿವರಣೆಯ ಉದಾಹರಣೆಗಾಗಿ ಯಾಸ್ಕರು ಪ್ರಸಕ್ತವಾದ ಈ **ಗಾಯಂತಿ ತ್ವಾ ಗಾಯತ್ರಿಣಃ** ಎಂಬ ಋಕ್ಕನ್ನೇ ತೆಗೆದುಕೊಂಡು ಇದರಲ್ಲಿರುವ ವಂಶಶಬ್ದದ ಅರ್ಥವಿವರಣೆಯನ್ನೂ ಮಾಡಿರುವರು—

**ಗಾಯಂತಿ ತ್ವಾ ಗಾಯತ್ರಿಣಃ ಪ್ರಾರ್ಚಂತಿ ತೇಽರ್ಕಮರ್ಕಿಣೋ ಬ್ರಾಹ್ಮಣಾಸ್ತ್ವಾ ಶತಕ್ರತೋ।**
**ಉದ್ಯಮಿರೇ ವಂಶಮಿವ ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ ॥**

(ನಿ. ೫-೪)

ಇದಕ್ಕೆ ದುರ್ಗಾಚಾರ್ಯರ ವ್ಯಾಖ್ಯಾನವು ಈ ರೀತಿ ಇರುವುದು.

**ಗಾಯಂತಿ ತ್ವಾ ಗಾಯತ್ರಿಣಃ**—ಸ್ತುವಂತಿ ತ್ವಾಂ ಸಾಮಗಾಃ ಸಾಮಭಿಃ। **ಅರ್ಚಂತ್ಯರ್ಕಮರ್ಕಿಣಃ**—ಪೂಜಯಂತಿ ತ್ವಾಂ ಋಗ್ಭಿಃ ಹೋತಾದೋ ಮಂತ್ರಿಣಃ। ಏವಮನೇನ ಪ್ರಕಾರೇಣ ಸರ್ವ ಏತೇ ಬ್ರಾಹ್ಮಣಾಃ ಯಾಜ್ಞೇ ಕರ್ಮಣಿ **ಹೇ ಶತಕ್ರತೋ ಉದ್ವಂಶಮಿವ ಯೇಮಿರೇಉದ್ಯೇಮಿರೇ ವಂಶಮಿವ** ತ್ವಾಂ **ಸ್ತುತಿಭಿಃ ಹವಿರ್ಭಿಶ್ಚ ಯಜ್ಞೇಷು ತವೈವ ಮಹಿಮಾನಂ ವರ್ಧಯಂತೀತ್ಯರ್ಥಃ। ವಂಶೋ ವನಶಯೋ ಭವತಿ ವನೇ ಶಯಿತ ಇವಾಸ್ತೇ** ವನೇ ಶಯಿತ ಇವಾಸ್ತೇ, ವನನಾ ಚ್ಛ್ರೂಯತ ಇತಿ ವಾ ಸಂಭಜನಾದ್ವಾ ವಲ್ಲಿಭಿಃ ॥ **ಏವಮತ್ರ ದೇವಃ ಅರ್ಕಶಬ್ದೇ ನೋಚ್ಯತೇ ಮಂತ್ರಸ್ಯಾರ್ಕಶಬ್ದವಾಚ್ಯತ್ವೇ ಅರ್ಚಂತ್ಯರ್ಕಮರ್ಕಿಣಃ ಇತ್ಯೇಷ ಏವ ನಿಗಮಃ। ಅರ್ಕಿಣೋ ಹಿ ಮಂತ್ರಿಣ ಏವಾಭಿಪ್ರೇತಾಃ। ವೃಕ್ಷಸ್ತು ಪ್ರಸಿದ್ಧ ಏವ। ತೇನ ನಿಗಮಸ್ತದಭಿದಾಯಕೋ ನೈವಾಸ್ತಿ।**

ಇಲ್ಲಿ ಯಾಸ್ಕರು ಬ್ರಹ್ಮಾಣಃ ಎಂಬ ಶಬ್ದಕ್ಕೆ ಬ್ರಾಹ್ಮಣಾಃ ಎಂದರ್ಥ ಹೇಳಿರುವರು. ಬ್ರಾಹ್ಮಣರೆಂದರೆ ಬ್ರಾಹ್ಮಣ ವರ್ಣದವರೂ ಮತ್ತು ಯಜ್ಞಯಾಗಾದಿಗಳಲ್ಲಿ ಭಾಗವಹಿಸುವ ಬ್ರಹ್ಮನೇ ಮೊದಲಾದ ಋತ್ವಿಜರೂ ಎಂದಾಗುವುದು. ವಂಶಶಬ್ದಕ್ಕೆ—**ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ** ಎಂದರ್ಥ ಹೇಳಿರುವರು. ಎಂದರೆ ವನದಲ್ಲಿ ಇರುವುದರಿಂದ ಇದಕ್ಕೆ ವಂಶವೆಂದು ಹೆಸರು ಅಥವಾ ಬಿದಿರು ಮೆಳೆಗಳು ಗಾಳಿಯ ಹೊಡೆತದಿಂದ ಒಂದಕ್ಕೊಂದು ತಿಕ್ಕುವಾಗ ಶಬ್ದಮಾಡುವುದರಿಂದ ಇದಕ್ಕೆ ವಂಶವೆಂದು ಹೆಸರು. ಅಥವಾ ಬಳ್ಳಿಗಳಿಂದ ಸುತ್ತುವರಿಯಲ್ಪಡುವುದರಿಂದ ಇದಕ್ಕೆ ವಂಶವೆಂದು ಹೆಸರು. ಎಂದು ಹೇಳಿರುವರು.

**ಅರ್ಕಿಣಃ**—**ಅರ್ಚನಹೇತುಮಂತ್ರಯುಕ್ತಾ ಹೋತಾರಃ। ಅರ್ಕಾ ಮಂತ್ರಾ ಏಷಾಂ ಸಂತೀತ್ಯರ್ಕಿಣಃ ಹೋತಾರಃ** ॥ ಅರ್ಕ ಶಬ್ದಕ್ಕೆ (ಋಕ್ಕು) ಮಂತ್ರವೆಂಬ ಅರ್ಥವಿವರಣೆಯಿರುವುದರಿಂದ ಆ ಮಂತ್ರಗಳಿಂದ ಸ್ತುತಿಸುವವರಿಗೆ ಅರ್ಕಿಣಃ ಎಂದು ಹೆಸರು. ಎಂದರೆ ಶಸ್ತ್ರರೂಪವಾದ ಋಕ್ಕುಗಳನ್ನು ಪಠಿಸುವ ಹೋತೃವರ್ಗದ ಋತ್ವಿಜರು ಎಂದರ್ಥವು.

**ಬ್ರಾಹ್ಮಣಃ**—ಈ ಶಬ್ದಕ್ಕೆ ಭಾಷ್ಯಕಾರರು ಬ್ರಹ್ಮನೆಂಬ ಋತ್ವಿಜನೇ ಮೊದಲಾದ ಬ್ರಾಹ್ಮಣರು ಎಂದರ್ಥ ಹೇಳಿರುವರು. ಯಾಸ್ಕರು ಸಾಮಾನ್ಯವಾಗಿ ಬ್ರಾಹ್ಮಣರೆಂದೇ ಅರ್ಥವಿವರಣೆ ಮಾಡಿರುವರು.

**ಶತಕ್ರತೋ**—ಈ ಶಬ್ದಾರ್ಥವಿವರಣೆಯನ್ನು ಹಿಂದೆಯೇ ಹೇಳಿರುವೆವು.

**ವಂಶಮಿವ**—ಈ ಶಬ್ದದ ವಿವರಣೆಯೂ ಯಾಸ್ಕರ ಅರ್ಥಾನುವಾದದಲ್ಲಿಯೇ ಇರುವುದು.

**ವಂಶೋ ವನಶಯೋ ಭವತಿ ವನನಾಚ್ಛ್ರೂಯತ ಇತಿ ವಾ**—ವಂಶ ಎಂಬ ಹೆಸರು ಬಿದುರಿಗೆ ಬರಲು ಕಾರಣ ವೇನೆಂದರೆ ಇದು ಕಾಡಿನಲ್ಲಿ ಬೆಳೆದು ಅಲ್ಲೇ ಬಿದ್ದಿರುವುದು. ಅಥವಾ ಇದನ್ನು ಇತರ ವಲ್ಲಿಮರಗಳು ಸುತ್ತುಗಟ್ಟಿ ಬೆಳೆದಿರುವವು.

ಪವಿಃ ॥೨೫॥

ಪವೀ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಮ್। "ಉತ ಪವ್ಯಾ ರಥಾನಾಮದ್ರಿಂ ಭಿನ್ದನ್ತ್ಯೋಜಸಾ"। "ತಂ ಮರುತಃ ಕ್ಷುರಪವಿನಾ ವ್ಯಯುಃ" ಇತ್ಯಪಿ ನಿಗಮೌ ಭವತಃ ॥೧॥

**ಪವಿಃ** ಎಂದರೆ ರಥಚಕ್ರದ ಸುತ್ತಲೂ ಇರುವ ಕಬ್ಬಿಣದ ಪಟ್ಟಿಯು (ಇರುಚಿಯು). ಇದು ಭೂಮಿಯ ಮೇಲೆ ಉರುಳುತ್ತಿರುವಾಗ ಭೂಮಿಯನ್ನು ಪವಿತ್ರ (ಶುದ್ಧ)ವನ್ನಾಗಿ ಮಾಡುವುದರಿಂದ ಇದಕ್ಕೆ ಪವಿ ಎಂದು ಹೆಸರು ಬಂದಿದೆ.

ಉದಾಹರಣೆಯ ಋಕ್ಕು—

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**

(ಋ. ಸಂ. ೫–೫೨–೯)

ಇದರ ಅರ್ಥವು—

ಮರುದ್ದೇವತೆಗಳು ಪರುಷ್ಣೀನದಿಯಲ್ಲಿರುತ್ತಾರೆ. ಪ್ರಕಾಶಮಾನವಾದುದೂ ಪರಿಶುದ್ಧವಾದುದೂ ಆದ ತೇಜಸ್ಸಿನಿಂದ ಆವೃತರಾಗಿದ್ದಾರೆ. ಮತ್ತು ತಮ್ಮ ರಥಗಳ ನೇಮಿರೂಪವಾದ ಬಲದಿಂದ ಮೇಘವನ್ನು ಸೀಳುತ್ತಾರೆ.

ಪವಿಶಬ್ದಕ್ಕೆ ರಥನೇಮಿ ಎಂಬರ್ಥದಲ್ಲಿ ಬ್ರಾಹ್ಮಣವಾಕ್ಯದ ಉದಾಹರಣೆ—

**ದೇವಾ ವೈ ವೃತ್ರಸ್ಯ ಮರ್ಮ ನಾವಿಂದಂಸ್ತಂ ಮರುತಃ ಕ್ಷುರಪವಿನಾ ।**
**ವ್ಯಯುಃ ಸ ವಾ ಏನಂ ತದತಪಂಸ್ತಸ್ಮಾತ್ಸಾಂಪನಾಃ ॥**

(ಮೈತ್ರಾಯಣೀಯ ಸಂಹಿತಾ ೧–೧೦–೧೪)

**ವಕ್ಷಃ ॥೨೬॥**

**ವಕ್ಷೋ ವ್ಯಾಖ್ಯಾತಮ್ ॥೨॥**

**ವಕ್ಷಃ** ಎಂಬ ಶಬ್ದವನ್ನು ಹಿಂದೆಯೇ ವಿವರಿಸಲಾಗಿದೆ.

(ನಿ. ಅಧ್ಯಾಯ ೪. ಖಂಡ ೧೬)

ಧನ್ವ ॥೨೭॥

ಧನ್ವಾನ್ತರಿಕ್ಷಂ ಧನ್ವನ್ತ್ಯಸ್ಮಾದಾಪಃ ।

"ತಿರೋ ಧನ್ವಾತಿ ರೋಚತೇ" ಇತ್ಯಪಿ ನಿಗಮೋ ಭವತಿ ॥೩॥

**ಧನ್ವ** ಎಂದರೆ ಅಂತರಿಕ್ಷವು. ವೃಷ್ಟ್ಯುದಕವು ಇದರ ಮೂಲಕ ಬೀಳುವಾಗ ಪ್ರಕಾಶಿಸುತ್ತದೆ.

ಉದಾಹರಣೆಯ ಋಕ್ಕು—

**ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿರೋಚತೇ ।**
**ಸ ನಃ ಪರ್ಷದತಿ ದ್ವಿಷಃ॥**

(ಋ. ಸಂ. ೧೦–೧೮೭–೨)

ಇದರ ಅರ್ಥವು—

ಯಾವ ಅಗ್ನಿಯು ಅತಿ ದೂರಪ್ರದೇಶದಲ್ಲಿ ವ್ಯಾಪಿಸಿರುವ ಮರುಭೂಮಿಯನ್ನು ಅಥವಾ ಅಂತರಿಕ್ಷ ಪ್ರದೇಶವನ್ನು ವ್ಯಾಪಿಸಿ ಪ್ರಕಾಶಿಸುವನೋ ಆ ಅಗ್ನಿಯು ನಮ್ಮನ್ನು ಶತ್ರುಗಳ ಜೆಶಿಯಿಂದ ಪಾರುಮಾಡಲಿ.

ಸಿನಮ್ ॥ ೨೮ ॥

ಸಿನಮನ್ನಂ ಭವತಿ ಸಿನಾತಿ ಭೂತಾನಿ ।
" ಯೇನ ಸ್ಮಾ ಸಿನಂ ಭರಥಃ ಸಖಿಭ್ಯಃ " ಇತ್ಯಪಿ ನಿಗಮೋ ಭವತಿ ॥ ೪ ॥

ಸಿನಂ ಎಂದರೆ ಅನ್ನವು. ಏತಕ್ಕೆಂದರೆ ಅನ್ನಕ್ಕೂ ಪ್ರಾಣಿಗಳಿಗೂ ನಿಕಟವಾದ ಸಂಬಂಧವಿಟ್ಟೇ ಇರುವುದು.

ಉದಾಹರಣೆಯ ಋಕ್ಕು—

**ಇಮಾ ಉ ವಾಂ ಭೃಮಯೋ ಮನ್ಯಮಾನಾ ಯುವಾವತೇ ನ ತುಜ್ಯಾ ಅಭೂವನ್ ।**
**ಕ್ವ೧ ತ್ಯದಿಂದ್ರಾವರುಣಾ ಯಶೋ ವಾಂ ಯೇನ ಸ್ಮಾ ಸಿನಂ ಭರಥಃ ಸಖಿಭ್ಯಃ ॥**
(ಋ. ಸಂ. ೩-೬೨-೧)

ಇದರ ಅರ್ಥವು—

ಎಲೈ ಇಂದ್ರಾವರುಣರೇ, ನಿಮಗೆ ಸೇರಿದವರೂ ಶತ್ರುಗಳಿಂದ ಎದುರಿಸಲ್ಪಟ್ಟವರೂ ಆದುದರಿಂದಲೇ ದಿಕ್ಕೆಟ್ಟು ಪರಿಭ್ರಮಿಸುವವರೂ ಆದ ಈ ಪ್ರಜೆಗಳು ಯುವಕನಾದ ಶತ್ರುವಿನಿಂದ ಹಿಂಸಿತರಾಗಿ ಆಗದಿರಲಿ. ಯಾವ ಯಶಸ್ಸಿನಿಂದ ನಿಮ್ಮ ಸುಖರಾದ ನಮಗೆ ಅನ್ನವನ್ನು ಸಂಪಾದಿಸಿಕೊಡುತ್ತೀರೋ ಅಂತಹ ನಿಮ್ಮ ಕೀರ್ತಿಯು ಎಲ್ಲಿ ?

ಇತ್ಥಾ ॥ ೨೯ ॥
ಇತ್ಥಾಽಮುಥೇತ್ಯೇತೇನ ವ್ಯಾಖ್ಯಾತಮ್ ॥ ೫ ॥

**ಇತ್ಥಾ** ಎಂಬ ನಿಪಾತವು (ಅವ್ಯಯವು) **ಅಮುಥಾ** ಎಂಬ ಶಬ್ದವನ್ನು ವಿವರಿಸುವಾಗ ಹಿಂದೆಯೇ ತಿಳಿಸಲ್ಪಟ್ಟಿದೆ. (ನಿರುಕ್ತ ಅಧ್ಯಾಯ ೩-ಖಂಡ ೧೬)

ಸಚಾ ಸಹೇತ್ಯರ್ಥಃ ॥
" ವಸುಭಿಃ ಸಚಾ ಭುವಾ । ವಸುಭಿಃ ಸಹ ಭುವೌ ॥ ೬ ॥

**ಸಚಾ** ಎಂದರೆ ಸಹ (ಕೂಡಿ) ಎಂದರ್ಥವು

ಉದಾಹರಣೆಯಋಕ್ಕು—

**ಅಗ್ನಿನೇಂದ್ರೇಣ ವರುಣೇನ ವಿಷ್ಣುನಾದಿತ್ಯೈ ರುದ್ರೈರ್ವಸುಭಿಃ ಸಚಾ ಭುವಾ।**
**ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥**
(ಋ. ಸಂ. ೮-೩೫-೧)

ಇದರ ಅರ್ಥವು—

ಎಲೈ ಅಶ್ವಿನೀದೇವತೆಗಳೇ, ಅಗ್ನಿಯೊಡನೆಯೂ ಇಂದ್ರನೊಡನೆಯೂ, ವರುಣನೊಡನೆಯೂ, ವಿಷ್ಣುವಿನೊಡನೆಯೂ ಆದಿತ್ಯರೊಡನೆಯೂ, ರುದ್ರರೊಡನೆಯೂ, ವಸುಗಳೊಡನೆಯೂ ಒಟ್ಟಿಗೆ ಕೂಡಿದವರಾಗಿಯೂ, ಉಷಸ್ಸಿನೊಡನೆಯೂ ಸೂರ್ಯನೊಡನೆಯೂ ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇಂದು ಸೋಮವನ್ನು ಪಾನಮಾಡಿರಿ.

ಚಿತ್ ॥೩೧॥

ಚಿದಿತಿ ನಿಪಾತೋಽನುದಾತ್ತಃ ಪುರಸ್ತಾದೇವ ವ್ಯಾಖ್ಯಾತಃ । ಅಥಾಪಿ ಪಶುನಾಮೇಹ ಭವತ್ಯುದಾತ್ತಃ । “ಚಿದಸಿ ಮನಾಸಿ ಧೀರಸಿ” ಚಿತಾಸ್ತ್ವಯಿ ಭೋಗಾಶ್ಚೇತಯಸ ಇತಿ ವಾ ॥೭॥

**ಚಿತ್** ಎಂಬ ನಿಪಾತಕ್ಕೆ (ಅವ್ಯಯಕ್ಕೆ) ಅನೇಕ ಅರ್ಥಗಳಿರುವವು. **ಚಿತ್** ಎಂಬ ಶಬ್ದವು ಆದ್ಯನುದಾತ್ತವಾಗಿರುವಾಗ ಹಿಂದೆಯೇ ವಿವರಿಸಲ್ಪಟ್ಟಿದೆ. (ನಿ. ಅಧ್ಯಾಯ ೩. ಖಂಡ ೪) ಈ ಪದವು ಆದ್ಯುದಾತ್ತವಾಗಿದ್ದರೆ ಇದಕ್ಕೆ ಪಶು ಎಂದರ್ಥವಾಗುವುದು.

**ಚಿತ್** ಎಂಬ ಪದವು ಆದ್ಯನುದಾತ್ತವಿರುವುದಕ್ಕೆ ಉದಾಹರಣೆಯು—

**ಸದ್ಯಶ್ಚಿದ್ಯಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವಜ್ಯೋತಿಷಾಪಸ್ತತಾನ ।**
**ಸಹಸ್ರಸೇ ಶತಸಾ ಅಸ್ಯ ರಂಹಿರ್ನ ಸ್ಮಾ ವರಂತೇ ಯುವತಿಂ ನ ಶರ್ಯಾಂ ॥**

(ಋ. ಸಂ. ೧೦–೧೭೮–೩)

ಇದರ ಅರ್ಥವು—

ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ಭೂಮಿಯ ಮೇಲೆ ವೃಷ್ಟಿರೂಪದಿಂದ ಹರಡುವಂತೆ ಯಾವ ತಾರ್ಕ್ಷ್ಯದೇವನು ತನ್ನ ಶಕ್ತಿಯಿಂದ ಪಂಚವಿಧ ಜನರ ಅನುಕೂಲಕ್ಕಾಗಿ ಉದಕಗಳನ್ನು ಭೂಮಿಯ ಮೇಲೆ ವಿಸ್ತರಿಸಿ ಹರಡುವನೋ ಅಂತಹ ತಾರ್ಕ್ಷ್ಯದೇವನ ಆಗಮನವು ನಮಗೆ ನೂರಾರು, ಸಾವಿರಾರು ಪಾಲಿನಷ್ಟು ಧನವನ್ನು ಕೊಡುವುದು. ಬಿಲ್ಲಿನಿಂದ ಹೊರಹೊರಟ ಬಾಣವು ಗುರಿಮುಟ್ಟುವುದನ್ನು ಹೇಗೆ ತಡೆಯಲಾಗುವುದಿಲ್ಲವೋ ಅದರಂತೆ ತಾರ್ಕ್ಷ್ಯದೇವನು ನಮಗೆ ಕೊಡಲಿರುವ ದಾನವನ್ನು ಯಾರೂ ತಡೆಗಟ್ಟಲಾರರು. (ಅಡ್ಡಿಪಡಿಸಲಾರರು).

**ಚಿತ್** ಎಂಬ ಪದವು ಆದ್ಯುದಾತ್ತವಾಗಿರುವುದಕ್ಕೆ ಉದಾಹರಣೆಯು—

**ಚಿದಸಿ ಮನಾಸಿ ಧೀರಸಿ** (ಮೈತ್ರಾಯಣೀಯ ಸಂಹಿತಾ ೧–೨–೪) ಈ ಮಂತ್ರವನ್ನು ಸೋಮಕ್ರಯಣಕಾಲದಲ್ಲಿ ಉಪಯೋಗಿಸಲಾಗುವುದು.

**ಚಿದಸೀತಿ ಯದ್ವಾವ ಚಿಕಿಸ್ಸತೇ** (ಮೈತ್ರಾ ಸಂ. ೩–೭–೫) ಎಂಬ ಬ್ರಾಹ್ಮಣವಾಕ್ಯವೂ ಇರುವುದು.

ಆ ॥ ೩೨ ॥

ಆ ಇತ್ಯಾಕಾರ ಉಪಸರ್ಗಃ ಪುರಸ್ತಾದೇವ ವ್ಯಾಖ್ಯಾತಃ । ಅಥಾಪ್ಯಧ್ಯರ್ಥೇ ದೃಶ್ಯತೇ । “ಅಭ್ರ ಆँ ಅಪಃ” । ಅಭ್ರೇ ಆ ಆಪೋಽಪೋಽಭ್ರೇಽಧೀತಿ ॥ ೮ ॥

ಆ ಎಂಬ ಉಪಸರ್ಗವನ್ನು ಹಿಂದೆಯೇ ವ್ಯಾಖ್ಯಾನ ಮಾಡಲಾಗಿದೆ. (ನಿರುಕ್ತ–ಅಧ್ಯಾಯ. ೧ ಖಂಡ. ೩ ಮತ್ತು ಅಧ್ಯಾಯ. ೩ ಖಂಡ ೧೭)

ಆ ಎಂಬ ಉಪಸರ್ಗಕ್ಕೆ ಮೇಲೆ, ಮುಂದೆ ಎಂದೂ ಇನ್ನೂ ಒಂದು ಅರ್ಥವಿರುವುದು.

ಉದಾಹರಣೆಯ ಋಕ್ಕು—

**ಕದು ಪ್ರಿಯಾಯ ಧಾಮ್ನೇ ಮನಾಮಹೇ ಸ್ವಕ್ಷತ್ರಾಯ ಸ್ವಯಶಸೇ ಮಹೇವಯಂ ।**
**ಆಮೇನ್ಯಸ್ಯ ರಜಸೋ ಯದಭ್ರ ಆঁ ಅಪೋ ವೃಣಾನಾ ವಿತನೋತಿ ಮಾಯಿನೀ ॥**

(ಋ. ಸಂ. ೫–೪೮–೧)

ಇದರ ಅರ್ಥವು—

ಸರ್ವರಿಗೂ ಹಿತಕರವಾದುದೂ ಸ್ವಾಯುತ್ತವಾದ ಶಕ್ತಿಯುಳ್ಳದ್ದೂ ಸ್ವಯಂ ಸಂಪಾದಿತವಾದ ಅನ್ನವುಳ್ಳದ್ದೂ ಪೂಜ್ಯವಾದದ್ದೂ ಆದ ವಿದ್ಯುದ್ರೂಪವಾದ ತೇಜಸ್ಸನ್ನುದ್ದೇಶಿಸಿ ನಾವು ಯಾವಾಗ ಸ್ತುತಿಯನ್ನು ಅರ್ಪಿಸೋಣ? ಪ್ರಜ್ಞಾಶಕ್ತಿಯಿಂದ ಕೂಡಿದ ಈ ಜ್ಯೋತಿಯು ಅಪರಮಿತವಾದುದೂ ಪರಿಮಾಣದಿಂದ ನಿರ್ದಿಷ್ಟವಾದುದೂ ಆದ ಅಂತರಿಕ್ಷದಲ್ಲಿ ಮೇಘದ ಊರ್ಧ್ವಪ್ರದೇಶದಲ್ಲಿ ಅಂತರಿಕ್ಷವನ್ನು ವ್ಯಾಪಿಸುತ್ತಾ ಉದಕಗಳನ್ನು ವಿಸ್ತಾರವಾಗಿ ಹರಡುತ್ತದೆ.

ದ್ಯುಮ್ನಮ್ ॥೨೨॥

ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ । "ಅಸ್ಮೇ ದ್ಯುಮ್ನ-ಮಧಿ ರತ್ನಂ ಚ ಧೇಹಿ" । ಅಸ್ಮಾಸು ದ್ಯುಮ್ನಂ ಚ ರತ್ನಂ ಚ ಧೇಹಿ ॥ ೯ ॥ ೫ ॥

**ದ್ಯುಮ್ನಂ** ಎಂಬ ಶಬ್ದವು ಪ್ರಕಾಶಿಸು ಎಂಬರ್ಥವುಳ್ಳ ದ್ಯೋತತಿಧಾತುವಿನಿಂದ ನಿಷ್ಪನ್ನವಾಗಿದೆ. **ದ್ಯುಮ್ನಂ** ಎಂದರೆ ಕೀರ್ತಿಯು ಅಥವಾ ಅನ್ನವು ಎಂದರ್ಥವು.

ಉದಾಹರಣೆಯ ಋಕ್ಕು—

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತರಾತಿರಸ್ತು ।**
**ಜಹಿ ವಧರ್ವನುಷೋ ಮರ್ತ್ಯಃ ಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**

(ಋ. ಸಂ. ೭–೨೫–೩)

ಇದರ ಅರ್ಥವು—

ಉತ್ತಮವಾದ ಕೆನ್ನೆಯುಳ್ಳ ಎಲೈ ಇಂದ್ರನೇ, ಶತಸಂಖ್ಯಾಕವಾದ ರಕ್ಷಣೆಗಳು ಉದಾರವಾಗಿ ದಾನಮಾಡುವ ನನಗೆ ವಿಾಸಲಾಗಿರಲಿ. ನಿನ್ನ ಆಶೀರ್ವಚನಗಳು ನನ್ನ ಮೇಲೆ ಸಹಸ್ರಸಂಖ್ಯೆಯಲ್ಲಿರಲಿ ಮತ್ತು ನಿನ್ನ ಧನವೂ ನನಗಾಗಿಯೇ ಇರಲಿ ನಮಗೆ ಹಿಂಸಕನಾದ ಮಾನವನ ವಧಸಾಧನವಾದ ಆಯುಧವನ್ನು ನಾಶಪಡಿಸು. ನಮ್ಮಲ್ಲಿ ಕಾಂತಿಯುತವಾದ ರತ್ನವನ್ನೂ ತುಂಬಿಡು.

**ಇತಿ ಪಂಚಮಃ ಖಂಡಃ**

**ಇಲ್ಲಿಗೆ ಐದನೆಯ ಖಂಡವು ಸಮಾಪ್ತವು**

---

## ಅಥ ಷಷ್ಠಃ ಖಂಡಃ

### ಆರನೆಯ ಖಂಡವು

ಪವಿತ್ರಂ ಪುನಾತೇರ್ಮಂತ್ರಃ ಪವಿತ್ರಮುಚ್ಯತೇ। ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದೇತ್ಯಪಿ ನಿಗಮೋ ಭವತಿ । ರಶ್ಮಯಃ ಪವಿತ್ರಮುಚ್ಯನ್ತೇ। ಗಭಸ್ತಿಪೂತಃ ಗಭಸ್ತಿಪೂತೋ ನೃಭಿರದ್ರಿಭಿಃ ಸುತಃ ಇತ್ಯಪಿ ನಿಗಮೌ ಭವತಃ । ಆಪಃ ಪವಿತ್ರಮುಚ್ಯನ್ತೇ । ಶತಪವಿತ್ರಾಃ ಸ್ವಧಯಾ ಮದನ್ತೀಃ ಬಹೂದಕಾಃ । ಅಗ್ನಿಃ ಪವಿತ್ರಮುಚ್ಯತೇ ವಾಯುಃ ಪವಿತ್ರಮುಚ್ಯತೇ ಸೋಮಃ ಪವಿತ್ರಮುಚ್ಯತೇ ಸೂರ್ಯಃ ಪವಿತ್ರಮುಚ್ಯತೇ ಇನ್ದ್ರಃ ಪವಿತ್ರಮುಚ್ಯತೇ । ಅಗ್ನಿಃ ಪವಿತ್ರಂ ಸ ಮಾ ಪುನಾತು ವಾಯುಃ ಸೋಮಃ ಸೂರ್ಯಃ ಇಂದ್ರಃ ಪವಿತ್ರಂ ತೇ ಮಾ ಪುನಂತು ಇತ್ಯಪಿನಿಗಮೋ ಭವತಿ ॥

ತೋದಸ್ತುದ್ಯತೇಃ ॥೫॥ ೬ ॥

---

ಪವಿತ್ರಮ್ ॥ ೩೪ ॥

ಪವಿತ್ರಂ ಪುನಾತೇಃ । ಮಂತ್ರಃ ಪವಿತ್ರಮುಚ್ಯತೇ ॥ " ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ " ಇತ್ಯಪಿ ನಿಗಮೋ ಭವತಿ ॥ ೧ ॥

ಪವಿತ್ರ ಶಬ್ದಕ್ಕೆ ಅನೇಕಾರ್ಥಗಳಿರುವವು.

**ಪವಿತ್ರಂ** ಎಂಬ ಶಬ್ದವು ಶುದ್ಧಿಮಾಡು ಎಂಬರ್ಥವಿರುವ ಪುನಾತಿಧಾತುವಿನಿಂದ ನಿಷ್ಪನ್ನವಾಗಿದೆ. ಪವಿತ್ರವೆಂದರೆ ಮಂತ್ರವೆಂದೂ ಅರ್ಥವಾಗುವುದು.

ಉದಾಹರಣೆಯ ಋಕ್ಕು —

**ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।**
**ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ ॥**

(ಪವಮಾನ ಪರಿಶಿಷ್ಟ)

ದೇವತೆಗಳು ಪವಮಾನಸೋಮ ಎಂಬ ದೇವತೆಯನ್ನು ಯಾವ ಮಂತ್ರದಿಂದ ಸ್ತುತಿಸಿ ಶುದ್ಧರಾದರೋ ಅಂತಹ ಪಾವಮಾನೀ ಋಕ್ಕುಗಳು (ಮಂತ್ರಗಳು) ನನ್ನನ್ನು ಸಾವಿರಪಾಲು ಪವಿತ್ರ (ಶುದ್ಧ) ನನ್ನಾಗಿ ಮಾಡಲಿ.

ರಶ್ಮಯಃ ಪವಿತ್ರಮುಚ್ಯತೇ । 'ಗಭಸ್ತಿಪೂತಃ' ಗಭಸ್ತಿಪೂತೋ ನೃಭಿ-
ರದ್ರಿಭಿಃ ಸುತಃ' ಇತ್ಯಪಿ ನಿಗಮೌ ಭವತಃ ॥೨॥

ಪವಿತ್ರಶಬ್ದಕ್ಕೆ ರಶ್ಮಿಗಳೂ ಎಂದರ್ಥವಾಗುವುದು. ಈ ರಶ್ಮಿಗಳು ಸ್ಪರ್ಶಮಾತ್ರದಿಂದಲೇ ಎಲ್ಲವನ್ನೂ ಪಾವನಗೊಳಿಸುತ್ತವೆ.

ಈ ವಿಷಯದಲ್ಲಿ ಎರಡು ಉದಾಹರಣೆಗಳನ್ನು ಕೊಟ್ಟಿರುವರು ಮೊದಲನೆಯ ಉದಾಹರಣೆಯು—

**ವಾಚಸ್ಪತಯೇ ಪವಸ್ವ ವೃಷ್ಣೋ ಅಗ್ಂಶುಭ್ಯಾಂ ಗಭಸ್ತಿಪೂತಃ ।**
**ದೇವೋ ದೇವಾನಾಂ ಪವಿತ್ರಮಸಿ ಯೇಷಾಂ ಭಾಗೋಽಸಿ ॥**

(ಮೈತ್ರಾಯಣೀಯ ಸಂಹಿತಾ ೧-೩-೪)

ಎರಡನೆಯ ಉದಾಹರಣೆಯು—

**ಪವಮಾನ ಮಹ್ಯರ್ಣೋ ವಿಧಾವಸಿ ಸೂರೋ ನ ಚಿತ್ರೋ ಅವ್ಯಯಾನಿ ಪವ್ಯಯಾ ।**
**ಗಭಸ್ತಿಪೂತೋ ನೃಭಿರದ್ರಿಭಿಃ ಸುತೋ ಮಹೇ ವಾಜಾಯ ಧನ್ಯಾಯ ಧನ್ವಸಿ ॥**

(ಋ. ಸಂ. ೯-೮೬-೩೪)

ಇದರ ಅರ್ಥವು—

ಎಲೈ ಸೋಮದೇವನೇ, ನೀನು ಪ್ರಭೂತವಾದ ಉದಕವನ್ನು ಸುರಿಸುತ್ತೀಯೆ. ಸೂರ್ಯನಂತೆ ಆಕರ್ಷಿತವಾಗಿ ಉಣ್ಣೆಯಿಂದ ನಿರ್ಮಿತವಾದ ಶೋಧಿಸುವ ಪಾತ್ರೆಗೆ ಹೋಗುತ್ತೀಯೆ. ಬಾಹುಗಳಿಂದ ಶುದ್ಧನಾಗಿಯೂ ಋತ್ವಿಕ್ಕುಗಳಿಂದ (ಕಲ್ಲುಗಳಿಂದ) ಹಿಂಡಲ್ಪಟ್ಟವನಾಗಿಯೂ ಮಹತ್ತಾದ ಸಂಗ್ರಾಮಕ್ಕೆ ಧನಕ್ಕಾಗಿ ಹೋಗುತ್ತೀಯೆ.

ಆಪಃ ಪವಿತ್ರಮುಚ್ಯಂತೇ । "ಶತಪವಿತ್ರಾಃ ಸ್ವಧಯಾ ಮದಂತಿಃ"
ಬಹೂದಕಾಃ ॥೩॥

ಉದಕಗಳೂ (ನದಿಗಳೂ) ಪವಿತ್ರ ಶಬ್ದಗಳಿಂದ ಕರೆಯಲ್ಪಡುತ್ತವೆ. ಏಕೆಂದರೆ ಉದಕಗಳು ಎಲ್ಲಾ ವಸ್ತುಗಳನೂ ಶುದ್ಧಿಮಾಡುವ ಸ್ವಭಾವವುಳ್ಳದ್ದಾಗಿರುತ್ತದೆ.

ಇದಕ್ಕೆ ಉದಾಹರಣೆಯ ಋಕ್ಕು—

**ಶತಪವಿತ್ರಾಃ ಸ್ವಧಯಾ ಮದಂತೀರ್ದೇವೋ ದೇವಾನಾಮಪಿ ಯಂತಿ ಪಾಥಃ ।**
**ತಾ ಇಂದ್ರಸ್ಯ ನ ಮಿನಂತಿ ವ್ರತಾನಿ ಸಿಂಧುಭ್ಯೋ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೭-೪೭-೩)

ಇದರ ಅರ್ಥವು—

ಶುದ್ಧಿಕಾರಕವಾದ ಅನೇಕ ರೂಪವುಳ್ಳವೂ, ತಮ್ಮಿಂದಲೇ ಉತ್ಪನ್ನವಾದ ಅನ್ನದಿಂದ ಹರ್ಷವನ್ನು ಹೊಂದುವವೂ ಪ್ರಕಾಶಯುತವೂ ಆದ ಉದಕಗಳು ಇಂದ್ರಾದಿದೇವತೆಗಳ ಸ್ಥಾನವನ್ನು ಪ್ರವೇಶಿಸುತ್ತವೆ. ಅದೇ ಉದಕಗಳು ಇಂದ್ರನಿಗೆ ತೃಪ್ತಿಕರವಾದ ಯಜ್ಞಾದಿಕರ್ಮಗಳನ್ನು ಹಿಂಸಿಸುವುದಿಲ್ಲ. ಎಲೈ ಅಧ್ವರ್ಯುಗಳೇ, ಪ್ರವಾಹಾತ್ಮಕಗಳಾದ ಅದೇ ಉದಕಗಳಿಗೆ ಆಜ್ಯಪೂರಿತವಾದ ಹವಿಸ್ಸನ್ನು ಆಹುತಿರೂಪದಲ್ಲಿ ಅರ್ಪಿಸಿರಿ.

**ದೇವಾನಾಮುಪಿ ಯಂತಿ ಪಾಥಃ** —ಈ ಉದಕಗಳು ದೇವತೆಗಳ ಸಂಚಾರಮಾರ್ಗವನ್ನು ಎಂದರೆ ಅಂತರಿಕ್ಷವನ್ನು ಪ್ರವೇಶಿಸುತ್ತವೆ. ಉದಕಗಳು ಅಂತರಿಕ್ಷಕ್ಕೆ ಪ್ರವೇಶಿಸುವುದೆಂದರೇನು ಎಂಬ ವಿಷಯದಲ್ಲಿ ವಿವರಣೆಯು ಆವಶ್ಯಕವು. ಸೂರ್ಯನ ಪ್ರಚಂಡರಶ್ಮಿಗಳಿಂದ ತಪ್ತವಾದ ಸಮುದ್ರಾದಿ ಜಲಾಶಯಗಳು ಆವಿಯ ರೂಪದಿಂದ ಮೇಘಗಳಾಗಿ ಪರಿವರ್ತಿತವಾಗುತ್ತವೆ. ಈ ಮೇಘಗಳಿಗೆ ಸ್ಥಾನವು ಅಂತರಿಕ್ಷವೇ ಆಗಿದೆ. ಆದ್ದರಿಂದ ಉದಕಗಳು ಅಂತರಿಕ್ಷವನ್ನು ಪ್ರವೇಶಿಸಿದವು ಎಂದರೆ ಮೇಘರೂಪದಿಂದಿರುವ ಉದಕಗಳು ಅಂತರಿಕ್ಷವನ್ನು ವ್ಯಾಪಿಸಿರುತ್ತವೆ ಎಂದಭಿಪ್ರಾಯವು. ಇದೇ ವಿಷಯದಲ್ಲಿ ಮುಂದಿನ ಋಕ್ಕಿನಲ್ಲಿ **ಯಾಃ ಸೂರ್ಯಃ ರಶ್ಮಿಭಿಃ ತತಾನ** ಎಂಬ ವಾಕ್ಯದಿಂದ ಸಮರ್ಥಿಸಲ್ಪಟ್ಟಿರುವುದು.

**ಯಾಃ ಸೂರ್ಯೋ ರಶ್ಮಿಭಿರಾತತಾನ ಯಾಭ್ಯ ಇಂದ್ರೋ ಅರದದ್ಗಾತು ಮೂರ್ಮಿಂ ।**
**ತೇ ಸಿಂಧವೋ ವರಿವೋ ಧಾತನಾ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥**
(ಋ. ಸಂ. ೭-೪೭-೪)

ಇದರ ಅರ್ಥವು—

ಪ್ರವಾಹಾತ್ಮಕಗಳಾದ ಎಲೈ ಉದಕಗಳೇ, ಯಾವ ನಿಮ್ಮನ್ನು ಸೂರ್ಯನು ತನ್ನ ಕಿರಣಗಳಿಂದ ವಿಸ್ತರಿಸುವಂತೆ ಮಾಡಿದನೋ, ಯಾವ ನಿಮ್ಮ ಮೂಲಕ ಇಂದ್ರನು ಗಮನಸಾಧನವಾದುದೂ, ಮೇಘಗಳಿಗೆ ಸಹಾಯಯೋಗ್ಯವಾದುದೂ ಆದ ಮಾರ್ಗವನ್ನು ವಜ್ರಾಯುಧದ ಸಹಾಯದಿಂದ ನಿರ್ಮಿಸಿದನೋ ಅಂತಹ ನೀವು ನಮಗೆ ಧನವನ್ನು ಕೊಡಿರಿ. ಎಲೈ ನದೀದೇವತೆಗಳೇ ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.



ಅಗ್ನಿಃ ಪವಿತ್ರಮುಚ್ಯತೇ ವಾಯುಃ ಪವಿತ್ರಮುಚ್ಯತೇ ಸೋಮಃ ಪವಿತ್ರಮುಚ್ಯತೇ ಸೂರ್ಯಃ ಪವಿತ್ರಮುಚ್ಯತೇ ಇಂದ್ರಃ ಪವಿತ್ರಮುಚ್ಯತೇ । " ಅಗ್ನಿಃ ಪವಿತ್ರಂ ಸ ಮಾ ಪುನಾತು ವಾಯುಃ ಸೋಮಃ ಸೂರ್ಯ ಇಂದ್ರಃ ಪವಿತ್ರಂ ತೇ ಮಾ ಪುನಂತು " ಇತ್ಯಪಿ ನಿಗಮೋ ಭವತಿ ॥ ೪ ॥

ಶುದ್ಧಿಕಾರಕವಾದ ಯಾವ ವಸ್ತುವನ್ನಾಗಲಿ ದೇವತೆಯನ್ನಾಗಲಿ ಪವಿತ್ರ ಶಬ್ದದಿಂದ ಕರೆಯುವುದು ರೂಢಿಯು. ಈ ಅರ್ಥದಲ್ಲಿ ಅಗ್ನಿ, ವಾಯು, ಸೋಮ, ಸೂರ್ಯ, ಇಂದ್ರ ಈ ದೇವತೆಗಳೂ ಪವಿತ್ರಶಬ್ದವಾಚ್ಯರು. ಈ ವಿಷಯದಲ್ಲಿ— **ಅಗ್ನಿಃ ಪವಿತ್ರಂ ಸ ಮಾ ಪುನಾತು, ಸೋಮಃ ಸೂರ್ಯಃ ಇಂದ್ರಃ ಪವಿತ್ರಂ ತೇ ಮಾ ಪುನಂತು** ಎಂದು ಶ್ರುತಿವಾಕ್ಯವೂ ಇರುವುದು.

ತೋದಃ ॥ ೩೫ ॥

ತೋದಸ್ತುದ್ಯತೇಃ ॥

**ತೋದಃ** ಎಂಬ ಶಬ್ದವು ವ್ಯಥೆಯನ್ನುಂಟುಮಾಡು ಎಂಬರ್ಥವುಳ್ಳ ತುದ್ಯತಿಧಾತುವಿನಿಂದ ನಿಷ್ಪನ್ನವಾಗಿದೆ. **ತೋದಃ** ಎಂದರೆ ವ್ಯಥೆಯೆಂದು ಹೆಸರು. ಭೂಮಿಯಲ್ಲಿರುವ ಬಿಲಕ್ಕೂ ಹೆಸರು.

**ಇತಿ ಷಷ್ಠಃ ಖಂಡಃ**

ಇಲ್ಲಿಗೆ ಆರನೆಯ ಖಂಡವು ಸಮಾಪ್ತವು

———

ಸಪ್ತಮಃ ಖಂಡಃ

**ಏಳನೆಯ ಖಂಡವು**

ಪುರು ತ್ವಾ ದಾಶ್ವಾನ್ವೋಚೇಽರಿರಗ್ನೇ ತವ ಸ್ವಿದಾ। ತೋದಸ್ಯೇವ ಶರಣ ಆ ಮಹಸ್ಯ। ಬಹುದಾಶ್ವಾಂಸ್ತ್ವಾಮೇವಾಭಿಹ್ವಯಾಮಿ। ಅರಿರಮಿತ್ರ ಋಚ್ಛತೇರೀಶ್ವರೋಽಪ್ಯರಿರೇತಸ್ಮಾದೇವ। ಯದನ್ಯ-ದೇವತ್ಯಾ ಅಗ್ನಾವಾಹುತಯೋ ಹೂಯನ್ತ ಇತ್ಯೇತದ್ ದೃಷ್ಟ್ವೈವ-ಮವಕ್ಷ್ಯತ್। ತೋದಸ್ಯೇವ ಶರಣ ಆ ಮಹಸ್ಯ। ತುದಸ್ಯೇವ ಶರಣೇಽಧಿ ಮಹತಃ। ಸ್ವಞ್ಚಾಃ ಸು ಅಞ್ಚನಃ। ಆಜುಹ್ವಾನೋ ಘೃತಪೃಷ್ಠಃ ಸ್ವಞ್ಚಾ ಇತ್ಯಪಿ ನಿಗಮೋ ಭವತಿ। ಶಿಪಿವಿಷ್ಟೋ ವಿಷ್ಣುರಿತಿ ವಿಷ್ಣೋರ್ದ್ವೇ ನಾಮಾನೀ ಭವತಃ ಕುತ್ಸಿತಾರ್ಥೀಯಂ ಪೂರ್ವಂ ಭವತೀತ್ಯೌಪಮನ್ಯವಃ ॥ ೫ ॥ ೭॥

---

"ಪುರು ತ್ವಾ ದಾಶ್ವಾನ್ವೋಚೇಽರಿರಗ್ನೇ ತವ ಸ್ವಿದಾ। ತೋದಸ್ಯೇವ ಶರಣ ಆ ಮಹಸ್ಯ ॥" ಬಹುದಾಶ್ವಾಂಸ್ತ್ವಾಮೇವಾಭಿಹ್ವಯಾಮಿ ॥

ಅರಿರಮಿತ್ರ ಋಚ್ಛತೇಃ। ಈಶ್ವರೋಽಪ್ಯರಿರೇತಸ್ಮಾದೇವ। ಯದನ್ಯ-ದೇವತ್ಯಾ ಅಗ್ನಾವಾಹುತಯೋ ಹೂಯನ್ತ ಇತ್ಯೇತದ್ ದೃಷ್ಟ್ವೈ-ವಮವಕ್ಷ್ಯತ್ ॥ 'ತೋದಸ್ಯೇವ ಶರಣ ಆ ಮಹಸ್ಯ।' ತುದಸ್ಯೇವ ಶರಣೇಽಧಿ ಮಹತಃ ॥೧॥

ಉದಾಹರಣೆಯ ಋಕ್ಕು—

**ಪುರು ತ್ವಾ ದಾಶ್ವಾನ್ವೋಚೇಽರಿರಗ್ನೇ ತವ ಸ್ವಿದಾ।**
**ತೋದಸ್ಯೇವ ಶರಣ ಆ ಮಹಸ್ಯ ॥**

ಇದರ ಅರ್ಥವು—

ಎಲೈ ಅಗ್ನಿಯೇ, ದೊಡ್ಡ ಪದವಿಯಲ್ಲಿರುವ ಯಜಮಾನನ ಮುಂದೆ ಅವನ ಮನೆಯಲ್ಲಿ ಹುಟ್ಟಿದಾಗಿನಿಂದಲೂ ದಾಸನಾಗಿರುವವನು ದೈನ್ಯದಿಂದ ಬೇಡುವಂತೆ ನಿನ್ನ ಸೇವಕನಾದ ನಾನೂ ಸಹ ನಿನ್ನ ಅಭಿಮುಖವಾಗಿಯೇ ನಿಂತು ನಿನಗೆ ಹವಿಸ್ಸುಗಳನ್ನು ಅರ್ಪಿಸುತ್ತಾ ನಿನ್ನನ್ನು ಪುತ್ರಾದಿ ಧನಗಳನ್ನು ಕೊಡೆಂದು ಬೇಡಿಕೊಳ್ಳುತ್ತೇನೆ.

**ತೋದಸ್ಯೇವ**—ಈ ಪದದ ಅರ್ಥವನ್ನು ಹೇಳುವ ಸಂದರ್ಭದಲ್ಲಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿ ವಿವರಿಸಿದ್ದಾರೆ. ಅವರ ವಿವರಣೆಯು ಈ ರೀತಿಯಿದೆ.

**ಬಹುದಾಶ್ವಾಂಸ್ತ್ವಾಮೇವಾಭಿಹ್ವಯಾಮರಿರಮಿತ್ರ ಋಚ್ಛತೇಃ । ಈಶ್ವರೋಽಪ್ಯರಿರೇತಸ್ಮಾದೇವಾ । ಯದನ್ಯದೇವತ್ಯಾ ಅಗ್ನಾವಾಹುತಯೋ ಹೂಯಂತ ಇತ್ಯೇತದ್ದೃಷ್ಟ್ವೈವಮವಕ್ಷ್ಯತ್ । ತೋದಸ್ಯೇವ ಶರಣ ಆ ಮಹಸ್ಯ—ತುದಸ್ಯೇವ ಶರಣೇಽಧಿ ಮಹತಃ ॥** (ನಿ. ೫-೭)

ಅಗ್ನಿಯೇ, ನಾನೊಬ್ಬ ಉದಾರಿಯಾದ ಹವಿರ್ದಾತನು. ಆದುದರಿಂದಲೇ ಪುತ್ರಾದಿದಾನಗಳಿಗಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ. ನಾನು ಶ್ರೇಷ್ಠವಾದ ಸ್ತುತಿಕರ್ತನಾದುದರಿಂದ ನಿನ್ನ ಪರವಾದ ಸ್ತೋತ್ರಗಳನ್ನು ನಿರ್ಮಿಸುವುದಕ್ಕೂ ಉತ್ತಮವಾದ ಅಧಿಕಾರಿಯಾಗಿದ್ದೇನೆ ಎಂದು ಪ್ರಾರಂಭಿಸಿ ಅನಂತರ, **ಅರಿ**ಶಬ್ದದ ನಿರ್ವಚನವನ್ನು ಹೇಳಿದ್ದಾರೆ. ಹಿಂಸಿಸು ಎಂಬರ್ಥವನ್ನು ಕೊಡುವ **ಋ** ಧಾತುವಿನಿಂದ ನಿಷ್ಪನ್ನವಾದ **ಅರಿ**ಯೆಂಬ ಪದವು **ಶತ್ರು**ವೆಂದರ್ಥವನ್ನು ಕೊಡುತ್ತದೆ. ಸೇವಕನ ವಿಷಯದಲ್ಲಿ ಯಜಮಾನನೂ ಅದೇ ರೀತಿ ಹಿಂಸಾಕಾರಕನಾದುದರಿಂದ ಅವನಿಗೂ **ಅರಿ**ಯೆಂಬ ವಿಶೇಷಣವಿರುತ್ತದೆ.

ಇತರ ದೇವತೆಗಳಿಗೂ ಅಗ್ನಿಯ ಮೂಲಕವೇ ಆಹುತ್ಯರ್ಪಣವಿರುವುದರಿಂದಲೂ ದೊಡ್ಡ ಬಾವಿಯ ಆಳದಂತೆ ಆಳವಾದ ಉದರವಿರುವುದರಿಂದಲೂ ಅಗ್ನಿಯ ಸ್ತುತಿಯೆಂದು **ತೋದ** ಶಬ್ದದ ನಿರ್ವಚನವನ್ನು ತೋರಿಸಿದ್ದಾರೆ.

ದುರ್ಗಾಚಾರ್ಯರು ಈ ಉಪಮಾನವನ್ನು ಈರೀತಿ ವಿವರಿಸಿದ್ದಾರೆ.

**"ತೋದಸ್ಯ ಇವ ಶರಣೇ ಆ ಮಹಸ್ಯ"—ತುನ್ನಸ್ಯೇವ ವಿದೀರ್ಣಸ್ಯ ಕಸ್ಯಚಿಚ್ಛ್ವಭ್ರಸ್ಯ ಕೂಪಸ್ಯೋಪರಿ। ಶರಣೇ ಬಿಲೇ। ಯಥಾ ಹಿ ಶ್ವಭ್ರೇ ಬಿಲೇ ಕಸ್ಮಿಂಶ್ಚಿದ್ಬಹ್ವ್ಯ ಆಪೋ ಗಚ್ಛಂತಿ, ನ ಚ ತಸ್ಯ ಶ್ವಭ್ರಸ್ಯ ಮಹತೋ ಗ್ರಹಣಶಕ್ತಿಪರಿಹಾಣಂ ಭವತಿ। ಏವಂ ತವನೇಕಾಶ್ಚಾನೇಕದೇವತಾಶ್ಚಾ-ಹುತೀರಸ್ಮಾಭಿಃ ಪ್ರದತ್ತಾಃ ಪ್ರತೀಚ್ಛತೋ ನ ಸಾಮರ್ಥ್ಯಪರಿಹಾಣಮಸ್ತಿ। ಅತೋ ದೇವತಾನಾ-ಮಸ್ಮಾಕಂ ತ್ವಮೇವಾತಿವಿಶಿಷ್ಟೋಪಕಾರೇ ಪ್ರವೃತ್ತಃ ಅತಃ ತ್ವಾಮೇವಾಹ್ವಯಾಮಿ।**

ನಿನ್ನನ್ನು ಸ್ತುತಿಸಲು ನಾನು ಶಕ್ತನಾದುದರಿಂದ ನಾನೇ ಆಹ್ವಾನಮಾಡುತ್ತೇನೆ. ಅಲ್ಲದೆ ಧಾರಾಳವಾಗಿ ಹವಿಸ್ಸನ್ನು ಅರ್ಪಿಸಲೂ ಶಕ್ತನಾಗಿದ್ದೇನೆ. ಅಗ್ನಿಯನ್ನು ಮಾತ್ರ ಆಹ್ವಾನಿಸಲು ಕಾರಣವೇನೆಂದರೆ ಅವನ ಉದರವು ಆಳವಾದ ಬಾವಿಯಂತೆ ಎಷ್ಟು ಹವಿಸ್ಸನ್ನು ಸುರಿದರೂ ತುಂಬಿಕೊಳ್ಳಲು ಶಕ್ತವಾಗಿದೆ.

ಆದುದರಿಂದ ನಿರುಕ್ತದ ವಿವರಣೆಯಂತೆ—**ತೋದ**ವೆಂದರೆ ಕೂಪವೆಂದೂ, **ಶರಣ**ವೆಂದರೆ ಬಿಲವೆಂದೂ ಅರ್ಥವಾಗುತ್ತದೆ. ಆದರೆ ಸಾಯಣರ ಅರ್ಥವು ಇದಕ್ಕೆ ವಿರುದ್ಧವಾಗಿದೆ.

ಸಾಯಣರು **ತೋದ** ಶಬ್ದಕ್ಕೆ ಶಿಕ್ಷಕನಾದ ಸ್ವಾಮಿಯೆಂದೂ, **ಶರಣ** ಶಬ್ದಕ್ಕೆ **ಗೃಹ**ವೆಂದೂ, **ಅರಿ** ಶಬ್ದಕ್ಕೆ ಹವಿರ್ದಾತನೂ ಸೇವಕನ ಸ್ಥಾನದಲ್ಲಿರುವವನೂ ಆದ ಯಜಮಾನನೆಂದೂ ಅರ್ಥಮಾಡಿದ್ದಾರೆ.

**ಮಧ್ಯೇ ಹೋತಾ ದುರೋಣೇ ಬರ್ಹಿಷೋ ರಾಳಗ್ನಿಸ್ತೋದಸ್ಯ ರೋದಸೀ ಯಜಧ್ಯೈ।**
**ಅಯಂ ಸ ಸೂನುಃ ಸಹಸ ಋತಾವಾ ದೂರಾತ್ಸೂರ್ಯೋ ನ ಶೋಚಿಷಾ ತತಾನ॥**

(ಋ. ಸಂ. ೬-೧೨-೧)

ಎಂಬ ಋಕ್ಕಿನಲ್ಲಿ ಸಾಯಣರು **ತೋದ** ಶಬ್ದಕ್ಕೆ **ತುದ್ಯತೇ ತಪಸಾ ಪೀಡ್ಯತ ಇತಿ ತೋದಃ ಯಜಮಾನಃ ।** ಅಗ್ನಿಕಾರ್ಯ ನಿರ್ವಹಣದಿಂದ ಬಳಲಿರುವುದರಿಂದ **ತೋದಃ** ಎಂದರೆ ಯಜ್ಞಕರ್ತನಾದ **ಯಜಮಾನನೆಂದೂ**' ಅದೇ ಸೂಕ್ತದಲ್ಲಿ,

**ತೇಜಿಷ್ಠಾ ಯಸ್ಯಾರತಿರ್ವನೇರಾಟ್ ತೋದೋ ಅಧ್ವನ್ನ ವೃದಸಾನೋ ಅದ್ಯೌತ್ ।**
**ಅದ್ರೋಘೋ ನ ದ್ರವಿತಾ ಚೇತತಿ ತ್ಮನ್ನಮರ್ತ್ಯೋಽವರ್ತ್ರ ಓಷಧೀಷು ॥**

(ಋ. ಸಂ. ೬-೧೨-೩)

ಎಂಬಲ್ಲಿ **ತೋದ ಸರ್ವಸ್ಯ ಪ್ರೇರಕಃ ಸೂರ್ಯಃ** ಎಂದೂ ಅರ್ಥಮಾಡಿದ್ದಾರೆ. ಮತ್ತು

**ಯಾಸಿ ಕುತ್ಸೇನ ಸರಥಮವಸ್ಯುಸ್ತೋದೋ ವಾತಸ್ಯ ಹರ್ಯೋರೀಶಾನಃ ।**
**ಋಜ್ರಾ ವಾಜಂ ನ ಗಧ್ಯಂ ಯುಯೂಷನ್ಕವಿರ್ಯದಹನ್ಪಾರ್ಯಾಯ ಭೂಷಾತ್ ॥**

(ಋ. ಸಂ. ೪-೧೬-೧೧)

ಎಂಬಲ್ಲಿ **ತೋದತಃ ಶತ್ರೂಣಾಂ ಹಿಂಸಕಃ** ಎಂದೂ **ಅರ್ಥಮಾಡಿದೆ.**

**ಶರಣೇ**—ದುರ್ಗಾಚಾರ್ಯರು ನಿರುಕ್ತಕಾರರ ಅಭಿಪ್ರಾಯವನ್ನನುಸರಿಸಿ ಈ ಪದಕ್ಕೆ ಬಿಲವೆಂದರ್ಥಮಾಡಿದ್ದಾರೆ. ವಾಸಕ್ಕೆ ವಿಶಾಲವಾದುದೂ ಆಶ್ರಯದಾತೃವಾದುದೂ ಆದ ಸ್ಥಳವಿರುವುದರಿಂದ **ಬಿಲ** ಅಥವಾ **ಗೃಹ** ಎಂದು ಸಂದರ್ಭಾನುಸಾರವಾಗಿ ಅರ್ಥಮಾಡಬಹುದು.

**ಪ್ರಿಯಾಸ ಇತ್ತೇ ಮಘವನ್ನಭಿಷ್ಟೌ ನರೋ ಮದೇಮ ಶರಣೇ ಸಖಾಯಃ ।**
**ನಿ ತುರ್ವಶಂ ನಿ ಯಾದ್ವಂ ಶಿಶೀಹ್ಯತಿಥಿಗ್ವಾಯ ಶಂಸ್ಯಂ ಕರಿಷ್ಯನ್ ॥**

(ಋ. ಸಂ. ೭-೧೯-೮)

ಎಂಬ ಋಕ್ಕಿನಲ್ಲಿ **ಗೃಹವೆಂದೂ,**

**ಉದುಷ್ಯ ಶರಣೇ ದಿವೋ ಜ್ಯೋತಿರಯಂಸ್ತ ಸೂರ್ಯಃ ।**
**ಅಗ್ನಿರ್ನ ಶುಕ್ರಃ ಸಮಿಧಾನ ಆಹುತಃ ॥**

(ಋ. ಸಂ. ೮-೨೫-೧೯)

ಎಂಬಲ್ಲಿ **ಆದಿತ್ಯಸ್ಯ ಸ್ಥಾನೇ ನಭಸಿ ।** ಎಂದರೆ ಆದಿತ್ಯನಿಗೆ ವಿಶಾಲವಾದ ವಾಸಸ್ಥಾನವಾದುದರಿಂದ **ಶರಣ**ಪದಕ್ಕೆ **ನಭಸ್ಸೆಂದ**ರ್ಥವೆಂದೂ ತಿಳಿಸಿದ್ದಾರೆ.

ಸ್ವಞ್ಚಾಃ ॥ ೩೬ ॥

ಸ್ವಞ್ಚಾಃ ಸು ಅಞ್ಚನಃ ॥ " ಆಜುಹ್ವಾನೋ ಘೃತಪೃಷ್ಠಃ ಸ್ವಞ್ಚಾಃ "
ಇತ್ಯಪಿ ನಿಗಮೋ ಭವತಿ ॥ ೨ ॥ ೬ ॥

**ಸ್ವಂಚಾಃ** ಎಂಬ ಶಬ್ದವು ಸು ಎಂಬ ಉಪಸರ್ಗದೊಡನೆ ಸೇರಿದ ಗತ್ಯರ್ಥಕ ಅಂಚತಿಧಾತುವಿನಿಂದ ನಿಷ್ಪನ್ನವಾಗಿದೆ. **ಸ್ವಂಚಾಃ** ಎಂದರೆ ಶೋಭನ ಗಮನನೆಂದರ್ಥವು.

ಉದಾಹರಣೆಯು ಋಕ್ಕು—

**ಸಂಭಾನುನಾ ಯತತೇ ಸೂರ್ಯಸ್ಯಾಜುಹ್ವಾನೋ ಘೃತಪೃಷ್ಠಃ ಸ್ವಂಚಾಃ ।**
**ತಸ್ಮಾ ಅಮೃಧಾ, ಉಷಸೋ ವ್ಯುಚ್ಛಾನ್ಯ ಇಂದ್ರಾಯ ಸುನವಾಮೇತ್ಯಾಹ ॥**

(ಋ. ಸಂ. ೫-೩೭-೧)

ಇದರ ಅರ್ಥವು—

ಪ್ರದೀಪ್ತವಾದ ಜ್ವಾಲೆಯುಳ್ಳವನೂ ಶೋಭನಗಮನವುಳ್ಳವನೂ ಸರ್ವತ್ರ ಆಹೂತನಾದವನೂ ಆದ ಅಗ್ನಿಯು ತನ್ನ ಪ್ರಕಾಶದಿಂದ ಸೂರ್ಯನ ಪ್ರಭೆಯೊಡನೆ ಸ್ಪರ್ಧಿಸುತ್ತಾನೆ. ಯಾವ ಯಜಮಾನನು ಇಂದ್ರನನ್ನುದ್ದೇಶಿಸಿ ಸೋಮವನ್ನು ಹಿಂಡೋಣ ಎಂದು ಹೇಳುವನೋ ಆ ಯಜಮಾನನಿಗೋಸ್ಕರ ಅಹಿಂಸಿತಗಳಾದ ಉಷಸ್ಸುಗಳು ಆವಿರ್ಭಾವವನ್ನು ಹೊಂದಿ ಪ್ರಕಾಶಿಸಲಿ.

**ಘೃತಪೃಷ್ಠಃ—ಪ್ರದೀಪ್ತಜ್ವಾಲೋ ಘೃತಯುಕ್ತಪೃಷ್ಠಪ್ರದೇಶೋ ವಾ ।** ಘೃತವನ್ನು ಹೋಮಮಾಡುವುದರಿಂದ ಅಗ್ನಿಯು ತೀಕ್ಷ್ಣವಾದುದೂ, ಪ್ರಕಾಶಮಾನವೂ ಆದ ಜ್ವಾಲೆಗಳಿಂದ ಬೆಳಗುತ್ತಿರುವನು ಎಂದಭಿಪ್ರಾಯವು. ಸಾಧಾರಣವಾಗಿ ಹೋಮಾದಿಗಳಿಂದ ಪ್ರಕಾಶಿಸುತ್ತಿರುವ ಅಗ್ನಿಯನ್ನು ಘೃತಪೃಷ್ಠ ಎಂಬ ಶಬ್ದದಿಂದ ಸ್ತುತಿಸುವುದು ರೂಢಿಯಾಗಿದೆ.

**ಸ್ವಂಚಾಃ**—ಈ ಶಬ್ದಕ್ಕೆ ಯಾಸ್ಕರು—**ಸ್ವಂಚಾಃ ಸು ಅಂಚನಃ । ಆಜುಹ್ವಾನೋ ಘೃತಪೃಷ್ಠಃ ಸ್ವಂಚಾಃ ಇತ್ಯಪಿ ನಿಗಮೋ ಭವತಿ** (ನಿ. ೫-೭) ಎಂದು ನಿರ್ವಚನವನ್ನು ಹೇಳಿದ್ದಾರೆ. ಅಂಚನವೆಂದರೆ ಗಮನವೆಂಬರ್ಥವಿರುವುದರಿಂದ ಸ್ವಂಚಾಃ ಎಂದರೆ ಶೋಭನಗಮನವುಳ್ಳವನು ಎಂದರ್ಥವು. ಅಗ್ನಿಗೆ ಗಮನವುಂಟೇ ಎಂದರೆ ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡಿ ಆ ಸ್ಥಳದಿಂದ ಉತ್ತರವೇದಿಯಲ್ಲಿ ಇರುವ ಆಹವನೀಯವೆಂಬ ಅಗ್ನಿಕುಂಡದ ಬಳಿಗೆ ತಂದು ಅಲ್ಲಿ ಸ್ಥಾಪಿಸುವರು. ಈ ಕರ್ಮಕ್ಕೆ ಅಗ್ನ್ಯಾನಯನ ಅಥವಾ ಅಗ್ನಿಪ್ರಣಯನವೆಂದು ಹೆಸರು. ಇದನ್ನು ವಿಧಿಪೂರ್ವಕವಾಗಿಯೂ, ಮಂತ್ರಪೂರ್ವಕವಾಗಿಯೂ ಮಾಡುವರು. ಇದು ಯಜ್ಞದ ಪ್ರಾರಂಭಕರ್ಮಗಳಲ್ಲಿ ಬಹು ಮುಖ್ಯವಾದ ಯಜ್ಞಾಂಗಕರ್ಮವು. ಇದನ್ನು ಸೂಚಿಸುವುದಕ್ಕಾಗಿ ಇಲ್ಲಿ ಸ್ವಂಚಾಃ—ಶೋಭನ ಗಮನವುಳ್ಳವನು ಎಂದು ಸ್ತುತಿಸಲಾಗಿದೆ.

**ಸೂರ್ಯಸ್ಯ ಭಾನುನಾ ಆಜುಹ್ವಾನಃ ಸಂ ಯತತೇ**—ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವಾಗ ಋತ್ವಿಕ್ಕುಗಳು ಅಗ್ನಿಯನ್ನು ಹೊತ್ತಿಸಿ ಪ್ರಜ್ವಲನವಾಗುವಂತೆ ಮಾಡುವರು. ಜಾಜ್ವಲ್ಯಮಾನವಾಗಿ ಉರಿಯುತ್ತಿರುವ ಆ ಅಗ್ನಿಯು ಬಹು ಪ್ರಕಾಶಮಾನವಾಗಿ ಬೆಳಗುತ್ತಿರುವುದರಿಂದ ಆಗತಾನೇ ಉದಯಿಸುತ್ತಿರುವ ಸೂರ್ಯನ ತೇಜಸ್ಸಿನೊಡನೆ ಅಗ್ನಿಯೂ ಆಹ್ವಾನಿಸಲ್ಪಟ್ಟು ಸೂರ್ಯನ ತೇಜಸ್ಸಿನಂತೆ ಬೆಳಗುತ್ತಾನೆ ಎಂಬಭಿಪ್ರಾಯವು ಸೂಚಿತವಾಗಿದೆ.

**ಯಃ ಇಂದ್ರಾಯ ಸುನವಾಮ ಇತಿ ಆಹ ತಸ್ಮೈ ಅಮೃಧ್ರಾ ಉಷಸಃ ವ್ಯುಚ್ಛಾನ್**—ಪ್ರಾತಃಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಇಂದ್ರನಿಗಾಗಿ ಸೋಮರಸವನ್ನು ಹಿಂಡಿ ಅರ್ಪಿಸಬೇಕೆಂಬ ಅಪೇಕ್ಷೆಯನ್ನು ಯಾವ ಯಜಮಾನನು ವ್ಯಕ್ತಪಡಿಸುವನೋ ಅವನ ವಿಷಯದಲ್ಲಿ ಉಷೋದೇವತೆಗಳು ತೃಪ್ತರಾಗಿ ಆ ಯಜ್ಞದಿನವು ಯಜಮಾನನಿಗೆ ಸುದಿನ ಎಂದರೆ ಇಂದ್ರಾಗ್ನಿಗಳ ಅನುಗ್ರಹವನ್ನುಂಟುಮಾಡುವ ಸುದಿನ (ಒಳ್ಳೆಯ ದಿನ) ವಾಗಿ ಪರಿಣಮಿಸಲಿ ಎಂಬ ಆಶಯವು ಇಲ್ಲಿ ವ್ಯಕ್ತವಾಗಿದೆ.

**ಶಿಪಿವಿಷ್ಟಃ ॥೩೭॥ ವಿಷ್ಣುಃ ॥೩೮॥**

ಶಿಪಿವಿಷ್ಟೋ ವಿಷ್ಣುರಿತಿ ವಿಷ್ಣೋರ್ದ್ವೇ ನಾಮನೀ ಭವತಃ ।
ಕುತ್ಸಿತಾರ್ಥೀಯಂ ಪೂರ್ವಂ ಭವತೀತ್ಯೌಪಮನ್ಯವಃ ॥

ಶಿಪಿವಿಷ್ಟಃ ಮತ್ತು ವಿಷ್ಣುಃ ಎಂಬ ಎರಡು ಶಬ್ದಗಳೂ ವಿಷ್ಣುವಿನ ಪರ್ಯಾಯ ನಾಮಗಳು. ಆದರೆ ಶಿಪಿವಿಷ್ಟಃ ಎಂಬುದು ನೀಚವಾದ (ನಿಕೃಷ್ಟವಾದ) ಹೆಸರೆಂದು ಔಪಮನ್ಯವಃ ಎಂಬ ಆಚಾರ್ಯರ ಅಭಿಪ್ರಾಯವು.

**ಇತಿ ಸಪ್ತಮಃ ಖಂಡಃ**

ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು.

---

## ಅಥಾಷ್ಟಮಃ ಖಂಡಃ

### ಎಂಟನೆಯ ಖಂಡವು

ಕಿಮಿತ್ತೇ ವಿಷ್ಣೋ ಪರಿಚಕ್ಷ್ಯಂ ಭೂತ್ ಪ್ರ ಯದ್ವವಕ್ಷೇ ಶಿಪಿವಿಷ್ಟೋ ಅಸ್ಮಿ । ಮಾ ವರ್ಪೋ ಅಸ್ಮದಪಗೂಹ ಏತ-ದ್ಯದನ್ಯರೂಪಃ ಸಮಿಥೇ ಬಭೂಥ ॥ ಕಿಂ ತೇ ವಿಷ್ಣೋಽಪ್ರಖ್ಯಾ-ತಾಮೇತದ್ಭವತ್ಯಪ್ರಖ್ಯಾಪನೀಯಂ ಯನ್ನಃ ಪ್ರಬ್ರೂಷೇ ಶೇಪ ಇವ ನಿರ್ವೇಷ್ಟಿತೋಽಸ್ಮೀತ್ಯಪ್ರತಿಪನ್ನರಶ್ಮಿರಪಿ ವಾ ಪ್ರಶಂಸಾನಾ-ಮೈವಾಭಿಪ್ರೇತಂ ಸ್ಯಾತ್ ಕಿಂ ತೇ ವಿಷ್ಣೋ ಪ್ರಖ್ಯಾತಮೇತದ್ಭವತಿ ಪ್ರಖ್ಯಾಪನೀಯಂ ಯದುತ ಪ್ರಬ್ರೂಷೇ ಶಿಪಿವಿಷ್ಟೋಽಸ್ಮೀತಿ ಪ್ರತಿಪನ್ನರಶ್ಮಿಃ ಶಿಪಯೋಽತ್ರ ರಶ್ಮಯ ಉಚ್ಯಂತೇ ತೈರಾವಿಷ್ಟೋ ಭವತಿ । ಮಾ ವರ್ಪೋ ಅಸದಪ ಗೂಹ ಏತತ್ । ವರ್ಪ ಇತಿ ರೂಪನಾಮ ವೃಣೋತೀತಿ ಸತಃ । ಯದನ್ಯರೂಪಃ ಸಮಿಥೇ ಸಂಗ್ರಾಮೇ ಭವಸಿ ಸಂಯತ ರಶ್ಮಿಃ ತಸ್ಯೋತ್ತರಾ ಭೂಯಸೇ ನಿರ್ವಚನಾಯ ॥ ೫ ॥ ೮ ॥

---

"ಕಿಮಿತ್ತೇ ವಿಷ್ಣೋ ಪರಿಚಕ್ಷ್ಯಂ ಭೂತ್ ಪ್ರ ಯದ್ವವಕ್ಷೇ
ಶಿಪಿವಿಷ್ಟೋ ಅಸ್ಮಿ । ಮಾ ವರ್ಪೋ ಅಸ್ಮದಸಗೂಹ
ಏತದ್ಯದನ್ಯರೂಪಃ ಸಮಿಥೇ ಬಭೂಥ ॥" (ಋ-ಸಂ-೭-೧೦೦-೬)

ಕಿಂ ತೇ ವಿಷ್ಣೋಽಪ್ರಖ್ಯಾತಮೇತದ್ಭವತ್ಯಪ್ರಖ್ಯಾಪನೀಯಂ ಯನ್ನಃ ಪ್ರಬ್ರೂಷೇ ಶೇಪ ಇವ ನಿರ್ವೇಷ್ಟಿತೋಽಸ್ಮ್ಯಪ್ರತಿಪನ್ನ-ರಶ್ಮಿರಪಿ ವಾ ಪ್ರಶಂಸಾನಾಮೈವಾಭಿಪ್ರೇತಂ ಸ್ಯಾತ್ ಕಿಂ ತೇ ವಿಷ್ಣೋ ಪ್ರಖ್ಯಾತಮೇತದ್ಭವತಿ ಪ್ರಖ್ಯಾಪನೀಯಂ ಯದುತ ಪ್ರಬ್ರೂಷೇ ಶಿಪಿವಿಷ್ಟೋಽಸ್ಮೀತಿ ಪ್ರತಿಪನ್ನರಶ್ಮಿಃ ಶಿಪಯೋಽತ್ರ ರಶ್ಮಯ ಉಚ್ಯಂತೇ ತೈರಾವಿಷ್ಟೋ ಭವತಿ। "ಮಾ ವರ್ಪೋ ಅಸ್ಮದಪ ಗೂಹ ಏತತ್" ವರ್ಣ ಇತಿ ರೂಪನಾಮ ವೃಣೋತೀತಿ ಸತಃ। ಯದನ್ಯರೂಪಃ ಸಮಿಥೇ ಸಂಗ್ರಾಮೇ ಭವಸಿ ಸಂಯತರಶ್ಮಿಃ ॥೧॥೮॥

**ಕಿಮಿತ್ತೇ ವಿಷ್ಣೋ ಎಂಬ ಋಕ್ಕಿನ ಅರ್ಥವು—**

ಎಲೈ ವಿಷ್ಣುವೇ ''ನಾನು ಶಿಪಿವಿಷ್ಟಾಖ್ಯನು'' ಎಂದು ಯಾವ ನಿನ್ನ ಹೆಸರನ್ನು ಪ್ರಕಟಿಸಿದೆಯೋ ಅಂತಹ ನಿನ್ನ ನಾಮವು ಯಾವ ಪ್ರಕಾರ ಪ್ರಕಟಿಸಲ್ಪಡಬೇಕು ಎಂಬುದನ್ನು ತಿಳಿಸು. ಸಂಗ್ರಾಮದಲ್ಲಿ (ಯುದ್ಧದಲ್ಲಿ) ನಿನ್ನ ನಿಜರೂಪವನ್ನು ಮರೆಸಿ ರೂಪಾಂತರವನ್ನು ಹೊಂದಿ ನಮ್ಮ ಸಹಾಯಕನಾಗಿದ್ದರೂ ಸಹ ನಿನ್ನ ನಿಜವಾದ ರೂಪವನ್ನು ನಮ್ಮಿಂದ ಮರೆ.

ಈ ಋಕ್ಕಿನ ವಿಷಯದಲ್ಲಿ ಹೇಳಿರುವ ವಾಕ್ಯಗಳ ವಿವರಣೆಯು ಯುದ್ಧದಲ್ಲಿ ವಸಿಷ್ಠಋಷಿಗೆ ಸಹಾಯಮಾಡುವುದಕ್ಕಾಗಿ ಬೇರೆ ಸಾಧಾರಣವಾದ ರೂಪವನ್ನು ಧರಿಸಿ ಬಂದಿರುವ ವಿಷ್ಣುವನ್ನು ಕುರಿತು ವಸಿಷ್ಠಋಷಿಯು—ಎಲೈ ವಿಷ್ಣುವೇ, ಇದೇನು ನಿನ್ನ ರೂಪವು? ಈ ರೂಪವು ಪ್ರಸಿದ್ಧನಾದ ನಿನ್ನ ರೂಪವೇ? ನಿನ್ನ ಹೆಸರೇನೆಂದು ಕೇಳಿದರೆ ಶಿಪಿವಿಷ್ಟ ಎಂದು ಪುನಃ ಪುನಃ ಹೇಳುವೆ. ಈ ಹೆಸರು ಪ್ರಖ್ಯಾತವಲ್ಲ. (ಉತ್ಕೃಷ್ಟವಲ್ಲ) ನಿಕೃಷ್ಟವಾದುದಲ್ಲವೇ? ನಿನಗೆ ಅನೇಕ ರೂಪಗಳಿರುವವು. ಆದರೂ ನಮ್ಮ ಎದುರಿಗೆ **ಶಿಪಿವಿಷ್ಟೋಽಸ್ಮಿ** ನಾನು ಶಿಪಿವಿಷ್ಟನು ಎಂದು ಹೇಳುವಿಯಲ್ಲವೇ? ಎಂದರೆ, ಶಿಪಿವಿಷ್ಟಶಬ್ದಕ್ಕೆ ಅಪ್ರಖ್ಯಾತ, ಅಪ್ರಸಿದ್ಧ ಎಂಬರ್ಥವಲ್ಲ, ಬೇರೆ ಅರ್ಥವಿರುವುದು. **ಶೇಪ** ಎಂದರೆ ರಶ್ಮಿಯು. ರಶ್ಮಿಗಳಿಂದ ಮುಚ್ಚಲ್ಪಟ್ಟಿರುವ, ಆವೃತ್ತನಾಗಿರುವ ಎಂದು ಶಿಪಿವಿಷ್ಟಶಬ್ದಕ್ಕೆ ಅರ್ಥವು. ಸೂರ್ಯನು ಯಾವರೀತಿ ರಶ್ಮಿಗಳಿಂದ ಆಚ್ಛಾದಿತನಾಗಿದ್ದರೂ ಪ್ರಶಂಸಾರ್ಹನೋ ಅದರಂತೆ ವಿಷ್ಣುವೂ ಸಹ ಬೇರೆ ರೂಪವನ್ನು ಧರಿಸಿದ್ದರೂ ಪ್ರಶಂಸಾರ್ಹನೇ ಆಗಿರುವನು. ಆದುದರಿಂದ ಶಿಪಿವಿಷ್ಟೋಽಸ್ಮಿ ಎಂದರೆ **ಪ್ರತಿಪನ್ನರಶ್ಮಿಃ** ರಶ್ಮಿಗಳಿಂದ ಆಚ್ಛಾದಿತನಾಗಿರುವವನು ಎಂಬರ್ಥವಿರುವುದರಿಂದ ಶಿಪಿವಿಷ್ಟಶಬ್ದವು ನಿಕೃಷ್ಟಭಾವವನ್ನು ಸೂಚಿಸುವುದಿಲ್ಲ ಎಂದಭಿಪ್ರಾಯವು. ವರ್ಪ ಎಂಬ ಶಬ್ದಕ್ಕೆ ರೂಪವೆಂದರ್ಥವು. **ಮಾ ವರ್ಪೋ ಅಸ್ಮದಪ ಗೂಹ ಏತತ್** ಎಂಬ ವಾಕ್ಯಕ್ಕೆ ಎಲೈ ವಿಷ್ಣುವೇ ನಿನ್ನ ಉತ್ತಮವಾದ ರೂಪವನ್ನು ನಮಗೆ ಪ್ರದರ್ಶಿಸು. ನಿನ್ನ ಆ ರೂಪವು ಯುದ್ಧದಲ್ಲಿ ಮರೆಮಾಡಲ್ಪಟ್ಟಿರುವುದು. ಅದನ್ನು ನಮಗೆ ಮರೆಮಾಡದೆ ಪ್ರದರ್ಶಿಸು ಎಂದು ಮುಖ್ಯಾಭಿಪ್ರಾಯವು.

**ಇತಿ ಅಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

———

## ಅಥ ನವಮಃ ಖಂಡಃ

### ಒಂಭತ್ತನೆಯ ಖಂಡವು

ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ । ತನ್ತ್ವಾ ಗೃಣಾಮಿ ತವಸಮತವ್ಯಾನ್ಕ್ಷ-ಯಂತಮಸ್ಯ ರಜಸಃ ಪರಾಕೇ ॥ ತತ್ತೇಽದ್ಯ ಶಿಪಿವಿಷ್ಟನಾಮಾರ್ಯಃ ಪ್ರಶಂಸಾಮ್ಯರ್ಯೋಽಹಮಸ್ಮೀಶ್ವರಃ ಸ್ತೋಮಾನಾಮರ್ಯಸ್ತ್ವ-ಮಸೀತಿ ವಾ ತನ್ತ್ವಾ ಸ್ತೌಮಿ ತವಸಮತವ್ಯಾನ್ । ತವಸ ಇತಿ ಮಹತೋ ನಾಮಧೇಯಮ್ । ಉದಿತೋ ಭವತಿ । ನಿವಸನ್ತಮಸ್ಯ ರಜಸಃ ಪರಾಕೇ ಪರಾಕ್ರಾಂತೇ । ಆಘೃಣಿರಾಗತಹೃಣಿಃ । ಆಘೃಣೇ ಸಂಸಚಾವಹೈ ಆಗತಹೃಣೇ ಸಂಸೇವಾವಹೈ । ಪೃಥುಜ್ರಯಾಃ ಪೃಥುಜವಃ । ಪೃಥುಜ್ರಯಾ ಅಮಿನಾದಾಯುರ್ದಸ್ಯೋಃ ಪ್ರಾಮಾಪಯದಾಯುರ್ದಸ್ಯೋಃ ॥೫॥೮॥

———

ತಸ್ಯೋತ್ತರಾ ಭೂಯಸೇ ನಿರ್ವಚನಾಯ—

"ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ । ತನ್ತ್ವಾ ಗೃಣಾಮಿ ತವಸಮತವ್ಯಾನಕ್ಷಯನ್ತಮಸ್ಯ ರಜಸಃ ಪರಾಕೇ ॥" ತತ್ತೇಽದ್ಯ ಶಿಪಿವಿಷ್ಟನಾಮಾರ್ಯಃ ಪ್ರಶಂಸಾ-ಮ್ಯರ್ಯೋಽಹಮಸ್ಮೀಶ್ವರಃ ಸ್ತೋಮಾನಾಮರ್ಯಸ್ತ್ವಮಸೀತಿ ವಾ ತನ್ತ್ವಾ ಸ್ತೌಮಿ ತವಸಮತವ್ಯಾನ್ । ತವಸ ಇತಿ ಮಹತೋ ನಾಮಧೇಯಂ । ಉದಿತೋ ಭವತಿ । ನಿವಸನ್ತಮಸ್ಯ ರಜಸಃ ಪರಾಕೇ ಪರಾಕಾನ್ತೇ ॥೧॥

ಶಿಪಿವಿಷ್ಟಶಬ್ದಾರ್ಥ ವಿಷಯದಲ್ಲಿ ಇನ್ನೊಂದು ಉದಾಹರಣೆಯು—

**ಪ್ರ ತತ್ತೇ ಅದ್ಯ ಶಿಪಿವಿಷ್ಟನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ ।**
**ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ॥**

(ಋ. ಸಂ. ೭-೧೦೦-೫)

ಇದರ ಅರ್ಥವು—

ರಶ್ಮಿಗಳಿಂದ ವ್ಯಾಪೃತನಾದ ಎಲೈ ವಿಷ್ಣುವೇ, ವಿಷ್ಣುವೆಂದು ಪ್ರಖ್ಯಾತನಾದ ನಿನ್ನ ಹೆಸರನ್ನು ಹವಿಸ್ಸುಗಳಿಗೆ ಸ್ವಾಮಿಯೂ ಕರ್ತವ್ಯಜ್ಞಾನವನ್ನರಿತವನೂ ಆದ ನಾನು ಈಗ ಪ್ರಶಂಸಿಸುತ್ತೇನೆ. ಶಕ್ತಿಯಿಂದ ಪ್ರವೃದ್ಧನೂ ಈ ಲೋಕದ ಅತ್ಯಂತ ದೂರಪ್ರದೇಶದಲ್ಲಿ ವಾಸಿಸುವನೂ ಪ್ರಸಿದ್ಧನೂ ಆದ ನಿನ್ನನ್ನು ಅಲ್ಪನಾದ ನಾನು ಸ್ತುತಿಸುತ್ತೇನೆ.

**ತತ್ತೇಽದ್ಯ ಶಿಪಿವಿಷ್ಟನಾಮಾರ್ಯಃ ಪ್ರಶಂಸಾಮ್ಯರ್ಯೋಽಹಮಸ್ಮೀಶ್ವರಃ ಸ್ತೋಮಾನಾಮರ್ಯ-ಸ್ತ್ವಮಸೀತಿ ವಾ ತಂ ತ್ವಾ ಸ್ತೌಮಿ ತವಸಮತವ್ಯಾನ್ । ತವಸ ಇತಿ ಮಹತೋ ನಾಮಧೇಯಂ । ಉದಿತೋ ಭವತಿ । ನಿವಸಂತಮಸ್ಯ ರಜಸಃ ಪರಾಕೇ ಪರಾಕ್ರಾಂತೇ ॥**

ಶಿಪಿವಿಷ್ಟ ಎಂಬ ಹೆಸರಿನಿಂದ ಪ್ರಸಿದ್ಧನಾದ ಎಲೈ ವಿಷ್ಣುವೇ, ನಾನು ಈಗ ನಿನ್ನನ್ನು ಸ್ತುತಿಸುತ್ತೇನೆ. **ಅರ್ಯಃ** ಎಂದರೆ ಸ್ವಾಮಿಯು. **ಸ್ತೋಮಾನಾಮರ್ಯಃ** ಎಂದರೆ ಸ್ತೋತ್ರಗಳಿಗೆ ಸ್ವಾಮಿಯಾದ, ಸ್ತೋತ್ರಗಳನ್ನು ಪಠಿಸುವುದರಲ್ಲಿ ಕುಶಲನಾದ ಎಂದರ್ಥವು. ಇದು ವಿಷ್ಣುವನ್ನು ಸ್ತುತಿಸುವ ಋಷಿಗೆ ವಿಶೇಷಣವಾಗಬಹುದು. ಅಥವಾ **ಸ್ತೋಮಾನಾಮರ್ಯಃ** ಎಂದರೆ ಸ್ತೋತ್ರಗಳಿಗೆ ಸ್ವಾಮಿಯು, ಸ್ತೋತ್ರಪ್ರತಿಪಾದ್ಯನು ಎಂದು ವಿಷ್ಣು ಪರವಾಗಿ ಅರ್ಥವಾಗಬಹುದು. ಇಂತಹ ವಿಷ್ಣುವಾದ ನಿನ್ನನ್ನು ಸ್ತೋತ್ರಮಾಡುತ್ತೇನೆ. **ತವಃ** ಶಬ್ದಕ್ಕೆ ಬಲ, ಶಕ್ತಿ ಎಂದರ್ಥವು. **ಅತವ್ಯಾನ್** ಎಂದರೆ ದೊಡ್ಡವನಲ್ಲದ, ಅಲ್ಪನಾದ ಎಂದರ್ಥವು. ಆದ್ದರಿಂದ **ತವಸಮತವ್ಯಾನ್** ಎಂಬ ಶಬ್ದಗಳಿಗೆ ಮಹತ್ವವಿಲ್ಲದ, ಅಲ್ಪನಾದ ನಾನು ಮಹಾನುಭಾವನೂ ಶಕ್ತಿಯುತನೂ ಆದ ನಿನ್ನನ್ನು (ವಿಷ್ಣುವನ್ನು) ಸ್ತುತಿಸುತ್ತೇನೆ. **ಕ್ಷಯಂತಮಸ್ಯ ರಜಸಃ ಪರಾಕೇ** ಈ ಲೋಕದಿಂದ ಅತಿ ದೂರಪ್ರದೇಶದಲ್ಲಿ ಎಂದರೆ ವಿಷ್ಣುವಿನ ಪರಮ ಪದವೆಂದು ಪ್ರಸಿದ್ಧವಾದ ಉತ್ತಮಲೋಕದಲ್ಲಿ ವ್ಯಾಸಿಸುವ ನಿನ್ನನ್ನು ಸ್ತುತಿಸುತ್ತೇನೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಆಘೃಣಿಃ ॥೭॥

ಆಘೃಣಿರಾಗತಹೃಣಿಃ "ಆಘೃಣೇ ಸಂಸಚಾವಹೈ ।" ಆಗತಹೃಣೇ ಸಂಸೇವಾವಹೈ ॥೨॥

**ಆಘೃಣಿ** ಎಂದರೆ **ಆಗತಹೃಣಿಃ ಆಗತದೀಪ್ತಿಃ ಆಗತಕ್ರೋಧೋ ವಾ** ಪ್ರಕಾಶದಿಂದ ಬೆಳಗುವ, ಅಥವಾ ಕ್ರೋಧ (ಕೋಪ) ದಿಂದ ಉರಿಯುತ್ತಿರುವ ಅತ್ಯಂತ ಕೋಪಾವಿಷ್ಟನಾದ ಎಂದರ್ಥವು.

ಉದಾಹರಣೆಯ ಋಕ್ಕು—

**ಏಹಿ ವಾಂ ವಿಮುಚೋ ನಪಾದಘೃಣೇ ಸಂ ಸಚಾವಹೈ ।**
**ರಥೀರ್ಋತಸ್ಯ ನೋ ಭವ ॥**

(ಋ. ಸಂ. ೬-೫೫-೧)

ಇದರ ಅರ್ಥವು—

ತನ್ನಲ್ಲಿ ಅಡಗಿದ್ದ ಸಕಲಭೂತಗಳನ್ನೂ ಸೃಷ್ಟಿಕಾಲದಲ್ಲ ಪ್ರಕಾಶಪಡಿಸತಕ್ಕ ಪ್ರಜಾಪತಿಗೆ ಪುತ್ರರೂಪನೂ ಅದ್ಭುತವಾದ ಪ್ರಕಾಶವುಳ್ಳವನೂ ಆದ ಎಲೈ ಪೂಷದೇವನೇ, ನಿನ್ನ ಸ್ತುತಿಕರ್ತನಾದ ನನ್ನ ಸಮೀಪಕ್ಕೆ ದಯಮಾಡು, ನಾವಿಬ್ಬರೂ ಸೇರಿ ಕೊಂಡು ಒಟ್ಟಿಗಿರೋಣ. ನೀನು ನಮ್ಮ ಯಜ್ಞಕ್ಕೆ ನೇತೃವಾಗಿರು.

ಪೃಥುಜ್ರಯಾಃ ಪೃಥು ಜವಃ । " ಪೃಥುಜ್ರಯಾ ಅಮಿನಾದಾಯು-ರ್ದಸ್ಯೋಃ । " ಪ್ರಾಮಾಪಯದಾಯುರ್ದಸ್ಯೋಃ ॥ ೩ ।। ೯ ॥

**ಪೃಥುಜ್ರಯಾಃ** ಎಂದರೆ **ಪೃಥುಜವಃ** ಬಹುವೇಗವುಳ್ಳವನು ಎಂದರ್ಥವು.

ಉದಾಹರಣೆಯ ಋಕ್ಕು—

**ಯಂ ನು ನಕಿಃ ಪೃತನಾಸು ಸ್ವರಾಜಂ ದ್ವಿತಾ ತರತಿ ನೃತಮಂ ಹರಿಷ್ಠಾಂ ।**
**ಇನತಮಃ ಸತ್ತ್ವಭಿರ್ಯೋ ಹ ಶೂಷೈಃ ಪೃಥುಜ್ರಯಾ ಅಮಿನಾದಾಯುರ್ದಸ್ಯೋಃ॥**

(ಋ. ಸಂ. ೩–೪೯–೨)

ಇದರ ಅರ್ಥವು—

ಯುದ್ಧಗಳಲ್ಲಿ ತನ್ನ ಪ್ರಭೆಯಿಂದ ಪ್ರಕಾಶಿಸುವವನೂ, ಅಶ್ವಯುಕ್ತವಾದ ರಥದಲ್ಲಿ ಕುಳಿತಿರುವವನೂ, ಶ್ರೇಷ್ಠವಾದ ನೇತೃವಾದವನೂ, ಶತ್ರುಸೇನೆಯನ್ನು ಎರಡಾಗಿ ಭಾಗಿಸುವವನೂ ಆದ ಯಾವ ಅದೇ ಇಂದ್ರನನ್ನು ಯಾರೂ ಮೀರಲಾಗುವುದಿಲ್ಲ. ಶ್ರೇಷ್ಠನಾದ ಸೇನಾನಿಯಾಗಿ ತನ್ನೊಡನಾಡಿಗಳಾದ ಮರುತ್ತುಗಳೊಡನೆ ಸಂಚರಿಸುತ್ತಾ ಶತ್ರುಶೋಷಕವಾದ ತನ್ನ ಬಲದಿಂದ ಶೀಘ್ರವಾಗಿ ಯುದ್ಧಾಭಿಮುಖನಾಗಿ ಓಡುತ್ತಾ ಇಂದ್ರನು ಶತ್ರುಪ್ರಾಣಗಳನ್ನು ನಾಶಪಡಿಸುತ್ತಾನೆ.

**ಇತಿ ನವಮಃ ಖಂಡಃ**

---

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು

## ಅಥ ದಶಮಃ ಖಂಡಃ

## ಹತ್ತನೆಯ ಖಂಡವು

ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯನ್ತ ಪ್ರಶಸ್ತಮ್ । ದೂರೇ ದೃಶಂ ಗೃಹಪತಿಮಥರ್ಯುಮ್ । ದೀಧಿತ-ಯೋಽಙ್ಗುಲಯೋ ಭವನ್ತಿ ಧೀಯಂತೇ ಕರ್ಮಸ್ವರಣೀ ಪ್ರತ್ಯೃತ ಏನೇ । ಅಗ್ನಿಃ ಸಮರಣಾಜ್ಜಾಯತ ಇತಿ ವಾ। ಹಸ್ತಚ್ಯುತೀ ಹಸ್ತಪ್ರ-ಚ್ಯುತ್ಯಾ। ಜನಯಂತ ಪ್ರಶಸ್ತಂ ದೂರೇ ದರ್ಶನಂ ಗೃಹಪತಿಮತನವಂ-ತಮ್ ॥ ೫ ॥ ೧೦ ॥



ಅಥರ್ಯುರ್ಮ್ ॥೪೧॥

"ಅಗ್ನಿಂ ನರೋ ದೀಧಿತಿಭಿರರಣ್ಯೋರ್ಹಸ್ತಚ್ಯುತೀ ಜನಯನ್ತ ಪ್ರಶಸ್ತಮ್ । ದೂರೇದೃಶಂ ಗೃಹಪತಿಮಥರ್ಯುಮ್ ॥" (ಋ.ಸಂ. ೭-೧-೧) ದೀಧಿತಯೋಽಙ್ಗುಲಯೋ ಭವನ್ತಿ ಧೀಯನ್ತೇ ಕರ್ಮಸ್ವರಣೀ ಪ್ರತ್ಯೃತ ಏನೇ । ಅಗ್ನಿಃ ಸಮರಣಾಜ್ಜಾಯತ ಇತಿ ವಾ । ಹಸ್ತಚ್ಯುತೀ ಹಸ್ತ ಪ್ರಚ್ಯುತ್ಯಾ । ಜನಯನ್ತ ಪ್ರಶಸ್ತಂ ದೂರೇ ದರ್ಶನಂ ಗೃಹಪತಿಮತನವನ್ತಮ್ ॥೧॥೧೦॥

ಅಗ್ನಿಂ ನರೋ ದೀಧಿತಿ ಎಂಬ ಋಕ್ಕಿನ ಅರ್ಥವು—

ಪ್ರಶಂಸಾರ್ಹನೂ ದೂರದಿಂದಲೇ ಗೋಚರನಾಗುವವನೂ ಗೃಹಪಾಲಕನೂ ಸುಲಭವಾಗಿ ಸಮೀಪಿಸಲ್ಪಡುವವನೂ ಆದ ಅಗ್ನಿಯನ್ನು ಇಂಧನಕಾಷ್ಠಗಳಾದ ಅರಣಿಗಳಲ್ಲಿ ಹಸ್ತಗಳ ಕ್ರಿಯಾಕಲಾಪಗಳ ಮೂಲಕ ಬೆರಳುಗಳ ಸಹಾಯದಿಂದ ಉತ್ಪನ್ನಮಾಡುತ್ತಾರೆ.

**ದೀಧಿತಯಃ** ಎಂದರೆ ಅಂಗುಲಿಗಳು, ಬೆರಳುಗಳು ಜನರು ಯಾವ ಕೆಲಸ ಕಾರ್ಯಗಳನ್ನು ಮಾಡಬೇಕಾದರೂ ಬೆರಳುಗಳನ್ನು ಉಪಯೋಗಿಸಿ ಎಂದರೆ ಬೆರಳುಗಳ ಸಹಾಯದಿಂದಲೇ ಮಾಡುವರು. ಅರಣಿಗಳಲ್ಲಿ (ಅಗ್ನಿಯನ್ನು ಉತ್ಪಾದನೆ ಮಾಡುವುದಕ್ಕಾಗಿ ಉಪಯೋಗಿಸುವ ಎರಡು ಮರದ ತುಂಡುಗಳು) ಅಗ್ನಿಯು ಅಂತರ್ಗತನಾಗಿರುವುದರಿಂದ ಎಂದರೆ ಈ ಅರಣಿಗಳನ್ನು ಒಂದರಮೇಲೊಂದನ್ನಿಟ್ಟು ಕಡೆಯುವುದರಿಂದ ಅಗ್ನಿಯು ಅರಣಿಗಳಿಂದ ಹೊರಡುವುದು. ಅಗ್ನಿಯು ಅರಣಿಗಳಲ್ಲಿ ಉತ್ಪನ್ನನಾಗುವುದರಿಂದ ಹಾಗೆ ಉತ್ಪನ್ನನಾಗುವುದಕ್ಕೆ ಪೂರ್ವದಲ್ಲಿ ಅಗ್ನಿಯು ಅರಣಿಗಳಲ್ಲಿಯೇ ಅಂತರ್ಗತನಾಗಿರುವನೆಂದು ಭಾವಿಸಲಾಗಿರುವವು. ಅರಣಿಗಳಲ್ಲಿ ಕಡೆದನಂತರ ಎಲ್ಲರಿಗೂ ಕಾಣಿಸುವಂತೆ ಅಗ್ನಿಯು ಪ್ರತ್ಯಕ್ಷವಾಗಿ ಗೋಚರಿಸುವುದು (ಋತ್ವಿಕ್ಕುಗಳು) ತಮ್ಮ ಕೈಬೆರಳುಗಳನ್ನು ಉಪಯೋಗಿಸಿ ಅರಣಿಗಳಲ್ಲಿ ಶಕ್ತಿಯನ್ನುಪಯೋಗಿಸಿ ಕಡೆಯುವುದರಿಂದ ಅಗ್ನಿಯನ್ನು ಉತ್ಪತ್ತಿಮಾಡುವರು. ಅರಣಿಗಳ ಮಧ್ಯದಲ್ಲಿ ಮರೆಯಾಗಿದ್ದ ಅಗ್ನಿಯು ಕಡೆದನಂತರ ಎಲ್ಲರಿಗೂ ಕಾಣಿಸುವಂತೆ ಗೋಚರನಾಗುವನು. ಕೈಬೆರಳುಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುವಂತೆ ಮಾಡಿ ಕಡೆಯುವುದಕ್ಕೆ ಹಸ್ತಚ್ಯುತೀ ಅಥವಾ ಹಸ್ತಪ್ರಚ್ಯುತಾ ಎಂದು ಹೆಸರು. ಈ ಅಗ್ನಿಯು ದೂರದಿಂದಲೇ ಎಲ್ಲರಿಗೂ ಕಾಣಿಸುತ್ತಾ ಸ್ತುತಿಸಲ್ಪಡುವನು. ಗೃಹ ಅಥವಾ ಯಜ್ಞಗೃಹಕ್ಕೆ ಪ್ರಭುವು, ಮತ್ತು ಬಹಳ ವೇಗವುಳ್ಳವನು ಎಂದರೆ ಕ್ಷಣಮಾತ್ರದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸುವ ಸಾಮರ್ಥ್ಯವುಳ್ಳವನು ಅಥವಾ ಋತ್ವಿಗಾದಿ ಜನರಿಂದ ಸುಲಭವಾಗಿ ಸಮೀಪಿಸಲ್ಪಡುವವನು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಇತಿ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು

———

ಏಕಾದಶಃ ಖಂಡಃ

**ಹನ್ನೊಂದನೆಯ ಖಂಡವು**

ಏಕಯಾ ಪ್ರತಿಧಾ ಪಿಬತ್ಸಾಕಂ ಸರಾಂಸಿ ತ್ರಿಂಶತಮ್ । ಇನ್ದ್ರಃ ಸೋಮಸ್ಯ ಕಾಣುಕಾ ॥ ಏಕೇನ ಪ್ರತಿಧಾನೇನಾಪಿಬತ್ ಸಾಕಂ ಸಹೇ-ತ್ಯರ್ಥಃ । ಇನ್ದ್ರಃ ಸೋಮಸ್ಯ ಕಾಣುಕಾ ಕಾನ್ತಕಾನೀತಿ ವಾ ಕ್ರಾಂತ-ಕಾನೀತಿ (ವಾ ಕೃತಕಾನೀತಿ) ವೇನ್ದ್ರಃ ಸೋಮಸ್ಯ ಕಾನ್ತ ಇತಿ ವಾ ಕಣೇ ಘಾತ ಇತಿ ವಾ ಕಣೇ ಹತಃ ಕಾನ್ತಿಹತಸ್ತತ್ರೈತದ್ಯಾಜ್ಞಿಕಾ ವೇದ-ಯನ್ತೇ ತ್ರಿಂಶದುಕ್ಥಪಾತ್ರಾಣಿ ಮಾಧ್ಯನ್ದಿನೇ ಸವನ ಏಕದೇವತಾನಿ ತಾನ್ಯೇತಸ್ಮಿನ್ಕಾಲ ಏಕೇನ ಪ್ರತಿಧಾನೇನ ಪಿಬನ್ತಿ ತಾನ್ಯತ್ರ ಸರಾಂಸು-ಚ್ಯನ್ತೇ ತ್ರಿಂಶದಪರಪಕ್ಷಸ್ಯಾಹೋರಾತ್ರಾಸ್ತ್ರಿಂಶತ್ ಪೂರ್ವಪಕ್ಷಸ್ಯೇತಿ ನೈರುಕ್ತಾಸ್ತದಾ ಏತಾಶ್ಚಾನ್ದ್ರಮಸ್ಯ ಆಗಾಮಿನ್ಯ ಆಪೋ ಭವನ್ತಿ ರಶ್ಮ-ಯಸ್ತಾ ಅಪರಪಕ್ಷೇ ಪಿಬನ್ತಿ ನಿಗಮೋ ತಥಾಪಿ ಭವನ್ತಿ । ಯಮಕ್ಷಿತಿ-ಮಕ್ಷಿತಯಃ ಪಿಬನ್ತೀತಿ । ತಂ ಪೂರ್ವಪಕ್ಷ ಆಪ್ಯಾಯಯನ್ತಿ ತಥಾಪಿ ನಿಗಮೋ ಭವತಿ । ಯಥಾ ದೇವಾ ಅಂಶುಮಾಪ್ಯಾಯಯನ್ತೀತಿ ॥

---

ಕಾಣುಕಾ ॥೪೨॥

"ಏಕಯಾ ಪ್ರತಿಧಾ ಪಿಬತ್ಸಾಕಂ ಸರಾಂಸಿ ತ್ರಿಂಶತಮ್ ।
ಇಂದ್ರಃ ಸೋಮಸ್ಯ ಕಾಣುಕಾ ॥" (ಋ. ಸಂ. ೮-೭೭-೪)

ಏಕೇನ ಪ್ರತಿಧಾನೇನಾಪಿಬತ್ ಸಾಕಂ ಸಹೇತ್ಯರ್ಥಃ । ಇಂದ್ರಃ ಸೋಮಸ್ಯ ಕಾಣುಕಾ ಕಾನ್ತಕಾನೀತಿ ವಾ ಕ್ರಾನ್ತಕಾನೀನಿ ವಾ ಕೃತಕಾನೀತಿ ವಾ ॥

ಇಂದ್ರಃ ಸೋಮಸ್ಯ ಕಾನ್ತ ಇತಿ ವಾ ಕಣೇ ಘಾತ ಇತಿ ವಾ ಕಣೇ ಹತಃ ಕಾನ್ತಿಹತಃ। ತತ್ರೈತದ್ಯಾಜ್ಞಿಕಾ ವೇದಯನ್ತೇ—ತ್ರಿಂಶದುಕ್ಥ-ಪಾತ್ರಾಣಿ ಮಾಧ್ಯನ್ದಿನೇ ಸವನ ಏಕದೇವತಾನಿ ತಾನ್ಯೇತಸ್ಮಿ-ಕಾರಿ ಏಕೇನ ಪ್ರತಿಧಾನೇನ ಪಿಬನ್ತಿ ತಾನ್ಯತ್ರ ಸರಾಂಸ್ಯುಚ್ಯಂತೇ

ತ್ರಿಂಶದಪರಪಕ್ಷಸ್ಯಾಹೋರಾತ್ರಾಸ್ತ್ರಿಂಶತ್ ಪೂರ್ವಪಕ್ಷಸ್ಯೇತಿ ನೈರುಕ್ತಾಃ । ತದ್ಯಾ ಏತಾಶ್ಚಾಂದ್ರಮಸ್ಯ ಆಗಾಮಿನ್ಯ ಆಪೋ ಭವನ್ತಿ ರಶ್ಮಯಸ್ತಾ ಅಪರಪಕ್ಷೇ ಪಿಬನ್ತಿ । ತಥಾಪಿ ನಿಗಮೋ ಭವತಿ— "ಯಮಕ್ಷಿತಿಮಕ್ಷಿತಯಃ ಪಿಬನ್ತಿ" ಇತಿ । ತಂ ಪೂರ್ವಪಕ್ಷ ಆಪ್ಯಾಯಯನ್ತಿ ತಥಾಪಿ ನಿಗಮೋ ಭವತಿ—"ಯಥಾ ದೇವಾ ಅಂಶುಮಾಪ್ಯಾಯಯನ್ತಿ" ಇತಿ ॥೧॥

**ಏಕಯಾ ಪ್ರತಿಧಾ** ಎಂಬ ಋಕ್ಕಿನ ಅರ್ಥವು—

ಸರೋವರದಂತಿರುವವೂ, ಸೋಮದಿಂದ ಭರಿತವಾದವೂ, ಆಕರ್ಷಕವಾದವೂ ಆದ ಮೂವತ್ತು ಪಾತ್ರೆಗಳ ಸೋಮವನ್ನು ಇಂದ್ರನು ಒಂದೇ ಗುಟುಕಿನಿಂದ ಒಂದೇಕಾಲದಲ್ಲಿ ಪಾನಮಾಡಿದನು.

ಕಾಣುಕಾ—ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ.

**ಏಕೇನ ಪ್ರತಿಧಾನೇನಾಪಿಬತ್ ಸಾಕಂ ಸಹೇತ್ಯರ್ಥಃ । ಇಂದ್ರಃ ಸೋಮಸ್ಯ ಕಾಣುಕಾ ಕಾಂತಕಾನೀತಿ ವಾ ಕ್ರಾಂತಕಾನೀತಿ ವಾ ಕೃತಕಾನೀತಿ ವಾ ।**

**ಇಂದ್ರಃ ಸೋಮಸ್ಯ ಕಾಂತ ಇತಿ ವಾ ಕಣೇ ಹತಃ ಕಾಂತಿಹತಃ ॥**

**ತತ್ರೈತದ್ಯಾಜ್ಞಿಕಾ ವೇದಯಂತೇ । ತ್ರಿಂಶದುಕ್ಥಪಾತ್ರಾಣಿ ಮಾಧ್ಯಂದಿನೇ ಸವನ ಏಕದೇವತಾನಿ ತಾನ್ಯೇತಸ್ಮಿನ್ ಕಾಲ ಏಕೇನ ಪ್ರತಿಧಾನೇನ ಪಿಬಂತಿ ತಾನ್ಯತ್ರ ಸರಾಂಸ್ಯುಚ್ಯಂತೇ ॥**

**ತ್ರಿಂಶದಪರಪಕ್ಷಹೋರಾತ್ರಾಸ್ತ್ರಿಂಶತ್ ಪೂರ್ವಪಕ್ಷಸ್ಯೇತಿ ನೈರುಕ್ತಾಃ । ತದ್ಯಾ ಏತಾಚಾಂದ್ರಮಸ್ಯ ಆಗಾಮಿನ್ಯ ಆಪೋ ಭವಂತಿ ರಶ್ಮಯಸ್ತಾ ಅಪರಪಕ್ಷೇ ಪಿಬಂತಿ । ತಥಾಪಿ ನಿಗಮೋ ಭವತಿ—ಯಮಕ್ಷಿತಿಮಕ್ಷಿತಯಃ ಪಿಬಂತಿ ಇತಿ । ತಂ ಪೂರ್ವಪಕ್ಷ ಆಪ್ಯಾಯಯಂತಿ ತಥಾಪಿ ನಿಗಮೋ ಭವತಿ—ಯಥಾ ದೇವಾ ಅಂಶುಮಾಪ್ಯಾಯಯಂತಿ ಇತಿ ॥**

(ನಿ. ೫–೧೧)

ಕಾಣುಕಾ—ಎಂಬ ಶಬ್ದಕ್ಕೆ ಅನೇಕಾರ್ಥಗಳಿರುವವು. ಹೇಗೆಂದರೆ—**ಕಾಂತಕಾನೀತಿ ವಾ ಸೋಮಸ್ಯ ಪೂರ್ಣಾನೀತ್ಯರ್ಥಃ**—ತುಂಬಲ್ಪಟ್ಟಿರುವುದು ಎಂದರೆ ಸೋಮರಸದಿಂದ ಪೂರ್ಣವಾದುದು ಅಥವಾ **ಕೃತಕಾನೀತಿ ವಾ । ಸಂಸ್ಕೃತಾನಿ ಋತ್ವಿಗ್ಭಿಃ ಇಂದ್ರಾರ್ಥಮೇವ**—ಇಂದ್ರನ ಪಾನಾರ್ಥವಾಗಿ ಋತ್ವಿಕ್ಕುಗಳಿಂದ ಮಂತ್ರಪೂರ್ವಕವಾಗಿ ಸಂಸ್ಕರಿಸಲ್ಪಟ್ಟಿರುವುದು ಎಂದು ಮೂರು ವಿಧವಾದ ಅರ್ಥವನ್ನು ಹೇಳಿರುವರು. ಇವೆಲ್ಲವೂ **ಸರಾಂಸಿ** ಎಂಬ ಶಬ್ದಕ್ಕೆ ವಿಶೇಷಣವಾಗಿರುವವು ಎಂಬ ಪಕ್ಷದಲ್ಲಿ ಮಾಡಿರುವ ಅರ್ಥಗಳು. ಮೂವತ್ತು ಸರೋವರಗಳ ತುಂಬಾ ಇರುವ ಮೇಲೆ ಹೇಳಿದ ಗುಣಗಳುಳ್ಳ ಸೋಮರಸವನ್ನು ಇಂದ್ರನು ಒಂದೇ ಗುಟುಕಿನಿಂದ ಪಾನಮಾಡಿದನು ಎಂದರ್ಥವು. **ಸಾಕಂ** ಎಂದರೆ ಸಹ, ಒಂದೇಸಲಕ್ಕೆ ಎಂದರ್ಥವು. ಸ್ವಲ್ಪಸ್ವಲ್ಪವಾಗಿ ಹೀರುತ್ತಾ ಕುಡಿಯಲಿಲ್ಲ. ಒಂದೇ ಸಲಕ್ಕೆ ಒಂದೇ ಗುಟುಕಿನಲ್ಲಿ ಎಲ್ಲವನ್ನೂ ಏಕಕಾಲದಲ್ಲಿ ಪಾನಮಾಡಿದನು ಎಂದಭಿಪ್ರಾಯವು.

ಅಥವಾ **ಕಾಣುಕಂ** ಎಂಬ ಶಬ್ದವನ್ನು ಇಂದ್ರನಿಗೆ ವಿಶೇಷಣವೆಂದು ಭಾವಿಸುವುದಾದರೆ—**ಇಂದ್ರಃ ಸೋಮಸ್ಯ ಕಾಂತಾ ಇತಿ ವಾ** । ಇಂದ್ರನು ಸೋಮರಸದಲ್ಲಿ ಅಭಿರುಚಿಯುಳ್ಳವನು, ಸೋಮರಸವನ್ನು ಪ್ರೀತಿಸುವವನು ; ಅಥವಾ **ಕಣೇ, ಘಾತ ಇತಿ ವಾ ಕಣೇ ಹತಃ ಕಾಂತಿಹಸ್ಯ । ಕಾಂತಿರಭಿಲಾಷ ಇತ್ಯರ್ಥಃ** ಇಂದ್ರನು ತನ್ನ ಅಭಿಲಾಷೆಯು ಪೂರ್ತಿಯಾಗುವವರಿಗೆ, ಯಥೇಚ್ಛವಾಗಿ ಪಾನಮಾಡುವವನು ಎಂಬ ಎರಡು ವಿಧವಾದ ಅರ್ಥಗಳನ್ನೂ ಹೇಳಬಹುದು.

**ಸರಾಂಸಿ ತ್ರಿಂಶತಾಂ** ಇಲ್ಲಿ **ಸರಾಂಸಿ** ಎಂಬ ಶಬ್ದಕ್ಕೆ ಪಾತ್ರೆಗಳು ಎಂದರ್ಥವು. ಈ ಶಬ್ದಗಳಿಗೆ ಎರಡು ವಿಧವಾದ ಅರ್ಥಗಳನ್ನೂ ಹೇಳಬಹುದೆಂದು ಯಾಸ್ಕರು ಹೇಳಿದ್ದಾರೆ. ಯಾಜ್ಞಿಕಪಕ್ಷ ಎಂದರೆ ಯಜ್ಞಯಾಗಾದಿಗಳಲ್ಲಿ ಪ್ರವೀಣರಾದವರು ಈ ರೀತಿ ಹೇಳುವರು.

> **ತ್ರಿಂಶದುಕ್ಥಪಾತ್ರಾಣಿ ಮಾಧ್ಯಂದಿನೇ ಸವನ ಏಕದೇವತಾನಿ । ತತ್ರ ಹಿ ಮಾಧ್ಯಂದಿನೇ ಸವನೇ ಉಕ್ಥಪಯಾಭಯೋಃ ತ್ರಯಸ್ತ್ರಯೋಽಪ್ಯೈಂದ್ರಾ ಏವ ಭವಂತಿ ತ್ರಿಷ್ವಪಿ ಚೈತೇಷು ದಶದಶಾ ಚಮಸಾಃ । ತದಭಿಪ್ರಾಯೇಣ ತ್ರಿಂಶತ್ಸರಾಂಸೀತ್ಯುಕ್ತಂ ಮಂತ್ರಾದಶಾ ॥**
>
> (ನಿರು. ವ್ಯಾಖ್ಯಾ.)

ಮಾಧ್ಯಂದಿನ ಸವನಕಾಲದಲ್ಲಿ ಉಕ್ಥಪಾತ್ರೆಗಳೆಂಬ ಮೂವತ್ತು ಪಾತ್ರೆಗಳನ್ನೂ ಒಂದೇ ದೇವತೆಯನ್ನುದ್ದೇಶಿಸಿ (ಇಂದ್ರನನ್ನುದ್ದೇಶಿಸಿ) ಸಂಸ್ಕರಿಸಲ್ಪಡುವವು. ಆ ಪಾತ್ರೆಗಳನ್ನು ಸರಾಂಸಿ ಎಂದು ಹೇಳುವ ರೂಢಿ ಇದೆ. ಆದ್ದರಿಂದ ಇಂದ್ರನಿಗಾಗಿ ಮಾಧ್ಯಂದಿನಸವನದಲ್ಲಿ ಸಿದ್ಧ ಪಡಿಸಿರುವ ಮೂವತ್ತು ಪಾತ್ರೆಗಳ ತುಂಬ ಇರುವ ಸೋಮವನ್ನು ಇಂದ್ರನು ಒಂದೇ ಗುಟಕಿನಲ್ಲಿ ಪಾನಮಾಡಿದನು ಎಂದು ಇಲ್ಲಿ ಹೇಳಲಾಗಿದೆ. ಇದು ಯಾಜ್ಞಿಕರ ಅಭಿಪ್ರಾಯವು.

ಇನ್ನು ಎರಡನೆಯ ಪಕ್ಷದವರ ಅಭಿಪ್ರಾಯವು ಈ ರೀತಿಯಾಗಿದೆ—ಒಂದು ತಿಂಗಳಲ್ಲಿ ಪೂರ್ವಪಕ್ಷ, ಅಪರಪಕ್ಷ ಎಂದು ಎರಡು ಪಕ್ಷಗಳಿರುವವು. ಒಂದು ಪಕ್ಷವೆಂದರೆ ಹದಿನೈದು ಹಗಲು ಮತ್ತು ಹದಿನೈದು ರಾತ್ರಿಗಳು ಒಟ್ಟು ಮೂವತ್ತಾಗುವವು. ಅಪರಪಕ್ಷದಲ್ಲಿರುವ ಮೂವತ್ತು ಅಹೋರಾತ್ರಿಗಳಲ್ಲಿ ಚಂದ್ರನಲ್ಲಿರುವ ಸೋಮವನ್ನು ರಶ್ಮಿಗಳು ಹೀರುವವು. ಈ ವಿಷಯದಲ್ಲಿ—

> **ಯಥಾ ದೇವಾ ಅಂಶುಮಾಪ್ಯಾಯಯಂತಿ ಯಮಕ್ಷಿತಿಮಕ್ಷಿತಯಃ ಪಿಬಂತಿ ।**
> **ತೇನ ಚಂದ್ರೋ ವರುಣೋ ಬೃಹಸ್ಪತಿರಾಪ್ಯಾಯಯಂತು ಭುವನಸ್ಯ ಗೋಪಾಃ ॥**

ಎಂಬ ಶ್ರುತಿವಾಕ್ಯದ ಸಮರ್ಥನೆಯೂ ಇರುವುದು. ಇದು ನಿರುಕ್ತಕಾರರ ಅಭಿಪ್ರಾಯವು.

**ಇತಿ ಏಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು

———

## ॥ ದ್ವಾದಶಃ ಖಂಡಃ ॥

### ಹನ್ನೆರಡನೆಯ ಖಂಡವು

ಅಧ್ರಿಗುರ್ಮನ್ತ್ರೋ ಭವತಿ ಗವ್ಯಧಿಕೃತತ್ವಾದಪಿ ವಾ ಪ್ರಶಾಸನಮೇವಾಭಿಪ್ರೇತಂ ಸ್ಯಾತ್ತಚ್ಛಬ್ದವತ್ತ್ವಾದಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗವಿತ್ಯಗ್ನಿರಪ್ಯಧ್ರಿಗುರುಚ್ಯತೇ। ತುಭ್ಯಂ ಶ್ಚೋತನ್ತ್ಯಧ್ರಿಗೋ ಶಚೀವಃ । ಅಧೃತಗಮನಕರ್ಮವನ್ನಿಂದ್ರೋಽಪ್ಯಧ್ರಿಗುರುಚ್ಯತೇ ' ಅಧ್ರಿಗವ ಓಹಮಿನ್ದ್ರಾಯೇತ್ಯಪಿ ನಿಗಮೋ ಭವತಿ । ಅಙ್ಗೂಷಃ ಸ್ತೋಮ ಆಘೋಷಃ । ಏನಾಙ್ಗೂಷೇಣ ವಯಮಿನ್ದ್ರವನ್ತಃ । ಅನೇನ ಸ್ತೋಮೇನ ವಯಮಿನ್ದ್ರವನ್ತಃ ॥

---

ಅಧ್ರಿಗುಃ ॥೪೩॥

ಅಧ್ರಿಗುರ್ಮಂತ್ರೋ ಭವತಿ ಗವ್ಯಧಿಕೃತತ್ವಾದಪಿ ವಾ ಪ್ರಶಾಸನಮೇವಾಭಿಪ್ರೇತಂ ಸ್ಯಾತ್ತಚ್ಛಬ್ದವತ್ತ್ವಾದಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗವಿತಿ ॥೨॥

**ಅಧ್ರಿಗು** ಎಂಬ ಶಬ್ದಕ್ಕೆ ಮಂತ್ರವು ಎಂದರ್ಥವು. ಅಧ್ರಿಗು ಎಂದರೆ ಯಜ್ಞದಲ್ಲಿ ಪಶುವನ್ನು ಕೊಲ್ಲುವ ಶಮಿತ್ರ ಎಂಬ ಋತ್ವಿಕ್ಕು ಎಂದು ಅರ್ಥವು. ಈ ವಿಷಯದಲ್ಲಿ—

**ಅಧ್ರಿಗುಶ್ಚ ವಿಪಾಪಶ್ಚ ದೇವಾನಾಗ್‌ಂ ಶಮಿತಾರೌ॥**

(ಮೈತ್ರಾಯಣೀಯ ಸಂಹಿತಾ ೪-೧೩-೪)

**ಅಧ್ರಿಗು** ಎಂದರೆ ದೇವತೆಗಳ ಯಜ್ಞದಲ್ಲಿ ಪಶುವನ್ನು ಕೊಲ್ಲುವ ಇಬ್ಬರು ಶಮಿತೃಗಳಿಗೂ ಹೆಸರು. **ಅಧ್ರಿಗು** ಎಂಬುವನು ಪಶುವನ್ನು ಕೊಲ್ಲುವಾಗ ಇನ್ನೊಬ್ಬನಾದ **ವಿಪಾಪ** (ಅಥವಾ ಅಪಾಪ) ನೆಂಬುವನು ಪಶುವು ಸಾಯುವಾಗ ಕಿರಿಚಿಕೊಳ್ಳದ ಮೂತಿಯನ್ನು ಉಸಿರಾಡದಂತೆ ಘಟ್ಟಿಯಾಗಿ ಹಿಡಿದುಕೊಳ್ಳುವನು ಈ ಇಬ್ಬರಿಗೂ ಸಾಧಾರಣವಾಗಿ ಅಧ್ರಿಗುವೆಂದೇ ಕರೆಯುವರು.

**ಅಧ್ರಿಗು** ಎಂದರೆ ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ನಿರ್ದೇಶಿಸುವ ಮಂತ್ರವೂ ಎಂದು ಹೆಸರು. ಈ ಪ್ರೈಷ ಮಂತ್ರವನ್ನು ಮೈತ್ರಾಣೀಯ ಸಂಹಿತೆಯಲ್ಲಿಯೂ, ಐತರೇಯ ಬ್ರಾಹ್ಮಣದಲ್ಲಿಯೂ ವಿವರಿಸಲಾಗಿದೆ—

ಅಧ್ರಿಗುಪ್ರೈಷ ಮಂತ್ರವು—

ದೈವ್ಯಾಃ ಶಮಿತಾರ ಉತ ಮನುಷ್ಯಾ ಆರಭಧ್ವಮುಪನಯತ ಮೇಧ್ಯಾದುರ ಆಶಾಸಾನಾ ಮೇಧಪತಯೇ ಮೇಧಂ ಪ್ರಾಸ್ಮಾ ಅಗ್ನಿಂ ಭರತ ಸ್ತೃಣೀತ ಬರ್ಹಿರನ್ವೇನಂ ಮಾತಾ ಮನ್ಯತಾಮನು। ಪಿತಾನು ಭ್ರಾತಾಸಗರ್ಭ್ಯೋಽನು ಸಖಾ ಸಯೂಥ್ಯ ಉದೀಚೀನಾಗ್ಂ ಅಸ್ಯ ಪದೋ ನಿದಧಾತ್ ಸೂರ್ಯಂ ಚಕ್ಷುರ್ಗಮಯತಾತ್ ವಾತಂ ಪ್ರಾಣಮನ್ವವಸೃಜತಾದಂ- ತರಿಕ್ಷಮಸುಂ ಪೃಥಿವೀಗಂ ಶರೀರಮೇಕಧಾಸ್ಯ ತ್ವಚಮಾಚ್ಛ್ಯತಾತ್ ಪುರಾ ನಾಭ್ಯಾ ಅಪಿಶಸೋ ವಪಾಮುತ್ಖಿದತಾದಂತರೇವೋಷ್ಮಾಣಗ್ಂ ವಾರಯತಾಚ್ ಶ್ಯೇನಸ್ಯ ವಕ್ಷಃ ಕೃಣುತಾತ್ ಪ್ರಶಸಾ ಬಾಹೂ ಶಲಾ ದೋಷಣೀ ಕಶ್ಯಪೇವಾಸಾಗಂ ಛಿದ್ರೇ ಶ್ರೋಣೀ ಕವಷೋರೂಸ್ರೇ ಕಪರ್ಣಾಷ್ಠೀವಂತಾ ಷಡ್ವಿಗ್ಂಶತಿರಸ್ಯ ವಙ್ಕ್ರಯಸ್ತಾ ಅನುಷ್ಟುಯೋಚ್ಯಾವಯತಾದ್ ಗಾತ್ರಂ ಗಾತ್ರಮಸ್ಯಾನೂನಂ ಕೃಣುತಾದವಧ್ಯನೋಽಹಂ ಪಾರ್ಥಿವಂ ಖನತಾ ದಸ್ರಾ ರಕ್ಷಃ ಸಂಗ್ಸೃಜತಾತ್ ವನಿಷ್ಟುಮಸ್ಯ ಮಾ ರಾವಿಷ್ಟೋರೂಕಂ ಮನ್ಯಮಾನಾ ನೇದ್ವಸ್ತೋಕೇ ತನಯೇ ರವಿತಾ ರವದಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಗ್ಂ ಶಮೀಧ್ವಮಧ್ರಿಗೋ ॥

(ಮೈತ್ರಾಯಣೀಯ ಸಂಹಿತಾ ೪-೧೩-೪)

ಐತರೇಯ ಬ್ರಾಹ್ಮಣದಲ್ಲಿ—

ವನಿಷ್ಠುಮಸ್ಯ ಮಾ ರಾವಿಷ್ಟೋರೂಕಂ ಮನ್ಯಮಾನಾ ನೇದ್ವಸ್ತೋಕೇ
ತನಯೇ ರವಿತಾ ರವಚ್ಛಮಿತಾರ ಇತಿ ಯೇ ಚೈವ ದೇವಾನಾಂ
ಶಮಿತಾರೋ ಯೇ ಚ ಮನುಷ್ಯಾಣಾಂ ತೇಭ್ಯ ಏವೈನಂ
ತತ್ಪರಿದದಾತಿ ।

ಏತಾವತಂ ಭಾಗಮನೂದ್ಯ ವ್ಯಾಚಷ್ಟೇ—ಹೇ ಶಮಿತಾರೋ ದೈವ್ಯಾ ಮಾನುಷ್ಯಾಶ್ಚ ವನಿಷ್ಠುಂ ವಪಾಯಾಃ ಸಮೀಪವರ್ತಿನಂ ಮಾಂಸಖಂಡಮಸ್ಯ ಪಶೋಃ ಸಂಬಂಧಿನಮೂರೂಕ- ಮೂಲಕಾಖ್ಯಂ ಪಕ್ಷಿಸದೃಶಂ ಮನ್ಯಮಾನಾ ವಿಶೇಷಾಕಾರೇಣ ವಿಜಾನಂತೋ ಮಾ ರಾವಿಷ್ಟ ನೈವ ಲವನಂ ಕುರುತ ॥ ಉಲೂಕಸದೃಶೋ ವನಿಷ್ಠುರ್ಯಥಾ ವರ್ತತೇ ತಥೈವೋದ್ಧರತ ನ ತು ಮಧ್ಯತಶ್ಛಿನ್ನಂ ಕುರುತೇತ್ಯರ್ಥಃ ॥ ಏವಂ ಕುರ್ವತಾಂ ವೋ ಯುಷ್ಮಾಕಂ ಸಂಬಂಧಿನಿ ತೋಕೇ ಪುತ್ರೇ ತನಯೇ ತದೀಯಾಪತ್ಯೇ ಚ ರವಿತಾ ಶಬ್ದಯಿತಾ ನೇನ್ನೈವ ರವಪ್ರಾಪ್ನು- ಯಾತ್ ॥ ಯಥಾಶಾಸ್ತ್ರಂ ಛೇದನೇ ಕ್ರಿಯಮಾಣೇ ಭವತಾಂ ಗೃಹೇ ಪುತ್ರಪೌತ್ರಾದಿಕಂ ನಿಮಿತ್ತೀಕೃತ್ಯ ರೋದಿತಾ ನ ಭವಿಷ್ಯತೀತ್ಯರ್ಥಃ॥ ತದ್ಭಾಗಪಾಠೇನ ದೇವಾನಾಂ ಮಧ್ಯೇ ಯೇ ಶಮಿತಾರಃ ಸಂತಿ ಮನುಷ್ಯಾಣಾಂ ಚ ಮಧ್ಯೇ ಯೇ ಸಂತಿ ತೇಭ್ಯ ಏವ ಸರ್ವೇಭ್ಯ ಏನಂ ವನಿಷ್ಠುಂ ಪರಿದದಾತ್ಯವೈಕಲ್ಯಾಯ ಸಮರ್ಪಯತಿ ॥

ಹನ್ನೊಂದನೆಯ ಭಾಗವನ್ನು ಈಗ ವಿವರಿಸಿರುವರು. ದೇವತೆಗಳ ಸಂಬಂಧಿಗಳಾದ ಮತ್ತು ಮನುಷ್ಯಸಂಬಂಧಿಗಳಾದ ಎಲೈ ಶಮಿತೃಗಳೇ (ಎಂದರೆ ದೇವತೆಗಳು ಮಾಡುವ ಯಜ್ಞಗಳಲ್ಲಿ ಪಶುವನ್ನು ವಧಿಸುವ ಕಾರ್ಯದಲ್ಲಿ ಉದ್ಯುಕ್ತರಾದ ಶಮಿತೃಗಳು ಮತ್ತು ಮಾನವರು ಮಾಡುವ ಯಜ್ಞದಲ್ಲಿ ಪಶುವಧಾರ್ಥವಾಗಿ ನಿಯೋಜಿತರಾದ ಶಮಿತೃಗಳು) ಅಧ್ರಿಗುಶ್ಚಾಪಾಪಶ್ಚೋಭೌ

**ದೇವಾನಾಂ ಶಮಿತಾರೌ** (ತೈ. ಬ್ರಾ. ೩-೬-೬-೪) ಎಂದರೆ ದೇವತೆಗಳ ಶಮಿತೃಗಳಿಗೆ ಅಧ್ರಿಗು ಮತ್ತು ಅಪಾಪ ಎಂಬ ಹೆಸರಿರುವುದು. ಇವರು ಇಬ್ಬರು, ಎಂದಭಿಪ್ರಾಯವು. ನೀವು ಪಶುವನ್ನು ವಧಿಸಿ ಕತ್ತರಿಸುವಾಗ ವಪೆಯ ಸಮೀಪ ದಲ್ಲಿರುವ ಮಾಂಸಖಂಡವನ್ನು (entrails) ಕತ್ತರಿಸಬೇಡಿ ಆ ಮಾಂಸಖಂಡವು ಗೂಬೆಯೆಂಬ (owl) ಪಕ್ಷಿಯ ಆಕಾರದಲ್ಲಿ ಇರುವುದನ್ನು ಗಮನಿಸಿ ಅದನ್ನು ಕತ್ತರಿಸದೆ ಹಾಗೆಯೇ ಬಿಟ್ಟುಬಿಡಿ. ಈ ರೀತಿ ನೀವು ಮಾಡಿದ ಪಕ್ಷದಲ್ಲಿ ನಿಮ್ಮ ಗೃಹದಲ್ಲಿ ನಿಮ್ಮ ಮಕ್ಕಳು, ಮೊಮ್ಮಕಳು ಮೊದಲಾದ ಸಂತತಿಗಳು ಮೃತರಾಗುವುದಿಲ್ಲ. ಮತ್ತು ಆ ಸಂತತಿಗಳ ಮರಣದಿಂದ ಉಂಟಾಗಬಹುದಿಂದ ದುಃಖಸೂಚಕ ರೋದನಧ್ವನಿಯು ಸಹ ಕೇಳಿಬರುವುದಿಲ್ಲ. ಆದ್ದರಿಂದ ಮೇಲೆ ಹೇಳಿದಂತೆ ಕತ್ತರಿಸು ವುದಕ್ಕಾಗಿ ದೇವತೆಗಳ ಯಜ್ಞಗಳಲ್ಲಿ ಭಾಗವಹಿಸುವ ಶಮಿತೃಗಳಿಗೂ ಮಾನವರು ಮಾಡುವ ಯಜ್ಞಗಳಲ್ಲಿ ಪಶುವಧೆಯನ್ನು ಮಾಡುವ ಶಮಿತೃಗಳಿಗೂ ಕತ್ತರಿಸುವುದಕ್ಕಾಗಿ ಈ ಯಜ್ಞಪಶುವನ್ನು ಕೊಡಲಾಗಿದೆ.

ಅಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗಾ
೩ ಉ ಇತಿ ತ್ರಿರ್ಬ್ರೂಯಾದಪಾಪೇತಿ ಚಾಧ್ರಿಗುರ್ವೈ
ದೇವಾನಾಂ ಶಮಿತಾಽಪಾಪೋ ನಿಗ್ರಭೀತಾ ಶಮಿತೃಭ್ಯಶ್ಚೈವೈನಂ
ತನ್ನಿಗ್ರಭೀತೃಭ್ಯಶ್ಚ ಸಂಪ್ರಯಚ್ಛತಿ ॥

**ದ್ವಾದಶಂ ಭಾಗಮನೂದ್ಯ ವ್ಯಾಚಷ್ಟೇ—ಹೇಽಧ್ರಿಗೋ, ಏತನ್ನಾಮಕದೇವೇಷು ಶಮಿತೃಷು ಮುಖ್ಯದೇವಾ ಯೂಯಂ ಸರ್ವೇ ಶಮೀಧ್ವಂ ವಿಶಸನಾದಿನಾ ಪಶು ಸಂಸ್ಕುರುಧ್ವಂ॥ ಪುನರಪಿ ವಿಶೇಷಾಕಾರೇಣೋಚ್ಯತೇ ಸುಶಮಿ ಸುಷ್ಠು ಶಮನಂ ಶಾಸ್ತ್ರೀಯಂ ವಿಶಸನಂ ಯಥಾ ಭವತಿ ತಥಾ ಶಮೀಧ್ವಂ ಶಮಯತ ಸಂಜ್ಞಪಯತ ॥ ಅಧ್ರಿಗಾದೌ ಪ್ಲುತಿರ್ದೂರಾದಾಹ್ವಾ- ನಾರ್ಥಾ॥ ಓಕಾರಸ್ಯ ಪ್ಲುತಿವೇಲಾಯಾಮಾಕಾರ ಉಕಾರಶ್ಚೇತಿ ವರ್ಣದ್ವಯಂ ಸಂಪದ್ಯತೇ॥ ತಥಾವಿಧಾ ಯೂಯಮಿತರೈಃ ಸಹ ಯೂಯಂ ಸುಶಮೀಧ್ವಂ ಸರ್ವಥಾ ಶಮಯತ ನ ತೂಪ- ಚರಿತಂ ಶಮನಂ ಕುರುತ ॥ ಕ್ರೂರಕರ್ಮೇತಿ ಕೃತ್ವಾ ತದುಪೇಕ್ಷಣಂ ಮಾಭೂದಿತಿ ಪುನಃ- ಪುನರ್ವಚನಂ ॥ ಅಧ್ರಿಗೋ ಶಮೀಧ್ವಮಿತ್ಯಾದಿಕಂ ವಾಕ್ಯತ್ರಯಸಮುದಾಯಂ ತ್ರಿವಾರಮಾ- ವರ್ತಯೇತ್ ॥ ಅಪಾಪೇತ್ಯಪಿ ತತ್ಸಂಬಂಧಿನಂ ತ್ರಿವಾರಮಾವರ್ತಯೇತ್ ॥ ತದೇತದಾಶ್ವ- ಲಾಯನ ಆಹ—'ಅಧ್ರಿಗ್ವಾದಿ ತ್ರಿರುಕ್ತ್ವಾ' ಇತಿ ॥ ಅಧ್ರಿಗೋ (?) ಅಪಾಪದೇವಃ। ಸೋಽ- ಯಮಪಾಪನಾಚೀ ಶಾಖಾಂತರೇ ಪಠ್ಯತೇ—-ಅಧ್ರಿಗುಶ್ಚಾಪಾಪಶ್ಚೋಭೌ ದೇವಾನಾಂ ಶಮಿ- ತಾರೌ ' ಇತಿ । ಅತ್ರ ತು ತದವಾಂತರವಿಶೇಷೋಽಭಿಧೀಯತೇ ॥ ದೇವಾನಾಂ ಮಧ್ಯೇ ಯಃ ಶಮಿತಾ ಹಂತಾ ಸೋಽಧ್ರಿಗುರ್ಯಶ್ಚ ಧ್ಯಾನಾದಿನಾ ನಿಗ್ರಭೀತಾ ನಿಗ್ರಹಸ್ಯ ಕರ್ತಾ ಸೋಽಯ- ಮಪಾಪಸ್ತದ್ಭಾಗಪಾಠೇನಾಧ್ರಿಗುಪ್ರಭೃತಿಭ್ಯಃ ಶಮಿತೃಭ್ಯಶ್ಚಾಪಾಪಪ್ರಭೃತಿಭ್ಯೋ ನಿಗ್ರಹೀತೃ- ಭ್ಯಶ್ಚೈನಂ ಪಶುಂ ಸಂಜ್ಞಪನಾಯ ಪ್ರಯಚ್ಛತಿ॥**

ಈಗ ಹನ್ನೆರಡನೆಯ ಭಾಗವನ್ನು ವಿವರಿಸುವರು. ಹೋತೃವು ಶಮಿತೃಗಳನ್ನು ಉದ್ದೇಶಿಸಿ ಈ ರೀತಿ ಹೇಳುವನು— ಎಲೈ ಅಧ್ರಿಗುವೇ (ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಿಸುವವನೇ) ಮತ್ತು ನಿನ್ನ ಸಹಾಯಕನಾದ ಅಪಾಪನೆಂಬ

ದೇವತೆಯೇ ನೀವು ಈಗ ಈ ಯಜ್ಞಪಶುವನ್ನು ವಧಿಸಿರಿ ಮತ್ತು ಶಾಸ್ತ್ರೋಕ್ತರೀತಿಯಿಂದ ಅದರ ಅವಯವಗಳನ್ನು ಅವುತ್ಕರ್ಷಣೆಗೆ ಅನುಕೂಲವಾಗುವಂತೆ ಕತ್ತರಿಸಿರಿ ಎಂದು ಹೇಳುವನು. ಈ ಅರ್ಥವನ್ನು ವಿವರಿಸುವ—**ಅಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗಾ ೩ ಉ ಇತಿ** (ತೈ. ಬ್ರಾ. ೩-೬-೪ ; ಕಾಠಕ. ೧೬-೨೧ ; ಮೈತ್ರಾಯಣೀಯಸಂಹಿತಾ. ೪-೧೩-೨೫) ಎಂಬ ಈ ಮಂತ್ರವನ್ನು ಮೂರಾವರ್ತಿ ಪಠಿಸಬೇಕು (ಅಶ್ವ. ಶ್ರೌ. ಸೂ. ೩-೩-೪) ಏಕೆಂದರೆ ಈ ಪಶುವಧವೆಂಬ ಕರ್ಮವನ್ನು ಚೆನ್ನಾಗಿಯೂ ಶಾಸ್ತ್ರೋಕ್ತವಾಗಿಯೂ ಮಾಡಬೇಕೆಂದು ತಿಳಿಸುವುದಕ್ಕಾಗಿ ಮೂರಾವರ್ತಿ ಹೇಳಿ ಸ್ಪಷ್ಟವಾದ ಸೂಚನೆಯನ್ನು ಕೊಡಲಾಗಿರುವುದು. ಅಧ್ರಿಗುವೆಂದರೆ ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಿಸುವನು ; ಅಪಾಪ (ಅಥವಾ ವಿಪಾಪ) ನೆಂಬುವನು ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಕಾಲದಲ್ಲಿ ಕಿರಿಚಿಕೊಳ್ಳದಂತೆ ಅದರ ಬಾಯನ್ನು ಗಟ್ಟಿಯಾಗಿ ಹಿಡಿದುಕೊಂಡು ವಧಕಾರ್ಯಕ್ಕೆ ಸಹಾಯಮಾಡುವವನು. ಯಜ್ಞದಲ್ಲಿ ಮಾಡುವ ವಧಕಾರ್ಯವು ಪಾಪವಲ್ಲ ಎಂದು ತಿಳಿಸುವುದಕ್ಕಾಗಿಯೇ ಈ ಋತ್ವಿಜನಿಗೆ ಅಪಾಪ ಅಥವಾ ವಿಪಾಪನೆಂದು ಹೆಸರಿರುವುದು. ಪಶುವಧಾನಂತರ ಅದರ ಅವಯವಗಳನ್ನು ಶಾಸ್ತ್ರೋಕ್ತವಾಗಿ ಕತ್ತರಿಸಿ ಎಂದು ಅಧ್ರಿಗು ಮತ್ತು ಅಪಾಪ ಎಂಬ ದೇವತೆಗಳನ್ನು ನಿರ್ದೇಶಿಸಿ ಹೇಳಲಾಗಿದೆ. ಮೇಲಿನ ವಾಕ್ಯದಲ್ಲಿ ನಿಗ್ರಭೀತಾ ಎಂಬ ಶಬ್ದಪ್ರಯೋಗವಿದೆ. ಅಪಾವನೆಂಬ ಋತ್ವಿಜನು ಪಶುವಿನ ಮುಖವನ್ನು ಹಿಡಿದು ಅದು ಅರಚಿಕೊಳ್ಳದಂತೆ ಸಹಾಯಮಾಡುವುದರಿಂದ ಅವನಿಗೆ ನಿಗೃಭೀತಾ ಎಂಬ ಹೆಸರೂ ಇರುವುದು. ಪಶುವನ್ನು ವಧಿಸುವುದಕ್ಕಾಗಿಯೂ ವಧಿಸಿದನಂತರ ಅದನ್ನು ಕ್ರಮವಾಗಿ ಕತ್ತರಿಸುವುದಕ್ಕಾಗಿಯೂ ಅಧ್ರಿಗು ಮೊದಲಾದವರ ವಶಕ್ಕೆ ಪಶುವನ್ನು ಕೊಡಲಾಗುವುದು ಎಂದು ಮುಖ್ಯಾಭಿಪ್ರಾಯವು. ಮೇಲಿನ ವಾಕ್ಯದಲ್ಲಿ **ಅಧ್ರಿಗಾ ೩ ಉ** ಎಂದು ಮೂರು ಮಾತ್ರೆಗಳ ಕಾಲ ಪ್ಲುತವು ಉಕ್ತವಾಗಿದೆ. ಅಧ್ರಿಗೋ ಎಂದು ಸಂಬೋಧನವನ್ನು ಒತ್ತಿಹೇಳಿ ಸ್ಪಷ್ಟಪಡಿಸುವುದಕ್ಕಾಗಿ ಕಡೆಯ ಅಕ್ಷರವಾದ (ಗೋ) ಓಕಾರದ ಮಧ್ಯೆ (ಅ+ಉ) ಮೂರು ಮಾತ್ರೆಗಳಕಾಲವನ್ನು ಸೂಚಿಸುವ ೩ ಎಂಬ ಪ್ಲುತವನ್ನು ಇಲ್ಲಿ ಉಪಯೋಗಿಸಲಾಗಿದೆ.

ಶಮಿತಾರೋ ಯದತ್ರ ಸುಕೃತಂ ಕೃಣವಥಾಸ್ಮಾಸು ತದ್ಯದ್ದುಷ್ಕೃ-
ತಮನ್ಯತ್ರ ತದಿತ್ಯಾಹಾಗ್ನಿರ್ವೈ ದೇವಾನಾಂ ಹೋತಾಽಽಸೀತ್ಸ
ಏನಂ ವಾಚಾ ವ್ಯಶಾದ್ವಾಚಾ ವಾ ಏನಂ ಹೋತಾ ವಿಶಾಸ್ತಿ
ತದ್ಯದರ್ವಾಗ್ಯತ್ಪರಃ ಕೃತಂತಿ ಯದುಲ್ಬಣಂ ಯದ್ವಿಥುರಂ
ಕ್ರಿಯತೇ ಶಮಿತೃಭ್ಯಶ್ಚೈವೈನತ್ತನ್ನಿಗ್ರಭೀತೃಭ್ಯಶ್ಚ ಸಮನುದಿಶತಿ
ಸ್ವಸ್ತ್ಯೇವ ಹೋತೋನ್ಮುಚ್ಯತೇ ಸರ್ವಾಯುಃ ಸರ್ವಾಯು-
ತ್ವಾಯ ಸರ್ವಮಾಯುರೇತಿ ಯ ಏವಂ ವೇದ ||

ಅಧ್ರಿಗುಮಂತ್ರಪಾಠಾನಂತರಂ ಜಪಂ ವಿಧತ್ತೇ—ಹೇ ಶಮಿತಾರೋ ಯದತ್ರ ಪಶುವಿಶಸನಕರ್ಮಣಿ ಯತ್ಸುಕೃತಂ ಕೃಣವಥಾಸ್ಮಾಸು ಶತ್ || ತತ್ರ ಯದ್ದುಷ್ಕೃತಮನ್ಯತ್ರ ತದಿತಿ ಜಪಿತ್ವಾ ದಕ್ಷಿಣಾವೃದಾವರ್ತತ ಇತಿ || ಏತನ್ಮಂತ್ರಾರ್ಥಮಗ್ನಿರ್ವೇತ್ಯಾದಿನೋಚ್ಯತೇ | ಯದಾ ದೇವಾ ಯಜ್ಞಂ ಕುರ್ವಂತಿ ತದಾನೀಂ ತೇಷಾಂ ಮಧ್ಯೇಽಗ್ನಿರೇವ ಹೋತಾಽಭೂತ್ | ಸ ಏನಂ

**ಪಶುಂ ವಾಚಾಽಧ್ರಿಗುಪ್ರೈಷರೂಪಯಾ ವ್ಯಶಾದ್ವಿಶಸನಂ ಕೃತವಾನ್ ॥ ಅಧ್ರಿಗುಪ್ರೈಷ ಆರ-ಭಧ್ವಂ ಶಮೀಧ್ವಮಿತ್ಯಾದಿ ಪ್ರೇರಣವಾಚಕಾನಾಂ ಪದಾನಾಂ ಬಹೂನಾಂ ವಿದ್ಯಮಾನತ್ವಾದ-ಸ್ಯೈವ ಹೋತುರ್ವಾಚಿಕಂ ವಿಶಸನಂ ॥ ತಥಾ ಸತಿ ಪಶೋರರ್ವಾಗ್ಭಾಗೇ ಯತ್ಕೃಂತಂತಿ ಯಚ್ಚ ಪರಃ ಪರಭಾಗ ಉತ್ತಮಾಂಗೇ ಕೃತಂತಿ ತಸ್ಮಿನ್ನುಭಯಸ್ಮಿನ್ನಪಿ ಚ್ಛೇದನೇ ಯದು-ಲ್ಬಣಂ ಶಾಸ್ತ್ರಾರ್ಥಾದತಿರಿಕ್ತಂ ಕ್ರಿಯತೇ ಯಚ್ಚ ವಿಥುರಂ ನ್ಯೂನಂ ಕ್ರಿಯತೇ ತತ್ಸರ್ವಮೇನ ತ್ಪಶುಶಮಿತೃಭ್ಯೋ ನಿಗ್ರಭೀತೃಭಿಶ್ಚ ಸಮನುದಿಶತಿ ತೇನ ಮಂತ್ರಜಪೇನ ಸಮ್ಯಕ್ಕಥಯತೀತಿ ವಾಚಾ ಹೋತಾ ಸ್ವಸ್ಯೈವ ಕ್ಷೇಮೇಣೈವ ಪಾಪಾನ್ಮುಚ್ಯತೇ ಸರ್ವಾಯುರ್ಮೃತ್ಯುರಹಿತಶ್ಚ ಭವತಿ ಯಜಮಾನಸ್ಯಾಪ್ಯಪಮೃತ್ಯುರಾಹಿತ್ಯಾಯ ॥**

ಅಧ್ರಿಗುಮಂತ್ರಪಾಠಾನಂತರ ಜಪವಿಧಾನವನ್ನು ತಿಳಿಸುವರು. ಎಲೈ ಶಮಿತೃಗಳೇ, ಈ ಪಶುಚ್ಛೇದನಕರ್ಮದಲ್ಲಿ ನಿಮ್ಮಿಂದ ಆಚರಿಸಲ್ಪಟ್ಟ ಪಶುವಿನ ಶ್ವಾಸಬಂಧನ ಮತ್ತು ಪ್ರಾಣಾಪಹರಣವು ಸಹ ಈ ಮಂತ್ರಪಠನದಿಂದ ನಿವಾರಿಸ ಲ್ಪಡುತ್ತದೆ. ಹಾಗೆಯೇ ಪಶುವಿನ ಅಂಗಗಳನ್ನು ಚ್ಛೇದನಮಾಡುವಾಗ (ಶಾಸ್ತ್ರಕ್ಕೆ ವ್ಯತಿರಿಕ್ತವಾಗಿ) ಎಲ್ಲೆಲ್ಲಿ ಯಾವರೀತಿ ಕತ್ತರಿಸಬೇಕೋ ಅದರಂತಾಗದೆ ಕೆಲವುಕಡೆ ಬೇಗನೆ, ಕೆಲವುಕಡೆ ನಿಧಾನ, ಕೆಲವುಕಡೆ ಕಮ್ಮಿಯಾಗಿ, ಕೆಲವುಕಡೆ ಹೆಚ್ಚಾಗಿ ಕತ್ತರಿಸಲ್ಪಡುವುದು ಮೊದಲಾದ ದೋಷಗಳೆಲ್ಲವೂ ನಿವಾರಿಸಲ್ಪಡುತ್ತವೆ. ಹಿಂದೆ ದೇವತೆಗಳು ಯಜ್ಞಮಾಡಿದಾಗ ಅವರ ಯಜ್ಞದಲ್ಲಿ ಅಗ್ನಿಯು ಹೋತೃವೆಂಬ ಋತ್ವಿಜನಾಗಿದ್ದನು. ಆಗ ಪಶುಚ್ಛೇದನಕಾರ್ಯಕ್ಕಾಗಿ ಅಗ್ನಿಯು ಅಧ್ರಿಗುಪ್ರೈಷ ರೂಪವಾದ ವಾಕ್ಯಗಳನ್ನು ಪಠಿಸಿ ಶಮಿತೃ ಮತ್ತು ನಿಗೃಭೀತೃಗಳ (ಪಶುವನ್ನು ಕೊಲ್ಲುವವರ ಮತ್ತು ಶ್ವಾಸಬಂಧನಮಾಡು ವವರ) ಲೋಪದೋಷಗಳನ್ನು ಪಾಪಗಳನ್ನು ಪರಿಹಾರವಾಗುವಂತೆ ಮಾಡಿದನು. ಅದ್ದರಿಂದ ಈಗಲೂ ಆ ಪದ್ಧತಿಯೇ ನಡೆದುಕೊಂಡು ಬಂದಿದೆ. ಈ ಕ್ರಮವನ್ನು ಅನುಸರಿಸುವುದರಿಂದ ಹೋತೃವು ಸಮಸ್ತಪಾಪಗಳಿಂದಲೂ ಮುಕ್ತನಾಗಿ ದೀರ್ಘಾಯುಸ್ಸನ್ನು ಪಡೆಯುತ್ತಾನೆ ಮತ್ತು ಈ ವಿಷಯವನ್ನು ಚೆನ್ನಾಗಿ ತಿಳಿದು ಅದರಂತೆ ಆಚರಿಸುವ ಪುರುಷನೂ ಸಹ ದೀರ್ಘಾಯುಸ್ಸನ್ನು ಪಡೆಯುತ್ತಾನೆ.

ಅಗ್ನಿರಪ್ಯಧ್ರಿಗುರುಚ್ಯತೇ । 'ತುಭ್ಯ ಶ್ಚೋತನ್ತ್ಯಧ್ರಿಗೋ ಶಚೀವಃ ॥'
ಅಧೃತಗಮನಕರ್ಮವನ್ ॥೩॥

ಅಗ್ನಿಗೂ ಅಧ್ರಿಗು ಎಂಬ ಹೆಸರಿದೆ. ಈ ವಿಷಯದಲ್ಲಿ ಉದಾಹರಣೆಯ ಋಕ್ಕು—

**ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ ಸ್ತೋಕಾಸೋ ಅಗ್ನೇ ಮೇದಸೋ ಘೃತಸ್ಯ ।**
**ಕವಿಶಸ್ತೋ ಬೃಹತಾ ಭಾನುನಾಗಾ ಹವ್ಯಾ ಜುಷಸ್ವ ಮೇಧಿರ ॥**

(ಋ. ಸಂ. ೩-೨೧-೪)

ಇದರ ಅರ್ಥವು—

ತಡೆಯಿಲ್ಲದೇ ಪ್ರಸರಿಸುವ ಸ್ವಭಾವವುಳ್ಳವನೂ, ಶಕ್ತಿಯುಳ್ಳವನೂ ಆದ ಅಗ್ನಿಯೇ, ನಿನಗಾಗಿ ಮೇದೋ ರೂಪದ ಹವಿಸ್ಸಿನ ಮತ್ತು ಘೃತದ ಬಿಂದುಗಳು ಸ್ರವಿಸುತ್ತವೆ. ಕರ್ಮಜ್ಞರಾದ ಹೋತ್ರಾದಿಗಳಿಂದ ಸ್ತುತನಾದ ನೀನು ಪ್ರಭೂತ ವಾದುದೂ, ತೇಜಸ್ಸಿನಿಂದ ಕೂಡಿದುದೂ ಆದ ನಮ್ಮ ಈ ಪಶುಯಾಗಕ್ಕಾಗಿ ಬಂದು ಇಲ್ಲಿ ನಾವು ಅರ್ಪಿಸುವ ಹವಿಸ್ಸುಗಳನ್ನು ಸೇವಿಸಬೇಕು.

ಅಧ್ರಿಗೋ--ಈ ಪದವನ್ನೂ **ಶಚೀವಃ** ಎಂಬ ಪದವನ್ನೂ ಅಗ್ನಿಪದದ ವಿಶೇಷಣವನ್ನಾಗಿ ಪ್ರಯೋಗಿಸಿದೆ. **ಅಧೃತ ಗಮನ, ಸತತಗಮನಸ್ವಭಾವ** ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವನು ಎಂದು ಅಧ್ರಿಗು ಶಬ್ದಕ್ಕೆ ಅರ್ಥವನ್ನೂ ಶಕ್ತಿಮನ್ ಶಕ್ತಿಯುಳ್ಳವನು ಎಂದು ಶಚೀವಃ ಎಂಬ ಪದಕ್ಕೆ ಅರ್ಥವನ್ನೂ ಸಾಯಣರು ವಿವರಿಸಿದ್ದಾರೆ.

**ಅಗ್ನೇ** —ಎಂದು ಸಂಬೋಧಿಸಿ **ಮೇದೋರೂಪಸ್ಯ ಹವಿಷಃ ಘೃತಸ್ಯ ಚ ಬಿಂದವಃ ಸ್ರವಂತಿ** ಮೇಧಸ್ಸಿನ ರೂಪದಿಂದ ಇರುವ ಹವಿಸ್ಸಿನ ಮತ್ತು ಆಜ್ಯದ ಬಿಂದುಗಳು ಪಶುಯಾಗದಲ್ಲಿ ಯಜಮಾನರಿಂದ ಅರ್ಪಿತವಾಗಿದೆ ಎಂದು ವಿವರಿಸಿದೆ.

**ಕವಿಶಸ್ತಃ**—**ಕವಿಭಿಃ ಕರ್ಮಾಭಿಜ್ಞೈಃ ಹೋತ್ರಾದಿಭಿಃ ಸ್ತುತಃ** ಯಾಸ್ಕರು ಕವಿ ಶಬ್ದವನ್ನು ಮೇಧಾವಿ ನಾಮ ಗಳಲ್ಲಿ (ನಿ. ೩-೧೯) ಪಾಠಮಾಡಿದ್ದಾರೆ. ಮತ್ತು

**ಉತ ನೋಽಹಿರ್ಬುಧ್ನಃ ಶೃಣೋತ್ವಜ ಏಕಪಾತ್ ಪೃಥಿವೀ ಸಮುದ್ರಃ ।**
**ವಿಶ್ವೇ ದೇವಾ ಋತಾವೃಧೋ ಹುವಾನಾಃ ಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ॥**
(ಋ. ಸಂ. ೬-೫೦-೧೪)

ಈ ಋಕ್ಕಿನಲ್ಲಿ **ಕವಿಶಸ್ತಾಃ** ಎಂಬ ಪದಕ್ಕೆ **ಮೇಧಾವಿಶಸ್ತಾಃ** ಮೇಧಾವಿಗಳಿಂದ ಸ್ತುತವಾದವುಗಳು ಎಂದು ಅರ್ಥವನ್ನು ವರ್ಣಿಸಿದ್ದಾರೆ. ಸಾಯಣರು ಯಜ್ಞಕರ್ಮಗಳನ್ನು ಆಚರಿಸುವ ಕ್ರಮವನ್ನು ತಿಳಿದು ಇರುವ ಋತ್ವಿಜರಾದ ಹೋತೃವೇ ಮೊದಲಾದವರಿಂದ ಅಗ್ನಿಯು ಸ್ತುತನಾಗಿರುವನು ಎಂದು ಅರ್ಥವನ್ನು ಹೇಳಿ **ಬೃಹತಾ ಭಾನುನಾ ಆಗಾಃ** ಅಗ್ನಿಯು ಪ್ರಭೂತವಾದ ತನ್ನ ತೇಜಸ್ಸಿನಿಂದ ಯಾಗಶಾಲೆಗೆ ಆಗಮಿಸಲಿ ಎಂದು ಅರ್ಥವನ್ನು ವರ್ಣಿಸಿದ್ದಾರೆ. ಭಾನುಶಬ್ದವು ಅಹರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿದೆ. ಇಲ್ಲಿ ತೇಜಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಮೇಧಿರ** ಎಂಬ ಪದಕ್ಕೆ ಪ್ರಜ್ಞಾವನ್ ಎಂದು ಅರ್ಥವನ್ನು ವಿವರಿಸಿ, ಜ್ಞಾನಿಯಾಗಿರುವ ಅಗ್ನಿಯು **ಅಸ್ಮಾಭಿರ್ದೀಯಮಾನಾನಿ ವಪಾದೀನಿ ಹವೀಂಷಿ ಸೇವಸ್ವ** ಯಜಮಾನರು ಅರ್ಪಿಸುವ ವಪಾರೂಪದಿಂದಲೂ ಇತರ ವಿಧದಿಂದಲೂ ಇರುವ ಹವಿಸ್ಸುಗಳನ್ನು ಅಗ್ನಿಯು ಸೇವಿಸಲ್ಲಿ ಎಂದು ಅರ್ಥವನ್ನು ವಿವರಿಸಿದೆ. ಯಾಸ್ಕರು ಅಧ್ರಿಗು ಶಬ್ದಾರ್ಥವನ್ನು ಈ ರೀತಿ ವಿವರಿಸಿದ್ದಾರೆ.

**ಅಧ್ರಿಗುರ್ಮಂತ್ರೋ ಭವತಿ ಗವ್ಯಧಿಕೃತತ್ವಾದಪಿ ವಾ ಪ್ರಶಾಸನಮೇವಾಭಿಪ್ರೇತಂ ಸ್ಯಾತ್ ತುಚ್ಛಬ್ದವತ್ತ್ವಾದಧ್ರಿಗೋ ಶಮೀಧ್ವಂ ಸುಶಮಿ ಶಮಿದಧ್ವಂ ಶಮೀಧ್ವಮಧ್ರಿಗವಿತಿ** (ನಿ. ೫-೧೧)

ದುರ್ಗಾಚಾರ್ಯರು ಅಧ್ರಿಗು ಶಬ್ದಕ್ಕೆ ಅನೇಕಾರ್ಥಗಳು ಇರುವುವು. (ಪಶುವಿನಲ್ಲಿ) ಗವಿ **ಅಧಿಕೃತೋ ಮಂತ್ರಃ ಅಧ್ರಿಗುಃ** ಪಶುವನ್ನು ಸಂಬೋಧಿಸುವುದರಲ್ಲಿ ಶಕ್ತವಾದ ಮಂತ್ರವೂ ಅಧ್ರಿಗು ಎಂಬ ಶಬ್ದದಿಂದ ನಿರ್ದಿಷ್ಟವಾಗಿದೆ ಎಂದೂ, **ಅಧ್ರಿಗುರ್ನಾಮ ದೈವಃ ಕಶ್ಚಿದಸ್ತಿ ಶಮಿತಾ ತಸ್ಮೈತತ್ ಪ್ರಶಾಸನಂ ಸ್ಯಾತ್** ಪಶುವನ್ನು ಯಾಗದಲ್ಲಿ ವಧಿಸುವವನು ಒಬ್ಬನು ದೇವನಾಗಿರುವನು. ಅವನಿಗೆ ಈ ಪದವು ಸಂಬೋಧನಾರೂಪದಿಂದ ಇರುವುದು. **ಅಧ್ರಿಗೋ ಶಮೀಧ್ವಂ** ಎಂದು ಯಜ್ಞದಲ್ಲಿ ಸಂಪ್ರೇರಣವು ಇರುತ್ತದೆ ಎಂದೂ, ವಿವರಿಸಿದ್ದಾರೆ. ಮತ್ತೂ

**ಅಗ್ನಿರಪ್ಯಧ್ರಿಗುರುಚ್ಯತೇ** ಯಾಸ್ಕರು-ಅಗ್ನಿಯೂ ಅಧ್ರಿಗು ಶಬ್ದದಿಂದ ಉಕ್ತನಾಗಿರುವನು ಎಂದು ಹೇಳಿ **"ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವಃ"** ಎಂಬ ಈ ಮಂತ್ರವನ್ನು ಉದಹರಿಸಿ **ಅಧೃತಗಮನಕರ್ಮವತ್** ಸಂತತವಾದ ಗಮನ ಕ್ರಿಯೆಯುಳ್ಳವನಾದುದರಿಂದ ಅಗ್ನಿಯು ಅಧ್ರಿಗುಶಬ್ದವಾಚ್ಯನೆಂದು ವರ್ಣಿಸಿದ್ದಾರೆ.

ಅಸ್ಮಾ ಇದು ಪ್ರ ತವಸೇ ತುರಾಯ ಪ್ರಯೋ ನ ಹರ್ಮಿ ಸ್ತೋಮಂ ಮಾಹಿನಾಯ ।
ಋಚೀಷಮಾಯಾಧ್ರಿಗವ ಓಹಮಿಂದ್ರಾಯ ಬ್ರಹ್ಮಾಣಿ ರಾತತಮಾ ॥

(ಋ. ಸಂ. ೧-೬೧-೧)

ಈ ಮಂತ್ರದಲ್ಲಿ ಇಂದ್ರನನ್ನು ವರ್ಣಿಸುವಾಗ **ಅಧ್ರಿಗವೇ ಇಂದ್ರಾಯ** ಎಂದು ಉಕ್ತವಾಗಿರುವುದರಿಂದ **ಇಂದ್ರೋಽಪ್ಯಧ್ರಿಗುರುಚ್ಯತೇ** ಎಂದು ಯಾಸ್ಕರು ಅಧ್ರಿಗು ಶಬ್ದದಿಂದ ಇಂದ್ರನೂ ವಾಚ್ಯನಾಗಿರುವನೆಂದು ವಿವರಿಸಿದ್ದಾರೆ. ದುರ್ಗಾಚಾರ್ಯರ **ಅಧೃತಗಮನಾಯ ಅಪ್ರತಿಹತಗಮನಾಯ** ತಡೆಯಿಲ್ಲದಿರುವ ಸಂಚಾರವುಳ್ಳವನು ಎಂದು ಅರ್ಥವನ್ನು ವಿವರಿಸಿದ್ದಾರೆ. ಇದನ್ನು ಅನುಸರಿಸಿ ಸಾಯಣರೂ ಅರ್ಥವನ್ನು ವರ್ಣಿಸಿರುವರು. ದುರ್ಗಾಚಾರ್ಯರು ಶಚೀವಃ ಎಂಬ ಪದಕ್ಕೆ ಕರ್ಮವನ್ ಎಂಬ ಅರ್ಥವನ್ನು ವರ್ಣಿಸಿದ್ದಾರೆ.

ಇಂದ್ರೋಽಪ್ಯಧ್ರಿಗುರುಚ್ಯತೇ ॥
“ಅಧ್ರಿಗವ ಓಹಮಿಂದ್ರಾಯ” ಇತ್ಯಪಿ ನಿಗಮೋ ಭವತಿ ॥ ೪ ॥

ಇಲ್ಲಿ ಅಧ್ರಿಗವೆ—ತಡೆಯಿಲ್ಲದ ಗಮನವುಳ್ಳ ಎಂದರ್ಥವು ಇಂದ್ರನಿಗೂ ಅಧ್ರಿಗುವೆಂದು ಹೆಸರು.

ಈ ವಿಷಯದಲ್ಲಿ ಉದಾಹರಣೆಯ ಋಕ್ಕು—

**ಅಸ್ಮಾ ಇದು ಪ್ರ ತವಸೇ ತುರಾಯ ಪ್ರಯೋ ನ ಹರ್ಮಿ ಸ್ತೋಮಂ ಮಾಹಿನಾಯ ।**
**ಋಚೀಷಮಾಯಾಧ್ರಿಗವ ಓಹಮಿಂದ್ರಾಯ ಬ್ರಹ್ಮಾಣಿ ರಾತತಮಾ ।**

(ಋ. ಸಂ. ೧-೬೧-೧)

ಇದರ ಅರ್ಥವು—

ಬಲಶಾಲಿಯೂ ಶೀಘ್ರಗಾಮಿಯೂ, ಗುಣಗಳಿಂದ ಶ್ರೇಷ್ಠನೂ, ಸ್ತೋತ್ರಕ್ಕೆ ಅನುರೂಪನೂ, ಅಪ್ರತಿಹತವಾದ ಗಮನವುಳ್ಳವನೂ ಆದ ಇಂದ್ರನಿಗೆ ಉತ್ಕೃಷ್ಟವಾದ ಸ್ತೋತ್ರವನ್ನೂ ಮತ್ತು ಹಿಂದಿನ ಯಜಮಾನರಿಂದ ಪ್ರಿತಿಯಿಂದ ದತ್ತವಾದ ಹವಿಸ್ಸುಗಳನ್ನೂ ಹಸಿದವನಿಗೆ ಅನ್ನವನ್ನು ಕೊಡುವಂತೆ ಆದರಿಂದ ಅರ್ಪಿಸುತ್ತೇನೆ.

ಆಙ್ಗೂಷಃ ॥ ೪೪ ॥
ಆಂಗೂಷಃ ಸ್ತೋಮ ಆಘೋಷಃ । “ಏನಾಙ್ಗೂಷೇಣ ವಯಮಿನ್ದ್ರವನ್ತಃ” ॥ ಅನೇನ ಸ್ತೋಮೇನ ವಯಮಿನ್ದ್ರವನ್ತಃ ॥ ೫ ॥ ೧೧ ॥

**ಆಂಗೂಷಃ** ಎಂದರೆ ಸ್ತೋಮವು, ಸ್ತೋತ್ರವು. **ಆಘೋಷಃ** ಎಂಬುದು ಶಬ್ದನಿಷ್ಪತ್ತಿಯು, ಘಟ್ಟಿಯಾಗಿ ಹೇಳುವ ಸ್ತೋಮವು.

ಉದಾಹರಣೆಯ ಋಕ್ಕು—

ಏನಾಂಗೂಷೇಣ ವಯಮಿಂದ್ರವಂತೋಽಭಿಷ್ಯಾಮ ವೃಜನೇ ಸರ್ವವೀರಾಃ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ

(ಋ. ಸಂ. ೧-೧೦೫-೧೯)

ಇದರ ಅರ್ಥವು—

ಗಟ್ಟಿಯಾಗಿ ಪಠಿಸಲು ಯೋಗ್ಯವಾದ ನಮ್ಮ ಈ ಸ್ತೋತ್ರದ ಸಹಾಯದಿಂದ ನಾವು ಅನುಗ್ರಹಕನಾದ ಇಂದ್ರನೊಡಗೂಡಿದವರಾಗಿಯೂ ವೀರರಾದ ಸಕಲ ಪುತ್ರಪೌತ್ರಾದಿ ಬಲದೊಡನೆ ಕೂಡಿದವರಾಗಿಯೂ ಸಹ ಆಗಿ ನಾವು ಯುದ್ಧದಲ್ಲಿ ಶತ್ರುಗಳನ್ನು ಜಯಿಸುವಂತಾಗಲಿ. ನಮ್ಮ ಈ ಸ್ತೋತ್ರವಾಕ್ಯನ್ನು ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ ಪೃಥ್ವಿಯೂ ಮತ್ತು ದ್ಯುಲೋಕವೂ ಪಾಲಿಸಲಿ.

**ಆಂಗೂಷೇಣ—ಆಂಗೂಷಃ ಸ್ತೋಮ ಆಘೋಷಃ** । (ನಿ. ೫–೧೧) ಗಟ್ಟಿಯಾಗಿ ಪಠಿಸಬೇಕಾದ ಸ್ತೋತ್ರಕ್ಕೆ ಆಂಗೂಷವೆಂದು ಹೆಸರು, ಎಂದು ನಿರುಕ್ತಕಾರರು ಈ ಪದದ ನಿರ್ವಚನಕಾಲದಲ್ಲಿ ಈ ಋಕ್ಕನ್ನೇ ಉದಾಹರಿಸಿದ್ದಾರೆ. ಸ್ಕಂದಸ್ವಾಮಿಗಳು **ಸೋಮ** ಮತ್ತು **ಸ್ತೋಮ** ಎಂಬ ಎರಡರ್ಥವನ್ನು ಹೇಳಬಹುದೆಂದಿದ್ದಾರೆ. ಇದಕ್ಕನುಗುಣವಾಗಿ ಉಳಿದ ಪದಗಳಿಗೂ ಎರಡರ್ಥಗಳನ್ನು ಹೇಳಬೇಕಾಗುತ್ತದೆ. ಸೋಮವೆಂದರ್ಥವಾದರೆ **ಕೂಪಂ ಪ್ರಕಲ್ಪಿತೇನ ಸೋಮೇನ** ಭಾವಿಯಲ್ಲಿ ಸಿದ್ಧಪಡಿಸಿದ ಸೋಮದಿಂದ ಎಂದೂ **ವೃಜನ** ಶಬ್ದಕ್ಕೆ **ವೃಜ್ಯತೇ ದೋಷೈಃ ಇತಿ ವೃಜನಃ ಯಜ್ಞಃ** । ಯಜ್ಞವೆಂದೂ ಅರ್ಥವಾಗಬೇಕು. ಆದರೆ **ಆಂಗೂಷ** ಶಬ್ದವು ಋಕ್ಸಂಹಿತೆಯಲ್ಲಿ ಹತ್ತಾರು ಸಲ ಬಂದಿದೆ. ಅವೆಲ್ಲಾ ಕಡೆಗಳಲ್ಲಿಯೂ ಸ್ತೋತ್ರವೆಂಬರ್ಥವೇ ಇರುತ್ತದೆ. ಆದುದರಿಂದ ಇಲ್ಲಿಯೂ ಸಹ **ವಿತ್ತಂ ಮೇ ಅಸ್ಯ ರೋದಸೀ** ಎಂದು ಮೊರೆಯಿಡುವುದರಿಂದ ಗಟ್ಟಿಯಾಗಿ ಪಠಿಸುವ ಸ್ತೋತ್ರವೆಂದೇ ಹೇಳಬೇಕು.

**ಇತಿ ದ್ವಾದಶಃ ಖಂಡಃ**

ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು

---

## ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ಅಪಾನ್ತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾನ್ ಋಜೀಷೀ । ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿನ್ದ್ರಂ ಪ್ರತಿಮಾನಾನಿ ದೇಭುಃ ॥ ಅಪಾ ತಿತಮನ್ಯುಸ್ತೃಪ್ರಹಾರೀ (ಕ್ಷಿಪ್ರಪ್ರಹಾರೀ ಸೃಪ್ರಪ್ರಹಾರೀ) ಸೋಮೋ ವೇಂದ್ರೋ ವಾ ಧುನಿರ್ಧುನೋತೇಃ ಶಿಮೀತಿ ಕರ್ಮನಾಮ ಶಮಯತೇರ್ವಾ ಶಕ್ನೋತೇರ್ವರ್ಜೀಷೀ ಸೋಮೋ ಯತ್ ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮೋಽಥಾಪ್ಯೈನ್ದ್ರೋ ನಿಗಮೋ ಭವತಿ । ಋಜೀಷೀ ವಜ್ರೀತಿ ।

ಹರ್ಯೋರ್ಧಾನಾಃ ಸ ಭಾಗೋ ಧಾನಾಶ್ಚೇತಿ ಧಾನಾಭ್ರಾಷ್ಟ್ರೇ ಹಿತಾ ಭವನ್ತಿ ಫಲೇ ಹಿತಾ ಭವನ್ತೀತಿ ವಾ । ಬಬ್ಧಾಂ ತೇ ಹರೀ ಧಾನಾ ಉಪ ಋಜೀಷಂ ಜಿಘ್ರತಾಮಿತ್ಯಪಿ ನಿಗಮೋ ಭವತ್ಯಾದಿನಾ-ಭ್ಯಾಸೇನೋಪಹಿತೇನೋಪಧಾಮಾದತ್ತೇ ಬಭಸ್ತಿರತ್ತಿಕರ್ಮಾ ಸೋಮಃ ಸರ್ವಾಣ್ಯತಸಾನಿ ವನಾನಿ ನಾರ್ವಾಗಿನ್ದ್ರಂ ಪ್ರತಿಮಾನಾನಿ ದಭ್ನು-ವನ್ತಿ ಯೈರೇನಂ ಪ್ರತಿಮಿಮತೇ ನೈನಂ ತಾನಿ ದಭ್ನುವನ್ತ್ಯ-ರ್ವಾಗೇವೈನಮಪ್ರಾಪ್ಯ ವಿನಶ್ಯನ್ತೀತೀನ್ದ್ರಪ್ರಧಾನೇತ್ಯೇಕೇ ನೈಘಂಟುಕಂ ಸೋಮಕರ್ಮೋಭಯಪ್ರಧಾನೇತ್ಯಪರಂ ಶ್ಮಶಾ ಶು ಅಶ್ನುತ ಇತಿ ವಾ ಶ್ಮಾಶ್ನುತ ಇತಿ ವಾ । ಅವ ಶ್ಮಶಾ ರುಧದ್ವಾಃ । ಅವಾರುಧಚ್ಛಮಶಾ ವಾರಿತಿ ॥

———

ಆಪಾನ್ತಮನ್ಯುಃ ॥ ೪೫ ॥

“ ಆಪಾನ್ತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಁ ಋಜೀಷೀ । ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿನ್ದ್ರಂ ಪ್ರತಿಮಾನಾನಿ ದೇಭುಃ ॥” ಆಪಾತಿತಮನ್ಯುಸ್ತೃಪ್ರಪ್ರಹಾರೀ ಕ್ಷಿಪ್ರ-ಪ್ರಹಾರೀ (ಸೃಪ್ರಪ್ರಹಾರೀ) ಸೋಮೋ ವೇನ್ದ್ರೋ ವಾ ॥

ಧುನಿರ್ಧುನೋತೇಃ ॥ ಶಿಮೀತಿ ಕರ್ಮನಾಮ ॥ ಶಮಯತೇರ್ವಾ ಶಕ್ನೋತೇರ್ವಾ ॥ ಋಜೀಷೀ ಸೋಮೋ ಯತ್ ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನ-ರ್ಜೀಷೀ ಸೋಮಃ॥ ಅಥಾಪ್ಯೈನ್ದ್ರೋ ನಿಗಮೋ ಭವತಿ–‘ಋಜೀಷೀ ವಜ್ರೀ ’ ಇತಿ॥ ಹರ್ಯೋರ್ಧಾನಾಃ ಸ ಭಾಗೋ ಧಾನಾಶ್ಚೇತಿ ॥ ಧಾನಾ ಭ್ರಾಷ್ಟ್ರೇ ಹಿತಾ ಭವನ್ತಿ ಫಲೇ ಹಿತಾ ಭವನ್ತೀತಿ ವಾ॥ ‘ ಬಬ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಮ್ ’॥ ಇತ್ಯಪಿ ನಿಗಮೋ ಭವತಿ॥ ಆದಿನಾಭ್ಯಾಸೇನೋಪಹಿತೇನೋಪಧಾಮಾದತ್ತೇ॥ ಬಭಸ್ತಿರತ್ತಿಕರ್ಮಾ । ಸೋಮಃ ಸರ್ವಾಣ್ಯತಸಾನಿ ವನಾನಿ ನಾರ್ವಾ-ಗಿನ್ದ್ರಂ ಪ್ರತಿಮಾನಾನಿ ದಭ್ನುವನ್ತಿ ಯೈರೇನಂ ಪ್ರತಿಮಿಮತೇ

ನೈನಂ ತಾನಿ ದಘ್ನುವನ್ನ್ಯರ್ವಾಗೇ ವೈನಮಪ್ರಾಪ್ಯ ವಿನಶ್ಯನ್ತೀತಿ ॥
ಇಂದ್ರಪ್ರಧಾನೇತ್ಯೇಕೇ ನೈಘಂಟುಕಂ ಸೋಮಕರ್ಮೋಭಯ-
ಪ್ರಧಾನೇತ್ಯಪರಮ್ ॥೧॥

ಉದಾಹರಣೆಯ ಋಕ್ಕು—

**ಆಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಂ ಋಜೀಷೀ ।**
**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥**
(ಋ. ಸಂ. ೧೦-೮೯-೫)

ಇದರ ಅರ್ಥವು—

ಕೋಪವನ್ನು ಪ್ರಕಟಿಸುವಂತೆ ಮಾಡುವವನೂ, ಕಲ್ಲುಗಳಿಂದ ಮರ್ದಿಸಲ್ಪಡುವವನೂ, ಶತ್ರುಗಳನ್ನು ನಡುಗಿಸುವವನೂ ಕರ್ಮವಂತನೂ, ಆಯುಧವುಳ್ಳವನೂ ಋಜೀಷಸಂಜ್ಞಕನೂ ಆದ ಸೋಮದೇವನು ಸಕಲವಾದ ಅತಸವೃಕ್ಷ ಪೂರಿತವಾದ ವನಗಳನ್ನೂ ಪುಷ್ಟವಾಗುವಂತೆ ಮಾಡುತ್ತಾನೆ. ಇಂದ್ರನನ್ನು ಪ್ರತಿಬಿಂಬಿಸುವ ಅವು ಅವನೆದುರಿಗೆ ಗರ್ವವನ್ನು ಪ್ರಕಟಿಸುವುದಿಲ್ಲ.

ಇಲ್ಲಿ **ಆಪಾಂತಮನ್ಯುಃ** ಎಂದರೆ **ಆಪಾತಿತಮನ್ಯುಃ ಆಪಾದಿತದೀಪ್ತಿಃ ಉತ್ಪಾದಿತಮನ್ಯುರ್ವಾ ಶತ್ರುಭಿಃ ಸಂಗ್ರಾಮೇ ।** ಕ್ರೋಧದಿಂದ ತಪ್ತನಾದ ಪುರುಷನು, ಕೋಪವು ಉಕ್ಕಿಬರುತ್ತಿರುವ ಪುರುಷನು, ಶತ್ರುಗಳೊಡನೆ ಯುದ್ಧ ಮಾಡುವಾಗ ಕೋಪದಿಂದ ಆವಿಷ್ಟನಾಗಿ ಶತ್ರುಗಳ ಮೇಲೆ ಮುನ್ನುಗ್ಗಿಹೋಗುವವನು ಅಥವಾ ಕ್ರೋಧದಿಂದ ಮುನ್ನುಗ್ಗುತ್ತಿರುವಾಗಲೇ ಶತ್ರುಗಳನ್ನು ಪ್ರಹರಿಸುವವನು ಎಂದರ್ಥವು. **ತೃಪಲಪ್ರಭರ್ಮಾ** ಎಂದರೆ ತೃಪ್ತಪ್ರಹಾರೀ ಕ್ಷಿಪ್ರಪ್ರಹಾರೀ **ಸೋಮೋ ವೇಂದ್ರೋ ವಾ ।** ವೇಗವಾಗಿ ಅಥವಾ ಶೀಘ್ರವಾಗಿ ಶತ್ರುಗಳನ್ನು ಪ್ರಹರಿಸುವವನು ಎಂದರ್ಥವು. ಈ ಶಬ್ದಗಳು ಸೋಮದೇವತೆಗಾಗಲಿ ಅನ್ವಯಿಸುವವು. ಇಬ್ಬರಲ್ಲಿಯೂ ಈ ವಿಧವಾದ ಶಕ್ತಿಸಾಮರ್ಥ್ಯಗಳಿವೆ. **ಧುನಿಃ** ಎಂಬ ಶಬ್ದವು ಕಂಪಿಸು, ಅಲ್ಲಾಡಿಸು ಎಂಬರ್ಥವುಳ್ಳ **ಧುನೋತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಶತ್ರುಗಳು ಭಯದಿಂದ ನಡುಗುವಂತೆ ಮಾಡುವವನು ಎಂದರ್ಥವು. **ಶಿಮಿ** ಎಂದರೆ ಕರ್ಮ, ಕೆಲಸ. **ಶಿಮೀವಾನ್** ಎಂದರೆ ಸಾಹಸಕೃತ್ಯಗಳನ್ನು ಅಥವಾ ಪರಾಕ್ರಮಯುಕ್ತವಾದ ಕಾರ್ಯವನ್ನು ಮಾಡುವವನ್ನು ಎಂದರ್ಥವು. ಅಥವಾ **ಶಿಮಿ** ಶಬ್ದವು **ಶಕ್ನೋತಿ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ **ಶಿಮೀವಾನ್** ಎಂದರೆ ಶಕ್ತಿಸಾಮರ್ಥ್ಯಗಳುಳ್ಳವನು ಎಂದರ್ಥವು. **ಶರುಮಾನ್** ಎಂದರೆ ಹಿಂಸಾವಾನ್, ಶತ್ರುಗಳನ್ನು ಹಿಂಸೆಮಾಡತಕ್ಕವನು. **ಋಜೀಷೀ** ಎಂಬ ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆದ ಮೇಲೆ ಉಳಿದಿರುವ ಸಿಪ್ಪೆಗೆ ಋಜೀಷವೆಂದು ಹೆಸರು. ಋಜೀಷವೆಂದರೆ ಉಪಯೋಗವಿಲ್ಲದ್ದರಿಂದ ಎಸೆದುಬಿಡುವ ಪದಾರ್ಥವೆಂದಭಿಪ್ರಾಯವು. ಆ ಸಿಪ್ಪೆಯಿಂದ ತೃತೀಯಸವನಕಾಲದಲ್ಲಿ ಮತ್ತೊಂದಾವರ್ತಿ ಅಲ್ಪಸ್ವಲ್ಪ ರಸವನ್ನು ಹಿಂಡಿ ತೆಗೆದು ಅದಕ್ಕೆ ಹಾಲು, ಮೊಸರು, ಹಿಟ್ಟು ಇವುಗಳಲ್ಲಿ ಯಾವುದಾದರೂ ಒಂದನ್ನು ಸೇರಿಸಿ ಪಾನಯೋಗ್ಯವಾಗುವಂತೆ (ರುಚಿಕರವಾಗುವಂತೆ) ಮಾಡುವರು. ಈ ವಿಧವಾದ ಸೋಮರಸಕ್ಕೆ ಋಜೀಷೀ ಎಂದು ಹೆಸರು. ಅಥವಾ ಈ ವಿಧವಾದ ಸೋಮರಸವನ್ನು ಪಾನಮಾಡತಕ್ಕ ಇಂದ್ರನಿಗೆ ಋಜೀಷೀ ಎಂದು ಹೆಸರು. ಈ ವಿಷಯದಲ್ಲಿ **ಋಜೀಷೀ ವಜ್ರೀ** (ಋ ಸಂ. ೫-೪೦-೪) ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು. ಈ ಋಜೀಷವನ್ನು ಧಾನ್ಯಾದಿಗಳೊಡನೆ ಸೇರಿಸಿ ಇಂದ್ರನ ಕುದುರೆಗೆ ಆಹಾರವನ್ನಾಗಿ ಉಪಯೋಗಿಸಲ್ಪಡುವುದು. **ಧಾನಾಃ**

(ಧಾನ್ಯಗಳು) ಎಂಬ ಶಬ್ದಕ್ಕೆ ಒರಳಿನಲ್ಲಿ ಕುಟ್ಟಿದ್ದು ಅಥವಾ ಹಲಗೆಗಳ ಮೇಲೆ ಇಟ್ಟಿರುವುದು ಎಂದರ್ಥವು. ಈ ಧಾನ್ಯವೂ, ಋಜೀಷವೂ ಸೇರಿ ಇಂದ್ರನ ಕುದುರೆಗಳ ಆಹಾರವಾಗುವುದು. ಈ ವಿಷಯದಲ್ಲಿ—**ಬಬ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ** ಎಂದು ಶ್ರುತಿಪ್ರಮಾಣವಿರುವುದು. ಇಲ್ಲಿ **ಬಬ್ಧಾಂ** ಎಂಬ ಶಬ್ದವು ತಿನ್ನು, ಭಕ್ಷಿಸು ಎಂಬರ್ಥವುಳ್ಳ ಬಭಸ್ತಿ ಧಾತುವಿನಿಂದ ನಿಷ್ಪನ್ನವಾಗಿದೆ. **ಬಬ್ಧಾ** ಎಂಬ ಶಬ್ದವು **ಭಸ್**–ಭಕ್ಷಿಸು ಎಂಬ ಧಾತುವಿನಲ್ಲಿರುವ ಭಕಾರವು ಅಭ್ಯಾಸದಿಂದ ಎಂದರೆ ದ್ವಿರುಕ್ತಿಯಿಂದ ಪಠಿತವಾಗಿ ಕೊನೆಯ ಅಕ್ಷರವಾದ ಸಕಾರವು ಲೋಪವಾಗಿ **ಬಬ್** ಎಂದಾಗಿ ಅದಕ್ಕೆ **ಧಾ** ಎಂಬ ಉಪಸರ್ಗವನ್ನು ಸೇರಿಸಿರುವುದರಿಂದ **ಬಬ್ಧಾಂ** ಎಂದಾಗಿದೆ.

ಇನ್ನು **ಸೋಮಃ ಸರ್ವಾಣ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ** ಎಂಬ ವಾಕ್ಯಕ್ಕೆ—ಸೋಮನು ಸಮಸ್ತ ಲತೆಗಳನ್ನೂ, ವೃಕ್ಷಗಳನ್ನೂ ತನ್ನ ಮಹಿಮೆಯಿಂದ ಮೀರಿಸಿ ಎಲ್ಲವನ್ನೂ ವ್ಯಾಪಿಸಿರುವನು. ಆದರೆ ಆ ವಿಧವಾದ ಮಹಿಮೆ ಅಥವಾ ಶಕ್ತಿಸಾಮರ್ಥ್ಯಗಳೆಲ್ಲವೂ ಇಂದ್ರನ ಮುಂದೆ ಉಪಯೋಗಕ್ಕೆ ಬರುವುದಿಲ್ಲ. ಅವೆಲ್ಲವೂ ಇಂದ್ರನ ಸಮೀಪಕ್ಕೆ ಸಹ ಬರಲಾರವು ಅಥವಾ ಸಮೀಪಿಸುವುದರೊಳಗಾಗಿ ನಾಶವನ್ನೈದುವವು. ಕೆಲವರು ಈ ಋಕ್ಕಿನಲ್ಲಿ ಇಂದ್ರನೇ ಮುಖ್ಯವಾಗಿ ಸ್ತುತಿಸಲ್ಪಟ್ಟಿರುವನೆಂದೂ, ಸೋಮದೇವತೆಯ ಪ್ರಸ್ತಾಪವು ಅಷ್ಟು ಮುಖ್ಯವಲ್ಲವೆಂದೂ ಹೇಳುವರು. ಮತ್ತೆ ಕೆಲವರು ಈ ಋಕ್ಕಿನಲ್ಲಿ ಇಂದ್ರ ಮತ್ತು ಸೋಮ ಎಂಬ ಇಬ್ಬರು ದೇವತೆಗಳೂ ಸ್ತುತಿಸಲ್ಪಟ್ಟಿರುವರೆಂದು ಹೇಳುವರು.

ಈ ಋಕ್ಕಿನಲ್ಲಿ ಮೊದಲ ಮೂರು ಪಾದಗಳೂ ಸೋಮದೇವತಾಕವಾಗಿವೆಯೆಂದೂ, ಕೊನೆಯ ಪಾದವು ಮಾತ್ರ ಇಂದ್ರನ ಪರವಾಗಿದೆಯೆಂದೂ ಕೆಲವರ ಮತವು. ಇತರ ದೇವತೆಗಳ ಮಹಿಮೆ ಮತ್ತು ಸಾಹಸಕಾರ್ಯಗಳು ಎಷ್ಟೇ ಅತಿಶಯವಾಗಿದ್ದರೂ ಅವು ಇಂದ್ರನ ಸಾಹಸಕೃತ್ಯ ಮತ್ತು ಪರಾಕ್ರಮವನ್ನು ಸರಿಗಟ್ಟಲಾರವು. ಎಲ್ಲರಿಗಿಂತಲೂ ಇಂದ್ರನು ಅತ್ಯಂತ ಮಹಿಮಾನ್ವಿತನು ಎಂದು ವರ್ಣಿಸುವುದಕ್ಕಾಗಿಯೇ ಇಲ್ಲಿ ಸೋಮದೇವತೆಯ ಶಕ್ತಿಸಾಮರ್ಥ್ಯಗಳ ವರ್ಣನೆ ಇದೆ ಎಂದು ಕೆಲವರ ಮತವು.

ಉದಾಹರಣೆಯ ಇನ್ನೊಂದು ಋಕ್ಕು—

**ಋಜೀಷೀ ವಜ್ರೀ ವೃಷಭಸ್ತುರಾಷಾಟ್‌ಚ್ಛುಷ್ಮೀ ರಾಜಾವೃತ್ರಹಾ ಸೋಮಪಾವಾ ।**
**ಯುಕ್ತ್ವಾ ಹರಿಭ್ಯಾಮುಪ ಯಾಸದರ್ವಾಙ್‌ಮಾಧ್ಯಂದಿನೇ ಸವನೇ ಮತ್ಸದಿಂದ್ರಃ ॥**

(ಋ. ಸಂ. ೮–೫೫–೧೯)

ಋಜೀಷಾತ್ಮಕವಾದ ಸೋಮವನ್ನು ಸ್ವೀಕರಿಸುವವನೂ, ವಜ್ರಾಯುಧಧಾರಿಯೂ, ವೃಷ್ಟಿಸೇಚನವನ್ನು ಮಾಡಿಸುವವನೂ, ಶತ್ರುಗಳನ್ನು ಎದುರಿಸುವ ಶಕ್ತಿಯುಳ್ಳವನೂ, ಬಲಶಾಲಿಯೂ, ಪ್ರಭುವೂ ವೃತ್ರಹಂತಕನೂ ಸೋಮರಸವನ್ನು ಪಾನಮಾಡುವವನೂ ಆದ ಇಂದ್ರನು ನಮಗಭಿಮುಖವಾಗಿ ದಯಮಾಡಲಿ. ಮಾಧ್ಯಂದಿನ ಸವನಕಾಲದಲ್ಲಿ ಸೋಮಪಾನದಿಂದ ಹರ್ಷಿತನಾಗಲಿ.

**ಋಜೀಷೀ**—ಈ ಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದ್ದಾರೆ.

**ಋಜಿಷೀ ಸೋಮೋ ಯತ್ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ**
**ಭವತಿ ತೇನರ್ಜೀಷೀ ಸೋಮಃ। ಅಥಾಪ್ಯೈಂದ್ರೋ ನಿಗಮೋ ಭವತಿ ಋಜಿಷೀ ವಜ್ರೀ ಇತಿ॥**

(ನಿ. ೫,೧೨)

ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ರಸರಹಿತವಾದ ಪದಾರ್ಥಕ್ಕೆ ಋಜೀಷವೆಂದು ಹೆಸರು. ಈ ಋಜೀಷವನ್ನು ಬೇಡವೆಂದು ಎಸೆದುಬಿಡುವರು. ಕೆಲವು ಸಂದರ್ಭದಲ್ಲಿ ಅಂತಹ ಋಜೀಷವನ್ನು ನೀರಿನಲ್ಲಿ ನೆನೆಯಿಸಿ ಇನ್ನೂ ಸ್ವಲ್ಪ ರಸವನ್ನು ಹಿಂಡಿ ತೆಗೆಯುವರು. ಅಂತಹ ಸೋಮರಸಕ್ಕೆ **ಋಜೀಷಃ ಸೋಮಃ** ಎಂದು ಹೆಸರು. ತೃತೀಯ ಸವನಕಾಲದಲ್ಲಿ ಇಂತಹ ಋಜೀಷ ಸೋಮಕ್ಕೆ ಹಿಟ್ಟು ಮೊದಲಾದ ಆಶಿರದ್ರವ್ಯಗಳನ್ನು ಮಿಶ್ರಮಾಡಿ ಇಂದ್ರನಿಗೆ ಅರ್ಪಿಸುವರು. ಈ ಋಜೀಷ ಸೋಮವನ್ನು ಇಂದ್ರನು ಪಾನಮಾಡುವುದರಿಂದ ಇಂದ್ರನನ್ನು **ಋಜೀಷೀ** ಎಂಬ ಶಬ್ದದಿಂದಲೇ ಕರೆಯುವುದು ರೂಢಿಯಾಗಿದೆ. ಇದಲ್ಲದೆ ಇಂದ್ರನ ಹರೀ ಎಂಬ ಕುದುರೆಗಳು ಈ ಋಜೀಷವೆಂಬ ಸೋಮಲತೆ ಆಳ ಸಿಪ್ಪೆಯನ್ನು ತಿನ್ನುವವು ಎಂದು ಪ್ರಸಿದ್ಧವಾಗಿದೆ. ಈ ವಿಷಯದಲ್ಲಿ ಯಾಸ್ಕರು ಉದಾಹರಣೆಗಾಗಿ— **ಬಬ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ** ಎಂಬ ಶ್ರುತಿವಾಕ್ಯವನ್ನು ಹೇಳಿದಾರೆ. ಎಲೈ ಇಂದ್ರನೆ, ನಿನ್ನ ಕುದುರೆಗಳು ಧಾನ್ಯವನ್ನು ತಿಂದು ಈ ಋಜೀಷವನ್ನು ಮೂಸಿ ನೋಡಲಿ ಎಂದು ಮೇಲಿನ ವಾಕ್ಯದ ಅರ್ಥವು.

ಋಜೀಷವೆಂದರೇನು ? ಇದಕ್ಕೆ ಈ ಹೆಸರು ಬರಲು ಕಾರಣವೇನು ? ಯಜ್ಞದಲ್ಲಿ ಇದರ ಉಪಯೋಗವೇನು ? ಇತ್ಯಾದಿ ವಿಷಯಗಳು ಐತರೇಯ ಬ್ರಾಹ್ಮಣ ಮತ್ತು ತೈತ್ತಿರೀಯ ಸಂಹಿತೆಗಳಲ್ಲಿ ಹೇಳಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸುವೆವು—

**ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತನ್**

**(ಐ. ಬ್ರಾ. ೧೩-೨೫)**

ಪೂರ್ವದಲ್ಲಿ ಸೋಮರಾಜನು (ಸೋಮಲತೆಯು ; ಗೌರವಾರ್ಥವಾಗಿ ಸೋಮಲತೆಯನ್ನು ಸೋಮರಾಜನೆಂದು ಕರೆಯುವ ರೂಢಿ ಇದೆ) ಎಂದರೆ ಸೋಮಲತೆಯು ಸ್ವರ್ಗಲೋಕದಲ್ಲಿದ್ದಿತು. ಈ ಲೋಕದಲ್ಲಿರಲಿಲ್ಲ. ಇದನ್ನು ತಿಳಿದು ದೇವತೆಗಳೂ ಋಷಿಗಳೂ ಈ ಸೋಮವನ್ನು ಇಲ್ಲಿಗೆ ತರುವ ಬಗೆ ಹೇಗೆ ಎಂದು ಆಲೋಚಿಸಿದರು. ಬಳಿಕ ಅವರು ಈ ವಿಚಾರವನ್ನು ವಿಮರ್ಶೆಮಾಡಿ ಸೋಮವನ್ನು ಸ್ವರ್ಗದಿಂದ ಭೂಮಿಗೆ ತರುವ ಶಕ್ತಿಯು ಛಂದಸ್ಸುಗಳಿಗೆ ಇರುವುದೆಂದು ತಿಳಿದು ಛಂದಸ್ಸುಗಳನ್ನು ಕುರಿತು—ಎಲೈ ಛಂದಸ್ಸುಗಳೇ, ನಮಗೋಸ್ಕರ ಎಂದರೆ ನಮ್ಮ ಯಜ್ಞಲ್ಲಿ ಉಪಯೋಗಿಸುವುದಕ್ಕೋಸ್ಕರ ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನಂಗಿಕರಿಸಿ ಛಂದಸ್ಸುಗಳು ಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಪಕ್ಷಿಗಳ ರೂಪಗಳನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋದವು. ಮೊದಲು ಜಗತೀ ಛಂದಸ್ಸು ಪಕ್ಷಿರೂಪವನ್ನು ಧರಿಸಿ ಸ್ವರ್ಗಲೋಕದ ಕಡೆಗೆ ಹಾರಿತು. ಆದರೆ ಸ್ವಲ್ಪದೂರ ಹೋಗುವುದರೊಳಗಾಗಿ ಅದಕ್ಕೆ ಆಯಾಸವಾಗಿ ಸ್ವರ್ಗದವರೆಗೂ ಹೋಗಲಾರದೆ ಹಿಂತಿರುಗಿತು. ಬಳಿಕ ತ್ರಿಷ್ಟುಪ್‌ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಅಂತರಕ್ಷಕ್ಕೆ ನೆಗೆಯಿತು. ಆದರೆ ಅರ್ಧದಾರಿಗಿಂತ ಸ್ವಲ್ಪದೂರ ಹೋಗುವುದರೊಳಗಾಗಿ ಆಯಾಸದಿಂದ ಬಳಲಿ ಹಿಂತಿರುಗಿತು. ಈ ರೀತಿ ಜಗತೀ ಮತ್ತೂ ತ್ರಿಷ್ಟುಪ್ ಛಂದಸ್ಸುಗಳು ಸೋಮವನ್ನು ತರಲು ಸಾಮರ್ಥ್ಯವಿಲ್ಲದೆ ಹಿಂತಿರುಗಿ ಬಂದದ್ದನ್ನು ದೇವತೆಗಳು ನೋಡಿ ಗಾಯತ್ರೀ ಛಂದಸ್ಸಿನ ಸಮೀಪಕ್ಕೆ ಹೋಗಿ—ಎಲೈ ಗಾಯತ್ರಿಯೇ, ನಮಗಾಗಿ ನೀನು ಸ್ವರ್ಗದಿಂದ ಸೋಮವನ್ನು ತರಬೇಕೆಂದು ಪ್ರಾರ್ಥಿಸಿದರು. ಗಾಯತ್ರಿಯು ಹಾಗೆಯೇ ಆಗಲೆಂದೊಪ್ಪಿ ಶ್ಯೇನ ಪಕ್ಷಿಯ ರೂಪವನ್ನು ಧರಿಸಿ ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿ ಸೋಮವನ್ನು ಕಾಯುತ್ತಿದ್ದ ಸ್ವಾನ, ಭ್ರಾಜ ಮೊದಲಾದ ಸೋಮಪಾಲ

ಕರನ್ನು ಹೆದರಿಸಿ ಸೋಮವನ್ನು ಅಪಹರಿಸಿಕೊಂಡು ಬಂದು ಭೂಮಿಗೆ ತಂದಿತು. ಸೋಮಲತೆಯನ್ನು ತಂದದ್ದರಿಂದ ಛಂದಸ್ಸುಗಳಲ್ಲೆಲ್ಲಾ ಗಾಯತ್ರಿಗೆ ಶ್ರೇಷ್ಠವಾದ ಸ್ಥಾನವು ಲಭಿಸಿತು.

**ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮ ಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾ-ಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀ-ರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮಗೃಭ್ಣಾತ್ತತ್ತೃತೀಯಸವನಮಭವತ್ ।**

(ಐ. ಬ್ರಾ. ೧೩-೨೬)

ಸೋಮಲತೆಗಳನ್ನು ತರುವಾಗ ಶ್ಯೇನಪಕ್ಷಿಯು ತನ್ನ ಎರಡು ಕಾಲುಗಳಿಂದಲೂ, ಕೊಕ್ಕಿನಿಂದಲೂ ಕಚ್ಚಿಕೊಂಡು ತರುತ್ತಿದ್ದಿತು. ಪಕ್ಷಿಯು ತನ್ನ ಬಲಗಾಲಿನಿಂದ ಹಿಡಿದುಕೊಂಡು ತಂದ ಸೋಮವು (ಅಥವಾ ಸೋಮ ಲತೆಯು) ಪ್ರಾತಃಸವನವಾಯಿತು. ಗಾಯತ್ರಿಯು ಅದನ್ನು ಎಂದರೆ ಪ್ರಾತಸ್ಸವನವನ್ನು ತನ್ನ ಸ್ವಕೀಯ ಸ್ಥಾನವನ್ನಾಗಿ ಮಾಡಿಕೊಂಡಿತು. ಆದ್ದರಿಂದ ಸಮಸ್ತ ಸವನಗಳಲ್ಲಿಯೂ ಪ್ರಾತಃಸವನವೇ ಸರ್ವಶ್ರೇಷ್ಠವೆಂದು ಯಾಜ್ಞಿಕರ ಅಭಿಮತವು. ಆ ಪ್ರಾತಸ್ಸವನಕರ್ಮದಲ್ಲಿ ಮಂತ್ರಾದಿಗಳ ಪ್ರಯೋಗವೂ ವಿಶೇಷವಾಗಿರುವುದು. ಆದುದರಿಂದ ಈ ವಿಷಯ ವನ್ನು ಚೆನ್ನಾಗಿ ತಿಳಿದುಕೊಂಡಿರುವ ಪುರುಷನು ತನ್ನ ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನೂ ಮುಖ್ಯನೂ ಆಗಿರುವನೆಂದು ಪರಿಗಣಿಸಲ್ಪಡುವನು. ಗಾಯತ್ರಿಯು ಎಡಗಾಲಿನಿಂದ ಹಿಡಿದುಕೊಂಡು ತಂದ ಸೋಮದ ಭಾಗವು ಮಾಧ್ಯಂದಿನಸವನೆಂದು ಪ್ರಸಿದ್ಧವಾಯಿತು. ಎಡಗಾಲಿನಿಂದ ಸೋಮಲತೆಯನ್ನು ಹಿಡಿದುಕೊಂಡು ತರುವಾಗ ಬಲಗಾಲಿಗಿರುವಷ್ಟು ಶಕ್ತಿಯು ಎಡಗಾಲಿಗಿಲ್ಲದಿರುವುದರಿಂದ ಆ ಲತೆಗಳು ಕಾಲಿನಿಂದ ಆಗಾಗ ಸ್ವಲ್ಪ ಸ್ವಲ್ಪ ಜಾರುತ್ತಿದ್ದಿತು. ಈ ಕಾರಣದಿಂದ ಈ ಮಾಧ್ಯಂದಿನಸವನವು ಪ್ರಾತಃ ಸವನದಂತೆ ಶಕ್ತಿಸಾಮರ್ಥ್ಯಗಳಲ್ಲಿ ಸರಿಸಮನಾಗಲಿಲ್ಲ. ಇದನ್ನು ಕಂಡು ದೇವತೆಗಳು ವಿಚಾರ ವಿಮರ್ಶೆಮಾಡಿ ಮಾಧ್ಯಂದಿನಸವನಕರ್ಮದಲ್ಲಿ ಉಪಯೋಗಿಸುವ ಛಂದಸ್ಸುಗಳಿಗಾಗಿ ತ್ರಿಷ್ಟುಪ್ ಛಂದಸ್ಸನ್ನೂ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನನ್ನೂ ಸ್ಥಾಪಿಸಿದರು. ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಮತ್ತು ಅವನಿಗೆ ಪ್ರಿಯವಾದ ತ್ರಿಷ್ಟುಪ್ ಛಂದಸ್ಸಿಗೂ ಸಾಹಚರ್ಯದಿಂದ ಮಾಧ್ಯಂದಿನಸವನವು ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಪ್ರಾತಸ್ಸವನಕ್ಕೆ ಸರಿ ಸಮನಾದ ಸ್ಥಾನವನ್ನು ಪಡೆಯಿತು. ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳ ಈ ವಿಧವಾದ ಸರಿಸಮಾನತೆಯನ್ನೂ, ಶಕ್ತಿಸಾಮರ್ಥ್ಯಗಳನ್ನೂ, ಶ್ರೇಷ್ಠತೆಯನ್ನೂ ತಿಳಿದಿರುವ ಪುರುಷನೂ ಧನಾದಿಗಳ ಸಮೃದ್ಧಿಯನ್ನೂ, ಶ್ರೇಯಸ್ಸನ್ನೂ ಪಡೆದು ಸುಖಿಸುವನು. ಬಳಿಕ ಶ್ಯೇನರೂಪದಿಂದಿದ್ದ ಆ ಗಾಯತ್ರಿಯು ತನ್ನ ಕೊಕ್ಕಿನಿಂದ ಕಚ್ಚಿತಂದ ಸೋಮದ ಭಾಗವು ತೃತೀಯ ಸವನವೆಂದು ಪ್ರಸಿದ್ಧವಾಯಿತು.

**ತಸ್ಯ ಪತಂತೀ ರಸಮಧಯತ್ತದ್ವೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯದಾಶಿರಮವನಯಂತ್ಯಾಜ್ಯೇನ ಪಶುನಾ ಚರಂತಿ ತೇನ**

**ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನೈಃ ಸಮಾವದ್ವೀ-ರ್ಯೈಃ ಸಮಾವಜ್ಞಾಮಿಭೀ ರಾಧ್ನೋತಿ ಯ ಏವಂ ವೇದ ॥**

(ಐ. ಬ್ರಾ. ೧೩-೨೭)

ಗಾಯತ್ರಿಯು (ಶ್ಯೇನವು) ತನ್ನ ಕೊಕ್ಕಿನಿಂದ ಸೋಮಲತೆಯನ್ನು ಕಚ್ಚಿಕೊಂಡು ಬರುತ್ತಿರುವಾಗ ಆ ಲತೆಯಲ್ಲಿದ್ದ ರಸವನ್ನು ಸ್ವಲ್ಪ ಸ್ವಲ್ಪವಾಗಿ ಹೀರಿ ಕುಡಿಯುತ್ತಿದ್ದಿತು. ಅದ್ದರಿಂದ ಎಂದರೆ ಕೊಕ್ಕಿನಿಂದ ತಂದ ಸೋಮಲತೆಗಳಲ್ಲಿ ರಸವು ಹೆಚ್ಚಾಗಿಲ್ಲದೆ ಕಮ್ಮಿಯಾಗಿದ್ದುದರಿಂದ ಈ ತೃತೀಯಸವನವು ಶಕ್ತಿಸಾಮರ್ಥ್ಯಾದಿಗಳಲ್ಲಿ ಪ್ರಾತಃಸವನ ಮಾಧ್ಯಂದಿನಸವನಗಳಿಗೆ ಸರಿಸಮನಾಗ ಲಿಲ್ಲ. ಆದ್ದರಿಂದ ಈ ವಿಷಯವನ್ನು ಕಂಡ ದೇವತೆಗಳು ವಿಚಾರಮಾಡಿ ಇದಕ್ಕೆ ತಕ್ಕ ಸಾಧನೋಪಾಯವು ಪಶುಗಳಲ್ಲಿರುವು ದೆಂದು ಕಂಡುಕೊಂಡರು. ಪಶುಗಳಲ್ಲಿ ಹಾಲು, ಅದರಿಂದ ಲಬ್ಧವಾಗುವ ಆಜ್ಯ (ತುಪ್ಪ) ಮೊದಲಾದ ಹವಿರ್ದ್ರವ್ಯಗಳು ದೊರಕುವವು. ಕ್ಷೀರವನ್ನು ಅಥವಾ ಹಾಲನ್ನು ಲತೆಗಳಲ್ಲಿ ಕಮ್ಮಿಯಾಗಿರುವ ಸೋಮರಸಕ್ಕೆ ಬೆರಸಿದರೆ ಆ ರಸವು ಶಕ್ತಿಯುತ ವಾಗುವುದು. ಆಜ್ಯದಿಂದಲೂ, ಪಶುಗಳ ಅವಯವಗಳಿಂದಲೂ ಹೋಮಾದಿಗಳನ್ನು ಮಾಡಿದರೆ ಸವನಕರ್ಮವು ಸಾಂಗವಾಗು ವುದು. ಆದುದರಿಂದ ಯಜ್ಞಕರ್ಮವನ್ನು ತಿಳಿದವರು ತೃತೀಯಸವನದಲ್ಲಿ ಉಪಯೋಗಿಸುವ ಋಜೀಷಕ್ಕೆ (ಪ್ರಾತಃಸವನ ಮಾಧ್ಯಂದಿನ ಸವನಗಳಲ್ಲಿ ರಸವನ್ನು ತೆಗೆದ ಬಳಿಕ ಉಳಿದಿರುವ ಸೋಮಲತೆಯ ಸಿಪ್ಪೆಗಳಿಗೆ ಋಜೀಷವೆಂದು ಹೇಳುವರು) ಹಾಲು ಮೊದಲಾದ ಆಶಿರದ್ರವ್ಯಗಳನ್ನು ಸೇರಿಸುವುದರಿಂದ, ಪಶುಗಳಿಂದ ಲಭಿಸತಕ್ಕ ಆಜ್ಯದಿಂದ ಮತ್ತು ಪಶುಗಳ ಹೃದಯಾದ್ಯಂಗ ಗಳಿಂದ ಹೋಮಗಳನ್ನು ಮಾಡುವುದರಿಂದಲೂ ತೃತೀಯಸವನಕರ್ಮವು ಪ್ರಾತಃಸವನಮಾಧ್ಯಂದಿನಸವನಗಳಿಗೆ ಶಕ್ತಿಸಾಮ ರ್ಥ್ಯಾದಿಗಳಲ್ಲಿ ಸರಿಸಮನಾಗುವುದು ಎಂದು ತಿಳಿದು ಅದರಂತೆ ಆಚರಿಸುವರು. ಈ ವಿಷಯದಲ್ಲಿ ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾ ತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನ-ಯತಿ ಸಶುಕ್ರತ್ವಾಯ ॥**

(ತೈ. ಸಂ. ೬-೧-೬-೪)

ಎಂದು ತೈತ್ತಿರೀಯ ಸಂಹಿತೆಯಲ್ಲಿ ಇದೇ ಅಭಿಪ್ರಾಯವು ಉಕ್ತವಾಗಿದೆ. ಈ ವಿಷಯವನ್ನು ಎಂದರೆ ಪ್ರಾತಃಸವನ ಮಾಧ್ಯಂ ದಿನಸವನ, ತೃತೀಯಸವನಗಳೆಂಬ ಮೂರು ಸವನಗಳೂ ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಸರಿಸಮನಾದ ಸ್ಥಾನವನ್ನು ಪಡೆದಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಸರ್ವಸಮೃದ್ಧಿಯುಕ್ತನಾಗಿ ಸುಖಿಸುವನು.

ಶ್ಮಶಾ ॥ ೪೬ ॥

ಶ್ಮಶಾ ಶು ಅಶ್ನುತ ಇತಿ ವಾ ಶ್ಮಾಶ್ನುತ ಇತಿ ವಾ ॥ "ಅವ ಶ್ಮಶಾ ರುಧದ್ವಾಃ" ॥ ಅವಾರುಧಚ್ಛ್ಮಶಾ ವಾರಿತಿ ॥ ೨ ॥ ೧೨ ॥

ಉದಾಹರಣೆಯ ಋಕ್ಕು—

**ಕದಾ ವಸೋ ಸ್ತೋತ್ರಂ ಹರ್ಯತ ಅವ ಶಶ್ಮಾ ರುಧದ್ವಾಃ ।**
**ದೀರ್ಘಂ ಸುತಂ ವಾತಾಪ್ಯಾಯ ॥**

(ಋ. ಸಂ. ೧೦-೧೦೫-೧)

ಇದರ ಅರ್ಥವು

ವಸತಿದಾಯಕನಾದ ಎಲೈ ಇಂದ್ರನೇ, ನಮ್ಮಿಂದ ಅರ್ಪಿತನಾದ ಸ್ತೋತ್ರವನ್ನು ಅಪೇಕ್ಷಿಸುತ್ತಿರುವ ನಿನ್ನನ್ನು ಸವನ ತ್ರಯಗಳಲ್ಲಿ ಸಿದ್ಧಪಡಿಸಿದ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ ನಮಗೆ ವೃಷ್ಟಿಪ್ರದಾನಮಾಡುವುದಕ್ಕಾಗಿಯೂ ನದಿಯ ದಡಗಳು ನೀರನ್ನು ತಡೆದು ನಿಲ್ಲಿಸುವಂತೆ ಯಾವಾಗ ನಿನ್ನನ್ನು ತಡೆದು ನಿಲ್ಲಿಸುತ್ತದೆ? ನಿಂತ ಮೇಲೆ ಯಾವಾಗ ನಿನ್ನನ್ನು ಬಿಡುಗಡೆ ಮಾಡುತ್ತದೆ.

**ಶ್ಮಾಶಿನೀ** ಅಥವಾ **ಶ್ವಾಶಿನೀ** ಎಂದರೆ ನದಿಯು. **ಶ್ವಾಶಿನೀ** ಎಂದರೆ **ಶು ಆಶುನೀ** ಶೀಘ್ರವಾಗಿ ಹರಿಯುವುದರಿಂದ ನದಿಗೆ ಶ್ವಾಶಿನೀ ಎಂಬ ಹೆಸರು ಅಥವಾ ಶ್ಮಾಶಿನೀ-ಶ್ಮಾ ಅಶಿನೀ (ತನ್ನ) ದಡವನ್ನು ಸ್ವಲ್ಪಸ್ವಲ್ಪವಾಗಿ ಕೊಚ್ಚುತ್ತಿರುವುದರಿಂದ ನದಿಗೆ ಶ್ಮಾಶಿನೀ ಎಂದೂ ಹೆಸರು. ಅದರಂತೆ ಇಲ್ಲಿ ಶ್ಮಶಾ ಎಂಬ ಶಬ್ದಕ್ಕೆ **ಶು ಅಶ್ನುತ ಇತಿ ವಾ** ವೇಗವಾಗಿ ಹರಿಯುತ್ತಿರುವ, ಅಥವಾ **ಶ್ಮಾಶ್ನುತ ಇತಿ ವಾ** ಶರೀರದಲ್ಲಿ ವ್ಯಾಪಿಸಿರುವ ನಾಡೀ ಎಂದರ್ಥವು ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ವಿವರಿಸಿರುವ ಅರ್ಥವು ಅರ್ಥವತ್ತಾಗಿಯೂ ಗ್ರಾಹ್ಯವಾಗಿಯೂ ಇರುವುದು—

**ಹೇ ವಸೋ ವಸುಮನ್ ಇಂದ್ರ । ಕದಾ ಕಸ್ಮಿನ್ಕಾಲೇ ಸ್ತೋತ್ರಂ ಏತನ್ಮಯೋದೀರಿತಂ ಅಸ್ಯ ಯಜಮಾನಸ್ಯ ಹರ್ಯತಃ ಕಾಮಯತಃ ಕಾಮಾನ್ ಪ್ರಾರ್ಥಯತಃ ತ್ವಾಂ ರುಧತ್ ಉಪರೋತ್ಸ್ಯತಿ । ಶ್ಮಶಾ ಇವ ಕುಲ್ಯೇವೋದಕಂ ವಿಸರ್ಪಮಾಣಂ ನಾಡೀವ ವಾ ಅಥವಾ ಆಧ್ಯಾತ್ಮಿಕೀ ನಾಡೀ ಶರೀರಾಶ್ರಿತಂ ರಸಂ । ಆಹ-ಕತಮುತ್ ಸ್ತೋತ್ರಂ ಪ್ರವರ್ತತೇ ವಾತಾಪ್ಯಾಯ ಉದಕಾರ್ಥಂ । ಏವಮೇತಸ್ಮಿನ್ ಶ್ಮಶಾ ಇತ್ಯೇತತ್ ನಾಡ್ಯಭಿಧಾನಂ ಕುಲ್ಯಾಭಿಧಾನಂ ವಾಃ ಶಬ್ದೋಪಪತ್ತೇಶ್ಚ ಇತಿ ॥**

(ನಿರುಕ್ತ-ದುರ್ಗಾವ್ಯಾಖ್ಯಾ-೫-೧೩)

ಈ ವ್ಯಾಖ್ಯಾನವನ್ನನುಸರಿಸಿ ಹೇಳುವ ಅರ್ಥವು ಈರೀತಿಯಾಗುತ್ತದೆ—

**ವಸೋ**—ಧನವಂತನಾದ ಎಲೈ ಇಂದ್ರನೇ, । **ಕದಾ**—ಯಾವಾಗ । **ಸ್ತೋತ್ರಂ**—ನಾನು ಅರ್ಪಿಸುವ ಸ್ತೋತ್ರವು। **ದೀರ್ಘಂ ಸುತಂ**—ದೀರ್ಘಕಾಲ ಆಚರಿಸಲ್ಪಡುವ ಸತ್ರಯಾಗಗಳಲ್ಲಿ ಹಿಂಡುವ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ । **ವಾತಾಪ್ಯಾಯ**—ವೃಷ್ಟ್ಯರ್ಥವಾಗಿಯೂ । **ಹರ್ಯತಃ**—ಇಷ್ಟಾರ್ಥಗಳನ್ನು ಬಯಸುವ ಯಜಮಾನನ ಸಮೀಪಕ್ಕೆ ಹೋಗುವ ನಿನ್ನನ್ನು । **ವಾಃ**—ನದಿಯ ನೀರನ್ನು । **ಶ್ಮಶಾ**—ದಡಗಳು ತಡೆದು ನಿಲ್ಲಿಸುವಂತೆ [ಅಥವಾ **ವಾಃ**—ದೇಹದಲ್ಲಿರುವ ರಸಗಳನ್ನು । **ಶ್ಮಶಾ**—ನಾಡಿಗಳು ತಡೆದು ನಿಲ್ಲಿಸುವಂತೆ] । (**ತ್ವಾಂ**—ನಿನ್ನನ್ನು) । **ಅ ಅವ ರುಧತ್**—ತಡೆದು ನಿಲ್ಲಿಸುವುದು ?

ಎಲೈ ಧನವಂತನಾದ ಇಂದ್ರನೇ ಅನೇಕದಿನಗಳವರೆಗೆ ಆಚರಿಸಲ್ಪಡುವ ಸತ್ರಯಾಗಗಳಲ್ಲಿ ನಿನಗಾಗಿ ಹಿಂಡಿ ಸಿದ್ಧ ಪಡಿಸಲ್ಪಟ್ಟಿರುವ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ, ವೃಷ್ಟ್ಯರ್ಥವಾಗಿಯೂ ಇಷ್ಟಾರ್ಥಗಳನ್ನು ಬಯಸುವ

ಯಜಮಾನರ ಬಳಿಗೆ ಹೋಗುತ್ತಿರುವ ನಿನ್ನನ್ನು ನಾನು ಅರ್ಪಿಸುವ ಸ್ತೋತ್ರವು. ನದಿಯ ದಡಗಳು ನದಿಯ ನೀರನ್ನೂ ತಡೆದು ನಿಲ್ಲಿಸುವಂತೆ ನಿನ್ನನ್ನು (ಬೇರೆ ಕಡೆಗೆ ಹೋಗದಂತೆ) ಯಾವಾಗ ತಡೆದು ನಿಲ್ಲಿಸುವುದು ?

**ಇತಿ ದ್ವಾದಶಃ ಖಂಡಃ**

**ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು**

---

## ಅಥ ತ್ರಯೋದಶಃ ಖಂಡಃ

### ಹದಿಮೂರನೆಯ ಖಂಡವು

ಉರ್ವಶ್ಯಪ್ಸರಾ ಉರ್ವಭ್ಯಶ್ನುತ ಊರುಭ್ಯಾಮಶ್ನುತ ಉರುರ್ವಾ ವಶೋಽಸ್ಯಾ ಅಪ್ಸರಾ ಅಪ್ಸಾರಿಣ್ಯಪಿ ವಾಽಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನೀಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿರ್ಯದಪ್ಸ ಇತ್ಯಭಕ್ಷಸ್ಯಾಪ್ಸೋ ನಾಮೇತಿ ವ್ಯಾಪಿನಸ್ತದ್ರಾ ಭವತಿ ರೂಪವತೀ ತದನಯಾತ್ತಮಿತಿ ವಾ ತದಸ್ಯೈ ದತ್ತಮಿತಿ ವಾ ತಸ್ಯಾ ದರ್ಶನಾನ್ಮಿತ್ರಾವರುಣಯೋ ರೇತಶ್ಚಸ್ಕಂದ ತದಭಿವಾದಿನ್ಯೇಷರ್ಗ್ಭವತಿ ॥ ೧ ॥

---

ಉರ್ವಶೀ ॥ ೪೭ ॥

ಉರ್ವಶ್ಯಪ್ಸರಾ ಉರ್ವಭ್ಯಶ್ನುತ ಉರುಭ್ಯಾಮಶ್ನುತ ಉರುರ್ವಾ ವಶೋಽಸ್ಯಾಃ ॥ ಅಪ್ಸರಾ ಅಪ್ಸಾರಿಣ್ಯಪಿ ವಾಽಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನೀಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ ॥ ಯದಸ್ಯ ಇತ್ಯಭಕ್ಷಸ್ಯ । ಅಪ್ಸೋ ನಾಮೇತಿ ವ್ಯಾಪಿನಃ ॥ ತದ್ರಾ ಭವತಿ ರೂಪವತೀ ತದನಯಾತ್ತಮಿತಿ ವಾ ತದಸ್ಯೈ ದತ್ತಮಿತಿ ವಾ ॥ ೧ ॥ ೧೩ ॥

**ಉರ್ವಶೀ**—ಉರ್ವಶೀ ಮತ್ತು ಅಪ್ಸರಾಃ ಎಂಬ ಶಬ್ದಗಳ ನಿಷ್ಪತ್ತಿ ವಿಚಾರದಲ್ಲಿ ಯಾಸ್ಕರು ಹೇಳಿರುವ ನಿರ್ವಚನವನ್ನು ಇಲ್ಲಿ ಉದಾಹರಿಸಲಾಗಿದೆ—

**ಉರ್ವಶೀ ಉರ್ವಶ್ಯಪ್ಸರಾ ಉರ್ವಭ್ಯಶ್ನುತ ಉರುಭ್ಯಾಮಶ್ನುತ ಉರುರ್ವಾ ವಶೋಽಸ್ಯಾಃ। ಅಪ್ಸರಾ ಅಪ್ಸಾರಿಣ್ಯಪಿ ವಾಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನಿ-ಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ। ಯದಪ್ಸ ಇತ್ಯಭಕ್ಷಸ್ಯ। ಅಪ್ಸೋ ನಾಮೇತಿ ವ್ಯಾಪಿನಃ। ತದ್ರಾಭವತಿ ರೂಪವತೀ ತನಯಾತ್ತಮಿತಿ ವಾ ತದಸ್ಮೈ ದತ್ತಮಿತಿ ವಾ। ತಸ್ಯಾದರ್ಶನಾನ್ಮಿತ್ರಾವರುಣಯೋ ರೇತಶ್ಚಸ್ಕಂದ ತದಭಿವಾದಿನ್ಯೇಷರ್ಭವತಿ**

(ನಿ. ೫-೧೩)

ಉರ್ವಶೀ ಎಂಬುವಳು ಓರ್ವ ಅಪ್ಸರಾಂಗನೆಯು. ಉರ್ವಶೀ ಎಂಬ ಹೆಸರು ಈ ಸ್ತ್ರೀಗೆ ಬರಲು ಕಾರಣವೇನೆಂದರೆ—

(೧) **ಉರ್ವಭ್ಯಶ್ನುತೇ। ಉರು ಮಹತ್ ಯಶೋಽಭಿವ್ಯಾಪ್ನೋತೀತಿ।**

ಉರು ಎಂದರೆ ಬಹಳವಾದ ಯಶಸ್ಸನ್ನು ಅಥವಾ ಕೀರ್ತಿಯನ್ನು (ಪ್ರಸಿದ್ಧಿಯನ್ನು) ಅಭ್ಯಶ್ನುತೇ ಹೊಂದಿರುತ್ತಾಳೆ. ಈ ಸ್ತ್ರೀಯು ತನ್ನ ಮಹತ್ತಾದ ಯಶಸ್ಸಿನಿಂದ (ಯಶಸ್ಸೆಂದರೆ ಇಲ್ಲಿ ರೂಪಲಾವಣ್ಯಾದಿಗಳು) ಬಹಳವಾಗಿ ಪ್ರಸಿದ್ಧಳಾಗಿರುವಳು. ಆದ್ದರಿಂದ ಇವಳಿಗೆ **ಉರ್ವಶೀ** ಎಂಬ ಹೆಸರು ಬರಲು ಕಾರಣವು.

(೨) **ಉರುಭ್ಯಾಂ ಮೈಥುನೇ ಧರ್ಮೇ ಪುರುಷಂ ಅಶ್ನುತೇ ವ್ಯಾಪ್ನೋತೀತಿ ಉರ್ವಾಶಿನೀ ಸತೀ ಉರ್ವಶೀತ್ಯುಚ್ಯತೇ।** ಊರು ಎಂದರೆ ತೊಡೆಗಳು. ಈ ಸ್ತ್ರೀಯು ಆಕರ್ಷಕವಾದ ತನ್ನ ತೊಡೆಗಳಮೂಲಕ ಸಂಭೋಗಕ್ರಿಯೆಯಲ್ಲಿ ಪುರುಷನನ್ನು ಆಲಿಂಗನಾದಿಗಳಿಂದ ವ್ಯಾಪಿಸಿ ಸಂತೋಷಪಡಿಸುವಳು. ಆದ್ದರಿಂದ ಈ ಸ್ತ್ರೀಗೆ **ಉರ್ವಾಶಿನೀ** ಅಥವಾ **ಉರ್ವಶೀ** ಎಂಬ ಹೆಸರು ಬಂದಿದೆ.

(೩) **ಅಥವಾ ಉರುಃ ಮಹಾನ್ ಅಸ್ಯಾಃ ವಶಃ ಕಾಮಃ ಸೇಯಮುರುವಶಿನೀ ಸತೀ ಉರ್ವಶೀತ್ಯುಚ್ಯತೇ। ಉರು** ಎಂದರೆ ಬಹಳವಾದ, ದೊಡ್ಡದಾದ ಎಂದರ್ಥವು. **ವಶಃ** ಎಂದರೆ ಕಾಮಾಭಿಲಾಷೆಯು ಈ ಸ್ತ್ರೀಗೆ ಅತಿಹೆಚ್ಚಾದ ಕಾಮಾಭಿಲಾಷೆ ಇರುವುದರಿಂದ ಇವಳಿಗೆ **ಉರ್ವಶಿನೀ** ಅಥವಾ **ಉರ್ವಶೀ** ಎಂಬ ಹೆಸರು ಬಂದಿದೆ ಎಂದು ಉರ್ವಶೀಶಬ್ದಕ್ಕೆ ಮೂರು ವಿಧವಾದ ನಿರ್ವಚನವನ್ನು ಹೇಳಿದ್ದಾರೆ.

ಈಗ ಅಪ್ಸರಾಃ ಎಂಬ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಇದರ ನಿರ್ವಚನವನ್ನು ಹೇಳುವರು. ಈ ಶಬ್ದವು ಈ ಋಕ್ಕಿನಲ್ಲಿ ಪಠಿತವಾಗಿಲ್ಲದಿದ್ದರೂ ಉರ್ವಶೀಶಬ್ದಕ್ಕೆ ಅರ್ಥವಿವರಣೆ ಮಾಡುವ ಸಂದರ್ಭದಲ್ಲಿ ಪ್ರಸಂಗವಶದಿಂದ ಹೇಳಬೇಕಾಗಿ ಬಂದಿದೆ. ಆದ್ದರಿಂದ ಈ ಶಬ್ದದ ನಿರ್ವಚನವನ್ನು ಇಲ್ಲಿ ಹೇಳಿದ್ದಾರೆ.

(೧) **ಅಪ್ಸರಾಃ। ಸಾ ಹಿ ಅಪ್ಸಾರಿಣೀ ಭವತಿ। ಆಪಃ ಪತತಿ ನಿತ್ಯಮೇವ ಸರತಿ। ತತ್ರಭವತ್ವಾತ್ ತದೇವಾ ತಸ್ಯಾ ಪ್ರಿಯಮುದಕಂ ತಸ್ಮಾದಪ್ಸರಾಃ** ಎಂದರೆ ಅಪ್ಸಾರಿಣೀ ಎಂದು ಅರ್ಥವು. ಅಪಃ ಎಂದರೆ ನೀರು. ನೀರಿನಮೇಲೆ ಸಂಚರಿಸುವವಳು. ಆದ್ದರಿಂದ ನೀರು ಈ ಸ್ತ್ರೀಗೆ ಅತ್ಯಂತ ಪ್ರಿಯವಾಗಿರುವುದು ಆದ್ದರಿಂದ ಅಪ್ಸರಾಃ ಎಂದು ಹೆಸರು ಬಂದಿದೆ.

(೨) **ಅಥವಾ ಅದ್ಭ್ಯಃ ಸೃತೇರಪ್ಸರಾಃ। ಅಪಿ ಚೈವಮನ್ಯಥಾ ಸ್ಯಾತ್। ಅಪ್ಸ ಇತಿ ಏತತ್ ರೂಪನಾಮ। ಅಪ್ಸಾತೇಃ ಪ್ರತಿಷೇಧಪೂರ್ವಸ್ಯ ಪ್ಸಾತೇಃ ಭಕ್ಷಣಾರ್ಥಸ್ಯ। ತದ್ಧಿ ಅಪ್ಸಾನೀಯಂ ಅವ-**

**ನೀಯಂ ಭವತಿ । ನ ಹಿ ತದ್ಭಕ್ಷ್ಯತೇ । ಕಿಂ ತರ್ಹಿ । ಆದರ್ಶನೀಯಂ ತದಾಭಿಮುಖ್ಯೇನ ಸ್ಥಿತ್ವಾ ದ್ರಷ್ಟ-ವ್ಯಮೇವ ಭವತಿ ಚಕ್ಷುಸಾ ನ ಪುನರ್ಮುಖೇನ ಭಕ್ಷಯಿತವ್ಯಮಿತ್ಯರ್ಥಃ ।** ಅಪ್ಸಃ ಎಂದರೆ ರೂಪಕ್ಕೆ ಹೆಸರು. **ಪ್ಸಾ** ಎಂಬ ಧಾತುವಿಗೆ ಭಕ್ಷಣಮಾಡು ಎಂದರ್ಥವು. ಆ ಮಾಪ್ಸಾ ಎಂದರೆ ಭಕ್ಷಣಯೋಗ್ಯವಲ್ಲದ ಎಂದರ್ಥವು. ಅದ್ದ ರಿಂದ ಈ ಸ್ತ್ರೀಯಲ್ಲಿರುವ ರೂಪವು ಭಕ್ಷಣಯೋಗ್ಯವಲ್ಲದ್ದು. ಆದರೆ ಕಣ್ಣುಗಳಿಂದ ಚೆನ್ನಾಗಿ ನೋಡುವುದಕ್ಕೆ ಅರ್ಹವಾದುದು. ಎಂದರೆ ಈ ಸ್ತ್ರೀಯ ರೂಪು ಬಹಳ ಆಕರ್ಷಕವಾಗಿರುವುದು ಎಂದಭಿಪ್ರಾಯವು.

(೩) **ವ್ಯಾಪನೀಯಂ ವಾ । ವ್ಯಾಪನಮರ್ಹತಿ । ಆಪ್ಲೃ ವ್ಯಾಪ್ತೌ ತಸ್ಯಾ ವಾ ಅಪ್ಸಃ, ತದ್ದಿನಾಯನೇನ ರಶ್ಮಿನಾ ಆತ್ಮನಃ ಪ್ರತ್ಯಯದಾನಾರ್ಥಂ ವ್ಯಾಪಯಿತವ್ಯಂ ಭವತಿ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ ॥** ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ಅಪ್ಸಃ ಎಂಬ ಶಬ್ದವು ನಿಷ್ಪನ್ನವಾಗಿ ವ್ಯಾಪಿಸಿರುವುದು ಎಂಬರ್ಥವನ್ನು ಕೊಡುವುದು, ಎಂದರೆ ಸ್ಪಷ್ಟವಾಗಿ ಎಲ್ಲರಿಗೂ ಕಾಣಿಸುವಂತೆ ರೂಪವು ವ್ಯಾಪಿಸಿ ಪ್ರತ್ಯಕ್ಷವಾಗಿ ಗೋಚರಿಸುತ್ತಿರುವುದು ಎಂದಭಿಪ್ರಾಯವು.

ಈ ಮೇಲಿನ ಅರ್ಥಭೇದಗಳೆಲ್ಲವೂ ಶಾಕಪೂಣಿಯೆಂಬ ಆಚಾರ್ಯಮತಾನುಸಾರವಾಗಿವೆ. ಇನ್ನು **ಅಪ್ಸರಾ** ಎಂಬ ಶಬ್ದಕ್ಕೆ ಇನ್ನೊಂದು ವಿಧವಾದ ಅರ್ಥವನ್ನು ಹೇಳುವರು. **ಅಪ್ಸಃ** ಎಂದರೆ ರೂಪವೆಂದು ಅರ್ಥವನ್ನು ಹಿಂದೆಯೇ ಹೇಳಿರುವು ದಷ್ಟೆ. ಈಗ **ರಾ ದಾನೇ** ಎಂಬ ಧಾತುವಿನಂತೆ ರಾ ಶಬ್ದಕ್ಕೆ ಕೊಡುವುದು ಅಥವಾ ಈ ರೂಪವು (ಸೌಂದರ್ಯವು) ಬ್ರಹ್ಮನಿಂದ ಈಕೆಗೆ ಕೊಡಲ್ಪಟ್ಟಿರುವುದರಿಂದ ಅಪ್ಸರಾ ಎಂಬ ಹೆಸರು ಬಂದಿದೆ ಎಂದೂ ಅರ್ಥವು.

ಈ ಶಬ್ದಗಳ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಯಾಸ್ಕರು ಈ ಸೂಕ್ತದ **ವಿದ್ಯುನ್ನಯಾ ಪತಂತಿ** ಎಂಬ ೧೦ ನೇ ಋಕ್ಕಿನ ನಿರ್ವಚನವನ್ನು ಹೇಳಿದ್ದಾರೆ. ಅದನ್ನು ಆ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

ಈ ಉರ್ವಶೀಶಬ್ದ ಪ್ರಯೋಗವಿರುವ ಋಕ್ಕಿನ ಉದಾಹರಣೆಗಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

> **ವಿದ್ಯುದಿವ ಯಾ ಪತಂತ್ಯದ್ಯೋತತ ಪರಂತೀ ಮೇ ಅಪ್ಯಾ ಕಾಮ್ಯಾನ್ಯುದಕಾನ್ಯಂತರಿಕ್ಷ-ಲೋಕಸ್ಯ ಯದಾ ನೂನಮಯಂ ಜಾಯೇತಾದ್ಭ್ಯೋಽಧ್ಯಪ ಇತಿ । ನರ್ಯೋ ಮನುಷ್ಯೋ ನೃಭ್ಯೋ ಹಿತೋ ನರಾಪತ್ಯಮಿತಿ ವಾ । ಸುಜಾತಃ ಸುಜಾತತರೋಽಥೋರ್ವಶೀ ಪ್ರವರ್ಧ ಯತೇ ದೀರ್ಘಮಾಯುಃ ॥**
>
> (ನಿ. ೧೧-೩೬)

ಈ ನಿರ್ವಚನಕ್ಕೆ ಎರಡುವಿಧ ಅರ್ಥವನ್ನು ಹೇಳಬಹುದು. ಒಂದು—ಪುರೂರವನೆಂದರೆ ಅಂತರಿಕ್ಷಸ್ಥವಾದ ಮಿಂಚು ಮತ್ತು ಸಿಡಿಲು (ಪುರು-ಬಹಳ, ರವ-ಶಬ್ದ) ಆದರೆ ಇಲ್ಲಿ ಪುರೂರವನೆಂದರೆ (ಸಿಡಿಲಿನ) ಶಬ್ದವೆಂದೂ ಉರ್ವಶಿ ಎಂದರೆ ಮಿಂಚೆಂದೂ ಹೇಳಿದೆ. ಅಂತರಿಕ್ಷಸ್ಥವಾದ ಮೇಘದಲ್ಲಿ ಈ ಮಿಂಚು (ಉರ್ವಶೀ) ಪುನಃ ಪುನಃ ಸಂಚಾರಮಾಡುತ್ತಾ ಎಂದರೆ ಪದೇ ಪದೇ ಪ್ರಕಾಶಿಸುತ್ತಾ ಅಂತರಿಕ್ಷಲೋಕದ ಎಲ್ಲರಿಗೂ ಬೇಕಾದ ಉದಕಗಳನ್ನು ಒದಗಿಸುವಳು, (ಹರಂತೀ) ಎಂದರೆ ಸಿಡಿಲು ಮಿಂಚು, ಇವುಗಳಿಂದ ಕೂಡಿದ ಮೇಘಮಂಡಲದಿಂದ ವೃಷ್ಟಿಯು ಸುರಿಯುವುದು. ಈ ವೃಷ್ಟಿಯ ಫಲವಾಗಿ ಜನರಿಗೆ ಹಿತಕರವಾದ ಕಾರ್ಯವು ಎಂದರೆ ಸಸ್ಯಾಭಿವೃದ್ಧಿಯು (ಅನ್ನಾದ್ಯಾಹಾರ ಸಂಪತ್ತಿಯು) ಉಂಟಾಗುವುದು. ಇಂತಹ ಉರ್ವಶಿಯು (ಸಿಡಿಲುಮಿಂಚುಗಳಿಂದ ಕೂಡಿದ ಮೇಘವು) ಜನರಿಗೆ ಅನ್ನಪ್ರದಾನಾದಿಗಳಿಂದ ಅವರ ಆಯುಸ್ಸನ್ನು ಅಭಿವೃದ್ಧಿ ಮಾಡಲಿ.

ಇನ್ನೊಂದು ವಿಧವಾದ ಅರ್ಥವು—ಇದು ಐತಿಹಾಸಿಕಪಕ್ಷವು— ಈ ಉರ್ವಶಿಯೆಂಬ ಅಪ್ಸರಸ್ತ್ರೀಯು ತನ್ನ ಸ್ವಸ್ಥಾನವಾದ ಅಂತರಿಕ್ಷ (ಸ್ವರ್ಗ) ದಿಂದ ಇಳಿದು ಬಂದು ಪುರೂರವನಾದ ನನ್ನ ಕಾಮಾಭಿಲಾಷೆಗಳನ್ನು ಪೂರೈಸುತ್ತಾ ನನ್ನ ಜೊತೆಯಲ್ಲಿದ್ದು ಪ್ರಕಾಶಿಸುತ್ತಿದ್ದಳು. ನನ್ನಿಂದ ಇವಳಲ್ಲಿ ಸತ್ಕರ್ಮನಿಷ್ಠನೂ, ಜನರಿಗೆ ಹಿತಕಾರಿಯೂ, ಉತ್ತಮ ಜನ್ಮವುಳ್ಳವನೂ ಆದ ಪುತ್ರನೊಬ್ಬನು ಜನಿಸುತ್ತಾನೆ. ಇಂತಹ ಉರ್ವಶಿಯು ನನಗೆ ಸುಖ ಸಂತೋಷಗಳನ್ನು ಒದಗಿಸಿ ಬಹುಕಾಲ ಜೀವಿಸಿರುವಂತೆ ದೀರ್ಘಾಯುಸ್ಸನ್ನು ಕೊಡಲಿ ಎಂದಭಿಪ್ರಾಯವು.

**ಅಪಃ**—ಎಂದರೆ ಉದಕಗಳು ಅಥವಾ ಕರ್ಮಗಳು.

**ನರ್ಯಃ—ಮನುಷ್ಯೋ ನೃಭ್ಯೋ ಹಿತೋ ನರಾಪತ್ಯಮಿತಿ ವಾ ||** ನರಃ ಎಂದರೆ ಮನುಷ್ಯನು. ನರ್ಯಃ ಎಂದರೆ ಮನುಷ್ಯರಿಗೆ ಹಿತಕರವಾದವನು ಅಥವಾ ನರನಿಂದ (ಮನುಷ್ಯನಿಂದ) ಉತ್ಪನ್ನನಾದವನು ಎಂದಭಿಪ್ರಾಯವು.

ತಸ್ಯಾ ದರ್ಶನಾನ್ಮಿತ್ರಾವರುಣಯೋ ರೇತಶ್ಚಸ್ಕಂದ ತದಭಿ ವಾದಿನ್ಯೇ-
ಷರ್ಗ್ಭವತಿ ||

ಈ ಉರ್ವಶೀ ಎಂಬ ಅಪ್ಸರೆಯನ್ನು ನೋಡಿದಕೂಡಲೇ ಮಿತ್ರಾವರುಣರು ಮೋಹಪರವಶರಾಗಿ ಅವರ ವೀರ್ಯವು ತಕ್ಷಣವೇ ಸ್ಖಲನವಾಯಿತು. ಈ ವಿಷಯವನ್ನು ಮುಂದಿನ ಋಕ್ಕಿನಲ್ಲಿ ವಿವರಿಸಲಾಗುತ್ತದೆ.

**ಇತಿ ತ್ರಯೋದಶಃ ಖಂಡಃ**

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು

---

## ಅಥ ಚತುರ್ದಶಃ ಖಂಡಃ

### ಹದಿನಾಲ್ಕನೆಯ ಖಂಡವು

ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿಜಾತಃ । ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದನ್ತ || ಅಪ್ಯಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿಜಾತೋ ದ್ರಪ್ಸಃ ಸಂಭೃತಃ ಪ್ಸಾನೀಯೋ ಭವತಿ ಸರ್ವೇ ದೇವಾಃ ಪುಷ್ಕರೇ ತ್ವಾಧಾರಯನ್ತ ಪುಷ್ಕರಮನ್ತರಿಕ್ಷಂ ಪೋಷತಿ ಭೂತಾನ್ಯುದಕಂ ಪುಷ್ಕರಂ ಪೂಜಾಕರಂ ಪೂಜಯಿತವ್ಯಮಿದಮಪೀತರತ್ ಪುಷ್ಕರಮೇತಸ್ಮಾದೇವ ಪುಷ್ಕರಂ ವಪುಷ್ಕರಂ ವಾ ಪುಷ್ಪಂ ಪುಷ್ಪತ್ಯೇರ್ವಯುನಂ ವೇತೇಃ ಕಾನ್ತಿರ್ವಾ ಪ್ರಜ್ಞಾ ವಾ ||

" ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿ-
ಜಾತಃ। ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇದೇವಾಃ ಪುಷ್ಕರೇ
ತ್ವಾದದನ್ತ"॥ ಅಪ್ಸಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮ-
ನ್ಮನಸೋಽಧಿಜಾತೋ ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ॥

ಉತಾಸಿ ಮೈತ್ರಾವರುಣೋ ಎಂಬ ಉದಾಹರಣೆಯ ಋಕ್ಕು—

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿ ಜಾತಃ।**
**ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇದೇವಾಃ ಪುಷ್ಕರೇ ತ್ವಾದದಂತ ॥**

(ಋ. ಸಂ. ೭-೩೩-೧೧)

ಇದರ ಅರ್ಥವು—

ಎಲೈ ವಸಿಷ್ಠನೇ, ನೀನು ಮಿತ್ರಾವರುಣರ ಪುತ್ರನಾಗಿ ಆಗಿದ್ದೀಯೆ, ಬ್ರಹ್ಮಜ್ಞಾನವುಳ್ಳ ಎಲೈ ವಸಿಷ್ಠನೇ ಅಪ್ಸರಸ್ ಸ್ತ್ರೀಯಾದ ಉರ್ವಶಿಯ ಮನಸ್ಸಂಕಲ್ಪದಿಂದ ಮಿತ್ರಾವರುಣರ ತೇಜಸ್ಸು ಸ್ಖಲಿತವಾಯಿತು. ನೀನು ಅದರಿಂದ ಉತ್ಪನ್ನನಾದೆ. ಹೀಗೆ ಉತ್ಪನ್ನನಾದ ನಿನ್ನನ್ನು ದೇವಸಂಬಧಿಯಾದ ವೇದರಾಶಿಯಿಂದ ಕೂಡಿರುವುದನ್ನು ಕಂಡು ಸಕಲ ದೇವತೆಗಳೂ ಪುಷ್ಕರಪರ್ಣದ ಮೇಲೆ ಸ್ಥಾಪಿಸಿದರು.

## ಋಗ್ವೇದದಲ್ಲಿ ಹೇಳಿರುವ ವಸಿಷ್ಠೋತ್ಪತ್ತಿಯಕ್ರಮ

ವಸಿಷ್ಠನು ದಿವ್ಯಾಂಶಸಂಭೂತನೆಂದೂ, ವೈಯುಕ್ತಿಕವಾದ ಮಾಹಾತ್ಮ್ಯವನ್ನು ಹೊಂದಿದ್ದವನೆಂದೂ, ಋಕ್ಸಂಹಿತೆ ಯಲ್ಲಿ ಅನೇಕ ಕಡೆಗಳಲ್ಲಿ ಪ್ರಶಂಸಿಸಿದೆ. ಅವನ ಉತ್ಪತ್ತಿ ಕ್ರಮವನ್ನು ಈ ರೀತಿ ತಿಳಿಸಿದೆ.

**ವಿದ್ಯುತೋ ಜ್ಯೋತಿಃ ಪರಿ ಸಂಜಿಹಾನಂ ಮಿತ್ರಾವರುಣಾ ಯದಪಶ್ಯತಾಂ ತ್ವಾ ।**
**ತತ್ತೇ ಜನ್ಮೋತೈಕಂ ವಸಿಷ್ಠಾಗಸ್ತ್ಯೋ ಯತ್ತ್ವಾ ವಿಶ ಆಜಭಾರ ॥**

(ಋ. ಸಂ. ೭-೩೩-೧೦)

ಎಲೈ ವಸಿಷ್ಠನೇ, ನೀನು ನಿನ್ನ ಆತ್ಮೀಯವಾದ ಪ್ರಭೆಯನ್ನು ಬೀರಿ ನಿನ್ನ ಪ್ರಭಾವವನ್ನು ಯಾವಾಗ ಪ್ರಕಟಿಸಿದೆಯೋ ಆಗ ನಿನ್ನನ್ನು ಮಿತ್ರಾವರುಣರು ನೋಡಿದರು. ಆ ಒಡನೆಯೇ ಪೃಥ್ವಿಯಲ್ಲಿ ನಿನ್ನ ಜನ್ಮವುಂಟಾಯಿತು. ಇದು ನಿನ್ನ ಅನೇಕ ವಿಧವಾದ ಆವಿರ್ಭಾವಗಳಲ್ಲಿ ಒಂದು ಮಾತ್ರ.

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ ಮನಸೋಽಧಿ ಜಾತಃ ।**
**ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ ॥**

(ಋ. ಸಂ. ೭-೩೩-೧೧)

ಎಲೈ ವಸಿಷ್ಠನೇ, ಉರ್ವಶಿಯ ದರ್ಶನವಾದೊಡನೆಯೇ ಸ್ಖಲಿತವಾದ ಮಿತ್ರಾವರುಣರ ರೇತಃಪ್ರಭಾವದಿಂದ ಅವಳ ಸಂಕಲ್ಪಾನುಸಾರವಾಗಿ ನೀನು ಉತ್ಪನ್ನನಾದೆ. ಆ ಒಡನೆಯೇ ಸಕಲ ದೇವತೆಗಳೂ ಸಹ ದಿವ್ಯಾಂಶಸಂಭೂತನೂ, ವೇದರಾಶಿ ಯಿಂದ ಯುಕ್ತನೂ ಆದ ನಿನ್ನನ್ನು ಪುಷ್ಕರದಲ್ಲಿ ಸ್ಥಾಪಿಸಿದರು.

ಸ ಪ್ರಕೇತ ಉಭಯಸ್ಯ ಪ್ರವಿದ್ವಾನ್ತ್ಸಹಸ್ರದಾನ ಉತ ವಾ ಸದಾನಂ ।
ಯಮೇನ ತತಂ ಪರಿಧಿಂ ವಯಿಷ್ಯನ್ನಪ್ಸರಸಃ ಪರಿ ಜಜ್ಞೇ ವಸಿಷ್ಠಃ ॥

(ಋ. ಸಂ. ೭-೩೩-೧೨)

ಈ ವಸಿಷ್ಠನೇ ದ್ಯಾವಾಪೃಥಿವಿಗಳೆರಡರ ತತ್ತ್ವಗಳನ್ನೂ ಪೂರ್ಣವಾಗಿ ಅರಿತವನಾಗಿ ಅನೇಕ ವಿಧವಾದ ದಾನಪ್ರದನಾಗಿದ್ದಾನೆ. ಅಥವಾ ಸ್ವಯಂದಾನರೂಪನಾಗಿಯೇ ಇದ್ದಾನೆ. ಸಕಲಜಗತ್ತಿಗೂ ನಿಯಂಕೃತವಾದ ಯಮನಿಂದ ವಿಸ್ತೃತವಾಗಿ ಹರಡಲ್ಪಟ್ಟ ಸಂಸಾರವೆಂಬ ವಸ್ತ್ರದಿಂದ ಆಚ್ಛಾದಿತನಾಗಿ ಉರ್ವಶಿಯ ಉದರದಲ್ಲಿ ಪೃಥ್ವಿಯ ಮೇಲೆ ಜನಿಸಿದನು.

ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।
ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥

(ಋ. ಸಂ. ೭-೩೩-೧೩)

ಯಜ್ಞದೀಕ್ಷಿತರಾದ ಮಿತ್ರಾವರುಣರು ಸ್ತುತಿಪೂರ್ವಕವಾಗಿ ಸ್ಥಾಪಿಸಿದ ಸಮಾನವಾದ ಕಲಶಪಾತ್ರೆಯಲ್ಲಿ ತಮ್ಮ ರೇತಸ್ಸನ್ನು ಸೇಚನಮಾಡಿದಾಗ ಆ ವಸತೀವರೀಸಂಜ್ಞಕವಾದ ಪಾತ್ರೆಯಿಂದ ಮಧ್ಯಭಾಗದಲ್ಲಿ ಅಗಸ್ತ್ಯನ ಉತ್ಪತ್ತಿಯೂ ಅನಂತರ ಅದೇ ಪಾತ್ರೆಯಿಂದ ವಸಿಷ್ಠನ ಉತ್ಪತ್ತಿಯೂ ಆಯಿತು.

ಉಕ್ಥಭೃತಂ ಸಾಮಭೃತಂ ಬಿಭರ್ತಿ ಗ್ರಾವಾಣಾಂ ಬಿಭ್ರತ್ಪ್ರವದಾತ್ಯಗ್ರೇ ।
ಉಪೈನಮಾಧ್ವಂ ಸುಮನಸ್ಯಮಾನಾ ಆ ವೋ ಗಚ್ಛಾತಿ ಪ್ರತೃದೋ ವಸಿಷ್ಠಃ ॥

(ಋ. ಸಂ. ೭-೩೩-೧೪)

ಎಲೈ ಪ್ರತೃತ್ಸಂಜ್ಞಕರಾದ ಯಜಮಾನರೇ, ಪೂಜ್ಯನಾದ ವಸಿಷ್ಠನು ನಿಮ್ಮಲ್ಲಿಗೆ ಬರುತ್ತಾನೆ. ಇಂತಹ ವಸಿಷ್ಠನನ್ನು ಗೌರವಿಸಿರಿ. ಈತನು ನಿಮ್ಮ ಯಜ್ಞದಲ್ಲಿ ಬ್ರಹ್ಮಸ್ಥಾನವನ್ನಾಕ್ರಮಿಸಿ ಶಸ್ತ್ರಮಂತ್ರಪಾಠಕರಿಗೂ, ಉದ್ಗಾತೃಗಳಿಗೂ, ಅಭಿಷವ ಕರ್ಮನಿರತರಿಗೂ ಮಾರ್ಗದರ್ಶಕನಾಗಿರುತ್ತಾನೆ. ಆದುದರಿಂದ ಅವನನ್ನು ಗೌರವಿಸಿ ಸನ್ಮಾನಿಸಿರಿ ಎಂಬ ಪ್ರಂಶಸಾ ವಾಕ್ಯಗಳಿರುತ್ತವೆ. ಇದೇ ವಿಷಯವನ್ನು ಬೃಹದ್ದೇವತಾಕಾರರು ಕೆಳಗೆ ಕಂಡಂತೆ ವಿವರಿಸಿದ್ದಾರೆ.

## ಬೃಹದ್ದೇವತಾಗ್ರಂಥದಲ್ಲಿ ಹೇಳಿರುವ ವಸಿಷ್ಠೋತ್ಪತ್ತಿಕ್ರಮ

ಪ್ರಾಜಾಪತ್ಯೋ ಮರೀಚಿರ್ಹಿ ಮಾರೀಚಃ ಕಶ್ಯಪೋ ಮುನಿಃ ।
ತಸ್ಯ ದೇವ್ಯೋಽಭವಜ್ಜಾಯಾ ದಾಕ್ಷಾಯಣ್ಯಸ್ತ್ರಯೋದಶ॥
ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ ।

(ಬೃ. ದೇ. ೫. ೧೪೩, ೧೪೪)

ಪ್ರಜಾಪತಿಯು ಮರೀಚಿಯೆಂಬ ಪುತ್ರನನ್ನು ಪಡೆದನು. ಮರೀಚಿಯ ಪುತ್ರನೇ ಮಹರ್ಷಿಯಾದ ಕಶ್ಯಪನು. ಈ ಕಶ್ಯಪನು ದಕ್ಷಪುತ್ರಿಯಾರಾದ ಹದಿಮೂರು ದಿವ್ಯಕನ್ಯೆಯರನ್ನು ವಿವಾಹಮಾಡಿಕೊಂಡನು. ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ ಇತ್ಯಾದಿ ನಾಮಾಂಕಿತರೇ ಆ ಕನ್ಯೆಯರು.

**ತತ್ರೈಕಾ ತ್ವದಿತಿರ್ದೇವೀ ದ್ವಾದಶಾಜನಯತ್ಸುತಾನ್ ।**
**ಭಗಶ್ಚೈವಾರ್ಯಮಾಂಶಶ್ಚ ಮಿತ್ರೋ ವರುಣ ಏವ ಚ ।**
**ಧಾತಾ ಚೈವ ವಿಧಾತಾ ಚ ವಿವಸ್ವಾಂಶ್ಚ ಮಹಾದ್ಯುತಿಃ ॥**

(ಬೃ. ದೇ. ೫. ೧೪೬, ೧೪೭)

ಈ ಪುತ್ರಿಯರಲ್ಲಿ ದೇವತಾತ್ಮಕಳಾದ ಅದಿತಿಯು ಹನ್ನೆರಡುಜನ ಪುತ್ರರನ್ನು ಹಡೆದಳು. ಭಗ, ಅರ್ಯಮ, ಅಂಶ, ಮಿತ್ರ, ವರುಣ, ಧಾತೃ, ವಿಧಾತೃ, ಮಹಾದ್ಯುತಿಯುಕ್ತನಾದ ವಿವಸ್ವಾನ್ ಮತ್ತು,

**ತ್ವಷ್ಟಾ ಪೂಷ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ।**
**ದ್ವಂದ್ವಂ ತಸ್ಯಾಸ್ತು ತಜ್ಞಜ್ಞೇ ಮಿತ್ರಶ್ಚ ವರುಣಶ್ಚ ಹ ॥**

(ಬೃ. ದೇ. ೫-೧೪೮)

ತ್ವಷ್ಟೃ, ಪೂಷ, ಇಂದ್ರ, ಮತ್ತು ವಿಷ್ಣು ಇವರೇ ಈ ಹನ್ನೆರಡುಮಂದಿ ಮಕ್ಕಳು. ವಿಷ್ಣುವೇ ಹನ್ನೆರಡನೆಯವನು. ಹೀಗೆ ಈ ಅದಿತಿಯಲ್ಲಿ ಮಿತ್ರಾವರುಣರೆಂಬ ದ್ವಂದ್ವರು (ಅವಳೀಮಕ್ಕಳು) ಉತ್ಪನ್ನರಾದರು.

**ತಯೋರಾದಿತ್ಯಯೋಸ್ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ ।**
**ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ ॥**

(ಬೃ. ದೇ. ೫-೧೪೯)

ಈ ದ್ವಾದಶಾದಿತ್ಯರಲ್ಲಿ ಮಿತ್ರಾವರುಣರಿಬ್ಬರೂ ಸಹ ಸತ್ರಾತ್ಮಕವಾದ ಯಾಗಕಾಲದಲ್ಲಿ ದಿವ್ಯಸ್ತ್ರೀಯಾದ ಉರ್ವಶಿಯನ್ನು ನೋಡಿದರು. ಅವಳನ್ನು ನೋಡಿದೊಡನೆಯೇ ಅವರಿಗೆ ರೇತಸ್ಖಲನವಾಯಿತು. ಆಗ ಅದು ವಸತೀವರೀಸಂಜ್ಞಕವಾದ ಪಾತ್ರೆಯಲ್ಲಿ ಒಟ್ಟಿಗೆ ಬಿದ್ದಿತು.

**ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।**
**ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥**

(ಬೃ. ದೇ. ೫-೧೫೦)

ಆ ವೀರ್ಯವು ಆ ಪಾತ್ರೆಯಲ್ಲಿ ಬಿದ್ದೊಡನೆಯೇ ವೀರ್ಯವಂತರೂ ತಪಸ್ವಿಗಳೂ ಆದ ಅಗಸ್ತ್ಯ ಮತ್ತು ವಸಿಷ್ಠ ಋಷಿಗಳೂ ಅದರಿಂದ ಉತ್ಪನ್ನರಾದರು. ಅವರ ಉತ್ಪತ್ತಿಕ್ರಮವೇನೆಂದರೆ,

**ಬಹುಧಾ ಪತಿತೇ ಶುಕ್ರೇ ಕಲಶೇಥ ಜಲೇ ಸ್ಥಲೇ ।**
**ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ ॥**

(ಬೃ. ದೇ. ೫-೧೫೧)

ಮಿತ್ರಾವರುಣರಿಂದ ಸ್ಖಲಿತವಾದ ಆ ವೀರ್ಯವು ಅನೇಕ ವಿಧವಾಗಿ ವಿಭಕ್ತವಾಯಿತು. ಕುಂಭದಲ್ಲಿಯೂ, ಉದಕದಲ್ಲಿಯೂ ಮತ್ತು ಪೃಥ್ವಿಯ ಮೇಲೂ ಚೆಲ್ಲಿತು. ಪೃಥ್ವಿಯ ಮೇಲೆ ಚೆಲ್ಲಿದ ಅಂಶದಿಂದ ಋಷಿಗಳಲ್ಲೆಲ್ಲಾ ಅತಿ ಶ್ರೇಷ್ಠನಾದ ವಸಿಷ್ಠ ಮಹರ್ಷಿಯು ಪೃಥ್ವಿಯ ಮೇಲೆ ಉತ್ಪನ್ನನಾದನು. (ಅಗಸ್ತ್ಯನು ಕುಂಭದಲ್ಲಿಯೂ, ಮತ್ಸ್ಯವು ಉದಕದಲ್ಲಿಯೂ ಉತ್ಪನ್ನರಾದರು.)

ದ್ರಪ್ಸಃ ಸಂಭೃತಃ ಪ್ಸಾನೀಯೋ ಭವತಿ ಸರ್ವೇ ದೇವಾಃ ಪುಷ್ಕರೇ
ತ್ವಾಧಾರಯನ್ತ ॥ ಪುಷ್ಕರಮನ್ತರಿಕ್ಷಂ ಪೋಷತಿ ಭೂತಾನ್ಯ-
ಕಮ್ । ಪುಷ್ಕರಂ ಪೂಜಾಕರಂ ಪೂಜಯಿತವ್ಯಂ ವಾ ॥
ಇದಮಪೀತರತ್ ಪುಷ್ಕರಮೇತಸ್ಮಾದೇವ ಪುಷ್ಕರಂ ವಪುಷ್ಕರಂ ವಾ ॥
ಪುಷ್ಪಂ ಪುಷ್ಪತೇಃ ॥ ೧ ॥ ೧೪ ॥

ಎಲೈ ವಸಿಷ್ಠನೇ, ನೀನು ಖಂಡಿತವಾಗಿಯೂ ಮಿತ್ರಾವರುಣರ ಪುತ್ರನೇ ಹೌದು. ಎಲೈ ಬ್ರಹ್ಮಜ್ಞಾನಿಯೇ ನೀನು ಊರ್ವಶಿಯ ಮನಸ್ಸಿನಿಂದ ಉತ್ಪನ್ನನಾಗಿದ್ದಿಯೇ. ಯಜ್ಞಭೂಮಿಯಲ್ಲಿ ಊರ್ವಶಿದರ್ಶನದಿಂದ ಮಿತ್ರಾವರುಣರಿಗೆ ಕಾಮವಿಕಾರವುಂಟಾಗಿ ವೀರ್ಯಸ್ಖಲನವಾಯಿತು. ಆ ಕಾಲದಲ್ಲಿ ಸಮಸ್ತದೇವತೆಗಳೂ ಮಿತ್ರಾವರುಣರ ಸ್ಖಲಿತವೀರ್ಯವು ಭೂಮಿಯಮೇಲೆ ಬೀಳ ಬಾರದೆಂದು ಋಗ್ಯಜುಸಾಮಾತ್ಮಕವಾದ ಮಂತ್ರಗಳಿಂದ ಸ್ತುತಿಸುತ್ತಾ ಒಂದು ಕುಂಭದಲ್ಲಿದ್ದ ನೀರಿನ ಮೇಲೆ ಅಥವಾ ಅಂತರಿಕ್ಷ ದಲ್ಲಿ ಆ ವೀರ್ಯವು ಬೀಳುವಂತೆ ಮಾಡಿದರು. ಅದರಿಂದ ವಸಿಷ್ಠಾಗಸ್ತ್ಯರ ಉತ್ಪತ್ತಿಯಾಯಿತು.

**ದ್ರಪ್ಸಃ** ಎಂದರೆ ರೇತಸ್ಸು. **ದ್ರ** ಎಂದರೆ ದ್ರವಿಸುವುದು, **ಪ್ಸಾ** ಎಂದರೆ ಭಕ್ಷಣ ಅಥವಾ ಭರಣವು. ಈ ರೇತಸ್ಸು ಅಥವಾ ವೀರ್ಯವು ಪುರುಷನ ಅಂಗದಿಂದ ದ್ರವಿಸಿ ಸ್ತ್ರೀಯ ಯೋನಿಯಿಂದ ಭಕ್ಷಿಸಲ್ಪಡುವುದು, ಎಂದರೆ ಹೀರಲ್ಪಡುವುದು ಅಥವಾ ಧರಿಸಲ್ಪಡುವುದು. ಆದ್ದರಿಂದ ರೇತಸ್ಸಿಗೆ **ದ್ರಪ್ಸಃ** ಎಂದು ಹೆಸರು ಬಂದಿದೆ.

ಪುಷ್ಕರ ಶಬ್ದಕ್ಕೆ ಅನೇಕಾರ್ಥಗಳಿರುವವು. ಪುಷ್ಕರವೆಂದರೆ ಅಂತರಿಕ್ಷವು. **ತದ್ಧಿ ಪೋಷತಿ ಭೂತಾನಿ ಪುಷ್ಣಾ-ತ್ಯವಕಾಶದಾನೇನೋಪಕುರ್ವನ್ ।** ತನ್ನಲ್ಲಿರಲು ಅವಕಾಶವನ್ನು ಕೊಟ್ಟು ಪ್ರಾಣಿಗಳನ್ನು ಪೋಷಿಸುವುದರಿಂದ ಅಂತರಿಕ್ಷಕ್ಕೆ ಪುಷ್ಕರವೆಂದು ಹೆಸರು. ಪುಷ್ಕರವೆಂದರೆ ಉದಕವೆಂದೂ ಅರ್ಥವಾಗುವುದು ಏಕೆಂದರೆ—**ತೇನ ಹಿ ಪೂಜಾ ಕ್ರಿಯತೇ ದೇವಾದಿಭ್ಯಃ ತತ್ಪೂಜಾಕಾರಕತ್ವಾತ್ ಪುಷ್ಕರಂ । ಅಥವಾ ಪೂಜಯಿತವ್ಯಂ ಪೂಜನಾರ್ಹಮಾತ್ಮನ ಏವೇತಿ ಪುಷ್ಕರಂ ।** ಈ ಉದಕಗಳಿಂದ ದೇವತೆಗಳಿಗೆ ಪೂಜಾದಿಗಳನ್ನು ಮಾಡುವರು. ಎಂದರೆ ಪೂಜಾಕರ್ಮಕ್ಕಾಗಿ ಉದಕವನ್ನು ಉಪಯೋಗಿಸುವರು. ಅಥವಾ ಈ ಉದಕವೇ ಪೂಜಾರ್ಹವಾಗಿರುವುದು. ಎಂದರೆ ಇದನ್ನೇ ಪೂಜಿಸುವರು. ಆದ್ದರಿಂದ ಉದಕಕ್ಕೆ ಪುಷ್ಕರವೆಂದು ಹೆಸರು.

ಇದಲ್ಲದೆ **ಪುಷ್ಕರಂ** ಎಂದರೆ ಪದ್ಮ (ಪುಷ್ಪ) ವೆಂಬ ಮತ್ತೊಂದು ಅರ್ಥವೂ ಇರುವುದು. ಈ ಪದ್ಮಪುಷ್ಪವನ್ನೂ ಪೂಜಾದಿಗಳಿಗೆ ಉಪಯೋಗಿಸುವರು. ಮತ್ತು ಪುಷ್ಕರವೆಂದರೆ **ವಪುಷ್ಕರಂ**—ಶರೀರವನ್ನು ಈ ಪುಷ್ಪದಿಂದ ಅಲಂಕರಿಸುವುದ ಕ್ಕಾಗಿಯೂ ಉಪಯೋಗಿಸುವರು. ಈ ಕಾರಣಗಳಿಂದ ಪದ್ಮಪುಷ್ಪಕ್ಕೆ ಪುಷ್ಕರವೆಂದು ಹೆಸರು.

ಪ್ರಸಂಗವಶದಿಂದ ಪುಷ್ಪಶಬ್ದಕ್ಕೂ ವ್ಯುತ್ಪತ್ತಿಯನ್ನು ಹೇಳಿರುವರು. **ಪುಷ್ಪಂ ಪುಷ್ಪಂತೇ । ಪುಷ್ಪತಿಃ ವಿಕಸನಾರ್ಥ** ಪುಷ್ಪವೆಂದರೆ ಹೂವು. ವಿಕಸಿತವಾಗಿ ಎಂದರೆ ಮೊಗ್ಗಾಗಿರುವುದು ಚೆನ್ನಾಗಿ ಅರಳಿ ಸುವಾಸನೆ ಬೀರುವುದು. ಆದ್ದರಿಂದ ಹೂವಿಗೆ ಪುಷ್ಪವೆಂದು ಹೆಸರು.

ವಯುನಮ್ ॥೪೮॥

ವಯುನಂ ವೇತೇಃ ಕಾನ್ತಿರ್ವಾ ಪ್ರಜ್ಞಾ ವಾ ॥

**ವಯುನಂ** ಎಂಬ ಶಬ್ದಕ್ಕೆ ಅನೇಕಾರ್ಥಗಳಿರುವವು. ಈ ಶಬ್ದವು **ವೇತಿ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. **ವಯುನಂ** ಎಂಬ ಶಬ್ದಕ್ಕೆ ಕಾಂತಿ ಅಥವಾ ಪ್ರಜ್ಞೆಯೆಂದು ಅರ್ಥವು.

ಉದಾಹರಣೆಯ ಋಕ್ಕು—

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನ ವಚ್ಚಕಾರ।**
**ಕದಾ ತೇ ಮರ್ತಾ ಅಮೃತಸ್ಯ ಧಾಮೇಯಕ್ಷಂತೋ ನ ಮಿನಂತಿ ಸ್ವಧಾವಃ ॥**

(ಋ. ಸಂ. ೬-೨೧-೩)

ಇದರ ಅರ್ಥವು—

ಪ್ರಸಿದ್ಧವಾದ ಇಂದ್ರನು ಪ್ರಕಾಶರಹಿತವಾದುದೂ ವೃತ್ರನಿಂದ ವಿಸ್ತೃತವಾದುದೂ ಆದ ಅಂಧಕಾರವನ್ನು ಸೂರ್ಯನಿಂದ ಪ್ರಕಾಶಿತವಾಗುವಂತೆ ಮಾಡಿದನು. ಶಕ್ತಿಯುತನಾದ ಎಲೈ ಇಂದ್ರನೇ, ಮಾನವರು ಮರಣರಹಿತವಾದ ನಿನ್ನ ಸ್ವರ್ಗದಲ್ಲಿರುವ ದೇವತೆಗಳನ್ನು ಪೂಜಿಸಲಿಚ್ಛಿಸಿ ಯಾವಾಗಲೂ ಯಾವ ಪ್ರಾಣಿಯನ್ನೂ ಹಿಂಸಿಸುವುದಿಲ್ಲ.

**ಇತಿ ಚತುರ್ದಶಃ ಖಂಡಃ**

**ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು**

---

## ॥ ಅಥ ಪಂಚದಶಃ ಖಂಡಃ ॥

### ಹದಿನೈದನೆಯ ಖಂಡವು

ಸ ಇತ್ತಮೋಽವಯುನಂ ತತನ್ವತ್ ಸೂರ್ಯೇಣ ವಯುನವಚ್ಚಕಾರ। ಸ ತಮೋಽಪ್ರಜ್ಞಾನಂ ತತನ್ವತ್ ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ ವಾಜಪಸ್ತ್ಯಂ ವಾಜಪತನಮ್। ಸನೇಮ ವಾಜಪಸ್ತ್ಯಮಿತ್ಯಪಿ ನಿಗಮೋ ಭವತಿ। ವಾಜಗಂಧ್ಯ ಗಧ್ಯತ್ಯುತ್ತರ-ಪದಮ್। ಅಶ್ಯಾಮವಾಜಗಂಧ್ಯಮಿತ್ಯಪಿ ನಿಗಮೋ ಭವತಿ। ಗಧ್ಯಂ ಗೃಹ್ಣಾತೇಃ। ಋಜ್ರಾ ವಾಜಂ ನ ಗಧ್ಯಂ ಯುಯೂಷನ್ನಿತ್ಯಪಿ ನಿಗಮೋ ಭವತಿ। ಗಧ್ಯತಿರ್ಮಿಶ್ರೀಭಾವಕರ್ಮಾ। ಆಗಧಿತಾ ಪರಿ-ಗಧಿತೇತ್ಯಪಿ ನಿಗಮೋ ಭವತಿ। ಕೌರಯಾಣಃ ಕೃತಯಾನಃ ಪಾಕ-ಸ್ಥಾಮಾ ಕೌರಯಾಣ ಇತ್ಯಪಿ ನಿಗಮೋ ಭವತಿ। ಕೌರಯಾಣ-ಸ್ತೂರ್ಣಯಾನಃ। ಸ ಕೌರಯಾಣ ಉಪ ಯಾಹಿ ಯಜ್ಞಂ ಮರು-ದ್ಭಿರಿನ್ದ್ರ ಸಖಿಭಿಃ ಸಜೋಷಾ ಇತ್ಯಪಿ ನಿಗಮೋ ಭವತ್ಯಹ್ರಯಾಣೋ ಹ್ರೀತಯಾನಃ। ಅನುಷ್ಟುಯಾ ಕೃಣುಧ್ಯಹ್ರಯಾಣೇತ್ಯಪಿ ನಿಗಮೋ

ಭವತಿ। ಹರಯಾಣೋ ಹರಮಾಣಯಾನಃ। ರಜತಂ ಹರಯಾಣ ಇತ್ಯಪಿ ನಿಗಮೋ ಭವತಿ। ಯ ಆರಿತಃ ಕರ್ಮಣಿ ಕರ್ಮಣಿ ಸ್ಥಿರಃ। ಪ್ರತ್ಯೃತ ಸೋಮಾನ್ ವೃನ್ದೀ ವೃನ್ದತೇರ್ಮೃದೂಭಾವ-ಕರ್ಮಣಃ ॥

---

" ಸ ಇತ್ತಮೋ ವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ"। ಸ ತಮೋಽಪ್ರಜ್ಞಾನಂ ತತನ್ವತ್ ಸೂತಂ ಸೂರ್ಯೇಣ ಪ್ರಜ್ಞಾನ-ವಚ್ಚಕಾರ ॥೧॥

**ಸ ಇತ್ ಅವಯುನಂ ತತನ್ವತ್ ತಮಃ ಸೂರ್ಯೇಣ ವಯುನವತ್ ಚಕಾರ**—ಇಂದ್ರನು ಪ್ರಕಾಶರಹಿತ ವಾದುದೂ ವೃತ್ರನಿಂದ ಆಚ್ಛಾದಿತವಾದುದೂ ಆದ ತಮಸ್ಸನ್ನು ಎಂದರೆ ಅಂಧಕಾರವನ್ನು ಸೂರ್ಯನ ಮೂಲಕ ಪ್ರಕಾಶ ವಾಗುವಂತೆ ಮಾಡಿದನು. ಈ ವಿಷಯದಲ್ಲಿ **ವಯುನವತ್** ಎಂಬ ಶಬ್ದಕ್ಕೆ ಯಾಸ್ಕರು—

**ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ। ಸ ಇತ್ತಮೋಽವಯುನಂ ತತನ್ವತ್ಸೂ-ರ್ಯೇಣ ವಯುನವಚ್ಚಕಾರ। ತಮೋಽಪ್ರಜ್ಞಾನಂ ತತನ್ವತ್ ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ ॥**

ಎಂಬ ಮೇಲಿನ ನಿರ್ವಚನವನ್ನು ಹೇಳಿ ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದೆ. **ಸ ಇತ್ತಮೋಽವಯುನಂ** ಎಂಬ ಋಕ್ಕನ್ನು ಇದರ ಅರ್ಥವನ್ನು ಹಿಂದೆಯೇ ವಿವರಿಸಲಾಗಿದೆ. ವಯುನಶಬ್ದವು ವಿ ಧಾತುವಿನಿಂದ ನಿಷ್ಪನ್ನವಾಗಿ ಕಾಂತಿ (ಪ್ರಕಾಶ) ಅಥವಾ ಪ್ರಜ್ಞೆ ಎಂಬರ್ಥವನ್ನು ಕೊಡುವುದು. ಪ್ರಕೃತ ಋಕ್ಕಿನಲ್ಲಿ ಸೂರ್ಯನು ಅಂಧಕಾರಾವೃತನಾಗಿದ್ದುದರಿಂದ ಎಲ್ಲೆಲ್ಲಿಯೂ ಕತ್ತಲೆಯು ಆವರಿಸಿತ್ತು. ಆಗ ಪ್ರಕಾಶ ಅಥವಾ ಬೆಳಕಿಲ್ಲದ್ದರಿಂದ ಯಾವ ವಸ್ತುವನ್ನೂ ನೋಡಲು ಅಥವಾ ನೋಡಿ ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಈ ಸ್ಥಿತಿಯಲ್ಲಿ ಇಂದ್ರನು ಎಲ್ಲೆಲ್ಲಿಯೂ ಆವರಿಸಿದ್ದ ಅಂಧಕಾರವನ್ನು ಸೂರ್ಯನ ಬೆಳಕಿನಿಂದ ಹೋಗಲಾಡಿಸಿ ಸಮಸ್ತ ವಸ್ತುಗಳೂ ಪ್ರಕಾಶದಿಂದ ಕಾಣುವಂತೆ ಮಾಡಿದನು ಮತ್ತು ಅವುಗಳನ್ನು ಜನರು ಪ್ರಜ್ಞೆ ಯಿಂದ ತಿಳಿಯುವಂತಾಯಿತು ಎಂದು ಮುಖ್ಯಾಭಿಪ್ರಾಯವು.

ವಾಜಪಸ್ತ್ಯಮ್ ॥೪೯॥

ವಾಜಪಸ್ತ್ಯಂ ವಾಜಪತನಮ್। "ಸನೇಮ ವಾಜಪಸ್ತ್ಯಮ್" ಇತ್ಯಪಿ ನಿಗಮೋ ಭವತಿ ॥೨॥

**ವಾಜಪಸ್ತ್ಯಂ** ಎಂದರೆ ಸೋಮವು. ನಾವು ಸೋಮವನ್ನು ಹೊಂದೋಣ ಎಂದು ವಾಕ್ಯದ ಅಭಿಪ್ರಾಯವು.

ಉದಾಹರಣೆಯ ಋಕ್ಕು—

**ತಂ ಸಖಾಯಃ ಪುರೋರುಚಂ ಯೂಯಂ ಚ ಸೂರಯಃ।**
**ಅಶ್ಯಾಮ ವಾಜಗಂಧ್ಯಂ ಸನೇಮ ವಾಜಪಸ್ತ್ಯಂ ॥**

ಇದರ ಅರ್ಥವು—

ಮಿತ್ರಭೂತರಾದ ಎಲೈ ಸ್ತುತಿಕರ್ತರೇ, ಪ್ರಾಜ್ಞರಾದ ನೀವೂ ಯಜಮಾನರಾದ ನಾವೂ ಅಧಿಕವಾಗಿ ಪ್ರಕಾಶಿಸುವುದೂ ಶಕ್ತ್ಯುತ್ಪಾದಕವಾದ ಸುಗಂಧವುಳ್ಳದ್ದೂ ಆದ ಸೋಮವನ್ನು ಪಾನಮಾಡೋಣ, ಅನ್ನಯುಕ್ತವಾದ ಗೃಹವನ್ನೂ ಹೊಂದೋಣ.

ವಾಜಗನ್ಧ್ಯಮ್ ॥ ೫ ॥

ವಾಜಗನ್ಧ್ಯಂ ಗಧ್ಯತ್ಯುತ್ತರಪದಮ್ । "ಅಶ್ಯಾಮ ವಾಜಗನ್ಧ್ಯಮ್"
ಇತ್ಯಪಿ ನಿಗಮೋ ಭವತಿ ॥ ೩ ॥

**ವಾಜಗಂಧ್ಯಂ** ಎಂಬ ಪದವೂ **ವಾಜಪಸ್ತ್ಯಂ** ಎಂಬ ಪದದ ಮುಂದಿರುವುದು. ಇದಕ್ಕೂ ಅದೇರ್ಥವು ಮತ್ತು ಮತ್ತು ಅದೇ ಋಕ್ಕಿನಲ್ಲಿ ಇದನ್ನೂ ವಿವರಿಸಲಾಗಿದೆ.

ಗಧ್ಯಮ್ ॥ ೫ ॥

ಗಧ್ಯಂ ಗೃಹ್ಣಾತೇಃ । " ಋಜ್ರಾವಾಜಂ ನ ಗಧ್ಯಂ ಯುಯೂಷನ್ "
ಇತ್ಯಪಿ ನಿಗಮೋ ಭವತಿ ॥೪॥

**ವಾಜಪಸ್ತ್ಯಂ** ಎಂದರೆ ಸೋಮವೆಂದು ಹಿಂದೆಯೇ ಹೇಳಿದೆಯಷ್ಟೆ. **ಗಧ್ಯಂ** ಎಂಬ ಶಬ್ದಕ್ಕೂ ಇದೇ ಅರ್ಥವು. ಇವೆರಡೂ ಪರ್ಯಾಯ ಶಬ್ದಗಳು ಗಧ್ಯಂ ಎಂದರೆ **ಗೃಹಣೀಯಂ** ಈ ಶಬ್ದವು ಗ್ರಹ್ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

**ಯಾಸಿ ಕುತ್ಸೇನ ಸರಥಮವಸ್ಯುಸ್ತೋದೋ ವಾತಸ್ಯ ಹರ್ಯೋರೀಶಾನಃ ।**
**ಋಜ್ರಾ ವಾಜಂ ನ ಗಧ್ಯಂ ಯುಯೂಷನ್ಕವಿರ್ಯದಹನ್ಪಾರ್ಯಾಯ ಭೂಷಾತ್ ॥**

ಇದರ ಅರ್ಥವು—

ಎಲೈ ಇಂದ್ರನೇ, ಕುತ್ಸನನ್ನು ರಕ್ಷಿಸಬೇಕೆಂದಿಚ್ಛಿಸಿ ಶತ್ರುಹಿಂಸಕನೂ ವಾಯುವಿನ ಗತಿಗೆ ಸಮಾನವಾದ ವೇಗವುಳ್ಳ ಅಶ್ವಗಳಿಗೆ ಒಡೆಯನೂ ಆದ ನೀನು ಕುತ್ಸನೊಡನೆ ಒಂದೇ ರಥವಲ್ಲಿ ಕುಳಿತುಕೊಂಡು ಯಾವ ದಿನ ಹೋಗುತ್ತೀಯೋ ಅದೇ ದಿನ ಕುತ್ಸನೂ ಸಹ ಗ್ರಾಹ್ಯವಾದ ಅನ್ನವನ್ನು ಪಡೆಯಲು ವೇಗವಾಗಿ ಹೋಗುವಂತೆ ಓಡುವವೂ ಋಜುಗಾಮಿಗಳೂ ಆದ ಅಶ್ವಗಳನ್ನು ತನ್ನ ರಥಕ್ಕೆ ಯೋಜಿಸಿ ಆಳವಾದ ನೀರನ್ನು ದಾಟಲು ಶಕ್ತನಾಗುತ್ತಾನೆ.

ಗಧಿತಾ ॥೫೨॥

ಗಧ್ಯತಿರ್ಮಿಶ್ರೀಭಾವಕರ್ಮಾ ॥ " ಆಗಧಿತಾ ಪರಿ ಗಧಿತಾ " ಇತ್ಯಪಿ
ನಿಗಮೋ ಭವತಿ ॥ ೫ ॥

ಗಥಿತಾ ಅಥವಾ ಆಗಥಿತಾ ಎಂದರೆ (ಗಧ್ಯತಿ) **ಆಗೃಹಿತಾ** ಅಥವಾ **ಆ ಮಿಶ್ರಿತಾ ಚ** ಮಿಶ್ರಮಾಡುವುದು ಎಂದರ್ಥ ಬೆರಸುವುದು.

ಉದಾಹರಣೆಯ ಋಕ್ಕು—

**ಆಗಧಿತಾ ಪರಿಗಧಿತಾ ಯಾ ಕಶೀಕೇವ ಜಂಗಹೇ ।**
**ದದಾತಿ ಮಹ್ಯಂ ಯಾದುರೀ ಯಾಶೂನಾಂ ಭೋಜ್ಯಾ ಶತಾ ॥**

(ಋ. ಸಂ. ೧-೧೨೬-೬)

ಇದರ ಅರ್ಥವು—

ಸಂಭೋಗಯೋಗ್ಯಳಾದ ರೋಮಶೆಯು ಸ್ವೀಕೃತಳಾಗಿ ಹೆಣ್ಣು ನಕುಲಿಯಂತೆ ದೃಢವಾಗಿ ಆಲಂಗಿಸುತ್ತಾಳೆ ಮತ್ತು ಪ್ರಭೂತರೇತಸ್ಕಳಾಗಿ ನನಗೆ ಅಮಿತವಾದ ಸಂಭೋಗಸುಖವನ್ನು ಕೊಡುತ್ತಾಳೆ.

ಈ ಋಕ್ಕೂ ಮುಂದಿನ ಋಕ್ಕೂ ಭಾವಯವ್ಯನಿಗೂ ಅವನ ಪತ್ನಿಯಾದ ರೋಮಶಾ ಎಂಬುವಳಿಗೂ ನಡೆದ ಸಂಭಾಷಣೆಯು. ಈ ರೋಮಶಾ ಎಂಬುವಳು ಬೃಹಸ್ಪತಿಯ ಪುತ್ರಿಯು. ಒಂದಾನೊಂದು ಕಾಲದಲ್ಲಿ ಈ ರೋಮಶೆಯು ಸಂಭೋಗೇಚ್ಛೆಯಿಂದ ತನ್ನ ಪತಿಯಾದ ಭಾವಯವ್ಯನ ಬಳಿಗೆ ಹೋಗಿ ತನ್ನ ಕಾಮವನ್ನು ತೃಪ್ತಿ ಪಡಿಸಬೇಕೆಂದು ಕೇಳಲು ಅದಕ್ಕೆ ಪ್ರತ್ಯುತ್ತರವಾಗಿ ಭಾವಯವ್ಯನು ಈ ಋಕ್ಕನ್ನು ಹೇಳಿರುವನು. ಈ ಎರಡು ಋಕ್ಕುಗಳಲ್ಲಿಯೂ ಸಂಭೋಗ ಸಂಬಂಧ ವಾದ ಸಂಭಾಷಣೆಯಲ್ಲದೆ ಸೂಕ್ತಗಳಲ್ಲಿಯೂ, ಋಕ್ಕುಗಳಲ್ಲಿಯೂ ಸಾಧಾರಣವಾಗಿ ಇರಬೇಕಾದ ದೇವತಾಸ್ತುತಿ ಮೊದಲಾದ ವಿಷಯಗಳಿರುವುದಿಲ್ಲ. ಈ ಋಕ್ಕುಗಳಲ್ಲಿರುವ ಸಂಭೋಗಸಂಬಂಧವಾದ ಸಂಭಾಷಣೆಯು ಅಶ್ಲೀಲವೆಂದೂ ಇದು ಈ ಸೂಕ್ತದ ವಿಷಯಕ್ಕೆ ಸಂಬಂಧಪಟ್ಟಿಲ್ಲವಾದ್ದರಿಂದ ಇದು ಹೇಗೆ ಇಲ್ಲಿ ಸೇರಿಹೋಯಿತೆಂದೂ ಕೆಲವರು ಸಂಶಯಪಡುತ್ತಾರೆ. ಇದಲ್ಲದೆ ಈ ಸೂಕ್ತದಲ್ಲಿರುವ ೭ ಋಕ್ಕುಗಳಲ್ಲಿ ಮೊದಲಿನ ೫ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಈ ಎರಡು ಋಕ್ಕುಗಳು ಮಾತ್ರ ಅನುಷ್ಟುಪ್ ಛಂದಸ್ಸಿನವು. ಆದ್ದರಿಂದ ಇವು ಈ ಸೂಕ್ತದ ಭಾಗವಲ್ಲ. ಏನೋ ಕಾರಣಾಂತರದಿಂದ ಇಲ್ಲಿ ಸೇರಿಹೋಗಿದೆ. ವೇದಕ್ಕೆ ಸಂಬಂಧಪಡದ ಗೃಹಕೃತ್ಯದ ವಿಷಯಗಳು ಋಕ್ಕಿನ ರೂಪದಲ್ಲಿ ರಚಿಸಲ್ಪಟ್ಟು ಇಲ್ಲಿ ಸೇರಿಹೋಗಿರುವುದು ಎಲ್ಲರಿಗೂ ಆಶ್ಚರ್ಯವೇ ಆಗಿರುವುದು.

ಈ ಋಕ್ಕಿನ ಮತ್ತು ಮುಂದಿನ ಋಕ್ಕಿನ ಮುಖ್ಯಾಭಿಪ್ರಾಯಗಳನ್ನು ಈ ರೀತಿ ಹೇಳಬಹುದು. ಭಾವಯವ್ಯನೂ ಅವನ ಪತ್ನಿಯಾದ ರೋಮಶೆಯೂ ಸರಸಸಲ್ಲಾಪಮಾಡುತ್ತಿರುವಾಗ ಭಾವಯವ್ಯನು ವ್ಯಂಗ್ಯವಾಗಿ ಮಾತನಾಡುತ್ತಾ ಈ ರೀತಿ ಹೇಳುವನು—

**ಭಾವಯವ್ಯ**—(ತನ್ನ ಪತ್ನಿಯಾದ ರೋಮಶೆಯನ್ನು ಪರಿಹಾಸ್ಯಮಾಡುತ್ತಾ) ಓಹೋ, ಈ ರೋಮಶೆಯು, ಹೆಣ್ಣು ಮುಂಗಸಿಯು ತನ್ನ ಪ್ರಿಯನಾದ ಗಂಡು ಮುಂಗಸಿಯನ್ನು ಯಾವಾಗಲೂ (ಭೋಗಾರ್ಥವಾಗಿ) ಅಪ್ಪಿಕೊಂಡು ಬಿಡದಿರುವಂತೆ ನನ್ನನ್ನು ನೂರಾರು ಸಲ ಆಲಿಂಗಿಸಲು ಇಚ್ಛಿಸುತ್ತಿರುವಳು. ಇವಳ ಶರೀರವು ರೇತಸ್ಸಿನಿಂದಲೂ (ಅಥವಾ ಬೆವರಿನಿಂದಲೂ) ತೋಯ್ದಿರುವುದು.

**ರೋಮಶಾ**—ಎಲೈ ಪತಿಯೇ, ನಾನು ವಯಸ್ಸಿನಲ್ಲಿ ಚಿಕ್ಕವಳೆಂದೂ ಸಂಭೋಗಾರ್ಹಳಲ್ಲವೆಂದೂ ಹಾಸ್ಯ ಮಾಡಬೇಡ. ನನ್ನ ಸಮೀಪಕ್ಕೆ (ಸಂಭೋಗಾರ್ಥವಾಗಿ) ಬಾ ಮತ್ತು ನನ್ನ ಅವಯವಗಳನ್ನು ಚೆನ್ನಾಗಿ ಅಪ್ಪಿ ಆಲಿಂಗಿಸೆ

ಮಾಡು. ನನ್ನ ಅಂಗಗಳು ಇನ್ನೂ ಚೆನ್ನಾಗಿ ಬಲಿತು ಪುಷ್ಟಿಯಾಗಿಲ್ಲವೆಂದೂ ಆದುದರಿಂದ ಸಂಭೋಗಾರ್ಹಳಲ್ಲವೆಂದೂ ಭಾವಿಸಬೇಡ. ಏಕೆಂದರೆ, ನನ್ನ ಯೋನಿಯೇ ಮುಂತಾದ ಅವಯವಗಳು ಗಾಂಧಾರದೇಶದ ಮೇಕೆಯ ಶರೀರದಂತೆ ಚೆನ್ನಾಗಿ ಬೆಳೆದಿರುವ ಕೂದಲುಗಳಿಂದ (ರೋಮಗಳಿಂದ) ನಿಬಿಡವಾಗಿದೆ.

ಇಲ್ಲಿ ಮುಖ್ಯವಿಷಯವೇನೆಂದರೆ—ರೋಮಶೆಯು ಕಾಮೇಚ್ಛೆಯಿಂದ ಪತಿಯನ್ನು ಪ್ರಾರ್ಥಿಸಿದಾಗ ಭಾವಯವ್ಯನು ತನ್ನ ಪತ್ನಿಯು ವಯಸ್ಸಿನಲ್ಲಿ ಚಿಕ್ಕವಳೆಂದೂ ಸಂಭೋಗಾರ್ಹಳಲ್ಲವೆಂದೂ ಅವಳನ್ನು ಹಾಸ್ಯಮಾಡಿದನು. ಅದಕ್ಕೆ ಪ್ರತ್ಯುತ್ತರವಾಗಿ ರೋಮಶೆಯು ತಾನು ಬಾಲಿಕೆಯಲ್ಲವೆಂದೂ ಸಂಭೋಗಕ್ಕೆ ಅರ್ಹಳಾದ ಪ್ರೌಢಸ್ತ್ರೀಯೆಂದೂ ಹೇಳಿ ಅದನ್ನು ದೃಢಪಡಿಸುವುದಕ್ಕಾಗಿ ಒಂದು ದೃಷ್ಟಾಂತರ ಹೇಳಿರುವಳು. ಪುರುಷರ ಯೌವನದೆಶೆಯಲ್ಲಿ ಕರಚರಣಾದ್ಯಂಗಗಳು ರೋಮಗಳಿಂದ ನಿಬಿಡವಾಗಿರುವುದು ಸಹಜವಾಗಿಯೂ, ಅವರು ಬಾಲ್ಯ ವಯಸ್ಸ ದಾಟಿ ಯೌವನವಸ್ಥೆಯಲ್ಲಿರುವರೆಂಬುದನ್ನು ಸೂಚಿಸುವುದಾಗಿಯೂ ಇರುವುದು. ಆದರೆ ಸ್ತ್ರೀಯರು ಯೌವನದೆಶೆಯಲ್ಲಿರುವಾಗ ಆರೀತಿ ಕರಚರಣಾದಿಗಳಲ್ಲಿ ರೋಮಗಳಿರುವುದು ಅಪರೂಪ. ಅಸಂಭವವೆಂದೇ ಹೇಳಬಹುದು. ಆದರೆ ಶಿರಸ್ಸಿನಲ್ಲಿಯೂ, ಮುಖ್ಯವಾಗಿ ಯೋನಿಪ್ರದೇಶದಲ್ಲಿಯೂ ನಿಬಿಡವಾಗಿ ಬೆಳೆದಿರುವ ರೋಮಗಳು ಯೌವನವಸ್ಥೆಯನ್ನು ಸೂಚಿಸುವುವು. ಅದುದರಿಂದಲೇ ರೋಮಶೆಯು ತಾನು ಯೌವನದೆಶೆಯಲ್ಲಿರುವ ಮತ್ತು ಸಂಭೋಗಕ್ಕೆ ಅರ್ಹಳಾದ ಸ್ತ್ರೀಯೆಂಬ ವಿಷಯವನ್ನು ಸಮರ್ಥಿಸುವುದಕ್ಕಾಗಿ ತನ್ನ ಯೋನಿಪ್ರದೇಶವು ಗಾಂಧಾರದೇಶದ ಹೆಣ್ಣುಮೇಕೆಯಂತೆ ಅಥವಾ ಗರ್ಭವತಿಯಾದ ಸ್ತ್ರೀಯ ಯೋನಿಯಂತೆ ಬಹಳವಾದ ರೋಮಗಳಿಂದ ಕೂಡಿರುವುದೆಂಬ ದೃಷ್ಟಾಂತವನ್ನು ಹೇಳಿರುವಳು. ಗಾಂಧಾರದೇಶವೆಂದರೆ ಈಗಿನ Kandahar ಅಥವಾ ಅದರ ಸಮೀಪದ ಪ್ರದೇಶವಾಗಿರಬೇಕು. ಅದು ಶೀತದೇಶವಾಗಿರುವುದರಿಂದ ಅಲ್ಲಿರುವ ಮೇಕೆಯೇಮೊದಲಾದ ಪ್ರಾಣಿಗಳಿಗೆ ತುಂಬಾ ಕೂದಲುಗಳಿರುವುದು ಸಹಜವಾಗಿರುವುದು. ಆದುದರಿಂದ ಆ ದೃಷ್ಟಾಂತವನ್ನು ಇಲ್ಲಿ ಹೇಳಲಾಗಿದೆ.

**ಆಗಧಿತಾ, ಪರಿಗಧಿತಾ—**ಈ ಶಬ್ದಗಳಿಗೆ ಯಾಸ್ಕರು ನಿರ್ವಚನಮಾಡುವಾಗ ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು—

**ಗಧ್ಯತಿರ್ಮಿಶ್ರೀಭಾವಕರ್ಮಾ । ಆಗಧಿತಾ ಪರಿಗಧಿತಾ ಇತ್ಯಪಿ ನಿಗಮೋ ಭವತಿ ।**

(ನಿ. ೫-೧೫)

ಎಂದು ಹೇಳಿರುವರು. ಗಧ್ಯತಿಶಬ್ದಕ್ಕೆ ಮಿಶ್ರಮಾಡುವುದು, ಸೇರಿಸುವುದು ಎಂದರ್ಥವು. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಪತಿಪತ್ನಿಯರ ಅವಯವಗಳನ್ನು ಮಿಶ್ರಮಾಡುವುದು, ಎಂದರೆ ಇಬ್ಬರ ಅವಯವಗಳೂ ಅಥವಾ ಅಂಗಗಳೂ ಪರಸ್ಪರ ಸಂಬಂಧಿಸುವಂತೆ ಒಬ್ಬರನ್ನೊಬ್ಬರು ಆಲಿಂಗನಮಾಡಿಕೊಳ್ಳುವುದು ಎಂದಭಿಪ್ರಾಯವನ್ನು ಭಾಷ್ಯಕಾರರು ಸೂಚಿಸಿರುವರು. ಆದುದರಿಂದ ಆಗಧಿತಾ ಮತ್ತು ಪರಿಗಧಿತಾ ಎಂಬ ಎರಡು ಶಬ್ದಗಳಿಗೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ವಿಧವಾದ ಅರ್ಥವಿರುವುದೆಂದಭಿಪ್ರಾಯವು; ಈ ವಿಷಯದಲ್ಲಿ ನಿರುಕ್ತದ ವ್ಯಾಖ್ಯಾನಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ಮಾಡಿರುವ ವಿವರಣೆಯನ್ನು ಇಲ್ಲಿ ಕೊಟ್ಟಿರುವೆವು—

**ಆಗಧಿತೇತಿ ಭಾವಯವ್ಯಸ್ಯಾರ್ಷಂ । ಆಗಧಿತಾ ಅಗೃಹೀತಾ ಅಭಿಮಿಶ್ರಿತಾ ಚ । ಪರಿಗಧಿತಾ ಚ ಪರಿಮಿಶ್ರಿತಾ ಬಾಹುಭ್ಯಾಂ ಮಯಾ ಪರಿಷ್ವಕ್ತೇತ್ಯರ್ಥಃ । ಯಾ ಕಶೀಕೇವ ಪ್ರತಿಕಶಂ**

**ಕಶೀಕೇವ ಸಾ ಹಿ ನಕುಲಜಾತಿಃ ಕಾಂಚಿದ್ದಿವೇ ಕಶಾಮಿತಿ ಶ್ರೂಯತೇಽಶ್ವಮೇಧೇ। ಸಾ ಯಥಾ ಮುದಕಾವ ಪ್ರತಿಕಶಮತಿತರಾಂ ಪರಿಷ್ವಜತಿ ಸ ಹಿ ತಸ್ಯಾಃ ಪರಿಷ್ವಜನಸ್ವಭಾವಃ ಏವಂ ಯಾ ಮಾಂ ಆಜಂಗಹೇ ಪರಿಗೃಹ್ಣಾತಿ ಬಾಹುಭ್ಯಾಂ। ಪರಿಗೃಹ್ಯ ಚ ದದಾತಿ। ಯಾದುರೀಯಾ ಆದರವತೀ, ಅಥವಾ ಯಾದಸಾ ರೇತಃಸೇಕೇನ ತದ್ವತೀ। ಯಾದಃ ಇತ್ಯುದಕನಾಮಸು ಪಠಿತಂ। ಆಹ ಕಿಂ ದದಾತಿ ಮಹ್ಯಂ? ಇತಿ, ಉಚ್ಯತೇ-ಯಾಶೂನಾಂ ಮೈಥುನಾಖ್ಯಾನಾಂ ಶತಾ ಶತಾನಿ ಬಹುಶ ಇತ್ಯರ್ಥಃ। ಯಾ ಏವಂಪ್ರಕಾರಾ ಸಾ ಮಮ ಭೋಜ್ಯಾ ಪತ್ನೀತ್ಯಭಿಪ್ರಾಯಃ। ಏವಮತ್ರ ಮೈಥುನಸಂಬಂಧಾತ್ ಶಬ್ದಸಾರೂಪ್ಯಾಚ್ಚ ಗಧ್ಯತಿಃ ಮಿಶ್ರೀಭಾವಕರ್ಮೇತ್ಯುಪಪದ್ಯತೇ ॥**

(ನಿ. ೫-೧೫)

ಇವರ ಮುಖ್ಯಾಭಿಪ್ರಾಯವನ್ನು ನಾವು ವಿವರಿಸಿರುವುದರಿಂದ ಮತ್ತೆ ಹೇಳಬೇಕಾಗಿಲ್ಲ.

**ಕಶೀಕಾ—ಕಶೀಕಾ ನಾಮ ಸೂತವತ್ಸಾ ನಕುಲೀ।** ಆಗ ತಾನೇ ಪ್ರಸವಿಸಿದ ಹೆಣ್ಣು ಮುಂಗಸಿ—ಇಲ್ಲಿ ಉಪಮೆಯ ವೈಚಿತ್ರ್ಯವನ್ನು ಸಾಯಣರು ಈ ರೀತಿ ವಿವರಿಸಿದ್ದಾರೆ. **ಸಾ ಯಥಾ ಪತ್ಯಾ ಸಹ ಚಿರಕಾಲಂ ಕ್ರೀಡತಿ ನ ಕದಾಚಿದಪಿ ವಿಮುಂಚತಿ ತದ್ವೈಷಾಪಿ।** ಪ್ರಸವವಾದ ಮೇಲೆ ಮುಂಗಸಿಯು ತನ್ನ ಪತಿಯೊಡನೆ ಸಂಭೋಗಿಸಲಿಚ್ಛಿಸಿ ಎಡಬಿಡದೆ ಅವರ ಜೊತೆಯಲ್ಲಿಯೇ ಇದ್ದು ಪತಿಯ ಕಾಮವನ್ನು ಪೂರ್ಣವಾಗಿ ತೃಪ್ತಿಗೊಳಿಸುತ್ತದೆ. ಇಲ್ಲಿ ಭಾವಯವ್ಯನ ಪತ್ನಿಯಾದ ರೋಮಶೆಯು ನಕುಲಿಯಂತೆ ಪತಿಯನ್ನು ಎಡಬಿಡದೆ ಆಲಿಂಗಿಸಿಕೊಳ್ಳುತ್ತಾಳೆಂದು ದೃಷ್ಟಾಂತವನ್ನು ಹೇಳಿದೆ. ಮತ್ತು **ಜಂಗಹೇ** ಎಂದು ದೃಢವಾದುದೂ, ಆಪ್ಯಾಯಮಾನವಾದುದೂ ಆದ ಆಲಿಂಗನದ ಸ್ವರೂಪವನ್ನೂ ವರ್ಣಿಸಿದೆ.

**ಯಾದುರೀ—ಯಾದುರೀ** ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ ರೇತೋರೂಪವಾದ ಉದಕವೆಂದರ್ಥ.

**ಯಾಶೂನಾಂ—ಯಶ ಇತಿ ಪ್ರಜನನನಾಮ। ತತ್ಸಂಬಂಧೀನಿ ಕರ್ಮಾಣಿ ಯಾಶೂನಿ ಭೋಗಾಃ।** ಸಂತಾನೋತ್ಪತ್ತಿಗೆ ಸಾಧನಗಳಾದ ಸಂಭೋಗಾದಿಗಳೆಂದರ್ಥ.

ಕೌರಯಾಣಃ ॥ ೫೨ ॥

ಕೌರಯಾಣಃ ಕೃತಯಾನಃ । "ಪಾಕಸ್ಥಾಮಾ ಕೌರಯಾಣಃ"
ಇತ್ಯಪಿ ನಿಗಮೋ ಭವತಿ ॥ ೬

**ಕೌರಯಾಣಃ** ಎಂದರೆ **ಕೃತಯಾನಃ** ಪ್ರಯಾಣಸನ್ನದ್ಧನು ಅಥವಾ ವಾಹನದಲ್ಲಿ ಕುಳಿತು ಯುದ್ಧಸನ್ನದ್ಧನಾದವನು ಎಂದರ್ಥವು.

ಉದಾಹರಣೆಯ ಋಕ್ಕು

**ಯಂ ಮೇ ದುರಿಂದ್ರೋ ಮರುತಃ ಪಾಕಸ್ಥಾಮಾ ಕೌರಯಾಣಃ ।**
**ವಿಶ್ವೇಷಾಂ ತ್ಮನಾ ಶೋಭಿಷ್ಠಮುಪೇವ ದಿವಿ ಧಾವಮಾನಂ ॥**

(ಋ. ಸಂ. ೮-೩-೨೧)

ಇದರ ಅರ್ಥವು

ಆಕಾಶದಲ್ಲಿ ವೇಗವಾಗಿ ಸಂಚರಿಸುವ ಪ್ರಭಾವಯುತನಾದ ಸೂರ್ಯನಂತೆ ಸ್ವ ಪ್ರಭಾವದಿಂದಲೇ ಸಮಸ್ತ ಧನಗಳ ನಡುವೆ ಅತಿಶಯವಾಗಿ ಪ್ರಕಾಶಿಸುವ ಯಾವ ಧನ ಸಂಘವನ್ನು ನನಗೆ ಇಂದ್ರನೂ ಮರುತ್ತುಗಳೂ ಕೊಟ್ಟರೋ ಅದೇ ಪ್ರಭಾವ ವುಳ್ಳ ಧನಸಮೂಹವನ್ನು ಕುರುಯಾಣಪುತ್ರನಾದ ಪಾಕಸ್ಥಾನನೆಂಬ ರಾಜನೂ (ನನಗೆ ಕೊಟ್ಟನು).

**ಕೌರಯಾಣಃ—ಕೃತಯಾನಃ ಪಾಕಸ್ಥಾಮಾ ಕೌರಯಾಣಃ ಇತ್ಯಪಿ ನಿಗಮೋ ಭವತಿ** ಎಂದು ಹೇಳಲಾಗಿದೆ. ಎಂದರೆ, ಶತ್ರುಗಳನ್ನು ಯುದ್ಧದಲ್ಲಿ ಎದುರಿಸು ವುದಕ್ಕಾಗಿ ಹಸ್ತ್ಯಶ್ವಾದಿ ಸೇನಾಬಲವನ್ನು ಸಿದ್ಧಪಡಿಸಿಕೊಂಡು ಪ್ರಯಾಣೋನ್ಮುಖನಾಗಿರುವವನಿಗೆ ಕುರಯಾಣನೆಂದು ಹೆಸರು. ಇಯ ಕುರುಯಾಣನೆಂಬ ಒಬ್ಬ ರಾಜನು. ಇವನ ಪುತ್ರನಿಗೆ ಕೌರಯಾಣನೆಂದು ಹೆಸರು. ಪ್ರಕೃತ ಋಕ್ಕಿನಲ್ಲಿ **ಪಾಕಸ್ಥಾಮಾ ಕೌರಯಾಣಃ** ಎಂದು ಹೇಳಿರುವ ಶಬ್ದಗಳಿಗೆ ಕುರುಯಾಣನ ಪುತ್ರನಾದ ಪಾಕಸ್ಥಾಮಾ ಎಂಬ ರಾಜನು ಎಂದರ್ಥವು.

ತೌರಯಾಣಃ ॥ ೫೪ ॥

ತೌರಯಾಣಸ್ತೂರ್ಣಯಾನಃ । "ಸತೌರಯಾಣ ಉಪಯಾಹಿ ಯಜ್ಞಂ
ಮರುದ್ಭಿರಿನ್ದ್ರ ಸಖಿಭಿಃ ಸಜೋಷಾ" ಇತ್ಯಪಿ ನಿಗಮೋ ಭವತಿ ॥೭॥

**ಕೌರಾಯಣಃ** ಎಂದರೆ **ತೂರ್ಣಯಾನಃ** ಅತಿವೇಗವಾದ ರಥದಲ್ಲಿ ಕುಳಿತು ಸಂಚರಿಸುವವನು ಎಂದರ್ಥವು.

ಉದಾಹರಣೆಯ ಋಕ್ಕು—

**ಜಾತಂ ಯತ್ತ್ವಾ ಪರಿ ದೇವಾ ಅಭೂಷನ್ಮಹೇ ಭರಾಯ ಪುರುಹೂತ ವಿಶ್ವೇ ।**
**ಸ ತೌರಯಾಣ ಉಪ ಯಾಹಿ ಯಜ್ಞಂ ಮರುದ್ಭಿರಿಂದ್ರ ಸಜೋಷಾಃ ॥**

ಎಲೈ ಇಂದ್ರನೇ ನೀನು ಉತ್ಪನ್ನನಾದಕೂಡಲೇ ಸಮಸ್ತದೇವತೆಗಳೂ ನಿನ್ನನ್ನು ದೊಡ್ಡ ಯುದ್ಧಕ್ಕೋಸ್ಕರ ನೇತೃವನ್ನಾಗಿ ಸ್ವೀಕರಿಸಿ ಸತ್ಕರಿಸಿದರು. ಎಲೈ ಇಂದ್ರನೇ, ನೀನು ನಿನ್ನ ಸ್ನೇಹಿತರಾದ ಮರುತ್ತುಗಳೊಡನೆ ವೇಗವಾಗಿ ಚಲಿಸುವ ರಥದಲ್ಲಿ ಕುಳಿತು ನಮ್ಮ ಯಜ್ಞಕ್ಕೆ ದಯಮಾಡು.

ಅಹ್ರಯಾಣಃ ॥೫೫॥

ಅಹ್ರಯಾಣೋಽಹ್ರೀತಯಾನಃ ।"ಅನುಷ್ಟುಯಾ ಕೃಣುಹ್ಯಹ್ರಯಾಣ"
ಇತ್ಯಪಿ ನಿಗಮೋ ಭವತಿ ॥೮॥

**ಅಹ್ರಯಾಣಃ** ಎಂದರೆ **ಅಹ್ರೀತಯಾನಃ** ಲಜ್ಜೆಯುನ್ನುಂಟುಮಾಡದ ಅವಮಾನಕರವಲ್ಲದ ವಾಹನ (ರಥ) ವುಳ್ಳವನು.

ಉದಾಹರಣೆಯ ಋಕ್ಕು—

**ತ್ವಯಾ ವಯಂ ಸಧನ್ಯ೧ ಸ್ತ್ವೋತಾಸ್ತವ ಪ್ರಣೀತ್ಯಶ್ಯಾಮ ವಾಜಾನ್ ।**
**ಉಭಾ ಶಂಸಾ ಸೂದಯ ಸತ್ಯತಾತೇಽನುಷ್ಟುಯಾ ಕೃಣುಹ್ಯಹ್ರಯಾಣ ॥**

(ಋ. ಸಂ. ೪-೪-೧೪)

ಇದರ ಅರ್ಥವು—

ಸಂಕೋಚವಿಲ್ಲದ ಗಮನವುಳ್ಳ ಎಲೈ ಅಗ್ನಿಯೇ, ಸ್ತೋತೃಗಳಾದ ನಾವು ನಿನ್ನ ಅನುಗ್ರಹದಿಂದ ಉತ್ತಮವಾದ ಧನವುಳ್ಳವರಾಗಿಯೂ ನಿನ್ನಿಂದ ರಕ್ಷಿತರಾಗಿಯೂ ಇದ್ದು ನಿನ್ನ ಅನುಗ್ರಹದಿಂದ ಅಶ್ವಗಳನ್ನು ಹೊಂದುತ್ತೇವೆ. ಸತ್ಯವನ್ನು ವೃದ್ಧಿಗೊಳಿಸುವ ಎಲೈ ಅಗ್ನಿಯೇ, ನಮಗೆ ದ್ರೋಹವನ್ನಬ್ಚಿಸುವ ಶತ್ರುಗಳು ದೂರದಲ್ಲಿರಲಿ ಅಥವಾ ಹತ್ತಿರದಲ್ಲಿರಲಿ ಅವರನ್ನು ನಾಶಮಾಡು ಮತ್ತು ನಮ್ಮ ಪ್ರಾರ್ಥನೆಯ ಉದ್ದಿಶ್ಯವನ್ನು ನೆರವೇರಿಸು.

ಹರಯಾಣಃ ॥೫೬॥

ಹರಯಾಣೋ ಹರಮಾಣಯಾನಃ । "ರಜತಂ ಹರಯಾಣೇ" ಇತ್ಯಪಿ ನಿಗಮೋ ಭವತಿ ॥೯॥

**ಹರಯಾಣಃ** ಎಂದರೆ **ಹರಮಾಣಯಾನಃ** ಯಾವಾಗಲೂ ಎಡಬಿಡದೆ ಚಲಿಸುತ್ತಿರುವ ರಥವುಳ್ಳವನು.

ಉದಾಹರಣೆಯ ಋಕ್ಕು—

**ಋಜ್ರಮುಕ್ಷಣ್ಯಾಯನೇ ರಜತಂ ಹರಯಾಣೇ ।**
**ರಥೇ ಯುಕ್ತಮಸನಾಮ ಸುಷಾಮಣಿ ॥**

(ಋ. ಸಂ. ೮-೨೫-೨೨)

ಇದರ ಅರ್ಥವು—

ಉಕ್ಷವಂಶೋತ್ಪನ್ನನೂ ಶತ್ರುಗಳ ಜೀವನವನ್ನೂ ಧನವನ್ನೂ ಅಪಹರಿಸತಕ್ಕವನೂ ಸುಷಾಮಪುತ್ರನೂ ಆದ ವರುವಿನಲ್ಲಿದ್ದ ಋಜುಗಾಮಿಯಾ[illegible]ದೂ ರಜತ (ಬೆಳ್ಳಿ) ಮಯವಾದುದೂ ಅಶ್ವಯುಕ್ತವಾದುದೂ ಆದ ರಥವನ್ನು ನಾವು ಪಡೆದವು.

**ಹರಯಾಣೇ**—ಈ ಶಬ್ದಕ್ಕೆ ಸಾಯಣರು ತಮ್ಮ ಭಾಷ್ಯದಲ್ಲಿ—**ಶತ್ರುಜೀವಿತೈಶ್ವರ್ಯಾದಿಹರಣಶೀಲಯಾನೇ** ಯುದ್ಧಮಾಡಿ ಶತ್ರುಗಳ ಪ್ರಾಣ, ಐಶ್ವರ್ಯ ಮೊದಲಾದವುಗಳನ್ನು ಅಪಹರಿಸಿಕೊಂಡು ಹೋಗುವವನು ಎಂದರ್ಥಮಾಡಿದ್ದಾರೆ. ಆದರೆ ಇಲ್ಲಿ ಎಂದರೆ ನಿರುಕ್ತದಲ್ಲಿ—

**ಹರಯಾಣಃ । ಹರಯಾಣೋ ಹರಮಾಣಯಾನಃ ।**
**ರಜತಂ ಹರಮಾಣೇ ಇತ್ಯಪಿ ನಿಗಮೋ ಭವತಿ ॥**

ಎಂದರ್ಥಮಾಡಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿದ್ದಾರೆ. ಎಂದರೆ, **ನಿತ್ಯಕಾಲಮೇವಾಭಿಪ್ರಸ್ಥಿತಯಾನೇ,** ಯಾವಾಗಲೂ ಪ್ರಯಾಣಮಾಡುತ್ತಲಿರುವವನು ಗಮನಶೀಲನು ಎಂದರ್ಥವು. ಇಲ್ಲಿ ಈ ಶಬ್ದವು ಸುಷಾಮಣಿ (**ಸುಷಾಮಾ** ಎಂಬುವನ ಪುತ್ರನಾದ **ವರು** ಎಂಬ ರಾಜನು) ಎಂಬ ಶಬ್ದಕ್ಕೆ ವಿಶೇಷಣವಾಗಿದೆ. ಆದುದರಿಂದ ಯುದ್ಧಾಭಿಲಾಷೆಯಿಂದ ಯಾವಾಗಲೂ ಶತ್ರುಗಳ (ದಸ್ಯುಜನರ) ಮೇಲೆ ದಂಡೆತ್ತಿಹೋಗಿ ಅವರೊಡನೆ ಯುದ್ಧಮಾಡಿ ಜಯಿಸುವ **ವರು** ಎಂಬ ರಾಜನ ಜೈತ್ರಯಾತ್ರೆಯನ್ನು ಸೂಚಿಸುವುದಕ್ಕಾಗಿ ಋಷಿಯು ಈ ಶಬ್ದವನ್ನು ಪ್ರಯೋಗಮಾಡಿದ್ದಾನೆಂದು ಊಹಿಸಬಹುದು.

ಆರಿತಃ ||೫೭||

“ ಯ ಆರಿತಃ ಕರ್ಮಣಿ ಕರ್ಮಣಿ ಸ್ಥಿರಃ ।” ಪ್ರತ್ಯೃತಃ ಸ್ತೋ-
ಮಾನ್ ॥ ೧೦ ॥

**ಆರಿತಃ ಎಂದರೆ ಪತ್ಯೃತಃ** ದೃಢ(ಸ್ಥಿರ)ಭಾವವುಳ್ಳವನು ಎಂದರ್ಥವು.

ಉದಾಹರಣೆಯ ಋಕ್ಕು—

**ಯೋ ಅಶ್ವಾನಾಂ ಯೋ ಗವಾಂ ಗೋಪತಿರ್ವಶೀ ಯ ಆರಿತಃ ಕರ್ಮಣಿ ಕರ್ಮಣಿ ಸ್ಥಿರಃ ।**
**ವೀಳೋಶ್ಚಿದಿಂದ್ರೋ ಯೋ ಅಸುನ್ವತೋ ವಧೋ ಮರುತ್ವಂತಂ ಸಖ್ಯಾಯ ಹವಾಮಹೇ ॥**

(ಋ: ಸಂ. ೧-೧೦೧-೪)

ಯಾವ (ಇಂದ್ರನು) ಅಶ್ವಗಳಿಗೂ, ಗೋವುಗಳಿಗೂ ಅಧಿಪತಿಯಾಗಿರುವನೋ ಯಾವ ಇಂದ್ರನು ಸಮಸ್ತ ಸೋಮ ಗಳಿಗೂ ಯಜ್ಞಾದಿಕರ್ಮಗಳಿಗೂ ಸ್ಥಿರನಾದ ನೆಲೆಯೆನಿಸಿರುವನೋ ಯಾವ ಇಂದ್ರನಿಗಾಗಿ ದ್ವೇಷಬುದ್ಧಿಯಿಂದ ಸೋಮರಸ ವನ್ನು ಹಿಂಡದಿರುವ (ಯಜ್ಞಮಾಡದಿರುವ) ಪುರುಷನನ್ನು ವಧಿಸುವನೋ ಅಂತಹ ಮರುದ್ದೇವತೆಗಳೊಡನೆ ಕೂಡಿರುವ ಇಂದ್ರನನ್ನು ನಮ್ಮೊಡನೆ ಸಖ್ಯದಿಂದಿರುವುದಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇನೆ.

**ಇತಿ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು

———

## ॥ ಅಥ ಷೋಡಶಃ ಖಂಡಃ ॥

## ॥ ಹದಿನಾರನೆಯ ಖಂಡವು ॥

ನಿ ಯದ್ ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ ವ್ರಂದಿನೋ ರೋರುವದ್ವನಾ । ನಿವೃಣಕ್ಷಿ ಯಚ್ಛ್ವಸನಸ್ಯ ಮೂರ್ಧನಿ ಶಬ್ದಕಾರಿಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತುಃ ರೋರೂಯಮಾಣೋ ವನಾನೀತಿ ವಾ ಬಧೇನೇತಿ ವಾ । ಅವ್ರದನ್ತ ವೀಲಿತೇತ್ಯಪಿ ನಿಗಮೋ ಭವತಿ ವೀಲಯತಿಶ್ಚ ವ್ರೀಲಯತಿಶ್ಚ ಸಂಸ್ತಂಭಕರ್ಮಾಣೌ ಪೂರ್ವೇಣ ಸಂಪ್ರಯುಜ್ಯೇತೇ ನಿಷ್ಷಪೀ ಸ್ತ್ರೀಕಾಮೋ ಭವತಿ ವಿನಿರ್ಗತಸಪಃ ಸಪಃ ಸಪತೇಃ ಸ್ಪೃಶತಿಕರ್ಮಣಃ । ಮಾ ನೋ ಮಘೇವ ನಿಷ್ಷಪೀ ಪರಾ ದಾಃ । ಸ ಯಥಾ ಧನಾನಿ ವಿನಾಶಯತಿ ಮಾ ನಸ್ತ್ವಂ ತಥಾ

ಪರಾದಾಃ । ತೂರ್ಣಾಶಮುದಕಂ ಭವತಿ ತೂರ್ಣಮಶ್ನುತೇ । ತೂರ್ಣಾಶಂ ನ ಗಿರೇರಧೀತ್ಯಪಿ ನಿಗಮೋ ಭವತಿ । ಕ್ಷುಮ್ಪಮಹಿ-ಚ್ಛತ್ರಕಂ ಭವತಿ ಯತ್ ಕ್ಷುಭ್ಯತೇ ॥

---

ವೃನ್ದೀ ॥ ೫೪ ॥

ವೃನ್ದೀ ವೃನ್ದತೇರ್ಮೃದುಭಾವಕರ್ಮಣಃ—॥

ವೃಂದೀ ಎಂಬ ಶಬ್ದವು ಮೃದುವಾಗಿರು ಎಂಬರ್ಥವುಳ್ಳ ವೃಂದ್ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

**ನಿ ಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೂರುವದ್ವನಾ ।**
**ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ॥**
(ಋ. ಸಂ. ೧-೫೪-೫)

ಇದರ ಅರ್ಥವು—

ಎಲೈ ಇಂದ್ರನೇ ನೀನು ಗರ್ಜನಶಬ್ದಮಾಡುತ್ತಾ ವಾಯುವಿನ ತಲೆಯ ಮೇಲೂ ಮತ್ತು ಫಲಗಳನ್ನು ಪಕ್ವಮಾಡಿಸುವವನೂ ರಸಗಳನ್ನು ಹೀರುವವನೂ ಆದ ಸೂರ್ಯನ ನೆತ್ತಿಯಮೇಲೂ ನೀರುಗಳನ್ನು ಸುರಿಸುವುದರಿಂದಲೂ ಮತ್ತು ಈಗಲೂ ಕೂಡ ನಿನ್ನ ಪ್ರಕರ್ಷಗಮನವುಳ್ಳದ್ದೂ ಶತ್ರುನಾಶದಲ್ಲಿ ಆಸಕ್ತವಾದದ್ದೂ ಆದ ಮನಸ್ಸಿನಿಂದ ಕೂಡಿ ಮೇಲಿನ ಅಸಾಧಾರಣ ಕೆಲಸವನ್ನು ಮಾಡುತ್ತಿರುವುದರಿಂದ ನಿನ್ನನ್ನು ಮೀರಿದ ಪ್ರಭಾವವುಳ್ಳವರು ಯಾರು ?

**ವೃಂದಿನಃ ಶುಷ್ಣಸ್ಯ—**ಈ ಪದಗಳ ವಿವರಣೆಯು ಈ ರೀತಿ ಹೇಳಲ್ಪಟ್ಟಿದೆ. **ವೃಂದೀ ವೃಂದತೇರ್ಮೃದುಭಾವಕರ್ಮಣಃ ಶುಷ್ಣಸಾದಿತ್ಯಸ್ಯ ಚ ಶೋಷಯಿತೋ ರೋರೂಯಮಾಣೋ ವನಾತೀತಿ ವಾ ಧನಾನೀತಿ ವಾ ॥**

'ನಿಯದ್ವೃಣಕ್ಷಿಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರನ್ದಿನೋರೋರುವದ್ವನಾ'। ನಿವೃಣಕ್ಷಿ ಯಚ್ಛ್ವಸನಸ್ಯ ಮೂರ್ಧನಿ ಶಬ್ದಕಾರಿಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೂ ರೋರೂಯಮಾಣೋ ವನಾನೀತಿ ವಾ ವಧೇ-ನೇತಿ ವಾ ॥ "ಅವ್ರದನ್ತವೀಳಿತಾ" ಇತ್ಯಪಿ ನಿಗಮೋ ಭವತಿ । ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಮ್ಭಕರ್ಮಾಣೌ ಪೂರ್ವೇಣ ಸಂಪ್ರಯುಜ್ಯೇತೇ ॥೧॥

ನಿಯದ್ವೃಣಕ್ಷಿ ಎಂಬ ಋಕ್ಕಿನ ಅರ್ಥವನ್ನು ಹಿಂದೆಯೇ ಹೇಳಲಾಗಿದೆ. ಇನ್ನು ಕೆಲವು ವಿಶೇಷಗಳಿವೆ—

**ಇದಮುಕ್ತಂ ಭವತಿ । ಇಂದ್ರಃ ಪುರಾ ಅಪ್‌ಶೋಷಣರೂಪಸ್ಯಾಸುರಸ್ಯ ಶುಷ್ಣನಾಮಕಸ್ಯ ಮೂರ್ಧಾನಾಂ ತದುಪರಿ ಮೇಘೋದಕಾನಾಂ ವೃಷ್ಟಿಂ ಕೃತ್ವಾ ಬಿಭೇದೇತಿ ಋಷಿವಚನೇಷು ಪ್ರಸಿದ್ಧಿಃ ।**

ತಥೈವ ತನ್ಮೂರ್ಧಚ್ಛೇದನಂ। ಅಧುನಾಪಿ ಯದಿ ಕಾಮಯೇತ ತತ್ಕರ್ತುಂ ಶಕ್ನೋತಿ । ಏವಂ ಸತಿ ಕೋಽಸ್ತಿ ನಾಮ ಇಂದ್ರಾದಪಿ ಗರೀಯಾನ್? ನ ಕೋಽಪಿತ್ಯರ್ಥಃ॥ ಪೂರ್ವದಲ್ಲಿ ಇಂದ್ರನು ಶುಷ್ಣನೆಂಬ ಹೆಸರಿನ ಅಸುರರನ್ನು ಸಂಹಾರಮಾಡಿದಾಗ ನೀರನ್ನು ಹೀರಿ ಎಲ್ಲವನ್ನು ಒಣಗಿಸುವ ಸ್ವಭಾವವುಳ್ಳ ಈ ಶುಷ್ಣಾಸುರನ ತಲೆಯಮೇಲೆ ಮೇಘದಿಂದ ಜಲವನ್ನು ಸುರಿಯುವಂತೆ ಮಾಡಿ ಅವನನ್ನು ಸಂಹಾರಮಾಡಿದನೆಂದು ಋಷಿವಚನವಿರುವುದು. ಈಗಲೂ ಇಂದ್ರನು ಇಷ್ಟಪಟ್ಟರೆ ಅಂತಹ ಕಾರ್ಯವನ್ನು ಮಾಡಲು ಸಮರ್ಥನಾಗಿರುವನು. ಹೀಗಿರುವಾಗ ಇಂದ್ರನಿಗಿಂತಲೂ ಹೆಚ್ಚಾದ ಶಕ್ತಿಸಾಮರ್ಥ್ಯಗಳುಳ್ಳವನು ಯಾವನು ತಾನೇ ಇರುವನು? ಯಾರೂ ಇಲ್ಲವೆಂದಭಿಪ್ರಾಯವು.

**ರೋರುವತ್**—ಮೇಘಗಳಸಹಾಯದಿಂದ ವಿಶೇಷವಾಗಿ ಗರ್ಜಿಸುವವನು, ಇಂದ್ರನು.

**ಶ್ವಸನಸ್ಯ—ಅಂತರಿಕ್ಷೇ ಶ್ವಸಿತೀತಿ ಶ್ವಸನಃ ವಾಯುಃ** ಅಂತರಿಕ್ಷದಲ್ಲಿ ಉಸಿರುಬಿಡುವವನು ಎಂದರೆ ಸಂಚರಿಸುವವನು ಎಂದರ್ಥದಲ್ಲಿ ಈ ಅರ್ಥವು ವಾಯುಶಬ್ದವಾಚ್ಯವಾಗಿದೆ.

**ವ್ರಂದಿನಃ, ಶುಷ್ಣಸ್ಯ**—ಈ ಎರಡು ಪದಗಳೂ ಸೂರ್ಯಾರ್ಥಕಗಳಾಗಿವೆ. ತನ್ನ ಕಿರಣಗಳ ಸಹಾಯದಿಂದ ಮಾವಿನಹಣ್ಣೇ ಮೊದಲಾದ ಕಠಿನ ವಸ್ತುಗಳನ್ನು ಮೃದುವಾಗಿ ಮಾಡುವವನು. ಹಾಗೂ ಈ ಭೂಮಿಯಲ್ಲಿ ಕಂಡುಬರುವ ಸಮಸ್ತ ರಸಗಳನ್ನೂ ಒಣಗಿಸುವವನು. ಈ ಎರಡು ವಿಧಗಳಾದ ಸಾಮರ್ಥ್ಯವೂ ಸೂರ್ಯನಲ್ಲಿರುವುದು. ಬಿಸಿಲುಕಾಲದಲ್ಲಿ ಭೂಗತವಾದ ಸಕಲ ರಸವನ್ನೂ ಸೂರ್ಯನ ಮೂಲಕ ಹೀರಿ ವರ್ಷಾಕಾಲದಲ್ಲಿ ಮತ್ತೆ ಸೂರ್ಯನಿಗೆ ಕೊಡುವ ಸಾಮರ್ಥ್ಯವು ಇಂದ್ರನಿಗೆ ಇರುವುದರಿಂದಲೇ ಇಂದ್ರನು ಸರ್ವಶ್ರೇಷ್ಠನೆಂದು ಹೇಳಲ್ಪಟ್ಟಿದೆ.

**ವೃಣಕ್ಷಿ—ಅವರ್ಜಯಸಿ** ಸೂರ್ಯನಿಂದಲೂ ವಾಯುವಿನಿಂದಲೂ ಭೂಮಿಗೆಬಿದ್ದ ವೃಷ್ಟಿಯು ಮತ್ತೇ ಆವಿಯರೂಪದಿಂದ ಸೂರ್ಯನನ್ನೂ ವಾಯುವನ್ನೂ ಸೇರುವುದಷ್ಟೆ. ಈ ಕಾರ್ಯವು ಇಂದ್ರನಿಂದಲೇ ಆಗುವುದೆಂದು ಇಂದ್ರನನ್ನು ಸ್ತುತಿಸಲಾಗುವುದು.

**ಬರ್ಹಣಾವತಾ**—ಬರ್ಹಣಾಶಬ್ದವು ಹಿಂಸಾರ್ಥದಲ್ಲಿ ಪಠಿತವಾಗಿರ್ರುವುದರಿಂದ ಬರ್ಹಣಾವತಾ ಎಂದರೆ ಹಿಂಸೆಯನ್ನುಂಟುಮಾಡುವುದು ಎಂದರ್ಥ. ಇದು ಇಂದ್ರನ ಮನಸ್ಸಿಗೆ ಅನ್ವಯಿಸುವುದು.

**ಕೃಣವಃ—ಕೃವಿ ಹಿಂಸಾಕರಣಯೋಶ್ಚ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು, ಇಷ್ಟು ಅರ್ಥವನ್ನು ಕೊಡುವುದು.

ವ್ರಂದಿನಃ **ಶುಷ್ಣಸ್ಯ**—ಈ ಪದಗಳ ವಿವರಣೆಯು ನಿರುಕ್ತದಲ್ಲಿ ಈ ರೀತಿ ಹೇಳಲ್ಪಟ್ಟಿದೆ. ವ್ರಂದೀ **ವ್ರಂದತೇರ್ಮೃದೂಭಾವಕರ್ಮಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೂ ರೋರೂಯಮಾಣೋ ವನಾತೀತಿ ವಾ ಧನಾನೀತಿ ವಾ** (ನಿರು. ೫–೧೫)

ಇನ್ನೊಂದು ಉದಾಹರಣೆಯ ಋಕ್ಕು—

**ತದ್ದೇವಾನಾಂ ದೇವತಮಾಯ ಕರ್ತ್ವಮಶ್ರಥ್ನಂದೃಳ್ಹಾವ್ರದಂತ ವೀಳಿತಾ।**
**ಉದ್ಗಾ ಆಜದಭಿನದ್ಬ್ರಹ್ಮಣಾ ಬಲಮಗೂಹತ್ತಮೋ ವ್ಯಚಕ್ಷಯತ್ಸ್ವಃ॥**

(ಋ. ಸಂ. ೨–೨೪–೩)

ಇದರ ಅರ್ಥವು—

ಇಂದ್ರಾದಿ ದೇವತೆಗಳ ನಡುವೆ ಅತ್ಯುತ್ತಮ ದೇವತೆಯಾದ ಬ್ರಹ್ಮಣಸ್ಪತಿಯ ಅಸಾಧಾರಣವಾದ ಕರ್ಮವು ಮುಂದೆ ಹೇಳುವಂತೆ ಪ್ರಸಿದ್ಧವಾಗಿದೆ. ಅದೇನೆಂದರೆ—ಅವನು ದೃಢವಾದ ಪರ್ವತಾದಿಗಳನ್ನು ಶಿಥಿಲವಾಗುವಂತೆ ಮಾಡಿದನು. ದೃಢವಾಗಿ ಬೇರೂರಿದ ವೃಕ್ಷಾದಿಗಳನ್ನು ಮೃದುವಾದ ಸ್ಥಿತಿಯುಳ್ಳವಂತೆ ಮಾಡಿದನು. ವಲನಿಂದ ಅಪಹೃತವಾದ ಗೋವುಗಳನ್ನು ದೇವತೆಗಳ ಅಭಿಮುಖವಾಗಿ ಹೋಗುವಂತೆ ಮಾಡಿದನು. ತನ್ನ ಮಂತ್ರದಿಂದ ವಲನೆಂಬ ಅಸುರನನ್ನು ಬೆದರಿಸಿ ಕಣ್ಮರೆಯಾಗುವಂತೆ ಮಾಡಿದನು. ಆದಿತ್ಯನನ್ನು ಪ್ರಕಾಶಿಸುವಂತೆ ಮಾಡಿದನು.

ಈ ಋಕ್ಕಿನಲ್ಲಿ ಬ್ರಹ್ಮಣಸ್ಪತಿಯು ಮಾಡಿದ ಕಾರ್ಯಗಳ ಪ್ರಶಂಸೆಯು ವರ್ಣಿತವಾಗಿದೆ. ಈ ಸಾಹಸಕಾರ್ಯಗಳೆಲ್ಲವನ್ನೂ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದಲೇ ಮಾಡಿದನೆಂದೂ ಹೇಳಿದೆ.

**ದೇವಾನಾಂ ದೇವತಮಾಯ. ಇಂದ್ರಾದೀನಾಂ ಮಧ್ಯೇ ಅತಿಶಯೇನ ದಾನಾದಿಗುಣಯುಕ್ತಾಯ ।** ದೇವತೆಗಳಲ್ಲೆಲ್ಲಾ ಬ್ರಹ್ಮಣಸ್ಪತಿಯು ಶ್ರೇಷ್ಠನಾದವನು. ಎಂದರೆ ಇಂದ್ರಾದಿದೇವತೆಗಳ ಮಧ್ಯದಲ್ಲಿ ಈ ಬ್ರಹ್ಮಣಸ್ಪತಿಯೇ ಅತಿಶಯವಾದ ದಾನಾದಿಗುಣಯುಕ್ತನಾದವನು ತನ್ನನ್ನು ಸ್ತೋತ್ರಮಾಡುವವರಿಗೆ ಇಂದ್ರಾದಿ ದೇವತಿಗಳಿಗಿಂತ ಅತಿಶಯವಾಗಿ ಇಷ್ಟಾರ್ಥಗಳನ್ನು ಸಲ್ಲಿಸುವವನು ಎಂದಭಿಪ್ರಾಯವು. ಅಥವಾ **ದೇವತಮ** ಎಂಬ ಶಬ್ದಕ್ಕೆ ದೇವಶ್ರೇಷ್ಠನು ಎಂದು ಅರ್ಥ ಮಾಡಿದಲ್ಲಿ **ದೇವಾನಾಂ ದೇವತಮಾಯ** ಎಂಬ ಶಬ್ದಗಳಿಗೆ ದೇವತೆಗಳಿಗೂ ದೇವಶ್ರೇಷ್ಠನಂತಿರುವನು, ದೇವಾಧಿದೇವನು ಎಂಬ ಅರ್ಥವು ಭಾಸವಾಗುವುದು. ರಾಜಾಧಿರಾಜರುಗಳಲ್ಲೆಲ್ಲಾ ಶ್ರೇಷ್ಠನಾದವನಿಗೆ ರಾಜಾಧಿರಾಜನೆಂದು ಹೇಳುವಂತೆ ಇಲ್ಲಿ ಬ್ರಹ್ಮಣಸ್ಪತಿಯನ್ನು **ದೇವಾನಾಂ ದೇವತಮಾಯ** ಎಂಬ ಶಬ್ದಗಳಿಂದ ವರ್ಣಿಸಿದೆ. ಇಲ್ಲಿ **ದೇವತಮಾಯ** ಎಂಬ ಚತುರ್ಥೀ ವಿಭಕ್ತಿಯು ಷಷ್ಠೀ ವಿಭಕ್ತಿಯ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಭಾಷ್ಯಕಾರರ ವಿವರಣೆಯು.

**ಕರ್ತ್ವಂ—ಕರ್ತವ್ಯಂ ಕರ್ಮ ।** ಮಾಡಲ್ಪಡುವ ಕರ್ಮವು ಎಂದರೆ ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ನೆರವೇರಿಸಿದ ಸಾಹಸಕಾರ್ಯವು.

**ದೃಳ್ಹಾ, ಅಶ್ರಥ್ನನ್, ವೀಳಿತಾ, ಅವ್ರದಂತ**—ಬ್ರಹ್ಮಣಸ್ಪತಿಯ ಸಾಹಸಕಾರ್ಯಗಳಲ್ಲಿ ಕೆಲವನ್ನು ಈ ಋಕ್ಕಿನಲ್ಲಿ ವರ್ಣಿಸಲಾಗಿದೆ. ಅದರಂತೆ ದೃಢವಾದ ಪರ್ವತಾದಿಗಳನ್ನು ಶಿಥಿಲವಾಗುವಂತೆ ಮಾಡುವುದೂ, ಚೆನ್ನಾಗಿ ಬೇರೂರಿ ದೃಢವಾಗಿ ಬೆಳೆದಿರುವ ವೃಕ್ಷಾದಿಗಳನ್ನು ಮೃದುವಾಗಿ ಮಾಡುವುದೂ ಈ ಸಾಹಸಕಾರ್ಯಗಳಲ್ಲಿ ಸೇರಿವೆ. ಇಲ್ಲಿ **ಅವ್ರದಂತ** ಎಂಬ ಕ್ರಿಯಾಪದವು **ವ್ರಂದ್** ಧಾತುವಿನಿಂದ ನಿಷ್ಪನ್ನವಾಗಿ ಮೃದುವಾಗಿರುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಈ ಧಾತುವಿನಿಂದ ನಿಷ್ಪನ್ನವಾದ **ವ್ರಂದೀ** ಎಂಬ ಶಬ್ದಕ್ಕೆ ಯಾಸ್ಕರು **ವ್ರಂದೀ ವ್ರಂದತೇರ್ಮೃದುಭಾವಕರ್ಮಣಃ** ಎಂದು ನಿರ್ವಚನವನ್ನು ಹೇಳಿದ್ದಾರೆ. (ನಿ. ೫–೧೬) ಈ ವಿಷಯದಲ್ಲಿ—

**ನಿ ಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ।**
**ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ॥**

(ಋ. ಸಂ. ೧–೫೪–೫)

ಎಂಬ ಋಕ್ಕನ್ನುದಾಹರಿಸಿ ಅದಕ್ಕೆ **ನಿವೃಣಕ್ಷಿ ಯಚ್ಛ್ವಸನಸ್ಯ ಮೂರ್ಧನಿ ಶಬ್ದಕಾರಿಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೂ ರೋರೂಯಮಾಣೋ ವನಾನೀತಿ ವಾ ವಧೇನೇತಿ ವಾ ।** ಅವದ್ರಂತ ವೀಳಿತಾ ಇತ್ಯಪಿ ನಿಗಮೋ

**ಭವತಿ। ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣೌ ಪೂರ್ವೇಣ ಸಂಪ್ರಯುಜ್ಯೇತೇ॥** ಎಂದು ನಿರ್ವಚನವನ್ನು ಹೇಳಿ **ಅವ್ರದಂತಾ** ವೀಳಿತಾ ಎಂದು ಪ್ರಕೃತವಾದ ಋಕ್ಕನ್ನೂ ಉದಾಹರಣೆಯಾಗಿ ಉಪಯೋಗಿಸಿದ್ದಾರೆ. ಅಂತರಿಕ್ಷ ಸಂಚಾರಿಯಾದ ವಾಯು, ಫಲಾದಿಗಳನ್ನು ಮೃದುವಾಗಿ ಮಾಡುವುದರಿಂದ ವ್ರಂದಿಶಬ್ದವಾಚ್ಯನಾದ ಸೂರ್ಯ, ಇವರಿಬ್ಬರಿಗಿಂತ ಉದಕಸಿಕ್ತೇಪಮಾಡುವುದರಿಂದ ಇಂದ್ರನು ಶ್ರೇಷ್ಠನು. ಫಲಾದಿಗಳನ್ನು ಮೆತ್ತಗಿರುವಂತೆ ಮಾಡುವುದರಿಂದ ಸೂರ್ಯನಿಗೆ ವ್ರಂದಿ ಎಂಬ ವಿಶೇಷಣ ಪದಪ್ರಯೋಗವೂ ಅಷ್ಟು ಸ್ಪಷ್ಟವಾಗಿಲ್ಲವೆಂದು ಯಾಸ್ಕರು ತಾವೇ ಹೇಳಿ ಈಗ ಪ್ರಸಕ್ತವಾಗಿರುವ ಋಕ್ಕನ್ನೇ ಉದಾಹರಿಸಿ ಇಲ್ಲಿ ವೀಳಿತಾ ಎಂದರೆ, ರೂಢಮೂಲಗಳಾದ ವೃಕ್ಷಗಳನ್ನು **ಅವ್ರದಂತಾ** ಮೃದುಮಾಡಿದನು ಅಥವಾ ಸಡಿಲಿಸಿದನು ಎಂಬರ್ಥವನ್ನು ಹೇಳಿದ್ದಾರೆ. ಮತ್ತು—**ವೀಳಯತಿಶ್ಚ ವ್ರೀಳಯತಿಶ್ಚ ಸಂಸ್ತಂಭಕರ್ಮಾಣಃ** ಎಂದರೆ, ಸ್ತಂಭದಂತೆ ದೃಢವಾಗಿ ನಿಲ್ಲಿಸುವ ಎಂಬರ್ಥವುಳ್ಳ **ವೀಳಯತಿ** ಅಥವಾ **ವ್ರೀಳಯತಿ** ಧಾತುವಿನಿಂದ ನಿಷ್ಪನ್ನವಾದ **ವೀಳಿತಾ** ಎಂಬ ಶಬ್ದದೊಡನೆ **ಅವ್ರದಂತ** ಎಂಬ ಶಬ್ದಪ್ರಯೋಗವಿರುವುದರಿಂದ ದೃಢವಾಗಿರುವುದನ್ನು ಮೃದುವಾಗುವಂತೆ ಮಾಡುವುದು ಎಂಬರ್ಥವನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

**ಗಾಃ ಉತ್ ಆಜತ್, ಬ್ರಹ್ಮಣಾ ವಲಂ ಅಭಿಷತ್**—ಬ್ರಹ್ಮಣಸ್ಪತಿಯು ತನ್ನ ಮಂತ್ರಶಕ್ತಿಯಿಂದ ವಲನೆಂಬ ಅಸುರನನ್ನು ಭೇದಿಸಿ ಅವನು ಬಂಧನದಲ್ಲಿ ಬಚ್ಚಿಟ್ಟಿದ್ದ ದೇವತೆಗಳ ಗೋವುಗಳನ್ನು ಪರ್ವತಗುಹೆಯಿಂದ ಈಚೆಗೆ ಹೊರಡಿಸಿದನು ಎಂದು ಮುಖ್ಯಾಭಿಪ್ರಾಯವು.

**ತಮಃ ಅಗೂಹತ್, ಸ್ವಃ ವಿ ಅಚಕ್ಷಯತ್**—ವಲನಿಂದ ಆವೃತವಾಗಿದ್ದ ಅಂಧಕಾರವನ್ನು ಹೋಗಲಾಡಿಸಿ ಆದಿತ್ಯನು ಎಲ್ಲರಿಗೂ ಕಾಣಿಸಿ ಪ್ರಕಾಶಿಸುವಂತೆ ಮಾಡಿದನು. ವಲಾಸುರನು ಅಂಧಕಾರವನ್ನು ಉತ್ಪನ್ನಮಾಡಿ ಅದರಿಂದ ಸೂರ್ಯನು ಎಲ್ಲರಿಗೂ ಕಾಣಿಸದಂತೆ ಮುಚ್ಚಿದನು. ಆ ಅಂಧಕಾರವನ್ನು ಬೃಹಸ್ಪತಿಯು ಧ್ವಂಸಮಾಡಿ ಸೂರ್ಯನು ಪ್ರಕಾಶಿಸುವಂತೆ ಮಾಡಿದನು ಎಂದಭಿಪ್ರಾಯವು.

ನಿಷ್ಷಪೀ ॥೫೯॥

ನಿಷ್ಷಪೀ ಸ್ತ್ರೀಕಾಮೋ ಭವತಿ ವಿನಿರ್ಗತಸಪಃ। ಸಪಃ ಸಪತೇಃ ಸ್ಪೃಶತಿ ಕರ್ಮಣಃ। 'ಮಾ ನೋ ಮಘೇವ ನಿಷ್ಷಪೀ ಪರಾದಾಃ'। ಸ ಯಥಾ ಧನಾನಿ ವಿನಾಶಯತಿ ಮಾ ನಸ್ತ್ವಂ ತಥಾ ಪರಾದಾಃ ॥೨॥

ಉದಾಹರಣೆಯ ಋಕ್ಕು—

**ಪ್ರತಿ ಯತ್ಸ್ಯಾ ನೀಥಾದರ್ಶಿ ದಸ್ಯೋರೋಕೋ ನಾಚ್ಛಾ ಸದನಂ ಜಾನತೀ ಗಾತ್ ।**
**ಅಧ ಸ್ಮಾನೋ ಮಘವಂಚರ್ಕೃತಾದಿನ್ಮಾ ನೋ ಮಘೇವ ನಿಷ್ಷಪೀ ದಾಃ॥**

(ಋ. ಸಂ. ೧-೧-೪-೫)

ಇದರ ಅರ್ಥವು—

ಎಲೈ ಇಂದ್ರನೇ, ಕುಯವನೆಂಬ ಅಸುರನ ಮನೆಗೆ ಕರೆದುಕೊಂಡು ಹೋಗುವ ದಾರಿಯು ನಮ್ಮ ಗಮನಕ್ಕೆ ಬಿದ್ದೊಡನೆಯೇ ಕರುವನ್ನು ಕಂಡ ಹಸುವು ನೆಟ್ಟಗೆ ತನ್ನ ಕೊಟ್ಟಿಗೆಗೇ ಹೋಗುವಂತೆ ವೇಗವಾಗಿ ಅವನ ಮನೆಯನ್ನು ಪ್ರವೇಶಿಸಿಯಾಯಿತು ಆದ್ದರಿಂದ ಒಡನೆಯೇ ಪುನಃಪುನಃ ಸಂಭವಿಸುವ ಆ ರಾಕ್ಷಸನ ಬಾಧೆಯಿಂದ ನಮ್ಮನ್ನು ಖಂಡಿತವಾಗಿಯೂ ರಕ್ಷಿಸು.

ನೀತಿರಹಿತನಾದ ವಿಷಯಲಂಪಟನು ನಿರ್ಲಕ್ಷ್ಯವಾಗಿ ಧನವನ್ನೆಲ್ಲಾ ಎರಚಿಬಿಡುವಂತೆ ನೀನೂ ಸಹ ನಮ್ಮನ್ನು ಲಕ್ಷ್ಯಮಾಡದೇ ತ್ಯಜಿಸಬೇಡ.

**ನಿಷ್ಷಪೀ—ಸ್ತ್ರೀಕಾಮೋ ಭವತಿ ವಿನಿರ್ಗತಸಪಃ । ಸಪಃ ಸಪತೇಃ ಸ್ಪೃಶತಿಕರ್ಮಣಃ । ಮಾ ನೋ ಮಘೇವ ನಿಷ್ಷಪೀ ಪರಾದಾಃ**—ಸ್ಪರ್ಶನಮಾಡು ಎಂಬರ್ಥವನ್ನು ಕೊಡುವ **ಸಪ್** ಧಾತುವಿನಿಂದ ನಿಷ್ಪನ್ನವಾದ **ಸಪ** ಶಬ್ದಕ್ಕೆ ವೀರ್ಯ, ಶಕ್ತಿ ಅಥವಾ ಪುಂಸ್ತ್ವವಿಲ್ಲದ ಎಂದರ್ಥವಾಗುತ್ತದೆ. **ನಿಷ್ಷಪೀ** ಎಂದರೆ ಅಂತಹ ಪುಂಸ್ತ್ವವಿಲ್ಲದ ವಿಷಯ ಲಂಪಟನು, ಲಕ್ಷ್ಯವಿಲ್ಲದೆ ಧನವನ್ನು ವೇಶ್ಯಾಸ್ತ್ರೀಯ ವಶಮಾಡುವಂತೆ ನಮ್ಮನ್ನು ತಿರಸ್ಕರಿಸಿ ನಮ್ಮ ಶತ್ರುಗಳ ವಶಮಾಡಬೇಡವೆಂದ ಅಭಿಪ್ರಾಯವಾಗುತ್ತದೆ. ನಿಷ್ಷಪೀ ಎಂಬ ಶಬ್ದಕ್ಕೆ ಈ ಅರ್ಥವೇ ಇಲ್ಲಿ ವಿವರಿಸಲಾಗಿದೆ.

ತೂರ್ಣಾಶಮ್ ॥ ೬೦ ॥

ತೂರ್ಣಾಶಮುದಕಂ ಭವತಿ ತೂರ್ಣಮಶ್ನುತೇ । “ ತೂರ್ಣಾಶಂ ನ ಗಿರೇರಧಿ ” ಇತ್ಯಪಿ ನಿಗಮೋ ಭವತಿ ॥ ೩ ॥ ೧೬ ॥

ತೂರ್ಣಾಶವೆಂದರೆ ಉದಕವು, ನೀರು. ಇದನ್ನು ಕುಡಿಯುವುದು ಅತಿ ಸುಲಭವಾದ್ದರಿಂದ ಅದನ್ನೇ ಬೇಗನೆ ಪಾನ ಮಾಡಬಹುದು. ಇದು ಬೇಗನೆ ತಿನ್ನಲು (ಪಾನ ಮಾಡಲು) ಸಾಧ್ಯವಾದ್ದರಿಂದ ಇದಕ್ಕೆ ತೂರ್ಣಾಶವೆಂದು ಹೆಸರು ಬಂದಿದೆ.

ಉದಾಹರಣೆಯ ಋಕ್ಕು—

**ಪ್ರತಿ ಶ್ರುತಾಯ ವೋ ಧೃಷತ್ತೂರ್ಣಾಶಂ ನ ಗಿರೇರಧಿ ।**
**ಹುವೇ ಸುಶಿಪ್ರಮೂತಯೇ ॥**

(ಋ. ಸಂ. ೮-೩೨-೪)

ಇದರ ಅರ್ಥವು—

ಎಲೈ ಸ್ತೋತೃಜನರೇ, ಬೇಸಿಗೆಯ ಬಿಸಿಲಿನಿಂದ ಬಳಲಿದ ಜನರು ಮೇಘದಿಂದ ಉದಕವನ್ನು ಅಪೇಕ್ಷಿಸುವಂತೆ ಶತ್ರುಧರ್ಷಕನೂ, ಆಕರ್ಷಕವಾದ ಕೆನ್ನೆಯುಳ್ಳವನೂ ಆದ ಇಂದ್ರನನ್ನು ರಕ್ಷಣಾರ್ಥವಾಗಿಯೂ ನಿಮ್ಮ ಸ್ತುತಿಯನ್ನು ಕೇಳುವುದಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತೇನೆ.

**ತೂರ್ಣಾಶಂ—ಉದಕಂ** ತೂರ್ಣವೆಂದರೆ ಬೇಗನೆ. ಬೇಗನೆ ತಿನ್ನುವುದರಿಂದ ಎಂದರೆ ಘಟ್ಟಿಯಾದ ಆಹಾರವಂತೆ ಅಗಿದು ತಿನ್ನಬೇಕಾದ ಅವಶ್ಯಕತೆ ಇಲ್ಲದೆ ಸುಲಭವಾಗಿ ಪಾನಮಾಡಬಹುದಾದ್ದರಿಂದ ಉದಕಕ್ಕೆ ತೂರ್ಣಾಶವೆಂದು ಹೆಸರು ಎಂದಭಿಪ್ರಾಯವು.

ಕ್ಷುಮ್ಪಮ್ ॥೬೧॥

ಕ್ಷುಮ್ಪಮಹಿಚ್ಛತ್ರಕಂ ಭವತಿ ಯತ್ಕ್ಷುಭ್ಯತೇ ॥

**ಕ್ಷುಂಪ**ವೆಂದರೆ ನಾಯಿ ಕೊಡೆಗಳು (Mushrooms) ಇವನ್ನು ಸುಲಭವಾಗಿ ನಾಶಮಾಡಬಹುದು.

**ಇತಿ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು

## ಅಥ ಸಪ್ತದಶಃ ಖಂಡಃ

### ಹದಿನೇಳನೆಯ ಖಂಡವು

ಕದಾ ಮರ್ತ್ತಮರಾಧಸಮ್ಪದಾ ಕ್ಷುಮ್ಪಮಿವ ಸ್ಫುರತ್ । ಕದಾ ನಃ ಶುಶ್ರವದ್ ಗಿರ ಇನ್ದ್ರೋ ಅಙ್ಗ । ಕದಾ ಮರ್ತ್ತಮನಾರಾಧಯನ್ತಂ ಪಾದೇನ ಕ್ಷುಮ್ಪಮಿವಾವಸ್ಫುರಿಷ್ಯತಿ ಕದಾ ನಃ ಶೃಣೋತಿ ಚ ಗಿರ ಇನ್ದ್ರೋ ಅಙ್ಗಾಙ್ಗೇತಿ ಕ್ಷಿಪ್ರನಾಮಾಞ್ಚಿತಮೇವಾಙ್ಕಿತಂ ಭವತಿ ನಿಚುಮ್ಪುಣಃ ಸೋಮೋ ನಿಚಾನ್ತಪೃಣೋ ನಿಚಮನೇನ ಪ್ರೀಣಾತಿ ॥

———

"ಕದಾ ಮರ್ತ್ತಮರಾಧಸಮ್ಪದಾ ಕ್ಷುಮ್ಪಮಿವ ಸ್ಫುರತ್ । ಕದಾ ನಃ ಶುಶ್ರವದ್ಗಿರ ಇನ್ದ್ರೋ ಅಙ್ಗ ।"
ಕದಾ ಮರ್ತ್ತಮನಾರಾಧಯನ್ತಂ ಪಾದೇನ ಕ್ಷುಮ್ಪಮಿವಾವಸ್ಫುರಿಷ್ಯತಿ ಕದಾ ನಃ ಶೃಣೋತಿ ಚ ಗಿರ ಇಂದ್ರೋ ಅಙ್ಗ । ಅಙ್ಗೇತಿ ಕ್ಷಿಪ್ರನಾಮ । ಅಞ್ಚಿತಮೇವಾಙ್ಕಿತಂ ಭವತಿ ॥೧॥೧೭॥

ಉದಾಹರಣೆಯ ಋಕ್ಕು—

**ಕದಾ ಮರ್ತಮರಾಧಸಂ ಪದಾ ಕ್ಷುಂಪಮಿವ ಸ್ಫುರತ್ ।**
**ಕದಾ ನಃ ಶುಶ್ರವದ್ಗಿರ ಇಂದ್ರೋ ಅಂಗ ॥**

(ಋ. ಸಂ. ೧-೮೪-೮)

ಇದರ ಅರ್ಥವು—

ಕಾಲಿನಿಂದ ನಾಯಿ ಕೊಡೆಗಳನ್ನು ತುಳಿದು ನಾಶಮಾಡುವಂತೆ ಇಂದ್ರನು ತನ್ನನ್ನು ಆರಾಧಿಸದಿರುವ ಪುರುಷನನ್ನು ಯಾವಾಗ ನಾಶಮಾಡುವನು ? ಮತ್ತು ನಮಗೆ ಪ್ರೀತಿಪಾತ್ರನಾದ ಇಂದ್ರನು ನಮ್ಮ ಪ್ರೀತಿಯುಕ್ತವಾದ ಅಥವಾ ಪ್ರಾರ್ಥನಾ ರೂಪವಾದ ನಮ್ಮ ವಾಕ್ಯಗಳನ್ನು ಯಾವಾಗ (ಜೇಗನೆ) ಪ್ರೀತಿಯಿಂದ ಆಲಿಸುವನು (ಕೇಳುವನು) ?

ನಿಚುಂಪುಣಃ ॥೬೨॥

ನಿಚುಂಪುಣಃ ಸೋಮೋ ನಿಚಮನೇನ ಪ್ರೀಣಾತಿ ॥

**ನಿಚಂಪುಣಃ** ಎಂದರೆ ಸೋಮವು. **ನಿಚಾಂತಪೃಣೋ ನಿಚಮನೇನ ಪ್ರೀಣಾತಿ** ಇವನ್ನು ಭಕ್ಷಿಸುವುದರಿಂದ ಎಂದರೆ ಪಾನಮಾಡುವುದರಿಂದ ಸಂತೋಷ (ತೃಪ್ತ) ಎಂಬ ಹೆಸರು ರೂಢಿಯಾಗಿದೆ.

**ಇತಿ ಸಪ್ತದಶಃ ಖಂಡಃ**

ಇಲ್ಲಿಗೆ ಹದಿನೇಳನೆಯ ಖಂಡವು ಸಮಾಪ್ತವು

———

## ಅಥಾಷ್ಟಾದಶಃ ಖಂಡಃ

### ಹದಿನೆಂಟನೆಯ ಖಂಡವು

ಪತ್ನೀವಂತಃ ಸುತಾ ಇಮ ಉಶನ್ತೋ ಯನ್ತಿ ವೀತಯೇ । ಅಪಾಂ ಜಗ್ಮಿರ್ನಿಚುಮ್ಪುಣಃ॥ಪತ್ನೀವನ್ತಃ ಸುತಾ ಇಮೇಽದ್ಭಿಃ ಸೋಮಾಃ ಕಾಮಯಮಾನಾ ಯನ್ತಿ ವೀತಯೇ ಪಾನಾಯಾಪಾಂ ಗನ್ತಾ ನಿಚುಮ್ಪುಣಃ ಸಮುದ್ರೋಽಪಿ ನಿಚುಮ್ಪುಣ ಉಚ್ಯತೇ ನಿಚಮನೇನ ಪೂರ್ಯತ ಆವಭೃಥೋಽಪಿ ನಿಚುಮ್ಪುಣ ಉಚ್ಯತೇ ನಿಚೈರಸ್ಮಿನ್ ಕ್ವಣನ್ತಿ ನೀಚೈರ್ದಧತೀತಿ ವಾ । ಅವಭೃಥ ನಿಚುಮ್ಪುರ್ಣೇತ್ಯಪಿ ನಿಗಮೋ ಭವತಿ । ನಿಚುಮ್ಪುಣ ನಿಚುಙ್ಕುಣೇತಿ ಚ ಪದಿರ್ಗನ್ತುರ್ಭವತಿ ಯತ್ ಪದ್ಯತೇ ॥

---

" ಪತ್ನೀವನ್ತಃ ಸುತಾ ಇಮ ಉಶನ್ತೋ ಯನ್ತಿ ವೀತಯೇ । ಅಪಾಂ ಜಗ್ಮಿರ್ನಿಚುಂಪುಣಃ " ॥ ಪತ್ನೀವನ್ತಃ ಸುತಾ ಇಮೇಽದ್ಭಿಃ ಸೋಮಾಃ ಕಾಮಯಮಾನಾ ಯನ್ತಿ ವೀತಯೇ ಪಾನಾಯಾಪಾಂ ಗನ್ತಾ ನಿಚುಂಪುಣಃ ॥ ೧ ॥

ಉದಾಹರಣೆಯ ಋಕ್ಕು—

**ಪತ್ನೀವಂತಃ ಸುತಾ ಇಮೇ ಉಶಂತೋ ಯಂತಿ ವೀತಯೇ ।**
**ಅಪಾಂ ಜಗ್ಮಿರ್ನಿಚುಂಪುಣಃ ॥**

**ಇದರ ಅರ್ಥವು—**

ವಸತೀವರೀ ಮತ್ತು ಏಕಧಾನಾ ಎಂಬ ಕಲಶಗಳಲ್ಲಿರುವ ಜಲಮಿಶ್ರಿತವಾದದೂ ಈಗತಾನೇ ಹಿಂಡಲ್ಪಟ್ಟರುವುದೂ ಆದ ಈ ಸೋಮರಸಗಳು ಇಂದ್ರನ ಪಾನಾರ್ಥವಾಗಿಯೇ ಸಿದ್ಧವಾಗಿ ಅವನನ್ನೇ ಸೇರುತ್ತವೆ. ಎಂದರೆ ಇಂದ್ರನು ಆ ಸೋಮವನ್ನೇ ಪಾನಮಾಡುತ್ತಾನೆ. ಮತ್ತು ಪಾನಮಾಡುವುದರಿಂದ ತೃಪ್ತಿಯನ್ನುಂಟುಮಾಡುವುದೂ ನೀರಿನಲ್ಲಿ ನೆನೆಯಿಸಿದ ಋಜೀಷ ಎಂಬ ಹಿಂಡಿದ ಸೋಮಲತೆಗಳಿಂದ ಮತ್ತೆ ಹಿಂಡಿ ತೆಗೆದ ಸೋಮರಸವೂ ಸಹ ಇಂದ್ರನಿಗೇ ಅರ್ಪಿತವಾಗುತ್ತದೆ.

ಈ ಋಕ್ಕಿನಲ್ಲಿ **ನಿಚುಂಪುಣಃ** ಎಂಬ ಶಬ್ದಕ್ಕೆ ಎರಡು ಮೂರು ವಿಧವಾದ ಅರ್ಥವನ್ನು ವಿವರಿಸಿ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ನಿಚುಂಪುಣಃ । ನಿಚುಂಪುಣಃ ಸೋಮೋ ನಿಚಾಂತಪೃಣೋ ನಿಚಮನೇನ ಪ್ರೀಣಾತಿ ।**
**ಪತ್ನೀವಂತಃ ಸುತಾ ಇಮ ಉಶಂತೋ ಯಂತಿ ವೀತಯೇ । ಅಪಾಂ ಜಗ್ಮಿರ್ನಿಚುಂಪುಣಃ ।**

**ಪತ್ನೀವಂತಃ ಸುತಾ ಇಮೇದ್ಭಿಃ ಸೋಮಾಃ ಕಾಮಯಮಾನಾ ಯಂತಿ ವೀತಯೇ ಪಾನಾ-ಯಾಪಾಂ ಗಂತಾ ನಿಚುಂಪುಣಃ ॥**

(ನಿ. ೫–೧೮)

ನಿಚುಂಪುಣ ಎಂದರೆ ಸೋಮವು, ಮದಕಾರಕವಾದ ಆಹಾರವು. ಏಕೆಂದರೆ ಇದನ್ನು (ಸೋಮನನ್ನು) ನೀರಿನೊಡನೆ ಬೆರಸಿ ಪಾನಮಾಡಿದಲ್ಲಿ ಮದ ಅಥವಾ ಹರ್ಷವುಂಟಾಗುವುದು. ಆದ್ದರಿಂದ ಸೋಮಕ್ಕೆ ನಿಚಂಪುಣವೆಂದು ಹೆಸರು. ಹಿಂಡಲ್ಪಟ್ಟ ಈ ಸೋಮರಸಗಳು ತಮ್ಮ ಸಹಾಯಕವಾದ ನೀರಿನೊಡನೆ ಮಿಶ್ರಿತವಾಗಿ ಪಾನಾರ್ಥವಾಗಿ ಪಾನಮಾಡುವವರ ಬಳಿಗೆ ಆದರದಿಂದ ಸಮೀಪಿಸಿ ಹೋಗುವವು. ಎಂದರೆ ಸೋವನನ್ನು ಪಾನಮಾಡುವವರು ಉದಕ (ವಸತೀವರೀ ಎಂಬ ಕಲಶದ ನೀರಿನಿಂದ) ಮಿಶ್ರಿತವಾದ ಸೋಮರಸವನ್ನು ಆದರದಿಂದ ಪಾನಮಾಡುವರು. ಇಲ್ಲಿ **ಪತ್ನೀವಂತಃ** ಎಂಬ ಶಬ್ದಕ್ಕೆ **ಪತ್ನೀಭಿಃ ಅದ್ಭಿಃ ತದ್ವಂತಃ** ನೀರಿನಿಂದ ಮಿಶ್ರವಾದ ಎಂದರ್ಥವು. ಆದ್ದರಿಂದ ನೀರಿನಿಂದ ಮಿಶ್ರವಾದ ಸೋಮರಸಕ್ಕೆ ನಿಚುಂಪುವೆಂದು ಹೆಸರು.

**ಸಮುದ್ರೋಽಪಿ ನಿಚುಂಪುಣ ಉಚ್ಯತೇ । ನಿಚಮನೇನ ಪೂರ್ಯತೇ ॥**

ನಿಚುಂಪುಣವೆಂದರೆ ಸಮುದ್ರವೆಂದೂ ಅರ್ಥವಾಗುವುದು. ಏಕೆಂದರೆ ಉದಕದಿಂದ ತುಂಬಲ್ಪಟ್ಟಿರುವುದರಿಂದ ಸಮುದ್ರವನ್ನೂ ನಿಚುಂಪುಣವೆಂದು ಕರೆಯುತ್ತಾರೆ.

**ಅವಭೃಥೋಽಪಿ ನಿಚುಂಪುಣ ಉಚ್ಯತೇ ನೀಚೈರಸ್ಮಿನ್ ಕ್ವಣಂತಿ ನೀಚೈರ್ದಧತೀತಿ ವಾ । ಅವಭೃಥ ನಿಚುಂಪುಣ ಇತ್ಯಪಿ ನಿಗಮೋ ಭವತಿ । ನಿಚುಂಪುಣ ನಿಚುಂಕುಣೇತಿ ॥**

(ನಿ. ೫–೧೮)

ಯಜ್ಞದ ಕೊನೆಯ ದಿವಸದ ಕರ್ಮವಾದ ಅವಭೃಥಕ್ಕೂ ನಿಚುಂಪುಣವೆಂದು ಹೆಸರು. ಏಕೆಂದರೆ ಆ ದಿವಸದ ಕರ್ಮದಲ್ಲಿ ಮಂತ್ರಾದಿಗಳನ್ನು **ನೀಚೈರಸ್ಮಿನ್ ಕ್ವಣಂತಿ** ಬಹಳ ಮೆತ್ತಗೆ, ಮೆಲ್ಲನೆ ಧ್ವನಿಯಿಂದ ಪಠಿಸುವರು ಅಥವಾ ಆದಿವಸದಲ್ಲಿ **ನೀಚೈರ್ದಧತೀತಿ ವಾ** ಎಂದರೆ ಯಜ್ಞಪಾತ್ರೆಗಳನ್ನು ನೀಚರಾದವರು ಎಂದರೆ ಸೇವಕರು, ಪರಿಚಾರಕರೇ ಮೊದಲಾದವರು ಕೊಂಡೊಯ್ಯುವರು ಆದ್ದರಿಂದ ಅವಭೃಥಕ್ಕೆ ನಿಚುಂಪುಣವೆಂದು ಹೆಸರು. ಕೆಲವುಕಡೆ ನಿಚುಂಕುಣವೆಂಬ ಪ್ರಯೋಗವಿರುವುದು. ಈ ಶಬ್ದಕ್ಕೂ ಇದೇ ಅರ್ಥವು ಎಂದರೆ ನಿಚುಂಪುಣ ಮತ್ತು ನಿಚುಂಕುಣ ಎಂಬ ಈ ಎರಡು ಶಬ್ದಗಳೂ ಸಮಾನಾರ್ಥವನ್ನು ಸೂಚಿಸುವ ಪರ್ಯಾಯಪದಗಳು. ಅವಭೃಥ ನಿಚುಂಪುಣ ನಿಚೇರುರಸಿ ನಿಚಂಕುಣ ಎಂಬುದು ಈ ವಿಷಯದಲ್ಲಿ ಶ್ರುತಿವಾಕ್ಯದ ಉದಾಹರಣೆಯು.

ಸಮುದ್ರೋಽಪಿ ನಿಚುಂಪುಣ ಉಚ್ಯತೇ, ನಿಚಮನೇನ ಪೂರ್ಯತೇ ॥೨॥
ಅವಭೃಥೋಽಪಿ ನಿಚುಂಪುಣ ಉಚ್ಯತೇ ನೀಚೈರಸ್ಮಿನ್ ಕ್ವಣನ್ತಿ ನೀಚೈರ್ದಧತೀತಿ ವಾ । "ಅವಭೃಥ ನಿಚುಂಪುಣ" ಇತ್ಯಪಿ ನಿಗಮೋ ಭವತಿ ॥೪॥

ಇದನ್ನು ಹಿಂದಿನ ವಾಕ್ಯದಲ್ಲಿಯೇ ವಿವರಿಸಲಾಗಿದೆ.

ನಿಚುಂಪುಣ ನಿಚುಂಕುಣೇತಿ ಚ ||೪||೧೮||

ನಿಚಂಪುಣ ಮತ್ತು ನಿಚಂಕುಣ ಎಂಬ ಎರಡು ಶಬ್ದಗಳನ್ನೂ ಹಿಂದೆಯೇ ವಿವರಿಸಲಾಗಿದೆ.

ಪದಮ್ ||೬೩||

ಪದಿರ್ಗನ್ತುರ್ಭವತಿ ಯತ್ ಪದ್ಯತೇ ||

ಪದಿಃ ಎಂದರೆ ಹೋಗತಕ್ಕವನು, ನಡೆದು ಹೋಗತಕ್ಕವನು. ಪಾದಗಳಿಂದ (ಕಾಲುಗಳಿಂದ) ನಡೆದುಕೊಂಡು ಹೋಗತಕ್ಕವನು.

**ಇತಿ ಅಷ್ಟಾದಶಃ ಖಂಡಃ**

**ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು**

---

## ಏಕೋನವಿಂಶಃ ಖಂಡಃ

**ಹತ್ತೊಂಭತ್ತನೆಯ ಖಂಡವು**

ಸುಗುರಸತ್ ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇನ್ದ್ರೋ ದಧಾತಿ । ಯಸ್ತ್ವಾ ಯನ್ತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ || ಸುಗರ್ಭವತಿ ಸುಹಿರಣ್ಯಃ ಸುಶ್ವೋ ಮಹಚ್ಚಾಸ್ಮೈ ವಯ ಇನ್ದ್ರೋ ದಧಾತಿ ಯಸ್ತ್ವಾ ಯನ್ತಮನ್ನೇನ ಪ್ರಾತರಾಗಾಮಿನ್ನತಿಥೇ ಮುಕ್ಷೀಜಯೇವ ಪದಿಮುತ್ಸಿನಾತಿ । ಕುಮಾರೋ ಮುಕ್ಷೀಜಾ ಮೋಚನಾಚ್ಚ ಸಯನಾಚ್ಚ ತತನಾಚ್ಚ ಪಾದುಃ ಪದ್ಯತೇಃ । ಆವಿಃ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ । ಆವಿಷ್ಕುರುತೇ ಭಾಸಮಾದಿತ್ಯೋ ಗೂಹತೇ ಬುಸಂ ಬುಸಮಿತ್ಯುದಕನಾಮ ಬ್ರವೀತೇಃ ಶಬ್ದಕರ್ಮಣೋ ಭ್ರಂಶತೇರ್ವಾ ಯದ್ವರ್ಷನ್ ಪಾತಯತ್ಯುದಕಂ ರಶ್ಮಿಭಿಸ್ತತ್ ಪ್ರತ್ಯಾದತ್ತೇ ||

---

"ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇನ್ದ್ರೋ ದಧಾತಿ । ಯಸ್ತ್ವಾ ಯನ್ತಂ ವಸುನಾ ಪ್ರಾತರಿತ್ವೋ ಮುಕ್ಷೀ-ಜಯೇವ ಪದಿಮುತ್ಸಿನಾತಿ ||"

ಸುಗುರ್ಭವತಿ ಸುಹಿರಣ್ಯಃ ಸ್ವಶ್ವೋ ಮಹಚ್ಚಾಸ್ಮೈ ವಯ ಇನ್ದ್ರೋ
ದಧಾತಿ ಯಸ್ತ್ವಾ ಯನ್ತಮನ್ನೇನ ಪ್ರಾತರಾಗಾಮಿನ್ನತಿಥೇ ॥
"ಮುಕ್ಷೀಜಯೇವ ಪದಿಮುತ್ಸಿನಾತಿ ।" ಕುಮಾರಃ । ಮುಕ್ಷೀಜಾ
ಮೋಚನಾಚ್ಚ ಸಯನಾಚ್ಚ ತತನಾಚ್ಚ ॥೧॥

ಉದಾಹರಣೆಯ ಋಕ್ಕು—

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾ ಯಂತಂ ವಸುನಾ ಪ್ರಾತರಿತ್ವೋಮುಕ್ಷೀಜಯೇವ ಪದಿಮುತ್ಸಿನಾತಿ ॥**

(ಋ. ಸಂ. ೧-೧೨೫-೨)

ಇದರ ಅರ್ಥವು—

ಎಲೈ ಪುತ್ರನೇ ಪ್ರಾತಃಕಾಲದಲ್ಲಿ (ಗುರುಕುಲದಿಂದ) ಬರುತ್ತಿದ್ದ ನಿನ್ನನ್ನು ಪ್ರಾಣಿಗಳನ್ನೂ ರಜ್ಜುವಿನಿಂದ ಬಂಧಿಸುವಂತೆ ಗವಾದಿಧನವನ್ನು (ಕೊಟ್ಟು) ಯಾವ ರಾಜನು ತಡೆದನೋ ಆ ರಾಜನು ಉತ್ತಮವಾದ ಗೋವುಗಳು, ಅಶ್ವಗಳು, ಹಿರಣ್ಯ, ಇವುಗಳಿಂದ ಯುಕ್ತನಾಗಲಿ. ಇವನಿಗೆ ಇಂದ್ರನು ಪ್ರಭೂತಾನ್ನವನ್ನು ಅನುಗ್ರಹಿಸಲಿ.

**ಪದಿ** ಎಂಬ ಶಬ್ದಕ್ಕೆ ಇಲ್ಲಿ ಪಕ್ಷೀ ಎಂದರ್ಥವು.

**ಅಥ ಕಕ್ಷೀವತಃ ಪಿತಾ ಆನೀತೇನ ಧನೇನ ಸಂತುಷ್ಟಃ ರಾಜಾನಂ ಬಹುಪ್ರಕಾರೇಣ ಆಶಾಸ್ತೇ ।** ಕಕ್ಷೀವಂತನ ತಂದೆಯು ಸ್ವನಯನಿಂದ ದತ್ತವಾದ ಸಂಪತ್ತುಗಳನ್ನು ನೋಡಿ ಬಹಳವಾಗಿ ಸಂತೋಷಪಟ್ಟು ಸ್ವನಯನನ್ನು ಅನೇಕ ವಿಧವಲ್ಲಿ ಆಶೀರ್ವದಿಸುತ್ತಾನೆ. ಈ ಋಕ್ಕಿನಲ್ಲಿ ಆ ಆಶೀರ್ವಾದದ ಕ್ರಮವನ್ನೂ ತಿಳಿಸಿದೆ. ಈ ಋಕ್ಕಿಗೆ ನಿರುಕ್ತಕಾರರು ಈ ರೀತಿ ವಿವರಣೆಯನ್ನು ಹೇಳಿದ್ದಾರೆ.

**ಸುಗುರ್ಭವತಿ ಸುಹಿರಣ್ಯಃ ಸ್ವಶ್ವೋ ಮಹಚಾಸ್ಮೈ ವಯ ಇಂದ್ರೋ ದಧಾತಿ ಯಸ್ತ್ವಾ ಯಂತಮನ್ನೇನ ಪ್ರಾತರಾಗಾಮಿನ್ನತಿಥೇ । ಮುಕ್ಷೀಜಯೇವ ಪದಿಮುತ್ಸಿನಾತಿ ಕುಮಾರಃ । ಮುಕ್ಷೀಜಾ ಮೋಚನಾಚ್ಚ ಸಯನಾಚ್ಚ ತತನಾಚ್ಚ ॥**

(ನಿ. ೫-೧೯)

ಒಬ್ಬ ಬಾಲಕನು ಬಲೆಯರೂಪವಾದ ಸಾಧನದಿಂದ ಪಕ್ಷಿಯ ಗತಿನಿರೋಧವನ್ನು ಮಾಡುವಂತೆ, ಪ್ರಾತಃಕಾಲದಲ್ಲಿ ಅತಿಥಿಯಾಗಿ ಸಂಭವಿಸಿದ ನಿನ್ನನ್ನು ಯಾವ ರಾಜನು ಧನಕನಕಾದಿರೂಪವಾದ ಸಾಧನದಿಂದ ಆಕರ್ಷಿತನನ್ನಾಗಿ ಮಾಡಿದನೋ ಅಂತಹ ರಾಜನಿಗೆ ಇಂದ್ರನು ಇನ್ನೂ ಅತಿಶಯವಾಗಿ ಗೋಹಿರಣ್ಯಾದಿ ಸಂಪತ್ತುಗಳನ್ನನುಗ್ರಹಿಸಲಿ ಎಂದಭಿಪ್ರಾಯವು.

**ಸುಗುಃ** ಅಸತ್—**ಶೋಭನೈರ್ಬಹುಭಿರ್ಗೋಭಿಸ್ತದ್ವಾನ್ ಭವತು ।** ಶ್ರೇಷ್ಠವಾದ ಗೋವುಗಳನ್ನು ಇನ್ನೂ ಅಧಿಕವಾಗಿ ಪಡೆಯಲಿ ಎಂದು ತಾತ್ಪರ್ಯ.

**ಪ್ರಾತರಿತ್ವಃ—ಪ್ರಾತರಾಗಾಮಿನ್ನತಿಥೇ ಪುತ್ರ ।** ಗುರುಕುಲದಿಂದ ಹಿಂತಿರುಗುತ್ತಿದ್ದಾಗ ಪ್ರಾತಃಕಾಲದಲ್ಲಿಯೇ ಅತಿಥಿಯಾಗಿ ಸಂಭವಿಸಿದವನೇ ಎಂದು ಪುತ್ರನನ್ನು (ಕಕ್ಷೀವಂತನನ್ನು) ಸಂಬೋಧಿಸಿದೆ.

**ಗತ್ಯರ್ಥಕ**ವಾದ **ಇ** ಧಾತುವಿನಿಂದ **ಇತ್ವನ್** ಎಂಬ ಪದವು ನಿಷ್ಪನ್ನವಾಗಿ ಹೋಗುವವನು ಅಥವಾ ಬರುವವನು ಎಂದರ್ಥವಾಗುತ್ತದೆ. **ಪ್ರಾತರಿತ್ವನ್, ಅಗ್ರೇತ್ವನ್.** ಎಂದರೆ ಪ್ರಾತಃಕಾಲದಲ್ಲಿ ಬರತಕ್ಕವನು, ಮುಂದುಗಡೆ ಹೋಗತಕ್ಕವದು ಎಂದರ್ಥ. ಈ ಋಕ್ಕಿನಲ್ಲಿಯೂ ಇದರ ಹಿಂದಿನ ಋಕ್ಕಿನಲ್ಲಿಯೂ **ಪ್ರಾತರಿತ್ವನ್** ಶಬ್ದವು ಕಕ್ಷೀವಂತನಿಗೂ ಸ್ವನಯನಿಗೂ ವಿಶೇಷಣವಾಗಿದೆ. ಸ್ವನಯನು ಪ್ರಾತಃಕಾಲದಲ್ಲೇ, ಕಕ್ಷೀವಂತನಲ್ಲಿಗೆ ಬಂದವನೆಂದೂ, ಕಕ್ಷೀವಂತನು ಪ್ರಾತಃ ಕಾಲದಲ್ಲಿಯೇ ಅತಿಥಿಯಾಗಿ ಸಂಭವಿಸಿದವನು ಎಂದೂ ಅರ್ಥ.

**ಪದಿಂ—ಪದಿರ್ಗಂತುರ್ಭವತಿ ಯತ್ ಪದ್ಯತೇ।** (ನಿ. ೫-೧೯) ಹೋಗತಕ್ಕವನಾದ್ದರಿಂದ (ಸಂಚರಿಸುವವ ನಾದ್ದರಿಂದ) ಚಲಿಸುವ ವ್ಯಕ್ತಿಗೆ **ಪದಿ** ಯೆಂಬ ವಿಶೇಷಣವಿದೆ.

**ಮುಕ್ಷೀಜಯೇವ—ಮುಚ್ಯಮಾನಾ ಸತೀ ಬಂಧನಂ ಜನಯತೀತಿ ಮುಕ್ಷೀಜಾ ಮೃಗಪಕ್ಷ್ಯಾದಿಬಂಧನೀ ರಜ್ಜುಃ।** ಕೆಳಗೆ ಹರಡಿದ ಮೇಲೆ ಮೃಗಪಕ್ಷ್ಯಾದಿಗಳನ್ನು ಬಂಧಿಸುವ ಬಲೆಯೆಂದರ್ಥ.

**ಮುಕ್ಷೀಜಾ ಮೋಚನಾಚ್ಚ ಸಯನಾಚ್ಚ ತತನಾಚ್ಚ ।**

(ನಿ. ೫-೧೯)

ಕೆಳಗೆ ಹರಡಿಹಾಕುವುದರಿಂದಾಗಲೀ, ನೆಲದ ಮೇಲೆ ಹಾರಾಡುವುದರಿಂದಾಗಲಿ ಅಥವಾ ನೆಲದ ಮೇಲೆ ವಿಸ್ತೃತವಾಗಿ ಬೀಸುವುದರಿಂದಾಗಲಿ **ಬಲೆಗೆ ಮುಕ್ಷೀಜ**ವೆಂದು ಹೆಸರು.

**ಉತ್ಸಿನಾತಿ—ಉದ್ಗಮ್ಯ ಸಿನಾತಿ । ಬಧ್ನಾತಿ ।** ಬಂಧಿಸುತ್ತಾನೆ. ದಾರಿಯಲ್ಲಿ ಧನಕನಕಾದಿಗಳಿಂದ ಆಕರ್ಷಿಸಿ ಪ್ರಯಾಣವನ್ನು ತಡೆದನು. ಆದ್ದರಿಂದ ಬಂಧಿಸಿದವನು ಎಂದು ತಾತ್ಪರ್ಯ. ಧನಕನಕಾದಿ ಸಂಪತ್ತುಗಳನ್ನು **ಮುಕ್ಷೀಜಕ್ಕೂ, ಕಕ್ಷೀವಂತನನ್ನು** ಪಕ್ಷ್ಯಾದಿಗಳಿಗೂ ಹೋಲಿಸಿದೆ.

ಪಾದುಃ ॥ ೬೪ ॥

ಪಾದುಃ ಪದ್ಯತೇಃ। "ಆವಿಃ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ"। ಆವಿಷ್ಕುರುತೇ ಭಾಸಮಾದಿತ್ಯೋ ಗೂಹತೇ ಬುಸಮ್। ಬುಸಮಿತ್ಯುದಕನಾಮ ಬ್ರವೀತೇಃ ಶಬ್ದಕರ್ಮಣಃ। ಭ್ರಂಶತೇರ್ವಾ। ಯದ್ವರ್ಷನ್ಪಾ-ತಯತ್ಯುದಕಂ ರಶ್ಮಿಭಿಸ್ತತ್ಪ್ರತ್ಯಾದತ್ತೇ ॥ ೨ ॥ ೧೯ ॥

ಉದಾಹರಣೆಯ ಋಕ್ಕು—

**ಸಾ ತೇ ಜೀವಾತುರುತ ತಸ್ಯ ವಿದ್ಧಿ ಮಾ ಸ್ಮೈತಾದೃಗಪಗೂಹಃ ಸಮರ್ಯೇ।**
**ಆವಿ ಸ್ವಃ ಕೃಣುತೇ ಗೂಹತೇ ಬುಸಂ ಸ ಪಾದುರಸ್ಯ ನಿರ್ಣಿಜೋ ನ ಮುಚ್ಯತೇ ॥**

ಇದರ ಅರ್ಥವು—

ಎಲೈ ಅಂತರಾತ್ಮನೇ, ನಿನ್ನ ಆದಿತ್ಯಾತ್ಮಕವಾದ ಸ್ವರೂಪವು ಜೀವನಕ್ಕೆ ಕಾರಣಭೂತವಾಗಿದೆ. ಮತ್ತು ಅದೇ ಆದಿತ್ಯನ ಇಂತಹ ಸ್ವರೂಪವು ಯಜ್ಞಕಾಲದಲ್ಲಿ ಪೂಜ್ಯವಾದುದೆಂದು ತಿಳಿಯುವುದನ್ನೂ ಮರೆಸಬೇಡ. ಶುದ್ಧಿಕಾರಕನಾದ ಆದಿತ್ಯನ

ರಶ್ಮಿರೂಪವಾದ ಸಂಚಾರನೇ, ನೂರು ಲೋಕಗಳನ್ನೂ ಪ್ರಕಾಶಪಡಿಸುತ್ತದೆ. ಉದಕವನ್ನು ಮರೆಸುತ್ತದೆ. ಅದು ಯಾವಾಗಲೂ ನಿಲ್ಲುವುದಿಲ್ಲ.

**ಸಾದುಃ** ಎಂಬ ಶಬ್ದವು ನಡಿ, ಹೋಗು ಎಂಬರ್ಥವುಳ್ಳ **ಷದ್** ಧಾತುವಿನಿಂದ ನಿಷ್ಪನ್ನವಾಗಿಡೆ. ಪಾದ ಅಥವಾ ಕಾಲು ಎಂದರ್ಥವು. ಈ ವಿಷಯದಲ್ಲಿ ಪ್ರಕೃತಋಕ್ಕೇ ಉದಾಹರಣೆಯಾಗಿರುವುದು. ಇಲ್ಲಿರುವ **ಬುಸ**ವೆಂಬ ಶಬ್ದಕ್ಕೆ ಉದಕವೆಂದರ್ಥವು. ಸೂರ್ಯನು ಬೆಳಕನ್ನು ಪ್ರಕಾಶಪಡಿಸುತ್ತಾನೆ. ಮತ್ತು ಉದಕವನ್ನು ಬಚ್ಚಿಡುತ್ತಾನೆ. ಶಬ್ದಮಾಡು ಎಂಬ **ಬ್ರು**ಧಾತುವಿನಿಂದಾಗಲಿ, ಕೆಳಕ್ಕೆ ಬೀಳು ಎಂಬರ್ಥವುಳ್ಳ **ಭ್ರಂಶ್** ಧಾತುವಿನಿಂದಾಗಲಿ **ಬುಸ** ಶಬ್ದವು ನಿಷ್ಪನ್ನವಾಗಿದೆ. ಉದಕವೆಂದರ್ಥವು ಮೇಘದಿಂದ ಉದಕವು ವೃಷ್ಟಿರೂಪದಲ್ಲಿ ಶಬ್ದಮಾಡುತ್ತಾ ಬೀಳುವುದೆಂದಭಿಪ್ರಾಯವು. ಈ ರೀತಿ ವೃಷ್ಟಿದ್ವಾರಾ ಭೂಮಿಯ ಮೇಲೆ ಬೀಳುವ ಉದಕವನ್ನು ಸೂರ್ಯನು (ಆದಿತ್ಯನು) ರಶ್ಮಿಗಳ ಮೂಲಕ ಹಿಂದಕ್ಕೆ ಹೀರಿ ಎಳೆದುಕೊಳ್ಳುತ್ತಾನೆ ಎಂದರೆ ಸೂರ್ಯನ ರಶ್ಮಿಗಳ ತಾಪದಿಂದ ಕಾದ ಜಲಾಶಯಗಳ ಉದಕವನ್ನು ಆವಿಯ ಮೂಲಕ ಸೂರ್ಯನಿಗಭಿಮುಖವಾಗಿ ಅಂತರಿಕ್ಷದಲ್ಲಿ (ಮೇಘ ರೂಪದಲ್ಲಿ) ಶೇಖರಿಸಲ್ಪಡುವುದೆಂದಭಿಪ್ರಾಯವು.

**ಇತಿ ಏಕೋನವಿಂಶಃ ಖಂಡಃ**

ಇಲ್ಲಿಗೆ ಹತ್ತೊಂಭತ್ತನೆಯ ಖಂಡವು ಸಮಾಪ್ತವು

---

## ಅಥ ವಿಂಶಃ ಖಂಡಃ

### ಇಪ್ಪತ್ತನೆಯ ಖಂಡವು

ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತ-
ಜ್ಯೋತಿಷ್ಕೋ ವಾ ವಿಕ್ರಾನ್ತಜ್ಯೋತಿಷ್ಕೋ ವಾ ॥

ವೃಕಃ ॥ ೬೫ ॥

ವೃಕಶ್ಚನ್ದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ
ವಾ ವಿಕ್ರಾನ್ತಜ್ಯೋತಿಷ್ಕೋ ವಾ ॥ ॥ ೧ ॥ ೨೦ ॥

**ವೃಕ** ಎಂದರೆ ಚಂದ್ರನೆಂದರ್ಥವು. ಏಕೆಂದರೆ **ಸ ಹಿ ವಿಕೃತಜ್ಯೋತಿಷ್ಕಃ ಪ್ರಕಾಶಜ್ಯೋತಿಷ್ಕೋ ಭವತಿ** ಚಂದ್ರನು ಪ್ರಕಾಶವುಳ್ಳ ಬೆಳಕನ್ನು ಎಲ್ಲೆಡೆಯಲ್ಲಿಯೂ ಬೀರುತ್ತಾ ಬೆಳಗುವವನು ಎಂದರೆ ಚಂದ್ರನ ಬೆಳಕು ಭೂಮಿಯ ಮೇಲೆ ಎಲ್ಲಾ ಕಡೆಗೂ ಹರಡಿಕೊಳ್ಳುವುದು ಅಥವಾ **ವಿಕೃತಜ್ಯೋತಿಷ್ಕೋ ವಾ** ಈ ಚಂದ್ರನ ಬೆಳಕು ಸೂರ್ಯ, ಅಗ್ನಿ ಮೊದಲಾದವುಗಳ ಬೆಳಕಿನಂತೆ ಉಷ್ಣಾಂಶವನ್ನು ಬೀರದೆ ಕೇವಲ ಶೀತಲವಾಗಿರುವುದು. ಆದ್ದರಿಂದ ಚಂದ್ರನ ಬೆಳಕು ಇತರ ಬೆಳಕುಗಳಂತಲ್ಲದೆ ವಿಕಾರವಾಗಿ (ಶೀತಲವಾಗಿ) ಇರುವುದು. ಆದ್ದರಿಂದ ಚಂದ್ರನು ವಿಕೃತಜ್ಯೋತಿಷ್ಕನೆಂದು ಹೇಳಲ್ಪಡುವನು. ಅಥವಾ **ವಿಕ್ರಾಂತಜ್ಯೋತಿಷ್ಕೋ ವಾ** ಈ ಚಂದ್ರನ ಬೆಳಕು ಇತರ ಸೂರ್ಯಾದಿಗಳ ಬೆಳಕುಗಳಂತಲ್ಲದೆ ನಕ್ಷತ್ರಾದಿ (ಸೂರ್ಯ

ಗಳ ಬೆಳಕಿನಿಂದ ಪ್ರಕಾಶಿಸುವುದು ಎಂದರೆ ಚಂದ್ರನಿಗೆ ಸ್ವಸಾಮರ್ಥ್ಯದಿಂದ ಬೆಳಕು ಉಂಟಾಗುವುದಿಲ್ಲ. ಸೂರ್ಯಾದಿಗಳ ಬೆಳಕಿನಿಂದಲೇ ಪರೋಕ್ಷವಾಗಿ ಬೆಳಗುವವನು ಎಂದರ್ಥವು.

**ಇತಿ ವಿಂಶಃ ಖಂಡಃ**

**ಇಲ್ಲಿಗೆ ಇಪ್ಪತ್ತನೆಯ ಖಂಡವು ಸಮಾಪ್ತವು**

---

## ಅಥ ಏಕವಿಂಶಃ ಖಂಡಃ

**ಇಪ್ಪತ್ತೊಂದನೆಯ ಖಂಡವು**

"ಅರಣೋ ಮಾಸಕೃದ್ವೃಕಃ ಪಥಾ ಯನ್ತಂ ದದರ್ಶ ಹಿ । ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಠ್ಯಾಮಯೀ ವಿತ್ತಂ ಮೇ ಅಸ್ಯ ರೋದಸೀ ॥ ಅರುಣ ಆರೋಚನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚನ್ದ್ರಮಾ ವೃಕಃ ಪಥಾ ಯನ್ತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನ ಯೇನ ಯೋಕ್ಷ್ಯಮಾಣೋ ಭವತಿ ಚನ್ದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ॥ ಆದಿತ್ಯೋಽಪಿ ವೃಕ ಉಚ್ಯತೇ । ಯದಾವೃಙ್ಕ್ತೇ । "ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಞ್ಚತಂ ವೃಕಸ್ಯ ।" ಆಹ್ವಯದುಷಾ ಅಶ್ವಿನಾವಾದಿತ್ಯೇನಾಭಿಗ್ರಸ್ತಾ ತಾಮಶ್ವಿನೌ ಪ್ರಮುಮುಚತುರಿತ್ಯಾಖ್ಯಾನಮ್ । ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ । 'ವೃಕಶ್ಚಿದಸ್ಯ ವಾರಣ ಉರಾಮಥಿಃ' ಉರಣಮಥಿಃ ॥ ಉರಣ ಊರ್ಣಾವಾನ್ ಭವತ್ಯೂರ್ಣಾ ಪುನರ್ವೃಣೋತೇರೂರ್ಣೋತೇರ್ವಾ । ವೃದ್ಧವಾಶಿನ್ಯಪಿ ವೃಕ್ಯುಚ್ಯತೇ । 'ಶತಂ ಮೇಷಾನ್ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾನ್ಧಂ ಚಕಾರ ।' ಇತ್ಯಪಿ ನಿಗಮೋ ಭವತಿ ॥ ಜೋಷವಾಕಮಿತ್ಯವಿಜ್ಞಾತನಾಮಧೇಯಂ ಜೋಷಯಿತವ್ಯಂ ಭವತಿ ॥೨೧॥

---

"ಅರುಣೋ ಮಾಸಕೃದ್ವೃಕಃ ಪಥಾ ಯನ್ತ ದದರ್ಶ ಹಿ ।
ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಠ್ಯಾಮಯೀ ವಿತ್ತಂ ಮೇ
ಅಸ್ಯ ರೋದಸೀ ॥"

ಅರುಣ ಆರೋಚನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚನ್ದ್ರಮಾ ವೃಕಃ ಪಥಾ ಯನ್ತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನಯೇನ ಯೋಕ್ಷ್ಯಮಾಣೋ ಭವತಿ ಚನ್ದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ॥೧॥

ಉದಾಹರಣೆಯ ಋಕ್ಕು—

**ಅರುಣೋ ಮಾಸಕೃದ್ವೃಕಃ ಪಥಾ ಯಂತಂ ದದರ್ಶ ಹಿ ।**
**ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಠ್ಯಾಮಯೀ ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧-೧೦೫-೧೮)

ಇದರ ಅರ್ಥವು—

ಒಂದುಸಲ ನಾನು ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ಕೆಂಪುಬಣ್ಣದ ತೋಳನು ನನ್ನನ್ನು ನೋಡಿತು. ಅನಂತರ ಅದು ನನ್ನನ್ನು ನೋಡಿ ತಿನ್ನಲಿಚ್ಛಿಯಿಂದ ಬೆನ್ನುನೋವಿನಿಂದ ಹಿಂಸೆಪಡುವ ಕಮ್ಮಾರನು ತನ್ನ ಬೆನ್ನನ್ನು ಸರಿಪಡಿಸಿಕೊಳ್ಳಲು ಊರ್ಧ್ವಮುಖವಾಗಿ ದೇಹವನ್ನು ಎತ್ತರಿಸಿ ನಿಲ್ಲುವಂತೆ ಈ ತೋಳನೂ ಸಹ ತನ್ನ ದೇಹವನ್ನು ಊರ್ಧ್ವಮುಖವಾಗಿ ಮಾಡಿಕೊಂಡು ನನ್ನನ್ನು ಅಟ್ಟಿಸಿಕೊಂಡು ಬಂದಿತು. ಎಲೈ ದ್ಯಾವಾಪೃಥಿವಿಗಳಿರಾ ನನ್ನ ಈ ದುಃಖವನ್ನು ತಿಳಿಯಿರಿ.

ನಿರುಕ್ತಕಾರರು ವೃಕಶಬ್ದದ ನಿರ್ವಚನವನ್ನು ಮಾಡುವಾಗ ಉದಾಹರಣೆಗಾಗಿ ಈ ಋಕ್ಕನ್ನು ತೆಗೆದುಕೊಂಡು ವಿವರಿಸಿದ್ದಾರೆ. (೫-೨೧) ಆಗ ಅವರು **ಮಾಸಕೃತ್** ಎಂಬ ಪದಕ್ಕೆ ಅರ್ಥಮಾಡಿರುವುದು ತಪ್ಪೆಂದೂ ಅದು **ಮಾಸಕೃತ್** ಎಂಬ ಒಂದು ಪದವಲ್ಲವೆಂದೂ, **ಮಾ ಸಕೃತ್** ಎರಡು ಪದಗಳಾಗಬೇಕೆಂದೂ ಬೃಹದ್ದೇವತಾಕಾರರು ಖಂಡಿಸಿದ್ದಾರೆ. ಮೊದಲು ನಿರುಕ್ತಕಾರರ ವಿವರಣೆಯನ್ನು ನೋಡಿ ಅನಂತರ ಖಂಡನೆಯನ್ನು ಪರಿಶೀಲಿಸೋಣ.

**ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ । ಅರುಣ ಆರೋಚನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚಂದ್ರಮಾ ವೃಕಃ ಪಥಾ ಯಂತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನ ಯೋಕ್ಷ್ಯಮಾಣೋ ಭವತಿ ಚಂದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ।** (ನಿ. ೫-೨೦,೨೧)

ವೃಕನೆಂದರೆ ಚಂದ್ರನೆಂದರ್ಥ, ಜ್ಯೋತಿಯನ್ನು ಪ್ರಕಾಶಪಡಿಸುವುದರಿಂದಾಗಲಿ ಅಥವಾ ನ್ಯೂನವಾದ ಜ್ಯೋತಿಯುಳ್ಳವನೆಂದಾಗಲಿ ಅಥವಾ ನಕ್ಷತ್ರಗಳೊಡನೆ ಹೋಲಿಸಿದರೆ ಅಧಿಕವಾದ ಪ್ರಕಾಶವುಳ್ಳವನೆಂದಾಗಲಿ ಅರ್ಥವನ್ನು ಕೊಡುವುದ

ರಿಂದ ಚಂದ್ರನಿಗೆ ಈ ಹೆಸರು ಬಂದಿದೆ. ಎಂದು ಪ್ರಕೃತವಾದ ಈ ಋಕ್ಕನ್ನು ಉದಹರಿಸಿ ವಿವರಿಸಿದ್ದಾರೆ. ಈ ವಿವರಣೆಯಲ್ಲಿ **ಅರುಣ** ಶಬ್ದಕ್ಕೆ **ಆರೋಚನಃ** ಸಕಲಜಗತ್ತಿಗೂ ಪ್ರಕಾಶವನ್ನು ಬೀರಿ ಮನೋಹರನಾಗಿ ಕಾಣುವ ಎಂದರ್ಥ. **ಮಾಸಕೃತ್** ಎಂದರೆ **ಮಾಸಾರ್ಧಮಾಸರ್ತ್ವಯನಸಂವತ್ಸರಾದೀನ್ ಕಾಲವಿಶೇಷಾನ್ ಕುರ್ವನ್ । ತಿಥಿವಿಭಾಗಜ್ಞಾನಸ್ಯ ಚಂದ್ರಗತ್ಯಧೀನತ್ವಾತ್ ।** ಮಾಸ, ಅರ್ಧಮಾಸ, ಋತು, ಅಯನ, ಸಂವತ್ಸರ ಹೀಗೆ ಕಾಲವಿಭಾಗಗಳನ್ನು ಮಾಡತಕ್ಕವನೆಂದರ್ಥ. ಅಂತಹ ಚಂದ್ರನು ಆಕಾಶದಲ್ಲಿ ಸಂಚರಿಸುವ ನಕ್ಷತ್ರಗಣವನ್ನು ನೋಡಿದನು, (ಇಲ್ಲಿ ಹಿ ಶಬ್ದದಿಂದ **ನಕ್ಷತ್ರಗಣಮೇವ ದದರ್ಶ ನ ಮಾಂ ಇತ್ಯನಾದರೋ ದ್ಯೋತ್ಯತೇ ।** ನಕ್ಷತ್ರಗಣವನ್ನು ಮಾತ್ರ ನೋಡಿದನೇ ಹೊರತು ನನ್ನನ್ನು ನೋಡಲೇ ಇಲ್ಲವೆಂದರ್ಥವಾಗುತ್ತದೆ (ವಾ. ಭಾ.) ಇಲ್ಲಿ ಅತ್ರ **ಮಾಸಕೃತ್ ಇತಿ ಯಾಸ್ಕಃ ಏಕಂ ಪದಂ ಮನ್ಯತೇ, ಶಾಕಲ್ಯಸ್ತು ಪದದ್ವಯಂ । ತಸ್ಮಿನ್ಪಕ್ಷೇಽಯಮರ್ಥಃ । ದಕ್ಷಪ್ರಜಾಪತೇರ್ದುಹಿತೃಭೂತಾಃ ಸ್ವಭಾರ್ಯಾಃ ಅಶ್ವಿನ್ಯಾದ್ಯಾಸ್ತಾರಕಾಃ ಪುನಃಪುನರ್ದದರ್ಶ । ಮಾಂ ಸಕೃದೇವ ಪಶ್ಯತೀತಿ ಸಕೃದ್ದೃಷ್ಟ್ವಾ ಚೋಜ್ಜಿಹೀತೇ । ತಾರಾಭಿಃ ಸಹೋರ್ಧ್ವಮೇವ ಗಚ್ಛತಿ । ಸ ಮಾಂ ಕೂಪಾದುತ್ತಾರಯತಿ । ಅತ ಇದಮನುಚಿತಂ ।** ಇಲ್ಲಿ ಯಾಸ್ಕರ ಮತದಂತೆ **ಮಾಸಕೃತ್** ಎಂಬುದು ಒಂದೇ ಪದ. ಆದರೆ ಶಾಕಲ್ಯರ ಮತದಲ್ಲಿ ಇವು ಎರಡು ಪದಗಳು. ಅವರ ಅಭಿಪ್ರಾಯದಂತೆ ಈ ವಿಧವಾದ ಅರ್ಥವಾಗುತ್ತದೆ. ಅದು, ದಕ್ಷಪ್ರಜಾಪತಿಯ ಕನ್ಯೆಯರಾದ ಅಶ್ವಿನ್ಯಾದಿನಕ್ಷತ್ರಗಳನ್ನು (ತನ್ನ ಪತ್ನಿಯರನ್ನು) ಚಂದ್ರನು ಪುನಃ ಪುನಃ ನೋಡುತ್ತಾ ನನ್ನನ್ನು ಕೊಂಚಮಾತ್ರ ನೋಡುತ್ತಾನೆ. (ಮಾ ಸಕೃದೇವ ಪಶ್ಯತಿ). ಆಗ ನನ್ನನ್ನು ಲಕ್ಷ್ಯಮಾಡದೇ ತಾರೆಗಳೊಡನೆಯೇ ಸೇರಿಕೊಂಡು ಹೊರಟುಹೋಗುತ್ತಾನೆ. ಕೂಪದಲ್ಲಿ ಬಿದ್ದಿದ್ದ ನನ್ನನ್ನು ಮೇಲಕ್ಕುತ್ತುವುದೇ ಇಲ್ಲ. ಇದು ಅನುಚಿತ. (ಎಲೈ ದ್ಯಾವಾಪೃಥಿವಿಗಳೇ ನನ್ನ ಮೊರೆಯನ್ನು ಕೇಳಿರಿ.) ಎಂದು ತಾತ್ಪರ್ಯ.

ಹೀಗೆ ಎರಡು ಅಭಿಪ್ರಾಯಗಳನ್ನು ಉದಹರಿಸಿದ್ದಾರೆ. ಬೃಹದ್ದೇವತೆಯಲ್ಲಿ ನಿರುಕ್ತಕಾರರ ಕೆಲವು ದೋಷಗಳನ್ನು ಉದಹರಿಸುವ ಸಂದರ್ಭದಲ್ಲಿ ಈ ಪದವೂ ಒಂದು ಉದಾಹರಣೆಯಾಗಿ ತೆಗೆಯಲ್ಪಟ್ಟಿದೆ.

**ಪದಮೇಕಂ ಸಮಾದಾಯ ದ್ವಿಧಾ ಕೃತ್ವಾ ನಿರುಕ್ತವಾನ್ ।**
**ಪುರುಷಾದಃ ಪದಂ ಯಾಸ್ಕೋ ವೃಕ್ಷೇ ವೃಕ್ಷ ಇತಿ ತ್ವೃಚಿ ॥**
**ಅನೇಕಂ ಸತ್ತಥಾ ಚಾಸ್ಯದೇಕಮೇವ ನಿರುಕ್ತವಾನ್ ।**
**ಅರುಣೋ ಮಾ ಸಕೃನ್ಮಂತ್ರೇ ಮಾಸಕೃದ್ವಿಗ್ರಹೇಣ ತು ॥**

(ಬೃ. ದೇ. ೩–೧೧೧,೧೧೨)

ಇಲ್ಲಿ ಬೃಹದ್ದೇವತಾಕಾರರು ಯಾಸ್ಕರ ಎರಡು ವಿಧವಾದ ದೋಷಗಳನ್ನು ತೋರಿಸಿದ್ದಾರೆ. ಮೊದಲನೆಯದಾಗಿ ಯಾಸ್ಕರು ಒಂದೇ ಪದವಾಗಿರಬೇಕಾದ ಸಂದರ್ಭದಲ್ಲಿ ಒಂದೇ ಪದವನ್ನು ಎರಡು ಪದಗಳಾಗಿ ಭೇದಮಾಡುವುದೂ, ಎರಡನೆಯದಾಗಿ ಎರಡು ಪದಗಳಾಗಿರಬೇಕಾದ ಸನ್ನಿವೇಶದಲ್ಲಿ ಒಂದೇ ಪದವನ್ನು ಮಾಡಿರುವುದೂ ಸಹ ಅರ್ಥವನ್ನು ಬಹಳ ವ್ಯತ್ಯಾಸ ಮಾಡಿರುತ್ತದೆ. ಉದಾಹರಣೆಗೆ—

**ವೃಕ್ಷೇವೃಕ್ಷೇ ನಿಯತಾ ಮೀಮಯದ್ಗೌಸ್ತತೋ ವಯಃ ಪ್ರಪತಾನ್ಪೂರುಷಾದಃ ।**

()ಋ. ಸಂ. ೧೦–೨೭–೨೨)

ಎಂಬ ಋಕ್ಕಿನಲ್ಲಿ **ಪೂರುಷಾಣಃ** ಎಂಬ ಒಂದೇ ಪದವಾಗಿರಬೇಕಾದಾಗ ಅದನ್ನು ಎರಡು ಪದಗಳಾಗಿ ವಿಭಾಗಿಸಿ ಅರ್ಥ ಮಾಡಿದ್ದಾರೆ. ಅಲ್ಲದೇ, ಪ್ರಕೃತವಾದ ಋಕ್ಕಿನಲ್ಲಿ **ಮಾ, ಸಕೃತ್** ಎಂದು ಎರಡು ಪದಗಳಾಗಿರಬೇಕಾದಾಗ ಅದನ್ನು **ಮಾಸಕೃತ್** ಎಂದು ಒಂದೇ ಪದವನ್ನಾಗಿಮಾಡಿ ವಿವರಿಸಿದ್ದಾರೆ. ಇಲ್ಲಿ ಅರ್ಥವ್ಯತ್ಯಾಸವಾಗಿರುವುದು ಎಂದು ಯಾಸ್ಕರ ದೋಷವನ್ನು ತೋರಿಸಿದ್ದಾರೆ. ಹೀಗೆಯೇ ಇನ್ನೂ ಇಂತಹ ಕೆಲವು ದೋಷಗಳನ್ನು ತೋರಿಸಿರುವರು. ಆದರೆ ಅವು ಸದ್ಯಃ ಅಪ್ರಕೃತವಾದುದರಿಂದ ಅವನ್ನೆಲ್ಲಾ ಸಂದರ್ಭಾನುಸಾರವಾಗಿ ಉದಹರಿಸಲಾಗುತ್ತದೆ.

**ವೃಕಃ**—ವೃಕಶಬ್ದಕ್ಕೆ ಈ ಋಕ್ಕಿನಲ್ಲಿ **ತೋಳ**ನೆಂದಾಗಲಿ ಅಥವಾ **ಚಂದ್ರ**ನೆಂದಾಗಲಿ ಅರ್ಥ. ಆದರೆ ಈ ಪದವನ್ನು ಇನ್ನೂ ಕೆಲವು ಅರ್ಥಗಳಲ್ಲೂ ಉಪಯೋಗಿಸಿದೆ. **ಆದಿತ್ಯೋಽಪಿ ವೃಕ ಉಚ್ಯತೇ ಯದಾವೃಙ್ಕ್ತೇ** (ನಿ. ೫-೨೧) ಎಂದು ನಿರುಕ್ತಕಾರರು,

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**

(ಋ. ಸಂ. ೧-೧೧೭-೧೬)

ಎಂಬ ಋಕ್ಕನ್ನು ಉದಹರಿಸಿ ಕತ್ತಲನ್ನು ನಾಶಮಾಡಿ ಬೆಳಕನ್ನು ಹರಡುವುದೆಂದು ಅರ್ಥವನ್ನು ಕೊಡುವುದರಿಂದ ಇಲ್ಲಿ **ವೃಕ** ಶಬ್ದಕ್ಕೆ **ಆದಿತ್ಯ**ನೆಂದು ಅರ್ಥ

**ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।** ಕಚ್ಚುವುದರಿಂದ **ಅರಣ್ಯಶ್ವಾ** ಎಂದರೆ ಕಾಡುನಾಯಿಗೂ (ತೋಳ) ವೃಕವೆಂದು ಹೆಸರು, ಎಂದು ಉದಾಹರಣೆಗಾಗಿ—

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**

(ಋ. ಸಂ. ೮-೬೬-೮)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಆದರೆ ಈ ಋಕ್ಕಿನಲ್ಲಿ **ವೃಕ**ಶಬ್ದಕ್ಕೆ ಸಾಯಣರು **ಕಳ್ಳ** ಎಂಬರ್ಥವನ್ನು ಮಾಡಿದ್ದಾರೆ.

**ಉಜ್ಜಿಹೀತೇ**—**ಉದ್ಗಚ್ಛತಿ ಅಥವಾ ಅಭಿಜಿಹೀತೇ ।** ಎಂದರೆ ಅಟ್ಟಿಸಿಕೊಂಡು ಬರುವಂತೆ ಮೇಲಕ್ಕೆದ್ದಿತು ಎಂದರ್ಥ. ತನ್ನ ಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಹೊರಡುವುದು ಎನ್ನುವ ಅರ್ಥದಲ್ಲಿ ಈ ಪದದ ಪ್ರಯೋಗವಿದೆ.

**ಯಹ್ವಾ ಇವ ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ ।**

(ಋ. ಸಂ. ೫-೧-೧)

ಎಂಬ ಋಕ್ಕಿನಲ್ಲಿ **ಉಜ್ಜಿಹಾನಾಃ** ಎಂಬ ಪದಕ್ಕೆ ತಮ್ಮ ಸ್ವಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಹೊರಟವು ಎಂದರ್ಥ.

**ಉದಾತೈರ್ಜಿಹತೇ ಬೃಹದ್ದ್ವಾರೋ ದೇವೀರ್ಹಿರಣ್ಯಯೀಃ ।**

(ಋ. ಸಂ. ೯-೫-೫)

ಎಂಬ ಋಕ್ಕಿನಲ್ಲಿ **ಉಜ್ಜಿಹತೇ** ಎಂದರೆ ಬಾಗಿಲು ಮೇಲೆದ್ದು ತೆರೆಯಿತು ಎಂದು ತಾತ್ಪರ್ಯ.

**ನಿಚಾಯ್ಯ**—**ಚಾಯೃ ಪೂಜಾನಿಶಾಮನಯೋಃ ।** ಪೂಜಿಸು ಧ್ಯಾನಿಸು ಎಂಬರ್ಥವನ್ನು ಕೊಡುವ **ಚಾಯೃ** ಧಾತುವಿನಿಂದ ನಿಷ್ಪನ್ನವಾಗಿದೆ. **ದರ್ಶನ** ಮತ್ತು **ಮನನ** ಈ ಎರಡರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ.

**ವೈಶ್ವಾನರಂ ಮನಸಾಗ್ನಿಂ ನಿಚಾಯ್ಯಾ ಹವಿಷ್ಮಂತೋ ಅನುಷತ್ಯಂ ಸ್ವರ್ವಿದಂ ।**

(ಋ. ಸಂ. ೩-೨೬-೧)

ಎಂಬ ಋಕ್ಕಿನಲ್ಲಿ **ನಿಚಾಯ್ಯ** ಎಂದರ ವೈಶ್ವಾನರಾಗ್ನಿಯನ್ನು **ಅಂತಃಕರಣದಲ್ಲಿ ಧ್ಯಾನಿಸುತ್ತಾ** ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ದುರುಗುಟ್ಟಕೊಂಡು ನೋಡುವುದು ಎಂದರ್ಥ.

**ಪೃಷ್ಠ್ಯಾಮಯೀ—ಪೃಷ್ಟಿರಿತಿ ಪೃಷ್ಠಮುಚ್ಯತೇ ।** ಪೃಷ್ಠವೆಂದರೆ ಬೆನ್ನು ಎಂದರ್ಥ. ಬೆನ್ನುನೋವು ಎಂದು ತಾತ್ಪರ್ಯ.

ಆದಿತ್ಯೋಽಪಿ ವೃಕ ಉಚ್ಯತೇ । ಯದಾವೃಙ್ಕ್ತೇ ॥
"ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮು-
ಞ್ಚತಂ ವೃಕಸ್ಯ ।" ಆಹ್ವಯದುಷಾ ಅಶ್ವಿನಾವಾದಿತ್ಯೇನಾಭಿಗ್ರಸ್ತಾ
ತಾಮಶ್ವಿನೌ ಪ್ರಮುಮುಚತುರಿತ್ಯಾಖ್ಯಾನಮ್ । ೨ ।

ಉದಾಹರಣೆಯ ಋಕ್ಕು—

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**
**ವಿ ಜಯುಷಾ ಯಯಥುಃ ಸಾನದ್ರೇರ್ಜಾತಂ ವಿಷ್ವಾಚೋ ಅಹತಂ ವಿಷೇಣ ॥**

ಇದರ ಅರ್ಥವು—

ಎಲೈ ಅಶ್ವಿನೀದೇವತೆಗಳೇ, ವರ್ತಿಕಾ ಎಂಬ ಪಕ್ಷಿಯು ನಿಮ್ಮನ್ನು ಸ್ತುತಿಸಿದಾಗ ಅದನ್ನು ತೋಳನ ಬಾಯಿಂದ ಬಿಡಿಸಿದಿರಿ. ಜಯಶೀಲವಾದ ರಥದ ಮೇಲೆ ಜಾಹುಷ ಎಂಬುವನೊಡನೆ ಯಾರಿಗೂ ಹತ್ತಲಸಾಧ್ಯವಾದ ಬೆಟ್ಟದ ಮೇಲಕ್ಕೆ ಹೋದಿರಿ. ಹಾಗೆಯೇ ವಿಶ್ವಾಂಚನೆಂಬ ಅಸುರನ ಮಗನನ್ನು ವಿಷದಿಂದ ಕೊಂದಿರಿ. ಅಥವಾ ಜಗದಾವರಕನಾದ ಸೂರ್ಯ ನೊಡನೆ ಸೇರಿಹೋಗಿದ್ದ ಉಷಸ್ಸು ನಿಮ್ಮನ್ನು ಸ್ತುತಿಸಿದಾಗ ಆಕೆಯನ್ನು ಸೂರ್ಯಮಂಡಲದಿಂದ ಪ್ರತ್ಯೇಕಿಸಿ ರಾತ್ರಿಯ ಕೊನೆ ಯಲ್ಲಿ ಇರಿಸಿದಿರಿ. ಜಯಶೀಲವಾದ ರಥದಲ್ಲಿ ಕುಳಿತು ಮೇಘಗಳ ಮೇಲ್ಭಾಗಕ್ಕೆ ಮಳೆಗರೆಯುವುದಕ್ಕಾಗಿ ಹೊರಟು ವಿವಿಧಗತಿ ಯುಳ್ಳ ಮೇಘದ ಉದಕವನ್ನು ಸಕಲ ಭೂತಜಾತಗಳಿಗೆ ದೊರಕುವಂತೆ ಮಾಡಿದಿರಿ.

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು (ಕಾಡುನಾಯಿ) ತೋಳನು ಹಿಡಿದುಕೊಂಡು ಇದ್ದ ಒಂದು ಗುಬ್ಬಚ್ಚಿಯನ್ನು ಬಿಡಿಸಿ ಅದಕ್ಕೆ ಪ್ರಾಣದಾನ ಮಾಡಿದರೆಂದು, ಜಾಹುಷನೆಂಬ ರಾಜನು ಶತ್ರುಗಳಿಂದ ತೊಂದರೆಗೆ ಸಿಕ್ಕಿರುವುದನ್ನು ನೋಡಿ ಅವನಿಗೆ ಸಹಾಯಮಾಡಿ ಶ್ರೇಷ್ಠವಾಗಿರುವ ರಥಗಳಲ್ಲಿ ಕೂರಿಸಿಕೊಂಡು ಪರ್ವತದ ಶಿಖರಕ್ಕೆ ಹೋದರೆಂದೂ ನಾನಾವಿಧವಾದ ದುರ್ಮಾರ್ಗಗಳಿಂದ ಲೋಕಕ್ಕೆ ಹಿಂಸೆ ಮಾಡುತ್ತಿದ್ದ ವಿಷ್ವಾಚನೆಂಬ ಅಸುರನ ಮಗನಿಗೆ ವಿಷವನ್ನು ಕೊಟ್ಟು ಕೊಂದರೆಂದೂ ಅಶ್ವಿನೀದೇವತೆಗಳ ಮೂರು ಅದ್ಭುತಕಾರ್ಯಗಳು ವರ್ಣಿತವಾಗಿವೆ.

**ಆಸ್ನೋ ವೃಕಸ್ಯ ವರ್ತಿಕಾಮಭೀಕೇ ಯುವಂ ನರಾ ನಾಸತ್ಯಾಮುಮುಕ್ತಂ ।**
**ಉತೋ ಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃಣುತಂ ವಿಚಕ್ಷೇ ॥**

(ಋ. ಸಂ. ೧-೧೧೬-೧೪)

ಈ ಋಕ್ಕಿನ ಪೂರ್ವಾರ್ಧದಲ್ಲಿ ಗುಬ್ಬಚ್ಚಿಯನ್ನು ರಕ್ಷಿಸಿದ ವಿಷಯವು ವಿವರಿಸಲ್ಪಟ್ಟಿದೆ.

**ಪರಿವಿಷ್ಟಂ ಜಾಹುಷಂ ವಿಶ್ವತಃ ಸೀಂ ಸುಗೇಭಿರ್ನಕ್ತಮೂಹಥೂ ರಜೋಭಿಃ ।**
**ವಿಭಿನ್ದುನಾ ನಾಸತ್ಯಾ ರಥೇನ ವಿ ಪರ್ವತಾಁ ಅಜರಯೂ ಅಯಾತಮ್ ॥**

(ಋ. ಸಂ. ೧ -೧೧೬-೨೦)

ಎಂಬ ಈ ಋಕ್ಕಿನಲ್ಲಿಯೂ ಜಾಹುಷರಾಜನನ್ನು ರಕ್ಷಿಸಿದ ವಿಷಯವು ಉಕ್ತವಾಗಿದೆ.

" ವೃಕಸ್ಯ ಆಶ್ವಿನೋ ವಾಂ ವರ್ತಿಕಾಂ ಅಮುಞ್ಚತಂ " ಎಂಬ ಪದಗಳಿಂದ ಉಷಸ್ಸು ಆದಿತ್ಯಮಂಡಲದ ಅಧೀನಕ್ಕೆ ಒಳಪಟ್ಟಿರುವುದನ್ನು ನೋಡಿ ಅದರಿಂದ ಅದನ್ನು ಬಿಡಸಿರುವರು ಎಂದರೆ ಪ್ರಾತಃಕಾಲದಲ್ಲಿ ಸೂರ್ಯೋದಯವು ಆಗುವ ಕಾರಣ ಸೂರ್ಯನ ಉದಯಕ್ಕಿಂತ ಪೂರ್ವದಲ್ಲಿ ರಾತ್ರಿಯ ಕೊನೆಯ ಭಾಗದಲ್ಲಿ ಇರುವಂತೆ ಉಷಸ್ಸನ್ನು ಸ್ಥಾಪಿಸಿದರು ಎಂದು ಅರ್ಥಮಾಡಿ **ಸೂರ್ಯೇಣ ವಿಕೀಕೃತಾಮುಷಸಂ ಪೃಥಕ್ಕೃತ್ಯ ಉದಯಾತ್ಪೂರ್ವಂ ರಾತ್ರೇರಪರಭಾಗೇ ಸ್ಥಾಪಿತವಂತೌ** ಎಂದು ವ್ಯಾಖ್ಯಾನ ಮಾಡಿ ಸಾಯಣರು—ಯಾಸ್ಕರು ಹೇಳಿರುವ ಈ ಅಭಿಪ್ರಾಯವುಳ್ಳ ನಿರುಕ್ತದ ವಾಕ್ಯವನ್ನು ಉದಹರಿಸಿರುವರು—**ತಥಾ ಚ ಯಾಸ್ಕಃ** ।

**ಆದಿತ್ಯೋಽಪಿ ವೃಕ ಉಚ್ಯತೇ ಯದಾವೃಙ್ಕ್ತೇ । ಆಹ್ವಯದುಷಾ ಅಶ್ವಿನಾ ಆದಿತ್ಯೇನಾಭಿ-**
**ಗ್ರಸ್ತಾ ತಾಮಶ್ವಿನಾ ಪ್ರಮುಮುಚತುರಿತ್ಯಾಖ್ಯಾನಮ್ ॥**

(ನಿ. ೫-೨೧)

ಸಾಯಣರು—**ವಿವೃತಜ್ಯೋತಿಷ್ಕಃ ಸೂರ್ಯಃ ಉಚ್ಯತೇ । ವರ್ತತೇ ಪ್ರತಿದಿವಸಮಾವರ್ತತ ಇತಿ ವರ್ತಿಕ್ ಉಷಾಃ** ಎಂದು ವೃಕವರ್ತಿಕಾ ಶಬ್ದಗಳಿಗೆ ಉಷಸ್ಸು ಮತ್ತು ಸೂರ್ಯನೆಂಬ ಅರ್ಥವನ್ನು ಹೇಳಿರುವರು. ಈ ವ್ಯಾಖ್ಯಾನದಲ್ಲಿ ಬಲಾತ್ಕರಿಸಿ ಗೃಹಿತಳಾದ ಸ್ತ್ರೀಯನ್ನು ಬಿಡಿಸಿದ ವಿಷಯವು ಪ್ರತೀತವಾಗುವುದು. ನಿರುಕ್ತಕಾರರೂ ಕೂಡ ಉಷಸ್ಸು ಎಂಬ ಸ್ತ್ರೀಯು, ಸೂರ್ಯನಿಂದ ಆವೃತಳಾಗಿ ತನ್ನನ್ನು ರಕ್ಷಣೆಮಾಡಲು ಅಶ್ವಿನೀದೇವತೆಗಳನ್ನು (ಆಹ್ವಾನಮಾಡಿದಳು) ಕರೆದಳು ಎಂದು ಹೇಳಿರುವರು. ಮತ್ತು **ವಿಷ್ವಾಚಃ ಅಪ್ರೇಃ ಸಾನುಂ ವಿಜಿಯುಷಾ ಜಾತಂ ಅಹತಂ ಯುಯಥಃ** ಎಂಬ ವಾಕ್ಯಕ್ಕೆ ಅಶ್ವಿನೀದೇವತೆಗಳು ತಮ್ಮ ಜಯಶೀಲವಾದ ರಥದಿಂದ ಮೇಘವು ಇರುವ ಎತ್ತರವಾದ ಪ್ರದೇಶಕ್ಕೆ ಹೋಗಿ ಮೇಘದಲ್ಲಿರುವ ಮಳೆಯನ್ನು ಸುರಿಸುವ ಉದಕಗಳಿಂದ ಮಳೆಯನ್ನು ಸುರಿಸುವುದರಿಂದ ಪ್ರಾಣಿಗಳೆಲ್ಲರನ್ನೂ ರಕ್ಷಿಸಿದರು ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಿರುವರು.

ವಿಷ್ವಾಚಃ—**ವಿಷು ನಾನಾ ಅಭಿಮುಖ್ಯೇನ ಅಂಚತಿ**. ಅನೇಕವಿಧವಾಗಿ (ಪ್ರಾಣಿಗಳಿಗೆ) ವಿರುದ್ಧರೀತಿಯಿಂದ ಸಂಚರಿಸುವುದು. ವಿಷ್ವಾಕ್ ಎನಿಸಿಕೊಳ್ಳುವುದು ಸ್ಕಂದಸ್ವಾಮಿಗಳು ಈ ಅಭಿಪ್ರಾಯವನ್ನೇ ವಿವರಿಸಿ—

**ಯಾಭಿರ್ವರ್ತಿನಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾಗತಮ್ ।**

(ಋ. ಸಂ. ೧-೧೧೨-೮)

ಎಂಬ ಈ ಅರ್ಥಋಕ್ಕನ್ನೂ ಉದಾಹರಿಸಿರುವರು.

ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।

"ವೃಕಶ್ಚಿದಸ್ಯ ವಾರಣ ಉರಾಮಥಿಃ" ಉರಣಮಥಿಃ । ಉರಣ ಊರ್ಣವಾನ್ ಭವತ್ಯೂರ್ಣಾ ಪುನರ್ವೃಣೋತೇರೂರ್ಣೋತೇರ್ವಾ ॥೩॥

ಉದಾಹರಣೆಯ ಋಕ್ಕು—

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**
**ಸೇಮಂ ನಃ ಸ್ತೋಮಂ ಜುಜುಷಾಣ ಆ ಗಹೀಂದ್ರ ಪ್ರ ಚಿತ್ರಯಾ ಧಿಯಾ ॥**

ಇದರ ಅರ್ಥವು—

ಮಾರ್ಗನಿರೋಧಕನೂ ಮಾರ್ಗದಲ್ಲಿ ಸಿಕ್ಕಿದವರನ್ನು ಹಿಂಸಿಸುವನೂ ಆದ ಕಳ್ಳನೂ ಸಹ ಈ ಇಂದ್ರನ ಸಂಚಾರ ಮಾರ್ಗಗಳಲ್ಲಿ ಅನುಕೂಲವಾದ ರೀತಿಯಲ್ಲಿಯೇ ವರ್ತಿಸುತ್ತಾನೆ. ಎಲೈ ಇಂದ್ರನೇ ಅಂತಹ ಮಹಾತ್ಮೆಯುಳ್ಳ ನೀನು ನಮ್ಮಿಂದ ಪಠಿತವಾಗುವ ಈ ಸ್ತೋತ್ರವನ್ನು ಸೇವಿಸುತ್ತಾ ದಯಮಾಡು. ಎಲೈ ಇಂದ್ರನೇ, ಆಕರ್ಷಕವಾದ ಸ್ತುತಿ ನಿಮಿತ್ತವಾಗಿ ಅತಿಶಯವಾಗಿ ನಮ್ಮಲ್ಲಿಗೆ ಬಾ.

ಹೆಣ್ಣು ನಾಯಿಯೂ **ಶ್ವಾ** ವೃಕವೆಂದು ಕರೆಯಲ್ಪಡುತ್ತದೆ, ಏಕೆಂದರೆ ಅದು ಇತರರನ್ನು ಕಚ್ಚುತ್ತದೆ (ತೋಳನಂತೆ). ಹಾಗೆಯೇ ಇಂದ್ರನ ನಾಯಿಯಾದ ಸಾರಮೇಯಾ ಎಂಬ ಹೆಣ್ಣುನಾಯಿಗೂ ವೃಕವೆಂಬ ಹೆಸರಿದೆ. ಇದಲ್ಲದೆ ಮತ್ತು ಶತ್ರುಗಳಿಂದ ಕಾಪಾಡುವುದು. ಆದ್ದರಿಂದ ವೃಕವೆಂದು ಹೆಸರು.

**ಉರಾಮಥಿಃ ಉರಣಮಥಿಃ ಉರಾನ್ ಮೇಷಾನ್ ಯೋ ಮಥ್ನಾತಿ ಸ ಉರಾಮಥಿಃ**—**ಉರಾ** ಎಂದರೆ ಉಣ್ಣೆಯು. ಈ ಶಬ್ದವು **ಉರ್** ಮುಚ್ಚು ಎಂಬ ಧಾತುವಿನಿಂದ ನಿಷ್ಪನ್ನನಾಗಿದೆ. ಅಥವಾ ಮುಚ್ಚು, ಆಚ್ಛಾದಿಸು ಎಂಬರ್ಥವುಳ್ಳ **ವೃಣೋತಿ** ಧಾತುವಿನಿಂದಾಗಲಿ, **ಊರ್ಣೋತಿ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು.

ವೃದ್ಧವಾಶಿನ್ಯಪಿ ವೃಕ್ಯುಚ್ಯತೇ । "ಶತಂ ಮೇಷಾನ್ವೃಕ್ಯೇ ಚಕ್ಷದ್ದಾನಮೃಜ್ರಾಶ್ವಂ ತಂ ಪಿತಾನ್ಧಂ ಚಕಾರ ।" ಇತ್ಯಪಿ ನಿಗಮೋ ಭವತಿ ॥೪॥೨೧॥

ಮುದಿಯಾದ ಹೆಣ್ಣು ತೋಳಕ್ಕೂ ವೃಕೀ ಎಂದು ಹೆಸರು.

ಈ ವಿಷಯದಲ್ಲಿ ಉದಾಹರಣೆಯ ಋಕ್ಕು—

**ಶತಂ ಮೇಷಾನ್ವೃಕ್ಯೇ ಚಕ್ಷದ್ದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ।**
**ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥**

(ಋ. ಸಂ. ೧-೧೧೬-೧೬)

ಇದರ ಅರ್ಥವು—

ಅಶ್ವಿನೀದೇವತೆಗಳ ವಾಹನವಾದ ರಾಸಭವು (ಕತ್ತೆಯು) ಹೆಣ್ಣು ತೋಳನ ರೂಪದಿಂದ ಋಜ್ರಾಶ್ವನ ಸಮೀಪ ದಲ್ಲಿದ್ದಿತು. ಅದರ ಆಹಾರಾರ್ಥವಾಗಿ ಗ್ರಾಮದ ಜನರ ಆಡುಗಳನ್ನು ಮೇಯಿಸುತ್ತಿದ್ದ ಆ ಋಜ್ರಾಶ್ವನು ನೂರು ಆಡುಗಳನ್ನು ಕತ್ತರಿಸಿ ಆ ತೋಳಕ್ಕೆ ಕೊಟ್ಟನು. ಅದರಿಂದ ಕೋಪಗೊಂಡ ಅವನ ತಂದೆಯು ಆ ಋಜ್ರಾಶ್ವನಿಗೆ ಶಾಪಕೊಟ್ಟು ಅವನನ್ನು ಕುರುಡನನ್ನಾಗಿ ಮಾಡಿದನು. ಸತ್ಯಸ್ವಭಾವದವರೂ ದೇವತೆಗಳ ವೈದ್ಯರೂ ದರ್ಶನೀಯರೂ ಆದ ನೀವು (ಅಶ್ವಿನೀದೇವತೆಗಳು) ಕುರುಡಾದ್ದರಿಂದ ಪದಾರ್ಥಗಳನ್ನು ನೋಡಲು ಅಸಮರ್ಥನಾದ ಆ ಋಜ್ರಾಶ್ವನ ಕಣ್ಣುಗಳಿಗೆ ದೃಷ್ಟಿಸಾಮರ್ಥ್ಯವನ್ನು ಕೊಟ್ಟು ಕಾಣಿಸುವಂತೆ ಮಾಡಿದಿರಿ.

**ಶತಂ ಮೇಷಾನ್ ವೃಕ್ಯೇ—ಅತ್ಮನಾ ಪ್ರೇಷಿತಾಯೈ ವೃಕಸ್ತ್ರಿಯೈ ಶಕಲೀಕೃತ್ಯ ಪ್ರಾದಾತ್ ।**
ವೃಷಾಗಿರ ಎಂಬ ರಾಜನ ಮಗನಾದ ಋಜ್ರಾಶ್ವನೆಂದು ಹೆಸರುಳ್ಳ ರಾಜಋಷಿಯ ಹತ್ತಿರ ಅಶ್ವಿನಿದೇವತೆಗಳ ವಾಹನವಾದ ಕತ್ತೆಯು ಹೆಣ್ಣುತೋಳದ ಆಕಾರದಿಂದ ಇತ್ತು. ಅದರ ಆಹಾರಕ್ಕಾಗಿ ಋಜ್ರಾಶ್ವನು ನೂರೊಂದು ಕುರಿಗಳನ್ನು ಕತ್ತರಿಸಿ ಉಪಯೋಗಿಸಿದನು. ಈ ಕುರಿಗಳು ಪ್ರಜೆಗಳಿಗೆ ಸೇರಿದವುಗಳಾದರೂ ಅವರ ಅನುಮತಿ ಇಲ್ಲದೆ ರಾಜಪುತ್ರನು ಹೀಗೆ ಮಾಡಿರುವ ಕಾರ್ಯವು ಪ್ರಜೆಗಳಿಗೆ ಅಹಿತವಾದ ಕಾರಣ ಈ ಋಜ್ರಾಶ್ವನ ತಂದೆಯು ಅಸಮಾಧಾನದಿಂದ ಕುರುಡನಾಗುವಂತೆ ಇವನಿಗೆ ಶಾಪ ಕೊಟ್ಟನು. ಋಜ್ರಾಶ್ವನಿಗೆ ತಂದೆಯ ಶಾಪದಿಂದ ಕಣ್ಣುಗಳು ಹೋದವು. ಆಗ ಅವನು ಅಶ್ವಿನೀದೇವತೆಗಳನ್ನು ಸ್ತುತಿ ಮಾಡಿದನು. ಅವರು ತಮ್ಮ ವಾಹನದ ನಿಮಿತ್ತವಾಗಿ ಇವನು ಕುರುಡನಾದನು ಎಂದು ತಿಳಿದುಕೊಂಡು ಅವನಿಗೆ ಮೊದಲಿ ನಂತೆಯೇ ಕಣ್ಣುಗಳು ಬರುವಂತೆ ಮಾಡಿ ದೃಷ್ಟಿಯನ್ನು ಅನುಗ್ರಹಿಸಿದರು ಎಂದು ಇತಿಹಾಸವು ಈ ಋಕ್ಕಿನಿಂದ ಉಕ್ತವಾಗಿರು ತ್ತದೆ. ಇದೇ ಇತಿಹಾಸವು—

ಶತಂ ಮೇಷಾನ್ವೃಕ್ಯೇ ಮಾಮಹಾನಂ ತಮಃ ಪ್ರಣೀತಮಶಿವೇನ ಪಿತ್ರಾ ।
ಅಕ್ಷೀ ಋಜ್ರಾಶ್ವೇ ಅಶ್ವಿನಾವಧತ್ತಂ ಜ್ಯೋತಿರಂಧಾಯ ಚಕ್ರಥುರ್ವಿಚಕ್ಷೇ ॥
(ಋ. ಸಂ. ೧-೧೧೬-೬)

ಶುನಮಂಧಾಯ ಭರಮಹ್ವಯತ್ಸಾ ವೃಕೀರಶ್ವಿನಾ ವೃಷಣಾ ನರೇತಿ ।
ಜಾರಃ ಕನೀನ ಇವ ಚಕ್ಷದಾನ ಋಜ್ರಾಶ್ವಃ ಶತಮೇಕಂ ಚ ಮೇಷಾನ್ ॥
(ಋ. ಸಂ. ೧-೧೧೭-೧೮)

ಎಂಬ ಋಕ್ಕುಗಳಲ್ಲಿ ವಿವೃತವಾಗಿರುತ್ತದೆ. ಇಲ್ಲಿ "ಶತಂ ಮೇಷಾನ್" ನೂರು ಕುರಿಗಳು ಎಂದು ಉಕ್ತವಾಗಿರುವುದು. "ಶುನಮಂಧಾಯ" ಎಂಬ ಮಂತ್ರದಲ್ಲಿ "ಶತಮೇಕಂಚ ಮೇಷಾನ್" ಎಂದು ಉಕ್ತವಾಗಿರುತ್ತದೆ. ಸ್ಕಂದಸ್ವಾಮಿಗಳೂ ಈ ಇತಿಹಾಸವನ್ನು ತಮ್ಮ ಭಾಷ್ಯದಲ್ಲಿ ಇದೇ ರೀತಿಯಾಗಿ ವಿವರಿಸುತ್ತಾರೆ. ಈ ಋಜ್ರಾಶ್ವನ ಹೆಸರು ಋ. ಸಂ. ೧-೧೦೦-೧೬ ರಲ್ಲಿ ಇಂದ್ರನು ಇವನಿಗೆ ಅನುಗ್ರಹಮಾಡಿದನೆಂಬ ವಿಷಯವನ್ನೂ, ಋ. ಸಂ. ೧-೧೦೦-೧೭ ರಲ್ಲಿ ಈ ಋಜ್ರಾಶ್ವನೂ ವೃಷಾ ಗಿರನೆಂಬ ರಾಜನ ಪುತ್ರರಾದ ಅಂಬರೀಷ, ಸಹದೇವ, ಭಯಮಯನ, ಸುರಾಧಃ ಋಜ್ರಾಶ್ವ ಎಂಬುವರಲ್ಲಿ ಇವನೂ ಒಬ್ಬನೆಂದು ಹೇಳಿದೆ. ಇವನ ಹೆಸರು ಋಗ್ವೇದದಲ್ಲಿ ಮತ್ತೆಲ್ಲಿಯೂ ಸೂಚಿತವಾಗಿಲ್ಲ.

**ಚಕ್ಷದಾನಂ—ಕ್ಷದತಿಃ ಅತ್ತಿಕರ್ಮಾ । ಅತ್ರ ಶಕಲೀಕರಣಾರ್ಥಃ ಶಕಲೀಕೃತ್ಯ ದತ್ತವಂತಂ ॥**
ಕ್ಷದ ಧಾತುವು ಭಕ್ಷಣ ಎಂಬ ಅರ್ಥದಲ್ಲಿ ಇರುವುದು. ಇಲ್ಲಿ ಇದನ್ನು ಚೂರು ಚೂರು ಮಾಡು ಎಂಬ ಅರ್ಥದಲ್ಲಿ ಪ್ರಯೋಗಿಸಿವೆ ಚೂರು ಚೂರಾಗಿ ಅಥವಾ ತುಂಡು ತುಂಡಾಗಿ ಕತ್ತರಿಸಿ ಕೊಟ್ಟನೆಂದು ಅರ್ಥವು.

**ನಾಸತ್ಯಾ—ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ವಾ** ಸತ್ಯವನ್ನು ಹೇಳುವ ಸ್ವಭಾವವುಳ್ಳವರು ಅಥವಾ ನಿಜವಾದ ಮಾರ್ಗದಲ್ಲಿ ಕರೆದುಕೊಂಡು ಹೋಗುವವರು ಎಂದು ಮೊದಲಾಗಿ ಈ ಪದದ ಅರ್ಥವನ್ನು ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿಯೇ (ಋ. ಸಂ. ೧-೧೧೬-೧) ವಿವರಿಸಿ ಇದೆ.

**ಭಿಷಜಾ—ದೇವಾನಾಂ ವೈದ್ಯೌ. ಅಶ್ವಿನೌ ವೈ ದೇವಾನಾಂ ಭಿಷಜೌ (ಐ. ಬ್ರಾ. ೧-೧೮ ; ತೈ. ಸಂ. ೨-೩-೧೧) ಇತಿ ಶ್ರುತೇಃ ।** ದೇವತೆಗಳ ವೈದ್ಯರು ಅಶ್ವಿನೀ ದೇವತೆಗಳು ಎಂದು ಐತರೇಯಬ್ರಾಹ್ಮಣದಲ್ಲಿಯೂ ತೈತ್ತಿರೀಯ ಸಂಹಿತೆಯಲ್ಲಿಯೂ ಉಕ್ತವಾಗಿರುತ್ತದೆ.

**ದಸ್ರಾ—ದರ್ಶನೀಯೌ—ಏತತ್ಸಂಜ್ಞೌ ವಾ** ಅಶ್ವಿನೀದೇವತೆಗಳಿಗೆ ದಸ್ರಾ ಎಂಬ ಹೆಸರೂ ಪ್ರಸಿದ್ಧವಾಗಿರುವುದು. ಅಥವಾ ದಸ್ರಾ ಎಂಬ ಶಬ್ದಕ್ಕೆ ಸುಂದರವಾದ ಆಕಾರವುಳ್ಳವರು ಎಂಬ ಅರ್ಥವನ್ನೂ ಹೇಳಬಹುದು.

**ಅನರ್ವನ್—ಅನರ್ವಣೀ ದ್ರಷ್ಟವ್ಯಂ ಪ್ರತಿ ಪಿತೃಶಾಪಾತ್ ಗಮನರಹಿತೇ ।** ನೋಡಬೇಕಾದ ವಸ್ತುವಿನ ವಿಷಯದಲ್ಲಿ ತಂದೆಯ ಶಾಪದಿಂದ ದೃಷ್ಟಿಯು ಸಂಚಾರವಿಲ್ಲದಿರುವ ಎಂದು ಅರ್ಥ. ಸ್ಕಂದಸ್ವಾಮಿಗಳು ಈ ಶಬ್ದಕ್ಕೆ—

**ಅರ್ತೇರ್ಗತ್ಯರ್ಥಸ್ಯೇದಂ ರೂಪಂ । ಅನ್ಯಂ ಪ್ರತ್ಯಾಶ್ರಿತತಯಾ ಯೋ ನ ಗತಃ ಸೋ ಅನರ್ವಾ-**
**ಅನರ್ವಣಿ ಅನನ್ಯಾಶ್ರಿತೇ ಸ್ವಾಯತ್ತೇ । ಪಿತ್ರಾ ಶಾಪೇನ ಅಪನೇತುಮಶಕ್ತೇ ಇತ್ಯರ್ಥಃ—**

ಗತ್ಯರ್ಥಕವಾಗಿರುವ ಋ ಧಾತುವಿನಿಂದ ಅರ್ವನ್‌ಶಬ್ದವು ನಿಷ್ಪನ್ನವಾಗಿ ಸ್ವತಂತ್ರವಾದ ಗಮನವುಳ್ಳವನು ಎಂಬ ಅರ್ಥವನ್ನು ಬೋಧಿಸುವುದು. ಇತರರ ಆಶ್ರಯದಿಂದ ತನ್ನ ಸ್ವಾತಂತ್ರ್ಯವನ್ನು ಹೊಂದದೆ ಇರುವವನು ಅನರ್ವನಾಗುವನು. ಹೀಗೆ ಇರುವ ಅನ್ಯಾಶ್ರಯವೂ ಇಲ್ಲದೆ ಇರುವ ತನ್ನ ಅಧೀನತೆಯೂ ಕೂಡ ಅನರ್ವಪದದಿಂದ ಉಕ್ತವಾಗಿರುವುದು. ಈ ಪ್ರಕಾರವಾದ ಸ್ಥಿತಿಯು ಋಜ್ರಾಶ್ವನಿಗೆ ಅವನ ತಂದೆಯಶಾಪದಿಂದ ನಶಿಸಿಹೋಗಿ ಶಾಪವನ್ನು ತಪ್ಪಿಸಿಕೊಳ್ಳುವುದಕ್ಕೆ ಆಗದಿರುವಾಗ ಅಶ್ವಿನೀದೇವತೆಗಳು ಅವನಿಗೆ (ನೇತ್ರ) ಕಣ್ಣುಗಳನ್ನು ಕೊಟ್ಟು ರಕ್ಷಿಸಿದರು ಎಂದು ವಿವರಿಸಿ—

**ಯಾಭಿಃ ಶಚೀಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ ಚಕ್ಷಸ ಏತವೇ ಕೃಥಃ ।**
**ಯಾಭಿರ್ವರ್ತಿಕಾಂ ಗ್ರಸಿತಾಮಮುಞ್ಚತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೮)

ಎಂಬ ಋಕ್ಕನ್ನು ಉದಹರಿಸಿ ಈ ಅರ್ಥವು ಇಲ್ಲಿ ವಿವೃತವಾಗಿರುವುದು ಎಂದು ವ್ಯಾಖ್ಯಾನಮಾಡಿದರು. ಯಾಸ್ಕರು **ಅನರ್ವಾ ಪ್ರತ್ಯೃತೋ ಅನ್ಯಸ್ಮಿನ್** (ನಿ. ೬-೨೩) **ಅನರ್ವಮಪ್ರತ್ಯೃತಮನ್ಯಸ್ಮಿನ್** ಇತರರನ್ನು ಆಶ್ರಯಿಸದೆ ಇರುವವನು, ತನ್ನ ಸ್ವಾತಂತ್ರ್ಯದಿಂದ ಇರುವವನು, ಎಂದು ಅರ್ಥವನ್ನು ಹೇಳಿ—

**ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।**
**ಗಾಥಾನ್ಯಃ ಸುರುಚೋ ಯಸ್ಯ ದೇವಾ ಆ ಅಶೃಣ್ವಂತಿ ನವಮಾನಸ್ಯ ಮರ್ತಾಃ ॥**

(ಋ. ಸಂ. ೧-೧೯೦-೧)

ಎಂಬ ಋಕ್ಕನ್ನು ಉದಾಹರಿಸಿರುವರು. ಈ ಋಕ್ಕಿನಲ್ಲಿ ಅನರ್ವಪದವು ಇನ್ನೊಬ್ಬರಿಗೆ ಅಧೀನತೆಯನ್ನು ಹೊಂದದೇ ಇರುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಸಾಯಣರು—**ಅರ್ವಂ ಗಮನಂ ವಿಷಯಂ ಪ್ರತಿ ಏನಯೋಃ**

**ನಾಸ್ತೀತಿ ಬಹುವ್ರೀಹೌ ಅನರ್ವಣೀ ।** ಅರ್ವ ಎಂದರೆ ಗಮನವು. ಗಮನವು ಎಂದರೆ ನೋಡುವ ಸಾಮರ್ಥ್ಯವು ಕಣ್ಣುಗಳಿಗೆ ಇಲ್ಲದಿರುವ ಕಾರಣ ಅನರ್ವಣೀ ಎಂದು ಅರ್ಥವನ್ನು ವಿವರಿಸುತ್ತಾರೆ. **ಅನರ್ವನ್ ಅಕ್ಷೀ** ಎಂದರೆ ನೋಡಲು ಸಾಮರ್ಥ್ಯವಿಲ್ಲದಿರುವ ಅಥವಾ ದೃಷ್ಟಿಯಿಲ್ಲದ, ಅಥವಾ ಕುರುಡಾದ ಕಣ್ಣುಗಳು ಎಂದಭಿಪ್ರಾಯವು.

ಜೋಷವಾಕಮ್ ॥೬೬॥

ಜೋಷವಾಕಮಿತ್ಯವಿಜ್ಞಾತನಾಮಧೇಯಂ ಜೋಷಯಿತವ್ಯಂ ಭವತಿ ॥

**ಜೋಷವಾಕಂ**—ಎಂದರೆ ತಿಳಿಯದಿರುವ, ತಿಳಿದುಕೊಳ್ಳಬೇಕಾದ ಎಂದರ್ಥವು. ಈ ಶಬ್ದವಿರುವ ಋಕ್ಕನ್ನು ಮುಂದಿನ ಖಂಡದಲ್ಲಿ ಉದಾಹರಣೆಯಾಗಿ ಹೇಳಿರುವರು.

**ಇತಿ ಏಕವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೊಂದನೆಯ ಖಂಡವು ಸಮಾಪ್ತವು

---

## ಅಥ ದ್ವಾವಿಂಶಃ ಖಂಡಃ

**ಇಪ್ಪತ್ತೆರಡನೆಯ ಖಂಡವು**

"ಯ ಇನ್ದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ವೃತಾವೃಧಾ । ಜೋಷವಾಕಂ ವದತಃ ಪಜ್ರಹೋಷಿಣಾ ನ ದೇವಾ ಭಸಥಶ್ಚನ ॥" ಯ ಇಂದ್ರಾಗ್ನೀ ಸುತೇಷು ವಾಂ ಸೋಮೇಷು ಸ್ತೌತಿ ತಸ್ಯಾಶ್ನೀಥೋಽಥ ಯೋಽಯಂ ಜೋಷವಾಕಂ ವದತಿ ವಿಜಞ್ಜಪಃ ಪ್ರಾರ್ಜಿತಹೋಷಿಣಾ ನ ದೇವೌ ತಸ್ಯಾಶ್ನೀಥಃ । ಕೃತ್ತಿಃ ಕೃಂತತೇರ್ಯಶೋ ವಾ ಅನ್ನಂ ವಾ । ಮಹೀವ ಕೃತ್ತಿಃ ಶರಣಾತ ಇಂದ್ರ । ಸುಮಹತ್ತ ಇಂದ್ರ ಶರಣಮಂತರಿಕ್ಷೇ ಕೃತ್ತಿರಿವೇತಿ । ಇಯಮಪೀತರಾ ಕೃತ್ತಿರೇತಸ್ಮಾದೇವ ಸೂತ್ರಮಯೀ । ಉಪಮಾರ್ಥೇ ವಾ । (ಕೃತ್ತಿಂ ವಸಾನ ಆಚರ ಪಿನಾಕಂ ಬಿಭ್ರದಾಗಹಿ) ಅವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ ಇತ್ಯಪಿ ನಿಗಮೋ (ಮೌ) ಭವತಿ (ತಃ) ॥ ಶ್ವಘ್ನೀ ಕಿತವೋ ಭವತಿ ಸ್ವಂ ಹನ್ತಿ ಸ್ವಂ ಪುನರಾಶ್ರಿತಂ ಭವತಿ । ಕೃತಂ ನ ಶ್ವಘ್ನೀ ವಿಚಿನೋತಿ ದೇವನೇ । ಕೃತಮಿವ ಶ್ವಘ್ನೀ ವಿಚಿನೋತಿ ದೇವನೇ । ಕಿತವಃ ಕಿಂ ತವಾಸ್ತೀತಿ ಶಬ್ದಾನುಕೃತಿಃ,

ಕೃತವಾನ್ವಾಶೀರ್ನಾಮಕಃ ।　ಸಮಮಿತಿ　ಪರಿಗ್ರಹಾರ್ಥೀಯಂ
ಸರ್ವನಾಮಾನುದಾತ್ತಮ್ ॥೨೨॥

———

"ಯ ಇಂದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ವೃತಾವೃಧಾ ।
ಜೋಷವಾಕಂ ವದತಃ ಪಜ್ರಹೋಷಿಣಾ ನ ದೇವಾ ಭಸಥಶ್ಚನ ॥"

ಯ ಇನ್ದ್ರಾಗ್ನೀ ಸುತೇಷು ವಾಂ ಸೋಮೇಷು ಸ್ತೌತಿ ತಸ್ಯಾಶ್ನೀಥೋಽಥ
ಯೋಽಯಂ ಜೋಷವಾಕಂ ವದತಿ ವಿಜಜ್ಞಪಃ ಪ್ರಾರ್ಜಿತ-
ಹೋಷಿಣೌ ನ ದೇವೌ ತಸ್ಯಾಶ್ನೀಥಃ ॥೧॥

ಜೋಷವಾಕಂ ಎಂಬ ಶಬ್ದದ ಅರ್ಥವನ್ನೂ ಪ್ರಯೋಗವನ್ನೂ ವಿವರಿಸುವುದಕ್ಕಾಗಿ ಕೊಟ್ಟಿರುವ ಉದಾಹರಣೆಯ ಋಕ್ಕು—

**ಯ ಇಂದ್ರಾಗ್ನೀ ಸುತೇಷು ವಾಂ ಸ್ತವತ್ತೇಷ್ವೃತಾವೃಧಾ ।**
**ಜೋಷವಾಕಂ ವದತಃ ಪಜ್ರಹೋಷಿಣಾ ನ ದೇವಾ ಭಸಥಶ್ಚನ ॥**

(ಋ. ಸಂ. ೬–೫೯–೪)

ಇದರ ಅರ್ಥವು—

ಯಜ್ಞವರ್ಧಕರೂ ಪ್ರಸಿದ್ಧವಾದ ಸ್ತುತಿಘೋಷವುಳ್ಳವರೂ ದೇವತಾತ್ಮರೂ ಆದ ಎಲೈ ಇಂದ್ರಾಗ್ನಿಗಳೇ, ಸೋಮರಸವು ಹಿಂಡಲ್ಪಟ್ಟ ಕಾಲದಲ್ಲಿ ಯಾವ ಸ್ತೋತೃವು ನಿಮ್ಮಿಬ್ಬರನ್ನೂ ಉದ್ದೇಶಿಸಿ ಕುತ್ಸಿತವಾಗಿ ಸ್ತುತಿಸುವರೋ ಅವರ ನಡುವೆಯೂ ಅತೃಪ್ತಿಕರವಾದ ಸ್ತುತಿವಾಕ್ಯನ್ನು ಸ್ತುತಿಸುವವರ ನಡುವೆಯೂ ನೀವು ಹವಿಸ್ಸನ್ನು ಭಕ್ಷಿಸುವುದಿಲ್ಲ.

ಜೋಷವಾಕಂ—ಅಪ್ರೀತಿಕರಂ ವಾಕ್ಯಂ—ಪ್ರೀತಿಯಿಲ್ಲದಿರುವ ವಾಕ್ಯವನ್ನು ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ—

ಎಲೈ ಇಂದ್ರಾಗ್ನಿಗಳೇ, ಸೋಮರಸವು ಹಿಂಡಲ್ಪಟ್ಟ ಕೂಡಲೇ ಯಾವ ಸ್ತೋತೃವು ನಿಮ್ಮಿಬ್ಬರನ್ನೂ ಅವನು ಅರ್ಪಿಸಿದ ಹವಿಸ್ಸನ್ನು ಅಥವಾ ಸೋಮವನ್ನು ಸ್ವೀಕರಿಸಿ ಭಕ್ಷಿಸುತ್ತೀರಿ. ಆದರೆ ಸ್ತುತಿಸುವಾಗ ತನಗೆ ತಿಳಿಯದಿರುವುದನ್ನು ಅಥವಾ ಪ್ರೀತಿಕರವಲ್ಲದ್ದನ್ನು ಪಠಿಸಿ ಸ್ತುತಿಸುವ ಸ್ತುತಿಕರ್ತನು ಅರ್ಪಿಸುವುದನ್ನು ನೀವು ಸ್ವೀಕರಿಸುವುದಿಲ್ಲ. ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಸಾಯಣರ ಅರ್ಥವಿವರಣೆಗೂ ಯಾಸ್ಕರ ವಿವರಣೆಗೂ ಈ ಋಕ್ಕಿನ ಪೂರ್ವಾರ್ಧದ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಸಾಯಣರು ಇಂದ್ರಾಗ್ನಿಗಳನ್ನು ಕುತ್ಸಿತವಾಗಿ ಎಂದರೆ ನಿಂದೆಸಹಿತವಾಗಿ ದೋಷಸಹಿತವಾಗಿ, ಅವಹೇಳನ ರೂಪವಾಗಿ ಸ್ತುತಿ ಮಾಡುವ ಪುರುಷನ ಹವಿಸ್ಸನ್ನು ಭಕ್ಷಿಸುವುದಿಲ್ಲ ಎಂದು ಅರ್ಥಮಾಡಿದ್ದಾರೆ. ಆದರೆ ಯಾಸ್ಕರು ಸೋಮಾಭಿಷವವಾದ ಮೇಲೆ

ಸ್ತೋತ್ರಮಾಡುವ ಸ್ತುತಿಕರ್ತನ ಹವಿಸ್ಸನ್ನು ಭಕ್ಷಿಸುತ್ತಾರೆಂದೂ ಆದರೆ ಆ ಸ್ತುತಿಯಲ್ಲಿ ನಿಂದಾ ಅಥವಾ ಪ್ರೀತಿರಹಿತವಾಕ್ಯಗಳಿದ್ದಲ್ಲಿ ಅವನ ಹವಿಸ್ಸನ್ನು ಭಕ್ಷಿಸುವುದಿಲ್ಲವೆಂದೂ ಅರ್ಥವಿವರಣೆಮಾಡಿದ್ದಾರೆ. ಇಲ್ಲಿ ಎರಡು ವಿಧವಾದ ಅರ್ಥಗಳಿಗೂ ಅವಕಾಶವಿದೆ.

ಕೃತ್ತಿಃ ॥೬೭॥

ಕೃತ್ತಿಃ ಕೃನ್ತತೇರ್ಯಶೋ ವಾ ಅನ್ನಂ ವಾ ॥ "ಮಹೀವ ಕೃತ್ತಿಃ ಶರಣಾತ ಇಂದ್ರಃ" ॥ ಸುಮಹತ್ತ್ವಂ ಇಂದ್ರ ಶರಣಮನ್ತರಿಕ್ಷೇ ಕೃತ್ತಿರಿವೇತಿ ॥ ಇಯಮಪೀತರಾ ಕೃತ್ತಿರೇತಸ್ಮಾದೇವ ಸೂತ್ರಮಯಿ ।
ಉಪಮಾರ್ಥೇ ವಾ । ("ಕೃತ್ತಿಂ ವಸಾನ ಆಚರ ಪಿನಾಕಂ ಬಿಭ್ರದಾಗಹಿ ॥")

"ಅವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ।" ಇತ್ಯಪಿ ನಿಗಮೌ (ಮೌ) ಭವತಿ (ತಃ) ॥೨॥

**ಕೃತ್ತಿಃ** ಎಂಬ ಶಬ್ದವು ಕತ್ತರಿಸು, ತುಂಡುಮಾಡು ಎಂಬರ್ಥವುಳ್ಳ ಕೃಂತತಿಧಾತುವಿನಿಂದ ನಿಷ್ಪನ್ನವಾಗಿದೆ ಈ ಶಬ್ದಕ್ಕೆ ಯಶಸ್ಸು (ಕೀರ್ತಿ) ಅಥವಾ ಅನ್ನವೆಂದು ಅರ್ಥವು.

ಉದಾಹರಣೆಯ ಋಕ್ಕು—

**ತಮು ತ್ವಾ ನೂನಮಸುರ ಪ್ರಚೇತಸಂ ರಾಧೋ ಭಾಗಮಿವೇಮಹೇ ।**
**ಮಹೀವ ಕೃತ್ತಿಃ ಶರಣಾ ತ ಇಂದ್ರ ಪ್ರ ತೇ ಸುಮ್ನಾ ನೋ ಅಶ್ನವಂ ॥**

(ಋ. ಸಂ. ೮-೯೦-೬)

ಇದರ ಅರ್ಥವು—

ಶಕ್ತಿಯುತನಾದ ಎಲೈ ಇಂದ್ರನೇ, ಅತ್ಯುತ್ತಮ ಜ್ಞಾನಿಯಾದ ನಿನ್ನನ್ನೇ ನಾವು ಈಗ, ಪುತ್ರನಾದವನು ತಂದೆಯಿಂದ ತನ್ನ ಭಾಗವಾದ ಧನವನ್ನು ಯಾಚಿಸುವಂತೆ ಧನಾರ್ಥವಾಗಿ ಯಾಚಿಸುತ್ತೇನೆ. ಎಲೈ ಇಂದ್ರನೇ ಯಶಸ್ಸಿನಂತೆ ಮಹತ್ತಾದ ನಿನ್ನ ಗೃಹವು ಸ್ವರ್ಗಲೋಕದಲ್ಲಿದೆ. ನಿನ್ನ ಸಂಬಂಧವಾದ ಪುತ್ರಾದಿ ವಿಷಯಸುಖಗಳು ನಮ್ಮನ್ನು ಬಂದು ಸೇರಲಿ.

**ಕೃತ್ತಿ** ಎಂದರೆ ವಸ್ತ್ರಕ್ಕೂ ಹೆಸರು. ಈ ಶಬ್ದವೂ ಅದೇ ಧಾತುವಿನಿಂದ ನಿಷ್ಪನ್ನವಾಗಿದೆ. ಕೃತ್ತಿ ಎಂದರೆ ವಸ್ತ್ರಾರ್ಥವಾಗಿ ಉಪಯೋಗಿಸುವ ಚರ್ಮಕ್ಕೂ ಹೆಸರು. **ಕೃತ್ತಿಂ ವಸಾನ ಆಚರ ಪಿನಾಕಂ ಬಿಭ್ರದಾಗಹಿ** ಮತ್ತು **ಅವತತಧನ್ವಾ ಪಿನಾಕಹಸ್ತಃ ಕೃತ್ತಿವಾಸಾಃ** (ತೈ. ಸಂ. ೧-೮) ಇವೆರಡು ಶ್ರುತಿವಾಕ್ಯಗಳ ಉದಾಹರಣೆಯು.

ಶ್ವಘ್ನೀ ॥೬೮॥

ಶ್ವಘ್ನೀ ಕಿತವೋ ಭವತಿ ಸ್ವಂ ಹನ್ತಿ ಸ್ವಂ ಪುನರಾಶ್ರಿತಂ ಭವತಿ ॥" ಕೃತಂ ನ ಶ್ವಘ್ನೀ ವಿಚಿನೋತಿ ದೇವನೇ" ॥ ಕೃತಮಿವ ಶ್ವಘ್ನೀ ವಿಚಿನೋತಿ

ದೇವನೇ ॥ ಕಿತವಃ ಕಿಂ ತವಾಸ್ತೀತಿ ಶಬ್ದಾನುಕೃತಿಃ, ಕೃತವಾನ್ವಾ-
ಶೀರ್ನಾಮಕಃ ॥೩॥

**ಶ್ವಘ್ನೀ** ಎಂದರೆ ಕಿತವಃ ಜೂಜುಗಾರನು. ಇವನು ಜೂಜಿನಿಂದ ತಾನು ಸಮಸ್ತವನ್ನೂ ಕಳೆದುಕೊಂಡು ಹಾಳಾಗುವುದಲ್ಲದೆ ತನಗೆ ಸೇರಿದವರನ್ನೂ ಹಾಳುಮಾಡುತ್ತಾನೆ. **ಕಿತವ** ಎಂದರೆ **ಕಿ ತವಾಸ್ತಿ** ನಿನ್ನಲ್ಲಿ ಏನಿದೆ ಎಂದರ್ಥವು.

ಉದಾಹರಣೆಯ ಋಕ್ಕು—

**ಕೃತಂ ನ ಶ್ವಘ್ನೀ ವಿ ಚಿನೋತಿ ದೇವನೇ ಸಂವರ್ಗಂ ಯನ್ಮಘವಾ ಸೂರ್ಯಂ ಜಯತ್ ।**
**ನ ತತ್ತೇ ಅನ್ಯೋ ಅನು ವೀರ್ಯಂ ಶಕನ್ನ ಪುರಾಣೋ ಮಘವನ್ನೋತ ನೂತನಃ ॥**

ಇದರ ಅರ್ಥವು—

ಜೂಜುಗಾರನು ದ್ಯೂತದಲ್ಲಿ ಸಮಯವನ್ನು ಕಾದು ತನ್ನ ಪ್ರತಿಕಕ್ಷಿಯನ್ನು ಆರಿಸಿ ಸೋಲಿಸುವಂತೆ ಯಾವಾಗ ಇಂದ್ರನು ವೃಷ್ಟಿಯನ್ನು ಸುರಿಸುವ ಸೂರ್ಯನನ್ನು ಆರಿಸುವನೋ ಆಗ ಅವನನ್ನು ಜಯಿಸುತ್ತಾನೆ. ಎಲೈ ಇಂದ್ರನೇ ನಿನ್ನ ಪ್ರಸಿದ್ಧವಾದ ಶೌರ್ಯವನ್ನು ಹಿಂದಿನವರಾಗಲಿ ಅಥವಾ ಈಗಿನವರಾಗಲಿ ಯಾರೂ ಅನುಕರಿಸಲು ಸಾಧ್ಯವಿಲ್ಲ.

ಶೌರ್ಯ ಅಥವಾ ಚೌರ್ಯವನ್ನು ತೋರಿಸುವ ಸನ್ನಿವೇಶಗಳಲ್ಲಿ **ಶ್ವಘ್ನಿ**ಯಂತೆ ಕ್ರೌರ್ಯವುಳ್ಳವನು ಅಥವಾ ಮೋಸ ಮಾಡುವವನು ಎಂಬ ಉಪಮಾನವು ಅನೇಕ ಸಂದರ್ಭಗಳಲ್ಲಿ ತೋರಿಸಲ್ಪಟ್ಟಿದೆ. ಸಾಯಣರು ಈ ಪದಕ್ಕೆ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥವನ್ನು ತಿಳಿಸಿದ್ದಾರೆ. ಇದು **ಶ್ವನ್**+**ಘ್ನ** ಎಂಬ ಎರಡು ಪದಗಳಿಂದ ಕೂಡಿದುದಾ ಗಿದೆ. **ಘ್ನ** ಎಂಬುದು **ಹನ್** ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. **ಶ್ವಾನಂ ಹಂತಿ** ನಾಯಿಯನ್ನು ಕೊಲ್ಲುತ್ತಾನೆ ಎಂದಾಗಲಿ ಅಥವಾ **ಶುನಾ** (ಸಹ) **ಹಂತಿ** ನಾಯಿಯೊಡಗೂಡಿ ಕೊಲ್ಲುತ್ತಾನೆ ಎಂದಾಗಲೀ ಈ ಪದದ ನಿರ್ವಚನವನ್ನು ತೋರಿಸಬಹುದು. ಇವುಗಳಲ್ಲಿ ಮೊದಲು ಮೂರುಸಲದ ಪ್ರಯೋಗಕಾಲಗಳಲ್ಲೂ ಸಹ ಸಾಯಣರು ಈ ಪದಕ್ಕೆ **ವ್ಯಾಧ** ಅಥವಾ **ಮೃಗಯು** ಎಂಬ ಅರ್ಥವನ್ನು ತೋರಿಸಿದ್ದಾರೆ.

**ಪುನಃಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿ ಶೋಭಮಾನಾ ।**
**ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರಯಂತ್ಯಾಯುಃ ॥**

(ಋ. ಸಂ ೧-೯೨-೧೦)

ಎಂಬಲ್ಲಿ ಉಷಸ್ಸಿನ ವರ್ಣನೆಯಿರುತ್ತದೆ. ಯಾವ ರೀತಿ **ಶ್ವಘ್ನಿ**ಯು ಹಿಂಸಕಳಾಗಿರುವಳೋ ಆ ರೀತಿ ಉಷಸ್ಸೂ ಸಹ ನಿರ್ಘೃಣಳಾಗಿ ಸಕಲ ಜಂತುಗಳನ್ನೂ ಜರಾಯುಕ್ತವನ್ನಾಗಿ ಮಾಡಿ ಹಿಂಸಿಸುವಳು ಎಂಬ ತಾತ್ಪರ್ಯವಿರುತ್ತದೆ. **ಶುನಾ ಮೃಗಾನ್ ಹತವಾನ್ ಶ್ವಹಾ ತಸ್ಯ ಪತ್ನೀ ಶಘ್ನೀ** ಬೇಟೆನಾಯಿಯ ಮೂಲಕ ಮೃಗಗಳನ್ನು ಕೊಲ್ಲತಕ್ಕ ಬೇಡನ ಪತ್ನಿಯೆಂದು ಸಾಯಣರು ವಿವರಿಸಿದ್ದಾರೆ. ಇದರಂತೆಯೇ **ಶ್ವಘ್ನೀವ ಯೋ ಜಿಗಿವಾನ್** (ಋ. ಸಂ. ೨-೧೨-೪) ಎಂಬಲ್ಲಿ ಇಂದ್ರನು ತನ್ನ ಶತ್ರುಗಳನ್ನು ಸೋಲಿಸಿ ಹಿಂಸಿಸುವ ಪ್ರಕರಣವನ್ನು ವರ್ಣಿಸುವಾಗಲೂ ಸಹ ಇಂದ್ರನನ್ನು ಕ್ರೂರಿಯಾದ ಬೇಡನಿಗೆ ಹೋಲಿಸಿದೆ. ಅಲ್ಲಿಯೂ ಸಹ ಇದೇ ಅರ್ಥವನ್ನು ತೋರಿಸಿದೆ. ಆದರೆ ಉಳಿದ ಸಂದರ್ಭಗಳಲ್ಲಿ ಇದೇ ಪದಕ್ಕೆ ಬೇರೆ ಅರ್ಥವನ್ನು ಹೇಳಿದೆ. ಉದಾಹರಣೆಗೆ—

**ವಿವಾರೇ ವೃಷಭಾ ಸುತೇಽಸಿನ್ವನ್ಭೂರ್ಯಾವಯಃ । ಶ್ವಘ್ನೀವ ನಿವತಾ ಚರನ್ ॥**

(ಋ. ಸಂ. ೮-೪೫-೩೮)

ಎಂಬಲ್ಲಿಯೂ ಇಂದ್ರನ ಪ್ರಶಂಸೆಯಿರುತ್ತದೆ. ಈ ಸಂದರ್ಭದಲ್ಲಿ ಸಾಯಣರು ನಿರುಕ್ತಕಾರರ ವಾಕ್ಯವನ್ನುದಾಹರಿಸಿ **"ಶ್ವಘ್ನೀ ಕಿತವೋ ಭವತಿ ಸ್ವಂ ಹಂತಿ"** (ನಿ. ೫-೨೨) ಈ ಪದಕ್ಕೆ ಮೋಸಗಾರನೆಂದು ಅರ್ಥವನ್ನು ತಿಳಿಸಿದ್ದಾರೆ. ಪರರ ಸ್ವತ್ತನ್ನು ಅಪಹರಿಸುವವನೆಂದರ್ಥ. ಆಂಗ್ಲಪಂಡಿತರಲ್ಲೂ ಅನೇಕರು ಈ ಎರಡನೆಯ ಅರ್ಥವೇ ಸಾಧುವೆಂಬ ಅಭಿಪ್ರಾಯವನ್ನು ತೋರಿಸಿದ್ದಾರೆ. ಸಾಧಾರಣವಾಗಿ ಜೂಜುಗಾರನೇ ತನ್ನ ಸರ್ವಸ್ವವನ್ನು ಕಳೆದುಕೊಂಡು ಇತರರ ಸ್ವತ್ತನ್ನು ಅಪಹರಿಸುವವನಾದ್ದರಿಂದ **ಶ್ವಘ್ನೀ** ಎಂಬ ಪದಕ್ಕೆ ಜೂಜುಗಾರನೆಂದೂ ಹೇಳಬಹುದು. ಆದರೆ, **ಶ್ವನ್** (ನಾಯಿ) ಮತ್ತು **ಹನ್** (ಕೊಲ್ಲು) ಎಂಬ ಪದಗಳ ಮೂಲಾರ್ಥವು ಇಲ್ಲಿ ಸಾಮಂಜಸ್ಯವನ್ನು ಹೊಂದುವುದಿಲ್ಲ. **ಬೇಡ** ಎಂಬ ಅರ್ಥವನ್ನಿಟ್ಟರೆ ಮಾತ್ರ ಈ ನಿರ್ವಚನವು ಸಾಧ್ಯ. ಆದರೆ **ಬೇಡನೆಂಬ** ಅರ್ಥವು ಈ ಪದದ ಪ್ರಯೋಗವಿರುವೆಡೆಗಳಲ್ಲೆಲ್ಲ ಕಡೆಗಳಲ್ಲಿಯೂ ಸಾಧ್ಯವಿಲ್ಲ. ದ್ಯೂತಗಾರನಿಗೆ ಶ್ವಘ್ನ ಎಂಬ ವಿಶೇಷಣವಿರಲು ಸಾಧ್ಯವೇ ಎಂಬ ಪ್ರಶ್ನೆಯೂ ಸಹಜವಾಗಿರುತ್ತದೆ. ಗೃಹ್ಯಸೂತ್ರದ ಆಧಾರದಮೇಲೆ ಸಾಯಣರು ಈ ಅರ್ಥವನ್ನು ಹೇಳಿರುತ್ತಾರೆ ಎಂಬುದಕ್ಕೆ ಅವಕಾಶವಿರುತ್ತದೆ. ಅಪಸ್ಮಾರಾದಿ ರೋಗಗಳನ್ನು ನಾಶಪಡಿಸಲು **"ಶ್ವಗ್ರಹಪ್ರಾಯಶ್ಚಿತ್ತ'** ಎಂಬ ಪ್ರಕರಣವಿರುತ್ತದೆ. ಈ ಹೆಸರೇ ತಿಳಿಸುವಂತೆ ಎಳೆಯ ಮಕ್ಕಳಿಗೆ ದುಷ್ಟಗ್ರಹದ ಕಾಟದಿಂದ ಅಪಸ್ಮಾರಾದಿ ರೋಗಗಳು ಸಂಭವಿಸುತ್ತವೆ. **("ಶ್ವ ಗ್ರಹ")** ಹಿರಣ್ಯಕೇಶಿ ಮತ್ತು ಪಾರಸ್ಕರಗೃಹ್ಯಸೂತ್ರಗಳಲ್ಲಿ ಈ ದೋಷಕ್ಕೆ ಪ್ರಾಯಶ್ಚಿತ್ತವು ಈ ರೀತಿ ವಿಧಿಸಲ್ಪಟ್ಟಿದೆ.

ಈ ದೋಷಗ್ರಸ್ತನಾದ ಮಗುವಿನ ತಂದೆಯು ಯಥಾವಿಧಿಯಾಗಿ ಕರ್ಮವನ್ನು ನೆರವೇರಿಸಿ ಈ ಮಗುವನ್ನು ದ್ಯೂತಗಾರರ ಕೊಠಡಿಯ ಹತ್ತಿರ ಕರೆದುಕೊಂಡುಹೋಗಿ ಅಲ್ಲಿ ಕೆಲವು ನಿಯಮಿತವಾದ ಕಾರ್ಯಕಲಾಪಗಳನ್ನು ನೆರವೇರಿಸುತ್ತಾನೆ. ಅನಂತರ ಮಗುವನ್ನು ಪಗಡೆಯ ದಾಳದ ಮೇಲೆ ಮಲಗಿಸಿ **"ಚೇತ್ ಕುಕ್ಕುರ ; ಚೇತ್ ಶುನಕ"** ಎಲೈ ನಾಯಿಯೇ, ದೂರ ತೊಲಗು ಎಂಬ ಅರ್ಥವಿರುವ ಕೂಡಿರುವ ಮಂತ್ರಗಳನ್ನು ಪಠಿಸುತ್ತಾನೆ. ಈ ಕಾರ್ಯಕ್ಕೆ ದ್ಯೂತಗಾರನು ಸಹಾಯಕನಾಗಿರುತ್ತಾನೆ. ದ್ಯೂತಗಾರನು ಇದಕ್ಕೆ ಸಹಾಯಕನಾಗಿರುವುದರಿಂದ ಅವನು ಶ್ವಗ್ರಹವನ್ನು ನಾಶಮಾಡಿದಂತಾಯಿತು. ಆದುದರಿಂದ ಅವನೇ ಶ್ವಘ್ನನೂ ಆಯಿತು. ಈ ಆಧಾರದ ಮೇಲೆ **ಶ್ವಘ್ನಿನ್** ಎಂಬ ಪದಕ್ಕೆ ದ್ಯೂತಗಾರನೆಂದು ಸಾಯಣರು (ಯಾಸ್ಕರ ವಾಕ್ಯದ ಆಧಾರವನ್ನೂ ತೋರಿಸಿ) ಅರ್ಥಮಾಡಿರುವರೆಂದು ಹೇಳಬಹುದು.

**ಉತ ಪ್ರಹಾಮತಿದೀವ್ಯಾ ಜಯಾತಿ ಕೃತಂ ಯಚ್ಛ್ವಘ್ನೀ ವಿಚಿನೋತಿ ಕಾಲೇ ।**
**ಯೋ ದೇವಕಾಮೋ ನ ಧನಾ ರುಣದ್ಧಿ ಸಮಿತ್ತಂ ರಾಯಾ ಸೃಜತಿ ಸ್ವಧಾವಾನ್ ॥**

(ಋ. ಸಂ. ೧೦-೪೨-೯)

ಇತ್ಯಾದಿ ವಾಕ್ಯಗಳಲ್ಲೂ ಸಹ ಇಂದ್ರನ ವ್ಯವಹಾರಗಳನ್ನು ದ್ಯೂತಕಾರನ ಅನ್ವೇಷಣಾದಿ ವ್ಯವಹಾರಗಳಿಗೆ ಹೋಲಿಸಿವೆ. ಇಲ್ಲಿ ಉಪಮಾನೋಪಮೇಯಗಳು ಸಮಂಜಸವಾಗಿರುತ್ತವೆ.

ಸಮಸ್ಯ ॥೬॥

ಸಮಮಿತಿ ಪರಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ—॥

**ಸಮುಸ್ಯ** ಎಂಬುದು ಸರ್ವನಾಮಪದವು. ಪರಿಗ್ರಹಾರ್ಥೀಯ (ಸ್ವೀಕಾರ)ವಾದ ಅರ್ಥವಿರುವುದು. ಇದು ಈ ಅರ್ಥದಲ್ಲಿ ಸರ್ವಾನುದತ್ತವಾಗಿ ಉಪಯೋಗಿಸಲ್ಪಟ್ಟಿರುವುದು. ಈ ಪದಕ್ಕೆ ಸ್ವರವಿರುವಾಗ ಅರ್ಥವೂ ವ್ಯತ್ಯಾಸವಾಗುವುದು. ಅವುಗಳನ್ನು ಮುಂದಿನ ಖಂಡದಲ್ಲಿ ವಿವರಿಸಲಾಗುವುದು.

**ಇತಿ ದ್ವಾವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೆರಡನೆಯ ಖಂಡವು ಸಮಾಪ್ತವು

---

## ॥ ಅಥ ತ್ರಯೋವಿಂಶಃ ಖಂಡಃ ॥

### ಇಪ್ಪತ್ತಮೂರನೆಯ ಖಂಡವು

ಮಾ ನಃ ಸಮಸ್ಯ ದೂಢ್ಯಃ ಪರಿದ್ವೇಷಸೋ ಅಂಹತಾಃ। ಊರ್ಮಿರ್ನ ನಾವಮಾವಧೀತ್। ಮಾ ನಃ ಸರ್ವಸ್ಯ ದುರ್ಧಿಯಃ ಪಾಪಧಿಯಃ ಸರ್ವತೋ ದ್ವೇಷಸೋ ಅಂಹತಿರೂರ್ಮಿರಿವ ನಾವಮಾವಧೀತ್। ಊರ್ಮಿರೂರ್ಣೋತೇರ್ನೌಃ ಪ್ರಣೋತ್ತವ್ಯಾ ಭವತಿ। ನಮತೇರ್ವಾ। ತತ್ಕಥಮನುದಾತ್ತಪ್ರಕೃತಿ ನಾಮಸ್ಯಾದ್ ದೃಷ್ಟವ್ಯಯಂ ತು ಭವತಿ। ಉತೋ ಸಮಸ್ಮಿನ್ನಾಶಿಶೀಹಿ ನೋ ವಸೋ ಇತಿ ಸಪ್ತಮ್ಯಾಂ ಶಿಶೀತಿರ್ದಾನಕರ್ಮಾ। ಉರುಷ್ಯಾಣೋ ಅಘಾಯತಃ ಸಮಸ್ಮಾತ್ ಇತಿ ಪಂಚಮ್ಯಾಮುರುಷ್ಯತಿರಕ್ಷಾಕರ್ಮಾ। ಅಥಾಪಿ ಪ್ರಥಮಾ ಬಹುವಚನೇ ನಭನ್ತಾಮನ್ಯಕೇ ಸಮೇ ॥೨೩॥

---

ಮಾ ನಃ ಸಮಸ್ಯ ದೂಢ್ಯಃ ಪರಿದ್ವೇಷಸೋ ಅಂಹತಿಃ।
ಊರ್ಮಿರ್ನ ನಾವಮಾವಧೀತ್ ॥
ಮಾ ನಃ ಸರ್ವಸ್ಯ ದುರ್ಧಿಯಃ ಪಾಪಧೀಯಃ ಸರ್ವತೋ ದ್ವೇಷಸೋ ಅಂಹತಿರೂರ್ಮಿರಿವ ನಾವಮಾವಧೀತ್ ॥ ಊರ್ಮಿರೂರ್ಣೋತೇರ್ನೌಃ-ಪ್ರಣೋತ್ತವ್ಯಾ ಭವತಿ। ನಮತೇರ್ವಾ। ತತ್ಕಥಮನುದಾತ್ತಪ್ರಕೃತಿ ನಾಮ ಸ್ಯಾತ್ ದೃಷ್ಟವ್ಯಯಂ ತು ಭವತಿ। "ಉತೋ ಸಮಸ್ಮಿನ್ನಾಶಿಶೀಹಿ ನೋ ವಸೋ" ಇತಿ ಸಪ್ತಮ್ಯಾಂ

ಈ ನಿರುಕ್ತದಲ್ಲಿ ಯಾಸ್ಕರು (ಅಥವಾ ಸೂಕ್ತದ ಋಷಿಯು) ಯುದ್ಧಭೂಮಿಯನ್ನು ಒಂದು (ನೀರಿನ) ಭಾವಿಗೆ ಹೋಲಿಸಿ ವರ್ಣನೆ ಮಾಡಿರುತ್ತಾರೆ.

**ಪ್ರೀಣೀತಾಶ್ವಾನ್**—ಯುದ್ಧಕ್ಕೆ ಸಿದ್ಧವಾಗುವುದಕ್ಕಾಗಿ ಅಶ್ವಗಳಿಗೆ ಹುಲ್ಲನ್ನೂ ನೀರನ್ನೂ ಒದಗಿಸಿ ಅವುಗಳನ್ನು ಸಂತೋಷಪಡಿಸಿರಿ.

**ಸುಹಿತಂ ಜಯಥ ಜಯನಂ ವೋ ಹಿತಮಸ್ತು**—ಯುದ್ಧಗಳಲ್ಲಿ ಭಾಗವಹಿಸುವ ಸೈನಿಕರಲ್ಲಿ ಬಂಧುಗಳೂ, ಸ್ನೇಹಿತರೂ ಇದ್ದೇ ಇರುವರು. ಇವರಲ್ಲಿ ಕೆಲವರಾದರೂ ಯುದ್ಧದಲ್ಲಿ ಮಡಿಯುವರು. ಆದ್ದರಿಂದ ಯುದ್ಧವು ಸ್ವಲ್ಪಮಟ್ಟಿಗೆ ಅಹಿತವಾದರೂ ಜಯವು ಎಲ್ಲರಿಗೂ ಹಿತಕರವಾಗಿಯೇ ಇರುವುದು. ಆದ್ದರಿಂದ ಎಲ್ಲರಿಗೂ ಹಿತವಾಗುವಂತೆ ಜಯವನ್ನು ಗಳಿಸಿರಿ.

**ಸ್ವಸ್ತಿವಾಹನಂ ರಥಂ ಕುರುಧ್ವಂ**—ಉತ್ತಮವಾದ ಜಯಪ್ರಾಪ್ತಿಯಿಂದ ದೊರೆಯುವ ಸಂಪತ್ತನ್ನು ವಹಿಸಿ ತರಲ ರಥವನ್ನು ಸುಸಜ್ಜಿತವನ್ನಾಗಿ ಮಾಡಿ.

**ದ್ರೋಣಾಹಾವಂ ದ್ರೋಣಂ ದ್ರುಮಮಯಂ ಭವತಿ। ಆಹಾವ ಆಹ್ವಾನಾದಾವಹ ಆವಹನಾದವತೋಽ-ವಾತಿತೋ ಮಹಾನ್ ಭವತಿ**—ದ್ರೋಣವೆಂದರೆ ದ್ರುಮಮಯ, ಮರದಿಂದ ನಿರ್ಮಿತವಾದದ್ದು (ರಥ ಅಥವಾ ನೀರು ತುಂಬುವ ಮರದತೊಟ್ಟಿ ಅಥವಾ ಬಾನೆ) ಆಹಾವ ಎಂದರೆ ಮರದ ಬಾನೆ. (ಆ-ಹಾವ) ಆವಹ ಎಂದರೆ ವಹಿಸುವ ಸಾಧನ, ಗಾಡಿ ಇತ್ಯಾದಿ. ಈ ಶಬ್ದಕ್ಕೆ ಆ ವಹ ವಹಿಸುವುದು ಹೊರುವುದು ಎಂಬರ್ಥವಿರುವುದು. ಅವತವೆಂದರೆ ಆಳವಾದ ಭಾವಿಯು ಈ ಶಬ್ದವು ಅವ ಅತಿತ-ಕೆಳಗೆ ಬಹಳ ಆಳವಾಗಿರುವುದು ಎಂಬರ್ಥವನ್ನು ಸೂಚಿಸುವುದು.

**ಅಶ್ಮಚಕ್ರಮಶನಚಕ್ರಮಸನಚಕ್ರಮಿತಿ ವಾ**—ಅಶ್ಮಚಕ್ರವೆಂದರೆ ಕಲ್ಲಿನ ಚಕ್ರವು ಅಥವಾ ಗಾಲಿಯು. ಇದು ಯುದ್ಧಭೂಮಿಯಲ್ಲಿ ಸರ್ವತ್ರವ್ಯಾಪಿಸಿರುವುದು ಅಥವಾ ಇದರ ಪ್ರಯೋಗವು ಶತ್ರುಗಳನ್ನು ಭಯಪಡಿಸಿರುವುದು. ಈ ಅರ್ಥದಲ್ಲಿ ಇದು ಯುದ್ಧದಲ್ಲಿ ಉಪಯೋಗಿಸುವ ಒಂದು ಆಯುಧವಿಶೇಷವು (Stone-Axe)

**ಅಂಸತ್ರಕೋಶಮಂಸತ್ರಾಣಿ ವಃ ಕೋಶಸ್ಥಾನೀಯಾನಿ ಸಂತು। ಕೋಶಃ ಕುಷ್ಣಾತೇರ್ವಿಕುಷಿತೋ ಭವತಿ। ಅಯಮಪೀತರಃ ಕೋಶ ಏತಸ್ಮಾದೇವ**—ಅಂಸ ಎಂದರೆ ಶರೀರದ ಅಂಗಗಳು. ಅವುಗಳನ್ನು ತ್ರಾಯತೇ—ಕಾಪಾಡುವುದಾದ್ದರಿಂದ (ಯುದ್ಧದಲ್ಲಿ ಉಪಯೋಗಿಸುವ ಉಕ್ಕಿನ) ಕವಚ, ಧನಸ್ಸುಗಳಿಗೆ ಅಂಸತ್ರವೆಂದು ಹೆಸರು. ಅವುಗಳನ್ನು ಇಡುವ ಕೋಶ ಅಥವಾ ಚರ್ಮದಚೀಲಕ್ಕೆ ಅಂಸತ್ರಕೋಶವೆಂದು ಹೆಸರು. ಕೋಶಶಬ್ದವು, ಎಳಿ, ಸೇದು ಎಂಬರ್ಥವುಳ್ಳ ಕುಷ್ ಧಾತುವಿನಿಂದ ನಿಷ್ಪನ್ನವಾಗಿದೆ. ತನ್ನಲ್ಲಿರುವ (ಕೋಶದಲ್ಲಿ, ಚೀಲದಲ್ಲಿ) ಕವಚ ಧನುಸ್ಸು ಮೊದಲಾದುವನ್ನು ಈಚೆಗೆ ಎಳೆದು ತೆಗೆದುಕೊಳ್ಳುವುದರಿಂದ ಇದಕ್ಕೆ ಕೋಶವೆಂದು ಹೆಸರು. ಅಥವಾ ಕೋಶಶಬ್ದಕ್ಕೆ ಧನಾದಿಗಳನ್ನು ಸಂಗ್ರಹಿಸಿ ಇಡುವ ಪ್ರದೇಶವೆಂದು ಇನ್ನೊಂದು ಅರ್ಥವಿರುವುದು. ಈ ಅರ್ಥವನ್ನು ಸೂಚಿಸುವಾಗಲೂ ಈ ಶಬ್ದವು ಕುಷ್‌ಧಾತುವಿನಿಂದಲೇ ನಿಷ್ಪನ್ನವಾಗಿರುವುದು.

**ಸಂಚಯ ಆಚಿತಮಾತ್ರೋ ಮಹಾನ್ ಭವತಿ**—ಸಂಚಯವೆಂದರೆ ಸಂಗ್ರಹವು, ಅನೇಕ ವಸ್ತುಗಳನ್ನು ಒಂದಡೆ ಒಟ್ಟಾಗಿ ಶೇಖರಿಸಿ ಇಡುವುದು.

**ಸಂಚಿತನೃಪಾಣಂ ನರಪಾಣಂ ಕೂಪಕರ್ಮಣಾ ಸಂಗ್ರಾಮುಮುಪಮಿಮೀತೇ**—ನೃಪಾಣವೆಂದರೆ ಮನುಷ್ಯರು ಪಾನಮಾಡಲು ಯೋಗ್ಯವಾದ ಉದಕವನ್ನು ತುಂಬುವುದಕ್ಕಾಗಿ ಭಾವಿಯಂತೆ ಆಳವಾಗಿರುವ ತೊಟ್ಟಿಯು ಅಥವಾ ಭಾನೆಯು. ಇದನ್ನು ನೀರಿನಿಂದ ತುಂಬಿರಿ ಎಂದಭಿಪ್ರಾಯವು. ಇಲ್ಲಿ ಯುದ್ಧಭೂಮಿಯನ್ನು ಒಂದು ಆಳವಾದ ಭಾವಿಗೆ ಹೋಲಿಸಿ ವರ್ಣಿಸಲಾಗಿದೆ.

ಕಾಕುದಮ್ ॥೨೬॥

ಕಾಕುದಂ ತಾಲ್ವಿತ್ಯಾಚಕ್ಷತೇ । ಜಿಹ್ವಾ ಕೋಕುವಾ ಸಾಸ್ಮಿನ್ ಧೀಯತೇ
ಜಿಹ್ವಾ ಕೋಕುವಾ ಕೋಕೂಯಮಾನಾ ವರ್ಣಾನ್ನುದತೀತಿ ವಾ
ಕೋಕೂಯತೇರ್ವಾ ಸ್ಯಾಚ್ಛಬ್ದಕರ್ಮಣಃ ॥ ಜಿಹ್ವಾ ಜೋಹುವಾ ॥
ತಾಲು ತರತೇಸ್ತೀರ್ಣತಮಮಙ್ಗಂ ಲತತೇರ್ವಾ ಸ್ಯಾದ್ ಲಮ್ಬ-
ಕರ್ಮಣೋ ವಿಪರೀತಾದ್ ಯಥಾ ತಲಂ ಲತೇತ್ಯವಿಪರ್ಯಯಃ- ॥

**ಕಾಕುದಂ** ಎಂದರೆ ತಾಲು (ಬಾಯಿ ಒಳಗಡೆಯ ಮೇಲುಭಾಗ) **ಜಿಹ್ವಾ** ಎಂದರೆ ನಾಲಿಗೆಯು. ಇದಕ್ಕೆ ಕೋಕುವಾ ಎಂದೂ ಹೆಸರು ಏಕೆಂದರೆ ನಾಲಗೆಯು (ಜಿಹ್ವೆಯು) ತಾಲುವಿನ (ಕಾಕುವಾ) ಕೆಳಗೆ ಇಡಲ್ಪಟ್ಟಿರುವುದು **ಜಿಹ್ವಾ ಕೋಕೂಯಮಾನಾ ವರ್ಣಾನ್ನುದತೀತಿ ವಾ**—ಇದು ಬಹಳ ಶಬ್ದಮಾಡುವುದು ಮತ್ತು ಮಾತುಗಳನ್ನು ಘಟ್ಟಿಯಾಗಿ ಉಚ್ಚರಿಸಲು ಸಹಾಯಮಾಡುವುದು ಅಥವಾ **ಕೋಕುವಾ** ಎಂಬ ಶಬ್ದವು ಶಬ್ದಮಾಡು ಎಂಬರ್ಥವುಳ್ಳ ಕೋಕೂಯತೀ ಧಾತುವಿನಿಂದ ನಿಷ್ಪನ್ನವಾಗಬಹುದು. **ಜಿಹ್ವಾ** ನಾಲಿಗೆಗೆ ಜೋಹುವಾ-ಪದೇಪದೇ ಕರೆಯುವುದರಿಂದ ಈ ಹೆಸರು ಬಂದಿದೆ. **ತಾಲು** ಎಂಬ ಶಬ್ದವು (ಬಾಯಿಯಲ್ಲಿ ದಾಡುವುದು) ದಾಟು ಎಂಬ ಅರ್ಥವುಳ್ಳ ತರತಿಧಾತುವಿನಿಂದಾಗಲಿ, ಅತ್ಯಂತ ಎತ್ತರ ವಾದ (ಬಾಯಿಯ) ಅಂಗವಾಗಿರುವುದರಿಂದ ಲಲತಿ (ದೀರ್ಘವಾಗಿರುವುದು) ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಅಥವಾ **ತಲಂ** ಎಂಬ ಶಬ್ದವು ವರ್ಣವ್ಯತ್ಯಾಸದಿಂದ ತ+ಲ=ಲ+ತ ಎಂದು ವಿಪರ್ಯವುಂಟಾಗಬಹುದು ಲತಾ ಎಂದರೆ ಉದ್ದವಾಗಿರುವುದು ಎಂದರ್ಥವು ಈ **ಲತೆ**ಯೆಂಬ ಶಬ್ದವೇ ವಿಪರ್ಯಯ (ಹಿಂದುಮುಂದು) ದಿಂದ ತಲವೆಂದಾಗಿರುವುದು.

**ಇತಿ ಷಡ್ವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತಾರನೆಯ ಖಂಡವು ಸಮಾಪ್ತವು

---

## ಅಥ ಸಪ್ತವಿಂಶಃ ಖಂಡಃ

**ಇಪ್ಪತ್ತೇಳನೆಯ ಖಂಡವು**

ಸುದೇವೋ ಅಸಿ ವರುಣ ಯಸ್ಯ ತೇ ಸಪ್ತಸಿಂಧವಃ । ಅನುಕ್ಷರನ್ತಿ
ಕಾಕುದಂ ಸೂರ್ಮ್ಯಂ ಸುಷಿರಾಮಿವ ॥ ಸುದೇವಸ್ತ್ವಂ ಕಲ್ಯಾಣದಾನೋ

ಯಸ್ಯ ತವ ದೇವ ಸಪ್ತ ಸಿಂಧವಃ ಪ್ರಾಣಾಯಾನುಕ್ಷರನ್ತಿ ಕಾಕುದಂ ಸೂರ್ಯಂ ಸುಕ್ಷಿರಾಮಿವೇತ್ಯಪಿ ನಿಗಮೋ ಭವತಿ॥ ಸುದೇವಸ್ತ್ವಂ ಕಲ್ಯಾಣದೇವಃ ಕಮನೀಯದೇವೋ ವಾ ಭವಸಿ ವರುಣ ಯಸ್ಯ ತೇ ಸಪ್ತಸಿಂಧವಃ ಸಿಂಧುಃ ಸ್ರವಣಾತ್ ಯಸ್ಯ ತೇ ಸಪ್ತ ಸ್ರೋತಾಂಸಿ ತಾನಿ ತೇ ಕಾಕುದಮನುಕ್ಷರನ್ತಿ ಸೂರ್ಮಿ ಕಲ್ಯಾಣೋರ್ಮಿ ಸ್ರೋತಃ ಸುಷಿರಮನು ಯಥಾ ಬೀರಿಟಂ ತೈಟೀಕಿರನ್ತರಿಕ್ಷಮೇವಮಾಹ ಪೂರ್ವಂ ವಯತೇರುತ್ತರಮಿರತೇರ್ವಯಾಂಸೀರನ್ತ್ಯಸ್ಮಿನ್ ಭಾಂಸಿ ವಾ ತದೇತಸ್ಯಾಮೃಚ್ಯುದಾಹರನ್ತ್ಯಪಿ ನಿಗಮೋ ಭವತಿ ॥ ೨೭ ॥

———

"ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ। ಅನುಕ್ಷರನ್ತಿ ಕಾಕುದಂ ಸೂರ್ಮ್ಯಂ ಸುಷಿರಾಮಿವ ॥"

ಸುದೇವಸ್ತ್ವಂ ಕಲ್ಯಾಣದೇವಃ ಕಮನೀಯದೇವೋ ವಾ ಭವಸಿ ವರುಣ ಯಸ್ಯ ತೇ ಸಪ್ತ ಸಿಂಧವಃ। ಸಿಂಧುಃ ಸ್ರವಣಾದ್। ಯಸ್ಯ ತೇ ಸಪ್ತ ಸ್ರೋತಾಂಸಿ ತಾನಿ ತೇ ಕಾಕುದಮನುಕ್ಷರನ್ತಿ ಸೂರ್ಮಿ ಸ್ರೋತಃ ಸುಷಿರಮನು ಯಥಾ ॥೧॥೨೭॥

**ಕಾಕುದಂ** ಎಂಬ ಶಬ್ದಪ್ರಯೋಗವಿರುವ ಋಕ್ಕಿನ ಉದಾಹರಣೆಯು—

**ಸುದೇವೋ ಅಸಿ ವರುಣ ಯಸ್ಯ ತೇ ಸಪ್ತ ಸಿಂಧವಃ।**
**ಕಾಕುದಂ ಸೂರ್ಮ್ಯಂ ಸುಷಿರಾಮಿವ ॥**

(ಋ. ಸಂ. ೮-೬೯-೧೨)

ಇದರ ಅರ್ಥವು—

ಎಲೈ ವರುಣದೇವನೇ ಯಾವ ಮಾಹಾತ್ಮ್ಯವುಳ್ಳ ನಿನ್ನ ನಾಲಗೆಯ ತಳಭಾಗಕ್ಕೆ ಪ್ರವಾಹವು ಪಾತಾಳವಂತಿರುವ ಹಳ್ಳಕ್ಕೆ ಬೀಳುವಂತೆ ಗಂಗಾದಿ ಸಪ್ತನದಿಗಳೂ ಸಹ ಪ್ರವಹಿಸುವುವೋ ಅಂತಹ ನೀನು ಅತ್ಯುತ್ತಮನಾದ ದೇವನಾಗಿದ್ದೀಯೆ.

ಕಾಕುದಂ ಎಂಬ ಶಬ್ದಕ್ಕೆ ಅರ್ಥವಿವರಣೆಮಾಡುವುದಕ್ಕಾಗಿ ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಸುದೇವಸ್ತ್ವಂ ಕಲ್ಯಾಣದೇವಃ ಕಮನೀಯದೇವೋ ವಾ ಭವಸಿ ವರುಣ ಯಸ್ಯ ತೇ ಸಪ್ತ ಸಿಂಧವಃ। ಸಿಂಧುಃ ಸ್ರವಣಾತ್ ಯಸ್ಯ ತೇ ಸಪ್ತ ಸ್ರೋತಾಂಸಿ ತೇ ಕಾಕುದಮನುಕ್ಷರಂತಿ ಸೂರ್ಮಿ ಕಲ್ಯಾಣೋರ್ಮಿ ಸ್ರೋತಃ ಸುಷಿರಮನು ಯಥಾ ॥**

(ನಿ. ೫-೨೭)

ಎಲೈ ವರುಣನೇ, ನೀನು ಸುದೇವ ಎಂದರೆ ಕಲ್ಯಾಣಕಾರಕನಾದ, ಎಲ್ಲರಿಗೂ ಒಳ್ಳೆಯದನ್ನುಂಟುಮಾಡುವ ಮಂಗಳ ಕಾರಕನಾದ ದೇವನು, ಅಥವಾ ಎಲ್ಲರಿಂದಲೂ ಅಪೇಕ್ಷಿಸಲ್ಪಡುವ (ಮನೋಹರನಾದ) ದೇವನು ಇಂತಹ ನಿನ್ನ ನಾಲಗೆಯ ತಳ ಭಾಗಕ್ಕೆ (ಗಂಗೆಯೇ ಮೊದಲಾದ) ಏಳು ನದಿಗಳೂ ಪ್ರವಹಿಸಿ ಬೀಳುವವು. ಹೇಗೆಂದರೆ ಹರಿಯು ನೀರು ಹಳ್ಳಕ್ಕೆ ಎಂದರೆ ತಗ್ಗಾದ ಪ್ರದೇಶಕ್ಕೆ ಸ್ವಾಭಾವಿಕವಾಗಿ ಹೋಗಿ ಬೀಳುವಂತೆ ಏಳು ಪ್ರಸಿದ್ಧವಾದ ನದಿಗಳೂ ನಿನ್ನ ನಾಲಗೆಯ ತಳಕ್ಕೆ (ಎಂದರೆ ಸಮುದ್ರಕ್ಕೆ) ಹೋಗಿ ಬೀಳುವವು. ಇಲ್ಲಿ ಸಿಂಧುಶಬ್ದಕ್ಕೆ ಹರಿಯುವ ನದಿ ಎಂದರ್ಥವು. ಎಂದರೆ ಹರಿಯುವ ಸ್ವಭಾವವುಳ್ಳದ್ದರಿಂದ ನದಿಗೆ ಸಿಂಧುವೆಂದೂ ಹೆಸರು. ಸೂರ್ಮಿ ಎಂದರೆ ಒಳ್ಳೆಯ ಅಲೆಗಳುಳ್ಳ ಎಂದರೆ ಯಥೇಚ್ಛವಾಗಿ ನೀರುಳ್ಳ ಪ್ರವಾಹವು ತಗ್ಗಾದ ಪ್ರದೇಶಕ್ಕೆ ನುಗ್ಗುವಂತೆ ಎಂದು ಸುಷಿರಾಂ ಎಂಬ ದೃಷ್ಟಾಂತವನ್ನು ಹೇಳಿದೆ.

ಬೀರಿಟೇ ||೭೭||
ಬಿರೀಟಂ ತೈಟೀಕಿರನ್ತರಿಕ್ಷಮೇವಮಾಹ ಪೂರ್ವಂ ವಯತೇರುತ್ತರಮಿರ-
ತೇರ್ವಯಾಂಸೀರನ್ತ್ಯಸ್ಮಿನ್ ಭಾಂಸಿ ವಾ । ತದೇತಸ್ಯಾಮೃಚ್ಯುದಾಹ-
ರನ್ತ್ಯಪಿ ನಿಗಮೋ ಭವತಿ ॥

**ಬೀರಿಟೇ**—ಈ ಶಬ್ದಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥವಿವರಣೆ ಮಾಡಿದ್ದಾರೆ. ಬೀರಿಟೇ ಎಂದರೆ ಅಂತರಿಕ್ಷದಲ್ಲಿ ಎಂದು ಒಂದು ಅರ್ಥವನ್ನೂ **ವಿಶಾಂ ಮನುಷ್ಯಾಣಾಂ ಬೀರಿಟೇ ಗಣೇ ವಿಶ್ಪತೀವ ರಾಜಾನೌ** ಮನುಷ್ಯರ ಅಥವಾ ಪ್ರಜೆಗಳ ಸಮೂಹದಲ್ಲಿ ಪ್ರಜಾಪಾಲಕರಾದ ರಾಜರಂತೆ ಎಂದು ಹೇಳಿ **ಬೀರಿಟೇ** ಎಂದರೆ ಸಮೂಹದಲ್ಲಿ ಎಂಬ ಇನ್ನೊಂದು ಅರ್ಥವನ್ನೂ ಹೇಳಿದ್ದಾರೆ.

ಯಾಸ್ಕರು ಈ ಶಬ್ದಕ್ಕೆ ನಿರ್ವಚನವನ್ನು ಹೇಳಿ ಅರ್ಥವಿವರಣೆ ಮಾಡಿದ್ದಾರೆ—

**ಬೀರಿಟೇ । ಬೀರಿಟಂ ತೈಟೀಕಿರಂತಕ್ಷಮೇವಮಾಹ ಪೂರ್ವಂ ವಯತೇರುತ್ತರಮಿರತೇ-ರ್ವಯಾಂಸೀರಂತ್ಯಸ್ಮಿನ್ ಭಾಂಸಿ ವಾ । ತದೇತದಸ್ಯಾಮೃಚ್ಯುದಾಹರಂತ್ಯಪಿ ನಿಗಮೋ ಭವತಿ ।** (ನಿ. ೫–೨೭)

ಬೀರಿಟಶಬ್ದಕ್ಕೆ ಅಂತರಿಕ್ಷವೆಂದರ್ಥವು ಎಂದು ತೈಟೀಕಿ ಎಂಬ ಆಚಾರ್ಯರ ಮತವು. ಹೇಗೆಂದರೆ—ಈ ಶಬ್ದದ ಪೂರ್ವಾರ್ಧವಾದ **ಬೀ** ಅಥವಾ **ವೀ** ಎಂಬ ಅಕ್ಷರವು **ವೇ** ಧಾತುವಿನಿಂದಲೂ ಉತ್ತರಾರ್ಧವಾದ ಈರಿಟ್ ಎಂಬ ಭಾಗವು ಈರ್ ಎಂಬ ಧಾತುವಿನಿಂದಲೂ ನಿಷ್ಪನ್ನವಾಗಿ ವೇರಿಟಂ ಅಥವಾ ಬೇರಿಟಂ ಎಂದಾಗಿದೆ. ವಿ ಎಂದರೆ ಪಕ್ಷಿಗಳು ಈರ್ ಎಂದರೆ ಸಂಚರಿಸು ಎಂದರ್ಥವು. **ಇರತೇರ್ವಯಾಂಸೀರಂತ್ಯಸ್ಮಿನ್ ।** ಪಕ್ಷಿಗಳು ಇದರಲ್ಲಿ (ಅಂತರಿಕ್ಷದಲ್ಲಿ) ಸಂಚರಿಸುವುದರಿಂದ ವೀರಿಟ ಅಥವಾ ಬೀರಿಟಶಬ್ದಕ್ಕೆ ಅಂತರಿಕ್ಷವೆಂಬ ಅರ್ಥವು ಉಚಿತವಾಗಿದೆ. ಅಥವಾ **ಭಾಂಸಿ ವಾ** ಎಂದರೆ **ಭಾಸೋಽತ್ರ ನಕ್ಷತ್ರಾದೀನಾಂ ತನ್ಯಂತೇ** ಈ ಅಂತರಿಕ್ಷದಲ್ಲಿ ಪ್ರಕಾಶಮಾನವಾದ ನಕ್ಷತ್ರಾದಿ ಜ್ಯೋತಿರ್ಮಂಡಲಗಳ ಚಲನವಲನಗಳಿರುವುದರಿಂದ **ಬೀರಿಟಂ** ಎಂದರೆ ಅಂತರಿಕ್ಷವು ಎಂದೂ ಹೇಳಬಹುದು.

**ಇತಿ ಸಪ್ತವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೇಳನೆಯ ಖಂಡವು ಸಮಾಪ್ತವು.

---

## ಅಥ ಅಷ್ಟಾವಿಂಶತಿಖಂಡಃ

### ಇಪ್ಪತ್ತೆಂಟನೆಯ ಖಂಡವು

ಪ್ರವಾವೃಜೇ ಸುಪ್ರಯಾ ಬರ್ಹಿರೇಷಾ ಮಾ ವಿಶ್ಪತೀವ ಬೀರಿಟ ಇಯಾತೇ । ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್ ॥ ಪ್ರವೃಜ್ಯತೇ ಸುಪ್ರಾಯಣಂ ಬರ್ಹಿರೇಷಾಮೇಯಾತೇ ಸರ್ವಸ್ಯ ಪಾತಾರೌ ವಾ ಪಾಲಯಿತಾರೌ ವಾ ಬೀರಿಟಮನ್ತರಿಕ್ಷಂ ಭಿಯೋ ವಾ ಭಾಸೋ ವಾ ತತಿರಪಿ ವೋಪಮಾರ್ಥೇ ಸ್ಯಾತ್ ಸರ್ವಪತೀ ಇವ ರಾಜಾನೌ ಬೀರಿಟೇ ಗಣೇ ಮನುಷ್ಯಾಣಾಂ ರಾತ್ರ್ಯಾ ವಿವಾಸೇ ಪೂರ್ವಸ್ಯಾಮಭಿಹೂತೌ ವಾಯುಶ್ಚ ನಿಯುತ್ವಾನ್ ಪೂಷಾ ಚ ಸ್ವಸ್ತ್ಯಯನಾಯ ನಿಯುತ್ವಾನ್ ನಿಯುತೋಽಸ್ಯಾಶ್ವಾ ನಿಯುತೋ ನಿಯಮನಾದ್ವಾ ನಿಯೋಜನಾದ್ವಾಽಚ್ಛಾಭೇರಾಪ್ತುಮಿತಿ ಶಾಕಪೂಣಿಃ ಪರೀಂ ಸೀಮಿತಿ ವ್ಯಾಖ್ಯಾತಮೇನಮೇನಾಮಸ್ಯಾ ಅಸ್ಯತ್ಯೇತೇನ ವ್ಯಾಖ್ಯಾತಂ ಸೃಣಿರಂಕುಶೋ ಭವತಿ ಸರಣಾದಂಕುಶೋಽಞ್ಚತೇರಾ-ಕುಚಿತೋ ಭವತೀತಿ ವಾ । ನೇದೀಯ ಇತ್ಸೃಣ್ಯಃ ಪಕ್ವಮೇಯಾದಿತ್ಯಪಿ ನಿಗಮೋ ಭವತ್ಯನ್ತಿಕತಮಮಂಕುಶಾದಾಯಾತ್ಪಕ್ವಮೌಷಧಮಾಗಚ್ಛ-ತ್ವಿತ್ಯಾಗಚ್ಛತ್ವಿತಿ ॥೨೮॥

---

" ಪ್ರವಾವೃಜೇ ಸುಪ್ರಯಾ ಬರ್ಹಿರೇಷಾ ಮಾ ವಿಶ್ಪತೀವ ಬೀರಿಟ
ಇಯಾತೇ । ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ
ಪೂಷಾ ಸ್ವಸ್ತಯೇ ನಿಯುತ್ವಾನ್ ॥

ಪ್ರವೃಜ್ಯತೇ ಸುಪ್ರಾಯಣಂ ಬರ್ಹಿರೇಷಾಮೇಯಾತೇ ಸರ್ವಸ್ಯ ಪಾತಾರೌ ವಾ ಪಾಲಯಿತಾರೌ ವಾ । ಬೀರಿಟಮನ್ತರಿಕ್ಷಂ ಭಿಯೋ ವಾ ಭಾಸೋ ವಾ ತತಿಃ । ಅಪಿ ವೋಪಮಾರ್ಥೇ ಸ್ಯಾತ್ ಸರ್ವ-ಪತಿ ಇವ ರಾಜಾನೌ ಬೀರಿಟೇ ಗಣೇ ಮನುಷ್ಯಾಣಾಂ ರಾತ್ರ್ಯಾ

ವಿವಾಸೇ ಪೂರ್ವಸ್ಯಾಮಭಿಹೂತೌ ವಾಯುಶ್ಚ ನಿಯುತ್ವಾನ್
ಪೂಷಾ ಚ ಸ್ವಸ್ತ್ಯಯನಾಯ ॥ ನಿಯುತ್ವಾನ್ ನಿಯುತೋಽ-
ಸ್ಯಾಶ್ವಾಃ । ನಿಯುತೋ ನಿಯಮನಾದ್ವಾ, ನಿಯೋಜನಾದ್ವಾ ॥೧॥

ಉದಾಹರಣೆಯ ಋಕ್ಕು—

**ಪ್ರ ವಾವೃಜೇ ಸುಪ್ರಯಾ ಬರ್ಹಿರೇಷಾ ಮಾ ವಿಶ್ಪತೀವ ಬೀರಿಟ ಇಯಾತೇ ।**
**ವಿಶಾಮಕ್ತೋರುಷಸಃ ಪೂರ್ವಹೂತೌ ವಾಯುಃ ಪೂಷಾ ಸ್ವಸ್ತಯೇ ನಿಯುತ್ವಾನ್॥**

(ಋ. ಸಂ. ೭-೩೯-೨)

ಇದರ ಅರ್ಥವು—

ಯಜಮಾನರ ಉತ್ತಮವಾದ ಅನ್ನಯುಕ್ತವಾದ ದರ್ಭಾಸನವು ಹರಡಲ್ಪಟ್ಟಿದೆ. ಪ್ರಜಾಪಾಲಕರಾದ ರಾಜರಂತೆ ನಿಯುತ್ಸಂಜ್ಞಕವಾದ ಅಶ್ವವುಳ್ಳ ವಾಯುವೂ, ಪೂಷದೇವನೂ ಪ್ರಜೆಗಳ ಕ್ಷೇಮಕ್ಕಾಗಿ ರಾತ್ರಿಸಂಬಂಧಿಯಾದ ಉಷಸ್ಸಿಗಿಂತಲೂ ಪೂರ್ವಭಾವಿಯಾದ (ಪ್ರಾತಃಕಾಲದ) ಆಹ್ವಾನನಿಮಿತ್ತವಾಗಿ ಅಂತರಿಕ್ಷದಲ್ಲಿ ದಯಮಾಡಲಿ.

ಈ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರ್ವಚನವನ್ನು ಹೇಳಿದ್ದಾರೆ—

**ಪ್ರವೃಜ್ಯತೇ ಸುಪ್ರಾಯಣಂ ಬರ್ಹಿರೇಷಾಮೇಯಾತೇ ಸರ್ವಸ್ಯ ಪಾತಾರೌ ವಾ ಪಾಲಯಿತಾ-ರೌ ವಾ । ಬೀರಿಟಮಂತರಿಕ್ಷಂ ಭಿಯೋ ವಾ ಭಾಸೋ ವಾ ತತಿಃ । ಅಪಿ ವೋಪಮಾರ್ಥೇ ಸ್ಯಾತ್ ಸರ್ವಪತೀ ಇವ ರಾಜಾನೌ ಬೀರಿಟೇ ಗಣೇ ಮನುಷ್ಯಾಣಾಂ ರಾತ್ರ್ಯಾ ವಿವಾಸೇ ಪೂರ್ವಸ್ಯಾಮಭಿಹೂತೌ ವಾಯುಶ್ಚ ನಿಯುತ್ವಾನ್ ಪೂಷಾ ಚ ಸ್ವಸ್ತ್ಯಯನಾಯ ॥ ನಿಯುತ್ವಾನ್ ನಿಯುತೋಽಸ್ಯಾಶ್ವಾಃ ನಿಯುತೋ ನಿಯಮನಾದ್ವಾ ನಿಯೋಜನಾದ್ವಾ ॥**

(ನಿ. ೫-೨೮)

ಪ್ರಕೃತ ಋಕ್ಕಿನಲ್ಲಿ ವಾಯು ಮತ್ತು ಪೂಷನ್ ಎಂಬ ದೇವತೆಗಳನ್ನು ಸ್ತುತಿಸಲಾಗಿದೆ. ಈ ದೇವತೆಗಳು ಸಮಸ್ತಕ್ಕೂ ಎಂದರೆ ಸಮಸ್ತರಿಗೂ ಪಾಲಕರಾದವರು ಎಂದರೆ ಎಲ್ಲರನ್ನೂ ಕಾಪಾಡತಕ್ಕವರು. ಇಂತಹ ಈ ದೇವತೆಗಳ ಆಗಮನಕ್ಕಾಗಿ ಯಜ್ಞವೇದಿಯಲ್ಲಿ ಮೆತ್ತಗಿರುವ ಬರ್ಹಿಃ ಎಂಬ ದರ್ಭೆಗಳು ಆಸನಾರ್ಥವಾಗಿ ಹರಡಲ್ಪಡುತ್ತವೆ. **ಬೀರಿಟಂ** ಎಂದರೆ ಅಂತರಿಕ್ಷವು. ಇದರಲ್ಲಿ ಭಯವು ಅಥವಾ ಬೆಳಕು ತುಂಬಿರುವುದರಿಂದ ಬೀರಿಟಂ ಎಂದರೆ ಅಂತರಿಕ್ಷವು ಎಂದರ್ಥವು. ಅಥವಾ ಈ ಶಬ್ದವನ್ನು ಉಪಮಾನ (ಹೋಲಿಕೆ)ವನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಿರಬಹುದು. ಈ ಉಪಮಾರ್ಥದಲ್ಲಿ ಬೀರಿಟೆ ಎಂದರೆ ಗಣೇ (ಸಮೂಹದಲ್ಲಿ) ಎಂದು ಅರ್ಥವನ್ನು ಹೇಳಬೇಕು. ಸರ್ವರಿಗೂ ಪಾಲಕರಾದ ರಾಜರು ಮನುಷ್ಯರ ಗುಂಪಿನಲ್ಲಿ ಬಂದಾಗ ಹೇಗೆ ಗೌರವಾನ್ವಿತರಾಗಿ- ಪ್ರಕಾಶಿಸುವರೋ ಅದರಂತೆ ಎಂದು ಬೀರಿಟಶಬ್ದಕ್ಕೆ ಗಣ ಅಥವಾ ಗುಂಪು ಎಂಬರ್ಥವನ್ನು ಹೇಳಬಹುದು. **ಉಷಸಃ ಪೂರ್ವಹೂತೌ** ಎಂದರೆ ರಾತ್ರ್ಯಾ ವಿವಾಸೇ **ಪೂರ್ವಸ್ಯಾಮಭಿಹೂತೌ** ರಾತ್ರಿಯ ಕೊನೆಯ ಭಾಗದಲ್ಲಿ ಎಂದರೆ ಉಷಸ್ಸಿನ ಆವಿರ್ಭಾವಕಾಲದಲ್ಲಿ ಈ ವಾಯುದೇವನೂ ಪೂಷನೂ ಜಗತ್ತಿಗೆ ಮಂಗಳವನ್ನುಂಟುಮಾಡುವುದಕ್ಕಾಗಿ ಅಂತರಿಕ್ಷದಲ್ಲಿ ದಯಮಾಡಲಿ. ಇಲ್ಲಿ **ನಿಯುತ್ವಾನ್** ಎಂಬ ಶಬ್ದಕ್ಕೆ **ನಿಯುತ್** ಎಂಬ

ಅಶ್ವಗಳುಳ್ಳ ವಾಯುದೇವನು ಎಂದರ್ಥವು. ವಾಯುದೇವನ ಅಶ್ವಗಳಿಗೆ **ನಿಯುತಃ** ಎಂದು ಹೆಸರು. (ನಿ. ೨-೨೮) ಈ ವಿಶೇಷಣವು ವಾಯುವಿಗೆ ಮಾತ್ರ ಸಂಬಂಧಪಟ್ಟಿರುವುದು. ಪೂಷನಿಗೆ ಅಲ್ಲ. ನಿಯುತಶಬ್ದಕ್ಕೆ—ಈ ಅಶ್ವದ ಗಮನವು **ನಿಯಮನಾದ್ವಾ** ನಿಯಮನಕ್ಕೆ (ಸಾರಥಿಯ ಹತೋಟಿಗೆ) ಒಳಪಟ್ಟಿರುವುದು ಅಥವಾ **ನಿಯೋಜನಾದ್ವಾ**—ಈ ಅಶ್ವವನ್ನು ರಥಕ್ಕೆ ಹೂಡುವರು. ಆದ್ದರಿಂದ ವಾಯುವಿನ ಅಶ್ವಕ್ಕೆ ನಿಯುತ್ ಎಂಬ ಹೆಸರು ಬಂದಿರುವುದು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಅಚ್ಛ ॥೭೮॥

ಅಚ್ಛಾಭೇರಾಪ್ತುಮಿತಿ ಶಾಕಪೂಣಿಃ ॥೨॥

**ಅಚ್ಛ** ಎಂಬ ಶಬ್ದವು **ಅಭಿ** ಎಂದರೆ ಹೊಂದುವುದಕ್ಕೆ ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದೆಂದು ಶಾಕಪೂಣಿ ಎಂಬ ಆಚಾರ್ಯರ ಮತವು.

ಪರಿ ॥೭೯॥ ಈಮ್ ॥೮೦॥ ಸೀಮ್ ॥೮೧॥

ಪರೀಂಸೀಮಿತಿ ವ್ಯಾಖ್ಯಾತಾಃ ॥೩॥

**ಪರಿ, ಈಂ** ಮತ್ತು **ಸೀಂ** ಎಂಬ ಮೂರು ಪದಗಳನ್ನು ಹಿಂದೆಯೇ ಎಂದರೆ (ಪರಿ–ಅಧ್ಯಾಯ ೧. ಖಂಡ ೩) ಎಂಬ ಸ್ಥಳದಲ್ಲಿಯೂ **ಈಂ** ಎಂಬ ಪದವನ್ನು (ಈ–ಅಧ್ಯಾಯ ೧. ಖಂಡ ೭) ಎಂಬ ಸ್ಥಳದಲ್ಲಿಯೂ, **ಸೀಂ** ಎಂಬ ಪದವನ್ನು (ಸೀಂ–ಅಧ್ಯಾಯ ೧. ಖಂಡ ೯) ಎಂಬ ಸ್ಥಳದಲ್ಲಿಯೂ ವಿವರಿಸಲಾಗಿವೆ.

ಏನಮ್ ॥೮೨॥ ಏನಾಮ್ ॥೮೩॥

ಏನಮೇನಾಮಸ್ಯಾ ಅಸ್ಯೇತ್ಯೇತೇನ ವ್ಯಾಖ್ಯಾತಮ್ ॥೪॥

**ಏನಂ** ಮತ್ತು **ಏನಾಂ** ಎಂಬ ಎರಡು ಪದಗಳನ್ನೂ ಹಿಂದೆಯೇ (ಅಧ್ಯಾಯ. ೪ ಖಂಡ ೨೫) ಎಂಬತ **ಅಸ್ಯ** ಮತ್ತು **ಅಸ್ಯಾಃ** ಎಂಬ ಶಬ್ದಗಳನ್ನು ವಿವರಿಸುವ ಸಂದರ್ಭದಲ್ಲಿ ವಿವರಿಸಲಾಗಿದೆ.

ಸೃಣಿಃ ॥೮೪॥ ಇತಿ ಚತುರುತ್ತರಮಶೀತಿಃ ಪದಾನಿ ॥೨॥

ಸೃಣಿರಙ್ಕುಶೋ ಭವತಿ ಸರಣಾತ್ ॥ ಅಙ್ಕುಶೋಽಞ್ಚತೇರಾಕುಚಿತೋ ಭವತೀತಿ ವಾ ॥ "ನೇದೀಯ ಇತ್ಸೃಣ್ಯಃ ಪಕ್ವಮೇಯಾತ್" ಇತ್ಯಪಿ ನಿಗಮೋ ಭವತಿ ॥ ಅನ್ತಿಕತಮಙ್ಕುಶಾದಾಯಾತ್ಪಕ್ವಮೌಷಧಮಾ-ಗಚ್ಛತ್ವಿತ್ಯಾಗಚ್ಛತ್ವಿತಿ ॥೫॥ ೨೮॥

ಉದಾಹರಣೆಯ ಋಕ್ಕು—

**ಯುನಕ್ತ ಸೀರಾ ವಿ ಯುಗಾ ತನುಧ್ವಂ ಕೃತೇ ಯೋನೌ ವಪತೇಹ ಬೀಜಂ ।**
**ಗಿರಾ ಚ ಶ್ರುಷ್ಟಿಃ ಸಭರಾ ಅಸನ್ನೋ ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ॥**

(ಋ. ಸಂ. ೧೦–೧೦೧–೩)

ಇದರ ಅರ್ಥವು—

ಮಿತ್ರರಾದ ಎಲೈ ಋತ್ವಿಕ್ಕುಗಳೇ, ಉಳುವ ನೇಗಲುಗಳಿಗೆ ಎತ್ತುಗಳನ್ನು ಹೂಡಿರಿ. ನೊಗಗಳನ್ನು ವಿಸ್ತರಿಸಿರಿ. ಕ್ಷೇತ್ರವು (ಭೂಮಿಯು) ಸಿದ್ಧವಾದೊಡನೆಯೇ ಉತ್ತಿರುವ ಪ್ರದೇಶದಲ್ಲಿ ಬೀಜವನ್ನು ಬಿತ್ತಿರಿ. ಸ್ತುತಿಯಿಂದ ನಮ್ಮ ಅನ್ನವು (ಧಾನ್ಯವು) ಪುಷ್ಕಲವಾಗಿ ಬೆಳೆಯಲಿ. ನಮ್ಮ ಕುಡುಗೋಲಿಗೆ ಪಕ್ವವಾದ ಹೊಡೆಯು (ತೆನೆಯು) ಸಿಕ್ಕಲಿ.

**ಸೃಣ್ಯಃ—ಸೃಣಿಃ** ಎಂಬ ಶಬ್ದವನ್ನು ವಿವರಿಸುವಾಗ ಯಾಸ್ಕರು ಇದಕ್ಕೆ ನಿರ್ವಚನವನ್ನು ಹೇಳಿದ್ದಾರೆ—

**ಸೃಣಿರಂಕುಶೋ ಭವತಿ ಸರಣಾತ್ । ಅಂಕುಶೋಽಞ್ಚತೇರಾಕುಚಿತೋ ಭವತೀತಿ ವಾ । ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ಇತ್ಯಪಿ ನಿಗಮೋ ಭವತಿ । ಅಂತಿಕತಮಮಂಕುಶಾದಾಯಾತ್ಪಕ್ವಮೌಷಧಮಾಗಚ್ಛೆತ್ವಿತ್ಯಾಗಚ್ಛೆತ್ವಿತಿ ॥**

(ನಿ. ೫–೨೮)

**ಸೃಣಿ** ಎಂದರೆ ಅಂಕುಶವು ಅಥವಾ ಕೊಕ್ಕೆಯು (hook) ಸೃಣಿಶಬ್ದವು ಸರಿ, ಹೋಗು, ಪ್ರವೇಶಿಸು ಎಂಬರ್ಥವುಳ್ಳ ಸೃಧಾತುವಿನಿಂದ (ಸರಣಾತ್) ನಿಷ್ಪನ್ನವಾಗಿದೆ. ಏಕೆಂದರೆ ಅಂಕುಶವು ಆನೆಯ ಶಿರಸ್ಸಿನಲ್ಲಿ ಹೋಗುವುದು ಎಂದರೆ ಒಳಗೆ ಪ್ರವೇಶಿಸುವುದು. ಅಂಕುಶಶಬ್ದವು ಹೋಗು ಪ್ರವೇಶಿಸು ಎಂಬರ್ಥವುಳ್ಳ ಅಂಚತಿ ಧಾತುವಿನಿಂದ ನಿಷ್ಪನ್ನವಾಗಿದೆ ಅಥವಾ **ಆಕುಚಿತೋ ಭವತೀತಿ** ಸ್ವಲ್ಪ ಬಗ್ಗಿರುವುದರಿಂದ ಅಂಕುಶವೆಂದು ಹೆಸರು. **ನೇದೀಯ ಇತ್ಸೃಣ್ಯಃ ಪಕ್ವಮೇಯಾತ್** ಎಂಬ ಶ್ರುತಿವಾಕ್ಯದಲ್ಲಿ ಸೃಣಿಶಬ್ದ ಪ್ರಯೋಗವಿರುವುದು. ಚೆನ್ನಾಗಿ ಮಾಗಿದ ಧಾನ್ಯದ ತೆನೆಯು ಈ ಅಂಕುಶ ಅಥವಾ ಸೃಣಿ ಎಂದರೆ ಕುಡುಗೋಲಿನ ಸಮೀಪಕ್ಕೆ ಬರುವುದು. ಎಂದರೆ ಕುಡುಗೋಲಿನಿಂದ ಧಾನ್ಯದ ತೆನೆಯನ್ನು ಕೊಯ್ಯುತ್ತಾರೆ ಎಂದಭಿಪ್ರಾಯವು.

**ಇತಿ ಅಷ್ಟಾವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೆಂಟನೆಯ ಖಂಡವು ಸಮಾಪ್ತವು

---

**ಇತಿ ಪಂಚಮೋಽಧ್ಯಾಯಃ**

ಇಲ್ಲಿಗೆ ಯಾಸ್ಕಮಹರ್ಷಿವಿರಚಿತವಾದ ನಿರುಕ್ತಗ್ರಂಥದಲ್ಲಿ ಐದನೆಯ ಅಧ್ಯಾಯವು ಸಮಾಪ್ತವು.



# ಅಥ ಷಷ್ಠೋಽಧ್ಯಾಯಃ

## ಆರನೆಯ ಅಧ್ಯಾಯವು

———

### ಪ್ರಥಮಃ ಖಂಡಃ

### ಮೊದಲನೆಯ ಖಂಡವು

ಓಂ॥ ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ । ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥ ತ್ವಮಗ್ನೇ ದ್ಯುಭಿರಹೋಭಿಸ್ತ್ವಮಾಶುಶುಕ್ಷಣಿರಾಶು ಇತಿ ಚ ಶು ಇತಿ ಚ ಕ್ಷಿಪ್ರನಾಮನೀ ಭವತಃ ಕ್ಷಣಿರುತ್ತರಃ ಕ್ಷಣೋತೇರಾಶು ಶುಚಾ ಕ್ಷಣೋತೀತಿ ವಾ ಸನೋತೀತಿ ವಾ ಶುಕ್ ಶೋಚತೇಃ ಪಂಚಮ್ಯರ್ಥೇ ವಾ ಪ್ರಥಮಾ ತಥಾಹಿ ವಾಕ್ಯಸಂಯೋಗ ಆ ಇತ್ಯಾಕಾರ ಉಪಸರ್ಗಃ ಪುರಸ್ತಾಚ್ಚಿಕೀರ್ಷಿತಜ ಉತ್ತರ ಆಶು ಶೋಚಯಿಷುರಿತಿ ಶುಚಿಃ ಶೋಚತೇರ್ಜ್ವಲತಿಕರ್ಮಣೋಽಯಮಪೀತರಃ ಶುಚಿರೇತಸ್ಮಾದೇವ ನಿಷ್ಷಿಕ್ತಮಸ್ಮಾತ್ ಪಾಪಕಮಿತಿ ನೈರುಕ್ತಾಃ ॥

———

ಉದಾಹರಣೆಯ ಋಕ್ಕು—

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥**

(ಋ. ಸಂ. ೨-೧-೧)

ಇದರ ಅರ್ಥವು—

ಮಾನವರಿಗೆ ಪ್ರಭುವೂ ಪಾಲಕನೂ ಆದ ಎಲೈ ಅಗ್ನಿಯೇ, ನೀನು ಯಾಗದಿನಗಳಲ್ಲಿ ಯಾಗದ ನಿಮಿತ್ತವಾಗಿ ಉತ್ಪನ್ನನಾಗುತ್ತೀಯೆ. ನೀನು ಸರ್ವತ್ರ ದೀಪ್ಯಮಾನನಾಗಿಯೂ ಶತ್ರುಗಳನ್ನು ದಹಿಸುವವನಾಗಿಯೂ ಇದ್ದೀಯೆ. ನೀನು ಉದಕಗಳಿಂದಲೂ ಪಾಷಾಣಗಳಿಂದಲೂ ಉತ್ಪನ್ನನಾಗುತ್ತೀಯೆ. ನೀನು ವೃಕ್ಷಾದಿಗಳಿಂದ ದಾವಾಲನರೂಪನಾಗಿಯೂ, ಓಷಧಿಗಳಿಂದ ವೈಶ್ವಾನರ ರೂಪವಾಗಿಯೂ ಉತ್ಪನ್ನನಾಗುತ್ತೀಯೆ. ನೀನು ಪವಿತ್ರಾತ್ಮನೂ ಪ್ರಕಾಶಮಾನನೂ ಆದ ಆದಿತ್ಯರೂಪನೂ ಆಗಿದ್ದೀಯೆ.

**ತ್ವಂ ಅಗ್ನೇ ನೃಣಾಂ ನೃಪತೇ**–ಗೃತ್ಸಮದ ಋಷಿಯು ಈ ಶಬ್ದಗಳಿಂದ ಅಗ್ನಿಯನ್ನು ಸಂಬೋಧನೆಮಾಡಿರುವನು, ಅಗ್ನಿಶಬ್ದದ ನಿರ್ವಚನವನ್ನೂ ನಾನಾರ್ಥಗಳನ್ನೂ ನಾವು ಋ. ಸಂ. ಭಾಗ ೧ ಪೇಜು 612–614 ರಲ್ಲಿ ವಿಸ್ತಾರವಾಗಿ ವಿವರಿಸಿರುವೆವು. ಪ್ರಕೃತವಾದ ಋಕ್ಕಿನಲ್ಲಿ ಭಾಷ್ಯಕಾರರು **ಅಗ್ರಣೀತ್ವಾದಿಗುಣವಿಶಿಷ್ಟ** ಎಂದು ಹೇಳಿರುವುದನ್ನು ಮಾತ್ರ ವಿವರಿಸುವೆವು. ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಅಗ್ನಿಃ ಕಸ್ಮಾದಗ್ರಣೀರ್ಭವತ್ಯಗ್ರಂ ಯಜ್ಞೇಷು ಪ್ರಣೀಯತೇಽಙ್ಗಂ ನಯತಿ ।**
(ನಿ. ೭-೧೪)

ಎಂದು ಹೇಳಿದ್ದಾರೆ. ಯಜ್ಞಾದಿಗಳಲ್ಲಿ ಅಗ್ನಿಗೆ ಪ್ರಥಮಸ್ಥಾನವು, ಎಂದರೆ ಅಗ್ರಶಬ್ದವು ಪ್ರಧಾನವಾಚಿಯಾಗಿರುವುದರಿಂದ ಅಗ್ನಿಗೇ ದೇವತೆಗಳಲ್ಲಿ ಪ್ರಧಾನಸ್ಥಾನವು ಸಲ್ಲುವುದು. ಯಜ್ಞಗಳಲ್ಲಿ ಅಗ್ನಿಯನ್ನು ಅರಣಿಗಳಲ್ಲಿ ಉತ್ಪತ್ತಿ ಮಾಡಿದ ಕೂಡಲೇ ಆಹವನೀಯವೆಂಬ ಅಗ್ನಿಕುಂಡದಲ್ಲಿಡುವರು. ಅಲ್ಲಿಂದ ಗಾರ್ಹಪತ್ಯವೆಂಬ ಅಗ್ನಿಕುಂಡದ ಬಳಿಗೆ ಒಯ್ಯುವರು. ಆದುದರಿಂದ ಅಗ್ನಿಗೆ ಅಗ್ರಣೀಃ ಎಂದು ಹೆಸರು. ಅಥವಾ ಅಗ್ರಣೀಃ ಎಂದರೆ ದೇವಸೇನೆಯನ್ನು ಸ್ವತಃ (ತಾನೇ) ನಡೆಸುವವನು ಅಥವಾ ದೇವಸೇನೆಗೆ ಮುಂದಾಳಾಗಿರುವವನ (ನಾಯಕ or Leader) ಎಂದಾಗುವುದು. ಅಗ್ನಿಶಬ್ದಕ್ಕೆ ಈ ಹೆಸರು ಬರಲು ಇದು ಒಂದನೆಯ ಕಾರಣವು. ಇದಲ್ಲದೆ ಬ್ರಾಹ್ಮಣಾಂತರದಲ್ಲಿ—**ಅಗ್ನಿರ್ದೇವಾನಾಂ ಸೇನಾನೀಃ** ಎಂದಿದೆ. ಇದನ್ನನುಸರಿಸಿ ಋಕ್ಶಾಖಾಧ್ಯಾಯಿಗಳು ತಮ್ಮ ಮಂತ್ರ ಬ್ರಾಹ್ಮಣದಲ್ಲಿ—**ಅಗ್ನಿರ್ಮುಖಂ ಪ್ರಥಮೋ ದೇವತಾನಾಂ** (ಐ. ಬ್ರಾ. ೧–೪) ಎಂದು ಪಠಿಸುವರು. ಐತರೇಯ ಬ್ರಾಹ್ಮಣದ ಮತ್ತೊಂದು ಭಾಗದಲ್ಲಿ **ಅಗ್ನಿರ್ವೈ ದೇವಾನಾಮವಮಃ** (ಐ. ಬ್ರಾ. ೧–೧–೧) ಎಂದಿರುವುದು. ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಕೂಡ **ಅಗ್ನಿರಗ್ರೇ ಪ್ರಥಮೋ ದೇವತಾನಾಂ** (ತೈ. ಬ್ರಾ. ೨-೪-೩-೩) ಎಂದೂ **ಅಗ್ನಿರವಮೋ ದೇವತಾನಾಂ** ಎಂದೂ ಇರುವುದು. ಈ ಉದಾಹರಣೆಗಳಿಂದ ಅಗ್ನಿಯು ದೇವತೆಗಳಲ್ಲಿ ಮೊದಲನೆಯವನು, ಅಗ್ರಸ್ಥಾನದಲ್ಲಿರುವವನು, ಮುಂದಾಳು, ನಾಯಕನು, ಎಂದಾಗುವುದು. ಶುಕ್ಲಯಜುರ್ವೇದದಲ್ಲಿ (ವಾ. ಸಂ.) **ಸ ವಾ ಏಷೋಽಗ್ರೇ ದೇವತಾನಾಮಜಾಯತ ತಸ್ಮಾದಗ್ನಿರ್ನಾಮೇತಿ**—ಎಂದರೆ ಈ ಅಗ್ನಿಯು ದೇವತೆಗಳಲ್ಲೆಲ್ಲಾ ಮೊದಲು ಹುಟ್ಟಿದನು. ಆದುದರಿಂದ ಇವನಿಗೆ ಅಗ್ನಿಯೆಂದು ಹೆಸರು ಎಂದಿರುವುದು.

**ನೃಣಾಂ ನೃಪತೇ—ಮನುಷ್ಯಾಣಾಂ ಮಧ್ಯೇ ನರಾಃ ಯಷ್ಟಾರಃ ಸಂತಿ ತೇಷಾಂ ವಿಶೇಷೇಣ ಪಾಲಯಿತಃ । ಯದ್ವೋಭಾಭ್ಯಾಂ ಪದಾಭ್ಯಾಂ ಬಹುತ್ವಂ ನಿತ್ಯ ಸ್ವಾಮಿತ್ವಂ ಚ ಪ್ರತಿಪಾದ್ಯತೇ । ಸರ್ವೇಷಾಮಪಿ ನರಾಣಾಂ ನಿತ್ಯಪಾಲಕೇತ್ಯರ್ಥಃ ॥** ಮನುಷ್ಯರಲ್ಲಿ ಯಾರು ಯಜ್ಞಮಾಡುತ್ತಾರೋ ಅಂತಹ ಯಜಮಾನರನ್ನು ರಕ್ಷಿಸುವ ಎಲೈ ಅಗ್ನಿಯೇ ಎಂದರ್ಥವು; ಅಥವಾ **ನೃಣಾಂ ನೃಪತೇ** ಎಂಬ ಎರಡು ಶಬ್ದಗಳೂ ಅನೇಕ ಜನರಿಗೆ ಸ್ವಾಮಿತ್ವವನ್ನು ಸೂಚಿಸುವುದರಿಂದ ಸಮಸ್ತ ಜನರಿಗೂ ಸರ್ವಕಾಲದಲ್ಲಿಯೂ ಈ ಅಗ್ನಿಯು ಸಂರಕ್ಷಕನು ಎಂದು ಮುಖ್ಯಾಭಿಪ್ರಾಯವು.

**ತ್ವಮಗ್ನೇ ದ್ಯುಭಿಃ—ಯಾಗದಿವಸೈರ್ನಿಮಿತ್ತಭೂತೈರ್ಜಾಯಸೇ । ಯಾಗಾರ್ಥಂ ಮಥನೇನೋತ್ಪದ್ಯಸ ಇತ್ಯರ್ಥಃ। ಯದ್ವಾ ತಾದೃಶೈರ್ದಿವಸೈಃ ಸಹಿತೋ ಜಾಯಸೇ । ತತ್ತದ್ಯಾಗದಿವಸೇಷು ಪ್ರಸಿದ್ಧೋ ಭವಸೀತ್ಯರ್ಥಃ।** ಎಲೈ ಅಗ್ನಿಯೇ, ನೀನು ಯಾಗದಿವಸಗಳಲ್ಲಿ ಉತ್ಪನ್ನನಾಗುತ್ತೀಯೆ; ಎಂದರೆ ಯಜ್ಞಾರ್ಥವಾಗಿ (ಅಗ್ನಿಯಿಂದಲೇ ಯಜ್ಞ) ಅಗ್ನಿಯನ್ನು ಅರಣಿಗಳಲ್ಲಿ ಮಥನಮಾಡುವುದರಿಂದ ಉತ್ಪನ್ನನಾಗುತ್ತೀಯೆ; ಅಥವಾ ಆಯಾ ಯಾಗದಿವಸಗಳಲ್ಲಿ ಎಂದರೆ ಯಜಮಾನರು ಮಾಡುವ ಯಜ್ಞದಿವಸಗಳಲ್ಲಿ ಆ ದಿವಸಗಳಿಂದ ಸಹಿತನಾಗಿಯೇ ಎಂದರೆ ಪ್ರಸಿದ್ಧನಾಗಿಯೇ ಉತ್ಪನ್ನನಾಗುವೆ ಎಂದೂ ಅರ್ಥವು.

**ತ್ವಮಾಶುಶುಕ್ಷಣಿಃ**—ಭಾಷ್ಯಕಾರರು ಈ ಶಬ್ದಾರ್ಥವನ್ನು ವಿವರಿಸುತ್ತಾ—**ತ್ವಮಾಶುಶುಕ್ಷಣಿರ್ಜಾಯಸೇ। ಆ ಸರ್ವತೋ ದೀಪ್ಯಮಾನೋ ಭವಸಿ। ಆಙ್ಪೂರ್ವಪದೇ ಶುಚ ದೀಪ್ತಾವಿತ್ಯೇತಸ್ಯ ಛಾಂದಸಮಿದಂ ರೂಪಂ। ಯದ್ವಾ। ಆಶು ಶೀಘ್ರಂ ಶುಚ್ ದೀಪ್ತಃ ಸನ್ ಯತಃ ಸ ಸೇವ್ಯತ ಇತಿ। ಆಶು ಶುಚಂ ಶೋಕಂ ಸನೋತಿ ದದಾತಿ ಶತ್ರುಭ್ಯೋ ದಾಹಾದಿನೇತ್ಯಾಶುಶುಕ್ಷಣಿಃ। ತಾದೃಶೋ ಭವತಿ ॥** ಎಂದರೆ ಎಲೈ ಅಗ್ನಿಯೇ ನೀನು ಸುತ್ತಲೂ ಪ್ರಕಾಶಿಸುತ್ತಾ ಬೆಳಗುತ್ತೀಯೆ. ಪ್ರಕಾಶಿಸು ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ಆ ಎಂಬ ಉಪಸರ್ಗವು ಸೇರಿ ಆಶುಶುಕ್ಷಣಿಃ ಎಂಬ ರೂಪವಾಗಿದೆ. ಅಥವಾ ಆಶು-ಜಾಗ್ರತೆಯಾಗಿ ಶುಚ್-ಪ್ರಕಾಶವಾನನಾಗಿ ಕ್ಷಣಿಃ-ಸೇವಿಸಲ್ಪಡುವುದ ರಿಂದಲೂ ಅಥವಾ ನಿನ್ನ ದಹನಸಾಮರ್ಥ್ಯದಿಂದ ಆಶು-ಜಾಗತ್ರೆಯಾಗಿ ಶುಚಂ-ಶೋಕವನ್ನು ಸನೋತಿ-ಶತ್ರುಗಳಿಗೆ ಉಂಟು ಮಾಡುವುದರಿಂದಲೂ ಅಗ್ನಿಗೆ ಆಶುಶುಕ್ಷಣಿಃ ಎಂದು ಹೆಸರು ಎಂದು ಈ ಶಬ್ದದ ಅರ್ಥವಿವರಣೆ ಮಾಡಿದ್ದಾರೆ. ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತವಾದ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಇದರ ನಿರ್ವಚನವನ್ನು ಹೇಳಿದ್ದಾರೆ.

> ತ್ವಮಗ್ನೇ ದ್ಯುಭಿರಹೋಭಿಸ್ತ್ವಮಾಶುಶುಕ್ಷಣಿಃ। ಆಶು ಇತಿ ಚ ಶು ಇತಿ ಚ ಕ್ಷಿಪ್ರನಾಮನೀ ಭವತಃ। ಕ್ಷಣಿರುತ್ತರಃ ಕ್ಷಣೋತೇಃ ಆಶು ಶುಚಾ ಕ್ಷಣೋತೀತಿ ವಾ ಸನೋತೀತಿ ವಾ ॥ ಶುಕ್ ಶೋಚತೇಃ। ಸಂಚ-ಮ್ಯರ್ಥೇ ವಾ ಪ್ರಥಮಾ। ತಥಾ ಹಿ ವಾಕ್ಸಂಯೋಗ ಆ ಇತ್ಯಾ-ಕಾರ ಉಪಸರ್ಗಃ ಪುರಸ್ತಾಚ್ಚಿಕೀರ್ಷಿತಜ ಉತ್ತರ ಆಶು ಶೋಚ-ಯಿಷುರಿತಿ। ಶುಚಿಃ ಶೋಚತೇರ್ಜ್ವಲತಿಕರ್ಮಣಃ। ಅಯಮ-ಪೀತರಃ ಶುಚಿರೇತಸ್ಮಾದೇವ। ನಿಷ್ಷಿಕ್ತಮಸ್ಮಾತ್ ಪಾಪಕಮಿತಿ ನೈರುಕ್ತಾಃ ॥ (ನಿ. ೬-೧)

ಎಂದರೆ—ಆಶು ಮತ್ತು ಶು ಎಂಬ ಪದಗಳು ಕ್ಷಿಪ್ರ (ಬೇಗನೆ ಎಂದರ್ಥವುಳ್ಳ)ನಾಮಗಳು ಕ್ಷಣಃ ಎಂಬ ಶಬ್ದವು ಹಿಂಸಾರ್ಥವನ್ನು ಸೂಚಿಸುವ ಕ್ಷಣೋತಿಧಾತುವಿನಿಂದ ನಿಷ್ಪನ್ನವಾಗಿದೆ; ಅಥವಾ ಹೊಂದು ಎಂಬರ್ಥವುಳ್ಳ ಸನೋತಿಧಾತುವಿನಿಂದಲಾದರೂ ನಿಷ್ಪನ್ನವಾಗಬಹುದು. ಮಧ್ಯದಲ್ಲಿರುವ ಶು ಎಂಬ ಅಕ್ಷರವು ಪ್ರಕಾಶಿಸು ಎಂದರ್ಥವನ್ನು ಕೊಡುವ ಶುಚಿಶಬ್ದದ ಪರ್ಯಾಯ ಪದವು. ಆದುದರಿಂದ, ಆಶುಶುಕ್ಷಣಿಃ ಎಂದರೆ ಅಗ್ನಿಯು ತನ್ನ ಕಾಂತಿಯಿಂದ ಜಾಗ್ರತೆಯಾಗಿ (ಶತ್ರುಗಳನ್ನು) ಹಿಂಸಿಸುವನು (ದಹಿಸುವವನು) ಅಥವಾ ಯಜಮಾನನಿಗೆ ಬೇಕಾದ ವಸ್ತುವನ್ನು ಬೇಗನೆ ಒದಗಿಸಿಕೊಡುವವನು ಎಂದರ್ಥವು.

ಅಥವಾ ಶುಕ್ ಎಂಬ ಪದವು ಪ್ರಕಾಶಿಸು ಎಂಬರ್ಥವನ್ನು ಕೊಡುವ ಶುಚ್ ಧಾತುವಿನಿಂದ ನಿಷ್ಪನ್ನವಾಗಿದೆ. ಇಲ್ಲಿ ಪಂಚಮೀ ವಿಭಕ್ತ್ಯರ್ಥದಲ್ಲಿ ಪ್ರಥಮಾವಿಭಕ್ತಿಯ ಪ್ರಯೋಗವಿದೆ. ಆ ಎಂಬುದು ಉಪಸರ್ಗವು. ಆದ್ದರಿಂದ ಆ + ಶುಶುಕ್ಷಣಿಃ ಎಂಬಲ್ಲಿ ಶುಶುಕ್ಷಣಿಶಬ್ದವು ಚಿಕೀರ್ಷಿತಾರ್ಥವನ್ನು ಸೂಚಿಸುವುದೆಂದು ಭಾವಿಸಿದರೆ ಆಶುಶುಕ್ಷಣಿಃ ಎಂಬ ಪದಕ್ಕೆ ಸುತ್ತಲೂ ಪ್ರಕಾಶಿಸಲು ಇಚ್ಛೆಯುಳ್ಳವನು (ಅಗ್ನಿಯು) ಎಂದರ್ಥವಾಗುವುದು.

ಅಥವಾ ಶುಚಿಃ ಎಂಬ ಶಬ್ದವು ಪ್ರಕಾಶಿಸು ಎಂಬರ್ಥವುಳ್ಳ ಶೋಚತಿಧಾತುವಿನಿಂದ ನಿಷ್ಪನ್ನವಾಗಬಹುದು. ಈ ಸಂದರ್ಭದಲ್ಲಿ ಮೇಲೆ ಹೇಳಿದ ಅರ್ಥಗಳಿಗೆ ಅವಕಾಶವಿರುವುದು. ಇದಲ್ಲದೆ ಶುಚಿಃ ಎಂಬ ಶಬ್ದಕ್ಕೆ ಇನ್ನೊಂದರ್ಥವೂ ಇರುವುದು ಶುಚಿಃ ಎಂದರೆ ಪವಿತ್ರವಾದದ್ದು, ಶುದ್ಧವಾದದ್ದು ಪಾಪರಹಿತವಾದದ್ದು ಎಂದು ಇನ್ನೊಂದು ಅರ್ಥವು. ಈ ಪಕ್ಷದಲ್ಲಿ ಅ+ಅಶುಶುಕ್ಷಣಿಃ=ಆಶುಶುಕ್ಷಣಿಃ ಎಂದರೆ ಪಾಪರಹಿತನಾದವನು (ಅಗ್ನಿಯು) ಎಂದರ್ಥವು. (ಅ denotes negetive. As there are two ಅ s, two negetives make an offirmative ; Sinless) ನೈರುಕ್ತಕಾರರು ಈ ವಿಧವಾದ ಅರ್ಥವನ್ನು ಅನುಮೋದಿಸುವರು.

**ದ್ಯುಭಿಃ ಅಹೋಭಿಃ**—ಪೌರ್ಣಮಾಸ್ಯಾ, ಅಮಾವಾಸ್ಯಾ, ಮೊದಲಾದ ಯಜ್ಞಾರ್ಹವಾದ ದಿವಸಗಳಲ್ಲಿ ಅಗ್ನಿಯನ್ನು ಯಜ್ಞಾರ್ಥವಾಗಿ ಮಥಿಸಿ ಉತ್ಪಾದನೆ ಮಾಡುವುದರಿಂದ ಅಂತಹ ದಿವಸಗಳಲ್ಲಿ ಉತ್ಪನ್ನನಾಗುತ್ತೀಯೆ ಎಂದು ಅಗ್ನಿಯನ್ನು ಸಂಬೋಧಿಸಿ ಹೇಳಿದೆ.

**ತ್ವಮದ್ಭ್ಯಃ—ತ್ವಮುದ್ಭ್ಯೋ ವೃಷ್ಟ್ಯುದಕೇಭ್ಯೋ ಜಾಯಸೇ ವೈದ್ಯುತರೂಪೇಣ ವಾಡವರೂಪೇಣ ವಾ ಸಮುದ್ರೋದಕೇಭ್ಯಃ** । ನೀರಿನಿಂದ ಉತ್ಪನ್ನನಾಗುತ್ತೀಯೆ ಎಂದರೆ ಮಳೆಯು ಹುಯ್ಯುತ್ತಿರುವಾಗ ಮೋಡಗಳಲ್ಲಿ ಉತ್ಪನ್ನನಾಗುವ ಮಿಂಚಿನ ರೂಪದಲ್ಲಾಗಲಿ, ಅಥವಾ ಸಮುದ್ರದ ನೀರಿನಲ್ಲಿ ಕಾಣಿಸುವ ಬಾಡಬಾನಲ ರೂಪದಲ್ಲಾಗಲಿ ನೀನು ಉತ್ಪನ್ನನಾಗುತೀಯೆ ಎಂದು ಸ್ತುತಿಸಿದೆ.

**ತ್ವಮಶ್ಮನಸ್ಪರಿ—ಅಶ್ಮನೋ ಮೇಘಾತ್ಪಾಷಾಣಾದ್ವಾ** । ಅಶ್ಮಾ ಎಂಬ ಶಬ್ದವು ಮೂವತ್ತು ಮೇಘನಾಮಗಳಲ್ಲಿ (ನಿ. ೨-೨೧) ಪಠಿತವಾಗಿರುವುದರಿಂದ ಮೇಘಗಳಲ್ಲಿ ವಿದ್ಯುದ್ರೂಪದಿಂದ ಉತ್ಪನ್ನವಾಗಿವೆ. ಅಥವಾ ಅಶ್ಮನ್‌ಶಬ್ದಕ್ಕೆ ಪಾಷಾಣ, ಕಲ್ಲು ಎಂಬ ಅರ್ಥವೂ ಇರುವುದರಿಂದ ಎರಡು ಕಲ್ಲುಗಳ ಘರ್ಷಣೆಯಿಂದು ಉತ್ಪನ್ನವಾಗುದೆ ಎಂದೂ ಹೇಳಬಹುದು. (ಪೂರ್ವದಲ್ಲಿ ದೀಪದಕಡ್ಡಿಗಳು ರೂಢಿಯಲ್ಲಿಲ್ಲದಿದ್ದಾಗ ಚಕಮುಕಿಕಲ್ಲುಗಳಿಂದಲೇ ಬೆಂಕಿಯನ್ನು ಮಾಡುತ್ತಿದ್ದರು) ಮೇಘಗಳಿಂದ ವಿದ್ಯುದ್ರೂಪದಲ್ಲಿ ಅಗ್ನಿಯು ಉತ್ಪನ್ನನಾಗುವನೆಂಬ ವಿಷಯದಲ್ಲಿ ಭಾಷ್ಯಕಾರರು—

**ಯೋ ಹತ್ವಾಹಿಮರಿಣಾತ್ಸಪ್ತ ಸಿಂಧೂನ್ಯೋ ಗಾ ಉದಾಜದಪಧಾ ವಲಸ್ಯ ।**
**ಯೋ ಅಶ್ಮನೋರಂತರಗ್ನಿಂ ಜಜಾನ ಸಂವೃಕ್ಸಮತ್ಸು ಸ ಜನಾಸ ಇಂದ್ರಃ ॥**
(ಋ. ಸಂ. ೨-೧೨-೩)

ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು ಈ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಾಯಣರು—**ಯಶ್ಚಾಶ್ಮನೋಃ ಅಶ್ನುತೇ ವ್ಯಾಪ್ನೋತ್ಯಂತರಿಕ್ಷಮಿತಿ ಅಶ್ಮಾ ಮೇಘಃ । ಅತ್ಯಂತಮೃದುರೂಪಯೋರ್ಮೇಘಯೋರಂತರ್ಮಧ್ಯೇ ವೈದ್ಯುತಮಗ್ನಿಂ ಜಜಾನ ಉತ್ಪಾದಯಾಮಾಸ** । ಎಂದರೆ ಅಶ್ಮಾ ಎಂಬ ಶಬ್ದವು ವ್ಯಾಪಿಸಿ ಎಂಬರ್ಥವನ್ನು ಕೊಡುವ ಅಶ್ ಧಾತುವಿನಿಂದ ನಿಷ್ಪನ್ನವಾಗಿದೆ. ಎಂದರೆ ಅಂತರಿಕ್ಷವನ್ನು ವ್ಯಾಪಿಸಿರುವುದರಿಂದ ಮೇಘಕ್ಕೆ ಅಶ್ಮಾ ಎಂದು ಹೆಸರು. ಅಂತಹ ಮೃದುವಾಗಿರುವ ಮೇಘಗಳ ಮಧ್ಯದಲ್ಲಿ ವೈದ್ಯುತಾಗ್ನಿಯನ್ನು ಇಂದ್ರನು ಉತ್ಪತ್ತಿಮಾಡಿದನೆಂದು ಅರ್ಥವಿವರಣೆಮಾಡಿರುವರು

**ತ್ವಂ ವನೇಭ್ಯಃ—ವೃಕ್ಷಾದಿಸಮೂಹೇಭ್ಯೋ ದಾವರೂಪೇಣ** । ಕಾಡುಗಳಲ್ಲಿ ದಾವಾಗ್ನಿರೂಪದಿಂದ (ಕಾಡುಕಿಚ್ಚು) ಉತ್ಪನ್ನನಾಗುವೆ. ಕಾಡಿನಲ್ಲಿ ಬಿದಿರುಗಳು ಒಂದಕ್ಕೊಂದು ಘರ್ಷಣೆಯಾಗಿ ಅದರಿಂದ ಬೆಂಕಿಯುಮುಟ್ಟಿ ಕಾಡನ್ನೆಲ್ಲಾ ದಹಿಸುವುದು ಪ್ರಸಿದ್ಧವಾಗಿದೆ.

**ತ್ವಮೋಷಧಿಭ್ಯಃ—ವೈಶ್ವಾನರರೂಪೇಣ । ಮಥನೇನೋತ್ಪನ್ನಃ ಸನ್ ಸರ್ವಾತ್ಮಕೋ ಭವಸೀತ್ಯರ್ಥಃ ।** ಅಗ್ನಿಯು ಸಮಸ್ತ ಪ್ರಾಣಿಗಳಲ್ಲಿಯೂ(ಜಾಠರಾಗ್ನಿ ರೂಪದಿಂದ) ಮತ್ತು ಓಷಧಿವನಸ್ಪತಿಗಳಲ್ಲಿಯೂ ವೈಶ್ವಾನರಾಗ್ನಿರೂಪದಿಂದ ಇರುವನು ಯಜ್ಞದಲ್ಲಿ ಉತ್ಪತ್ತಿಮಾಡುವಾಗ ಅಶ್ವತ್ಥವೃಕ್ಷದ ಅಥವಾ ಶಮೀವೃಕ್ಷದ ಎರಡು ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಟ್ಟು ಬಲವಾಗಿ ಕಡೆಯುವರು ಅವರಿಂದ ಅಗ್ನಿಯು ಉತ್ಪನ್ನನಾಗುವನು . ಈ ವಿಷಯದಲ್ಲಿ—

**ಶಮೀಗರ್ಭಾದಗ್ನಿಂ ಮಂಥತಿ । ಏಷಾ ವಾ ಅಗ್ನೇರ್ಯಜ್ಞಿಯಾ ತನೂಃ । ತಾಮೇವಾಸ್ಮೈ ಜನಯತಿ ॥**

(ತೈ. ಬ್ರಾ. ೧-೧-೯-೧)

ಎಂದು ತೈತ್ತಿರೀಯಬ್ರಾಹ್ಮಣವಾಕ್ಯವಿರುವುದು. ಯಜ್ಞಾದಿಗಳಲ್ಲಿ ಅಗ್ನಿಯನ್ನು ಮಂತ್ರಪೂರ್ವಕವಾಗಿಯೂ, ಸಂಸ್ಕಾರ ಸಹಿತವಾಗಿಯೂ ಮಥಿಸಿ ಉತ್ಪನ್ನಮಾಡುವ ವಿಧಾನವನ್ನು ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೩-೫) ಈರೀತಿ ಹೇಳಿರುವುದು. ಈ ಋಕ್ಕಿನಲ್ಲಿ ಅಗ್ನಿಮಥನವಿಚಾರವು ಉಕ್ತವಾಗಿರುವುದರಿಂದ ಆ ಕ್ರಮವನ್ನು ಇಲ್ಲಿ ವಿವರಿಸುವುದು ಯುಕ್ತವಾಗಿದೆ. ಯಜ್ಞದಲ್ಲಿ ಸೋಮವಿಕ್ರಯಣವೆಂಬ (ಸೋಮಲತೆಯನ್ನು ಪರ್ವತನಾದಿಗಳಿಂದ ತಂದವರಿಂದ ಕ್ರಯಕ್ಕೆ ಪಡೆಯುವುದು) ಕರ್ಮವು ಸಮಾಪ್ತಿಯಾದಮೇಲೆ ಅಗ್ನಿಮಥನಕಾರ್ಯವು ಪ್ರಾರಂಭವಾಗುವುದು. ಆಗ ಅಧ್ವರ್ಯುವೆಂಬ ಋತ್ವಿಜನು ಹೋತೃವೆಂಬ ಋತ್ವಿಜನನ್ನುದ್ದೇಶಿಸಿ ಈ ರೀತಿ ಹೇಳುವನು—

**ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಧ್ವರ್ಯುರಭಿ ತ್ವಾ ದೇವ ಸವಿತರಿತಿ ಸಾವಿತ್ರೀಮನ್ವಾಹ ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾತ್ಸಾವಿತ್ರೀಮನ್ವಾಹೇತಿ । ಸವಿತಾ ವೈ ಪ್ರಸವಾನಾಮೀಶೇ ಸವಿತೃಪ್ರಸೂತ ಏವೈನಂ ತನ್ಮಥತಿ ತಸ್ಮಾತ್ಸಾವಿತ್ರೀ ಮನ್ವಾಹ ।**

ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ಅಗ್ನಯೇ ಮಥ್ಯಮಾನಾಯನುಬ್ರೂ ೩ ಹಿ** ಎಂಬ ಪ್ರೈಷಮಂತ್ರವನ್ನು ಹೇಳುವನು (ಪ್ರೈಷಮಂತ್ರವೆಂದರೆ ಯಜ್ಞದಲ್ಲಿ ನಾನಾ ಕರ್ಮಗಳನ್ನು ಮಾಡುವಾಗ ಅಧ್ವರ್ಯು ಮೊದಲಾದವರು ಸಂಬಂಧಪಟ್ಟ ಜನರನ್ನುದ್ದೇಶಿಸಿ ಇಂತಿಂತಹ ಕರ್ಮವನ್ನು (ಅಥವಾ ಹೋಮವನ್ನು) ಮಾಡು ಎಂದು ಆಜ್ಞಾರೂಪವಾಗಿ ವಿಧಿಸುವ ಮಂತ್ರಪಠನವು, ಅದನ್ನು ಕೇಳಿ ಹೋತೃವು—

**ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ । ಸದಾವನ್ ಭಾಗಮೀಮಹೇ ॥**

(ಋ.ಸಂ. ೧-೨೪-೩)

ಎಂಬ ಸವಿತೃದೇವತಾಕವಾದ ಮಂತ್ರವನ್ನು (ಸಾವಿತ್ರೀ ಋಕ್ಕನ್ನು) ಪಠಿಸುವನು. ಇಲ್ಲಿ ಒಂದು ಸಂಶಯವು ತಲೆದೋರುವುದು. ಅಗ್ನಿಮಂಥನಕ್ಕಾಗಿ ಅವಶ್ಯಕವಾದ ಮಂತ್ರವನ್ನು ಹೇಳಬೇಕೆಂದು ಅಧ್ವರ್ಯುವು ಹೋತೃವಿಗೆ ನಿರ್ದೇಶ ಮಾಡಿದ್ದರೂ, ಹಾಗೆ ಮಾಡದೆ ಹೋತೃವು ಸವಿತೃದೇವತಾಪರವಾದ ಋಕ್ಕನ್ನು ಪಠಿಸಲು ಕಾರಣವೇನು ? ಇದು ತಪ್ಪಲ್ಲವೇ ಎಂದರೆ, ಹಾಗಲ್ಲ. **ಸವಿತಾ ವೈ ಪ್ರಸವಾನಾಮೀಶೇ**—ಎಂಬ ವಾಕ್ಯದಂತೆ ಯಜ್ಞಾದಿ ಸಮಸ್ತ ಕರ್ಮಗಳಲ್ಲಿಯೂ ಯಾವುದನ್ನು ಉತ್ಪತ್ತಿಮಾಡಬೇಕಾದರೂ ಆ ಉತ್ಪತ್ತಿಗೆಲ್ಲಾ ಸವಿತೃವು ಸ್ವಾಮಿ (ಅಧಿಪತಿ)ಯಾಗಿರುವುದರಿಂದ ಇಲ್ಲಿ ಅಗ್ನಿಮಥನವೆಂಬ ಅಗ್ನ್ಯುತ್ಪತ್ತಿಕಾರ್ಯಾರಂಭಕ್ಕಾಗಿ ಸವಿತೃ ದೇವತೆಯ ಅನುಜ್ಞೆಯನ್ನು ಕೇಳುವುದು ಸಹಜವಾಗಿದೆ. ಅದಕ್ಕಾಗಿಯೇ ಹೋತೃವು ಮೊದಲು ಸವಿತೃದೇವತಾಪರವಾದ ಋಕ್ಕನ್ನು ಪಠಿಸಿರುವನು.

**ಮಹೀ ದ್ಯೌಃ ಪೃಥಿವೀ ಚ ನ ಇತಿ ದ್ಯಾವಾಪೃಥಿವೀಯಾಮನ್ವಾಹ । ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾದ್ದ್ಯಾವಾಪೃಥಿವೀಯಾಮನ್ವಾಹೇತಿ ದ್ಯಾವಾಪೃಥಿವೀಭ್ಯಾಂ ವಾ ಏತಂ ಜಾತಂ ದೇವಾಃ ಪರ್ಯಗೃಹ್ಣಂಸ್ತಾಭ್ಯಾಮೇವಾದ್ಯಾಪಿ ಪರಿಗೃಹೀತಸ್ತಸ್ಮಾದ್ದ್ಯಾವಾಪೃಥಿವೀಯಾಮನ್ವಾಹ ॥**

ಅನಂತರ ಹೋತೃವು ಮುಂದುವರಿದು—

**ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।**
**ಪಿಪೃತಾಂ ನೋ ಭರೀಮಭಿಃ ॥**

(ಋ. ಸಂ. ೧-೨೨-೧೩)

ಎಂಬ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸುವನು. ಇದಕ್ಕೆ ಕೆಲವರ ಆಕ್ಷೇಪಣೆಯು–ಅಗ್ನಿಮಥನಕಾರ್ಯಕ್ಕಾಗಿ ಅಗ್ನಿಪರವಾದ ಋಕ್ಕನ್ನು ಹೇಳಿಂದರೆ ಈ ಹೋತೃವು ದ್ಯಾವಾಪೃಥಿವೀಪರವಾದ ಋಕ್ಕನ್ನು ಪಠಿಸುವದೇತಕ್ಕೆ ? ಎಂದರೆ ಹಿಂದೆ ದೇವತೆಗಳು ಅಗ್ನಿಯು ಉತ್ಪನ್ನವಾದಾಗ ಅವನನ್ನು ದ್ಯಾವಾಪೃಥಿವಿಗಳ (ಭೂಮಿ ಸ್ವರ್ಗಗಳ) ಮಧ್ಯದಲ್ಲಿ ಪರಿಗ್ರಹಿಸುವರು (ಹಿಡಿದರು) ಆದ್ದರಿಂದ ಈಗಲೂ ಹಾಗೆಯೇ ಮಾಡಬೇಕು. ಪಾವಕನಾಮಕನಾದ ಅಗ್ನಿಯು ಭೂಮಿಯಿಂದಲೂ ಸೂರ್ಯರೂಪನಾದ ಅಗ್ನಿಯು ಸ್ವರ್ಗದಿಂದಲೂ ಪರಿಗ್ರಹಿಸಲ್ಪಟ್ಟಿರುವುದರಿಂದ ಅಗ್ನಿಪರಿಗ್ರಹಕ್ಕಾಗಿ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸಬೇಕಾದುದು ನ್ಯಾಯವಾಗಿದೆ.

**ತ್ವಾಮಗ್ನೇ ಪುಷ್ಕರಾದಧೀತಿ ತೃಚಮಾಗ್ನೇಯಂ ಗಾಯತ್ರಮನ್ವಾಹಾಗ್ನೌ ಮಥ್ಯಮಾನೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ । ಅಥರ್ವಾ ನಿರಮಂಥತೇತಿ ರೂಪಸಮೃದ್ಧಮೇತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ. ॥**

ಬಳಿಕ ಹೋತೃವು ಅಗ್ನಿಮಥನಕ್ಕಾಗಿ ಅಗ್ನಿದೇವತಾಕವಾದ—

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಮೂರ್ಧ್ನೋ ವಿಶ್ವಸ್ಯ ವಾಘತಃ ।**
**ತಮು ತ್ವಾ ದಧ್ಯಙ್ಙೃಷಿಃ ಪುತ್ರ ಈಧೇ ಅಥರ್ವಣಃ । ವೃತ್ರಹಣಂ ಪುರಂದರಂ ॥**
**ತ ಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಂ । ಧನಂಜಯಂ ರಣೇರಣೇ ॥**

(ಋ. ಸಂ. ೬-೧೬-೧೩, ೧೪, ೧೫)

ಎಂಬ ಮೂರು ಋಕ್ಕುಗಳನ್ನು ಪಠಿಸುವನು. ಈ ಮೂರು ಋಕ್ಕುಗಳು ಅಗ್ನಿದೇವತೆಯನ್ನೇ ಸ್ತುತಿಸತಕ್ಕವು, ಮತ್ತು ಅಗ್ನಿಗೆ ಪ್ರಿಯವಾದ ಗಾಯತ್ರೀಛಂದಸ್ಸಿನ ಋಕ್ಕುಗಳೇ ಆಗಿರುವುವು. ಏಕೆಂದರೆ, ಅಗ್ನಿಯೂ, ಗಾಯತ್ರೀಛಂದಸ್ಸೂ ಎರಡೂ ಪ್ರಜಾಪತಿಯಿಂದಲೇ ಉತ್ಪನ್ನವಾಗಿರುವುದರಿಂದಲೇ ಗಾಯತ್ರೀ ಛಂದಸ್ಸು ಸ್ವಕೀಯಛಂದಸ್ಸೆಂದು ಹೇಳಲ್ಪಡುವುದು. ಈಗ ಮೊದಲನೆಯ ಋಕ್ಕಿನ ಎರಡನೆಯ ಪಾದದಲ್ಲಿ ಉಕ್ತವಾಗಿರುವ **ಅಥರ್ವಾ ನಿರಮಂಥತ**—ಅಥರ್ವಾ ಎಂಬ ಋಷಿಯು ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದನು ಎಂದು ಹೇಳಿದೆಯಷ್ಟೆ. ಈ ಅಥರ್ವಾ ಎಂಬ ಋಷಿಯು ಎಲ್ಲರಿಗಿಂತ ಮೊದಲು ಅಗ್ನಿಯನ್ನು ಅರಣಿಗಳಲ್ಲಿ ಮಥಿಸಿ ಉತ್ಪತ್ತಿಮಾಡಿದನು. ಆದ್ದರಿಂದ ಅಥರ್ವಣ ಋಷಿಗೆ ಪುತ್ರನಾಗಿ ಜನಿಸಿದ

ಅಗ್ನಿಯು ಯಜ್ಞದಲ್ಲಿ ಸಮೃದ್ಧನಾಗಿ ಬೆಳೆದು ವೃದ್ಧಿಯನ್ನು ಹೊಂದುವನು ಎಂಬ ಪ್ರಾರ್ಥನೆ ಇದೆ. ಈ ಕಾರಣಕ್ಕಾಗಿ ಅಗ್ನಿಯು ಅರಣಿಗಳಿಂದ ರೂಪಗೊಂಡು ಉತ್ಪನ್ನನಾಗಿ (ಎಂದರೆ ಸಂಪೂರ್ಣ ಅಗ್ನಿರೂಪದಿಂದ) ಯಜ್ಞಕರ್ಮದಲ್ಲಿ ಅಭಿವೃದ್ಧಿಗೊಂಡು (ದೊಡ್ಡದಾಗಿ ಪ್ರಜ್ವಲಿಸುತ್ತಾ) ಪ್ರಕಾಶಿಸಲಿ ಎಂಬ ಅರ್ಥವನ್ನು ಕೊಡುವ ಈ ಋಕ್ಕುಗಳನ್ನು ಪಠಿಸುವುದು ಸಹಜವಾಗಿದೆ.

ಸ ಯದಿ ನ ಜಾಯೇತ ಯದಿ ಚಿರಂ ಜಾಯೇತ ರಾಕ್ಷೋಘ್ನ್ಯೋ ಗಾಯತ್ರ್ಯೋಽನೂಚ್ಯಾಃ ಅಗ್ನೇ ಹಂಸಿನ್ಯತ್ರಿಣಮಿತ್ಯೇತಾಃ ರಕ್ಷಸಾಮುಪಹತ್ಯೈ ರಕ್ಷಾಂಸಿ ವಾ ಏನಂ ತರ್ಹ್ಯಾಲಭಂತೇ ಯರ್ಹಿ ನ ಜಾಯತೇ ಯರ್ಹಿ ಚಿರಂ ಜಾಯತೇ ||

ಹಿಂದೆ ಹೇಳಿದ ಐದು ಋಕ್ಕುಗಳನ್ನು ಪಠಿಸುತ್ತಾ ಅರಣಿಗಳಲ್ಲಿ ಅಗ್ನಿಮಂಥನವನ್ನು ಮಾಡಬೇಕು. ಹೀಗೆ ಮಾಡಿದರೂ ಅಗ್ನಿಯು ಉತ್ಪತ್ತಿಯಾಗದೆ ಇದ್ದರೆ ಅಥವಾ ಬಹಳ ಕಾಲದವರೆಗೂ, ಹೊಗೆ ಮುಂತಾದ್ದು ಬರುತ್ತಾ ನಿಧಾನವಾಗಿ ಉತ್ಪತ್ತಿಯಾದರೆ ಆಗ ಗಾಯತ್ರೀಛಂದಸ್ಸಿನ ರಾಕ್ಷೋಘ್ನವೆಂಬ ಈ ಕೆಳಗಿನ ಸೂಕ್ತವನ್ನು ಪಠಿಸಬೇಕು—

ಅಗ್ನೇ ಹಂಸಿ ನ್ಯ ೧ ತ್ರಿಣಂ ದೀದ್ಯನ್ಮರ್ತೇಷ್ವಾ | ಸ್ವೇ ಕ್ಷಯೇ ಶುಚಿವ್ರತ ||
ಉತ್ತಿಷ್ಠಸಿ ಸ್ವಾಹುತೋ ಘೃತಾನಿ ಪ್ರತಿಮೋದಸೇ | ಯತ್ತ್ವಾ ಸ್ರುಚಃ ಸಮಸ್ಥಿರನ್ ||
ಸ ಆಹುತೋ ವಿ ರೋಚತೇಽಗ್ನಿರೀಳೇನ್ಯೋ ಗಿರಾ | ಸ್ರುಚಾ ಪ್ರತೀಕಮಜ್ಯತೇ ||
ಘೃತೇನಾಗ್ನಿಃ ಸಮಜ್ಯತೇ ಮಧುಪ್ರತೀಕ ಆಹುತಃ | ರೋಚಮಾನೋ ವಿಭಾವಸುಃ |
ಜರಮಾಣಃ ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ | ತಂ ತ್ವಾ ಹವಂತ ಮರ್ತ್ಯಾಃ ||
ತಂ ಮರ್ತಾ ಅಮರ್ತ್ಯಂ ಘೃತೇನಾಗ್ನಿಂ ಸಪರ್ಯತ | ಅದಾಭ್ಯಂ ಗೃಹಪತಿಂ ||
ಅದಾಭ್ಯೇನ ಶೋಚಿಷಾಗ್ನೇ ರಕ್ಷಸ್ತ್ವಂ ದಹ | ಗೋಪಾ ಋತಸ್ಯ ದೀದಿಹಿ ||
ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತುಧಾನ್ಯಃ | ಉರುಕ್ಷಯೇಷು ದೀದ್ಯತ್ ||
ತಂ ತ್ವಾ ಗೀರ್ಭಿರುರುಕ್ಷಯಾ ಹವ್ಯವಾಹಂ ಸಮೀಧಿರೇ | ಯಜಿಷ್ಠಂ ಮಾನುಷೇ ಜನೇ||

(ಋ. ಸಂ. ೧೦-೧೧೮-೧ ರಿಂದ ೯)

ಈ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವುವು. ಇವುಗಳು ರಾಕ್ಷಸರನ್ನು ಓಡಿಸಿ ಅವರನ್ನು ಕೊಲ್ಲುವುವು. ಆದ್ದರಿಂದ ಈ ಋಕ್ಕುಗಳನ್ನು ಪಠಿಸುವುದರಿಂದ ರಾಕ್ಷಸರು ನಾಶವಾಗುವರು. ಅಗ್ನಿಯನ್ನು ಮಥನಮಾಡುವ ಕಾಲದಲ್ಲಿ ಅಗ್ನಿಯು ಉತ್ಪನ್ನನಾಗದಿರುವುದೂ ಅಥವಾ ವಿಳಂಬವಾಗಿ ಉತ್ಪನ್ನವಾಗುವುದೂ ಸಹ ಏತಕ್ಕೆಂದರೆ, ಈ ರಾಕ್ಷಸರು ಅಗ್ನಿಯನ್ನು ಪ್ರತಿಬಂಧಿಸಿ ಅವನನ್ನು ಬಿಡದೆ ತಮ್ಮ ಅಧೀನದಲ್ಲಿಟ್ಟುಕೊಂಡಿರುವರು. ಆದುದರಿಂದ ಅಗ್ನಿಯನ್ನು ಬಿಡುಗಡೆಮಾಡುವುದಕ್ಕಾಗಿ ರಾಕ್ಷಸರ ಹನನವು ಆವಶ್ಯಕವು. ಅದಕ್ಕಾಗಿ ಈ ಒಂಭತ್ತು ಋಕ್ಕುಗಳ ರಕ್ಷೋಹನನಸೂಕ್ತವನ್ನು ಪಠಿಸಬೇಕೆಂದು ಹೇಳಿರುವುದು.

ಸ ಯದ್ಯೇಕಸ್ಯಾಮೇವಾನೂಕ್ತಾಯಾಂ ಜಾಯೇತ ಯದಿ ದ್ವಯೋರಥೋತ ಬ್ರುವಂತು ಜಂತವ ಇತಿ ಜಾತಾಯ ಜಾತವತೀಮಭಿರೂಪಾಮನುಬ್ರೂಯಾತ್ ||

ರಕ್ಷೋಘ್ನಸೂಕ್ತವನ್ನು ಪಠಿಸುತ್ತಿರುವಾಗ ಮಧ್ಯದಲ್ಲಿ ಒಂದು ಋಕ್ಕನ್ನು ಪಠಿಸಿದ ಮೇಲೆ ಅಗ್ನಿಯು ಉತ್ಪನ್ನವಾದರೆ ಅಥವಾ ಎರಡು, ಮೂರು ಇತ್ಯಾದಿ ಋಕ್ಕುಗಳ ಪಠನಾನಂತರ ಉತ್ಪನ್ನವಾದರೆ ಆಕ್ಷಣವೇ,

**ಉತ ಬ್ರುವಂತು ಜಂತವ ಉದಗ್ನಿರ್ವೃತ್ರಹಾನಿ । ಧನಂಜಯೋ ರಣೇರಣೇ ॥**

(ಋ. ಸಂ. ೧-೭೪-೩)

ಎಂಬ ಋಕ್ಕನ್ನು ಕೂಡಲೇ ಪಠಿಸಬೇಕು. ಏಕೆಂದರೆ ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವ ವಿಷಯವು ಅಗ್ನಿಯ ಉತ್ಪತ್ತಿಗೆ ಅನುಕೂಲವಾಗಿರುವುದು. ಈ ಅನುಕೂಲವಾಗಿರುವುದೆಂಬ ವಿಷಯವನ್ನು ಹೇಳುವುದಕ್ಕಾಗಿಯೇ **ಜಾತವತೀಂ** ಎಂಬ ಶಬ್ದ ಪ್ರಯೋಗವಿರುವುದು. ಅನಂತರ **ಉದಗ್ನಿರ್ವೃತ್ರಹಾಜನಿ** ಎಂಬ ಎರಡನೆಯ ಪಾದದಲ್ಲಿ **ಅಜನಿ** ಉತ್ಪನ್ನನಾದನು ಎಂಬ ಜನ್ಮಸೂಚಕವಾದ ಪದವು ಪಠಿತವಾಗಿದೆ. ಆದುದರಿಂದ ಅಗ್ನಿಯು ಉತ್ಪತ್ತಿಯಾದ ಕೂಡಲೇ ಅನುರೂಪನಾದ ಈ ಋಕ್ಕನ್ನು ಆ ಕೂಡಲೇ ಪಠಿಸಬೇಕೆಂದು ಹೇಳಿರುವುದು.

**ಯದ್ಯಜ್ಞೇಽಭಿರೂಪಂ ತತ್ಸಮೃದ್ಧ ಆ ಯಂ ಹಸ್ತೇನ ಖಾದಿನಮಿತಿ ಹಸ್ತಾಭ್ಯಾಂ ಹ್ಯೇನಂ ಮಂಥಂತಿ ಶಿಶುಂ ಜಾತಮಿತಿ ಶಿಶುರಿವ ವಾ ಏಷ ಪ್ರಥಮಜಾತೋ ಯದಗ್ನಿಃ ನ ಬಿಭ್ರತಿ ವಿಶಾಮಗ್ನಿಂ ಸ್ವಧ್ವರಮಿತಿ ಯದ್ವೈ ದೇವಾನಾಂ ನೇತಿ ತದೇಷಾಮೋ ೩ ಮಿತಿ ಪ್ರ ದೇವಂ ದೇವವೀತಯೇ ಭರತಾ ವಸುವಿತ್ತಮಮಿತಿ ಪ್ರಹ್ರಿಯಮಾಣಾಯಾಭಿರೂಪ ಯದ್ಯಜ್ಞೇಽಭಿರೂಪತತ್ಸಮೃದ್ಧಂ ಆ ಸ್ವೇ ಯೋನೌ ನಿಷೀದತ್ವಿತಿ ಏಷ ಹ ವಾ ಅಸ್ಯ ಸ್ವೋ ಯೋನಿರ್ಯದಗ್ನಿರಗ್ನೇಃ॥**

ಇದುವರೆಗೆ ಅಗ್ನಿಮಥನಕ್ಕಾಗಿ ಪ್ರಯೋಗಿಸಲ್ಪಡುವ ಆರು ಋಕ್ಕುಗಳನ್ನು (ಅಭಿತ್ವಾ, ಮಹೀದ್ಯೌಃ, ತ್ವಾಮಗ್ನೇ, ತಮುತ್ವಾ, ಉತ ಬ್ರುವಂತು ಎಂಬ ಆರು ಋಕ್ಕುಗಳನ್ನು) ಹೇಳಿ ಈಗ—

**ಆ ಯಂ ಹಸ್ತೇ ನ ಖಾದಿನಂ ಶಿಶುಂ ಜಾತಂ ನ ಬಿಭ್ರತಿ । ವಿಶಾಮಗ್ನಿಂ ಸ್ವಧ್ವರಂ ॥**

(ಋ. ಸಂ. ೬-೧೬-೪೦)

ಎಂಬ ಏಳನೆಯ ಋಕ್ಕನ್ನು ಹೋತೃವು ಪಠಿಸುವನು. ಈ ಋಕ್ಕಿನ ಅರ್ಥವು ಈ ರೀತಿ ಇರುವುದು. ಹೊಸದಾಗಿ ಹುಟ್ಟಿದ ಮಗುವನ್ನು ಕೈಗಳಿಂದ ಎತ್ತಿಕೊಳ್ಳುವಂತೆ ಅರಣಿಯಲ್ಲಿ ಉತ್ಪನ್ನನಾದ ಅಗ್ನಿಯನ್ನು ಋತ್ವಿಕ್ಕುಗಳು ಕೈಗಳಿಂದ ಎತ್ತಿಕೊಳ್ಳುವರು. ಈ ಶಿಶುರೂಪದ ಅಗ್ನಿಯು ಪ್ರಜೆಗಳು ಮಾಡುವ ಯಜ್ಞದಲ್ಲಿ ಮುಖ್ಯಪಾತ್ರವಹಿಸುವವನಾಗಿಯೂ, ಹವಿರಾದಿಗಳನ್ನು ಭಕ್ಷಿಸುವವನಾಗಿಯೂ ಇರುವನು, ಎಂದು ಇದರ ಮುಖ್ಯಾಭಿಪ್ರಾಯವು. ಮೊದಲನೆಯ ಪಾದದಲ್ಲಿ ಹಸ್ತಶಬ್ದಪ್ರಯೋಗವು—ಈ ಅಗ್ನಿಯನ್ನು ಋತ್ವಿಕ್ಕುಗಳು ತಮ್ಮ ಹಸ್ತಗಳಿಂದ ಮಥಿಸುವರು. ಆದ್ದರಿಂದ ಕೈಗಳಲ್ಲಿ ಎತ್ತಿಕೊಳ್ಳುವರು ಎಂದು ಹೇಳಿದೆ. ಎರಡನೆಯ ಪಾದದಲ್ಲಿ ಆಗತಾನೇ ಉತ್ಪನ್ನನಾದ ಅಗ್ನಿಗೆ, ಹುಟ್ಟಿದ ಮಗುವಿನ ದೃಷ್ಟಾಂತವನ್ನು ಹೇಳಿದೆ. ಇಲ್ಲಿ ಉಪಯೋಗಿಸುವ ನ ಎಂಬ ಪದವು ಓಂ ಎಂಬ ಅಂಗೀಕಾರಾರ್ಥವನ್ನು ಸೂಚಿಸುವುದು. ಲೋಕಭಾಷೆಯಲ್ಲಿ ನ ಎಂಬ ಶಬ್ದವು ನಿಷೇಧಾರ್ಥವನ್ನು ಮಾತ್ರ ಸೂಚಿಸುವುದು. ಆದರೆ ವೇದಗಳಲ್ಲಿ ಈ ಶಬ್ದವು ನಿಷೇಧಾರ್ಥವನ್ನೂ, ಉಪಮಾರ್ಥವನ್ನೂ, ಅಂಗೀಕಾರಾರ್ಥವನ್ನೂ ಸೂಚಿಸುವುದು ಇಲ್ಲಿ ಅಂಗೀಕಾರಾರ್ಥವೆಂದೇ ಅಭಿಪ್ರಾಯವು. ಮತ್ತು ದೇವಾನಾಂ ಎಂಬ ಪದಕ್ಕೆ ದೇವತೆಗಳನ್ನು ಪ್ರತಿಪಾದಿಸುವ ಮಂತ್ರಗಳೆಂದಾಗಲಿ ಅಥವಾ ವರ್ಣವ್ಯತ್ಯಯದಿಂದ ವೇದಾನಾಂ—ವೇದಗಳ ಸಂಬಂಧವಾದ ಎಂದಾಗಲಿ ಅರ್ಥವಾಗಬಹುದು. ಇನ್ನು ಅಗ್ನಿಮಥನದ ಎಂಟನೆಯ ಋಕ್ಕನ್ನು, ಎಂದರೆ—

**ಪ್ರ ದೇವಂ ದೇವವೀತಯೇ ಭರತಾ ವಸುವಿತ್ತಮಂ । ಆ ಸ್ವೇ ಯೋನೌ ನಿಷೀದತು ॥**

(ಋ. ಸಂ. ೬-೧೬-೪೧)

ಎಂಬ ಋಕ್ಕನ್ನು ಹೋತೃವು ಪಠಿಸುವನು. ಎಲೈ ಋತ್ವಿಜರೇ, ಈಗ ಉತ್ಪನ್ನನಾದ ಅಗ್ನಿಯನ್ನು ಅವನ ಸ್ವಸ್ಥಾನವಾದ ಆಹವನೀಯಕುಂಡದಲ್ಲಿ ಇಡಿರಿ. ಅಗ್ನಿಯ ಸ್ವಸ್ಥಾನವಾದ ಅಲ್ಲಿ ಅವನು ಕೂತುಕೊಳ್ಳಲಿ ಎಂಬರ್ಥವಿರುವ ಈ ಋಕ್ಕು ಅಗ್ನಿಯನ್ನು ಆಹವನೀಯಕುಂಡದಲ್ಲಿ ಇರುವ ಕರ್ಮಕ್ಕೆ ಸಮಯೋಚಿತವಾಗಿರುವುದು. ಇಲ್ಲಿ ಪ್ರತಿಕರ್ಮದಲ್ಲಿಯೂ ಪಠಿಸುವ ಪ್ರೈಷಮಂತ್ರಕ್ಕೆ ಅನುಸಾರವಾಗಿ ಹೋತೃವು ಆಯಾ ಕರ್ಮಕ್ಕೆ ಸಮಯೋಚಿತವಾದುದೂ ಸರಿಯಾದ ಅರ್ಥವುಳ್ಳದ್ದೂ ಆದ ಮಂತ್ರವನ್ನು ಪಠಿಸುವನು ಹೇಗೆಂದರೆ-ಅಗ್ನಿಯು ಉತ್ಪನ್ನನಾದಕೂಡಲೇ ಅಧ್ವರ್ಯುವು ಹೋತೃವನ್ನು ಕುರಿತು- **ಜಾತಾಯಾನೂಬ್ರೂಹಿ** ಎಂದು ಪ್ರೈಷಮಂತ್ರವನ್ನು ಹೇಳುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು ಸಮಯೋಚಿತವಾದ **ಉತ ಬ್ರುವಂತು ಜಂತವಃ** ಎಂಬ ಋಕ್ಕನ್ನು ಪಠಿಸುವನು. ಹಾಗೆಯೇ ಉತ್ಪನ್ನನಾದ ಅಗ್ನಿಯನ್ನು ಆಹವನೀಯವೆಂಬ ಕುಂಡದಲ್ಲಿ ಇಡುವಾಗ ಅಧ್ವರ್ಯುವು—**ಪ್ರಹ್ರಿಯಮಾಣಾಯಾನುಬ್ರೂಹಿ** ಎಂದು ಪ್ರೈಷಮಂತ್ರವನ್ನು ಹೇಳಿದಕೂಡಲೇ ಹೋತೃವು ಆ ಸಂದರ್ಭಕ್ಕೆ ಸರಿಯಾದ **ಪ್ರ ದೇವಂ ದೇವವೀತಯೇ** ಎಂಬ ಋಕ್ಕನ್ನು ಪಠಿಸುವನು. ಇದರಂತೆ ಪ್ರತಿ ಕರ್ಮದಲ್ಲಿಯೂ ನಡೆಯುವುದೆಂದು ತಿಳಿಯಬೇಕು. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಈ ವಿಷಯವಾಗಿ—

**ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹ ಸಾವಿತ್ರೀಮೃಚಮನ್ವಾಹ ಸವಿತೃಪ್ರಸೂತ ಏವೈನಂ ಮಂಥತಿ ಜಾತಾಯಾನುಬ್ರೂಹಿ ಪ್ರಹ್ರಿಯಮಾಣಾಯಾನುಬ್ರೂಹೀತ್ಯಾಹ ಕಾಂಡೇಕಾಂಡ ಏವೈನಂ ಕ್ರಿಯಾಮಣೇ ಸಮರ್ಧಯತಿ ಗಾಯತ್ರೀಃ ಸರ್ವಾ ಅನ್ವಾಹ ॥**

(ತೈ. ಸಂ. ೬-೩-೨-೫, ೩)

ಇತ್ಯಾದಿ. ಈ ವಿಷಯವನ್ನೇ ಇಲ್ಲಿ **ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ** ಎಂಬ ವಾಕ್ಯದಿಂದ ವಿವರಿಸಿರುವುದು ಎಂದರೆ ಆಯಾ ಕರ್ಮಗಳಲ್ಲಿ ಆಯಾ ಕರ್ಮಕ್ಕೆ ತಕ್ಕಂತೆ ಅನುರೂಪವಾದ ಮಂತ್ರಗಳನ್ನು ಹೇಳಿ ಯಜ್ಞವನ್ನು ನೆರವೇರಿಸಬೇಕೆಂದು ಮುಖ್ಯಾಭಿಪ್ರಾಯವು. ಕೊನೆಯಲ್ಲಿ **ಆ ಸ್ವೇ ಯೋನೌ ನಿಷೀದತು** ಎಂದು ಹೇಳಿದ ಕೂಡಲೇ ಅಗ್ನಿಯನ್ನು ಆಹವನೀಯಕುಂಡದಲ್ಲಿ ಸ್ಥಾಪಿಸುವರು. ಏಕೆಂದರೆ ಆಹವನೀಯಸ್ಥಾನವೇ ಮಥಿತನಾದ (ಆಗತಾನೇ ಉತ್ಪನ್ನನಾದ) ಅಗ್ನಿಯ ಸ್ಥಾನವೆಂದು ಹೇಳಲ್ಪಡುವುದು.

**ಆಜಾತಂ ಜಾತವೇದಸೀತಿ ಜಾತ ಇತರೋ ಜಾತವೇದಾ ಇತರಃ ಪ್ರಿಯಂ ಶಿಶೀತಾತಿಥಿಮಿತ್ಯೇಷ ಹ ವಾ ಅಸ್ಯ ಪ್ರಿಯೋಽತಿಥಿರ್ಯದಗ್ನಿರಗ್ನೇಃ ಸ್ಯೋನ ಆ ಗೃಹಪತಿಮಿತಿ ಶಾಂತ್ಯಾಮೇವೈನ ತದ್ದಧಾತಿ । ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯ ಇತ್ಯಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತೇತಿ ವಿಪ್ರ ಇತರೋ ವಿಪ್ರ ಇತರಃ ಸನ್ನಿತರಃ ಸನ್ನಿತರಃ ಸಖಾ ಸಖ್ಯಾ ಸಮಿಧ್ಯಸ ಇತ್ಯೇಷ ಹ ವಾ ಅಸ್ಯ ಸ್ವಃ ಸಖಾ ಯದಗ್ನಿರಗ್ನೇಃ ॥**

ಈಗ ಹೋತೃವು ಒಂಭತ್ತನೇ ಋಕ್ಕಾದ—

**ಆ ಜಾತಂ ಜಾತವೇದಸಿ ಪ್ರಿಯಂ ಶಿಶೀತಾತಿಥಿಂ । ಸ್ಯೋನ ಆ ಗೃಹಪತಿಂ ॥**

(ಋ. ಸಂ. ೬-೧೬-೪೨)

ಎಂಬ ಮಂತ್ರವನ್ನು ಪಠಿಸುವನು. ಈ ಋಕ್ಕಿನ ಮುಖ್ಯಾಭಿಪ್ರಾಯವೇನೆಂದರೆ—ಈ ಋಕ್ಕಿನಲ್ಲಿ ಎರಡು ವಿಧವಾದ ಅಗ್ನಿಗಳನ್ನು ನಿರ್ದೇಶಿಸಿದೆ. **ಜಾತಂ** ಎಂದರೆ ಆಗತಾನೆ ಮಥನಮಾಡಿ ಉತ್ಪತ್ತಿಮಾಡಿರುವ ಅಗ್ನಿಯು ಮೊದಲನೆಯದು, ಆಗ ತಾನೇ ಉತ್ಪನ್ನವಾದುದರಿಂದ ಇದನ್ನು **ಜಾತಂ** ಎಂಬ ಪದದಿಂದ ನಿರ್ದೇಶಿಸಿರುವುದು. ಆಹವನೀಯಾಗ್ನಿ ಕುಂಡದಲ್ಲಿ ಮೊದಲೇ ಸ್ಥಾಪಿತವಾಗಿರುವುದು ಎರಡನೆಯದು ಇದಕ್ಕೆ **ಜಾತವೇದಸಂ** ಎಂದು ಹೇಳುವರು. ಮಥನದಿಂದ ಉತ್ಪನ್ನವಾದ ಅಗ್ನಿಯ ಸ್ವರೂಪವನ್ನು ತಿಳಿದಿರುವವನಾದ್ದರಿಂದ ಆಹವನೀಯಾಗ್ನಿಗೆ ಜಾತವೇದಸಂ ಎಂದು ಅರ್ಥವಿವರಣೆಮಾಡಿದೆ. ಇಲ್ಲಿ ಆಹವನೀಯಾಗ್ನಿಸ್ಥಾನದಲ್ಲಿ ಮೊದಲೇ ಸ್ಥಾಪಿತವಾಗಿದ್ದ ಜಾತವೇದಸವೆಂಬ ಅಗ್ನಿಗೆ ಹೊಸದಾಗಿ ಮಥಿತವಾದ ಅಗ್ನಿಯು ಪ್ರೀತಿಪಾತ್ರನಾದ ಅತಿಥಿಯಂತಿರುವುದು. ಆದುದರಿಂದ ಪ್ರಿಯನೂ ಅತಿಥಿ ಸ್ವರೂಪನೂ ಆದ ಈ ಮಥಿತಾಗ್ನಿಯನ್ನು ಸುಖನಿವಾಸಸಿದ್ಧಿಗಾಗಿ ಆಹವನೀಯಾಗ್ನಿಕುಂಡದಲ್ಲಿ ಸ್ಥಾಪಿಸಲಾಗುವುದು ಎಂದು ಮುಖ್ಯಾಭಿಪ್ರಾಯವು. ಅನಂತರ ಹೋತೃವು—

**ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯಃ ।**

(ಋ. ಸಂ. ೧-೧೨-೬)

ಎಂಬ ಹತ್ತನೆಯ ಋಕ್ಕನ್ನು ಪಠಿಸುವನು. ಇದರ ಅರ್ಥವು—ಮೊದಲೇ ಆಹವನೀಯ ಕುಂಡದಲ್ಲಿ ಸ್ಥಾಪಿಸಿದ್ದ ಅಗ್ನಿಯ ಜೊತೆಗೆ ಹೊಸದಾಗಿ ಮಥಿತವಾದ ಅಗ್ನಿಯು ಸೇರಿ ಚೆನ್ನಾಗಿ ಪ್ರಕಾಶಮಾನವಾಗಿ ಬೆಳಗುವುದು. ಈ ಮಥಿತಾಗ್ನಿಯು ಸರ್ವವನ್ನು ತಿಳಿಯುವ ಕ್ರಾಂತದರ್ಶಿಯು, ಗೃಹದ ಅಥವಾ ಯಜಮಾನನ ಪಾಲಕನು, ನಿತ್ಯತರುಣನು, ದೇವತೆಗಳಿಗೆ ಹವ್ಯಾದಿಗಳನ್ನು ವಹಿಸುವವನು, ಜುಹೂ ಎಂಬ ಹೋಮಸಾಧನವಾದ ಸೌಟನ್ನು ಮುಖದಲ್ಲಿ (ಬಾಯಲ್ಲಿ) ಇಟ್ಟುಕೊಂಡಿರುವವನು. (ಎಂದರೆ ಜುಹೂ ಎಂಬ ಸೌಟನಿಂದ ಆಜ್ಯಾದಿಗಳನ್ನು ಅಗ್ನಿಯ ಜ್ವಾಲೆಯಲ್ಲಿ ಹೋಮಮಾಡುವುದರಿಂದ ಜುಹ್ವಾಸ್ಯಃ ಎಂದು ಅಗ್ನಿಯನ್ನು ಕರೆಯಲಾಗಿದೆ.) ಈ ರೀತಿ ಕಾಲಕ್ಕೆ ಅನುರೂಪವಾದ ಮಂತ್ರವನ್ನು ಇಲ್ಲಿ ಪಠಿಸಲಾಗಿದೆ. ಇದಾದ ಬಳಿಕ ಹೋತೃವು—

**ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ । ಸಖಾ ಸಖ್ಯಾ ಸಮಿಧ್ಯಸೇ ॥**

(ಋ. ಸಂ. ೮-೪೩-೧೪)

ಎಂಬ ಋಕ್ಕನ್ನು ಪಠಿಸುವನು. ಎಲೈ ನೂತನಾಗ್ನಿಯೇ, ಮೇಧಾವಿಯಾದ ಆಹವನೀಯಾಗ್ನಿನೊಡನೆ ಸೇರಿ, ಸ್ನೇಹಿತನು ಸ್ನೇಹಿತನೊಡನೆ ಸೇರಿ ಸುಖಿಸುವಂತೆ ಸುಖವಾಗಿರು ಎಂದಭಿಪ್ರಾಯವು.

**ತಂ ಮರ್ಜಯಂತ ಸುಕ್ರತುಂ ಪುರೋಯಾವಾನಮಾಜಿಷು । ಸ್ವೇಷು ಕ್ಷಯೇಷು ವಾಜಿನಮಿತಿ ಏಷ ಹ ವಾ ಅಸ್ಯ ಸ್ವಃ ಕ್ಷಯೋ ಯದಗ್ನಿರಗ್ನೇಃ । ಯಜ್ಞೇನ ಯಜ್ಞಮಯಜಂತ ದೇವಾ ಇತ್ಯುತ್ತಮಯಾ ಪರಿದಧಾತಿ। ಯಜ್ಞೇನ ವೈ ತದ್ದೇವಾ ಯಜ್ಞಮಯಜಂತ ಯದಗ್ನಿನಾಗ್ನಿ-ಮಯಜಂತ ತೇ ಸ್ವರ್ಗಂ ಲೋಕಮಾಯನ್ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾ ಇತಿ ಛಂದಾಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥**

ಅನಂತರ ಹೋತೃವು—**ತಂ ಮರ್ಜಯಂತ ಸುಕ್ರತುಂ** (ಋ. ಸಂ. ೮-೮೫-೮) ಎಂಬ ಋಕ್ಕನ್ನು ಪಠಿಸುವನು. ಹೀಗೆ ಹೇಳಿ ಅಗ್ನಿಯ ಸ್ವಕೀಯನಿವಾಸಸ್ಥಾನವಾದ ಆಹವನೀಯಾಗ್ನಿಯಲ್ಲಿ ಸ್ಥಾಪಿಸಿ ಅನಂತರ ಅಗ್ನಿಮಥನದಲ್ಲಿ ಕೊನೆಯ ಋಕ್ಕಾದ ಎಂದರೆ ೧೩ ನೆಯ ಋಕ್ಕಾದ **ಯಜ್ಞೇನ ಯಜ್ಞಮಯಜಂತ ದೇವಾಃ** (ಋ. ಸಂ. ೧೦-೯೦-೧೬) ಎಂಬ ಋಕ್ಕನ್ನು ಹೋತೃವು ಪಠಿಸಿ ಅಗ್ನಿಮಥನಕಾರ್ಯವನ್ನು ಮುಗಿಸುವನು. ಇಲ್ಲಿ ಮಥಿತಾಗ್ನಿಯನ್ನು (ಪ್ರಹ್ರಿಯಮಾಣಾಗ್ನಿಯನ್ನು) ಆಹವನೀಯಾಗ್ನಿಯೊಡನೆ ಸೇರಿಸಿ ಸ್ಥಾಪಿಸುವುದೇ **ಅಗ್ನಿನಾಗ್ನಿಮಯಜಂತ** ಎಂದು ಹೇಳಲ್ಪಡುವುದು. ಅಥವಾ ಈ ಕರ್ಮವನ್ನೇ **ಯಜ್ಞೇನ ಯಜ್ಞಮಯಜಂತ ದೇವಾಃ** ಎಂಬ ಕೊನೆಯ ಋಕ್ಕಿನಲ್ಲಿ ಹೇಳಿರುವುದು. ಇಲಿ ಸಾಧ್ಯಾಃ ಎಂಬ ಶಬ್ದಕ್ಕೆ ಗಾಯತ್ರ್ಯಾದಿ ಛಂದಸ್ಸುಗಳಿಗೆ ಅಭಿಮಾನಿ ದೇವತೆಗಳು ಎಂದರ್ಥವು. ಈ ದೇವತೆಗಳು ಪೂರ್ವದಲ್ಲಿ ಮಥಿತಾಗ್ನಿಯಿಂದ ಆಹವನೀಯಾಗ್ನಿಯನ್ನು ಪೂಜಿಸಿದರು. ಅದರಿಂದ ಅವರು ಸ್ವರ್ಗಲೋಕವನ್ನು ಪಡೆದರು.

> **ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ಗಚ್ಛತ್ಯಸ್ಯಾಹುತಿರ್ದೇವಾನ್ನಾಸ್ಯಾಹುತಿಃ ಪಾಪ್ಮನಾ ಸಂಸೃಜ್ಯತೇ ಯ ಏವಂ ವೇದ ||**

ಇದರಂತೆಯೇ ಆದಿತ್ಯರೂ, ಅಂಗಿರಸರೂ ಹಿಂದೆ ಹೇಳಿದಂತೆ ಯಜ್ಞವನ್ನು ಮಾಡಿ ಸ್ವರ್ಗಲೋಕಕ್ಕೆ ಹೋದರು. ಈ ಅಗ್ನ್ಯಾಹುತಿಯು ಸ್ವರ್ಗಲೋಕಕ್ಕೆ ನೇರವಾದ ಮಾರ್ಗವು. ಇಂತಹ ಯಜ್ಞಕರ್ಮದಲ್ಲಿ ಪ್ರವರ್ತಿಸುತ್ತಿರುವಾಗ ಮುಖ್ಯಪುರೋಹಿತನು ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ, ಅಥವಾ ಕೆಟ್ಟಮನುಷ್ಯನಾದರೂ ಯಜ್ಞದಲ್ಲಿ ನೆರವೇರಿಸಲ್ಪಡುವ ಅಗ್ನ್ಯಾಹುತಿಯು ಮಾತ್ರ ಯಜಮಾನನನ್ನು ಸ್ವರ್ಗಕ್ಕೆ ಸೇರಿಸುವುದು. ಪುರೋಹಿತನ ದೋಷಾದಿಗಳು ಯಜ್ಞಮಾಡುವ ಯಜಮಾನನಿಗೆ ಸಂಬಂಧಪಡುವುದಿಲ್ಲ. ಎಂದರೆ ಅದರಿಂದ ಯಜಮಾನನಿಗೆ ಕೆಡಕಾಗುವುದಿಲ್ಲ. ಮೇಲೆ ವಿವರಿಸಿರುವ ಈ ಅಗ್ನ್ಯಾಹುತಿಯ ಕ್ರಮವನ್ನು ಯಾವನು ತಿಳಿದಿರುವನೋ ಅವನು. ಸ್ವರ್ಗದಲ್ಲಿ ದೇವತೆಗಳನ್ನು ಸೇರುವನು. ಅವನಿಗೆ ಯಾವ ವಿಧವಾದ ಪಾಪದ ಸಂಪರ್ಕವೂ ಇರುವುದಿಲ್ಲ.

ಇಲ್ಲಿ ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ ಎಂದು ಮೇಲಿನ ವಾಕ್ಯದಲ್ಲಿ ಹೇಳಿರುವುದಷ್ಟೆ. ಅದಕ್ಕೆ ವಿವರಣೆಯು ಅವಶ್ಯಕವು—ಜನ್ಮಮಾತ್ರದಿಂದ ಬ್ರಾಹ್ಮಣನಾಗಿ ಯಾಜನಾಧಿಕಾರವನ್ನು (ಯಜ್ಞಮಾಡಿಸುವ ಅಧಿಕಾರವನ್ನು) ಪಡೆದಿದ್ದರೂ ಕೆಲವು ಬ್ರಾಹ್ಮಣರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ದೋಷಭಾಗಿಗಳಾಗುವರು. ಈ ಅಬ್ರಾಹ್ಮಣರಲ್ಲಿ ಆರು ವಿಧವೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಹೇಗೆಂದರೆ—

> **ಅಬ್ರಾಹ್ಮಣಾಸ್ತು ಷಟ್ ಪ್ರೋಕ್ತಾ ಇತಿ ಶಾತಾತಪೋಽಬ್ರವೀತ್ ।**
> **ಆದ್ಯಸ್ತು ರಾಜಭೃತ್ಯಃ ಸ್ಯಾದ್ದ್ವಿತೀಯಃ ಕ್ರಯವಿಕ್ರಯೀ ।**
> **ತೃತೀಯೋ ಬಹುಯಾಜ್ಯಃ ಸ್ಯಾಚ್ಚತುರ್ಥೋಽಶ್ರೌತಯಾಜಕಃ ।**
> **ಪಂಚಮೋ ಗ್ರಾಮಯಾಜೀ ಚ ಷಷ್ಠೋ ಬ್ರಹ್ಮಬಂಧುಃ ಸ್ಮೃತಃ ॥**

ಅಬ್ರಾಹ್ಮಣರೆಂದರೆ ಯಾರು ಎಂಬ ವಿಷಯದಲ್ಲಿ ಶಾತಾತಪರೆಂಬುವರು ಈ ರೀತಿ ಹೇಳಿರುವುರು, (೧) **ರಾಜಭೃತ್ಯರು** ಎಂದರೆ ಜೀವನೋಪಾಯಕ್ಕಾಗಿ ರಾಜನನ್ನೇ ಆಶ್ರಯಿಸಿ ಅವನ ಸೇವೆಮಾಡುವವರು (೨) ಕ್ರಯಾವಿಕ್ರಯಾದಿಗಳಿಂದ

ಜೀವಿಸುವವರು. ಅಂಗಡಿ ಮುಂತಾದ್ದನ್ನು ಇಟ್ಟು ಪದಾರ್ಥಗಳನ್ನು ಮಾರಿ ಜೀವಿಸುವವರು. (೩) ಜೀವನೋಪಾಯಕ್ಕೆ ಸಾಕಾದಷ್ಟು ವರಮಾನವಿದ್ದರೂ ಅಧಿಕಧನ ಸಂಪಾದನೆ ಮಾಡಬೇಕೆಂಬ ದುರಾಶೆಯಿಂದ ಯಾರಿಗೆಂದರವರಿಗೆ ಯಜ್ಞ (ಅಥವಾ ಪೌರೋಹಿತ್ಯ) ಮಾಡಿಸುವುದನ್ನೇ ತಮ್ಮ ವೃತ್ತಿಮಾಡಿಕೊಂಡಿರುವವರಿಗೆ ಬಹುಯಾಜಿಗಳೆಂದು ಹೆಸರು. (೪) **ಅಶ್ರೌತ ಯಾಜಕರು,** ಎಂದರೆ ಶ್ರೌತಕಾರ್ಯಗಳನ್ನು ಎಂದರೆ ಯಜ್ಞಾದಿಗಳನ್ನು ಮಾಡಲು ವೇದಾಧ್ಯನ ಸಂಪನ್ನರಾಗಿದ್ದರೂ ಆ ರೀತಿ ಶ್ರೌತಕರ್ಮಗಳಲ್ಲಿ ಪ್ರವರ್ತಿಸವೆ ಇತರರಿಗೂ ಮಾಡಿಸವೆ ಶ್ರೇಷ್ಠವಲ್ಲದ ಸ್ಮಾರ್ತಕರ್ಮಗಳಲ್ಲಿಯೇ ಪ್ರವರ್ತಿಸುವವರಿಗೆ ಅಶ್ರೌತ ಯಾಜಕರೆಂದು ಹೆಸರು. (೫) **ಗ್ರಾಮಯಾಜಕರು** ಎಂದರೆ, ಗ್ರಾಮಗಳಲ್ಲಾಗಲಿ, ನಗರಗಳಲ್ಲಾಗಲಿ, ಯೋಗ್ಯರಾಗಲಿ, ಅಯೋಗ್ಯರಾಗಲಿ ಯಾರಿಗೆ ಬೇಕಾದರೂ ದ್ರವ್ಯಾಶೆಗಾಗಿ ಯಜ್ಞಮಾಡಿಸತಕ್ಕವರಿಗೆ ಗ್ರಾಮನಗರಯಾಜಕರೆಂದು ಹೆಸರು. (೬) **ಬ್ರಹ್ಮಬಂಧು** ಎಂದರೆ ಸೂರ್ಯೋದಯಾಸ್ತಮಯಗಳಲ್ಲಿ ಕಾಲಕ್ಕೆ ಸರಿಯಾಗಿ ಸಂಧ್ಯಾದಿಕರ್ಮಗಳನ್ನು ಆಚರಿಸದೆ ಇರತಕ್ಕವರಿಗೆ ಬ್ರಹ್ಮಬಂಧುಗಳೆಂದು ಹೆಸರು. ಈ ಆರು ವಿಧವಾದ ಪುರೋಹಿತರು ಮಾಡಿಸುವ ಕರ್ಮಕ್ಕೆ ಅಬ್ರಾಹ್ಮಣೋಕ್ತ ಅಥವಾ ದುರುಕ್ತೋಕ್ತ ಎಂದು ಮೇಲೆ ಹೇಳಿರುವುದು.

> **ತಾ ಏತಾಸ್ತ್ರಯೋದಶಾನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ । ತಾಸಾಂ ತ್ರಿಃಪ್ರಥಮಾಮನ್ವಾಹ ತ್ರಿರುತ್ತಮಾಂ ತಾಃ ಸಪ್ತದಶ ಸಂಪದ್ಯಂತೇ ಸಪ್ತದಶೋ ವೈ ಪ್ರಜಾಪತಿರ್ದ್ವಾದಶ ಮಾಸಾಃ ಪಂಚರ್ತವಸ್ತಾವಾನ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥**
>
> (ಐ. ಬ್ರಾ. ೩-೫)

ಈ ರೀತಿ ಅಗ್ನಿಮಥನಕಾರ್ಯದಲ್ಲಿ ಉಪಯೋಗಿಸುವ ಋಕ್ಕುಗಳು ಒಟ್ಟು ಹದಿಮೂರು. ರಕ್ಷೋಘ್ನದೇವತಾಕವಾದ ೯ ಋಕ್ಕುಗಳು ಇದರಲ್ಲಿ ಸೇರುವುದಿಲ್ಲ. ಈ ಹದಿಮೂರು ಋಕ್ಕುಗಳನ್ನು ಆಯಾ ಕಾಲಗಳಲ್ಲಿ ಪಠಿಸುವುದರಿಂದ ಅಗ್ನಿಮಥನ, ಅಗ್ನ್ಯುತ್ಪತ್ತಿ, ಅಗ್ನಿಯನ್ನು ತೆಗೆದುಕೊಂಡುಹೋಗಿ ಆಹವನೀಯದಲ್ಲಿ ಸ್ಥಾಪಿಸುವುದು, ಅಲ್ಲಿ ಆಹವನೀಯಾಗ್ನಿಯೊಡನೆ ಸೇರಿಸುವುದು ಎಂಬ ಈ ಕರ್ಮಗಳೆಲ್ಲಾ ಸಮಯೋಚಿತವಾದ ಋಕ್ಕುಗಳ ಪಠನದಿಂದ ಸಾಂಗವಾಗಿ ನೆರವೇರುವುದಕ್ಕೆ ರೂಪಸಮೃದ್ಧಿಯೆಂದು ಹೆಸರು. ಈ ಹದಿಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕನ್ನು (**ಅಭಿ ತ್ವಾ ದೇವ ಸವಿತಃ** ಎಂಬ ಋಕ್ಕನ್ನೂ) ಕೊನೆಯ ಋಕ್ಕನ್ನೂ (**ಯಜ್ಞೇನ ಯಜ್ಞಮಯಜಂತ ದೇವಾಃ** ಎಂಬ ಋಕ್ಕನ್ನೂ) ಹೋತೃವು ಮೂರಾವೃತ್ತಿ ಪಠಿಸಬೇಕು. ಆದ್ದರಿಂದ ಒಟ್ಟು ಈ ಅಗ್ನಿಮಥನಕಾರ್ಯದಲ್ಲಿ ಹದಿನೇಳು ಋಕ್ಕನ್ನು ಪಠಿಸಿದಂತಾಯಿತು. ಪ್ರಜಾಪತಿಯು ಸಪ್ತದಶಸಂಖ್ಯಾ (ಹದಿನೇಳು) ಸ್ವರೂಪನು. ಏಕೆಂದರೆ ಹನ್ನೆರಡು ತಿಂಗಳು ಐದು ಋತುಗಳೂ ಸೇರಿ ಒಂದು ಸಂವತ್ಸರವಾಗುವುದು. ಆ ಸಂವತ್ಸರವೇ ಪ್ರಜಾಪತಿಯು. ಅದುದರಿಂದ ಪ್ರಜಾಪತಿಯಲ್ಲಿ ನಿಹಿತವಾದ ಈ ಋಕ್ಕುಗಳ ಅರ್ಥವನ್ನು ತಿಳಿದವನು ಅಭಿವೃದ್ಧಿಯನ್ನು ಹೊಂದುತ್ತಾನೆ. ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರಾವರ್ತಿ ಪಠಿಸುವುದರಿಂದ ಯಜ್ಞದ ಕಟ್ಟುಗಳು (ಗಂಟುಗಳು) ದೃಢವಾಗಿಯೂ, ಬಿಗುವಾಗಿಯೂ ಆಗಿ ಜಾರಿಹೋಗದಂತೆ ಸ್ಥಿರವಾಗಿ ನಿಲ್ಲಲು ಅವಕಾಶವಾಗುವುದು ಎಂದು ಅಗ್ನಿಮಥನಕಾರ್ಯದ ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೩-೫) ನಿರೂಪಿಸಲ್ಪಟ್ಟಿರುವುದು.

ಆಶಾಭ್ಯಃ ||೨||

"ಇಂದ್ರ ಆಶಾಭ್ಯಸ್ಪರಿ ಸರ್ವಾಭ್ಯೋ, ಅಭಯಂ ಕರತ್ ।"

ಆಶಾ ದಿಶೋ ಭವನ್ತ್ಯಾಸದನಾತ್ । ಆಶಾ ಉಪದಿಶೋ ಭವನ್ತ್ಯ ಭ್ಯಶನಾತ್ ॥ ೨ ॥

**ಇಂದ್ರ ಆಶಾಭ್ಯಸ್ಪರಿ ಸರ್ವಾಭ್ಯೋ ಅಭಯಂ ಕರತ್ ।**
**ಜೇತಾ ಶತ್ರೂನ್ವಿಚರ್ಷಣಿಃ ॥**

**(ಋ. ಸಂ. ೨-೪೧-೧೨)**

ಇದರ ಅರ್ಥವು—

ಸರ್ವಜ್ಞನೂ ಶತ್ರುಗಳನ್ನು ಜಯಿಸುವವನೂ ಆದ ಇಂದ್ರನು ಸಮಸ್ತವಾದ ದಿಕ್ಕುಗಳಿಂದಲೂ ಭಯವಿಲ್ಲದಿರುವಂತೆ ಮಾಡಲಿ.

**ವಿಚರ್ಷಣಿಃ** ಅಥವಾ **ವಿಶ್ವಚರ್ಷಣಿಃ** ಎಂಬ ಶಬ್ದವು **ಚಕ್ಯತ್ ಚಾಕನತ್** ಮೊದಲಾದ ಎಂಟು ಪಶ್ಯತಿಕರ್ಮ ವಾಚಕಶಬ್ದಗಳ ಮಧ್ಯದಲ್ಲಿ ಪಠಿತವಾದುದರಿಂದ (ನಿ. ೩-೧೩)ವಿಚರ್ಷಣಿಃ ಎಂದರೆ ನೋಡುವವನು. **ವಿಶೇಷೇಣ ಸರ್ವಸ್ಯ ದ್ರಷ್ಟಾ**—ಸಮಸ್ತವನ್ನು ವಿಶೇಷವಾಗಿ (ಚೆನ್ನಾಗಿ) ನೋಡುವವನು ಎಂದು ಈ ಶಬ್ದವು ಅಗ್ನಿ, ಇಂದ್ರ ಮೊದಲಾದ ಅನೇಕ ದೇವತೆಗಳ ಪರವಾಗಿ ಉಪಯೋಗಿಸಲ್ಪಡುವುದು.

**ಜೇತಾ ಶತ್ರೂನ್**—ಶತ್ರುಗಳನ್ನು ಜಯಿಸುವ ಸಾಮರ್ಥ್ಯವುಳ್ಳ ಇಂದ್ರನು **ಆಶಾಭ್ಯಃ ಪರಿ**—**ಆಶಾ ದಿಶೋ ಭವಂತಿ ಆಸದನಾತ್** ಆಶಾ—ಎಂದರೆ ದಿಕ್ಕುಗಳು **ಅಭಿಮುಖ್ಯೇನ ತಾಃ ಸರ್ವತ್ರ ಸನ್ನಾ ಇವ ಭವಂತಿ**-ಈ ದಿಕ್ಕುಗಳು ಮುಖ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿರುವುದರಿರಿದ ಇವುಗಳಿಗೆ **ಆಶಾಃ** ಎಂದು ಹೆಸರು ಬಂದಿದೆ. **ಆಶಾ ಉಪದಿಶೋ ಭವಂತ್ಯಭ್ಯಶನಾತ್ । ಅಭ್ಯಶ್ನುತೇ ಹಿ ತಾಃ ಪರಸ್ಪರೇಣೈವ**—ವಿದಿಕ್ಕುಗಳಿಗೂ ಆಶಾ ಎಂಬ ಹೆಸರು ಅನ್ವಯಿಸುವುದು. ಏಕೆಂದರೆ ಈ ವಿದಿಕ್ಕುಗಳೂ, ದಿಕ್ಕುಗಳೂ ಒಂದರ ಪಕ್ಕದಲ್ಲೊಂದು ಇರುತ್ತಾ ಸರ್ವತ್ರವ್ಯಾಪಿಸಿ ಹೊಂದಿಕೊಂಡಿರುವುದರಿಂದ ಈ ದಿಕ್ಕು ಮತ್ತು ವಿದಿಕ್ಕುಗಳಿಗೆ ಆಶಾ ಎಂಬ ಹೆಸರು ರೂಢಿಯಲ್ಲಿದೆ.

**ಸರ್ವಾಭ್ಯಃ=ಅಭಯಂ ಕರತ್**-ಈ ಇಂದ್ರನು ಶತ್ರುಗಳನ್ನು ಜಯಸುವವನೂ, ಸಮಸ್ತವನ್ನೂ (ಎಂದರೆ ಜಗದ್ವ್ಯಾಪಾರವೆಲ್ಲವನ್ನೂ) ನೋಡುವವನೂ ಅದ್ದರಿಂದ ನಮಗೆ ಸಮಸ್ತದಿಕ್ಕುಗಳಿಂದಲೂ ಒದಗಬಹುದಾದ ಭಯವನ್ನು ನಿವಾರಣೆಮಾಡಿ ರಕ್ಷಿಸಬೇಕೆಂದು ಈ ಋಕ್ಕಿನಲ್ಲಿ ಪ್ರಾರ್ಥಿಸಲಾಗಿದೆ.

ಕಾಶಿಃ ||೩||

ಕಾಶಿರ್ಮುಷ್ಟಿಃ ಪ್ರಕಾಶನಾತ್। ಮುಷ್ಟಿರ್ಮೋಚನಾದ್ವಾ, ಮೋಷಣಾದ್ವಾ, ಮೋಹನಾದ್ವಾ।

"ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಗೃಭ್ಣಾ ಮಘವನ್ಕಾಶಿರಿತ್ತೇ "। ಇಮೇ ಚಿದಿಂದ್ರ ರೋದಸೀ ರೋಧಸೀ ದ್ಯಾವಾಪೃಥಿವ್ಯೌ

ವಿರೋಧನಾತ್ । ರೋಧಃ ಕೂಳಂ ನಿರುಣದ್ಧಿ ಸ್ರೋತಃ । ಕೂಳಂ
ರುಜತೇರ್ವಿಪರೀತಾಲ್ಲೋಷ್ಟೋಽವಿಪರ್ಯಯೇಣ। ಅಪಾರೇ ದೂರ-
ಪಾರೇ ಯತ್ಸಂಗೃಭ್ಣಾಸಿ ಮಘವನ್ ಕಾಶಿಸ್ತೇ ಮಹಾನ್ ॥೩॥

**ಕಾಶಿಃ** ಎಂದರೆ ಮುಷ್ಟಿಯು, ಮುಷ್ಟಿ ಎಂಬ ಶಬ್ದವು ಮೋಚನಾದ್ವಾ-ಬಿಡಿಸುವುದು ಎಂಬ ಅರ್ಥವಿರುವುದ ರಿಂದಾಗಲಿ, **ಮೋಷಣಾದ್ವಾ**—ಕದಿ ಎಂಬ ಅರ್ಥವಿರುವ **ಮೋಷಣ** ಎಂಬ ಶಬ್ದದಿಂದಾಗಲಿ. **ಮೋಹನಾದ್ವಾ**—ಭ್ರಾಂತಿಗೊಳಿಸು ಎಂಬರ್ಥವಿರುವ **ಮೋಹನ** ಎಂಬ ಶಬ್ದದಿಂದಾಗಲಿ. **ಪ್ರಕಾಶನಾತ್**—ಪ್ರಕಾಶಿಸು ಎಂಬರ್ಥವಿರುವ ಪ್ರಕಾಶನ ಎಂಬ ಶಬ್ದದಿಂದಾಗಲಿ ನಿಷ್ಪನ್ನವಾಗಬಹುದು.

**ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋವೃತ್ರಹಾ ಸನ್।**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ ಸಂಗೃಭ್ಣಾಸಿ ಮಘವನ್ಕಾಶಿರಿತ್ತೇ ॥**

(ಋ. ಸಂ, ೩-೩-೫)

ಇದರ ಅರ್ಥವು—

ಸಹಾಯಕ್ಕಾಗಿ ಅನೇಕರಿಂದ ಕರೆಯಲ್ಪಡತಕ್ಕ ಎಲೈ ಇಂದ್ರನೇ, ವೀರ್ಯದಿಂದ ಕೂಡಿದವನೂ ಅಸಹಾಯನೂ ಆದ ನೀನು ವೃತ್ರಾಸುರನ ನಾಶಕನಾಗಿ ದೇವತೆಗಳಿಗೆ ಅಭಯವಾಕ್ಯವನ್ನು ಹೇಳಿದುದು ಸತ್ಯವಾಗಿಯೇ ಪರಿಣಮಿಸಿತು. ಎಲೈ ಇಂದ್ರನೇ, ಯಾವ ನಿನ್ನ ಮಹಿಮೆಯಿಂದ ಅಪಾರವಾದ ದ್ಯಾವಾಪೃಥಿವಿಗಳನ್ನೂ ಸಹ ನೀನು ಒಟ್ಟಿಗೆ ಹಿಡಿದಿದ್ದೀಯೋ ಆ ನಿನ್ನ ಮಹಿಮೆಯು ಲೋಕದಲ್ಲಿ ಪ್ರಸಿದ್ಧವಾಗಿಯೇ ಇದೆ.

ಕುಣಾರುಮ್ ॥೪॥
"ಅಹಸ್ತಮಿಂದ್ರ ಸಮ್ಪಿಣಕ್ಕುಣಾರುಮ್" ॥ ಅಹಸ್ತಮಿಂದ್ರ ಕೃತ್ವಾ
ಸಮ್ಪಿಂಢಿ ಪರಿಕ್ವಣನಂ ಮೇಘಂ ॥೪॥೧॥

**ಕುಣಾರುಂ**—ಶಬ್ದಕಾರಿಣಂ ಶಬ್ದ ಮಾಡುತ್ತಿರುವ ಎಂದರ್ಥವು. **ವೃತ್ರಂ ವರ್ಧಮಾನಂ**—ಬೆಳೆಯುತ್ತಿರುವ ವೃತ್ರನನ್ನು ಅಥವಾ **ವೃಣೋತ್ಯಚ್ಛಾದಯತಿ ನಭ ಇತಿ ವೃತ್ರೋ ಮೇಘಃ ತಮಿಮಂ ವರ್ಧಮಾನಂ ಮೇಘಂ** ಅಂತರಿಕ್ಷವನ್ನು ವ್ಯಾಪಿಸಿ ಮುಚ್ಚುವುದರಿಂದ ವೃತ್ರಶಬ್ದಕ್ಕೆ ಮೇಘವೆಂದು ಹೆಸರು. ಈ ರೀತಿ ಬೆಳೆಯುತ್ತಿರುವ ಎಂದರೆ ಅಭಿವೃದ್ಧಿಯಾಗುತ್ತಿರುವ ಮೇಘವನ್ನು ಇಂದ್ರನು ಪ್ರಹರಿಸಿದನು ಎಂದು ಅರ್ಥವು. ಈ ವಿಷಯದಲ್ಲಿ ಸಾಯಣರು—ಸ ಇಷು **ಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ** ಎಂಬ ತೈತ್ತಿರೀಯ ಸಂಹಿತೆಯ (ಯಜುರ್ವೇದದ) ವಾಕ್ಯವನ್ನು (ತೈ. ಸಂ. ೨-೪-೧೨-೨) ಉದಾಹರಿಸಿರುವರು. ಎಂದರೆ ಈ ವೃತ್ರಾಸುರನು ಪ್ರತಿದಿನವೂ ಒಂದೊಂದು ಬಿಲ್ಲಿನ ಪ್ರಮಾಣದಷ್ಟು ಬೆಳೆಯುತ್ತಿದ್ದನೆಂಬ ಅರ್ಥವು ಇಲ್ಲಿ ವಿವೃತವಾಗಿರುವುದು.

**ಸಹದಾನುಂ ಪುರುಹೂತ ಕ್ಷಿಯನ್ತಮಹಸ್ತಮಿಂದ್ರ ಸಂಪಿಣಕ್ಕುಣಾರುಂ ।**
**ಅಭಿ ವೃತ್ರಂ ವರ್ಧಮಾನಂ ಪಿಯಾರುಮಪಾದಮಿನ್ದ್ರ ತವಸಾ ಜಘನ್ಥ ॥**

(ಋ. ಸಂ. ೩-೩೦-೮)

ಇದರ ಅರ್ಥವು—

ಅನೇಕರಿಂದ ಆಹೂತನಾಗತಕ್ಕ ಎಲೈ ಇಂದ್ರನೇ, ವೃತ್ರಮಾತೆಯಾದ ದಾನವಿಯೊಂದಿಗಿರತಕ್ಕವನೂ, ಹಿಂಸಕನೂ ಶಬ್ದಮಾಡತಕ್ಕವನೂ ಆದ ಅಸುರನನ್ನು ಹಸ್ತಹೀನನನ್ನಾಗಿ ಮಾಡಿ ನಾಶಮಾಡು. ಎಲೈ ಇಂದ್ರನೇ ಬೆಳೆಯುತ್ತಿರುವವನೂ ತೊಂದರೆಯನ್ನುಂಟುಮಾಡುವವನೂ ಆದ ವೃತ್ರಾಸುರನನ್ನು ಪಾದಹೀನನನ್ನಾಗಿ ಮಾಡಿ ನಿನ್ನ ಶಕ್ತಿಯಿಂದ ಅವನನ್ನು ನಾಶಮಾಡು.

**ಇತಿ ಪ್ರಥಮಃ ಖಂಡಃ**

ಇಲ್ಲಿಗೆ ಮೊದಲನೆಯ ಖಂಡವು ಸಮಾಪ್ತವು

---

## ಅಥ ದ್ವಿತೀಯಃ ಖಂಡಃ

**ಎರಡನೆಯ ಖಂಡವು**

" ಅಲಾತೃಣೋ ಬಲ ಇನ್ದ್ರ ವ್ರಜೋ ಗೋಃ ಪುರಾ ಹನ್ತೋ-ರ್ಭಯಮಾನೋ ವ್ಯಾರ । ಸುಗಾನ್ಪಥೋ ಅಕೃಣೋನ್ನಿರಜೇ ಗಾಃ ಪ್ರಾವನ್ವಾಣೀಃ ಪುರುಹೂತಂ ಧಮನ್ತೀಃ " ॥ ಅಲಾತೃಣೋಽಲಮಾ-ತರ್ದನೋ ಮೇಘೋ ಬಲೋ ವೃಣೋತೇರ್ವ್ರಜೋ ವ್ರಜತ್ಯನ್ತರಿಕ್ಷೇ ಗೋರೇತಸ್ಯಾ ಮಾಧ್ಯಮಿಕಾಯಾ ವಾಚಃ ಪುರಾ ಹನನಾದ್ಭಯಮಾನೋ ವ್ಯಾರ ॥ 'ಸುಗಾನ್ ಪಥೋ ಅಕೃಣೋನ್ನಿರಜೇಗಾಃ'॥ ಸುಗಮನಾನ್ ಪಥೋಽಕರೋನ್ನಿರಜನಾಯ ಗವಾಮ್॥' ಪ್ರಾವನ್ವಾಣೀಃ ಪುರುಹೂತಂ ಧಮನ್ತೀಃ" ॥ ಆಪೋ ವಾ ವಹನಾದ್ವಾಚೋ ವಾ ವದನಾತ್॥ ಬಹು-ಭಿರಾಹೂತಮುದಕಂ ಭವತಿ ಧಮತಿರ್ಗತಿಕರ್ಮಾ ॥೧॥೨॥

---

ಅಲಾತೃಣಃ ॥೫॥

ಅಲಾತೃಣೋ ಬಲ ಇನ್ದ್ರ ವ್ರಜೋ ಗೋಃ ಪುರಾ ಹನ್ತೋ-ರ್ಭಯಮಾನೋವ್ಯಾರ ಸುಗಾನ್ ಪಥೋ ಅಕೃಣೋನ್ನಿರಜೋ ಗಾಃ ಪ್ರಾವನ್ವಾಣೀಃ ಪುರುಹೂತಂ ಧಮನ್ತೀಃ ॥ ಅಲಾತೃಣೋಽಲಮಾ-ತರ್ದನೋ ಮೇಘೋ ಬಲೋ ವೃಣೋತೇರ್ವ್ರಜೋ ವ್ರಜತ್ಯನ್ತರಿಕ್ಷೇ ಗೋರೇತಸ್ಯಾ ಮಾಧ್ಯಮಿಕಾಯಾ ವಾಚಃ ಪುರಾ ಹನನಾದ್ಭಯ-

ಮಾನೋ ವ್ಯಾರ। ಸುಗಾನ್ ಪಥೋ ಅಕೃಣೋನ್ನಿರಜೋ ಗಾಃ ಸುಗಮುನಾನ್ ಪಥೋ ಅಕರೋನ್ನಿರ ಜನಾಯ ಗವಾವ್। ಪ್ರಾವ-ನ್ವಾಣೀಃ ಪುರುಹೂತಂ ಧಮನ್ತೀಃ॥ ಆಪೋ ವಾ ವಹನಾದ್ವಾಚೋ ವಾ ವದನಾದ್ ಬಹುಭಿರಾಹೂತಮುದಕಂ ಭವತಿ ಧಮತಿರ್ಗತಿಕರ್ಮಾ ॥೨

ಉದಾಹರಣೆಯ ಋಕ್ಕು—

**ಅಲಾತೃಣೋ ವಲ ಇಂದ್ರ ವ್ರಜೋ ಗೋಃ ಪುರಾ ಹಂತೋರ್ಭಯಮಾನೋ ವ್ಯಾರ ।**
**ಸುಗಾನ್ಪಥೋ ಅಕೃಣೋನ್ನಿರಜೇ ಗಾಃ ಪ್ರಾವನ್ವಾಣೀಃ ಪುರುಹೂತಂ ಧಮಂತೀಃ ॥**
(ಋ. ಸಂ. ೩-೩೦)

ಇದರ ಅರ್ಥವು—

ಎಲೈ ಇಂದ್ರನೇ, ಉದಕದ ಭಾರದಿಂದ ಪೀಡಿತವಾದುದೂ ಮಾಧ್ಯಮಿಕಾವಾಕ್ಕಿಗೆ ಆಶ್ರಯಭೂತವಾದುದೂ ಆದ ಮೇಘವು ನಿನ್ನ ವಜ್ರಾಯುಧದ ಪ್ರಹಾರವಾಗುವುದಕ್ಕೆ ಮೊದಲೇ ಹೆದರಿಕೊಂಡು ಸೀಳಿಹೋಯಿತು. ಅನಂತರ ಇಂದ್ರನು ಉದಕಗಳನ್ನು ಹೊರಕ್ಕೆ ಬಂದು ಪ್ರವಹಿಸುವಂತೆ ಮಾಡಲು ಶ್ರೇಷ್ಠವಾದ ಮಾರ್ಗಗಳನ್ನು ಸೃಷ್ಟಿಸಿದನು. ಕೂಡಲೇ ಆಕರ್ಷಕವೂ ಶಬ್ದಮಾಡತಕ್ಕವೂ ಆದ ಉದಕಗಳು ಅನೇಕರಿಂದ ಅಪೇಕ್ಷಿತವಾದುದೂ ಪಾರ್ಥಿವಸಂಬಂಧವಾದವೂ ಆದ ಉದಕಕ್ಕೆ ಅಭಿಮುಖವಾಗಿ ಪ್ರವಹಿಸಿ ಬಂದವು.

**ಅಲಾತೃಣ** ಎಂದರೆ ಸೀಳುವುದಕ್ಕೆ ಬಹಳ ಸುಲಭವಾಗಿರತಕ್ಕದ್ದು. ಎಂದರೆ ಇಲ್ಲಿ ಮೇಘವೆಂದು ಅರ್ಥವು. **ವಲ** ಶಬ್ದವು ಆಚ್ಛಾದಿಸು, ಮುಚ್ಚು ಎಂದು ಅರ್ಥವಿರುವ **ವೃಣೋತಿ** ಧಾತುವಿನಿಂದ ನಿಷ್ಪನ್ನವಾಗಿದೆ. **ವ್ರಜ** ಎಂಬ ಶಬ್ದವು ಅದೇ ಅರ್ಥವಿರುವ ವ್ರಜತಿಧಾತುವಿನಿಂದ ನಿಷ್ಪನ್ನವಾಗಿದೆ. ಅಂತರಿಕ್ಷದಲ್ಲಿ ಇರುವ ಮಾಧ್ಯಮಿಕಾ ವಾಕ್ಕು ಎಂದರೆ ಸಿಡಿಲು, ಗುಡುಗು ಇವುಗಳು (ಮೇಘಗಳಲ್ಲಿದ್ದು) ವಜ್ರಾಯುಧದ ಪ್ರಹರಣಕ್ಕೆ ಮುಂಚೆಯೇ ಭಯಪಟ್ಟು ತಾನಾಗಿಯೇ ಸೀಳಿಹೋಗಿ ಉದಕವನ್ನು ಸುರಿಸಿತು ಎಂದಭಿಪ್ರಾಯವು.

**ಸುಗಾನ್ಪಥೋ ಅಕೃಣೋನ್ನಿರಜೇಗಾಃ**-ಈ ರೀತಿ ಮೇಘದಿಂದ ಸುರಿಸಲ್ಪಟ್ಟ ಉದಕವು ಗೋವುಗಳ ಸಂಚಾರಕ್ಕೆ ಅನುಕೂಲವಾಗುವಂತೆ ಮಾರ್ಗಗಳನ್ನು ಕಲ್ಪಿಸಿದವು. **ಪ್ರಾವನ್ವಾಣೀಃ ಪುರುಹೂತಂ ಧಮಂತೀಃ**-ಎಲ್ಲರನ್ನೂ ರಕ್ಷಿಸತಕ್ಕ ಹರಿಯುವ (ಅಥವಾ ಸ್ತುತಿಸಲ್ಪಡುವ) ಉದಕಗಳು. ಇಲ್ಲಿ **ಪುರುಹೂತಂ ಬಹುಭಿರಾಹೂತಮುದಕಂ ಭವತಿ**-ಬಹುಜನರು ಅಪೇಕ್ಷಿಸುವ ಉದಕವು ಎಂದರ್ಥವು. ಏಕೆಂದರೆ ಈ ಉದಕಗಳು ಪ್ರವಹಿಸುವ ಸ್ವಭಾವವುಳ್ಳವು. **ವಾಚಃ** ಎಂಬ ಶಬ್ದವೂ **ವಾಣೀ**-ಮಾತು ಎಂಬ ಶಬ್ದದಿಂದ ಹೇಳಲ್ಪಡುವುದು **ಧಮತಿರ್ಗತಿಕರ್ಮಾ**-ಧಮತಿ ಧಾತುವಿಗೆ ಗತ್ಯರ್ಥಕವಾದ ಅರ್ಥವಿರುವುದು ಧಮತಿಧಾತುವು ಸ್ತುತ್ಯರ್ಥಕದಲ್ಲಿ ಹೇಳಲ್ಪಟ್ಟಿದ್ದರೂ ಇಲ್ಲಿ ಧಮತಿಧಾತುವಿಗೆ ಗತ್ಯರ್ಥವೇ ಇರುವುದು.

**ಇತಿ ದ್ವಿತೀಯಖಂಡಃ**

ಇಲ್ಲಿಗೆ ಎರಡನೆಯ ಖಂಡವು ಸಮಾಪ್ತವು

॥ಅಥ ತೃತೀಯಃ ಖಂಡಃ॥

**ಅಥ ಮೂರನೆಯಖಂಡವು**

"ಉದ್ವೃಹ ರಕ್ಷಃ ಸಹಮೂಲಮಿನ್ದ್ರ ವೃಶ್ಚಾ ಮಧ್ಯಂ ಪ್ರತ್ಯಗ್ರಂ ಶೃಣೀಹಿ। ಆ ಕೀವತಃ ಸಲಲೂಕಂ ಚಕರ್ಥ ಬ್ರಹ್ಮದ್ವಿಷೇ ತಪುಷಿಂ ಹೇತಿಮಸ್ಯ॥" ಉದ್ಧರ ರಕ್ಷಃ ಸಹಮೂಲಮಿನ್ದ್ರ। ಮೂಲಂ ಮೋಚನಾದ್ವಾ ಮೋಷಣಾದ್ವಾ ಮೋಹನಾದ್ವಾ। ವೃಶ್ಚ ಮಧ್ಯಂ ಪ್ರತಿ ಶೃಣೀಹ್ಯಗ್ರಮಗ್ರಮಾಗತಂ ಭವತ್ಯಾ ಕಿಯತೋ ದೇಶಾತ್। ಸಲಲೂಕಂ ಸಂಲುಬ್ಧಂ ಭವತಿ ಪಾಪಕಮಿತಿ ನೈರುಕ್ತಾಃ। ಸರರೂಕಂ ವಾ ಸ್ಯಾತ್ಸರ್ತೇರಭ್ಯಸ್ತಾತ್। ತಪುಷಿಸ್ತಪತೇರ್ಹೇ–ತಿರ್ಹನ್ತೇಃ ॥ ೧ ॥

———

ಸಲಲೂಕಂ ॥ ೬ ॥

ಉದಾಹರಣೆಯ ಋಕ್ಕು—

**ಉದ್ವೃಹ ರಕ್ಷಃ ಸಹಮೂಲಮಿಂದ್ರ ವೃಶ್ಚಾ ಮಧ್ಯಂ ಪ್ರತ್ಯಗ್ರಂ ಶೃಣೀಹಿ।**
**ಆ ಕೀವತಃ ಸಲಲೂಕಂ ಚಕರ್ಥ ಬ್ರಹ್ಮದ್ವಿಷೇ ತಪುಷಿಂ ಹೇತಿಮಸ್ಯ॥**

(ಋ. ಸಂ. ೩–೩೦–೧೭)

**ಇದರ ಅರ್ಥವು—**

ಎಲೈ ಇಂದ್ರನೇ, ಕರ್ಮಕ್ಕೆ ವಿಘ್ನಕಾರಿಯಾದ ರಾಕ್ಷಸರನ್ನು ಮೂಲಸಹಿತವಾಗಿ ನಾಶಮಾಡು. ಅವರನ್ನು ಮಧ್ಯಪ್ರದೇಶದಲ್ಲಿ ಕತ್ತರಿಸು. ಅವರ ಅಗ್ರಭಾಗವನ್ನು ನಾಶಪಡಿಸು. ಸ್ವೇಚ್ಛೆಯಾಗಿ ಸಂಚರಿಸತಕ್ಕ ಅಸುರರನ್ನು ಅತ್ಯಂತದೂರವಾದ ದೂರವಾದ ಪ್ರದೇಶಕ್ಕೆ ಓಡಿಸಿಬಿಡು ಬ್ರಾಹ್ಮಣದ್ವೇಷಿಯಾದ ರಾಕ್ಷಸನ ಮೇಲೆ ದಹಿಸತಕ್ಕ ಆಯುಧವನ್ನು ಎಸೆ.

**ಉದ್ಧರ ರಕ್ಷಃ ಸಹಮೂಲಮಿಂದ್ರ**—ಈ ರಾಕ್ಷಸರನ್ನು, ಎಲೈ ಇಂದ್ರನೇ, ಮೂಲಸಹಿತವಾಗಿ ಶೀಘ್ರ ನಾಶಮಾಡು.

**ಮೂಲಂ**—ಬುಡವು ಎಂಬ ಶಬ್ದವು ವಿಮೋಚನೆಮಾಡು ಎಂಬರ್ಥವುಳ್ಳ ಮೋಚನ ಎಂಬ ಶಬ್ದದಿಂದಾಗಲಿ. (ಮುಚ್ಲೃ–ಮೋಕ್ಷಣೇ) ಅಥವಾ ಕದಿ ಎಂಬರ್ಥವುಳ್ಳ **ಮುಷ್** ಧಾತುವಿನಿಂದಾಲಿ, ಭ್ರಾಂತಿಯನ್ನುಂಟುಮಾಡು ಎಂಬರ್ಥವುಳ್ಳ **ಮುಹ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಅಗ್ರಂ–ಮುಂದುಗಡೆ ಎಂಬ ಪದವು **ಆಗತಂ** ಎಂಬ ಶಬ್ದಕ್ಕೆ ಸಂಬಂಧಪಟ್ಟಂತೆ ಇದೆ.

**ಸಲಲೂಕಂ** ಎಂದರೆ ಬುದ್ಧಿ ಕಲ್ಪವಾಗಿರುವವನು ಅಥವಾ ಪಾಪಿಷ್ಠನು ಎಂದು. ಅಥವಾ ಎಲ್ಲೆಲ್ಲಿಯೂ ಸಂಚರಿಸುವವನು. ಈ ಶಬ್ದವು ಸಂಚರಿಸು ಎಂಬರ್ಥವುಳ್ಳ ಸೃಧಾತುವಿನಿಂದ ನಿಷ್ಪನ್ನವಾಗಬಹುದು ಅಥವಾ ಸರಿ ಎಂಬರ್ಥವಿರುವ

ಸರ್ತಿಧಾತುವಿನಿಂದ ನಿಷ್ಪನ್ನವಾದ **ಸರರೂಕಂ** ಎಂಬ ಶಬ್ದದಿಂದಲೂ ನಿಷ್ಪನ್ನವಾಗಬಹುದು. **ತಪುಷಿ**—ಸುಡು, ದಹಿಸು ಎಂಬ ಶಬ್ದವು ಸುಡು ಎಂಬರ್ಥವುಳ್ಳ **ತಪತಿ** ಧಾತುವಿನಿಂದ ನಿಷ್ಪನ್ನವಾಗುವುದು. **ಹೇತಿಃ**—ಆಯುಧವು ಎಂಬ ಶಬ್ದವು ಕೊಲ್ಲು ಎಂದರ್ಥವಿರುವ **ಹನಹಿಂಸಾಗತ್ಯೋಃ** ಕೊಲ್ಲು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

ಕತ್ಪಯಮ್ ॥೭॥

"ತ್ಯಂ ಚಿದಿತ್ಥಾ ಕತ್ಪಯಂ ಶಯಾನಮ್ ।" ಸುಖಪಯಸಮ್ ।

ಸುಖಮಸ್ಯ ಪಯಃ ॥೨॥

ಉದಾಹರಣೆಯ ಋಕ್ಕು—

**ತ್ಯಂಚಿದಿತ್ಥಾ ಕತ್ಪಯಂ ಶಯಾನಮಸೂರ್ಯೇ ತಮಸಿ ವಾವೃಧಾನಂ ।**

**ತಂ ಚಿನ್ಮಂದಾನೋ ವೃಷಭಃ ಸುತಸ್ಯೋಚ್ಚೈರಿಂದ್ರೋ ಅಪಗೂರ್ಯಾ ಜಘಾನ॥**

(ಋ. ಸಂ. ೫-೩೨-೬)

ಇದರ ಅರ್ಥವು—

ಅಭಿಸುತವಾದ ಎಂದರೆ ಹಿಂಡಲ್ಪಟ್ಟ ಸೋಮರಸದ ಪಾನದಿಂದ ಹರ್ಷಗೊಂಡವನೂ ಕಾಮವರ್ಷಕನೂ ಆದ ಇಂದ್ರನು ತನ್ನ ವಜ್ರಾಯುಧವನ್ನು ಮೇಲಕ್ಕೆತ್ತಿ ಅಂತರಿಕ್ಷದಲ್ಲಿ ಸುಖಕರವಾದ ಉದಕದ ಮಧ್ಯದಲ್ಲಿ ಮಲಗಿದ್ದವನೂ ಸೂರ್ಯರಹಿತವಾದ ಅಂಧಕಾರದಲ್ಲಿ ವೃದ್ಧಿಯನ್ನು ಹೊಂದಿದವನೂ ಆದ ವೃತ್ರಾಸುರನನ್ನು ಕೊಂದನು.

**ಕತ್ಪಯಂ—ಸುಖಪಯಸಂ**—ಸುಖಕರವಾದ ಉದಕದಲ್ಲಿ **ಶಯಾನಂ**—ಮಲಗಿರುವ ವೃತ್ರನನ್ನು **ಸುಖಮಸ್ಯ ಪಯಃ** ಪಯಃ ಎಂದರೆ ಉದಕವು. ಈ ಉದಕವು ಈ ವೃತ್ರಾಸುರನಿಗೆ ಹಿತಕರವಾಗಿದ್ದಿತೆಂದು ಅಭಿಪ್ರಾಯವು.

ವಿಸ್ರುಹಃ ॥೮॥

ವಿಸ್ರುಹ ಆಪೋ ಭವನ್ತಿ ವಿಸ್ರವಣಾತ್ । "ವಯಾ ಇವ ರುರುಹುಃ

ಸಪ್ತ ವಿಸ್ರುಹಃ" ಇತ್ಯಪಿ ನಿಗಮೋ ಭವತಿ ॥೩॥

ಉದಾಹರಣೆಯ ಋಕ್ಕು—

**ವೈಶ್ವಾನರಸ್ಯ ವಿಮಿತಾನಿ ಚಕ್ಷಸಾ ಸಾನೂನಿ ದಿವೋ ಅಮೃತಸ್ಯ ಕೇತುನಾ ।**

**ತಸ್ಯೇದು ವಿಶ್ವಾ ಭುವನಾಧಿ ಮೂರ್ಧನಿ ವಯಾ ಇವ ರುರುಹುಃ ಸಪ್ತ ವಿಸ್ರುಹಃ ॥**

(ಋ. ಸಂ. ೬-೭-೬)

ಇದರ ಅರ್ಥವು—

ವೃಷ್ಟ್ಯುದಕಕ್ಕೆ ಪ್ರಜ್ಞಾಪಕವಾದ ವೈಶ್ವಾನರಾಗ್ನಿಯ ತೇಜಸ್ಸಿನಿಂದ ದ್ಯುಲೋಕದ ಸಮುಚ್ಛ್ರಿತ ಪ್ರದೇಶಗಳು ನಿರ್ಮಿತವಾಗಿವೆ. ಅದೇ ವೈಶ್ವಾನರಾಗ್ನಿಯ ಊರ್ಧ್ವಭಾಗದಲ್ಲಿ ಮೇಘರೂಪದಲ್ಲಿ ಪರಿಣತವಾಗಿರುವ ಧೂಮದಲ್ಲಿಯೇ ಸಮಸ್ತ ಉದಕಗಳೂ ನೆಲಸಿವೆ. ಪ್ರವಾಹಾತ್ಮಕಗಳಾದ ಸಪ್ತ ನದಿಗಳೂ ಸಹ ಶಾಖೆಗಳಂತೆ ಈ ವೈಶ್ವಾನರರಿಂದಲೇ ಪ್ರಾದುರ್ಭೂತವಾಗುತ್ತವೆ.

ವಿಸ್ರುಹಃ ಎಂದರೆ ನೀರು ಅಥವಾ ಉದಕಗಳು. ಏಕೆಂದರೆ ಈ ಉದಕಗಳು ನದಿಗಳ ರೂಪದಿಂದ ಪ್ರವಹಿಸುತ್ತವೆ. ಈ ವಿಷಯದಲ್ಲಿ ಮೇಲಿನ ಋಕ್ಕೇ ಉದಾಹರಣೆಯು.

ಮೇಲಿನ ಋಕ್ಕಿನಲ್ಲಿ ವೈಶ್ವಾನರಾಗ್ನಿಯ ವೈಶಿಷ್ಟ್ಯವೂ ವೃಷ್ಟ್ಯುದಕಕ್ಕೆ ಮತ್ತು ನದಿಗಳ ಪ್ರವಾಹಕ್ಕೆ ಹೇಗೆ ಕಾರಣ ನೆಂಬುದನ್ನೂ ಋಕ್ಸಂಹಿತೆಯ ಮತ್ತು ನಿರುಕ್ತದ ನಾನಾ ಭಾಗಗಳಲ್ಲಿರುವ ಕೆಳಗೆ ಕೊಟ್ಟಿರುವ ವಾಕ್ಯಗಳ ಮತ್ತು ಅವುಗಳ ವಿವರಣೆಗಳಿಂದ ಸ್ಪಷ್ಟವಾಗಿ ಗೊತ್ತಾಗುವುದು—

**ವೈಶ್ವಾನರಾಗ್ನಿಯ ಸೂಕ್ಷ್ಮಪರಿಚಯ.**

**ವೈಶ್ವಾನರಃ । ಇತಿ ತ್ರೀಣಿ ಪದಾನಿ ॥ ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ । ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ॥** (ನಿ. ೭-೨೧)

ಈಗ ವೈಶ್ವಾನರಶಬ್ದ ವಿವರಣೆಯನ್ನು ಮಾಡುವೆವು. ಈ ವೈಶ್ವಾನರಶಬ್ದವು **ವಿಶ್ವಾನ್ ನರಾನ್ ನಯತಿ** ಎಂಬ ಮೂರು ಪದಗಳ ಅರ್ಥವನ್ನೊಳಗೊಂಡಿರುವ ದೇವತೆಯನ್ನು ಸೂಚಿಸುವ ಶಬ್ದವಾಗಿದೆ. ವೈಶ್ವಾನರನಿಗೆ ಈ ಹೆಸರು ಏತಕ್ಕೆ ಬಂತು ಎಂದರೆ—ಈ ದೇವನು **ವಿಶ್ವಾನ್ ನರಾನ್ ನಯತಿ**—ಸಮಸ್ತ ಜನರನ್ನೂ ಸನ್ಮಾರ್ಗದಲ್ಲಿ ಒಯ್ಯುತ್ತಾನೆ ಎಂದರೆ ಸಮಸ್ತ ಜನರಿಗೂ ಸನ್ಮಾರ್ಗಪ್ರವರ್ತಕನು. ಆದ್ದರಿಂದ ಈ ದೇವನಿಗೆ ವೈಶ್ವಾನರನೆಂದು ಹೆಸರು. ಅಥವಾ—**ವಿಶ್ವಂ ಏನಂ ನರಾ ನಯಂತೀತಿ ವಾ**—ಅಥವಾ ಸರ್ವರೂ ಈ ದೇವನನ್ನು ತಾವು ಮಾಡುವ ಯಜ್ಞಾದಿಗಳಲ್ಲಿ ಉತ್ತರವೇದಿಗೆ ಒಯ್ಯುವರು ಎಂದರೆ ಯಜ್ಞಗಳಲ್ಲಿ ಅಗ್ನಿಪ್ರಣಯನವೆಂಬ ಕಾರ್ಯವನ್ನು ಮಾಡುವಾಗ ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದ ಸ್ಥಾನ ದಿಂದ ವಿಧ್ಯುಕ್ತವಾಗಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿ ಸ್ಥಾಪಿಸುವರು. ಅಥವಾ ಸರ್ವರೂ ತಮ್ಮ ತಮ್ಮ ಗೃಹಗಳಲ್ಲಿ ಅಗ್ನಿಯನ್ನು ತೆಗೆದುಕೊಂಡು ಹೋಗಿ ಪಚನಕಾರ್ಯಕ್ಕಾಗಿ ಮಹಾನಸ ಮೊದಲಾದ ಸ್ಥಳಗಳಲ್ಲಿ ಸ್ಥಾಪಿಸುವರು. ಆದುದರಿಂದ ಈ ಅಗ್ನಿಗೆ ವೈಶ್ವಾನರನೆಂದು ಹೆಸರು. ಅಥವಾ ವಿಶ್ವಾನರನೇ ವೈಶ್ವಾನರನು. ಈ ವಿಶ್ವಾನರನು ಸಮಸ್ತ ಪ್ರಾಣಿಗಳ ಶರೀರದಲ್ಲಿ ವ್ಯಾಪಿಸಿ ಜಾಠರಾಗ್ನಿ ರೂಪದಿಂದ ಇದ್ದು ಪ್ರಾಣಿಗಳು ಭುಜಿಸುವ ಆಹಾರಾದಿಗಳನ್ನು ಪಚನಮಾಡುವನು. ಆದುದರಿಂದ ಸರ್ವಪ್ರಾಣಿಗಳ ಶರೀರದಲ್ಲಿರುವ ವಿಶ್ವಾನರನೇ ವೈಶ್ವಾನರಾಗ್ನಿಯು.

**ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿ ಶ್ರೀಃ ।**
**ಇತೋ ಜಾತೋ ವಿಶ್ವಮಿದಂ ವಿಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥**

(ಋ. ಸಂ. ೧-೯೮-೧)

ಎಂಬ ಈ ಋಕ್ಕು ವೈಶ್ವಾನರಾಗ್ನಿಯನ್ನು ಸ್ತುತಿಸುವುದು. ನಾವು ವೈಶ್ವಾನರಾಗ್ನಿಯ ಅನುಗ್ರಹಾತ್ಮಕವಾದ ಬುದ್ಧಿಗೆ ಪಾತ್ರ ರಾಗೋಣ. ಏಕೆಂದರೆ ಈ ವೈಶ್ವಾನರಾಗ್ನಿಯು ರಾಜನು. ರಾಜನು ಸಕಲ ಲೋಕಗಳಿಗೂ ಆಶ್ರಯಭೂತನು. ಈ ಪ್ರಪಂಚದಲ್ಲಿ ಉತ್ಪನ್ನನಾಗಿ ಸಮಸ್ತ ವಿಶ್ವವನ್ನೂ ವೀಕ್ಷಿಸುತ್ತಿರುವನು. ಸೂರ್ಯನಿಂದ ಸಹಿತವಾಗಿ ಎಲ್ಲವನ್ನೂ ವ್ಯಾಪಿಸಿರು ವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

## ವೈಶ್ವಾನರಾಗ್ನಿಯು ಯಾರು? ಇವನು ಮಧ್ಯಮಸ್ಥಾನದೇವತೆಯೇ?

ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ । ತತ್ಕೋ ವೈಶ್ವಾನರಃ । ಮಧ್ಯಮ ಇತ್ಯಾಚಾರ್ಯಾಃ ॥

(ನಿ. ೨೨)

ಎಂದು ಈ ಋಕ್ಕಿನ ನಿರ್ವಚನವು. ಈ ವೈಶ್ವಾನರಾಗ್ನಿಯು ಈ ಲೋಕದಲ್ಲಿಯೇ ಜನಿಸಿ ವಿಶ್ವವೆಲ್ಲವನ್ನೂ ನೋಡಲು ಸಮರ್ಥನಾಗಿರುವನು. ಸೂರ್ಯನಿಂದ ಸಹಿತನಾಗಿ ವಿಶ್ವವೆಲ್ಲವನ್ನೂ ವ್ಯಾಪಿಸಿರುವನು. ಇಂತಹ ವೈಶ್ವಾನರಾಗ್ನಿಯ ಉತ್ತಮವಾದ ಬುದ್ಧಿ ಎಂದರೆ ಅನುಗ್ರಹಕ್ಕೆ ಪಾತ್ರರಾಗೋಣ. ಇವನೇ ರಾಜನು ಮತ್ತು ಸೃಷ್ಟಿಸಲ್ಪಟ್ಟ ಸಮಸ್ತ ಪ್ರಾಣಿವರ್ಗಗಳಿಗೂ ಆಶ್ರಯಭೂತನು. ಆದರೆ ಈ ವೈಶ್ವಾನರನು ಯಾರು? ಇವನ ಸ್ವರೂಪವೇನು? ಎಂದರೆ, ಕೆಲವು ಆಚಾರ್ಯರು ಈ ವೈಶ್ವಾನರನು ಮಧ್ಯಮಸ್ಥಾನದಲ್ಲಿ (ಅಂತರಿಕ್ಷದಲ್ಲಿ) ನೆಲಸಿರುವ ದೇವತೆಯೆಂದು ಹೇಳುವರು. ಏಕೆಂದರೆ ಈ ವೈಶ್ವಾನರನೇ ವೃಷ್ಟಿಗೆ (ಮಳೆಗೆ) ಕಾರಣಭೂತನಾಗಿರುವನು ಎಂದು ಅವರ ಅಭಿಪ್ರಾಯವಿರುವುದು. ಆದುದರಿಂದ ವೃಷ್ಟಿಕರ್ಮ ವಿಷಯದಲ್ಲಿ ಈ ವೈಶ್ವಾನರನ ಪಾತ್ರವನ್ನು ವಿವರಿಸುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।
ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್॥

(ಋ. ಸಂ. ೧-೫೯-೬)

ಇಷ್ಟಾರ್ಥಪ್ರದನಾದ ಈ ವೈಶ್ವಾನರಾಗ್ನಿಯ ಮಹಿಮೆಯನ್ನು ನಾನು ವಿಶೇಷವಾಗಿ ವರ್ಣಿಸುವೆನು. ವೃತ್ರಹಂತಕನಾದ ಈ ವೈಶ್ವಾನರಾಗ್ನಿಯನ್ನು ಅನೇಕ ಜನರು ಭಕ್ತಿಯಿಂದ ಸೇವಿಸುವರು. ಈ ವೈಶ್ವಾನರಾಗ್ನಿಯು ದಸ್ಯುವಾದ ವೃತ್ರನನ್ನು ಸಂಹಾರ ಮಾಡಿದನು. ಶಂಬರಾಸುರನನ್ನು (ಮೇಘವನ್ನು) ಸೀಳಿ (ಕೊಂದು) ಮೇಘಗಳಲ್ಲಿ ಸಂಗೃಹೀತವಾಗಿದ್ದ ಉದಕಗಳನ್ನು ಭೂಮಿಯ ಮೇಲೆ ವೃಷ್ಟಿರೂಪದಿಂದ ಉದುರಿ ಬೀಳುವಂತೆ ಮಾಡಿದನು. ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

ಈ ಋಕ್ಕಿನ ನಿರ್ವಚನವು—

ಪ್ರಬ್ರವೀಮಿ ತನ್ಮಹಿತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ । ಪೂರಯಿತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾಃ । ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ರಸಾ ಉಪದಾಸಯತೇ ಕರ್ಮಾಣಿ ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನಚ್ಛಂಬರಂ ಮೇಘಂ ॥

(ನಿ. ೭-೨೩)

ಎಂದು ಇರುವುದು. ಉದಕ ವೃಷ್ಟಿಯನ್ನು ಸುರಿಸುವ ಈ ವೈಶ್ವಾನರಾಗ್ನಿಯ ಮಹಾಮಹಿಮೆಯನ್ನು (ಸಾಮರ್ಥ್ಯಾತಿಶಯವನ್ನು) ನಾನು ವಿಶೇಷರೀತಿಯಿಂದ ವರ್ಣಿಸುವೆನು. ಇಷ್ಟಾರ್ಥಗಳನ್ನು ಬಯಸುವವರೂ, ವೃಷ್ಟಿಯನ್ನು ಅಪೇಕ್ಷಿಸುವವರೂ ಆದ ಜನರು ಪೂಜ್ಯಭಾವದಿಂದ ವೃತ್ರಾಸುರನನ್ನು (ಮೇಘವನ್ನು) ಧ್ವಂಸಮಾಡುವ ಈ ವೈಶ್ವಾನರಾಗ್ನಿಯನ್ನು ಸ್ತುತ್ಯಾದಿಗಳಿಂದ ಸೇವಿಸುವರು. ದಸ್ಯುಶಬ್ದವು ದಸ್ ನಾಶಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಉದಕವನ್ನು ಭೂಮಿಯಮೇಲೆ ಬೀಳದಂತೆ ತಡೆದು ನಾಶಗೊಳಿಸುವ ದುಷ್ಟನು ಎಂಬರ್ಥವನ್ನು ಸೂಚಿಸುವುದು. ವೈಶ್ವಾನರಾಗ್ನಿಯು ಇಂತಹ ದಸ್ಯುವಾದ

ಪ್ರತ್ಯುವಾಚ ಶಕಟಃ ಶಾಕಿನೀ ಗಾವೋ ಜಾಲಮಸ್ಯಂದನಂ ವನಮುದಧಿಃ ಪರ್ವತೋ ರಾಜಾ ದುರ್ಭಿಕ್ಷೇ ನವ ವೃತ್ತಯ ಇತಿ ಸಾ ನಿಗದವ್ಯಾಖ್ಯಾತಾ) ||

---

ಉಪಲಪ್ರಕ್ಷಿಣೀ || ೨೩ ||

ಉಪಲಪ್ರಕ್ಷಿಣ್ಯುಪಲೇಷು ಪ್ರಕ್ಷಿಣಾತ್ಯುಪಲಪ್ರಕ್ಷೇಪಿಣೀ ವಾ |

ಇನ್ದ್ರ ಋಷೀನ್ ಪಪ್ರಚ್ಛ-'ದುರ್ಭಿಕ್ಷೇ ಕೇನ ಜೀವತಿ' ಇತಿ ತೇಷಾಮೇಕಃ ಪ್ರತ್ಯುವಾಚ ಶಕಟಃ ಶಾಕಿನೀ ಗಾವೋ ಜಾಲಮಸ್ಯದ್ದನಂ ವನಮ್ | ಉದಧಿಃ ಪರ್ವತೋ ರಾಜಾ ದುರ್ಭಿಕ್ಷೇ ನವ ವೃತ್ತಯಃ ಇತಿ || ಸಾ ನಿಗದವ್ಯಾಖ್ಯಾತಾ ||

**ಉಪಲಪ್ರಕ್ಷಿಣೀ**— ಎಂದರೆ ಬೀಸುವ ಕಲ್ಲಿನಲ್ಲಿ ಅಕ್ಕಿಯನ್ನು ಹಾಕಿ ಬೀಸುವ ಸ್ತ್ರೀಯು ಎಂದರ್ಥವು. ಅಥವಾ ಕಾದ ಕಲ್ಲಿನ ಮೇಲೆ ಒಡೆಯುವುದಕ್ಕಾಗಿ ಅಕ್ಕಿಯನ್ನು ಹಾಕಿ ಹುರಿಯುವವಳು ಎಂದೂ ಅರ್ಥವು ಒಂದಾನೊಂದು ಕಾಲದಲ್ಲಿ ಇಂದ್ರನು ಋಷಿಗಳನ್ನು ಕುರಿತು ಕೆಲವು ಪ್ರಶ್ನೆಗಳನ್ನು ಕೇಳಿದನು. ಅವುಗಳಲ್ಲಿ ಇದೂ ಒಂದು, ಏನೆಂದರೆ, ದುರ್ಭಿಕ್ಷ ಕಾಲದಲ್ಲಿ (ಎಂದರೆ ಕ್ಷಾಮಕಾಲದಲ್ಲಿ) ಜೀವಿಸುವುದು ಹೇಗೆ ಎಂದು ಅದಕ್ಕೆ ಋಷಿಗಳು ಇಂತು ಪ್ರತ್ಯುತ್ತರವನ್ನು ಹೇಳಿದರು— **ಶಕಟಃ**—ಗಾಡಿಯು **ಶಾಕಿನೀ** ಸೊಪ್ಪುಸೊದೆಗಳು, **ಗಾವಃ**- ಹಸುಗಳು, **ಜಾಲಂ**-ಮೀನುಹಿಡಿಯುವಬಲೆ, **ಅಸ್ಯಂದನಂ** ಹರಿಯುವ ನೀರನ್ನು ತಡೆಗಟ್ಟುವುದು. ವನಂ-ಅರಣ್ಯವು **ಉದಧಿಃ**—ಸಮುದ್ರವು' **ಪರ್ವತಃ**—ಬೆಟ್ಟವು, **ರಾಜಾ**— ದೊರೆಯು ಈ ಒಂಬತ್ತು ವಿಧಗಳಲ್ಲಿ ಯಾವುದನ್ನಾದರೂ ಆಶ್ರಯಿಸಿ ಜೀವಿಸಬೇಕೆಂದು ಋಷಿಗಳು ಹೇಳಿದರೆಂದು ಪ್ರತೀತಿ ಇದೆ. ಈ ವಿಷಯವು ಕೆಳಗಿನ ಶ್ಲೋಕದಲ್ಲಿ ಹೇಳಿದೆ—

**ಶಕಟಃ ಶಾಕಿನೀ ಗಾವೋ ಜಾಲಮಸ್ಯಂದನಂ ವನಂ |**
**ಉದಧಿಃ ಪರ್ವತೋ ರಾಜಾ ದುರ್ಭಿಕ್ಷೇ ನವ ವೃತ್ತಯ ಇತಿ ||**

ಈ ಶ್ಲೋಕವನ್ನು ನಿರುಕ್ತಕಾರರೇ ಉದಾಹರಿಸಿರುವರು. **ಉಪಲಪ್ರಕ್ಷಿಣೀ** ಎಂಬ ಶಬ್ದವನ್ನು ಮುಂದಿನ ಋಕ್ಕಿನಲ್ಲಿ ವಿವರಿಸಲಾಗುವುದು.

**ಇತಿ ಪಂಚಮಃ ಖಂಡಃ**

ಇಲ್ಲಿಗೆ ಐದನೆಯ ಖಂಡವು ಸಮಾಪ್ತವು

---

## ಷಷ್ಠಃ ಖಂಡಃ

**ಆರನೆಯ ಖಂಡವು**

ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ । ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇನ್ದೋ ಪರಿ ಸ್ರವ ॥ ಕಾರುರಹಮಸ್ಮಿ ಕರ್ತಾ ಸ್ತೋಮಾನಾಂ ತತೋ ಭಿಷಕ್ ತತ ಇತಿ ಸನ್ತಾನನಾಮ ಪಿತುರ್ವಾ ಪುತ್ರಸ್ಯ ವೋಪಲಪ್ರಕ್ಷಿಣೀ ಸಕ್ತುಕಾರಿಕಾ ನನಾ ನಮತೇರ್ಮಾತಾ ವಾ ದುಹಿತಾ ವಾ ನಾನಾಧಿಯೋ ನಾನಾ-ಕರ್ಮಾಣೋ ವಸೂಯವೋ ವಸುಕಾಮಾ ಅನ್ವಾಸ್ಥಿತಾ ಸ್ಮೋ ಗಾವ ಇವ ಲೋಕಮಿಂದ್ರಾಯೇನ್ದೋ ಪರಿ ಸ್ರವೇತ್ಯಧ್ಯೇಷಣಾ । ಆಸೀನ ಊರ್ಧ್ವಾಮುಪಸಿ ಕ್ಷಿಣಾತಿ । ಉಪಸ್ಥೇ ಪ್ರಕಲವಿತ್ ವಣಿಗ್ಭವತಿ ಕಲಾಶ್ಚ ವೇದ ಪ್ರಕಲಾಶ್ಚ । ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾ ಇತ್ಯಪಿ ನಿಗಮೋ ಭವತ್ಯಭ್ಯರ್ಧಯಜ್ವಾಭ್ಯರ್ಧಯನ್ಯಜತಿ । ಸಿಷಕ್ತಿ ಪೂಷಾ ಅಭ್ಯರ್ಧಯಜ್ವೇತ್ಯಪಿ ನಿಗಮೋ ಭವತೀಕ್ಷ ಈಶಿಷೇ । ಈಕ್ಷೇ ಹಿ ವಸ್ವ ಉಭಯಸ್ಯ ರಾಜನ್ನಿತ್ಯಪಿ ನಿಗಮೋ ಭವತಿ । ಕ್ಷೋಣಸ್ಯ ಕ್ಷಯಣಸ್ಯ । ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯೇತ್ಯಪಿ ನಿಗಮೋ ಭವತಿ ॥ ೬ ॥

---

“ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ । ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇನ್ದ್ರಾಯೇನ್ದೋ ಪರಿ ಸ್ರವ ॥”
ಕಾರುರಹಮಸ್ಮಿ ಕರ್ತಾ ಸ್ತೋಮಾನಾಮ್ । ತತೋ ಭಿಷಕ್, ತತ ಇತಿ ಸನ್ತಾನನಾಮ ಪಿತುರ್ವಾ ಪುತ್ರಸ್ಯ ವಾ ॥ ಉಪಲಪ್ರಕ್ಷಿಣೀ ಸಕ್ತುಕಾರಿಕಾ । ನನಾ ನಮತೇರ್ಮಾತಾ ವಾ ದಹಿತಾ ವಾ ॥ ನಾನಾ-ಧಿಯೋ ನಾನಾಕರ್ಮಾಣೋ ವಸೂಯವೋ ವಸುಕಾಮಾ ಅನ್ವಾ-ಸ್ಥಿತಾಃ ಸ್ಮೋ ಗಾವ ಇವ ಲೋಕಮ್ । ಇನ್ದ್ರಾಯೋನ್ದೋಪರಿ ಸ್ರವ ಇತ್ಯಧ್ಯೇಷಣಾ ॥ ೧ ॥ ೫ ॥

ಉದಾಹರಣೆಯ ಋಕ್ಕು—

**ಕಾರುರಹಂ ತತೋ ಭಿಷಗುಪಲಪ್ರಕ್ಷಿಣೀ ನನಾ ।**
**ನಾನಾಧಿಯೋ ವಸೂಯವೋಽನು ಗಾ ಇವ ತಸ್ಥಿಮೇಂದ್ರಾಯೇಂದೋ ಪರಿ ಸ್ರವ ॥**

(ಋ. ಸಂ. ೯-೧೧೨-೩)

ಇದರ ಅರ್ಥವು—

ನಾನು ಸ್ತುತಿಕರ್ತನಾಗಿದ್ದೇನೆ. ನನ್ನ ಪಿತೃವು ವೈದ್ಯನಾಗಿದ್ದಾನೆ. ನಮ್ಮ ತಾಯಿಯು ಬೀಸುವ ಕಲ್ಲಿನಲ್ಲಿ ಬೀಸಲು ಕಾಳನ್ನು ಹಾಕಿ ಬೀಸುತ್ತಾಳೆ. ಗೋವುಗಳು ಕೊಟ್ಟಿಗೆಯನ್ನಾಶ್ರಯಿಸಿರುವಂತೆ ಅನೇಕ ವಿಧವಾದ ಕರ್ಮವುಳ್ಳವರೂ, ಧನಾಪೇಕ್ಷಿಗಳೂ ಆದ ನಾವು ಈ ಲೋಕದಲ್ಲಿ ನಾನಾವಿಧವಾದ ಸ್ಥಿತಿಯನ್ನು ಹೊಂದಿದ್ದೇವೆ. ಎಲೈ ಸೋಮನೇ, ಇಂದ್ರಾರ್ಥವಾಗಿ ಪ್ರವಹಿಸು.

ಈ ಸೂಕ್ತದ ಪ್ರಾರಂಭದಲ್ಲಿ ಭಾಷ್ಯಕಾರರು—**ಋಷಿರೇತದಾದಿಭಿಸ್ತ್ರಿಭಿಃ ಸೂಕ್ತೈಃ ಅಪರಿಸ್ರವತಃ ಸೋಮಸ್ಯಾಜಾಮಿತ್ವಾಯ ಮನಸೋ ವಿನೋದನಂ ಕುರ್ವನ್ನಾಹ** ಎಂದು ಹೇಳಿದಾರೆ. ಈ ಸೂಕ್ತದ್ರಷ್ಟೃವಾದ ಶಿಶುಋಷಿಯು ಯಜ್ಞ ಮಾಡುತ್ತಿರುವಾಗ ಸೋಮಾಭಿಷವಕಾಲದಲ್ಲಿ ಸೋಮಲತೆಗಳನ್ನು ಜಜ್ಜಿ ಹಿಂಡುತ್ತಿದ್ದರೂ ಸೋಮರಸವು ಸರಿಯಾಗಿ ಜಿನುಗದೆ ಹರಿದು ಬರುವುದನ್ನು ಗಮನಿಸಿ—**ಸ್ವದುಷ್ಕೃತಾಶಂಕಯಾಕಿಲಾಪರಿಸ್ರವತಿ ಸೋಮೋ ಪಾಪಸಂಕೀರ್ತನಾದಾತ್ಮಶುದ್ಧಿರ್ಭವಿಷ್ಯತೀತಿ ಮನ್ಯಮಾನ ಆತ್ಮಾನಮೇವ ನಿರ್ದಿಶನ್ನಾಹ**—ನಾನು ಮಾಡಿರುವ ಪಾಪಗಳಿಂದ ಈ ರೀತಿ ಸೋಮವು ಲತೆಗಳಿಂದ ಹೊರ ಹೊರಡುತ್ತಿಲ್ಲ. ಆದ್ದರಿಂದ ನನ್ನ ಪಾಪಗಳನ್ನು ನಾನು ಮತ್ತು ನನಗೆ ಸಂಬಂಧಪಟ್ಟವರು ಮಾಡುತ್ತಿರುವ ಕರ್ಮಗಳನ್ನು ಸ್ಪಷ್ಟವಾಗಿ ಇತರರಿಗೆ ಕೇಳಿಸುವಂತೆ ಹೇಳಿದಲ್ಲಿ ಆ ಪಾಪವು ಶಮನವಾಗುವುದೆಂದು ತಿಳಿದು ತನ್ನ ಮತ್ತು ತನ್ನ ಪಿತೃವೇ ಮೊದಲಾದವರ ಕಾರ್ಯಕಲಾಪಗಳನ್ನು ಈ ಸೂಕ್ತದ ಋಕ್ಕುಗಳಲ್ಲಿ ವಿವರಿಸಿದ್ದಾನೆ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಕಾರುರಹಮಸ್ಮಿ ಕರ್ತಾ ಸ್ತೋಮಾನಾಂ । ತತೋ ಭಿಷಕ್ ತತ ಇತಿ ಸಂತಾನನಾಮ ಪಿತುರ್ವಾ ಪುತ್ರಸ್ಯ ವಾ । ಉಪಲಪ್ರಕ್ಷಿಣೀ ಸಕ್ತುಕಾರಿಕಾ । ನನಾ ನಮತೇರ್ಮಾತಾ ವಾ ದುಹಿತಾ ವಾ ನಾನಾಧಿಯೋ ನಾನಾಕರ್ಮಾಣೋ ವಸೂಯವೋ ವಸುಕಾಮಾ ಅನ್ವಾಸ್ಥಿತಾಃ ಸ್ಮೋ ಗಾವ ಇವ ಲೋಕಂ । ಇಂದ್ರಾಯೇಂದೋ ಪರಿಸ್ರವ ಇತ್ಯಧ್ಯೇಷಣಾ ॥**

(ನಿ. ೬-೫)

ಎಂದರೆ ನಾನು ಸ್ತುತಿಕರ್ತನು, ಸ್ತುತಿವಾಕ್ಯಗಳನ್ನು ರಚಿಸಿ ದೇವತೆಗಳ ಪ್ರೀತ್ಯರ್ಥವಾಗಿ ಅರ್ಪಿಸುವವನು ; ನನ್ನ ತಂದೆಯು ರೋಗಚಿಕಿತ್ಸೆ ಮಾಡುವ ವೈದ್ಯನು. ಇಲ್ಲಿ ತತಃ ಎಂಬ ಶಬ್ದವು ಸಂತತಿಯನ್ನು ನಿರ್ದೇಶಿಸುವುದರಿಂದ ಈ ಶಬ್ದಕ್ಕೆ ತಂದೆ ಅಥವಾ ಪುತ್ರನೆಂದು ಅರ್ಥವಾಗಬಹುದು. ಭಿಷಕ್ ಶಬ್ದಕ್ಕೆ ಭಾಷ್ಯಕಾರರು ಮತ್ತು ನಿರುಕ್ತ ಭಾಷ್ಯಕಾರರೂ ವೈದ್ಯನೆಂಬ ಅರ್ಥವನ್ನು ಬೇರೆ ಬೇರೆ ವಿಧವಾಗಿ ಅರ್ಥವಿವರಣೆಮಾಡಿದಾರೆ. ಇಲ್ಲಿ ರೋಗಗಳೆಂದರೆ ಯಜ್ಞಾದಿಗಳಲ್ಲಿ ಸಂಭವಿಸುವ ಲೋಪದೋಷಗಳೆಂದೂ ಅವುಗಳನ್ನು ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುವ ಬ್ರಹ್ಮನೆಂಬ ಋತ್ವಿಜನೇ ವೈದ್ಯನೆಂದೂ ವಿವರಣೆಮಾಡಿದಾರೆ. ನನಾ ಶಬ್ದಕ್ಕೆ ಎರಡುವಿಧ ಅರ್ಥವಿರುವುದು- ತಾಯಿ ಮತ್ತು ಮಗಳು ಎಂದು. ನಮಸ್ಕಾರಮಾಡುವುದಕ್ಕೆ ಯೋಗ್ಯಳಾಗಿರುವುದರಿಂದ ತಾಯಿಯೆಂದೂ, ತನ್ನನ್ನೇ ನಮಸ್ಕಾರ ಮಾಡುವವಳಾದ್ದರಿಂದ ಮಗಳೆಂದೂ ಎರಡು ವಿಧವಾಗಿ ಅರ್ಥ

ಮಾಡಬಹುದು. ಆದ್ದರಿಂದ ನನಾ ಎಂದರೆ ನನ್ನ ತಾಯಿ ಅಥವಾ ಪುತ್ರಿಯು ಬೀಸುವ ಕಲ್ಲಿನಿಂದ ಹಿಟ್ಟನ್ನು ಬೀಸುತ್ತಿರುವಳು ಆದ್ದರಿಂದ ನಮ್ಮ ಮನೆಯವರೆಲ್ಲರೂ ಯಜ್ಞಾರ್ಥವಾಗಿ ನಾನಾ ಕಾರ್ಯಗಳಲ್ಲಿ ತೊಡಗಿರುವೆವು. ಮತ್ತು ಧನಾಪೇಕ್ಷಿಗಳಾದ ನಾವು, ಗೋವುಗಳು ತಮ್ಮ ಕೊಟ್ಟಿಗೆಗಳಿಗೆ ಯಾವರೀತಿ ಹೋಗುತ್ತವೆಯೋ ಹಾಗೆ ನಮ್ಮ ನಮ್ಮ ಕರ್ತವ್ಯಕರ್ಮಗಳಲ್ಲಿ ನಿರತ ರಾಗಿರುತ್ತೇವೆ. ಆದ್ದರಿಂದ ಎಲೈ ಸೋಮನೆ, ಇಂದ್ರನ ಪಾನಾರ್ಥವಾಗಿ ಲತೆಗಳಿಂದ ಬೇಗನೆ ಸ್ರವಿಸಿ ಹರಿದು ಬಾ ಎಂದು ನಿರ್ವಚನಾಭಿಪ್ರಾಯವು.

ಉಪಸಿ ॥ ೨೪ ॥

"ಆಸೀನ ಊರ್ಧ್ವಾಮುಪಸಿ ಕ್ಷಿಣಾತಿ" । ಉಪಸ್ಥೇ ॥ ೧ ॥

**ಉಪಸಿ** ಎಂಬ ಶಬ್ದಕ್ಕೆ—**ಆಸೀನ ಊರ್ಧ್ವಾಮುಪಸಿ ಕ್ಷಿಣಾತಿ ಉಪಸ್ಥೇ** ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ, **ಉಪಸಿ ಆತ್ಮನ ಉಪಸ್ಥಾನೇ ಅಂತರಿಕ್ಷಲೋಕೇ** ತನ್ನ ಸಮೀಪಪ್ರದೇಶವಾದ ಅಂತರಿಕ್ಷಪ್ರದೇಶದಲ್ಲಿ ಎಂದು ಅರ್ಥವು.

ಉದಾಹರಣೆಯ ಋಕ್ಕು—

**ಪತ್ತೋಜಗಾರ ಪ್ರತ್ಯಂಚಮತ್ತಿ ಶೀರ್ಷ್ಣಾ ಶಿರಃ ಪ್ರತಿ ದಧೌ ವರೂಥಂ ।**
**ಆಸೀನ ಊರ್ಧ್ವಾಮುಪಸಿ ಕ್ಷಿಣಾತಿ ನ್ಯಙ್ಙುತ್ತಾನಾಮನ್ವೇತಿ ಭೂಮಿಂ ॥**
(ಋ. ಸಂ. ೧೦–೨೭–೧೩)

ಇದರ ಅರ್ಥವು—

ಇಂದ್ರನು ತನ್ನ ರಶ್ಮಿರೂಪವಾದ ಪಾದಗಳಿಂದ ವೃಷ್ಟಿಯನ್ನು ಹಿಡಿದಿದ್ದ ತನಗೆ ಅಭಿಮುಖವಾಗಿ ಪ್ರಸರಿಸುವ ಉದಕ ವನ್ನು ಶಿರಃ ಸ್ಥಾನೀಯವಾದ ರಶ್ಮಿಗಳಿಂದ ತಲೆಯ ಮೇಲೆ ಎತ್ತಿ ಹಿಡಿದಿದ್ದಾನೆ. ಅಂತರಿಕ್ಷ ಮಂಡಲದಲ್ಲಿ ಕುಳಿತು ಮೇಲ್ಭಾಗಕ್ಕೆ ಪ್ರಸರಿಸುವ ಕಾಂತಿಯನ್ನು ಹರಡುತ್ತಾನೆ. ಅಧೋಭಾಗಕ್ಕೆ ಪ್ರಸರಿಸುವ ರಶ್ಮಿಗಳಿಂದ ವಿಸ್ತೃತವಾಗಿ ಹರಡಿದ ಭೂಮಿಯನ್ನು ವ್ಯಾಪಿಸುತ್ತಾನೆ.

ಪ್ರಕಲವಿತ್ ॥೨೫॥

ಪ್ರಕಲವಿದ್ವಣಿಗ್ಭವತಿ ಕಲಾಶ್ಚ ವೇದ ಪ್ರಕಲಾಶ್ಚ । 'ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾಃ'। ಇತ್ಯಪಿ ನಿಗಮೋ ಭವತಿ ॥೨॥

ಉದಾಹರಣೆಯ ಋಕ್ಕು—

**ಇಂದ್ರೇಣೈತೇ ತೃತ್ಸವೋ ವೇವಿಷಾಣಾ ಅಪೋ ನ ಸೃಷ್ಟಾ ಅಧವಂತ ನೀಚೀಃ ।**
**ದುರ್ಮಿತ್ರಾಸಃ ಪ್ರಕಲವಿನ್ಮಿಮಾನಾ ಜಹುರ್ವಿಶ್ವಾನಿ ಭೋಜನಾ ಸುದಾಸೇ ॥**
(ಋ. ಸಂ. ೭–೧೮–೧೫)

ಇದರ ಅರ್ಥವು—

ನಂಬಿಕೆಗೆ ಅನರ್ಹರೂ ಶತ್ರುರೂಪರೂ ಅವಿವೇಕಿಗಳೂ ಆದ ಈ ತೃತ್ಸುಗಳು ಇಂದ್ರನೊಡನೆ ಯುದ್ಧಮಾಡಬೇಕೆಂಬ ಹಠದಿಂದ ಪ್ರಯತ್ನಿಸಿ ಕೈಲಾಗದೆ ಪಲಾಯನಕ್ಕೆ ಉದ್ಯುಕ್ತರಾಗಿ ಅಧೋಭಾಗಕ್ಕೆ ಪ್ರವಹಿಸುವ ನೀರಿನ ಪ್ರವಾಹದಂತೆ ವೇಗ

ವಾಗಿ ಓಡಿಹೋದರು. ಅನಂತರ ಸುದಾಸನಿಂದ ಹಿಂಸಿತರಾದ ಶತ್ರುಗಳು ಸಮಸ್ತ ಭೋಗಸಾಮಗ್ರಿಗಳನ್ನು ಸಹ ಸುದಾಸನ ವಶಕ್ಕೆ ಬಿಟ್ಟುಕೊಟ್ಟರು.

**ಪ್ರಕಲವಿತ್**—ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ನಿರ್ವಚನವನ್ನು ಹೇಳಿದಾರೆ—

**ಪ್ರಕಲವಿತ್** ಎಂದರೆ ವ್ಯಾಪಾರಮಾಡುವ ವಣಿಗ್ಜನ, ವರ್ತಕ ಎಂದರ್ಥವು. ಇವನು ತನ್ನ ವ್ಯಾಪಾರದಲ್ಲಿ ಲಾಭ ಬರಬೇಕೆಂಬ ಉದ್ದೇಶದಿಂದ ವ್ಯಾಪಾರಾದಿ ವಿಷಯಗಳಲ್ಲಿ ಸಣ್ಣದು, ದೊಡ್ಡದು ಎಂದು ಭೇದವಿಲ್ಲದೆ ಸಣ್ಣ ಸಣ್ಣ ವಿಷಯಗಳನ್ನು ಸಹ ಚೆನ್ನಾಗಿ ತಿಳಿದುಕೊಂಡಿರುವನು. ಮತ್ತು ವ್ಯಾಪಾರಮಾಡುವಾಗ ನ್ಯಾಯಾನ್ಯಾಯವನ್ನು ಗಮನಿಸದೆ ತನ್ನ ಲಾಭದ ಮೇಲೆಯೇ ದೃಷ್ಟಿಯಿಟ್ಟು ಕೆಟ್ಟಬುದ್ಧಿಯಿಂದ ಪ್ರವರ್ತಿಸುವನು. ಎಂದರೆ ವ್ಯಾಪಾರದಲ್ಲಿ ಮೋಸಮಾಡಲು ಹಿಂಜರಿಯುವುದಿಲ್ಲ. ಆದ್ದರಿಂದ ಅಧರ್ಮಪ್ರವರ್ತಕರು, ದುಷ್ಟಜನರು, ಮೋಸಗಾರರು ಮೊದಲಾದ ದುಷ್ಟಜನರನ್ನು ನಿರ್ದೇಶಿಸುವಾಗ ವಣಿಗ್ಜರನ್ನು ದೃಷ್ಟಾಂತವಾಗಿ ಹೇಳುವುದು ರೂಢಿಯಲ್ಲಿದೆ.

ಅಭ್ಯರ್ಧಯಜ್ವಾ ॥ ೨೬ ॥
ಅಭ್ಯರ್ಧಯಜ್ವಾಭ್ಯರ್ಧಯನ್ಯಜತಿ । ‘ ಸಿಷಕ್ತಿ ಪೂಷಾ ಅಭ್ಯರ್ಧ-
ಯಜ್ವಾ ’ ಇತ್ಯಪಿ ನಿಗಮೋ ಭವತಿ ॥ ೩ ॥

ಉದಾಹರಣೆಯ ಋಕ್ಕು—

**ಮಿಮ್ಯಕ್ಷ ಯೇಷು ರೋದಸೀ ನು ದೇವೀ ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ।**
**ಶ್ರುತ್ವಾ ಹವಂ ಮರುತೋ ಯದ್ಧ ಯಾಥ ಭೂಮಾ ರೇಜಂತೇ ಅಧ್ವನಿ ಪ್ರವಿಕ್ತೇ**

(ಋ. ಸಂ. ೬-೫೦-೫)

ಇದರ ಅರ್ಥವು—

ಎಲೈ ಮರುತ್ತುಗಳೇ, ಯಾವ ನಿಮ್ಮಲ್ಲಿ ರುದ್ರಪತ್ನಿಯೂ ಪ್ರಕಾಶಮಾನಳೂ ಆದ ಮಾಧ್ಯಮಿಕಾ ವಾಗ್ದೇವಿಯು ಒಂದಿಗೆ ಕೂಡಿಕೊಂಡಿರುವಳೋ ಹಾಗೆಯೇ ಸ್ತೋತೃಗಳನ್ನು ಧನದಾನದಿಂದ ಪ್ರವೃದ್ಧರಾಗುವಂತೆ ಮಾಡುವ ಪೂಷದೇವನು ಯಾವ ನಿಮ್ಮನ್ನು ಸೇವಿಸುವನೋ ಅಂತಹ ನೀವು ನಮ್ಮ ಆಹ್ವಾನವನ್ನು ಕೇಳಿ ಯಾವಾಗ ಬರುವಿರೋ ಆಗ ನಿಮ್ಮ ಸಂಚಾರಕ್ಕಾಗಿ ಸಿದ್ಧವಾಗಿರುವ ಮಾರ್ಗದಲ್ಲಿರುವ ಸಕಲ ಭೂತಜಾತಗಳೂ ಭಯದಿಂದ ಕಂಪಿಸುತ್ತವೆ.

ಈ ಋಕ್ಕಿನಲ್ಲಿರುವ **ಅಭ್ಯರ್ಧಯಜ್ವಾ** ಎಂಬ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ ಮತ್ತು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿದ್ದಾರೆ—

**ಅಭ್ಯರ್ಧಯಜ್ವಾಭ್ಯರ್ಧಯನ್ಯಜತಿ । ಸಿಷಕ್ತಿ ಪೂಷಾ ಅಭ್ಯರ್ಧಯಜ್ವಾ ಇತ್ಯಪಿ ನಿಗಮೋ ಭವತಿ ॥**

(ನಿ. ೬-೬)

ಈ ನಿರ್ವಚನಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುತ್ತಾ—**ಅಭ್ಯರ್ಧಯಜ್ವಾ ಇತ್ಯನವಗತಂ ಅಭ್ಯರ್ಧಃ ಯದ್ ಅಭಿವರ್ಧಯನ್ ಯೋ ಯಜತಿ । ಅಭ್ಯರ್ಧಯತಿರತ್ರ ದಾನಾರ್ಥಃ ।** ಅಭಿವೃದ್ಧಿಯನ್ನು ಹೊಂದುವ

ಧನಾದಿಗಳನ್ನು ತನ್ನನ್ನು ಸ್ತೋತ್ರಮಾಡುವ ಪುರುಷನಿಗೆ ಕೊಡುವವನು ಅಥವಾ ತನ್ನನ್ನು ಸ್ತೋತ್ರಮಾಡುವವನಿಗೆ ಧನಾದಿಸಮೃದ್ಧಿಯನ್ನುಂಟುಮಾಡಿ ಅವನು ಅಭಿವೃದ್ಧಿಯಾಗುವಂತೆ ಮಾಡುವವನು ಎಂದು ಪೂಷದೇವನ ಗುಣ ಪ್ರಶಂಸೆಯು ಇಲ್ಲಿ ಉಕ್ತವಾಗಿದೆ. **ಅಭ್ಯರ್ಧಯತಿರತ್ರ ದಾನಾರ್ಥಃ ।** **ಅಭ್ಯರ್ಧಯನ್** ಎಂಬ ಶಬ್ದಕ್ಕೆ ಇಲ್ಲಿ ಕೊಡುವುದೆಂದರ್ಥವು. ಏನನ್ನು ಕೊಡುವುದು ಎಂದರೆ ಸೋತ್ರಮಾಡುವವನಿಗೆ ಇಷ್ಟವಾದ ವಸ್ತುಗಳನ್ನಾಗಲಿ, ಅಪೇಕ್ಷಣೀಯವಾದ ಧನಾದಿಗಳನ್ನಾಗಲಿ ಕೊಡುವುದೆಂದಭಿಪ್ರಾಯವು. ಈ ಶಬ್ದದ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಈ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿರುವರು.

**ಯದ್ಧ ಯಾಥ ಪ್ರವಿಕ್ತೇ ಅಧ್ವನಿ ಭೂಮಾ ರೇಜಂತೇ**—ಎಲೈ ಮರುದ್ದೇವತೆಗಳೇ, ನಿಮಗಾಗಿ ಸಂಚಾರಕ್ಕಾಗಿ ಪ್ರತ್ಯೇಕವಾಗಿ ನಿರ್ದಿಷ್ಟವಾಗಿರುವ ಮಾರ್ಗದಲ್ಲಿ ನೀವು ಬರುವಾಗ ಎಂದರೆ ಸಂಚರಿಸುವಾಗ (ರಭಸದಿಂದ ಬೀಸುವಾಗ) ಸಮಸ್ತ ಭೂತಜಾತಗಳೂ ಎಂದರೆ ಪ್ರಾಣಿಗಳೂ ಭಯದಿಂದ ನಡಗುತ್ತವೆ ಎಂದು ಮರುದ್ದೇವತೆಗಳ ಅಸಾಧಾರಣ ಶಕ್ತಿಸಾಮರ್ಥ್ಯಗಳನ್ನು ವರ್ಣಿಸಿ ಈ ವಿಷಯದಲ್ಲಿ—**ಪ್ರ ವೇಪಯಂತಿ ಪರ್ವತಾನ್ ವಿ ವಿಂಚಂತಿ ವನಸ್ಪತೀನ್** (ಋ. ಸಂ. ೧-೩೯-೫) ಮರುದ್ದೇವತೆಗಳು ರಭಸದಿಂದ ಸಂಚರಿಸುವಾಗ ಅಚಲವೆಂದು ಪ್ರಸಿದ್ಧವಾದ ಪರ್ವತಗಳನ್ನೂ ನಡುಗುವಂತೆ ಮಾಡುವರು. ವನದಲ್ಲಿರುವ ದೊಡ್ಡ ದೊಡ್ಡ ವೃಕ್ಷಗಳನ್ನೂ ಬುಡಸಹಿತ ಉರುಳಿಸುವರು ಎಂದು ಅರ್ಥವಿರುವ ಶ್ರುತಿವಾಕ್ಯವನ್ನು ಉದಾಹರಣೆಯಾಗಿ ಕೊಟ್ಟು ಭಾಷ್ಯಕಾರರು ಅರ್ಥವನ್ನು ವಿವರಿಸಿರುವರು.

ಈಕ್ಷೇ ॥ ೨೭ ॥

ಈಕ್ಷ ಈಶಿಷೇ । 'ಈಕ್ಷೇ ಹಿ ವಸ್ವ ಉಭಯಸ್ಯ ರಾಜನ್' ಇತ್ಯಪಿ ನಿಗಮೋ ಭವತಿ ॥ ೪ ॥

ಉದಾಹರಣೆಯ ಋಕ್ಕು—

**ನೃವತ್ತ ಇಂದ್ರ ನೃತಮಾಭಿರೂತೀ ವಂಸೀಮಹಿ ವಾಮಂ ಶ್ರೋಮತೇಭಿಃ ।**
**ಈಕ್ಷೇ ಹಿ ವಸ್ವ ಉಭಯಸ್ಯ ರಾಜನ್ಧಾ ರತ್ನಂ ಮಹಿ ಸ್ಥೂರಂ ಬೃಹಂತಂ ॥**
(ಋ. ಸಂ. ೬-೧೯-೧೦)

ಇದರ ಅರ್ಥವು—

ಎಲೈ ಇಂದ್ರನೇ, ನಿನ್ನಿಂದ ದತ್ತವಾದುದೂ ಮಾರ್ಗದರ್ಶಕಗಳಾದ ರಕ್ಷಣೆಗಳೊಡನೆ ಕೂಡಿದುದೂ ಪುತ್ರಾದಿಯುಕ್ತವಾದುದೂ ಯಶಸ್ಸುಗಳಿಂದ ಕೂಡಿದುದೂ ಆಕರ್ಷಕವಾದುದೂ ಆದ ಧನವನ್ನು ನಾವು ಅನುಭವಿಸುವಂತಾಗಲಿ. ಪ್ರಭುವಾದ ಎಲೈ ಇಂದ್ರನೇ, ಯಾವ ಕಾರಣದಿಂದ ದ್ಯಾವಾಪೃಥಿವಿಗಳೆರಡಕ್ಕೂ ಸೇರಿದ ಧನಕ್ಕೆಲ್ಲಾ ನೀನು ಒಡೆಯನಾಗಿದ್ದೀಯೋ ಆ ಕಾರಣದಿಂದಲೇ ಮಹತ್ತಾದುದೂ ವಿಸ್ತೃತವಾದುದೂ ಅಧಿಕಗುಣವುಳ್ಳದ್ದೂ ರಮಣೀಯವಾದುದೂ ಆದ ಧನವನ್ನು ನಮಗೆ ಕೊಡು

**ಈಕ್ಷೇ—ಈಕ್ಷ ಈಶಿಷೇ । ಈಕ್ಷೇ ಹಿ ವಸ್ವ ಉಭಯಸ್ಯ ರಾಜನ್ ಇತ್ಯಪಿ ನಿಗಮೋ** ಭವತಿ ಎಂದು ನಿರ್ವಚನವನ್ನು ಹೇಳಿದ್ದಾರೆ. **ಈಕ್ಷೇ** ಎಂಬ ಶಬ್ದಕ್ಕೆ ಈಶಿಷೇ ಎಂಬ ಅರ್ಥವೇ ಎಂದರೆ ನೀನು ಪ್ರಭುತ್ವಮಾಡುತ್ತೀಯೆ. ರಾಜ್ಯವಾಳುತ್ತೀಯೇ, ಒಡೆಯನಾಗಿದ್ದಿಯೆ ಎಂದರ್ಥವಿರುವುದು. ಇಲ್ಲಿ ಎಲೈ ರಾಜನಾದ ಇಂದ್ರನೇ, ನೀನು ದ್ಯಾವಾಪೃಥಿವಿಗಳೆಂಬ ಎರಡು ಲೋಕಗಳಲ್ಲಿರುವ ಸಮಸ್ತ ಧನಕ್ಕೂ ಪ್ರಭುವಾಗಿರುವೆ ಎಂದು ಈ ವಾಕ್ಯದ ಅರ್ಥವು.

ಕ್ಷೋಣಸ್ಯ ॥೨೮॥

ಕ್ಷೋಣಸ್ಯ ಕ್ಷಯಣಸ್ಯ । 'ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯ' ಇತ್ಯಪಿ ನಿಗಮೋ ಭವತಿ ॥೫॥೬॥

**ಕ್ಷೋಣಸ್ಯ** ಎಂದರೆ ಗೃಹಸ್ಯ ಮನೆಯ ಎಂದರ್ಥವು.

ಉದಾಹರಣೆಯ ಋಕ್ಕು—

**ಯುವಂ ಶ್ಯಾವಾಯ ರುಶತೀಮದತ್ತಂ ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯ ।**
**ಪ್ರವಾಚ್ಯಂ ತದ್ವೃಷಣಾ ಕೃತಂ ವಾಂ ಯನ್ನಾರ್ಷದಾಯ ಶ್ರವೋ ಅಧ್ಯಧತ್ತಂ ॥**

(ಋ. ಸಂ. ೧-೧೧೭-೮)

ಇದರ ಅರ್ಥವು—

ಇಷ್ಟಾರ್ಥಗಳನ್ನು ಸುರಿಸುವ ಎಲೈ ಅಶ್ವಿನೀದೇವತೆಗಳೇ, ಶ್ಯಾವನೆಂಬುವನಿಗೆ ಸ್ವುರದ್ರೂಪಿಯಾದ ಪತ್ನಿಯನ್ನೂ ಗೃಹವಿಲ್ಲದ ಅವನಿಗೆ ಮನೆಯನ್ನೂ, (ಕುರುಡನಾಗಿ ಚಲಿಸಲು ಅಶಕ್ತನಾಗಿದ್ದ) ಕಣ್ವನಿಗೆ ದೃಷ್ಟಿಯನ್ನೂ ಕೊಟ್ಟರಿ. ಹಾಗೆಯೇ ನೃಷದ ಪುತ್ರನಿಗೆ ಶ್ರವಣೇಂದ್ರಿಯವನ್ನನುಗ್ರಹಿಸಿದಿರಿ. ನಿಮ್ಮ ಈ ಕಾರ್ಯವು ಪ್ರಶಂಸನೀಯವು.

**ಯುವಂ ಶ್ಯಾವಾಯ ರುಶತೀಮದತ್ತಂ—ಕುಷ್ಠರೋಗೇಣ ಶ್ಯಾಮವರ್ಣಾಯ ಋಷಯೇ ದೀಪ್ತತ್ವಚಂ ಶ್ರಿಯಂ ಪ್ರಾಯಚ್ಛತಂ ॥** ಅಶ್ವಿನೀದೇವತೆಗಳು ಕುಷ್ಠರೋಗದಿಂದ ಕಪ್ಪುಬಣ್ಣವುಳ್ಳವನಾದ ಒಬ್ಬ ಋಷಿಗೆ ಕಾಂತಿಯುಳ್ಳ ಚರ್ಮವು ಆಗುವಂತೆಯೂ, ಕುಷ್ಠರೋಗವು ನಾಶವಾಗುವಂತೆಯೂ ಅನುಗ್ರಹಿಸಿದರು ಎಂದು ವರ್ಣಿಸಿದೆ ಎಂದು ಸಾಯಣರ ವ್ಯಾಖ್ಯಾನವು.

ಸ್ಕಂದಸ್ವಾಮಿಗಳು ಈ ವಿಷಯದಲ್ಲಿ—

**ಯುವಂ ಯುವಾಂ ಶ್ಯಾವಾಯ ಕುಷ್ಠಿತ್ವಾತ್ ಶ್ಯಾವವರ್ಣಾಯ ಅಗ್ನೇಃ ಪುತ್ರಸ್ಯ ಘೋರಸ್ಯ ಜ್ಯೇಷ್ಠಪುತ್ರಾಯ ರುಶತೀಂ ದೀಪ್ತಾಂ ತ್ವಚಂ ಆದತ್ತಂ ದತ್ತವಂತೌ ಸ್ಥಃ । ತಂ ಹಿ ಯುವಾಂ ವಿಕೃತ್ಯ ಛಿತ್ವಾ ಚ ಜಂಘಯೋರ್ಮಧ್ಯೇ ಶಿರಸಿ ಚ ಪುನಶ್ಚ ಸಂಧಾಯ ಹಿರಣ್ಯತ್ವಚಂ ಪುನರುಜ್ಜೀವಯಾಂಚಕ್ರುಥುಃ । ತದೇತತ್ ಪುರಸ್ತಾದಪಿ ವಕ್ಷ್ಯತಿ ॥**

ಎಂದು ಹೇಳಿ—

**ಹಿರಣ್ಯಹಸ್ತಮಶ್ವಿನಾ ರರಾಣಾ ಪುತ್ರಂ ನರಾ ವಧ್ರಿಮತ್ಯಾ ಆದತ್ತಂ ।**
**ತ್ರಿಧಾ ಹ ಶ್ಯಾವಮಶ್ವಿನಾ ವಿಕಸ್ತಮುಜ್ಜೀವಸ ಐರಯತಂ ಸುದಾನೂ ॥**

(ಋ. ಸಂ. ೧-೧೧೭-೨೪)

ಅಗ್ನಿಯ ಮಗನಾದ ಘೋರನೆಂಬುವನ ಜ್ಯೇಷ್ಠಪುತ್ರನು ಕುಷ್ಠರೋಗದಿಂದ ಕಪ್ಪಾದಚರ್ಮವುಳ್ಳವನಾಗಿ ವಿಕಾರರೂಪದಿಂದ ಇರುವುದನ್ನು ನೋಡಿ ಅಶ್ವಿನೀದೇವತೆಗಳು ಅವನ ಶರೀರದಲ್ಲಿ ಜಂಘಾಪ್ರದೇಶ ಮತ್ತು ಶಿರಸ್ಸು ಇವುಗಳನ್ನು ಕತ್ತರಿಸಿ ರೋಗೋತ್ಪತ್ತಿ ಕಾರಣವನ್ನು ನಿರ್ಮೂಲನಮಾಡಿ ಪುನಃ ಆ ಶರೀರವನ್ನೇ ಪೂರ್ವದಲ್ಲಿ ಇದ್ದಂತೆ ಸೇರಿಸಿ ಚಿನ್ನದ ಕಾಂತಿಯುಳ್ಳ ಚರ್ಮವುಳ್ಳದ್ದನ್ನಾಗಿ ಮಾಡಿದರು ಎಂದು ಇತಿಹಾಸವನ್ನು ವಿವರಿಸಿ ಅದನ್ನು ವಿವರಿಸಿರುವ ಮೇಲಿನ ಋಕ್ಕನ್ನು ಉದಹರಿಸಿದರು.

**ಮಹಃ ಕ್ಷೋಣಸ್ಯ—ಕ್ಷೋಣಾಯ ಯಃ ದೃಷ್ಟಿರಾಹಿತ್ಯೇನ ಗಂತುಮಶಕ್ತಃ ಸ ಏಕಸ್ಮಿನ್ನೇವ ಸ್ಥಾನೇ ನಿವಸತಿ ತಸ್ಮೈ ಕಣ್ವಾಯ ಋಷಯ ತೇಜಃ ತೈಜಸಂ ಚಕ್ಷುರಿಂದ್ರಿಯಂ ಆದತ್ತಂ** ।—ಕಣ್ವನೆಂಬ ಋಷಿಯು ಕಣ್ಣು ಕಾಣದವನಾಗಿ ಒಂದೇಕಡೆಯಲ್ಲಿರುವುದನ್ನು ನೋಡಿ ಅವನಿಗೆ ಕಣ್ಣು ಕಾಣಿಸುವಂತೆ ಅಶ್ವಿನೀದೇವತೆಗಳು ಅನುಗ್ರಹಿಸಿದರೆಂದು ಸಾಯಣರು ವಿವರಿಸಿರುವರು.

ಸ್ಕಂದಸ್ವಾಮಿಗಳೂ ಇದೇರೀತಿಯಾಗಿ ವ್ಯಾಖ್ಯಾನವನ್ನು ಮಾಡಿ—

**ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ ಸುಷ್ಟುತಿಂ ಜುಜುಷಾಣಾ ॥**

(ಋ. ಸಂ. ೧-೧೧೮-೭)

ಎಂಬ ಋಕ್ಕನ್ನು ಉದಹರಿಸಿರುವರು. ಅಶ್ವಿನಾ ಕಣ್ವಾಯ ಎಂಬುದನ್ನು ವ್ಯಾಖ್ಯಾನಮಾಡುವಾಗ ಮಹಃಕ್ಷೋಣಸ್ಯ ಎಂಬ ಪದಗಳನ್ನು ಈ ವಾಕ್ಯಕ್ಕೆ ಸೇರಿಸಿ ಒಂದೇವಾಕ್ಯವಾಗಿ ಅರ್ಥವನ್ನು ಮಾಡಿರುವರು.

**ಯನ್ನಾರ್ಷದಾಯ ನೃಷದಃ ಪುತ್ರಾಯ ಕಣ್ವಾಯ ಕ್ಷೋಣಸ್ಯ ಕ್ಷೋಣಃ ಶಬ್ದಕಾರೀ ವೀಣಾ-ವಿಶೇಷಃ । ಮಹಃ ಮಹತಃ ಕ್ಷೋಣಸ್ಯ ಶ್ರವಃ ಶಬ್ದಂ ಅಧ್ಯಧತ್ತಂ ಉಷಸೋ ವಿಜ್ಞಾ-ನಾರ್ಥಂ ಅಧಿಕಂ ಅಕುರುತಂ ।**

ನೃಷದನೆಂಬುವನ ಮಗನಾದ ಕಣ್ವನೆಂಬುವನಿಗೆ ಉಷಃಕಾಲವು ಬಂದಿರುವುದೆಂದು ತಿಳಿಯುವುದಕ್ಕಾಗಿ ವೀಣೆಯ ಧ್ವನಿಯನ್ನು ಮಾಡಿದರು ಎಂದು ಅರ್ಥಮಾಡಿ.

**ಅಪರ ಅಹ—ಬ್ರಾಹ್ಮಣಸ್ಯ ಪರೀಕ್ಷಾರ್ಥಮಸುರಾಃ ಕಣ್ವಮೃಷಿಂ ಗೂಢೇ ತಮಸಿ ನಿದಧುಃ ಅತ್ರೈವ ಸ್ಥಿತಸ್ಸನ್ವ್ಯುಷ್ಟಾಮುಷಸಂ ವಿಜಾನೀಹಿ ಯದಿ ತ್ವಂ ಬ್ರಾಹ್ಮಣೋಽಸಿ । ತಮಶ್ವಿನಾ ಆಗತ್ಯೋಚತುಃ । ವ್ಯುಷ್ಟಾಯಾಂ ಹರ್ಮ್ಯಸ್ಯ ಉಪರಿ ವೀಣಾಂ ವಾದಯಂತಾ ಅವಾಂ ಆಗಮಿಷ್ಯಾವಃ। ತಂ ಶಬ್ದಂ ಶ್ರುತ್ವಾ ವ್ಯುಷ್ಟಾಮುಷಸಂ ಬ್ರೂಹಿ। ತದೇತತ್ ಪ್ರತಿಪಾದ್ಯತೇ॥**

ನೃಷದಪುತ್ರನಿಗೆ ಕಿವಿಯು ಕೇಳಿಸದಿರುವಾಗ ಅಶ್ವಿನೀದೇವತೆಗಳು ಕಿವಿಯು ಕೇಳಿಸುವಂತೆ ಮಾಡಿದರು ಎಂಬ ತಮ್ಮ ವ್ಯಾಖ್ಯಾನಕ್ಕಿಂತ ಬೇರೆ ವಿಧವಾಗಿ ಒಂದೇ ವಾಕ್ಯವಾಗಿ ಅನ್ವಯವನ್ನು ಮಾಡಿ ಅರ್ಥವನ್ನು ಹೇಳಿರುವವರ (ಮತವನ್ನು) ಅಭಿಪ್ರಾಯವನ್ನು ಸಾಯಣರು ವಿವರಿಸುತ್ತಾರೆ. ಅಸುರರು ಬ್ರಾಹ್ಮಣನ ಬ್ರಾಹ್ಮಣತ್ವವನ್ನು ಪರೀಕ್ಷೆಮಾಡುವುದಕ್ಕಾಗಿ ನೃಷದನ ಮಗನಾದ ಕಣ್ವನೆಂಬುವನನ್ನು ಬಹಳ ಕತ್ತಲೆಯಾಗಿರುವ ಪ್ರದೇಶಕ್ಕೆ ಕರೆದುಕೊಂಡುಹೋಗಿ ಅಲ್ಲಿ ಅವನನ್ನು ಇರಿಸಿ ನೀನು ಇಲ್ಲಿ ಇದ್ದು ಉಷಃಕಾಲವು ಬಂದು ಕಳೆದುಹೋಗುವುದನ್ನು ತಿಳಿದು ಹೇಳಿದರೆ ನೀನು ಬ್ರಾಹ್ಮಣನಾಗಿರುತ್ತೀಯೆ ಇಲ್ಲದಿದ್ದರೆ ಇಲ್ಲ. ಎಂದು ಹೇಳಿ ಅವನನ್ನು ನಿರ್ಬಂಧದಲ್ಲಿ ಇರಿಸಿದರು. ಅವನಿಗೆ ಕಿವಿಯು ಕೇಳುತ್ತಿರಲಿಲ್ಲ ಆಗ ಅಶ್ವಿನೀದೇವತೆಗಳು ಅವನ ಹತ್ತಿರಕ್ಕೆ ಬಂದು—ನಿನ್ನನ್ನು ಅಸುರರು ಇರಿಸಿರುವ ಮನೆಯ ಮಹಡಿಯಮೇಲೆ ಬಂದು ನಾವು ವೀಣೆಯನ್ನು ನುಡಿಸುತ್ತೇವೆ. ಅದರ ಧ್ವನಿಯನ್ನು ಕೇಳಿ ನೀನು ಅಸುರರಿಗೆ ಉಷಃಕಾಲವು ಪ್ರಾಪ್ತವಾದದ್ದನ್ನೂ ಕಳೆದದ್ದನ್ನೂ ಕೂಡ ತಿಳಿಸು ಎಂದು ಹೇಳಿ ಅವನಿಗೆ ಕಿವಿಯು ಕೇಳುವಂತೆ ಮಾಡಿದರು ಎಂದು ಇಲ್ಲಿ ವಿವೃತವಾಗಿರುತ್ತದೆ ಎಂದು ತಮ್ಮ ಮತವನ್ನು ಹೇಳುವರು.

ಯಾಸ್ಕರು—**ಕ್ಷೋಣಸ್ಯ—ಕ್ಷಯಣಸ್ಯ** (ನಿ. ೬-೬) ನಿವಾಸಸ್ಥಾನದ ಎಂದು ಕ್ಷೋಣಶಬ್ದದ ಅರ್ಥವನ್ನು ವಿಮರ್ಶೆ ಮಾಡಿ **ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯ ಇತ್ಯಪಿ ನಿಗಮೋ ಭವತಿ** ಎಂದು ಹೇಳಿರುವರು.

**ಪ್ರವಾಚ್ಯಂ ತದ್ವೃಷಣಾ ಕೃತಂ ವಾಂ** ಎಂಬ ವಾಕ್ಯದಿಂದ ಜನರವರ ಇಚ್ಛಾನುಸಾರವಾಗಿ ಅಭಿಲಾಷೆಯನ್ನು ನೆರವೇರಿಸುವುದರ ಮೂಲಕ ಆಶ್ರಿತರನ್ನು ರಕ್ಷಿಸುವ ಅಶ್ವಿನೀದೇವತೆಗಳ ಕಾರ್ಯವೆಲ್ಲವೂ ಅತಿಶಯವಾಗಿ ಪ್ರಶಂಸನೀಯವಾಗಿರುವುದು ಎಂದು ವರ್ಣಿಸಿದೆ.

**ಇತಿ ಷಷ್ಠಃ ಖಂಡಃ**

ಇಲ್ಲಿಗೆ ಆರನೆಯ ಖಂಡವು ಸಮಾಪ್ತವು

---

## ಅಥ ಸಪ್ತಮಃ ಖಂಡಃ

### ಏಳನೆಯ ಖಂಡವು

ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ । ಅಸ್ಮೇಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ । ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ । ಅಸ್ಮೇ ಪ್ರಯನ್ಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ । ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ । ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ । ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ । ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಂ । ಶ್ಯೇನೋ ನದೀಯನ್ನನ್ವೇತಿ ಪಾಥ ಇತ್ಯಪಿ ನಿಗಮೋ ಭವತ್ಯುದಕಮಪಿ ಪಾಥ ಉಚ್ಯತೇ ಪಾನಾತ್ । ಆಚಷ್ಟ ಆಸಾಂ ಪಾಥೋ ನದೀನಾಮಿತ್ಯಪಿ ನಿಗಮೋ ಭವತ್ಯನ್ನಮಪಿ ಪಾಥ ಉಚ್ಯತೇ ಪಾನಾದೇವ । ದೇವಾನಾಂ ಪಾಥ ಉಪವಕ್ಷಿ ವಿದ್ವಾನಿತ್ಯಪಿ ನಿಗಮೋ ಭವತಿ । ಸವೀಮನಿ ಪ್ರಸವೇ । ದೇವಸ್ಯ ವಯಂ ಸವಿತುಃ ಸವೀಮನೀತ್ಯಪಿ ನಿಗಮೋ ಭವತಿ । ಸಪ್ರಥಾಃ ಸರ್ವತಃ ಪೃಥುಃ । ತ್ವಮಗ್ನೇ ಸಪ್ರಥಾ ಅಸೀತ್ಯಪಿ ನಿಗಮೋ ಭವತಿ । ವಿದಥಾನಿ ವೇದನಾನಿ । ವಿದಥಾನಿ ಪ್ರಚೋದಯನ್ನಿತ್ಯಪಿ ನಿಗಮೋ ಭವನಿ ॥ ೭ ॥

---

ಅಸ್ಮೇ ॥೨೯॥

'ಅಸ್ಮೇ ತೇ ಬಂಧುಃ'। ವಯಮಿತ್ಯರ್ಥಃ ॥೧॥

**ಅಸ್ಮೇ** ಎಂಬ ಪದವು ಪ್ರಥಮಾದಿ ಏಳು ವಿಭಕ್ತಿಗಳಲ್ಲಿಯೂ ಆಯಾ ವಿಭಕ್ತಿಯ ಅರ್ಥಕ್ಕೆ ಅನುಸಾರವಾಗಿ ಉಪಯೋಗಿಸಲ್ಪಡುವುದು ಎಂದರೆ ಸಂದರ್ಭಾನುಸಾರವಾಗಿ **ಅಸ್ಮೇ** ಎಂಬ ಶಬ್ದಕ್ಕೆ ಏಳು ವಿಭಕ್ತಿಗಳ ಅರ್ಥಕ್ಕೂ ಒಂದೊಂದು ಉದಾಹರಣೆಯನ್ನು ಕೊಟ್ಟು ಅರ್ಥವನ್ನು ಸ್ಪಷ್ಟಪಡಿಸಿರುವರು. ಮುಂದಿನ ಖಂಡದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ವಿವರಿಸಲಾಗಿದೆ.

" ಅಸ್ಮೇ ಯಾತಂ ನಾಸತ್ಯಾ ಸಜೋಷಾಃ " । ಅಸ್ಮಾನಿತ್ಯರ್ಥಃ ॥ ೨॥,

**ಅಸ್ಮೇ** ಎಂಬ ಶಬ್ದಕ್ಕೆ ಪ್ರಥಮಾವಿಭಕ್ತಿಯಲ್ಲಿ ಉಪಯೋಗಿಸಿರುವ ಅರ್ಥಕ್ಕೆ ಉದಾಹರಣೆಯು. ಹೇಗೆಂದರೆ–**ಅಸ್ಮೇ ತೇ ಬಂಧುಃ ವಯಮಿತ್ಯರ್ಥಃ** ಈ ವಾಕ್ಯದಲ್ಲಿ ಅಸ್ಮೇ ಎಂದರೆ ನಾವು ಎಂದರ್ಥವು. ನಾವು ನಿನ್ನ ಬಂಧುಗಳು. ಈ ಅರ್ಥವಿರುವ ಎಂದರೆ ಅಸ್ಮೇ ಎಂಬ ಶಬ್ದಕ್ಕೆ ಪ್ರಥಮಾವಿಭಕ್ತಿಯ ಅರ್ಥವಿರುವ ಋಕ್ಕಿನ ಉದಾಹರಣೆಯು—

**ತಪಸಸ್ತನೂರಸಿ ಪ್ರಜಾಪತೇರ್ವರ್ಣಃ ಪರಮೇಣ ಪಶುನಾ ಕ್ರೀಯಸೇ ಸಹಸ್ರಪೋಷಂ ಪುಷ್ಯಂತೀ । ಅಸ್ಮೇ ತೇ ಬಂಧುಃ ಪುಷೇಯಂ ।**

ದ್ವಿತೀಯಾವಿಭಕ್ತಿಗೆ ಉದಾಹರಣೆಯು—

**ಆ ಶೇನಸ್ಯ ಜವಸಾ ನೂತನೇನಾಸ್ಮೇ ನಾ ಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥**

(ಋ. ಸಂ. ೧-೧೧೮-೧೧)

ಇದರ ಅರ್ಥವು—

ಎಲೈ ನಾಸತ್ಯರೇ (ಅಶ್ವಿನೀದೇವತೆಗಳೇ) ಶ್ಯೇನ ಪಕ್ಷಿಯಂತೆ ಉತ್ತಮಗತಿಯುಳ್ಳ ಮತ್ತು ನೂತನವಾದ ವೇಗವುಳ್ಳ ಅಶ್ವಗಳಿಂದ ಯುಕ್ತರಾಗಿ ನೀವಿಬ್ಬರು ನಮ್ಮನ್ನು ಉದ್ದೇಶಿಸಿ ಬನ್ನಿ. ಎಲೈ ಅಶ್ವಿನೀದೇವತೆಗಳೇ, ನಿಮಗೆ ಕೊಡಬೇಕಾದ ಹವಿಸ್ಸಿನಿಂದ ಯುಕ್ತನಾಗಿ ನಿತ್ಯವಾದ ಉಷಸ್ಸಿನ ಉದಯಕಾಲದಲ್ಲಿ ನಿಮ್ಮನ್ನು ಸ್ತುತಿಸುತ್ತೇನೆ.

ಈ ಋಕ್ಕಿನಲ್ಲಿ **ಅಸ್ಮೇ** ಎಂದರೆ **ಅಸ್ಮಾನಿತ್ಯರ್ಥಃ** ನಮ್ಮನ್ನು ಎಂದರ್ಥವು.

" ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ"। ಅಸ್ಮಾಭಿರಿತ್ಯರ್ಥಃ ॥೩॥

ಉದಾಹರಣೆಯ ಋಕ್ಕು—

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
**ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**

(ಋ. ಸಂ. ೧-೧೬೫-೭)

ಇದರ ಅರ್ಥವು—

ಇಷ್ಟಾರ್ಥಗಳನ್ನು ಸುರಿಸತಕ್ಕ ಎಲೈ ಇಂದ್ರನೇ, ನೀನು ಅತ್ಯಧಿಕವಾದ ಕಾರ್ಯಗಳನ್ನು ಮಾಡಿರುವುದು ನಿಜ. ಆದರೂ ಸಹ ನಮ್ಮನ್ನೆಲ್ಲಾ ಒಟ್ಟಿಗೆ ಸಮನಾಗಿರುವುದೂ ಸಂಯುಕ್ತವಾಗಿರುವುದೂ ಆದ ಪರಾಕ್ರಮಕಾರ್ಯಗಳ ಸಹಾಯದಿಂದಲೇ ನೀನು ಅವೆಲ್ಲವನ್ನೂ ಮಾಡಿದ್ದೀಯೆ. ಬಲಶಾಲಿಯಾದ ಇಂದ್ರನೇ, ಯಾವ ಕರ್ಮಗಳಿಂದ ವೃಷ್ಟ್ಯಾದಿಗಳನ್ನು ಅಪೇಕ್ಷಿಸುವೆವೋ ಅಂತಹ ಅತ್ಯತಿಶಯವಾದ ಕರ್ಮಗಳನ್ನೇ ನಾವೂ ಮಾಡಿದ್ದೇವೆ. ಆದುದರಿಂದಲೇ ನಾವು ಮರುತ್ತುಗಳಾಗಿದ್ದೇವೆ.

ಈ ಋಕ್ಕಿನಲ್ಲಿ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಭಿಃ ನಮ್ಮಿಂದ ಎಂದು ತೃತೀಯಾವಿಭಕ್ತಿಯ ಅರ್ಥವಿರುವುದು.

"ಅಸ್ಮೇ ಪ್ರಯನ್ಧಿ ಮಘವನ್ನೃಜೀಷಿನ್" । ಅಸ್ಮಭ್ಯಮಿತ್ಯರ್ಥಃ ॥೪॥

ಉದಾಹರಣೆಯ ಋಕ್ಕು—

ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।
ಅಸ್ಮೇ ಶತಂ ಶರದೋ ಜೀವಸೇಥಾ ಅಸ್ಮೇ ವೀರಾಂಛಶ್ವತ ಇಂದ್ರ ಶಿಪ್ರಿನ್ ॥

(ಋ. ಸಂ. ೩-೩೬-೧೦)

ಇದರ ಅರ್ಥವು—

ಭಗವಂತನೂ ಗತಸಾರನಾದ ಸೋಮವನ್ನು ಪಾನಮಾಡುವವನೂ ಆದ ಎಲೈ ಇಂದ್ರನೇ, ಸರ್ವರಿಂದಲೂ ಆದರಿಸಲ್ಪಡುವುದೂ ಅಧಿಕವಾದುದೂ ಆದ ಧನವನ್ನು ಕೊಡು. ನಾವು ನೂರು ವರ್ಷಗಳವರೆಗೆ ಜೀವಿಸಿರುವಂತೆ ಅನುಗ್ರಹಿಸು. ಸುಂದರವಾದ ಕೆನ್ನೆಯುಳ್ಳ ಎಲೈ ಇಂದ್ರನೇ, ನಮಗೆ ಅತ್ಯಧಿಕವಾದ ವೀರಪುತ್ರರನ್ನು ಅನುಗ್ರಹಿಸು.

ಈ ಋಕ್ಕಿನಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ—ನಮಗೋಸ್ಕರ ಎಂದು ಚತುರ್ಥೀ ವಿಭಕ್ತಿಯ ಅರ್ಥವಿರುವುದು.

"ಅಸ್ಮೇ ಆರಾಚ್ಚಿದ್ ದ್ವೇಷಃ ಸನುತರ್ಯುಯೋತು" ಅಸ್ಮದಿತ್ಯರ್ಥಃ ॥೫॥

ಉದಾಹರಣೆಯ ಋಕ್ಕು—

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।
ಸ ಸುತ್ರಾಮಾ ಸ್ವವಾಁ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥

ಇದರ ಅರ್ಥವು— (ಋ. ಸಂ. ೬-೪೭-೧೩)

ಪೂಜಾರ್ಹನಾದ ಆದೇ ಇಂದ್ರನ ಅನುಗ್ರಹಾತ್ಮಕವಾದ ಬುದ್ಧಿಗೆ ವಿಷಯರಾಗಿ ನಾವು ಇರುವಂತರಾಗಲಿ. ಕಲ್ಯಾಣಕಾರಕರಾದ ಅವನ ಪ್ರೀತಿವಿಷಯರಾಗಿಯೂ ಇರುವಂತಾಗಲಿ. ಅತಿಶಯವಾಗಿ ರಕ್ಷಿಸುವವನೂ ಧನವಂತನೂ ಆದ ಆದೇ ಇಂದ್ರನು ನಮ್ಮನ್ನು ದ್ವೇಷಿಸತಕ್ಕ ಶತ್ರುಗಳನ್ನು ನಮಗಿಂತಲೂ ಅತ್ಯಂತ ದೂರಪ್ರದೇಶದಲ್ಲಿಯೇ ನಮ್ಮ ಕಣ್ಣಿಗೆ ಕಾಣುವಂತೆಯೂ ನಮ್ಮೊಂದಿಗೆ ಸೇರದಿರುವಂತೆಯೂ ಬೇರೆಯಾಗಿಟ್ಟಿರಲಿ.

ಈ ಋಕ್ಕಿನಲ್ಲಿ ಅಸ್ಮೇ ಎಂದರೆ ಅಸ್ಮತ್ ನಮಗಿಂತಲೂ ಎಂದು ಪಂಚಮೀವಿಭಕ್ತಿಯ ಅರ್ಥವಿರುವುದು.

"ಊರ್ವ ಇವ ಪಪ್ರಥೇ ಕಾಮೋ ಅಸ್ಮೇ" । ಅಸ್ಮಾಕಮಿತ್ಯರ್ಥಃ ॥೬॥

ಉದಾಹರಣೆಯ ಋಕ್ಕು—

ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।
ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥

(ಋ. ಸಂ. ೩-೩೦-೧೮)

ಇದರ ಅರ್ಥವು—

ಎಲೈ ಇಂದ್ರನೇ, ನಮಗಾಗಿ ಕಾಂತಿಯುತವಾದ ಧನವನ್ನು ತೆಗೆದುಕೊಂಡು ಬಾ. ದಾನಶೀಲನಾದ ನಿನ್ನ ದಾನಕ್ಕೆ ನಾವು ಪಾತ್ರರಾಗಿದ್ದೇವೆ. ನಮ್ಮ ಅಭಿಲಾಷೆಯು ಬಡಬಾನಲವಂತೆ ಪ್ರಭೂತವಾಗಿರುತ್ತದೆ. ಉತ್ತಮವಾದ ಧನಕ್ಕೆ ಒಡೆಯನಾದ ಎಲೈ ಇಂದ್ರನೆ, ನಮ್ಮ ಅಗಾಧವಾದ ಅಭಿಲಾಷೆಯನ್ನು ಪ್ರಭೂತವಾದ ಧನದ ದಾನದಿಂದ ತೃಪ್ತಿಪಡಿಸು.

ಈ ಋಕ್ಕಿನಲ್ಲಿ **ಅಸ್ಮೇ** ಎಂಬ ಪದವು **ಅಸ್ಮಾಕಂ** ನಮಗೆ, ನಮ್ಮ ಎಂಬ ಷಷ್ಠೀವಿಭಕ್ತಿಯ ಅರ್ಥವನ್ನು ಸೂಚಿಸುವುದು.

" ಅಸ್ಮೇ ಧತ್ತ ವಸವೋ ವಸೂನಿ " ಅಸ್ಮಾಸ್ವಿತ್ಯರ್ಥಃ ॥೭॥

ಉದಾಹರಣೆಯ ಋಕ್ಕು—

**ಅಸ್ಮೇ ಧತ್ತ ವಸವೋ ವಸೂನಿ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂದರೆ **ಅಸ್ಮಾಸು**—ನಮ್ಮಲ್ಲಿ ಎಂದು ಸಪ್ತಮೀ ವಿಭಕ್ತಿಯ ಅರ್ಥವನ್ನು ಸೂಚಿಸುವುದು.

ಪಾಥಃ ॥೩೦॥

ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಮ್ ॥ " ಶ್ಯೇನೋ ನದೀಯನ್ನ-
ನ್ವೇತಿ ಪಾಥಃ " ಇತ್ಯಪಿ ನಿಗಮೋ ಭವತಿ ॥೮॥

ಉದಾಹರಣೆಯ ಋಕ್ಕು—

**ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನದೀಯನ್ನನ್ವೇತಿ ಪಾಥಃ ।**
**ಪ್ರತಿ ವಾಂ ಸೂರ ಉದಿತೇ ವಿಧೇಮ ನಮೋಭಿರ್ಮಿತ್ರಾವರುಣೋತ ಹವ್ಯೈಃ॥**

(ಋ. ಸಂ. ೩-೬೩-೫)

ಇದರ ಅರ್ಥವು—

ಯಾವ ಅಂತರಿಕ್ಷದಲ್ಲಿ ಮರಣಧರ್ಮರಹಿತರಾದ ದೇವತೆಗಳು ಈ ಸೂರ್ಯನಿಗೆ ಸಂಚರಿಸುವ ಮಾರ್ಗವನ್ನು ನಿರ್ಮಿಸಿದರೋ ಅದೇ ಅಂತರಿಕ್ಷದಲ್ಲಿ ಸೂರ್ಯನು ವೇಗವಾಗಿ ಸಂಚರಿಸುವ ಶ್ಯೇನಪಕ್ಷಿಯಂತೆ ಸಂಚರಿಸುತ್ತಾನೆ. ಎಲೈ ಮಿತ್ರಾವರುಣರೆ, ಸೂರ್ಯನ ಉದಯವಾದೊಡನೆಯೇ (ಪ್ರಾತಃಸವನಕಾಲದಲ್ಲಿ) ನಿಮ್ಮನ್ನು ನಮಸ್ಕಾರ ಪೂರ್ವಕವಾಗಿಯೂ ಹವಿಸ್ಸುಗಳಿಂದ ಕೂಡಿಯೂ ಉಪಚರಿಸುತ್ತೇವೆ.

**ಪಾಥಃ** ಎಂಬ ಶಬ್ದಕ್ಕೆ **ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಂ। ಶ್ಯೇನೋ ನದೀಯನ್ನನ್ವೇತಿ ಪಾಥ ಇತ್ಯಪಿ ನಿಗಮೋ ಭವತಿ** ಎಂದು ಮೇಲೆ ಹೇಳಿದೆ. ಎಂದರೆ, **ಪಾಥಃ** ಎಂಬ ಶಬ್ದಕ್ಕೆ ಮಾರ್ಗವು ಎಂಬರ್ಥವಿದ್ದರೂ ಸೂರ್ಯನು ಸಂಚರಿಸುವ ಮಾರ್ಗವಾದ ಅಂತರಿಕ್ಷವು ಎಂದು ವಿವರಿಸಿದ್ದಾರೆ. ಮತ್ತು **ಪಂಥಾಃ** ಎಂಬ ಶಬ್ದವು **ಪಂಥಾಃ ಪತತೇರ್ವಾ ಪದ್ಯತೇ ವಾ ಪಂಥತೇರ್ವಾ** (ನಿ. ೨-೨೮) ಎಂದೂ ಹೇಳಿರುವರು. ಎಂದರೆ **ಪಂಥಾಃ** ಎಂಬ ಶಬ್ದವು ಕೆಳಕ್ಕೆ ಬೀಳು ಎಂಬರ್ಥವಿರುವ **ಪತ್** ಧಾತುವಿನಿಂದಾಗಲಿ, ಹೋಗು ಎಂಬರ್ಥವಿರುವ **ಪಂಥ್** ಧಾತುವಿನಿಂದಾಗಲಿ, ನಿಷ್ಪನ್ನವಾಗಬಹುದು ಎಂದು ತಿಳಿಸಿದಾರೆ. ಈ ಮೂರು ಧಾತುಗಳೂ **ಗತ್ಯರ್ಥ**ವನ್ನು ಸೂಚಿಸುವವು.

ಉದಕಮಪಿ ಪಾಥ ಉಚ್ಯತೇ ಪಾನಾತ್ ॥ "ಆಚಷ್ಟ ಆಸಾಂ ಪಾಥೋ
ನದೀನಾಮ್" ಇತ್ಯಪಿ ನಿಗಮೋ ಭವತಿ ॥ ೯ ॥

**ಉದಕಮಪಿ ಪಾಥ ಉಚ್ಯತೇ ಪಾನಾತ್ ।** ಉದಕಕ್ಕೂ ನೀರಿಗೂ ಪಾಥವೆಂಬ ಹೆಸರಿರುವುದು.

ಉದಾಹರಣೆಯ ಋಕ್ಕು—

**ಅಭಿ ವೋ ದೇವೀಂ ಧಿಯಂ ದಧಿಧ್ವಂ ಪ್ರವೋ ದೇವತ್ರಾ ವಾಚಂ ಕೃಣುಧ್ವಂ॥**

**(ಋ. ಸಂ. ೭-೩೪-೯)**

**ಇದರ ಅರ್ಥವು—**

ಎಲೈ ಯಜಮಾನಾದಿಗಳೇ, ನೀವು ದೇವತೆಗಳನ್ನುದ್ದೇಶಿಸಿ ಪ್ರಕಾಶಮಾನವಾದ ಕರ್ಮವನ್ನು ನೆರವೇರಿಸಿ. ದೇವತೆಗಳ ಸನ್ನಿಧಿಯಲ್ಲಿ ಸ್ತುತಿರೂಪವಾದ ವಾಕ್ಕನ್ನು ಉತ್ತಮರೀತಿಯಲ್ಲಿ ಪಠಿಸಿರಿ.

**ಆ ಚಷ್ಟ ಆಸಾಂ ಪಾಥೋ ನದೀನಾಂ ವರುಣ ಉಗ್ರಃ ಸಹಸ್ರಚಕ್ಷಾಃ ।**

(ಋ. ಸಂ. ೭-೩೪-೮)

**ಇದರ ಅರ್ಥವು—**

ಅತ್ಯಧಿಕವಾದ ಬಲವುಳ್ಳವನೂ ಅನೇಕವಾದ ಕಣ್ಣುಗಳುಳ್ಳವನೂ ಆದ ವರುಣನು ಪ್ರವಹಿಸುವ ಈ ನದಿಗಳ ಉದಕವನ್ನು ನೋಡುತ್ತಾನೆ.

ಅನ್ನಮಪಿ ಪಾಥ ಉಚ್ಯತೇ ಪಾನಾದೇವ । "ದೇವಾನಾಂ ಪಾಥ ಉಪವಕ್ಷಿ
ವಿದ್ವಾನ್" ಇತ್ಯಪಿ ನಿಗಮೋ ಭವತಿ ॥೧೧॥

**ಪಾಥ** ವೆಂದರೆ ಅನ್ನವೆಂದೂ ಅರ್ಥವಾಗುವುದು.

ಉದಾಹರಣೆಯ ಋಕ್ಕು—

**ವನಸ್ಪತೇರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।**
**ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀ ಹವಂ ಮೇ ॥**

(೧೦-೭೦-೧೦)

**ಇದರ ಅರ್ಥವು—**

ವೃಕ್ಷದಿಂದ (ಮರದಿಂದ) ನಿರ್ಮಿಸಲ್ಪಟ್ಟಿರುವ ಎಲೈ ಯೂಪದೇವತೆಯೇ, ಸಕಲವನ್ನೂ ತಿಳಿದಿರುವ ನೀನು ಹವೀರೂಪವಾದ ಅನ್ನವನ್ನು (ಪ್ರಯಾಣಕಾಲದಲ್ಲಿ ಜನರು ತೆಗೆದುಕೊಂಡು ಹೋಗುವಂತೆ) ಹಗ್ಗದಿಂದ ಗಂಟುಕಟ್ಟಿಕೊಂಡು ದೇವತೆಗಳ ಸಮೀಪಕ್ಕೆ ತೆಗೆದುಕೊಂಡು ಹೋಗು. ಅನಂತರ ವನಸ್ಪತಿ ಎಂಬ ಯೂಪಾಭಿಮಾನಿ ದೇವನು ಆ ಹವಿಸ್ಸನ್ನು ಭಕ್ಷಿಸಲಿ. ಮತ್ತು ನಮ್ಮಿಂದ ಅರ್ಪಿತವಾದ ಹವಿಸ್ಸನ್ನು ದೇವತೆಗಳಿಗೆ ಕೊಡಲಿ. ಮತ್ತು ದೇವತೆಗಳು ಈ ಯಜ್ಞಭೂಮಿಗೆ ಬರಬೇಕೆಂದು ಪ್ರಾರ್ಥಿಸಿ ಕರೆಯುವ ನನ್ನ ಆಹ್ವಾನವನ್ನು ದ್ಯಾವಾಪೃಥಿವೀದೇವತೆಗಳು ಅನುಮೋದಿಸಲಿ.

ಪಿಷ್ಟೇವಲ್ಕಶಸ್ತ್ರಮಂತ್ರಗಳನ್ನು ಪಠಿಸುವಾಗ ವನಸ್ಪತಿದೇವಿಯನ್ನು ಸ್ತುತಿಸುವ ಸಮಯದಲ್ಲಿ **ವನಸ್ಪತೇ ರಶನಯಾ**—ಎಂಬ ಈ ಋಕ್ಕನ್ನು ಪ್ರಾರಂಭದಲ್ಲಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದೇವೇಭ್ಯೋ ವನಸ್ಪತೇ**

**ಹವೀಂಷಿ ವನಸ್ಪತೇ ರಶನಯಾ ನಿಯೂಯೇತಿ ಸೂಕ್ತಮುಖೀಯಾಃ ।** ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

ವನಸ್ಪತಿಶಬ್ದಕ್ಕೆ ಎರಡು ವಿಧವಾದ ಅರ್ಥವಿರುವುದೆಂದು ಯಾಸ್ಕರು ತಮ್ಮ ನಿರ್ವಚನದಲ್ಲಿ ಹೇಳಿದ್ದಾರೆ—

**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ॥**

(ನಿ. ೮-೩)

ವನಸ್ಪತಿಯೆಂದರೇನು ? ವನಗಳ (ಅರಣ್ಯಗಳ) ಸಂರಕ್ಷಕನು ಎಂದರೆ ವನಸ್ಪತಿ ಎಂಬ ವನಾಭಿಮಾನಿದೇವನು. ಅರಣ್ಯದಲ್ಲಿರುವ ವೃಕ್ಷಗಳನ್ನು ಕಾಪಾಡುವವನು ಎಂದರ್ಥವು. ವನಶಬ್ದವು **ವನ-ಸಂಭಕ್ತೌ** ಹೊಂದು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿರುವುದು. ಜನರು ತಮ್ಮ ಕಾರ್ಯಗಳಿಗಾಗಿ ತಮಗೆ ಬೇಕಾದಾಗ ಇವನ್ನು (ವೃಕ್ಷ ಅಥವಾ ಮರವನ್ನು) ಹೊಂದುವುದರಿಂದ ಎಂದರೆ ತೆಗೆದುಕೊಂಡು ಬರುವುದರಿಂದ ವೃಕ್ಷಕ್ಕೆ ವನವೆಂದು ಹೆಸರು. ವೃಕ್ಷಗಳಲ್ಲಿ ದೊಡ್ಡದಾದ ವೃಕ್ಷಕ್ಕೆ ಅಥವಾ ವೃಕ್ಷಾಭಿಮಾನಿದೇವತೆಗೆ ವನಸ್ಪತಿಯೆಂದು ಹೆಸರು. ಉದಾಹರಣೆಗಾಗಿ— ಈ ವನಸ್ಪತಿಶಬ್ದವಿರುವ **ಉಪಾವಸೃಜನ್** ಎಂಬ ಋಕ್ಕನ್ನು (ಋ. ಸಂ. ೧೦-೧೧೦-೧೦) ಹೇಳಿರುವರು.

**ತತ್ ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥**

(ನಿ. ೮-೧೮-೧೯)

ವನಸ್ಪತಿಶಬ್ದಕ್ಕೆ ಯಜ್ಞದಲ್ಲಿ ಪಶುಗಳನ್ನು ಕಟ್ಟುವ ಯೂಪಸ್ತಂಭವೆಂದೂ ಅರ್ಥವಾಗುವುದು ಎಂದು ಕಾತ್ಥಕ್ಯ ಎಂಬುವರ ಮತವು. ಈ ವಿಷಯದಲ್ಲಿ **ಅಂಜಂತಿ ತ್ವಾಮಧ್ವರೇ** (ಋ. ಸಂ. ೩-೮-೧) ಎಂಬ ಋಕ್ಕಿನಲ್ಲಿ ವನಸ್ಪತಿ ಶಬ್ದಕ್ಕೆ ಯೂಪವೆಂಬ ಅರ್ಥವಿರುವುದನ್ನು ಉದಾಹರಣೆಯಾಗಿ ಕೊಟ್ಟಿರುವರು. ವನಸ್ಪತಿ ಶಬ್ದಕ್ಕೆ ಅಗ್ನಿಯೆಂದೂ ಅರ್ಥವೆಂದು ಶಾಕಪೂಣಿಯವರ ಮತವು. ಇದರ ಸಮರ್ಥನೆಗಾಗಿ **ದೇವೇಭ್ಯೋ ವನಸ್ಪತೇ** ಮತ್ತು **ವನಸ್ಪತೇ ರಶನಯಾ** ಎಂಬ ಮಂತ್ರಗಳನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಪಾಥಃ**—ಪಾಥಶಬ್ದಕ್ಕೆ ಯಾಸ್ಕರು ಮೂರು ವಿಧವಾದ ಅರ್ಥವನ್ನು ಹೇಳಿರುವರು—

**ಪಾಥಃ । ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಂ । ಶ್ಯೇನೋ ನದೀಯನ್ನನ್ವೇತಿ ಪಾಥಃ । ಇತ್ಯಪಿ ನಿಗಮೋ ಭವತಿ ॥**

(ನಿ ೬-೮)

(೧) ಪಾಥಶಬ್ದಕ್ಕೆ ಅಂತರಿಕ್ಷವೆಂದರ್ಥವು. ಈ ವಿಷಯದಲ್ಲಿ **ಶ್ಯೇನೋ ನ ದೀಯನ್ನನ್ವೇತಿ ಪಾಥಃ** ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ವಿವರಿಸಬಹುದು.

**ಉದಕಮಪಿ ಪಾಥ ಉಚ್ಯತೇ ಪಾನಾತ್ । ಆಚಷ್ಟ ಆಸಾಂ ಪಾಥೋ ನದೀನಾಂ । ಇತ್ಯಪಿ ನಿಗಮೋ ಭವತಿ ॥**

(ನಿ. ೬-೧೦)

(೨) ಪಾಥ ಶಬ್ದಕ್ಕೆ ಉದಕವೆಂದೂ ಅರ್ಥವು. ಏಕೆಂದರೆ ಇದನ್ನು ಪಾನಮಾಡುವವರು. **ಆಚಷ್ಟ ಆಸಾಂ ಪಾಥೋ ನದೀನಾಂ** ಎಂಬ ಶ್ರುತಿವಾಕ್ಯವೂ ಈ ಅರ್ಥವನ್ನು ಸಮರ್ಥಿಸುವುದು.

**ಅನ್ನಮಪಿ ಪಾಥ ಉಚ್ಯತೇ ಪಾನಾದೇವ। ದೇವಾನಾಂ ಪಾಥ ಉಪವಕ್ಷಿ ವಿದ್ವಾನ್ ಇತ್ಯಪಿ ನಿಗಮೋ ಭವತಿ ||**

(ನಿ. ೬-೧೦)

(೩) ಜನರು ಅನ್ನವನ್ನು ಭಕ್ಷಿಸುವುದರಿಂದ ಅನ್ನಕ್ಕೆ ಪಾಥವೆಂದೂ ಹೆಸರು. ಈ ವಿಷಯವಲ್ಲಿ **ದೇವಾನಾಂ ಪಾಥ ಉಪವಕ್ಷಿ ವಿದ್ವಾನ್** ಎಂಬ ಪ್ರಕೃತ ಋಕ್ಕೇ ಉದಾಹರಣೆಯಾಗಿರುವುದು.

ವನಸ್ಪತೀ ಶಬ್ದಕ್ಕೆ ಯಾಸ್ಕರ ವಿವರಣೆಯು—

**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ।**

(ನಿ. ೮-೩)

**ತತ್ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ||**

(ನಿ. ೮-೧೮)

ಎಂದರೆ ಅಗ್ನಿಯನ್ನೇ ವನಸ್ಪತಿಯೆಂದು ಹೇಳುವರು. ಏಕೆಂದರೆ ಅಗ್ನಿಯು ವನಗಳ ಪಾಲಕನು ಅಥವಾ ಸಂರಕ್ಷನು. ವೃಕ್ಷದಲ್ಲಿ ಅಗ್ನಿಯು ಅಂತರ್ಭೂತವಾಗಿದ್ದರೂ ಅದನ್ನು ಸುಡುವುದಿಲ್ಲವಾದ್ದರಿಂದ ಅದರ ಸಂರಕ್ಷಕನೆಂದು ಹೇಳಲ್ಪಡುವನು. ಅಥವಾ ದಾರ್ವಾದಿ ಯಜ್ಞಸಾಧನಗಳಿಗೆ ಉಪಯೋಗವಾಗುವುದರಿಂದ ವನವೆಂದು ಹೆಸರು. ವನಸ್ಪತಿ ಎಂದರೆ ವೃಕ್ಷರಾಜ, ದೊಡ್ಡದಾದ ವೃಕ್ಷ ಎಂದರ್ಥವು. ವನಸ್ಪತಿ ಎಂದರೆ ಯಾವ ದೇವತೆಯು ? ಯಜ್ಞದಲ್ಲಿ ಪಶುವನ್ನು ಕಟ್ಟುವುದಕ್ಕಾಗಿ ನೆಟ್ಟಿರುವ ಮರದ ಕಂಭವೆಂದು ಕಾತ್ಥಕ್ಯರ ಅಭಿಪ್ರಾಯವು. ವನಸ್ಪತಿಯೆಂದರೆ ಅಗ್ನಿಯೆಂದು ಶಾಕಪೂಣಿಯ ಅಭಿಪ್ರಾಯವು.

ಕಾತ್ಥಕ್ಯರ ಅಭಿಪ್ರಾಯವನ್ನೂ ಸಮರ್ಥಿಸುವುದಕ್ಕಾಗಿ ಯಾಸ್ಕರು ಒಂದು ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು—

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ||**

(ಋ. ಸಂ. ೨-೮-೧)

ಎಂದರೆ ಎಲೈ ವನಸ್ಪತಿಯೇ, (ಯೂಪಸ್ತಂಭವೇ) ಯಜ್ಞದಲ್ಲಿ ಋತ್ವಿಗ್ಯಜಮಾನನು ನಿನ್ನನ್ನು ಮಂತ್ರಸಂಸ್ಕೃತವಾದ ಘೃತ (ತುಪ್ಪ) ದಿಂದ ಲೇಪನಮಾಡುವರು ಎಂದು ಪಶುವನ್ನು ಕಟ್ಟುವ ಯೂಪಸ್ತಂಭವನ್ನುದ್ದೇಶಿಸಿ ಸಂಬೋಧನೆಮಾಡಿರುವುದು ಮತ್ತು ಇದೇ ಸೂಕ್ತದ ೩, ೬ ೧೧ ನೆಯ ಋಕ್ಕುಗಳಲ್ಲಿಯೂ ವನಸ್ಪತಿಯನ್ನು ಯೂಪಸ್ತಂಭವೆಂದು ಸಂಬೋಧನೆಮಾಡಿರುವುದಲ್ಲದೆ ಈ ಸೂಕ್ತಕ್ಕೆ ಯೂಪವೇ ದೇವತೆಯು ಎಂದು ಪ್ರಸಿದ್ಧವಾಗಿರುವುದು. ಈ ಸೂಕ್ತದ ಹನ್ನೊಂದನೆಯ ಋಕ್ಕಿನಲ್ಲಿ— **ವನಸ್ಪತೇ ಶತವಲ್ಶೋ ವಿರೋಹ ಸಹಸ್ರವಲ್ಶಾ ವಿ ವಯಂ ರುಹೇಮ** ಎಂದರೆ, ಎಲೈ ವನಸ್ಪತಿಯೇ, ನೂರಾರು ಮತ್ತು ಸಾವಿರಾರು (ಸ್ಥಳಗಳಲ್ಲಿ) ಚಿಗುರುಗಳಿಂದ ಕೂಡಿ ಬೆಳೆ ಎಂದು ಹೇಳಿರುವುದು ವನಸ್ಪತಿಯಾದ ವೃಕ್ಷಕ್ಕೆ ಅನ್ವಯಿಸುವುದಾಗಿರುವುದು. ಋ. ಸಂ. ೧೦-೭೦-೧೦ ನೇ ಋಕ್ಕಿನಲ್ಲಿ **ವನಸ್ಪತೇ ರಶನಾಯಾ ನಿಯೂಯ** ಎಲೈ ವನಸ್ಪತಿಯೇ, ಪಶುವನ್ನು ಕಟ್ಟುವ ಹಗ್ಗದಿಂದ ಕಟ್ಟಿ ಎಂದು ಹೇಳಿರುವುದು ವನಸ್ಪತಿ ಶಬ್ದಕ್ಕೆ ಯೂಪಸ್ತಂಭವೆಂಬ ಅರ್ಥವನ್ನು ಪುಷ್ಟೀಕರಿಸುವುದು ಆದುದರಿಂದ ವನಸ್ಪತಿಯೆಂದರೆ ಯೂಪಸ್ಥಂಭವೆಂದೇ ಅರ್ಥವು. ಅಗ್ನಿಯೆಂದು ಪರೋಕ್ಷಾರ್ಥವು.

ವನಸ್ಪತಿಯ ಸ್ವರೂಪವೇನೆಂಬುದನ್ನು ಬಹಳ ವಿಮರ್ಶೆಮಾಡಿ ತಿಳಿಯಬೇಕು. ಈ ಪದದ ಆಧಾರದ ಮೇಲೆ ಕೆಲವು ಆಧುನಿಕರಾದ ಪಾಶ್ಚಾತ್ಯ ವಿದ್ವಾಂಸರು ವೇದಕಾಲದಲ್ಲಿ ಹಿಂಸಾತ್ಮಕವಾದ ಪಶುಯಾಗವು ರೂಢಿಯಾಗಿದ್ದು ಆಪ್ರೀ ಸೂಕ್ತಗಳು ಅಂತಹ ಯಾಗಕ್ಕೆ ಸಂಬಂಧಿಸಿದ ಪ್ರಯಾಜ ಮಂತ್ರಗಳೆಂದು ತೀರ್ಮಾನಕ್ಕೆ ಬಂದಿದ್ದಾರೆ.

ಸ್ಥೂಲವಾದ ದೃಷ್ಟಿಯಿಂದ ನೋಡಿದರೆ **ವನಸ್ಪತಿ**ಯೆಂದರೆ ಯಾಗಪಶುವನ್ನು ಕಟ್ಟತಕ್ಕ ಯೂಪಸ್ತಂಭವೆಂದಾಗುತ್ತದೆ. ಆದರೆ ಇದು ಯಜ್ಞಪಶುವನ್ನು ಕಟ್ಟುವ ಸ್ಥಂಭವೇ ಅಲ್ಲವೇ ಎಂಬ ವಿಷಯದಲ್ಲಿ ಶ್ರುತಿವಾಕ್ಯಗಳನ್ನು ಗಮನಿಸಿ ಅನಂತರ ಅವುಗಳ ಆಧಾರದ ಮೇಲೆ **ವನಸ್ಪತಿಯ** ಸ್ವರೂಪವನ್ನು ನಿಷ್ಕರ್ಷಿಸಬಹುದು.

**ಹೋತಾ ಯಕ್ಷದ್ವನಸ್ಪತಿಮುಪಾವಸ್ರಕ್ಷದ್ಧಿಯೋ ಜೋಷ್ಟಾರಗ್ಂ ದಶಮಂ ನರಃ। ಸ್ವದಾತ್ಸ್ವ-ಧಿತಿರ್ಋತುಥಾದ್ಯ ದೇವೋ ದೇವೇಭ್ಯೋ ಹವ್ಯಾವಾಡ್ವೇತ್ವಾಜ್ಯಸ್ಯ ಹೋತರ್ಯಜ।**

(ತೈ. ಬ್ರಾ. ೩-೬-೨-೨)

ಎಂಬ ಮಂತ್ರಕ್ಕೆ ಭಾಷ್ಯವು ಈ ರೀತಿಯಿದೆ. **ವನಸ್ಪತಿಂ ಯೂಪಾಧಾರಭೂತಂ ದಶಮಪ್ರಯಾಜದೇವತಾತ್ಮಕ-ಮಗ್ನಿಂ ದೈವ್ಯೋ ಹೋತಾ ಯಜತು** ವನಸ್ಪತಿಯು ಯೂಪಕ್ಕೆ ಆಧಾರಭೂತವಾದದ್ದು ಮತ್ತು ಹತ್ತನೆಯ ಪ್ರಯಾಜ ದೇವತಾತ್ಮಕವಾದ ಅಗ್ನಿಯು. ಇವನನ್ನುದ್ದೇಶಿಸಿ ಹೋತೃವು ಯಾಗಮಾಡಲೆಂದು **ವನಸ್ಪತಿಗೆ ಧಿಯೋ, ಜೋಷ್ಟಾ, ಸ್ವದಾತ್, ಸ್ವಧಿತಿಃ, ದೇವೇಭ್ಯಃ, ಋತುಥಾ, ಹವ್ಯವಾಟ್, ಯಜ್ಞಸ್ಯ ಆಯುಃ ಕಲ್ಪಮಾನಃ** ಎಂಬ ವಿಶೇಷಣಗಳಿವೆ. ಈ ವಿಶೇಷಣಗಳಲ್ಲಿ **ಧಿಯೋ ಜೋಷ್ಟಾ** ಎಂಬುದಕ್ಕೆ **ಬುದ್ಧೇಃ ಪ್ರೀಣಯಿತಾರಂ ।** ಬುದ್ಧಿಗೆ ಹರ್ಷದಾಯಕನೆಂದೂ, **ಸ್ವಧಿತಿಃ—**ಸ್ವಧಿತಿಯಿಂದ (ವಜ್ರಾಯುಧ ಅಥವಾ) ದಿವ್ಯಶಸ್ತ್ರದಿಂದ ಸಂಸ್ಕೃತವಾದದ್ದೆಂದೂ, **ಋತುಥಾ-ಋತಾ ವಿಹಿತೇ ಕಾಲವಿಶೇಷೇ ಅದ್ಯ ಅಸ್ಮಿಕನ್ಕರ್ಮಣಿ ಸ್ವದಾದಸ್ಮಾಭಿರ್ದೀಯಮಾನಂ ಹವಿಃ ಸ್ವದಯತು। ಕಿಂಚ ದೇವೋ ವನಸ್ಪತಿರ್ದೇವೇಭ್ಯೋ ದೇವಾರ್ಥಂ ಹವ್ಯಾ ಹವೀಂಷಿ ಹವ್ಯವಾಡ್ವಹತು ।** ಈ ಯಾಗಕಾಲದಲ್ಲಿ ನಮ್ಮಿಂದ ಅರ್ಪಿತಗಳಾದ ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸಲಿ ಎಂದು ಮಂತ್ರಾರ್ಥ. ಮತ್ತು **ಯಜ್ಞಸ್ಯ ಆಯುಃಕಲ್ಪಮಾನಃ** ಎಂಬ ವಿಶೇಷಣದಿಂದ ಯಜ್ಞದ ಆಯುಸ್ಸನ್ನು ಬೆಳೆಸುವವನು ಎಂದರ್ಥ. ಈ ವಿಧವಾದ ವಿಶೇಷಣಗಳಿಂದ **ಪ್ರೈಷ** ಸೂಕ್ತದಲ್ಲಿ **ಅಗ್ನಿಗೂ, ವನಸ್ಪತಿಗೂ** ತಾದಾತ್ಮ್ಯವನ್ನೂ ಹೇಳಿದೆ. ಐತರೇಯ ಬ್ರಾಹ್ಮಣದಲ್ಲಿ **ಪ್ರಾಣೋ ವೈ ವನಸ್ಪತಿಃ** (೨-೪) ಎಂಬ ವಾಕ್ಯದಿಂದ ನಿರ್ದೇಶಿಸಿದೆ. ನಿರುಕ್ತಕಾರರೂ ಮೊದಲು ವನಸ್ಪತಿಶಬ್ದದ ನಿರ್ವಚನವನ್ನು ಹೇಳಿ ಅನಂತರ **ಆಪ್ರೀ** ಸೂಕ್ತದಲ್ಲಿ ವನಸ್ಪತಿಯ ಸ್ವರೂಪವೇನೆಂಬುದನ್ನು ತಿಳಿಸಿದ್ದಾರೆ. (ಋ. ಸಂ. ೨-೩೭-೩) ನೇ ಋಕ್ಕನ್ನು ವಿವರಿಸಿರುವಾಗ ಅದರಲ್ಲಿರುವ ವನಸ್ಪತಿಶಬ್ದದ ನಿರ್ವಚನವನ್ನು ತೋರಿಸುತ್ತಾ (ನಿ. ೮-೩) **ವನಾನಾಂ ಪಾತಾ ವಾ ಪಾಲಯಿತಾ ವಾ । ವನತಿ ವನೋತೇಃ।** ವನಗಳಿಗೆ ಪ್ರಭುವಾಗಿರುವುದರಿಂದಾಗಲಿ ಅಥವಾ ಪಾಲಕನಾದುದರಿಂದಾಗಲಿ ವನಸ್ಪತಿಯೆಂದು ಅಗ್ನಿಯು ಪ್ರಸಿದ್ಧನಾಗಿದ್ದಾನೆ ಮತ್ತು **ಪಡೆ** ಎಂಬರ್ಥವನ್ನು ಕೊಡತಕ್ಕ **ವನ್** ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ಹೇಳಿ ಆನಂತರ **ಆಪ್ರೀ** ಸೂಕ್ತದ ದೇವತೆಗಳ ಸ್ವರೂಪವನ್ನು ಚರ್ಚಿಸುವಾಗ (ನಿ. ೮-೧೮) **ತತ್ ಕೋ ವನಸ್ಪತಿಃ ಯೂಪ ಇತಿ ಕಾತ್ಥಕ್ಯಃ ಅಗ್ನಿರಿತಿ ಶಾಕಪೂಣಿಃ** ಎಂದು ಎರಡು ಅಭಿಪ್ರಾಯಗಳನ್ನು ತಿಳಿಸಿ ಕಾತ್ಥಕ್ಯರ ಮತವನ್ನು ಸಮರ್ಥಿಸುವುದಕ್ಕೆ,

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯ ಉಪಸ್ಥೇ ॥**

(ಋ. ಸಂ. ೩-೮-೧)

ಎಂಬ ಋಕ್ಕನ್ನುದಹರಿಸಿದ್ದಾರೆ. ಈ ಋಕ್ಕಿನಲ್ಲಿ ಸಾಯಣರು **ವನಸ್ಪತಿ** ಯನ್ನು ಯೂಪನೆಂದೇ ಸಂಬೋಧಿಸಿದ್ದಾರೆ. ಅನಂತರ ನಿರುಕ್ತಕಾರರು **ಶಾಕಪೂಣಿಯ** ಮತವನ್ನು ಸಮರ್ಥಿಸಲು,

ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।
ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀಹವಂ ಮೇ ॥

(ಋ. ಸಂ. ೧೦-೭೦-೧೦)

ಎಂಬ ಋಕ್ಕನ್ನುದಹರಿಸಿದ್ದಾರೆ. ಇಲ್ಲಿಯೂ ಸಾಯಣರು ಯೂಪವೆಂದೇ ಅರ್ಥಮಾಡಿದ್ದಾರೆ. ಆದರೆ ಯೂಪಾಂತರ್ಗತವಾದ ಅಗ್ನಿಯೆಂದು ನಿರುಕ್ತಕಾರರ ಮತ. ದುರ್ಗಾಚಾರ್ಯರು ನಿರುಕ್ತದಲ್ಲಿ ಈ ಋಕ್ಕನ್ನು ವಿವರಿಸುತ್ತಾ **ಏವಮಗ್ನಿರ್ವನಸ್ಪತಿಃ । ಯತ್ ಪುನರೇತದುಕ್ತಂ ಯೂಪಾಂಜನೀಯಾಯಾಂ ಯೂಪೇ ವನಸ್ಪತಿಶಬ್ದಃ ಇತಿ । ಅತ್ರ ಬ್ರೂಮಃ-ಅಗ್ನಿ-ರೇವಾಸೌ ಯೂಪಾಂತರ್ಗತೋ ಯೂಪಾತ್ಮನಾ ವರ್ತಮಾನೋ ಯೂಪಾಂಜನೀಯಾಯಾಂ ವನಸ್ಪತಿಶಬ್ದೇ-ನೋಚ್ಯತೇ ।** ಇಲ್ಲಿ ವನಸ್ಪತಿಯೆಂದರೆ **ಯೂಪಾಂತರ್ಗತನಾದ ಅಗ್ನಿಯೇ** ಹೊರತು ಬೇರೆಯಲ್ಲ ಎಂಬುದನ್ನು ಸ್ಥಿರಪಡಿಸಿದ್ದಾರೆ. ಬೃಹದ್ದೇವತಾಕಾರರು,

**ವನಸ್ಪತಿಂ ತು ಯಂ ಪ್ರಾಹುರಯಂ ಸೋಽಗ್ನಿರ್ವನಸ್ಪತಿಃ ।**
**ಅಯಂ ವನಾನಾಂ ಹಿ ಪತಿಃ ಪಾತಾ ಪಾಲಯತೀತಿ ವಾ ॥**
**ಅಗ್ನಿರ್ಗೃತ್ಸಮದೇನಾಯಂ ವನಸ್ಪತಿರಿತೀಳಿತಃ ।**
**ಮಂಡಸ್ಯೇತ್ಯಸ್ಯ ಸೂಕಸ್ಯ ಷಳೃಚಸ್ಯ ತೃತೀಯಯಾ ॥**
**ಯೂಪವತ್ತರುವಚ್ಚೈವ ಸ್ತುತಿರ್ಯಾಸ್ಯ ಪ್ರಸಂಗಜಾ ।**
**ಸರ್ವೇಣಾಂಜಂತಿಸೂಕ್ತೇನ ತೃತೀಯೇ ಸಾ ತು ಮಂಡಲೇ ॥**

(ಬೃ. ದೇ. ೩-೨೬ ರಿಂದ ೨೮)

ಎಂಬ ವಾಕ್ಯಗಳಿಂದ ಋ. ಸಂ. ೧-೧೩-೧೧ ನೇ ಋಕ್ಕಿನಲ್ಲಿ ಉದ್ದೇಶಿಸುವ ಆಪ್ರೀದೇವತೆಯ ಸ್ವರೂಪವನ್ನು ಚರ್ಚಿಸಿ ಇಲ್ಲಿ ವನಸ್ಪತಿಯೆಂದರೆ **ಪಾರ್ಥಿವಾಗ್ನಿಯೆಂದೂ** ಮತ್ತು ಋ. ಸಂ. ೨-೩೭-೨ ನೇ ಋಕ್ಕಿನಲ್ಲಿ **ಗೃತ್ಸಮದನೂ** ವನಸ್ಪತಿಶಬ್ದದಿಂದ ಈ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದನೆಂದೂ, ಮೂರನೆಯ ಮಂಡಲದಲ್ಲಿ ಮಾತ್ರ ಕೆಲವು ಋಕ್ಕುಗಳಲ್ಲಿ **ಯೂಪ** ಅಥವಾ **ವೃಕ್ಷ**ವೆಂದರ್ಥವೆಂದೂ ಅದೂ ಸಹ ಪ್ರಸಂಗಜವೆಂದೂ ತಿಳಿಸಿದ್ದಾರೆ. ಇದೇ ಅಲ್ಲದೇ,

**ಇಹೈಷ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಶ್ಶುಚಿರುಚ್ಯತೇ ॥**

(ಬೃ. ದೇ. ೧-೬೬)

ಎಂಬಲ್ಲಿ **ವನಸ್ಪತಿ**ಯೆಂದರೆ ಮಧ್ಯಮಲೋಕದ ಅಗ್ನಿಯೆಂದು ತೋರಿಸಿ ಋಕ್ಸಂಹಿತೆಯಲ್ಲಿ ಕೆಲವೆಡೆಗಳಲ್ಲಿ ಬಿಟ್ಟು ಉಳಿದ ನಾನಾ ಕಡೆಗಳಲ್ಲಿ ಈ ಪದವು ಅಗ್ನಿಯನ್ನೇ ನಿರ್ದೇಶಿಸುವುದರಲ್ಲಿ ಸಂಶಯವೇ ಇಲ್ಲವೆಂಬುದನ್ನು ನಿಷ್ಕರ್ಷವಾಗಿ ಹೇಳಿದ್ದಾರೆ.

ಸವೀಮನಿ ॥೩೧॥

ಸವೀಮನಿ ಪ್ರಸವೇ । ' ದೇವಸ್ಯ ವಯಂ ಸವಿತುಃ ಸವೀಮನಿ । ' ಇತ್ಯಪಿ ನಿಗಮೋ ಭವತಿ ॥ ೧೧ ॥

**ಸವೀಮನಿ** ಎಂದರೆ ಪ್ರಚೋದನೆ, ಪ್ರೇರಣೆ. (ಅನುಜ್ಞೆ)

ಉದಾಹರಣೆಯ ಋಕ್ಕು—

**ದೇವಸ್ಯ ವಯಂ ಸವಿತುಃ ಸವೀಮನಿ ಶ್ರೇಷ್ಠೇ ಸ್ಯಾಮ ವಸುನಶ್ಚ ದಾವನ್ನೇ ।**
**ಯೋ ವಿಶ್ವಸ್ಯ ದ್ವಿಪದೋ ಯಶ್ಚತುಷ್ಪದೋ ನಿವೇಶನೇ ಪ್ರಸವೇಚಾಸಿ ಭೂಮನಃ ॥**

(ಋ. ಸಂ. ೬-೭೧-೨)

ಇದರ ಅರ್ಥವು—

ದೇವತಾತ್ಮನಾದ ಸವಿತೃವಿನ ಅನುಜ್ಞೆಯಲ್ಲಿಯೂ ಉತ್ತಮವಾದ ಧನದ ದಾನಕ್ಕೆ ಪಾತ್ರರಾಗಿಯೂ ನಾವು ಇರುವಂತಾಗಲಿ. ಎಲೈ ಸವಿತೃದೇವನೇ, ಯಾವ ಅದೇ ನೀನು ಸಮಸ್ತ ದ್ವಿಪಾದಿಗಳಾದ ಮಾನವಾದಿಗಳ ಮತ್ತು ಚತುಷ್ಪಾದಿಗಳಾದ ಪಶ್ವಾದಿಗಳ ಉತ್ಪತ್ತಿಗೂ ಸ್ಥಿತಿಗೂ ಸ್ವತಂತ್ರಕಾರಣನಾಗಿದ್ದೀಯೆ.

ಸಪ್ರಥಾಃ ॥ ೩೨ ॥

ಸಪ್ರಥಾಃ ಸರ್ವತಃ ಪೃಥುಃ । 'ತ್ವಮಗ್ನೇ ಸಪ್ರಥಾ ಅಸಿ' ಇತ್ಯಪಿ
ನಿಗಮೋ ಭವತಿ ॥೧೧॥

ಉದಾಹರಣೆಯ ಋಕ್ಕು—

**ತ್ವಮಗ್ನೇ ಸಪ್ರಥಾ ಅಸಿ ಜುಷ್ಟೋ ಹೋತಾ ವರೇಣ್ಯಃ ।**
**ತ್ವಯಾ ಯಜ್ಞಂ ವಿ ತನ್ವತೇ ॥**

(ಋ. ಸಂ. ೫-೧೩-೪)

ಇದರ ಅರ್ಥವು—

ಎಲೈ ಅಗ್ನಿಯೇ, ಸಂತೃಪ್ತನೂ, ಎಲ್ಲರಿಂದಲೂ ಆವೃತನಾದವನೂ ಹೋಮಸಂಪಾದಕನೂ ಆದ ನೀನು ಸರ್ವವಿಧದಲ್ಲಿಯೂ ಆಧಿಕ್ಯವನ್ನು ಪಡೆದಿದ್ದೀಯೆ. ನಿನ್ನ ಸಹಾಯದಿಂದಲೇ ಯಜಮಾನರು ಯಜ್ಞವನ್ನು ನಿರ್ವಹಿಸುತ್ತಾರೆ.

**ಸಪ್ರಥಾಃ—ಸರ್ವತಃ ಪೃಥುಃ** । ಅಗ್ನಿಯು ಎಲ್ಲಾ ಕಡೆಗಳಲ್ಲಿಯೂ (ದಹಿಸುವಾಗ) ವ್ಯಾಪಿಸುವವನಾದ್ದರಿಂದ ವಿಸ್ತೃತವಾಗಿ ಹರಡುವನು ಎಂದು **ಸಪ್ರಥಾಃ** ಎಂಬ ಶಬ್ದಕ್ಕೆ ಎಲ್ಲಾ ಕಡೆಗಳಿಂದಲೂ ದೊಡ್ಡದಾಗಿ ಎಂಬ ಅರ್ಥವು ಇಲ್ಲಿ ವಿವೃತವಾಗಿದೆ.

**ಜುಷ್ಟಃ—ಸರ್ವದಾ ಪ್ರೀತಃ।** ಯಜಮಾನರು ಯಜ್ಞದಲ್ಲಿ ಅರ್ಪಿಸುವ ಹವಿರಾದಿಗಳಿಂದ ಯಾವಾಗಲೂ ಪ್ರೀತನಾದವನು, ಸಂತೋಷಗೊಂಡಿರುವವನು ಎಂದಭಿಪ್ರಾಯವು.

**ವರೇಣ್ಯಃ—ಸರ್ವೈರ್ವರಣೀಯಃ।** ಎಲ್ಲರಿಂದಲೂ ಅಪೇಕ್ಷಿಸಲ್ಪಡುವವನು. ಅಗ್ನಿಯಿಲ್ಲದೆ ಯಜ್ಞಮಾಡಲು ಸಾಧ್ಯವಿಲ್ಲವಾದ್ದರಿಂದ ಯಜ್ಞಮಾಡುವ ಯಜಮಾನರಾದಿ ಸಮಸ್ತಜನರೂ ಅಗ್ನಿಯನ್ನು ಅಪೇಕ್ಷಿಸುವರು. ಅಗ್ನಿಯು ಎಲ್ಲರಿಗೂ ಬೇಕಾದವನು. ಆದುದರಿಂದಲೇ ಈ ಋಕ್ಕಿನ ಉತ್ತರಾರ್ಧದಲ್ಲಿ **ತ್ವಯಾ ಯಜ್ಞಂ ವಿ ತನ್ವತೇ** ಸರ್ವರೂ ನಿನ್ನಿಂದಲೇ (ನಿನ್ನ ಸಹಾಯದಿಂದಲೇ ಯಜ್ಞವನ್ನು ನಿರ್ವಹಿಸುವರು. ಎಂದು ಹೇಳಿದೆ.

ವಿದಥಾನಿ ॥ ೩೩ ॥

ವಿದಥಾನಿ ವೇದನಾನಿ। 'ವಿದಥಾನಿ ಪ್ರಚೋದಯನ್'। ಇತ್ಯಪಿ ನಿಗಮೋ ಭವತಿ ॥ ೧೩ ॥ ೭ ॥

ಉದಾಹರಣೆಯ ಋಕ್ಕು—

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ ।**
**ವಿದಥಾನಿ ಪ್ರಚೋದಯನ್ ॥**

(ಋ. ಸಂ. ೩–೨೭–೭)

ಇದರ ಅರ್ಥವು—

ಸೋಮಸಂಪಾದಕನೂ, ಮರಣಧರ್ಮರಹಿತನೂ ಪ್ರಕಾಶಮಾನನೂ ಆದ ಅಗ್ನಿಯು ಯಜ್ಞಾರ್ಹವಾದ ಕರ್ಮವನ್ನು ಪ್ರೇರಿಸುತ್ತಾ ಕರ್ಮವಿಷಯಕವಾದ ಜ್ಞಾನದಿಂದ ಕೂಡಿಕೊಂಡು ಕರ್ಮದ ಪ್ರಾರಂಭದ ಕಾಲದಲ್ಲೇ ನಮ್ಮ ಅಭಿಮುಖವಾಗಿ ಬರುತ್ತಾನೆ.

**ವಿದಥಾನಿ—ವೇದನಾನಿ, ವೇದಿತವ್ಯಾನಿ ಕರ್ಮಾಣಿ** ತಿಳಿದುಕೊಳ್ಳಬೇಕಾದ ಯಜ್ಞಕರ್ಮಗಳು ಎಂದರ್ಥವು ಅಥವಾ ಜ್ಞಾನವು, ತಿಳುವಳಿಕೆಯು ಎಂದರ್ಥವು.

**ಮಾಯಯಾ—ಮಿಮಾತೇ ಜಾನೀತೇ ಕರ್ಮಮಿಾಯತೇ ಅನಯೇತಿ ವಾ ಮಾಯಾ ಕರ್ಮವಿಷಯ ಜ್ಞಾನಂ।** ಪರಿಚ್ಛಿನ್ನಭಾವದಿಂದ ತಿಳಿಯಲ್ಪಡುವುದು, ಅಥವಾ ಪರಿಚ್ಛಿನ್ನಭಾವವನ್ನು ಅರಿಯಲು ಸಾಧನವಾದುದು ಮಾಯೆಯು ಎಂದು ಮಾಯಾಶಬ್ದಾರ್ಥವು ವಿವೃತವಾಗಿ **ಕರ್ಮವಿಷಯಾಭಿಜ್ಞಾನೇನ ಯುಕ್ತಃ** ಅಗ್ನಿಯು (ಕರ್ಮ ವಿಷಯಕವಾದ) ಕರ್ಮಗಳ ಸ್ವರೂಪವನ್ನು ಅರಿಯಲು ಅರ್ಹವಾದ ಪಾಂಡಿತ್ಯರೂಪದಿಂದ ಇರುವ ಮಾಯೆಯಿಂದ (ಜ್ಞಾನದಿಂದ) ಕೂಡಿರುವವನು ಎಂದು ವಿವರಿಸಿದೆ.

**ವಿದಥೇಷು—ಯಜ್ಞೇಷು।** ಯಜ್ಞಗಳಲ್ಲಿ ಎಂದರೆ ಯಜ್ಞಸ್ಥಾನಗಳಲ್ಲಿ ಎಂದರ್ಥ. **ವೇದಯತ್ಸು ಸ್ತೋತ್ರೇಷು ನಿಮಿತ್ತಭೂತೇಷು** ಎಂಬುದರಿಂದ **ವಿದಥ** ಶಬ್ದದ ನಿರ್ವಚನವನ್ನು ತೋರಿಸಿದೆ. ಇಲ್ಲಿ ನಿರುಕ್ತಕಾರರ ನಿರ್ವಚನಗಳಲ್ಲಿ ಒಂದನ್ನು ಮಾತ್ರ ಅನುಸರಿಸಿದೆ. **ಯಜ್ಞಃ ವೇನಃ** ಇತ್ಯಾದಿ **ಯಜ್ಞನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩–೯) ಮತ್ತು **ವಿದಥಾನಿ ವೇದನಾನಿ ।** ವಿದಥ ಶಬ್ದಕ್ಕೆ ಜ್ಞಾನವೆಂದರ್ಥವೆಂಬುದನ್ನು (ನಿ. ೭–೭) ತೋರಿಸಲು—

**ಹೋತಾ ದೇವೋ ಅಮರ್ತ್ಯಃ ಪುರುಸ್ತಾದೇತಿ ಮಾಯಯಾ। ವಿದಥಾನಿ ಪ್ರಚೋದಯನ್ ॥**

(ಋ. ಸಂ. ೩–೨೭–೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಜ್ಞಾನಾರ್ಥಕ**ವಾದ **ವಿದ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಸಾಯಣರು **ವಿದಥಾನಿ ವೇದಿತವ್ಯಾನಿ ಕರ್ಮಾಣಿ ।** ಅರಿಯಲ್ಪಡಬೇಕಾದ ಕರ್ಮಗಳು ಎಂದರ್ಥಮಾಡಿದ್ದಾರೆ. **ಈ** ಪದಕ್ಕಾಗಿ ನಿಷ್ಕರ್ಷವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ವೈಯುಕ್ತಿಕವಾದ ಅಭಿಪ್ರಾಯವನ್ನು ತಿಳಿಸಿರುವರು. ಒಬ್ಬೊಬ್ಬರು ಒಂದೊಂದು ವಿಧವಾದ ಈ ಪದದ ನಿರ್ವಚನವನ್ನು ತೋರಿಸಿ ಬೇರೆ ಬೇರೆ ಅರ್ಥ ಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುವುವು ಎಂದು ತಿಳಿಯುತ್ತದೆ.

**ವಿದಥ** ಶಬ್ದವು **ಧಾ** ಧಾತುವಿಗೆ **ವಿ** ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. **ವಿಧಾ** ಎಂದರೆ ಹಂಚು, **ನಿಯಮಿಸು** ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. **ವಿದಥ** ಮತ್ತು **ವಿಧಾ** ಈ ಎರಡು ಪದಗಳ ಅರ್ಥಗಳೂ ಒಂದೇ ಎಂಬ ಅಂಶವನ್ನು,

**ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬಧ್ಯಮಾನಾಃ ।**
**ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥**

(ಋ. ಸಂ. ೫-೩-೬)

ಎಂಬ ಋಕ್ಕಿನಲ್ಲಿರುವ **ವಿದಥೇಷ್ವಹ್ನಾಂ** ಎಂಬ ಪದಗಳಿಗೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥**

(ಋ. ಸಂ ೭-೬೭-೧೧)

ಎಂಬ ಋಕ್ಕಿನಲ್ಲಿರುವ **ವಿ—ದಧುಃ** ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ತಿಳಿಯುತ್ತದೆ. ಮತ್ತು **ವಿಹಿತ, ವಿದಥ** ಎಂಬ ಪದಗಳ ಅರ್ಥಗಳೂ ಒಂದೇ ಆಗಿ, ಶಾಸ್ತ್ರವಿಹಿತವಾದ ಯಜ್ಞವೇ **ವಿದಥ**ವೆಂಬ ಹೆಸರಿನಿಂದ ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಕೆಲವು ಪಾಶ್ಚಾತ್ಯಪಂಡಿತರು ವಿವರಿಸಿದ್ದಾರೆ.

**ಇತಿ ಸಪ್ತಮಃ ಖಂಡಃ**

ಇಲ್ಲಿಗೆ ಏಳನೆಯ ಖಂಡವು ಸಮಾಪ್ತವು

---

## ಅಷ್ಟಮಃ ಖಂಡಃ

### ಎಂಟನೆಯ ಖಂಡವು

ಶ್ರಾಯನ್ತ ಇವ ಸೂರ್ಯಂ ವಿಶ್ವೇದಿನ್ದ್ರಸ್ಯ ಭಕ್ಷತ । ವಸೂನಿ ಜಾತೇ ಜನಮಾನ ಓಜಸಾ ಪ್ರತಿ ಭಾಗಂ ನ ದೀಧಿಮ ॥ ಸಮಾಶ್ರಿತಾಃ ಸೂರ್ಯಮುಪತಿಷ್ಠನ್ತೇ ಅಪಿವೋಪಮಾರ್ಥೇ ಸ್ಯಾತ್ ಸೂರ್ಯಮಿವೇಂದ್ರ ಮುಪತಿಷ್ಠನ್ತ ಇತಿ ಸರ್ವಾಣೀನ್ದ್ರಸ್ಯ ಧನಾನಿ ವಿಭಕ್ಷ್ಯಮಾಣಾಃ ಸ ಯಥಾ ಧನಾನಿ ವಿಭಜತಿ ಜಾತೇ ಚ ಜನಿಷ್ಯಮಾಣೇ ಚ ತಂ ವಯಂ ಭಾಗಮನುಧ್ಯಾಯಾಮೌಜಸಾ ಬಲೇನೌಜ ಓಜತೇರ್ವೋಬ್ಜತೇರ್ವಾ–ಶೀರಾಶ್ರಯಣಾದ್ವಾ ಶ್ರಪಣಾದ್ವಾಥೇಯಮಿತರಾಶೀರಾಶಾಸ್ತೇಃ ॥ ಇನ್ದ್ರಾಯ ಗಾವ ಆಶಿರಮಿತ್ಯಪಿ ನಿಗಮೋ ಭವತಿ । ಸಾ ಮೇ ಸತ್ಯಾಶೀರ್ದೇವೇಷ್ವಿತಿ ಚ ॥

ಯದಾ ತೇ ಮರ್ತೋ ಅನು ಭೋಗಮಾನಲಾದಿದ್ಗ್ರಸಿಷ್ಠ ಓಷಧೀರಜೀಗಃ । ಯದಾ ತೇ ಮರ್ತ್ಯೋ ಭೋಗಮನ್ವಾಪದಥ ಗ್ರಸಿತೃತಮ ಓಷಧೀರಗಾರೀರ್ಜಗರ್ತಿರ್ಗಿರತಿಕರ್ಮಾ ವಾ ಗೃಣಾತಿ-ಕರ್ಮಾ ವಾ ಗೃಹ್ಣಾತಿಕರ್ಮಾ ವಾ। ಮೂರಾ ಅಮೂರ ನ ವಯಞ್ಚಿಕಿತ್ವೋ ಮಹಿತ್ವಮಗ್ನೇ ತ್ವಮಙ್ಗ ವಿತ್ಸೇ ॥ ಮೂಢಾ ವಯಂ ಸ್ಮೋಽಮೂಢಸ್ತ್ವಮಸಿ ನ ವಯಂ ವಿದ್ಮೋ ಮಹತ್ತ್ವಮಗ್ನೇ ತ್ವಂ ತು ವೇತ್ಥ ಶಶಮಾನಃ ಶಂಸಮಾನಃ । ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತೀತ್ಯಪಿ ನಿಗಮೋ ಭವತಿ । ದೇವೋ ದೇವಾಚ್ಯಾ ಕೃಪಾ । ದೇವೋ ದೇವಾನ್ ಪ್ರತ್ಯಕ್ತಯಾ ಕೃಪಾ ಕೃಪ್ ಕೃಪತೇರ್ವಾ ಕಲ್ಪತೇರ್ವಾ ॥ ೮ ॥

---

ಶ್ರಾಯನ್ತಃ ॥ ೩೪ ॥

'ಶ್ರಾಯನ್ತ ಇವ ಸೂರ್ಯಂ ವಿಶ್ವೇದಿನ್ದ್ರಸ್ಯ ಭಕ್ಷತ । ವಸೂನಿ ಜಾತೇ ಜನಮಾನ ಓಜಸಾ ಪ್ರತಿ ಭಾಗಂ ನ ದೀಧಿಮ' ॥ ಸಮಾಶ್ರಿತಾಃ ಸೂರ್ಯಮುಪತಿಷ್ಠನ್ತೇ ॥ ಅಪಿ ವೋಪಮಾರ್ಥೇ ಸ್ಯಾತ್ ಸೂರ್ಯಮಿವೇನ್ದ್ರಮುಪತಿಷ್ಠನ್ತ ಇತಿ । ಸರ್ವಾಣೀನ್ದ್ರಸ್ಯ ಧನಾನಿ ವಿಭಕ್ಷ್ಯಮಾಣಾಃ । ಸ ಯಥಾ ಧನಾನಿ ವಿಭಜತಿ ಜಾತೇ ಚ ಜನಿಷ್ಯ-ಮಾನೇ ಚ । ತಂ ವಯಂ ಭಾಗಮನುಧ್ಯಾಯಾಮೌಜಸಾ ಬಲೇನ । ಓಜ ಓಜತೇರ್ವೋಽಬ್ಜತೇರ್ವಾ ॥ ೧ ॥

ಉದಾಹರಣೆಯ ಋಕ್ಕು—

**ಶ್ರಾಯಂತ ಇವ ಸೂರ್ಯಂ ವಿಶ್ವೇದಿಂದ್ರಸ್ಯ ಭಕ್ಷತ ।**
**ವಸೂನಿ ಜಾತೇ ಜನಮಾನ ಓಜಸಾ ಪ್ರತಿ ಭಾಗಂ ನ ದೀಧಿಮ ॥**

(ಋ. ಸಂ. ೮-೯೯-೩)

ಇದರ ಅರ್ಥವು—

ಸೂರ್ಯನನ್ನು ಆಶ್ರಯಿಸಿರುವ ರಶ್ಮಿಗಳೆಲ್ಲವೂ ಸೂರ್ಯನನ್ನೇ ಸೇವಿಸುವಂತೆ ಸಕಲಧನಗಳೂ ಸಹ ಇಂದ್ರನನ್ನೇ ಸೇವಿಸುತ್ತವೆ. ಅದೇ ಇಂದ್ರನು ಧನಗಳನ್ನು ಉತ್ಪನ್ನವಾಗಿರುವವೂ ಮುಂದೆ ಹುಟ್ಟತಕ್ಕವೂ ಆದ ಸಕಲಭೂತಗಳಿಗೂ ತನ್ನ ಬಲದಿಂದ ಹಂಚುತ್ತಾನೆ. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಪುತ್ರರು ಭಾಗವನ್ನು ನಿರೀಕ್ಷಿಸುವಂತೆ ಇಂದ್ರನ ಧನದಲ್ಲಿ ನಮ್ಮ ಭಾಗವನ್ನೂ ನಿರೀಕ್ಷಿಸಿ ಧ್ಯಾನಿಸೋಣ.

**ವಿಶ್ವೇತ್ ಭಕ್ಷತ** ಎಂಬುದಕ್ಕೆ ಸಕಲ ಮರುತ್ತುಗಳೂ ಇಂದ್ರನನ್ನೇ ಸೇವಿಸುತ್ತ ಎಂಬರ್ಥವನ್ನೂ ತಿಳಿಸಿದೆ. ಆ ಮರುತ್ತುಗಳೇ ಇಂದ್ರನ ಧನವನ್ನು ಸಕಲ ಭೂತಗಳಿಗೂ ಹಂಚುತ್ತವೆ ಎಂದು ಮುಂದಿನ ವಾಕ್ಯದ ತಾತ್ಪರ್ಯ. **ಶ್ರಾಯಂತಃ** ಎಂಬ ಶಬ್ದಕ್ಕೆ ಅರ್ಥವಿವರಣೆಮಾಡುವಾಗ ಈ ಮಂತ್ರಕ್ಕೆ ನಿರುಕ್ತದಲ್ಲಿ ಈರೀತಿ ವಿವರಣೆಯಿರುತ್ತದೆ.—

**ಶ್ರಾಯಂತಃ । ಶ್ರಾಯಂತ ಇವ ಸೂರ್ಯಂ ವಿಶ್ವೇದಿಂದ್ರಸ್ಯ ಭಕ್ಷತ । ವಸೂನಿ ಜಾತೇ ಜನಮಾನ ಓಜಸಾ ಪ್ರತಿ ಭಾಗಂ ನ ದೀಧಿಮ ॥ ಸಮಾಶ್ರಿತಾಃ ಸೂರ್ಯಮುಪತಿಷ್ಠಂತೇ । ಅಪಿ ವೋಪಮಾರ್ಥೇ ಸ್ಯಾತ್ । ಸೂರ್ಯಮಿವೇಂದ್ರಮುಪತಿಷ್ಠಂತ ಇತಿ । ಸರ್ವಾಣೀಂದ್ರಸ್ಯ ಧನಾನಿ ವಿಭಕ್ಷಮಾಣಾಃ । ಸ ಯಥಾ ಧನಾನಿ ವಿಭಜತಿ ಜಾತೇ ಚ ಜನಿಷ್ಯಮಾಣೇ ಚ । ತಂ ವಯಂ ಭಾಗಮನುಧ್ಯಾಯಾಮಾಓಜಸಾ ಬಲೇನ । ಓಜ ಓಜತೇರ್ವೋಬ್ಜತೇರ್ವಾ ॥**

(ನಿ. ೬–೮)

ಇಲ್ಲಿ **ಶ್ರಾಯಂತಃ** ಎಂಬ ಶಬ್ದಕ್ಕೆ ಆಶ್ರಯಿಸಿರುವ ಎಂದರ್ಥವು. **ಶ್ರಾಯಂತ ಇವ ಸೂರ್ಯಂ** ಎಂಬ ವಾಕ್ಯಕ್ಕೆ ಸೂರ್ಯನನ್ನು ಆಶ್ರಯಿಸಿರುವಂತೆ ಎಂದರ್ಥವು. ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಸೂರ್ಯನನ್ನೇ ಆಶ್ರಯಿಸುತ್ತಾ ಅವನನ್ನು ಧ್ಯಾನಿಸುತ್ತಾರೆ ಎಂದು ಒಂದುವಿಧವಾದ ಅರ್ಥವು. ಅಥವಾ ಈ ವಾಕ್ಯವನ್ನು ಉಪಮಾನ ವಾಕ್ಯವನ್ನಾಗಿ ತೆಗೆದುಕೊಳ್ಳಬಹುದು. ಸೂರ್ಯನನ್ನು (ರಶ್ಮಿಗಳು)ಆಶ್ರಯಿಸುವಂತೆ **ವಿಶ್ವೇದಿಂದ್ರಸ್ಯ** ಸಮಸ್ತ ಧನಗಳೂ ಇಂದ್ರನನ್ನು ಆಶ್ರಯಿಸುತ್ತವೆ. ಎಂದರೆ, ಇಂದ್ರನಲ್ಲಿ ಸ್ಥಾಪಿತವಾಗಿರುತ್ತವೆ. ಅಂತಹ ಸಮಸ್ತ ಧನಗಳನ್ನು ಇಂದ್ರನು ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಪ್ರಾಣಿಗಳಿಗೆ (ಜನರಿಗೆ) ಹಂಚಿಕೊಡುತ್ತಾನೆ. ಹೇಗೆಂದರೆ ಸೂರ್ಯನ ಕಿರಣಗಳ ಉಪಯೋಗವನ್ನು ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಸಕಲ ಜೀವಜಂತುಗಳೂ ಅನುಭವಿಸುವಂತೆ ಇಂದ್ರನಲ್ಲಿರುವ ಸಮಸ್ತಧನವೂ ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಸಕಲ ಜನರಿಗೂ ಇಂದ್ರನಿಂದ ಹಂಚಲ್ಪಡುವುದೆಂದಭಿಪ್ರಾಯವು. ಇಂದ್ರನು ನಮಗೆ ಹಂಚಿಕೊಡುವ ನಮ್ಮ ಭಾಗದ ಧನವನ್ನು ನಾವು ನಮ್ಮ ಸ್ವಶಕ್ತಿಯಿಂದ ಎಂದರೆ ಇಂದ್ರನನ್ನು ಪ್ರಾರ್ಥಿಸುವುದರಿಂದ ಹೊಂದೋಣ. ಅಥವಾ ಇಂದ್ರನು ತಮ್ಮ ಸ್ವಶಕ್ತಿಯಿಂದ ತನ್ನಲ್ಲಿರುವ ಧನದಲ್ಲಿ ನಮ್ಮ ಭಾಗವನ್ನು ನಮಗೆ ಕೊಡುವಂತೆ ಇಂದ್ರನನ್ನು ಪ್ರಾರ್ಥಿಸೋಣ. ಶಕ್ತಿ ಎಂಬರ್ಥವನ್ನು ಸೂಚಿಸುವ **ಓಜಃ** ಎಂಬ ಶಬ್ದವು ವೃದ್ಧಿಯಾಗು, ಬಲವಾಗಿರು ಎಂಬರ್ಥವುಳ್ಳ **ಓಜ್** ಧಾತುವಿನಿಂದಾಗಲಿ, ಹತೋಟಿಯಲ್ಲಿಡು ಎಂಬರ್ಥವುಳ್ಳ **ಉಬ್ಜ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು, ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಆಶೀಃ ॥೩೫॥

ಆಶೀರಾಶ್ರಯಣಾದ್ವಾಽಽಶ್ರಪಣಾದ್ವಾ । ಅಥೇಯಮಿತರಾಶೀರಾಶಾಸ್ತೇಃ ।

" ಇಂದ್ರಾಯ ಗಾವ ಆಶಿರಮ್ " ಇತ್ಯಪಿ ನಿಗಮೋ ಭವತಿ ॥

" ಸಾ ಮೇ ಸತ್ಯಾಶೀರ್ದೇವೇಷು " ಇತಿ ಚ ॥ ೨ ॥

**ಓಜಃ**—ಎಂದರೆ ಶಕ್ತಿ ಅಥವಾ ಉತ್ಸಾಹವು. ಈ ಶಬ್ದವು ಬಲವಾಗಿರು ಎಂಬರ್ಥವುಳ್ಳ ಓಜತಿಧಾತುವಿನಿಂದಾಗಲಿ, ಅಧೀನವನ್ನಾಗಿ ಮಾಡು ಎಂಬರ್ಥವುಳ್ಳ ಉಬ್ಜತಿಧಾತುವಿನಿಂದಲಾಗಿ ನಿಷ್ಪನ್ನವಾಗಬಹುದು.

**ಆಶೀಃ** ಎಂದರೆ ಸೋಮರಸದೊಡನೆ ಮಿಶ್ರಮಾಡುವ ಹಾಲು ಮೊದಲಾದ ಆಶೀರದ್ರವ್ಯ.

ಉದಾಹರಣೆಯ ಋಕ್ಕು—

**ಇಂದ್ರಾಯ ಗಾವ ಆಶಿರಂ ದುದುಹ್ರೇ ವಜ್ರಿಣೇ ಮಧು ।**
**ಯತ್ಸೀಮುಪಹ್ವರೇ ವಿದತ್ ॥**

(ಋ. ಸಂ. ೮-೬೯-೬)

ಇದರ ಅರ್ಥವು—

ಸಮೀಪದಲ್ಲಿರುವ ಸೋಮರಸವನ್ನು ಇಂದ್ರನು ಯಾವಾಗ ಸರ್ವತ್ರ ಹೊಂದುವನೋ ಆಗ ವಜ್ರಾಯುಧಧಾರಿಯಾದ ಇಂದ್ರನಿಗಾಗಿ ಗೋವುಗಳು ತೃಪ್ತಿಕರವಾದ ಕ್ಷೀರಾದ್ಯಾಶ್ರಯಣದ್ರವ್ಯವನ್ನು ಕರೆಯುತ್ತವೆ.

## ಆಶಿರದ್ರವ್ಯಗಳ ಉದಾಹರಣೆಗಳು

**ದಧ್ಯಾಶಿರಃ**—ಈ ಶಬ್ದಕ್ಕೆ ಭಾಷ್ಯಕಾರರು **ಅವನೀಯಮಾನಂ ದಧ್ಯಾಶೀರ್ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ** ಎಂದರೆ ಸೋಮರಸದಲ್ಲಿರುವ ದೋಷಪರಿಹಾರಾರ್ಥವಾಗಿ ಮೊಸರನ್ನು ಇದಕ್ಕೆ ಮಿಶ್ರಮಾಡುವುದರಿಂದ ಇದಕ್ಕೆ ದಧ್ಯಾಶಿರ ಎಂದು ಹೆಸರು ಎಂದರ್ಥಮಾಡಿರುವರು. ಸೋಮರಸಕ್ಕೆ ದಧಿಯನ್ನು ಮಾತ್ರವಲ್ಲದೆ ಹಾಲು ಹಿಟ್ಟು ಮೊದಲಾದ ಇತರ ದ್ರವ್ಯಗಳನ್ನು (ರುಚಿಗಾಗಿ) ಮಿಶ್ರಮಾಡಿ ಉಪಯೋಗಿಸುವುದು ರೂಢಿಯಲ್ಲಿತ್ತು. ಈ ವಿಚಾರವಾಗಿ ನಾವು ಈ ಋಗ್ವೇದಸಂಹಿತೆಯ ಭಾಗ ೧ ಪೇಜು 676 ರಲ್ಲಿ ಬರೆದಿದ್ದೇವೆ. **ದಧ್ಯಾಶಿರಃ** ಎಂಬ ಶಬ್ದವು ೧-೧೮೭-೯ ಮತ್ತು ಮುಂದೆ ಕೊಟ್ಟಿರುವ ಇತರ ಋಕ್ಕುಗಳಲ್ಲಿಯೂ ಇರುವುದು—

(೧) **ಇನು ಅಯಾತಮಿಂದವಃ ಸೋಮಾಸೋ ದಧ್ಯಾಶಿರಃ ಸತಾಸೋ ದಧ್ಯಾಶಿರಃ ।**

(ಋ. ಸಂ. ೧-೧೩೭-೨)

(೨) **ಸುತಾ ಇಂದ್ರಾಯ ವಾಯವೇ ಸೋಮಾಸೋ ದಧ್ಯಾಶಿರಃ ।**

(ಋ. ಸಂ. ೫-೫೧-೭)

(೩) **ಇನು ಇಂದ್ರಾಯ ಸುನ್ವಿರೇ ಸೋಮಾಸೋ ದಧ್ಯಾಶಿರಃ ।**

(ಋ. ಸಂ. ೭-೩೨-೪)

(೪) **ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ।**

(ಋ. ಸಂ. ೯-೨೨-೩)

(೫) **ಸುತಾ ಇಂದ್ರಾಯ ವಜ್ರಿಣೇ ಸೋಮಾಸೋ ದಧ್ಯಾಶಿರಃ**

(ಋ. ಸಂ. ೯-೬೩-೧೫)

(೬) **ಏತೇ ಪೂತಾ ವಿಪಶ್ಚಿತಃ ಸೋಮಾಸೋ ದಧ್ಯಾಶಿರಃ ॥**

(ಋ. ಸಂ. ೯-೧೦೧-೧೨)

ಈ ದಧ್ಯಾಶಿರಶಬ್ದವಲ್ಲದೆ **ಗವಾಶಿರ, ಯವಾಶಿರ** ಮೊದಲಾದ ಇತರ ದ್ರವ್ಯಮಿಶ್ರಿತವಾದ ಸೋಮರಸಗಳು ಈ ಋಕ್ಕುಗಳಲ್ಲಿ ಪಠಿತವಾಗಿವೆ—

(೧) **ತೀವ್ರಾಃ ಸೋಮಾಸ ಆ ಗಹ್ಯಾಶೀರ್ವಂತಃ ಸುತಾ ಇಮೇ ॥**

(೧-೨೩-೧)

ಈ ಋಕ್ಕಿನಲ್ಲಿ **ಆಶೀರ್ವಂತಃ ಸೋಮಾಸಃ** ಎಂದು ಇರುವುದರಿಂದ ಸೋಮರಸಕ್ಕೆ **ಹಾಲು ಮೊಸರು** ಮೊದಲಾದ ಯಾವ ವಿಧವಾದ ಆಶಿರ ದ್ರವ್ಯಗಳನ್ನಾದರೂ ಬೆರಸಿರುವುದೆಂದು ಸಾಮಾನ್ಯವಾಗಿ ಹೇಳಿದೆ.

**(೨) ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ॥**

(ಋ. ಸಂ. ೧-೩೦-೨)

ಇಲ್ಲಿ ಸಮಾಶಿರಾಂ ಎಂದರೆ ಸೋಮರಸಕ್ಕೆ ಆಶಿರದ್ರವ್ಯಗಳನ್ನು ಚೆನ್ನಾಗಿ ಮಿಶ್ರಮಾಡಿರುವುದೆಂದು ಸಾಮಾನ್ಯವಾಗಿ ಹೇಳಿದೆ. ನಿರ್ದಿಷ್ಟವಾಗಿ ಯಾವ ದ್ರವ್ಯವನ್ನೂ ಹೇಳಿಲ್ಲ.

**ಸುಷುಮಾ ಯಾತಮದ್ರಿಭಿರ್ಗೋಶ್ರಿತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ ।**
**ಆ ರಾಜಾನಾನಾ ದಿವಿಸ್ಪೃಶಾಸ್ಮತ್ರಾ ಗಂತಮುಪ ನಃ ॥**
**ಇಮೇ ವಾಂ ಮಿತ್ರಾವರುಣಾ ಗವಾಶಿರಂ ಸೋಮಾಃ ಶುಕ್ರಾ ಗವಾಶಿರಃ ॥**

(ಋ. ಸಂ. ೧-೧೩೭-೧)

ಇಲ್ಲಿ **ಗೋಶ್ರಿತಾಃ** ಎಂದರೆ **ಗವಾಂ ಪಯೋಭಿರ್ವಿಶ್ರಿತಾಃ** ಹಸುವಿನ ಹಾಲಿನಿಂದ ಮಿಶ್ರಿತವಾದದ್ದು ಎಂದರ್ಥ ಇದೇ ಋಕ್ಕಿನ ಕೊನೆಯ ಪಾದದಲ್ಲಿರುವ **ಗವಾಶಿರಃ** ಎಂಬ ಶಬ್ದಕ್ಕೂ ಹಸುವಿನ ಹಾಲಿನಿಂದ ಮಿಶ್ರಿತವಾದ ಸೋಮವೆಂದೇ **ಅರ್ಥವು.**

**(೪) ಶುಚಿರಸಿ ಪುರುನಿಷ್ಠಾಃ ಕ್ಷೀರೈರ್ಮಧ್ಯತಃ ಆಶೀರ್ತಃ । ದಧ್ನಾ ಮಂದಿಷ್ಠಃ ಶೂರಸ್ಯ ॥**

(ಋ. ಸಂ. ೮-೨-೯)

ಇಲ್ಲಿ ಹಾಲು ಮತ್ತು ಮೊಸರು ಎರಡನ್ನೂ ಮಿಶ್ರಮಾಡಿದ ಬೇರೆ ಬೇರೆ ಎರಡು ರಸಗಳಿವೆಯೆಂದು ಹೇಳಿದೆ ಎಂದರೆ ಹಾಲನ್ನು ಮಿಶ್ರಮಾಡಿದ ಸೋಮರಸವೂ, ಮೊಸರನ್ನು ಮಿಶ್ರಮಾಡಿದ ಸೋಮರಸವೂ ಎರಡು ವಿಧವು ಇರುವುದೆಂದು **ತಿಳಿಯಬೇಕು.**

**(೫) ಸಂ ಶುಕ್ರಾಸಃ ಶುಚಯಃ ಸಂ ಗವಾಶಿರಃ ಸೋಮಾ ಇಂದ್ರಮಮಂದಿಷುಃ ॥**

**(ಋ. ಸಂ. ೮-೫೨-೧೦)**

**ಇಲ್ಲಿ ಗವಾಶಿರ ಎಂದರೆ ಹಾಲು ಮಿಶ್ರಿತವಾದ ಸೋಮವನ್ನೇ ಹೇಳಿದೆ.**

**(೬) ಅಥಾ ನಿಯುತ್ವ ಉಭಯಸ್ಯ ನಃ ಪಿಬ ಶುಚಿಂ ಸೋಮಂ ಗವಾಶಿರಂ ॥**

(ಋ. ಸಂ. ೮-೧೦೧-೧೦)

ಇಲ್ಲಿಯೂ ಗವಾಶಿರವೆಂಬ ಹಾಲು ಮಿಶ್ರಿತವಾದ ಸೋಮವನ್ನೇ ಹೇಳಿದೆ.

**(೭) ಯತ್ತೇ ಸೋಮ ಗವಾಶಿರೋ ಭಜಾಮಹೇ ॥**

(ಋ. ಸಂ. ೧-೧೮೭-೯)

**(೮) ಇವಮಿಂದ್ರ ಗವಾಶಿರಂ ಚ ನಃ ಪಿಬ ।**

(ಋ. ಸಂ. ೩-೪೨-೭)

ಇಲ್ಲಿ ಗವಾಶಿರ ಮತ್ತು ಯವಾಶಿರ ಎಂಬ ಎರಡು ವಿಧವಾದ ಸೋಮರಸಗಳನ್ನೂ ಹೇಳಿವೆ.

**(೯) ಇಂದೋರಿಂದ್ರೋ ಯವಾಶಿರಃ ।**

(ಋ. ಸಂ. ೮-೯೨-೪)

**(೧೦) ತ್ರಿಕದ್ರುಕೇಷು ಮಹಿಷೋ ಯವಾಶಿರಂ ತುವಿಶುಷ್ಮಸ್ತೃಪತ್ಸೋಮಮಪಿಬದ್ವಿಷ್ಣುನಾ ಸುತಂ ಯಥಾವಶತ್ ॥**

(ಋ. ಸಂ. ೨-೨೨-೧)

ಇಲ್ಲಿ ಯವಾಶಿರ ಎಂದರೆ ಹಿಟ್ಟುಮಿಶ್ರಿತವಾದ ಸೋಮರಸವೆಂದು ಹೇಳಿದೆ.

(೧೧) **ಅಶ್ವಮೇಧಸ್ಯ ದಾನಾಃ ಸೋಮಾ ಇವ ತ್ರ್ಯಾಶಿರಃ ॥**

(ಋ. ಸಂ. ೫–೨೭–೫)

ಇಲ್ಲಿ ಸೋಮರಸಕ್ಕೆ ಹಾಲು ಮೊಸರು, ಯವ ಎಂಬ ಮೂರು ವಿಧ ದ್ರವ್ಯಗಳನ್ನೂ ಮಿಶ್ರಮಾಡಿರುವುದೆಂದು ಹೇಳಿದೆ.

(೧೨) **ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮಸ್ಯ** ॥

(ಋ. ಸಂ. ೩-೪೮-೧)

ಇಲ್ಲಿ ರಸಾಶಿರ ಎಂದು ಹೇಳಿರುವುದರಿಂದ ಹಾಲು ಅಥವಾ ಮೊಸರು ಇವುಗಳಲ್ಲಿ ಯಾವುದನ್ನಾದರೂ ಮಿಶ್ರಮಾಡಿದ ಸೋಮವೆಂದರ್ಥವು.

ಅಜೀಗಃ ॥ ೩೬ ॥

"ಯದಾ ತೇ ಮರ್ತ್ರೋ ಅನು ಭೋಗಮಾನಳಾದಿದ್ಗ್ರಸಿಷ್ಠ ಓಷಧೀ-ರಜೀಗಃ।" ಯದಾ ತೇ ಮರ್ತ್ರೋ ಭೋಗಮನ್ವಾಪದಥ ಗ್ರಸಿತೃತಮ ಓಷಧೀರಗಾರೀಃ ॥ ಜಿಗರ್ತಿರ್ಗಿರತಿಕರ್ಮಾ ವಾ ಗೃಣಾತಿಕರ್ಮಾ ವಾ ಗೃಹ್ಣಾತಿಕರ್ಮಾ ವಾ ॥ ೩ ॥

**ಅಜೀಗಃ** ಎಂಬ ಪದವು ಜಿಗರ್ತಿಧಾತುವಿನಿಂದ ನಿಷ್ಪನ್ನವಾಗಿದೆ. **ಜಿಗರ್ತಿ** ಎಂಬುದು ಸ್ತೋತ್ರಮಾಡು ಎಂಬರ್ಥವಿರುವ **ಗೃಣಾತಿ** ಧಾತುವಿನಿಂದಾಗಲಿ, ಆಹ್ವಾನಮಾಡು ಎಂಬರ್ಥವಿರುವ **ಗಿರತಿ** ಧಾತುವಿನಿಂದಾಗಲಿ, ಹಿಡಿದುಕೋ ಎಂಬರ್ಥವಿರುವ ಗೃಹ್ಣಾತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು.

**ಅತ್ರಾ ತೇ ರೂಪಮುತ್ತಮಮಪಶ್ಯಂ ಜಿಗೀಷಮಾಣಮಿಷ ಆ ಪದೇ ಗೋಃ ।**
**ಯದಾ ತೇ ಮರ್ತೋ ಅನುಭೋಗಮಾನಳಾದಿದ್ಗ್ರಸಿಷ್ಠ ಓಷಧೀರಜೀಗಃ ॥**

(ಋ. ಸಂ. ೧-೧೬೩-೭)

ಇದರ ಅರ್ಥವು—

ಎಲೈ ಅಶ್ವವೇ. ಪೃಥ್ವಿಯ ಯಜ್ಞಭೂಮಿಯ ಸುತ್ತಲೂ ಅನ್ನವನ್ನು ಪಡೆಯಲಿಚ್ಛೆಯುಳ್ಳ ನಿನ್ನ ಶ್ರೇಷ್ಠವಾದ ರೂಪವನ್ನು ನಾನು ಈ ಯಾಗಪ್ರದೇಶದಲ್ಲಿ ನೋಡುತ್ತೇನೆ. ಮತ್ತು ಯಾವಾಗ ನಿನ್ನ ಅನುಚರನಾದ ಮಾನವನು ನಿನಗೆ ಭೋಗ್ಯವಾದ ಅನ್ನವನ್ನು ಕ್ರಮವಾಗಿ ತಂದು ನಿನಗೆ ಅರ್ಪಿಸುತ್ತಾನೆಯೋ ಆ ಒಡನೆಯೇ ನೀನು ಅದನ್ನು ತಿನ್ನಬೇಕೆಂಬ ಆತುರದಿಂದ ಆ ಅನ್ನಗಳನ್ನು ಭಕ್ಷಿಸುತ್ತೀಯೆ.

**ಉತ್ತಮಂ ರೂಪಂ ಅಪಶ್ಯಂ**—ಪ್ರಕ್ರಮಾಹುತಿಯ ಕಾಲದಲ್ಲಿ ಪಠಿಸಕ್ಕ ಮಂತ್ರವು. ಪ್ರಕ್ರಮಾಹುತಿಯಲ್ಲಿ ಅಶ್ವದ ರೂಪವು, ಅದಕ್ಕೆ ಅನುಗುಣವಾದ ಆಹುತಿಯೂ ಅರ್ಪಿತವಾಗತಕ್ಕದ್ದು. ಆದುದರಿಂದ ನಿನ್ನ ಉತ್ತಮವಾದ ರೂಪವನ್ನು ನೋಡುತ್ತಿದ್ದೇನೆಂದು ಪ್ರಕಟಿಸುತ್ತಾನೆ ಅಶ್ವದ ಈ ರೂಪಾನುಗುಣವಾದ ಆಹುತ್ಯರ್ಪಣವಾಗದೇ ಯಜ್ಞವು ಪೂರ್ಣವಾಗುವುದಿಲ್ಲವೆಂದು ಸಿದ್ಧವಾದುದರಿಂದ ಈ ಪ್ರಕ್ರಮಾಹುತಿಯು ವಿಧ್ಯುಕ್ತವಾದ ಕರ್ಮವಾಗಿದೆ ಮೊದಲ ಈ ಆಹುತಿಯ

ಸ್ವರೂಪವನ್ನು ವಿವರಿಸಿ ಅನಂತರ ಈ ಆಹುತಿಯನ್ನು ಸ್ವೀಕಾರಮಾಡಲು ಯೋಗ್ಯವಾದ ಅಶ್ವದ ರೂಪವೇನೆಂಬುದನ್ನು ಪರಿಶೀಲಿಸಲಾಗುತ್ತದೆ.

**ಯಥಾ ವೈ ಹವಿಷೋಽಹುತಸ್ಯ ಸ್ಕಂದೇತ್ । ಏವಮೇತತ್ಪಶೋಃ ಸ್ಕಂದತಿ ಯಂ ಪ್ರೋಕ್ಷಿತಮನಾಲಬ್ಧಮುತ್ಸೃಜಂತಿ ಯದ್ರೂಪಾಣಿ ಜುಹೋತಿ ಸರ್ವಹುತಮೇವೈನಂ ಜುಹೋತ್ಯಸ್ಕಂ-ದಾಯಸ್ಕನ್ನಗ್ಂ.... .... .... .... .... ಏತಾನಿ ವಾ ಅಶ್ವಸ್ಯ ರೂಪಾಣಿ ತಾನ್ಯೇವಾವರುಂಧೇ ॥**

(ಶ. ಬ್ರಾ. ೧೩-೧-೩-೪)

ಆಹುತ್ಯರ್ಪಣದ ಕಾಲದಲ್ಲಿ ಕೊಂಚಭಾಗವೇನಾದರೂ ವೇದಿಕೆಯಿಂದ ಹೊರಗೆ ಬಿದ್ದ ಸಂದರ್ಭದಲ್ಲಿ ಆದ ಆಹುತಿಯು ಪೂರ್ಣವಾದಂತಾಗುವುದಿಲ್ಲ. ಆಗ ಈ ರೂಪಾಹುತಿಯನ್ನು ಅದರಿಂದ ಆ ನ್ಯೂನತೆಯು ಸರಿಯಾಗುವುದು. "**ಹಿಂಕಾರಾಯ ಸ್ವಾಹಾ, ಹಿಂಕೃತಾಯ ಸ್ವಾಹಾ**" ಇತ್ಯಾದಿಯಾಗಿ ಆಹುತಿಯನ್ನರ್ಪಿಸಬೇಕು. ಇವುಗಳೇ ಅಶ್ವದ ರೂಪಗಳು. ಈ ವಿಷಯದಲ್ಲಿ ಒಂದು ಚರ್ಚೆಯೂ ಇದೆ—

**ತದಾಹುಃ । ಅನಾಹುತಿರ್ವೈ ರೂಪಾಣಿ ನೈನಾ ಹೋತವ್ಯಾ ಇತ್ಯಥೋ ಖಲ್ವಾಹುರತ್ರ ವಾ ಅಶ್ವಮೇಧಃ ಸಂತಿಷ್ಠತೇ ಯದ್ರೂಪಾಣಿ ಜುಹೋತಿ ॥**

(ಶ. ಬ್ರಾ. ೧೩-೧-೩-೬)

ಈ ರೂಪಾಹುತಿಯ ಅವಶ್ಯಕತೆಯೇ ಇರುವುದಿಲ್ಲ ಎನ್ನತಕ್ಕವರೇ ಇದರ ಮಹತ್ತ್ವವನ್ನರಿತನಂತರ ಇದರ ಆಚರಣೆಯಿಂದ ಮಾತ್ರ ಅಶ್ವಮೇಧವು ಪೂರ್ಣವಾಗುತ್ತದೆಂದು ಒಪ್ಪಿಕೊಳ್ಳುತ್ತಾರೆ. ಆದರೆ ಅಶ್ವದ ಈ ರೂಪವಾವುದು ಎಂದರೆ ಅದರ ವರ್ಣನೆಯು ಈ ರೀತಿಯಲ್ಲಿದೆ. ಪಶ್ವಾತ್ಮಕವಾದ ಅಶ್ವದ ಈ ರೂಪವನ್ನು ಹಿಂದೆ,

**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**
**ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥**

(ಋ. ಸಂ. ೧-೧೬೩-೩)

ಇತ್ಯಾದಿಯಾಗಿ ವರ್ಣಿಸಿ ಅಗ್ನ್ಯಾದಿರೂಪದಲ್ಲಿ ಮೂರು ಲೋಕಗಳನ್ನೂ ವ್ಯಾಪಿಸುವ ರೂಪವನ್ನು ಹೊಂದಿದೆಯೆಂದು ತಿಳಿಸಿದೆ. ಅಲ್ಲದೆ, ಮುಂದೆಯೂ ಸಹ

**ತವ ಶರೀರಂ ಪತಯಿಷ್ಣ್ವರ್ವನ್ತವ ಚಿತ್ತಂ ವಾತ ಇವ ಧ್ರಜೀಮಾನ್ ।**
**ತವ ಶೃಂಗಾಣಿ ವಿಷ್ಠಿತಾ ಪುರುತ್ರಾರಣ್ಯೇಷು ಜರ್ಭುರಾಣಾ ಚರಂತಿ ॥**

(ಋ. ಸಂ. ೧-೧೬೩-೧೧)

ಎಂಬಲ್ಲಿ ಅಶ್ವದ ಶರೀರವನ್ನೂ ಚಿತ್ತವನ್ನೂ ಶೃಂಗಸ್ಥಾನೀಯರೋಮಗಳನ್ನೂ ವರ್ಣಿಸಿ ಅದರ ರೂಪವನ್ನು ಪ್ರಶಂಸಿಸಿದೆ. ಈ ವರ್ಣನೆಯ ಸ್ವರೂಪವನ್ನು ಮುಂದೆ ವಿವರಿಸಲಾಗುತ್ತದೆ.

**ಯದಾ ತೇ ಮರ್ತಃ ಅನು ಭೋಗಮಾನಟ್**—ಮಾನವನಾದ ಅನುಚರನು ನಿನಗೆ ಭೋಗ್ಯವಾದ ಆಹಾರವನ್ನು ಇರಿಸಿದಾಗ ಎಂಬುದರ ಕ್ರಮವನ್ನು,

**ಪ್ರಾಜಾಪತ್ಯೋಽಶ್ವ ಸ್ವಯೈವೈನಂ ದೇವತಯಾ ಸಮರ್ಧಯಂತಿ ಲಾಜೀಂಙ್ಛಾಚೀಂ ಚೇ ತಿ ನ್ಯೈವ ಗವ್ಯ ಇತ್ಯತಿರಿಕ್ತಮನ್ನಮಶ್ವಾಯೋಪಾವಹರತಿ ।**

ಇತ್ಯಾದಿವಾಕ್ಯಗಳಲ್ಲಿ ಅಶ್ವಕ್ಕೆ ಅರ್ಪಿತವಾಗತಕ್ಕ ಅನ್ನಗಳ ವರ್ಣನೆಯಿದೆ.

**ಜಿಗೀಷಮಾಣಂ**—ಈ ಪದಕ್ಕೆ ಜೇತುಮಿಚ್ಛಾ ಜಯಿಸಲು ಇಚ್ಛೆಯುಳ್ಳ ಎಂದು ರೂಢವಾದ ಅರ್ಥವಿದೆ. ಆದರೆ ಇಲ್ಲಿ ಆ ಅರ್ಥವಿಲ್ಲ. ಈ ಪದವು ಋಕ್ಸಂಹಿತೆಯಲ್ಲಿ ಬರುವಾಗಲೆಲ್ಲಾ ಪಡೆಯಲಿಚ್ಛೆಯುಳ್ಳ ಅಥವಾ ಯೋಗ್ಯವಾದ ಎಂಬರ್ಥವೇ ಆಗಿರುತ್ತದೆ. ಉದಾಹರಣೆಗೆ—

**ಸ್ತುತಾಸೋ ನೋ ಮರುತೋ ಮೃಳಯಂತೂತ ಸುತೋ ಮಘವಾ ಶಂಭವಿಷ್ಠಃ ।**
**ಊರ್ಧ್ವಾ ನಃ ಸಂತು ಕೋಮ್ಯಾ ವನಾನ್ಯಹಾನಿ ವಿಶ್ವಾ ಮರುತೋ ಜಿಗೀಷಾ ॥**

(ಋ. ಸಂ. ೧-೧೭೧-೩)

ಎಂಬಲ್ಲಿ ಮರುತ್ತುಗಳ ಅನುಗ್ರಹವನ್ನಪೇಕ್ಷಿಸಿದೆ. ಇಲ್ಲಿ **ಜಿಗೀಷ** ಎಂಬ ಪದಕ್ಕೆ **ಜಿಗೀಷಿತವ್ಯಾನಿ ಪ್ರಾಪ್ತವ್ಯಾನಿ ಉತ್ತರತ್ರಾನುಭೋಕ್ತವ್ಯಾನಿ** ॥ ನಾವು ಪಡೆಯತಕ್ಕದ್ದೂ, ನಾವು ಅನುಭವಿಸತಕ್ಕದ್ದೂ ಆದ ಸಕಲ ಇಷ್ಟಾರ್ಥಗಳನ್ನು ಕೊಡು ಎಂದು ಪ್ರಾರ್ಥಿಸಿವೆ. ಇದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಜಿಗೀಷಮಾಣಂ ಗಂತುಮಿಚ್ಛಂತಂ ।** ಪಡೆಯಲಿಚ್ಛೆಯುಳ್ಳ ಎಂದು ತಾತ್ಪರ್ಯವಾಗುತ್ತದೆ.

ಅಮೂರಃ ॥೩೭॥

" ಮೂರಾ ಅಮೂರ ನ ವಯಞ್ಚಿಕಿತ್ವೋ ಮಹಿತ್ವಮಗ್ನೇ ತ್ವಮಙ್ಗ
ವಿತ್ಸೇ " ॥ ಮೂಢಾ ವಯಂ ಸ್ಮೋಽಮೂಢಸ್ತ್ವಮಸಿ ನ ವಯಂ
ವಿದ್ಮೋ ಮಹತ್ತ್ವಮಗ್ನೇ ತ್ವಂ ತು ವೇತ್ಥ ॥೪॥

ಉದಾಹರಣೆಯ ಋಕ್ಕು—

**ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗವಿತ್ಸೇ ।**
**ಶಯೇ ವವ್ರಿಶ್ಚರತಿ ಜಿಹ್ವಯಾದನ್ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್ ॥**

(ಋ. ಸಂ. ೧೦–೪–೪)

ಇದರ ಅರ್ಥವು—

ಮೌಢ್ಯರಹಿತನೂ ಉತ್ತಮವಾದ ಜ್ಞಾನವುಳ್ಳವನೂ ಆದ ಎಲೈ ಅಗ್ನಿಯೇ, ಮೂಢರಾದ ನಾವು ನಿನ್ನ ಮಾಹಾತ್ಮ್ಯೆಯನ್ನು ಅರಿಯಲಾರೆವು. ನೀನು ಮಾತ್ರ ಅದನ್ನು ಅರಿತಿದ್ದೀಯೆ. ನಾಲಿಗೆಯಿಂದ ಹವಿಸ್ಸನ್ನು ಭಕ್ಷಿಸುತ್ತ ಅಗ್ನಿಯು ಸಂಚರಿಸುತ್ತಾನೆ. ಪ್ರಜಾಪಾಲಕನಾಗಿದ್ದುಕೊಂಡು ತನ್ನೊಡನೆ ಸೇರುವ ಆಹುತಿಯನ್ನು ನೆಕ್ಕಿ ರುಚಿಯನ್ನು ನೋಡುತ್ತಾನೆ.

**ಅಮೂರ** ಎಂದರೆ ಮೂಢನಲ್ಲದವನು, ವಿವೇಕಿಯು, ಬುದ್ಧಿವಂತನು ಎಂದರ್ಥವು. **ಮೂರ**—ಎಂದರೆ ಮೂಢನು ಪ್ರಕೃತವಾಕ್ಯದಲ್ಲಿ ಮೂಢನಲ್ಲದ ಎಂದರೆ ವಿವೇಕಿಯಾದ ಎಲೈ ಅಗ್ನಿಯೇ, ಮೂಢರಾದ ಎಂದರೆ ವಿವೇಚನಾಶಕ್ತಿ ರಹಿತರಾದ ನಾವು ನಿನ್ನ ಮಾಹಾತ್ಮ್ಯೆಯನ್ನು ತಿಳಿಯಲಾರೆವು, ಆದರೆ ನೀನು ಮಾತ್ರ ತಿಳಿದಿರುವೆ ಎಂದಭಿಪ್ರಾಯವು.

ಶಶಮಾನಃ ॥ ೩೮ ॥

ಶಶಮಾನಃ ಶಂಸಮಾನಃ । " ಯೋ ವಾಂ ಯಜ್ಞೈಃ ಶಶಮಾನೋ ಹ
ದಾಶತಿ " ಇತ್ಯಪಿ ನಿಗಮೋ ಭವತಿ ॥ ೫ ॥

**ಶಶಮಾನಃ** ಎಂದರೆ **ಶಂಸಮಾನಃ** ಪ್ರಶಂಸಿಸಲ್ಪಡುವವನು, ಹೊಗಳಲ್ಪಡುವವನು, ಸ್ತುತಿಸಲ್ಪಡುವವನು.

ಉದಾಹರಣೆಯ ಋಕ್ಕು—

**ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ ಮನ್ಮಸಾಧನಃ ।**
**ಉಪಾಹ ತಂ ಗಚ್ಛಥೋ ವೀಥೋ ಅಧ್ವರಮಚ್ಛಾ ಗಿರಃ ಸುಮತಿಂ ಗಂತಮಸ್ಮಯೂ ॥**
(ಋ. ಸಂ. ೧–೧೫೧–೭)

ಇದರ ಅರ್ಥವು—

ಯಾವ ಯಜಮಾನನಾಗಲಿ ನಿಮ್ಮಿಬ್ಬರನ್ನೂ ಉದ್ದೇಶಿಸಿ ಯಜ್ಞಗಳಿಂದ ಸ್ತುತಿಸುತ್ತಾ ಹವಿಸ್ಸನ್ನು ಅರ್ಪಿಸುತ್ತಾನೆಯೋ ಮತ್ತು ಮೇಧಾವಿಯೂ ಹೋಮಸಂಪಾದಕನೂ ಆದ ಯಾವ ಯಜಮಾನನು ರಮ್ಯವಾದ ದಕ್ಷಿಣಾದಿಸಾಧನಗಳಿಂದ ಕೂಡಿಕೊಂಡು ಯಾಗವನ್ನು ಮಾಡುತ್ತಾನೆಯೋ ಅಂತಹ ಶ್ರೇಷ್ಠವಾದ ಪ್ರಜ್ಞಾವಂತನಾದ ಆ ಯಜಮಾನನನ್ನೇ ಉಪಲಕ್ಷಿಸಿ ಹೋಗಿರಿ. ಮತ್ತು ಅವನ ಯಜ್ಞವನ್ನು ಸ್ವೀಕರಿಸಿರಿ. ಅದರಂತೆಯೇ ನಮ್ಮನ್ನು ಅನುಗ್ರಹಿಸುತ್ತಾ ನಮ್ಮ ಸ್ತೋತ್ರಗಳನ್ನೂ ಸಹ ಅಂಗೀಕರಿಸಿರಿ.

ದೇವೋ ದೇವಾಚ್ಯಾ ಕೃಪಾ ॥೬॥

" ದೇವೋ ದೇವಾಚ್ಯಾ ಕೃಪಾ । " ದೇವೋ ದೇವಾನ್ ಪ್ರತ್ಯಕ್ತಯಾ
ಕೃಪಾ । ಕೃಪ್ ಕೃಪತೇರ್ವಾ ಕಲ್ಪತೇರ್ವಾ ॥೬॥ ೮॥

ಉದಾಹರಣೆಯ ಋಕ್ಕು—

**ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ ಜಾತವೇದಸಂ ವಿಪ್ರಂ ನ ಜಾತವೇದಸಂ ।**

**ಯ ಊರ್ಧ್ವಯಾ ಸ್ವಧ್ವರೋ ದೇವೋ ದೇವಾಚ್ಯಾ ಕೃಪಾ ।**
**ಘೃತಸ್ಯ ವಿಭ್ರಾಷ್ಟಿಮನು ವಷ್ಟಿ ಶೋಚಿಷಾಜುಹ್ವಾನಸ್ಯ ಸರ್ಪಿಷಃ ॥**
(ಋ. ಸಂ. ೧–೧೨೭–೧)

ಇದರ ಅರ್ಥವು—

ಅಗ್ನಿಯು ನಮ್ಮ ಯಾಗವನ್ನಲಂಕರಿಸಿ ಉತ್ಕೃಷ್ಟವಾದ ಮತ್ತು ದೇವತೆಗಳನ್ನು ಪೂಜಿಸುವ (ತನ್ನ ಹವಿರ್ವಹನರೂಪ) ಸಾಮರ್ಥ್ಯದಿಂದ (ದೇವತೆಗಳನ್ನು) ಆಹ್ವಾನಮಾಡುವ (ಯಜಮಾನನಿಂದ ಹುತವಾದ) ದ್ರವೀಭೂತವಾದ ಘೃತವನ್ನು ತನ್ನ ಜ್ವಾಲೆಗಳಿಂದ ಸ್ವೀಕರಿಸುತ್ತಾನೆ (ಇಂತಹ) ಅಗ್ನಿಯನ್ನು (ನಮ್ಮ ಯಾಗಕ್ಕೆ ದೇವತೆಗಳನ್ನು ಕರೆಯುವ) ಹೋತೃವನ್ನಾಗಿಯೂ ದಾನಶೀಲನನ್ನಾಗಿಯೂ (ಸರ್ವರಿಗೂ) ನಿವಾಸಕ್ಕೆ ಕಾರಣನನ್ನಾಗಿಯೂ ಮೇಧಾವಿಯಾದ ವಿಪ್ರನಂತೆ ಸರ್ವಜ್ಞನನ್ನಾಗಿಯೂ ತಿಳಿಯುತ್ತೇನೆ (ಸ್ತುತಿಸುತ್ತೇನೆ).

**ಅಗ್ನಿಂ--ಸರ್ವಾಸಾಂ ದೇವಸೇನಾನಾಮಗ್ರಣ್ಯಂ ಯಜ್ಞೇಷ್ವಗ್ರಂ ನೀಯಮಾನಂ ವಾ ।** ಅಗ್ನಿಶಬ್ದವು ಎರಡು ವಿಧವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮೊದಲನೆಯ ಅರ್ಥದಲ್ಲಿ (ದೇವಸೇನೆಗಳಿಗೆ) ದೇವತೆಗಳ ಸೇನೆಗೆ ಮುಂದಾಗಿರತಕ್ಕವನೆಂದೂ, ಎರಡನೆಯ ಅರ್ಥದಲ್ಲಿ ಯಜ್ಞಗಳಲ್ಲಿ ಎಲ್ಲರಿಗಿಂತಲೂ (ಕರೆಯಲ್ಪಟ್ಟು) ಮೊದಲು ತರಲ್ಪಡುವವನೂ ಎಂದೂ ವಿವರಿಸಿದೆ. ಈ ವಿಷಯದಲ್ಲಿ ಯಾಸ್ಕರು—

**ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ ಅಗ್ರಣೀರ್ಭವತಿ । ಅಗ್ರಂ ಯಜ್ಞೇಷು ಪ್ರಣೀಯತೇ । ಅಙ್ಗಂ ನಯತಿ ಸನ್ನಮಮಾನಃ ॥**

(ನಿ. ೭-೧೪)

ಎಂದು ಹೇಳಿರುವರು. ಅಗ್ನಿಗೆ ಮೂರು ಸ್ಥಾನಗಳಿರುವುವು. ಅಗ್ನಿಯ ಕಾರ್ಯವು ಅಂತರಿಕ್ಷ, ದ್ಯುಲೋಕ, ಪೃಥಿವೀ ಎಂಬ ಮೂರು ಸ್ಥಾನಗಳಲ್ಲಿಯೂ ವ್ಯಾಪಿಸಿರುವುದು. ಅವುಗಳಲ್ಲಿ ಪೃಥಿವಿಯ ಸ್ಥಾನದಲ್ಲಿ ಅತಿಶಯವಾಗಿ ವ್ಯಾಪಿಸಿರುವುದರಿಂದ ಪಾರ್ಥಿವಾಗ್ನಿಯನ್ನು ಮೊದಲು ವಿವರಿಸಲು ಪ್ರಾರಂಭಿಸಿ ಅಗ್ನಿಶಬ್ದದ ರೂಪನಿಷ್ಪತ್ತಿಯನ್ನು ಮೂರು ವಿಧವಾಗಿ ಹೇಳಿರುವರು. ಮೊದಲನೆಯ, **ಅಗ್ರಣೀರ್ಭವತಿ** ಎಂಬ ವಿವರಣೆಗೆ, ದುರ್ಗಾಚಾರ್ಯರು **ಸರ್ವೇಷ್ವರ್ಥೇಷು ಅಸಾವಾತ್ಮಾನಮಗ್ರಂ ನಯತಿ, ಸರ್ವತ್ರ ತಥೋಪಕರೋತಿ ಯಥಾ ಅಗ್ರಂ ಸಂಪದ್ಯತೇ ।** ವೈದಿಕಕರ್ಮಗಳಲ್ಲಿಯೂ, ಲೌಕಿಕವಾದ ಕರ್ಮಗಳಲ್ಲಿಯೂ ಮುಖ್ಯವಾಗಿ (ಪ್ರಧಾನವಾಗಿ) ಇರುವವನು. ಆದ್ದರಿಂದ **ಅಗ್ರಣೀಃ** ಅಥವಾ **ಅಗ್ನಿರ್ವೈ ದೇವಾನಾಂ ಸೇನಾನೀಃ** ಅಗ್ನಿಯು ದೇವತೆಗಳ ಸೇನಾಪತಿಯು ಎಂದು ಶ್ರುತಿವಚನವಿರುವುದರಿಂದ ಅಗ್ನಿಯೇ ತಾನು ಮುಂದಾಳಾಗಿ ದೇವತೆಗಳನ್ನು ಯಜ್ಞಾದಿಗಳಿಗೆ ತರತಕ್ಕವನಾದ್ದರಿಂದ **ಅಗ್ರಣೀಃ** ಎಂಬುದಾಗಿಯೂ, ತನ್ನನ್ನು ಸೇವಿಸುವವರಿಗೆ ಪ್ರಾಮುಖ್ಯತೆಯು ಉಂಟಾಗುವಂತೆ ಮಾಡುವವನಾದ ಕಾರಣದಿಂದಲೂ **ಅಗ್ರಣೀಃ** ಎಂಬ ಅರ್ಥವನ್ನು **ಅಗ್ರಂ ನಯತಿ ಇತಿ ಅಗ್ರಣೀಃ** ಎಂಬ ವ್ಯುತ್ಪತ್ತಿಯಿಂದ ವಿವರಿಸಿರುವರು.

ಯಜ್ಞಗಳಲ್ಲಿ ಮೊದಲು ಅಂದರೆ ಅವಶ್ಯವಾಗಿ ನಡೆಯಬೇಕಾದ ಕರ್ತವ್ಯಗಳಲ್ಲಿ ಅಗ್ನಿಯ ಪ್ರಣಯನಕ್ಕಿಂತಲೂ ಮುಂಚಿತವಾಗಿ ಯಾವ ಕರ್ಮವೂ ನಡೆಯದಿರುವ ಕಾರಣ **ಯಜ್ಞೇಷು ಅಗ್ರಂ ಪ್ರಣೀಯತೇ** ಎಂಬ ಎರಡನೆಯ ವಿವರಣೆಯು (ಯಜ್ಞಗಳಲ್ಲಿ ಎಲ್ಲಕ್ಕಿಂತಲೂ ಮೊದಲು ಸಿದ್ಧಪಡಿಸಲ್ಪಡುತ್ತಾನೆ. ಅಗ್ರಂ-ಮೊದಲು-ಪ್ರಣಯನಾತ್— ಸಿದ್ಧಮಾಡಿ ಒಯ್ಯಲ್ಪಡುವುದರಿಂದ ಅಗ್ನಿಃ—ಅಗ್ನಿಶಬ್ದವಾಚ್ಯನು ಎಂಬುದಾಗಿ) ಸಮಂಜಸವಾಗಿರುವುದು.

**ಅಂಗಂ ನಯತೀತ್ಯಗ್ನಿಃ** ಎಂಬ ಅಗ್ನಿಪದದ ವಿವರಣೆಯು **ಅಂಗಂ ನಯತಿ ಸಂಗಮಮಾನಃ** ಎಂದಾಗಿರುತ್ತದೆ. ಈ ದೇವನು ಲೌಕಿಕವಾದ ಅಥವಾ ವೇದಪ್ರೋಕ್ತವಾದ ಕರ್ಮಗಳು ಎಲ್ಲಿದರಲ್ಲಿಯೂ, ತಾನು ಮುಖ್ಯನಾಗಿರುವನು. ತನಗಿಂತ ಬೇರೆಯಾದವುಗಳೆಲ್ಲವನ್ನೂ (ತನಗಿಂತ ನಿಕೃಷ್ಟಗಳನ್ನಾಗಿ) ತನಗೆ ಅಧೀನವಾಗಿರುವಂತೆ ಮಾಡಿಕೊಳ್ಳುವನು ಎಂದೂ, ಅಥವಾ ಇವನು ತೃಣವನ್ನಾಗಲಿ, ಕಟ್ಟಿಗೆಯನ್ನಾಗಲಿ ಆಶ್ರಯಿಸಿದಾಗ ಅದನ್ನು ತನಗೆ ಅಧೀನವಾಗಿ ಇರುವಂತೆ ಇರಿಸುವನು. ಆದ್ದರಿಂದ ಅಗ್ನಿ ಎನಿಸಿರುವನು.

**ಅಗ್ರಂ ನಯತೀತ್ಯಗ್ನಿಃ, ಅಗ್ರಂ ನೀಯತ ಇತ್ಯಗ್ನಿಃ, ಅಂಗಂ ನಯತೀತ್ಯಗ್ನಿಃ** ಎಂದು ಮೂರು ವಿಧವಾಗಿ ಅಗ್ನಿ ಶಬ್ದಾರ್ಥದ ನಿರ್ವಚನವನ್ನು ಯಾಸ್ಕರು ವಿವರಿಸಿರುತ್ತಾರೆ. ಸ್ಥೌಲಾಷ್ಠೀವ ಎಂಬ ಆಚಾರ್ಯರು ಇವನು ತಾನು ಹೊಂದುವ ಪದಾರ್ಥವೆಲ್ಲವನ್ನೂ ವಿರೂಪವುಳ್ಳದ್ದನ್ನಾಗಿ ಮಾಡುವನು (ಸುಟ್ಟು ಕಪ್ಪಗೆ ಮಾಡುವನು) ಎಂದು ಅಗ್ನಿಯ ಸ್ವಭಾವವನ್ನು ವರ್ಣಿಸಿರುವರು. ಶಾಕಪೂಣಿ ಎಂಬ ಆಚಾರ್ಯರು,

**ತ್ರಿಭ್ಯ ಆಖ್ಯಾತೇಭ್ಯೋ ಜಾಯತೇ । ಇತಾದಕಾತ್ತದ್ದಗ್ಧಾದ್ವಾ ನೀತಾತ್ । ಸ ಖಲ್ವೇತೇರಕಾರ-ಮಾದತ್ತೇ ಗಕಾರಮನಕ್ತೇರ್ವಾ ದಹತೇರ್ವಾ ನೀಃ ಪರಃ ॥**

(ನಿ. ೭-೧೪)

ಎಂದು ಅಗ್ನಿಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿರುವರು. ದುರ್ಗಾಚಾರ್ಯರು **ಏತಿ ಚ ನಯತಿ ಚ ಹವೀಂಷಿ ದಹತಿ ಚ ಅಥವಾ ಏತಿ, ವನ್ಯಕ್ತಿ** ಎಂಬ ಕ್ರಿಯಾಪದಗಳ ಅರ್ಥವನ್ನು ಇವನು ಆಚರಿಸುವನು. ಏತಿ—ಬರುತ್ತಾನೆ. ನಯತಿ—ಹವಿಸ್ಸುಗಳನ್ನು ಒಯ್ಯುತ್ತಾನೆ. ದಹತಿ—ಸುಡುತ್ತಾನೆ. ವ್ಯನಕ್ತಿ—ರೂಪಾಂತರವನ್ನು ಹೊಂದಿಸುತ್ತಾನೆ ಎಂದು ಅಗ್ನಿಯ ಕ್ರಿಯೆಯ ಮೂಲಕ ಸ್ವಭಾವವನ್ನು ವರ್ಣಿಸಿದ್ದಾರೆ. ಸಾಯಣರು ಅಗ್ನಿಯು ದೇವಸೇನೆಯ ಮುಂದಾಳಾಗಿರುವನು. ಅಥವಾ ಯಜ್ಞಗಳಲ್ಲಿ ಮುಖ್ಯನಾಗಿರುವವನು ಎಂಬ ಅಗ್ನಿ ಶಬ್ದಾರ್ಥವನ್ನು ವಿವರಿಸಿ ಎರಡು ವಿಧವಾದ ಅರ್ಥವನ್ನು ಮಾತ್ರ ವರ್ಣಿಸಿದ್ದಾರೆ.

**ಹೋತಾರಂ—ಅಸ್ಮದ್ಯಾಗಂ ಪ್ರತಿ ದೇವಾನಾಮಾಹ್ವಾತಾರಂ ಯದ್ವಾ ಹೋಮನಿಷ್ಪಾದಕಂ ಹೋತಾರಂ ।** ನಮ್ಮ ಯಜ್ಞಗಳಿಗೆ ದೇವತೆಗಳನ್ನು ಕರೆದು ತರುವ ಅಥವಾ ಹೋಮವನ್ನು ನೆರವೇರಿಸುವ (ಮತ್ತು ಮಂತ್ರವನ್ನು ಪಠಿಸುವ) ಹೋತೃವಾಗಿರುವನು. ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದ್ದಾರೆ. **ಹು ದಾನಾದಾನಯೋಃ** ಎಂಬ ಧಾತುವಿನಿಂದ ಹೋತೃ ಎಂಬ ಶಬ್ದದ ನಿಷ್ಪತ್ತಿಯು ಆಗಿರುತ್ತದೆ. **ಅಗ್ನಿಮದ್ಯ ಹೋತಾರಮವೃಣೀತ** (ತೈ. ಬ್ರಾ. ೨-೬೧೫-೧) ಎಂಬ ಶ್ರುತಿಯು ಯಜ್ಞದಲ್ಲಿ ಅಗ್ನಿಯನ್ನು ಹೋತೃವನ್ನಾಗಿ ವರಿಸಬೇಕು ಎಂದು ಬೋಧಿಸುತ್ತದೆ. **ಅಗ್ನಿಮಗ್ರ ಆವಹ** (ತೈ. ಬ್ರಾ. ೩-೫-೩-೨) ಎಂಬ ಶ್ರುತಿಯು ಅಗ್ನಿಯು ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ ಮೊದಲು ಅಗ್ನಿಯನ್ನು ಆಹ್ವಾನಿಸಬೇಕು ಎಂದು ಬೋಧಿಸುತ್ತದೆ. ಇದರಿಂದ ಎರಡು ವಿಧವಾದ ಅರ್ಥಗಳೂ ಉಪಪನ್ನವಾಗಿವೆ. ಇದರಿಂದಲೇ ಇಲ್ಲಿಯೂ ಕೂಡ **ಅಗ್ನಿಂ ಹೋತಾರಂ ಮನ್ಯೇ** ಅಗ್ನಿಯನ್ನು ಹೋತೃವನ್ನಾಗಿ ತಿಳಿಯುತ್ತೇನೆ ಎಂದು ಹೋತೃಪದವನ್ನು ಅಗ್ನಿಪದಕ್ಕೆ ವಿಶೇಷಣವಾಗಿ ಹೇಳಿವೆ. ಇದರಂತೆಯೇ ಈ ಋಕ್ಕಿನಲ್ಲಿರುವ ದ್ವಿತೀಯಾಂತಪದಗಳು ಅಗ್ನಿಪದಕ್ಕೆ ವಿಶೇಷಣಗಳಾಗಿ ಇರುತ್ತವೆ ಎಂದು ಒಂದು ವಿಧವಾದ ಅರ್ಥ. **ಯದ್ವಾ ಯಾಗನಿಷ್ಪತ್ತೇರೇವಾಪೇಕ್ಷಿತತ್ವಾತ್ ಏತದೇವವಿಧೇಯವಿಶೇಷಣಂ ಇತರಾಣಿ ತು ವಕ್ಷ್ಯಮಾಣವಿಶೇಷಣಾನಿ ಸ್ತುತಿಪರಾಣಿ** ಯಾಗವು ಅವಶ್ಯಕರ್ತವ್ಯವಾಗಿ ನೆರವೇರಬೇಕಾದುದರಿಂದ **ಹೋತಾರಂ** ಎಂಬ ಪದವು ವಿಧೇಯವಿಶೇಷಣವನ್ನಾಗಿಯೂ ಇತರ ವಿಶೇಷಣ ಪದಗಳು ಅಗ್ನಿಯನ್ನು ಸ್ತುತಿಮಾಡುವವುಗಳಾಗಿಯೂ ಇರುತ್ತವೆ ಎಂದು ಎರಡನೆಯ ವ್ಯಾಖ್ಯಾನವು. ಇದರಿಂದ ಅಗ್ನಿಯೇ ಹೋತೃಶಬ್ದವಾಚ್ಯನೆಂದು ಅರ್ಥವಾಗುತ್ತದೆ. ಯಾಸ್ಕರು ಈ ನಿರುಕ್ತದಲ್ಲಿ—

**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ । ಹೋತಾರಂ ರತ್ನಧಾತಮಮ್ ॥**

(ಋ. ಸಂ. ೧-೧-೧)

ಎಂಬ ಋಕ್ಕನ್ನು ಉದಹರಿಸಿ **ಹೋತಾರಂ ಹ್ವಾತಾರಂ ಜುಹೋತೇರ್ಹೋತಾ ಇತ್ಯೌರ್ಣವಾಭಃ** (ನಿ. ೭-೧೫) ಹು ಧಾತುವಿನಿಂದ ನಿಷ್ಪನ್ನವಾದ ಹೋತಾ ಎಂಬ ಪದಕ್ಕೆ ದೇವತೆಗಳನ್ನು ಯಜ್ಞಕ್ಕಾಗಿ ಆಹ್ವಾನಮಾಡಿ ಕರೆದು ತರುವವನು ಎಂದು ಔರ್ಣವಾಭ ಎಂಬುವರ ಮತವನ್ನು ವಿವರಿಸಿರುವರು.

**ದಾಸ್ವನ್ತಂ—ಅತಿಶಯೇನ ದಾನವಂತಂ.** ಅಗ್ನಿಯು ಯಾಗಮಾಡುವ ಯಜಮಾನರಿಗೆ ಬಹಳವಾಗಿ ಧನವೇ ಮೊದಲಾದವುಗಳನ್ನು ಕೊಡುವವನೆಂದು ಅರ್ಥ.

**ವಸುಂ—ಸರ್ವೇಷಾಂ ನಿವಾಸಹೇತುಂ** ಅಗ್ನಿಯು ಎಲ್ಲರಿಗೂ ಸುಖದಿಂದ ವಾಸಮಾಡುವುದಕ್ಕೆ ಕಾರಣನಾದವನು ಎಂದು ಅರ್ಥ. ವಸುಶಬ್ದವು ರಶ್ಮಿನಾಮಗಳಲ್ಲಿ (ನಿ-೧-೧೫)ಯೂ, ಧನನಾಮಗಳಲ್ಲಿಯೂ, (ನಿ-೩-೯) ಪಠಿತವಾಗಿರುತ್ತದೆ. ಮತ್ತೂ

**ಸುಗುರಸತ್ಸುಹಿರಣ್ಯಃ ಸ್ವಶ್ವೋ ಬೃಹದಸ್ಮೈ ವಯ ಇಂದ್ರೋ ದಧಾತಿ ।**
**ಯಸ್ತ್ವಾಯಂತಂ ವಸುನಾ ಪ್ರಾತರಿತ್ವೋ ಮುಕ್ಷೀಜಯೇವ ಪದಿಮುತ್ಸಿನಾತಿ ॥**

(ಋ. ಸಂ. ೧-೧೨೫-೨)

ಎಂಬ ಈ ಋಕ್ಕಿನಲ್ಲಿ ವಸುನಾ—ಅನ್ನೇನ ಎಂದು ಅರ್ಥವನ್ನು ವಿವರಿಸಿರುವುದರಿಂದ ಅನ್ನವೆಂದೂ ಅರ್ಥವಾಗುತ್ತದೆ.

**ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥**

(ಋ. ಸಂ. ೭-೩೯-೩)

ಇಲ್ಲಿ ವಸವಃ ಎಂಬ ಪದಕ್ಕೆ ದೇವತೆಗಳು ಎಂದು ಅರ್ಥವನ್ನು ವಿವರಿಸಿದೆ. ಆದರೆ ಸಾಯಣರು ವಸುಶಬ್ದಕ್ಕೆ ವಾಸಕಾರಣನೆಂದು ಅರ್ಥವನ್ನು ವರ್ಣಿಸಿದ್ದಾರೆ.

**ಸಹಸಃ ಸೂನುಂ—ಬಲಸ್ಯ ಪುತ್ರಂ** ಯಾಗಮಾಡುವಾಗ ಅರಣಿಯಲ್ಲಿ (ಬಲದಿಂದ) ಶಕ್ತಿಯಿಂದ ಮಥನಮಾಡಿ ಅಗ್ನಿಯನ್ನು ಉತ್ಪನ್ನಮಾಡುವರು. ಆದ್ದರಿಂದ ಅಗ್ನಿಯು ಬಲದಿಂದ ಉತ್ಪನ್ನನಾಗುವ ಕಾರಣ ಬಲಕ್ಕೆ ಪುತ್ರನೆಂದು (ಮಗನೆಂದು) ಇಲ್ಲಿ ಔಪಚಾರಿಕವಾದ ಪ್ರಯೋಗವಿರುತ್ತದೆ.

**ಸಹಃ** ಎಂಬ ಶಬ್ದವು—ನೂರೊಂದು ಉದಕನಾಮುಗಳಲ್ಲಿಯೂ (ನಿ. ೨-೨೪) ಇಪ್ಪತ್ತೆಂಟು ಬಲನಾಮುಗಳ ಮಧ್ಯದಲ್ಲಿಯೂ (ನಿ. ೩-೯) ಪಠಿತವಾಗಿದೆ.

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**

(ಋ. ಸಂ. ೧೦-೫೦-೬)

ಎಂಬ ಈ ಋಕ್ಕಿನಲ್ಲಿ **ಸಹಸಃ ಸೂನೋ ಬಲಸ್ಯ** ಪುತ್ರ ಎಂದು ಅಗ್ನಿಯನ್ನು ಸಂಬೋಧಿಸಿದೆ ಎಂದು ಕೆಲವರ ಮತನೆಂದು ದುರ್ಗಾಚಾರ್ಯರು ವರ್ಣಿಸಿರುವರು.

**ಜಾತವೇದಸಂ—ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಬಲಂ ವಾ ।** ಉತ್ಪನ್ನವಾದವುಗಳೆಲ್ಲವನ್ನೂ ತಿಳಿದಿರುವವನು, ಎಂದೂ, ಸ್ವಾಭಾವಿಕವಾದ ಎಲ್ಲವನ್ನೂ ತಿಳಿಯಬಹುದಾದ ಬುದ್ಧಿಶಕ್ತಿಯುಳ್ಳವನೆಂದೂ, ಬಹಳವಾಗಿ ಇರುವ ಶಕ್ತಿಯನ್ನು ಹೊಂದಿ ಇರುವನೆಂದೂ ಅಗ್ನಿಯ ಸ್ವರೂಪವನ್ನು ಬೋಧಿಸುವ ಜಾತವೇದ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಸಾಯಣರು ವಿವರಿಸಿರುವರು. ಯಾಸ್ಕರು ನಿರುಕ್ತದಲ್ಲಿ—

**ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾ ಜಾತಧನಃ । ಜಾತವಿದ್ಯೋ ವಾ ಜಾತಪ್ರಜ್ಞಾನಃ ।**

(ನಿ. ೭-೨೦)

ಎಂದು ಹೇಳಿರುವದು. ಈ ಲೋಕದಲ್ಲಿ ಉತ್ಪನ್ನವಾದುದೂ ಇವನಿಗೆ ತಿಳಿಯದಿರುವುದೂ ಇಲ್ಲವು. ಆದ್ದರಿಂದ ಅಗ್ನಿಯು ಸರ್ವಜ್ಞನಾಗಿರುವನು. ಉತ್ಪನ್ನವಾದ ಪ್ರಾಣಿಗಳು ಎಲ್ಲವೂ ಅಗ್ನಿಯನ್ನು ತಿಳಿದಿರುವವು. ಆದ್ದರಿಂದ ಎಲ್ಲರಿಂದಲೂ ತಿಳಿಯಲರ್ಹನಾಗಿರುವನು.

**ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನೃತೂನ್ ಪಶವೋಽಗ್ನಿಮಭಿಃ ಸರ್ಪಂತೀತಿ ಚ ॥**

ಎಂಬ ಈ ಶ್ರುತಿವಾಕ್ಯವು ಅಗ್ನಿಯು ಉತ್ಪನ್ನವಾದವುಗಳೆಲ್ಲದರಲ್ಲಿಯೂ ವ್ಯಾಪಿಸಿರುವ ಎಂಬ ಅರ್ಥವನ್ನು ವಿಶದವಾಗಿ ಹೇಳುತ್ತದೆ.

ಅಗ್ನಿಯು ಧನವುಳ್ಳವನು. ಮತ್ತು ಸ್ವಭಾವದಿಂದಲೂ ಅಗ್ನಿಯು ಪ್ರಜ್ಞಾನವಂತನಾಗಿರುವನು. ಎಂದು ಅಗ್ನಿಯ ಸ್ವರೂಪ ಮತ್ತು ಸ್ವಭಾವವನ್ನು ವಿವರಿಸಿ,

**ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ ।**
**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥**

(ಋ. ಸಂ. ೧-೯೯-೧)

ಮತ್ತು—

**ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ । ಇದಂ ನೋ ಬರ್ಹಿರಾಸದೇ ॥**

(ಋ. ಸಂ. ೧೦-೧೮೮-೧)

ಎಂಬ ಋಕ್ಕುಗಳಿಂದ ಜಾತವೇದಸ್ಸೆಂಬ ಅಗ್ನಿಯನ್ನು ಸ್ತುತಿಸಿರುವುದನ್ನೂ ವಿವರಿಸಿರುವರು. ಮತ್ತು—

**ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದಶತತೀಷು ವಿದ್ಯತೇ ।**
**ಯತ್ತು ಕಿಂಚಿದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ॥**

(ನಿ. ೭-೨೦)

ಪ್ರನೂನಂ ಎಂಬ ಜಾತವೇದಸ್ಸಂಬಂಧಿಯಾದ ಗಾಯತ್ರಿಯು ಒಂದೇ ಆಗಿರುವುದು. ಇದಕ್ಕಿಂತಲೂ ಬೇರೆಯಾದ ಜಾತವೇದಾಗ್ನಿ ಬೋಧಕವಾದ ಗಾಯತ್ರಿಯು ಕರ್ಮದಲ್ಲಿ ವಿನಿಯೋಗವನ್ನು ಹೊಂದಿರುವುದಿಲ್ಲ. ಆದ್ದರಿಂದ ಅಗ್ನಿಯೇ ಜಾತವೇದಾಃ ಎಂಬ ಪದದಿಂದ ನಿರ್ದಿಷ್ಟನಾಗಿರುವನು.

**ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋನು ಮಧ್ಯಮಃ । ಅಭಿ ಪ್ರವಂತ ಸಮನೇವ ಯೋಷಾ ಇತಿ ತತ್ ಪುರಸ್ತಾದ್ವ್ಯಾಖ್ಯಾತಂ । ಅಥಾಸಾವಾದಿತ್ಯಂ ಉದುತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥**

**ಅಭಿ ಪ್ರವಂತ ಸಮನೇವ ಯೋಷಾ** ಎಂಬ ಮಂತ್ರದಿಂದಲೂ ಅಗ್ನಿಯ ಸ್ವರೂಪವನ್ನು ವರ್ಣಿಸಿರುವುದಾದರೂ, ಜಾತವೇದಶ್ಶಬ್ದದ ಅರ್ಥವನ್ನು ವಿಮರ್ಶೆ ಮಾಡುವಾಗ ಅಗ್ನಿ ಪದವೂ (ಅಭಿಪ್ರವಂತ ಎಂಬ ಮಂತ್ರದಲ್ಲಿ ಉಕ್ತವಾಗಿರುವ ಪದವು) ಜಾತವೇದಶ್ಶಬ್ದಾರ್ಥಕ್ಕೆ ವಿಶೇಷಣವಾಗಿರುವುದು. **ಉದತ್ಯಂ ಜಾತವೇದಸಂ** ಎಂಬ ಮಂತ್ರದಿಂದ ಸೂರ್ಯನೂ ಜಾತವೇದಶ್ಶಬ್ದದಿಂದ ಬೋಧ್ಯನಾಗಿರುವನೆಂದು ಅರ್ಥವು. ದುರ್ಗಾಚಾರ್ಯರು—

**ಜಾತವೇದಸಂ ಸೂರ್ಯಮುಷ್ಣಹಂತೀತಿ ತು ವಿಶೇಷಣವಿಶೇಷ್ಯಸಾಮಾನಾಧಿಕರಣ್ಯೈಕವಾಕ್ಯ ಪ್ರಸಿದ್ಧ್ಯಾ ಸ್ವನಿಗಮಸಿದ್ಧಮಸ್ಮಿನ್ ಮಂತ್ರೇ ಜಾತವೇದಾಃ ಸೂರ್ಯ ಇತಿ ॥**

**ಉದುತ್ಯಂ ಜಾತವೇದಸಂ** ಎಂಬ ಮಂತ್ರದಲ್ಲಿ ಸೂರ್ಯನಿಗೂ, ಜಾತವೇದಸನೆಂಬ ಅಗ್ನಿಗೂ ತಾದಾತ್ಮ್ಯವನ್ನು ಬೋಧಿಸು ವುದಕ್ಕಾಗಿ ವಿಶೇಷಣ ವಿಶೇಷ್ಯಭಾವದಿಂದ ಏಕವಾಕ್ಯವನ್ನು ಅಂಗೀಕರಿಸಿ ಸೂರ್ಯನೂ ಜಾತವೇದಸನಾಗಿರುವನು ಎಂದು ಅರ್ಥವನ್ನು ವಿಮರ್ಶೆಮಾಡಿ ವರ್ಣಿಸಿರುತ್ತಾರೆ. ಮತ್ತು—

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರೂಪ್ಯತೇ ಅಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥**

(ನಿ. ೭–೨೦)

ಪಾರ್ಥಿವಾಗ್ನಿರೂಪದಿಂದ ಇರುವ ಜಾತವೇದಶ್ಶಬ್ದಬೋಧ್ಯನಾದ ಅಗ್ನಿಯೇ ಆಯಾಯ ಸೂಕ್ತಮಂತ್ರಗಳಿಂದ ಯಜ್ಞಗಳಲ್ಲಿ ಆಹೂತನಾಗಿ ಹವಿಸ್ಸುಗಳನ್ನು ಸ್ವೀಕರಿಸುವನು. ವೈದ್ಯುತಾಗ್ನಿ, ವೈಶ್ವಾನರಾಗ್ನಿ, ಸೂರ್ಯ, ಇವರುಗಳು ಅಗ್ನಿಯ ಪ್ರಭೇದ ವಾದರೂ ಜಾತವೇದಶ್ಶಬ್ದದಿಂದ ಬೋಧ್ಯವಾದರೂ ಜಾತವೇದಶ್ಶಬ್ದವು ಪ್ರಸಿದ್ಧಿಯಿಂದ ಪಾರ್ಥಿವಾಗ್ನಿಯನ್ನು ಬೋಧಿಸುವುದು ಎಂದು ವಿವರಿಸಿರುವರು.

**ವಿಪ್ರಂ ನ ಜಾತವೇದಸಂ—ಜಾತವಿದ್ಯಂ ಮೇಧಾವಿನಂ ಬ್ರಾಹ್ಮಣಮಿವ ।**

ಯಾಸ್ಕರು—

**ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ । ಉಭಯಮನ್ವಧ್ಯಾಯಂ** (ನಿ. ೧–೪) ನ ಎಂಬ ಪದವು ನಿಷೇಧಾರ್ಥದಲ್ಲಿ ಪ್ರಸಿದ್ಧವಾಗಿರುವುದು. ವೇದದಲ್ಲಿ ಇದು ನಿಷೇಧ, ಉಪಮಾ, (ಹೋಲಿಕೆ) ಎಂಬ ಎರಡು ಅರ್ಥಗಳಲ್ಲಿಯೂ ಪ್ರಯುಕ್ತವಾಗಿದೆ ಎಂದು ವಿವರಿಸಿರುವುದರಿಂದ **ವಿಪ್ರಂ ನ** ಎಂಬಲ್ಲಿ ನ ಎಂಬುವ ಪದವು ಉಪಮಾರ್ಥದಲ್ಲಿ ಪ್ರಯುಕ್ತವಾಗಿರು ವುದರಿಂದ ಸಾಯಣರು **ಬ್ರಾಹ್ಮಣಮಿವ** ಬ್ರಾಹ್ಮಣರ ಹಾಗೆ ಎಂದು ಅರ್ಥವನ್ನು ಹೇಳಿರುವರು.

ಮಂತ್ರದ್ರಷ್ಟೃವಾದ ಋಷಿಯು ಜ್ಞಾನವಂತನಾಗಿರುವ ಬ್ರಾಹ್ಮಣನನ್ನು ಗೌರವದಿಂದ ಪೂಜಿಸುವಂತೆ ಅಗ್ನಿಯನ್ನೂ ಕೂಡ ಗೌರವದಿಂದಲೂ, ಆದರದಿಂದಲೂ ಸ್ತುತಿಸುತ್ತೇನೆ ಎಂದು ವರ್ಣಿಸಿರುವನು ಎಂದು ಅರ್ಥ.

**ಊರ್ಧ್ವಯಾ ದೇವಾಚ್ಯಾ ಕೃಪಾ—ಉತ್ಪನ್ನಯಾ ಉತ್ಕೃಷ್ಟಯಾ ದೇವಾನ್ ಪೂಜಯಂತ್ಯಾ ದೇವಾನ್ ಪ್ರತ್ಯಕ್ತಯಾ ವಾ ಕೃಪಯಾ ಸಾಮರ್ಥ್ಯಲಕ್ಷಣಯಾ** ಊರ್ಧ್ವಶಬ್ದವು ಉನ್ನತ ಎಂಬ ಅರ್ಥವನ್ನು ಬೋಧಿಸುವುದು ರೂಢಿಯಾಗಿರುತ್ತದೆ. ಇಲ್ಲಿ ಕೃಪಾ ಶಬ್ದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿ ಉತ್ಕೃಷ್ಟ ಅಥವಾ ಅತಿಶಯವಾದ ಎಂಬ ಅರ್ಥವನ್ನು ಬೋಧಿಸುವುದು. ದೇವತೆಗಳ ವಿಷಯದಲ್ಲಿ ಅಗ್ನಿಗೆ ಉಂಟಾಗುವ ಕೃಪೆಯು ದೇವತೆಗಳಿಗೆ ಯಜ್ಞದಲ್ಲಿ ಅರ್ಪಿಸುವ ಹವಿಸ್ಸುಗಳನ್ನು ಅವರವರಿಗೆ ತಲುಪಿಸುವುದಾಗಿಯೂ ದೇವತೆಗಳನ್ನು ಗೌರವಿಸುವು ದಾಗಿಯೂ ಇರುತ್ತದೆ.

ಯಾಸ್ಕರು ನಿರುಕ್ತದಲ್ಲಿ **ದೇವೋ ದೇವಾಚ್ಯಾ ಕೃಪಾ** (ನಿ. ೬–೮) **ದೇವೋ ದೇವಾನ್ ಪ್ರತ್ಯಕ್ತಯಾ ಕೃಪಾ ಕೃಪ್ ಕೃಪತೇರ್ವಾ ಕಲ್ಪತೇರ್ವಾ** ಎಂದು ವಿವರಿಸಿರುವರು. ದುರ್ಗಾಚಾರ್ಯರು **ಅಗ್ನಿಂ ಹೋತಾರಂ ಮನ್ಯೇ** (ಋ. ಸಂ. ೨–೧–೧೨–೧) ಎಂಬ ಈ ಋಕ್ಕನ್ನೇ ಉದಹರಿಸಿ ಕೃಪಾ ಎಂಬ ಶಬ್ದವು ಕೃಪೂ ಸಾಮರ್ಥ್ಯೇ ಎಂಬ

ಧಾತುವಿನಿಂದಾಗಲಿ ಅಥವಾ ಕಲ್ಪಧಾತುವಿನಿಂದಾಗಲಿ ನಿಷ್ಪನ್ನವಾಗಿರುವುದರಿಂದ ಸಾಮರ್ಥ್ಯದಿಂದ ಅಗ್ನಿಯು ದೇವತೆಗಳ ವಿಷಯದಲ್ಲಿ ಪ್ರತ್ಯಗ್ಗಮನವುಳ್ಳವನಾಗಿರುವನೆಂದು ಅರ್ಥವನ್ನು ವರ್ಣಿಸಿರುವರು.

**ಶೋಚಿಷಾ ವಷ್ಟಿ—ಜ್ವಾಲಯಾ ಕಾಮಯತೇ ಸ್ವೀಕರೋತೀತ್ಯರ್ಥಃ ।** ಅಗ್ನಿಯು ತನ್ನ ಸುತ್ತಲೂ ಹೋಮ ಮಾಡುವುದರಿಂದ ಹೆಚ್ಚಾಗಿ ಹರಡುತ್ತಿರುವ ಆಜ್ಯದ ಪ್ರಸರಣವನ್ನು ಅನುಸರಿಸಿ ತಾನೂ ದೀಪ್ತನಾಗಿ ಜ್ವಲಿಸುತ್ತಿರುವ ಆಜ್ಯವನ್ನು ತನ್ನ ಜ್ವಾಲೆಗಳಿಂದ ಸ್ವೀಕರಿಸುವನೆಂದು ವರ್ಣಿಸಿದೆ. **ಶೋಚತಿ, ಶೋಚಿಃ** ಎಂಬ ಪದಗಳು **ಜ್ವಲತಿ** ಕರ್ಮಗಳಲ್ಲಿ **ಜ್ವಲತೋ** ನಾಮಧೇಯಗಳಲ್ಲಿ (ನಿ. ೨–೨೮) ಪಠಿತವಾಗಿದೆ. ಜ್ವಾಲೆಗಳೆಂದು ಅರ್ಥ.

**ಇತಿ ಅಷ್ಟಮಃ ಖಂಡಃ**

ಇಲ್ಲಿಗೆ ಎಂಟನೆಯ ಖಂಡವು ಸಮಾಪ್ತವು

---

## ನವಮಃ ಖಂಡಃ

### ಒಂಭತ್ತನೆಯ ಖಂಡವು

ಅಶ್ರವಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ ವಾ ಘಾ ಸ್ಯಾಲಾತ್ । ಅಥಾ ಸೋಮಸ್ಯ ಪ್ರಯತೀ ಯುವಭ್ಯಾಮಿನ್ದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ॥ ಅಶ್ರೌಷಂ ಹಿ ಬಹುದಾತೃತರೌ ವಾಂ ವಿಜಾಮಾತುರಸುಸಮಾಪ್ತಾಜ್ಜಾಮಾತುರ್ವಿಜಾಮಾತೇತಿ ಶಶ್ವದ್ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇಽಸುಸಮಾಪ್ತ ಇವ ವರೋಽಭಿಪ್ರೇತೋ ಜಾಮಾತಾ ಜಾ ಅಪತ್ಯಂ ತನ್ನಿರ್ಮಾತೋತ ವಾ ಘಾ ಸ್ಯಾಲಾದಪಿ ಚ ಸ್ಯಾಲಾತ್ ಸ್ಯಾಲ ಆಸನ್ನಃ ಸಂಯೋಗೇನೇತಿ ನೈದಾನಾಃ ಸ್ಯಾಲ್ಲಾಜಾನಾವಪತೀತಿ ವಾ ಲಾಜಾ ಲಾಜತೇಃ ಸ್ಯಂ ಶೂರ್ಪಂ ಸ್ಯತೇಃ ಶೂರ್ಪಮಶನಪವನಂ ಶೃಣಾತೇರ್ವಾಥ ಸೋಮಸ್ಯ ಪ್ರದಾನೇನ ಯುವಾಭ್ಯಾಮಿನ್ದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ನವತರಮೋವಮಾಸ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥೯॥

---

ವಿಜಾಮಾತುಃ ॥೪೦॥

" ಅಶ್ರವಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ ವಾ ಘಾ ಸ್ಯಾಲಾತ್ । ಅಥಾ ಸೋಮಸ್ಯ ಪ್ರಯತೀ ಯುವಭ್ಯಾಮಿನ್ದ್ರಾಗ್ನೀ

ಸ್ತೋಮಂ ಜನಯಾಮಿ ನವ್ಯಮ್॥ ಅಶ್ರೌಷಂ ಹಿ ಬಹುದಾತೃತರೌ ವಾಂ ವಿಜಾಮಾತುರಸುಸಮಾಪ್ತಾಜ್ಜಾಮಾತುಃ । ವಿಜಾಮಾತೇತಿ ಶಶ್ವದ್ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇ ॥ ಅಸುಸಮಾಪ್ತ ಇವ ವರೋಽಭಿಪ್ರೇತಃ ॥ ಜಾಮಾತಾ ಜಾ ಅಪತ್ಯಂ ತನ್ನಿರ್ಮಾತಾ । 'ಉತ ವಾ ಘಾ ಸ್ಯಾಲಾತ್' ಅಪಿ ಚ ಸ್ಯಾಲಾತ್ । ಸ್ಯಾಲ ಆಸನ್ನಃ ಸಂಯೋಗೇನೇತಿ ನೈದಾನಾಃ । ಸ್ಯಾಲ್ಲಾಜಾನಾವಪತೀತಿ ವಾ । ಲಾಜಾ ಲಾಜತೇಃ । ಸ್ಯಂ ಶೂರ್ಪಂ ಸ್ಯತೇಃ । ಶೂರ್ಪಮಶನಪವನಂ ಶೃಣಾತೇರ್ವಾಽಥ ಸೋಮಸ್ಯ ಪ್ರದಾನೇನ ॥ "ಯುವಾಭ್ಯಾಮಿದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಮ್" ನವತರಮ್ ॥೧॥

ಉದಾಹರಣೆಯ ಋಕ್ಕು—

**ಅಶ್ರವಂ ಹಿ ಭೂರಿದಾವತ್ತರಾ ವಾಂ ವಿಜಾಮಾತುರುತ ವಾ ಘಾ ಸ್ಯಾಲಾತ್ ।**
**ಅಥಾ ಸೋಮಸ್ಯ ಪ್ರಯತೀ ಯುವಭ್ಯಾಮಿಂದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ॥**

(ಋ. ಸಂ. ೧-೧೦೯-೨)

ಇದರ ಅರ್ಥವು—

ಎಲೈ ಇಂದ್ರಾಗ್ನಿಗಳೇ, ನನಗೆ ಹೇಗಾದರೂ ಕನ್ಯೆಯು ದೊರೆತರೆ ಸಾಕೆಂದು ಕನ್ಯಾಪಿತೃವಿಗೆ ಅತ್ಯಂತ ಅತಿಪ್ರಭೂತವಾಗಿ ಧನವನ್ನು ಕೊಡತಕ್ಕ ಅಯೋಗ್ಯನೂ ಸದ್ಗುಣರಹಿತನೂ ಆದ ವರನಿಗಿಂತಲೂ ಮತ್ತು ಸಹೋದರಿಯ ಮೇಲಿನ ಅಭಿಮಾನದಿಂದ ಅತಿಶಯವಾಗಿ ಧನವನ್ನು ಕೊಡತಕ್ಕ ಮೈದುನನಿಗಿಂತಲೂ ಹೆಚ್ಚಾಗಿ ನೀವಿಬ್ಬರೂ ಧನವನ್ನು ದಾನಮಾಡುವವರೆಂದು ನಾನು ಕೇಳಿಯೇ ಇದ್ದೇನೆ. ಆದ್ದರಿಂದ ನಿಮ್ಮಿಬ್ಬರಿಗೂ ಈ ಸೋಮರಸವನ್ನು ಅರ್ಪಿಸುತ್ತಾ ಅದರ ಜೊತೆಗೆ ನೂತನವಾದ ಸ್ತೋತ್ರವನ್ನೂ ನಿರ್ಮಿಸುತ್ತೇನೆ.

ಇಲ್ಲಿ ಇಂದ್ರಾಗ್ನಿಗಳ ಔದಾರ್ಯವನ್ನು ಸ್ತುತಿಸಿದೆ. ಧನವನ್ನು ದಾನಮಾಡುವಾಗ ಧನದ ಪರಿಮಾಣವನ್ನು ಆಧಿಕ್ಯವನ್ನೂ ತೋರಿಸಲು ಎರಡು ಉಪಮಾನಗಳನ್ನು ಕೊಟ್ಟಿದೆ. ಮೊದಲನೆಯದು **ವಿಜಾಮಾತೃವಿನ** ಉಪಮಾನ. ಜಾಮಾತೃವಿನ ಮುಖ್ಯ ಗುಣಗಳು ಸತ್ಕುಲಪ್ರಸೂತತ್ವವೂ ಸದ್ಗುಣ ಯುಕ್ತತ್ವವೂ ಆಗಿವೆ. ಅವುಗಳಿಂದ ರಹಿತನಾದವನು ವಿಜಾಮಾತೃವು. **ವಿಗತಾ ಜಾಮಾತೃಗುಣಾ ಯಸ್ಯ ಸ ವಿಜಾಮಾತಾ ಕ್ರೀತಾಪತಿರುಚ್ಯತೇ ।** ಎಂದು ಸ್ಕಂದಸ್ವಾಮಿಗಳು **ಕ್ರೀತಾಪತಿಯು** (ಕ್ರೀತಳಾದವಳ ಪತಿ) ವಿಜಾಮಾತೃವೆಂದು ಹೇಳಿರುತ್ತಾರೆ. ಇವನು ಕೇವಲ ಕಾಮುಕನಾಗಿದ್ದು ಪ್ರೀತ್ಯಭಿಮಾನಾದಿ ಸದ್ಗುಣಗಳಿಲ್ಲದೆ ಕನ್ಯೆಯು ದೊರೆತರೆ ಸಾಕೆಂದು ಕನ್ಯಾಪಿತೃವಿಗೆ ಪ್ರಭೂತವಾಗಿ ಧನವನ್ನು ಕೊಟ್ಟು ಕನ್ಯೆಯನ್ನು ಪಡೆಯುತ್ತಾನೆ (ಇದರಿಂದ ಇಂತಹ ಕನ್ಯಾಪಿತೃಗಳ ಗುಣವೂ ವರ್ಣಿತವಾಗಿದೆ). ಹೀಗೆ ಅಯೋಗ್ಯರಿಂದ ಧನವನ್ನು ಪಡೆದು ತಮ್ಮ ಕನ್ಯೆಯನ್ನು ಧನದಾಸೆಗಾಗಿ ಕಾಮುಕನಿಗಾದರೂ ಕೊಡತಕ್ಕ ಪಿತೃಗಳ ಗುಂಪೊಂದು ಕಡೆಯಿದ್ದರೆ, ಇದಕ್ಕೆ ವಿರುದ್ಧವಾಗಿ ತಮ್ಮ ಸಹೋದರಿಯರ ಮೇಲಿನ ಅಭಿಮಾನದಿಂದ ಉದಾರವಾಗಿ ಧನವನ್ನು ಕೊಟ್ಟು ಸದ್ಗುಣಪೂರಿತನಾದ ವರನಿಗೆ ಕನ್ಯಾ

ದಾನವನ್ನು ಮಾಡತಕ್ಕವರ ಗುಂಪು ಇನ್ನೊಂದು ಕಡೆಯಿರುತ್ತದೆ. ಇಂದ್ರಾಗ್ನಿಗಳ ಔದಾರ್ಯಕ್ಕೆ ಈ ಎರಡು ಉಪಮಾನಗಳನ್ನು ಕೊಡಬೇಕಾದರೆ ಒಂದು ಕಡೆ ಈ ವಿಜಾಮಾತೃಗಳು ಎಷ್ಟು ಧನವ್ಯಯ ಮಾಡುತ್ತಿದ್ದರೆಂದೂ, ಇನ್ನೊಂದು ಕಡೆ ಸಹೋದರಿಯರ ಮೇಲೆ ಅಭಿಮಾನದಿಂದ ಕನ್ಯಾಭ್ರಾತೃಗಳು ಎಷ್ಟು ಉದಾರವಾಗಿ ಧನದಾನ ಮಾಡುತ್ತಿದ್ದಾರೆಂದೂ ತಿಳಿಯುತ್ತದೆ. ಇಂದ್ರಾಗ್ನಿಗಳ ಧನದಾನವು ಈ ಎರಡು ಗುಂಪುಗಳ ಜನರ ಔದಾರ್ಯಕ್ಕಿಂತ ಮೀರಿದುದು ಎಂದು ತಾತ್ಪರ್ಯ.

**ವಿಜಾಮಾತುಃ**—ಈ ಪದದ ನಿರ್ವಚನವನ್ನು ತೋರಿಸುವಾಗ ನಿರುಕ್ತಕಾರರು ಈ ಋಕ್ಕನ್ನೇ ಉದಾಹರಣೆಗೆ ತೆಗೆದುಕೊಂಡಿರುತ್ತಾರೆ. ಋಕ್ಕಿಗೆ ಅವರು ಹೇಳಿರತಕ್ಕ ವಿವರಣೆಯು ಈ ರೀತಿಯಿದೆ.

**ಅಶ್ರೌಷಂ ಹಿ ಬಹುದಾತೃತರೌ ವಾಂ ವಿಜಾಮಾತುರಸುಸಮಾಪ್ತಾಜ್ಜಾಮಾತುಃ । ವಿಜಾಮಾತೇತಿ ಶಶ್ವ-ದ್ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇಽಸುಸಮಾಪ್ತ ಇವ ವರೋಽಭಿಪ್ರೇತೋ ಜಾಮಾತಾ ಜಾ ಅಪತ್ಯಂ ತನ್ನಿ-ರ್ಮಾತಾ । ಉತ ವಾ ಘಾ ಸ್ಯಾಲಾದಪಿ ಚ ಸ್ಯಾಲಾತ್ ಸ್ಯಾಲ ಆಸನ್ನಃ ಸಂಯೋಗೇನೇತಿ ನೈದಾನಾಃ । ಸಾಲ್ಲಾ-ಜಾನಾವಪತೀತಿ ವಾ । ಲಾಜಾ ಲಾಜತೇಃ ಸ್ಯಂ ಶೂರ್ಪಂ ಸ್ಯತೇಃ । ಅಥ ಸೋಮಸ್ಯ ಪ್ರದಾನೇನ ಯುವಾಭ್ಯಾ-ಮಿಂದ್ರಾಗ್ನೀ ಸ್ತೋಮಂ ಜನಯಾಮಿ ನವ್ಯಂ ನವತರಂ ।** (ನಿ. ೬-೯) ಕ್ರೀತಳಾದ ಕನ್ಯೆಯ ಪತಿಯನ್ನು ದಾಕ್ಷಿಣಾತ್ಯರು ವಿಜಾಮಾತೃವೆಂದು ಕರೆಯುತ್ತಾರೆ. ಈತನ ನಿಜವಾದ ಸಂಬಂಧವು ಪೂರ್ಣವಾಗಿಲ್ಲವೆಂದರ್ಥ. ಅಪತ್ಯವನ್ನು ಉತ್ಪನ್ನ ಮಾಡುವುದರಿಂದ **ಜಾಮಾತೃವೆಂಬ** ಹೆಸರು ಬಂದಿದೆ ಎಂದು -**ಸ್ಯಾಲ** ಶಬ್ದಾರ್ಥದ ನಿರ್ವಚನವನ್ನು ತೋರಿಸುತ್ತಾ, ಅತ್ಯಂತ ಹತ್ತಿರವಾದ ಸಂಬಂಧವಿರುವುದರಿಂದ ಪತ್ನಿಯ ಭ್ರಾತೃವಿಗೆ ಸ್ಯಾಲನೆಂದು ಪ್ರಾಜ್ಞರು ಹೇಳುತ್ತಾರೆ. ಅಥವಾ ಮೊರದಿಂದ ಲಾಜವನ್ನು (ಅರಳು) ತೆಗೆದು ವಿವಾಹ ಕಾಲದಲ್ಲಿ ಅಗ್ನಿಗೆ ಹಾಕಲು ಸಹಾಯಮಾಡುವವನಾದ್ದರಿಂದ ಸ್ಯಾಲನೆಂದೂ ಹೆಸರು ಬಂದಿದೆ. ಇಂತಹ **ವಿಜಾಮಾತೃವಿಗಿಂತಲೂ** ಮತ್ತು ಸ್ಯಾಲನಿಗಿಂತಲೂ ಹೆಚ್ಚು ಔದಾರ್ಯವುಳ್ಳವರು ಇಂದ್ರಾಗ್ನಿಗಳು ಎಂದು ತಾತ್ಪರ್ಯ. **ನವ್ಯ** ಶಬ್ದಕ್ಕೆ **ನವತರ** ಅತ್ಯಂತ ನೂತನವಾದದು ಎಂದರ್ಥ. ಇಂತಹ ನೂತನವಾದುದೂ ಅತಿಶಯ ಆದ ಸ್ತೋತ್ರವನ್ನು ನಿರ್ಮಿಸುತ್ತೇನೆ ಎಂದು ಪ್ರಾರ್ಥಿಸಿದೆ.

ಓಮಾಸಃ ॥ ೪ ॥

ಓಮಾಸ ಇತ್ಯುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥ ೨ ॥ ೯ ॥

**ಓಮಾಸಃ**—ಈ ಪದವನ್ನು ಮುಂದೆ ಎಂದರೆ ನಿರುಕ್ತ ೧೨ನೇ ಅಧ್ಯಾಯ ೪೦ನೇ ಖಂಡದಲ್ಲಿ **ಓಮಾಸಶ್ಚರ್ಷಣೀ-ಧೃತಃ** ಎಂಬ ಋಕ್ಕನ್ನು ವಿವರಿಸುವಾಗ ಹೇಳಲಾಗುತ್ತದೆ.

**ಇತಿ ನವಮಃ ಖಂಡಃ**

ಇಲ್ಲಿಗೆ ಒಂಭತ್ತನೆಯ ಖಂಡವು ಸಮಾಪ್ತವು

|| ದಶಮಃ ಖಂಡಃ ||

**ಹತ್ತನೆಯ ಖಂಡವು**

ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ । ಕಕ್ಷೀವನ್ತಂ ಯ ಔಶಿಜಃ || ಸೋಮಾನಂ ಸೋತಾರಂ ಪ್ರಕಾಶನವನ್ತಂ ಕುರು ಬ್ರಹ್ಮಣ-ಸ್ಪತೇ ಕಕ್ಷೀವನ್ತಮಿವ ಯ ಔಶಿಜಃ ಕಕ್ಷೀವಾನ್ ಕಕ್ಷ್ಯಾವಾನೌಶಿಜ ಉಶಿಜಃ ಪುತ್ರ ಉಶಿಗ್ವಷ್ಟೇಃ ಕಾನ್ತಿಕರ್ಮಣೋಽಪಿ ತ್ವಯಂ ಮನುಷ್ಯ-ಕಕ್ಷ ಏವಾಭಿಪ್ರೇತಃ ಸ್ಯಾತ್ತಂ ಸೋಮಾನಾಂ ಸೋತಾರಂ ಮಾಂ ಪ್ರಕಾಶವನ್ತಂ ಕುರು ಬ್ರಹ್ಮಣಸ್ಪತೇ ||೧೦||

---

ಸೋಮಾನಮ್ ||೪೨||

" ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ಕಕ್ಷೀವನ್ತಂ ಯ ಔಶಿಜಃ || ಸೋಮಾನಾಂ ಸೋತಾರಂ ಪ್ರಕಾಶನವನ್ತಂ ಕುರು ಬ್ರಹ್ಮ-ಣಸ್ಪತೇ ಕಕ್ಷೀವನ್ತಮಿವ ಯ ಔಶಿಜಃ ಕಕ್ಷೀವಾನ್ ಕಕ್ಷ್ಯಾವಾನೌಶಿಜ ಉಶಿಜಃ ಪುತ್ರಃ || ಉಶಿಗ್ವಷ್ಟೇಃ ಕಾನ್ತಿಕರ್ಮಣಃ || ಅಪಿ ತ್ವಯಂ ಮನುಷ್ಯಕಕ್ಷ ಏವಾಭಿಪ್ರೇತಃ ಸ್ಯಾತ್ತಂ ಸೋಮಾನಾಂ ಸೋತಾರಂ ಮಾಂ ಪ್ರಕಾಶನವನ್ತಂ ಕುರು ಬ್ರಹ್ಮಣಸ್ಪತೇ ||೧||೧೦||

ಉದಾಹರಣೆಯ ಋಕ್ಕು—

**ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ।**
**ಕಕ್ಷೀವಂತಂ ಯ ಔಶಿಜಃ ||**

(ಋ. ಸಂ. ೧-೧೮-೧)

ಇದರ ಅರ್ಥವು—

ಉಶಿಜಪುತ್ರನಾದ ಕಕ್ಷೀವಾನ್ ಎಂಬುವನು ಸೋಮಯಾಗವನ್ನು ಮಾಡಿದವನೆಂದು ದೇವತೆಗಳಲ್ಲಿ ಪ್ರಸಿದ್ಧ ನಾಗಿದ್ದಾನೆ. ಎಲೈ ಬ್ರಹ್ಮಣಸ್ಪತಿಯೇ, ಯಜ್ಞಕರ್ತೃವಾದ ನನ್ನನ್ನೂ ಆ ಕಕ್ಷೀವಂತನಂತೆ ಸೋಮಯಾಗ ಕರ್ತೃವೆಂದು ಪ್ರಸಿದ್ಧಪಡಿಸು.

ಈ ಸೂಕ್ತಕ್ಕೆ ಬ್ರಹ್ಮಣಸ್ಪತಿಯು ದೇವತೆಯು. ಈ ಬ್ರಹ್ಮಣಸ್ಪತಿಯು ಯಾರು ? ದೇವತೆಗಳಲ್ಲಿ ಇವನ ಸ್ಥಾನ ಮಾನಗಳೇನು ಎಂಬುವುದನ್ನು ಸೂಕ್ಷ್ಮವಾಗಿ ವಿವರಿಸುವೆವು. ಯಾಸ್ಕಮಹರ್ಷಿಯ ನಿರುಕ್ತದಲ್ಲಿ (ನಿ. ೧೦-೧೪) ಬ್ರಹ್ಮಣ ಸ್ಪತಿಯ ವಿಚಾರವಾಗಿ ಈ ರೀತಿ ಹೇಳಿರುವರು—

**ಬ್ರಹ್ಮಣಸ್ಪತಿಃ । ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ॥**

ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ ಸ್ತೋತ್ರವೆಂದೂ ಅರ್ಥವಾಗುವುದು. (ನಿ. ೩-೯) ಆದುದರಿಂದ **ಬ್ರಹ್ಮಣಃ ಪಾತಾ** ಎಂದರೆ **ಅನ್ನಸ್ಯ ಪಾತಾ** ಅನ್ನಕ್ಕೆ (ಆಹಾರಕ್ಕೆ) ಸ್ವಾಮಿಯು ಅಥವಾ ಅಧಿಪತಿಯು ಎಂದರ್ಥವು. ಬ್ರಹ್ಮಣಸ್ಪತಿಯು ಹೇಗೆ ಅನ್ನಕ್ಕೆ ಅಧಿಪತಿಯು ಎಂದರೆ ಯಾಸ್ಕರು ಉದಾಹರಣೆಗಾಗಿ—

**ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್**
**ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥**
(ಋ. ಸಂ. ೨-೨೪-೪)

ಎಂಬ ಋಕ್ಕನ್ನು ಕೊಟ್ಟು ಅದಕ್ಕೆ—

**ಅಶನವಂತಮಾಸ್ಯಂತನವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ ॥**
(ನಿ. ೧೦-೧೩)

ಎಂದು ನಿರುಕ್ತವನ್ನು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಈ ಬ್ರಹ್ಮಣಸ್ಪತಿಯು ಸೂರ್ಯರಶ್ಮಿಗಳ ಸಹಾಯದಿಂದ ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಆ ಉದಕವನ್ನು ವಿಶೇಷವಾಗಿ ಭೂಮಿಯ ಮೇಲೆ ಮಳೆಯಾಗಿ ಬೀಳುವಂತೆ ಮಾಡುವುದರಿಂದ ಮಳೆಯಿಂದ ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರವೂ ಲಭಿಸುವುದೆಂದೂ ಆದುದರಿಂದ ಬ್ರಹ್ಮಣಸ್ಪತಿಯು ಅನ್ನಕ್ಕೆ ಪಾಲಕನು ಎಂದರ್ಥವು. ಬ್ರಹ್ಮ ಶಬ್ದಕ್ಕೆ ಸ್ತೋತ್ರವೆಂದೂ ಧನವೆಂದೂ ಅರ್ಥಮಾಡುವಾಗ ಬ್ರಹ್ಮಣಸ್ಪತಿಯು ಮಂತ್ರಕ್ಕೆ ಅಧಿಪತಿಯು. ಮತ್ತು ಧನಕ್ಕೆ ಅಧಿಪತಿಯು ಎಂದು ಹೇಳಬೇಕು. ಭಾಷ್ಯಕಾರರು ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಋಕ್ಕಿಗೆ ವ್ಯಾಖ್ಯಾನ ಮಾಡುವಾಗ ಹೇಳಿರುವರು.

ಬ್ರಹ್ಮಣಸ್ಪತಿಯ ಪರವಾದ ಮಂತ್ರಗಳು ಋಗ್ವೇದದಲ್ಲಿ ವಿಶೇಷವಾಗಿವೆ. ಆ ಮಂತ್ರಗಳಲ್ಲಿ ಬ್ರಹ್ಮಣಸ್ಪತಿಯು ಧನವನ್ನೂ ಅನ್ನವನ್ನು ಕೊಡುವನೆಂದು ಹೇಳಿವೆ, ಈ ಬ್ರಹ್ಮಣಸ್ಪತಿಯು ಪ್ರತ್ಯೇಕ ದೇವತೆಯೇ ಅಥವಾ ಅಗ್ನಿಯ ರೂಪಾಂತರವೆ ಎಂದು ಅನೇಕರು ಸಂಶಯಪಡುವರು. ಅಗ್ನಿ ಮೊದಲಾದ ಇತರ ದೇವತೆಗಳೂ ಸಹ ಧನವನ್ನೂ ಅನ್ನವನ್ನು ಕೊಡುವರಾದುದರಿಂದ ಬ್ರಹ್ಮಣಸ್ಪತಿಯು ಅಗ್ನಿಯ ಒಂದು ವಿಶೇಷ ರೂಪವೆಂದು ಕೆಲವರ ವಾದವು. ಯಾಸ್ಕರು ಈ ವಿಷಯದಲ್ಲಿ ಮೌನವಾಗಿರುವರು ಎಂಗಿರೆ ಸ್ಪಷ್ಟವಾಗಿ ಏನನ್ನೂ ಹೇಳಿರುವುದಿಲ್ಲ. ಬ್ರಹ್ಮಣಸ್ಪತಿಯ ಪರವಾದ ಋಕ್ಕುಗಳಲ್ಲಿಯೂ ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳಲು ಸಾಕಾದಷ್ಟು ಆಧಾರಗಳಿಲ್ಲ. ಆದುದರಿಂದ ಬ್ರಹ್ಮಣಸ್ಪತಿಯು ಇಂದ್ರಾಗ್ನಿಗಳಂತೆ ಒಂದು ಪ್ರತ್ಯೇಕದೇವತೆಯೆಂದು ಧಾರಾಳವಾಗಿ ಹೇಳಬಹುದು.

**ಸೋಮಾನಂ—ಅಭಿಷವಸ್ಯ ಕರ್ತಾರಂ—**ಸೋಮರಸವನ್ನು ಸಿದ್ಧಪಡಿಸಿರುವ (ನನ್ನನ್ನು) ಎಂದಭಿಪ್ರಾಯವು,

**ಸ್ವರಣಂ—ದೇವೇಷು ಪ್ರಕಾಶನವಂತಂ । ಪ್ರಖ್ಯಾತಮಿತ್ಯರ್ಥಃ ॥** ದೇವತೆಗಳಲ್ಲಿ ಪ್ರಸಿದ್ಧನನ್ನಾಗಿ, ಕೀರ್ತಿಯುತನನ್ನಾಗಿ ಎಂದಭಿಪ್ರಾಯವು.

**ಕಕ್ಷೀವಂತಂ, ಔಶಿಜಃ—**ಕಕ್ಷಿವಾನ್ ಎಂಬ ಋಷಿಯು ದೀರ್ಘತಮಸ್ ಎಂಬ ಋಷಿಗೆ ಉಶಿಕ್ ಎಂಬುವಳಲ್ಲಿ ಹುಟ್ಟಿದ ಪುತ್ರನು. ಈ ಉಶಿಕ್ ಎಂಬ ಸ್ತ್ರೀಯು ಕಳಿಂಗರಾಜನ ರಾಣಿಯ ಪರಿಚಾರಿಕೆಯಾಗಿದ್ದಳೆಂದೂ, ಕಳಿಂಗರಾಜನು

ತನಗೆ ಪುತ್ರನಾಗಬೇಕೆಂಬ ಅಪೇಕ್ಷೆಯಿಂದ ತನ್ನ ಪತ್ನಿಯನ್ನು ದೀರ್ಘತಮಸ್ಸ್ ಎಂಬ ಋಷಿಯ ಸಂಗಕ್ಕೋಸ್ಕರ ಕಳುಹಿಸಿದನೆಂದೂ ಆಗ ರಾಜನ ಪತ್ನಿಯು ಅದಕ್ಕೆ ಇಷ್ಟಪಡದೆ ಗೂಢವಾಗಿ ತನ್ನ ದಾಸಿಯಾದ ಉಶಿಕ್ ಎಂಬುವಳನ್ನು ಕಳುಹಿಸಲು ಅವಳಿಗೆ ದೀರ್ಘತಮ ಋಷಿಯಿಂದ ಈ ಕಕ್ಷೀವಾನ್ ಎಂಬ ಪುತ್ರನು ಜನಿಸಿದನೆಂದೂ ಪುರಾಣಾದಿಗಳಲ್ಲಿ ಹೇಳಿದೆ. ಈ ಕಕ್ಷೀವಾನ್ ಋಷಿಯು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದರೂ ಬ್ರಾಹ್ಮಣಸಂಪರ್ಕದಿಂದ ಬ್ರಾಹ್ಮಣನೆಂದೇ ಪ್ರಸಿದ್ಧನಾಗಿರುವನು. ಈ ಋಷಿಯು ಋಗ್ವೇದದ ಅನೇಕ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಈ ಕಕ್ಷೀವಾನ್ ಎಂಬ ಋಷಿಯು ಯಜ್ಞಾನುಷ್ಠಾನ ಕರ್ಮಗಳನ್ನು ಮಾಡುವವರಲ್ಲಿಯೂ ಪ್ರಸಿದ್ಧನೆಂದು—**" ಏವಂ ವೈ ಪರ ಆಟ್ಣಾರಃ ಕಕ್ಷೀವಾ೯ ಔಶಿಜೋ ವೀತಹವ್ಯಃ ಶ್ರಾಯಸಸ್ತ್ರ-ಸದಸ್ಯುಃ ಪೌರುಕುತ್ಸಃ ಪ್ರಜಾಕಾಮಾ ಅಚಿನ್ವತ ॥** ಎಂದು ತೈತ್ತಿರೀಯಸಂಹಿತೆಯ ೫-೬-೫-೩ ರಲ್ಲಿ ಹೇಳಿರುವುದು. ಆದುದರಿಂದ ಈ ಋಷಿಯು ಮಂತ್ರರಚನೆಯಲ್ಲಿಯೂ ಯಜ್ಞಾನುಷ್ಠಾನಕರ್ಮಗಳನ್ನು ಮಾಡುವುದರಲ್ಲಿಯೂ ಅತ್ಯಂತಪ್ರಸಿದ್ಧನು. ಇವನಂತಯೆ ನನ್ನನ್ನೂ ಪ್ರಸಿದ್ಧನನ್ನಾಗಿ ಮಾಡಬೇಕೆಂದು ಈ ಸೂಕ್ತದ ಋಷಿಯಾದ ಮೇಧಾತಿಥಿಋಷಿಯು ಬ್ರಹ್ಮಣಸ್ಪತಿದೇವತೆಯನ್ನು ಪ್ರಾರ್ಥನೆ ಮಾಡಿರುವನು.

**ಔಶಿಜಃ** ಎಂದರೆ **ಉಶಿಕ್** ಎಂಬ ಸ್ತ್ರೀಯ ಪುತ್ರನು. **ಉಶಿಕ್** ಎಂಬ ಶಬ್ದವು ಅಪೇಕ್ಷಿಸು ಎಂಬರ್ಥವುಳ್ಳ **ವಸ್** ಧಾತುವಿನಿಂದ ನಿಷ್ಪನ್ನವಾಗಿದೆ. ಅಥವಾ **ಕಕ್ಷ** ಎಂಬ ಪದಕ್ಕೆ ಬಾಹುಗಳಿಗೂ ಶರೀರಕ್ಕೂ ಮಧ್ಯೆ ಇರುವ ಹಳ್ಳವಾದ ಭಾಗವು (armpit) ಎಂದೂ ಅರ್ಥವಾಗಬಹುದು.

**ಇತಿ ದಶಮಃ ಖಂಡಃ**

ಇಲ್ಲಿಗೆ ಹತ್ತನೆಯ ಖಂಡವು ಸಮಾಪ್ತವು

---

## ॥ ಏಕಾದಶಃ ಖಂಡಃ ॥

### ಹನ್ನೊಂದನೆಯ ಖಂಡವು

ಇಂದ್ರಾಸೋಮಾ ಸಮಘಶಂಸಮಭ್ಯಘಂ ತಪುರ್ಯಯಸ್ತು ಚರುರಗ್ನಿವಾ ಇವ । ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ॥ ಇಂದ್ರಾಸೋಮಾವಘಸ್ಯ ಶಂಸಿತಾ-ರಮಘಂ ಹನ್ತೇರ್ನಿಹ್ರ್ಸಿತೋಪಸರ್ಗ ಆಹನ್ತೀತಿ ತಪುಸ್ತಪತೇಶ್ಚರು-ರ್ಮೃಚ್ಛಯೋ ಭವತಿ ಚರತೇರ್ವಾ ಸಮುಚ್ಚರನ್ತ್ಯಸ್ಮಾದಾಪೋ ಬ್ರಹ್ಮ-ದ್ವಿಷೇ ಬ್ರಾಹ್ಮಣದ್ವೇಷ್ಟ್ರೇ ಕ್ರವ್ಯಮದತೇ ಘೋರಚಕ್ಷಸೇ ಘೋರಖ್ಯಾ-ನಾಯ ಕ್ರವ್ಯಂ ವಿಕೃತ್ತಾಜ್ಜಾಯತ ಇತಿ ನೈರುಕ್ತಾ ದ್ವೇಷೋ ಧತ್ತಮ-ನವಾಯಮನವಯವಂ ಯದನ್ಯೇ ನ ವ್ಯವೇಯುರದ್ವೇಷಸ ಇತಿ ವಾ

ಕಿಮೀದಿನೇ ಕಿಮಿದಾನೀಮಿತಿ ಚರತೇ ಕಿಮಿದಂ ಕಿಮಿದಮಿತಿ ವಾ ಪಿಶುನಾಯ ಚರತೇ ಪಿಶುನಃ ಪಿಂಶತೇರ್ವಿಪಿಂಶತೀತಿ ||೧೧||

———

ಅನವಾಯಮ್ ||೪೩|| ಕಿಮೀದಿನೇ ||೪೪||

" ಇಂದ್ರಾಸೋಮೋ ಸಮಘಶಂ ಸಮಭ್ಯಗಘಂ ತಪುರ್ಯಯಸ್ತುಚ- ರುರಗ್ನಿವಾँ ಇವ । ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ||" ಇಂದ್ರಾಸೋಮಾ- ವಘಸ್ಯ ಶಂಸಿತಾರಮ್ || ಅಘಂ ಹನ್ತೇರ್ನಿರ್ಹ್ರಸಿತೋಪಸರ್ಗ ಆಹ- ನ್ತೀತಿ || ತಪುಸ್ಪತತೇಃ || ಚರುರ್ಮೃಚ್ಚಯೋ ಭವತಿ ಚರತೇರ್ವಾ ಸಮುಚ್ಚನ್ನ್ಯಸ್ಮಾದ್ರಾಪಃ|| ಬ್ರಹ್ಮದ್ವಿಷೇ ಬ್ರಾಹ್ಮಣದ್ವೇಷ್ಟ್ರೇ। ಕ್ರವ್ಯಾದೇ ಕ್ರವ್ಯಮದತೇ । ಘೋರಚಕ್ಷಸೇ ಘೋರಖ್ಯಾನಾಯ || ಕ್ರವ್ಯಂ ವಿಕೃತ್ತಾಜ್ಜಾಯತ ಇತಿ ನೈರುಕ್ತಾಃ । ದ್ವೇಷೋ ಧತ್ತಮ್ । ಅನ- ವಾಯಮ್ ಅನವಯವಮ್ ಯದನ್ಯೇ ನ ವ್ಯವೇಯುರದ್ವೇಷಸ ಇತಿ ವಾ । ಕಿಮೀದಿನೇ ಕಿಮಿದಾನೀಮಿತಿ ಚರತೇ ಕಿಮಿದಂ ಕಿಮಿದ- ಮಿತಿ ವಾ ಪಿಶುನಾಯ ಚರತೇ || ಪಿಶುನಃ ಪಿಂಶತೇರ್ವಿಪಿಂಶ- ತೀತಿ || ೧ || ೧೧ ||

ಉದಾಹರಣೆಯ ಋಕ್ಕು—

ಇಂದ್ರಾಸೋಮಾ ಸಮಘಶಂಸಮಭ್ಯಗಘಂ ತಪುರ್ಯಯಸ್ತು ಚರುರಗ್ನಿವಾँ ಇವ ।
ಬ್ರಹ್ಮದ್ವಿಷೇ ಕ್ರವ್ಯಾದೇ ಘೋರಚಕ್ಷಸೇ ದ್ವೇಷೋ ಧತ್ತಮನವಾಯಂ ಕಿಮೀದಿನೇ ||

(ಋ. ಸಂ. ೭-೧೦೪-೨)

ಇದರ ಅರ್ಥವು—

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಕೇಡನ್ನು ಬಯಸುವವನೂ ಪಾಪಕೃತ್ಯವನ್ನು ಮಾಡುವವನೂ ಆದ ಅಸುರಸಂಘವನ್ನೆಲ್ಲಾ ಒಟ್ಟಿಗೆ ಮೇಲೆ ಬಿದ್ದು ಸೋಲಿಸಿರಿ. ನಿಮ್ಮಿಂದ ದಹಿಸಲ್ಪಟ್ಟ ಅಸುರನು ಅಗ್ನಿಯಲ್ಲಿ ಅರ್ಪಿತವಾದ ಆಹುತಿ ಯಂತೆ ಪೂರ್ಣವಾಗಿ ದಗ್ಧವಾಗಲಿ, ಬ್ರಾಹ್ಮಣರನ್ನು ದ್ವೇಷಿಸುವ ಅಸುರನ ಮೇಲೂ ಮಾಂಸಭಕ್ಷಕನ ಮೇಲೂ ವಿಕಾರವಾದ ರೂಪ ಮತ್ತು ವೃತ್ತಿಯುಳ್ಳವನ ಮೇಲೂ ಮತ್ತು ಯಾವಾಗಲೂ ವಂಚನೆಯನ್ನೇ ಯೋಚಿಸುತ್ತಿರುವವನ ಮೇಲೂ ಶಾಶ್ವತ ವಾದ ದ್ವೇಷವನ್ನು ಬೆಳೆಸಿರಿ.

**ಅಘ**—ಪಾಪ, ದುಷ್ಕೃತ್ಯ ಎಂಬ ಪದವು **ಹಂತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಇಲ್ಲಿ ಹಂತಿ ಧಾತುವಿಗೆ ಆ ಎಂಬ ಉಪಸರ್ಗವನ್ನು ಸೇರಿಸಿದರೆ ಕೊಲ್ಲುವುದು ಎಂದರ್ಥವಾಗುವುದು. ಅಘ ಶಬ್ದದಲ್ಲಿ ಆ ಎಂಬ ಉಪಸರ್ಗವು ಹ್ರಸ್ವರೂಪವನ್ನು ಹೊಂದಿರುವುದು.

**ತಪುಃ** ಎಂಬ ಶಬ್ದವು ಕಾಯಿಸು, ಶಾಖವನ್ನುಂಟುಮಾಡು ಎಂಬ ಅರ್ಥವಿರುವ **ತಪತಿ** ಧಾತುವಿನಿಂದ ನಿಷ್ಪನ್ನವಾಗಿದೆ.

**ಚರುಃ** ಎಂಬ ಶಬ್ದವು **ಚರತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಚರುವೆಂದರೆ **ಮೃಚ್ಚಯ**—ಮಣ್ಣಿನರಾಶಿ ಎಂದರ್ಥವು. ಈ ರಾಶಿಯಿಂದ ನೀರು ಹರಿಯುವುದು ಎಂದರೆ ಚಲಿಸುವುದು.

**ಬ್ರಹ್ಮದ್ವಿಷೇ**—ಬ್ರಹ್ಮವೆಂದರೆ ಮಂತ್ರವು ಅಥವಾ ಬ್ರಾಹ್ಮಣನು. ಮಂತ್ರವನ್ನು ಅಥವಾ ಬ್ರಾಹ್ಮಣನನ್ನು ದ್ವೇಷಿಸುವವನು (ಅಸುರನು).

**ಕ್ರವಾದ್ಯೇ**—ಮಾಂಸಭಕ್ಷಕನು ಎಂದರೆ ಬೇಯಿಸದಿರುವ ಹಸೀ ಮಾಂಸವನ್ನು ತಿನ್ನುವವನು (ಕಾಡುಜನ, ಅಸುರ)
**ಘೋರಚಕ್ಷಸೇ**—ಭಯಂಕರವಾದ ಅಥವಾ ವಿಕಾರವಾದ ಆಕಾರವುಳ್ಳವನು.

**ಕ್ರವ್ಯಂ ವಿಕೃತ್ತಾಜ್ಜಾಯತ ಇತಿ ನೈರುಕ್ತಾಃ ।** ಕ್ರವ್ಯಂ ಎಂದರೆ ಮಾಂಸವು ಇದನ್ನು ತಿನ್ನುವಾಗ ಕತ್ತರಿಸುವುದರಿಂದ ಇದಕ್ಕೆ ಕ್ರವ್ಯವೆಂಬ ಹೆಸರು ಬಂದಿತು ಎಂದು ನಿರುಕ್ತಕಾರರ ಮತವು. **ದ್ವೇಷೋ ಧತ್ತಂ**—ಶತ್ರುತ್ವವನ್ನು ವೈರವನ್ನು ಹೊಂದಿರಿ ಎಂದರ್ಥವು. **ಅನವಾಯಂ ಯದನ್ಯೇ ನ ವ್ಯವೇಯುರದ್ವೇಷಸ ಇತಿ ವಾ** ಎಲ್ಲವೂ, ಸಕಲವೂ ಎಂದರ್ಥ ಬಿಡುವುದಕ್ಕೆ ಸಾಧ್ಯವಿಲ್ಲದ ಎಲ್ಲ ವೈರವನ್ನು ಬೆಳಿಸಿರಿ. **ಕಿಮೀದಿನೇ ಕಿಮಿದಾನೀಮಿತಿ ಚರತೇ ಕಿಮಿದಂ ಕಿಮಿದಮಿತಿ ವಾ ಪಿಶುನಾಯ ಚರತೇ ।** ಕಿಮೀದಿನೇ ಎಂದರೆ ಇದೇನು ಅದೇನು ಎಂದು ಉಪಯೋಗವಿಲ್ಲದ ಹುಳುಕು ಸ್ವಭಾವವನ್ನು **ಪಿಶುನಃ** ಎಂಬ ಶಬ್ದವು **ಪಿಂಶತಿ** ಧಾತುವಿನಿಂದ ನಿಷ್ಪನ್ನವಾಗಿದೆ.

**ಇತಿ ಏಕಾದಶಃ ಖಂಡಃ**

ಇಲ್ಲಿಗೆ ಹನ್ನೊಂದನೆಯ ಖಂಡವು ಸಮಾಪ್ತವು

---

## ಅಥ ದ್ವಾದಶಃ ಖಂಡಃ

## ಹನ್ನೆರಡನೆಯ ಖಂಡವು

ಕೃಣುಷ್ವ ಪಾಜಃ ಪ್ರಸಿತಿ ನ ಪೃಥ್ವೀಂ ಯಾಹಿ ರಾಜೇವಾಮವಾ ಇಭೇನ । ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥ ಕುರುಷ್ವ ಪಾಜಃ ಪಾಜಃ ಪಾಲನಾತ್ ಪ್ರಸಿತಿಮಿವ ಪೃಥ್ವೀಂ ಪ್ರಸಿತಿಃ ಪ್ರಸಯನಾತ್ತನ್ತುರ್ವಾ ಜಾಲಂ ವಾ ಯಾಹಿ ರಾಜೇವಾಮಾತ್ಯವಾನಭ್ಯಮನವಾನ್ ಸ್ವವಾನ್ವೇರಾಭೃತಾ

ಗಣೇನ ಗತಭಯೇನ ಹಸ್ತಿನೇತಿ ವಾ ತೃಷ್ವ್ಯಾನು ಪ್ರಸಿತ್ಯಾ ದ್ರೂಣಾನಸ್ತೃಷ್ವೀತಿ ಕ್ಷಿಪ್ರನಾಮ ತರತೇರ್ವಾ ತ್ವರತೇರ್ವಾಸಿತಾಸಿ ವಿಧ್ಯ ರಕ್ಷಸಸ್ತಪಿಷ್ಠೈಸ್ತಪ್ತತಮೈಸ್ತೃಪ್ತತಮೈಃ ಪ್ರಪಿಷ್ಟತಮೈರಿತಿ ವಾ । ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿ-ಮಾಶಯೇ । ಅಮೀವಾಭ್ಯಮನೇನ ವ್ಯಾಖ್ಯಾತೋ ದುರ್ನಾಮಾ ಕ್ರಿಮಿರ್ಭವತಿ ಪಾಪನಾಮಾ ಕೃಮಿಃ ಕ್ರವ್ಯೇ ಮೇದ್ಯತಿ ಕ್ರಮತೇರ್ವಾ ಸ್ಯಾತ್ಸರಣಕರ್ಮಣಃ ಕ್ರಾಮತೇರ್ವಾ । ಅತಿಕ್ರಾಮನ್ತೋ ದುರಿತಾನಿ ವಿಶ್ವಾ । ಅತಿಕ್ರಮಮಾಣಾ ದುರ್ಗತಿಗಮನಾನಿ ಸರ್ವಾಣ್ಯಪ್ವಾಯು-ದೇನಯಾ ವಿದ್ಧೋಽಪವೀಯತೇ । ವ್ಯಾಧಿರ್ವಾ ಭಯಂ ವಾ । ಅಪ್ವೇ ಪರೇಹೀತ್ಯಪಿ ನಿಗಮೋ ಭವತ್ಯಮತಿರಮಾಮಯಿಾ ಮತಿರಾತ್ಮ-ಮಯಿಾ । ಊರ್ಧ್ವಾ ಯಸ್ಯಾಮತಿರ್ಭಾ ಅದಿದ್ಯುತದಿತ್ಯಪಿ ನಿಗಮೋ ಭವತಿ । ಶುಷ್ಟೀತಿ ಕ್ಷಿಪ್ರನಾಮಾಶು ಅಷ್ಟೀತಿ ॥ ॥೧೨॥

---

ಅಮವಾನ್ ॥೪೫॥

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾँ ಇಭೇನ । ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥ ಕುರುಷ್ವ ಪಾಜಃ । ಪಾಜಃ ಪಾಲನಾತ್ । ಪ್ರಸಿತಿಮಿವ ಪೃಥ್ವೀಂ । ಪ್ರಸಿತಿಃ ಪ್ರಸಯನಾತ್, ತನ್ತುರ್ವಾ ಜಾಲಂ ವಾ । ಯಾಹಿ ರಾಜೇವಾಮಾತ್ಯವಾನಭ್ಯಮನವಾನ್ ಸ್ವವಾನ್ವೇರಾಭೃತಾ ಗಣೇನ ಗತಭಯೇನ ಹಸ್ತಿನೇತಿ ವಾ । ತೃಷ್ವ್ಯಾನು ಪ್ರಸಿತ್ಯಾ ದ್ರೂಣಾನಃ । ತೃಷ್ವೀತಿ ಕ್ಷಿಪ್ರನಾಮ ತರತೇರ್ವಾ ತ್ವರತೇರ್ವಾ । ಅಸಿತಾಸಿ ವಿಧ್ಯರಕ್ಷಸಸ್ತಪಿಷ್ಠೈಸ್ತಪ್ತ-ತಮೈಸ್ತೃಪ್ತತಮೈಃ ಪ್ರಪಿಷ್ಟತಮೈರಿತಿ ವಾ ॥೧॥

ಉದಾಹರಣೆಯ ಋಕ್ಕು—

**ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾँ ಇಭೇನ ।**
**ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥**

(ಋ. ಸಂ. ೪-೪-೧)

ಇದರ ಅರ್ಥವು—

ಎಲೈ ಅಗ್ನಿಯೇ, ವಿಸ್ತೃತವಾದ ಬಲೆಯನ್ನು ವ್ಯಾಧನು ಬೀಸಿ ಹರಡುವಂತೆ ನಿನ್ನ ತೇಜಸ್ಸಮುದಾಯವನ್ನು ವಿಸ್ತರಿಸು. ಗಜವನ್ನು (ಆನೆಯನ್ನು) ಹತ್ತಿ ಪರಿವಾರದೊಡಗೂಡಿದ ರಾಜನು ದಂಡಯಾತ್ರೆಗಾಗಿ ಹೊರಡುವಂತೆ ನೀನು ನಿನ್ನ ತೇಜಸ್ಸುಗಳೊಡಗೂಡಿ ಶತ್ರುನಾಶಕ್ಕಾಗಿ ಹೊರಡು. ಉತ್ಕೃಷ್ಟವಾದ ಸೇನೆಯನ್ನು ಹಿಂಬಾಲಿಸುತ್ತಾ ನೀನು ಶತ್ರುಗಳನ್ನು ಚದುರಿಸುವವನಾಗಿದ್ದೀಯೆ. ತಾಪಕಾರಿಗಳಾದ ತೇಜಸ್ಸುಗಳಿಂದ ನೀನು ರಾಕ್ಷಸರನ್ನು ಸದೆಬಡಿ.

**ಅನುವಾನ್** ಎಂಬ ಶಬ್ದದ ನಿರ್ವಚನವನ್ನು ಹೇಳುವುದಕ್ಕಾಗಿ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡಿದ್ದಾರೆ—

**ಅನುವಾನ್** ಎಂದರೆ **ಅನ್ವಮಾತ್ಯವಾನ್**—ನಿನ್ನ ಸಚಿವರುಗಳಿಂದ ಸಹಿತನಾಗಿ ಅಥವಾ **ಅಭ್ಯಮನವಾನ್**—ಪರರಿಗೆ (ಶತ್ರುಗಳಿಗೆ) ಭಯವನ್ನುಂಟುಮಾಡುವವನಾಗಿ ಎಂದರ್ಥವು.

ಎಲೈ ಅಗ್ನಿಯೇ, ನಿನ್ನ ಬಲವನ್ನು ವಿಸ್ತರಿಸು **ಪಾಜಃ** ಎಂಬ ಶಬ್ದವು ಪಾಲನವೆಂಬ ಅರ್ಥವನ್ನು ಸೂಚಿಸುವುದು. **ಪ್ರಸಿತಿ** ಶಬ್ದವು ಪ್ರ+ಸಿ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಕಟ್ಟು ಬಂಧಿಸು ಎಂಬರ್ಥವನ್ನು ಕೊಡುವುದು. ಆದ್ದರಿಂದ **ಪ್ರಸಿತಿ** ಎಂದರೆ ದಾರ ಅಥವಾ ಬಲೆ ಎಂದರ್ಥವು. ಇಲ್ಲಿ ಅಗ್ನಿಯನ್ನು ರಾಜನಂತೆ ಹೋಗು ಎಂದು ಸಂಬೋಧಿಸಿದೆ. ರಾಜನು ಹೋಗುವ ಕ್ರಮವು ಈ ರೀತಿ ವರ್ಣಿತವಾಗಿದೆ. ಅಮಾತ್ಯ (ಸಚಿವ) ನಿಂದ ಸಹಿತನಾದ ರಾಜನಂತೆ ಅಥವಾ ತನ್ನ ವೈರಿಗಳಿಗೆ ಭಯಂಕರನಾಗಿ ಹೋಗುವಂತೆ ಅಥವಾ ತನ್ನ ಅನುಚರರೊಡನೆ ಸಹಿತನಾಗಿ ಹೋಗುವಂತೆ ಹೋಗು ಎಂದು ಅಗ್ನಿಯನ್ನು ಸ್ತುತಿಸಲಾಗಿದೆ. **ತೃಷ್ವೀ** ಎಂದರೆ ಬೇಗ ಎಂದರ್ಥವು. ಈ ಶಬ್ದವು **ತರತಿ** ಧಾತುವಿನಿಂದಾಗಲಿ, **ತ್ವರತಿ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಎಲೈ ಅಗ್ನಿಯೇ, ನೀನು ರಾಕ್ಷಸರನ್ನು ಬಾಣಗಳಿಂದ ಪ್ರಹರಿಸು, ಹಿಂಸಿಸು ಮತ್ತು ಸುಡುತ್ತಿರುವ ಅಥವಾ ಉರಿಯುತ್ತಿರುವ ಮೊನುಚಾದ ಶಲ್ಯ (ಭರ್ಜಿ) ಗಳಿಂದ ತಿವಿ, ಚೂರ್ಣಮಾಡು, ಧ್ವಂಸಮಾಡು ಎಂದು ಅಗ್ನಿಯನ್ನು ಸ್ತುತಿಸಲಾಗಿದೆ.

ಅಮೀವಾ ॥ ೪೬ ॥

" ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ " ।
ಅಮೀವಾಭ್ಯಮನೇನ ವ್ಯಾಖ್ಯಾತಃ ॥ ದುರ್ಣಾಮಾ ಕ್ರಿಮಿ-
ರ್ಭವತಿ ಪಾಪನಾಮಾ ॥ ಕೃಮಿಃ ಕ್ರವ್ಯೇ ಮೇದ್ಯತಿ, ಕ್ರಮತೇರ್ವಾ
ಸ್ಯಾತ್ಸರಣಕರ್ಮಣಃ, ಕಾಮತೇರ್ವಾ ॥೨॥

ಉದಾಹರಣೆಯ ಋಕ್ಕು—

**ಯಸ್ತೇ ಗರ್ಭಮಮೀ ವಾ ದುರ್ಣಾಮಾ ಯೋನಿಮಾಶಯೇ ।**
**ಅಗ್ನಿಷ್ಟಂ ಬ್ರಹ್ಮಣಾ ಸಹ ನಿಷ್ಕ್ರವ್ಯಾದ ಮನೀನಶತ್ ॥**

(ಋ. ಸಂ. ೧೦-೧೬೨-೨)

ಇದರ ಅರ್ಥವು—

ಎಲೈ ಸ್ತ್ರೀಯೇ, ನಿನ್ನ ಗರ್ಭಕೋಶದಲ್ಲಿಯೂ ಯೋನಿಸ್ಥಾನದಲ್ಲಿಯೂ ಆವರಿಸಿ ನೆಲಸಿ ಮಾಂಸವನ್ನೇ ತಿನ್ನುತ್ತಿರುವ ಆ ವ್ಯಾಧಿಯನ್ನು ಮಂತ್ರಸಹಿತನಾದ ರಕ್ಷೋಹಾಗ್ನಿಯು ನಿಶ್ಶೇಷವಾಗಿ ನಾಶಮಾಡಲಿ.

**ಅಮೀವಾ** ಎಂದರೆ **ಅಮವಾನ್ ಅಭ್ಯಮನವಾನ್** ಎಂದರೆ **ಪರೇಭ್ಯೋ ಭಯದಾತಾ ಯಾಯಾತ್** ಇತರರಿಗೆ ಭಯವನ್ನುಂಟುಮಾಡುತ್ತಾ ಇರುವುದು ಎಂದರೆ ರೋಗವು. **ದುರ್ಣಾಮಾ** ಎಂದರೆ ಪಾಪವೆಂಬ ಒಂದು ವಿಷಕ್ರಿಮಿಯು. (ಹುಳು germ) ಕ್ರಿಮಿಯೆಂದರೆ **ಕ್ರವ್ಯೇ ಮೇದ್ಯತಿ**—ಮಾಂಸದಲ್ಲಿಯೇ ಇದ್ದು ಅದನ್ನೇ ತಿಂದು ಬೆಳೆಯುತ್ತಿರುವ ಹುಳುವಿಗೆ ಕ್ರಿಮಿಯೆಂದು ಹೆಸರು. ಅಥವಾ ಮೆಲ್ಲನೆ ಸರಿ ಎಂಬರ್ಥವಿರುವ **ಕ್ರಮ್** ಧಾತುವಿನಿಂದಾಗಲಿ, ಹರಿದಾಡು ಎಂಬರ್ಥವುಳ್ಳ **ಕ್ರಮ್** ಧಾತುವಿನಿಂದಾಗಲಿ ಕ್ರಿಮಿಶಬ್ದವು ನಿಷ್ಪನ್ನವಾಗಬಹುದು.

ದುರಿತಂ ||೪೭||

" ಅತಿಕ್ರಾಮನ್ತೋ ದುರಿತಾನಿ ವಿಶ್ವಾ । " ಅತಿಕ್ರಮಮಾಣಾ ದುರ್ಗತಿ-
ಗಮನಾನಿ ಸರ್ವಾಣಿ ||೩||

**ದುರಿತಂ**–ದುಷ್ಕೃತಂ । ಕೆಟ್ಟದ್ದು ಅಥವಾ ಪಾಪವು ಕೆಟ್ಟಕೆಲಸದಿಂದ ಉಂಟಾಗುವಫಲ. **ದುರ್ಗತಿಗಮನಂ, ದುರಾಕ್ರಮಣಂ** ಅನ್ಯಾಯದಿಂದ ಆಕ್ರಮಿಸುವುದು, ಕೆಟ್ಟ ಅಥವಾ ನ್ಯಾಯವಲ್ಲದ ಗಮನ ಎಂದಾದರೂ ಆಗಬಹುದು.

ಶ್ರುತಿವಾಕ್ಯದ ಉದಾಹರಣೆಯು—

**ವೈಶ್ವದೇವೀ ಸೂನೃತಾಮಾರಭಧ್ವಂ ಶುದ್ಧಾ ಭವಂತೋ ಯಜ್ಞಿಯಾಸಃ ಪಾವಕಾಃ ।**
**ಅತಿಕ್ರಾಮಂತೋ ದುರಿತಾನಿ ವಿಶ್ವಾ ಶತಂ ಹಿಮಾಃ ಸರ್ವವೀರಾ ಮದೇಮ॥**

ಅಪ್ವೇ || ೪೮ ||

ಅಪ್ವಾ ಯದೇನಯಾ ವಿದ್ಧೋಽಪವೀಯತೇ । ವ್ಯಾಧಿರ್ವಾ ಭಯಂ
ವಾ । " ಅಪ್ವೇ ಪರೇಹಿ " ಇತ್ಯಪಿ ನಿಗಮೋ ಭವತಿ || ೪ ||

**ಅಪ್ವೇ**—ಕೆಟ್ಟ ಅವಸ್ಥೆ ಎಂದರೆ ಭಯ ಅಥವಾ ರೋಗ. ಇಂತಹ ಕೆಟ್ಟ ಅವಸ್ಥೆಯಿಂದ ಕೂಡಿದ ಎಂದರೆ ಉತ್ತಮ ಗತಿಯಿಂದ ರಹಿತನಾಗಿರುವ, ಭಯ ಅಥವಾ ರೋಗಗ್ರಸ್ತನಾದ ಎಂದರ್ಥವು. ಅಪ್ವೇ ಪರೇಹಿ ಎಂಬುದು ಶ್ರುತಿವಾಕ್ಯವೆಂದು ಇಲ್ಲಿ ಉದಾಹರಿಸಿರುವರು.

ಅಮತಿಃ ||೪೯||

ಅಮತಿರಮಾಮಯೀ ಮತಿರಾತ್ಮಮಯೀ । " ಊರ್ಧ್ವಾ ಯಸ್ಯಾಮ-
ತಿರ್ಭಾ ಅದಿದ್ಯುತತ್ಸವೀಮನಿ " ಇತ್ಯಪಿ ನಿಗಮೋ ಭವತಿ ||೫||೧೨||

**ಅಮತಿ** ಎಂದರೆ **ಆತ್ಮಮಯೀ ಯಸ್ಯ ಮತಿಃ ಅಸೌ ಅಮತಿಃ ಆದಿತ್ಯಃ । ತಸ್ಯ ಹ್ಯಾತ್ಮಪ್ರಕಾಶಮಯೀ ಮತಿಃ ।** ಅತ್ಯಂತ ಚುರುಕಾದ ಬುದ್ಧಿಯು ಅಥವಾ ಆತ್ಮಸಂಬಂಧವಾದ ಬುದ್ಧಿ. ಇದನ್ನು ಪ್ರಚೋದಿಸುವ ಆದಿತ್ಯನಾದರೂ ಆಗಬಹುದು. ಆತ್ಮಜ್ಞಾನವನ್ನು ಪ್ರಚೋದಿಸುವ ಬುದ್ಧಿಯು.

ಉದಾಹರಣೆಯ ಋಕ್ಕು—

**ಅಭಿ ತ್ಯಂ ದೇವಂ ಸವಿತಾರಮೋಣ್ಯೋಃ ಕವಿಕ್ರತುಮರ್ಚಾಮಿ ಸತ್ಯಸವಂ ರತ್ನಧಾಮಭಿ ಪ್ರಿಯಂ ಮತಿಂ ।**

**ಊ ರ್ಯಾ ಯಸ್ಯಾಮತಿರ್ಭಾ ಅದಿದ್ಯುತತ್ಸವೀಮನಿ ಹಿರಣ್ಯಪಾಣಿರಮಿಮೀತ ಸುಕ್ರತುಃ ಕೃಪಾ ಸ್ಸಃ ||**

(ತೈ. ಸಂ. ೧-೨-೬) ಅಥವಾ (ಕಪಿಲಸ್ಥಲಕಠಸಂಹಿತಾ ೧-೧೯)

ಶ್ರುಷ್ಟೀ ||೫೦|| ಪುರಂಧಿಃ ||೫೧||

ಶ್ರುಷ್ಟೀತಿ ಕ್ಷಿಪ್ರನಾಮ– ಆಶು ಅಷ್ಟೀತಿ ||

**ಶ್ರುಷ್ಟೀ** ಎಂದರೆ ಕ್ಷಿಪ್ರ, ಬೇಗ, ಇದಕ್ಕೆ **ಆಶು ಅಷ್ಟ** ಎಂಬ ಪರ್ಯಾಯಪದಗಳೂ ಇವೆ. ಈ ಪದಕ್ಕೆ ಉದಾಹರಣೆಯಾಗಿ **ತಾ ಅಧ್ವರ ಉಶತೋ** ಎಂಬ ಋಕ್ಕನ್ನು ಮುಂದಿನ ಖಂಡದಲ್ಲಿ ವಿವರಿಸಲಾಗಿದೆ.

**ಇತಿ ದ್ವಾದಶಃ ಖಂಡಃ**

ಇಲ್ಲಿಗೆ ಹನ್ನೆರಡನೆಯ ಖಂಡವು ಸಮಾಪ್ತವು

---

## || ತ್ರಯೋದಶಃ ಖಂಡಃ ||

**ಹದಿಮೂರನೆಯ ಖಂಡವು**

ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗವನ್ನಾಸತ್ಯಾ ಪುರಂಧಿಂ । ತಾನಧ್ವರೇ ಯಜ್ಞ ಉಶತಃ ಕಾಮಯಮಾನಾನ್ ಯಜಾಗ್ನೇ ಶ್ರುಷ್ಟೌ ಭಗನ್ನಾಸತ್ಯೌ ಚಾಶ್ವಿನೌ ಸತ್ಯಾದೇವ ನಾಸತ್ಯಾವಿತ್ಯೌರ್ಣವಾಭಃ ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣೋ ನಾಸಿಕಾ–ಪ್ರಭವೌ ಬಭೂವತುರಿತಿ ವಾ ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಮಿಂದ್ರ ಇತ್ಯಪರಂ ಸ ಬಹುಕರ್ಮ-ತಮಃ ಪುರಾಂ ಚ ದಾರಯಿತೃತಮೋ ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ । ಇಮಾಮೂ ನು ಕವಿತಮಸ್ಯ ಮಾಯಾಮಿತ್ಯಪಿ ನಿಗಮೋ ಭವತಿ। ರುಶದಿತಿ ವರ್ಣನಾಮ ರೋಚತೇರ್ಜ್ವಲತಿಕರ್ಮಣಃ|| ಸಮಿದ್ಧಸ್ಯ ರುಶದದರ್ಶಿ ಪಾಜ ಇತ್ಯಪಿ ನಿಗಮೋ ಭವತಿ ||೧೩||



ತಾ೦ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಮ್ ।" ತಾನಧ್ವರೇ ಯಜ್ಞೇ, ಉಶತಃ ಕಾಮಯಮಾನಾನ್ ಯಜಾಗ್ನೇ "ಶ್ರುಷ್ಟೀ ಭಗಂನಾಸತ್ಯೌ" ಚಾಶ್ವಿನೌ ॥ ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ, ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ, ನಾಸಿಕಾಪ್ರಭವೌ ಬಭೂವುತುರಿತಿ ವಾ ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಮ್ ॥ ಇದ್ದ್ರ ಇತ್ಯಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ, ವರುಣ ಇತ್ಯಪರಂ, ತಂ ಪ್ರಜ್ಞಯಾ ಸ್ತೌತಿ—"ಇಮಾಮೂ ನು ಕವಿತಮಸ್ಯ ಮಾಯಾಮ್" ಇತ್ಯಪಿ ನಿಗಮೋ ಭವತಿ ॥೧॥

ಉದಾಹರಣೆಯ ಋಕ್ಕು—

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾ೦ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ॥**

(ಋ. ಸಂ. ೭-೩೯-೪)

ಇದರ ಅರ್ಥವು—

ನಮ್ಮ ಯಾಗ ಸಮಯಗಳಲ್ಲಿ ಪೂಜಾರ್ಹರೂ ರಕ್ಷಕರೂ ಆದ ಸಕಲ ದೇವತೆಗಳೂ ಯಜ್ಞಸ್ಥಾನವನ್ನು ಆಶ್ರಯಿಸುತ್ತಾರೆ. ಎಲೈ ಅಗ್ನಿಯೇ, ನಮ್ಮ ಯಜ್ಞದಲ್ಲಿ ಯಜ್ಞಾಪೇಕ್ಷಿಗಳಾದ ಆ ದೇವತೆಗಳನ್ನು ಪೂಜಿಸು, ಭಗನನ್ನೂ ಅಶ್ವಿನೀ ದೇವತೆಗಳನ್ನೂ ಇಂದ್ರನನ್ನೂ ಕ್ಷಿಪ್ರವಾಗಿ ಆರಾಧಿಸು.

**ತಾನಧ್ವರೇ ಯಜ್ಞೇ ಉಶತಃ ಕಾಮಯಮಾನಾನ್ ಯಜಾಗ್ನೇ ಶ್ರುಷ್ಟೀ ಭಗಂ ನಾಸತ್ಯಾ** । ಎಲೈ ಅಗ್ನಿಯೇ, ಈ ಯಜ್ಞದಲ್ಲಿ ಯಜ್ಞಕರ್ಮವನ್ನಪೇಕ್ಷಿಸಿ ಬಂದಿರುವ ಆ ಭಗದೇವನನ್ನೂ ಅಶ್ವಿನೀದೇವತೆಗಳನ್ನೂ ಬೇಗನೆ (ಕ್ಷಿಪ್ರವಾಗಿ) ಪೂಜಿಸು. ಇಲ್ಲಿ ಅಧ್ವರೇ-ಯಜ್ಞದಲ್ಲಿ; ಉಶತಃ-ಅಪೇಕ್ಷಿಸುತ್ತಿರುವ, ಶ್ರುಷ್ಟೀ-ಬೇಗನೆ, ಭಗಂ-ಭಗದೇವತೆಯನ್ನು, ನಾಸತ್ಯಾ-ಅಶ್ವಿನೀ ದೇವತೆಗಳನ್ನು ಎಂದು ಅನ್ವಯಾರ್ಥವು. ನಾಸತ್ಯಾ ಎಂಬ ಶಬ್ದದ ವಿವರಣೆಯನ್ನು ಈ ಕೆಳಗೆ ಕೊಟ್ಟಿದೆ—

**ನಾಸತ್ಯಾ**—ಅಶ್ವಿನೀದೇವತೆಗಳು ಇಬ್ಬರು. ಅವರಲ್ಲಿ ಒಬ್ಬನ ಹೆಸರು ದಸ್ರಾ ಎಂತಲೂ ಇನ್ನೊಬ್ಬನ ಹೆಸರು ನಾಸತ್ಯಾ ಎಂತಲೂ ಹೇಳುವ ರೂಢಿ ಇದೆ. ಆದರೂ ಈ ಶಬ್ದಗಳನ್ನು ಅನೇಕ ಸಂದರ್ಭಗಳಲ್ಲಿ ಇಬ್ಬರನ್ನೂ ಒಟ್ಟಿಗೆ ಸಂಬೋಧನೆ ಮಾಡುವುದರಲ್ಲಿ ಉಪಯೋಗಿಸುವುದು ಕಂಡು ಬರುವುದು. ನಾಸತ್ಯಾ ಎಂಬ ಶಬ್ದಾರ್ಥದ ವಿಚಾರದಲ್ಲಿ ಯಾಸ್ಕರು—

**ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ । ನಾಸಿಕಾ-ಪ್ರಭವೌ ಬಭೂವತುರಿತಿ ವಾ ॥**

(ನಿ. ೬-೧೩)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎಂದರೆ ಸತ್ಯವಲ್ಲದ್ದು ಅಸತ್ಯ. ಅಸತ್ಯವಲ್ಲದ್ದು ನ+ಅಸತ್ಯ=ನಾಸತ್ಯಾ ಎಂದರೆ ಸತ್ಯನೆಂಬೇ ನಾಸತ್ಯಶಬ್ದದ ಅರ್ಥವು. ಈ ದೇವತೆಗಳು ಆಡುವ ಮಾತುಗಳೂ ಮಾಡುವ ಕರ್ಮಗಳೂ ಅಸತ್ಯವಲ್ಲವಾದ್ದರಿಂದ ಇವರಿಗೆ ನಾಸತ್ಯಾ ಎಂದು ಹೆಸರು ಎಂದು ಔರ್ಣವಾಭರ ಮತವು; ಯಾವಾಗಲೂ ಸತ್ಯವನ್ನೇ ಪ್ರತಿಪಾದಿಸುತ್ತಾ ಅದಕ್ಕೆ ಪ್ರೋತ್ಸಾಹ ಕೊಡುವವರಾದ್ದರಿಂದ ಇವರಿಗೆ ನಾಸತ್ಯಾ ಎಂಬ ಹೆಸರು ಬಂದಿತು ಎಂದು ಆಗ್ರಾಯಣ ಎಂಬುವರ ಮತವು; ನಾಸಿಕದಿಂದ ಉತ್ಪನ್ನರಾದುದರಿಂದ ಇವರಿಗೆ ನಾಸತ್ಯಾ ಎಂಬ ಹೆಸರು ಎಂದೂ ಕೆಲವರೂ ಹೇಳುವರು. ಈ ವಿಷಯವಾಗಿ ಪುರಾಣಾದಿಗಳಲ್ಲಿ ಒಂದು ಉಪಾಖ್ಯಾನವಿದೆ. ಪೂರ್ವದಲ್ಲಿ ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಕಾರಣಾಂತರದಿಂದ ಸೂರ್ಯನ ವಿಷಯದಲ್ಲಿ ಅಸಮಾಧಾನಗೊಂಡು ಕಾಡಿಗೆ ಹೋಗಿ ಹೆಣ್ಣು ಕುದುರೆಯ ರೂಪದಿಂದ ಅವಳಿದ್ದಲ್ಲಿಗೆ ಹೋಗಿ ಕೆಲವು ಕಾಲ ಇದ್ದನೆಂದೂ ಆಗ ಅವರಿಗೆ ಅಶ್ವಿನೀದೇವತೆಗಳು ಪುತ್ರರಾಗಿ ಜನಿಸಿದರೆಂದೂ ಹೇಳಲ್ಪಟ್ಟಿದೆ.

ಋಗ್ವೇದದಲ್ಲಿ ಅಶ್ವಿನೀದೇವತೆಗಳ ವಿಷಯಕವಾದ ಅನೇಕ ಸೂಕ್ತಗಳಿವೆ. ಇವು ಬಹು ಗಂಭೀರವಾಗಿಯೂ ಇವರ ಗುಣಗಳನ್ನೂ ಪರಾಕ್ರಮಗಳನ್ನೂ ಇತರರಿಗೆ ಇವರು ಮಾಡಿರುವ ಉಪಕಾರಗಳನ್ನು ವರ್ಣಿಸುವುದಾಗಿಯೂ ಇವೆ. ಇವುಗಳನ್ನೆಲ್ಲಾ ನಾವು ಆಯಾ ಸಂದರ್ಭಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇನೆ. ಯಜುರ್ವೇದಾದಿಗಳಲ್ಲಿ ಇವರು—**ಅಶ್ವಿನೌ ವೈ ದೇವಾನಾಂ ಭಿಷಜೌ**—ಅಶ್ವಿನೀದೇವತೆಗಳು ದೇವತೆಗಳ ವೈದ್ಯರೆಂದು ಹೇಳಿರುವುದು. ಇವರ ವಿಷಯವಾದ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೨ ಪುಟ 11-12, 20-21, ಭಾಗ ೧೩ ಪುಟ 566 ಗಳನ್ನು ನೋಡಿ.

**ನಾಸತ್ಯೇವ—ನಾಸತ್ಯಾವಿವ ಅಶ್ವಿನಾವಿವ ತೌ ಹಿ ದ್ಯಾವಾಪೃಥಿವ್ಯಾತ್ಮಾನೌ**—ನಿರುಕ್ತಕಾರರು—

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ಥಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾꣳ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟಿಂ ಭಗಂ ನಾಸತ್ಯಾ ಪುರಂಧಿಂ ॥**
(ಋ. ಸಂ. ೭-೩೯-೪)

ಈ ಋಕ್ಕನ್ನು ಉದಹರಿಸಿ, **ನಾಸತ್ಯೌ ಸತ್ಯಾವೇವ ನಾಸತ್ಯಾವಿತೌರ್ಣವಾಭಃ, ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ, ನಾಸಿಕಾಪ್ರಭವೌ ಬಭೂವತುರಿತಿ ವಾ,** ಎಂದು ನಾಸತ್ಯ ಶಬ್ದಾರ್ಥದ ವಿಷಯದಲ್ಲಿ, **ನಾ ಸತ್ಯೌ ಅಶ್ವಿನೌ** ಎಂದು ತಮ್ಮ ಅಭಿಪ್ರಾಯವನ್ನು ವಿವರಿಸಿರುವರು. ಅಶ್ವಿನೀದೇವತೆಗಳು—ಯಾವಾಗಲೂ ಸತ್ಯವನ್ನೇ ನುಡಿಯುವ ಕಾರಣ ನಾಸತ್ಯರೆಂದು ಪ್ರಸಿದ್ಧರಾದಿರುವರೆಂಬ ಔರ್ಣವಾಭರೆಂಬ ಆಚಾರ್ಯರ ಮತವನ್ನು ವರ್ಣಿಸಿದ್ದಾರೆ. ಆಗ್ರಾಯಣರೆಂಬ ಆಚಾರ್ಯರು **ಸತ್ಯಾವೇವ ನಾಸತ್ಯೌ** ಎಂಬ ನಾಸತ್ಯ ಶಬ್ದದ ನಿರ್ವಚನವನ್ನೇ ಅಂಗೀಕರಿಸಿ, ಸತ್ಯ ಶಬ್ದಕ್ಕೆ ಉದಕ ಅಥವಾ ಯಜ್ಞ ಎಂಬ ಅರ್ಥವನ್ನು ಹೇಳಿ, ಅಶ್ವಿನೀದೇವತೆಗಳು ಯಜ್ಞವನ್ನು ನಿರ್ವಹಿಸುವವರು ಎಂಬ ಅರ್ಥವನ್ನು ವಿವರಿಸಿರುವರು. ಬೃಹದ್ದೇವತೆಯಲ್ಲಿ ಉಕ್ತವಾಗಿರುವಂತೆ, ಅಶ್ವರೂಪದಿಂದ ಇರುವ ಸಂಜ್ಞಾದೇವಿಯನ್ನು ಗುರ್ತುಹಚ್ಚುವುದಕ್ಕಾಗಿ ಸೂರ್ಯನು ಅಶ್ವರೂಪವನ್ನು ಹೊಂದಿ, ಸಂಜ್ಞಾದೇವಿಯನ್ನು ನೋಡಿದಾಗ ಅವಳ ನಾಸಿಕಾಪ್ರದೇಶದಿಂದ ಉತ್ಪನ್ನರಾದವರು ಅಶ್ವಿನೀದೇವತೆಗಳೆಂದು ಇನ್ನೊಂದು ವಿಧವಾದ ವಿವರಣೆಯನ್ನೂ ಪ್ರದರ್ಶಿಸಿದ್ದಾರೆ.

" ನಾಸತ್ಯಾದಿನಿರ್ದಿಷ್ಟವಾದ ನಾಮವುಳ್ಳ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಮಿಳಿತರಾಗಿಯೇ ಪುನಃ ಪುನಃ ಸ್ತುತರಾಗುತ್ತೀರಿ. ಮಧ್ಯಲೋಕದವನೂ, ಜಯಶೀಲನೂ, ಓಷಧ್ಯಾದಭಿವೃದ್ಧಿದ್ವಾರಾ ಯಜ್ಞಪ್ರೇರಕನೂ ಆದ ಚಂದ್ರರೂಪನಾಗಿ ಒಬ್ಬನೂ, ಉತ್ತಮ ಲೋಕವಾದ ದ್ಯುಲೋಕಕ್ಕೆ ಪುತ್ರಸ್ಥಾನೀಯನೂ, ರಶ್ಮಿದ್ವಾರಾ ಜಗದಭಿವೃದ್ಧಿಕಾರಕನೂ

ಆದ ಸೂರ್ಯರೂಪನಾಗಿ ಮತ್ತೊಬ್ಬನೂ ಈ ಪ್ರಪಂಚವನ್ನು ರಕ್ಷಿಸುತ್ತೀರಿ ಎಂದು ಅವರ ವೈಯಕ್ತಿಕವಾದ ಸ್ವರೂಪವನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ. ಪ್ರಕೃತವಾದ ಋಕ್ಕಿಗೆ ನಿರುಕ್ತದಲ್ಲಿ ಈ ರೀತಿ ವಿವರಣೆಯಿದೆ.

**ಇಹ ಚೇಹ ಚ ಜಾತೌ ಸಂಸ್ತೂಯೇತೇ ರಾಪೇನಾಲಿಪ್ಯಮಾನಯಾ ತನ್ವಾ ನಾಮಭಿಶ್ಚ ಸ್ವೈರ್ಜಿಷ್ಣುರ್ವಾಮನ್ಯಃ ಸುಮಹತೋ ಬಲಸ್ಯೇರಯಿತಾ ಮಧ್ಯಮೋ ದಿವೋ ಅನ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ ॥**

(ನಿ. ೧೨-೩)

Born here and there, they two are praised together with reference to a body unstaided by sin and to their own names. One of you two is the Victor, the furtherer of very great strength, i. e, belongs to the middle region ; the other is considered the blessed son of heaven, i. e, the Sun. ಈ ವಾಕ್ಯಗಳ ಅರ್ಥವು ಮೇಲೆ ಹೇಳಿರುವುದೇ ಆಗಿದೆ. ಹೀಗೆ ಸೂರ್ಯರೂಪನಾಗಿ ಒಬ್ಬನೂ ಮತ್ತು ಚಂದ್ರರೂಪನಾಗಿ ಇನ್ನೊಬ್ಬನೂ ಲೋಕರಕ್ಷಕರಾಗಿದ್ದಾರೆ ಎಂದು ಈ ಋಕ್ಕಿನ ತಾತ್ಪರ್ಯವು.ಆದರೆ ಕೆಲವೆಡೆಗಳಲ್ಲಿ ಬೇರೆ ವಿಧವಾಗಿಯೂ ಸಹ ಸ್ತುತರಾಗಿದ್ದಾರೆ. ಆದ್ದರಿಂದಲೇ ನಿರುಕ್ತಕಾರರೂ ಸಹ ಈ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಕೊಡದೆ, ಮತಾಂತರಗಳನ್ನು ತಿಳಿಸಿದ್ದಾರೆ. ಅದು ಈ ಪ್ರಕಾರವಾಗಿದೆ.

**ಅಶ್ವಿನೌ ಯದಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ॥**

(ನಿ. ೧೨-೧)

ಈ ದೇವತೆಗಳಲ್ಲಿ ಒಬ್ಬನು ಉದಕದಿಂದಲೂ ಇನ್ನೊಬ್ಬನು ಪ್ರಕಾಶದಿಂದಲೂ ಸರ್ವತ್ರ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀ ದೇವತೆಗಳೆಂದು ಹೆಸರು, ಎಂದು ಒಂದು ಮತ. ಅಶ್ವಗಳಿಂದ ಯುಕ್ತರಾದುದರಿಂದ ಇವರಿಗೆ ಅಶ್ವಿನೀ ದೇವತೆಗಳೆಂದು ಹೆಸರು ಎಂದು ಔರ್ಣವಾಭರ ಮತ. ಕೆಲವರ ಅಭಿಪ್ರಾಯದಂತೆ ಇವರು ದ್ಯಾವಾಪೃಥಿವಿಗಳು. ಮತ್ತೆ ಕೆಲವರು ಇವರನ್ನೇ ಅಹೋರಾತ್ರಗಳೆಂದು ಹೇಳುವರು. ಮತ್ತೆ ಕೆಲವರ ಅಭಿಪ್ರಾಯದಂತೆ ಇವರೇ ಸೂರ್ಯಾಚಂದ್ರಮಸ್ಸುಗಳಾಗಿರುವರು. ಐತಿಹಾಸಿಕಕಾರರ ಮತದಂತೆ ಪುಣ್ಯಕರ್ತರಾದ ಇಬ್ಬರು ರಾಜರುಗಳು ಈ ಪದವಿಯನ್ನು ಪಡೆದಿರುವರು ಎಂದಾಗುತ್ತದೆ. ಹೀಗೆ ಮತಭೇದಗಳನ್ನು ತಿಳಿಸಿ ಋಕ್ಸಂಹಿತೆಯಿಂದ ಪ್ರಕೃತವಾದ ಋಕ್ಕನ್ನೂ (೧-೧೮೧-೪) ಮತ್ತು ಅನಿರ್ದಿಷ್ಟವಾದ ಇನ್ನೊಂದು ಮಂತ್ರವನ್ನೂ ಉದಾಹರಿಸಿ ಈ ವಿಷಯದಲ್ಲಿರುವ ವಿಪ್ರತಿಪತ್ತಿಯನ್ನು ತಿಳಿಸಿರುವರು. ಮೊದಲನೆಯದಾಗಿ,

**ವಸಾತಿಷು ಸ್ಮ ಚರಥೋऽಸಿತೌಪೇತ್ವಾವಿವ ।**
**ಕದೇದಮಶ್ವಿನಾ ಯುವಮಭಿ ದೇವಾ॑ ಅಗಚ್ಛತಂ ॥**

ಎಂಬ ಮಂತ್ರದಲ್ಲಿ ಹೇಳಿರುವಂತೆ, ಇವರಲ್ಲಿ ಒಬ್ಬನು ವಸಾತಿ ಪುತ್ರನು. ಎಂದರೆ ರಾತ್ರಿಪುತ್ರನು ; ಇನ್ನೊಬ್ಬನು ಉಷಃ ಪುತ್ರನು ಎಂದಾಗುತ್ತದೆ. ಎಂದು ಹೇಳಿ ಅನಂತರ ಪ್ರಕೃತವಾದ ಋಕ್ಕನ್ನುದಾಹರಿಸಿ ಮೇಲೆ ತಿಳಿಸಿರುವಂತೆ ವಿವರಿಸುತ್ತಾರೆ. Macdonell ಎಂಬ ಪಂಡಿತನು ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾ ಈ ರೀತಿ ಹೇಳಿದ್ದಾನೆ.

" Though they (ಅಶ್ವಿನೌ) hold a distinct position among the Deites of of light and their appellation is Indian, their connection with any definite Phenomena of light is so obscure that their original nature is so Puzzle to the Vedic interpreters fr.m the earliest times."

[Vedic Mythology. P. 49]

ವೈದಿಕ ಮತ್ತು ಆಧುನಿಕ ಆಂಗ್ಲ ಪಂಡಿತರುಗಳ ಅಭಿಪ್ರಾಯಗಳನ್ನು ಕ್ರೋಢೀಕರಿಸಿದರೆ ಈ ಅಭಿಪ್ರಾಯಗಳು ಕಂಡು ಬರುತ್ತವೆ.

| Scholars | Their opinions |
|---|---|
| Yaska | Twilight before Dawn, half dark and half light |
| Aurnavabha | Light rays. |
| Oldenberg | Morning or evening star |
| Macdonell | Twilight or Morning stars. |
| Bloomfield | Morning or evening stars. |
| Hopekins | Transition from darkness to light. |
| Bergaine | Fire of heaven and of the altar. |
| ಐತಿಹಾಸಿಕಾಃ | Two pious kings. |
| E. N. Ghosh | Two stars of Asvini (Aries) |
| Weder | Twin constellation of Gemini |
| Shama Shastry | The Sun and the Moon. |
| MaxMuller | Personification of Morning and evening. |

Dr. ಶ್ಯಾಮಶಾಸ್ತ್ರಿಗಳು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು Mythic Society journal ನಲ್ಲಿ (Vol. XX. No. 2. P. 80—88) ವಿಶದವಾಗಿ ತಿಳಿಸಿದ್ದಾರೆ. ಮತ್ತು ಇವರು ಸೂರ್ಯಾಚಂದ್ರಮಸ್ಸುಗಳೇ ಅಲ್ಲವೇ ಬೇರೆ ಯಾರೂ ಅಲ್ಲವೆಂಬ ವಿಷಯವನ್ನೂ ಸಮರ್ಥಿಸಿದ್ದಾರೆ. ಋಕ್ಸಂಹಿತಾವಾಕ್ಯಗಳಲ್ಲಿರುವ ವಿವರಣೆ.ಯಿಂದ ಅಶ್ವಿನೀ ದೇವತೆಗಳ ಸ್ವರೂಪವನ್ನು ನಿಷ್ಕರ್ಷಿಸುವುದಾದರೆ, ಕೆಳಗೆ ಉದಾಹರಿಸಿರುವ ಆಧಾರಗಳನ್ನು ವಿವರ್ಶಿಸಬಹುದು.

ತ್ವಷ್ಟಾ ದುಹಿತ್ರೇ ವಹತು ಕೃಣೋತೀತೀದಂ ವಿಶ್ವಂ ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥
ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ॥

(ಋ. ಸಂ. ೧೦-೧೭-೧ ರಿಂದ ೨)

ತ್ವಷ್ಟೃವು ತನ್ನ ಮಗಳ ವಿವಾಹದ ಕಾಲದಲ್ಲಿ ಸಕಲ ಪ್ರಪಂಚವೂ ಒಟ್ಟಿಗೆ ಸೇರಿ ಕರೆಯಲಿ ಎಂದುದ್ದೇಶಿಸಿದನು. ಯಮುನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಅವಳು ವಿವಾಹದನಂತರವೇ ಅದೃಶ್ಯಳಾದಳು. ಎಂದರೆ, ಅವರು ಅಮರ್ತ್ಯಳಾದ ಅವಳನ್ನು ಮರ್ತ್ಯರ ದೃಷ್ಟಿಗೆ ಗೋಚರವಾಗದಂತೆ ಮರೆಸಿ ಇಟ್ಟರು. ಆಗ ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು. ಅನಂತರ ಅವಳು ಅಶ್ವಿನೀದೇವತೆಗಳನ್ನು ಹಡೆದಳು. **ಸರಣ್ಯು**ವೆಂಬ ಹೆಸರಿನಿಂದ ಪ್ರಸಿದ್ಧಳಾದ ಅವಳು ಅಶ್ವಿನೀದೇವತೆಗಳನ್ನು ತನ್ನ ಪುತ್ರರನ್ನಾಗಿ ಬಿಟ್ಟುಹೋದಳು ಎಂದು ಮೇಲ್ಕಂಡ ಋಕ್ಕುಗಳ ಅಭಿಪ್ರಾಯವಾಗಿದೆ. ಮತ್ತು,

**ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ ಪತದಾ ಹ್ಯಸ್ಥಾತ್ ।**
**ವಪೂಂಷಿ ಜಾತಾ ಮಿಥುನಾ ಸಜೇತೇ ತಮೋಹನಾ ತಪುಷೋ ಬುಧ್ನ ಏತಾ ॥**

(ಋ. ಸಂ. ೩-೩೯-೩)

ಯಮಳರ (ಎಂದರೆ ಅಶ್ವಿನೀದೇವತೆಗಳ) ಮಾತೆಯು ಯಮಳರನ್ನು ಹಡೆದಳು. ಆ ಯಮಳರಿಬ್ಬರೂ ಸಹ ಸಹಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ. Max Muller ಎಂಬ ಪಂಡಿತನು ಈ ಋಕ್ಕನ್ನುದಹರಿಸಿ ಈ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ಹೇಳಿದ್ದಾರೆ.

> " We might have guessed from the text itself, even without the help of the Commentator that ' the mother of the twins ' here spoken of is Dawn : but it may be stated that the commentator, too, adopts this view."

Science of Language. Vol. II. P. 530.

ಎಂದರೆ, ಸಾಯಣರು ತಮ್ಮ ಭಾಷ್ಯದಲ್ಲಿ **ಯಮಸೂಃ** ಎಂಬ ಪದಕ್ಕೆ **ಉಷೋಽಭಿಮಾನಿನೀ ದೇವತಾ (ಅತ್ರ ಉಷಃ-ಕಾಲೇ ಅಸೂತ)** ಎಂದು ಅಶ್ವಿನೀ ದೇವತೆಗಳ ಮಾತೆಯು ಉಷೋದೇವತೆಯೆಂದು ಹೇಳಿರುವುದು ಸರ್ವಸಮ್ಮತವಾಗಿದೆ ಯೆಂದು ಈ ಪಂಡಿತನು ಹೇಳಿದ್ದಾನೆ. ಅಲ್ಲದೇ ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟುದೂ ಅವರಿಂದ ಅಶ್ವಿನೀದೇವತೆಗಳು ಉತ್ಪನ್ನರಾದುದೂ ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ—

**ಅಭವನ್ಮಿಥುನಂ ತ್ವಷ್ಟುಃ ಸರಣ್ಯುಸ್ತ್ರಿಶಿರಾಃ ಸಹ ।**
**ಸ ವೈ ಸರಣ್ಯುಂ ಪ್ರಾಯಚ್ಛತ್ ಸ್ವಯಮೇವ ವಿವಸ್ವತೇ ॥**
**ತತಃ ಸರಣ್ಯ್ವಾಂ ಜಜ್ಞಾತೇ ಯಮಯಮೌ ವಿವಸ್ವತಃ ।**
**ತೌ ಚಾಪ್ಯುಭೌ ಯಮಾವೇವ ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ ॥**
**ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।**
**ನಿಕ್ಷಿಪ್ಯ ಮಿಥುನಂ ತಸ್ಯಾಂ ಅಶ್ವಾ ಭೂತ್ವಾಪಚಕ್ರಮೇ ॥**
**ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।**
**ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥**
**ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।**

ತ್ವಾಷ್ಟ್ರೀಂ ಪ್ರತಿ ಜಗಮಾಶು ವಾಜೀ ಭೂತ್ವಾ ಸಲಕ್ಷಣಃ ॥
ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।
ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥
ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।
ಉಪಾಜಿಘ್ರುಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥
ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।
ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥
ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವ್ಯೃಚೇ ।
ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟ್ರೇತಿ ಸಹ ಮನ್ಯತೇ ॥

(ಬೃ. ದೇ. ೬–೧೬೨ ರಿಂದ ೭–೭)

ತ್ವಷ್ಟೃವು ತನ್ನ ದುಹಿತೆಯಾದ ಸರಣ್ಯುವನ್ನು ವಿವಸ್ವಂತನಿಗೆ ಕೊಟ್ಟನು. ಅವಳು ಯಮ ಮತ್ತು ಯ[redacted]ಮೀ ಎಂಬಿಬ್ಬರೂ ಯಮಳರನ್ನು ಹಡೆದಳು. ಸರಣ್ಯುವು ತನ್ನಂತೆಯೇ ಬೇರೊಂದು ಸ್ತ್ರೀರೂಪವನ್ನು ಸೃಷ್ಟಿಸಿ ತನ್ನ ಪತಿಗೆ ತಿಳಿಯದಂತೆ ತನ್ನಿಬ್ಬರು ಮಕ್ಕಳ ರಕ್ಷಣೆಯನ್ನೂ ಅವಳಿಗೆ ವಹಿಸಿ ತಾನು ಒಂದು ಹೆಣ್ಣು ಅಶ್ವದ ರೂಪವನ್ನು ತಾಳಿದಳು. ಈ ರಹಸ್ಯವನ್ನು ತಿಳಿಯದೇ ವಿವಸ್ವಂತನು ಸರಣ್ಯುವಿನಿಂದ ಸೃಷ್ಟಳಾದ ಆ ಸ್ತ್ರೀಯಲ್ಲಿ ರಮಿಸಿ ಮನುವನ್ನು ಉತ್ಪನ್ನವಾಗುವಂತೆ ಮಾಡಿದನು. ಒಡನೆಯೇ ಅವಳು ಸರಣ್ಯುವಲ್ಲವೆಂದು ತಿಳಿದು ನಿಜವಾದ ಸರಣ್ಯುವನ್ನು ಹುಡುಕಿಕೊಂಡು ಹೊರಟನು. ಮತ್ತು ತಾನೂ ಪುರುಷಾಶ್ವದ ರೂಪವನ್ನು ಪಡೆದನು. ಆ ರೂಪವನ್ನು ನೋಡಿ ಅವಳೂ ಮೋಹಗೊಂಡು ಅವನ ಸಂಭೋಗಕ್ಕಾಶಿಸಿದಳು. ಆಗ ಅವನ ರೇತಸ್ಸಿನ ಪ್ರಭಾವದಿಂದ **ನಾಸತ್ಯ** ಮತ್ತು **ದಸ್ರ** ಎಂಬಿಬ್ಬರು ಪುತ್ರರು ಜನಿಸಿದರು. ಅವರೇ ಅಶ್ವಿನೀದೇವತೆಗಳು, ಎಂಬ ಕಥೆಯು ವರ್ಣಿತವಾಗಿವೆ. ಇದೇ ಕಥೆಯು ಹರಿವಂಶದಲ್ಲಿಯೂ ಇದೇ ರೀತಿ ಹೇಳಲ್ಪಟ್ಟಿದೆ. ಅದು ಪೌರಾಣಿಕ ಸಂಪ್ರದಾಯ ವನ್ನನುಸರಿಸಿರುವುದರಿಂದಲೂ, ಪ್ರಕೃತವಾದ ವಿವರಣೆಗಳಲ್ಲೆಲ್ಲಾ ನಾವು ಕೇವಲ ವೈದಿಕವಾಕ್ಯಗಳ ಆಧಾರದ ಮೇಲೆಯೇ ವಿಮರ್ಶೆಯನ್ನು ಮಾಡುತ್ತಿರುವುದರಿಂದಲೂ ಹರಿವಂಶದ ವಿವರಣೆಯು ಈಗ ಅಪ್ರಕೃತವಾಗಿದೆ. ಮೇಲೆ ವಿವರಿಸಿರುವಂತೆ, ಅಶ್ವಿನೀ ದೇವತೆಗಳ ಉತ್ಪತ್ತಿ ಕ್ರಮವನ್ನು ಈ ರೀತಿ ತೋರಿಸಬಹುದು.

ತ್ವಷ್ಟಾ
- ತ್ರಿಶಿರಾ
- ಸರಣ್ಯು — ವಿವಸ್ವಾನ್ — ಸವರ್ಣಾ
  - (ಸವರ್ಣಾ) ಮನು
  - (ಸರಣ್ಯು) ಸರಣ್ಯು, ಯಮ, ಯಮೀ
    - (ಸರಣ್ಯು) ನಾಸತ್ಯ, ದಸ್ರ

ಮತ್ತು
೧. ತ್ರಿಶಿರಾ ಮತ್ತು ಸರಣ್ಯುವೂ
೨. ಯಮ ಮತ್ತು ಯ[redacted]ಮಿಯೂ
೩. ನಾಸತ್ಯ ಮತ್ತು [redacted]ಸ್ರನೂ ಸಹ
ಯಮಳರು.

ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವಂತೆ ಈ ಇಬ್ಬರು ಎರಡು ತೇಜೋ ರೂಪಗಳು ಎಂದಿರುವ ವಿಷಯವನ್ನು ಬೇರೆ ಕಡೆ ಬೇರೊಂದು ರೂಪದಲ್ಲಿ ವರ್ಣಿತವಾಗಿದೆ.

**ಪುರಂಧಿ** ಶಬ್ದಾರ್ಥವನ್ನು ಈ ರೀತಿ ವಿವರಿಸಲಾಗಿದೆ—

**ಪುರಂಧಿಂ—ಬಹೂನಾಂ ಧಾತ್ರೀಂ ಪೃಥಿವೀಂ।** ಅನೇಕರಿಗೆ ಧಾತ್ರಿಯಾದ ಪೃಥಿವಿಯನ್ನು ಎಂದು **ಪುರಂಧಿ** ಶಬ್ದಕ್ಕೆ **ಪೃಥ್ವಿ**ಯೆಂದರ್ಥಮಾಡಿದೆ. ಈ ಪದವು **ಪ್ರಭೂತ, ಪೌಷ್ಕಳ್ಯ, ಸಮೃದ್ಧಿ** ಎಂಬರ್ಥವನ್ನೇ ಎಲ್ಲಾ ಕಡೆಯೂ ಸೂಚಿಸಿದರೂ ಸಹ ಇದರ ಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನು ಸಾರವಾಗಿ ಅರ್ಥವನ್ನು ವಿವರಿಸಬೇಕಾಗಿರುತ್ತದೆಯೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ. ಹೇಗೆಂದರೆ,

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸದಸ್ಥಂ ವಿಶ್ವೇ ಅಭಿ ಸಂತಿ ದೇವಾಃ।**
**ತಾ್ ಅಧ್ವರ ಉರತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ॥**

(ಋ. ಸಂ. ೭–೩೯–೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಂಬ ಪದದ ಅರ್ಥವನ್ನು ವಿವರಿಸುವಾಗ, ಅಲ್ಲಿ

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ। ಇಂದ್ರ ಇತ್ಯಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ। ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ।**

(ನಿ. ೬–೧೩)

ಸಮೃದ್ಧವಾದ **ಧೀ** (ಬುದ್ಧಿ) ಯುಳ್ಳವನು ಎಂದು ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆಯಾದರೆ, ಉದಾಹೃತವಾಗಿರುವ ಈ ಋಕ್ಕಿನಲ್ಲಿ **ಭಗ**ಶಬ್ದವು ಈ ಪದಕ್ಕೆ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. **ಧೀ**ಶಬ್ದವು **ಕರ್ಮ**ನಾಮಗಳಲ್ಲೂ ಪಠಿತವಾಗಿರುವುದರಿಂದ **ಪುರಂಧಿ**ಯೆಂದರೆ ನಾನಾ ವಿಧವಾದ ಕರ್ಮವುಳ್ಳವನು ಎಂದಾಗಲಿ, ಅಥವಾ ಶತ್ರು ಪಟ್ಟಣಗಳನ್ನು ಸೀಳುವವನು ಎಂದಾಗಲಿ ಅರ್ಥವಾಗುವುದರಿಂದ **ಇಂದ್ರ**ನಿಗೆ ವಿಶೇಷಣವೆಂದು ಇನ್ನು ಕೆಲವರ ಮತ. ಅಥವಾ **ಇಮಾಮೂ ನು ಕವಿತಮಸ್ಯ ಮಾಯಾಂ** (ಋ. ಸಂ. ೫–೮೫–೬) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರಜ್ಞೆಯನ್ನು ಸ್ತುತಿಸಿರುವಂತೆ ನಿರುಕ್ತಕಾರರು ಉದಾಹರಿಸಿರುವ ಈ ಋಕ್ಕಿನಲ್ಲಿಯೂ ಅವನ ಪ್ರಜ್ಞೆಯನ್ನು ವರ್ಣಿಸುತ್ತಾ **ವರುಣ**ನಿಗೆ ಪರ್ಯಾಯ ಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಈ ರೀತಿ ಅಭಿಪ್ರಾಯ ಭೇಧಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸಿದ್ದಾರೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ॥**

(ಋ. ಸಂ. ೪–೨೬–೭)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ–೧೧–೨) **ಪುರಂಧಿಃ ಬಹುಧನಸ್ಯ ದಾತಾ।** ಅತ್ಯಧಿಕವಾಗಿ ಧನವನ್ನು ದಾನಮಾಡತಕ್ಕವನೆಂದೂ, ಸಾಯಣರು **ಬಹುಕರ್ಮಾ** ಎಂದು ಅರ್ಥಮಾಡಿದ್ದಾರೆ. ಈ ಪದವು ಇಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

**ನೃಧೂತೋ ಅದ್ರಿಷುತೋ ಬರ್ಹಿಷಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।**
**ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥**

(ಋ. ಸಂ. ೯-೭೨-೪)

ಎಂಬ ಋಕ್ಕಿನಲ್ಲಿ **ಬಹುಕರ್ಮವಾನ್ ಮನುಷ್ಯಃ** ದೇವತೆಗಳ ತೃಪ್ತ್ಯರ್ಥವಾಗಿ ನಾನಾ ವಿಧವಾದ ಕರ್ಮಗಳುಳ್ಳ ಎಂದರೆ ಕರ್ಮಗಳನ್ನು ಮಾಡುವ ಮಾನವನ ಎಂದರ್ಥಮಾಡಿದೆ ಮತ್ತು,

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦-೬೫-೧೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು ಈ ಪದಕ್ಕೆ (ನಿ. ೧೨-೩೦). **ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ**—ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ **ವಚಾಂಸಿ**—ವಚನಗಳನ್ನು ಎಂದರ್ಥಮಾಡಿದ್ದಾರೆ. ಸಾಯಣರು **ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ** । ಬಹುವಿಧವಾದ ಪ್ರಜ್ಞೆಯಿಂದ ಕೂಡಿದ **ಸರಸ್ವತಿಗೆ** ವಿಶೇಷಣವೆಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨-೩೦) **ಬಹುಧಾತ್ರ್ಯಾ ; ಮಾಧ್ಯಮಿಕಯಾ ವಾಚಾ** ಎಂಬ ವಿವರಣೆಯಿಂದ **ಪುರಂಧಿ** ಶಬ್ದವು **ಸರಸ್ವತೀ** ಸದೃಶವಾದ ಒಂದು ದೇವತಾ ವಿಶೇಷವನ್ನು ಸೂಚಿಸುವುದೆಂದು ತಿಳಿಯುತ್ತದೆ. ಇದರಂತೆಯೇ,

**ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।**
**ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥**

**(ಋ. ಸಂ. ೭-೩೫-೨)**

ಇತ್ಯಾದಿ ಋಕ್ಕುಗಳಲ್ಲಿ **ಪುರಂಧಿಯೇ** ಪ್ರತ್ಯೇಕವಾದ ದೇವತೆಯೆಂದೂ ತಿಳಿದು ಬರುತ್ತದೆ. ಸಾಯಣರೂ ಸಹ ಈ ಋಕ್ಕಿನಲ್ಲಿರುವ **ಭಗಾದಿ** ಪದಗಳಿಗೆ ಇದನ್ನು ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು,

**ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।**
**ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥**

**(ಋ. ಸಂ. ೫-೪೨-೫)**

ಎಂಬಲ್ಲಿ ಈ ಪದವು **ವಿಭ್ವನಿಗೆ** ಪರ್ಯಾಯಪದವಾಗಿದೆ.

**ಪುರಾಣೀ ದೇವೀ ಯುವತಿಃ ಪುರಂಧಿರನು ವ್ರತಂ ವಿಶ್ವವಾಸೇ।**

(ಋ. ಸಂ. ೩-೬೧-೧)

ಇತ್ಯಾದಿ ಕಡೆಗಳಲ್ಲಿ **ಉಷಸ್ಸಿಗೆ** ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ, ಹೀಗೆಯೇ ಅನೇಕ ಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದೆ ಸಂತಾನವನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರು ಎಂಬರ್ಥವನ್ನು ಕೊಡುತ್ತದೆ.

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥

(ಋ. ಸಂ. ೧೦-೮೦-೧)

ಇತ್ಯಾದಿ ಋಕ್ಕುಗಳಲ್ಲಿ (ಋ. ಸಂ. ೧-೧೧೬೧೧೭ ; ೧-೧೧೭-೧೯) ಪ್ರಸವಸಮರ್ಥಳಾದ ಪತ್ನಿಯೆಂದೂ,

**ಪ್ರ ಭೋದಯಾ ಪುರಂಧಿಂ ಜಾರ ಆ ಸಸತೀಮಿವ ।**
**ಪ್ರ ಚಕ್ಷಯ ರೋದಸೀ ವಾಸಯೋಷಸಃ ಶ್ರವಸೇ ವಾಸಯೋಷಸಃ ॥**

(ಋ. ಸಂ. ೧-೧೩೪-೩)

ಇತ್ಯಾದಿ ಋಕ್ಕುಗಳಲ್ಲಿ ಭೋಗಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತದೆ. ಹೀಗೆ ನಾನಾ ವಿಧವಾದ ಗುಣಗಳನ್ನು ವರ್ಣಿವಾಗ **ಪುರಂಧಿ** ಶಬ್ದವು ಆಯಾ ಗುಣಗಳ ಆಧಿಕ್ಯವನ್ನೂ ಸತ್ವಸ್ಮೃದ್ಧಿಯನ್ನೂ ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸಂಪತ್ಸಮೃದ್ಧಿಯನ್ನೂ ಕೂಡಿದುದೂ, ಲೋಕಪೋಷಕವಾದುದೂ ಆದ ಪೃಥಿವಿಯ ಗುಣವನ್ನು ವರ್ಣಿಸುವ ವಿಶೇಷಣಪದವಾಗಿದೆಯೆಂದು ಸಾಯಣಭಾಷ್ಯವು ತಿಳಿಸಿದೆ.

**ಪುರಂಧಿಂ**—ಈ ಶಬ್ದದಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾಗುತ್ತದೆಯೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ.

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸಧಸ್ತಂ ವಿಶ್ವೇ ಅಭಿ ಸಂತಿ ದೇವಾಃ ।**
**ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೮-೫೯-೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಶಬ ಪದದ ಅರ್ಥವನ್ನು ವಿವರಿಸುವಾಗ, ಅಲ್ಲಿ

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ। ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ।**

(ನಿ. ೯-೧೩)

ಸಮೃದ್ಧಿಯಾದ **ಧೀ—**ಬುದ್ಧಿಯುಳ್ಳವನು ಎಂಬ ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆಯಾದರೆ, ಉದಾಹೃತವಾಗಿರುವ ಈ ಋಕ್ಕಿನಲ್ಲಿ **ಭಗ** ಶಬ್ದವು ಈ ಪದಕ್ಕೆ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. **ಧೀ**ಶಬ್ದವು **ಕರ್ಮ**ನಾಮುಗಳಲ್ಲೂ ಪಠಿತವಾಗಿರುವುದರಿಂದ **ಪುರಂಧಿ**ಯೆಂದರೆ ನಾನಾ ವಿಧವಾದ ಕರ್ಮವುಳ್ಳವನು ಎಂದಾಗಲೀ, ಅಥವಾ ಶತ್ರು ಪಟ್ಟಣಗಳನ್ನು ಸೀಳುವವನು ಎಂದಾಗಲೀ ಅರ್ಥವಾಗುವುದರಿಂದ **ಇಂದ್ರ**ನಿಗೆ ವಿಶೇಷಣವೆಂದು ಇನ್ನು ಕೆಲವರ ಮತ. ಅಥವಾ **ಇಮಾಮೂ ನು ಕವಿತಮಸ್ಯ ಮಾಯಂ** (ಋ. ಸಂ. ೫-೮೫-೬) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರತಿಜ್ಞೆಯನ್ನು ಸ್ತುತಿಸಿರುವಂತೆ ನಿರುಕ್ತಕಾರರು ಉದಾಹರಿಸಿರುವ ಈ ಋಕ್ಕಿನಲ್ಲಿಯೂ, ಅವನ ಪ್ರಜ್ಞೆಯನ್ನು ವರ್ಣಿಸುತ್ತಾ ವರುಣನಿಗೆ ಪರ್ಯಾಯಪದವಾಗಿರಬಹುದೆಂದು ಇನ್ನು ಕೆಲವರ ಮತ ಎಂದು ಈ ರೀತಿ ಅಭಿಪ್ರಾಯ ಭೇದಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳಿಗೆ ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಪವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸಿದ್ದಾರೆ.

ಪುರಂಧಿ ಶಬ್ದಾರ್ಥದ ವಿಷಯದಲ್ಲಿ ಉದಾಹರಣೆಯ ಋಕ್ಕು—

**ಇಮಾ ಮೂ ನು ಕವಿತಮಸ್ಯಮಾಯಾಂ ಮಹೀಂ ದೇವಸ್ಯ ನಕಿರಾ ದದರ್ಷ ।**
**ಏಕಂ ಯದುದ್ನಾ ನ ಪೃಣಂತ್ಯೇನೀರಾಸಿಂಚಂತೀರವನಯಃ ಸಮುದ್ರಂ ॥**

(ಋ. ಸಂ. ೫-೮೫-೯)

ಇದರ ಅರ್ಥವು—

ಅನೇಕ ನದಿಗಳು ಪ್ರವಾಹಪೂರ್ಣವಾಗಿ ಬಂದು ಹರಿದರೂ ಸಹ ತುಂಬಲಾರದಷ್ಟು ಆಳವು ಸಮುದ್ರಕ್ಕಿರುವುದು ವರುಣನ ಮಹಿಮೆಯೇ ಆಗಿದೆ. ಇಂತಹ ಉತ್ಕೃಷ್ಟವಾದ ಪ್ರಜ್ಞೆಯುಳ್ಳವನೂ ಪ್ರಕಾಶಮಾನನೂ ಆದ ವರುಣನ ಪ್ರಸಿದ್ಧವಾದುದೂ ಮಹತ್ತಾದುದೂ ಆದ ಪ್ರಜ್ಞೆಯನ್ನು ಯಾರೂಕೂಡ ಪ್ರತಿಭಟಿಸಲಾರರು.

ರುಶತ್ ॥೫೨॥

ರುಶದಿತಿ ವರ್ಣನಾಮ ರೋಚತೇರ್ಜ್ವಲತಿಕರ್ಮಣಃ ॥ "ಸಮಿದ್ಧಸ್ಯ ರುಶದದರ್ಶಿ ಪಾಜಃ" ಇತ್ಯಪಿ ನಿಗಮೋ ಭವತಿ ॥೨॥೧೩॥

**ರುಶತ್ ಇತಿ ವರ್ಣನಾಮ । ರೋಚತೇರ್ಜ್ವಲತಿಕರ್ಮಣಃ ರುಶತ್** ಎಂದರೆ ವರ್ಣವು, ಬಣ್ಣವು. ಈ ಶಬ್ದವು ಪ್ರಕಾಶಿಸು, ಹೊಳೆಯುವುದು ಎಂಬರ್ಥವುಳ್ಳ **ರೋಚತಿ** ಧಾತುವಿನಿಂದ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

**ಅಬೋಧಿ ಹೋತಾ ಯಜಥಾಯ ದೇವಾ ನೂರ್ಧ್ವೋ ಅಗ್ನಿ ಸುಮನಾ ಪ್ರಾತರಸ್ಥಾತ್ ।**
**ಸಮಿದ್ಧಸ್ಯ ರುಶದದರ್ಶಿ ಪಾಜೋ ಮಹಾನ್ದೇವಸ್ತಮಸೋ ನಿರಮೋಚಿ ॥**

(ಋ. ಸಂ. ೫-೧-೨)

ಇದರ ಅರ್ಥವು—

ಹೋಮಸಂಪಾದಕನಾದ ಅಗ್ನಿಯು ಶೋಭನಾತ್ಮಕವಾದ ಮನಸ್ಸುಳ್ಳವನಾಗಿ ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡುವುದಕ್ಕಾಗಿ ಪ್ರಬುದ್ಧನಾಗುತ್ತಾನೆ. ಉಷಃಕಾಲದಲ್ಲಿ ಮೇಲ್ಮುಖನಾಗಿ ಉದಯಿಸುತ್ತಾನೆ. ಪ್ರಜ್ವಲಿತನಾದ ಈ ಅಗ್ನಿಯ ಆಕರ್ಷಕವಾದ ಶಕ್ತಿಯು ಎಲ್ಲರಿಗೂ ಗೋಚರವಾಗಿದೆ. ಮಹಾತ್ಮನೂ ದೇವತಾತ್ಮನೂ ಆದ ಅಗ್ನಿಯು ಅಂಧಕಾರದಿಂದ ಮುಕ್ತನಾಗಿ ಹೊರಕ್ಕೆ ಬಂದಿದ್ದಾನೆ.

**ಹೋತಾ ಅಗ್ನಿಃ ದೇವಾನ್ ಯಜಥಾಯ ಅಬೋಧಿ**—ಹೋಮನಿಷ್ಪಾದಕನಾದ ಅಗ್ನಿಯು ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಿಸಿ ಪೂಜಿಸುವುದಕ್ಕಾಗಿ ಪ್ರಾತಃಕಾಲದಲ್ಲಿ ಎಚ್ಚರಗೊಳ್ಳುತ್ತಾನೆ. ಎಂದರೆ ಪ್ರಾತಃಕಾಲದಲ್ಲಿ ಯಜ್ಞಮಾಡುವುದಕ್ಕಾಗಿಯೂ, ದೇವತೆಗಳನ್ನು ಆಹ್ವಾನಿಸಿ ಅವರಿಗೆ ಯಜ್ಞಾಗ್ನಿಯಲ್ಲಿ ಹವಿಸನ್ನರ್ಪಿಸುವುದಕ್ಕಾಗಿಯೂ ಯಜ್ಞಮಾಡುವ ಯಜಮಾನನು ಅಥವಾ ಋತ್ವಿಕ್ಕುಗಳು ಅಗ್ನಿಯನ್ನು ಹೊತ್ತಿಸುತ್ತಾರೆ ಎಂದಭಿಪ್ರಾಯವು.

**ಸುಮನಾಃ ಸನ್ ಊರ್ಧ್ವಃ ಅಸ್ಥಾತ್—ಸೋಽಗ್ನಿಃ ಪ್ರಾತಃಕಾಲೇ ಶೋಭನಮನಸ್ಕೋ ಯಜಮಾನಾನುಗ್ರಹಬುದ್ಧಿಃ ಸನ್ ಊರ್ಧ್ವ ಉತ್ತಿಷ್ಠತಿ** । ಯಜ್ಞಕುಂಡದಲ್ಲಿ ಪ್ರತಿಷ್ಠಾಪಿತನಾದ ಅಗ್ನಿಯು ಯಜ್ಞಮಾಡುವ ಯಜಮಾನನಿಗೆ ಅನುಗ್ರಹಮಾಡಬೇಕೆಂಬ ಒಳ್ಳೆಯ ಮನಸ್ಸಿನಿಂದ ತನ್ನ ಪ್ರಕಾಶಮಾನವಾದ ಜ್ವಾಲೆಗಳನ್ನು ಮೇಲಕ್ಕೆ ಪ್ರಸರಿಸಿ ಬೆಳಗುತ್ತಾನೆ.

**ಸಮಿದ್ಧಸ್ಯ ರುಶತ್ ಪಾಜಃ ಅದರ್ಶಿ—ಅಸ್ಯಾಗ್ನೇಃ ರೋಚಮಾನಂ ಬಲಂ ಜ್ವಾಲಾಲಕ್ಷಣಂ ಸರ್ವೈರ್ದೃಶ್ಯತೇ ।** ಪಾಜಃ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. ಇಲ್ಲಿ **ರುಶತ್ ಪಾಜಃ** ಪ್ರಕಾಶಮಾನವಾದ ಬಲವು ಎಂದರೆ ಬಹಳ ಪ್ರಕಾಶಮಾನವಾಗಿ ಉರಿಯುತ್ತಿರುವ ಅಗ್ನಿಜ್ವಾಲೆಯೆಂದಭಿಪ್ರಾಯವು. ಚೆನ್ನಾಗಿ ಹೊತ್ತಿಸಲ್ಪಟ್ಟ ತನ್ನ ಪ್ರಕಾಶಮಾನವಾದ ಜ್ವಾಲೆಗಳಿಂದ ಚೆನ್ನಾಗಿ ಉರಿಯುತ್ತಿರುವ ಅಗ್ನಿಯು ಎಲ್ಲರಿಗೂ ಗೋಚರವಾಗಿರುತ್ತದೆ.

**ಮಹಾನ್ ದೇವಃ ತಮಸಃ ನಿರಮೋಚಿ–ಏವಂಭೂತಃ ಮಹಾನ್ ದೇವ ಅಂಧಕಾರಾತ್ ನಿರ್ಮುಕ್ತೋಽಭೂತ್ ।** ಈರೀತಿ ಇರುವ ಮಹಾಮಹಿಮನಾದ ಅಗ್ನಿಯು ಪ್ರಾತಃಕಾಲದ ಮಬ್ಬಿನಲ್ಲಿ ಸುತ್ತಲೂ ಆವರಿಸಿದ್ದ ಕತ್ತಲೆಯಿಂದ ಬಿಡುಗಡೆ ಹೊಂದಿ ಪ್ರಕಾಶಿಸುತ್ತಿರುವನು ಎಂದಭಿಪ್ರಾಯವು.

ಇತಿ ತ್ರಯೋದಶಃ ಖಂಡಃ

ಇಲ್ಲಿಗೆ ಹದಿಮೂರನೆಯ ಖಂಡವು ಸಮಾಪ್ತವು

---

## ಚತುರ್ದಶಃ ಖಂಡಃ

## ಹದಿನಾಲ್ಕನೆಯ ಖಂಡವು

ಅಸ್ತಿ ಹಿ ವಃ ಸಜಾತ್ಯಂ ರಿಶಾದಸೋ ದೇವಾಸೋ ಅಸ್ತ್ಯಾಪ್ಯಮ್ । ಅಸ್ತಿ ಹಿ ವಃ ಸಮಾನಜಾತಿತಾ ರೇಶಯದಾರಿಣೋ ದೇವಾ ಅಸ್ತ್ಯಾಪ್ಯ–ಮಾಪ್ಯಮಾಪ್ನೋತೇಃ ಸುದತ್ರಃ ಕಲ್ಯಾಣದಾನಃ ॥ ತ್ವಷ್ಟಾ ಸುದತ್ರೋ ವಿದಧಾತು ರಾಯ ಇತ್ಯಪಿ ನಿಗಮೋ ಭವತಿ । ಸುವಿದಯಃ ಕಲ್ಯಾಣ–ವಿದ್ಯಃ । ಆಗ್ನೇ ಯಾಹಿ ಸುವಿದತ್ರೇಭಿಸರ್ವಾಙಿತ್ಯಪಿ ನಿಗಮೋ ಭವತ್ಯಾ–ನುಷಗಿತಿ ನಾಮಾನುಪೂರ್ವಸ್ಯಾನುಷಕ್ತಂ ಭವತಿ । ಸ್ತೃಣನ್ತಿ ಬರ್ಹಿ–ರಾನುಷಗಿತ್ಯಪಿ ನಿಗಮೋ ಭವತಿ । ತುರ್ವಣಿಸ್ತೂರ್ಣವನಿಃ । ಸ ತುರ್ವಣಿರ್ಮಹಾಁ ಅರೇಣುಪಾಂಸ್ಯ ಇತ್ಯಪಿ ನಿಗಮೋ ಭವತಿ । ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯನ್ತಿ । ಜುಷ್ಟಂ ಗಿರ್ವಣಸೇ ಬೃಹದಿತ್ಯಪಿ ನಿಗಮೋ ಭವತಿ ॥ ೨೪ ॥

---

ರಿಶಾದಸಃ ।|೫೨||

"ಅಸ್ತಿ ಹಿ ವಃ ಸಜಾತ್ಯಂ ರಿಶಾದಸೋ ದೇವಾಸೋ ಅಸ್ತ್ಯಾಪ್ಯಮ್ ।"
ಅಸ್ತಿ ಹಿ ವಃ ಸಮಾನಜಾತಿತಾ ರೇಶಯದಾರಿಣೋ ದೇವಾಃ।
ಅಸ್ತ್ಯಾಪ್ಯಮ್ । ಆಪ್ಯಮಾಪ್ನೋತೇಃ ॥೧॥

ಉದಾಹರಣೆಯ ಋಕ್ಕು—

**ಅಸ್ತಿ ಹಿ ವಃ ಸಜಾತ್ಯಂ ರಿಶಾದಸೋ ದೇವಾಸೋ ಅಸ್ತ್ಯಾಪ್ಯಂ ।**
**ಪ್ರ ಣಃ ಪೂರ್ವಸ್ಮೈ ಸುವಿತಾಯ ವೋಚತ ಮಕ್ಷೂ ಸುಮ್ನಾಯ ನವ್ಯಸೇ ॥**
(ಋ. ಸಂ. ೮-೨೭-೧೦)

ಇದರ ಅರ್ಥವು—

ಶತ್ರುಹಿಂಸಕರಾದ ಎಲೈ ದೇವತೆಗಳೇ, ನಿಮ್ಮಲ್ಲಿ ಒಂದೇ ಗುಂಪಿಗೆ ಸೇರಿದ ಸಂಬಂಧವು ಇದ್ದೇ ಇದೆ. ನಿಮ್ಮ ಸ್ತೋತೃಗಳೊಡನೆ ನಿಮ್ಮ ಸಂಬಂಧವೂ ಪ್ರಸಿದ್ಧವಾಗಿಯೇ ಇದೆ. ಹಿಂದಿನಿಂದ ಬಂದ ಅಭ್ಯುದಯಕ್ಕಾಗಿಯೂ, ನೂತನವಾದ ಸುಖಕ್ಕಾಗಿಯೂ ನಮಗೆ ಶೀಘ್ರವಾಗಿ ಸ್ವಸ್ತಿವಾಚನವನ್ನು ಪಠಿಸಿರಿ.

**ರಿಶಾದಸಃ—ರಿಶತಾಂ ಹಿಂಸತಾಮಸಿತಾರಃ ।** ಹಿಂಸೆಮಾಡತಕ್ಕ ಶತ್ರುಜನರನ್ನು ತಿರಸ್ಕರಿಸುವವರು, ಹಿಂಸಿಸುವವರು. ಎಂದರೆ ಶತ್ರುಗಳನ್ನು ಹಿಂಸಿಸಿ ಕೊಲ್ಲುವವರು, ಶತ್ರುನಾಶಕರು ಎಂದರ್ಥವು.

ದೇವತೆಗಳು ಇತರರನ್ನು ನಿಷ್ಕಾರಣವಾಗಿ ಹಿಂಸೆಮಾಡುವ ಶತ್ರುಜನರನ್ನು ಹಿಂಸಿಸಿ ಕೊಲ್ಲುವರು. ಈ ವಿಷಯದಲ್ಲಿ ಈ ಗುಣವು ಎಲ್ಲಾ ದೇವತೆಗಳಲ್ಲಿಯೂ ಕಂಡು ಬರುವುದರಿಂದ ದೇವತೆಗಳಲ್ಲಿ ಒಂದು ವಿಧನಾದ ಬಂಧುತ್ವವಿರುವುದೆಂದು ಹೇಳಲಾಗಿದೆ. **ಆಪ್ಯಂ** ಎಂಬ ಶಬ್ದವು ಹೊಂದು ಎಂಬರ್ಥವುಳ್ಳ ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಇಲ್ಲಿ ಬಂಧುತ್ವವೆಂಬರ್ಥವನ್ನು ಸೂಚಿಸುವುದು ಎಂದು ನಿರ್ವಚನವನ್ನು ಹೇಳಿದ್ದಾರೆ.

ಸುದತ್ರಃ ॥ ೫೪ ॥
ಸುದತ್ರಃ ಕಲ್ಯಾಣದಾನಃ॥ "ತ್ವಷ್ಟಾ ಸುದತ್ರೋ ವಿದಧಾತು ರಾಯಃ"
ಇತ್ಯಪಿ ನಿಗಮೋ ಭವತಿ ॥ ೨ ॥

**ಸುದತ್ರಃ**—ಈ ಶಬ್ದಕ್ಕೆ **ಸುದತ್ರಃ ಕಲ್ಯಾಣದಾನಃ ತ್ವಷ್ಟಾ ಸುದತ್ರೋ ವಿದಧಾತು ರಾಯಃ ಇತ್ಯಪಿ ನಿಗಮೋ ಭವತಿ** ॥ ಎಂದರೆ **ಸುದತ್ರ** ಎಂದರೆ ಉತ್ತಮವಾದ ದಾನವು ಉತ್ತಮ ವಸ್ತುಗಳನ್ನು ಕೊಡುವುದು ಎಂದಭಿಪ್ರಾಯವು. ಈ ವಿಷಯದಲ್ಲಿ **ತ್ವಷ್ಟಾ ಸುದತ್ರೋ ವಿದಧಾತು ರಾಯಃ** ಎಂಬ ಋಕ್ಕನ್ನು ಉದಾಹರಣೆಯಾಗಿ ಹೇಳಿರುವುದು—

**ತಾ ನೋ ರಾಸನ್ರಾತಿಷಾಚೋ ವಸೂನ್ಯಾ ರೋದಸೀ ವರುಣಾನಿ ಶೃಣೋತು ।**
**ವರೂತ್ರೀಭಿಃ ಸುಶರಣೋ ನೋ ಅಸ್ತು ತ್ವಷ್ಟಾ ಸುದತ್ರೋ ವಿದಧಾತು ರಾಯಃ ॥**
(ಋ. ಸಂ. ೭-೩೪-೨೨)

ಇದರ ಅರ್ಥವು—

ದಾನಯುಕ್ತರಾದ ದೇವಪತ್ನಿಯರು ನಮ್ಮಿಂದ ಅಪೇಕ್ಷಿತವಾದ ಧನಗಳನ್ನು ನಮಗೆ ಕೊಡಲಿ. ವರುಣನ ಪತ್ನಿಯು ನಮ್ಮ ಸ್ತುತಿಯನ್ನು ಕೇಳಲಿ. ದ್ಯಾವಾಪೃಥಿವಿಗಳೂ ನಮ್ಮ ಸ್ತುತಿಯನ್ನು ಕೇಳಲಿ. ಉತ್ತಮ ದಾನಿಯಾದ ತ್ವಷ್ಟೃವು

ಉಪದ್ರವಗಳನ್ನು ತಡೆಗಟ್ಟುವ ದೇವಪತ್ನಿಯರೊಡಗೂಡಿ ನಮಗೆ ಆಶ್ರಯದಾತನಾಗಿರಲಿ. ಮತ್ತು ನಮಗೆ ಧನಗಳನ್ನೂ ಒದಗಿಸಿಕೊಡಲಿ.

ಸುವಿದತ್ರಃ ॥೫೫॥

ಸುವಿದತ್ರಃ ಕಲ್ಯಾಣವಿದ್ಯಃ । "ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್"

ಇತ್ಯಪಿ ನಿಗಮೋ ಭವತಿ ॥ ೩ ॥

ಉದಾಹರಣೆಯ ಋಕ್ಕು—

**ಯೇ ತಾತೃಷುರ್ದೇವತ್ರಾ ಜೇಹಮಾನಾ ಹೋತ್ರಾವಿದಃ ಸ್ತೋಮತಷ್ಟಾಸೋ ಅರ್ಕೈಃ ।**

**ಆಗ್ನೇ ಯಾಹಿ ಸುವಿದತ್ರೇಭಿರರ್ವಾಙ್ ಸತ್ಯೈಃ ಕವ್ಯೈಃ ಪಿತೃಭಿರ್ಘರ್ಮಸದ್ಭಿಃ ॥**

(ಋ. ಸಂ. ೧೦-೧೫-೧೯)

ಇದರ ಅರ್ಥವು—

ಎಲೈ ಅಗ್ನಿಯೇ, ಯಥಾಕ್ರಮವಾಗಿ ದೇವತ್ವವನ್ನು ಹೊಂದಿದವರೂ ಯಾಗಕ್ರಮವನ್ನು ಅರಿತವರೂ ಸ್ತುತಿಗಳಿಂದ ಸ್ತೋಮವನ್ನು ಪರಿಷ್ಕರಿಸಿರುವವರೂ ಆದ ಯಾವ ಪಿತೃಗಳು ದೇವಸಂಬಂಧವನ್ನು ಇಚ್ಛಿಸುವರೋ ಅಂತಹ ಯಜ್ಞಕರ್ತೃಗಳೂ ಉತ್ತಮಜ್ಞಾನವುಳ್ಳವರೂ ಸತ್ಯಾತ್ಮಕರೂ ಮೇಧಾವಿಗಳೂ ಆದ ಪಿತೃಗಳೊಡನೆ ನಮಗಭಿಮುಖವಾಗಿ ದಯಮಾಡು.

**ಸುವಿದತ್ರೇಭಿಃ—ಸುವಿದತ್ರಃ ಕಲ್ಯಾಣವಿದ್ಯಃ । ಸುವಿದತ್ರ** ಎಂದರೆ ಉಪಕಾರಬುದ್ಧಿ ಅಥವಾ ಉದಾರಬುದ್ಧಿ, ಔದಾರ್ಯ ಎಂದರ್ಥವು.

ಆನುಷಕ್ ॥೫೬॥

ಆನುಷಗಿತಿ ನಾಮಾನುಪೂರ್ವಸ್ಯಾನುಷಕ್ತಂ ಭವತಿ । "ಸ್ತೃಣನ್ತಿ

ಬರ್ಹಿರಾನುಷಕ್" ಇತ್ಯಪಿ ನಿಗಮೋ ಭವತಿ ॥೪॥

**ಆನುಷಕ್** ಎಂದರೆ **ನಾಮಾನುಪೂರ್ವಸ್ಯ ವಚನಂ** ಒಂದಾಗುತ್ತಲೊಂದು, ಕ್ರಮ ಕ್ರಮವಾಗಿ, ಒಂದಾದಮೇಲೆ ಅದರ ಮುಂದಿನದು ಎಂದರ್ಥ.

ಉದಾಹರಣೆಯ ಋಕ್ಕು—

**ಆ ಘಾ ಯೇ ಅಗ್ನಿಮಿಂಧತೇ ಸ್ತೃಣಂತಿ ಬರ್ಹಿರಾನುಷಕ್ ।**

**ಯೇಷಾಮಿಂದ್ರೋ ಯುವಾ ಸಖಾ ॥**

(ಋ. ಸಂ. ೮-೪೫-೧)

ಇದರ ಅರ್ಥವು—

ಯಾವ ಋಷಿಗಳು ತಮಗೆ ಅಭಿಮುಖವಾಗಿಯೇ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವರೋ ಯಾರಿಗೆ ನಿತ್ಯ ತರುಣನಾದ ಇಂದ್ರನು ಮಿತ್ರನಾಗಿರುವನೋ ಅವರು ಯಥಾಕ್ರಮವಾಗಿ ಯಜ್ಞಕ್ಕಾಗಿ ದರ್ಭಾಸನವನ್ನು ಹರಡುತ್ತಾರೆ. ಎಂದರೆ ಯಜ್ಞವನ್ನು ಮಾಡುತ್ತಾರೆ.

**ಆನುಷಕ್—ಅನುಷಕ್ತಂ** ಎಂದರ್ಥವು. ಎಂದರೆ ಅನೇಕ ವಸ್ತುಗಳಿರುವಾಗ ಅವುಗಳಲ್ಲಿ ಒಂದು ಮತ್ತೊಂದನ್ನು ಎಡಬಿಡದೆ ಅನುಸರಿಸಿರುವುದು. ಒಂದರ ಪಕ್ಕದಲ್ಲಿ ಅದಕ್ಕೆ ಸೇರಿದಂತೆ ಮತ್ತೊಂದಿರುವುದು ಎಂದರ್ಥವು. ಮೇಲೆ

ಹೇಳಿರುವ **ಸ್ತೃಣಂತಿ ಬರ್ಹಿರಾನುಷಕ್** ಎಂಬ ವಾಕ್ಯದಲ್ಲಿ ಬರ್ಹಿ ಎಂಬ ಆಸನಾರ್ಥವಾಗಿ ಉಪಯೋಗಿಸುವ ಕತ್ತರಿಸಿದ ದರ್ಭೆಗಳನ್ನು ಅನುಕ್ರಮವಾಗಿ ಎಂದರೆ ದರ್ಭೆಗಳು ಒಂದಕ್ಕೊಂದು ಸೇರಿರುವಂತೆ ಒಂದರ ಪಕ್ಕದಲ್ಲಿ ಮತ್ತೊಂದು ಎಡಬಿಡದೆ ಅನುಸರಿಸಿರುವಂತೆ ಒತ್ತಾಗಿ ಹರಡುತ್ತಾರೆ ಎಂದರ್ಥವು. ಇಲ್ಲಿ ದರ್ಭೆಗಳಲ್ಲಿ ಪ್ರತಿಯೊಂದೂ ಅದರ ಪಕ್ಕದಲ್ಲಿರುವ ದರ್ಭೆಗೆ ಸ್ಪರ್ಶಮಾಡುತ್ತಾ ಎಡಬಿಡದೆ ಪತ್ತಾಗಿ ಹೊಂದಿಕೊಂಡಿರುವುದು. ಇಂತಹ ಅರ್ಥವನ್ನು ಸೂಚಿಸುವುದಕ್ಕಾಗಿ **ಆನುಷಕ್** ಎಂಬ ಪದವನ್ನು ಉಪಯೋಗಿಸಿರುವುದು ವಿಹಿತವಾಗಿದೆ.

ತುರ್ವಣಿಃ || ೫೭ ||
ತುರ್ವಣಿಸ್ತೂರ್ಣವನಿಃ | " ಸ ತುರ್ವಣಿರ್ಮಹಾँ ಅರೇಣುಪೌಂಸ್ಯೇ"
ಇತ್ಯಪಿ ನಿಗಮೋ ಭವತಿ || ೫ ||

**ತುರ್ವಣಿಃ—ಶತ್ರೂಣಾಂ ಹಿಂಸಿತಾ ಕ್ಷಿಪ್ರಕಾರೀ ವಾ ತುರ್ವಣಿಸ್ತುರ್ಣವನಿಃ|** ಜಾಗ್ರತೆಯಾಗಿ ಸ್ತುತಿಸುವವನು ಅಥವಾ ಇಂದ್ರನ ಪರವಾಗಿ ಅರ್ಥಮಾಡುವುದಾದರೆ—ಶತ್ರುಗಳನ್ನು ಜಾಗ್ರತೆಯಾಗಿ ಹಿಂಸಿಸುವವನು ಎಂದರ್ಥವು. ಇಂದ್ರನು ತನ್ನನ್ನು ಸ್ತುತಿಸುವವರಿಗೆ ಜಾಗ್ರತೆಯಾಗಿ ಫಲವನ್ನು ಕೊಡುವನು ಎಂಬರ್ಥವನ್ನು ಸೂಚಿಸುವದು.

ಉದಾಹರಣೆಯ ಋಕ್ಕು—

**ಸ ತುರ್ವಣಿರ್ಮಹಾँ ಅರೇಣು ಪೌಂಸ್ಯೇ ಗಿರೇರ್ಭೃಷ್ಟಿರ್ನ ಭ್ರಾಜತೇ ತುಜಾ ಶವಃ |**
**ಯೇನ ಶುಷ್ಣಂ ಮಾಯಿನಮಾಯಸೋ ಮದೇ ದುಧ್ರ ಆಭೂಷು ರಾಮಯನ್ನಿ ದಾಮನಿ ||**

ಇದರ ಅರ್ಥವು—

ಇಂದ್ರನು ಶೀಘ್ರಕರ್ಮಕಾರಿಯಾಗಿಯೂ ಪ್ರಭಾವಯುತನಾಗಿಯೂ ಇದ್ದಾನೆ. ಉಕ್ಕಿನ ಕವಚವನ್ನು ಧರಿಸಿದ ದೇಹವುಳ್ಳವನೂ ದುಷ್ಟ ಶತ್ರುಗಳನ್ನು ದಮನಮಾಡತಕ್ಕವನೂ ಆದ ಇಂದ್ರನು ಸೋಮರಸಪಾನದಿಂದ ಹರ್ಷಿತನಾದಾಗ ಯಾವ ಶಕ್ತಿಯಿಂದ ಸರ್ವಶೋಷಕನೂ ಮೋಸಗಾರನೂ ಆದ ರಾಕ್ಷಸನನ್ನು ಕಾರಾಗೃಹದಲ್ಲಿ ಬಂಧಕವಾದ ಸಂಕೋಲೆಯಲ್ಲಿ ಸಿಕ್ಕಿರುವಂತೆ ಮಾಡಿದನೋ ಆ ಬಲವು ವೀರರು ನಡೆಸತಕ್ಕ ಯುದ್ಧಕಾಲದಲ್ಲಿ ದೋಷರಹಿತವಾಗಿಯೂ ಶತ್ರುಹಿಂಸಕವಾಗಿಯೂ ಇದ್ದು ಪರ್ವತದ ಶಿಖರದೋಪಾದಿಯಲ್ಲಿ ಪ್ರಕಾಶಿಸುತ್ತದೆ.

ಗಿರ್ವಣಾಃ || ೫೮ ||
ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯನ್ತಿ |" ಜುಷ್ಟಂ
ಗಿರ್ವಣಸೇ ಬೃಹತ್" ಇತ್ಯಪಿ ನಿಗಮೋ ಭವತಿ || ೬ || ೧೪ ||

**ಗಿರ್ವಣಾಃ**—ಗಿರ್ವಣಾಃ ಎಂದರೆ ದೇವನು. **ಗೀರ್ಭಿಃ**—ವಾಕ್ಯಗಳಿಂದ ಯಾರನ್ನು ಸ್ತುತಿಸುವರೋ ಅಂತಹ ಸ್ತುತಿಗೆ ಅರ್ಹನಾದ ದೇವನು ಎಂದರ್ಥವು.

ಉದಾಹರಣೆಯ ಋಕ್ಕು—

**ಆನೂನು ಪಕ್ವನ್ಮೈರಯ ಆ ಸೂರ್ಯಂ ರೋಹಯೋ ದಿವಿ |**
**ಘರ್ಮಂ ನ ಸಾಮನ್ತಪತಾಸುವೃಕ್ತಿಭಿರ್ಜುಷ್ಟಂ ಗಿರ್ವಣಸೇ ಬೃಹತ್ ||**

ಇದರ ಅರ್ಥವು—

ಎಲೈ ಇಂದ್ರನೇ, ಇದುವರೆಗೂ ಹಾಲನ್ನು ಕೊಡದಿರುವುದೂ ಈಗ ತಾನೇ ಕರುವನ್ನು ಹಾಕಿರುವುದೂ ಆದ ಗೋವಿನ ಕೆಚ್ಚಲುಗಳಲ್ಲಿ ಹಾಲು ತುಂಬಿಕೊಳ್ಳುವಂತೆ ಮಾಡುತ್ತೀಯೆ. ಅಂತರಿಕ್ಷದಲ್ಲಿ ಸೂರ್ಯನನ್ನು ಸ್ಥಾಪಿಸಿ ಸರ್ವತ್ರ ಪ್ರಕಾಶಿಸುವಂತೆ ಮಾಡಿದ್ದೀಯೆ. ಎಲೈ ಸ್ತೋತೃಜನರೇ, ಇಂದ್ರನನ್ನು ಸ್ತೋತ್ರಾದಿಗಳಿಂದ ಸ್ತುತಿಸಿ ಮತ್ತು ಘರ್ಮೇಷ್ಟಿಯಲ್ಲಿ ಸಾಮಗಾನದಿಂದ ವೃದ್ಧಿಪಡಿಸುವಂತೆ ಸ್ತುತಿವಾಕ್ಯಗಳಿಗೆ ಮೆಚ್ಚಿ ಒಲಿಯುವ ಇಂದ್ರನನ್ನು ಅವನಿಗೆ ಹಿತಕರವಾದ ಬೃಹತ್ಸಾಮವೆಂಬ ಸಾಮಮಂತ್ರದಿಂದ ಗಾನಮಾಡಿ ಸ್ತುತಿಸಿರಿ.

**ಗಿರ್ವಣಸೇ**—ಈ ಶಬ್ದಕ್ಕೆ ಯಾಸ್ಕರು ಈ ರೀತಿ ನಿರುಕ್ತವನ್ನು ಹೇಳಿದ್ದಾರೆ—**ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ । ಜುಷ್ಟಂ ಗಿರ್ವಣಸೇ ಬೃಹತ್ ಇತ್ಯಪಿ ನಿಗಮೋ ಭವತಿ ।** (ನಿ. ೬–೧೪) ಗಿರ್ವಣಾಃ ಎಂದರೆ ದೇವನು. ಸ್ತುತಿವಾಕ್ಯಗಳಿಂದ ಈ ದೇವನನ್ನು ಒಲಿಸಿ ಪಡೆಯುವರು. ಎಂದರೆ ಸ್ತುತಿಗಳಿಗೆ ಮೆಚ್ಚಿ ಸ್ತೋತೃಜನರಿಗೆ ಒಲಿದು ಅವರ ಇಷ್ಟಾರ್ಥಗಳನ್ನು ಪೂರೈಸುವವನಾದ್ದರಿಂದ ಗಿರ್ವಣಾಃ ಎಂದರೆ ದೇವನು ಎಂದರ್ಥವು. ಈ ವಿಷಯದಲ್ಲಿ **ಜುಷ್ಟಂ ಗಿರ್ವಣಸೇ ಬೃಹತ್** ಎಂಬ ಪ್ರಕೃತ ಋಕ್ಕಿನ ವಾಕ್ಯವೇ ಉದಾಹರಣೆಯಾಗಿರುವುದು ಎಂದು ಹೇಳಿದ್ದಾರೆ.

**ಆಮಾಸು ಪಕ್ವಂ ಐರಯಃ**—ಇನ್ನೂ ಕರುಹಾಕದಿರುವ ಅಥವಾ ಆಗ ತಾನೇ ಕರುಹಾಕಿದ ಗೋವುಗಳಲ್ಲಿ ಇದುವರೆಗೂ ಇಲ್ಲದಿದ್ದ ಪರಿಪಕ್ವವಾದ ಎಂದರೆ ಪಾನಾರ್ಹವಾದ ಹಾಲನ್ನು ತಾನಾಗಿಯೇ ತುಂಬಿಕೊಳ್ಳುವಂತೆ ಪ್ರೇರಿಸುತ್ತೀಯೆ ಎಂದು ಇಂದ್ರನ ಮಹಿಮಾತಿಶಯವನ್ನು ವರ್ಣಿಸಿದೆ. ಈ ವಿಷಯದಲ್ಲಿ ಭಾಷ್ಯಕಾರರು—**ಆಮಾಸು ಚಿದ್ದಧಿಷೇ ಪಕ್ವಮಂತ್ಯ** (ಋ. ಸಂ. ೧–೬೨–೯) ಎಂದು ಶ್ರುತಿವಾಕ್ಯವನ್ನು ಉದಾಹರಿಸಿದ್ದಾರೆ.

**ಆ ಸೂರ್ಯಂ ರೋಹಯೋ ದಿವಿ**–ಎಲೈ ಇಂದ್ರನೇ, ನೀನು ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿ ಪ್ರಕಾಶಿಸುವಂತೆ ಮಾಡಿದ್ದೀಯೆ. ಇದೂ ನಿನ್ನ ಮಹಿಮಾತಿಶಯವು. ಈ ವಿಷಯದಲ್ಲಿ ಭಾಷ್ಯಕಾರರು ಒಂದು ಪೂರ್ವೇತಿಹಾಸವನ್ನು ಹೇಳಿರುವರು—

> **ಪೂರ್ವಂ ಪಣಯೋನಾಮಾಸುರಾ ಅಂಗಿರಸಾಂ ಗಾ ಅಪಹೃತ್ಯಾಂಧಕಾರಾವೃತೇ ಕಸ್ಮಿಂಶ್ಚಿತ್ಪರ್ವತೇ ತಾಃ ಸ್ಥಾಪಿತವಂತಃ । ತತೋಽಙ್ಗಿರಸ ಇಂದ್ರಂ ಸ್ತುತ್ವಾ ಗಾಃ ಪುನರಸ್ಮಭ್ಯಮಾಹರೇತಿ ತೈರುಕ್ತ ಇಂದ್ರೋ ಗವಾಂ ಸ್ಥಾನಂ ತಮಸಾವೃತಂ ದೃಷ್ಟ್ವಾ ತತ್ರ ಗೋದರ್ಶನಾಯಾ ದ್ಯುಲೋಕೇ ಸರ್ವಪ್ರಕಾಶಕಂ ಸೂರ್ಯಮಾರೋಹಿತವಾನ್ ॥**

ಪೂರ್ವದಲ್ಲಿ ಪಣಿಗಳೆಂಬ ಅಸುರರು ಅಂಗಿರಾಋಷಿಗಳ ಗೋವುಗಳನ್ನು ಅಪಹರಿಸಿ ಅವುಗಳನ್ನು ಪರ್ವತದ ರಹಸ್ಯ ಸ್ಥಳದಲ್ಲಿ ಎಂದರೆ ಗುಹೆಯಲ್ಲಿ ಬಚ್ಚಿಟ್ಟಿದ್ದರು. ಆಗ ಆ ಋಷಿಗಳು ತಮ್ಮ ಗೋವುಗಳನ್ನು ತಂದುಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿ ಇಂದ್ರನು ಗೋವುಗಳಿದ್ದ ಸ್ಥಾನವನ್ನು ಕಂಡುಹಿಡಿದು ಅವುಗಳನ್ನು ಬಿಡಿಸಿ ಈಚೆಗೆ ತರುವುದಕ್ಕಾಗಿ ಅಲ್ಲಿ ಕವಿದುಕೊಂಡಿದ್ದ ಗಾಢವಾದ ಕತ್ತಲೆಯನ್ನು ಹೋಗಲಾಡಿಸಲು ಬೇಕಾಗುವಂತೆ ಸೂರ್ಯನನ್ನು ಅಂತರಿಕ್ಷದಲ್ಲಿ ಬೆಳಗುವಂತೆ ಸ್ಥಾಪಿಸಿದನು. ಆ ಸೂರ್ಯನ ಪ್ರಕಾಶದಿಂದ ಗುಹೆಯಲ್ಲಿ ಬೆಳಕುಂಟಾಗಿ ಅಲ್ಲಿದ್ದ ಗೋವುಗಳನ್ನು ಬಿಡಿಸಿ ತಂದು ಅಂಗಿರಾಋಷಿಗಳಿಗೆ ಕೊಟ್ಟನೆಂದು ಪೂರ್ವೇತಿಹಾಸದ ವಿಷಯದಲ್ಲಿ **ಆ ಸೂರ್ಯಮಾರೋಹಯೋ ದಿವಿ** ಎಂಬ

ವಾಕ್ಯವು ಈ ಋಕ್ಕಿನಲ್ಲಿ ಉಕ್ತವಾಗಿದೆ. ಈ ಇತಿಹಾಸದ ಪ್ರಸ್ತಾಪವು ಋಗ್ವೇದದ ಅನೇಕ ಋಕ್ಕುಗಳಲ್ಲಿ ಅಲ್ಲಲ್ಲಿ ಉಕ್ತವಾಗಿರುವುದು.

**ಇತಿ ಚತುರ್ದಶಃ ಖಂಡಃ**

ಇಲ್ಲಿಗೆ ಹದಿನಾಲ್ಕನೆಯ ಖಂಡವು ಸಮಾಪ್ತವು

---

## || ಪಂಚದಶಃ ಖಂಡಃ ||

**ಹದಿನೈದನೆಯ ಖಂಡವು**

ಅಸೂರ್ತೇ ಸೂರ್ತೇ ರಜಸಿ ನಿಷತ್ತೇ ಯೇ ಭೂತಾನಿ ಸಮಕೃಣ್ವನ್ನಿಮಾನಿ । ಅಸುಸಮೀರಿತಾಃ ಸುಸಮೀರಿತೇ ವಾತಸಮೀರಿತಾ ಮಾಧ್ಯಮಕಾ ದೇವಗಣಾ ಯೇ ರಸೇನ ಪೃಥಿವೀಂ ತರ್ಪಯನ್ತೋ ಭೂತಾನಿ ಚ ಕುರ್ವನ್ತಿ ತ ಆಯಜನ್ತೇತ್ಯತಿಕ್ರಾನ್ತಂ ಪ್ರತಿವಚನಂ । ಅಮ್ಯಕ್ಸಾ ತ ಇಂದ್ರ ಋಷ್ಟಿಃ । ಅಮಾಕ್ತೇತಿ ವಾಭ್ಯಕ್ತೇತಿ ವಾ ಯಾದೃಶ್ಮಿನ್ಧಾಯಿ ತಮಪಸ್ಯಯಾವಿದತ್ । ಯಾದೃಶೇಽಧಾಯಿ ತಮಪತ್ಯಯಾವಿದತ್ । ಉಸ್ರಃ ಪಿತೇವ ಜಾರಯಾಯಿ ಯಜ್ಞೈಃ । ಉಸ್ರ ಇವ ಗೋಪಿತಾಜಾಯಿ ಯಜ್ಞೈಃ ॥ ೧೫ ॥

---

ಅಸೂರ್ತೇ ಸೂರ್ತೇ ॥೫೯॥

"ಅಸೂರ್ತೇ ಸೂರ್ತೇ ರಜಸಿ ನಿಷತ್ತೇ ಯೇ ಭೂತಾನಿ ಸಮಕೃಣ್ವನ್ನಿಮಾನಿ ।" ಅಸುಸಮೀರಿತಾಃ ಸುಸಮೀರಿತೇ ವಾತಸಮೀರಿತಾ ಮಾಧ್ಯಮಕಾ ದೇವಗಣಾಸ್ತೇ ರಸೇನ ಪೃಥಿವೀಂ ತರ್ಪಯನ್ತೋ ಭೂತಾನಿ ಚ ಕುರ್ವನ್ತಿ ತ ಆಯಜನ್ತೇತ್ಯತಿಕ್ರಾನ್ತಂ ಪ್ರತಿವಚನಮ್ ॥೧॥

ಉದಾಹರಣೆಯ ಋಕ್ಕು—

ತ ಆಯಜಂತ ದ್ರವಿಣಂ ಸಮಸ್ಮಾ ಋಷಯಃ ಪೂರ್ವೇ ಜರಿತಾರೋ ನ ಭೂನಾ ।
ಅಸೂರ್ತೇ ಸೂರ್ತೇ ರಜಸಿ ನಿಷತ್ತೇ ಯೇ ಭೂತಾನಿ ಸಮಕೃಣ್ವನ್ನಿಮಾನಿ ॥
(ಋ. ಸಂ. ೧೦-೮೨-೪)

ಇದರ ಅರ್ಥವು—

ಯಾವ ಮಹರ್ಷಿಗಳು ಚೈತನ್ಯರಹಿತವಾದುದೂ, ಚೈತನ್ಯಯುಕ್ತವಾದುದೂ ಆದ ಲೋಕದಲ್ಲಿ ಇರತಕ್ಕ ಸಕಲ ಪ್ರಾಣಿಗಳನ್ನು ಸಂಸ್ಕರಿಸಿದರೋ ಅಂತಹ ಪ್ರಾಚೀನರಾದ ಋಷಿಗಳು ಅಧಿಕವಾದ ಸ್ತೋತ್ರದಿಂದ ಸ್ತುತಿಕರ್ತರು ಪೂಜಿಸುವಂತೆ ವಿಶ್ವಕರ್ಮನನ್ನುದ್ದೇಶಿಸಿ ಚರುಪುರೋಡಾಶಾದಿಗಳಿಂದ ಸರ್ವತ್ರ ಪೂಜಿಸುತ್ತಾರೆ.

ಇದೇ ಸೂಕ್ತದಲ್ಲಿ ಮೇಲೆ ೨ ನೇ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಇಂದ್ರಿಯರೂಪರಾದ ಋಷಿಗಳು ಪ್ರಾಣ ರೂಪನಾದ ಪ್ರಜಾಪತಿಯ ಸೇವೆಯನ್ನು ಮಾಡಿ, ಆ ಸೇವೆಯ ಫಲವಾಗಿ ತಾವೇ ತೃಪ್ತಿಯನ್ನು ಹೊಂದಿದ ಮತ್ತು ಹೊಂದುವ ಕ್ರಮವನ್ನು ತಿಳಿಸಿ. ಅದರ ವಿವರಣವನ್ನು ಈ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸುವುದಾಗಿ ಹೇಳಿದೆ. ಇಂದ್ರಿಯರೂಪವಾದ ಋಷಿಗಳು ಯಜ್ಞಮಾಡುವ ಕ್ರಮ ಅದರಿಂದ ಲಭಿಸುವ ತೃಪ್ತಿ ಇದರ ಸ್ವರೂಪವೇನು ಇತ್ಯಾದಿಗಳನ್ನು ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿ ವಿವರಿಸಿದೆ.

ಋಷಿಗಳು ಯಜ್ಞರೂಪವಾದ ಸೇವೆಯನ್ನಾಚರಿಸಿದಾಗ ವಿಶ್ವಕರ್ಮರೂಪನಾದ ಪ್ರಜಾಪತಿಗೆ ತೃಪ್ತಿಯುಂಟಾಯಿತು ಎಂಬುದು ಒಂದರ್ಥ. ಅಥವಾ ಋಷಿಸಂಜ್ಞಕವಾದ ಇಂದ್ರಿಯಗಳ ಸೇವೆಯಿಂದ ಪ್ರಾಣರೂಪನಾದ ಆತ್ಮನಿಗೆ ತೃಪ್ತಿಯೆಂಬುದು ಇನ್ನೊಂದರ್ಥ. ಯಜ್ಞಫಲವಾದ ತೃಪ್ತಿಯು ಹೇಗೆ ಮತ್ತು ಸಕಲ ಜಗತ್ತನ್ನೂ ವ್ಯಾಪಿಸಿರುವ ಪ್ರಾಣರೂಪನಾದ ಆತ್ಮನಿಗೆ ಪರಿಪೂರ್ಣವಾದ ತೃಪ್ತಿಯು ಹೇಗೆ ಎಂಬ ವಿಷಯವನ್ನು ಛಾಂದೋಗ್ಯದಲ್ಲಿ ಈ ರೀತಿ ತಿಳಿಸಿದೆ.

**ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಾಂ ಸ ಯಾಂ ಪ್ರಥಮಾಮಾಹುತಿಂ ಜುಹುಯಾತ್ಪ್ರಾಣಾಯ ಸ್ವಾಹೇತಿ ಪ್ರಾಣಸ್ತೃಪ್ಯತಿ ।**

(ಛಾ. ಉ. ೫–೧೯–೧)

ಯಾವ ಚರುಪುರೋಡಾಶಾದಿರೂಪವಾದ ಅನ್ನಾಹುತಿಯನ್ನು ಪ್ರಕೃತವಾದ ಋಕ್ಕಿನಲ್ಲಿ ದ್ರವಿಣವೆಂದು ನಿರ್ದೇಶಿಸಿದ್ದಾರೆಯೋ ಅದೇ ಪ್ರಥಮತಃ ಅರ್ಪಿತವಾದ ಆಹುತಿಯನ್ನು ಪ್ರಾಣವನ್ನುದ್ದೇಶಿಸಿ ಅರ್ಪಿಸಬೇಕು. ಆಗ ಪ್ರಾಣಕ್ಕೆ ತೃಪ್ತಿಯು. ಇಲ್ಲಿ ಪ್ರಾಣವೆಂದರೆ ಕೇವಲ ವೈಯಕ್ತಿಕವಾದ ಒಂದು ಪ್ರಾಣದ ತೃಪ್ತಿಮಾತ್ರವಲ್ಲ. ಪ್ರಾಣಕ್ಕೂ ಪ್ರಾಣಸಂಬಂಧವಾದ ವಿಶ್ವದ ಇತರ ವಸ್ತುಗಳಿಗೂ ತೃಪ್ತಿಯೆಂದರ್ಥವು. ಅದು ಹೇಗೆಂದರೆ—

**ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾದಿತ್ಯೇ ತೃಪ್ಯತಿ ದ್ಯೌಸ್ತೃಪ್ಯತಿ ದಿವಿ ತೃಪ್ಯಂತ್ಯಾಂ ಯತ್ಕಿಂಚ ದ್ಯೌಶ್ಚಾದಿತ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೧೯-೨)

ಪ್ರಾಣಕ್ಕೆ ತೃಪ್ತಿಯುಂಟಾದರೆ, ಚಕ್ಷುಸ್ಸಿಗೆ ತೃಪ್ತಿ. ಚಕ್ಷುಸ್ಸಿನ ತೃಪ್ತಿಯ ಫಲವಾಗಿ ಆದಿತ್ಯನಿಗೆ ತೃಪ್ತಿ. ಆದಿತ್ಯನಿಗೆ ತೃಪ್ತಿಯಾದುದರಿಂದ ದ್ಯುಲೋಕಕ್ಕೆ ತುಷ್ಟಿ. ಆಗ ದ್ಯುಲೋಕದ ಆಶ್ರಯದಲ್ಲಿಯೂ ಮತ್ತು ಆದಿತ್ಯನ ಆಶ್ರಯದಲ್ಲಿಯೂ ಯಾವ ವಸ್ತುಗಳಿರುವುವೋ ಅವೆಲ್ಲವೂ ಸಂತುಷ್ಟಿಯನ್ನು ಹೊಂದುತ್ತವೆ. ಇವುಗಳ ಜೊತೆಯಲ್ಲಿ ಪ್ರಾಣರೂಪನಾದ ಆತ್ಮನೂ ಸಹ, ಪ್ರಜಾಪಶುಸಂಪತ್ತುಗಳೊಡನೆ ವೃದ್ಧಿಯನ್ನು ಹೊಂದುವುದಲ್ಲದೆ ಉತ್ತಮವಾದ ಜ್ಞಾನವನ್ನೂ ಹೊಂದುತ್ತಾರೆ.

**ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ ಸ್ವಾಹೇತಿ ವ್ಯಾನಸ್ತೃಪ್ಯತಿ । ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚಂದ್ರಮಾಸ್ತೃಪ್ಯತಿ ಚಂದ್ರಮಸಿ ತೃಪ್ಯತಿ ದಿಶಸ್ತೃಪ್ಯಂತಿ ದಿಕ್ಷು ತೃಪ್ಯಂತೀಷು ಯತ್ಕಿಂಚ ದಿಶಶ್ಚ ಚಂದ್ರಮಾಶ್ಚಾಧಿಷ್ಠಂತಿ ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೨೧)

ಅನಂತರ ಎರಡನೆಯ ಆಹುತಿಯು ವ್ಯಾನಕ್ಕೆ ಅರ್ಪಿತವಾಗತಕ್ಕದ್ದು. ವ್ಯಾನಕ್ಕೂ ನಿಕಟವಾದ ಸಂಬಂಧವಿರುವುದರಿಂದ ಶ್ರೋತ್ರೇಂದ್ರಿಯವು ತೃಪ್ತಿಗೊಳ್ಳುತ್ತದೆ. ಅದರ ಫಲವಾಗಿ ಚಂದ್ರನಿಗೆ ತೃಪ್ತಿ. ಚಂದ್ರನಿಗೆ ಹರ್ಷವುಂಟಾದುದರಿಂದ ದಿಕ್ಕುಗಳೆಲ್ಲವೂ ತುಷ್ಟಿಗೊಳ್ಳುತ್ತವೆ. ದಿಕ್ಕುಗಳ ತೃಪ್ತಿಯ ಫಲವಾಗಿ ಚಂದ್ರನನ್ನೂ ದಿಕ್ಕುಗಳನ್ನೂ ಆಶ್ರಯಿಸಿರುವ ಸಕಲ ವಸ್ತುಗಳಿಗೂ ಸಂತೃಪ್ತಿಯು. ತತ್ಫಲವಾಗಿ ಆಹುತಿಕರ್ತನಾದ ಆತ್ಮನಿಗೆ ಪಶುಪುತ್ರಾದಿಸಂಪದ್ವೃದ್ಧಿಯೂ ಉತ್ತಮವಾದ ಜ್ಞಾನ ಲಾಭವೂ ಆಗುತ್ತದೆ.

**ಅಥ ಯಾಂ ತೃತೀಯಾಂ ಜುಹುಯಾತ್ತಾಂ ಜುಹುಯಾದಪಾನಾಯ ಸ್ವಾಹೇತ್ಯಪಾನಸ್ತೃಪ್ಯತಿ ಅಪಾನೇ ತೃಪ್ಯತಿ ವಾಕ್ ತೃಪ್ಯತಿ ವಾಚಿ ತೃಪ್ಯಂತ್ಯಾಮಗ್ನಿಸ್ತೃಪ್ಯತ್ಯಗ್ನೌ ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯಂತ್ಯಾಂ ಯತ್ಕಿಂಚ ಪೃಥಿವೀ ಚಾಗ್ನಿಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೨೧)

ಮೂರನೆಯ ಆಹುತಿಯು ಅಪಾನವನ್ನುದ್ದೇಶಿಸಿ ಅರ್ಪಿತವಾಗತಕ್ಕದ್ದು. ಅದರಿಂದ ಅಪಾನಕ್ಕೆ ತೃಪ್ತಿಯು. ಅಪಾನಕ್ಕೆ ತೃಪ್ತಿಯಾದುದರಿಂದ ವಾಕ್ಕಿಗೆ ಸಂತುಷ್ಟಿಯು ಲಭಿಸುತ್ತದೆ. ವಾಕ್ಕಿನ ತೃಪ್ತಿಯ ಫಲವಾಗಿ ಅಗ್ನಿಗೆ ತೃಪ್ತಿಯು ಲಭಿಸುತ್ತದೆ. ಆಗ ಪೃಥ್ವಿಗೆ ತೃಪ್ತಿ. ಅದರ ಫಲವಾಗಿ ಆಹುತಿಯನ್ನರ್ಪಿಸುವ ಆತ್ಮನಿಗೆ ಪಶುಪುತ್ರರೂಪನಾದ ಸಂಪದ್ವೃದ್ಧಿ ಮತ್ತು ಉತ್ತಮವಾದ ಜ್ಞಾನವೃದ್ಧಿ.

**ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ಸಮಾನಾಯ ಸ್ವಾಹೇತಿ ಸಮಾನಸ್ತೃಪ್ಯತಿ । ಸಮಾನೇ ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯಂತ್ಯಾಂ ಯತ್ಕಿಂಚ ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನು ತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥**

(ಛಾ. ಉ. ೫-೨೧)

ನಾಲ್ಕನೆಯ ಆಹುತಿಯು ಸಮಾನವನ್ನುದ್ದೇಶಿಸಿ ಅರ್ಪಿಸಲ್ಪಡತಕ್ಕದ್ದು. ಅದರಿಂದ ಸಮಾನಕ್ಕೆ ತೃಪ್ತಿಯು ಲಭಿಸುತ್ತದೆ. ಸಮಾನದ ತೃಪ್ತಿಯಿಂದ ಮನಸ್ಸಿಗೆ ತೃಪ್ತಿ. ಮನಸ್ಸಿನ ತೃಪ್ತಿಯಿಂದ ಪರ್ಜನ್ಯನಿಗೆ ತೃಪ್ತಿ. ಪರ್ಜನ್ಯರ ತೃಪ್ತಿಯಿಂದ ವಿದ್ಯುತ್ತಿಗೆ ಸಂತುಷ್ಟಿ. ಈ ತೃಪ್ತಿಯ ಫಲವಾಗಿ ಪರ್ಜನ್ಯ ಮತ್ತು ವಿದ್ಯುತ್ತನ್ನು ಆಶ್ರಯಿಸಿರುವ ಸಕಲವಸ್ತುಗಳಿಗೂ ಸಂತೃಪ್ತಿಯು. ಅದರ ಫಲವಾಗಿ, ಈ ಆಹುತಿಯನ್ನರ್ಪಿಸುವ ಆತ್ಮನು ಪಶುಪುತ್ರಾದಿಸಂಪತ್ತನ್ನೂ ಉತ್ತಮವಾದ ಜ್ಞಾನವನ್ನೂ ಹೊಂದುತ್ತಾರೆ.

**ಅಥ ಯಾಂ ಪಂಚಮೀಂ ಜುಹುಯಾತ್ತಾಂ ಜುಹುಯಾದುದಾನಾಯ ಸ್ವಾಹೇತ್ಯುದಾನ-ಸ್ತೃಪ್ಯತಿ । ಉದಾನೇ ತೃಪ್ಯತಿ ತ್ವಕ್‌ತೃಪ್ಯತಿ ತ್ವಚಿ ತೃಪ್ಯಂತ್ಯಾಂ ವಾಯುಸ್ತೃಪತಿ ವಾಯೌ ತೃಪ್ಯತ್ಯಾಕಾಶಸ್ತೃಪ್ಯತಿ ಆಕಾಶೇ ತೃಪ್ಯತಿ ಯತ್ಕಿಂಚ ವಾಯುಶ್ಚಾಕಾಶಶ್ಚಾಧಿತಿಷ್ಠತಸ್ತ-ತ್ತೃಪತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನ ॥**

(ಛಾ. ಉ. ೫.೨೩)

ಐದನೆಯ ಆಹುತಿಯು ಉದಾನವನ್ನುದ್ದೇಶಿಸಿ ಅರ್ಪಿತವಾಗತಕ್ಕದ್ದು. ಅದರಿಂದ ಉದಾನಕ್ಕೆ ತೃಪ್ತಿಯು. ಉದಾನದ ತೃಪ್ತಿಯಿಂದ ತ್ವಕ್ಕಿನ (ಚರ್ಮಾವಯವದ) ಸಂತೃಪ್ತಿಯುಂಟಾಗುತ್ತದೆ. ತ್ವಕ್ಕಿನ ತೃಪ್ತಿಯಿಂದ ವಾಯುವಿಗೆ ತುಷ್ಟಿಯು. ಅದರಿಂದ ಆಕಾಶಕ್ಕೆ ತೃಪ್ತಿಯು. ಇದರ ಫಲವಾಗಿ ವಾಯು ಮತ್ತು ಆಕಾಶಗಳನ್ನು ಆಶ್ರಯಿಸಿರುವ ಸಕಲ ವಸ್ತುಗಳಿಗೂ ತೃಪ್ತಿ. ತತ್ಫಲವಾಗಿ ಈ ಆಹುತಿಯನ್ನರ್ಪಿಸಿದ ಆತ್ಮನು ಪಶುಪುತ್ರಾದಿಸಂಪತ್ತನ್ನೂ, ತೇಜಸ್ಸನ್ನೂ, ಬ್ರಹ್ಮವರ್ಚಸ್ಸನ್ನೂ ಹೊಂದುತ್ತಾನೆ. ಇತ್ಯಾದಿಯಾಗಿ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಆಹುತ್ಯರ್ಪಣದ ಕ್ರಮವನ್ನೂ, ಹಿಂದೆ ಇದೇ ಸೂಕ್ತದ ಎರಡನೆಯ ಋಕ್ಕಿನಲ್ಲಿ ಹೇಳಿರುವ ತೃಪ್ತಿಯ ಕ್ರಮವನ್ನೂ ವಿವರಿಸಿದೆ.

**ಅಸೂರ್ತೇ ಸೂರ್ತೇ ರಜಸಿ** ಎಂಬ ವಾಕ್ಯಕ್ಕೆ ಎರಡು ವಿಧವಾದ ಅರ್ಥವನ್ನು ತಿಳಿಸಿದೆ. **ಸೂರ್ತ** ಶಬ್ದಕ್ಕೆ ಚಲನಸ್ವರೂಪವುಳ್ಳದ್ದೆಂದರ್ಥ. ಚಲನಾತ್ಮಕವಾದ ಎಂದರೆ ಜಂಗಮಾತ್ಮಕವಾದ ಪ್ರಪಂಚ ಮತ್ತು ಚಲನವಿಲ್ಲದ ಸ್ಥಾವರಾತ್ಮಕವಾದ ಪ್ರಪಂಚ. ಇವು **ಸೂರ್ತ** ಮತ್ತು **ಅಸೂರ್ತ** ಶಬ್ದಗಳಿಂದ ನಿರ್ದೇಶಿಸಲ್ಪಡುತ್ತವೆ. ಋಷಿಗಳು ಸ್ಥಾವರ ಮತ್ತು ಜಂಗಮಾತ್ಮಕವಾದ ಸಕಲ ಲೋಕಗಳನ್ನೂ ವಿಶ್ವಕರ್ಮನ ಸ್ಥಾನವೆಂದರಿತು ಸರ್ವತ್ರ ವಿಶ್ವಕರ್ಮನ ವ್ಯಾಪಕತ್ವವನ್ನು ಸಾಕ್ಷಾತ್ಕರಿಸಿ ಅವನನ್ನು ಪೂಜಿಸಿದರು ಎಂದು ಒಂದರ್ಥ.

ಎರಡನೆಯದಾಗಿ ಋಷಿರೂಪರಾದರಶ್ಮಿಗಳ ಆದಿತ್ಯಪೂಜೆ. ಋಷಿ ಶಬ್ದಕ್ಕೆ ಅತೀಂದ್ರಿಯಾಜ್ಞಾನ ಶಕ್ತಿಯುಳ್ಳ ಸೂರ್ಯರಶ್ಮಿಗಳು ಎಂದರ್ಥ. ಈ ರಶ್ಮಿಗಳು ಆದಿತ್ಯರೂಪನಾದ ವಿಶ್ವಕರ್ಮನಿಗೆ ಪೂಜೆಯನ್ನರ್ಪಿಸುತ್ತವೆ. ಹೇಗೆಂದರೆ ಪ್ರಥಮತಃ ಆದಿತ್ಯನಿಂದ ಪ್ರಸರಿಸಿದ ರಶ್ಮಿಗಳು ಸ್ಥಾವರಜಂಗಮಾತ್ಮಕವಾದ ಸಕಲ ಲೋಕಗಳನ್ನೂ ತಮ್ಮ ತೇಜಸ್ಸಿನಿಂದ ವ್ಯಾಪಿಸುತ್ತವೆ. ಅನಂತರ ಪುನಃ ಅದೇ ಲೋಕಗಳ ಸಾರಗಳನ್ನು ಹೀರಿ ಆ ಸಾರರೂಪವಾದ ದ್ರವ್ಯದಿಂದ ಆದಿತ್ಯನಿಗೆ ಪೂಜೆಯನ್ನರ್ಪಿಸುತ್ತವೆ ಎಂದು ತಾತ್ಪರ್ಯ.

ಹೀಗೆ ಪ್ರಥಮತಃ ಪ್ರಸರಿಸಿ ಸಕಲ ಲೋಕಗಳನ್ನೂ ವ್ಯಾಪಿಸಿ ತೇಜಸ್ಸನ್ನು ಹರಡುವ ಕಾರ್ಯವೊಂದು. ಅದು ಹೇಗೆಂದರೆ—

**ಅಸಾವಾದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ । ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಃ । ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾವಾ ಏತಾ ಋಚಃ ।................ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತ-ದಾದಿತ್ಯಸ್ಯ ರೋಹಿತಂ ರೂಪಂ ॥**

(ಛಾ. ಉ. ೩.೧)

ಸಕಲ ದೇವತೆಗಳನ್ನೂ ಒಳಗೊಂಡ ಆದಿತ್ಯನೇ ದೇವಮಧುವು. ಈ ಮಧುವಿಗೆ ವೃಕ್ಷವಾವುದೆಂದರೆ, ದ್ಯುಲೋಕವು. ಅಂತರಿಕ್ಷವೇ ಗೂಡು. ರಶ್ಮಿಗಳೇ ಪುತ್ರರು. ಪೂರ್ವದಿಕ್ಕಿಗೆ ಹರಡುವ ರಶ್ಮಿಗಳು ಪೂರ್ವದಿಕ್ಕಿನ ಮಧುನಾಡಿಗಳು. ಋಕ್ಕುಗಳೇ ಭ್ರಮರಗಳು. ಋಗ್ವೇದವೇ ಪುಷ್ಪ. ಯಜ್ಞದಲ್ಲಿ ಅರ್ಪಿತವಾದ ಆಜ್ಯಪಯೋರೂಪಗಳಾದ ಆಹುತಿಗಳೇ ಅಮೃತಬಿಂದುಗಳು. ಋಙ್ಮಂತ್ರಗಳು ಪಕ್ವವಾದನಂತರ ಯಶಸ್ಸೂ, ತೇಜಸ್ಸೂ, ಇಂದ್ರಿಯವೂ, ವೀರ್ಯವೂ, ಶಕ್ತಿಯೂ, ರಸವೂ ಯಾಗಾದಿ ಕರ್ಮಗಳಿಂದ ಉತ್ಪನ್ನವಾಗಿ ಅನಂತರ ಜಲರೂಪವಾದ ರಸಗಳೆಲ್ಲವೂ ಆದಿತ್ಯನಿಗೆ ಅಭಿಮುಖವಾಗಿ ಪ್ರಸರಿಸಿ ಅವನನ್ನೇ ಪುನಃ ಸೇರುತ್ತವೆ. ಇದೇ ಆದಿತ್ಯನ ರಕ್ತಬಿಂಬದ ಆಕರ್ಷಕವಾದ ರೂಪಕ್ಕೆ ಹೇತುಗಳು. (ಇಲ್ಲಿ ಲೋಕಕ್ಕೆ ಗೋಚರನಾದ ಆದಿತ್ಯನ ಮತ್ತು ಅಗೋಚರನಾದ ಮತ್ತು ವಿಶ್ವಕರ್ಮರೂಪನಾದ ಪರೋಕ್ಷರೂಪದ ಆದಿತ್ಯನ ಮಾರ್ಗಗಳೆರಡೂ ಸೇರಿವೆ).

**ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯಃ । ಯಜೂಂಷ್ಯೇವ ಮಧುಕೃತಃ.........................................ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಶುಕ್ಲಂ ರೂಪಂ ।**

(ಛಾ. ಉ. ೩-೨)

ಆದಿತ್ಯನ ಯಾವ ರಶ್ಮಿಗಳು ದಕ್ಷಿಣದಿಕ್ಕಿಗೆ ಪ್ರಸರಿಸುವುವೋ ಅವು ದಕ್ಷಿಣದ ಮಧುನಾಡಿಗಳು. ಯಜುರ್ಮಂತ್ರಗಳೇ ಭ್ರಮರಗಳು. ಯಜುರ್ವೇದವೇ ಪುಷ್ಪವು. ಯಜ್ಞಾಹುತಿಗಳಾದ ಆಜ್ಯಪಯಸ್ಸುಗಳೇ ಅಮೃತ ಬಿಂದುಗಳು. ಇದರಿಂದ ರಸಾದಿಗಳು ಉತ್ಪನ್ನವಾಗಿ ಪುನಃ ಆದಿತ್ಯನಿಗೆ ಅಭಿಮುಖವಾಗಿ ಪ್ರಸರಿಸಿ ಆದಿತ್ಯನನ್ನೇ ಸೇರುತ್ತವೆ. ಇದೇ ಆದಿತ್ಯನಿಗೆ ಶುಕ್ಲರೂಪವನ್ನು ಒದಗಿಸುತ್ತವೆ.

**ಅಥ ಯೇಽಸ್ಯ ಪ್ರತ್ಯಂಚೋ ರಶ್ಮಯಃ................ಸಾಮಾನ್ಯೇವ ಮಧುಕೃತಃ.................... ಏತದಾದಿತ್ಯಸ್ಯ ಕೃಷ್ಣಂ ರೂಪಂ ।**

(ಛಾ. ಉ. ೩-೩)

ಪಶ್ಚಿಮಾಭಿಮುಖವಾಗಿ ಪ್ರಸರಿಸುವ ರಶ್ಮಿಗಳು ಪಶ್ಚಿಮದ ಮಧುನಾಡಿಗಳು. ಸಾಮರೂಪವಾದ ಭ್ರಮರಗಳು ಸಾಮವೇದ ರೂಪವಾದ ಪುಷ್ಪದಲ್ಲಿ ಆಹುತಿರೂಪವಾದ ಅಮೃತಬಿಂದುಗಳನ್ನು ಸೃಜಿಸಿ ಆದಿತ್ಯನನ್ನು ಸೇರುತ್ತವೆ. ಇವೇ ಆದಿತ್ಯನ ಕೃಷ್ಣ ರೂಪವನ್ನು ಸಂಪಾದಿಸುವುವು.

(ಛಾ. ಉ. ೩-೪)

**ಅಥ ಯೇಽಸ್ಯೋದಂಚೋ ರಶ್ಮಯಃ ।........ಅಥರ್ವಾಂಗಿರಸ ಏವ ಮಧುಕೃತ ಇತಿಹಾಸ-ಪುರಾಣಂ ಪುಷ್ಪಂ................ಏತದಾದಿತ್ಯಸ್ಯ ಪರಂ ಕೃಷ್ಣಂ ರೂಪಂ ॥**

(ಛಾ. ಉ. ೩-೪)

ಉತ್ತರ ದಿಕ್ಕಿಗೆ ಹರಡುವ ರಶ್ಮಿಗಳು ಉತ್ತರದ ಮಧುನಾಡಿಗಳು. ಅಥರ್ವರೂಪವಾದ ಭ್ರಮರವು ಇತಿಹಾಸಪುರಾಣರೂಪವಾದ ಪುಷ್ಪದಿಂದ ರಸಾದಿರೂಪವಾದ ಅಮೃತಬಿಂದುವನ್ನು ಸೃಜಿಸಿ ಆದಿತ್ಯನನ್ನು ಸೇರುತ್ತವೆ. ಇದೇ ಆದಿತ್ಯನ ಗಹನಾತ್ಮಕವಾದ ಕೃಷ್ಣರೂಪವನ್ನು ಸಂಪಾದಿಸುತ್ತವೆ.

**ತೇ ವಾ ಏತೇ ರಸಾನಾಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾ ಹ್ಯಮೃತಾಸ್ತೇಷಾಮೇತಾನ್ಯಮೃತಾನಿ ।**

(ಛಾ. ಉ. ೩-೫)

ಸಕಲ ದಿಕ್ಕುಗಳಿಗೂ ಸಕಲ ಲೋಕಗಳಿಗೂ ಹರಡುವ ಆದಿತ್ಯನ ರಶ್ಮಿಗಳೇ ಸಕಲ ವರ್ಣಗಳಿಗೂ ಕಾರಣವಾಗಿ ಸರ್ವರಸಗಳಿಗೂ ಸಾರಗಳಾಗಿರುತ್ತದೆ. ರಸಗಳ ಸಾರಗಳು ಎಂದರೆ, ಸಕಲ ಲೋಕಗಳಲ್ಲಿಯೂ ಇರುವ ಉತ್ತಮವಾದ ವಸ್ತುಗಳ ಸಾರವೇ ವೇದವು. ಅವು ಯಜ್ಞರೂಪಕ್ಕೆ ಪರಿಣಾಮವನ್ನು ಹೊಂದಿದನಂತರ ಅದರ ಕಸದ ಫಲವಾಗಿ ಉತ್ತಮವಾದ ಸೂರ್ಯನ ವರ್ಣಗಳು ಯಜ್ಞಾದಿಗಳ ಸಾರವು. ಅಮೃತಾತ್ಮಕವಾದ ವೇದಾದಿಗಳಿಂದ ದೀಪ್ತವಾದ ಆದಿತ್ಯನ ನಾನಾ ವರ್ಣಾತ್ಮಕವಾದ ತೇಜಸ್ಸೆಲ್ಲ ಅಮೃತಕ್ಕೂ ಅಮೃತಪ್ರಾಯವಾಗಿದೆ.

ಹೀಗೆ ರಶ್ಮಿಪ್ರಸರಣದ ಫಲವನ್ನು ವರ್ಣಿಸಿ, ಅನಂತರ ಆದಿತ್ಯರೂಪನಾದ ವಿಶ್ವಕರ್ಮನಲ್ಲಿ ಸಕಲ ವಿಧವಾದ ದೇವತೆಗಳೂ ಅಂತರ್ಗತರಾಗಿದ್ದಾರೆ ಎಂಬ ವಿಷಯವನ್ನೂ ಸಹ ಈ ರೀತಿಯಲ್ಲಿ ವಿವರಿಸಿ ತಿಳಿಸಿದೆ.

**ಯದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ವೈ ದೇವಾ ಅಶ್ನಂತಿ ನ ಪಿಬಂತಿ ಏತದೇವಾಮೃತಂ ದೃಷ್ಟ್ವಾ ತೃಪ್ಯಂತಿ ।**

**ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವಂತಿ ।**
**ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ।**
**ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ।**
**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ॥**

(ಛಾ. ಉ. ೩-೬-೧೦)

ಅಮೃತರೂಪವೂ, ಪಂಚವಿಧಾತ್ಮಕವೂ ಆದ ಆದಿತ್ಯನ ರಸಾತ್ಮಕವಾದ ರೂಪಗಳಲ್ಲಿ ವಸುಗಳೂ, ರುದ್ರರೂ, ಆದಿತ್ಯರೂ, ಮರುತ್ತುಗಳೂ ಸಾಧ್ಯರೂ ವಾಸಿಸುತ್ತಾರೆ. ಅವರೇ ರೋಹಿತಾದಿವರ್ಣಗಳನ್ನೂ ಪ್ರವೇಶಿಸುತ್ತಾರೆ. ಈ ಅಮೃತಗಳ ಸಾರಗಳನ್ನು ತಿಳಿದವನು ವಸುರುದ್ರಾದಿಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ. ಆದಿತ್ಯನೂ ಸಹ ಈ ವಸುಗಳ, ರುದ್ರರ, ಆದಿತ್ಯರ ಲೋಕಗಳಲ್ಲಿ ಸಂಚರಿಸುತ್ತಲೂ ಅವರ ಸ್ವಾರಾಜ್ಯಮಹಿಮೆಯನ್ನು ವೀಕ್ಷಿಸುತ್ತಲೂ ಸ್ಥಾಪಿತನಾಗಿದ್ದಾನೆ. ಈ ಆದಿತ್ಯನು ಏಕಶತವಿಧನು, ಎಂದರೆ ಪರಬ್ರಹ್ಮರೂಪನಾಗಿಯೇ ಇದ್ದಾನೆ ಎಂಬ ವಿಷಯವನ್ನು ಹಿಂದೆ ಹನ್ನೆರಡನೆಯ ಭಾಗದ ೩೬೬ನೇ ಪುಟದಲ್ಲಿ ವಿವರಿಸಿದೆ.

ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇದೇ ಆದಿತ್ಯರೂಪನಾದ ವಿಶ್ವಕರ್ಮನ ಪ್ರಶಂಸೆಯಿರುತ್ತದೆ.

ಅಮ್ಯಕ್ ॥೬೦॥
“ಅಮ್ಯಕ್ಸಾ ತ ಇನ್ದ್ರ ಋಷ್ಟಿಃ” । ಅಮಾಕ್ತೇತಿ ವಾಽಭ್ಯಕ್ತೇತಿ ವಾ ॥ ೨ ॥

ಉದಾಹರಣೆಯ ಋಕ್ಕು—

**ಅಮ್ಯಕ್ಸಾ ತ ಇಂದ್ರ ಋಷ್ಟಿರಸ್ಮೇ ಸನೇಮ್ಯಭ್ವಂ ಮರುತೋ ಜನಂತಿ ।**
**ಅಗ್ನಿಶ್ಚಿದ್ಧಿ ಷ್ಮಾತಸೇ ಶುಶುಕ್ವಾನಾಪೋ ನ ದ್ವೀಪಂ ದಧಾತಿ ಪ್ರಯಾಂಸಿ ॥**

(ಋ. ಸಂ. ೧-೧೬೯-೩)

ಇದರ ಅರ್ಥವು—

ಎಲೈ ಇಂದ್ರನೇ, ನಿನ್ನ ವಜ್ರವೆಂಬ ಆಯುಧವು ನಮಗಾಗಿ (ಮಳೆಗರೆಯುವುದಕ್ಕೋಸ್ಕರ ಮೇಘಗಳನ್ನು) ಸಮೀಪಿಸುತ್ತದೆ.

ಯಾಗ ಕರ್ಮಕೋಸ್ಕರ ಅಗ್ನಿಯೂ ಪ್ರಜ್ವಲಿಸುತ್ತಿದೆ. (ಯಜಮಾನರೂ) ಚರುಪುರೋಡಾಶಾದಿ ಹವಿಸ್ಸುಗಳೊಡನೆ ಉದಕಗಳು ದ್ವೀಪವನ್ನು ಆವರಿಸುವಂತೆ ಅಗ್ನಿಯನ್ನು ಸುತ್ತುಗಟ್ಟಿ ನಿಲ್ಲುತ್ತಾರೆ.

**ಋಷ್ಟಿಃ ಅಸ್ಮೇ ಅಮ್ಯಕ್**—ಇಲ್ಲಿ ಇಂದ್ರನನ್ನು ಸಂಬೋಧಿಸಿದೆ. ಋಷ್ಟಿ ಶಬ್ದಕ್ಕೆ **ವಜ್ರಾಖ್ಯಾಯುಧವಿಶೇಷಃ** ವಜ್ರಾಯುಧವೆಂಬ ಹೆಸರಿನಿಂದ ಪ್ರಸಿದ್ಧವಾದ ಇಂದ್ರನ ಆಯುಧವೆಂದು ಅರ್ಥಮಾಡಿ, ಆ ಆಯುಧವು **ಅಸ್ಮದ್ವೃಷ್ಟ್ಯರ್ಥಂ ಮೇಘಸಮೀಪೇ ಪ್ರಾಪ್ನೋತಿ** ಯಜಮಾನರಾದ ನಮಗಾಗಿ ವೃಷ್ಟಿಯ ಉದಕಗಳನ್ನು ಸುರಿಸುವುದಕ್ಕಾ ಮೇಘಗಳ ಸಮೀಪದಲ್ಲಿ ಪ್ರಯೋಗಿಸಲ್ಪಡುತ್ತದೆ ಎಂಬ ಅರ್ಥವನ್ನು ವರ್ಣಿಸಿದೆ. ನಿರುಕ್ತಕಾರರು ಅಮ್ಯಕ್ ಎಂಬ ಪದದ ಅರ್ಥವನ್ನು-

**ಅಮ್ಯಕ್ ಸಾ ತ ಋಷ್ಟಿರಸ್ಮೇ ಸನೇಮ್ಯಭ್ವಂ** ಎಂಬ ಈ ಋಕ್ಕನ್ನೇ ಉದಹರಿಸಿ **ಅಮಾಕ್ತೇತಿ ವಾ ಅಭ್ಯಕ್ತೇತಿ ವಾ** ಎಂಬ ವ್ಯಾಖ್ಯಾನಮಾಡಿದ್ದಾರೆ. ದುರ್ಗಾಚಾರ್ಯರು **ಋಷ್ಟಿರಭಿಧೇಯಾ ಮಾಂ ವಿಷಾ ಪ್ರತ್ಯಂಚಿ ತಾಮಾಮೇಷಾ ಪ್ರತ್ಯಂಚಿತೇತಿ ಕ್ಷಿಪ್ತೇತಿ ಶತ್ರವಃ ಮನ್ಯಂತೇ** ಶತ್ರುಗಳು ಇಂದ್ರನ ಋಷ್ಟಿ ಎಂಬ ಆಯುಧವು ನನ್ನ ವಿಷಯದಲ್ಲಿ ಪ್ರಯುಕ್ತವಾಗಿದೆ ಎಂದು ತಿಳಿಯುತ್ತಾರಾದರಿಂದಲೂ, **ನಿತ್ಯಕಾಲಂ ಶತ್ರೂನ್ ಪ್ರತಿ ಅಭಿಗತೈವಭವತೀತಿ ತಮ್ಯಗಿತ್ಯುಚ್ಯತೇ** ಯಾವಾಗಲೂ ಶತ್ರುಗಳ ವಿಷಯದಲ್ಲಿ ಉಪಯೋಗಿಸಲ್ಪಡುವ ಕಾರಣದಿಂದಲೂ **ಅಮ್ಯಕ್**, ಎಂದು ಪ್ರಸಿದ್ಧವಾಗಿದೆ ಎಂಬ ಅರ್ಥವನ್ನು ವಿವರಿಸಿದ್ದಾರೆ.

**ಮರುತಃ ಸನೇಮಿ ಅಭ್ವಂ ಜುನಂತಿ**—**ಚಿರಕಾಲಂ ಸಂಗೃಹೀತಂ ಉದಕಂ ವರ್ಷಂತಿ।** ಇಂದ್ರನ ಋಷ್ಟಿ ಎಂಬ ಆಯುಧವು ಮೇಘಸಮೀಪದಲ್ಲಿ ಪ್ರಯುಕ್ತವಾದಾಗ ಮೇಘಗಳು ಬಹಳ ಕಾಲದಿಂದಲೂ ಸಂಗ್ರಹಿಸಿರುವ ಉದಕಗಳು ಹೊರಬೀಳುವಂತೆ ಮಾಡಿ ವೃಷ್ಟಿಯನ್ನು ಉಂಟುಮಾಡುತ್ತದೆ ಎಂದು ಅರ್ಥವನ್ನು ಹೇಳಿದೆ. **ಅಭ್ವ** ಎಂಬ ಪದವು ಉದಕನಾಮಗಳಲ್ಲಿಯೂ (ನಿ. ೧-೨೪) ಮಹನ್ನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ ಇಲ್ಲಿ ಉದಕವೆಂಬ ಅರ್ಥವನ್ನು ವಿವರಿಸಿದೆ.

**ಸನೇಮಿ**—ಎಂಬ ಪದವು ಪುರಾಣನಾಮಗಳಲ್ಲಿ (ನಿ. ೩-೨೦) ಉಕ್ತವಾಗಿದ್ದರೂ,

**ಶಂ ನೋ ಭವಂತು ವಾಜಿನೋ ಹವೇಷು ದೇವತಾತಾ ಮಿತದ್ರವಃ ಸ್ವರ್ಕಾಃ ।**
**ಜಂ ಭಯಂತೋಽಹಿಂ ವೃಕಂ ರಕ್ಷಾಂಸಿ ಸನೇಮ್ಯಸ್ಮದ್ಯುಯುವನ್ನಮೀವಾ ॥**

(ಋ. ಸಂ. ೭-೩೮-೭)

ಎಂಬ ಈ ಋಕ್ಕಿನಲ್ಲಿರುವ ಸನೇಮಿ ಪದಕ್ಕೆ **ಕ್ಷಿಪ್ರಂ** ಎಂಬ ಅರ್ಥದಲ್ಲಿರುವ ಪ್ರಯೋಗವನ್ನು ತೋರಿಸಿದ್ದಾರೆ.

ನಿರುಕ್ತಕಾರರು ಸನೇಮಿ ಶಬ್ದಕ್ಕೆ ಪುರಾಣ ಅಥವಾ ಬಹಳ ಹಿಂದಿನಕಾಲದ್ದು. **ಕ್ಷಿಪ್ರ** (ಜಾಗ್ರತೆಯಾಗಿರುವುದು) ಎಂಬ ಎರಡು ಅರ್ಥಗಳನ್ನು ಹೇಳಿರುವುದರಲ್ಲಿ ಪುರಾಣ ಎಂಬ ಅರ್ಥವನ್ನೇ ಸಾಯಣರು ಅಂಗೀಕರಿಸಿದ್ದಾರೆ. ಮತ್ತು ಇವನ್ನೇ ತಮ್ಮ ವ್ಯಾಖ್ಯಾನದಲ್ಲಿ **ಸನೇಮಿ ಅಹ್ನಾಯ ಇತಿ ಷಟ್ ಪುರಾಣನಾಮಾನಿ ಇತ್ಯುಕ್ತತ್ವಾತ್ ಸನೇಮಿ ಇತಿ ಪುರಾಣ**

**ನಾಮ ಪುರಾಣಂ ಚಿರಕಾಲಂ ಸಂಗೃಹೀತಂ**—ಆರು ಪುರಾಣನಾಮಗಳ ಮಧ್ಯದಲ್ಲಿ ನಿರುಕ್ತದಲ್ಲಿ ಪಾಠಮಾಡಿರುವುದರಿಂದ ಸನೇಮಿ ಶಬ್ದಕ್ಕೆ ಪುರಾಣ (ಹಳೆಯದು) ಎಂಬ ಅರ್ಥವನ್ನು ಸಮರ್ಥನೆ ಮಾಡಿ ಬಹಳ ಕಾಲದಿಂದಲೂ ಉದಕಗಳು ಸಂಚಿತವಾದವುಗಳೆಂಬ ಅರ್ಥವನ್ನು ವಿವರಿಸಿದ್ದಾರೆ.

ಈ ಋಕ್ಕಿನ ಉತ್ತರಾರ್ಧದ ಅರ್ಥವನ್ನು ವಿವರಿಸಿದೆ. ಈ ಎರಡು ವಿಧವಾದ ಅರ್ಥವೂ **ಅಗ್ನಿಶ್ಚಿದ್ಧಿಷ್ಮ** ಎಂಬಲ್ಲಿರುವ **ಚಿತ್** ಎಂಬ ಪದದ ಪೂರಣಾರ್ಥ ಉಪಮಾರ್ಥಗಳನ್ನು ಅನುಸರಿಸಿ ಉಂಟಾಗಿದೆ. ಮೊದಲನೆಯ ಅರ್ಥದಲ್ಲಿ ಅಗ್ನಿಪದವು ವಿಶೇಷ್ಯವಾಗಿದೆ. ಅಗ್ನಿಯು **ಅತಸೇ ಸಂತತೇ ಕರ್ಮಣಿ ನಿಮಿತ್ತಭೂತೇ ಸತಿ ಶುಶುಕ್ವಾನ್**–ವೃಷ್ಟ್ಯಾದಿಗಳಿಂದ ಸಸ್ಯಗಳು ಉತ್ಪನ್ನವಾದನಂತರ ಯಜ್ಞಾದಿ ಕರ್ಮಗಳನಿಮಿತ್ತವಾಗಿ ಕಾಂತಿಯುಳ್ಳವನಾಗಿ ಪ್ರಕಾಶಿಸುವ ಎಂದೂ ಹೀಗೆ ಪ್ರಕಾಶಿಸುತ್ತಿರುವ ಅಗ್ನಿಯನ್ನು ತೃಪ್ತಿಪಡಿಸುವುದಕ್ಕಾಗಿ **ಪ್ರಯಾಂಸಿ ದಧತಿ ಚರುಪುರೋಡಾಶಾದಿಹವೀಂಷಿ ಧಾರಯಂತಿ ದದತಿ ವಾ ಯಜಮಾನಾಃ**–ಯಜ್ಞಮಾಡುವವರು ಹವಿಸ್ಸುಗಳನ್ನು ಧರಿಸಿರುತ್ತಾರೆ, ಅಥವಾ ಅಗ್ನಿಯಲ್ಲಿ ಅರ್ಪಿಸುತ್ತಾರೆ ಎಂದು ಅರ್ಥವನ್ನು ವಿವರಿಸಿ, ಯಜಮಾನರು ಧರಿಸಿರುವ ಹವಿಸ್ಸುಗಳನ್ನು **ಅಪೋ ನ ದ್ವೀಪಂ** ಉದಕಗಳು ದ್ವೀಪವನ್ನು ಧರಿಸಿರುವಂತೆ ಎಂದುಹೋಲಿಸಿದೆ. **ದ್ವೀಪಂ** ಶಬ್ದದ ಅರ್ಥವೂ **ದ್ವಿಪಾರ್ಶ್ವಸ್ಥೋದಕವಾನ್ ಪರ್ವತಾದಿಃ** ಎರಡು ಕಡೆಗಳಲ್ಲಿಯೂ ಉದಕಗಳಿಂದ ಸುತ್ತುವರೆಯಲ್ಪಟ್ಟ ಭೂಭಾಗವು ದ್ವೀಪವೆಂದು ವಿವೃತವಾಗಿದೆ. **ತಂ ಯಥಾ ಆಪೋ ಧಾರಯಂತಿ** ಉದಕಗಳು ದ್ವೀಪವನ್ನು ಧರಿಸಿರುವಂತೆ ಅಗ್ನಿ ಮತ್ತು ಯಜಮಾನರುಗಳ ಮಧ್ಯದಲ್ಲಿ ಹವಿಸು ಧೃತವಾಗಿರುವುದೆಂದು ಉಪಮಾನ ಪ್ರಕಾರವೂ ವರ್ಣಿತವಾಗಿದೆ.

ನಿರುಕ್ತಕಾರರು **ಚಿತ್** ಎಂಬ ನಿಪಾತದ ಅರ್ಥವನ್ನು ವಿವರಿಸುವಾಗ **ಚಿದಿತ್ಯೇಕೋ ಅನೇಕಕರ್ಮಾ । ಚಿತ್** ಎಂಬ ನಿಪಾತವು ಅನೇಕಾರ್ಥಗಳಲ್ಲಿ ಪ್ರಯುಕ್ತವಾಗಿರುವುದು ಎಂದು ವ್ಯಾಖ್ಯಾನಮಾಡಿ, ಅವುಗಳನ್ನು ವಿವರಿಸುವಾಗ **ದಧಿಚಿದಿತ್ಯುಪಮಾರ್ಥೇ** ಎಂಬ ವಾಕ್ಯದಿಂದ **ಚಿತ್** ಪದದ ಪ್ರಯೋಗವು ಉಪಮಾರ್ಥದಲ್ಲಿರುವುದನ್ನು ವಿವರಿಸಿದ್ದಾರೆ. ಸಾಯಣರು ಇದನ್ನು ಅನುಸರಿಸಿ, **ಚಿಚ್ಛಬ್ದಃ ಉಪಮಾರ್ಥೇದಧಿಚಿದ್ಯುಪಮಾರ್ಥೇ** (ನಿ. ೧–೪) **ಇತಿ ಯಾಸ್ಕೇನೋಕ್ತತ್ವಾತ್** ಎಂದು ಉದಾಹರಿಸಿ, **ಯದ್ವಾ ಆಯುಧಮೇವೋಚ್ಯತೇ । ವಜ್ರಾಖ್ಯಾಯುಧವಿಶೇಷೋ ಅತಸೇ ಕಾಷ್ಠಸಮೂಹೇ ಶುಶುಕ್ವಾನ್ ದೀಪಯನ್ನಗ್ನಿಶ್ಚಿತ್ ।** ಇಂದ್ರನ ವಜ್ರವೆಂಬ ಹೆಸರುಳ್ಳ ಆಯುಧವು ಇಲ್ಲಿ ಉಕ್ತವಾಗಿದೆ. ಇದು ಕಟ್ಟಿಗೆಗಳ ರಾಶಿಯಲ್ಲಿ ಪ್ರಕಾಶಿಸುವ ಅಗ್ನಿಯ ಹಾಗೆ ಪ್ರಕಾಶಿಸುತ್ತಿರುತ್ತದೆ ಎಂಬ ಅರ್ಥವನ್ನು ವಿವರಿಸುವ **ಕಾಷ್ಠೇ ಜ್ವಲನಗ್ನಿರಿವ ತದ್ವದ್ದೀಪ್ತೋ ವರ್ತತೇ** ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ಅಗ್ನಿಯ ಪ್ರಭೂತವಾದ ದೀಪ್ತತ್ವವನ್ನು **ಸಾ** ಎಂಬ ಪದನಿಂದ ಉಕ್ತವಾಗಿದೆ ಎಂದು ವಿವರಿಸಿದ್ದಾರೆ. **ಆಪೋ ನ ದ್ವೀಪಂ** ಎಂಬ ಉಪಮಾನವಾಕ್ಯವನ್ನು **ಅಪಃ ದ್ವೀಪಮಿವ ವೃಷ್ಟ್ಯುದಕಾನಿ ಸಸ್ಯಾದ್ಯನ್ನಾನಿ ಧಾರಯಂತಿ** ಉದಕಗಳು ದ್ವೀಪವನ್ನು ಆವರಿಸಿಕೊಂಡು ಧರಿಸಿರುವಂತೆ ವೃಷ್ಟ್ಯುದಕಗಳು ಸಸ್ಯಮೊದಲಾದವುಗಳನ್ನೂ ಅನ್ನವನ್ನೂ ಧರಿಸಿರುತ್ತವೆ ಎಂಬರ್ಥವನ್ನು ವಿವರಿಸಿ ಸಮರ್ಥನೆ ಮಾಡಿದ್ದಾರೆ.

**ಅತಸೇ—ಸಂತತೇ ಕರ್ಮಣಿ.** ನಿರಂತರವಾಗಿ (ನಡೆಯುತ್ತಿರುವ) ಆಚರಿಸುವುದು ಎಂಬ ಅರ್ಥವನ್ನು ಅತಸ್ ಎಂಬ ಪದಕ್ಕೆ ವಿವರಿಸಿದೆ. ನಿರುಕ್ತಕಾರರು—

**ಆಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಶ್ಶಿಮೀವಾಞ್ಛರುಮಾಁ ಋಜೀಷೀ ।**
**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥**

(ಋ. ಸಂ. ೧೦–೮೯–೫)

ಇಲ್ಲಿ **ಅತಸಾ** ಎಂಬ ಪದಕ್ಕೆ ದುರ್ಗಾಚಾರ್ಯರು **ಅನುಪಕ್ಷೀಣಾನಿ** ವೃದ್ಧಿಹೊಂದುತ್ತಿರುವ ಎಂಬ ಅರ್ಥವನ್ನು ವಿವರಿಸಿದ್ದಾರೆ. ಸಾಯಣರು **ಸಂತತೇ** ಎಂದು ಇದೇ ಅರ್ಥವನ್ನೇ ಹೇಳಿದ್ದಾರೆ.

ಯಾದೃಶ್ಮಿನ್ ॥೬೧॥

" ಯಾದೃಶ್ಮಿನ್ಧಾಯಿ ತಮಪಸ್ಯಯಾವಿದತ್ "। ಯಾದೃಶೇಽಧಾಯಿ

ತಮಪಸ್ಯಯಾ ವಿದತ್ ॥೩॥

ಉದಾಹರಣೆಯ ಋಕ್ಕು—

**ಜ್ಯಾಯಾಂಸಮಸ್ಯ ಯತುನಸ್ಯ ಕೇತುನಾ ಋಷಿಸ್ವರಂ ಚರತಿ ಯಾಸು ನಾಮ ತೇ ।**
**ಯಾದೃಶ್ಮಿನ್ಧಾಯಿ ತಮಪಸ್ಯಯಾ ವಿದದ್ಯ ಉ ಸ್ವಯಂ ವಹತೇ ಸೋ ಅರಂ ಕರತ್ ॥**

(ಋ. ಸಂ. ೫–೪೪–೮)

ಇದರ ಅರ್ಥವು—

ಎಲೈ ಸೂರ್ಯನೇ, ಯಾವ ಋಷಿಗಳ ಸ್ತುತಿಗಳಲ್ಲೆಲ್ಲಾ ನಿನ್ನ ಪ್ರಸಿದ್ಧವಾದ ನಾಮಸಂಕೀರ್ತನವಿದೆಯೋ ಅಂತಹ ಋಷಿಗಳ ಸ್ತುತಿಗಳಿಂದ ಪ್ರಶಂಸಿತನಾದವನೂ ದೇವತೆಗಳಲ್ಲೆಲ್ಲಾ ಜ್ಯೇಷ್ಠನೂ, ಉದಯಾದಿಲಕ್ಷಣಗಳಿಂದ ನಿರ್ದಿಷ್ಟನಾದವನೂ ಸಂಚಾರಶೀಲನೂ ಆದ ನಿನ್ನನ್ನು ಯಜಮಾನನು ಸಮೀಪಿಸುತ್ತಾನೆ. ಯಜಮಾನನು ಯಾವ ಇಷ್ಟಾರ್ಥವನ್ನು ಪಡೆಯಬೇಕೆಂದು ಸಂಕಲ್ಪಿಸುವನೋ ಅದೇ ಇಷ್ಟಾರ್ಥವನ್ನು ತನ್ನ ಭಕ್ತಿಯುತವಾದ ಕರ್ಮದಿಂದ ಪಡೆಯುತ್ತಾನೆ. ಯಾವನು ನಿರ್ಬಂಧವಿಲ್ಲದೆ ಸ್ವಯಂಪ್ರೇರಿತನಾಗಿ ಪೂಜಾದಿಗಳನ್ನರ್ಪಿಸುವನೋ ಅವನು ಪರ್ಯಾಪ್ತವಾದ ಫಲವನ್ನು ಪಡೆಯುತ್ತಾನೆ.

**ಯಾದೃಶ್ಮಿನ್**—ಈ ಶಬ್ದಕ್ಕೆ ನಿರ್ವಚನವನ್ನು ಹೇಳುವಾಗ **ಯಾದೃಶ್ಮಿನ್ ಧಾಯಿ ತಮಪಸ್ಯ ಯಾವಿದತ್ ।** ಎಂದು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಯಾದೃಶೇಽಧಾಯಿ **ತಮಪಸ್ಯಯಾವಿದತ್** ಎಂದು ಅರ್ಥವಿವರಣೆ ಮಾಡಿದಾರೆ. ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು—

**ಯಾದೃಶ್ಮಿನ್ ಯಾದೃಶೇ ಕಾಮೇ ಧಾಯಿ ಮನೋ ಧತ್ತೇ ತಂ**
**ತಾದೃಶಂ ಕಾಮಂ ತಯಾ ಅಪಸ್ಯಯಾ ಕ್ರಿಯಯಾ ಹವಿಃ**
**ಸ್ತುತ್ಯಾದಿಲಕ್ಷಣಯಾ ತವ ಪ್ರಸಾದಾತ್ ಅವಿದತ್ ಅಲಭತೇತ್ಯರ್ಥಃ**

ಯಜ್ಞಮಾಡುವ ಯಜಮಾನನು ಯಾವ ವಿಧವಾದ ಅಪೇಕ್ಷೆಯಲ್ಲಿ ತನ್ನ ಮನಸ್ಸನ್ನಿಡುವನೋ ಎಂದರೆ ಯಾವ ವಸ್ತುವನ್ನು ಬಯಸುವನೋ ಅದನ್ನು ಇಂದ್ರನಿಗೆ ಹವಿರಾದಿಗಳನ್ನು ಅರ್ಪಿಸುವುದರಿಂದ ಎಂದರೆ ಹವಿಃಪ್ರದಾನಾದಿಕರ್ಮದಿಂದಲೇ ಹೊಂದುವನು ಎಂದು ಮುಖ್ಯಾಭಿಪ್ರಾಯವು.

ಜಾರಯಾಯಿ ॥ ೬೨ ॥

" ಉಸ್ರಃ ಪಿತೇವ ಜಾರಯಾಯಿ ಯಜ್ಞೈಃ"। ಉಸ್ರ ಇವ ಗೋಪಿತಾ-

ಜಾಯಿ ಯಜ್ಞೈಃ ॥೪ ॥೧೫॥

ಉದಾಹರಣೆಯ ಋಕ್ಕು—

**ಸಾಸ್ಮಾಕೇಭಿರೇತರೀ ನ ಶೂಷೈರಗ್ನಿಃಷ್ಟವೇ ದಮ ಆ ಜಾತವೇದಾಃ ।**

**ದ್ರ್ವನ್ನೋ ವನ್ವನ್ ಕ್ರತ್ವಾ ನಾರ್ವೋಸ್ರಃ ಪಿತೇವ ಜಾರಯಾಯಿ ಯಜ್ಞೈಃ ॥**

ಇದರ ಅರ್ಥವು—

ಜಾತವೇದೋರೂಪನಾದ ಅಗ್ನಿಯು ಯಾಚಕನಲ್ಲಿರುವ ಉತ್ತಮವಾದ ಸ್ತುತಿಗಳಂತೆ ಸುಖಕರಗಳಾದ ಸ್ತುತಿಗಳನ್ನು ನಿರ್ಮಿಸಿರುವ ನಮ್ಮಿಂದ ಯಜ್ಞಗೃಹದಲ್ಲಿ ಅತಿಶಯವಾಗಿ ಸ್ತುತಿಸಲ್ಪಡುತ್ತಾನೆ. ವೃಕ್ಷಗಳೇ ಅನ್ನವಾಗಿ ಉಳ್ಳವನೂ ವನ ಭಕ್ಷಕನೂ ಆಗಿ ವೃಷಭದಂತೆ ತನ್ನ ಕರ್ಮನಿರತನಾಗಿ ಶೀಘ್ರಗಾಮಿಯಾಗುತ್ತಾನೆ. ಮತ್ತು ಯಜ್ಞಕರ್ತರಿಂದ ಉತ್ಪನ್ನನಾಗಿ ಸ್ತುತಿಸಲ್ಪಡುತ್ತಾನೆ.

**ಜಾರಯಾಯಿ**—ಉಸ್ರ ಇವ ಗೋಪಿತಾಜಾಯಿ ಯಜ್ಞೈಃ । ಎಂದರೆ **ಅಜಾಯಿ ಉತ್ಪನ್ನ**ನಾಗಿದ್ದಾನೆ ಎಂದರ್ಥವು. ವೃಷಭವು ತನ್ನ ಗೋವುಗಳ ಹಿಂಡನ್ನು ಯಾವ ರೀತಿ ರಕ್ಷಿಸುವುದೋ ಅದರಂತೆ ಅಗ್ನಿಯು ತನ್ನನ್ನು ಯಜ್ಞಾರ್ಥವಾಗಿ ಪೂಜಿಸುವವರನ್ನು ರಕ್ಷಿಸುವುದಕ್ಕಾಗಿ ಈ ಯಜ್ಞಭೂಮಿಯಲ್ಲಿ ಉತ್ಪನ್ನನಾಗಿದ್ದಾನೆ ಎಂದಭಿಪ್ರಾಯವು.

**ಇತಿ ಪಂಚದಶಃ ಖಂಡಃ**

ಇಲ್ಲಿಗೆ ಹದಿನೈದನೆಯ ಖಂಡವು ಸಮಾಪ್ತವು

---

## ಷೋಡಶಃ ಖಂಡಃ

## ಹದಿನಾರನೆಯ ಖಂಡವು

ಪ್ರ ವೋಽಚ್ಛಾ ಜುಜುಷಾಣಾಸೋ ಅಸ್ಥುರಭೂತ ವಿಶ್ವೇ ಅಗ್ರಿಯೋತ ವಾಜಾಃ। ಪ್ರಾಸ್ಥುರ್ವೋ ಜೋಷಯಮಾಣಾ ಅಭವತ ಸರ್ವೇಽಗ್ರಗಮನೇನೇತಿ ವಾಗ್ರಗರಣೇನೇತಿ ವಾಗ್ರಸಂಪಾದಿನ ಇತಿ ವಾಪಿವಾಗ್ರ್ಯಮಿತ್ಯೇತದನರ್ಥಕಮುಪಬಂಧಮಾದದೀತ । ಅದ್ಧೀ- ದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ। ಅದ್ಧೀನ್ದ್ರ ಪ್ರಸ್ಥಿತಾನೀಮಾನಿ ಹವೀಂಷಿ ಚನೋ ದಧಿಷ್ವ ಚನ ಇತ್ಯನ್ನನಾಮ ಪಚತಿರ್ನಾಮೀಭೂತಸ್ತಂ ಮೇದಸ್ತಃ ಪ್ರತಿ ಪಚತಾ। ಗ್ರಭಿಷ್ಟಾಮಿತ್ಯಪಿ ನಿಗಮೋ ಭವತ್ಯಪಿವಾ ಮೇದಸಶ್ಚ ಪಶೋಶ್ಚ ಸಾತ್ತ್ವಂ ದ್ವಿವಚನಂ ಸ್ಯಾದ್ಯತ್ರ ಹ್ಯೇಕವಚನಾರ್ಥಃ ಪ್ರಸಿದ್ಧಂ ತದ್ಭವತಿ। ಪುರೋಳಾ ಅಗ್ನೇ ಪಚತ ಇತಿ ಯಥಾ ಶುರುಧ ಆಪೋ ಭವನ್ತಿ ಶುಚಂ

ಸಂರುಂಧನ್ತಿ ಋತಸ್ಯ। ಹಿ ಶುರುಧ ಸನ್ತಿ ಪೂರ್ವೀರಿತ್ಯಪಿ ನಿಗಮೋ ಭವತ್ಯಮಿನೋಽಮಿತಮಾತ್ರೋ ಮಹಾನ್ಭವತ್ಯಭ್ಯಮಿತೋ ವಾ। ಅಮಿನಃ ಸಹೋಭಿರಿತ್ಯಪಿ ನಿಗಮೋ ಭವತಿ ಜಜ್ಝತೀರಾಪೋ ಭವನ್ತಿ ಶಬ್ದಕಾರಿಣ್ಯಃ ಪುರಿವೋ ಜಜ್ಝತೀರಿವೇತ್ಯಪಿ ನಿಗಮೋ ಭವತ್ಯ-ಪ್ರತಿಷ್ಕುತೋಽಪ್ರತಿಸ್ಕೃತೋಽಪ್ರತಿಸ್ಖಲಿತೋ ವಾ। ಅಸ್ಮಭ್ಯಮ-ಪ್ರತಿಷ್ಕೃತ ಇತ್ಯಪಿ ನಿಗಮೋ ಭವತಿ। ಶಾಶದಾನಃ ಶಾಶಾದ್ಯಮಾನಃ ಪ್ರ ಸ್ವಾಂ ಮತಿಮತಿರಚ್ಛಾಶದಾನ ಇತ್ಯಪಿ ನಿಗಮೋ ಭವತಿ ॥೧೬॥

---

ಅಗ್ರಿಯಾ ॥೬೩॥

"ಪ್ರವೋಽಚ್ಛಾ ಜುಜುಷಾಣಾಸೋ ಅಸ್ಥುರಭೂತ ವಿಶ್ವೇ ಅಗ್ರಿಯೋತ ವಾಜಾಃ ॥" ಪ್ರಾಸ್ಥುರ್ವೋ ಜೋಷಯಮಾಣಾ ಅಭವತ ಸರ್ವೇಽಗ್ರಗಮನೇನೇತಿ ವಾಽಗ್ರಗರಣೇನೇತಿ ವಾಽಗ್ರಸಂಪಾದಿನ ಇತಿ ವಾ ॥ ಅಪಿ ವಾಗ್ರಮಿತ್ಯೇತದನರ್ಥಕಮುಪಬಂಧಮಾದದೀತ ॥೧॥

ಉದಾಹರಣೆಯ ಋಕ್ಕು—

**ಅಯಂ ವೋ ಯಜ್ಞ ಋಭವೋಽಕಾರಿ ಯಮಾ ಮನುಷ್ವತ್ಪ್ರದಿವೋ ದಧಿಧ್ವೇ।**
**ಪ್ರ ವೋಽಚ್ಛಾ ಜುಜುಷಾಣಾಸೋ ಅಸ್ಥುರಭೂತ ವಿಶ್ವೇ ಅಗ್ರಿಯೋತ ವಾಜಾಃ ॥**

(ಋ. ಸಂ. ೪-೩೪-೩)

ಇದರ ಅರ್ಥವು—

ಎಲೈ ಋಭುಗಳೇ, ಅತ್ಯಂತ ಪ್ರಕಾಶಮಾನರಾದ ನೀವು ಯಾವ ಈ ಯಜ್ಞವನ್ನು ಮಾನವರಂತೆ ಧರಿಸುತ್ತೀರೋ ಅಂತಹ ಈ ಯಜ್ಞವು ನಿಮ್ಮನ್ನುದ್ದೇಶಿಸಿ ನೆರವೇರಿಸಲ್ಪಟ್ಟಿದೆ. ಸೇವಿಸಲು ಯೋಗ್ಯವಾದ ಸೋಮರಸಗಳು ನಿಮಗಭಿಮುಖವಾಗಿ ಅರ್ಪಿಸಲು ಸಿದ್ಧವಾಗಿವೆ. ಎಲೈ ಋಭುಗಳೇ, ನೀವೆಲ್ಲರೂ ಅಗ್ರಪೂಜೆಗೆ ಯೋಗ್ಯರಾಗಿದ್ದೀರಿ.

**ಅಗ್ರಿಯಾ** ಎಂದರೆ ಅಗ್ರಗಮನ ಮುಂದೆ ಹೋಗುವುದು ಅಥವಾ ಸೈನದ ಮುಂದೆ ಇರುವ, ನಾಯಕ ಎಂದು ಅರ್ಥವು **ಅಗ್ರಿಯಾ** ಎಂದರೆ ಕೇವಲ **ಅಗ್ರ**—ಮುಂದುಗಡೆ ಎಂದೂ ಅರ್ಥವಾಗಬಹುದು ಈ ಸಂದರ್ಭದಲ್ಲಿ ಯಾ ಎಂಬ ಅಕ್ಷರದ ಪ್ರತ್ಯಯಕ್ಕೆ ಏನೊಂದು ಅರ್ಥವೂ ಇರುವುದಿಲ್ಲ ಅಗ್ರ ಎಂದರೆ ಮೊದಲು ಪ್ರಾರಂಭದಲ್ಲಿ ಎಂದೂ ಅರ್ಥವು

ಮೇಲಿನ ಉದಾಹರಣೆಯ ಋಕ್ಕಿನಲ್ಲಿ ಋಭುಗಳ ಎಂಬುವರ ಪ್ರಸ್ತಾಪವಿದೆ. ಈ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಸುವುದು ಅವಶ್ಯಕವು—

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿರುವುದು. ಪೂರ್ವದಲ್ಲಿ ಅಂಗಿರಾಋಷಿಗೆ ನೀತಿಮಂಜರಿ ಎಂಬ ಓರ್ವ ಪುತ್ರನಿದ್ದನು. ಇವನ ವಂಶದಲ್ಲಿ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಋಭುಗಳೆಂದು ಹೇಳುವುದು ರೂಢಿಯಿದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ಎಂದರೆ ಇಂದ್ರನ ರಥವನ್ನು ಅಗ್ನಿಯ ಚಮಸಪಾತ್ರೆಯನ್ನು ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಈ ಸೂಕ್ತದಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು. ಇವರಿಗೆ ಅದ್ಭುತವಾದ ಶಕ್ತಿಯಿರುವುದೆಂದು ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಇವರು ಸೂರ್ಯಮಂಡಲದಲ್ಲಿ ವಾಸವಾಗಿದ್ದು ಸೂರ್ಯರಶ್ಮಿಗಳ ಮೂಲಕ ಕಾರ್ಯಗಳನ್ನು ಮಾಡುವರೆಂದು ಪ್ರತೀತಿ ಇರುವುದು.

ಋಭುಶಬ್ದಕ್ಕೆ ಯಾಸ್ಕರು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿರುವರು—

(೧) **ಋಭವ ಉರು ಭಾಂತೀತಿ ವಾ ।** ಉರು–ಬಹಳವಾಗಿ ಭಾಂತಿ–ಪ್ರಕಾಶಿಸುವವರು. ಆದ್ದರಿಂದ ಇವರಿಗೆ ಋಭುಗಳೆಂದು ಹೆಸರು—ಇಲ್ಲಿ ಉರು ಶಬ್ದದ ಅಂತ್ಯಾಕ್ಷರವಾದ ರುಕಾರವನ್ನೂ ಭಾಂತಿ ಶಬ್ದದ ಆದ್ಯಕ್ಷರವನ್ನು ಸೇರಿಸಿ ರುಭು ಅಥವಾ ಋಭು ಎಂದು ಶಬ್ದವಾಗಿರುವುದಾಗಿ ಕೆಲವರ ಅಭಿಪ್ರಾಯವು. ಅಹಃ+ರಾತ್ರಿಃ=ಹೋರಾ ಎಂಬಂತೆ

(೨) **ಋತೇನ ಭಾಂತೀತಿ ಇತಿ ವಾ ।** ಋತೇನ–ಎಂದರೆ ಸತ್ಯದಿಂದ ಅಥವಾ ಯಜ್ಞದಿಂದ ಪ್ರಕಾಶಿಸುರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು.

(೩) **ಋತೇನ ಭವಂತೀತಿ ವಾ ।** ಋತೇನ ಎಂದರೆ ಸತ್ಯದಿಂದ (ಸಾಮರ್ಥ್ಯದಿಂದ) ಇರುವವರಾದ್ದರಿಂದ ಎಂದರೆ ಸಾಮರ್ಥ್ಯವುಳ್ಳವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು. ಋತೇನ ಎಂಬ ಶಬ್ದದ ಆದ್ಯಕ್ಷರವಾದ ಋಕಾರವೂ ಭವಂತಿಶಬ್ದದ ಆದ್ಯಕ್ಷರವಾದ ಭಕಾರವೂ ಸೇರಿ ಋಭುವೆಂದು ಆಗಿರುವುದೆಂದು ಕೆಲವರು ಹೇಳುವರು.

ಈ ಋಭುಗಳು ಹಿಂದೆ ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ವಿಷಯವನ್ನು ಈ ಋಕ್ಕು ವಿಶದವಾಗಿ ತಿಳಿಸುವುದು—

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನುಶುಃ ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥**

(ಋ. ಸಂ. ೧–೧೧೦–೪)

ಇದಕ್ಕೆ ಯಾಸ್ಕರ ನಿರುಕ್ತವು—

**ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತತ್ವಮಾನಶಿರೇ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ, ಸಂವತ್ಸರೇ ಸಮ-ಪೃಚ್ಯಂತ ಧೀತಿಭಿಃ ಕರ್ಮಭಿಃ ॥**

ಮುಖ್ಯಾಭಿಪ್ರಾಯವೇನೆಂದರೆ—ಸುಧನ್ವದ ಪುತ್ರರಾದ ಈ ಋಭುಗಳು ಹಿಂದೆ ಮನುಷ್ಯರಾಗಿದ್ದರು. ಅವರು ಸೂರ್ಯನಿಗೆ ಸಮಾನವಾದ ತಮ್ಮ ಪ್ರಜ್ಞೆ ಅಥವಾ ಬುದ್ಧಿಶಕ್ತಿಯಿಂದ ಬೇಗನೆ ಎಂದರೆ ಒಂದೇ ಸಂವತ್ಸರದಲ್ಲಿ ಸರ್ವಯಜ್ಞಗಳನ್ನೂ ಮಾಡಿ **ಅಮೃತತ್ವಂ** ಎಂದರೆ ದೇವತ್ವವನ್ನು (ಮರಣರಹಿತತ್ವವನ್ನು) ಪಡೆದರು.

ಋಭುಶಬ್ದಕ್ಕೆ ಯಾಸ್ಕರು ಮತ್ತೊಂದರ್ಥವನ್ನೂ ಹೇಳಿರುವರು—

**ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ**—ಸೂರ್ಯನ ರಶ್ಮಿಗಳಿಗೂ ಋಭವಃ ಎಂದು ಹೇಳುವರು. ಉದಾಹರಣೆಗಾಗಿ—

**ಉದ್ವತ್ಸವಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।**
**ಅಗೋ ಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದನೃಭವೋ ನಾನು ಗಚ್ಛಥ ॥**

(ಋ.-ಸಂ. ೧-೧೬೧-೧೧)

ಈ ಋಕ್ಕಿಗೆ ಯಾಸ್ಕರು—**ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತಿ ಎಂದು** ಎಂದು ನಿರುಕ್ತವನ್ನು ಹೇಳಿರುವರು. ಭಾಷ್ಯಕಾರರೂ ಸಹ ಈ ಈ ಋಕ್ಕಿನ ಅರ್ಥವಿವರಣೆ ಮಾಡುವಾಗ ಋಭವಃ ಎಂಬ ಶಬ್ದಕ್ಕೆ—**ಋಭವಃ ಉರು ಪ್ರಭೂತಂ ಭಾಸಮಾನಾಃ ಋತೇನಾದಿತ್ಯೇನ ಭಾಸಮಾನಾ ವಾ ಋತೇನೋದಕೇನೋಕೇನೋದಕಾರ್ಥಮುತ್ಪನ್ನಾವಾ**—ಎಂದು ಅರ್ಥಮಾಡಿರುವರು.

ಋ. ಸಂ ೧-೧೧೦-ನೆಯ ಋಕ್ಕಿನಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸಿದ ಅಥವಾ ಆತಿಥ್ಯವನ್ನು ನೀಡಿದ ಸವಿತೃವಿನ ಮನೆಗೆ ಋಭುಗಳು ಹೋದರು ಎಂದು ಪೂರ್ವದ ಇತಿಹಾಸದ ಸಂದರ್ಭವು ಸೂಚಿಸಿದೆ. ಈ ಇತಿಹಾಸವನ್ನು ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ, ಸಾಯಣರು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಸಂದರ್ಭದಲ್ಲಿ,

**ಅತ್ರೇತಿಹಾಸಮಾಚಕ್ಷತೇ । ಋಭವೋ ಯಜ್ಞಿಯತ್ವಂ ಪ್ರಾರ್ಥಯಮಾನಃ ಪ್ರಜಾಪತೇಃ ಸಕಾಶಮುಗಮನ್ । ಅಥ ಪ್ರಜಾಪತಿಃ ಸವಿತಾರಮಾಹೂಯಾವೋಚತ್ । ಏತೇಽಪಿ ಯಜ್ಞಿಯಾ ಭವಂತ್ವಿತಿ । ತಥೇತಿ ಸವಿತಾ ಪ್ರತಿಪದ್ಯ ತಾನ್ ಸ್ವಗೃಹಂ ನೀತ್ವಾ ದ್ವಾದಶ ದಿನಾನ್ಯಾತಿಥ್ಯಮೇಷಾಮಕಾರ್ಷೀದಿತಿ । ತದೇತದ್ವಾಮದೇವೋ ವಕ್ಷ್ಯತಿ ।**

ಋಭುಗಳು ಯಜ್ಞದಲ್ಲಿ ಭಾಗವಹಿಸಿ ಹವಿಸ್ಸನ್ನು ಸ್ವೀಕರಿಸಲು ಅರ್ಹತೆಯನ್ನು ಪಡೆಯಬೇಕೆಂದು ಇಚ್ಛಿಸಿ ಪ್ರಜಾಪತಿಯ ಸಮೀಪಕ್ಕೆ ಹೋದರು. ಆಗ ಪ್ರಜಾಪತಿಯು ಸವಿತೃವನ್ನು ಕರೆದು ಇವರೂ ಸಹ ಯಜ್ಞಾರ್ಹರಾಗಲಿ (ಅದಕ್ಕೆ ಸಹಾಯ ಮಾಡು) ಎಂದು ಹೇಳಿದನಂತರ ಸವಿತೃವು ಹಾಗೇ ಆಗಲೆಂದು ಒಪ್ಪಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಹನ್ನೆರಡು ದಿನಗಳು ಅವರಿಗೆ ಅತಿಥಿಸತ್ಕಾರವನ್ನು ನೆರವೇರಿಸಿದನು ಎಂದು ಸ್ಕಂದಸ್ವಾಮಿಗಳು ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಈ ಕಥಾಸಾರಾಂಶವನ್ನು ಸೂಚಿಸತಕ್ಕ,

ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।
ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥

(ಋ. ಸಂ. ೪-೩೩-೭)

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. ಇದೇ ಸಂದರ್ಭದಲ್ಲಿ ಸಾಯಣರು **ಋಭುಗಳು ಸವಿತೃವಿನ** ಮನೆಗೆ ಹೋಗಲು ಒದಗಿದ ಕಾರಣವನ್ನು ತಿಳಿಸತಕ್ಕ ಅಂಶವನ್ನು ಸೂಚಿಸಿದ್ದಾರೆ.

ದಾಶುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪನಾರಿತೇಭ್ಯ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುಃ ಗೃಹಂ ನಿವಾಸಸ್ಥಾನಂ ತೃತೀಯಸವನಾಖ್ಯಮಗಚ್ಛತ ಪ್ರಾಪ್ತಾಃ ॥

ಪ್ರಾತಃಸವನಾದಿಗಳಲ್ಲಿ ಅಗ್ನ್ಯಾದಿದೇವತೆಗಳಿಂದ ತಿರಸ್ಕರಿಸಲ್ಪಟ್ಟು ಹೊರಕ್ಕೆ ಕಳುಹಲ್ಪಟ್ಟ ಋಭುಗಳಾದ ನಿಮಗೆ ಸೋಮಪಾನವನ್ನು ಅರ್ಪಿಸಿದ ಸವಿತೃವಿನ ತೃತೀಯಸವನರೂಪವಾದ ಯಜ್ಞಗೃಹವನ್ನು ಪ್ರವೇಶಿಸಿ ಎಂದು ಅಗ್ನ್ಯಾದಿಗಳಿಂದ ಸಂಭವಿಸಿದ ತಿರಸ್ಕಾರದ ವಿಷಯವನ್ನೂ ಹೇಳಿದ್ದಾರೆ. ಈ ವಿಷಯವು ಐತರೇಯಬ್ರಾಹ್ಮಣದಲ್ಲಿ ವಿಶದವಾಗಿ ಉಕ್ತವಾಗಿದೆ.

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃ- ತೀಯಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾ- ಪತಿರುಭಯತಃ ಪರ್ಯಪಿಬತ್ ।

(ಐ. ಬ್ರಾ. ೧೩-೩೦)

ಋಭುಗಳು ತಮ್ಮ ತಪಃಸಾಧನೆಯಿಂದಲೂ, ಉತ್ಕಟನಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನವನ್ನು ಸಂಪಾದಿಸಿದರು ಮೊದಲು ಪ್ರಾತಃಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಮಾಧ್ಯಂದಿನ ಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವತೆಗಳು ' ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ, ನೀವು ಮಾಡಕೂಡದು ' ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು ' ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು ' ಎಂದನು. ಅನಂತರ ಸವಿತೃವು ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಸೋಮರಸವನ್ನು ಪಾನಮಾಡಿದನು, ಎಂಬುದಾಗಿ ಐತರೇಯಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಸನ್ನಿವೇಶವನ್ನು ಸಾಯಣರು ಸೂಕ್ಷ್ಮವಾಗಿ ಹೇಳಿದ್ದಾರೆ.

ಋಭುಗಳ ಕಲಾಕೌಶಲ್ಯದ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು—ತ್ವಷ್ಟೃವಿನಿಂದ ನಿರ್ಮಿತವಾದಾಗ ಒಂದೇ ಆಗಿ ಇದ್ದ ಚಮಸಪಾತ್ರೆಯನ್ನು ನಾಲ್ಕುಪಾತ್ರೆಗಳನ್ನಾಗಿ ಮಾಡಿದಿರಿ ಎಂದು ಋಭುಗಳ ಕಲಾಕೌಶಲ್ಯವನ್ನು ಶ್ಲಾಘಿಸಿದೆ.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
ಅಕರ್ತ ಚತುರಃ ಪುನಃ ॥

(ಋ. ಸಂ. ೧-೨೦-೬)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ ಮತ್ತು ಇದೇ ವಿವರವನ್ನು ಮುಂದೆಯೂ—

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ಕೃಣವಾಮೇತ್ಯಾಹ ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟಾ ಋಭವಸ್ತತ್ಪನಯದ್ವಚೋ ವಃ

(ಋ ಸಂ. ೪-೩೩-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳುವಂತೆಯೂ ಸಹ ಒಂದಾದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇವರು ತ್ವಷ್ಟೃವಿನ ಶಿಷ್ಯರಾಗಿದ್ದರೆಂಬುದೂ ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸುಧನ್ವನ ಆಂಗೀರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚತೇಽಭವನ್ ॥
ಶಿಕ್ಷಯಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹೀತೇನಾಗ್ನಿನಾಪಿ ಯತ್ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಸ್ತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥
ತ್ವಷ್ಟಾ ಚ ಸವಿತಾ ಚೈವ ದೇವತೇವಃ ಪ್ರಜಾಪತಿಃ ।
ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ದದುಶ್ಚ ತೇ ॥
ತೇಷಾಮಾದ್ಯಾಂತ್ಯಯೋರನ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।
ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ॥

(ಬೃ. ದೇ. ೩-೮೩ ರಿಂದ ೮೯)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲ ಕಲಾಕುಶಲರಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ನಿಪುಣರಾದ ವಿಶ್ವೇದೇವತೆಗಳು ಪ್ರತಿಭಟನಾವೃತ್ತಿಯಿಂದ ಎದುರಿಸಿದರು ಆಗ ಇವರು ಸಕಲ ದೇವತೆಗಳಿಗೂ ಸಹ ಆಯುಧಗಳನ್ನೂ, ವಾಹನಗಳನ್ನೂ ನಿರ್ಮಿಸಿದರು. ಅನಂತರ ಅಮೃತನಾಡಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳಿಗೆ, ಆಸನ

ತ್ರಯುಗಳುಳ್ಳ ರಥಗಳನ್ನೂ, ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತವಾದುದನ್ನೂ, ಎಂದರೆ,

**ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ೧ ಕದ್ಯದೂಚಿಮ ।**
**ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥**
**ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ ಆಗಮಂ ।**
**ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥ ॥**
**ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ ಕರ್ತ್ವಃ ।**
**ಧೇನುಃ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇಮಸಿ ॥**

(ಋ. ಸಂ. ೧-೧೬೧-೧ ರಿಂದ ೩)

ಎಂಬ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವದೂತನಾಗಿ ಸುಧನ್ವಪುತ್ರರಲ್ಲಿಗೆ ಹೋಗಿ ಒಂದೇ ಆಗಿರುವ ಚಮಸಪಾತ್ರೆಯನ್ನು ನಾಲ್ಕನ್ನಾಗಿ ಮಾಡಿ ದೇವತೆಗಳಿಗೆ ಸಹಾಯಮಾಡಿದರೆ ಆಗ ಅವರ ಜೊತೆಯಲ್ಲಿ ಸೋಮರಸ ಪಾನಕ್ಕೆ ಅರ್ಹತೆಯನ್ನು ಅವರು ಪಡೆಯುವರೆಂದು ಹೇಳಿದಾಗ ಅವರು ನಿಮಗೆ ಇದೊಂದು ಕೆಲಸಮಾತ್ರವಲ್ಲದೇ ಅಶ್ವನಿರ್ಮಾಣವಾಗಲಿ, ರಥನಿರ್ಮಾಣವಾಗಲಿ ಅಥವಾ ಧೇನುನಿರ್ಮಾಣವಾಗಲಿ ಅಥವಾ ವೃದ್ಧರಾದ ಮಾತಾಪಿತೃಗಳನ್ನು ಯುವಕರನ್ನಾಗಿ ಮಾಡುವುದಾಗಲಿ ಇವೆಲ್ಲಾ ನಮ್ಮಿಂದ ಸಾಧ್ಯವಾಗಿದ್ದು, ಅದರಂತೆಯೇ ಈಗಲೂ ಸಹ ನಿಮಗೆ ಅಪೇಕ್ಷಿತವಾದುದನ್ನೆಲ್ಲಾ ಮಾಡಿಕೊಡುವೆವು ಎಂದು ಅದನ್ನು ಮಾಡಿಕೊಟ್ಟರು ಎಂಬ ವಿಷಯವನ್ನು ಇಲ್ಲಿ ಸೂಚಿಸಿದೆಯಾದ್ದರಿಂದ ಅಂತಹ ಕುಶಲಕಾರ್ಯದಿಂದ ಅಗ್ನಿಗೆ ಸಹಾಯವನ್ನು ಮಾಡಿದರು. ಆಗ ತ್ವಷ್ಟೃವೂ ಸವಿತೃವೂ, ದೇವದೇವನಾದ ಪ್ರಜಾಪತಿಯೂ ಸಕಲ ದೇವತೆಗಳನ್ನೂ ಕರೆದು ಋಭುಗಳಿಗೆ ಅಮೃತತ್ವವು ಲಭಿಸುವಂತೆ ಅನುಗ್ರಹಿಸಿದರು. ಆಗ (ಅವರನ್ನು ಮೊದಲು ತಿರಸ್ಕರಿಸಿದ್ದ) ಇಂದ್ರನೂ ಸಹ ಅವರೊಂದಿಗೆ ಸೋಮರಸವನ್ನು ಪಾನಮಾಡಿದನು ಎಂಬ ಕಥೆಯು ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸಾಯಣಭಾಷ್ಯದಲ್ಲಿ ಹೇಳಿರುವ ಕಥೆಯು ಈ ರೀತಿಯಿದೆ—**ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ಮೃತತ್ವಂ ದೃಷ್ಟ್ವಾ ಋಭುಂ ತುಷ್ಟಾವ। ಋಭವಸ್ತತ್ಸದೃಶೀಮನ್ಯಾಂ ಧೇನುಂ ಕೃತ್ವಾ ತದೀಯೇನ ಚರ್ಮಣಾ ಸಂವಿಯ ತೇನ ವತ್ಸೇನ ಸಮಯೋಜಯನ್ನಿತಿ ।** ಹಿಂದೆ ಒಬ್ಬ ಋಷಿಯ ಧೇನುವು ಮೃತವಾದಾಗ ಅದರ ಸಣ್ಣ ಕರುವಿನ ಮೇಲಿನ ಕನಿಕರದಿಂದ ಅದಕ್ಕೆ ಸಹಾಯಮಾಡಬೇಕೆಂದು ಋಭುಗಳನ್ನು ಪ್ರಾರ್ಥಿಸಿದನು. ಆಗ ಋಭುಗಳು ಬೇರೆ ಹಸುವನ್ನು ಸೃಷ್ಟಿಸಿ ಅದಕ್ಕೆ ಸತ್ತ ಹಸುವಿನ ಚರ್ಮವನ್ನು ಹೊದ್ದಿಸಿ ಆ ಕರುವಿನೊಂದಿಗೆ ಸೇರುವಂತೆ ಮಾಡಿದರು. ಇದು ಇದರ ಮಹಿಮೆಯು. ಸ್ಕಂದಸ್ವಾಮಿಗಳ ವಿವರಣೆಯಂತೆ,

**ಅತ್ರೇತಿಹಾಸಮಾಚಕ್ಷತೇ । ಋಷೇಃ ಕಸ್ಯಚಿದಗ್ನಿಹೋತ್ರಧೇನುಸ್ತರುಣವತ್ಸಾ ಮಮಾರ । ತಸ್ಯಾಂ ವಿಕರ್ತಿತಾಯಾಂ ಅರುದತಾ ವತ್ಸೇನ ಉದ್ವೇಜಿತಃ ಋಭೂನ್ ಸ್ವಪಿತರೌ ವೃದ್ಧೌ ಪುನರ್ಯುವಾನೌ ಕುರ್ವತೋ ದದರ್ಶ । ತಾನುವಾಚ । ಮಮಾಪ್ಯಗ್ನಿಹೋತ್ರಧೇನುಂ ಮೃತಾಂ ಪುನರ್ಜೀವಯತೇತಿ । ತಸ್ಯ ಸ್ವಮಾಹಾತ್ಮ್ಯೇನತಸ್ಮಾಚ್ಚರ್ಮಣಃ ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ ಇತಿ । ತದೇತದಭಿಹೋಚ್ಯತೇ ನಿಶ್ಚರ್ಮಣ ಇತಿ ।**

ಒಬ್ಬ ಋಷಿಯ ಅಗ್ನಿಹೋತ್ರಧೇನುವು ತನ್ನ ಎಳೆಯ ಕರುವನ್ನು ಬಿಟ್ಟು ಸತ್ತುಹೋಯಿತು. ಅದನ್ನು ಕುಯ್ಯುವಾಗ ಆ ಎಳೆಯ ಕರುವಿನ ಆರ್ತನಾದವನ್ನು ಕೇಳಿ ಕನಿಕರದಿಂದ ಋಷಿಯು ಋಭುಗಳನ್ನು ಜ್ಞಾಪಿಸಿಕೊಂಡನು. ಅವರು ತಮ್ಮ ವೃದ್ಧರಾದ ಮಾತಾಪಿತೃಗಳನ್ನು ಪುನಃ ವಯಸ್ಕರನ್ನಾಗಿ ಮಾಡುತ್ತಿದ್ದರು. ಅವರ ಆ ಶಕ್ತಿಯನ್ನು ನೋಡಿ ಮೃತವಾದ ತನ್ನ ಅಗ್ನಿಹೋತ್ರಧೇನುವನ್ನೂ ಬದುಕಿಸಬೇಕೆಂದು ಕೇಳಿಕೊಂಡನು. ಅವರು ಸತ್ತುಹೋಗಿದ್ದ ಆ ಹಸುವನ್ನು ಅದೇ ವಿಕರ್ತಿತವಾದ ಚರ್ಮದ ಹೊದ್ದಿಕೆಯಿಂದ ಪೂರ್ಣವಾದ ಅವಯವಗಳುಳ್ಳದ್ದನ್ನಾಗಿ ಮಾಡಿ ಆ ಹಸುವನ್ನು ಬದುಕಿಸಿದರು ಎಂದು ಹೇಳಿದೆ. ಸಾಯಣರು ಹೇಳುವುದಕ್ಕೂ ಇದಕ್ಕೂ ಇರುವ ಮುಖ್ಯವ್ಯತ್ಯಾಸವು ಏನೆಂದರೆ, ಅವರು **ಅನ್ಯಾಂ ಧೇನುಂ ಕೃತ್ವಾ** ಎಂದಿದ್ದಾರೆ. ಸ್ಕಂದಸ್ವಾಮಿಯು **ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ** ಎಂದು ಹೇಳಿದ್ದಾರೆ.

ಋಭು ಎಂಬ ಪದವು ಪ್ರಾಯಶಃ ರಭ್ (ಹಿಡಿದಿಕೋ) ಧಾತುವಿನಿಂದ ನಿಷ್ಪನ್ನವಾಗಿದೆ. (೨-೩-ಅನ್ನು ಹೋಲಿಸಿ); ಆದುದರಿಂದಲೇ ಆ ಪದಕ್ಕೆ ' ಸಮಯಕ್ಕೆ ಒದಗುವ ' ' ಕೈಚಳಕವುಳ್ಳ ' ಎಂದು ಅರ್ಥವಾಗಿದೆ. ಈ ಋಭುಪದವು ಇದೇ ಅರ್ಥದಲ್ಲಿ ವಿಶೇಷಣವಾಗಿ ಇಂದ್ರ, ಅಗ್ನಿ, ಮತ್ತು ಆದಿತ್ಯರುಗಳಿಗೆ ಅನೇಕ ಸಲ ಉಪಯೋಗಿಸಲ್ಪಟ್ಟಿದೆ. ವಾಜ ಎಂಬ ಪದಕ್ಕೆ ಸಮರ್ಥ ಎಂತಲೂ ವಿಭ್ವಾ ಎಂಬುದಕ್ಕೆ ಪ್ರಸಿದ್ಧವಾದ ಎಂತಲೂ ಅರ್ಥವಾಗುತ್ತದೆ. ಆದುದರಿಂದ ಋಭು ಮೊದಲಾದ ಪದಗಳು, ಅವರುಗಳ ಕೌಶಲ್ಯವನ್ನೂ ಸೂಚಿಸುವ ಅನ್ವರ್ಥನಾಮಗಳಾಗಿವೆ.

ಇವರು ಮೊದಲು ದೇವತೆಗಳಾಗಿರಲಿಲ್ಲವೆಂಬುದು ಸ್ಪಷ್ಟವಾದ ವಿಷಯ. ಆದರೆ ದೇವತೆಗಳಾಗುವ ಮುಂಚೆ ಅವರ ಸ್ವಭಾವವೇನು ಎಂಬುದು ಸ್ಪಷ್ಟವಾಗಿಲ್ಲ. ಸೌಧನ್ವರು ಎಂದು ಹೇಳಿದಾಗಲೂ ಅವರು ಯಾರೆಂಬುದು ಗೊತ್ತಾಗುವುದಿಲ್ಲ. ಸುಧನ್ವಾನ್ ಎಂಬುದು ರುದ್ರ ಮತ್ತು ಮರುತರಿಗೆ ಅನ್ವಯಿಸುವಂತೆ ಎರಡೇ ಸಲ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಅನೇಕ ಕಡೆ ಹೇಳಿರುವಂತೆ, ದ್ಯಾವಾಭೂಮಿಗಳು ಅವರ ಮಾತಾಪಿತೃಗಳಿರಬಹುದು. ಮರೆಮಾಡಲಸಾಧ್ಯವಾದ ಸವಿತೃವಿನ ಮನೆಯಲ್ಲಿದ್ದುದರಿಂದ ಅವರಿಗೆ ಭೂಮಿಯನ್ನು ಫಲವತ್ತಾಗಿ ಮಾಡುವ ಶಕ್ತಿಯಿದೆಯೆಂದು ಹೇಳಿರಬಹುದು. ಅನೇಕ ವಿದ್ವಾಂಸರು, ಈ ಮೂವರೂ ಮೂರು ಋತುಗಳ ಅಭಿಮಾನಿಗಳೆಂದೂ, ಅವರು ಹನ್ನೆರಡು ದಿನಗಳು ನಿದ್ರಿಸಿದರೆಂಬುದು ಮಕರ ಸಂಕ್ರಾಂತಿ ಕಾಲದಲ್ಲಿ ಋತುಗಳು ಹನ್ನೆರಡು ದಿವಸ ಚಲಿಸದೇ ಇರುವುದಕ್ಕೆ ಅನ್ವಯಿಸುತ್ತದೆಯೆಂತಲೂ, ಬಟ್ಟಲೆಂಬುದು ಚಂದ್ರನೆಂತಲೂ, ಅದು ನಾಲ್ಕು ಆಯಿತೆಂಬುದು ಚಂದ್ರನ ನಾಲ್ಕು ರೂಪಗಳೆಂತಲೂ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಇವರು ಭೂಮಿ ಮತ್ತು ವಾಯುಮಂಡಲದಲ್ಲಿರುವ ಅಪ್ರಾಕೃತವ್ಯಕ್ತಿಗಳೆಂದೂ, ಅವರ ಕೌಶಲ್ಯವು ಅವರ ವಿಷಯವಾಗಿ ಅನೇಕ ಅನೇಕ ಸಾಹಸಕರ್ಮಗಳ ಕಥೆಗಳು ಹೊರಡುವಂತೆ ಮಾಡಿತೆಂದೂ ಹೇಳಬಹುದು. ಆದರೆ ಋಗ್ವೇದವೊಂದನ್ನೇ ಆಧಾರವಾಗಿಟ್ಟುಕೊಳ್ಳುವುದಾದರೆ ಯಾವ ನಿಶ್ಚಿತ ಅಭಿಪ್ರಾಯಕ್ಕೂ ಅವಕಾಶವಿಲ್ಲ.

ಚನಃ ॥ ೬೪ ॥ ಪಚತಾ ॥೬೫॥

" ಅದ್ಧೀದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ " ಅದ್ಧೀಂದ್ರ ಪ್ರಸ್ಥಿತಾನೀಮಾನಿ ಹವೀಂಷಿ ಚನೋ ದಧಿಷ್ವ । ಚನ ಇತ್ಯನ್ನನಾಮ । ಪಚತಿರ್ನಾಮೀಭೂತಃ । " ತಂ ಮೇದಸ್ತಃ ಪ್ರತಿ ಪಚತಾಗ್ರಭೀಷ್ಮಾಮ್ " ಇತ್ಯಪಿ ನಿಗಮೋ ಭವತಿ ॥೨॥

ಉದಾಹರಣೆಯ ಋಕ್ಕು—

**ಅದ್ಧೀದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ ।**
**ಪ್ರಯಸ್ವಂತಃ ಪ್ರತಿ ಹರ್ಯಾಮಸಿ ತ್ವಾ ಸತ್ಯಾಃ ಸಂತು ಯಜಮಾನಸ್ಯ ಕಾಮಾಃ ॥**

(ಋ. ಸಂ. ೧೦-೧೧೬-೮)

ಇದರ ಅರ್ಥವು—

ಎಲೈ ಇಂದ್ರನೇ, ಉತ್ತರವೇದಿಯಲ್ಲಿ ತಂದು ಸಿದ್ಧಪಡಿಸಿಟ್ಟಿರುವ ಈ ಹವಿಸ್ಸುಗಳನ್ನು ಖಂಡಿತ ಭಕ್ಷಿಸು. ಹಾಗೆಯೆ ಅನ್ನವನ್ನೂ ಪಕ್ವವಾದ ಪುರೋಡಾಶಾದಿಗಳನ್ನು ನಿನ್ನ ಉದರದಲ್ಲಿ ತುಂಬಿಕೋ. ಮತ್ತು ಸೋಮರಸವನ್ನು ಪಾನಮಾಡು. ತೃಪ್ತಿಯನ್ನುಂಟುಮಾಡುವ ಅನ್ನವನ್ನು ಅರ್ಪಿಸುವ ನಾವು ನಿನ್ನನ್ನು ಸಮೀಪಿಸಿ ಧನಾದಿಗಳನ್ನು ಯಾಚಿಸುತ್ತೇವೆ. ಯಜ್ಞವನ್ನು ಮಾಡುವ ಯಜಮಾನನ ಸಮಸ್ತ ಅಭಿಲಾಷೆಗಳೂ (ಕೋರಿಕೆಗಳು) ಸಿದ್ಧಿಸಲಿ.

ಈ ಋಕ್ಕಿನಲ್ಲಿರುವ **ಚನಃ** ಮತ್ತು **ಪಚತಾ** ಎಂಬ ಶಬ್ದಗಳಿಗೆ ಈ ರೀತಿ ನಿರ್ವಚನವನ್ನು ಹೇಳಿದೆ—ಎಲೈ ಇಂದ್ರನೇ, ಇಲ್ಲಿ ಸಿದ್ಧಪಡಿಸಿರುವ ಹವಿಸ್ಸುಗಳನ್ನೂ ಅನ್ನವನ್ನೂ ನಿನ್ನ ಉದರದಲ್ಲಿ ತುಂಬಿಕೋ ಎಂದು ವಾಕ್ಯಾರ್ಥವು. ಇಲ್ಲಿ **ಚನಃ** ಎಂಬುದು ಅನ್ನವೆಂಬ ಅರ್ಥವನ್ನು ಸೂಚಿಸುವ ಶಬ್ದವು. **ಚನಃ** ಎಂದರೆ ಅನ್ನವು. ಈ ವಿಷಯದಲ್ಲಿ **ಅದ್ಧೀದಿಂದ್ರ** ಎಂಬ ಮೇಲಿನ ಶ್ರುತಿವಾಕ್ಯವೇ ಉದಾಹರಣೆಯು. **ಪಚತಿ** ಎಂಬ ಶಬ್ದವು ಕ್ರಿಯಾಪದವಾಗಿದ್ದರೂ ಇದು ಅನೇಕ ಸಂದರ್ಭಗಳಲ್ಲಿ ನಾಮಪದದಂತೆಯೇ ವ್ಯವಹರಿಸಲ್ಪಡುವುದು. ಈ ವಿಷಯದಲ್ಲಿ **ತಂ ಮೇದಸ್ತಃ ಪ್ರತಿ ಪಚತಾಗ್ರಭಿಷ್ಟಾಂ** ಎಂಬ ಶ್ರುತಿ ವಾಕ್ಯವು ಇದನ್ನು ಸಮರ್ಥಿಸುವುದು.

ಅಪಿ ವಾ ಮೇದಸಶ್ಚ ಪಶೋಶ್ಚ ಸಾತ್ತ್ವಂ ದ್ವಿವಚನಂ ಸ್ಯಾದ್ಯತ್ರ ಹ್ಯೇಕ-
ವಚನಾರ್ಥಃ ಪ್ರಸಿದ್ಧಂ ತದ್ಭವತಿ । "ಪುರೋಳಾ ಅಗ್ನೇ ಪಚತಃ"
ಇತಿ ಯಥಾ ॥೩॥

**ಪಚತಾ** ಎಂಬ ಶಬ್ದದ ಏಕವಚನವನ್ನೂ ಉಪಯೋಗಿಸಲಾಗುವುದು. ಕೆಲವುಕಡೆ ಶಬ್ದದ ದ್ವಿವಚನ ಪ್ರಯೋಗವಿದ್ದರೂ ಅರ್ಥವನ್ನು ಏಕವಚನವೆಂದು ಭಾವಿಸಬೇಕು. ಉದಾಹರಣೆ—

**ಪುರೋಳಾ ಅಗ್ನೇ ಪಚತಸ್ತುಭ್ಯಂ ವಾ ಘಾ ಪರಿಷ್ಕೃತಃ ॥**
**ತಂ ಜುಷಸ್ವ ಯವಿಷ್ಠ್ಯ ॥**

(ಋ. ಸಂ. ೩-೨೮-೨)

ಇದರ ಅರ್ಥವು—

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಅಧ್ವರ್ಯುಗಳು ಅರ್ಪಿಸತಕ್ಕ ಪುರೋಡಾಶವು ಪಕ್ವಮಾಡಲ್ಪಟ್ಟು ನಿನಗೆ ಅರ್ಪಿಸುವುದಕ್ಕಾಗಿ ಪರ್ಯಗ್ನಿಕರಣಾದಿಗಳಿಂದ ಅಲಂಕೃತವಾಗಿ ಸಿದ್ಧವಾಗಿಯೇ ಇದೆ. ಆ ಪುರೋಡಾಶವನ್ನು ಸೇವಿಸು (ಭಕ್ಷಿಸು)

**ಪಚತಃ—ಪಚ್ಯತೇ ಅಸಾವಿತಿ ಪಚತಃ ಪಕ್ವಃ ।** ಪಾಕಮಾಡಲ್ಪಡುವ ಕಾರಣದಿಂದ ಅಥವಾ **ಕಪಾಲಯೋಃ ಪಕ್ವಃ** ಎರಡು ಕಪಾಲಗಳಲ್ಲಿ ಪಕ್ವಮಾಡಲ್ಪಡುವಕಾರಣ ಪುರೋಡಾಶವು ಅಗ್ನಿಗೋಸ್ಕರವಾಗಿ **ಪರಿಷ್ಕೃತಃ ವಾ ಘಾ ಪರ್ಯಗ್ನಿಕರಣಾದಿಭಿರಲಂಕೃತಃ** ಯಾಗದಲ್ಲಿ ಅವಶ್ಯಕರ್ತವ್ಯವಾದ ಪರ್ಯಗ್ನಿಕರಣವೆಂಬುದೇ ಮೊದಲಾದ ಸಂಸ್ಕಾರಗಳಿಂದ

ಸಿದ್ಧಮಾಡಲ್ಪಟ್ಟಿರುವುದೆಂದೂ **ತಮಿಮಂ ಜುಷಸ್ವ** ಯಜಮಾನರಿಂದ ತನಗಾಗಿ ಅರ್ಗಿತವಾಗಿರುವ ಈ ಪುರೋಡಾಶವೆಂಬ ಹವಿಸ್ಸನ್ನು ಸೇವಿಸು ಎಂದು ಯಜಮಾನನ ಆಶಂಸನೆಯು ವರ್ಣಿತವಾಗಿದೆ.

ಶುರುಧಃ ॥ ೬೬ ॥

ಶುರುಧ ಆಪೋ ಭವನ್ತಿ ಶುಚಂ ಸಂರುನ್ಧನ್ತಿ ॥ " ಋತಸ್ಯ ಹಿ ಶುರುಧಃ ಸನ್ತಿ ಪೂರ್ವೀಃ " ಇತ್ಯಪಿ ನಿಗಮೋ ಭವತಿ ॥೪॥

**ಶುರುಧಃ** ಎಂದರೆ ಉದಕಗಳು. ಉದಕಗಳು ಅಗ್ನಿಯ ಔಷ್ಣ್ಯವನ್ನು ಅಥವಾ ಇತರವಿಧವಾದ ಶಾಖವನ್ನು ತಡೆಗಟ್ಟುತ್ತವೆ ಅಥವಾ ಕಡಿಮೆಮಾಡುತ್ತವೆ.

ಉದಾಹರಣೆಯ ಋಕ್ಕು—

**ಋತಸ್ಯ ಹಿ ಶುರಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।**
**ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥**

**(ಋ. ಸಂ. ೪-೨೩-೮)**

ಇದರ ಅರ್ಥವು—

ಋತದೇವನಿಗೆ ಸಂಬಂಧಿಗಳಾದ ಉದಕಗಳು ಬಹುಪ್ರಕಾರವಾಗಿವೆಯೆಂದು ಪ್ರಸಿದ್ಧವಾಗಿದೆ. ಋತದೇವನನ್ನುದ್ದೇಶಿಸಿದ ಸ್ತುತಿಯು ಪಾಪವನ್ನು ನಾಶಮಾಡುತ್ತದೆ. ಋತದೇವನನ್ನುದ್ದೇಶಿಸಿದೂ ಪ್ರಕಾಶಮಾನವೂ ಆದ ಸ್ತುತಿಯು ಮಾನವನ ಕಿವುಡಾದ ಕಿವಿಗಳನ್ನು ತೆರೆದು ಅವುಗಳಿಗೆ ಶ್ರವಣಶಕ್ತಿಯನ್ನು (ಕೇಳುವ ಶಕ್ತಿಯನ್ನು) ಕೊಡುತ್ತವೆ.

ಈ ಋಕ್ಕಿನ ಭಾಷ್ಯದಲ್ಲಿ—**ಅತ್ರ ಋತಶಬ್ದೇನೇಂದ್ರೋ ಆದಿತ್ಯೋ ವಾ ಸತ್ಯಂ ವಾ ಯಜ್ಞೋ ವೋಚ್ಯತೇ।** ಎಂದರೆ ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಇರುವ ಋತಶಬ್ದವು ಋತಶಬ್ದವಾಚ್ಯನಾದ ದೇವತೆಯನ್ನು ನಿರ್ದೇಶಿಸುವುದು. ಈ ದೇವತೆಯು—ಇಂದ್ರ ಆದಿತ್ಯ ಸತ್ಯ ಯಜ್ಞ ಎಂಬ ದೇವತೆಗಳಲ್ಲಿ ಯಾರಾದರೂ ಆಗಬಹುದು ಎಂದು ಹೇಳಿದಾರೆ. ಋತಶಬ್ದಕ್ಕೆಯಾಸ್ಕರು **ಸತ್ಯಂ ವಾ ಯಜ್ಞಂ ವಾ** ಎಂದು ನಿರ್ವಚನವನ್ನು ಹೇಳಿರುವರು. 'ಇಲ್ಲಿ ಉದಕ ವೃಷ್ಟಿ ಅನ್ನ ಸ್ತುತಿ ಮೋದಲಾದ ವಿಷಯಗಳು ಪ್ರಸಕ್ತವಾಗಿರುವುದರಿಂದ ಇವೆಲ್ಲವೂ ಮೇಲೆ ಹೇಳಿದ ಯಾವ ದೇವತೆಗಾದರೂ ಅನ್ವಯಿಸಬಹುದು.

ಅಮಿನಃ ॥೬೭॥

ಅಮಿನೋಽಮಿತಮಾತ್ರೋ ಮಹಾನ್ ಭವತ್ಯಭ್ಯಮಿತೋ ವಾ ॥
" ಅಮಿನಃ ಸಹೋಭಿಃ " ಇತ್ಯಪಿ ನಿಗಮೋ ಭವತಿ ॥ ೫ ॥

**ಅಮಿನಃ**—ಅಳತೆಗೆ ಮೀರಿದ ಅಥವಾ ಅಹಿಂಸಿತನಾದ ಎಂದರ್ಥವು.
ಉದಾಹರಣೆಯ ಋಕ್ಕು—

**ಮಹಾ೯ ಇಂದ್ರೋ ನೃಪದಾಚರ್ಷಣಿಪ್ರಾ ಉತ ದ್ವಿಬರ್ಹಾ ಅಮಿನಃ ಸಹೋಭಿಃ ।**
**ಅಸ್ಮದ್ರ್ಯಗ್ವಾವೃಧೇ ವೀರ್ಯಾಯೋರುಃ ಪೃಥುಃ ಸುಕೃತಃ ಕರ್ತೃಭಿರ್ಭೂತ್ ॥**

(ಋ. ಸಂ. ೬-೧೯-೧)

ಇದರ ಅರ್ಥವು—

ರಾಜನು ಪ್ರಜೆಗಳ ಇಷ್ಟಾರ್ಥವನ್ನು ಪೂರೈಸುವಂತೆ ಸ್ತೋತೃಗಳ ಇಷ್ಟಾರ್ಥಪೂರಕನಾಗಿಯೂ ಮಹಾತ್ಮನಾಗಿಯೂ ಇರುವ ಇಂದ್ರನು ದಯಮಾಡಲಿ. ದ್ಯಾವಾಪೃಥಿವಿಗಳಲ್ಲೆಲ್ಲಾ ಪ್ರವೃದ್ಧನಾಗಿಯೂ ಶತ್ರುಬಲಗಳಿಂದ ಅಹಿಂಸಿತನಾಗಿಯೂ ನಮಗಭಿಮುಖನಾಗಿ ನಮ್ಮ ಶಕ್ತಿಯನ್ನು ಅಧಿಕಮಾಡಲು ತಾನು ವೃದ್ಧಿಯನ್ನು ಹೊಂದುತ್ತಾನೆ. ವಿಸ್ತೃತವಾದ ರೂಪವುಳ್ಳವನೂ ಅತ್ಯಧಿಕವಾದ ಗುಣವುಳ್ಳವನೂ ಆಗಿ ಯಜಮಾನರಿಂದ ಪೂಜಿಸಲ್ಪಡುತ್ತಾನೆ.

**ಅಮಿನಃ**—ಅಹಿಂಸಿತನಾದವನು ; ಇಂದ್ರನ ಬಲಪರಾಕ್ರಮಗಳು ಬಹಳವಾಗಿರುವುದರಿಂದ ಶತ್ರುವು ಎಷ್ಟೇ ಬಲಯುತನಾಗಿದ್ದರೂ ಇಂದ್ರನನ್ನು ಹಿಂಸಿಸಲು ಸಾಧ್ಯವಿಲ್ಲ ಎಂಬಭಿಪ್ರಾಯವು. ಯಾಸ್ಕರು ಈ ಶಬ್ದದ ವಿಷಯದಲ್ಲಿ—

**ಅಮಿನಃ । ಅಮಿನೋಽಮಿತಮಾತ್ರೋ ಮಹಾನ್ ಭವತ್ಯಭ್ಯಮಿತೋ ವಾ । ಅಮಿನಃ ಸಹೋಭಿಃ ಇತ್ಯಪಿ ನಿಗಮೋ ಭವತಿ ॥**

(ನಿ.೬-೧೬)

ಎಂದು ನಿರ್ವಚನವನ್ನು ಹೇಳಿದ್ದಾರೆ. **ಅಮಿನಃ** ಎಂಬ ಈ ಶಬ್ದವು ಮಾಙ್ ಮಾನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಅಳತೆಮಾಡಲು ಸಾಧ್ಯವಿಲ್ಲದ (immeasurable) ಬಲಪರಾಕ್ರಮವುಳ್ಳವನು ಎಂಬರ್ಥವನ್ನು ಕೊಡುವುದು. ದೊಡ್ಡವನು ಅಥವಾ ಹಿಂಸಿಸಲ್ಪಡಲು ಸಾಧ್ಯವಿಲ್ಲದವನು (**ಅಹಿಂಸತಮ**: ; invulnerable) ಎಂದೂ ಅರ್ಥವು. ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ—**ಅಮಿನಃ ಸಹೋಭಿಃ** ಎಂಬ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿರುವರು. ಇಂದ್ರನ ಬಲಪರಾಕ್ರಮಗಳು ಇಷ್ಟೇ ಸರಿ ಎಂದು ಯಾರೂ ಅಳತೆಮಾಡಲು ಎಂದರೆ ನಿರ್ದಿಷ್ಟವಾಗಿ, ಖಚಿವಾಗಿ ಹೇಳಲು' ಸಾಧ್ಯವಿಲ್ಲ. ಇವನ ಶಕ್ತಿಸಾಮರ್ಥ್ಯಾದಿಗಳು ಅಗಾಧವಾಗಿವೆ. ಆದ್ದರಿಂದಲೇ ಇಂದ್ರನನ್ನು ಎಂತಹ ಶತ್ರುವೂ ಹಿಂಸಿಸಲು ಸಾಧ್ಯವಿಲ್ಲ ಎಂದು ಮುಖ್ಯಾಭಿಪ್ರಾಯವು.

**ದಿಬ್ವರ್ಹಾಃ**—ದ್ವಿ ಎಂದರೆ ಎರಡು, ಬರ್ಹ ಎಂದರೆ ದೊಡ್ಡದು. ಆದ್ದರಿಂದ ಈ ಶಬ್ದಕ್ಕೆ ಎರಡು ಸ್ಥಾನಗಳಲ್ಲಿ ಎಂದರೆ ಸ್ವರ್ಗಾಂತರಿಕ್ಷಗಳಲ್ಲಿಯೂ ಅತಿಶಯವಾಗಿ ಪ್ರವೃದ್ಧನಾದವನು ಎಂದರ್ಥವು. ಯಾಸ್ಕರು ಈ ಶಬ್ದಕ್ಕೆ—

**ದ್ವಿಬರ್ಹಾಃ ದ್ವಯೋಃ ಸ್ಥಾನಯೋಃ ಪರಿವೃಢೋ ಮಧ್ಯಮೇ ಚ ಸ್ಥಾನ ಉತ್ತಮೇ ಚ । ಉತ ದ್ವಿಬರ್ಹಾ ಅಮಿನಃ ಸಹೋಭಿಃ ಇತ್ಯಪಿ ನಿಗಮೋ ಭವತಿ ।**

(ನಿ. ೬-೧೭)

ಎಂದು ನಿರ್ವಚನವನ್ನು ಹೇಳಿದ್ದಾರೆ. ಎರಡು ಸ್ಥಾನಗಳಲ್ಲಿ ಎಂದರೆ ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿ ವೈದ್ಯುತಾತ್ಮನಾಗಿಯೂ (ಎಂದರೆ ಮಿಂಚಿನ ರೂಪದಲ್ಲಿಯೂ) ಸ್ವರ್ಗದಲ್ಲಿ ಸೂರ್ಯರೂಪದಿಂದಲೂ ವ್ಯಾಪಿಸಿ ಬೆಳಗುತ್ತಿರುವವನು ಎಂದಭಿಪ್ರಾಯವು. ಎಂದರೆ ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನೂ, ಅಂತರಿಕ್ಷದಲ್ಲಿ ಗೋಚರಿಸುವ ವೈದ್ಯುತಪ್ರಕಾಶವೂ (ಮಿಂಚೂ) ಸಹ ಇಂದ್ರನ ಸ್ವರೂಪಗಳೇ ಆಗಿರುವುವು ಎಂದು ಮುಖ್ಯಾಭಿಪ್ರಾಯವು. ಇಲ್ಲಿ **ಉತ ದ್ವಿಬರ್ಹಾ ಅಮಿನಃ ಸಹೋಭಿಃ** ಎಂದು ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿರುವರು.

**ಮಹಾ ॅ ಇಂದ್ರಃ—ಮಹಾನ್ ಇಂದ್ರಃ** । ಇಂದ್ರನಿಗ **ಮಹಾನ್** (ದೊಡ್ಡವನು) ಎಂಬ ಪ್ರಶಸ್ತಿಯು ಹೇಗೆ ಬಂತೆಂಬ ವಿಷಯದಲ್ಲಿ ಐತರೇಯ ಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿದೆ—

> **ಇಂದ್ರೋ ವೈ ವೃತ್ರಂ ಹತ್ವಾ ಸರ್ವಾ ವಿಜಿತೀಜಿತ್ವಾಬ್ರವೀತ್ಪ್ರಜಾಪತಿಮಹಮೇತದಸಾನಿ ಯತ್ತ್ವಮಹಂ ಮಹಾನಸಾನೀತಿ ಸ ಪ್ರಜಾಪತಿರಬ್ರವೀದಥ ಕೋಽಹಮಿತಿ ಯದ್ಯ-ನ್ಯೈತದವೋಚ ಇತ್ಯಬ್ರವೀತ್ತತೋ ವೈ ಕೋ ನಾಮ ಪ್ರಜಾಪತಿರಭವತ್ಕೋ ವೈ ನಾಮ ಪ್ರಜಾಪತಿರ್ಯನ್ಮಹಾನಿಂದ್ರೋಽಭವತ್ತನ್ಮಹೇಂದ್ರಸ್ಯ ಮಹೇಂದ್ರತ್ವಂ** ।
>
> (ಐ. ಬ್ರಾ. ೧೨–೨೧)

ಪೂರ್ವದಲ್ಲಿ ಇಂದ್ರನು ವೃತ್ರನನ್ನು ಸಂಹಾರಮಾಡಿದನಂತರ ಭೂಮಂಡಲದ ಸಮಸ್ತ ಪ್ರದೇಶಗಳನ್ನೂ ಜಯಿಸಿ, ಪ್ರಜಾಪತಿಯನ್ನು ಕುರಿತು—ಎಲೈ ಪ್ರಜಾಪತಿಯೇ, ಈಗ ನೀನು ಮಹತ್ಸ್ಥಾನವನ್ನು ಗಳಿಸಿ ಪೂಜ್ಯನಾಗಿರುವೆಯಷ್ಟೆ. ಇನ್ನು ಮೇಲೆ ನಿನ್ನ ಮಹತ್ಪದವಿಯು ನನಗೆ ಬೇಕು ಎಂದನು. ಅದಕ್ಕೆ ಪ್ರಜಾಪತಿಯು ನನ್ನ ಪದವಿಯನ್ನು ನೀನು ತೆಗೆದುಕೊಂಡರೆ, ಆಗ ನಾನು ಯಾರು (ಕಃ) ನನ್ನ ಸ್ಥಾನಮಾನವೇನು ಎಂದು ಕೇಳಲು, ಅದಕ್ಕೆ ಇಂದ್ರನು—ಎಲೈ ಪ್ರಜಾಪತಿಯೇ, ಈಗ ನೀನೇ ಹೇಳಿದಂತೆ ನಿನ್ನ ಹೆಸರು ಇನ್ನು ಮೇಲೆ ಕಃ (ಯಾರು) ಎಂದಾಗುವುದು. ಎಂದರೆ ಕ ಶಬ್ದವಾಚ್ಯನಾಗುವೆ ಎಂದನು. ಆದುದರಿಂದ ಆ ಕಾಲ ಮೊದಲುಗೊಂಡು ಪ್ರಜಾಪತಿಯು ಕ ಶಬ್ದವಾಚ್ಯನಾದನು. ಈ ವಿಷಯವು ಪ್ರಸಿದ್ಧವಾಗಿರುವುದು. ಆದುದರಿಂದಲೇ ಯಾವುದಾದರೂ ದಾನವನ್ನು ಸ್ವೀಕರಿಸುವಾಗ ಪಠಿಸಬೇಕಾದ ಪ್ರತಿಗ್ರಹಮಂತ್ರಗಳಲ್ಲಿ ಈ ವಿಷಯವು ಉಕ್ತವಾಗಿರುವುದು. ಎಂದರೆ—**ಕ ಇದಂ ಕಸ್ಮಾ ಅದಾದಿತ್ಯಾಹ । ಪ್ರಜಾಪತಿರ್ವೈ ಕಃ । ಪ್ರಜಾಪತಯ ಏವ ತದ್ದದಾತಿ** ಎಂದು ಇತರ ವೇದಗಳ ಬ್ರಾಹ್ಮಣವಾಕ್ಯವಿರುವುದು. ಕ ಶಬ್ದಕ್ಕೆ ಸುಖವೆಂದು ಅರ್ಥವಿರುವುದರಿಂದ ಪ್ರಜಾಪತಿ ಸಂಬಂಧವಾದ ವ್ಯವಹಾರಗಳಲ್ಲಿಯೂ, ವಿಷಯಗಳಲ್ಲಿಯೂ ಪ್ರಜಾಪತಿಯು ಸುಖಸ್ವರೂಪನು ಎಂದೇ ಹೇಳಲ್ಪಡುವನು. ಈ ರೀತಿ ಪ್ರಜಾಪತಿಯ ಮಹತ್ತ್ವವನ್ನು ಇಂದ್ರನು ಸ್ವೀಕರಿಸಿದುದರಿಂದ ಇಂದ್ರನಿಗೆ **ಮಹಾನ್** ಎಂಬ ಅಭಿಧಾನವು ಬಂದಿತು. ಎಂದರೆ—ಇಂದ್ರನು ಮಹಾನಿಂದ್ರನಾದನು ಈ ವಿಷಯವು ಇತರ ವೇದಗಳಲ್ಲಿ—**ಇಂದ್ರೋ ವೃತ್ರಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ** । ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ದೇವತೆಗಳು ಪ್ರಶಂಸಿಸುತ್ತಾ ಈ ಇಂದ್ರನು ವೃತ್ರನನ್ನು ಸಂಹಾರಮಾಡಿದ್ದರಿಂದ ಮಹೇಂದ್ರನಾದನು. (ಮಹತ್ಪದವಿಯನ್ನು ಗಳಿಸಿದನು) ಎಂದರೆ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾದನು. ಇಂದ್ರನಿಗೆ ಮಹೇಂದ್ರನೆಂಬ ಹೆಸರು ಬರಲು ಇದೇ ಕಾರಣವು—ಎಂದು ಹೇಳಿದೆ.

> **ಸ ಮಹಾನ್ಭೂತ್ವಾ ದೇವತಾ ಅಬ್ರವೀದುದ್ಧಾರಂ ಮ ಉದ್ಧರತೇತಿ ಯಥಾಽಪ್ಯೇತರ್ಹಿಚ್ಛತಿ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಮಹಾನ್ಭವತಿ ತಂ ದೇವಾ ಅಬ್ರುವನ್ ಸ್ವಯಮೇವ ಬ್ರೂಷ್ವ ಯತ್ತೇ ಭವಿಷ್ಯತೀತಿ ಸ ಏತಂ ಮಾಹೇಂದ್ರಂ ಗ್ರಹಮಬ್ರೂತ ಮಾಧ್ಯಂದಿನಂ ಸವನಾನಾಂ ನಿಷ್ಕೇವಲ್ಯಮುಕ್ಥಾನಾಂ ತ್ರಿಷ್ಟುಭಂ ಛಂದಸಾಂ ಪೃಷ್ಠಂ ಸಾಮ್ನಾಂ ತಮಸ್ಮಾ ಉದ್ಧಾರಮುದಹರನ್ ಉದಸ್ಮಾ ಉದಾರ್ಧಂ ಹರಂತೀಯಂ ಏವಂ ವೇದ** ।

ಬಳಿಕ ಇಂದ್ರನು ಮೇಲೆ ಹೇಳಿದಂತೆ ಮಹತ್ಪದವಿಯನ್ನು ಗಳಿಸಿ ದೇವತೆಗಳನ್ನು ಕರೆದು ಇಂತೆಂದನು—ಎಲೈ ದೇವತೆಗಳೇ, ನಾನು ಮಹತ್ಪದವಿಯನ್ನು ಗಳಿಸಿರುವುದರಿಂದ ಇದರ ನಿಮಿತ್ತವಾಗಿ ಎಂದರೆ ನನ್ನನ್ನು ಅಭಿನಂದಿಸುವುದಕ್ಕಾಗಿ ಗೌರವಸೂಚಕವಾದ ಸತ್ಕಾರವೊಂದನ್ನು ಏರ್ಪಡಿಸಿ ಎಂದನು. ಲೋಕವ್ಯವಹಾರದಲ್ಲಿಯೂ ಸಹ ಒಬ್ಬ ಪುರುಷನಿಗೆ ಅತುಳೈಶ್ವರ್ಯ ಪ್ರಾಪ್ತವಾಗಲಿ, ವಿದ್ಯಾದಿಗಳಲ್ಲಿ ಪ್ರಶಸ್ತಿಯಾಗಲಿ, ರಾಜಸನ್ಮಾನವಾಗಲಿ, ಲಭಿಸಿದಲ್ಲಿ ಅಂತಹ ಪುರುಷನು ಜನರ ಮಧ್ಯೆ ಗಣ್ಯನಾದವನೆಂದು ಪ್ರಸಿದ್ಧನಾಗಿರುವುದರಿಂದ ಜನರು ಸಾಧಾರಣವಾಗಿ ಅಂತಹ ಪುರುಷನನ್ನು ಅಭಿನಂದಿಸಲು ಸತ್ಕಾರಕೂಟವನ್ನು ಏರ್ಪಡಿಸುವುದು ರೂಢಿಯಷ್ಟೆ. ಅದರಂತೆ ಇಂದ್ರನು ದೇವತೆಗಳನ್ನು ಈ ವಿಷಯವಾಗಿ ಪ್ರಶ್ನೆಮಾಡಿದನು. ದೇವತೆಗಳು ಸಹ ಇಂದ್ರನ ಮಾತನ್ನನುಮೋದಿಸಿ—ಎಲೈ ಇಂದ್ರನೇ, ಈ ಸತ್ಕಾರಸಮಾರಂಭವನ್ನು ಯಾವ ರೀತಿ ಮಾಡಬೇಕು ? ಹೇಗೆ ಮಾಡಿದರೆ ನಿನಗೆ ಸಂತೋಷವಾಗುವುದು ? ಅದನ್ನು ನೀನೇ ಹೇಳಬೇಕು ? ನಾವು ಅದರಂತೆ ನಡೆಸುವೆವು ಎನ್ನಲು, ಅದಕ್ಕೆ ಇಂದ್ರನು—ಗ್ರಹಗಳ (ಗ್ರಹವೆಂದರೆ ಸೋಮವನ್ನು ಪಾನಮಾಡುವ ಪಾತ್ರವಿಶೇಷ) ಮಧ್ಯದಲ್ಲಿ ಮಹೇಂದ್ರ ಗ್ರಹವು (ಮಹೇಂದ್ರನಾದ ನನಗೆ ಅರ್ಪಿಸುವ ಸೋಮಪಾನ ಪಾತ್ರೆಯು) ಎಲ್ಲಾ ಗ್ರಹಗಳಿಗಿಂತ ಶ್ರೇಷ್ಠವಾದುದಾಗಿರಬೇಕು. ಅದರಂತೆಯೇ, ಪ್ರಾತಃಸವನ, ಮಾಧ್ಯಂದಿನ ಸವನ, ತೃತೀಯ ಸವನಗಳೆಂಬ ಮೂರು ಸವನಗಳಲ್ಲಿ ಮಾಧ್ಯಂದಿನಸವನವೂ, ಆಶ್ವಿನಶಸ್ತ್ರ, ಮರುತ್ವತೀಯ ಮೊದಲಾದ ಶಸ್ತ್ರ (ಮಂತ್ರ) ಗಳಲ್ಲಿ ನಿಷ್ಕೇವಲ್ಯಶಸ್ತ್ರವೂ, ಗಾಯತ್ರ್ಯಾದಿಛಂದಸ್ಸುಗಳಲ್ಲಿ ತ್ರಿಷ್ಟುಪ್‌ಛಂದಸ್ಸೂ ಸಾಮಗಾನಗಳ ಮಧ್ಯದಲ್ಲಿ ಪೃಷ್ಠಸ್ತೋತ್ರನಿಷ್ಪಾದಕವಾದ ಬೃಹದ್ರಥಂತರಸಾಮವೂ, ಶ್ರೇಷ್ಠವಾಗಿರುವುದೆಂದು ನೀವು ಅನುಮೋದಿಸಬೇಕು. ಏಕೆಂದರೆ ಅವುಗಳೆಲ್ಲಾ ನನಗೆ ಪ್ರಿಯವಾಗಿರುವವು. ಇದೇ ನೀವು ನನಗೆ ಮಾಡುವ ಸತ್ಕಾರವು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಯಜ್ಞಾದಿಗಳಲ್ಲಿ ಮಾಹೇಂದ್ರಗ್ರಹಾದಿಗಳಿಗೆ ಶ್ರೇಷ್ಠತೆಯನ್ನು ಅನುಮೋದಿಸಿದರು. ಈ ವಿಷಯವು ಇತರ ವೇದಗಳಲ್ಲಿಯೂ–**ಸ ಏತಂ ಮಾಹೇಂದ್ರಮುದಹರತ ವೃತ್ರಂ ಹತಾನ್ಯಾಸು ದೇವತಾಸ್ವಧೀತಿ ಯನ್ಮಾಹೇಂದ್ರೋ ಗೃಹ್ಯತ ಉದ್ಧಾರಮೇವ ತಂ ಯಜಮಾನ ಉದ್ಧರತೇ ನ ಪ್ರಜಾಸ್ವಧಿ** । ಎಂದು ಹೇಳಿರುವುದು. ಈ ವಿಷಯವನ್ನು ಯಜ್ಞ ಮಾಡುವ ಯಾವ ಯಜಮಾನನು ತಿಳಿಯುವನೋ ಅವನು ಜನರಲ್ಲಿ ಶ್ರೇಷ್ಠತೆಯನ್ನೂ, ಗಣ್ಯಸ್ಥಾನವನ್ನೂ ಪಡೆಯುವನು.

ಜಜ್ಝತೀಃ ॥ ೬೮ ॥

ಜಜ್ಝತೀರಾಪೋ ಭವನ್ತಿ ಶಬ್ದಕಾರಿಣ್ಯಃ । " ಮರುತೋ ಜಜ್ಝತೀರಿವ "
ಇತ್ಯಪಿ ನಿಗಮೋ ಭವತಿ ॥ ೬ ॥

**ಜಜ್ಝತೀಃ** ಎಂದರೆ ನೀರು, ಉದಕಗಳು ಎಂದು. ನೀರು ಹರಿಯುವಾಗ ಜಳಜಳನೆ ಶಬ್ದಮಾಡುತ್ತಾ ಹರಿಯುವುದರಿಂದ ನೀರಿಗೆ **ಜಜ್ಝತೀಃ** ಎಂದು ಹೆಸರು ಬಂದಿದೆ.

ಉದಾಹರಣೆಯ ಋಕ್ಕು—

**ಆ ರುಕ್ಮೈರಾ ಯುಧಾ ನರ ಋಷ್ವಾ ಋಷ್ಟೀರಸೃಕ್ಷತ ।**
**ಅನ್ವೇನಾ್ ಅಹ ವಿದ್ಯುತೋ ಮರುತೋ ಜಜ್ಝತೀರಿವ ಭಾನುರರ್ತ ತ್ಮನಾ ದಿವಃ ॥**

(ಋ. ಸಂ. ೫–೫೨–೬)

ಇದರ ಅರ್ಥವು—

ನೇತೃಗಳೂ, ಮಹಾತ್ಮರೂ ಆದ ಮರುದ್ದೇವತೆಗಳು ತಮ್ಮ ಹೊಂಬಣ್ಣದ ಆಭರಣಗಳಿಂದಲೂ ಪ್ರಹರಣ ಸಾಧನವಾದ ಆಯುಧಗಳೊಡನೆಯೂ ಪ್ರಕಾಶಿಸುತ್ತಾರೆ. ತಮ್ಮ ಭರ್ಜಿಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಾರೆ. ಶಬ್ದ ಮಾಡುತ್ತಾ ಹರಿಯುವ ನೀರುಗಳಂತೆ ಈ ವಿದ್ಯುತ್ತುಗಳು ಮರುತ್ತುಗಳನ್ನು ನಿಯತವಾಗಿ ಅನುಸರಿಸುತ್ತವೆ. ಪ್ರಕಾಶಮಾನವಾದ ಮರುದ್ಗಣದ ಪ್ರಭೆಯು ಸ್ವಪ್ರಕಾಶಿತವೇ ಆಗಿರುತ್ತದೆ.

ಅಪ್ರತಿಷ್ಕುತಃ ॥೬೯॥

ಅಪ್ರತಿಷ್ಕುತೋಽಪ್ರತಿಷ್ಕೃತೋಽಪ್ರತಿಸ್ಖಲಿತೋ ವಾ। "ಅಸ್ಮಭ್ಯಮ-
ಪ್ರತಿಷ್ಕುತಃ" ಇತ್ಯಪಿ ನಿಗಮೋ ಭವತಿ ॥ ೭ ॥

**ಅಪ್ರತಿಷ್ಕುತಃ**—ಈ ಶಬ್ದಕ್ಕೆ ಇರುವಂತೆಯೇ **ಅಪ್ರತಿಷ್ಕೃತಃ** ಮತ್ತು **ಅಪ್ರತಿಸ್ಖಲಿತೋ ವಾ** ಎಂಬ ಶಬ್ದಗಳಿಗೂ ಒಂದೇ ವಿಧವಾದ ಅರ್ಥವಿರುವುದು. ಎಂದರೆ ನಮ್ಮ ಪ್ರಾರ್ಥನೆಯನ್ನು ತಿರಸ್ಕರಿಸವವನಲ್ಲದ, ಮಾತಿಗೆ ತಪ್ಪದ ಎಂದರ್ಥವು.

ಉದಾಹರಣೆಯ ಋಕ್ಕು—

**ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾ ವೃಧಿ ।**
**ಅಸ್ಮಭ್ಯಮಪ್ರತಿಷ್ಕುತಃ ॥**

(ಋ. ಸಂ. ೧-೭-೬)

ಇದರ ಅರ್ಥವು—

ಎಲೈ ಇಂದ್ರನೇ, ನೀನು ನಮ್ಮ ಸಮಸ್ತ ಅಭೀಷ್ಟಗಳನ್ನು ನೆರವೇರಿಸಿಕೊಡತಕ್ಕವನು. ಆದುದರಿಂದಲೇ ಈಗ ಅಂತರಿಕ್ಷದಲ್ಲಿ ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಮೇಘವನ್ನು ಮಳೆ ಹುಯ್ಯುವಂತೆ ಮಾಡು. ನೀನು ಯಾವಾಗಲೂ ನಮ ಪ್ರಾರ್ಥನೆಯನ್ನು ತಿರಸ್ಕರಿಸುವವನಲ್ಲ.

ಶಾಶದಾನಃ ॥ ೭೦ ॥

ಶಾಶದಾನಃ ಶಾಶಾದ್ಯಮಾನಃ ॥ "ಪ್ರ ಸ್ವಾಂ ಮತಿಮತಿರಚ್ಛಾಶದಾನಃ"
ಇತ್ಯಪಿ ನಿಗಮೋ ಭವತಿ ॥೮॥೬॥

**ಶಾಶದಾನಃ—ಶಾಶಾದ್ಯಮಾನಃ ।** ಪ್ರಸಿದ್ಧನಾದವನು, ಬುದ್ಧಿವಂತನು, ಶತ್ರುಗಳನ್ನು ಹಿಂಸೆಮಾಡತಕ್ಕವನೂ ಎಂದು ಅರ್ಥವಾಗಬಹುದು

ಉದಾಹರಣೆಯ ಋಕ್ಕು—

**ಅಭಿ ಸಿಧ್ಮೋ ಅಜಿಗಾದಸ್ಯ ಶತ್ರೂನ್ವಿ ತಿಗ್ಮೇನ ವೃಷಭೇಣಾ ಪುರೋ ಚೇತ್ ।**
**ಸಂವಜ್ರೇಣಾಸೃಜದ್ವೃತ್ರಮಿಂದ್ರಃ ಪ್ರಸ್ವಾಂ ಮತಿಮತಿರಚ್ಛಾಶದಾನಃ ॥**

(ಋ. ಸಂ. ೧-೩೩-೧೩)

ಇದರ ಅರ್ಥವು

ಇಂದ್ರನ ವಜ್ರಾಯುಧವು ಅತ್ಯಂತ ಹರಿತವಾದುದು. ಮತ್ತು ಶ್ರೇಷ್ಠವಾದುದು ಶತ್ರುಗಳ ನಾಶಕ್ಕೆಲ್ಲ ಇಂದ್ರನಿಗೆ ಅದೊಂದೇ ಮುಖ್ಯವಾದ ಸಾಧನವು. ಅದರ ಪ್ರಯೋಗದಿಂದ ಸಕಲ ಶತ್ರುಗಳನ್ನೂ ನಾಶಮಾಡಿದನು. ಅದರಿಂದಲೇ ವೃತ್ರಾಸುರನ ಪಟ್ಟಣಗಳನ್ನೆಲ್ಲ ಧ್ವಂಸಮಾಡಿದನು. ವೃತ್ರಾಸುರನ ಮೇಲೆ ಪ್ರಯೋಗಿಸಿ ಅವನನ್ನು ಹಿಂಸಿಸಿ ನಾಶಮಾಡಿದದು. ಅದರಿಂದುಂಟಾದ ಹರ್ಷದಿಂದ ಆತ್ಮತೃಪ್ತಿಯನ್ನು ಪಡೆದನು.

**ಇತಿ ಷೋಡಶಃ ಖಂಡಃ**

ಇಲ್ಲಿಗೆ ಹದಿನಾರನೆಯ ಖಂಡವು ಸಮಾಪ್ತವು

---

## ॥ ಸಪ್ತದಶಃ ಖಂಡಃ ॥

### ಹದಿನೇಳನೆಯ ಖಂಡವು

ಸೃಪ್ರಃ ಸರ್ಪಣಾದಿದಮಪೀತರತ್ಸೃಪ್ರಮೇತಸ್ಮಾದೇವ ಸರ್ಪಿರ್ವಾ ತೈಲಂ ವಾ ಸೃಪ್ರಕರಸ್ನಮೂತಯ ಇತ್ಯಪಿ ನಿಗಮೋ ಭವತಿ ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ ಸುಶಿಪ್ರಮೇತೇನ ವ್ಯಾಖ್ಯಾತಂ। ವಾಜೇ ಸುಶಿಪ್ರ ಗೋಮತೀತ್ಯಪಿ ನಿಗಮೋ ಭವತಿ ಶಿಪ್ರೇ ಹನೂ ನಾಸಿಕೇ ವಾ ಹನುರ್ಹನ್ತೇರ್ನಾಸಿಕಾ ನಸತೇಃ। ವಿಷ್ಯಸ್ವ ಶಿಪ್ರೇ ವಿಸೃಜಸ್ವ ಧೇನೇ ಇತ್ಯಪಿ ನಿಗಮೋ ಭವತಿ ಧೇನಾ ದಧಾತೇ ರಂಸು ರಮಣಾತ್। ಸ ಚಿತ್ರೇಣ ಚಿಕಿತೇ ರಂಸು ಭಾಸೇತ್ಯಪಿ ನಿಗಮೋ ಭವತಿ ದ್ವಿಬರ್ಹಾ ದ್ವಯೋಃ ಸ್ಥಾನಯೋಃ ಪರಿವೃಢೋ ಮಧ್ಯಮೇ ಚ ಸ್ಥಾನ ಉತ್ತಮೇ ಚ। ಉತ ದ್ವಿಬರ್ಹಾ ಅಮಿನಃ ಸಹೋಭಿರಿತ್ಯಪಿ ನಿಗಮೋ ಭವತ್ಯಕ್ರ ಆಕ್ರಮಣಾತ್। ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಮಿತ್ಯಪಿ ನಿಗಮೋ ಭವತ್ಯುರಾಣ ಉರು ಕುರ್ವಾಣಃ। ದೂತ ಈಯಸೇ ಪ್ರದಿವ ಉರಾಣ ಇತ್ಯಪಿ ನಿಗಮೋ ಭವತಿ। ಸ್ತಿಯಾ ಆಪೋ ಭವನ್ತಿ ಸ್ತ್ಯಾಯನಾತ್। ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಮಿತ್ಯಪಿ ನಿಗಮೋ ಭವತಿ ಸ್ತಿಪಾಃ ಸ್ತಿಯಾ ಪಾಲನ ಉಪಸ್ಥಿತಾನ್ಪಾಲಯತೀತಿ ವಾ। ಸ ನಃ ಸ್ತಿಪಾ ಉತ ಭವ ತನೂಪಾ ಇತ್ಯಪಿ ನಿಗಮೋ ಭವತಿ

ಜಬಾರು ಜವಮಾನರೋಹಿ ಜರಮಾಣರೋಹಿ ಗರಮಾಣರೋಹೀತಿ ವಾ। ಅಗ್ನೇರುಪ ಆರುಪಿತಂ ಜಬಾರ್ವಿತ್ಯಪಿ ನಿಗಮೋ ಭವತಿ ಜರೂಥಂ ಗರೂಥಂ ಗೃಣಾತೇಃ ಜರೂಥಂ ಹನ್ಯಕ್ಷಿ ರಾಯೇ ಪುರಂಧಿಮಿತ್ಯಪಿ ನಿಗಮೋ ಭವತಿ ಕುಲಿಶ ಇತಿ ವಜ್ರನಾಮ ಕೂಲಶಾತನೋ ಭವತಿ। ಸ್ಕಂಧಾಸೀವ ಕುಲಿಶೇನಾ ವಿವೃಕ್ಣಾಹಿಃ ಶಯುತ ಉಪಪೃಕ್ಪೃಥಿವ್ಯಾಃ। ಸ್ಕಂಧೋ ವೃಕ್ಷಸ್ಯ ಸಮಾಸ್ಕನ್ನೋ ಭವತ್ಯಯಮಪೀತರಸ್ಕಂಧಃ ಏತಸ್ಮಾದೇವಾಸ್ಕನ್ನಂ ಕಾಯೇಽಹಿಃ ಶಯುತ ಉಪಪರ್ಚನಃ ಪೃಥಿವ್ಯಾಸ್ತುಞ್ಜಸ್ತುಞ್ಜತೇರ್ದಾನಕರ್ಮಣಃ ॥ ೧೭ ॥

---

ಸೃಪ್ರಃ ॥೭೧॥

ಸೃಪ್ರಃ ಸರ್ಪಣಾತ್। ಇದಮಪೀತರತ್ ಸೃಪ್ರಮೇತಸ್ಮಾದೇವ ಸರ್ಪಿರ್ವಾ ತೈಲಂ ವಾ। "ಸೃಪ್ರಕರಸ್ನಮೂತಯೇ" ಇತ್ಯಪಿ ನಿಗಮೋ ಭವತಿ ॥ ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ ॥ ೧ ॥

**ಸೃಪ್ರಃ**—ಎಂದರೆ **ಸರ್ಪಣಾತ್**, ಸರಿದುಹೋಗುವ, ಹರಿದುಹೋಗುವ, ಜಾರಿಹೋಗುವ ಎಂದರ್ಥವು. ಆದ್ದರಿಂದ ಎಣ್ಣೆ ಅಥವಾ ತುಪ್ಪವನ್ನು ಈ ಹೆಸರಿನಿಂದ ಕರೆಯುವುದು ರೂಢಿಯಾಗಿದೆ.

ಉದಾಹರಣೆಯ ಋಕ್ಕು—

**ಬೃಬದುಕ್ಥಂ ಹವಾಮಹೇ ಸೃಪ್ರಕರಸ್ನಮೂತಯೇ।**
**ಸಾಧು ಕೃಣ್ವಂತಮವಸೇ ॥**

(ಋ. ಸಂ. ೮-೩೨-೧೦)

ಇದರ ಅರ್ಥವು—

ಲೋಕರಕ್ಷಣಾರ್ಥವಾಗಿ ತನ್ನ ಬಾಹುಗಳನ್ನು ಮೇಲೆತ್ತಿ ನೀಡಿರುವವನೂ ಲೋಕದ ಜನರನ್ನು ಕಷ್ಟದಿಂದ ಕಾಪಾಡುವುದಕ್ಕಾಗಿ ಉತ್ತಮವಾದ ನಾನಾಸಾಹಸಕಾರ್ಯಗಳನ್ನೆಸಗುವವನೂ ದೊಡ್ಡ ದೊಡ್ಡ ಸ್ತೋತ್ರಗಳಿಂದ ಪ್ರಶಂಸಿಸಲ್ಪಡುವವನೂ ಆದ ಇಂದ್ರನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ.

ಯಾಸ್ಕರು **ಸೃಪ್ರಃ** ಎಂಬ ಶಬ್ದದ ನಿರ್ವಚನವನ್ನು ಹೇಳುವ ಸಂದರ್ಭದಲ್ಲಿ ಈ ಋಕ್ಕಿನಲ್ಲಿರುವ **ಸೃಪ್ರಕರಸ್ನಂ** ಎಂಬ ಶಬ್ದದ ನಿರ್ವಚನವನ್ನೂ ಹೇಳಿದಾರೆ.

**ಸೃಪ್ರಃ ಸರ್ಪಣಾತ್ । ಇದಮಪೀತರತ್ ಸೃಪ್ರಮೇತಸ್ಮಾದೇವ ಸರ್ಪಿರ್ವಾ ತೈಲಂ ವಾ । ಸೃಪ್ರ ಕರಸ್ನಮೂತಯೇ ಇತ್ಯಪಿ ನಿಗಮೋ ಭವತಿ ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ ॥**

(ನಿ. ೬–೧೭)

ಎಂದರೆ—**ಸೃಪ್ರಃ** ಎಂಬ ಶಬ್ದವು ಜಾರಿಹೋಗು, ನುಣುಚಿಕೊಳ್ಳು ಎಂದರ್ಥವಿರುವ **ಸೃಪ್** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಸೃಪ್ರ ಶಬ್ದಕ್ಕೆ ಘೃತ ಅಥವಾ ತೈಲ (ಎಣ್ಣೆ) ಎಂಬರ್ಥವಿರುವಾಗಲೂ ಈಶಬ್ದವು ಇದೇ ಧಾತುವಿನಿಂದ ನಿಷ್ಪನ್ನವಾಗುವುದು. **ಸೃಪ್ರಕರಸ್ನಮೂತಯೇ** ಎಂಬುದು ಶ್ರುತಿವಾಕ್ಯದ ಉದಾಹರಣೆಯು. **ಕರಸ್ನೌ** ಎಂದರೆ ನೀಡಿರುವ, ಚಾಚಿರುವ ಎರಡು ಕೈಗಳು ಎಂದರ್ಥವು. ಪ್ರಕೃತ ಋಕ್ಕಿನಲ್ಲಿ ಇಂದ್ರನು ಜನರನ್ನು ರಕ್ಷಿಸುವುದಕ್ಕಾಗಿ ತನ್ನ ಎರಡು ಕೈಗಳನ್ನು ಮೇಲೆತ್ತಿ ಚಾಚಿರುವನು ಎಂದರ್ಥವು.

**ಬೃಬದುಕ್ಥಂ**—ಈ ಶಬ್ದವನ್ನು ವಿವರಿಸುವುದಕ್ಕಾಗಿಯೂ ಯಾಸ್ಕರು ಈ ಶಬ್ದದ ನಿರ್ವಚನವನ್ನು ಹೇಳಿದ್ದಾರೆ–

**ಬೃಬದುಕ್ಥಂ । ಬೃಬದುಕ್ಥೋ ಮಹದುಕ್ಥೋ ವಕ್ತವ್ಯಮಸ್ಮಾ ಉಕ್ಥಮಿತಿ ಬೃಬದುಕ್ಥೋ ವಾ। ಬೃಬದುಕ್ಥಂ ಹವಾಮಹೇ ಇತ್ಯಪಿ ನಿಗಮೋ ಭವತಿ ॥** ನಿ. ೬–೪

ಬೃಬದುಕ್ಥವೆಂದರೆ ಶ್ರೇಷ್ಠರೀತಿಯಿಂದ ನಿರ್ಮಿತವಾದ ಮಹಾಸ್ತೋತ್ರವು ಎಂದರ್ಥವು. ಇಂತಹ ಶ್ರೇಷ್ಠವಾದ ಸ್ತುತಿಗಳಿಂದ ಸ್ತುತಿಸಲ್ಪಡುವ ಇಂದ್ರನನ್ನು ಎಂದು ಈ ಶಬ್ದಾರ್ಥವು. ಉದಾಹರಣೆಗಾಗಿ ಪ್ರಕೃತ ಋಕ್ಕಿನಲ್ಲಿರುವ **ಬೃಬದುಕ್ಥಂ ಹವಾಮಹೇ** ಎಂಬವಾಕ್ಯವನ್ನೇ ತೆಗೆದುಕೊಂಡು ಅರ್ಥವಿವರಣೆಮಾಡಿರುವರು.

ಸುಶಿಪ್ರಃ ॥ ೭೨ ॥

ಸುಶಿಪ್ರಮೇತೇನ ವ್ಯಾಖ್ಯಾತಮ್ । "ವಾಜೇ ಸುಶಿಪ್ರ ಗೋಮತಿ" ಇತ್ಯಪಿ ನಿಗಮೋ ಭವತಿ ॥ ಶಿಪ್ರೇ ಹನೂ ನಾಸಿಕೇ ವಾ ಹನು–ರ್ಹನ್ತೇಃ। ನಾಸಿಕಾ ನಸತೇಃ । "ವಿಷ್ಯಸ್ವ ಶಿಪ್ರೇ ವಿಸೃಜಸ್ವ ಧೇನೇ" ಇತ್ಯಪಿ ನಿಗಮೋ ಭವತಿ ॥ ಧೇನಾ ದಧಾತೇಃ ॥ ೨ ॥

ಉದಾಹರಣೆಯ ಋಕ್ಕು—

**ಮಾದಯಸ್ವ ಹರಿಭಿರ್ಯೇ ತ ಇಂದ್ರ ವಿ ಷ್ಯಸ್ವ ಶಿಪ್ರೇ ವಿಸೃಜಸ್ವ ಧೇನೇ।**
**ಆ ತ್ವಾ ಸುಶಿಪ್ರ ಹರಯೋ ವಹಂತೂಶನ್ಹವ್ಯಾನಿ ಪ್ರತಿ ನೋ ಜುಷಸ್ವ ॥**

(ಋ. ಸಂ. ೧–೧೦೧–೧೦)

ಇವರ ಅರ್ಥವು—

ಎಲೈ ಇಂದ್ರನೇ, ನಿನ್ನ ಸ್ವರೂಪವನ್ನೇ ಹೊಂದಿರತಕ್ಕ ನಿನ್ನ ಕುದುರೆಗಳೊಡನೆ ತೃಪ್ತಿಯನ್ನು ಹೊಂದು. ಸೋಮಪಾನಾರ್ಥನಾಗಿ ನಿನ್ನ ದವಡೆಗಳನ್ನು ಅಗಲಿಸು. ಗಂಟಲನ್ನು ತೆರೆ. ಅಂದವಾದ ಕೆನ್ನೆಯುಳ್ಳ ಎಲೈ ಇಂದ್ರನೇ ನಿನ್ನನ್ನು ನಿನ್ನ ಕುದುರೆಗಳು ನಮ್ಮ ಯಜ್ಞಾಭಿಮುಖವಾಗಿ ಕರೆತರಲಿ. ನೀನು ಸಹ ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿ ನಮ್ಮ ಹವಿಸ್ಸುಗಳನ್ನು ಪ್ರತ್ಯೇಕವಾಗಿ ಸೇವಿಸಿ ತೃಪ್ತನಾಗು.

**ಸುಶಿಪ್ರ—ಶಿಪ್ರೇ ಹನೂ ನಾಸಿಕೇ ವಾ।** (ನಿ.೬-೧೭) **ಶಿಪ್ರ—**ಶಬ್ದಕ್ಕೆ ಕೆನ್ನೆಯೆಂದಾಗಲಿ ಅಥವಾ ನಾಸಿಕವೆಂದಾಗಲಿ ಅರ್ಥವಾಗುತ್ತದೆಂದು ನಿರುಕ್ತಕಾರರು ಹೇಳಿರುವುದರಿಂದ ಸಾಯಣರೂ ಸಹ ಇಲ್ಲಿ ಅನೆರಡರಲ್ಲಿ ಯಾವ ಅರ್ಥಬೇಕಾದರೂ ಆಗಬಹುದೆಂದಿದ್ದಾರೆ. **ಸುಶಿಪ್ರ** ಅಥವಾ **ಶಿಪ್ರೇ** ಎಂಬ ವಿಶೇಷಣವು ಇಂದ್ರನ ಪರವಾಗಿ ಇದ್ದರೂ, ಇತರ ದೇವತೆಗಳ ಪರವಾಗಿ ಉಪಯೋಗಿಸಲ್ಪಟ್ಟಿರುವುದರಿಂದಲೂ, ಅಲ್ಲಲ್ಲಾ ಅರ್ಥವ್ಯತ್ಯಾಸಗಳಿರುವುದರಿಂದಲೂ **ಶಿಪ್ರ** ಮತ್ತು **ಸುಶಿಪ್ರ** ಶಬ್ದಗಳು ಎಲ್ಲೆಲ್ಲಿ ಯಾವ ಯಾವ ಅರ್ಥಗಳನ್ನು ಕೊಡುವುವೆಂಬುದನ್ನು ತಿಳಿಯಬೇಕು.

**ಮತ್ಸ್ವಾ ಸುಶಿಪ್ರ ಮಂಡಿಭಿಃ ಸ್ತೋಮೇಭಿರ್ವಿಶ್ವಚರ್ಷಣೇ।**
(ಋ. ಸಂ. ೧-೯-೩)

ಇಲ್ಲಿ **ಸುಶಿಪ್ರ ಹೇ ಶೋಭನಹನೋ ಶೋಭನನಾಸಿಕಾ ವಾ। ಶಿಪ್ರೇ ಹನೂ ನಾಸಿಕೇ ವಾ ಇತಿ ಯಾಸ್ಕೇನೋಕ್ತತ್ವಾತ್।** ಶಿಪ್ರ ಶಬ್ದಕ್ಕೆ ಕೆನ್ನೆ ಅಥವಾ ನಾಸಿಕ ಎಂದು ಎರಡು ಅರ್ಥಗಳೂ ಇರುವುದರಿಂದ **ಸುಶಿಪ್ರ** ಎಂದರೆ ಶ್ರೇಷ್ಠವಾದ ಕೆನ್ನೆಯುಳ್ಳ ಅಥವಾ ಶ್ರೇಷ್ಠವಾದ ನಾಸಿಕವುಳ್ಳ ಎಂದು ಇಂದ್ರನನ್ನು ಸಂಬೋಧಿಸಿದೆ. ಇದೇ ರೀತಿಯಲ್ಲಿ, ಕೆನ್ನೆ ಅಥವಾ ನಾಸಿಕವೆಂಬ ಅರ್ಥವು.—

**ಶಿಪ್ರಿನ್ವಾಜಾನಾಂ ಪತೇ ಶಚೀವಸ್ತವ ದಂಸನಾ।**
(ಋ. ಸಂ. ೧-೨೯-೨)

**ಶ್ರಿಯ ಋಷ್ವ ಉಪಾಕಯೋರ್ನಿ ಶಿಪ್ರೀ ಹರಿವಾನ್ದಧೇ ಹಸ್ತಯೋರ್ವಜ್ರಮಾಯಸಂ।**

ಎಂಬ ಋಕ್ಕುಗಳಲ್ಲಿಯೂ ಸಹ ಸಾಧ್ಯವಾಗುತ್ತದೆ. **ಶಿಪ್ರವುಳ್ಳ** ಇಂದ್ರನೆಂದರ್ಥ.

**ಹಿರಣ್ಯಶಿಪ್ರಾ ಮರುತೋ ದವಿಧ್ವತಃ ಪೃಷತೀಭಿಃ ಸಮನ್ಯವಃ।**
(ಋ. ಸಂ. ೨-೩೪-೩)

ಎಂಬ ಋಕಿನಲ್ಲಿ **ಶಿಪ್ರಂ ಶಿರಸ್ತ್ರಾಣಂ। ಸುವರ್ಣಮಯಶಿರಸ್ತ್ರಾಣಾಃ।** ಚಿನ್ನದಿಂದ ಮಾಡಲ್ಪಟ್ಟ ಶಿರಸ್ತ್ರಾಣವುಳ್ಳ (Helmet) ಎಂದು ಮರುತ್ತುಗಳಿಗೆ ವಿಶೇಷಣವಾಗಿದೆ. ಮತ್ತು,

**ಅಗ್ನಿಭ್ರಾಜಸೋ ವಿದ್ಯುಃ ಶಿಪ್ರಾಃ ಶೀರ್ಷಸು ವಿತತಾ ಹಿರಣ್ಯಯೀಃ।**
(ಋ. ಸಂ. ೫-೫೪-೧೧)

ಎಂಬ ಋಕ್ಕಿನಲ್ಲಿ **ಉಷ್ಣೀಷಮಯ್ಯಃ** ಎಂದು ಶಿಪ್ರಶಬ್ದಕ್ಕೆ ರುಮಾಲು (Turban) ಎಂದು ಅರ್ಥ ಮಾಡಿದ್ದಾರೆ.

ಒಟ್ಟಿನಲ್ಲಿ **ಶಿಪ್ರ** ಶಬ್ದಕ್ಕೂ ಆ ಪದದಿಂದ ನಿಷ್ಪನ್ನವಾಗಿರುವ ಶಿಪ್ರಿನ್ ಇತ್ಯಾದಿ ಶಬ್ದಗಳಿಗೂ ಸಹ ಕೆಳಗೆ ಹೇಳುವ ಕ್ರಮದಲ್ಲಿ ಅರ್ಥಮಾಡಬಹುದೆಂದು ತೋರುತ್ತೆ.

ಈ ಪದವು ದ್ವಿವಚನದಲ್ಲಿ ಉಪಯೋಗಿಸಿದ್ದಾರೆ ಆಗ ಕೆನ್ನೆಯೆಂದು ಅರ್ಥವಾಗುತ್ತದೆ. ೧-೧೦೧-೧೦, ೩-೩೨-೧, ೫-೩೬-೨, ೮-೭೬-೧೦, ೧೦-೯೬-೯, ೧೦-೧೦೫-೫ ಇತ್ಯಾದಿ ಋಕ್ಕುಗಳಲ್ಲಿ ಕೆನ್ನೆಯೆಂದರ್ಥ. **ಶಿಪ್ರಿನ್** ಎಂದರೆ

**ಕೆನ್ನೆ** ಅಥವಾ **ಮೂಗನ್ನು** ಹೊಂದಿರುವ ಇಂದ್ರನಿಗೆ ಮಾತ್ರ ವಿಶೇಷಣವಾಗುತ್ತದೆ. ೧-೨೯-೨, ೧-೮೪.೧' ೩.೩೬.೧೦ ಇತ್ಯಾದಿ ಸ್ಥಳಗಳಲ್ಲಿ ಇಂದ್ರನಿಗೆ ವಿಶೇಷಣವಾಗಿ ಶಿಪ್ರವುಳ್ಳವನು ಎಂದರ್ಥ, ಮತ್ತು

**ಪೀವೋ ಅಶ್ವಾಃ ಶುಚದ್ರಥಾ ಹಿ ಭೂತಾಯಃಶಿಪ್ರಾ ವಾಜಿನಃ ಸುನಿಷ್ಕಾಃ।**

( ಋ. ಸಂ. ೪-೩೭-೪

ಎಂಬ ಋಕ್ಕಿನಲ್ಲಿ **ಅಯಃಶಿಪ್ರಾಃ** ಎಂದು ಋಭುಗಳಿಗೆ ವಿಶೇಷಣವಾಗಿದೆ. ಇಲ್ಲಿ ಉಕ್ಕಿನಿಂದಮಾಡಿದ ಶಿರಸ್ತ್ರಾಣ (Visors) ವೆಂದಾದರೂ ಆಗಬಹುದು. ಅಥವಾ ಸಾಯಣರು ವಿವರಿಸುವಂತೆ **ಅಯೋವತ್ಸಾರಭೂತಶಿಪ್ರಾಃ।** **ಉಕ್ಕಿನಂತೆ** ಬಲವುಳ್ಳ ಕೆನ್ನೆಯುಳ್ಳವರು **ಎಂದಾದರೂ ಆಗಬಹುದು.**

ಪ್ರಕೃತವಾದ ಈ ಋಕ್ಕಿನಲ್ಲಿ **ಸುಶಿಪ್ರ** ಎಂದರೆ ಅಂದವಾದ ಕೆನ್ನೆ ಅಥವಾ ಮೂಗುಳ್ಳ ಇಂದ್ರನೇ ಎಂದು ಇಂದ್ರನನ್ನು ಸಂಬೋಧಿಸಿದೆ. **ಶಿಪ್ರೇ** ಎನುವುದಕ್ಕೆ ಕೆನ್ನೆಗಳನ್ನು ಎಂದರ್ಥ. ಸೋಮಪಾನಾರ್ಥವಾಗಿ ನಿನ್ನ ದವಡೆ ಗಳನ್ನು ತೆರೆ ಎಂದಭಿಪ್ರಾಯ.



ರಂಸು ॥೭೩॥

ರಂಸು ರಮಣೀಯೇಷು ರಮಣಾತ್ । "ಸ ಚಿತ್ರೇಣ ಚಿಕಿತೇ ರಂಸು ಭಾಸಾ" ಇತ್ಯಪಿ ನಿಗಮೋ ಭವತಿ ॥೭೩॥

**ಉದಾಹರಣೆಯ ಋಕ್ಕು—**

**ಆ ಯನ್ಮೇ ಅಭ್ವಂ ವನದಃ ಪನಂತೋಶಿಗ್ಭ್ಯೋ ನಾಮಿಮೀತ ವರ್ಣಂ ।**
**ಸ ಚಿತ್ರೇಣ ಚಿಕಿತೇ ರಂಸು ಭಾಸಾ ಜುಜುರ್ವಾ೦ ಯೋ ಮುಹುರಾ ಯುವಾ ಭೂಃ ॥**

**ಇದರ ಅರ್ಥವು—**

ಯಾವ ಅಗ್ನಿಯ ಮಹತ್ವವನ್ನು ನನ್ನ ಬಂಧುಗಳು ಘಟ್ಟಿಯಾದ ಧ್ವನಿಯಿಂದ ಸುತ್ತಲೂ ಸ್ತುತಿಸುತ್ತಾರೆಯೋ ಆ ಅಗ್ನಿಯು ಅವನ ರೂಪವನ್ನು ನೋಡಬೇಕೆಂದು ಅಪೇಕ್ಷಿಸುವ ಋತ್ವಿಕ್ಕುಗಳಿಗೆ ತನ್ನ ರಮ್ಯವಾದ ರೂಪವನ್ನು ನಿರ್ಮಿಸಿ ತೋರಿಸುತ್ತಾನೆ. ಮತ್ತು ರಮಣೀಯವಾದ ಆಜ್ಯಾದಿ ಹವಿಸ್ಸುಗಳನ್ನು ಅರ್ಪಿಸಿದಾಗ ನಾನಾ ರೂಪವಾದ ಕಾಂತಿಯಿಂದ ಪ್ರಕಾಶಿಸುತ್ತಾನೆ. ಜೀರ್ಣವಾದ ಕಾಲದಲ್ಲಿ ಆಜ್ಯಾಹುತಿಗಳನ್ನು ಅರ್ಪಿಸುವುದರಿಂದ ಪುನಃ ತಾರುಣ್ಯವನ್ನು ಹೊಂದುತ್ತಾನೆ.

**ಅಭ್ವಂ ವನದಃ ಆ ಪನಂತ—ಯಸ್ಯ ಮಹತ್ತ್ವಂ ಸಂಭಕ್ತಾರಃ ಯದ್ವಾ ವನದೋ ಅವನದೋ ಭೃಶಂ ಶಬ್ದಯಂತಃ ಸಮಂತಾತ್ ಸ್ತುವಂತಿ**—ಅಭ್ವಶಬ್ದವು ಮಹನ್ನಾಮಗಳಲ್ಲಿ (ನಿ. ೩-೧೩) ಯಾಸ್ಕರಿಂದ ಪಠಿತವಾಗಿದೆ. ಇಲ್ಲಿ ಅಗ್ನಿಯ ಮಹತ್ತ್ವವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ವನದ ಎಂಬ ಪದಕ್ಕೆ ಮಹತ್ತ್ವವನ್ನು ವ್ಯಕ್ತ ಪಡಿಸುವರು ಅಥವಾ ಬಹಳವಾಗಿ ಧ್ವನಿಮಾಡುವರು ಎಂದು ಅರ್ಥವನ್ನು ವರ್ಣಿಸಿದೆ. ಯಜಮಾನರ ಋತ್ವಿಜರು ಅಗ್ನಿಯನ್ನು ಸ್ತುತಿಮಾಡುವಾಗ ಅಗ್ನಿಯ ಪ್ರಭೂತವಾದ ಮಹತ್ತ್ವವನ್ನು ಸ್ತೋತ್ರಗಳಿಂದ ವ್ಯಕ್ತಪಡಿಸುವರು ಅಥವಾ ಘಟ್ಟಿಯಾದ ಧ್ವನಿಯಿಂದ ಎಲ್ಲರೂ ತಿಳಿಯುವ ಹಾಗೆ ಸ್ತುತಿಸುವರು ಎಂದು ವರ್ಣಿಸಿದೆ.

**ಉಶಿಗ್ಭ್ಯಃ ವರ್ಣಂ ನಾಮಿಮೀತ**—ಅಗ್ನಿಯು ತನ್ನ ಸಂಬಂಧವಾದ ಆಕಾರವನ್ನು ನೋಡಲಿಚ್ಛಿಸುವ ಋತ್ವಿಜರಿಗಾಗಿ ತನ್ನ ಮಹಿಮೆಗೆ ಅನುರೂಪವಾದ ಆಕಾರವನ್ನು ನಿರ್ಮಾಣಮಾಡಿಕೊಳ್ಳುವನು ಎಂದು ಅರ್ಥವು. ಉಶಿಕ್ ಎಂಬ ಪದವು (ಅಪೇಕ್ಷಿಸುವ ಎಂಬರ್ಥವುಳ್ಳ) ಕಾಂತಿ ಕರ್ಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಮತ್ತು **ಉಶಿಕ್ ವಷ್ಟೇಃ ಕಾಂತಿ ಕರ್ಮಣಃ** (ನಿ. ೬-೧೧) ಎಂದು ಯಾಸ್ಕರಿಂದ ವ್ಯಾಖ್ಯಾತವಾಗಿದೆ.

ಈ ಅಗ್ನಿಯು **ರಂಸು—ಚಿತ್ರೇಣ ಚಿಕಿತೇ** ಆಜ್ಯವೇ ಮೊದಲಾದ ಹವಿಸ್ಸುಗಳ ಅರ್ಪಣೆಯಿಂದ ಸುವರ್ಣವೇ ಮೊದಲಾದ ರಮಣೀಯ ವಸ್ತುಗಳ ಕಾಂತಿಗಳಿಂದ ಪ್ರಕಾಶಿಸುವನೆಂದು ವಿವೃತವಾಗಿದೆ. ಎಂದರೆ ಅಗ್ನಿಯ ಜ್ವಾಲೆಗಳು, ಕೆಂಪು, ಹೊಂಬಣ್ಣ, ಬಿಳುಪು ಮೊದಲಾದ ಅನೇಕವಿಧ ಬಣ್ಣಗಳಿಂದ ಕೂಡಿ ನೋಡುವುದಕ್ಕೆ ರಮಣೀಯವಾಗಿದೆ ಎಂದಭಿಪ್ರಾಯವು.

**ಜುಜುರ್ವಾನ್ ಮುಹುಃ ಆ ಯುವಾ—ಜ್ವಾಲೋಪಶಮೇ ಜೀರ್ಣಸ್ಸ ಸ ಏವ ಪುನಃ ಪುನಃ ಮಿಶ್ರಯಿತಾ ತರುಣೋ ನಾ ಭವತಿ ||** ಅಗ್ನಿಯು ತನ್ನ (ಕಾಂತಿಗಳ) ಜ್ವಾಲೆಗಳ ಉಪಸಂಹಾರದಿಂದ ಕಾಂತಿ ಇಲ್ಲದವನಾಗಿ ಇದ್ದಾಗ್ಯೂ ಪುನಃ ಹವಿಸ್ಸಿನ ಸ್ವೀಕಾರದ ಕಾಲದಲ್ಲಿ ಯೌವ್ವನವನ್ನು ಹೊಂದಿದವನಾಗಿ ಪ್ರಕಾಶಿಸುತ್ತಿರುವನು. ವೃದ್ಧನು ತರುಣನಾಗುವುದು ಲೋಕದಲ್ಲಿ ಅಪ್ರಸಿದ್ಧವು. ಆದರೆ ಅಗ್ನಿಯು ಅನೇಕಸಾರಿ ವೃದ್ಧನಾದರೂ ತಾರುಣ್ಯದಿಂದ ಶೋಭಿಸುವನೆಂದು ವ್ಯತಿರೇಕವು ಉಕ್ತವಾಗಿದೆ. ಇಲ್ಲಿ ಅಗ್ನಿಯು ಆರಿಹೋಗುತ್ತಿರುವಾಗ ವೃದ್ಧಾವಸ್ಥೆಯಲ್ಲಿರುವನೆಂದೂ, ಆದರೆ ಅಲ್ಪ ಸ್ವಲ್ಪವಿರುವ ಅಗ್ನಿಯ ಕೆಂಡಗಳಲ್ಲಿ, ಸಮಿತ್ತು, ಕಾಷ್ಠಗಳು, ಆಜ್ಯ, ಹವಿಸ್ಸು ಮೊದಲಾದುವನ್ನು ಹಾಕಿ ಹೋಮಮಾಡುವುದರಿಂದ ಸಣ್ಣದಾಗಿದ್ದ ಅಗ್ನಿಯು ಮತ್ತೆ ದೊಡ್ಡದಾಗಿ ಜ್ವಾಲೆಗಳಿಂದ ಪ್ರಕಾಶವಾಗಿ ಬೆಳಗುತ್ತಿರುವುದನ್ನು ಅಗ್ನಿಯು ಪುನಃ ಯುವಕನಾದನೆಂದು ಮೊದಲಾಗಿ ಇಲ್ಲಿ ವರ್ಣಿಸಿದೆ.

ದ್ವಿಬರ್ಹಾಃ ||೭೪||

ದ್ವಿಬರ್ಹಾ ದ್ವಯೋಃ ಸ್ಥಾನಯೋಃ ಪರಿವೃಢೋ ಮಧ್ಯಮೇ ಚ ಸ್ಥಾನ
ಉತ್ತಮೇ ಚ | "ಉತ ದ್ವಿಬರ್ಹಾ ಅಮಿನಃ ಸಹೋಭಿಃ" ಇತ್ಯಪಿ
ನಿಗಮೋ ಭವತಿ || ೪ ||

**ದ್ವಿಬರ್ಹಾಃ—**ಎಂದರೆ ದ್ವಿಪರಿವೃದ್ಧಃ ಎರಡು ಸ್ಥಾನ (ಪ್ರದೇಶ)ಗಳಲ್ಲಿಯೂ ಪ್ರಸಿದ್ಧನಾದವನು. **ಮಧ್ಯಮೇ ಚ ಸ್ಥಾನೇ ವೈದ್ಯುತಾತ್ಮನಾ ಉತ್ತಮೇ ಚ ಸೂರ್ಯಾತ್ಮನಾ**—ಮಧ್ಯಮ ಸ್ಥಾನವಾದ ಅಂತರಿಕ್ಷದಲ್ಲಿ ವೈದ್ಯುತ (ಮಿಂಚು) ರೂಪದಿಂದಲೂ ಉತ್ತಮಸ್ಥಾನವಾದ ಸ್ವರ್ಗದಲ್ಲಿ ಸೂರ್ಯರೂಪದಿಂದಲೂ ಪ್ರಸಿದ್ಧನಾಗಿ ಬೆಳಗುತ್ತಾ ಇರುವವನು ಎಂದರ್ಥವು.

ದ್ವಿಬರ್ಹಾಃ—ಪೃಥಿವೀ ಮತ್ತು ಅಂತರಿಕ್ಷವೆಂಬ ಎರಡು ಸ್ಥಾನಗಳಲ್ಲಿಯೂ ಶ್ರೇಷ್ಠನಾಗಿರುವವನು. ಅಥವಾ ದಕ್ಷಿಣಮಾರ್ಗ ಉತ್ತರಮಾರ್ಗಗಳೆಂದು ಪ್ರಸಿದ್ಧವಾದ ಜ್ಞಾನಮಾರ್ಗ ಮತ್ತು ಕರ್ಮಮಾರ್ಗ ಇವುಗಳನ್ನು ಇತರರಿಂದ ಬಾಧಕವು ಬಾರದಂತೆ ರಕ್ಷಿಸುತ್ತಾ ಆಯಾಯ ಅಧಿಕಾರಿಗಳಿಗೆ ಆಯಾಯ ಮಾರ್ಗಗಳಲ್ಲಿ ಪ್ರವೇಶಾದಿಗಳು ಲಭಿಸುವಂತೆ ಅನುಗ್ರಹಮಾಡುವ ಪ್ರಭುವಾದವನು ರುದ್ರನು ಎಂದು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳು—**ದ್ವಿಬರ್ಹಾಃ**

**ಬೃಂಹಿರ್ವೃದ್ಧ್ಯರ್ಥಃ ಯಷ್ಟುಃ ಸ್ತೋತುಶ್ಚ ದ್ವಯೋಃ ವರ್ಧಯಿತಾ ।** ಬೃಂಹ್ ಧಾತುವು ವೃದ್ಧಿ ಎಂಬರ್ಥವನ್ನು ಬೋಧಿಸುವುದು. ಆದುದರಿಂದ ರುದ್ರನು ಯಜ್ಞಮಾಡುವವನಿಗೂ ಸ್ತೋತ್ರಮಾಡುವವನಿಗೂ ವೃದ್ಧಿಯನ್ನುಂಟು ಮಾಡುವವನು. **ಅಥವಾ ಯಜ್ಞಸಂಗ್ರಾಮಯೋರ್ವೀರ್ಯೇಣ ಮಧ್ಯಮೋತ್ತಮಯೋರ್ವಾ ರೂಪೇಣ। ರುದ್ರೋ ಹಿ ಮಧ್ಯಮಸ್ಥಾನೀಯಃ ಸನ್ ಅಪ್ರವೃದ್ಧೋ ದಿವ್ಯಾದಿತ್ಯಾನ್ ಶಕ್ನೋತಿ ಪ್ರಭೂತಾನ್ ರಸಾನ್ ಪ್ರತಿಗ್ರಹೀತುಂ। ಅಂತರಿಕ್ಷೇ ಅಪ್ರವೃದ್ಧಃ ಶಕ್ನೋತಿ ಚ ವರ್ಧಯಿತುಂ ಅತ ಉಪಪನ್ನಮಸ್ಯ ದ್ವಿಬರ್ಹತ್ವಂ ।** ಯಜ್ಞ ಮತ್ತು ಯುದ್ಧ ಇವುಗಳಲ್ಲಿ ತನ್ನ ಶಕ್ತಿಯಿಂದ ವೃದ್ಧಿಯನ್ನು ತನ್ನ ಆಶ್ರಿತರಿಗೆ ಅನುಗ್ರಹಿಸುತ್ತಿರುವನು. ಇದರಿಂದ ದ್ವಿಬರ್ಹನೆಂದು ಪ್ರಸಿದ್ಧನಾಗಿರುವನು. ರುದ್ರನು ಮಧ್ಯಮಸ್ಥಾನ (ಅಂತರಿಕ್ಷ) ದೇವತೆಯಾಗಿರುವುದರಿಂದ ಆದಿತ್ಯರೂಪದಿಂದ ಅಂತರಿಕ್ಷದಲ್ಲಿ ಅತಿಶಯವಾದ ಶಕ್ತಿಯಿಂದ ರಸವನ್ನು ಸಂಗ್ರಹಿಸುವನು ಮತ್ತು ಅಂತರಿಕ್ಷದಲ್ಲಿ ವೃದ್ಧಿಯನ್ನು ಹೊಂದುವ ಸಾಮರ್ಥ್ಯವನ್ನು ಹೊಂದಿರುವನು. ಆದ್ದರಿಂದ ರುದ್ರನು **ದ್ವಿಬರ್ಹಾಃ** ಎಂದು ಎರಡು ವಿಧದಿಂದ ವೃದ್ಧಿಯನ್ನು ಹೊಂದುವನೆಂದು ಅರ್ಥವನ್ನು ವಿವರಿಸಿರುವರು. **ದ್ವಯೋಃ ಸ್ಥಾನಯೋಃ ಬರ್ಹತೇ ಪ್ರವರ್ಧತೇ ಇತಿ ದ್ವಿಬರ್ಹಾಃ**—ಎಂದು ದ್ವಿಬರ್ಹ ಶಬ್ದದ ಅರ್ಥವಿವರಣೆಯ ಪ್ರಕಾರವು ಎರಡು ಭಾಷ್ಯಗಳಲ್ಲಿಯೂ ಬೇರೆ ಬೇರೆ ವಿಧವಾಗಿ ವಿವೃತವಾಗಿರುತ್ತದೆ.

ಉದಾಹರಣೆಯ ಋಕ್ಕು—

**ಆರೇ ತೇ ಗೋಘ್ನಮುತ ಪೂರುಷಘ್ನಂ ಕ್ಷಯದ್ವೀರ ಸುಮ್ನಮಸ್ಮೇ ತೇ ಅಸ್ತು ।**
**ಮೃಳಾ ಚ ನೋ ಅಧಿ ಚ ಬ್ರೂಹಿ ದೇವಾಧಾ ಚ ನಃ ಶರ್ಮ ಯಚ್ಛ ದ್ವಿಬರ್ಹಾಃ ॥**

(ಋ. ಸಂ. ೧–೧೧೪–೧೦)

ಇದರ ಅರ್ಥವು—

ಶತ್ರುನಾಶಕನಾದ ಎಲೈ ರುದ್ರನೇ, ನಿನ್ನ ಗೋಹನನ ಮತ್ತು ಪುರುಷರನ್ನು ವಧಿಸಲು ಸಾಧನವಾದ ಆಯುಧಗಳು ನಮ್ಮಿಂದ ದೂರ ಇರಲಿ. ನಮಗೆ ಸುಖವುಂಟಾಗಲಿ. ನೀನು ನಮ್ಮ ಸುಖಕ್ಕೆ ಸಾಧನನಾಗು. ಎಲೈ ದೇವ, ನಮ್ಮ ಪಕ್ಷ ಹಿಡಿದು ಮಾತನಾಡು. ಪೃಥಿವ್ಯಂತರಿಕ್ಷಗಳಿಗೆ ಅಥವಾ ಜ್ಞಾನಕರ್ಮಗಳೆರಡಕ್ಕೆ ಸ್ವಾಮಿಯಾದ ನೀನು ನಮಗೆ ಸುಖವನ್ನುಂಟುಮಾಡು.

ಅಕ್ರಃ ॥ ೭೫ ॥

ಅಕ್ರ ಆಕ್ರಮಣಾತ್ । "ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಮ್"
ಇತ್ಯಪಿ ನಿಗಮೋ ಭವತಿ ॥ ೫ ॥

ಉದಾಹರಣೆಯ ಋಕ್ಕು—

**ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇ ಯಃ ಸೂನವೇ ಭಾಋಜೀಕಃ।**
**ಉದುಸ್ರಿಯಾ ಜನಿತಾ ಯೋ ಜಜಾನಾಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥**

(ಋ. ಸಂ. ೩–೧–೧೨)

ಇದರ ಅರ್ಥವು—

ಸಕಲಲೋಕಕ್ಕೂ ಜನಕನೂ, ಉದಕಗಳಿಗೆ ಗರ್ಭರೂಪನೂ, ನೇತೃಗಳಲ್ಲಿ ಶ್ರೇಷ್ಠನೂ ಮಹಾತ್ಮನೂ ಆದ ಯಾವ ಅಗ್ನಿಯೂ ಅಪ್ರತಿಹತನಾಗಿಯೂ ಸಂಗ್ರಾಮದಲ್ಲಿ ಮಹತ್ತಾದ ತನ್ನ ಸೇನೆಗಳನ್ನು ಭರಿಸುವವನಾಗಿಯೂ ಎಲ್ಲರಿಂದಲೂ ನೋಡ

ಲ್ಪಡುವವನಾಗಿಯೂ ತನ್ನ ತೇಜಸ್ಸಿನಿಂದಲೇ ಪ್ರಕಾಶಮಾನನಾಗಿಯೂ ಇರುವನೋ ಆ ಅಗ್ನಿಯು ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ ಉದಕಗಳನ್ನು ಸೃಷ್ಟಿಸಿದನು.

ಅಕ್ರಃ—ಪರೇಷಾಮಾಕ್ರಮಿತಾ ಪರೈರನಾಕ್ರಮಣೀಯೋ ವಾ ಇತರರನ್ನು ಆಕ್ರಮಿಸುವವನು, ಅಥವಾ ಯಾರಿಂದಲೂ ಆಕ್ರಮಿಸಲ್ಪಡದಿರುವವನು ಎಂದು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಅಗ್ನಿಯು ಎಲ್ಲವನ್ನೂ ಆಕ್ರಮಿಸಿ ದಹಿಸುವುದು. ಆದರೆ ಅಗ್ನಿಯನ್ನು ಇತರ ಯಾವ ವಸ್ತುವೂ ಹಿಂಸಿಸಲಾರದು ಎಂಬಭಿಪ್ರಾಯವು ಇಲ್ಲಿ ಉಕ್ತವಾಗಿದೆ.

ಉರಾಣಃ ॥ ೭೬ ॥

ಉರಾಣ ಊರು ಕುರ್ವಾಣಃ। "ದೂತ ಈಯಸೇ ಪ್ರದಿವ ಉರಾಣಃ" ಇತ್ಯಪಿ ನಿಗಮೋ ಭವತಿ ॥ ೬ ॥

**ಉರಾಣಃ—ಉರು ಕುರ್ವಾಣಃ** ಸ್ವಲ್ಪ ಇರುವುದನ್ನು ಹೆಚ್ಚಾಗಿ ಮಾಡುವವನು, ಬಹಳವಾಗಿ ಅಭಿವೃದ್ಧಿಪಡಿಸುವವನು.

ಉದಾಹರಣೆಯ ಋಕ್ಕು—

**ವೇರಧ್ವರಸ್ಯ ದೂತ್ಯಾನಿ ವಿದ್ವಾನುಭೇ ಅಂತಾ ರೋದಸೀ ಸಂಚಿಕಿತ್ವಾನ್ ।**
**ದೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ॥**

(ಋ. ಸಂ. ೪–೭–೮)

ಇದರ ಅರ್ಥವು—

ಎಲೈ ಅಗ್ನಿಯೇ, ಸರ್ವಜ್ಞನೂ, ಯಜ್ಞಸಂಬಂಧವಾದ ದೂತಕರ್ಮಗಳನ್ನು ತಿಳಿದವನೂ ದ್ಯಾವಾಪೃಥಿವಿಗಳನ್ನೂ ಅವುಗಳ ನಡುವೆ ಇರುವ ಅಂತರಿಕ್ಷವನ್ನೂ ಪೂರ್ಣವಾಗಿ ಅರಿತವನೂ ಅತ್ಯಂತ ಪ್ರಾಚೀನನಾಗಿದ್ದು ಸ್ವಲ್ಪವಾದ ಹವಿಸ್ಸನ್ನೂ ಪ್ರಭೂತವಾಗಿರುವಂತೆ ಅರಿತವನೂ ಅಧಿಕವಾದ ಜ್ಞಾನವುಳ್ಳವನೂ ದೇವದೂತನೂ ಆದ ನೀನು ದೇವಲೋಕದ ಆರೋಹಣ ಸ್ಥಾನಗಳನ್ನು ಹತ್ತಿ ಸಂಚರಿಸುತ್ತೀಯೇ.

ಸ್ತಿಯಾನಾಮ್ ॥೭೭॥

ಸ್ತಿಯಾ ಆಪೋ ಭವನ್ತಿ ಸ್ತ್ಯಾಯನಾತ್ । "ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಮ್" ಇತ್ಯಪಿ ನಿಗಮೋ ಭವತಿ ॥೭॥

**ಸ್ತಿಯಾ**—ಎಂದರೆ ಉದಕಗಳು. ಏಕೆಂದರೆ ನೀರು ಕೆಳಗೆ ಬಿದ್ದರೆ ಒಂದೆಡೆ (ತಗ್ಗು ಪ್ರದೇಶದಲ್ಲಿ) ಒಟ್ಟಿಗೆ ಸೇರುವುದು.

ಉದಾಹರಣೆಯ ಋಕ್ಕು—

**ವೃಷಾಸಿ ದಿವೋ ವೃಷಭಃ ಪೃಥಿವ್ಯಾ ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಂ ।**
**ವೃಷ್ಣೇ ತ ಇಂದುರ್ವೃಷಭ ಪೀಪಾಯ ಸ್ವಾದೂ ರಸೋ ಮಧುಪೇಯೋ ವರಾಯ ॥**

(ಋ. ಸಂ. ೬–೪೪–೨೧)

**ಇದರ ಅರ್ಥವು—**

ಕಾಮವರ್ಷಕನಾದ ಎಲೈ ಇಂದ್ರನೇ, ನೀನು ದ್ಯುಲೋಕಕ್ಕೆ ಇಷ್ಟಾರ್ಥಪ್ರದನಾಗಿದ್ದೀಯೆ. ಭೂಮಿಗೆ ವೃಷ್ಟಿದಾನ ದಿಂದ ಕಾಮವರ್ಷಕನಾಗಿದ್ದೀಯೆ. ನದಿಗಳಿಗೆ ವೃಷ್ಟಿಯಿಂದ ಜಲವನ್ನು ತುಂಬುತ್ತೀಯೆ, ಸಂಘಾತ್ಮಕವಾದ ಪ್ರಾಣಿಗಳಿಗೆಲ್ಲಾ ಕಾಮವರ್ಷಕನಾಗಿದ್ದೀಯೆ, ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ಶ್ರೇಷ್ಠನೂ ವೃಷ್ಟಿಕಾರಕನೂ ಆದ ನಿನಗಾಗಿ ಸೋಮ ರಸವು ಪಾನಮಾಡಲು ಸಿದ್ಧವಾಗಿದೆ.

**ಸ್ತಿಯಾನಾಂ—ಸ್ತಿಯಾಃ** ಎಂದರೆ ಉದಕಗಳು, ನೀರು ಎಂದರ್ಥವು. ಏಕೆಂದರೆ, ಸ್ತ್ಯಾಯನವೆಂಬ ಶಬ್ದಕ್ಕೆ ಒಂದಕ್ಕೊಂದನ್ನು ಸೇರಿಸು ಎಂಬರ್ಥವಿರುವುದು. ಭೂಮಿಯಲ್ಲಿರುವ ಮಣ್ಣು ಮೊದಲಾದ ಅನೇಕ ಪದಾರ್ಥಗಳು ಒಂದ ಕ್ಕೊಂದು ಸೇರದೆ ಪುಡಿಪುಡಿಯಾಗಿದ್ದಾಗ ನೀರು ಅದನ್ನು ಒಟ್ಟಿಗೆ ಸೇರುವಂತೆ (ನೀರು ಹಾಕಿ ಕಲೆಸುವುದರಿಂದ) ಮಾಡುವುದು. ಎರಡು ಪದಾರ್ಥಗಳು ಒಂದಕ್ಕೊಂದು ಸೇರುವಂತೆ ಮಾಡುವ ಶಕ್ತಿಯು ನೀರಿಗಿರುವುದು. ಆದುದರಿಂದ ನೀರಿಗೆ ಸ್ತಿಯಾ ಎಂಬ ಹೆಸರು ಬಂದಿರುವುದು. ಈ ವಿಷಯದಲ್ಲಿ ಪ್ರಕೃತ ಋಕ್ಕಿನಲ್ಲಿರುವ **ವೃಷಾ ಸಿಂಧೂನಾಂ ವೃಷಭಃ ಸ್ತಿಯಾನಾಂ** ಎಂಬ ವೇದವಾಕ್ಯವೇ ಉದಾಹರಣೆಯಾಗಿರುವುದು ಎಂದು ನಿರ್ವಚನಾಭಿಪ್ರಾಯವು.

ಸ್ತಿಪಾಃ ॥ ೭೮ ॥

ಸ್ತಿಪಾ ಸ್ತಿಯಾಪಾಲನ ಉಪಸ್ಥಿತಾನ್ ಪಾಲಯತೀತಿ ವಾ ॥ " ಸ ನ ಸ್ತಿಪಾ ಉತ ಭವಾ ತನೂಪಾಃ " ಇತ್ಯಪಿ ನಿಗಮೋ ಭವತಿ ॥೮॥

**ಉದಾಹರಣೆಯ ಋಕ್ಕು—**

**ಯಂ ತ್ವಾ ಪೂರ್ವಮೀಳಿತೋ ವಧ್ರ್ಯಶ್ವಃ ಸಮಿಧೇ ಅಗ್ನೇ ಸ ಇದಂ ಜುಷಸ್ವ ।**
**ಸ ನಃ ಸ್ತಿಪಾ ಉತ ಭವಾ ತನೂಪಾ ದಾತ್ರಂ ರಕ್ಷಸ್ವ ಯದಿದಂ ತೇ ಅಸ್ಮೇ ॥**

**(ಋ. ಸಂ. ೧೦–೬೯–೪)**

**ಇದರ ಅರ್ಥವು—**

ಎಲೈ ಅಗ್ನಿಯೇ, ಸ್ತುತಿಕರ್ತನಾದ ವಧ್ರ್ಯಶ್ವನು ಮೊದಲು ಯಾವ ನಿನ್ನನ್ನು ಹವಿಸ್ಸುಗಳಿಂದ ಪ್ರಜ್ವಲಿತನಾಗುವಂತೆ ಮಾಡಿದನೋ ಅದೇ ನೀನು ನನ್ನ ಈ ಸ್ತೋತ್ರವನ್ನು ಸೇವಿಸು. ನೀನು ನಮ್ಮ ಗೃಹರಕ್ಷಕನಾಗಿರು. ನಮ್ಮ ಅಂಗರಕ್ಷಕ ನಾಗಿಯೂ ಇರು. ನಿನ್ನಿಂದ ದತ್ತವಾಗಿ ನಮ್ಮಲ್ಲಿ ಸ್ಥಾಪಿತವಾಗಿರುವ ಧನವನ್ನು ಕಾಪಾಡು.

**ಸ್ತಿಪಾಃ—ರಕ್ಷಕೋ ಭವ** ಸ್ತಿಪಾಃ ಎಂದರೆ ಸಂರಕ್ಷಕನು ಕಾಪಾಡುವವನು ಎಂದರ್ಥವು.

ಜಬಾರು ॥೭೯॥

ಜಬಾರು ಜವಮಾನರೋಹಿ, ಜರಮಾಣರೋಹಿ, ಗರಮಾಣರೋಹೀತಿ ವಾ ॥ "ಅಗ್ರೇ ರುಪ ಆರುಪಿತಂ ಜಬಾರು" ಇತ್ಯಪಿ ನಿಗಮೋ ಭವತಿ ॥೯॥

ಜಬಾರು—ಎಂದರೆ ಶೀಘ್ರವಾಗಿ ಬೆಳೆಯುವವನು, ವೃದ್ಧಿಯಾಗುವವನು ಎಂದರ್ಥವು. **ಜಬಾರೂ ಆದಿತ್ಯ ಮಂಡಲಂ। ತದ್ಧಿ ಜವಮಾನಂ ಗಚ್ಛನ್ನಭಸೋ ಮಧ್ಯಮಾರೋಹತಿ ಜಾಯತೇ ವಾ ಉದೇತೀತ್ಯರ್ಥಃ।** ಜಬಾರು ಎಂದರೆ ಆದಿತ್ಯ ಮಂಡಲವು. ಆದಿತ್ಯನು ಉದಯಿಸಿದ ಮೇಲೆ ವೇಗವಾಗಿ ಅಂತರಿಕ್ಷದಲ್ಲಿ ಮಧ್ಯ ಪ್ರದೇಶಕ್ಕೆ ಸೇರುವನು. ಇತ್ಯಾದಿ.

ಉದಾಹರಣೆಯ ಋಕ್ಕು—

**ತಮಿನ್ನ್ವೇ೩ ವ ಸಮನಾ ಸಮಾನಮಭಿ ಕ್ರತ್ವಾ ಪುನತೀ ಧೀತಿರಶ್ಯಾಃ।**
**ಸಸಸ್ಯ ಚರ್ಮನ್ನಧಿ ಚಾರು ಪೃಶ್ನೇರಗ್ರೇರುಪ ಆರುಪಿತಂ ಜಬಾರು॥**

(ಋ. ಸಂ. ೪–೫–೭)

ಇದರ ಅರ್ಥವು—

ಯಾವ ವೈಶ್ವಾನರನ ವೇಗವಾಗಿ ಆರೋಹಿಸುವುದೂ ಕಾಂತಿಯುತವಾದುದೂ ಆದ ಮಂಡಲವು ಯಜ್ಞಾಗ್ನಿಯ ಮುಂಭಾಗದಲ್ಲಿದ್ದು ನಿಶ್ಚಲವಾದ ದ್ಯುಲೋಕದಲ್ಲಿ ಸಂಚರಿಸಲು ಪೃಥ್ವಿಯಿಂದ ಮೇಲಕ್ಕೆತ್ತಿಡಲ್ಪಟ್ಟಿತೋ ಅದೇ ವೈಶ್ವಾನರನನ್ನು ಅವನು ದೇವಮಾನವಾದಿಗಳಿಗೆಲ್ಲಾ ಸಮಾನವಾಗಿರುವುದರಿಂದ ಅವನಿಗೆ ಅರ್ಪಿಸಲು ಯೋಗ್ಯವಾದುದೂ ಎಲ್ಲರನ್ನು ಪವಿತ್ರಗೊಳಿಸುವುದೂ ಆದ ನಮ್ಮ ಸ್ತುತಿಯು ಅದಕ್ಕೆ ಯೋಗ್ಯವಾದ ಕರ್ಮದೊಡನೆ ಕೂಡಿ ಕ್ಷಿಪ್ರವಾಗಿ ವ್ಯಾಪಿಸಲಿ।

ಜರೂಥಂ ॥೬೦॥

ಜರೂಥಂ ಗರೂಥಂ ಗೃಣಾತೇಃ ॥ "ಜರೂಥಂ ಹನ್ಯಕ್ಷಿರಾಯೇ ಪುರಂಧಿಂ" ಇತ್ಯಪಿ ನಿಗಮೋ ಭವತಿ ॥೧೦॥

**ಜರೂಥಂ** ಎಂಬ ಶಬ್ದವು ಪ್ರಾರ್ಥಿಸಿ ಆಹ್ವಾನಮಾಡು ಎಂಬರ್ಥವುಳ್ಳ ಜರತಿ (ಗೃಣಾತಿ) ಧಾತುವಿನಿಂದ ನಿಷ್ಪನ್ನವಾಗಿದೆ. **ಸ್ತೋತ್ರವೆಂರ್ಥವು.**

ಉದಾಹರಣೆಯ ಋಕ್ಕು—

**ತ್ವಾಮಗ್ನೇ ಸಮಿಧಾನೋ ವಸಿಷ್ಠೋ ಜರೂಥಂ ಹನ್ಯಕ್ಷಿ ರಾಯೇ ಪುರಂಧಿಂ।**
**ಪುರುಣೀಥಾ ಜಾತವೇದೋ ಜರಸ್ವ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ॥**

(ಋ. ಸಂ. ೭–೯–೬)

ಇದರ ಅರ್ಥವು—

ಎಲೈ ಅಗ್ನಿಯೇ, ನಿನ್ನನ್ನು ವಸಿಷ್ಠ ಋಷಿಯು ಪ್ರಜ್ವಲಿಸುವಂತೆ ಮಾಡುತ್ತಾನೆ. ನೀನು ಕಠಿನವಾದ ವಾಕ್ಕುಳ್ಳ ಅಸುರ ಗಣವನ್ನು ನಾಶಮಾಡು. ಧನವಂತನಾದ ಯಜಮಾನನಿಗೋಸ್ಕರ ಅನೇಕ ವಿಧವಾದ ಪ್ರಜ್ಞೆಯುಳ್ಳ ದೇವಗಣವನ್ನು ಪೂಜಿಸು. ಜಾತವೇದೋರೂಪನಾದ ಎಲೈ ಅಗ್ನಿಯೇ, ಅನೇಕ ವಿಧವಾದ ಸ್ತುತಿಗಳಿಂದ ದೇವತೆಗಳನ್ನು ಸ್ತುತಿಸು. ನೀನೆಲ್ಲರೂ (ದೇವತೆಗಳೆಲ್ಲರೂ) ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

**ಪುರಂಧಿಂ—ಬಹೂನಾಂ ಧಾತ್ರೀಂ ಪೃಥಿವೀಂ**। ಅನೇಕರಿಗೆ ಧಾತ್ರಿಯಾದ ಪೃಥಿವಿಯನ್ನು ಎಂದು **ಪುರಂಧಿ** ಶಬ್ದಕ್ಕೆ ಪೃಥ್ವಿಯೆಂದರ್ಥಮಾಡಿದೆ. ಈ ಪದವು **ಪ್ರಭೂತ, ಪೌಷ್ಕಳ್ಯ, ಸಮೃದ್ಧಿ** ಎಂಬರ್ಥವನ್ನೇ ಎಲ್ಲಾ ಕಡೆಯೂ

ಸೂಚಿಸಿದರೂ ಸಹ ಇವರ ಪ್ರಯೋಗವು ಅನೇಕ ಸಂದರ್ಭಗಳಲ್ಲಿರುವುದರಿಂದ ಆಯಾ ಸಂದರ್ಭಾನುಸಾರವಾಗಿ ಅರ್ಥವನ್ನು ವಿವರಿಸಬೇಕಾದಿರುತ್ತದೆಯೆಂದು ನಿರುಕ್ತಕಾರರ ವಾಕ್ಯದಿಂದಲೇ ತಿಳಿಯುತ್ತದೆ. ಹೇಗೆಂದರೆ,

**ತೇ ಹಿ ಯಜ್ಞೇಷು ಯಜ್ಞಿಯಾಸ ಊಮಾಃ ಸದಸ್ಥಂ ವಿಶ್ವೇ ಅಭಿ ಸಂತಿ ದೇವಾಃ**
**ತಾ೦ ಅಧ್ವರ ಉರತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ॥**

(ಋ. ಸಂ. ೭-೩೯-೪)

ಎಂಬ ಋಕ್ಕಿನಲ್ಲಿರುವ **ಪುರಂಧಿಂ** ಎಂಬ ಪದದ ಅರ್ಥವನ್ನು ವಿವರಿಸುವಾಗ, ಅಲ್ಲಿ

**ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನಾದೇಶ ಇತ್ಯೇಕಂ । ಇಂದ್ರ ಇತ್ಯ-ಪರಂ ಸ ಬಹುಕರ್ಮತಮಃ ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ॥**

(ನಿ. ೬-೧೩)

ಸಮೃದ್ಧವಾದ **ಧೀ** (ಬುದ್ಧಿ) ಯುಳ್ಳವನು ಎಂದು ಪುರಂಧಿಶಬ್ದದ ಅರ್ಥ. ಆದರೆ ಅಂತಹವನು ಯಾರು ಎಂಬ ಪ್ರಶ್ನೆಯಾದರೆ, ಉದಾಹೃತವಾಗಿರುವ ಈ ಋಕ್ಕಿನಲ್ಲಿ **ಭಗ**ಶಬ್ದವು ಈ ಪದಕ್ಕೆ ಪೂರ್ವಭಾವಿಯಾಗಿರುವುದರಿಂದ ಅದರ ವಿಶೇಷಣವೆಂದು ಕೆಲವರ ಮತ. **ಧೀ**ಶಬ್ದವು **ಕರ್ಮ**ನಾಮಗಳಲ್ಲೂ ಪಠಿತವಾಗಿರುವುದರಿಂದ **ಪುರಂಧಿ**ಯೆಂದರೆ ನಾನಾ ವಿಧವಾದ ಕರ್ಮವುಳ್ಳವನು ಎಂದಾಗಲಿ, ಅಥವಾ ಶತ್ರು ಪಟ್ಟಣಗಳನ್ನು ಸೀಳುವವನು ಎಂದಾಗಲಿ ಅರ್ಥವಾಗುವುದರಿಂದ **ಇಂದ್ರ**ನಿಗೆ ವಿಶೇಷಣವೆಂದು ಇನ್ನು ಕೆಲವರ ಮತ. ಅಥವಾ **ಇಮಾಮೂ ನು ಕವಿತಮಸ್ಯ ಮಾಯಾಂ** (ಋ. ಸಂ. ೫-೮೫-೬) ಇತ್ಯಾದಿ ವಾಕ್ಯಗಳಲ್ಲಿ ವರುಣನ ಶ್ರೇಷ್ಠವಾದ ಪ್ರಜ್ಞೆಯನ್ನು ಸ್ತುತಿಸಿರುವಂತೆ ನಿರುಕ್ತಕಾರರು ಉದಾಹರಿಸಿರುವ ಈ ಋಕ್ಕಿನಲ್ಲಿಯೂ ಅವನ ಪ್ರಜ್ಞೆಯನ್ನು ವರ್ಣಿಸುತ್ತಾ **ವರುಣ**ನಿಗೆ ಪರ್ಯಾಯ ಪದವಾಗಿರಬಹುದೆಂದು 'ಇನ್ನು ಕೆಲವರ ಮತ ಎಂದು ಈ ರೀತಿ ಅಭಿಪ್ರಾಯ ಭೇದಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. ಯಜ್ಞಕರ್ತರ ವಿಷಯದಲ್ಲಿ ದೇವತೆಗಳು ತೋರಿಸುವ ಔದಾರ್ಯದ ಆಧಿಕ್ಯವನ್ನು ತೋರಿಸುವಾಗಲೂ, ಯಜಮಾನರು ದೇವತೆಗಳಿಗೆ ಅರ್ಪಿಸತಕ್ಕ ಹವಿರಾದಿಗಳ ಸಮೃದ್ಧಿಯನ್ನು ಸೂಚಿಸುವಾಗಲೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ಇನ್ನೂ ಕೆಲವು ಉದಾಹರಣೆಗಳಿಂದ ತಿಳಿಸಿದ್ದಾರೆ.

**ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾ೦ ಅಯುತಂ ಚ ಸಾಕಂ ।**
**ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ॥**

(ಋ. ಸಂ. ೪-೨೬-೭)

ಎಂಬ ಋಕ್ಕಿನಲ್ಲಿರುವ ಪದಕ್ಕೆ ದುರ್ಗಾಚಾರ್ಯರು (ನಿ-೧೧-೨) **ಪುರಂಧಿಃ ಬಹುಧನಸ್ಯ ದಾತಾ ।** ಅತ್ಯಧಿಕವಾಗಿ ಧನವನ್ನು ದಾನಮಾಡತಕ್ಕವನೆಂದೂ. ಸಾಯಣರು **ಬಹುಕರ್ಮಾ** ಎಂದು ಅರ್ಥಮಾಡಿದ್ದಾರೆ. ಈ ಪದವು ಇಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಉದಾರಿಯೆಂಬುದರಲ್ಲಿ ತಾತ್ಪರ್ಯ.

**ನೃಧೂತೋ ಅದ್ರಿಷುತೋ ಬರ್ಹಿಹಿ ಪ್ರಿಯಃ ಪತಿರ್ಗವಾಂ ಪ್ರದಿವ ಇಂದುರ್ಋತ್ವಿಯಃ ।**
**ಪುರಂಧಿವಾನ್ಮನುಷೋ ಯಜ್ಞಸಾಧನಃ ಶುಚಿರ್ಧಿಯಾ ಪವತೇ ಸೋಮ ಇಂದ್ರ ತೇ ॥**

(ಋ. ಸಂ. ೯-೭೨-೪)

ಎಂಬ ಋಕ್ಕಿನಲ್ಲಿ **ಬಹುಕರ್ಮವಾನ್ ಮನುಷ್ಯಃ** ದೇವತೆಗಳ ತೃಪ್ತ್ಯರ್ಥವಾಗಿ ನಾನಾ ವಿಧವಾದ ಕರ್ಮಗಳುಳ್ಳ ಎಂದರೆ ಕರ್ಮಗಳನ್ನು ಮಾಡುವ ಮಾನವನ ಎಂದರ್ಥಮಾಡಿದೆ ಮತ್ತು,

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦-೬೫-೧೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು ಈ ಪದಕ್ಕೆ (ನಿ. ೧೨-೩೦). **ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ**—ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ **ವಚಾಂಸಿ**—ವಚನಗಳನ್ನು ಎಂದರ್ಥಮಾಡಿದ್ದಾರೆ. ಸಾಯಣರು **ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ ।** ಬಹುವಿಧವಾದ ಪ್ರಜ್ಞೆಯಿಂದ ಕೂಡಿದ **ಸರಸ್ವತಿಗೆ** ವಿಶೇಷಣವೆಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨-೩೦) **ಬಹುಧಾತ್ರ್ಯಾ ; ಮಾಧ್ಯಮಿಕಯಾ ವಾಚಾ** ಎಂಬ ವಿವರಣೆಯಿಂದ **ಪುರಂಧಿ** ಶಬ್ದವು **ಸರಸ್ವತೀ** ಸದೃಶವಾದ ಒಂದು ದೇವತಾ ವಿಶೇಷವನ್ನು ಸೂಚಿಸುವುದೆಂದು ತಿಳಿಯುತ್ತದೆ. **ಇದರಂತೆಯೇ,**

**ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।**
**ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥**

(ಋ. ಸಂ. ೭-೩೫-೧)

ಇತ್ಯಾದಿ ಋಕ್ಕುಗಳಲ್ಲಿ **ಪುರಂಧಿಯೇ** ಪ್ರತ್ಯೇಕವಾದ ದೇವತೆಯೆಂದೂ ತಿಳಿದು ಬರುತ್ತದೆ. ಸಾಯಣರೂ ಸಹ ಈ ಋಕ್ಕಿನಲ್ಲಿರುವ **ಭಗಾದಿ** ಪದಗಳಿಗೆ ಇದನ್ನು ವಿಶೇಷಣವನ್ನಾಗಿ ಮಾಡಿಲ್ಲ. ಮತ್ತು,

**ದೇವೋ ಭಗಃ ಸವಿತಾ ರಾಯೋ ಅಂಶ ಇಂದ್ರೋ ವೃತ್ರಸ್ಯ ಸಂಜಿತೋ ಧನಾನಾಂ ।**
**ಋಭುಕ್ಷಾ ವಾಜ ಉತ ವಾ ಪುರಂಧಿರವಂತು ನೋ ಅಮೃತಾಸಸ್ತುರಾಸಃ ॥**

(ಋ. ಸಂ. ೫-೪೨-೫)

ಎಂಬಲ್ಲಿ ಈ ಪದವು **ವಿಭ್ವನಿಗೆ** ಪರ್ಯಾಯಪದವಾಗಿದೆ.

**ಪುರಾಣೀ ದೇವೀ ಯುವತಿಃ ಪುರಂಧಿರನು ವ್ರತಂ ವಿಶ್ವವಾಸೇ ।**

(ಋ. ಸಂ. ३-೬೧-೧)

ಇತ್ಯಾದಿ ಕಡೆಗಳಲ್ಲಿ **ಉಷಸ್ಸಿಗೆ** ವಿಶೇಷಣವಾಗಿದೆ. ಬಹುಸ್ತೋತ್ರವತಿಯೆಂದರ್ಥ. ಹೀಗೆಯೇ ಅನೇಕ ಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದೆ ಸಂತಾನವನ್ನು ಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರು ಎಂಬರ್ಥವನ್ನು ಕೊಡುತ್ತದೆ.

**ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।**
**ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥**

(ಋ. ಸಂ. ೧೦-೮೦-೧)

ಇತ್ಯಾದಿ ಋಕ್ಕುಗಳಲ್ಲಿ (ಋ. ಸಂ. ೧-೧೧೬-೧೧೭ ; ೧-೧೧೭-೧೯) ಪ್ರಸವಸಮರ್ಥಳಾದ ಪತ್ನಿಯೆಂದೂ,

**ಪ್ರ ಭೋದಯಾ ಪುರಂಧಿಂ ಜಾರ ಆ ಸಸತೀಮಿವ ॥**
**ಪ್ರ ಚಕ್ಷಯ ರೋದಸೀ ವಾಸಯೋಷಸಃ ॥**

(ಋ. ಸಂ. ೧-೧೩೪-೩)

ಇತ್ಯಾದಿ ಋಕ್ಕುಗಳಲ್ಲಿ ಭೋಗಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತದೆ. ಹೀಗೆ ನಾನಾ ವಿಧವಾದ ಗುಣಗಳನ್ನು ವರ್ಣಿಸವಾಗ **ಪುರಂಧಿ** ಶಬ್ದವು ಆಯಾ ಗುಣಗಳ ಆಧಿಕ್ಯವನ್ನೂ ಸತ್ಸಮೃದ್ಧಿಯನ್ನೂ ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸಂಪತ್ಸಮೃದ್ಧಿಯಿಂದ ಕೂಡಿದುದೂ, ಲೋಕಪೋಷಕವಾದುದೂ ಆದ ಪೃಥಿವಿಯ ಗುಣವನ್ನು ವರ್ಣಿಸುವ ವಿಶೇಷಣ ಪದವಾಗಿದೆಯೆಂದು ಸಾಯಣಭಾಷ್ಯವು ತಿಳಿಸಿದೆ.

ಕುಲಿಶಃ ॥ ೮೧ ॥

ಕುಲಿಶ ಇತಿ ವಜ್ರನಾಮ ಕೂಲಶಾತನೋ ಭವತಿ ॥ "ಸ್ಕಂಧಾಂಸೀವ ಕುಲಿಶೇನಾ ವಿವೃಕ್ಣಾಹಿಃ ಶಯತ ಉಪಪೃಕ್ಪೃಥಿವ್ಯಾಃ" ॥ ಸ್ಕಂಧೋ ವೃಕ್ಷಸ್ಯ ಸಮಾಸ್ಕನ್ನೋ ಭವತಿ ॥ ಅಯಮಪೀತರಸ್ಕಂಧ ಏತಸ್ಮಾದೇವಾಸ್ಕನ್ನಂ ಕಾಯೇಽಹಿಃ ಶಯತ ಉಪಪರ್ಚನಃ ಪೃಥಿವ್ಯಾಃ ॥ ೧೧ ॥ ೧೭ ॥

**ಕುಲಿಶಃ—ವಜ್ರನಾಮ** ವಜ್ರಾಯುಧದ ಹೆಸರು. **ಕುಲಿಶಾತನೋ ಭವತಿ—**ನದಿಯು ತನ್ನ ದಡಗಳನ್ನು ಉರುಳಿಸುವಂತೆ ಇಂದ್ರನ ವಜ್ರಾಯುಧವು ಶತ್ರುಗಳನ್ನು ಹೊಡೆದು ಉರುಳಿಸುವುದು. **ಸ್ಕಂಧೋ ವೃಕ್ಷಸ್ಯ ಸಮಾಸ್ಕನ್ನೋ ಭವತಿ—**ಸ್ಕಂಧವೆಂದರೆ ಒಂದು ವೃಕ್ಷದಲ್ಲಿ ಹೊರಹೊರಡುವ ಪ್ರದೇಶ. ಕೊಂಬೆಗಳು ಇರುವವರಿಗೂ ಕಂಭದಂತಿರುವ ದಪ್ಪನಾದ ವೃಕ್ಷದ ಭಾಗವು. ಈ ಸ್ಕಂಧದ ಕೊನೆಯಲ್ಲಿ ಮಾತ್ರದಲ್ಲಿ ಶಾಖೆಗಳು (ಕೊಂಬೆಗಳು) ಹೊರ ಹೊರಡುವವು. ಎಂದರೆ ಶಾಖೆಗಳಿಲ್ಲದ ವೃಕ್ಷದ ಮಧ್ಯಪ್ರದೇಶಕ್ಕೆ ಸ್ಕಂಧವೆಂಬ ಹೆಸರು ಬಂದಿದೆ. ಅದೇ ರೀತಿ ಮನುಷ್ಯನ ಶರೀರದಲ್ಲಿ ಕೈಕಾಲುಗಳು ಇಲ್ಲದ ಶರೀರದ ಮಧ್ಯಭಾಗಕ್ಕೆ ಸ್ಕಂಧವೆಂದು ಹೆಸರು. **ಅಹಿಃ ಶಯತ ಉಪಪರ್ಚನಃ ಪೃಥಿವ್ಯಾಃ**-ಎಂದರೆ ವೃತ್ರಾಸುರನ (ಮೇಘವು) ಕತ್ತರಿಸಿದ ಕೊಂಬೆಯಂತೆ ಭೂಮಿಯನ್ನು ಅಪ್ಪಿಕೊಂಡು ಅದರ ಮೇಲೆ (ನಿರ್ಜೀವವಾಗಿ) ಬಿದ್ದಿದ್ದಾನೆ.

ಉದಾಹರಣೆಯ ಋಕ್ಕು—

**ಅಹನ್ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ ।**
**ಸ್ಕಂಧಾಂಸೀವ ಕುಲಿಶೇನಾ ವಿವೃಕ್ಣಾಹಿಃ ಶಯತ ಉಪಪೃಕ್ಪೃಥಿವ್ಯಾಃ ॥**

(ಋ. ಸಂ. ೧-೩೨-೫)

ಇದರ ಅರ್ಥವು—

ಕೊಡಲಿಯಿಂದ ಮರದ ಕೊಂಬೆಗಳನ್ನು ಕತ್ತರಿಸಿ ಕೆಳಕ್ಕೆ ಬೀಳಿಸುವಂತೆ ಇಂದ್ರನು ತನ್ನ ಮಹಾವಜ್ರಾಯುಧದಿಂದ ಅತ್ಯಂತ ಅಂಧಕಾರರೂಪದಲ್ಲಿ ಲೋಕವನ್ನು ಆವರಿಸಿದ ವೃತ್ರಾಸುರನನ್ನು ಅವನ ತೋಳನ್ನು ಕತ್ತರಿಸಿ ಕೊಂದನು. ಅನಂತರ ವೃತ್ರನು ಕತ್ತರಿಸಿದ ಕೊಂಬೆಯಂತೆ ನಿರ್ಜೀವನಾಗಿ ಭೂಮಿಯನ್ನು ಚೆನ್ನಾಗಿ ಅಪ್ಪಿಕೊಂಡು ಮಲಗಿದ್ದಾನೆ.

ಇಂದ್ರನು ವಜ್ರಾಯುಧದಿಂದ ವೃತ್ರನನ್ನುಪ್ರಹರಿಸಿದ ಮೇಲೆ ಆ ವೃತ್ರನು ಕೊಡಲಿಯಿಂದ ಕಡಿಯಲ್ಪಟ್ಟ ವೃಕ್ಷದಂತೆ ನೆಲದ ಮೇಲೆ ಬಿದ್ದಿದ್ದನು. ಮೇಘರೂಪದಿಂದಿರುವ ವೃತ್ರನನ್ನು ಇಂದ್ರನು ವಜ್ರಾಯುಧದಿಂದ ಪ್ರಹರಿಸಿದ ಮೇಲೆ ಕತ್ತರಿಸಿದ ಬಾಹುವು (ಅಥವಾ ವೃಕ್ಷವು) ನೆಲದ ಮೇಲೆ ಬೀಳುವಂತೆ ಮೇಘದಲ್ಲಿದ್ದ ನೀರು ಭೂಮಿಯ ಮೇಲೆ ಬಿದ್ದಿತು ಎಂದು **ಮುಖ್ಯಾಭಿಪ್ರಾಯವು.**

ತುಞ್ಜಃ ॥೮೨॥

ತುಞ್ಜಸ್ತುಞ್ಜತೇರ್ದಾನಕರ್ಮಣಃ ॥

**ತುಂಜಃ** ಎಂದರೆ ದಾನವು, ಕೊಡುವುದು ಎಂದರ್ಥವು. ಈ ಶಬ್ದವನ್ನು **ಮುಂದಿನ ಖಂಡದ** ಉದಾಹರಣೆಯಲ್ಲಿ ವಿವರಿಸಲಾಗುವುದು. **ತುಂಜ** ಶಬ್ದವು ಕೊಡು ಎಂಬರ್ಥವುಳ್ಳ **ತುಜ್** ಧಾತುವಿನಿಂದ ನಿಷ್ಪನ್ನವಾಗಿದೆ.

**ಇತಿ ಸಪ್ತದಶಃ ಖಂಡಃ**

ಇಲ್ಲಿಗೆ ಹದಿನೇಳನೆಯ ಖಂಡವು ಸಮಾಪ್ತವು

---

## ಅಷ್ಟಾದಶಃ ಖಂಡಃ

### ಹದಿನೆಂಟನೆಯ ಖಂಡವು

ತುಞ್ಜೇ ತುಞ್ಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ। ನ ವಿಂಧೇ ಅಸ್ಯ ಸುಷ್ಟುತಿಂ । ದಾನೇ ದಾನೇ ಯ ಉತ್ತರೇ ಸ್ತೋಮಾ ಇನ್ದ್ರಸ್ಯ! ವಜ್ರಿಣೋ ನಾಸ್ಯ ತೈರ್ವಿನ್ದಾಮಿ ಸಮಾಪ್ತಿಂ ಸ್ತುತೇರ್ಬರ್ಹಣಾ ಪರಿಬರ್ಹಣಾ। ಬೃಹಚ್ಛ್ರವಾ ಅಸುರೋ ಬರ್ಹಣಂ ಕೃತ ಇತ್ಯಪಿ ನಿಗಮೋ ಭವತಿ ॥೮॥

---

" ತುಞ್ಜೇ ತುಞ್ಜೇ ಯ ಉತ್ತರೇ ಸ್ತೋಮಾ ಇನ್ದ್ರಸ್ಯ ವಜ್ರಿಣಃ । ನ ವಿನ್ಧೇ ಅಸ್ಯ ಸುಷ್ಟುತಿಮ್ ॥" ದಾನೇದಾನೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣೋ ನಾಸ್ಯ ತೈರ್ವಿನ್ದಾಮಿ ಸಮಾಪ್ತಿಂ ಸ್ತುತೇಃ ॥೧॥

ಉದಾಹರಣೆಯ ಋಕ್ಕು—

**ತುಂಜೇತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ ।**
**ನ ವಿಂಧೇ ಅಸ್ಯ ಸುಷ್ಟುತಿಂ ॥**

(ಋ. ಸಂ. ೧-೭-೭)

ಇದರ ಅರ್ಥವು ...

ನಮಗೆ ಅನೇಕಫಲಗಳನ್ನು ಕೊಡುವ ಇತರ ದೇವತೆಗಳಿಗೆ ನಾವು ಮಾಡುವ ಸ್ತೋತ್ರಗಳು ಎಷ್ಟು ಉತ್ತಮವಾಗಿದ್ದರೂ ಅಂತಹ ಸ್ತೋತ್ರಗಳಿಂದ ವಜ್ರಾಯುಧದಿಂದ ಕೂಡಿದ ಇಂದ್ರನ ಸ್ತುತಿಯನ್ನು ಚೆನ್ನಾಗಿ ಮಾಡಿದಂತಾಗುವುದಿಲ್ಲ. ಎಂದರೆ ದೇವತೆಗಳ ವಿಷಯದಲ್ಲಿ ನಾವು ಮಾಡುವ ಸ್ತೋತ್ರಗಳು ಬಹಳ ಉತ್ಕೃಷ್ಟವಾಗಿರಬಹುದು. ಆದರೆ ಇಂದ್ರನ ವಿಷಯದಲ್ಲಿ ಆ ಸ್ತೋತ್ರಗಳು ಇಂದ್ರನ ಗುಣಾತಿಶಯಗಳನ್ನು ವರ್ಣಿಸಲು ಸಮರ್ಥವಾಗಿರುವುದಿಲ್ಲವಾದ್ದರಿಂದ ಆ ಸ್ತೋತ್ರಗಳು ಉತ್ತಮವೆನಿಸುವುದಿಲ್ಲ. ಇಂದ್ರನನ್ನು ಸ್ತೋತ್ರಮಾಡುವುದಕ್ಕೆ ಇತರ ದೇವತೆಗಳ ಸ್ತೋತ್ರಗಳಿಗಿಂತಲೂ ಎಷ್ಟೋ ಉತ್ತಮವಾದ ಸ್ತೋತ್ರಗಳು ಬೇಕಾಗುವುದೆಂದು ಅಭಿಪ್ರಾಯವು.

**ತುಜ** ಎಂಬ ಶಬ್ದವು ದಾನಕ್ರಿಯೇ (ಕೊಡುವುದು ಎಂಬರ್ಥ) ಯನ್ನು ಸೂಚಿಸುವುದು.

**ನ ವಿಂಧೇ ಅಸ್ಯ ಸುಷ್ಟುತಿಂ**—ನ ವಿಂಧೇ ನ ಅಸ್ಯ ಸರ್ವೈರಪಿ ತೈರ್ವಿಂದಾಮಿ ಸುಷ್ಟುತಿಂ ಸಮಾಪ್ತಿಂ ಸ್ತುತೇರಿತ್ಯರ್ಥಃ । ಇಂದ್ರನ ವಿಷಯದಲ್ಲಿ ಎಷ್ಟು ಸ್ತೋತ್ರಮಾಡಿದರೂ ಅದು ಸಾಕಾಗುವುದಿಲ್ಲ. ಅದರ ಕೊನೆಯನ್ನು ಮುಟ್ಟಲಾಗುವುದಿಲ್ಲ. ಎಂದರೆ ಅದರ ಸಮಾಪ್ತಿಯನ್ನು ಮಾಡಲಾಗುವುದಿಲ್ಲ. ಎಂದಭಿಪ್ರಾಯವು.

**ತುಂಜೇತುಂಜೇ**—ಈ ಋಕ್ಕಿಗೆ ಯಾಸ್ಕರು ನಿರುಕ್ತದಲ್ಲಿ ವಿವರಣೆಯನ್ನು ಈ ರೀತಿ ಕೊಟ್ಟಿರುವರು—**ತುಂಜಸ್ತುಂಜತೇರ್ದಾನಕರ್ಮಣಃ । ದಾನೇ ದಾನೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣೋ ನಾಸ್ಯ ತೈರ್ವಿಂದಾಮಿ ಸಮಾಪ್ತಿಂ ಸ್ತುತೇಃ** ಎಂದರೆ ತುಂಜಶಬ್ದಕ್ಕೆ ದಾನಮಾಡುವುದು, ಕೊಡುವುದು ಎಂದರ್ಥವು. ಈ ಋಕ್ಕಿನಲ್ಲಿರುವ ತುಂಜೇತುಂಜೇ ಎಂಬ ಶಬ್ದಕ್ಕೆ ಕೊಡುವ ಎಂದರೆ ಫಲಗಳನ್ನು ಕೊಡುವ ದೇವತೆಯ ವಿಷಯದಲ್ಲಿ ಎಂದರ್ಥವು. ತುಂಜೇ ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಪ್ರತಿ ದೇವತೆಯ ವಿಷಯದಲ್ಲಿಯೂ ಎಂದರೆ ಎಲ್ಲಾ ದೇವತೆಗಳ ವಿಷಯದಲ್ಲಿಯೂ ಎಂದರ್ಥವು. ಇಂತಹ ಇತರ (ಇಂದ್ರನ ಹೊರತು ಇತರ) ದೇವತೆಗಳ ವಿಷಯದಲ್ಲಿ ಉಪಯೋಗಿಸುವ ಸ್ತೋತ್ರಗಳು ಎಷ್ಟೇ ಉತ್ಕೃಷ್ಟವಾಗಿದ್ದರೂ ಇಂದ್ರನ ವಿಷಯದಲ್ಲಿ ಅವು ಸಾಲದು, ಇನ್ನೂ ಹೆಚ್ಚಾಗಿರಬೇಕು. ಇಂದ್ರನ ಸ್ತೋತ್ರಕ್ಕೆ ಇವು ಸಾಕು, ಇಲ್ಲಿಗೆ ಸಮಾಪ್ತಿಯಾಯಿತು ಎಂದು ಹೇಳುವಂತಿಲ್ಲ. ಎಷ್ಟು ಸ್ತೋತ್ರಮಾಡಿದರೂ ಅಷ್ಟೂ ಇಂದ್ರನ ಗುಣಗಳಿರುವವು. ಇವಕ್ಕೆ ಸಮಾಪ್ತಿ ಇಲ್ಲ ಎಂದಭಿಪ್ರಾಯವು.

**ಉತ್ತರೇ**—ಈ ಶಬ್ದದಲ್ಲಿ ಉತ್ + ತರೇ ಎಂಬ ಎರಡು ಪ್ರತ್ಯೇಕ ಪದಗಳಿರುವವು. ಭಾಷ್ಯಕಾರರು ಇದನ್ನು ಹೀಗೆ ವಿವರಿಸಿರುವರು—**ಉತ್ತರೇ । ತೄಪ್ಲವನತರಣಯೋಃ । ಭಾವೇ ಋದೋರಪ್ । ಪಾ. ೩-೩-೫೭ । ಉಚ್ಛಬ್ದ ಉತ್ಕೃಷ್ಟಸ್ತರೋ ಯಸ್ಯೇತಿ ಬಹುವ್ರೀಹಿಃ ।** ತರ ಎಂಬ ಶಬ್ದವು ತೄ ಎಂಬ ಧಾತುವಿನಿಂದ ಉಂಟಾಗಿರುವುದು. ಉತ್ ಎಂದರೆ ಉತ್ಕೃಷ್ಟವಾದ. ಆದುದರಿಂದ ಉತ್ + ತರ ಉತ್ತರ ಎಂಬ ಶಬ್ದಕ್ಕೆ ಹೆಚ್ಚು ಉತ್ಕೃಷ್ಟವಾದ (more excellent) ಎಂದರ್ಥವು.

**ಸುಷ್ಟುತಿಂ ಅಥವಾ ಸುಽಸ್ತುತಿಂ—ಸ್ತೂಯತೇಽನಯೇತಿ ಸ್ತುತಿಃ । ಸುಶಬ್ದೇನ ಕರಣಮೇವ ವಿಶೇಷ್ಯತೇ ನ ಧಾತ್ವರ್ಥಃ । ಅಥವಾ ಸುಷ್ಟು ಸ್ತುವಂತೀತಿ ಸುಷ್ಟುತಯ ಇತಿ ಕರಣಭೂತಾ ಋಚಃ ಸ್ತುತಿಶಬ್ದೇನೋಚ್ಯತೇ ॥** ಎಂದು ಸ್ತುತಿಶಬ್ದಾರ್ಥವನ್ನು ಹೇಳಿರುವರು. ಸ್ತೋತ್ರಮಾಡುವುದಕ್ಕೆ ಸ್ತುತಿಯೆಂದು ಹೆಸರು. ಸುಷ್ಟುತಿ ಎಂದರೆ ಚೆನ್ನಾಗಿ

ಸ್ತೋತ್ರಮಾಡುವುದು ಎಂದು, ಅಥವಾ ಚನ್ನಾಗಿ ಸ್ತೋತ್ರಮಾಡುವುದರಿಂದ ಅಂತಹ ಮಂತ್ರಗಳಿಗೆ ಅಥವಾ ಋಕ್ಕುಗಳಿಗೆ ಸ್ತುತಿಯೆಂದು ಹೇಳುವ ರೂಢಿಯಿರುವುದು ಎಂದಭಿಪ್ರಾಯವು.

ಬರ್ಹಣಾ ॥ ೮೩ ॥

ಬರ್ಹಣಾ ಪರಿಬರ್ಹಣಾ ॥ "ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ॥" ಇತ್ಯಪಿ ನಿಗಮೋ ಭವತಿ ॥ ೨ ॥ ೧೮ ॥

**ಬರ್ಹಣಾ— ಪರಿಬರ್ಹಣಾ** ಬಲವಾಗಿ ಅಥವಾ ಹಿಂಸಿಸುವವನು.

ಉದಾಹರಣೆಯ ಋಕ್ಕು—

**ಅರ್ಚಾ ದಿವೇ ಬೃಹತೇ ಶೂಷ್ಯಂ೧ ವಚಃ ಸ್ವಕ್ಷತ್ರಂ ಯಸ್ಯ ಧೃಷ್ತತೋ ಧೃಷನ್ಮನಃ।**
**ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ॥**

(ಋ. ಸಂ. ೧–೫೪–೩)

ಇದರ ಅರ್ಥವು—

ಎಲೈ ಸ್ತೋತೃವೇ, ಪ್ರಕಾಶಮಾನನೂ ಅಮೃತನೂ ಆದ ಇಂದ್ರನಿಗೆ ಹರ್ಷದಾಯಕವಾದ ಸ್ತೋತ್ರವನ್ನರ್ಪಿಸು. ಶತ್ರುಗಳನ್ನು ಭಯಪಡಿಸಿ ತಾನು ನಿರ್ಭೀತನಾದ ಯಾವ ಇಂದ್ರನ ಸ್ಥಿರವಾದ ಮನಸ್ಸು ಏಕಾಗ್ರಬುದ್ಧಿಯಿಂದ ನೆಲೆಸಿದೆಯೋ ಆ ಇಂದ್ರನು ಅಧಿಕವಾದ ಯಶಸ್ಸುಳ್ಳವನು. ಮಳೆಯ ನೀರನ್ನು ಸುರಿಸುವವನು. ಶತ್ರುಗಳನ್ನು ಹೊಡೆದೋಡಿಸಿ ನಮ್ಮ ಕಡೆಗೆ ಬರತಕ್ಕವನು.

**ಇತಿ ಅಷ್ಟಾದಶಃ ಖಂಡಃ**

ಇಲ್ಲಿಗೆ ಹದಿನೆಂಟನೆಯ ಖಂಡವು ಸಮಾಪ್ತವು

---

## ॥ ಏಕೋನವಿಂಶಃ ಖಂಡಃ ॥

### ಹತ್ತೊಂಭತ್ತನೆಯ ಖಂಡವು

ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ ಸೋಮಂ ಸುನೋತಿ ಭವತಿ ದ್ಯುಮಾँ ಅಹ । ಅಪಾಪ ಶಕ್ರಸ್ತತನುಷ್ಟಿಮೂಹತಿ ತನೂಶುಭ್ರಂ ಮಘವಾ ಯಃ ಕವಾಸಖಃ । ಘ್ರಂಸ ಇತ್ಯಹರ್ನಾಮ ಗ್ರಸ್ಯನ್ತೇಽಸ್ಮಿನ್ರಸಾ ಗೋರೂಧ ಉದ್ಧತರಂ ಭವತ್ಯುಪೋನ್ನದ್ಧಮಿತಿ ವಾ ಸ್ನೇಹಾನುಪ್ರದಾನ ಸಾಮಾನ್ಯಾದ್ರಾತ್ರಿರಪ್ಯೂಧ ಉಚ್ಯತೇ ಸ ಯೋಽಸ್ಮಾ ಅಹನ್ಯಪಿ ವಾ ರಾತ್ರೌ ಸೋಮಂ ಸುನೋತಿ ಭವತ್ಯಹ ದ್ಯೋತನ–

ವಾನಪೋಹತ್ಯಪೋಹತಿ ಶಕ್ರಸ್ತಿತನಿಷುಂ ಧರ್ಮಸಂತಾನಾದಪೇತ-ಮಲಂಕರಿಷ್ಣುಮಯಜ್ವಾನಂ ತನೂಶುಭ್ರಂ ತನೂಶೋಭಯಿತಾರಂ ಮಘವಾ ಯಃ ಕವಾಸಖೋ ಯಸ್ಯ ಕಪೂಯಾಃ ಸಖಾಯಃ । ನ್ಯಾವಿಧ್ಯದಿಲೀಬಿಶಸ್ಯ ದೃಳ್ಹಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ । ನಿರವಿಧ್ಯದಿಲಾಬಿಲಶಯಸ್ಯ ದೃಳ್ಹಾನಿ ವ್ಯಭಿನಚ್ಛೃಜ್ಗಿಣಃ ಶುಷ್ಣ-ಮಿಂದ್ರಃ ॥೧೯॥

---

ತತನುಷ್ಟಿಃ ॥೨೦॥

" ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ ಸೋಮನಿ ಸುನೋತಿ ಭವತಿ ದ್ಯುಮಾ್ ಅಹ। ಅಪಾಪ ಶಕ್ರಸ್ತತನುಷ್ಟಿಮೂಹತಿ ತನೂ-ಶುಭ್ರಂ ಮಘ ವಾಯಃ ಕವಾಸಖಃ ॥ "

ಘ್ರಂಸ ಇತ್ಯಹರ್ನಾಮ ಗ್ರಸ್ಯಂತೇಽಸ್ಮಿನ್ರಸಾಃ ॥ ಗೋರೂಧ ಉದ್ಧ-ತತರಂ ಭವತಿ, ಉಪೋನ್ನದ್ಧಮಿತಿ ವಾ ॥ ಸ್ನೇಹಾನುಪ್ರದಾನ ಸಾಮಾನ್ಯಾದ್ರಾತ್ರಿರಪ್ಯೂಧ ಉಚ್ಯತೇ ॥ ಸ ಯೋಽಸ್ಮಾ ಅಹನ್ಯಪಿ ವಾ ರಾತ್ರೌ ಸೋಮಂ ಸುನೋತಿ ಭವತ್ಯಹ ದ್ಯೋತನವಾನಪೋ-ಹತ್ಯಪೋಹತಿ ಶಕ್ರಸ್ತಿತನಿಷುಂ ಧರ್ಮಸನ್ತನಾದಪೇತಮಲಙ್ಕರಿ-ಷ್ಣುಮಯಜ್ವಾನಂ ತನೂಶುಭ್ರಂ ತನೂಶೋಭಯಿತಾರಂ ಮಘ-ವಾ ಯಃ ಕವಾಸಖೋ ಯಸ್ಯ ಕಪೂಯಾಃ ಸಖಾಯಃ ॥೧॥

ಉದಾಹರಣೆಯ ಋಕ್ಕು—

**ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ ಸೋಮಂ ಸುನೋತಿ ಭವತಿ ದ್ಯುಮಾ್ ಅಹ। ಅಪಾಪ ಶಕ್ರಸ್ತತನುಷ್ಟಿಮೂಹತಿ ತನೂ ಶುಭ್ರಂ ಮಘವಾ ಯಃ ಕವಾಸಖಃ ॥**

(ಋ.ಸಂ. ೫-೩೪-೩)

ಇದರ ಅರ್ಥವು—

ಯಾವ ಯಾವ ಯಜಮಾನರು ಇಂದ್ರನನ್ನುದ್ದೇಶಿಸಿ ಅಹೋರಾತ್ರಿಗಳಲ್ಲಿಯೂ ಸೋಮರಸವನ್ನು ಹಿಂಡಿ ಅರ್ಪಿಸುವರೋ ಅವರು ಕಾಂತಿಯುತರಾಗಿ ಆಗುತ್ತಾರೆ. ಯಾರು ದೈವಭಕ್ತಿಯಿಲ್ಲದೆ ಕೇವಲ ತನ್ನ ಸಂತತಿಯ ವಿಷಯದಲ್ಲೂ ದುರಭಿಮಾನವನ್ನಿಟ್ಟುಕೊಂಡಿರುವರೋ ಮತ್ತು ಯಾರು ಧನವಂತರಾಗಿದ್ದರೂ ಕೆಟ್ಟಜನರ ಸ್ನೇಹಿತರಾಗಿರುವರೋ ಅವರನ್ನು ಇಂದ್ರನು ತಿರಸ್ಕರಿಸುತ್ತಾನೆ.

**ಘ್ರಂಸ** ಎಂದರೆ ಹಗಲು. ಹಗಲಿನಲ್ಲಿ ಶಾಖವು ಹೆಚ್ಚಾಗಿರುವುದರಿಂದ ಈ ಹಗಲಿನಲ್ಲಿ ನೀರು ಮತ್ತು ರಸಾದಿಗಳು ಆವಿಯ ರೂಪದಿಂದ ಒಣಗಿ ಹೋಗುತ್ತವೆ.

**ಗೋರೂಧ ಉದ್ಧತರಂ ಭವತಿ ಉಪೋನ್ನದ್ಧಮಿತಿ ವಾ** । ಗೋರೂಧವೆಂದರೆ, ಹಸುವಿನ ಕೆಚ್ಚಲು. ಈ ಕೆಚ್ಚಲು ಶರೀರದ ಇತರ ಭಾಗಕ್ಕಿಂತಲೂ ಉಬ್ಬಿಕೊಂಡಿರುವುದು ಅಥವಾ ಈ ಕೆಚ್ಚಲು ಪ್ರದೇಶವು ಶರೀರದ ಪಕ್ಕದ ಎಂದರೆ ಉದರಕ್ಕೆ ಸೇರಿದಂತೆ ಇರುವುದರಿಂದ ಈ ಹೆಸರು ಬಂದಿದೆ. ರಾತ್ರಿಕಾಲದಲ್ಲಿ ಜಡ್ಡಿನಿಂದ ಕೂಡಿದ ದ್ರವವು ಜಿನಗುವುದರಿಂದ ರಾತ್ರಿಗೂ **ಊಧ**ವೆಂಬ ಹೆಸರಿರುವುದು.

**ಸ ಯೋಽಸ್ಮಾ ಅಹನ್ಯಪಿ ರಾತ್ರೌ ಸೋಮಂ ಸುನೋತಿ ಭವತ್ಯಹ ದ್ಯೋತನವಾನ್**—ಯಾವ ಪುರುಷನು ಹಗಲಿನಲ್ಲಿಯೂ ರಾತ್ರಿಕಾಲದಲ್ಲಿಯೂ ಸಹ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುವನೋ ಆ ಪುರುಷನು ಪ್ರಖ್ಯಾತನಾಗಿಯೂ ಕೀರ್ತಿವಂತನಾಗಿಯೂ ಆಗುತ್ತಾನೆ.

**ಅಪೋಹತಿ ಶಕ್ರಸ್ತಿತನಿಷುಂ ಧರ್ಮಸಂತಾನಾದಪೇತಮಲಂಕರಿಷ್ಣುಮಯಜ್ವಾನಂ ತನೂಶುಭ್ರಂ ತನೂಶೋಭಯಿತಾರಂ ಮಘವಾ ಯಃ ಕವಾಸಖೋ ಯಸ್ಯ ಕಪೂಯಾಃ** ॥ ಯಾವ ಪುರುಷನು (ಇಂದ್ರನನ್ನು ಪೂಜಿಸಿದೆ) ಕೇವಲ ಧನವನ್ನು ಕೂಡಿಹಾಕುವುದರಲ್ಲಿ ಆಸಕ್ತನಾಗಿರುವನೋ, ಅವನ ಧನಾದಿಗಳನ್ನು ಅಥವಾ ಐಶ್ವರ್ಯವನ್ನು ಇಂದ್ರನು ನಾಶವಾಗುವಂತೆ ಮಾಡುತ್ತಾನೆ. ಯಾವ ಪುರುಷನು ನ್ಯಾಯಮಾರ್ಗಕ್ಕೆ ವಿರುದ್ಧವಾಗಿ ವರ್ತಿಸುವನೋ, ಮತ್ತು ತನ್ನನ್ನು ಅಲಂಕಾರಗಳಿಂದ ಶೃಂಗರಿಸಿಕೊಳ್ಳುವನೋ, ಮತ್ತು ಯಾರು ಯಜ್ಞಾದಿಗಳನ್ನು ಮಾಡುವದಿಲ್ಲವೋ ಯಾರು ತನ್ನ ಶರೀರವನ್ನು ಸುಮ್ಮನೆ ಅಲಂಕರಿಸಿ ಹಿಗ್ಗುವನೋ, ಯಾರು ಸ್ವಾರ್ಥಪರನಾಗಿರುವನೋ ಮತ್ತು ದುಷ್ಟಜನರ ಸಹವಾಸವನ್ನೇ ಮಾಡುವನೋ ಅಂತಹ ಪುರುಷನ ಐಶ್ವರ್ಯಾದಿಗಳು ಅವನನ್ನು ಬಿಟ್ಟುಹೋಗುವಂತೆ ಇಂದ್ರನು ಮಾಡುತ್ತಾನೆ.

**ತತನುಷ್ಟಂ–ತತಂ ಧರ್ಮಸಂತತಿಂ ನುದತಿ ವಷ್ಟಿ ಕಾಮಯತೇ ಕಾಮಾನಿತಿ ತತನುಷ್ಟಿ**–(ದೈವಭಕ್ತಿಯಿಲ್ಲದೆ) ತನ್ನ ಸಂತತಿ ವಿಷಯದಲ್ಲೇ ದುರಭಿಮಾನವುಳ್ಳವನು ಎಂದಭಿಪ್ರಾಯವು.

ಇಲೀಬಿಶಃ ॥೭೫॥

"ನ್ಯಾವಿಧ್ಯದಿಲೀಬಿಶಸ್ಯ ದೃಳ್ಹಾ ವಿಶೃಙ್ಗಿಣಮಭಿನಚ್ಛುಷ್ಣಮಿನ್ದ್ರಃ"
ನಿರವಿಧ್ಯದಿಲಾಬಿಲಶಯಸ್ಯ ದೃಢಾನಿ ವ್ಯಭಿನಚ್ಛೃಙ್ಗಿಣಂ ಶುಷ್ಣ-
ಮಿನ್ದ್ರಃ ॥೨॥೯॥

**ಇಲೀಬಿಶಃ** ಎಂದರೆ ಮೇಘವು (ವೃತ್ರನು) ಎಂದರ್ಥವು.

ಉದಾಹರಣೆಯ ಋಕ್ಕು—

**ನ್ಯಾವಿಧ್ಯದಿಲೀವಿಶಸ್ಯ ದೃಳ್ಹಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ।**
**ಯಾವತ್ತರೋ ಮಘವನ್ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಂ ॥**

(ಋ. ಸಂ. ೧–೩೩–೧೨)

ಇದರ ಅರ್ಥವು—

ಆಳವಾದ ಭೂಮಿಯ ಬಿಲದಲ್ಲಿ ಮಲಗಿ ಶತ್ರುಗಳಿಗೆ ದುಸ್ಸಾಧ್ಯನಾದ ವೃತ್ರಾಸುರನಿಂದ (ಮೇಘದಿಂದ) ತಡೆಯಲ್ಪಟ್ಟ ನೀರನ್ನು (ಮೇಘಮಂಡಲವನ್ನು) ಇಂದ್ರನು ಭೇದಿಸಿ ನೀರು ಸುರಿಯುವಂತೆ ಮಾಡಿದನು. ವೃತ್ರಾಸುರನ ಪ್ರಬಲವಾದ ಸೈನ್ಯಗಳನ್ನು ಇಂದ್ರನು ಸಂಹರಿಸಿದನು. (ಭೂಮಿಯ ಆಳವಾದ ಗುಹೆಗಳಲ್ಲಿ ವೃತ್ರನು ಮಲಗಿದುದರಿಂದ ಅಲ್ಲಿನ ನೀರಿನ ಪ್ರವಾಹಗಳು ತಡೆಯಲ್ಪಟ್ಟವು. ಆಗ ಇಂದ್ರನು ಅವನನ್ನು ಚೆನ್ನಾಗಿ ಪ್ರಹರಿಸಿ ಆ ನೀರನ್ನು ಸರಾಗವಾಗಿ ಹರಿಯುವಂತೆ ಮಾಡಿದನು.) ಎಲೈ ಇಂದ್ರನೇ, ಪ್ರಪಂಚವನ್ನೇ ಒಣಗುವಂತೆ ಮಾಡುವ ತೇಜಸ್ಸುಳ್ಳ ಕೊಂಬಿನಂತಿರುವ ತೀಕ್ಷ್ಣಾಯುಧಗಳನ್ನು ಹೊಂದಿ ನಿನ್ನನ್ನು ಯುದ್ಧಕ್ಕೆ ಕರೆದು ಎದರುಬಿದ್ದ ವೃತ್ರನನ್ನು ನೀನು ನಿನ್ನ ಸಂಪೂರ್ಣವೇಗ ಮತ್ತು ಶಕ್ತಿಗಳನ್ನು ತೋರಿಸಿ ವಜ್ರಾಯುಧದಿಂದ ಕೊಂದಿರುವೆ.

**ಇಲೀಬಿಶಸ್ಯ**—ಈ ಶಬ್ದಪ್ರಯೋಗವು ಈ ಋಕ್ಕಿನಲ್ಲಿಲ್ಲದೆ ಋಗ್ವೇದದಲ್ಲಿ ಮತ್ತೆಲ್ಲಿಯೂ ಇಲ್ಲ. ಈ ಶಬ್ದಕ್ಕೆ—ಯಾಸ್ಕ ಮಹರ್ಷಿಗಳು ತಮ್ಮ ನಿರುಕ್ತದಲ್ಲಿ (ನಿ. ೬–೨೦). **ಇಲೀವಿಶಃ । ಇಲಾಬಿಲಶಯಸ್ಯ** ಎಂದರೆ, **ಮೇಘಃ ಅಭಿಧೇಯಃ । ಸ ಹಿ ಇಲಾಹೇತೋರುದಕಸ್ಯ ಆತ್ಮೀಯಾನಿ ನಿರ್ಗಮನಬಿಲಾನಿ ಸಂರುಧ್ಯ ಶೇತೇ । ತಸ್ಯೈವ ವಾ ಬಿಲೇಷು ಇಲಾಹೇತುರುದಕಂ ಶೇತೇ ಇತಿ ಇಲೀವಿಶಃ ॥** ನೀರು ಯಾವಾಗಲೂ ಹಳ್ಳದಲ್ಲಿ ನಿಲ್ಲುವುದರಿಂದ ಇಲೀವಿಶ ಎಂದರೆ ನೀರು ಅಥವಾ ಮೇಘ ಎಂದು ಹೆಸರು ಆ ಮೇಘವು ಮಳೆಯನ್ನು ಹುಯ್ಯದಂತೆ ಅಡ್ಡಿಪಡಿಸಿ ವೃತ್ರನು ಮಲಗಿರುವವನು ಎಂದರ್ಥವು.

**ದೃಳ್ಹಾ—ದೃಢಾ , ದೃಢಾನಿ । ದುರ್ಭೇದ್ಯಾನಿ ॥** ದೃಢವಾದ, ದುರ್ಭೇದ್ಯವಾದ,

**ಶೃಂಗಿಣಂ—ಗೋಮಹಿಷಾದಿಶೃಂಗಸಮಾನೈರಾಯುಧೈರುಪೇತಂ ।** ಗೋವುಗಳು ಎಮ್ಮೆಗಳು ಮೊದಲಾದ ಪ್ರಾಣಿಗಳ ಕೊಂಬಿನಂತೆ ಇರುವ ಆಯುಧಗಳುಳ್ಳ ವೃತ್ರನು. ಮೇಘಪರವಾಗಿ ಅರ್ಥಮಾಡುವುದಾದರೆ, **ಶೃಂಗಿಣಂ—ಶಿಖರವಂತಂ ದೀಪ್ತಿಮಂತಂ ವಾ ।** ಬೆಟ್ಟದ ಶಿಖರದ ಮೇಲೆ ಎಂದರೆ ಅಂತರಿಕ್ಷದಲ್ಲಿ ಬಹಳ ಎತ್ತರದಲ್ಲಿರುವ ಮೇಘವು ಅಥವಾ ಪ್ರಕಾಶಮಾನವಾದ ಮಿಂಚಿನಿಂದ ಕೂಡಿದ ಮೇಘವು ಎಂದರ್ಥವು.

**ಶುಷ್ಣಂ—ಜಗತಃ ಶೋಷಕಂ । ಶುಷ ಶೋಷಣೇ । ಶೋಷಯತೀತಿ ಶುಷ್ಣಃ ।** ಜಗತ್ತನ್ನು ಒಣಗಿಸುವವನು ಎಂದರೆ ಮಳೆಯನ್ನು ಬರದಂತೆ ತಡೆದು ಜಗತ್ತೆಲ್ಲಾ ಒಣಗುವಂತೆ ಮಾಡುವವನು.

**ತರಃ, ಓಜಃ—**ವೇಗವುಳ್ಳವನು ಮತ್ತು ಶಕ್ತಿಯುಳ್ಳವನು.

**ಮಘವನ್—ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ ।** (ನಿ. ೧–೭.) ಮೇಘವೆಂದರೆ ಧನವು. ಧನವುಳ್ಳವನಾದ್ದರಿಂದ ಇಂದ್ರನಿಗೆ ಮಘವನ್ ಎಂದು ಹೆಸರು. ಋಗ್ವೇದದಲ್ಲಿ ಸಾಧಾರಣವಾಗಿ ಈ ಶಬ್ದದ ಪ್ರಯೋಗವು ಇಂದ್ರನ ಪರವಾಗಿಯೇ ಇರುವುದು.

**ಪೃತನ್ಯುಂ**—ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಕ ಶಬ್ದಗಳ ಮಧ್ಯದಲ್ಲಿ ಪೃತನಾಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಪೃತನಾಃ ಎಂದರೆ ಯುದ್ಧವು. ಪೃತನ್ಯುಂ ಎಂದರೆ ಯುದ್ಧ ಮಾಡಲು ಬಯಸುವ, ಯುದ್ಧಕ್ಕಾಗಿ ಸಿದ್ಧನಾಗಿ ಎದುರಿಗೆ ನಿಂತಿರುವ ಎಂದರ್ಥವು.

**ಇತಿ ಏಕೋನವಿಂಶಃ ಖಂಡಃ**

ಇಲ್ಲಿಗೆ ಹತ್ತೊಂಭತ್ತನೆಯ ಖಂಡವು ಸಮಾಪ್ತವು

---

### ವಿಂಶಃ ಖಂಡಃ

### ಇಪ್ಪತ್ತನೆಯ ಖಂಡವು

ಅಸ್ಮಾ ಇದು ಪ್ರಭರಾ ತೂತುಜಾನೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ। ಗೋರ್ನ ಪರ್ವ ವಿರದಾ ತಿರಶ್ಚೇಷ್ಯನ್ನರ್ಣಾಂಸ್ಯಪಾಂ ಚರಧ್ಯೈ। ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ ಭೃಮಿರ್ಭ್ರಾಮ್ಯತೇಃ। ಭೃಮಿರಸ್ಯೃಷಿಕೃನ್ಮರ್ತ್ಯಾನಾಮಿತ್ಯಪಿ ನಿಗಮೋ ಭವತಿ ವಿಷ್ಪಿತೋ ವಿಪ್ರಾಪ್ತಃ। ಪಾರಂನೋ ಅಸ್ಯ ವಿಷ್ಪಿತಸ್ಯ ಪರ್ಷನಿತ್ಯಪಿ ನಿಗಮೋ ಭವತಿ ॥ ೨೦ ॥

---

ಕಿಯೇಧಾಃ ॥ ೮೬ ॥

" ಅಸ್ಮಾ ಇದು ಪ್ರಭರಾ ತೂತುಜಾನೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ। ಗೋರ್ನ ಪರ್ವ ವಿರದಾ ತಿರಶ್ಚೇಷ್ಯನ್ನರ್ಣಾಂಸ್ಯಪಾಂ ಚರಧ್ಯೈ ॥ "

ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ॥ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ॥ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ ॥ ೧ ॥

**ತೂತುಜಾನಃ—ತ್ವರಮಾಣಃ** ಬೇಗನೆ, ಶೀಘ್ರವಾಗಿ **ಕಿಯೇಧಾಃ—**ಮೇಘವು. **ಕಿಯದಪ್ಯುದಕನು-ಪರಿಮಾಣಂ ಧಾರಯಂತಿ ।** ಉದಕವನ್ನು ವೃಷ್ಟಿರೂಪದಲ್ಲಿ ಎಷ್ಟು ಪರಿಮಾಣವನ್ನು ಎಂಬುದನ್ನು ಲಕ್ಷ್ಯವಿಡದೆ ಧಾರಾಕಾರವಾಗಿ ಸುರಿಸುವುದರಿಂದ **ಕಿಯೇಧಾಃ** ಎಂದರೆ ಮೇಘವೆಂದು ಹೆಸರು.

**ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ—**ಎಲೈ ಇಂದ್ರನೇ, ಸಮಸ್ತರಿಗೂ ಒಡೆಯನಾದ ನೀನು ಈ ವೃತ್ರಾಸುರನ ಮೇಲೆ ಬೇಗನೆ ನಿನ್ನ ವಜ್ರಾಯುಧದಿಂದ ಪ್ರಹರಿಸು ಎಂದರ್ಥವು.

**ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಕಿಯೇಧಾಃ—**ಎಂದರೆ ಇಷ್ಟು ಎಂಬ ಪ್ರಮಾಣವಿಲ್ಲದೆ ಮೇಘವು ನೀರನ್ನು ವೃಷ್ಟಿರೂಪದಲ್ಲಿ ಸುರಿಸುವುದರಿಂದ ಮೇಘಕ್ಕೆ **ಕಿಯೇಧಾಃ** ಎಂದು ಹೆಸರು. ಅಥವಾ ಕ್ರಮವಾದ ಧಾರೆಯಿಂದ ನೀರನ್ನು ಸುರಿಸುವುದರಿಂದಲೂ ಮೇಘಕ್ಕೆ **ಕಿಯೇಧಾಃ** ಎಂದು ಹೆಸರು.

**ಗೌರಿವ ಪರ್ವಾಣಿ ವಿರದ ಮೇಘಸ್ಯೇಷನ್ನರ್ಣಾಂಸ್ಯಪಾಂ ಚರಣಾಯ—**ಎಲೈ ಇಂದ್ರನೇ, ಮೃತವಾದ ಗೋವಿನ ಶರೀರವನ್ನು ಕತ್ತರಿಸುವಾಗ ಅದರ ಪಕ್ಕಗಳನ್ನು ಕತ್ತರಿಸುವಂತೆ ಮೇಘದಲ್ಲಿರುವ ಉದಕಗಳು ಪ್ರವಾಹರೂಪದಲ್ಲಿ ಕತ್ತರಿಸುವಂತೆ ಮೇಘದಲ್ಲಿರುವ ಉದಕಗಳು ಪ್ರವಾಹರೂಪದಲ್ಲಿ ಹರಿದು ಹೋಗಲು ಅನುಕೂಲವಾಗುವಂತೆ ಮೇಘವನ್ನು ನಿನ್ನ ಆಯುಧದಿಂದ ಸೀಳಿ ಕತ್ತರಿಸು ಎಂದಭಿಪ್ರಾಯವು.

ಉದಾಹರಣೆಯ ಋಕ್ಕು—

**ಅಸ್ಮಾ ಇದು ಪ್ರಭರಾ ತೂತುಜಾನೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ।**
**ಗೋರ್ನ ಪರ್ವ ವಿ ರದಾ ತಿರಶ್ಚೇಷ್ಯನ್ನರ್ಣಾಂಸ್ಯಪಾಂ ಚರಧ್ಯೈ ॥**
(ಋ. ಸಂ. ೧-೬೧-೧೨)

ಇದರ ಅರ್ಥವು—

ಎಲೈ ಇಂದ್ರನೇ, ಶೀಘ್ರಗಾಮಿಯೂ ಅಥವಾ ಶತ್ರುಹಿಂಸಕನೂ ಎಲ್ಲರಿಗೂ ಪ್ರಭುವಾದವನೂ ಅತ್ಯಂತಬಲಶಾಲಿಯೂ ಆದ ನೀನು ಈ ವೃತ್ರಾಸುರನ ಮೇಲೆ ನಿನ್ನ ವಜ್ರಾಯುಧವನ್ನು ಪ್ರಯೋಗಿಸಿ ಮೇಘರೂಪದಿಂದಿರುವ ಅವನನ್ನು ಪ್ರಹರಿಸಿ ಮೇಘದಿಂದ ಉದಕವು ಮಳೆಯರೂಪದಿಂದ ಬೀಳುವಂತೆ ಮಾಡು. ಈ ರೀತಿ ಮೇಘದಿಂದ ನೀರು ಬೀಳುವುದಕ್ಕಾಗಿ ಕಟುಕರ ಗೋವಿನ ಮೃತಶರೀರವನ್ನು ತುಂಡು ತುಂಡಾಗಿ ಕತ್ತರಿಸುವಂತೆ ಮೇಘರೂಪದಿಂದಿರುವ ವೃತ್ರಾಸುರನ ಶರೀರವನ್ನು ನಿನ್ನ ಹರಿತವಾದ ವಜ್ರಾಯುಧದಿಂದ ಕತ್ತರಿಸು.

**ತೂತುಜಾನಃ—**ಇದು ಕ್ಷಿಪ್ರ (ಜಾಗ್ರತೆ) ಎಂಬರ್ಥವನ್ನು ಕೊಡುವ ಪದ. ನಿರುಕ್ತ (೩-೯) ದಲ್ಲಿ ಕ್ಷಿಪ್ರವಾಚಕವಾಗಿರುವ ಇಪ್ಪತ್ತಾರು ಪದಗಳನ್ನು **ನು, ಮಂಕ್ಷು, ದ್ರುವತ್** ಎಂಬುದಾಗಿ ಏಕತ್ರ ಪಾಠಮಾಡಿದ್ದಾರೆ. ಇಲ್ಲಿ ಈ ಪದಕ್ಕೆ ತ್ವರೆಗೊಳಿಸುವವನು ಅಥವಾ ಶತ್ರುಗಳನ್ನು ಹಿಂಸಿಸುವವನು ಎಂದು ಎರಡು ರೀತಿಯಿಂದಲೂ ಅರ್ಥಮಾಡಿದ್ದಾರೆ.

**ಕಿಯೇಧಾಃ—ಕಿಯತೋ, ಅನವಧೃತಪರಿಮಾಣಸ್ಯ ಬಲಸ್ಯ ಧಾತಾ । ಯದ್ವಾ ಕ್ರಮಮಾಣಂ ಶತ್ರುಬಲಂ ದಧಾತ್ಯವಸ್ಥಾಪಯತೀತಿ ಕಿಯೇಧಾಃ ।** ಅನಿರ್ದಿಷ್ಟವಾದ ಬಲವನ್ನು ಸೃಷ್ಟಿಮಾಡುವವನು, ಅಥವಾ ತಾನಾಗಿಯೇ ಆಕ್ರಮಿಸಿ ಬರುವ ಶತ್ರುಬಲವನ್ನು ಎದುರಿಸಿ ಹಿಮ್ಮೆಟ್ಟಿಸುವವನು ಇಂದ್ರ. **ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ** ಕಿಯೇಧಾಃ ಇತಿ ವಾ ಕ್ರಮಮಾಣಧಾ ಇತಿ ವಾ **ಗೋರಿವ ಪರ್ವಾಣಿ** ವಿರದ

**ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ** (ನಿರು. ೬-೩೦) ಎಂಬ ನಿರುಕ್ತ ವಚನದಲ್ಲಿ ಆಕ್ರಮಣಕಾರರನ್ನು ಎದುರಿಸು ವವನು ಎಂಬರ್ಥದಲ್ಲಿ ಕಿಯದ್ಧಾ ಎಂಬ ಪದವು ಪಠಿತವಾಗಿದೆ.

**ತಸ್ಮಾತ್ ಅಪಾಂ ಚರಧ್ಯೈ**—ಆ ವೃತ್ರಾಸುರನಿಂದ ಭೂಮಿಗೆ ಜಲರಾಶಿಯು ಹರಿಯುವಂತೆ ಮಾಡು. ವೃತ್ರನು ಮೇಘರೂಪದಿಂದಿದ್ದು ಭೂಮಿಗೆ ವೃಷ್ಟಿಯನ್ನೇ ತಡೆದು ನಿಲ್ಲಿಸಿದಾಗ ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಭೂಮಿಗೆ ಜಲವೃಷ್ಟಿಯನ್ನು ಸುರಿಸಿದನು ಎಂಬ ಕಥಾನುವಾದವು ಇಲ್ಲಿ ಸ್ಮರಣೆಗೆ ಬರುವುದು.

**ತಿರಶ್ಚಾ—ತಿರ್ಯಗವಸ್ಥಿತೇನ ವಜ್ರೇಣ—ತಿರೋಂಚತೀತಿ.**

**ತಿರ್ಯಜ್**—ಅಡ್ಡಲಾಗಿ ಪ್ರವೇಶಿಸುವ, ಸದಾ ಅಡ್ಡವಾಗಿರುವಂತೆ ಕಾಣುವ ಎಂದರ್ಥ.

**ಗೌರ್ನ—ಹಸುವಿನಂತೆ**—ಇದು ದೃಷ್ಟಾಂತರೂಪವಾದ ಅರ್ಥವನ್ನು ಕೊಡುವುದು. ಮಾಂಸವನ್ನು ಶೇಖರಿಸುವ ಕಟುಕರು ಮೊದಲು ಪ್ರಾಣಿಯ ದೇಹವನ್ನು ತುಂಡು ತುಂಡಾಗಿ ಕತ್ತರಿಸಿಟ್ಟುಕೊಳ್ಳುವಂತೆ, ಮೇಘರೂಪದಿಂದಿರುವ ವೃತ್ರಾಸುರನನ್ನು ಚೂರು ಚೂರಾಗಿ ಕತ್ತರಿಸು ಎಂದು ತಾತ್ಪರ್ಯಾರ್ಥ. ಇದೇ ಅರ್ಥವನ್ನೇ **ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ** (ನಿರು-೬-೧೦) ಎಂಬುದಾಗಿ ನಿರುಕ್ತವು ತಿಳಿಸುವುದು.

ಭೃಮಿಃ ||೮೭||
ಭೃಮಿರ್ಭ್ರಾಮ್ಯತೇಃ || "ಭೃಮಿರಸ್ಯೃಷಿಕೃನ್ಮರ್ತ್ಯಾನಾಮ್" ಇತ್ಯಪಿ
ನಿಗಮೋ ಭವತಿ || ೨ ||

**ಭೃಮಿಃ** ಎಂಬ ಶಬ್ದವು ಸುತ್ತು ಎಂಬರ್ಥವುಳ್ಳ ಭ್ರಾಮ್ಯತಿಧಾತುವಿನಿಂದ ನಿಷ್ಪನ್ನವಾಗಿದೆ. **ಭೃಮಿಃ** ಎಂದು ಭ್ರಮಣ ಸುತ್ತುವುದು (ಸುಂಟರ ಗಾಳಿ) ಎಂದರ್ಥವು.

ಉದಾಹರಣೆಯ ಋಕ್ಕು—

**ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ ಯಮಗಾಮ ದೂರಾತ್ ।**
**ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ॥**
**(ಋ. ಸಂ. ೧-೩೧-೧೬)**

ಇದರ ಅರ್ಥವು—

ಎಲೈ ಅಗ್ನಿಯೇ, ನಮ್ಮ ವ್ರತ (ಕರ್ಮ) ಲೋಪಗಳಿಂದ ನಿನಗೆ ಸಂಭವಿಸಿದ ಈ ತೊಂದರೆಯನ್ನು ಕ್ಷಮಿಸು. ಹಾಗೆಯೇ ಅಗ್ನಿಹೋತ್ರಾದಿಗಳನ್ನು ತ್ಯಜಿಸಿ ಅವುಗಳಿಗೆ ಬಹಳ ದೂರವಾದ ಈ ಅಸನ್ಮಾರ್ಗವನ್ನು ಅನುಸರಿಸಿರುವುದನ್ನೂ ಕ್ಷಮಿಸು. ನೀನು ಸೋಮರಸಾರ್ಪಣೆಯಿಂದ ಯಜ್ಞಾನುಷ್ಠಾನಮಾಡುವವರಿಗೆ ಆಪ್ತನಾಗಿಯೂ ಪಾಲಕನಾಗಿಯೂ ಅನುಗ್ರಹಬುದ್ಧಿಯುಳ್ಳವನಾಗಿಯೂ, ಕರ್ಮನಿರ್ವಾಹಕನಾಗಿಯೂ ಮತ್ತು ಮಾನವರಿಗೆ ದರ್ಶನವನ್ನು ಕೊಡತಕ್ಕವನಾಗಿಯೂ ಆಗಿದ್ದೀಯೆ.

ವಿಷ್ಪಿತಃ ॥ ೮೮ ॥

ವಿಷ್ಪಿತೋ ವಿಪ್ರಾಪ್ತಃ ॥ "ಪಾರಂ ನೋ ಅಸ್ಯ ವಿಷ್ಪಿತಸ್ಯ ಪರ್ಷನ್" । ಇತ್ಯಪಿ ನಿಗಮೋ ಭವತಿ ॥ ೩ ॥ ೨೦॥

**ವಿಷ್ಪಿತಃ—ವಿಪ್ರಾಪ್ತಃ । ವಿಸ್ತೀರ್ಣ ಇತಶ್ಚೇತಶ್ಚ ಸರ್ವತೋ ಯಃ ಪ್ರಾಪ್ತಃ ।** ನಾಲ್ಕು ಕಡೆಯೂ ವಿಸ್ತಾರವುಳ್ಳ ಪ್ರದೇಶವು.

ಉದಾಹರಣೆಯ ಋಕ್ಕು—

**ಇಮೇ ದಿವೋ ಅನಿಮಿಷಾ ಪೃಥಿವ್ಯಾಶ್ಚಿಕಿತ್ವಾಂಸೋ ಅಚೇತಸಂ ನಯಂತಿ ।**
**ಪ್ರವ್ರಾಜೇ ಚಿನ್ನದ್ಯೋ ಗಾಧಮಸ್ತಿ ಪಾರಂ ನೋ ಅಸ್ಯ ವಿಷ್ಪಿತಸ್ಯ ಪರ್ಷನ್ ॥**

**(ಋ. ಸಂ. ೭-೬೦-೭)**

ಇದರ ಅರ್ಥವು—

ಮಿತ್ರ, ವರುಣ, ಮತ್ತು ಅರ್ಯಮದೇವತೆಗಳು, ದ್ಯುಲೋಕಕ್ಕೆ ಸಂಬಂಧಿಸಿದುದೂ ಆದ ಅಜ್ಞಾನವನ್ನು ಎವೆಯಿಕ್ಕದ ದೃಷ್ಟಿಯಿಂದ ಅರಿಯುತ್ತ ಎಲ್ಲರನ್ನು ಕರ್ಮಮಾರ್ಗಕ್ಕೆ ಒಯ್ಯುತ್ತಾರೆ. ಈ ದೇವತೆಗಳ ಮಾಹಾತ್ಮ್ಯದಿಂದ ನದಿಯ ಅತ್ಯಂತ ಆಳವಾದ ಪ್ರದೇಶದಲ್ಲಿಯೂ ಸಹ ತಳವು ಸಿಕ್ಕುತ್ತದೆ. ಮಹಾತ್ಮರಾದ ಈ ದೇವತೆಗಳು ವಿಸ್ತೃತವಾದ ಈ ಕರ್ಮವನ್ನು ನಿರ್ವಿಘ್ನವಾಗಿ ನೆರವೇರುವಂತೆ ಮಾಡಲಿ. (ಅತ್ಯಂತ ವ್ಯಾಪಕವಾದುದೂ ಕರ್ಮರೂಪವಾದುದೂ ಆದ ಈ ನದಿಯನ್ನು ದಾಟಿಸಲಿ).

**ಇತಿ ವಿಂಶಃ ಖಂಡಃ**

**ಇಲ್ಲಿಗೆ ಇಪ್ಪತ್ತನೆಯ ಖಂಡವು ಸಮಾಪ್ತವು**

---

## ಏಕವಿಂಶಃ ಖಂಡಃ

### ಇಪ್ಪತ್ತೊಂದನೆಯ ಖಂಡವು

ತನ್ನಸ್ತುರೀಪಮದ್ಭುತಂ ಪುರುವಾರಂ ಪುರುತ್ಮನಾ। ತ್ವಷ್ಟಾ ಪೋಷಾಯ ವಿಷ್ಯತು ರಾಯೇ ನಾಭಾನೋ ಅಸ್ಮಯುಃ । ತನ್ನಸ್ತೂರ್ಣಾಪಿ ಮಹತ್ಸಂಭೃತಮಾತ್ಮನಾ ತ್ವಷ್ಟಾ ಧನಸ್ಯ ಪೋಷಾಯ ವಿಷ್ಯತ್ವಿತ್ಯಸ್ಮಯುರಸ್ಮಾನ್ಕಾಮಯಮಾನೋ ರಾಷ್ಪಿನೋ ರಾಷ್ಪೀ ರಪತೇರ್ವಾ ರಸತೇರ್ವಾ ರಾಷ್ಪಿನಸ್ಯಾಮೋರಿತ್ಯಪಿ ನಿಗಮೋ ಭವತ್ಯೃಂಜತಿಃ ಪ್ರಸಾಧನ ಕರ್ಮಾ। ಆ ವ ಋಂಜಸ ಊರ್ಜಾಂ ವ್ಯುಷ್ಟಿಷ್ವಿತ್ಯಪಿ ನಿಗಮೋ ಭವತ್ಯೃಜುರಿತ್ಯಪ್ಯಸ್ಯ ಭವತಿ । ಋಜುನೀತೀ ನೋ ವರುಣ ಇತ್ಯಪಿ ನಿಗಮೋ

ಭವತಿ ಪ್ರತದ್ವಸೂ ಪ್ರಾಪ್ತವಸೂ । ಹರೀ ಇಂದ್ರ ಪ್ರತದ್ವಸೂ ಅಭಿಸ್ವ-
ರೇತ್ಯಪಿ ನಿಗಮೋ ಭವತಿ ॥೨೧॥

———

ತುರೀಪಮ್ ॥ ೮೯ ॥

" ತನ್ನಸ್ತುರೀಪಮದ್ಭುತಂ ಪುರುವಾರಂ ಪುರುತ್ಮನಾ । ತ್ವಷ್ಟಾ ಪೋ-
ಷಾಯ ವಿಷ್ಯತು ರಾಯೇ ನಾಭಾನೋ ಅಸ್ಮಯುಃ ॥ " ತನ್ನಸ್ತೂ-
ರ್ಣಾಪಿ ಮಹತ್ಸವ್ಭೃತಮಾತ್ಮನಾ ತ್ವಷ್ಟಾ ಧನಸ್ಯ ಪೋಷಾಯ
ವಿಷ್ಯತ್ವಿತ್ಯಸ್ಮಯುರಸ್ಮಾನ್ ಕಾಮಯಮಾನಃ ॥ ೧ ॥

**ತುರೀಪಂ—ಉದಕಂ । ತೂರ್ಣಮಾಪ್ನೋತೀತಿ ।** ವೇಗವಾಗಿ ಹರಿಯುವುದರಿಂದ ಅಥವಾ ಬೇಗನೆ ಸುತ್ತಲೂ ವ್ಯಾಪಿಸುವುದರಿಂದ **ತುರೀಪಂ** ಎಂದರೆ-ಉದಕವೆಂದರ್ಥವು.

ಉದಾಹರಣೆಯ ಋಕ್ಕು—

**ತನ್ನಸ್ತುರೀಪಮದ್ಭುತಂ ಪುರು ವಾರಂ ಪುರು ತ್ಮನಾ ।**
**ತ್ವಷ್ಟಾ ಪೋಷಾಯ ವಿ ಷ್ಯತು ರಾಯೇ ನಾಭಾ ನೋ ಅಸ್ಮಯುಃ ॥**

(ಋ. ಸಂ. ೧-೧೪೨-೧೦)

ಇದರ ಅರ್ಥವು—

ವಿದ್ಯುದ್ರೂಪದಲ್ಲಿರುವ ಅಗ್ನಿಯು ನಮ್ಮಲ್ಲಿ ಅಭಿಮಾನವುಳ್ಳವನಾಗಿ ನಮ್ಮ ಪುಷ್ಟಿಗಾಗಿಯೂ ಅಭ್ಯುದಯಕ್ಕಾಗಿಯೂ ಸಹ ಮೇಘದ ಮಧ್ಯಭಾಗದಿಂದ ಪ್ರಸಿದ್ಧವಾದುದೂ ವೇಗವಾಗಿ ಬೀಳುವುದೂ ವಿಸ್ಮಯಕರವಾದುದೂ ಅನೇಕ ಪ್ರಾಣಿಗಳಿಗೆ ಸಾಕಾಗಬಹುದಾದುದೂ ಅತ್ಯಂತ ಪ್ರಭೂತವಾದುದೂ ಆದ ವೃಷ್ಟಿಯನ್ನು ಅಧಿಕವಾಗಿ ಸುರಿಸಲಿ.

**ತ್ವಷ್ಟಾ—ತ್ವಷ್ಟಾ ನವಮಪ್ರಯಾಜದೇವಃ** ಎಂದು ಪ್ರೈಸೂಕ್ತದ ವಿವರಣೆಯಿದೆ. ಪ್ರೈಷಸೂಕ್ತದಲ್ಲಿ ನಾಲ್ಕೈದು ದೇವತೆಗಳಿಂದ ಈ ದೇವತೆಯ ಸ್ವರೂಪವನ್ನು ತಿಳಿಸಿದೆ.

ತ್ವಷ್ಟೃದೇವತೆಯ ವಿಷಯದಲ್ಲಿ ವೈಯುಕ್ತಿಕವಾದ ಅಭಿಪ್ರಾಯಗಳನ್ನು ತಿಳಿಸುವ ಶ್ರುತಿವಾಕ್ಯಗಳಲ್ಲಿ ಈ ಕೆಳಗೆ ಉದಾಹೃತವಾಗಿರುವುವು. ಆಪ್ರೀಸೂಕ್ತಸಂಬಂಧವಾದ ದೇವತೆಯನ್ನು ಮಾತ್ರ ನಿರ್ದೇಶಿಸುವುವಾಗಿವೆ.

**ಹೋತಾಯಕ್ಷತ್ತ್ವಷ್ಟಾರಮಚಿಷ್ಟುಮಪಾಕಗ್ಂ ರೇತೋಧಾಂ ವಿಶ್ರವಂ ಯಶೋಧಾಂ ।**
**ಪುರುರೂಪಕಾಮುಕರ್ಶನಗ್ಂ ಸುಪೋಷಃ ಪೋಷೈಃ ಸ್ಯಾತ್ಸುವೀರೋ ವೀರೈರ್ವೇತ್ವಾಜ್ಯಸ್ಯ**
**ಹೋತರ್ಯಜ ।**

(ತೈ. ಬ್ರಾ. ೩-೬-೨-೨)

ಎಂಬ ಮಂತ್ರದಲ್ಲಿ **ಅಚಿಷ್ಟುಂ, ಅಪಾಕಂ, ರೇತೋಧಾಂ,** ವಿಶ್ರವಸಂ, **ಯಶೋಧಾಂ, ಪುರುರೂಪಂ, ಅಕಾಮುಕರ್ಶನಂ** ಎಂಬ ವಿಶೇಷಣಗಳಿವೆ. ಇವುಗಳಲ್ಲಿ—

**ಅಚಿಷ್ಣುಂ**—ಎಂದರೆ **ಚೇಷ್ಟನರಹಿತಂ, ಚಾಂಚಲ್ಯರಹಿತಂ, ಸ್ಥಿರಂ'** ಚಂಚಲವಲ್ಲದೇ ಸ್ಥಿರವಾಗಿರತಕ್ಕವನೆಂದೂ,

**ಅಪಾಕಂ**—ಎಂದರೆ **ಅಬಾಲಂ, ಪ್ರಾಜ್ಞಂ** । ಬಾಲನಲ್ಲದೆ ಪ್ರಾಜ್ಞನೆಂದೂ,

**ರೇತೋಧಾಂ**—ಎನ್ನುವುದಕ್ಕೆ **ಪುತ್ರಾದಿಬೀಜಸ್ಯ ಯಜಮಾನೇ ಧಾರಯಿತಾರಂ** । ಯಜ್ಞಕರ್ತನಲ್ಲಿ ಪುತ್ರಾದಿ ಬೀಜವನ್ನು ಬಿತ್ತುವವನೆಂದೂ,

**ವಿಶ್ರವಸಂ**—ಎಂಬುದಕ್ಕೆ **ವಿವಿಧಕೀರ್ತಿಯುಕ್ತಂ** ॥ ಬಗೆಯ ಬಗೆಯ ಕೀರ್ತಿಯುಕ್ತನೆಂದೂ,

**ಯಶೋಧಾಂ**—ಎಂದರೆ **ಯಜಮಾನೇ ಯಶಸಃ ಧಾರಯಿತಾರಂ** । ಯಜ್ಞಕರ್ತನು ಯಶೋಭಾಗಿಯಾಗುವಂತೆ ಮಾಡುವವನೆಂದೂ,

**ಪುರುರೂಪಂ**—ಎನ್ನುವುದಕ್ಕೆ **ಬಹುರೂಪವಂ** ವಿಧವಿಧವಾದ ರೂಪವುಳ್ಳವನೆಂದೂ,

**ಅಕಾಮಕರ್ಶನಂ**—ಎಂದರೆ **ಕಾಮಾನಾಂ ಅನಾಶಯಿತಾರಂ** । ಯಜಮಾನನ ಇಷ್ಟಾರ್ಥಗಳನ್ನು ಸಾರ್ಥಕಗೊಳಿಸುವವನೆಂದೂ ವಿವರಿಸಿದೆ.

ಈ ವಿಶೇಷಗಳು **ತ್ವಷ್ಟೃವಿನ** ವೈಯುಕ್ತಿಕವಾದ ರೂಪವನ್ನು ತಿಳಿಸುತ್ತವೆ. ನಿರುಕ್ತಕಾರರು **ತ್ವಷ್ಟೃ** ಶಬ್ದದ ನಿಷ್ಪತ್ತಿಯನ್ನು ತೋರಿಸುತ್ತಾ (೮-೧೪) ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । **ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿಕರ್ಮಣಃ** । ವೇಗವಾಗಿ ವ್ಯಾಪಿಸುವುದರಿಂದ ಈ ಹೆಸರೆಂದು ನೈರುಕ್ತಕಾರರ ಮತ. ಅಥವಾ ಪ್ರಕಾಶಿಸು ಎಂಬರ್ಥವುಳ್ಳ **ತ್ವಿಷ್** ಧಾತುವಿನಿಂದಾಗಲಿ, ಕತ್ರರ್ಥಕವಾದ ತ್ವಕ್ಷ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ಹೇಳಿದ್ದಾರೆ. ಈ ನಿರ್ವಚನಗಳಿಂದ ತ್ವಷ್ಟೃವು ವೇಗವಾಗಿ ವ್ಯಾಪಿಸುವವನೆಂದೂ, ಪ್ರಕಾಶಿಸುವವನೆಂದೂ, ಮತ್ತು ನಿರ್ಮಾತನೆಂದೂ ಅರ್ಥವಾಗುವುದು. ಈ ದೇವತೆಯು ಯಾವ ಲೋಕಕ್ಕೆ ಸೇರಿದವನೆಂದು ತೋರಿಸಲು **ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ** । **ಅಗ್ನಿರಿತಿ ಶಾಕಪೂಣಿಃ** । ಅಂತರಿಕ್ಷಸ್ಥವಾದ ದೇವತೆಗಳ ಗುಂಪಿಗೆ ಸೇರಿದವನೆಂದು ಕೆಲವರೂ, ಅಗ್ನಿಯೆಂದು ಶಾಕಪೂಣಿಯೂ ಹೇಳಿರುವ ಮತಗಳನ್ನು ತಿಳಿಸಿದ್ದಾರೆ. ಬೃಹದ್ದೇವತೆಯಲ್ಲಿ ಮೊದಲನೆಯ ಮತವನ್ನನುಮೋದಿಸುತ್ತಾ,

**ತ್ವಷ್ಟಾ ರೂಪವಿಕರ್ತಾ ಚ ಯೋಽಸೌ ಮಾಧ್ಯಮಿಕೇ ಗಣೇ ।**
**ಸ್ತುತಃ ಸ ಚ ನಿಪಾತೇನ ಸೂಕ್ತಂ ತಸ್ಯ ನ ವಿದ್ಯತೇ ॥**

(ಬೃ. ದೇ. ೩-೨೫)

ಎಂಬ ಶ್ಲೋಕದಲ್ಲಿ **ಮಧ್ಯಮಲೋಕದ** ದೇವತೆಗಳ ಗುಂಪಿನಲ್ಲಿ ಸೇರಿರತಕ್ಕವನೆಂದು ಹೇಳಿದೆ. ಇದಕ್ಕೆ ಮೊದಲು,

**ತ್ವಷ್ಟಾ ತು ಯಸ್ತ್ವಯಮೇವ ಪಾರ್ಥಿವೋಽಗ್ನಿರಿತಿ ಸ್ತುತಿಃ ।**
**ಪಾರ್ಥಿವಸ್ಯಾಸ್ಯ ವರ್ಚಃ ಸ್ಯುಃ ಕಸ್ಯಾಪ್ಯೃಕ್ ಚಾರ್ತವೇಷು ಚ ॥**
**ತ್ವಿಷಿತಸ್ತ್ವಕ್ಷತೇರ್ವಾ ಸ್ಯಾತ್ ತೂರ್ಣಮಶ್ನುತ ಏವ ವಾ ।**
**ಕರ್ಮಸೂತ್ತಾರಣೋ ನೇತಿ ತೇನ ನಾಮ್ನೈತದಶ್ನುತೇ ॥**

**ಯಃ ಸಹಸ್ರತಮೋ ರಶ್ಮೀ ರವೇಶ್ಚಂದ್ರಮುಪಾಶ್ರಿತಃ ।**
**ಸೋಽಪಿ ತ್ವಷ್ಟಾರಮೇವಾಗ್ನಿಂ ಪರಂ ಚೇಹ ಚ ಯನ್ಮಧು ॥**

(ಬೃ. ದೇ ೩–೧೫ ರಿಂದ ೧೭)

ಪಾರ್ಥಿವಾಗ್ನಿಗೆ ಯಾವ ಸ್ತುತಿಯೋ ಅದೇ ತ್ವಷ್ಟೃವನ್ನೂ ಉದ್ದೇಶಿಸಿದೆ. ಪೃಥ್ವಿಗೆ ಸಂಬಂಧಪಟ್ಟ ದೇವತೆಯೆಂಬ ಸೂಚನೆಯೂ ಕೆಲವೆಡೆಗಳಲ್ಲಿವೆ. ಋತುಪರವಾದ ಸೂಕ್ತಗಳಲ್ಲೂ ಇವನನ್ನು ಅಗ್ನಿಯ ಅಂಶನೆಂದೇ ವರ್ಣಿಸಿವೆ, ಎಂದು ಅನಂತರ **ತ್ವಷ್ಟೃ** ಪದಕ್ಕೆ ನಿರುಕ್ತದಲ್ಲಿರುವ ನಿರ್ವಚನವನ್ನೇ ಹೇಳಿದೆ. **ಚಂದ್ರವ್ಯಾಪ್ತ**ವಾದ ಸೂರ್ಯನ ಸಹಸ್ರರಶ್ಮಿಯು ಮಧುವಿನಲ್ಲಿಯೂ ಪರ ಲೋಕದಲ್ಲಿಯೂ ಪೃಥ್ವಿಯಲ್ಲಿಯೂ ವ್ಯಾಪಿಸಿರುವಂತೆ ತ್ವಷ್ಟೃವಿನಲ್ಲಿಯೂ ಇದೆ ಎಂದೂ ಸಹ ವರ್ಣಿಸಿವೆ. ಮುಖ್ಯವಾಗಿ **ಬೃಹದ್ದೇವತಾಕಾರರು** ನಿರುಕ್ತೋಕ್ತವಾದ **ಶಾಕಪೂಣಿಯ** ಮತವನ್ನು ಈ ವಿಷಯದಲ್ಲಿ ಅನುಮೋದಿಸಿರುತ್ತಾರೆ. **ನಿಘಂಟು**ವಿನಲ್ಲಿ ತ್ವಷ್ಟೃವನ್ನು ಮೊದಲು ಆಪ್ರೀದೇವತೆಗಳೊಡನೆಯೂ, (೫–೨) ಅನಂತರ **ಅಂತರಿಕ್ಷಸ್ಥ**ವಾದ ದೇವತೆಗಳೊಡನೆಯೂ (೫–೫) ಮೊದಲನೆಯದಾಗಿ ದ್ಯುಲೋಕಸ್ಥವಾದ ದೇವತೆಗಳೊಡನೆಯೂ (೫–೬) ಸೇರಿಸಿದೆ.

ತ್ವಷ್ಟೃ ಮತ್ತು ದಧೀಚಿಋಷಿಯ ಕಥೆಯನ್ನು ಕುರಿತು ೧–೧೧೬ ನೇ ಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಿದೆ. ಐತರೇಯಬ್ರಾಹ್ಮಣದಲ್ಲಿ,

**ತ್ವಷ್ಟಾರಂ ಯಜತಿ ವಾಗ್ವೈ ತ್ವಷ್ಟಾ ವಾಗ್ಘೀದಂ ಸರ್ವಂ । ತ್ವಾಷ್ಟ್ರೀಂ ವಾಚಮೇವ ತತ್ಪ್ರೀಣಾತಿ ವಾಚಂ ಯಜಮಾನೇ ದಧಾತಿ ।**

(ಐ. ಬ್ರಾ. ೨–೪)

ಎಂಬ ವಾಕ್ಯದಿಂದ ತ್ವಷ್ಟೃವಿಗೂ ವಾಕ್ಕಿಗೂ ತಾದಾತ್ಮ್ಯವನ್ನು ಹೇಳಿರುವುದೂ ಒಂದು ಮತವಾಗಿದೆ.

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
**ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥**

( ಋ. ಸಂ. ೧೦–೧೧೦–೯

ಎಂಬ ಋಕ್ಕಿನಲ್ಲಿ ಈ ದೇವತೆಗೆ ದಿವ್ಯಜನ್ಮವಿದೆಯೆಂದೂ, ಆದುದರಿಂದಲೇ ಸೃಷ್ಟಿಕಾಲಗಳಲ್ಲಿಯೂ ಸಹ ಇವನು ತನ್ನ ಪ್ರಾಕ್ತನತ್ವವನ್ನು ತೋರಿಸುತ್ತಾನೆಂದೂ ಸ್ತುತಿಸಿದೆ. ತ್ವಷ್ಟೃವು ಅತ್ಯಂತ ಪ್ರಾಚೀನನು ಎಂಬ ಅಭಿಪ್ರಾಯವು,

**ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ । ಅಸ್ಮಾಕಮಸ್ತು ಕೇವಲಃ ।**

(ಋ. ಸಂ. ೧–೧೩–೧೦)

**ತ್ವಷ್ಟಾರಮಗ್ರಜಾಂ ಗೋಪಾಂ ಪುರೋಯಾವಾನಮಾ ಹುವೇ ।**
**ಇಂದುರಿಂದ್ರೋ ವೃಷಾ ಹರಿಃ ಪವಮಾನಃ ಪ್ರಜಾಪತಿಃ ॥**

(ಋ. ಸಂ. ೯–೫–೯)

ಇತ್ಯಾದಿ ಋಕ್ಕುಗಳಲ್ಲಿ **ಅಗ್ರಿಯ**, ಅಗ್ರಜ ಎಂಬ ವಿಶೇಷಣಗಳಿಂದ ತಿಳಿಯುತ್ತದೆ.

**ತ್ವಷ್ಟಾ ರೂಪಾಣಿ ಹಿ ಪ್ರಭುಃ ಪಶೂನ್ವಿಶ್ವಾನ್ತ್ಸಮಾನಜೇ । ತೇಷಾಂ ನಃ ಸ್ಫಾತಿಮಾ ಯಜ ।**

(ಋ. ಸಂ. ೧–೧೮೮–೯)

**ತ್ವಷ್ಟಾ ರೂಪಾಣಿ ವಿಕರೋತಿ ।**

(ತೈ. ಸಂ. ೧–೫–೯–೨)

ಇತ್ಯಾದಿ ವಾಕ್ಯಗಳು **ತ್ವಷ್ಟ್ರುವಿನ** ನಿರ್ಮಾಣಕಾರ್ಯವನ್ನು ಸ್ತುತಿಸುತ್ತವೆ. ಅಲ್ಲದೇ ಅವನಿಗೆ ವಿಶ್ವರೂಪನೆಂಬ ವಿಶೇಷಣವೂ ಇದೆ. (ಋ. ಸಂ. ೧-೧೩-೧೦).

**ತುರೀಪಂ—ತುರೀಪ** ಶಬ್ದಕ್ಕೆ ಶಬ್ದವ್ಯುತ್ಪತ್ತಿಯನ್ನು ಮಾತ್ರ ಪರಿಶೀಲಿಸಿದರೆ, **ತೂರ್ಣಂ ವ್ಯಾಪಿ** । ವೇಗವಾಗಿ ವ್ಯಾಪಿಸತಕ್ಕದ್ದು ಎಂದರ್ಥವಾಗುತ್ತದೆ. ವೇಗವಾಗಿ ಬೀಳುವುದು ಅಥವಾ ವ್ಯಾಪಿಸುವುದು. ಭಾಷ್ಯಕಾರರ ಮತದಂತೆ ಮಳೆಯಾಗಬಹುದು ಅಥವಾ ರೇತಸ್ಸಾಗಬಹುದು. ಈ ಋಕ್ಕಿನಲ್ಲಿ ಭಾಷ್ಯಕಾರರು ಈ ಪದವನ್ನು ವೃಷ್ಟಿಗೆ ವಿಶೇಷಣವನ್ನಾಗಿ ಮಾಡಿದ್ದಾರೆ. ಆದರೆ,

**ತನ್ನಸ್ತುರೀಪಮಥ ಪೋಷಯಿತ್ನು ದೇವ ತ್ವಷ್ಟರ್ವಿ ರರಾಣಃ ಸ್ಯಸ್ವ ।**
**ಯತೋ ವೀರಃ ಕರ್ಮಣ್ಯಃ ಸುದಕ್ಷೋ ಯುಕ್ತಗ್ರಾವಾ ಜಾಯತೇ ದೇವಕಾಮಃ ॥**

(ಋ. ಸಂ. ೩-೪-೯)

ಎಂಬ ಋಕ್ಕಿನಲ್ಲಿ **ತುರೀಪ** ಶಬ್ದಕ್ಕೆ ಕಾರಕವಾದ ರೇತಸ್ಸೆಂದರ್ಥಮಾಡಿದ್ದಾರೆ. ಪ್ರೈಷಸೂಕ್ತದಲ್ಲಿ **ರೇತೋಧಾಃ** ಎಂಬ ವಿಶೇಷಣವು **ತ್ವಷ್ಟ್ರುವಿನ** ಒಂದು ವಿಶೇಷ ಗುಣವನ್ನು ಹೇಳುವುದರಿಂದ ಈ ಅರ್ಥವು ಸಾಧುವಾಗಿ ಕಾಣುವುದು. ಅದೂ ಅಲ್ಲದೇ,

**ತ್ವಷ್ಟ್ರೇ ಸ್ವಾಹಾ, ತ್ವಷ್ಟ್ರೇ ತುರೀಪಾಯ ಸ್ವಾಹಾ, ತ್ವಷ್ಟ್ರೇ ಪುರುರೂಪಾಯ ಸ್ವಾಹಾ ।**

(ತೈ. ಸಂ. ೭-೩-೧೫)

ಎಂಬ ಸಂಹಿತಾ ವಾಕ್ಯದಲ್ಲಿಯೂ ಸಹ **ತ್ವಷ್ಟ್ರುವಿಗೂ ತುರೀಪಕ್ಕೂ** ತಾದಾತ್ಮ್ಯವನ್ನು ಹೇಳುವಾಗ **ತುರೀಪ** ಪದಕ್ಕೆ ರೇತಸ್ಸೆಂದೇ ಅರ್ಥಮಾಡಿದೆ. Keith ಎಂಬ ಪಂಡಿತನು ಈ ಮಂತ್ರಕ್ಕೆ To Tvashtra, the Seminal ಎಂದೇ ಅರ್ಥ್ಯಮಾಡಿದ್ದಾನೆ. ಅಥವಾ ಮಧ್ಯಮಲೋಕದ ದೇವತೆಯಾದ್ದರಿಂದ ವೃಷ್ಟಿಪತನಕ್ಕೆ ಕಾರಣನೆಂದೂ ಹೇಳಬಹುದು.

ರಾಸ್ಪಿನಃ ॥೯೦॥
ರಾಸ್ಪಿನೋ ರಾಸ್ಪೀ ರಪತೇರ್ವಾ । "ರಾಸ್ಪಿನಸ್ಯಾಯೋಃ" ಇತ್ಯಪಿ
ನಿಗಮೋ ಭವತಿ ॥ ೨ ॥

**ರಾಸ್ಪಿನಃ** ಎಂಬ ಶಬ್ದವು ಗಲಾಟೆಮಾಡು, ಶಬ್ದಮಾಡು ಎಂಬರ್ಥವುಳ್ಳ **ರಪತಿ** ಧಾತುವಿನಿಂದಾಗಲಿ' ಶಬ್ದಮಾಡು ಎಂಬರ್ಥವುಳ್ಳ **ರಸತಿ** ಧಾತುವಿನಿಂದಲಾಗಲಿ ನಿಷ್ಪನ್ನವಾಗಬಹುದು.

ಉದಾಹರಣೆಯ ಋಕ್ಕು—

**ಉತ ತ್ಯಾ ಮೇ ಯಶಸಾ ಶ್ವೇತನಾಯ್ಯೈ ವ್ಯಂತಾ ಪಾಂತೌಶಿಜೋ ಹುವಧ್ಯೈ ।**
**ಪ್ರ ವೋ ನಪಾತಮಪಾಂ ಕೃಣುಧ್ವಂ ಪ್ರ ಮಾತರಾ ರಾಸ್ಪಿನಸ್ಯಾಯೋಃ ॥**

(ಋ. ಸಂ. ೧೦-೧೨೨-೪)

**ಇದರ ಅರ್ಥವು—**

**ಉಶಿಜಪುತ್ರನು** (ಕಕ್ಷೀವಂತನೂ ಆದ ನಾನು, ಆಹಾರ, ಬಲ, ಕೀರ್ತಿಯುಕ್ತರೂ (ಚರ್ವಾದಿ) ಭಕ್ಷಕರೂ (ಸೋಮಾದಿಪಾನಗಳನ್ನು) ಪಾನಮಾಡುವವರೂ ಪ್ರಸಿದ್ಧರೂ ಆದ ಅಶ್ವಿನೀದೇವತೆಗಳನ್ನು ಪ್ರಪಂಚವನ್ನು ಶ್ವೇತವರ್ಣವಾಗಿ

ಮಾಡುವ ಉಷಃಕಾಲದಲ್ಲಿ ಸ್ತುತಿಸುತ್ತೇನೆ. (ಎಷೈ ಋತ್ವಿಜರೇ) ನೀವೂ ಉದಕದ ಪೌತ್ರನಾದ ಅಗ್ನಿಯನ್ನೂ ಸ್ತೋತೃಪುರು ಷನಿಗೆ (ವೃಷ್ಟ್ಯುದಕನಿರ್ಮಾತ್ರಿಯರೂ) ಮಾತೃಸ್ಥಾನೀಯರೂ ಆಗಿ ಅಹೋರಾತ್ರದೇವತೆಗಳನ್ನು ಹೆಚ್ಚಾಗಿ ಸ್ತುತಿಸಿರಿ

**ಔಶಿಜಃ—ಉಶಿಜಃ ಪುತ್ರಃ ಕಕ್ಷೀವಾನಹಂ |** **ಉಶಿಕ್** ಎಂಬುವಳ ಮಗನೂ, ಕಕ್ಷೀವಂತನೆಂಬ ಹೆಸರು ಳ್ಳವನೂ ಆದ ನಾನು ಎಂದು ಈ ಸೂಕ್ತದ್ರಷ್ಟೃವಾದ ಋಷಿಯು ಹೇಳಿಕೊಳ್ಳುತ್ತಾನೆ. ಇವನು ದೀರ್ಘತಮಸ್ಸೆಂಬ ಋಷಿ ಯಿಂದ **ಉಶಿಕ್** ಎಂಬುವಳಲ್ಲಿ ಉತ್ಪನ್ನನಾದವನು ಎಂದು ಬೃಹದ್ದೇವತೆಯ ಆಧಾರದಿಂದ ತಿಳಿಯುತ್ತದೆ.

**ಅಂಗರಾಜಗೃಹೇ ಯುಕ್ತಾಂ ಉಶಿಜಂ ಪುತ್ರಕಾಮುಯಾ |**
**ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾ ಮಹಾತಪಾಃ ||**
**ಜನಯಾಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನ್ ಋಷೀನ್ ||**

(ಬೃ. ದೇ. ೪–೨೪, ೨೫)

ಅಂಗರಾಜನ ಮನೆಯಲ್ಲಿ ಕೆಲಸಕ್ಕೆ ಇದ್ದ **ಉಶಿಕ್** ಎಂಬುವಳನ್ನು ದೊರೆಯು ಪುತ್ರೇಚ್ಛೆಯಿಂದ **ದೀರ್ಘತಮಸ್** ಎಂಬ ಋಷಿಯ ಸಮೀಪಕ್ಕೆ ಕಳುಹಿಸಿದನು. ಇವಳು ಬಹಳ ಭಕ್ತಿಯುತಳಾಗಿ ಅವನಿಗೆ ಸೇವೆಯನ್ನು ಸಲ್ಲಿಸುತ್ತಿದ್ದುದರಿಂದ ಅವನು ತುಷ್ಟನಾಗಿ ಇವಳಲ್ಲಿ ಕಕ್ಷೀವತ್ಪ್ರಮುಖರಾದ ಋಷಿಗಳನ್ನು ಉತ್ಪನ್ನಮಾಡಿದನು ಎಂದು ಕಥೆಯು ಉಕ್ತವಾಗಿದೆ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ |**

(ಋ. ಸಂ. ೧–೧೧೬–೭)

**ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿಜ್ಮನ್ |**

(ಋ. ಸಂ. ೧–೧೧೭–೬)

ಇತ್ಯಾದಿ ಋಕ್ಕುಗಳಿಂದ ಇವನು ಪಜ್ರ ಸಂತತಿಯವನೆಂದು ತಿಳಿಯುತ್ತದೆ.

**ಮದಚ್ಯುತಃ ಕೃಶನಾವತೋ ಅತ್ಯಾನ್ಕಕ್ಷೀವಂತ ಉದಮೃಕ್ಷಂತ ಪಜ್ರಾಃ |**

(ಋ. ಸಂ. ೧–೧೨೬–೪)

ಎಂಬ ಋಕ್ಕಿನಲ್ಲಿ ಇವನ ವಂಶದಲ್ಲಿ ಉತ್ಪನ್ನರಾದವರೂ **ಪಜ್ರರೆಂದೇ** ಕರೆಯಲ್ಪಡುವುದಾಗಿ ತಿಳಿಯುತ್ತದೆ. ಇದೇ ಸೂಕ್ತದಲ್ಲಿ **ಸಿಂಧೂ** ನದಿಯ ದಡದಲ್ಲಿದ್ದ ಭಾವಯವ್ಯನ ಮಗನಾದ **ಸ್ವನಯನು** ತನಗೆ ಅತಿ ಪ್ರಭೂತವಾದ ದಾನ ವನ್ನು **ಕೊಟ್ಟುದಾಗಿ** ಪ್ರಶಂಸಿಸಿದ್ದಾನೆ. ಈ ದಾನವನ್ನು ಕೊಡಬೇಕಾದ ಸಂದರ್ಭವೂ, ಇವರಿಬ್ಬರಿಗೂ ಉಂಟಾದ ನಿಕಟವಾದ ಸಂಬಂಧವೂ ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಕಥೆಯಿಂದ ತಿಳಿಯುತ್ತದೆ.

**ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ ಸ್ವನಿಲಯಂ ಕಿಲ |**
**ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ ||**
**ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ |**
**ಕ್ರೀಡಾರ್ಥಂ ಸಾನುಗೋಽಪಶ್ಯತ್ ಸಭಾರ್ಯಃ ಸಪುರೋಹಿತಃ ||**
**ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ |**
**ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ ||**

ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।
ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ ॥
ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।
ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ ॥
ತಾವತಶ್ಚ ರಥಾಙ್ಖ್ಯಾನ್ವಿಡ್ವಂಗಾನ್ವೈ ಚತುರ್ಯುಜಃ ।
ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ ॥
ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಪನಃ ।
ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ ॥
ಶತಮಶ್ವಾಙ್ಖತಂ ನಿಷ್ಕಾನ್ ರಥಾನ್ ದಶ ವಧೂಮತಃ ।
ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯಾಧಿಕಂ ॥
ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।
ಪ್ರತಿಗೃಹ್ಯ ಚ ತುಷ್ಟಾವ ಪ್ರಾತಃ ಪಿತ್ರೇ ಶಶಂಸ ಚ ॥

(ಬೃ. ದೇ. ೩–೧೪೨ ರಿಂದ ೧೫೦)

ಗುರುವಿನ ಮನೆಯಲ್ಲಿ ವಿದ್ಯಾಭ್ಯಾಸವಾದ ಮೇಲೆ ಕಕ್ಷೀವಂತನು ಮನೆಗೆ ಹಿಂತಿರುಗುತ್ತಿದ್ದಾಗ ದಾರಿಯಲ್ಲಿ ಬಳಲಿದವನಾಗಿ ಕಾಡಿನಲ್ಲಿ ಮಲಗಿ ನಿದ್ರೆಹೋಗುತ್ತಿದ್ದನು. ಆಗ ಭಾವಯವ್ಯಪುತ್ರನಾದ **ಸ್ವನಯ**ನೆಂಬ ರಾಜನು ತನ್ನ ಪತ್ನೀಭೃತ್ಯಾದಿಪರಿವಾರಗಳೊಡನೆ ಕ್ರೀಡಾರ್ಥವಾಗಿ ಅಲ್ಲಿಗೆ ಬಂದಾಗ ಅವನನ್ನು ನೋಡಿದನು. ಅವನ ಸೌಂದರ್ಯವನ್ನು ನೋಡಿ ಸಂತೋಷಗೊಂಡು ವರ್ಣ ಮತ್ತು ಗೋತ್ರಗಳ ದೃಷ್ಟಿಯಿಂದ ತನಗೆ ಏನೂ ವಿರೋಧವಿಲ್ಲದಿದ್ದರೆ ಅವನಿಗೆ ಮಗಳನ್ನು ಕೊಟ್ಟು ವಿವಾಹವನ್ನು ನೆರವೇರಿಸಬೇಕೆಂದಿಚ್ಛಿಸಿ ಅವನನ್ನು ಎಬ್ಬಿಸಿ ಅವನ ವಂಶಾದಿಗಳ ವಿಷಯವನ್ನು ಪ್ರಶ್ನಿಸಿದನು. ಆಗ ಕಕ್ಷೀವಂತನು ತಾನು ಅಂಗಿರಸ್ಸಿನ ವಂಶದವನೆಂದೂ ಹೇಳಿದೊಡನೆಯೇ **ಸ್ವನಯನು** ಅವನಿಗೆ ಅಲಂಕೃತರಾದ ಹತ್ತುಜನ ಕನ್ಯೆಯರನ್ನು ದಾನಮಾಡಿದನು. ಜೊತೆಯಲ್ಲಿಯೇ ಅಶ್ವಗಳನ್ನೂ, ರಥಗಳನ್ನೂ, ಧನವನ್ನೂ, ಅಜಾದಿಸಂಪತ್ತುಗಳನ್ನೂ ಪ್ರಭೂತವಾಗಿ ದಾನಮಾಡಿದನು. ಈ ವಿಷಯವು—

ಅಮಂದಾನ್ತ್ಸ್ತೋಮಾನ್ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।
ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥
ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಙ್ಖತಮಶ್ವಾನ್ಪ್ರಯತಾನ್ತ್ಸದ್ಯ ಆದ್ಯಂ।
ಶತಂ ಕಕ್ಷೀವಾ ಅಸುರಸ್ಯ ಗೋನಾಂ ದಿವಿ ಶ್ರವೋಽಜರಸಾ ತತಾನ ॥

(ಋ. ಸಂ. ೧–೧೨೬–೧ ಮತ್ತು ೨)

ಇತ್ಯಾದಿ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ಋಕ್ಸಂಹಿತೆಯಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಸಹ ಇವನು ಪ್ರಾಜ್ಞನೂ ಪೂಜ್ಯನೂ ಆದ ಋಷಿಯೆಂದು ಇವನನ್ನು ಪ್ರಶಂಸಿಸಿದೆ.

ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾ ಋಷಿರಸ್ಮಿ ವಿಪ್ರಃ॥

(ಋ. ಸಂ. ೪-೨೬–೧)

**ಅಯಂ ಕಕ್ಷೀವತೋ ಮಹೋ ವಿ ವೋ ಮದೇ ಮತಿಂ ವಿಪ್ರಸ್ಯ ವರ್ಧಯದ್ವಿವಕ್ಷಸೇ ॥**

(ಋ. ಸಂ. ೧೦-೨೫-೧೦)

**ಏತಾಭಿರ್ಹಾಶ್ವಿನೋಃ ಕಕ್ಷೀವಾನ್ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ ।**

(ಐ. ಬ್ರಾ. ೧-೨೧)

(ಋ. ಸಂ. ೧-೧೨೦-೧ ರಿಂದ ೯ ರ ವರೆಗೆ ಋಕ್ಕುಗಳನ್ನು ಪಠಿಸಿಕೊಂಡು) ಕಕ್ಷೀವಂತನು ಅಶ್ವಿನೀದೇವತೆಗಳ ನಿವಾಸಕ್ಕೆ ಹೋಗಿ ಸೇರಿ ಅವರಿಂದ ಅನುಗ್ರಹೀತನಾಗಿ ಇನ್ನೂ ಉತ್ತಮವಾದ ಲೋಕವನ್ನು ಸೇರಿದನು ಎಂದು **ಐತರೇಯ ಬ್ರಾಹ್ಮಣದಲ್ಲಿಯೂ,**

**ಕಕ್ಷೀವಂತಂ ಯ ಔಶಿಜಃ । ಯೋ ದೇವಾನ್ಸೋಮಮೀವಹಾ ॥**
**ವಸುವಿತ್ಪುಷ್ಟಿವರ್ಧನಃ । ಸ ನಃ ಸಿಷಕ್ತು ಯಸ್ತುರಃ ॥**

(ಶ. ಬ್ರಾ. ೨-೩-೪-೩೫)

ಪುಷ್ಟಿವಂತನೂ ಶತ್ರುನಾಶಕನೂ, ಧನದಾತನೂ, ಸಂಪದ್ವರ್ಧಕನೂ **ಉಶಿಜೆಯ** ಪುತ್ರನೂ ಆದ **ಕಕ್ಷೀವಂತನು** ನಮ್ಮೊಂದಿಗಿರಲಿ ಎಂದು ಶತಪಥಬ್ರಾಹ್ಮಣವಾಕ್ಯಗಳದಲ್ಲಿಯೂ ಸಹ **ಕಕ್ಷೀವಂತನು** ಶ್ರೇಷ್ಠವಾದ ವ್ಯಕ್ತಿಯೆಂದು ಸ್ತುತಿಸಿದೆ.

**ಯಾಭಿಸ್ತ್ರಿಮಂತುರಭವದ್ವಿಚಕ್ಷಣಸ್ತಾಭಿರೂಷು ಊತಿಭಿರಶ್ವಿನಾ ಗತಂ ।**

(ಋ. ಸಂ. ೧-೧೧೨-೪)

ಎಂಬ ಋಕ್ಕಿನಲ್ಲಿ **ಕಕ್ಷೀವಂತನು ಪಾಕಯಜ್ಞ, ಹವಿರ್ಯಜ್ಞ** ಮತ್ತು **ಸೋಮಯಜ್ಞಗಳ** ವಿಷಯದಲ್ಲಿ ಪೂರ್ಣವಾದ ಜ್ಞಾನವನ್ನು ಪಡೆದಿದ್ದನೆಂದು ಹೇಳಿದೆ. ಇವನು ಮೊದಲು ಅತ್ಯಂತ ಮೂಢನಾಗಿದ್ದುದರಿಂದ ಹೇಗಾದರೂ ಪ್ರಯತ್ನಿಸಿ ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಗಳ ವಿಷಯಗಳಲ್ಲೆಲ್ಲಾ ಅಪ್ರತಿಹತವಾದ ಜ್ಞಾನವನ್ನು ಸಂಪಾದಿಸಬೇಕೆಂಬ ಉತ್ಕಟವಾದ ಇಚ್ಛೆಯುಂಟಾಗಿ **ಅಶ್ವಿನೀದೇವತೆಗಳನ್ನು**ದ್ದೇಶಿಸಿ ಯಜ್ಞಮಾಡಿದನಂತರ ಅವರು ಸಂತುಷ್ಟರಾಗಿ ಇವನಿಗೆ ತ್ರಿಕಾಲವಿಷಯಕವಾದುದೂ, ಸರ್ವಾರ್ಥ ವಿಷಯಕವಾದುದೂ ಆದ ಜ್ಞಾನವನ್ನು ಅನುಗ್ರಹಿಸಿದರು ಎಂಬ ಕಥೆಯಿದೆ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**

(ಋ. ಸಂ. ೧-೧೧೬-೭)

ಎಂಬಲ್ಲಿ **ಕಕ್ಷೀವಂತನೇ** ಈ ಕಥೆಯನ್ನು ಸೂಚಿಸಿದ್ದಾನೆ. **ತ್ರಿಮಂತುಃ ವಿಚಕ್ಷಣಃ** ಎಂಬ ವಿಶೇಷಣಗಳಿಂದ ಕಕ್ಷೀವಂತನು ಸರ್ವಾರ್ಥಗಳನ್ನು ತಿಳಿದವನು; ಪ್ರಾಜ್ಞನು ಎಂದು ವಿದಿತವಾಗುತ್ತದೆ.

**ಅಪಾಂ ನಪಾತಂ—ಅಪಾಂ ಉದಕಾನಾಂ ನಪಾತಂ ನಪಾತಯಿತಾರಂ ತಾಸಾಂ ನಪ್ತಾರಂ ವಾ ಅಗ್ನಿಂ । ಅದ್ಭ್ಯಃ ಓಷಧಿವನಸ್ಪತಯಃ ತಾಭ್ಯಃ ಅಗ್ನಿಃ ಇತ್ಯಪಾಂನಪ್ತೃತ್ವಮಗ್ನೇಃ ।** ಉದಕಗಳಿಂದ ಓಷಧಿ ವನಸ್ಪತಿಗಳು ಉತ್ಪನ್ನವಾಗಿ, ಅವುಗಳಿಂದ **ಅಗ್ನಿಯು** ಜನಿಸುವುದರಿಂದ **ಅಗ್ನಿಗೆ** (ಉದಕಗಳ ಪೌತ್ರ) **ಅಪಾಂನಪಾತ್** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ.

**ನಪಾತ್** ಎಂಬ ಪದಕ್ಕೆ ಪುತ್ರನೆಂದೂ ಪೌತ್ರನೆಂದೂ ಅರ್ಥವಾಗುತ್ತದೆ. ಈ ಎರಡು ಅರ್ಥಗಳಲ್ಲಿಯೂ ಪ್ರಯೋಗವಿದೆ. ಆದರೆ ನಿರುಕ್ತಕಾರರು, **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ।** ಸಾಕ್ಷಾತ್ಪುತ್ರನಲ್ಲ ನೆಂದೂ ಪೌತ್ರಾದಿಗಳೆಂದೂ ಈ ಶಬ್ದದ ಅರ್ಥನೆಂದು ಹೇಳಿದ್ದಾರೆ. (ನಿ. ೮–೫) ಮತ್ತು ತನೂನಪಾತ್ ಎಂಬ ಶಬ್ದದ ನಿರ್ವಚನವನ್ನು ಹೇಳುವಾಗ **ಆಪಃ ಅತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯಃ ಓಷಧಿವನಸ್ಪತಯಃ ಜಾಯಂತೇ ಓಷಧಿವನಸ್ಪತಿಭ್ಯಃ ಏಷ ಜಾಯತೇ ।** ಎಂದು ವಿವರಿಸಿ ಉದಕಗಳ ಪೌತ್ರನೆಂದೂ ಮತ್ತು ಶಾಕಪೂಣಿಯ ಮತದಂತೆ **ಅಗ್ನಿಯ** ಪರ್ಯಾಯನಾಮವೆಂದೂ ಹೇಳಿದ್ದಾರೆ.

**ಅನಂತರಾಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ ।**
**ನಪಾದನುಷ್ಯ ಜೈವಾಯಯನುಗ್ನಿಸ್ತೇನ ತನೂನಪಾತ್ ॥**

(ಬೃ. ದೇ.)

ಎಂದು **ಬೃಹದ್ದೇವತೆಯಲ್ಲಿಯೂ** ಇದೇ ಅಭಿಪ್ರಾಯವನ್ನನುಸರಿಸಿದ್ದಾರೆ. ಇಲ್ಲಿ **ಅಪಾಂ ನಪಾತ್** ಎಂಬುದು **ಅಗ್ನಿ** ಪರ್ಯಾಯನಾಮವೇ ಅಥವಾ ಬೇರೆ ದೇವತೆಯ ಹೆಸರೇ ಎಂಬ ವಿಷಯದಲ್ಲಿ ವಿಚಿಕಿತ್ಸೆಯಿರುವುದನ್ನು **ಅಗ್ನಿರಿತಿ ಶಾಕಪೂಣಿಃ** ಎಂಬ ನಿರುಕ್ತಕಾರರ ಮಾತಿನಲ್ಲಿ ತಿಳಿಯಬಹುದು. ಸಾಕ್ಷಾತ್ **ಅಗ್ನಿಗೇ** ಈ ವಿಶೇಷಣವಿದೆಯೋ ಅಥವಾ ಈ ಹೆಸರಿನ ಬೇರೆ ದೇವತೆಯುಂಟೇ ಎಂಬ ವಿಷಯವನ್ನು ಋಕ್ಸಂಹಿತಾ ವಾಕ್ಯಗಳ ಆಧಾರಗಳೊಂದಿಗೂ ಕೆಲವು ಆಧುನಿಕ ಪಂಡಿತರ ಅಭಿಪ್ರಾಯ ಗಳೊಂದಿಗೂ (ಋ. ಸಂ. ೧–೧೪೩–೧ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ) ವಿವರಿಸಲಾಗುತ್ತೆ.

**ರಾಪ್ಸಿನಸ್ಯ—ರಾಸ್ಮಿನೋ ರಾಪ್ಸೀ ರಪತೇರ್ವಾ ।** (ನಿ. ೬–೨೧) ಎಂಬ ನಿರುಕ್ತಕಾರರ ನಿರ್ವಚನದಂತೆ ಈ ಪದದ ಮೂಲವಾದ ರಪ್ ಅಥವಾ ರಸ್ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಸ್ತೋತ್ರಮಾಡತಕ್ಕ ಯಜಮಾನನೆಂದರ್ಥ ವಾಗುತ್ತದೆ. ಸ್ತುತಿಕಾಲದಲ್ಲಿ ಹಿತಕರವಾದ ಶಬ್ದವಿರುವಂತೆ ಚಮಸ ಪಾತ್ರೆಯಿಂದಲೂ ಶಬ್ದವಾಗುವುದರಿಂದ ಅದನ್ನು ಹಿಡಿದಿರುವ ಯಜಮಾನನಿಗೂ ಸಹ—

**ಮಾತುಷ್ಪದೇ ಪರಮೇ ಶುಕ್ರ ಆಯೋರ್ವಿಪನ್ಯವೋ ರಾಪ್ಸಿರಾಸೋ ಅಗ್ಮನ್ ।**

**(ಋ. ಸಂ. ೫–೪೩–೧೪)**

ಎಂಬ ಋಕ್ಕಿನಲ್ಲಿ **ರಾಪ್ಸಿರಾಸಃ** ಎಂದಿದೆ.

ಋಞ್ಜತಿಃ ॥ ೯೧ ॥

ಋಞ್ಜತಿಃ ಪ್ರಸಾಧನಕರ್ಮಾ । "ಆ ವ ಋಞ್ಜಸೇ ಊರ್ಜಾಂ ವ್ಯುಷ್ಟಿಷು" ಇತ್ಯಪಿ ನಿಗಮೋ ಭವತಿ ॥ ೩ ॥

**ಋಂಜತಿಃ—ಪ್ರಸಾಧನಕರ್ಮಾ** ಅಲಂಕಾರ ಮಾಡು ಎಂದರ್ಥವು.

ಉದಾಹರಣೆಯ ಋಕ್ಕು—

**ದೂತಂ ವೋ ವಿಶ್ವವೇದಸಂ ಹವ್ಯವಾಹಮಮರ್ತ್ಯಂ ।**
**ಯಜಿಷ್ಠಮೃಂಜಸೇ ಗಿರಾ ॥**

**(ಋ. ಸಂ. ೪–೮–೧)**

ಇದರ ಅರ್ಥವು—

ಎಲೈ ಅಗ್ನಿಯೇ ಸಕಲಸಂಪತ್ತುಗಳುಳ್ಳವನೂ ಹವಿಸ್ಸನ್ನು ವಹಿಸುವವನೂ, ಮರಣಧರ್ಮರಹಿತನೂ, ಪೂಜ್ಯತಮನೂ ದೇವತೆಗಳಿಗೆ ದೂತನೂ ಆದ ನಿನ್ನನ್ನು ಸ್ತುತಿರೂಪವಾದ ವಾಕ್ಕಿನಿಂದ (ವಾಕ್ಯದಿಂದ) ಪೂಜಿಸಿ ಅಲಂಕರಿಸುತ್ತೇನೆ.

ಋಜುನೀತೀ ॥೯೨॥

ಋಜುರಿತ್ಯಪ್ಯಸ್ಯ ಭವತಿ । "ಋಜುನೀತೀ ನೋ ವರುಣಃ" ಇತ್ಯಪಿ
ನಿಗಮೋ ಭವತಿ ॥೪॥

**ಋಜುನೀತೀ**—ಎಂಬ ಶಬ್ದವೂ ಸಹ ಋಂಜತಿ ಧಾತುವಿನಿಂದಲೇ ನಿಷ್ಪನ್ನವಾಗಿದೆ.

ಉದಾಹರಣೆಯ ಋಕ್ಕು—

**ಋಜುನೀತೀ ನೋ ವರುಣೋ ಮಿತ್ರೋ ನಯತು ವಿದ್ವಾನ್ ।**
**ಅರ್ಯಮಾ ದೇವೈಃ ಸಜೋಷಾಃ ॥**

(ಋ. ಸಂ. ೧-೯೦-೧)

ಇದರ ಅರ್ಥವು—

ಅಹರಭಿಮಾನಿ ದೇವತೆಯಾದ ಮಿತ್ರನೂ, ರಾತ್ರ್ಯಭಿಮಾನಿ ದೇವತೆಯಾದ ವರುಣನೂ ನಮ್ಮ ಗಮ್ಯಸ್ಥಾನವನ್ನು ತಿಳಿದುಕೊಂಡು ನಮ್ಮನ್ನು ಪ್ರಾಮಾಣಿಕವಾದ ಮಾರ್ಗದಿಂದ ಕರೆದುಕೊಂಡು ಹೋಗಿ ನಮ್ಮ ಅಭೀಷ್ಟವನ್ನು ಹೊಂದಿಸಲಿ. ಹಾಗೆಯೇ ಇತರ ಇಂದ್ರಾದಿ ದೇವತೆಗಳೊಡನೆ ಸಮಾನವಾದ ಪ್ರೀತಿಯುಳ್ಳ ಮತ್ತು ಅಹೋರಾತ್ರ ವಿಭಾಗ ಕರ್ತನಾದ ಅರ್ಯಮದೇವನೂ ಸಹ ನಮ್ಮ ಅಭೀಷ್ಟಸ್ಥಾನವನ್ನು ಸೇರಿಸಲಿ.

**ಮಿತ್ರಃ, ವರುಣಃ, ಅರ್ಯಮಾ**–ಈ ಮೂರು ದೇವತೆಗಳೂ ಪ್ರತ್ಯೇಕ ದೇವತೆಗಳೆಂದು ಭಾವಿಸಲ್ಪಟ್ಟಿದ್ದರೂ ಇವರು ಸೂರ್ಯನ ಅನೇಕ ರೂಪಗಳಾದ ಎಂದರೆ ದ್ವಾದಶಾದಿತ್ಯರಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಇಲ್ಲಿ ವಿವರಿಸಲ್ಪಟ್ಟಿರುವಂತೆ ತೋರುತ್ತದೆ. ಇದಲ್ಲದೆ ಈ ಮೂರು ದೇವತೆಗಳೂ ಅಗ್ನಿಯ ಬೇರೆ ರೂಪಗಳೆಂದು ಕೆಲವುಕಡೆ ಹೇಳಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**

(ಋ. ಸಂ. ೫-೪-೧)

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಅಗ್ನಿಗೆ ಮಿತ್ರನೆಂದೂ, ಕನ್ಯಾಸಂಬಂಧವಾದ ಹೋಮಾದಿಗಳಲ್ಲಿ ಅರ್ಯಮಾ ಎಂದೂ ಅಗ್ನಿಗೆ ಈ ಮೂರು ಹೆಸರುಗಳಿವೆಯೆಂದು ಹೇಳಿದೆ. ಇದಲ್ಲದೆ ತೈತ್ತಿರೀಯಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಸೀತ್ಯಾಹ । ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ । ಅಹೋರಾತ್ರಾಭ್ಯಾಮೇವೈನಮುಪಾನಹರತಿ ।**

(ತೈ. ಬ್ರಾ. ೧-೭-೧೦-೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಆದುದರಿಂದ ಈ ಮೂರು ದೇವತೆಗಳೂ ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ, ಕೆಲವುಕಡೆ ಅಗ್ನಿಯ ಬೇರೆಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು.

ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೇ ಸ್ಪಷ್ಟವಾದ ವೈಶಿಷ್ಟ್ಯವಿದೆ. ಎಂದರೆ ವೈಯಕ್ತಿಕ ಪ್ರಾಧಾನ್ಯವಿದೆ. ಋಗ್ವೇದದಲ್ಲಿ ಮಿತ್ರ, ವರುಣ ಅರ್ಯಮಾ ಎಂಬುವರು ಅದಿತಿಯ ಪುತ್ರರೆಂದೂ ಹೇಳಿದೆ. ಆದ್ದರಿಂದ ಇವರನ್ನು ಆದಿತ್ಯರೆಂದೂ ಅನೇಕ ಕಡೆಗಳಲ್ಲಿ ಕರೆದಿದೆ. ಈ ಆದಿತ್ಯರು ಎಂದರೆ ಅದಿತಿಪುತ್ರರು ಆರು ಜನರೆಂದು—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

(ಋ. ಸಂ. ೨-೨೭-೧)

ಎಂದರೆ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂದು ಆರು ಜನರ ಹೆಸರನ್ನು ಮಾತ್ರ ಹೇಳಿದೆ.

**ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷನ ಇಂದ್ರಾಯೇಂದೋ ಪರಿ ಸ್ರವ ।**

(ಋ. ಸಂ. ೯-೧೧೪-೩)

ಎಂಬ ಋಕಿನಲ್ಲಿ ಅದಿತಿಪುತ್ರರು ಏಳು ಜನರೆಂದಿದೆ

**ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ ಸ್ಪರಿ ।**
**ದೇವಾ೯ ಉಪಪ್ರೈತ್ಸಪ್ತಭಿಃ ಪರಾ ಮಾರ್ತಂಡಮಾಸ್ಯತ್ ।**
**ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।**
**ಪ್ರಜಾಯೈ ಮೃತ್ಯವೇ ತತ್ಪುನರ್ಮಾರ್ತಂಡಮಾಭರತ್ ॥**

(ಋ. ಸಂ. ೧೦-೭೨-೮, ೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು, ಅನಂತರ ಮಾರ್ತಂಡನೆಂದು ಒಟ್ಟು ಎಂಟು ಮಂದಿ ಪುತ್ರರಿದ್ದರೆಂದು ಹೇಳಿದೆ. ಇದಲ್ಲದೆ ತೈತ್ತಿರೀಯ ಆರಣ್ಯಕದಲ್ಲಿ—

**ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃ ಪರಿ । ದೇವಾ೯ ಉಪಪ್ರೈತ್ಸಪ್ತಭಿಃ । ಪರಾಮಾರ್ತಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ ಮೃತ್ಯವೇ ತತ್ । ಪರಾಮಾರ್ತಂಡಮಾಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್- ಶ್ಚೇತ್ಯೇತೇ ।**

(ತೈ. ಆ. ೧-೧೩-೩)

ಅದಿತಿಗೆ ಇದ್ದ ಎಂಟು ಮಂದಿ ಪುತ್ರರ ಹೆಸರನ್ನೂ ಹೇಳಿದೆ. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ. ಇದೇ ವಿಷಯವು ತೈತ್ತಿರೀಯಬ್ರಾಹ್ಮಣದಲ್ಲಿ—

**ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮುಪಚತ್ । ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾಜಾಯೇತಾಂ । ಸಾ ದ್ವಿತೀಯಮುಪಚತ್ । ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ । ಸಾ ತೃತೀಯಮುಪಚತ್ । ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಅಗ್ಂಶಶ್ಚ ಭಗಶ್ಚಾಜಾಯೇತಾಂ । ಸಾ ಚತುರ್ಥಮುಪಚತ್ । ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್ಂಶ್ಚಾಜಾಯೇತಾಂ**

(ತೈ. ಬ್ರಾ. ೧-೧-೯-೧, ೨, ೩.)

ಉಕ್ತವಾಗಿದೆ. ಅದಿತಿಯು ಎಂಟು ಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ಮೂರು ಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ-ಸಂ-೨-೨೭ನೇ ಸೂಕ್ತದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರ ಲೋಕೋಪಕಾರಕವಾದ ಸಾಹಸಕೃತ್ಯಗಳ ವಿಸ್ತಾರವಾದ ವರ್ಣನೆ ಇದೆ.

**ಮಿತ್ರಃ**—ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ—

**ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।**

(ನಿ. ೧೦-೨೧)

ಮಿತ್ರಶಬ್ದಕ್ಕೆ ಅರ್ಥವೇನು ಎಂದರೆ—**ಮಿತ್ರಃ ಕಸ್ಮಾತ್ । ಸ ಹಿ ಪ್ರಮೀತೇಃ ತ್ರಾಯತೇ । ಪ್ರಮೀತಿಃ ಮರಣಂ । ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ ।** ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನು ಉಂಟುಮಾಡಿ ಆ ಮೂಲಕ ಅನ್ನಾದ್ಯಾಹಾರಗಳನ್ನು ಒದಗಿಸಿ, ಹಸಿವಿನಿಂದ ಉಂಟಾಗಬಹುದಾದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ ।** ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಸಮಸ್ತ ಪ್ರದೇಶವನ್ನು ತೊಯ್ದುಹೋಗುವಂತೆ ಎಂದರೆ ನೀರಿನಿಂದ ನೆನೆಯುವಂತೆ ಮಾಡುವುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಅಥವಾ-ಸ್ನೇಹನಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ ।** ಈ ದೇವತೆಯು ಉದಕದಿಂದ ಸಮಸ್ತವನ್ನೂ ಅಂಟಿಕೊಳ್ಳುವಂತೆ ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗನಿವಾಸಿಗಳನ್ನೂ ಧರಿಸುವನು ಎಂದರೆ ಪೋಷಿಸಿದನು. ಎಲೈ ಮನುಷ್ಯರೇ ಇಂತಹ ಮಿತ್ರದೇವನಿಗೆ ಘೃತಮಿಶ್ರತವಾದ ಹವಿರಾದಿಗಳನ್ನು ಅರ್ಪಿಸಿ ಎಂದು ಮಿತ್ರನ ಅಸಾಧಾರಣಗುಣಗಳನ್ನೂ, ಲೋಕೋಪಕಾರವನ್ನು ಬಹು ಚೆನ್ನಾಗಿ ವರ್ಣಿಸಿದೆ. ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಈ ಸೂಕ್ತಮಾತ್ರ (ಋ. ಸಂ. ೩-೫೯) ಇತರ ಕಡೆ ಮಿತ್ರನು ವರುಣ ಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದ್ದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿವುಳ್ಳ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು (ಋ. ಸಂ. ೩-೫೮) ಅಲ್ಲಿಯೂ ಆ ದೇವತೆಯು ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ಹೇಳಲ್ಪಟ್ಟಿದೆ. ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ—

**ಮಹಾ ಆದಿತ್ಯೋ॑ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ. ಸಂ. ೩-೫೯-೫)

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ. ಈ ಅರ್ಥವನ್ನು ಕೊಡುವ **ಯಾತಯಜ್ಜನ** ಎಂಬ ಶಬ್ದವು—

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ. ಸಂ. ೫-೭೭-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರಿಬ್ಬರ ಪರವಾಗಿಯೂ

**ಮಿತ್ರಸ್ತಯೋರ್ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ।**

(ಋ. ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ. ಮೇಲೆ ಹೇಳಿದ ಋ. ಸಂ. ೩-೫೯ ನೆಯ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದ್ದಾನೆ. ಮನುಷ್ಯರ ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ, ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರವಾಗಿದಾನೆ, ಎಂದು ಮಿತ್ರನ ಗುಣವರ್ಣನೆಯಿದೆ. ಋ. ಸಂ. ೫-೮೧-೪ ರಲ್ಲಿ ಸವಿತೃ ಮತ್ತು ಮಿತ್ರರು ಒಂದೇ ಎಂದೂ, ವಾಜಸನೇಯಸಂಹಿತೆಯಲ್ಲಿ (ವಾ. ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ ಋ.ಸಂ. ೧೦-೮-೪ ರಲ್ಲಿ ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ ತನಗೋಸ್ಕರ ಉತ್ಪತ್ತಿಮಾಡುತ್ತಾನೆಂದೂ, ಋ. ಸಂ. ೩-೫-೪ ರಲ್ಲಿ ದೀಪ್ತನಾದ ಅಗ್ನಿಯೇ ಮಿತ್ರನು ಎಂದೂ, ಋ. ಸಂ. ೫-೩-೧ ರಲ್ಲಿ ಅಗ್ನಿಯು ಜನಿತನಾದಾಗ ವರುಣನು, ದೀಪ್ತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**

(ಋ. ಸಂ. ೩-೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತನಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃವೂ, ಅಧ್ವರ್ಯುವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ, ಆಗಿರುವನೆಂದೂ, ಇವನು ನದಿಗಳಿಗೂ ಪರ್ವತಗಳಿಗೂ ಮಿತ್ರ (ಸ್ನೇಹಿತ, ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

**ವರುಣಃ**—**ವರುಣೋ ವೃಣೋತೀತಿ ಸತಃ** (ನಿ. ೧೦–೩) ಮೇಘ ಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ.

ವರುಣನು ಅತಿ ಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣ ದೇವತಾಕವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ. ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲಿ ಹನ್ನೆರಡಿವೆ. ಆದರೆ ಮಿತ್ರಾವರುಣರನ್ನು ಒಟ್ಟಾಗಿ ಸ್ತುತಿಸುವ ಸೂಕ್ತಗಳು ಇಪ್ಪತ್ತ ನಾಲ್ಕು ಇವೆ.

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕ ಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ. ಅವನಿಗೆ ಮುಖ, ಕಣ್ಣು ತೋಳುಗಳು, ಕೈಗಳು ಮತ್ತೂ ಪಾದಗಳಿವೆ; ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ, ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಗಳ ವಿವರಣೆ ಇದೆ. ಅಗ್ನಿ, ಮಿತ್ರ ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**

(ಋ. ಸಂ. ೧–೧೧೫–೧)

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾ ಏತಿ ಪ್ರಿಯಂ ವರುಣಯೋರದಬ್ಧಂ ।**

(ಋ. ಸಂ. ೬–೫೧–೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ ।**

(ಋ. ಸಂ. ೭–೬೧–೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ ।**

(ಋ ಸಂ. ೭–೯೩–೧)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।**

(ಋ. ಸಂ. ೧೦–೩೭–೧)

ಎಂಬ ಋಕ್ಕಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣ ದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ, ಮತ್ತು ಋ. ಸಂ. ೭–೬೬–೧೦ ನೆಯ ಋಕ್ಕಿನಲ್ಲಿ ಅರ್ಯಮಾ, ಮಿತ್ರ, ವರುಣರು ಸೂರ್ಯನೇತ್ರರೆಂದು ಹೇಳಿದೆ. ವರುಣನು ದೂರದೃಷ್ಟಿಯುಳ್ಳವನು (**ಉರುಚಕ್ಷಸಂ**) ಎಂದು ಋ. ಸಂ. ೧-೨೫-೫ ೧–೨೫–೧೬) ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ । ಸೀದಂತು ಮನುಷೋ ಯಥಾ ॥**

(ಋ. ಸಂ. ೧–೨೬–೪)

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ । ನಿ ಬರ್ಹಿಷಿ ಸದತಂ ಸೋಮ-ಪೀತಯೇ ॥**

(ಋ. ಸಂ. ೫-೭೨-೨)

ಇತ್ಯಾದಿ ಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ, ವರುಣ, ಅರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯು ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

**ಯದೀ ಸಖಾಯಾ ಸೋಮೈಃ ಸುತೇಭಿಃ ಸುಪ್ರಯಸಾ ಮಾದಯೈತೇ ।**

(ಋ. ಸಂ. ೪-೪೧-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಇಂದ್ರಾದಿ ದೇವತೆಗಳೊಡನೆ ಸೋಮಪಾನಮಾಡುತ್ತಾನೆಂದು ಹೇಳಿದೆ.

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ । ಪರಿ ಸ್ಪಶೋ ನಿ ಷೇದಿರೇ ।**

(ಋ. ಸಂ. ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲುಹೊಂದಿಕೆ ಅಥವಾ ನಿಲುವಂಗಿಯನ್ನೂ ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆಯಿದೆ. ವರುಣನ ರಥವು ಸುವರ್ಣಮಯವಾದುದು, ಮತ್ತು ಸೂರ್ಯನಂತೆ ಕಾಂತಿಯುಕ್ತವಾದದ್ದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ. ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣಮಾಡುತ್ತಾರೆ. (ಋ. ಸಂ. ೫-೬೩-೧) ಇತ್ಯಾದಿ ವರ್ಣನೆಗಳಿವೆ.

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲುಲೋಕದಲ್ಲಿದೆ. ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ । ಸಾಮ್ರಾಜ್ಯಾಯ ಸುಕ್ರತುಃ ।**
**ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾಁ ಅಭಿ ಪಶ್ಯತಿ । ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧-೨೫-೧೦, ೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ನೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರ ಸ್ತಂಭಗಳನ್ನಾಶ್ರಯಿಸಿ ದೃಢವಾಗಿದೆ. ಮತ್ತು ಅವರ ಮನೆಗೆ ಸಹಸ್ರ ದ್ವಾರಗಳಿದೆ. (ಋ-ಸಂ-೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು ಮಿತ್ರಾವರುಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ. ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ. ಇತ್ಯಾದಿ ವರ್ಣನೆಗಳೂ ಇವೆ.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕ ಕಡೆ ರಾಜನೆಂದು ಕರೆಯಲ್ಪಟ್ಟದ್ದಾನೆ—

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**

(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾ ।**

(ಋ. ಸಂ. ೨-೨೭-೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ।**

(ಋ. ಸಂ. ೫-೮೫-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ, ದೇವತೆಗಳಿಗೂ ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೆ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವ ಸೂಚಕವಾದ ಹೆಸರಿದೆ.

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿವೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧವಾಗಿದೆ. ಒಂದಾದರೂ ಕಥೆಗಳಿಲ್ಲ. ವರುಣನು ಭೌತಿಕ ಮತ್ತು ನೈತಿಕ ವಿಧಿಗಳ (**ವರುಣಸ್ಯ ವ್ರತಾನಿ**) ನಿಯಾಮಕನೆಂದು ಬಹಳವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು **ಮಾಯಾ** ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ, ರಾಕ್ಷಸರಿಗೆ ಅನ್ವಹಿಸುವ ಸಂದರ್ಭದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ: ಕೆಟ್ಟ ಅರ್ಥದಲ್ಲಿ ರಾಕ್ಷಸರಿಗೆ ಅನ್ವಯಿಸುತ್ತದೆ. ಅಸುರ ಶಬ್ದಾರ್ಥದಂತೆ ಮಾಯಾ ಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗವಿದೆ. ತನ್ನಲ್ಲಿ ನಿಗೂಢವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆ ಮೋಡಗಳಿಂದ ಮುಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ. (ಋ. ಸಂ. ೫-೬೩-೪) ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ. ಆದ್ದರಿಂದ **ಈ ಮಾಯಾ** ಎಂಬ ಪದವು ಋ. ಸಂ. ೬-೪೮-೧೪ ; ೭-೨೮-೪ ; ೧೦-೯೯-೧೦ ; ೧೦-೧೪೭-೫ ; ಮೊದಲಾದ ಋಕ್ಕುಗಳಲ್ಲೆಲ್ಲಾ ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೆ ಹೇಳಿದೆ.

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗಗಳನ್ನು ಸ್ಥಾಪಿಸಿದನು. ಮತ್ತು

**ಆಸೀದದ್ವಿಶ್ವಾ ಭುವನಾನಿ ಸಂರಾಡ್ವಿಶ್ವೇತ್ತಾ ವರುಣಸ್ಯ ವ್ರತಾನಿ ।**

(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ ವರುಣನು ಸಮಸ್ತ ಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುವೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**

(ಋ. ಸಂ. ೭-೮೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂಲೋಕಗಳೂ (ಅಧೋಲೋಕಗಳು) ಅವನ ವಶದಲ್ಲಿವೆಯೆಂದೂ ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ. (ಋ. ಸಂ. ೫-೬೩-೭) ಅವರೇ ಸಮಸ್ತ ಜಗತ್ತಿಗೂ ರಕ್ಷಕರು. (ಋ. ಸಂ. ೨-೨೭-೪) ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ. (ಋ. ಸಂ. ೫-೬೯-೧, ೪) ಅವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮವನ್ನೂ ಇಟ್ಟಿದ್ದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದ್ದಾನೆ. ವರುಣ, ಮಿತ್ರ ಮತ್ತು ಆರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ. (ಋ. ಸಂ. ೭-೬೦-೪) ಇತ್ಯಾದ್ಯನೇಕ ಋಕ್ಕುಗಳಲ್ಲಿ ವರುಣನ ಅಧಿಕಾರ ವರ್ಣನೆ ಇದೆ.

ತೈತ್ತರೀಯ ಸಂಹಿತೆಯಲ್ಲಿ (ತೈ. ಸಂ. ೬-೪-೮-೩) ಮಿತ್ರೋಽಹರಜನಯದ್ವರುಣೋ ರಾತ್ರಿಂ—ಎಂದರೆ ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ. ಆದ್ದರಿಂದ—**ಮೈತ್ರಂ ವಾ ಅಹಃ । ವಾರುಣೀಃ ರಾತ್ರಿಃ**—ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. (ತೈ. ಸಂ. ೨-೧-೭-೪) ಒಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃತವ್ರತೋ ಪ್ರಜಾವತಃ । ವೇದಾ ಯ ಉಪಜಾಯತೇ ।**

(ಋ. ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ತಿಂಗಳೂ ತಿಳಿದಿನೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ॥**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರ ಎಂದು ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದ ವನೂ ಅವನೇ. ಅವನ ಅಪ್ಪಣೆಮೇರೆಯೇ ಅವು ಸತತವಾಗಿ ಪ್ರವಹಿಸುತ್ತವೆ. (ಋ. ಸಂ. ೨-೨೮-೪) ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ (ಋ. ಸಂ. ೫-೮೫-೬) ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು. ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶ ವಾದರೂ ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ ಇದು ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಪುರಾಣಾದಿಗಳಲ್ಲಿ ವರುಣನು ಜಲಾಧಿಪತಿಯೆಂದು ಪ್ರಸಿದ್ಧನಾಗಿದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮ ದಿಕ್ಕಿಗೆ ಅಧಿಪತಿಯೆಂಬುದು ಪುರಾಣಾದಿಗಳಲ್ಲಿ ಹೇಳಿರುವ ವಿಷಯ. ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದಲ್ಲಿ ಇರುವ ನೀರಿನೊಡನೆಯೇ ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತನಾಗಿರು ವಾಗ ಬುಡಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು ಭೂಮಿಯನ್ನೆಲಾ ವರುಣನು ತೇವವಾಗಿ ಮಾಡುವನು ಎಂದು ಋ. ಸಂ. ೫.೮೫-೩, ೪ನೆಯ ಋಕ್ಕುಗಳಲ್ಲಿ ಹೇಳಿದೆ. ಒಂದು ಇಡೀ ಸೂಕ್ತವೇ (ಎಂದರೆ ಋ. ಸಂ. ೫-೬೩ನೆಯ ಸೂಕ್ತವು) ಅವರ ಮಳೆಗರೆಯುವ ಶಕ್ತಿಯನ್ನೂ ಸೂಚಿಸುತ್ತದೆ. ಯಜುರ್ವೇದಸಂಹಿತೆ ಯಲ್ಲಿ (ತೈ. ಸಂ. ೫.೫-೪-೧) **ಆಪೋ ವರುಣಸ್ಯ ಪತ್ನಯ ಆಸನ್**—ನೀರುಗಳು ವರುಣನ ಪತ್ನಿಯರೆಂದೂ (ತೈ. ಸಂ. ೬-೪-೩-೨) **ಮಿತ್ರಾವರುಣೌ ವಾ ಅಪ ನೇತಾರೌ**—ಮಿತ್ರಾವರುಣರು ನೀರಿಗೆ ನಾಯಕರು ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇ ಪದೇ ಹೇಳಲ್ಪಟ್ಟಿವೆ. ಈ ಕಾರಣದಿಂದಲೇ ಅವನಿಗೆ **ಧೃತವ್ರತ** ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವು ಸಂದಿದೆ.

**ಪರಿಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು ವ್ರತಂ ನಭಂತಾ-ಮನ್ಯಕೇ ಸಮೇ ॥**

(ಋ. ಸಂ. ೮-೪೧-೭)

ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ।

(ಋ. ಸಂ. ೫-೬೯-೪)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೇ ಮಿತ್ರಾವರುಣಾರ್ಯಮರ ಅಪ್ಪಣೆಗಳನ್ನು ಪಾಲಿಸುತ್ತಾರೆಂದೂ ಅನಾದಿ ದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿವೆ. ಮಿತ್ರಾವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲ ಕೊಡಲು ಸಾಧ್ಯವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ, ಒಂದೊಂದು ವೇಳೆ ಆದಿತ್ಯರಲ್ಲಿ, ಅಥವಾ ಇತರ ಸಾಧಾರಣದೇವತೆಗಳಲ್ಲಿಯೂ ಕಂಡುಬರುತ್ತವೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನೂ ಅಭಿವೃದ್ಧಿಗೊಳಿಸುವವರು **(ಋತಸ್ಯ ಗೋಪಾಃ)** ಎಂದರೆ ನಿಯಮಗಳನು ಪಾಲಿಸುವವರು (ಅಥವಾ ಪಾಲಿಸುವಂತೆ ಮಾಡುವವರು) ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕ ವೇಳೆ ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲಿ, ಹರಿಯುವ ನದಿಗಳಾಗಲೀ ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು. ಅವನ ಶಕ್ತಿಯನ್ನು ಮೀರಲಾರವು; ಅವನ ಕೋಪವನ್ನು ತಡೆಯಲಾರೆವು. ಮಿತ್ರಾವರುಣರ ಸೀಮೆಯ ಎಲ್ಲೆಕಟ್ಟನ್ನು ಆಕಾಶ ಮತ್ತು ನದಿಗಳು ಕೂಡ ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ ಅಡಗಿವೆ. ಎಲ್ಲಾ ಪ್ರಾಣಿಗಳ ವಸತಿಗಳೂ ಮೂರು ಸ್ವರ್ಗಲೋಕಗಳೂ ಮೂರು ಭೂಲೋಕಗಳೂ ಅವನಲ್ಲಿಯೇ ನಿಹಿತವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರಗಾಮಿಯಾದ ವಾಯುವಿನ ಗತಿ ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆಬರುವ ಎಲ್ಲಾ ಪದಾರ್ಥಗಳನ್ನೂ ಅವನು ನೋಡುತ್ತಾನೆ ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಯೋಚನೆಗಳು, ಉಪಾಯಗಳು ಎಲ್ಲವೂ ವರುಣನಿಗೆ ತಿಳಿಯುತ್ತವೆ. ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋ ದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟು ಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪಬರುತ್ತದೆ. ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ, ಇವೆರಡಕ್ಕೂ ಅವನು ಬಹಳ ಕ್ರೂರಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿಸುವ ವರುಣನ ಪಾಶವು ಋ. ಸಂ. ೧-೨೪-೧೫; ೧-೨೫-೧೧; ೬-೨೪-೪); ೧೦-೮೫-೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿದೆ. ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ. ಸತ್ಯವಾದಿಯನ್ನು ಬಿಟ್ಟುಬಿಡುತ್ತವೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ನೇತೃಭಿರರಜ್ಜುಭಿಃ ಸಿನೀಥಃ ।**
**ಪರಿ ನೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ॥**

**(ಋ. ಸಂ. ೭-೮೪-೨)**

ಎಂಬ ಋಕ್ಕಿನಲ್ಲಿ ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ. ಈ ಪಾಶವೆಂಬ ಶಬ್ದವು ಇಡೀ ಋಗ್ವೇದದಲ್ಲಿ ಒಂದು ಕಡೆ ಮಾತ್ರ ಅಗ್ನಿದೇವತಾಕವಾದ ಮಂತ್ರದಲ್ಲಿ ಬಂದಿದೆ. ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸಿ ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶಬಂಧನ ಮತ್ತು ಮೋಚನ

(ಪಾಶಬಿಡಿಸುವ) ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧ್ಧಿಸಿದೆಂದು ಹೇಳಬಹುದು, ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾವರುಣರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ. ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಮನ್ನಿಸುತ್ತಾನೆ. ಹಗ್ಗದಂತೆ ಬಿಚ್ಚುತ್ತಾನೆ, ಮತ್ತು ಪಾಪಪರಿಹಾರಮಾಡುತ್ತಾನೆ; ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ. ಅವನ ಪೂರ್ವಿಕರು ಮಾಡಿದ ಪಾಪದಿಂದಲೂ ಮನುಷ್ಯನನ್ನು ಬಿಡುಗಡೆ ಮಾಡುತ್ತಾನೆ. ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ ಉಲ್ಲಂಘಿಸಿ ಅನಂತರ ಪಶ್ಚಾತ್ತಾಪಪಡುವವರನ್ನೂ ಉಳಿಸಿಕೊಡುತ್ತಾನೆ. ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರತೋರಿಸುತ್ತಾನೆ. ವರುಣನಲ್ಲಿ ನೂರುಗಟ್ಲೆ, ಸಾವಿರಗಟ್ಟಲೆ ಔಷಧಿಗಳಿವೆ. ಅವನು ಮೃತ್ಯುವನ್ನು ದೂರಮಾಡುತ್ತಾನೆ. ಮತ್ತು ಪಾಪವನ್ನು ಪರಿಹಾರಮಾಡುತ್ತಾನೆ. ಅವನು ಪ್ರಾಣಾಪಹಾರಮಾಡಬಲ್ಲನು, ಜೀವದಾನವನ್ನೂ ಮಾಡಬಲ್ಲನು. ನಿತ್ಯತ್ವವನ್ನು ರಕ್ಷಣೆಮಾಡುವುವರಲ್ಲಿ ಬಹಳ ಕುಶಲನು ಇತ್ಯಾದಿಯಾಗಿ ವರುಣನ ಗುಣವರ್ಣನೆಯು ಅನೇಕ ಋಕ್ಕುಗಳಲ್ಲಿವೆ. ಇಲ್ಲಿ ನಾವು ಅದನ್ನು ಅತಿಸೂಕ್ಷ್ಮವಾಗಿ ವಿವರಿಸಿದ್ದೇವೆ. ಉಚಿತ ಸಂದರ್ಭದಲ್ಲಿ ಅದನ್ನು ವಿಸ್ತಾರವಾಗಿ ವಿವರಿಸುತ್ತೇವೆ.

ತೈತ್ತಿರೀಯಸಂಹಿತೆಯಲ್ಲಿ — **ಫಲ್ಗುನೀನಕ್ಷತ್ರಮರ್ಯಮಾ ದೇವತಾ .... .... .... .... ಅನೂರಾಧಾ ನಕ್ಷತ್ರಂ ಮಿತ್ರೋ ದೇವತಾ .... .... .... ....** (ತೈ. ಸಂ. ೪-೪-೯-೨)—ಎಂದರೆ ಅರ್ಯಮನು ಪೂರ್ವಫಲ್ಗುನೀ ನಕ್ಷತ್ರಕ್ಕೂ ಮಿತ್ರನು ಅನೂರಾಧಾನಕ್ಷತ್ರಕ್ಕೂ ಅಧಿಪತಿಗಳೆಂದು ಹೇಳಿದೆ.

**ಅರ್ಯಮಾ**—ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ ಆದಿತ್ಯರೆಂದರೆ ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. ನಾವು ಹಿಂದೆ ತಿಳಿಸಿದಂತೆ ಋಗ್ವೇದದಲ್ಲಿ (ಋ.ಸಂ. ೨-೨೭-೧) ಮಿತ್ರ, ಅರ್ಯಮ, ಭಗ, ವರುಣ, ದಕ್ಷ, ಅಂಶ ಎಂಬ ಆರು ಜನರ ಹೆಸರುಮಾತ್ರವಿದೆ. ಋ. ಸಂ. ೮-೧೧೪-೩ ನೆಯ ಋಕ್ಕಿನಲ್ಲಿ ಆದಿತ್ಯರ ಸಂಖ್ಯೆ ಏಳೆಂದೂ, ಋ. ಸಂ. ೧೦-೭೨-೮ ರಲ್ಲಿ ಅದಿತಿಯು ಮೊದಲು ಏಳುಜನ ಪುತ್ರರನ್ನು ದೇವತೆಗಳಿಗೆ ಒಪ್ಪಿಸಿ, ಎಂಟನೆಯ ಮಾರ್ತಂಡನನ್ನು ಅನಂತರ ಪಡೆದಳೆಂದೂ ಇದೆ. ಆ. ವೇ. ೮-೯-೨೧ ರಲ್ಲಿಯೂ, ತೈ. ಬ್ರಾ. ೧-೧-೯-೧ ರಲ್ಲಿಯೂ, ಅದಿತಿಗೆ ಮಿತ್ರ. ಅರ್ಯಮಾ, ವರುಣ, ಅಂಶ, ಭಗ, ಧಾತೃ, ಇಂದ್ರ, ವಿವಸ್ವಾನ್ ಎಂಟುಮಂದಿ ಪುತ್ರರೆಂದು ಹೇಳಿವೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೬-೧-೨-೮; ೧೧-೬-೩-೮) ಆದಿತ್ಯರು ತಿಂಗಳಿಗೊಬ್ಬರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಾದಿಗಳಲ್ಲಿಯೂ ಆದಿತ್ಯರು ಹನ್ನೆರಡುಮಂದಿಯೆಂದೇ ಇದೆ.

**ಅರ್ಯಮಾ** ಎಂಬ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ನೂರುಕಡೆ ಬಂದಿದ್ದರೂ, ಸಂಪೂರ್ಣವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿಘಂಟುವಿನಲ್ಲಿ) ದೇವತೆಗಳ ಹೆಸರುಗಳ ರೂಪ ನಿಷ್ಪತ್ತಿಯನ್ನು ವಿವರಿಸುವಾಗ ಈ ಅರ್ಯಮಾದೇವತೆಯ ಹೆಸರನ್ನು ಬಿಟ್ಟಿದಾರೆ. ಎರಡು ಮಂತ್ರಗಳಲ್ಲಿ ಹೊರತಾಗಿ ಬಾಕಿ ಕಡೆಗಳಲ್ಲೆಲ್ಲಾ ಬೇರೆ ದೇವತೆಗಳ ಜೊತೆಯಲ್ಲಿಯೇ ಪ್ರಸ್ತಾಪ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೇ. ಅಗ್ನಿಯನ್ನು ದ್ದೇಶಿಸಿ ಕನ್ಯೆಯನ್ನು ಒಲಿಕೊಳ್ಳುವಾಗ,

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ನೀನೇ ಅರ್ಯಮಾ ಎಂದು ಹೇಳಿದೆ.

**ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ।**

(ಋ. ಸಂ. ೧೦-೮೫-೩೬)

ಎಂಬ ಋಕ್ಕಿನಲ್ಲಿ—ಎಲೈ ದೇವತೆಗಳೇ, ಭಗ, ಅರ್ಯಮಾ, ಸವಿತೃ, ಪುರಂಧಿ ಇವರುಗಳು ಈ ವಧುವನ್ನು ನನ್ನ ಗೃಹಸ್ಥಾಶ್ರಮಕ್ಕೆ ನೆರವಾಗುವುದಕ್ಕಾಗಿ ನನಗೆ ಕೊಟ್ಟರು ಎಂದು ವರನು ಹೇಳುತ್ತಾನೆ.

**ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।**
**ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೧)

**ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ ।**
**ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಂ ॥**

(ಋ. ಸಂ. ೧೦-೧೨೬-೭)

ಋ. ಸಂ. ೧೦-೧೨೬ ನೆಯ ಸೂಕ್ತದಲ್ಲಿ ದೇವತೆಗಳು ವಿಶ್ವದೇವತೆಗಳೆಂದು ಹೇಳಿದ್ದರೂ ಮೇಲೆ ಉದಹರಿಸಿರುವ ಋಕ್ಕುಗಳಿಂದ ಮುಖ್ಯವಾಗಿ ಆದಿತ್ಯರನ್ನೇ ಇಲ್ಲಿ ಸ್ತುತಿಸಲಾಗಿದೆ. ಇದಲ್ಲದೆ **ದೇವಾಸಃ ಅಷ್ಟ** ಎಂದು ಮೊದಲನೆಯ ಋಕ್ಕಿನಲ್ಲಿ ಹೇಳಿರುವುದು ಎಂಟು ಮಂದಿ ಆದಿತ್ಯರನ್ನೇ (ವೇದದ ಆದಿತ್ಯರ ಸಂಖ್ಯೆ ಎಂಟು ಮಂದಿಗಿಂತ ಹೆಚ್ಚಾಗಿ ಎಲ್ಲಿಯೂ ಹೇಳಿಲ್ಲ) ಉದ್ದೇಶಿಸಿವೆ. ಇದಲ್ಲದೆ ೭ ನೇ ಋಕ್ಕಿನಲ್ಲಿ **ಆದಿತ್ಯಾಸಃ** ಎಂಬ ಶಬ್ದವೂ ಇದನ್ನೇ ಸ್ಪಷ್ಟವಾಗಿ ತಿಳಿಸುತ್ತದೆ. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ (ಕೊನೆಯ ಋಕ್ಕು ಹೊರತು) ವರುಣೋ ಮಿತ್ರೋ ಅರ್ಯಮಾ ಎಂದು ಮಿತ್ರಾವರುಣಾರ್ಯಮರ ಹೆಸರು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು. ಆದಿತ್ಯರಲ್ಲಿ ಈ ಮಿತ್ರಾವರುಣಾರ್ಯಮರ ಪ್ರಧಾನಸ್ಥಾನವನ್ನು ಪಡೆದಿರುವುದನ್ನು ಸೂಚಿಸುವುದಾಗಿದೆ. ಅರ್ಯಮನ ವಿಷಯವು ಋಗ್ವೇದದಲ್ಲಿ ಹೆಚ್ಚಾಗಿ ವಿವರಿಸಲ್ಪಟ್ಟಿಲ್ಲವಾದ್ದರಿಂದ ವಿಶೇಷ ವಿವರಣೆಯು ಸಾಧ್ಯವಿಲ್ಲ.

ಪ್ರತದ್ವಸೂ ॥೯೩॥
ಪ್ರತದ್ವಸೂ ಪ್ರಾಪ್ತವಸೂ । "ಹರೀ ಇನ್ದ್ರ ಪ್ರತದ್ವಸೂ ಅಭಿ ಸ್ವರ"
ಇತ್ಯಪಿ ನಿಗಮೋ ಭವತಿ ॥೫॥೨೧॥

**ಪ್ರತದ್ವಸೂ—ಪ್ರಾಪ್ತವಸೂ**—ಐಶ್ವರ್ಯ ಅಥವಾ ಧನವನ್ನು ಹೊಂದಿರುವ ಎಂದರ್ಥವು. ಈ ಶಬ್ದವು ದ್ವಿತೀಯಾ ದ್ವಿವಚನಾಂತ ಪದವು. ಮತ್ತು ಹರೀ ಎಂಬ ಶಬ್ದಕ್ಕೆ ವಿಶೇಷಣವು.

ಉದಾಹರಣೆಯ ಋಕ್ಕು—

**ಇಹ ತ್ಯಾ ಸಧಮಾಧ್ಯಾ ಯುಜಾನಃ ಸೋಮಪೀತಯೇ ।**
**ಹರೀ ಇಂದ್ರ ಪ್ರತದ್ವಸೂ ಅಭಿ ಸ್ವರ ॥**

(ಋ. ಸಂ. ೮-೧೩-೨೭)

ಇದರ ಅರ್ಥವು—

ಎಲೈ ಇಂದ್ರನೇ, ಪ್ರಸಿದ್ಧವಾದವೂ, ಒಟ್ಟಿಗೆ ಹರ್ಷವನ್ನು ಅನುಭವಿಸುವವೂ ಪ್ರಭೂತವಾದ ಧನವುಳ್ಳವೂ ಆದ ನಿನ್ನ ಅಶ್ವಗಳನ್ನು ನಿನ್ನ ರಥಕ್ಕೆ ಯೋಜಿಸಿ ಈ ನಮ್ಮ ಯಾಗಕ್ಕೆ ಸೋಮಪಾನಾರ್ಥವಾಗಿ ಶೀಘ್ರವಾಗಿ ದಯಮಾಡು.

**ಇತಿ ಏಕವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೊಂದನೆಯ ಖಂಡವು ಸಮಾಪ್ತವು

---

## ಅಥ ದ್ವಾವಿಂಶಃ ಖಂಡಃ

### ಇಪ್ಪತ್ತೆರಡನೆಯ ಖಂಡವು

ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ । ಋತಸ್ಯ ಯೋಗೇ ವಿಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ । ಪ್ರಹಿಣುತ ನೋಽಧ್ವರಂ ದೇವಯಜ್ಯಾಯೈ ಪ್ರಹಿಣುತ ಬ್ರಹ್ಮ ಧನಸ್ಯ ಸನನಾಯ ಋತಸ್ಯ ಯೋಗೇ ಯಜ್ಞಸ್ಯ ಯೋಗೇ ಯಾಜ್ಞೇ ಶಕಟ ಇತಿ ವಾ ಶಕಟಂ ಶಕೃದಿತಂ ಭವತಿ ಶನಕೈಸ್ತಕತೀತಿ ವಾ ಶಬ್ದೇನ ತಕತೀತಿ ವಾ । ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ । ಸುಖವತ್ಯೋ ಭವತಾಸ್ಮಭ್ಯಮಾಪಃ ಚೋಷ್ಕೂಯಮಾಣ ಇನ್ದ್ರ ಭೂರಿ ವಾಮಂ । ದದದಿನ್ದ್ರ ಬಹುವನನೀಯಂ । ಏಧಮಾನದ್ವಿಲುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇನ್ದ್ರೋ ಮನುಷ್ಯಾನ್ ॥ ವ್ಯುದಸ್ಯತ್ಯೇಧಮಾನಾನಸುನ್ವತಃ ಸುನ್ವತೋಽಭ್ಯಾದಧಾತ್ಯುಭಯಸ್ಯ ರಾಜಾ ದಿವ್ಯಸ್ಯ ಚ ಪಾರ್ಥಿವಸ್ಯ ಚ ಚೋಷ್ಕೂಯಮಾಣ ಇತಿ ಚೋಷ್ಕೂಯತೇಶ್ಚರ್ಕರೀತವೃತ್ತಂ ಸುಮಸ್ತ್ವಯಮಿತ್ಯರ್ಥಃ । ಉಪ ಪ್ರಾಗಾತ್ಸುಮನ್ಮೇ ಧಾಯಿ ಮನ್ಮ । ಉಪಪ್ರೈತು ಮಾಂ ಸ್ವಯಂ ಯನ್ಮೇ ಮನೋಽಧಾಯಿ ಯಜ್ಞೇನೇತ್ಯಾಶ್ವಮೇಧಿಕೋ ಮನ್ತ್ರೋ ದಿವಿಷ್ಟಿಷು ದಿವ ಏಷಣೇಷು ॥ ಸೂರ್ಯಂ ರಾಧಃ ಶತಾಶ್ವಂ ಕುರುಙ್ಗಸ್ಯ ದಿವಿಷ್ಟಿಷು ಸ್ಥೂರಃ ಸಮಾಶ್ರಿತಮಾತ್ರೋ ಮಹಾನ್ ಭವತ್ಯಣುರನುಸ್ಥವೀಯಾಂಸಮುಪಸರ್ಗೋ

ಲುಪ್ತ ನಾಮಕರಣೋ ಯಥಾ ಸಂಪ್ರತಿ ಕುರುಂಗೋ ರಾಜಾ ಬಭೂವ ಕುರುಗಮನಾದ್ವಾ ಕುಲಗಮನಾದ್ವಾ ಕುರು ಕೃಂತತೇಃ ಕೂರಮಿತ್ಯಪ್ಯಸ್ಯ ಭವತಿ ಕುಲಂ ಕುಷ್ಣಾತೇರ್ವಿಕುಷಿತಂ ಭವತಿ ದೂತೋ ವ್ಯಾಖ್ಯಾತೋ ಜಿನ್ವತಿಃ ಪ್ರೀತಿಕರ್ಮಾ। ಭೂಮಿಂ ಪರ್ಜನ್ಯಾ ಜಿನ್ವನ್ತಿ ದಿವಂ ಜಿನ್ವನ್ತ್ಯಗ್ನಯ ಇತ್ಯಪಿ ನಿಗಮೋ ಭವತಿ ॥೨೨॥

---

ಹಿನೋತ ॥೯೪॥

"ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಮ್ । ಋತಸ್ಯ ಯೋಗೇ ವಿಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ॥" ಪ್ರಹಿಣುತ ನೋಽಧ್ವರಂ ದೇವಯಜ್ಯಾಯೈ । ಪ್ರಹಿಣುತ ಬ್ರಹ್ಮ ಧನಸ್ಯ ಸವನಾಯ । ಋತಸ್ಯ ಯೋಗೇ ಯಜ್ಞಸ್ಯ ಯೋಗೇ ಯಾಜ್ಞೇ ಶಕಟ ಇತಿ ವಾ । ಶಕಟಂ ಶಕೃದಿತಂ ಭವತಿ ಶನಕೈಸ್ತಕತೀತಿ ವಾ । ಶಬ್ದೇನ ತಕತೀತಿ ವಾ ॥ "ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ।" ಸುಖವತ್ಯೋ ಭವತಾಸ್ಮಭ್ಯಮಾಪಃ ॥೧॥

ಉದಾಹರಣೆಯ ಋಕ್ಕು—

**ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ ।**
**ಋತಸ್ಯ ಯೋಗೇ ವಿ ಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ॥**

(ಋ. ಸಂ. ೧೦-೩೦-೧೧)

ಇದರ ಅರ್ಥವು—

ಎಲೈ ಋತ್ವಿಕ್ಕುಗಳೇ, ನಮ್ಮ ಯಜ್ಞವನ್ನು ದೇವಪೂಜಾರ್ಥವಾಗಿ ಪ್ರೇರಿಸಿರಿ. ನಮ್ಮ ಸ್ತುತಿಯನ್ನು ನಮಗೆ ಧನಗಳ ಲಾಭಕ್ಕಾಗಿ ಪ್ರೇರಿಸಿರಿ. ಯಜ್ಞದ ನಿರ್ವಹಣದ ಕಾಲದಲ್ಲಿ ಕೆಚ್ಚಲನ್ನು ಬಿಡಿಸಿ ಕ್ಷೀರವನ್ನು ಸುರಿಸಿರಿ. ಎಲೈ ಉದಕಗಳೇ, ನಮಗೆ ಸುಖಕಾರಕಿಯರಾಗಿ ಆಗಿರಿ.

ನಿರ್ವಚನದ ಅಭಿಪ್ರಾಯವು—ಎಲೈ ಋತ್ವಿಕ್ಕುಗಳೇ, ದೇವತೆಗಳನ್ನುದ್ದೇಶಿಸಿ ನಾವು ನೆರವೇರಿಸುತ್ತಿರುವ ಈ ಯಜ್ಞವನ್ನು ಚೆನ್ನಾಗಿ ನೆರವೇರುವಂತೆ ಪ್ರೇರಿಸಿರಿ. ನಾವು ಧನಲಾಭಾರ್ಥವಾಗಿ ಪಠಿಸುತ್ತಿರುವ ಸ್ತೋತ್ರಗಳು ದೇವತೆಗಳನ್ನು ಸಮೀಪಿಸುವಂತೆ ಪ್ರೇರಿಸಿರಿ. **ಋತಸ್ಯ ಯೋಗೇ** ಎಂದರೆ ಯಜ್ಞಕರ್ಮವು ನೆರವೇರುತ್ತಿರುವಾಗ ಎಂದರ್ಥವು. **ಯೋಗೇ** ಎಂದರೆ ಯಜ್ಞಕರ್ಮಗಳನ್ನು ಒಂದಾಗಿ ಸೇರಿಸುವ ಎಂಬರ್ಥದಲ್ಲಿ ಯೋಗೇ ಎಂದರೆ ಗಾಡಿ (ಶಕಟ) ಎಂದೂ ಅರ್ಥವಾಗ

ಬಹುದು. ಈ ಶಕಟಶಬ್ದವು ಗಾಡಿಯನ್ನು ಎಳೆಯುವ ಎತ್ತುಗಳ ಸಗಣಿಯಿಂದ ಲಿಪ್ತವಾಗಿರುವುದು. ಅಥವಾ ಈ ಗಾಡಿಯು ನಿಧಾನವಾಗಿ ಚಲಿಸುವುದು. ಅಥವಾ ಕಿರ್ರೆಂದು ಶಬ್ದಮಾಡುತ್ತಾ ಚಲಿಸುವುದು ಎಂಬ ಅರ್ಥವನ್ನು ಸೂಚಿಸುವುದರಿಂದ ಇದಕ್ಕೆ ಶಕಟವೆಂದು ಹೆಸರು. ಉದಕಗಳು ನಮಗೆ ಸುಖಕಾರಕಗಳಾಗಿ ಆಗಲಿ ಎಂಬ ಪ್ರಾರ್ಥನೆಯು ಕೊನೆಯ ಪಾದದಲ್ಲಿ ಉಕ್ತವಾಗಿದೆ.

ಚೋಷ್ಕೂಯಮಾಣಃ ॥೯೫॥ ಚೋಷ್ಕೂಯತೇ ॥೯೬॥

ಚೋಷ್ಕೂಯಮಾಣ ಇನ್ದ್ರ ಭೂರಿ ವಾಮಮ್ ।" ದದದಿನ್ದ್ರ ಬಹು ವನನೀಯಮ್ । "ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇನ್ದ್ರೋ ಮನುಷ್ಯಾನ್ ॥"
ವ್ಯುದಸ್ಯತ್ಯೇಧಮಾನಾನಹದ್ವೇಷ್ಟ್ಯಸುನ್ವತಃ ಸುನ್ವತೋಽಭ್ಯಾದಧಾತ್ಯುಭಯಸ್ಯ ರಾಜಾ ದಿವ್ಯಸ್ಯ ಚ ಪಾರ್ಥಿವಸ್ಯ ಚ ಚೋಷ್ಕೂಯಮಾಣ ಇತಿ ॥ ಚೋಷ್ಕೂಯತೇಶ್ಚರ್ಕರೀತವೃತ್ತಮ್ ॥೨॥

ಚೋಷ್ಕೂಯಮಾಣಃ ಎಂಬ ಶಬ್ದಪ್ರಯೋಗವಿರುವ ಉದಾಹರಣೆಯ ಋಕ್ಕು—

ನಿ ಸರ್ವಸೇನ ಇಷುಧೀँ ರಸಕ್ತ ಸಮರ್ಯೋ ಗಾ ಅಜತಿ ಯಸ್ಯ ವಷ್ಟಿ ।
ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ಮಾ ಪಣಿರ್ಭೂರಸ್ಮದಧಿ ಪ್ರವೃದ್ಧ ॥
(ಋ. ಸಂ. ೧-೩೩-೩)

ಇದರ ಅರ್ಥವು—

ದೇವತೆಗಳಿಗೆಲ್ಲ ಸ್ವಾಮಿಯಾದ ಇಂದ್ರನು ಸಕಲ ಸೇನೆಗಳಿಂದ ಕೂಡಿ ಬತ್ತಳಿಕೆಗಳನ್ನು ಭುಜಕ್ಕೆ ಬಲವಾಗಿ ಕಟ್ಟಿದ್ದಾನೆ. ಶ್ರೇಷ್ಠ ಸಿರಿವಂತನಾದ ಎಲೈ ಇಂದ್ರನೇ, ನಮಗೆ ಇಷ್ಟವಾದ ಗೋರೂಪವಾದ ಐಶ್ವರ್ಯವನ್ನು ಹೆಚ್ಚು ಹೆಚ್ಚಾಗಿ ಒದಗಿಸಿ ಕೊಡುತ್ತಾ ಇರು. ಆದರೆ ಅವುಗಳ ಬೆಲೆಯನ್ನು ಮಾತ್ರ ನಮ್ಮಿಂದ ಅಪೇಕ್ಷಿಸಿ ನಮ್ಮಲ್ಲಿ ವ್ಯಾಪಾರಿಯಂತೆ ವರ್ತಿಸಬೇಡ.

ಚೋಷ್ಕೂಯತೇ ಎಂಬ ಶಬ್ದಪ್ರಯೋಗವಿರುವ ಋಕ್ಕಿನ ಉದಾಹರಣೆಯು—

ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥
(ಋ. ಸಂ. ೬-೪೭-೧೬)

ಇದರ ಅರ್ಥವು—

ಅತ್ಯಂತ ಭಯಂಕರವಾದ ಶಕ್ತಿಯುಳ್ಳ ಶತ್ರುವನ್ನೂ ಸಹ ಹಿಂಸಿಸುತ್ತಲೂ ಬೇರೆ ಬೇರೆ ಸ್ತೋತೃಗಳನ್ನು ಪರ್ಯಾಯರೂಪದಲ್ಲಿ ಹಿಂದುಮುಂದಾಗಿ ಇರಿಸುತ್ತಲೂ ಇರುವ ಇಂದ್ರನು ಪರಾಕ್ರಮಿಯೆಂದು ಪ್ರಸಿದ್ಧನಾಗಿದ್ದಾನೆ. ಅಹಂಕಾರದಿಂದ ಮೆರೆಯುವ ಧನಿಕರನ್ನು ದ್ವೇಷಿಸುವವನೂ, ದ್ಯಾವಾಪೃಥಿವಿಗಳೆರಡಕ್ಕೂ ಪ್ರಭುವೂ ಆದ ಇಂದ್ರನು ತನ್ನ ಸ್ತೋತೃಜನರನ್ನು ಪುನಃ ಪುನಃ ಕರೆದು ಅವರಿಗೆ ಉತ್ತೇಜನವನ್ನೂ ರಕ್ಷಣೆಯನ್ನೂ ನೀಡುತ್ತಾನೆ.

**ಚೋಷ್ಕೂಯಮಾಣಃ** ಮತ್ತು **ಚೋಷ್ಕೂಯತೇ** ಎಂಬ ಎರಡು ಶಬ್ದಗಳೂ ಪರ್ಯಾಯ ಪದಗಳು ಎಂದರೆ ಎರಡು ಶಬ್ದಗಳಿಗೂ ಒಂದೇ ವಿಧವಾದ ಅರ್ಥವಿರುವುದು. **ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ** ಎಂಬ ಶ್ರುತಿವಾಕ್ಯಕ್ಕೆ **ದದದಿಂದ್ರ ಬಹು ವನನೀಯಂ**—ಇಂದ್ರನು ಬಹಳವಾಗಿ ಅಪೇಕ್ಷಿಸಲ್ಪಡುವ ಧನವನ್ನು ಕೊಡುವನು ಎಂದರ್ಥವು. ಇಂದ್ರನು ಸೋಮಾಭಿಷವವನ್ನು ಮಾಡದಿರುವ ಎಂದರೆ ಯಜ್ಞಮಾಡದಿರುವ ಮತ್ತು ಅಹಂಕಾರದಿಂದ ಮೆರೆಯುವ ದುಷ್ಟಜನರನ್ನು ಹಿಂಸಿಸಿ (ಚದುರಿಸಿ) ಓಡಿಸುತ್ತಾನೆ. ಸೋಮಾಭಿಷವವನ್ನು ಮಾಡಿ ಯಜ್ಞಮಾಡುವ ಸಜ್ಜನರನ್ನು ರಕ್ಷಣಾರ್ಥವಾಗಿ ಆಹ್ವಾನಮಾಡುತ್ತಾನೆ. ಎಂದರೆ ಅವರನ್ನು ರಕ್ಷಿಸುತ್ತಾನೆ. ಇಂದ್ರನು ದ್ಯುಲೋಕಕ್ಕೂ (ಸ್ವರ್ಗಕ್ಕೂ) ಪೃಥಿವಿಗೂ ಎರಡು ಲೋಕಗಳಿಗೂ ರಾಜನು (ಪ್ರಭುವು) ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಸುಮತ್ ॥೯೭॥

ಸುಮತ್ಸ್ವಯಮಿತ್ಯರ್ಥಃ । "ಉಪ ಪ್ರಾಗಾತ್ಸುಮನ್ಮಧಾಯಿ ಮನ್ಮ"
ಉಪಪ್ರೈತು ಮಾಂ ಸ್ವಯಂ ಯನ್ಮೇ ಮನೋಽಧ್ಯಾಯಿ ಯಜ್ಞೇ–
ನೇತ್ಯಾಶ್ವಮೇಧಿಕೋ ಮಂತ್ರಃ ॥೩॥

ಉದಾಹರಣೆಯ ಋಕ್ಕು—

**ಉಪ ಪ್ರಾಗಾತ್ಸು ಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।**
**ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥**

(ಋ. ಸಂ. ೧–೧೬೨–೭)

ಇದರ ಅರ್ಥವು—

ಯಜ್ಞಫಲಭೂತವಾದ ಈ ಅಶ್ವವು ತಾನಾಗಿಯೇ ಸಮೀಪಿಸಿ ನನ್ನಿಂದ ಧೃತವಾಗಿದೆ. ಆದ್ದರಿಂದ ಇದು ದೇವತೆಗಳ ಇಷ್ಟಾರ್ಥಗಳನ್ನು ನೆರವೇರಿಸಲು ಸಮೀಪಿಸಲಿ. ಯಜ್ಞಾರ್ಥವಾಗಿ ಬಂದುದೂ ಪುಷ್ಟವಾದ ಪೃಷ್ಠಭಾಗವುಳ್ಳದ್ದೂ ಶ್ರೇಷ್ಠವಾದ ಬಂಧನವುಳ್ಳದ್ದೂ ಆದ ಅಶ್ವವನ್ನು ಇದನ್ನು ಅಪೇಕ್ಷಿಸುತ್ತಿದ್ದ ದೇವತೆಗಳ ಪೋಷಣಕ್ಕಾಗಿ ನಾವು ಸಿದ್ಧಮಾಡುವೆವು. ಮೇಧಾವಿಗಳಾದ ಋತ್ವಿಕ್ಕುಗಳೂ ಸಹ ನಮ್ಮ ಕರ್ಮವು ಶ್ರೇಷ್ಠವಾಗಿದೆಯೆಂದು ಅನುಮೋದಿಸಿ ತೃಪ್ತಿಯನ್ನು ಸೂಚಿಸಲಿ.

**ಸುಮತ್—ಸುಮತ್ಸ್ವಯಮಿತ್ಯರ್ಥಃ** (ನಿ-೬-೨೨) ಎಂಬ ನಿರುಕ್ತಕಾರರ ವಾಕ್ಯವನ್ನುದಹರಿಸಿ ಸಾಯಣರು ಈ ಪದಕ್ಕೆ ತಾನಾಗಿಯೇ ಎಂಬರ್ಥವನ್ನು ಮಾಡಿದ್ದಾರೆ. ಫಲವು ತಾನಾಗಿಯೇ ಒದಗಿ ಬರಲಿ ಎಂಬುದರಲ್ಲಿ ತಾತ್ಪರ್ಯ. **ಸುಮತ್** ಶಬ್ದಕ್ಕೆ **ಸ್ವಯಂ** ಎದರೆ ತನ್ನಷ್ಟಕ್ಕೆ ತಾನಾಗಿಯೇ ಎಂಬ ಅರ್ಥಮಾತ್ರವಲ್ಲದೆ **ಕಲ್ಯಾಣಾಃ ; ಶೋಭನ** ಅಥವಾ **ಭದ್ರ** ಎಂಬರ್ಥಗಳೂ ಇವೆ. ಇದನ್ನು ಉದಾಹರಣೆಗಳೊಡನೆ ಹಿಂದೆ ವಿವರಿಸಿದೆ

**ಮನ್ಮ—ಮನನೀಯ** ಎಂದರೆ ಧ್ಯಾನಾರ್ಹವಾದುದು ಎಂದರ್ಥ. **ಮನ್ಮ**ಶಬ್ದಕ್ಕೆ ಮನಸ್ಸಿನ ಇಚ್ಛೆಯೆಂದು ಅವಯವಾರ್ಥವಾದರೂ ಋಕ್ಸಂಹಿತಾವಾಕ್ಯಗಳಲ್ಲಿ ಈ ಪದಪ್ರಯೋಗವು ಶ್ರೇಷ್ಠವಾದ ಅಭಿಲಾಷೆಯನ್ನು ತೋರಿಸುವ ವಸ್ತುವನ್ನು ನಿರ್ದೇಶಿಸುವುದಾಗಿದೆ. ನಿರುಕ್ತಕಾರರು ಇದೇ ಋಕ್ಕನ್ನುದಹರಿಸಿ ಈ ಪದದ ಅರ್ಥವನ್ನು ಮೇಲ್ಕಂಡಂತೆ ವಿವರಿಸಿದ್ದಾರೆ. (ನಿ. ೬. ೨೨) ಈ ಸಂದರ್ಭದಲ್ಲಿ ದುರ್ಗಾಚಾರ್ಯರು ಈ ಪದವನ್ನು ವಿವರಿಸುತ್ತಾ **ಮನ್ಮ—ಮನನೀಯಮರ್ಥಜಾತಂ** । ಆದೃತವಾದ ವಸ್ತುವೆಂದು ಅರ್ಥಮಾಡಿದ್ದಾರೆ. ಆದೃತವಾದ ವಸ್ತುವು ಯಜ್ಞಫಲವಾಗಬಹುದು;

ಸ್ತುತಿಯಾಗಬಹುದು. ಹವಿಸ್ಸಾಗಬಹುದು. ಪ್ರಕೃತವಾದುದೂ ಧ್ಯಾನಾರ್ಹವಾದುದೂ ಆದ ಫಲವೆಂದರ್ಥವಾಗುತ್ತದೆ. **ಅಗ್ನಿಃ ಪ್ರತ್ನೇನ ಮನ್ಮನಾ** (ಐ. ಬ್ರಾ. ೧. ೪) ಇತ್ಯಾದಿ ವಾಕ್ಯಗಳಲ್ಲೂ ಸಹ ಈ ಪದದ ಅತಿಶಯವಾದ ಅರ್ಥವನ್ನು ಗಮನಿಸಬಹುದು.

**ವಿಪ್ರಃ ಋಶಯ:**—ಎಂಬುದಕ್ಕೆ ಎರಡುವಿಧವಾದ ಅನ್ವಯವನ್ನು ಮಾಡಿದೆ. ಮೊದಲು **ವಿಪ್ರಾಃ** ಎನ್ನುವುದಕ್ಕೆ ಮೇಧಾವಿಗಳಾದ ಋತ್ವಿಕ್ಕುಗಳೆಂಬ ಪ್ರತ್ಯೇಕವಾದ ಅರ್ಥವನ್ನು ಹೇಳಿ ಅನಂತರ, **ಋಶಯ:** ಎನ್ನುವುದಕ್ಕೆ ವಿಶೇಷಣವವನ್ನಾಗಿ ಮಾಡಿ ಇನ್ನೊಂರ್ಥವನ್ನು ಮಾಡಿದೆ. ಅಲೌಕಿಕವಾದ ಜ್ಞಾನಚಕ್ಷುಸ್ಸುಳ್ಳ ಮೇಧಾವಿಗಳೆಂದರ್ಥ.

**(ಕ್ರಿಮಾರ್ಭವಂ) ಪರೇ ಮಾ ನೋ ಮೇಧ್ಯಸ್ಯಾಶ್ವಸ್ಯ ಸಂಸ್ತವಃ |**
**ಈರ್ಮಾಂತಾಸ ಇತಿ ತ್ವಸ್ಯಾಂ ನೀಯಮಾನಂ ಪ್ರಶಂಸತಿ ||**
(ಬೃಹದ್ದೇವತಾ. ೪–೨೭)

**ಮಾ ನೋ ಮಿತ್ರೋ ವರುಣೋ** (೧-೧೬೨-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ, **ಯದಕ್ರಂದಃ ಪ್ರಥಮಂ ಜಾಯಮಾನಃ** (೧-೧೬೩-೧) ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವೂ **ಮೇಧ್ಯಾಶ್ವದ** ಪ್ರಶಂಸಾರೂಪವಾದ ಕೃತಿಗಳಾಗಿವೆ. **ಈರ್ಮಾಂತಾಸಃ ಸಿಲಿಕಮಧ್ಯಮಾಸಃ** (೧–೧೬೩–೧೦)ಇತ್ಯಾದಿ ಋಕ್ಕುಗಳಲ್ಲಿ ಪುಷ್ಟವಾಗಿ ಬೆಳೆದ ಮೇಧ್ಯಾಶ್ವದ ವರ್ಣನೆಯಿದೆ.

**ಸ್ವಯೂಥ್ಯಾಸ್ತಸ್ಯ ಚೈವಾತ್ರ ಬಹವಃ ಸಂಸ್ತುತಾ ಹಯಾಃ |**
**ನಿಯುಕ್ತಾಶ್ಚಾನಿಯುಕ್ತಾಶ್ಚ ಪ್ರಸಂಗಾದನುಕೀರ್ತಿತಾಃ ||**

ಈ ಮೇಧ್ಯಾಶ್ವದ ಜೊತೆಯಲ್ಲಿ ಸಹಾಯಾರ್ಥವಾಗಿಯಾಗಲಿ ಅಥವಾ ಅಲಂಕಾರಾರ್ಥವಾಗಿಯಾಗಲಿ, ನಿಯುಕ್ತವಾಗಿರಲಿ ಅಥವಾ ಅನಿಯುಕ್ತವಾಗಿರಲಿ, ಇರತಕ್ಕ ಇನ್ನೂ ಇತರ ಅಶ್ವಗಳನ್ನೂ ಸಹ ಆನುಷಂಗಿಕವಾಗಿ ಸ್ತುತಿಸಿದೆ.

**ಸಂಜ್ಞಪ್ತವದಸಂಜ್ಞಪ್ತಂ ಭವಿಷ್ಯಂ ಚಾಹ ಭೂತವತ್ |**
**ತಸ್ಯ ಮಾಂಸಸ್ಯ ಸೂನಸ್ಯ ಚರೂಣಾಂ ಹವಿಷಸ್ತಥಾ ||**
**ವಾಸೋಽಧಿವಾಸಸೋಶ್ಚಾತ್ರ ಯದ್ವಿಶಸ್ಯಂ ಚ ಕೀರ್ತಿತಂ |**
**ಗಾತ್ರಸ್ಯ ಶೂಲಸ್ಥೂಣಾನಾಂ ಸ್ವಧಿತೇಶ್ಚ ಪ್ರಕೀರ್ತನಂ ||**
**ಭಾಗಸ್ಯ ಕೀರ್ತನಂ ಚಾತ್ರ ಇಂದ್ರಾಪೂಷ್ಣೋಃ ಸಹ ಸುತಿಃ |**
(ಬೃ. ದೇ. ೪–೨೯–೩೧)

ಮುಂದೆ ಯಷ್ಟವ್ಯವಾಗಿರುವ ಅಶ್ವವನ್ನು ಆಗಲೇ ಯಜ್ಞಾಹುತಿಯನ್ನಾಗಿ ಅರ್ಪಿಸಿದಂತೆಯೇ ಭಾವಿಸಿ ಈ ಅಶ್ವವನ್ನು ವರ್ಣಿಸಿದೆ ಇದರ **ಮಾಂಸವೂ, ಸೂನವೂ, ಚರುವೂ, ವಾಸಾಧಿವಾಸಗಳೂ, ಗಾತ್ರವೂ, ಶೂಲವೂ, ಸ್ಥೂಣವೂ, ಸ್ವಧಿತಿಯೂ** ಇನ್ನೂ ಇತರ ವಿಶೇಷಗಳೂ ಪ್ರಶಂಸಿತನಾಗಿವೆ. ಈ ಯಜ್ಞಕ್ಕೆ ಸಂಬಂಧಿಸಿದ **ಭಾಗವೂ (ಮೇಕೆಯೂ)** ನಿರ್ದೇಶಿಸಲ್ಪಟ್ಟದೆ. **ಇಂದ್ರನ** ಸ್ತುತಿಯೂ **ಪೂಷನ** ಸ್ತುತಿಯೂ ಅಡಕವಾಗಿದೆ ಎಂಬುದಾಗಿ ಬೃಹದ್ದೇವತಾಕಾರರ ––೧೬೨ ಮತ್ತು ೧–೧೬೩ ನೇ ಸೂಕ್ತಗಳ ವಿವರಣೆಯನ್ನು ಕೊಟ್ಟಿದ್ದಾರೆ. ಪ್ರಕೃತವಾದ ಮೊದಲನೆಯ ಋಕ್ಕಿನಲ್ಲಿಯೂ ಸಹ,

**ಯದ್ವಾಜಿನೋ ದೇವಜಾತಸ್ಯ ಸಪ್ತೇಃ ಪ್ರವಕ್ಷ್ಯಾಮೋ ವಿದಥೇ ವೀರ್ಯಾಣಿ|**

ಈ ಯಜ್ಞದಲ್ಲಿ ದೇವಜಾತವಾದ ಅಶ್ವದ ವೀರ್ಯಕರ್ಮಗಳನ್ನು ಪ್ರಶಂಸಿಸುವೆವು ಎಂದು ಸಂಕಲ್ಪಿಸಿದೆ. ಈ ಯಜ್ಞದ ಸ್ವರೂಪವೇನು, ಅದಕ್ಕಾಗಿ ನಿಯುಕ್ತವಾದ ಅಶ್ವದ ಮಹಿಮೆಯೇನು ? ಉಳಿದ ಯಾಗಗಳಿಗಿಂತಲೂ ಅಧಿಕವಾಗಿ ಈ ಯಜ್ಞದಲ್ಲಿರುವ ವೈಶಿಷ್ಟ್ಯವೇನು ಎಂಬುದನ್ನು ಮೊದಲು ತಿಳಿಯಬೇಕು.

**ರಾಷ್ಟ್ರಂ ವಾ ಅಶ್ವಮೇಧಃರಾಷ್ಟ್ರೇ ಖಲು ವಾ ಏತೇ ವ್ಯಾಯಚ್ಛಂತೇ |**

(ತೈ. ಬ್ರಾ. ೩-೮-೯-೪)

ಅಶ್ವಮೇಧವು ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಆದ ಯಜ್ಞವು. ರಾಜ್ಯವಿಸ್ತರಣೆಗಾಗಿ ಸಾರ್ವಭೌಮ ಪದವಿಗೆ ಮಾತ್ರ ಅರ್ಹನಾಗಿರತಕ್ಕ ರಾಜನು ನೆರವೇರಿಸತಕ್ಕ ಈ ಯಜ್ಞವು ಒಂದು ರಾಷ್ಟ್ರೀಯವಾದ ಪ್ರಾಮುಖ್ಯತೆಯನ್ನು ಹೊಂದಿದೆ. ಪಟ್ಟಾಭಿಷೇಕದ ಕಾಲದಲ್ಲಿ ನೆರವೇರಿಸತಕ್ಕ ಕರ್ಮಗಳಂತೆಯೂ ಅಥವಾ ರಾಜಸೂಯಯಾಗದಂತೆಯೂ ಕೇವಲ ವೈಯಕ್ತಿಕವಾದ ಆಡಂಬರವಲ್ಲದೆ, ಸಣ್ಣ ಸಣ್ಣ ರಾಜರುಗಳಿಂದ ನಿರ್ವಹಿಸಲು ಅಸಾಧ್ಯವಾದುದೂ, ಅನೇಕ ರಾಜಾಧಿರಾಜರಗಳಿಗೆ ಸಾರ್ವಭೌಮನಾಗಿ ತನ್ನ ರಾಜಕೀಯವಾದ ಅಧಿಕಾರವನ್ನು ವ್ಯಕ್ತಪಡಿಸುವವನೂ, ಯಾವ ರಾಜನಿಂದಲೂ ಪರಿಭವವನ್ನು ಹೊಂದದಿರುವವನೂ ಆದ ಚಕ್ರವರ್ತಿಯಿಂದ ಮಾತ್ರ ನಿರ್ವಹಿಸಲ್ಪಡುವ ಈ ಮಹಾಯಜ್ಞವು ಬಹಳ ಶ್ರಮಸಾಧ್ಯವಾದ ಕರ್ಮವಾಗಿದೆ.

**ಪರಾ ವಾ ಏಷ ಸಿಚ್ಯತೇ ||ಯೋಽಬಲೋಽಶ್ವಮೇಧೇನ ಯಜತೇ |**

(ತೈ.ಬ್ರಾ. ೩-೮-೯-೫)

ದುರ್ಬಲನಾದ ಯಾವ ರಾಜನಾಗಲಿ ಅಶ್ವಮೇಧವನ್ನು ತಾನೂ ಮಾಡುತ್ತೇನೆಂದು ಪ್ರಯತ್ನಿಸಿದರೆ ಅವನಿಗೆ ತನ್ನ ಸ್ಥಾನದಿಂದ ಉಚ್ಚಾಟನೆಯಾಗುವುದು ಖಂಡಿತವು.

**ಯದಮಿತ್ರಾ ಅಶ್ವಂ ವಿಂದೇರನ್ | ಹನ್ಯೇತಾಸ್ಯ ಯಜ್ಞಃ |**

(ತೈ. ಬ್ರಾ. ೩-೮-೯-೫)

ಶತ್ರುಗಳು ಇವನ ಅಶ್ವವನ್ನಪಹರಿಸಿ ಇವನ ಯಜ್ಞಕ್ಕೆ ವಿಘ್ನವನ್ನು ತರುತ್ತಾರೆ ಇತ್ಯಾದಿಯಾಗಿ ಈ ಯಜ್ಞವನ್ನು ನಿರ್ವಹಿಸುವವನ ಯೋಗ್ಯತೆಯನ್ನು ನಿಷ್ಕರ್ಷಿಸಿ ಇದರ ರಾಜಕೀಯದ ಸಂಕೇತವನ್ನೂ ರಾಷ್ಟ್ರೀಯಮಹತ್ವವನ್ನೂತಿಳಿಸಿದೆ. ಇಂತಹ ಮಹತ್ಕಾರ್ಯಕ್ಕೆ ಸಾಧ್ಯವಾದ ಅಶ್ವವೂ ಮಹತ್ತಾದ ಗುಣವುಳ್ಳದ್ದೇ ಆಗಿರಬೇಕು.

ಈ ಅಶ್ವವು ವೇಗಗಾಮಿಯಾಗಿರಬೇಕು. ಮುಂಭಾಗದಲ್ಲಿ ಕೃಷ್ಣವರ್ಣವೂ, ಹಿಂಭಾಗದಲ್ಲಿ ಶ್ವೇತವರ್ಣವೂ, ಒಂದು ಕರಿಯ ಚುಕ್ಕಿಯೂ ಇದರ ವಿಶೇಷಗುಣಗಳು. ಫಾಲ್ಗುಣಮಾಸದ ಎಂಟನೆಯ ಅಥವಾ ಒಂಭತ್ತನೆಯ ದಿನ ಈ ಕಲಾಪಗಳು ಆರಂಭವಾಗುವುವು. ರಾಜನು ಆ ರಾತ್ರಿಯನ್ನು ಗಾರ್ಹಪತ್ಯಾಗ್ನಿಯ ಗೃಹದಲ್ಲಿ ಕಳೆಯುವನು. ಮಾರನೆಯ ದಿನ ಅಶ್ವವು ಸಿದ್ಧವಾಗುವುದು. ಅದಕ್ಕೆ ಸ್ನಾನಾದಿಗಳನ್ನು ಮಾಡಿಸುವರು. ಅನಂತರ ನಾಲ್ಕು ಕಣ್ಣುಗಳ ಒಂದು ನಾಯಿಯನ್ನು ಕತ್ತರಿಸಿ ಅಶ್ವದ ಅಡಿಯಲ್ಲಿ ಹೊರಳಾಡುವಂತೆ ಬಿಡುವರು. ಆಗ ಯಜ್ಞಕರ್ತನು “ ಈ ಅಶ್ವವನ್ನು ಎದುರಿಸುವವನು ವರುಣನನ್ನು ಪ್ರತಿಭಟಿಸಿದಂತೆಯೇ ” ಎಂದು ಬರೆದು ಅದರ ಮೇಲೆ ಅಂಟಿಸುವನು. ಅನಂತರ ಅಶ್ವವು ಅಗ್ನಿಯ ವೇದಿಕೆಯ ಹತ್ತಿರ ಬರುತ್ತದೆ. ಸವಿತೃವನ್ನು ಉದ್ದೇಶಿಸಿ ಮೂರುದಿನಗಳು

ಆಹುತ್ಯರ್ಪಣಗಳಾದ ನಂತರ ಅದು ಸ್ವತಂತ್ರವಾಗಿ ಬಿಡಲ್ಪಡುವುದು. ಅದರ ರಕ್ಷಣೆಗಾಗಿ ನೂರು ಇತರ ಅಶ್ವಗಳೂ ನೂರಾರು ಯುವಕರೂ ಅನೇಕ ಯೋಧರೂ ಅದನ್ನು ಹಿಂಬಾಲಿಸುವರು. ಸಾರ್ವಭೌಮನಾಗಿರತಕ್ಕವನ ಅಧೀನ ರಾಜರು ಅದರ ರಕ್ಷಣೆಯಲ್ಲಿ ಜಯಶಾಲಿಗಳಾದರೆ ಅವರಿಗೆ ತಮ್ಮ ತಮ್ಮ ಪ್ರಭುತ್ವವೂ ಸುರಕ್ಷಿತವಾಗಿರುವುದು. ಆ ಅಶ್ವವು ಸಂಚಾರಮಾಡುವ ಕಾಲದಲ್ಲಿ ಯಜ್ಞಕರ್ತನೂ ಅವನ ಪುರೋಹಿತನೂ ಸುವರ್ಣಾಸನದಲ್ಲಿ ಕುಳಿತಿರುವರು. ಹೋತೃವು ಆಖ್ಯಾನಾದಿಗಳನ್ನು ಪಠಿಸುವನು. ಅಧ್ವರ್ಯುವು ಅಶ್ವದ ಜಯಲಾಭಕ್ಕಾಗಿ ಕೆಲವು ಕರ್ಮಗಳನ್ನು ನೆರವೇರಿಸುವನು. ಅದು ಹಿಂತಿರುಗಿದನಂತರ ಯಜ್ಞವು ನೆರವೇರುವುದು.

ಶತಪಥಾದಿಗಳಲ್ಲಿ ಈ ಅಶ್ವಮೇಧದ ಮಹತ್ತ್ವವನ್ನು ಬಹಳವಾಗಿ ಸ್ತುತಿಸಿದೆ. **ಋಷಭ ಏಷ ಯಜ್ಞಾನಾಂ** (ಶ. ಬ್ರಾ. ೧೩–೧–೨–೨) ಯಜ್ಞಗಳಲ್ಲೆಲ್ಲಾ ಇದೇ ಬಲಶಾಲಿಯಾದ ಋಷಭದಂತೆ ಶ್ರೇಷ್ಠವಾದುದೆಂದೂ, **ರಾಜಾ ವಾ ಏಷ ಯಜ್ಞಾನಾಂ ಯದಶ್ವಮೇಧಃ** (ಶ. ಬ್ರಾ. ೧೩–೨–೨–೧) ಯಜ್ಞಗಳಿಗೆಲ್ಲಾ ಇದೇ ರಾಜನೆಂದೂ,

**ಏಷ ವೈ ಪ್ರಭೂರ್ನಾಮ ಯಜ್ಞಃ...............ಏಷ ವೈ ವಿಭೂರ್ನಾಮ ಯಜ್ಞಃ..........ಏಷ ವೈ ವಿಧೃತಿರ್ನಾಮ ಯಜ್ಞಃ। .........—...ಏಷ ವೈ ಪ್ರತಿಷ್ಠಾ ನಾಮ ಯಜ್ಞಃ ॥**

(ಶ. ಬ್ರಾ. ೧೩–೩–೭)

ಇತ್ಯಾದಿಯಾಗಿ ನಾನಾವಿಧವಾಗಿ ಈ ಯಜ್ಞದ ವೈಶಿಷ್ಟ್ಯವನ್ನು ಪ್ರಶಂಸಿಸಿದೆ. ಪ್ರಕೃತದಲ್ಲಿ ಈ ಮಹತ್ತಾದ ಯಜ್ಞಕ್ಕೆ ಸಾಧನವಾದ ಅಶ್ವದ ಸ್ತುತಿಯಿದೆ. ಈ ಅಶ್ವವನ್ನು ಸ್ತುತಿಸುವಾಗ ಏನಾದರೂ ನ್ಯೂನತೆಯಿದ್ದರೆ ಮಿತ್ರಾದಿದೇವತೆಗಳು ಅದನ್ನು ಲಕ್ಷ್ಯವಾಗಿಟ್ಟುಕೊಂಡು ನಮ್ಮನ್ನು ದೂಷಿಸದಿರಲಿ ಎಂದು ಪ್ರಾರ್ಥಿಸಿದೆ.

**ಸಪ್ತೇಃ—**ಸಪ್ತಿಶಬ್ದವು ಅಶ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೨–೨೭) ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸುತ್ತಾ (ನಿ. ೯–೩) **ಸಪ್ತೇಃ** ಎಂಬ ಪದಕ್ಕೆ **ಸರಣಸ್ಯ** ಎಂದು ವಿವರಿಸಿದ್ದಾರೆ. ಈ ಪದಕ್ಕೆ ಕೇವಲ ಚಲಿಸುವುದು ಎಂದರ್ಥವಾದರೂ ಸಹ ಚಲನದಲ್ಲಿ ವೇಗವನ್ನೂ ಶಕ್ತಿಯನ್ನೂ ಸೂಚಿಸುತ್ತದೆ.

**ವಾಜಿನಃ—**ಈ ಪದಕ್ಕೂ ಸಹ ಮೇಲಿನ ಅರ್ಥವೇ ರೂಢಿಯಲ್ಲಿದೆ. ಆದರೆ ಇಲ್ಲಿ ಎರಡು ಪದಗಳೂ ಇರುವುದರಿಂದ ಇದಕ್ಕೆ ಬೇರೆ ಅರ್ಥವಿರಬೇಕು. ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ **ವಾಜ** ಶಬ್ದಕ್ಕೆ ಅನ್ನವೆಂದರ್ಥಮಾಡಿ **ಬಹ್ವನ್ನವತಃ** ಪ್ರಭೂತವಾದ ಅನ್ನವುಳ್ಳ ಅಶ್ವವೆಂದರ್ಥಮಾಡಿದ್ದಾರೆ. ಆದರೆ **ಓವಿಜೀ ಭಯ ಚಲನಯೋಃ** ಎಂದು ಈ ಧಾತುವಿಗೆ **ಭಯ, ಚಲನ** ಎಂಬ ಎರಡರ್ಥಗಳೂ ಇರುವುದರಿಂದ ಇಲ್ಲಿ ಭಯಪಡಿಸತಕ್ಕದ್ದು ಎಂದು ಹೇಳಿದರೂ ಹೇಳಬಹುದು. ನಿರುಕ್ತಕಾರರು **ಉತ ಸ್ಯ ವಾಜೀ ಕ್ಷಿಪಣಿಂ ತುರಣ್ಯತಿ** (ಋ. ಸಂ. ೪–೪೦–೪) ಎಂಬ ಋಕ್ಕನ್ನುದಹರಿಸಿ **ವಾಜೀ ವೇಜನವಾನ್** ಎಂದು ವಿವರಿಸಿರುವುದಕ್ಕೆ ದುರ್ಗಾಚಾರ್ಯರು **ಭಯವಾನ್ ಪರೇಭ್ಯೋ ಭಯದಾತಾ ಪರೇಷಾಂ ಹಿ ತಂ ದೃಷ್ಟ್ವಾ ಭಯಮುತ್ಪದ್ಯತೇ—**ಈ ಅಶ್ವದ ವೇಗದ ಶಕ್ತಿಯನ್ನು ನೋಡಿ ಇತರರಿಗೆ ಭಯವುಂಟಾಗುತ್ತದೆ. ಭಯಜನಕವಾದ ಅಶ್ವವು ಎಂದು ತಾತ್ಪರ್ಯವೆಂದು ಹೇಳಿದ್ದಾರೆ. **ಸಪ್ತಿ, ವಾಜೀ** ಎಂಬ ಎರಡು ಪದಗಳೂ ಸಹ ತೈತ್ತಿರೀಯ ಸಂಹಿತೆಯಲ್ಲಿ ಒಟ್ಟಿಗೆ ಪ್ರಯೋಗಿಸಲ್ಪಟ್ಟು,

**ಅರ್ವಾಸಿ ಸಪ್ತಿರಸಿ ವಾಜ್ಯಸಿ** (ತೈ. ಸಂ. ೧–೭–೮) ಎಂದು ಅಶ್ವದ ಸ್ವರೂಪವನ್ನು ವರ್ಣಿಸುವಾಗ **ಸಪ್ತಿ** ಶಬ್ದಕ್ಕೆ **ಸಂಗ್ರಾಮೇಷು ಸಹಸಾ ಸಮವೈತಿ** (ಷಚ ಸಮವಾಯೇ) ನಿಮಿಷ ಮಾತ್ರದಲ್ಲಿ (ಸಂಗ್ರಾಮ ಭೂಮಿಗೆ) ಸೇರತಕ್ಕ **ಶಕ್ತಿ**ಯುಳ್ಳ

ದ್ದೆಂದೂ, **ವಾಜೀ** ಎಂಬುದಕ್ಕೆ **ವೇಗವಾನ್, ಅನ್ನವಾನ್** ವಾ ಎಂದು ಸಹ ವಿವರಿಸುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥಮಾಡಬಹುದು.

**ದೇವಜಾತಸ್ಯ**—ಈ ಪದಕ್ಕೆ ಎರಡು ವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ, ಬಹುದೇವತಾ **ಸ್ವರೂಪೇಣೋತ್ಪನ್ನಸ್ಯ । ಉಷಾಧಿನಾಮಸ್ಯ ಶಿರ ಆದ್ಯವಯವತ್ವಾದಿತಿ ಭಾವಃ । ಉಷಸ್ಸು ಸೂರ್ಯ** ಇತ್ಯಾದಿ ದೇವತೆಗಳು ಈ ಅಶ್ವದ ಅವಯವಗಳೆಂದು ಹೇಳಿರುವುದರಿಂದ ಈ ಅರ್ಥವೂ ಅಥವಾ ಎರಡನೆಯದಾಗಿ **ದೇವೇಭ್ಯೋ ಜಾತಸ್ಯ ಗಂಧರ್ವ ಕುಲೇ ಉತ್ಪನ್ನತ್ವಾತ್ ।** ದೇವತೆಗಳಿಂದ ಗಂಧರ್ವಕುಲದಲ್ಲಿ ಉತ್ಪನ್ನವಾದುದರಿಂದ ಈ ವಿಶೇಷಣವೆಂದೂ ವಿವರಿಸಿದೆ. **ಈ ಎರಡು ವಿಧವಾದ ವಿವರಣೆಗೂ ಪೂರ್ಣವಾದ ಅವಕಾಶವಿದೆ.**

**ಉಷಾ ವಾ ಅಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ ಪ್ರಾಣೋ ವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ । ದ್ಯೌಃ ಪೃಷ್ಠಮಂತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇ ಅವಾಂತರದಿಶಃ ಪರ್ಶವ ಋತವೋಽಂಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಂಸಾನಿ ॥**

(ಶ. ಬ್ರಾ. ೧೦-೬-೪)

(ಬೃ. ಉ. ೧-೧-೧)

ಉಷಸ್ಸೇ ಈ ಯಜ್ಞಾಶ್ವದ ಶಿರಸ್ಸು, ಸೂರ್ಯನೇ ಕಣ್ಣು, ವಾಯುವೇ ಪ್ರಾಣವು, ವೈಶ್ವಾನರಾಗ್ನಿಯೇ ತೆರೆದ ಮುಖವು, ಸಂವತ್ಸರವೇ ದೇಹವು. (ಆತ್ಮಾ) ದ್ಯುಲೋಕವೇ ಪೃಷ್ಠವು, ಅಂತರಿಕ್ಷವೇ ಉದರವು, ಪೃಥಿವಿಯೇ ಅಧೋಭಾಗವು, ದಿಕ್ಕುಗಳೇ ಪಾರ್ಶ್ವಗಳು ಇತ್ಯಾದಿಯಾಗಿ ಈ ಯಜ್ಞಾಶ್ವದ ಸ್ವರೂಪವನ್ನು ವರ್ಣಿಸಿದೆ.

**ದೇವೇಭ್ಯೋ ಜಾತಸ್ಯ ಗಂಧರ್ವಕುಲ ಉತ್ಪನ್ನತ್ವಾತ್ ।** ಎಂಬ ಇನ್ನೊಂದು ಅರ್ಥವಿದೆ. ಈ ಅರ್ಥದಲ್ಲಿ ಅಶ್ವಕ್ಕೂ ದೇವತೆಗಳಿಗೂ ಪರಂಪರಾಸಂಬಂಧವಿದೆ. ದೇವತೆಗಳೊಡನೆ ಸಾಕ್ಷಾತ್ಸಂಬಂಧವಿರುವ ಅಂಶವನ್ನೂ ಸಹ ಅನೇಕಕಡೆ ಹೇಳಿರುವುದರಿಂದ ದೇವಜಾತಸ್ಯ ಎನ್ನುವುದಕ್ಕೆ ಸಾಕ್ಷಾತ್ತಾಗಿ ದೇವತೆಯಿಂದಲೇ ಉತ್ಪನ್ನವಾದ ಎಂದೂ ಹೇಳಬಹುದು.

**ಯತ್ಪ್ರಜಾಪತಿರಾಲಬ್ಧೋಽಶ್ವೋಽಭವತ್ । ತಸ್ಮಾದಶ್ವಃ । ಯತ್ಸದ್ಯೋ ಮೇಧೋಽಭವತ್ । ತಸ್ಮಾದಶ್ವಮೇಧಃ ।**

(ತೈ. ಬ್ರಾ. ೩-೯-೨೨-೧)

ಪಶುರೂಪದಿಂದ ಲಬ್ಧನಾದ ಪ್ರಜಾಪತಿಯು ಒಡನೆಯೇ ಸರ್ವವ್ಯಾಪಿಯಾದ ಅಶ್ವನಾದನು. ಅದೇ ಅಹಸ್ಸಿನಲ್ಲಿಯೇ ಆ ಅಶ್ವವು ಮೇಧರೂಪವಾದ ಯಜ್ಞವಾಯಿತು. ಆದುದರಿಂದ ಅಶ್ವಮೇಧವೆಂಬ ಹೆಸರು ಪ್ರಸಿದ್ಧವಾಗಿದೆ. ಅಲ್ಲದೆ,

**ಹಯೋ ಭೂತ್ವಾ ದೇವಾನವಹದ್ವಾಜೀ ಗಂಧರ್ವಾನರ್ವಾಸುರಾನಶ್ವೋ ಮನುಷ್ಯಾನ್ ಸಮುದ್ರ ಏವಾಸ್ಯ ಬಂಧುಃ ಸಮುದ್ರೋ ಯೋನಿಃ ॥**

(ಬೃ. ಉ. ೧-೧-೨)

ವಿಶ್ವವ್ಯಾಪವಾದ ಈ ಮೇಧ್ಯಾಶ್ವವು **ಹಯದ** ರೂಪದಲ್ಲಿ ದೇವತೆಗಳನ್ನೂ, **ವಾಜಿಯ** ರೂಪದಲ್ಲಿ ಗಂಧರ್ವರನ್ನೂ, **ಅರ್ವ** ರೂಪದಲ್ಲಿ ಅಸುರರನ್ನೂ ಮತ್ತು ಅಶ್ವರೂಪದಲ್ಲಿ ಮಾನವರನ್ನೂ ವಹಿಸುತ್ತದೆ. ಗಂಧರ್ವರಿಗೆ ವಾಸಸ್ಥಾನವಾದ ಅಂತ

ರಿಕ್ಷವೇ ಈ ಅಶ್ವಕ್ಕೆ ಬಂಧುವು ಮತ್ತು ಜನ್ಮಸ್ಥಾನವು. ಇತ್ಯಾದಿಯಾದ ವರ್ಣನೆಗಳ ಆಧಾರದಿಂದ ದೇವಜಾತಸ್ಯ ಎಂಬ ವಿಶೇಷಣಕ್ಕೆ ಮೇಲೆ ಹೇಳಿರುವ ಎರಡನೆಯ ಅರ್ಥವೂ ಸಾಧ್ಯವಾಗುತ್ತದೆ.

**ಋಭುಕ್ಷಾಃ**--ಈ ಪದಕ್ಕೆ ನಿರುಕ್ತಕಾರರೇ ಎರಡರ್ಥವನ್ನು ಹೇಳಿದ್ದಾರೆ. **ಉರುಕ್ಷಯಣಃ ಇಂದ್ರಃ** ಎಂಬ ಎಂದರ್ಥವನ್ನೂ, ಋಭೂನಾಂ ರಾಜಾ ಎಂಬ ಇನ್ನೊಂದರ್ಥವನ್ನೂ ಮಾಡಿದ್ದಾರೆ. ವಿಸ್ತೃತವಾದ ಅಂತರಿಕ್ಷದಲ್ಲಿ ವಾಸ ಮಾಡುವವನು ಎಂದು ಇಂದ್ರನಿಗೆ ವಿಶೇಷಣವಾಗಿಯಾಗಲಿ. ಅಥವಾ ಋಭುಗಳಿಗೆ ಎಂದರೆ ಪ್ರಕಾಶಮಾನರಾದ ದೇವತೆಗಳಿಗೆ ರಾಜನೆಂದಾಗಲಿ ಅರ್ಥವಾಗುತ್ತದೆ. ಅಥವಾ ಸಾಯಣರು ವಿವರಿಸಿರುವಂತೆ **ಮಹನ್ನಾಮಗಳಲ್ಲಿ** ಪಠಿತವಾಗಿರುವುದರಿಂದ (ನಿ. ೩-೧೩) ಮಹಾತ್ಮನಾದ ಇಂದ್ರನೆಂದಾದರೂ ಆಗಬಹುದು,

**ಮಾ ಪರಿಖ್ಯನ್**—ಅವಹೇಳನವನ್ನು ಮಾಡದಿರಲಿ ಎಂದು ಪ್ರಾರ್ಥಿಸಿದೆ. ದೇವತಾತ್ಮಕವಾದ ಈ ಅಶ್ವವನ್ನು ತುಚ್ಛರಾದ ಮಾನವರು ಸ್ತುತಿಸುವುದರಲ್ಲಿ ಔಚಿತ್ಯವಿಲ್ಲವೆಂದು **ಮಿತ್ರಾದಿದೇವತೆಗಳು** ತಿರಸ್ಕರಿಸದೆ ಇರಲಿ ಎಂದರ್ಥ

**ವಿಥಥೇ—ವೇದನಸಾಧನೇ ಯಜ್ಞೇ।** ತಿಳವಳಿಕೆಗೆ ಸಾಧನವಾದ ಯಜ್ಞದಲ್ಲಿ ಎಂದು ಸಾಯಣರು ವಿವರಿಸಿದ್ದಾರೆ. ಆದುದರಿಂದ ಈ ಯಜ್ಞವು ಆಧ್ಯಾತ್ಮಿಕವಾದ ಜ್ಞಾನಸಂಪಾದನೆಗೂ ಸಾಧನವೆಂದು ತಿಳಿಯುತ್ತದೆ. ಈ ಯಜ್ಞಕಾಲದಲ್ಲಿ ಅಧ್ವರ್ಯುವಿಗೂ ಹೋತೃವಿಗೂ ಮತ್ತಿತರ ಋತ್ವಿಕ್ಕುಗಳಿಗೂ ಸಂಬಂಧಿಸಿದಂತೆ **ಬ್ರಹ್ಮೋದ್ಯ** ಸಭೆಯು ನಡೆದು ಅದರಲ್ಲಿ ವಿಶ್ವತತ್ತ್ವಗಳ ವಿಚಾರದಲ್ಲಿ ಚರ್ಚೆಯು ನಡೆಯುವುದು.

> **ಅಪ ವಾ ಏತಸ್ಮಾತ್ । ತೇಜೋ ಬ್ರಹ್ಮವರ್ಚಸಂ ಕ್ರಾಮತಿ ಯೋಽಶ್ವಮೇಧೇನ ಯಜಸೇ ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತ ಆಗ್ನೇಯೋ ವೈ ಹೋತಾ ಬಾರ್ಹಸ್ಪತ್ಯೋ ಬ್ರಹ್ಮಾ ಬ್ರಹ್ಮಾ ಬೃಹಸ್ಪತಿಸ್ತೇಜಶ್ಚೈವಾಸ್ಮಿನ್ಬ್ರಹ್ಮವರ್ಚಸಂ ಚ ಸಮಿಚೀ ಧತ್ತೋ ಯೂಪಮಭಿತೋ ವೇದತೋ ಯಜಮಾನೋ ವೈ ಯೂಪೋ ಯಜಮಾನಮೇವೈತತ್ತೇಜಸಾ ಚ ಬ್ರಹ್ಮವರ್ಚಸೇನ ಚೋಭಯತಃ ಪರಿಧತ್ತಃ ।**
> (ಶ. ಬ್ರಾ. ೧೩-೨-೬-೯)

> **ತೇಜಸಾ ವಾ ಏಷ .... .... .... ಬ್ರಹ್ಮವರ್ಚಸಮೇವಾವರುಂಧೇ ।**
> (ತೈ. ಬ್ರಾ. ೩-೯-೫)

ಇತ್ಯಾದಿ ವಾಕ್ಯಗಳಲ್ಲಿ ಋತ್ವಿಕ್ಕುಗಳಿಗೆ ತಾತ್ತ್ವಿಕವಿಚಾರವಾದ ಚರ್ಚೆಯು ನಡೆದು ಅದು ಜ್ಞಾನಸಾಧನವಾಗುವುದರಿಂದ ಈ ಅಶ್ವಮೇಧವು ನೆರವೇರುವ ಸ್ಥಾನಕ್ಕೆ ವಿವಿಧವೆಂದು ಹೆಸರು ಎಂದು ಸಾಯಣರ ವಿವರಣೆಯಿದೆ. ಈ ವಿಷಯವನ್ನು ಈ ಸೂಕ್ತದ ಮತ್ತು ಮುಂದಿನ ಸೂಕ್ತದ ಉಪಸಂಹಾರದಲ್ಲಿ ಅಶ್ವಮೇಧದ ಸ್ವರೂಪವನ್ನು ಕರ್ಮದ ದೃಷ್ಟಿಯಿಂದಲೂ ವಿವರಿಸುವಾಗ ತಿಳಿಸಲಾಗುತ್ತದೆ. ಆದರೆ ಇಲ್ಲಿ **ವಿದಥ**ಶಬ್ದಕ್ಕೆ ಜ್ಞಾನಸಾಧನವಾದ ಯಜ್ಞವೆಂದರ್ಥಮಾಡಿರುವುದರಿಂದ ಆ ಜ್ಞಾನವಿಷಯವಾದ ಚರ್ಚೆಯ ಸೂಕ್ಷ್ಮವಾದ ಪರಿಚಯವನ್ನು ಮಾಡಿಕೊಳ್ಳಬಹುದು. ಹೋತೃವಿಗೂ ಬ್ರಹ್ಮನಿಗೂ ನಡೆಯತಕ್ಕ ಬ್ರಹ್ಮೋದ್ಯದ ಚರ್ಚೆಯು ಈ ರೀತಿಯಿದೆ.

> **ಕಃ ಸ್ವಿದೇಕಾಕೀ ಚರತೀತಿ । ಅಸೌ ವಾ ಆದಿತ್ಯ ಏಕಾಕೀ ಚರತ್ಯೇಷ ಬ್ರಹ್ಮವರ್ಚಸಂ ಬ್ರಹ್ಮವರ್ಚಸಮೇವಾಸ್ಮಿನ್ಧತ್ತಃ ॥**
> (ಶ. ಬ್ರಾ, ೧೩-೨-೬-೧೦)

ಏಕಾಕಿಯಾಗಿ ಸಂಚರಿಸುವ ವ್ಯಕ್ತಿಯಾರು ? ಎಂಬ ಪ್ರಶ್ನೆಗೆ ಉತ್ತರವಾಗಿ ದೂರದಲ್ಲಿರುವ ಆದಿತ್ಯನು ಏಕಾಕಿಯಾಗಿ ಸಂಚರಿಸುವವನು. ಅವನೇ ಬ್ರಹ್ಮವರ್ಚಸ್ಸು.

**ಕಿಗ್‌ಂಸ್ವಿದಾಸೀದ್ಬೃಹದ್ವಯ ಇತಿ । ಅಶ್ವೋ ವೈ ಬೃಹದ್ವಯ ಆಯುರೇವಾವರುಂಧೇ ।**
(ಶ. ಬ್ರಾ. ೧೩-೨-೬-೧೫)

ಆ ಬೃಹತ್ಪಕ್ಷಿ ಯಾವುದು ಎಂಬ ಪ್ರಶ್ನೆಗೆ ಉತ್ತರವಾಗಿ ಮೇಧ್ಯಾಶ್ವವೇ ಆ ಬೃಹದ್ವಯವು. ಅದು ಆಯುಃಶಕ್ತಿಯನ್ನು ಪಡೆಯುತ್ತದೆ. ಇತ್ಯಾದಿಯಾಗಿ ತಾತ್ತ್ವಿಕವಾದ ಚರ್ಚೆಯು **ಬ್ರಹ್ಮೋದ್ಯದ** ಸ್ವರೂಪವನ್ನು ತಿಳಿಸುತ್ತದೆ. ಈ ರೀತಿಯಾದ ಚರ್ಚೆಯಿಂದ ಅಶ್ವಮೇಧವು ಜ್ಞಾನಸಾಧನವಾದುದರಿಂದ **ವಿಧಥ**ವೆಂಬ ಹೆಸರು. ಇದೇ ವಿಷಯವನ್ನು ಬೃಹದಾರಣ್ಯಕದಲ್ಲಿ,

**ಏಷ ಹ ವಾ ಅಶ್ವಮೇಧೋ ಯ ಏಷ ತಪತಿ ತಸ್ಯ ಸಂವತ್ಸರ ಆತ್ಮಾಯಮಗ್ನಿರರ್ಕಸ್ತಸ್ಯೇಮೇ-ಲೋಕಾ ಆತ್ಮಾನಸ್ತಾವೇತಾರರ್ಕಾಮೇಧೌ ॥**
(ಬೃ. ಉ. ೧-೨-೭)

ಎಂದು ಅಶ್ವಮೇಧದ ವಿಶ್ವಾತ್ಮಸ್ವರೂಪವನ್ನು ತಿಳಿಸಿದೆ. ಬ್ರಹ್ಮೋದ್ಯದಲ್ಲಿ ಈ ವಿಶ್ವಾತ್ಮದ ಸ್ವರೂಪವನ್ನು ವಿವರಿಸುವ ಚರ್ಚೆಯಿದೆ. ಆದುದರಿಂದ ಬ್ರಹ್ಮೋದ್ಯದ ಚರ್ಚೆಯಿರುವ ಅಶ್ವಮೇಧಕ್ಕೆ ಜ್ಞಾನಸಾಧನವಾದ ವಿದಥವೆಂದು ಹೆಸರು.

ದಿವಿಷ್ಟಿಷು ॥೯೮॥

ದಿವಿಷ್ಟಿಷು ದಿವ ಏಷಣೇಷು ॥

ಉದಾಹರಣೆಯ ಋಕ್ಕು—

**ಸ್ಥೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು ।**
**ರಾಜ್ಞಸ್ತ್ವೇಷಸ್ಯ ಸುಭಗಸ್ಯ ರಾತಿಷು ತುರ್ವಶ್ವೇಷಮನ್ಮಹಿ ॥**
(ಋ. ಸಂ. ೮-೪-೧೯)

ಇದರ ಅರ್ಥವು—

ಕಾಂತಿಯುತನೂ ಉತ್ತಮವಾದ ಧನವುಳ್ಳವನೂ ಕುರಂಗ ಸಂಜ್ಞಕನೂ ಆದ ರಾಜನಿಂದ ನೆರವೇರಿಸಲ್ಪಟ್ಟದೂ ಸ್ವರ್ಗಪ್ರಾಪಕವೂ ಆದ ಯಾಗಕಾಲದಲ್ಲಿ ಆಚರಿಸಿದ ದಕ್ಷಿಣಾರೂಪವಾದ ದಾನಗಳಲ್ಲಿ ಉಳಿದೆಲ್ಲ ಜನರ ನಡುವೆ ನಾವೇ ಪ್ರಭೂತವಾದುದೂ ಶತಸಂಖ್ಯಾಕವಾದುದೂ ಆದ ಧನವನ್ನು ಪಡೆದಿದ್ದೇವೆ.

**ದಿವಿಷ್ಟಿಷು**—ಎಂದರೆ ಸ್ವರ್ಗಪ್ರಾಪ್ತಿಗಾಗಿ ಮಾಡುವ ಸತ್ಕರ್ಮಗಳು.

ಈ ಋಕ್ಕಿನ ಪೂರ್ವಾರ್ಧಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ದಿವಿಷ್ಟಿಷು ದಿವ ಏಷಣೇಷು । ಸ್ಥೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು । ಸ್ಥೂರಃ ಸಮಾಶ್ರಿತಮಾತ್ರೋ ಮಹಾನ್ ಭವತ್ಯಣುರನು ಸ್ಥವೀಯಾಂಸಮುಪಸರ್ಗೋ ಲಾಪ್ತ-ನಾಮಕರಣೋ ಯಥಾ ಸಂಪ್ರತಿ । ಕುರುಂಗೋ ರಾಜಾ ಬಭೂವ ಕುರುಗಮನಾದ್ವಾ ಕುಲ-ಗಮನಾದ್ವಾ । ಕುರುಃ ಕೃಂತತೇಃ । ಕೂರಮಿತ್ಯಪ್ಯಸ್ಯ ಭವತಿ । ಕುಲಂ ಕುಷ್ಣಾತೇರ್ವಿಕುಷಿತಂ ಭವತಿ ॥
(ನಿ. ೬-೨೨)

**ದಿವಿಷ್ಟಿಷು** ಎಂಬ ಶಬ್ದಕ್ಕೆ ಸ್ವರ್ಗವನ್ನು ಹೊಂದುವುದಕ್ಕೆ ಸಾಧನವಾದ (ಯಜ್ಞಾದಿ) ಕರ್ಮಗಳು ಎಂದರ್ಥವು. ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತ ಋಕ್ಕಿನ—**ಸ್ಥೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು** ಎಂಬಪೂರ್ವಾರ್ಧವನ್ನೇ ಉದಾಹರಣೆಯಾಗಿ ತೆಗೆದುಕೊಂಡು|ಅದಕ್ಕೂ ನಿರ್ವಚನವನ್ನು ಹೇಳಿದಾರೆ. ಎಂದರೆ ಕುರಂಗರಾಜನು ಮಾಡಿದ ಯಜ್ಞದಲ್ಲಿ ನೂರಾರು ಅಶ್ವಗಳೂ, ಇತರವಸ್ತುಗಳೂ, ಧನಗಳೂ ಮೊದಲಾದುವುಗಳಿಂದ ಕೂಡಿದ ಅತ್ಯಧಿಕವಾದ ಧನದಾನವು (ಸಂಪತ್ತು) ಎಂದರ್ಥವು. ಸ್ಥೂರವೆಂದರೆ ನಾನಾವಿಧವಾದ ಅನೇಕ ವಸ್ತುಗಳು ಒಟ್ಟಾಗಿ ಸೇರಿ ಆಗುವುದರಿಂದ ಉಂಟಾಗುವ ಬಹಳವಾದ ರಾಶಿಯು ಎಂದರ್ಥವು. ಇಲ್ಲಿ ಅಶ್ವಗಳೇ ಮೊದಲಾದ ಅನೇಕ ವಸ್ತುಗಳು ಸೇರಿ ಆಗಿರುವ ಮಹಾಧನವು ಎಂದರ್ಥವು. ಈ ಶಬ್ದಕ್ಕೆ ವ್ಯತಿರಿಕ್ತವಾಗಿ ಅಣು ಎಂಬ ಶಬ್ದವಿರುವುದು. ಅಣು ಶಬ್ದಕ್ಕೆ ಬಹಳ ಸ್ವಲ್ಪವಾದುದು, ಹೆಚ್ಚಾಗಿರುವುದಿಲ್ಲ ಎಂದರ್ಥವು. ಅಣು ಎಂಬುವುದು ಉಪಸರ್ಗವು. ಉದಾಹರಣೆಯು. ಇಂತಹ ಶಬ್ದ ನಾಮವಾಚಕದಂತೆ ಇದಕ್ಕೆ ಸಂಪೂರ್ಣಾರ್ಥವಿರುವುದು. ಸಂಪ್ರತಿ ಎಂಬ ಶಬ್ದವೇ ಇದಕ್ಕೆ ಲುಪ್ತ ನಾಮಕರಣವೆಂದು ಹೆಸರು. ಕುರುಂಗ ಎಂಬುದು ಒಬ್ಬ ರಾಜನ ಹೆಸರು. ಕುರು ಎಂಬ ಜನಾಂಗದವರ ಮೇಲೆ ದಂಡೆತ್ತಿಹೋಗಿ ಯುದ್ಧಮಾಡಿ ಜಯಶೀಲನಾದುದರಿಂದ ಇವನಿಗೆ **ಕುರುಂಗ** ಎಂಬ ಹೆಸರು ಬಂದಿದೆ. ಅಥವಾ ಶತ್ರುಕುಲಗಳನ್ನು ಜಯಿಸಲು ಯುದ್ಧಕ್ಕಾಗಿ ಹೊರಡುವವನಾದ್ದರಿಂದ ಇವನಿಗೆ ಕುರುಂಗನೆಂಬ ಹೆಸರು. **ಕುರುಃ** ಎಂಬ ಶಬ್ದವು ಕೃತ್ (ಕೃಂತತಿ) ಕತ್ತರಿಸು ಎಂಬಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ. ಕುಲ ಎಂದರೆ ಒಂದು ವಂಶಕ್ಕೆ ಅಥವಾ ಮುಖ್ಯ ಪುರುಷನ ವಂಶಕ್ಕೆ ಸೇರಿದ ಎಂದರ್ಥವು. ಈ ಶಬ್ದವು ಕುಸ್ (ಕುಷ್ಣಾತಿ) ವಿಸ್ತರಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ತುರ್ವಶೇಷು—ತುರ್ವಶು** ಎಂಬ ಹೆಸರೂ ಸಹ ವ್ಯಕ್ತಿನಾಮವಾಗಿಯೂ ಸಂಘನಾಮವಾಗಿಯೂ ಪ್ರಸಿದ್ಧವಾಗಿದೆ. ಇಲ್ಲಿ ಸಾಯಣರು **ಹಿಂಸಕೇಷು ಮನುಷ್ಯೇಷು** ಹಿಂಸಕರಾದ ಮಾನವರ ಗುಂಪಿನಲ್ಲಿ ಎಂದು **ತುರ್ವಶರ** ಸ್ವಭಾವವನ್ನು ಹೇಳಿದ್ದಾರೆ. **ಯದು** ಮತ್ತು **ತುರ್ವಶ** ಎಂಬ ಎರಡು ವ್ಯಕ್ತಿಗಳ ಹೆಸರು ಬರುವ ಕಡೆಗಳಲ್ಲೆಲ್ಲಾ ಅವರಿಬ್ಬರೂ ರಾಜರ್ಷಿಗಳೆಂದೂ ಇಂದ್ರಾಗ್ನಿಗಳ ಅನುಗ್ರಹಕ್ಕೆ ಪಾತ್ರರಾದವರೆಂದೂ ತಿಳಿಯುತ್ತದೆ. **ಯದುಷು, ತುರ್ವಶೇಷು** ಎಂದು ಬಹುವಚನಗಳಲ್ಲಿ ಈ ಎರಡು ಹೆಸರುಗಳೂ ಜೊತೆಯಲ್ಲಿ ಬಂದಿರುವುದು ಋಕ್ಸಂಹಿತೆಯಲ್ಲೆಲ್ಲಾ ಇದೊಂದೇ ಸ್ಥಳದಲ್ಲಿ ಎಂದು ಹೇಳಬಹುದು.

**ಅಗ್ನಿ ನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।**

(ಋ. ಸಂ. ೧-೩೬-೧೮)

**ತ್ವಮಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।**

(ಋ. ಸಂ. ೧-೫೪-೬)

ಇತ್ಯಾದಿ ಋಕ್ಕುಗಳಲ್ಲಿ ಇಬ್ಬರು ರಾಜರ್ಷಿಗಳೂ ಅಗ್ನಿಯ ಮತ್ತು ಇಂದ್ರನ ರಕ್ಷಣೆಯನ್ನು ಪಡೆದುದು ಹೇಳಲ್ಪಟ್ಟಿದೆ. ತುರ್ವಶನ ಮುಖ್ಯವಾದ ಸಾಹಸಕೃತ್ಯವು ಸುದಾಸನೊಂದಿಗೆ ಯುದ್ಧಮಾಡಿದುದು.

**ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ ।**
**ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ ಸಖಾ ಸಖಾಯಮತರದ್ವಿಷೂಚೋಃ ॥**

(ಋ. ಸಂ. ೭-೧೮-೬)

ಎಂಬ ಋಕ್ಕಿನಲ್ಲಿ **ತುರ್ವಶನ** ಯುದ್ಧವು ವರ್ಣಿತವಾಗಿದೆ. ಆದರೆ ತುರ್ವಶನು ಇಲ್ಲಿ ಇಂದ್ರನಿಂದ ಸಹಾಯವನ್ನು ಪಡೆದನೇ ಅಥವಾ ನಿಗ್ರಹವನ್ನು ಪಡೆದನೇ ಎಂಬುದೇ ವಿಶದವಾಗಿಲ್ಲ. ಸಾಯಣರು ಎರಡು ವಿಧವಾದ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದಾಗಿ ತುರ್ವಶನು ಇಂದ್ರನ ಸಖನಾದ ಸುದಾಸನೊಂದಿಗೆ ಯುದ್ಧಕ್ಕೆ ಹೋದಾಗ ಇಂದ್ರನು ತುರ್ವಶನನ್ನು ನಿಗ್ರಹಿಸಿ ತನ್ನ ಸುಹೃತ್ತನ್ನು ರಕ್ಷಿಸಿದನು ಎಂದೂ, ಎರಡನೆಯದಾಗಿ ತುರ್ವಶನಿಗೂ ಅವನ ವಿರೋಧಿಗಳಿಗೂ ಯುದ್ಧವು ಸಂಭವಿಸಿದ ಕಾಲದಲ್ಲಿ ಇಂದ್ರನು ಸಖನಾದ ತುರ್ವಶನಿಗೆ ಸಹಾಯಮಾಡಿದನೆಂದೂ ಹೇಳಿದೆ. ಆದ್ದರಿಂದ ಈ ಋಕ್ಕಿನ ತಾತ್ಪರ್ಯವು ವಿಶದವಾಗಿಲ್ಲ. ಇದೇ ರೀತಿ ಯದು ಮತ್ತು ತುರ್ವಶ ಇಬ್ಬರೂ ಸಹ ಇಂದ್ರನಿಂದ ಪರಾಜಯವನ್ನು ಪಡೆದುದಾಗಿ,

**ಪುರಃ ಸದ್ಯ ಇತ್ಥಾಧಿಯೇ ದಿವೋದಾಸಾಯ ಶಂಬರಂ ।**
**ಅಧ ತ್ಯಂ ತುರ್ವಶಂ ಯದುಂ ॥**

(ಋ. ಸಂ. ೯-೬೧-೨)

ಎಂಬ ಋಕ್ಕಿನಲ್ಲಿ ಹೇಳಿದೆ. ಇದರಿಂದ ಇಂದ್ರನು ತನ್ನ ಸಖನಾದ **ದಿವೋದಾಸ**ನಿಗಾಗಿ ಯದುವನ್ನೂ ತುರ್ವಶನನ್ನೂ ನಿಗ್ರಹಿಸಿದುದಾಗಿ ತಿಳಿಯುತ್ತದೆ. ಆದರೆ,

**ಪ್ರಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ।**

(ಋ. ಸಂ. ೧-೧೭೪-೯)

**ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ ।**
**ಇಂದ್ರೋ ವಿದ್ವಾ ಅಪಾರಯತ್ ॥**

(ಋ. ಸಂ. ೪-೩೦-೧೭)

**ತ್ವಮಪೋ ಯದವೇ ತುರ್ವಶಾಯಾರಮಯಃ ಸುದುಘಾಃ ಪಾರ ಇಂದ್ರ ।**

(ಋ. ಸಂ. ೫-೩೧-೮)

**ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।**

(ಋ. ಸಂ. ೮.೪.೭)

ಇತ್ಯಾದ್ಯನೇಕಋಕ್ಕುಗಳಲ್ಲಿ **ಯದು** ಮತ್ತು **ತುರ್ವಶ**ರಿಬ್ಬರೂ ಇಂದ್ರನಿಂದ ಸಾಕ್ಷಾತ್ತಾಗಿ ಸಹಾಯವನ್ನು ಪಡೆದ ವಿಷಯವು ಹೇಳಿದೆ.

ಬಹುವಚನದಲ್ಲಿ ಈ ಹೆಸರುಗಳು ಬಂದಾಗೆಲ್ಲಾ ಇವೆರಡೂ ಬೇರೆ ಬೇರೆ ಸಂತತಿಯೆಂದೂ ಮತ್ತು ಎರಡು ಗುಂಪುಗಳಿಗೂ ನಿಕಟವಾದ ಸಂಬಂಧವಿತ್ತೆಂದೂ ತಿಳಿಯುತ್ತದೆ.

**ತ್ರಿಂಶಚ್ಛತಂ ವರ್ಮಿಣ ಇಂದ್ರ ಸಾಕಂ ಯವ್ಯಾವತ್ಯಾಂ ಪುರುಹೂತ ಶ್ರವಸ್ಯಾ ।**
**ವೃಚೀವಂತಃ ಶರವೇ ಪತ್ಯಮಾನಾಃ ಪಾತ್ರಾ ಭಿಂದಾನಾ ನ್ಯರ್ಥಾನ್ಯಾಯನ್ ।**
**ಯಸ್ಯ ಗಾವಾವರುಷಾ ಸೂಯವಸ್ಯೂ ಅಂತರೂ ಷು ಚರತೋ ರೇರಿಹಾಣಾ ।**
**ಸ ಸೃಂಜಯಾಯ ತುರ್ವಶಂ ಪರಾದಾದ್ವೃಚೀವತೋ ದೈವತಾತಾಯ ಶಿಕ್ಷನ್ ।**

(ಋ. ಸಂ. ೬-೨೭-೬, ೭)

ಎಂಬ ಋಕ್ಕುಗಳಲ್ಲಿ ಕಾಣುವ ಸನ್ನಿವೇಶಗಳಿಂದ ವೃಚೀವತ್ಸಂತತಿಯೂ ತುರ್ವಶಸಂತತಿಯೂ ಸಹ ಒಂದೇ ವಂಶದ ಎರಡು ಹೆಸರುಗಳೆಂದು Zimmer ಎಂಬ ಪಂಡಿತನು ಅಭಿಪ್ರಾಯಪಟ್ಟಿರುತ್ತಾನೆ. ಆದರೆ ಇಲ್ಲಿ ಆ ಎರಡು ಹೆಸರುಗಳೂ ಒಂದೇ ವಂಶದ ಹೆಸರುಗಳೆಂದು ತಾದಾತ್ಮ್ಯವನ್ನು ಸೂಚಿಸುವುದಿಲ್ಲ. ಆದುದರಿಂದ ಅವೆರಡೂ ಸಮೀಪಸಂಬಂಧವುಳ್ಳ ಬೇರೆ ಬೇರೆ ವಂಶಗಳ ಹೆಸರುಗಳೆಂದು ಹೇಳಬಹುದು ಮತ್ತು

**ಶೋಣಃ ಸಾತ್ರಾ ಸಹ ಈಜೇ ಪಾಂಚಾಲೋ ರಾಜಾ ತದೇತದ್ಗಾಥಯಾಭಿಗೀತಂ ಸಾತ್ರಾಸಹೇ ಯಜಮಾನೇಶ್ವಮೇಧೇನ ತೌರ್ವಶಾಃ ।**

(ಶ. ಬ್ರಾ. ೧೩-೫-೪-೧೬)

ಎಂಬ ಬ್ರಾಹ್ಮಣವಾಕ್ಯದಿಂದ ತುರ್ವಶರು ಪಾಂಚಾಲರ ಸಖರೆಂದೂ ಅವರ ಯಾಗಕಾಲದಲ್ಲಿ ಸಹಾಯ ಮಾಡಿದರೆಂದೂ ತಿಳಿಯುತ್ತದೆ. ತುರ್ವಶರ ಯುದ್ಧವನ್ನು ವರ್ಣಿಸುವಾಗ **ಪರುಷ್ಣೀ** ನದಿಯನ್ನು ದಾಟಿದರೆಂದೂ (ಋ. ಸಂ. ೭-೧೮) ಸೂಚಿಸಿದೆ. ಆದರೆ ಯಾವ ದಿಕ್ಕಿನಿಂದ ಎನ್ನುವುದು ಸರಿಯಾಗಿ ತಿಳಿಯುವುದಿಲ್ಲ. ಇತರ ಆಧಾರಗಳಿಂದ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ದಾಟಿದರೆಂದು ಹೇಳಬಹುದು. ಯದುಗಳಿಗೂ ಇವರಿಗೂ ಇರತಕ್ಕ ಸಂಬಂಧವಾವುದೆಂಬುದನ್ನೂ ಸರಿಯಾಗಿ ಹೇಳಲು ಆಗುವುದಿಲ್ಲ.

" ಸ್ಥೂರಂ ರಾಧಃ ಶತಾಶ್ವಂ ಕುರುಙ್ಗಸ್ಯ ದಿವಿಷ್ಟಿಷು "। ಸ್ಥೂರಃ ಸಮಾಶ್ರಿತಮಾತ್ರೋ ಮಹಾನ್ ಭವತ್ಯಣುರನು ಸ್ಥವೀಯಾಂಸ-ಮುಪಸರ್ಗೋ ಲುಪ್ತನಾಮಕರಣೋ ಯಥಾ ಸಂಪ್ರತಿ ॥ ಕುರುಙ್ಗೋ ರಾಜಾ ಬಭೂವ ಕುರುಗಮನಾದ್ವಾ ಕುಲಗಮ-ನಾದ್ವಾ । ಕುರುಃ ಕೃನ್ತತೇಃ । ಕೂರಮಿತ್ಯಪ್ಯಸ್ಯ ಭವತಿ । ಕುಲಂ ಕುಷ್ಣಾತೇರ್ವಿಕುಷಿತಂ ಭವತಿ ॥೪॥

**ಸ್ಥೂರಂ** ಎಂದರೆ ಬಹಳ, ಅಧಿಕವಾದ. **ರಾಧಃ**—ಧನವು, ಐಶ್ವರ್ಯವು **ಅಣು**—ಸ್ವಲ್ಪ, ಸಣ್ಣದಾದ, ಹೆಚ್ಚಾಗಿಲ್ಲದ; ಈ **ಅಣು** ಎಂಬ ಉಪಸರ್ಗವು **ಸಂಪ್ರತಿ** ಎಂಬ ಶಬ್ದದಲ್ಲಿ ಲೋಪವಾಗಿರುವಂತೆ ಅನೇಕಕಡೆ ಲುಪ್ತವಾಗಿರುವುದು **ಕುರುಂಗ**—ಎಂಬುದು ಒಬ್ಬ ರಾಜನ ಹೆಸರು. **ಕುರು** ಎಂಬ ಜನಾಂಗದವರನ್ನು ಜಯಸಿದ್ದರಿಂದ ಈ ರಾಜನಿಗೆ ಈ ಹೆಸರು ಬಂದಿತು. ಅಥವಾ ತನ್ನ ಶತ್ರುಗಳನ್ನು ಜಯಿಸಿ ಓಡಿಸಿದ್ದರಿಂದ ಈ ಹೆಸರು ಬಂದಿತು **ಕುರು** ಎಂಬ ಶಬ್ದವು ಕತ್ತರಿಸು ಎಂಬರ್ಥವುಳ್ಳ **ಕೃಂತತಿ** ಧಾತುವಿನಿಂದ ನಿಷ್ಪನ್ನವಾಗಿದೆ ಅಥವಾ **ಕ್ರೂರ** ಎಂಬ ಶಬ್ದವೂ ಇದೇ ಧಾತುವಿನಿಂದ ನಿಷ್ಪನ್ನವಾಗಿದೆ. **ಕುಲಂ** (ವಂಶ, ಕುಲ) ಎಂಬ ಶಬ್ದವು ಕಲಸು, ಸೇರಿಸು ಎಂಬರ್ಥವುಳ್ಳ **ಕುಷ್ಣಾತಿ** ಧಾತುವಿನಿಂದ ನಿಷ್ಪನ್ನವಾಗಿದೆ.

ದೂತಃ ॥೯॥

ದೂತೋ ವ್ಯಾಖ್ಯಾತಃ ॥೫॥

**ದೂತಃ**-ಒಬ್ಬರ ಸಂದೇಶವನ್ನು ಒಯ್ದು ಮತ್ತೊಬ್ಬರಿಗೆ ತಲಪಿಸುವವನು. **ದೂತ** ಎಂಬ ಶಬ್ದವು ವೇಗವಾಗಿ ಹೋಗು, ಶೀಘ್ರವಾಗಿ ನಡೆ ಎಂಬರ್ಥವುಳ್ಳ ಜವತಿಧಾತುವಿನಿಂದಾಗಲಿ, ದ್ರವತಿಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದವನ್ನು ಹಿಂದೆಯೇ (ನಿರು. ಅಧ್ಯಾಯ ೫ ಖಂಡ ೧) ವಿವರಿಸಲಾಗಿದೆ.

ಜಿನ್ವತಿ॥೧೦೦॥

ಜಿನ್ವತಿಃ ಪ್ರೀತಿಕರ್ಮಾ। 'ಭೂಮಿಂ ಪರ್ಜನ್ಯಾ ಜಿನ್ವನ್ತಿ ದಿವಂ ಜಿನ್ವನ್ತ್ಯ ಗ್ನಯಃ" । ಇತ್ಯಪಿ ನಿಗಮೋ ಭವತಿ ॥೬॥೨೨॥

**ಜಿನ್ವತಿಃ—ಪ್ರೀತಿಕರ್ಮಾ** ಜಿನ್ವತಿ ಎಂದರೆ ಪ್ರೀತಿಸುವುದು, ತೃಪ್ತಿಗೊಳಿಸುವುದು, ಉತ್ಸಾಹಗೊಳಿಸುವುದು ಎಂದರ್ಥವು. ಈ ಶಬ್ದದ ವಿವರಣೆಯನ್ನು ಮುಂದೆ (ನಿರುಕ್ತ. ಅಧ್ಯಾಯ. ೭ ಖಂಡ ೨೩)ಮಾಡಲಾಗುವುದು.

ಉದಾಹರಣೆಯ ಋಕ್ಕು—

**ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।**
**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥**

(ಋ. ಸಂ. ೧-೧೬೪-೫೧)

ಇದರ ಅರ್ಥವು—

ಏಕರೂಪವಾದ ಉದಕವು ಗ್ರೀಷ್ಮಕಾಲದ ದಿನಗಳಲ್ಲಿ ಊರ್ಧ್ವಮುಖವಾಗಿ ಅಂತರಿಕ್ಷಕ್ಕೆ ಹತ್ತುತ್ತದೆ. ಮಳೆಗಾಲದ ದಿನಗಳಲ್ಲಿ ಅಂತರಿಕ್ಷದಿಂದ ಅಧೋಮುಖವಾಗಿ ಭೂಮಿಯ ಮೇಲೆ ಸುರಿಯುತ್ತವೆ. ಪ್ರಪಂಚಕ್ಕೆ ಸಂತೃಪ್ತಿಯನ್ನುಂಟು ಮಾಡುವ ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ. ಆಹವನೀಯಾದ್ಯಗ್ನಿಗಳು ದ್ಯುಲೋಕವನ್ನು ಅಥವಾ ದ್ಯುಲೋಕ ದಲ್ಲಿರುವ ದೇವತೆಗಳನ್ನು ತೃಪ್ತಿಗೊಳಿಸುತ್ತವೆ.

**ಭೂಮಿಂ ಪರ್ಜನ್ಯಾ ಜಿನ್ವಂತಿ । ದಿವಂ ಜಿನ್ವಂತ್ಯಗ್ನಯಃ ।** ಸಸ್ಯಾದಿಗಳ ಬೆಳವಣಿಗೆಗೆ ಕಾರಣವಾಗಿ ಭೂಮಿಗೆ ಅನ್ನಸಂಪತ್ತನ್ನೊದಗಿಸುವುದರಿಂದ ಪರ್ಜನ್ಯಗಳು ಭೂಲೋಕದ ಪ್ರಜೆಗಳಿಗೆ ತೃಪ್ತಿಯನ್ನುಂಟುಮಾಡುತ್ತವೆ. ಯಜ್ಞಾಹುತಿ ಗಳನ್ನು ಹೊತ್ತುಕೊಂಡುಹೋಗಿ ದ್ಯುಲೋಕದಲ್ಲಿ ದೇವತೆಗಳಿಗೆ ಹಂಚಿ ಅಗ್ನಿಗಳು ದೇವಲೋಕನಿವಾಸಿಗಳನ್ನು ತೃಪ್ತಿಪಡಿಸು ತ್ತವೆ. ಕೇವಲ ತೃಪ್ತಿಪಡಿಸುವುದೇ ಅಲ್ಲದೆ ಪರ್ಜನ್ಯಾಗ್ನಿಗಳು ಉಭಯಲೋಕನಿವಾಸಿಗಳ ಸ್ಥಿತಿಗಳಿಗೆಲ್ಲಾ ಕಾರಣಗಳಾಗಿವೆ.

**ಜಿನ್ವಂತಿ—ಪ್ರೀಣಯಂತಿ** । ತೃಪ್ತಿಯನ್ನುಂಟುಮಾಡುತ್ತವೆ. **ಜಿನ್ವತಿಃ ಪ್ರೀತಿಕರ್ಮಾ** (ನಿ. ೬-೨೨) ಎಂದು ಈ ಪದವ ವಿಶೇಷಾರ್ಥವನ್ನು ಹೇಳಿ ನಿರುಕ್ತಕಾರರು ಪ್ರಕೃಕವಾದ ಋಕ್ಕನ್ನೇ ಉದಹರಿಸಿದ್ದಾರೆ. ಚೈತನ್ಯದಾಯಿಯೆಂದೂ ಅರ್ಥವಾಗುತ್ತದೆ. ಉಭಯಲೋಕಗಳಿಗೂ ಸಹ ತಮ್ಮ ಆವೃತ್ತಿರೂಪದಿಂದ ಪ್ರಾಣದಾಯಕಗಳಾಗಿರುತ್ತವೆ.

ಪರ್ಜನ್ಯಾಗ್ನಿಗಳ ಸಂಬಂಧವು ಬೀಜಾಂಕುರಗಳ ಸಂಬಂಧವಂತಿವೆ. ಯಜ್ಞಾದಿಗಳಿಂದ ಪರ್ಜನ್ಯವೂ ಪರ್ಜನ್ಯದಿಂದ ಯಜ್ಞವೂ ವೃದ್ಧಿಯಾಗುತ್ತವೆ. ಇವು ಪರಸ್ಪರವಾಗಿ ಅನ್ಯೋನ್ಯಾಶ್ರವನ್ನು ಪಡೆದಿವೆ. ಒಂದಕ್ಕೊಂದು ಹೇತುವಾಗಿದೆ. ಪೃಥಿವ್ಯಂತರಿಕ್ಷಾದಿಲೋಕಗಳ ಸ್ಥಿತಿಗಳೆಲ್ಲವೂ ಈ ಅನ್ಯೋನ್ಯಾಶ್ರಯವನ್ನೇ ನಂಬಿವೆ.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥**

(ಭಗವದ್ಗೀತಾ. ೩-೧೪)

ಯಜ್ಞಾದಿಕರ್ಮಗಳು ನೇರವೇರಬೇಕಾದರೆ ಅನ್ನಸಂಪತ್ತಿನಿಂದ ಮಾತ್ರ ಸಾಧ್ಯ. ಯಜ್ಞಕ್ಕೆ ಮೂಲವಾದ ಅನ್ನವು ಪರ್ಜನ್ಯ ದಿಂದಲೇ ಉತ್ಪನ್ನವಾಗುತ್ತದೆ. ಪರ್ಜನ್ಯವು ಯಜ್ಞದಿಂದ ಮಾತ್ರ ಸಾಧ್ಯವಾಗುತ್ತವೆ. ಈ ವಿಧವಾಗಿ ಪರ್ಜನ್ಯಕ್ಕೂ

ಯಜ್ಞಕ್ಕೂ ಅನ್ಯೋನ್ಯಾಶ್ರಯವಿರುತ್ತದೆ. **ಅಗ್ನಯಃ** ಎಂದರೆ ಆಹವನೀಯಾದಿಯಜ್ಞಾಗ್ನಿಗಳೆಂದರ್ಥ. **ಅಗ್ನಯಃ ಆಹವನೀಯಾದ್ಯಾಃ** ಎಂದು ಸಾಯಣರು ತಿಳಿಸಿದ್ದಾರೆ. ಆದುದರಿಂದ ಪರ್ಜನ್ಯಕ್ಕೂ ಯಜ್ಞಕ್ಕೂ ಇರುವ ಸಂಬಂಧವೇ ಪರ್ಜನ್ಯಕ್ಕೂ ಆಹವನೀಯಾಗ್ನಿಗಳಿಗೂ ಇರುವುದೆಂದರ್ಥ. ಇದೇ ಸಂಬಂಧವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿ-ರಶನಿರಂಗಾರಾ ಹ್ರಾದನಯೋ ವಿಸ್ಫುಲಿಂಗಾಃ ।**

(ಛಾ. ಉ. ೫-೫-೧)

ಪರ್ಜನ್ಯವೇ ಯಜ್ಞಾಗ್ನಿಯು. ವಾಯುವೇ ಅದರ ಸಮಿತ್ತು. ಮೇಘವೇ ಅದರ ಧೂಮವು. ವಿದ್ಯುತ್ತೇ ಅದರ ಜ್ವಾಲೆಯು. ಸಿಡಿಲೇ ಅಂಗಾರಗಳು. ಗುಡುಗುಗಳೇ ಶಬ್ದಗಳು.

**ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷಂ ಸಂಭವಂತಿ ॥**

(ಛಾ. ಉ. ೫-೫-೨)

ಈ ಪರ್ಜನ್ಯರೂಪವಾದ ಅಗ್ನಿಯಲ್ಲಿ ದೇವತೆಗಳು ಸೋಮವನ್ನರ್ಪಿಸುತ್ತಾರೆ. ಇದರ ಫಲವಾಗಿ ವೃಷ್ಟಿಪತನವಾಗುತ್ತದೆ, ಎಂದು ಪರ್ಜನ್ಯಕ್ಕೂ ಯಜ್ಞಾಗ್ನಿಗೂ ತಾದಾತ್ಮ್ಯವನ್ನೇ ಹೇಳಿದೆ. ಪೃಥಿವ್ಯಂತರಿಕ್ಷಗಳ ಮತ್ತು ಪ್ರಜೆಗಳ ಜೀವನಾಧಾರವಾಗಿರುವುದಲ್ಲದೆ, ಪರ್ಜನ್ಯವು ಎರಡು ಲೋಕಗಳ ಸಂಬಂಧವನ್ನೂ ನಿಕಟವಾಗಿ ಬೆಳೆಸುವುದರಲ್ಲಿಯೂ ನಿರತವಾಗಿದೆ.

**ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃಸಂಧಿಃ ಪರ್ಜನ್ಯಃ ಸಂಧಾತಾ । ತದುತಾಪಿ ಯತ್ರೈತದ್ಬಲವದನುದ್ಗೃಹ್ಣನ್ತ್ಸಂದಧದಹೋರಾತ್ರೇ ವರ್ಷತಿ ದ್ಯಾವಾಪೃಥಿವ್ಯೌ ಸಮಧಾ-ತಾಮಿತ್ಯುತಾಪ್ಯಾಹುಃ । ಇತ್ಯಧಿದೈವತಂ । ಅಥಾಧ್ಯಾತ್ಮಂ ।**

(ಐ. ಅರಣ್ಯಕಂ. ೨-೨-೧ ರಿಂದ ೩)

ಪೃಥಿವಿಯು ಪೂರ್ವಾರ್ಧವು. ದ್ಯುಲೋಕವು ಉತ್ತರಾರ್ಧವು. ವೃಷ್ಟಿಯಿಂದ ಇವೆರಡರ ಸಂಬಂಧವುಂಟಾಗುತ್ತದೆ. ಪರ್ಜನ್ಯನೇ ಸಂಬಂಧಕಾರಕನು. ಅಹೋರಾತ್ರವೂ ಎಡಬಿಡದೇ ಪರ್ಜನ್ಯನು ವೃಷ್ಟಿಯನ್ನು ಸುರಿಸಿದ ಪಕ್ಷದಲ್ಲಿ ಆಗ ದ್ಯಾವಾಪೃಥಿವಿಗಳೆರಡೂ ಒಟ್ಟಿಗೆ ಸೇರಿರುವುವು ಎಂದು ತಿಳಿದವರು ಹೇಳುತ್ತಾರೆ. ಈ ರೀತಿ ಉಭಯ ಲೋಕಗಳಿಗೂ ಉಪಕಾರಕನಾದ ಪರ್ಜನ್ಯನ ಸ್ತುತಿಯು ಋಕ್ಸಂಹಿತೆಯಲ್ಲಿ ಬಹಳ ಮಹತ್ತ್ವದಿಂದ ಕೂಡಿದೆ.

**ಅಚ್ಛಾ ವದ ತವಸಂ ಗೀರ್ಭಿರಾಭಿಃ ಸ್ತುಹಿ ಪರ್ಜನ್ಯಂ ನಮಸಾ ವಿವಾಸ।**
**ಕನಿಕ್ರದದ್ವೃಷಭೋ ಜೀರದಾನಂ ರೇತೋ ದಧಾತ್ಯೋಷಧೀಷು ಗರ್ಭಂ ॥**

(ಋ. ಸಂ. ೫-೮೩ ರಿಂದ ೧)

ವೃಷ್ಟಿಕಾರಕನೂ, ಸಸ್ಯೌಷಧ್ಯಾದಿಗಳಲ್ಲಿ ರಸವನ್ನು ತುಂಬತಕ್ಕವನೂ ಆದ ಪರ್ಜನ್ಯನಿಗೆ ಎಲ್ಲರೂ ಕೃತಜ್ಞತೆಯನ್ನರ್ಪಿಸಿ ಅವನನ್ನು ಉತ್ತಮವಾದ ಸ್ತುತಿವಾಕ್ಯಗಳಿಂದ ಪ್ರಶಂಸಿಸಿ, ಎಂದು ಸ್ತುತಿಕಾರನನ್ನುದ್ದೇಶಿಸಿ ಹೇಳಿದೆ.

**ಯತ್ಪರ್ಜನ್ಯ ಕನಿಕ್ರದತ್ಸ್ತನಯನ್ ಹಂಸಿ ದುಷ್ಕೃತಃ ।**
**ಪ್ರತೀದಂ ವಿಶ್ವಂ ಮೋದತೇ ಯತ್ಕಿಂ ಚ ಪೃಥಿವ್ಯಾಮಧಿ ॥**

(ಋ. ಸಂ. ೫-೮೩-೯)

ಎಲೈ ಪರ್ಜನ್ಯನೇ, ನೀನು ಶಬ್ದಮಾಡುತ್ತಲೂ, ಶತ್ರುಗಳನ್ನು ದೂರಕ್ಕೆ ಅಟ್ಟುತ್ತಲೂ ಲೋಕೋಪಕಾರವನ್ನು ಮಾಡುವಾಗ ಚರಾಚರಾತ್ಮಕವಾದ ಲೋಕವೆಲ್ಲವೂ ತನ್ನ ಹರ್ಷವನ್ನು ವ್ಯಕ್ತಪಡಿಸುತ್ತದೆ, ಇತ್ಯಾದಿಯಾಗಿ ಪರ್ಜನ್ಯನಸ್ತುತಿಯಿದೆ.

**ಪರ್ಜನ್ಯಾಃ ಪ್ರೀಣಯಿತಾರೋ ಮೇಘಾಃ।** ತೃಪ್ತಿಯನ್ನುಂಟುಮಾಡತಕ್ಕ ಮೇಘಗಳೆಂದು ಸಾಯಣರು ಅರ್ಥ ಮಾಡಿದ್ದಾರೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ,

**ಪರ್ಜನ್ಯಸ್ತೃಪ್ತೇರಾದ್ಯಂತವಿಪರೀತಸ್ಯ ತರ್ಪಯಿತಾ ಜನ್ಯಃ।**

(ನಿ. ೧೦-೧೦)

ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ತೃಪ್** ಧಾತುವಿನ ಅಕ್ಷರಗಳು ವ್ಯತ್ಯಸ್ತವಾಗಿ ಈ ಪದವು ನಿಷ್ಪನ್ನವಾಗಿದೆ. ಮಾನವರಿಗೆ ಅನುಕೂಲಕಾರಕನಾಗಿ ಅವರಿಗೆ ತೃಪ್ತಿದಾಯಕನಾಗಿರುವನೆಂದರ್ಥ.

**ತೃಪ್ + ಜನ್ಯಃ = ಪೃತ್ + ಜನ್ಯಃ ಪರ್ಜ್ + ಜನ್ಯಃ = ಪರ್ಜನ್ಯಃ ।** ಅಥವಾ ;

**ಪರೋ ಜೇತಾ ವಾ**—ಉತ್ತಮವಾದ ಜೇತೃವೆಂದಾಗಲಿ, **(ಪರಃ + ಜೀ)** ಅಥವಾ ; **ಪರೋ ಜನಯಿತಾ ವಾ**–ಉತ್ತಮವಾದ ಉತ್ಪಾದಕನೆಂದಾಗಲಿ, ಅಥವಾ **ಪ್ರಾರ್ಜಯಿತಾ ವಾ ರಸಾನಾಂ**—ರಸರೂಪವಾದ ಉದಕವನ್ನು ಕೊಡತಕ್ಕವನೆಂದಾಗಲೀ **(ಪ್ರ + ಋಜ್)** ಪರ್ಜನ್ಯಶಬ್ದಕ್ಕೆ ಅರ್ಥವನ್ನು ಹೇಳಬಹುದು. (ನಿ. ೧೦-೧೦) ಎಂದು ತಿಳಿಸಿ ನಿರುಕ್ತಕಾರರು,

**ವಿ ವೃಕ್ಷಾನ್ ಹನ್ತ್ಯುತ ಹಂತಿ ರಕ್ಷಸೋ ವಿಶ್ವಂ ಬಿಭಾಯ ಭುವನಂ ಮಹಾವಧಾತ್ ।**
**ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯಃ ಸ್ತನಯನ್ ಹಂತಿ ದುಷ್ಕೃತಃ ॥**

(ಋ. ಸಂ. ೫-೮೩-೨)

ಎಂಬ ಋಕ್ಕನ್ನುದಹರಿಸಿ **ಪರ್ಜನ್ಯನ** ನಾನಾ ಗುಣಗಳನ್ನು ತಿಳಿಸಿದ್ದಾರೆ. ಪರ್ಜನ್ಯನ ಸ್ವರೂಪವನ್ನು ಬೃಹದ್ದೇವತಾಕಾರರು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದ್ದಾನೆ.

**ಯದಿಮಾಂ ಪ್ರಾರ್ಜಯತ್ಯೇಕೋ ರಸೇನಾಂಬರಜೇನ ಗಾಂ ।**
**ಕಾಲೇಽತ್ರಿಸ್ತಾರ್ವತಶ್ಚರ್ಷಿಃ ತೇನ ಪರ್ಜನ್ಯಮಾಹತುಃ ॥**

(ಬೃ. ದೇ. ೨-೩೭)

ತಾನೊಬ್ಬನೇ ಪೃಥ್ವಿಯನ್ನು ಅಂತರಿಕ್ಷೋತ್ಪನ್ನವಾದ ಉದಕದಿಂದ ತುಂಬುತ್ತಾನಾದ್ದರಿಂದ **ಉರ್ವಶೀ** ಪುತ್ರನಾದ ಅತ್ರಿಋಷಿಯು ಈ ದೇವತೆಯನ್ನು ಪರ್ಜನ್ಯನೆಂದು ಕರೆದು ಸ್ತುತಿಸಿದ್ದಾರೆ.

**ತರ್ಪಯತ್ಯೇಷ ಯಲ್ಲೋಕಾನ್ ಜನ್ಯೋ ಜನಹಿತಶ್ಚ ಯತ್ ।**
**ಪರೋ ಜೇತಾ ಜನಯಿತಾ ಯದ್ವಾಗ್ನೇಯಸ್ತತೋ ಜಗೌ ॥**

(ಬೃ. ದೇ. ೨-೩೮)

ಪ್ರಜೆಗಳಿಗೆ ತೃಪ್ತಿಕಾರಕನಾದುದರಿಂದಲೂ, ಪ್ರಸನ್ನನಾಗಿರುವುದರಿಂದಲೂ, ಪ್ರಜಾಸಖನಾಗಿರುವುದರಿಂದಲೂ ಅಥವಾ ಉತ್ತಮವಾದ ಜೈತೃವಾಗಿರುವುದರಿಂದಲೂ, ಅಥವಾ ಉತ್ಪಾದಕನಾಗಿರುವುದರಿಂದಲೂ ಅಗ್ನಿಪುತ್ರನು ಈ ದೇವತೆಯನ್ನು ಪರ್ಜನ್ಯನೆಂದು ಕರೆದಿದ್ದಾನೆ, ಎಂದು ಪರ್ಜನ್ಯನ ನಾನಾ ಗುಣಗಳನ್ನು ವಿವರಿಸಿದೆ.

ಪರ್ಜನ್ಯನು ಭೂಲೋಕಕ್ಕೆ ಚೈತನ್ಯವನ್ನೂ, ಹರ್ಷವನ್ನೂ ಉಂಟುಮಾಡುವಂತೆ ಅಗ್ನಿಗಳೂ ಸಹ ದ್ಯುಲೋಕಕ್ಕೆ ಚೈತನ್ಯದಾಯಕವಾಗಿಯೂ, ಹರ್ಷದಾಯಕವಾಗಿಯೂ ಇದ್ದಾರೆ. ಅಗ್ನಯಃ—**ಆವಹನೀಯಾದ್ಯಾಃ ಸ್ವೇ ಹುತೇ ಆಹುತ್ಯಾ । ದಿವಂ-ದ್ಯುಲೋಕಸ್ಥಾನ್ ದೇವಾನ್ ಜಿನ್ವಂತಿ-ಪ್ರೀಣಯಂತಿ ।** ತಮ್ಮಲ್ಲಿ ಅರ್ಪಿಸಿದ ಆಹುತಿಗಳಿಂದ ಆಹವನೀಯಾದ್ಯಗ್ನಿಗಳು ದ್ಯುಲೋಕಸ್ಥರಾದ ದೇವತೆಗಳನ್ನು ತೃಪ್ತಿಪಡಿಸುತ್ತಾರೆಂದು ತಾತ್ಪರ್ಯ. ಅಗ್ನಿಯ ಸ್ವರೂಪವು ನಾನಾ ವಿಧವಾಗಿದೆ. **ಜಾತವೇದಸ್, ದ್ರವಿಣೋದಾಃ, ವೈಶ್ವಾನರ** ಇತ್ಯಾದಿ ರೂಪಗಳಿಂದ ಅಗ್ನಿಯು ವಿಶ್ವವ್ಯಾಪಕನಾಗಿ ತನ್ನ ಮಹತ್ತ್ವವನ್ನು ಪ್ರಕಾಶಪಡಿಸುವುದನ್ನೂ, ನಾನಾಶ್ರುತಿಗಳಲ್ಲಿ ಈ ಅಗ್ನಿಯ ವೈಶ್ವಾನರಾದಿ ರೂಪಗಳನ್ನು ಸ್ತುತಿಸಿರುವುದನ್ನೂ ಹಿಂದೆ ಎಂದರೆ ಋಗ್ವೇದಸಂಹಿತೆಯ ೧೧೧ ನೇ ಭಾಗದಲ್ಲಿ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಗಾರ್ಹಪತ್ಯಾದಿಸ್ವರೂಪಗಳನ್ನು ನಿರ್ದೇಶಿಸಿದೆ. **ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ** ಎಂದು ಯಜ್ಞಾಗ್ನಿಯ ಮೂರು ಪ್ರಭೇದಗಳು ಪ್ರಸಿದ್ಧವಾದವು. ಇವುಗಳ ಸ್ವರೂಪವನ್ನು ತಿಳಿಸುತ್ತಾ ತೈತ್ತಿರೀಯ ಸಂಹಿತೆಯಲ್ಲಿ,

**ಯಥಾ ವೈ ಸಮೃತಸೋಮಾ ಏವಂ ವಾ ಏತೇ ಸಮೃತಯಜ್ಞಾ ಯದ್ದರ್ಶಪೂರ್ಣಮಾಸೌ ಕಸ್ಯ ವಾಹ ದೇವಾ ಯಜ್ಞಮಾಗಚ್ಛಂತಿ ಕಸ್ಯ ವಾ ಬಹೂನಾಂ ಯಜಮಾನಾನಾಂ ಯೋ ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ ಸ ಏನಾಶ್ಶ್ವೋ ಭೂತೇ ಯಜತ ಏತದ್ವೈ ದೇವಾನಾಮಾಯತನಂ ಯದಾಹವನೀಯೋಽನ್ತರಾಗ್ನೀ ಪಶೂನಾಂ ಗಾರ್ಹಪತ್ಯೋ ಮನುಷ್ಯಾಣಾಮನ್ವಾಹಾರ್ಯಪಚನಃ ಪಿತೃಣಾಮಗ್ನಿಂ ಗೃಹ್ಣಾತಿ ಸ್ವ ಏವಾಯತನೇ ದೇವತಾಃ ಪರಿಗೃಹ್ಣಾತಿ ।**

ತೈ. ಸಂ. ೧-೬-೭)

ಸೋಮಯಜ್ಞಗಳಲ್ಲಿ ಸ್ಪರ್ಧೆಯಿರುವಂತೆಯೇ, ದಶಪೂರ್ಣಾದಿಗಳಲ್ಲಿಯೂ ಸ್ಪರ್ಧೆಯಿರುತ್ತದೆ. ಯಾವ ಯಜಮಾನನು ತನ್ನ ಯಜ್ಞವನ್ನು ದೇವತಾತೃಪ್ತ್ಯರ್ಥವಾಗಿಯೇ ನೆರವೇರಿಸುತ್ತಾನೆಯೋ ಆ ಯಜ್ಞವನ್ನೇ ದೇವತೆಗಳು ಸಮೀಪಿಸುವರು. ಈ ಯಜ್ಞಾಗ್ನಿಗಳಲ್ಲಿ, ಪಶ್ವಂತರಗಳಲ್ಲಿರುವ **ಆಹವನೀಯಾಗ್ನಿಯು** ದೇವತೆಗಳಿಗೆ ಆಯತನವು. **ಗಾರ್ಹಪತ್ಯವು** ಮಾನವರಿಗೂ, **ಅನ್ವಾಹಾರ್ಯಪಚನವು** ಪಿತೃಗಳಿಗೂ ಆಯತನವಾಗಿದೆಯೆಂದು ತಿಳಿಸಿ ಅನಂತರ ಆಹವನೀಯವು ದೇವಲೋಕಗಾಮಿಗೆ ಸಹಾಯಕವಾದುದು ಎಂದು ತಿಳಿಸಿದೆ.

**“ ...............ಬ್ರಹ್ಮವಾದಿನೋ ವದಂತಿ ಕಿಂ ಯಜ್ಞಸ್ಯ ಯಜಮಾನ ಇತಿ ಪ್ರಸ್ತರ ಇತಿ ತಸ್ಯ ಕ ಸುವರ್ಗೋ ಲೋಕ ಇತ್ಯಾಹವನೀಯ ಇತಿ ಬ್ರೂಯಾದ್ಯತ್ಪ್ರಸ್ತರಮಾಹವನೀಯೇ ಪ್ರಹರತಿ ಯಜಮಾನಮೇವ ಸುವರ್ಗಂ ಲೋಕಂ ಗಮಯತಿ ॥**

(ತೈ. ಸಂ. ೨-೬-೫)

ಯಜ್ಞಕರ್ತನಿಗೂ ಯಜ್ಞಕ್ಕೂ ಇರುವ ಉಪಕಾರ್ಯೋಪಕಾರಕಸಂಬಂಧವನ್ನು ಈ ವಾಕ್ಯದಲ್ಲಿ ತಿಳಿಸಿ ಆಹವನೀಯಾಗ್ನಿಯನ್ನು ಉಪಾಸನೆಮಾಡಿ ಯಜ್ಞವನ್ನಾಚರಿಸುವವನಿಗೆ ದೇವಲೋಕವು ಸಿದ್ಧವೆಂದು ಹೇಳಿದೆ. ಈ ಆಹವನೀಯಾಗ್ನಿಯು ದೇವಲೋಕಕ್ಕೆ ಸಂಬಂಧಿಸಿದುದು ಮತ್ತು ದೇವತೆಗಳಿಗೆ ತೃಪ್ತಿದಾಯಕವಾದುದು.

**ಆಹವನೀಯಂ ಪರೀತ್ಯ ವಾಚಂ ವಿಸೃಜೇರನ್ಯಜ್ಞೋ ವಾ ಆಹವನೀಯಃ ಸ್ವರ್ಗೋ ಲೋಕ ಆಹವನಿಯೋ ಯಜ್ಞೇನೈವ ತತ್ಸ್ವರ್ಗೇಣ ಲೋಕೇನ ಸ್ವರ್ಗಂ ಲೋಕಂ ಯಂತಿ ॥**

(ಐ. ಬ್ರಾ. ೫-೨೪)

ಆಹವನೀಯಾಗ್ನಿಯ ಪ್ರದಕ್ಷಿಣವನ್ನು ಮಾಡುತ್ತಾ "ಆಹವನೀಯವೇ ಯಜ್ಞವು ; ಆಹವನೀಯವೇ ಸ್ವರ್ಗವು ; ಈ ಆಹವನೀಯಾಗ್ನಿಯ ಉಪಾಸನೆಯಿಂದ ಮಾಡಿದ ಯಜ್ಞದಿಂದಲೇ ಸ್ವರ್ಗಪ್ರಾಪ್ತಿಯಾಗುತ್ತದೆ" ಎಂದು ಪಠಿಸಬೇಕು ಎಂಬ ನಿಯಮವನ್ನು ಐತರೇಯಬ್ರಾಹ್ಮಣದಲ್ಲಿ ತಿಳಿಸಿದೆ.

**ಏಷ ವೈ ಸ ಯಜ್ಞಃ । ಯೇನ ತದ್ದೇವಾ ದಿವಮುಪೋದಕ್ರಾಮನ್ನೇಷ ಆಹವನೀಯೋಽಗ್ನೀ ಯ ಇಹಾಹೀಯುತ ಸ ಗಾರ್ಹಪತ್ಯಃ ॥**

(ಶ. ಬ್ರಾ. ೧-೭.೩-೨೨)

ಆಹವನೀಯವೇ ಯಜ್ಞವು. ಇದರಿಂದಲೇ ದೇವತೆಗಳಿಗೆ ಸ್ವರ್ಗವಾಸವು ಲಬ್ಧವಾಯಿತು.

**ದೇವಯೋನಿರ್ವಾ ಏಷ ಯದಾಹವನೀಯಃ । ತಸ್ಯೈತಾವನ್ಮೃತಪಕ್ಷೌ ಯಾವೇತಾವಭಿತೋಽಗ್ನೀ ತದ್ಯದಾಹವನೀಯೇ ಯಜ್ಞಂ ತನ್ವತೇ ದೇವಯೋನಾವೇವೈತದ್ದೇವೇಭ್ಯೋ ಯಜ್ಞಂ ತನುತ ಉಪ ಹೈನಂ ಪುನರ್ಯಜ್ಞೋ ನಮತಿ ನಾಸ್ಮಾದ್ಯಜ್ಞೋ ವ್ಯವಚ್ಛಿದ್ಯತೇ ಯ ಏವಮೇತದ್ವೇದ ಯಸ್ಯ ವೈವಂ ವಿದುಷ ಏತತ್ಕರ್ಮ ಕ್ರಿಯತೇ ॥**

(ಶ. ಬ್ರಾ. ೧೨-೯-೩-೧೦)

ಆಹವನೀಯವು ದೇವತೆಗಳ ಯೋನಿಯು. ಅದರ ಎಡಬಲಭಾಗದಲ್ಲಿರುವ ಅಗ್ನಿಗಳು ಅದರ ಅಮರ್ತ್ಯವಾದ ಪಕ್ಷಗಳು. ಆಹವನೀಯಾಗ್ನಿಯಲ್ಲಿ ಯಜ್ಞಮಾಡತಕ್ಕವರು ದೇವಯೋನಿಯಲ್ಲಿ ಯಜ್ಞಮಾಡಿದಂತೆಯೇ ಆಗುತ್ತದೆ. ಈ ತತ್ತ್ವವನ್ನು ತಿಳಿದವನು ದೇವತೆಗಳ ತೃಪ್ತಿಗೆ ಕಾರಣನಾಗುತ್ತಾನೆ.

ಹೀಗೆ ಆಹವನೀಯಾದ್ಯಗ್ನಿಗಳ ವೈಯಕ್ತಿಕವಾದ ಸ್ವರೂಪವನ್ನು ಅಧಿದೈವತಪಕ್ಷದಲ್ಲಿ ತಿಳಿಸಿದೆ. ಆಹವನೀಯಾದ್ಯಗ್ನಿಗಳ ಸ್ವರೂಪವನ್ನು ಆಧ್ಯಾತ್ಮಪಕ್ಷದಲ್ಲಿ ವಿವರಿಸುತ್ತಾ ಅವುಗಳೆಲ್ಲವೂ ಪರಬ್ರಹ್ಮತತ್ತ್ವವನ್ನು ಪ್ರತಿಬಿಂಬಿಸುವುವೆಂದು ಛಾಂದೋಗ್ಯೋಪನಿಷತ್ತಿನಲ್ಲಿ ವಿಶದವಾಗಿ ವರ್ಣಿತವಾಗಿದೆ. (ಛಾ. ಉ. ೪-೧೦-೧೪)

ಪ್ರಕೃತವಾದ ಋಕ್ಕಿನಲ್ಲಿ **ದಿವಃ ಜಿನ್ವಂತ್ಯಗ್ನಯಃ** ಎಂದು ದೇವತಾತೃಪ್ತಿಗೆ ಕಾರಣವಾದ ಅಗ್ನಿಯ ದೇವದೂತತ್ವವನ್ನು ಋಕ್ಸಂಹಿತೆಯ ಅನೇಕಕಡೆಗಳಲ್ಲಿ ಸ್ತುತಿಸಿದೆ.

**ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ।**

(ಋ. ಸಂ ೧-೧-೪)

ಎಲೈ ಅಗ್ನಿಯೇ, ನೀನು ಯಾವಯಾವ ಯಜ್ಞದ ಸುತ್ತಲೂ ವ್ಯಾಪಿಸಿದ್ದೀಯೋ ಆ ಯಜ್ಞವೆಲ್ಲವೂ ದೇವತೆಗಳನ್ನು ಸಮೀಪಿಸಿ ಅವರಿಗೆ ತೃಪ್ತಿಯನ್ನುಂಟುಮಾಡುತ್ತದೆ.

**ಮಹಾಂ ಅಸ್ಯಧ್ವರಸ್ಯ ಪ್ರಕೇತೋ ನ ಋತೇ ತ್ವದಮೃತಾ ಮಾದಯಂತೇ ।**
**ಆ ವಿಶ್ವೇಭಿಃ ಸರಥಂ ಯಾಹಿ ದೇವೈರ್ನ್ಯಗ್ನೇ ಹೋತಾ ಪ್ರಥಮಃ ಸದೇಹ ॥**

(ಋ. ಸಂ. ೭-೧೧-೧)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯಿಲ್ಲದೇ ದೇವತೆಗಳಿಗೆ ಹರ್ಷವೂ ತೃಪ್ತಿಯೂ ಸಾಧ್ಯವಿಲ್ಲವೆಂದೂ, ಮತ್ತು ಅವರು ತೃಪ್ತಿಯನ್ನು ಪಡೆಯಬೇಕಾದರೆ ಅಗ್ನಿಯ ಸಹಾಯದ ಅವಶ್ಯಕತೆಯನ್ನು ತಿಳಿಸುತ್ತಾ

ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಂ ।
ತ್ವಯಾ ಮರ್ತಾಸಃ ಸ್ವದಂತ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ ॥
(ಋ. ಸಂ. ೨-೧-೧೪)

ಅಮರ್ತ್ಯರ ತೃಪ್ತಿಗೆ ಅಗ್ನಿಮುಖವೇ ಅತ್ಯಗತ್ಯವೆಂದೂ, ಅಗ್ನಿಮುಖದಿಂದಲೇ ದೇವತೆಗಳು ಆಹುತಿಗಳನ್ನು ಭಕ್ಷಿಸಿ ಹರ್ಷವನ್ನು ಪಡೆಯುವರೆಂದೂ, ಅವನೇ ದೇವತೆಗಳಿಗೆ ಅನ್ನರೂಪನೆಂದೂ ವರ್ಣಿಸಿರುವುದನ್ನು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.

ಇತಿ ದ್ವಾವಿಂಶಃ ಖಂಡಃ

ಇಲ್ಲಿಗೆ ಇಪ್ಪತ್ತೆರಡನೆಯ ಖಂಡವು ಸಮಾಪ್ತವು

---

## ತ್ರಯೋವಿಂಶಃ ಖಂಡಃ

### ಇಪ್ಪತ್ತಮೂರನೆಯ ಖಂಡವು

ಅಮತ್ರೋಽಮಾತ್ರೋ ಮಹಾನ್ ಭವತ್ಯಭ್ಯಮಿತೋ ವಾ । ಮಹಾನ್ ಅಮತ್ರೋ ವೃಜನೇ ವಿರಪ್ಶ್ಯಿತ್ಯಪಿ ನಿಗಮೋ ಭವತಿ । ಸ್ತವೇ ವಜ್ರ್ಯೃಚೀಷಮಃ । ಸ್ತೂಯತೇ ವಜ್ರ್ಯೃಚಾ ಸಮೋಽನರ್ಶರಾತಿಮನ-ಶ್ಲೀಲದಾನಮಶ್ಲೀಲಂ ಪಾಪಕಮಶ್ರಿಮ ದ್ವಿಷಮಂ । ಅನರ್ಶರಾತಿಂ ವಸುದಾಮುಪಸ್ತುಹೀತ್ಯಪಿ ನಿಗಮೋ ಭವತ್ಯನರ್ವಾಪ್ರತ್ಯೃತೋಽ-ನ್ಯಸ್ಮಿನ್ । ಅನರ್ವಾಣಂ ವೃಷಭಂ ಮನ್ದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ । ಅನರ್ವಮಪ್ರತ್ಯೃತಮನ್ಯಸ್ಮಿನ್ ವೃಷ-ಭಂ ಮನ್ದ್ರಜಿಹ್ವಂ ಮೋದನಜಿಹ್ವಮಿತಿ ವಾ ಬೃಹಸ್ಪತಿಂ ವರ್ಧಯ ನವ್ಯಮರ್ಕೈರರ್ಚನೀಯೈಃ ಸ್ತೋಮೈರಸಾಮಿ ಸಾಮಿಪ್ರತಿಷಿದ್ಧಂ ಸಾಮಿ ಸ್ಯತೇಃ । ಅಸಾಮ್ಯೋಜೋ ಬಿಭೃಥಾ ಸುದಾನವಃ । ಅಸುಸ-ಮಾಪ್ತಂ ಬಲಂ ಬಿಭೃತ ಕಲ್ಯಾಣದಾನಾಃ ॥೨೩॥

---

ಅಮತ್ರಃ ॥೧೦೧॥

ಅಮತ್ರೋಽಮಾತ್ರೋ ಮಹಾನ್ ಭವತ್ಯಭ್ಯಮಿತೋ ವಾ । ಮಹಾँ ಅಮತ್ರೋ ವೃಜನೇ ವಿರಪ್ಶಿ ಇತ್ಯಪಿ ನಿಗಮೋ ಭವತಿ ॥

ಉದಾಹರಣೆಯ ಋಕ್ಕು—

**ಮಹಾ್ಁ ಅಮತ್ರೋ ವೃಜನೇ ವಿರಪ್ಶ್ಯು೧ಗ್ರಂ ಶವಃ ಪ್ರತ್ಯತೇ ಧೃಷ್ಣ್ವೋಜನಾಹ**
**ವಿವ್ಯಾಚ ಪೃಥಿವೀ ಚನ್ಯೈನಂ ಯತ್ಸೋಮಾಸೋ ಹರ್ಯಶ್ವಮಮಂದನ್ ॥**
(ಋ. ಸಂ. ೩-೩೬-೪)

ಇದರ ಅರ್ಥವು—

ಅತಿಶಯವಾದ ಸಾಮರ್ಥ್ಯವುಳ್ಳವನೂ, ಯುದ್ಧದಲ್ಲಿ ಶತ್ರುಗಳನ್ನು ಸೋಲಿಸುವವನೂ, ಸರ್ವರಿಂದಲೂ ಸ್ತುತನಾಗುವವನೂ, ಆದ ಇಂದ್ರನಲ್ಲಿ ಭಯಂಕರವಾದ ಕಾಯಶಕ್ತಿಯೂ ಶತ್ರುಧರ್ಷಕವಾದ ಪರಾಕ್ರಮವೂ ವ್ಯಾಪಿಸಿ ರುತ್ತವೆ. ಈರೀತಿ ಪ್ರಭಾವವುಳ್ಳ ಇಂದ್ರನನ್ನು ಯಾವಾಗ ಸೋಮರಸಗಳು ತೃಪ್ತಿಗೊಳಿಸುತ್ತವೆಯೋ ಆಗ ದಾವಾಪೃ ಥಿವಿಗಳೆರಡೂ ಸಹ ಇವನನ್ನೂ ಮೀರಿ ವ್ಯಾಪಿಸಲಾರವು.

**ಅಮತ್ರಃ—ಮಹಾನ್** ದೊಡ್ಡದಾದ, ಇಷ್ಟು ಎಂದು ಪರಿಮಾಣವೇ ಇಲ್ಲದಿರುವ, ಅತ್ಯಂತ ಅಧಿಕವಾದ ಎಂಬರ್ಥವು.

ಋಚೀಷಮಃ ॥ ೧೦೨ ॥

“ ಸ್ತವೇ ವಜ್ರ್ಯೃಚೀಷಮಃ ”। ಸ್ತೂಯತೇ ವಜ್ರ್ಯೃಚಾ ಸಮಃ ॥೨॥

ಉದಾಹರಣೆಯ ಋಕ್ಕು—

**ಇಹ ಶ್ರುತ ಇಂದ್ರೋ ಅಸ್ಮೇ ಅದ್ಯ ಸ್ತವೇ ವಜ್ರ್ಯೃಚೀಷಮಃ ।**
**ಮಿತ್ರೋ ನ ಯೋಜನೇಷ್ವಾ ಯಶಶ್ಚಕ್ರೇ ಅ ಸಾಮ್ಯಾ ॥**
(ಋ. ಸಂ. ೧೦-೨೨-೨)

ಇದರ ಅರ್ಥವು—

ವಜ್ರಾಯುಧಧಾರಿಯೂ ಸ್ತುತಿಗೆ ಅರ್ಹನೂ ಆದ ಯಾವ ಇಂದ್ರನು ಮಿತ್ರನಂತೆ ಸ್ತುತಿಕರ್ಮದಲ್ಲಿ ಅಸಾಧಾರಣ ವಾದ ಅನ್ನವನ್ನು ಒದಗಿಸುವನೋ ಅಂತಹ ಇಂದ್ರನು ಇಲ್ಲಿ ಪ್ರಸಿದ್ಧನಾಗಿ ಈ ಯಾಗದಿನದಲ್ಲಿ ನಮ್ಮಿಂದ ಪ್ರಶಂಸಿ ಸಲ್ಪಡುತ್ತಾನೆ.

**ಋಚೀಷಮಃ—ಋಚಾ ಸಮಃ** ಋಕ್ಕುಗಳು ಎಂದರೆ ಮಂತ್ರಗಳು ಹೇಗೆ ಶ್ರೇಷ್ಠವೋ ಅದರಂತೆ ಇಂದ್ರನ ಗುಣಾ ತಿಶಯಗಳೂ ಶ್ರೇಷ್ಠವೆಂದಭಿಪ್ರಾಯವು ಎಂದರೆ ಸ್ತುತಿಗೆ ಅರ್ಹನಾದವನು.

ಅನರ್ಶರಾತಿಮ್ ॥ ೧೦೩ ॥

ಅನರ್ಶರಾತಿಮನಶ್ಲೀಲದಾನಮಶ್ಲೀಲಂ ಪಾಪಕಮಶ್ರಿಮದ್ವಿಷಮ್ ॥
“ ಅನರ್ಶರಾತಿಂ ವಸುದಾಮುಪಸ್ತುಹಿ ” ಇತ್ಯಪಿ ನಿಗಮೋ ಭವತಿ ॥ ೩ ॥

ಉದಾಹರಣೆಯ ಋಕ್ಕು—

**ಅನರ್ಶರಾತಿಂ ವಸುದಾಮುಪ ಸ್ತುಹಿ ಭದ್ರಾ ಇಂದ್ರಸ್ಯ ರಾತಯಃ ।**
**ಸೋ ಅಸ್ಯ ಕಾಮಂ ವಿಧತೋ ನ ರೋಷತಿ ಮನೋ ದಾನಾಯ ಚೋದಯನ್ ॥**
(ಋ. ಸಂ. ೮-೯೯-೪)

ಇದರ ಅರ್ಥವು—

ಎಲೈ ಸ್ತುತಿಕರ್ತನೇ, ಪಾಪರಹಿತವೂ ಶುದ್ಧವೂ ಆದ ವಸ್ತುಗಳನ್ನು ದಾನಮಾಡುವವನೂ ಧನಪ್ರದನೂ ಆದ ಇಂದ್ರನನ್ನು ಪ್ರಶಂಸಿಸು. ಇಂದ್ರನ ದಾನಗಳು ಕಲ್ಯಾಣಾತ್ಮಕವಾಗಿವೆ. ಅವೇ ಇಂದ್ರನು ತನ್ನ ಮನಸ್ಸನ್ನು ದಾನಕ್ಕಾಗಿ ಪ್ರೇರಿಸುತ್ತಾ ತನ್ನನ್ನು ಸೇವಿಸುವ ಈ ಸ್ತುತಿಕರ್ತನ ಇಚ್ಛೆಯನ್ನು ಭಂಗಪಡಿಸುವುದಿಲ್ಲ.

**ಅನರ್ಶರಾತಿಂ—ಅರ್ಶ** ಎಂದರೆ ಅಶ್ಲೀಲ, ಪಾಪಕರ; ಅನರ್ಶವೆಂದರೆ ಅಶ್ಲೀಲವಲ್ಲದ್ದು, ಪಾಪಕರವಲ್ಲದ್ದು, ಉತ್ತಮವಾದದು. **ರಾತಿಂ** ಎಂದರೆ ದಾನ ಕೊಡುವುದು. ಆದ್ದರಿಂದ ಅನರ್ಶರಾತಿಂ ಎಂದರೆ ಅಶ್ಲೀಲವಲ್ಲದ ಅಥವಾ ಪಾಪಕರವಲ್ಲದ ಅಥವಾ ಶ್ರೇಷ್ಠವಾದ ದಾನವು ಎಂದರ್ಥವು. ಇಂದ್ರನು ಭಕ್ತರಿಗೆ ಕೊಡುವ ಧನಾದಿದಾನವು ಪಾಪಕರವಲ್ಲದ್ದು, ಶ್ರೇಷ್ಠವಾದುದು ಎಂದಭಿಪ್ರಾಯವು.

ಅನರ್ವಾ ||೧೦೪||

ಅನರ್ವಾ ಪ್ರತ್ಯೃತೋಽನ್ಯಸ್ಮಿನ್ || “ ಅನರ್ವಾಣಂ ವೃಷಭಂ ಮನ್ದ್ರಜಿಹ್ವಂ ಬೃಹಸ್ಪತಿಂ ವರ್ಧ್ಯಯಾ ನವ್ಯಮರ್ಕೈಃ । ” ಅನರ್ವಮಪ್ರತ್ಯೃತಮನ್ಯಸ್ಮಿನ್ ವೃಷಭಂ ಮನ್ದ್ರಜಿಹ್ವಂ ಮೋದನಜಿಹ್ವಮಿತಿ ವಾ ||೪||

ಉದಾಹರಣೆಯ ಋಕ್ಕು—

**ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।**
**ಗಾಥಾನ್ಯಃ ಸುರುಚೋ ಯಸ್ಯ ದೇವಾ ಆಶೃಣ್ವಂತಿ ನವಮಾನಸ್ಯ ಮರ್ತಾಃ ||**

(ಋ. ಸಂ. ೧-೧೯೦-೧)

ಇದರ ಅರ್ಥವು—

ಶೋಭನಾತ್ಮಕವಾದ ಕಾಂತಿಯುಳ್ಳವನೂ ಸ್ತುತ್ಯನೂ ಆದ ಯಾವ ಬೃಹಸ್ಪತಿಯು ಪ್ರಶಂಸೆಯನ್ನು ಸ್ತುತಿವಾಕ್ಯಗಳಿಗೆ ನೇತೃಗಳಾದ ದೇವತೆಗಳೂ ಮಾನವರೂ ಘೋಷಿಸಿ ಪಠಿಸುತ್ತಾರೆಯೋ ಅಂತಹ ಸ್ತುತ್ಯನೂ ಸ್ತೋತೃವಿನಲ್ಲಿಯೇ ನಿಯತವಾಗಿರುವವನೂ, ಇಷ್ಟಾರ್ಥಗಳನ್ನು ಸುರಿಸುವವನೂ ಹರ್ಷದಾಯಕವಾದ ವಾಕ್ಯವುಳ್ಳವನೂ ಮಂತ್ರಪಾಲಕನೂ ಆದ ಬೃಹಸ್ಪತಿಯನ್ನು ಪೂಜಾಸಾಧನಗಳಾದ ಮಂತ್ರಗಳಿಂದ ಪ್ರವೃದ್ಧನಾಗುವಂತೆ ಮಾಡು.

**ಅನರ್ವಾಣಂ—ಅಗಂತಾರಂ ಸ್ತೋತುರಧೀನಮಿತ್ಯರ್ಥಃ** । ಸ್ತೋತ್ರಮಾಡುವ ಯಜಮಾನನ ಸಮೀಪವನ್ನು ಬಿಟ್ಟು ಹೊರಟುಹೋಗದಿರುವ ಎಂದರೆ ಸ್ತೋತ್ರಮಾಡುವ ಯಜಮಾನನ ಅಧೀನನಾಗಿರುವ ಎಂದು ಸಾಯಣರು ಅರ್ಥಮಾಡಿದಾರೆ. ಈ ಶಬ್ದಕ್ಕೆ ನಿರುಕ್ತಕಾರರ ಮತದಂತೆ—ಅಪ್ರತ್ಯೃತ: ಅಪ್ರತಿಗತೋಽನ್ಯಸ್ಮಿನ್ ಅನ್ಯಮನಾಶ್ರಿತಃಸ್ವತಂತ್ರ ಇತ್ಯರ್ಥಃ (ನಿ. ೪-೨೭) ಎಂದರೆ ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸದಿರುವವನು, ಸ್ವತಂತ್ರನು ಎಂದರ್ಥವು. ಎರಡು ವಿಧವಾದ ಅರ್ಥಗಳಿಗೂ ಇಲ್ಲಿ ಅವಕಾಶವಿದೆ.

**ವೃಷಭಂ—ಅಪಾಂ ಫಲಾನಾಂ ವರ್ಷಿತಾರಂ** । ವೃಷಭಶಬ್ದನಿಷ್ಪತ್ತಿಯನ್ನು ನಾವು ಋ. ಸಂ. ಭಾಗ ೫ ಪೇಜು 682, ಭಾಗ ೮, ಪೇಜು 168 ಇತ್ಯಾದಿ ಕಡೆಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಪ್ರಕೃತವಾದ ಋಕ್ಕಿನಲ್ಲಿ ಉದಕರೂಪವಾದ

ಫಲಗಳನ್ನು ಸುರಿಸುವವನು ಎಂದರ್ಥವು. ಬೃಹಸ್ಪತಿಯು ವೃಷ್ಟಿಪ್ರದಾನಕ್ಕೆ ಸಹಾಯಕನು ಎಂಬ ವಿಷಯದಲ್ಲಿ ಈ ಸೂಕ್ತದ ಪೀಠಿಕೆಯಲ್ಲಿ ಹೇಳಿರುವ ವಿಷಯವನ್ನು ನೋಡಿ. (ಪೇಜು 301)

**ಮಂದ್ರಜಿಹ್ವಂ—ಮಾದಕವಾಚಂ।** ಮನಸ್ಸಿಗೆ ಹರ್ಷವನ್ನುಂಟುಮಾಡುವ ಮಾತುಗಳನ್ನಾಡುವ ಜಿಹ್ವೆ (ನಾಲಿಗೆ) ಯುಳ್ಳವನು ಎಂದರೆ ಸ್ತೋತ್ರಮಾಡುವವರಿಗೆ ಸಂತೋಷವಾಗುವಂತೆ ಆಹ್ಲಾದಕರವಾದ ಮಾತುಗಳನ್ನಾಡುವವನು ಎಂದರ್ಥವು.

**ಅರ್ಕೈಃ—ಅರ್ಚನಸಾಧನೈರ್ಮಂತ್ರೈಃ ।** ಸ್ತೋತ್ರಮಾಡುವುದಕ್ಕೆ ಸಾಧನವಾದ ಮಂತ್ರಗಳಿಂದ ಎಂದರ್ಥವು. ಸ್ತೋತ್ರಮಾಡಲು ಉಪಯೋಗಿಸುವುದರಿಂದ ಮಂತ್ರಗಳಿಗೆ ಅರ್ಕಗಳೆಂದು ಹೆಸರು. ಅರ್ಕಶಬ್ದಕ್ಕೆ ಯಾಸ್ಕರು—

> **ಅರ್ಕೋ ದೇವೋ ಭವತಿ ಯದೇನಮರ್ಚಂತಿ । ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ ಅರ್ಕಮನ್ನಂಭವತ್ಯರ್ಚಂತಿ ಭೂತಾನಿ । ಅರ್ಕೋ ವೃಕ್ಷೋ ಭವತಿ ಸಂವೃತ್ತಃ ಕಟುಕಿಮ್ನಾ ॥**
> (ನಿ. ೫-೪)

ಎಂದು ನಾಲ್ಕುವಿಧವಾದ ಅರ್ಥವನ್ನು ಹೇಳಿರುವರು—

(1) **ಅರ್ಕೋ ದೇವೋ ಭವತಿ ಯದೇನಮರ್ಚಂತಿ । ತಾವತ್ಸರ್ವ ಏವಾರ್ಕ ಇತ್ಯುಚ್ಯತೇ ಯದ್ಯ-ಸ್ಮಾದೇನಂ ದೇವಂ ಅರ್ಚಂತಿ ಸ್ತೋತಾರಃ ॥** ಅರ್ಕ ಎಂದರೆ ದೇವತೆಯು, ಏಕೆಂದರೆ ಇದರಿಂದ ಭಕ್ತರು ಯಾರನ್ನು ಉಪಯೋಗಿಸುವರೋ ಅಂತಹ ವ್ಯಕ್ತಿ ಅಥವಾ ದೇವನು ಎಂದರೆ, ಭಕ್ತರು ಪೂಜಿಸುವ ವಸ್ತುವಿಗೆ (ದೇವತೆಗೆ) ಅರ್ಕವೆಂದು ಹೆಸರು.

(2) **ಅರ್ಕೋ ಮಂತ್ರೋ ಭವತಿ । ಯದ್ಯಸ್ಮಾತ್ ಅನೇನ ಮಂತ್ರೇಣ ಅರ್ಚಂತಿ ಸ್ತೋತಾರಃ ತಸ್ಮಾ-ದರ್ಕಃ॥** ಅರ್ಕವೆಂದರೆ ಮಂತ್ರವೆಂದೂ ಅರ್ಥವಾಗುವುದು. ಏಕೆಂದರೆ, ಸ್ತೋತ್ರಮಾಡುವವರು ಇದರಿಂದ (ಅರ್ಕದಿಂದ ಅಥವಾ ಮಂತ್ರದಿಂದ) ದೇವತೆಯನ್ನು ಅರ್ಚಿಸುವರು. ಆದುದರಿಂದ ಅರ್ಕಶಬ್ದಕ್ಕೆ ಮಂತ್ರವೆಂದೂ ಹೆಸರು.

(3) **ಅರ್ಕಮನ್ನಂ ಭವತಿ।ತದ್ಧಿ ಅರ್ಚತಿ ಭೂತಾನಿ ಯೋ ಹಿ ಪೂಜ್ಯಃ ತಸ್ಯಾನ್ನಮಪಿ ಸಂಸ್ಕಾರವಿಶೇಷೇಣ ಸಂಸ್ಕೃತಂ ಪೂಜಾಯಾಂ ಕ್ರಿಯತೇ ಪೂಜ್ಯಂ ಚ ಸರ್ವಸ್ಯೈವಾನ್ನಂ।** ಅರ್ಕವೆಂದರೆ ಅನ್ನವೆಂದೂ ಅರ್ಥವಾಗುವುದು. ಅನ್ನವು (ಆಹಾರವು) ಸಮಸ್ತಪ್ರಾಣಿಗಳಿಗೂ ಅವಶ್ಯಕವಾಗಿರುವುದರಿಂದ ಅನ್ನವನ್ನು ಎಲ್ಲರೂ ಆದರದಿಂದ ಗೌರವಿಸಿ ಅಪೇಕ್ಷಿಸುವರು ಎಂದರೆ , ಎಲ್ಲರೂ ಪ್ರೀತ್ಯಾದರಗಳಿಂದ ಗೌರವಿಸಿ ಬಯಸುವುದರಿಂದ ಅರ್ಕಶಬ್ದಕ್ಕೆ ಅನ್ನವೆಂದೂ ಅರ್ಥ-ವಾಗುವುದು.

(4) **ಅರ್ಕೋ ವೃಕ್ಷೋ ಭವತಿ ಯ ಏಷ ಪ್ರಸಿದ್ಧಃ । ಸಂವೃತ್ತಃ ಹಿ ಸಂಗತಃ ಸಂವ್ಯಾಪ್ತಃ ಕಟುಕಿಮ್ನಾ ಕಟುಕಭಾವೇನ ಭವತಿ ॥** ಇನ್ನು ಅರ್ಕಶಬ್ದಕ್ಕೆ ವೃಕ್ಷವೆಂಬ ಹೆಸರು ಪ್ರಸಿದ್ಧವಾಗಿಯೇ ಇದೆ. ಅರ್ಕವೃಕ್ಷವೆಂದರೆ ಎಕ್ಕದ ಗಿಡವೆಂದು ಕರ್ಣಾಟಕ ಭಾಷೆಯಲ್ಲಿ ಹೇಳುವರು. ಇದರ ಸಮಿತ್ತುಗಳನ್ನು ಹೋಮಗಳಲ್ಲಿ ಉಪಯೋಗಿಸುವುದರಿಂದಲೂ, ಇದನ್ನು ಔಷಧಾದಿಗಳಲ್ಲಿ ಬಳಸುವ ರೂಢಿಯಿರುವುದರಿಂದಲೂ ಅರ್ಕವೃಕ್ಷವು ಎಲ್ಲರಿಗೂ ತಿಳಿದ ವಸ್ತುವಾಗಿದೆ. ಇದು ಕಹಿ-ಯಾಗಿರುವುದರಿಂದ ಕಟುಕಿಮ್ನಾ ಎಂದು ಹೇಳುವರು. ಅರ್ಕಶಬ್ದದ ವಿವರಣೆಯ ಉದಾಹರಣೆಗಾಗಿ ಯಾಸ್ಕರು **ಗಾಯಂತಿತ್ವಾ**

(ಋ. ಸಂ. ೧-೧೦-೧) ಎಂಬ ಋಕ್ಕನ್ನು ತೆಗೆದುಕೊಂಡು ಇದರ ನಿರ್ವಚನವನ್ನು ಹೇಳಿರುವರು. ಆ ವಿವರಣೆಯು ಇಲ್ಲಿ ಅಪ್ರಕೃತವು. ಪ್ರಕೃತ ಋಕ್ಕಿನಲ್ಲಿ ಅರ್ಕಶಬ್ದಕ್ಕೆ ಮಂತ್ರವೆಂಬ ಅರ್ಥವನ್ನು ಭಾಷ್ಯಕಾರರು ಸ್ವೀಕರಿಸಿರುವರು.

**ಗಾಥಾನ್ಯಃ**—ಗಾಥಾ ಎಂಬ ಶಬ್ದವು ಶ್ಲೋಕಃ, ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ.೨-೨೩) ಗಾಥಾ ಎಂದರೆ ಸ್ತುತಿರೂಪವಾದ ವಾಕ್ಯೆಂದರ್ಥವು. **ಗಾಥಾ ನಯಂತೀತಿ ಗಾಥಾನ್ಯಃ।** ಇಂತಹ ಸ್ತುತಿರೂಪವಾದ ಮಂತ್ರಗಳಿಗೆ ನಾಯಕರಾದ ದೇವತೆಗಳು ಮತ್ತು ಮಂತ್ರಗಳನ್ನು ಪಠಿಸುವ ಹೋತ್ರಾದಿ ಋತ್ವಿಜರು ಎಂದಭಿಪ್ರಾಯವು.

**ಅಥವಾ ನವಮಾನಸ್ಯ (ಸಂಬಂಧಿನಸ್ತೇ) ಗಾಥಾನ್ಯಃ ಆಶೃಣ್ವಂತಿ ಆಶ್ರಾವಯಂತಿ।** ಎಂಬ ವಾಕ್ಯಕ್ಕೆ ಭಾಷ್ಯಕಾರರು—ಸ್ತೋತ್ರಮಾಡುತ್ತಿರುವ ಯಜಮಾನನ ಸಂಬಂಧಿಗಳಾದ ಹೋತ್ರಾದಿಗಳು ಬೃಹಸ್ಪತಿಯನ್ನು ಮಂತ್ರಗಳನ್ನು ಪಠಿಸಿ ತೃಪ್ತಿಪಡಿಸುತ್ತಾರೆ ಎಂಬ ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುವರು.

ಅಸಾಮಿ ॥೧೦೫॥

ಬೃಹಸ್ಪತಿಂ ವರ್ಧಯ ನವ್ಯಮರ್ಕೈರರ್ಚನೀಯೈಃ ಸ್ತೋಮೈರಸಾಮಿ
ಸಾಮಿ ಪ್ರತಿಷಿದ್ಧಮ್ "ಸಾಮಿ ಸ್ಯತೇಃ॥" ಅಸಾಮ್ಯೋಜೋ
ಬಿಭೃಥಾ ಸುದಾನವಃ ॥ "ಅಸುಸಮಾಪ್ತಂ ಬಲಂ ಬಿಭೃತ
ಕಲ್ಯಾಣದಾನಾಃ" ॥೫॥೨೩॥

**ಅಸಾಮಿ** ಎಂಬ ಶಬ್ದವು ಕೊಲ್ಲು ಎಂಬರ್ಥವಿರುವ **ಸೋ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. **ಅಸಾಮಿ** ಎಂದರೆ ಸಂಪೂರ್ಣವಾದ (ಬಲ) ಎಂದರ್ಥವು.

ಉದಾಹರಣೆಯ ಋಕ್ಕು—

**ಅಸಾಮ್ಯೋಜೋ ಬಿಭೃಥಾ ಸುದಾನವೋಽಸಾಮಿ ಧೂತಯಃ ಶವಃ ।**
**ಋಷಿದ್ವಿಷೇ ಮರುತಃ ಪರಿಮನ್ಯವ ಇಷುಂ ನ ಸೃಜತ ದ್ವಿಷಂ ॥**

(ಋ. ಸಂ. ೧-೩೯-೧೦)

ಇದರ ಅರ್ಥವು—

ಎಲೈ ಮರುತ್ತುಗಳೇ, ನೀವು ಒಳ್ಳೆಯ ದಾನಶೀಲರು, ನಿಮ್ಮ ಬಲವು ಅತಿಶಯವಾದುದು. ಹರಿತವಾದ ಬಾಣವು ಶತ್ರುವನ್ನು ನಾಶಮಾಡಲು ಉಪಯೋಗಿಸಲ್ಪಡುವಂತೆ ಋಷಿಗಳನ್ನು ಹಿಂಸಿಸಿ ದ್ವೇಷಿಸುವ ಶತ್ರುವಿನ ಮೇಲೆ ನಿಮ್ಮ ದ್ವೇಷರೂಪವಾದ ಕೋಪವನ್ನು ಪ್ರಯೋಗಿಸಿ.

**ಇತಿ ತ್ರಯೋವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತಮೂರನೆಯ ಖಂಡವು ಸಮಾಪ್ತವು

---

## ಚತುರ್ವಿಂಶಃ ಖಂಡಃ

### ಇಪ್ಪತ್ತನಾಲ್ಕನೆಯ ಖಂಡವು

ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ । ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್ ॥ ಮಾ ಚುಕ್ರುಧಂ ತ್ವಾಂ ಸೋಮಸ್ಯ ಗಾಲನೇನ ಸದಾ ಯಾಚನ್ನಹಂ ಗಿರಾ ಗೀತ್ಯಾ ಸ್ತುತ್ಯಾ ಭೂರ್ಣಿಮಿವ ಮೃಗಂ ನಂ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷ್ಯತ ಇತಿ ಗಲ್ದಾ ಧಮನಯೋ ಭವನ್ತಿ । ಗಲನಮಾಸು ಧೀಯತೇ । ಆ ತ್ವಾ ವಿಶನ್ತ್ವಿನ್ದವ ಆ ಗಲ್ದಾ ಧಮನೀನಾಂ । ನಾನಾವಿಭಕ್ತೀತ್ಯೈತೇ ಭವತ ಆಗಲನಾ ಧಮನೀನಾಮಿತ್ಯತ್ರಾರ್ಥಃ ॥೨೪॥

---

ಗಲ್ದಯಾ ॥೧೦೬॥

"ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ ॥ ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್ ॥" ಮಾ ಚುಕ್ರುಧಂ ತ್ವಾಂ ಸೋಮಸ್ಯ ಗಾಲನೇನ ಸದಾ ಯಾಚನ್ನಹಂ ಗಿರಾ ಗೀತ್ಯಾ ಸ್ತುತ್ಯಾ ಭೂರ್ಣಿಮಿವ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷ್ಯತ ಇತಿ ॥ ಗಲ್ದಾ ಧಮನಯೋ ಭವನ್ತಿ ಗಲನಮಾಸು ಧೀಯತೇ । ಆ ತ್ವಾ ವಿಶನ್ತ್ವಿನ್ದವ ಆ ಗಲ್ದಾ ಧಮನೀನಾಮ್ ॥ "ನಾನಾವಿಭಕ್ತೀ ತ್ವೇತೇ ಭವತ ಆಗಲನಾಧಮನೀನಾಮಿತ್ಯತ್ರಾರ್ಥಃ ॥೧॥೨೪॥

**ಉದಾಹರಣೆಯ ಋಕ್ಕು—**

**ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ ॥**
**ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್ ॥**

(ಋ. ಸಂ. ೮-೧-೨೦)

**ಇದರ ಅರ್ಥವು—**

ಎಲೈ ಇಂದ್ರನೇ, ನೀನು ಮೃಗರಾಜನಾದ ಸಿಂಹದಂತೆ ಭಯಂಕರನು. ಇಂತಹ ನಿನ್ನನ್ನು ಪದೇ ಪದೇ ಯಾಚಿಸುವುದರಿಂದ ನಿನಗೆ ಕೋಪಬರುವುದು ಸಹಜ. ಆದರೆ ಯಜ್ಞದಲ್ಲಿ ಪ್ರವಿಸತಕ್ಕ ಸೋಮಾರ್ಪಣೆಯಿಂದಲೂ ಸ್ತುತಿಗಳಿಂದಲೂ ಕೂಡಿ ನಿನ್ನನ್ನು ತೃಪ್ತಿಗೊಳಿಸುವುದರಿಂದ ನಿನಗೆ ಕೋಪವುಂಟಾಗದಂತೆ ಮಾಡುತ್ತೇನೆ. ಲೋಕದಲ್ಲಿ ಯಾರು ತಾನೇ ಸರ್ವೇಶ್ವರನಾದ ಇಂದ್ರನನ್ನು ಯಾಚಿಸುವುದಿಲ್ಲ ?

ಸೋಮರಸವು ಹಿಂಡಲ್ಪಟ್ಟಾಗ ಅದನ್ನು ಪಾನಮಾಡಬೇಕೆಂದು ನಿನ್ನನ್ನು ಯಾವಾಗಲೂ ಸ್ತುತಿಗಳಿಂದ, ಗಾನದಿಂದಲೂ, ಪ್ರಾರ್ಥನೆಗಳಿಂದಲೂ ಇತರವಿಧವಾದ ಯಾಚನೆಗಳಿಂದಲೂ ಪ್ರಾರ್ಥಿಸುತ್ತಲೇ ಇರುವುದರಿಂದ ಅದರಿಂದ ನಿನಗೆ ಕೋಪವುಂಟಾಗದಿರಲಿ. ಏಕೆಂದರೆ, ಪ್ರಭುವಾದ ನಿನ್ನನ್ನು ಯಾರು ತಾನೇ ಪ್ರಾರ್ಥಿಸಿ ಯಾಚಿಸುವುದಿಲ್ಲ ?

ಇಲ್ಲ **ಗಲ್ದಾ** ಎಂದರೆ ಪಾತ್ರೆಯು. ಏಕೆಂದರೆ ಹಿಂಡಲ್ಪಟ್ಟ ಸೋಮರಸವನ್ನು ಇದರಲ್ಲಿ ತುಂಬುವುದರಿಂದ ಗಲ್ದಾ ಎಂದರೆ ಪಾತ್ರೆಗಳು ಎಂಬರ್ಥವು ರೂಢಿಯಲ್ಲಿ ಬಂದಿರುವುದು. ಹಿಂಡಲ್ಪಟ್ಟ ಸೋಮರಸವು ನಿನ್ನನ್ನು (ನಿನ್ನ ಉದರಕ್ಕೆ) ಪ್ರವೇಶಿಸಲಿ ಅಥವಾ ಸೋಮವನ್ನು ಶೇಖರಿಸುವ ಪಾತ್ರೆಯಲ್ಲಿ ಬಂದು ಸೇರಲಿ ಎಂಬರ್ಥವುಳ್ಳ **ಆ ತ್ವಾ ವಿಶಂತ್ವಿಂದವ ಆ ಗಲ್ದಾ ಧಮನೀನಾಂ** ಎಂಬ ಶ್ರುತಿವಾಕ್ಯವನ್ನು ಉದಾಹರಣೆಯಾಗಿ ಇಲ್ಲಿ ಕೊಟ್ಟದೆ.

ಗಲ್ದಾ ಮತ್ತು ಧಮನೀ ಎಂಬ ಶಬ್ದಗಳಿಗೆ ಒಂದೇ ವಿಧವಾದ ಅರ್ಥವಿರುವುದು—ಎಂದರೆ ಇವು ಒಂದೇ ಅರ್ಥವನ್ನು ಸೂಚಿಸುವ ಪರ್ಯಾಯ ಶಬ್ದಗಳು. ಈ ಶಬ್ದಗಳಿಗೆ ನಾನಾ ವಿಭಕ್ತಿಗಳಲ್ಲಿ ಪ್ರಯೋಗವಿರುವುದು. ಪ್ರಕೃತ ಋಕ್ಕಿನಲ್ಲಿ ಗಲ್ದಾ ಎಂಬ ಶಬ್ದಕ್ಕೆ ಪಾತ್ರೆಗಳಲ್ಲಿ ಸಂಗ್ರಹಿಸಲ್ಪಟ್ಟಿರುವ ಸೋಮರಸವು ಎಂದರ್ಥವು.

**ಇತಿ ಚತುರ್ವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತನಾಲ್ಕನೆಯ ಖಂಡವು ಸಮಾಪ್ತವು

---

## ಪಂಚವಿಂಶಃ ಖಂಡಃ

### ಇಪ್ಪತ್ತೈದನೆಯ ಖಂಡವು

ನ ಪಾಪಾಸೋ ಮನಾಮಹೇ ನಾರಾಯಾಸೋ ನ ಜಲ್ಹವಃ । ನ ಪಾಪಾ ಮನ್ಯಾಮಹೇ ನಾಧನಾ ನ ಜ್ವಲನೇನ ಹೀನಾ ಅಸ್ತ್ಯಸ್ಮಾಸು ಬ್ರಹ್ಮಚರ್ಯಮಧ್ಯಯನಂ ತಪೋ ದಾನಕರ್ಮೇತ್ಯೃಷಿರವೋಚದ್ ಬಕುರೋ ಭಾಸ್ಕರೋ ಭಯಂಕರೋ ಭಾಸಮಾನೋ ದ್ರವತೀತಿ ವಾ ॥ ॥ ೨೫ ॥

---

ಜಲ್ಹವಃ ॥ ೧೦೭ ॥

“ ನ ಪಾಪಾಸೋ ಮನಾಮಹೇ ನಾರಾಯಾಸೋ ನ ಜಲ್ಹವಃ ।”

ನ ಪಾಪಾ ಮನ್ಯಾಮಹೇ ನಾಧನಾ ನ ಜ್ವಲನೇನ ಹೀನಾಃ । ಅಸ್ತ್ಯಸ್ಮಾಸು ಬ್ರಹ್ಮಚರ್ಯಮಧ್ಯಯನಂ ತಪೋ ದಾನಕರ್ಮೇತ್ಯೃಷಿರವೋಚತ್ ॥ ೧ ॥ ೨೫ ॥

ಉದಾಹರಣೆಯ ಋಕ್ಕು—

**ನ ಪಾಪಾಸೋ ಮನಾಮಹೇ ನಾರಾಯಾಸೋ ನ ಜಲ್ಹವಃ ।**
**ಯದಿನ್ನ್ವಿಂದ್ರಂ ವೃಷಣಂ ಸಚಾ ಸುತೇ ಸಖಾಯಂ ಕೃಣವಾಮಹೈ ॥**

(ಋ. ಸಂ. ೮–೬೧–೧೧)

ಇದರ ಅರ್ಥವು—

ನಾವು ಇಂದ್ರನನ್ನು ಧ್ಯಾನಿಸುವಾಗ ಕಲ್ಮಷವಾದ ಮನಸುಳ್ಳವರಾಗಿರುವುದಿಲ್ಲ. ಪೂಜಿಸುವಾಗ ಹವಿಸ್ಸನ್ನು ಸಿದ್ಧಪಡಿಸಿಕೊಂಡೇ ಅದನ್ನು ಅರ್ಪಿಸುತ್ತಾ ಪೂಜಿಸುತ್ತೇವೆ. ಮತ್ತು ಯಜ್ಞರಹಿತರಾಗಿ ಇಂದ್ರನನ್ನು ಪೂಜಿಸುವುದಿಲ್ಲ. ಆ ಕಾರಣದಿಂದಲೇ ಇಷ್ಟಾರ್ಥಪ್ರದನಾದ ಇಂದ್ರನನ್ನು ಈಗ ಸೋಮರಸವು ಹಿಂಡಿ ಸಿದ್ಧವಾಗಿರುವಾಗ ನಾವೆಲ್ಲರೂ ಒಟ್ಟುಗೂಡಿ ನಮ್ಮ ಮಿತ್ರನನ್ನಾಗಿ ಮಾಡಿಕೊಳ್ಳುತ್ತೇವೆ.

**ಜಲ್ಹವಃ**—**ಜಲ್ಹವಃ** ಎಂದರೆ ಪಾಪರಹಿತರಾದವರು. ಪ್ರಕೃತ ಋಕ್ಕಿನಲ್ಲಿರುವ ವಾಕ್ಯಕ್ಕೆ—ನಾವು ಪಾಪಿಷ್ಠರಲ್ಲ, ದರಿದ್ರರಲ್ಲ ಅಥವಾ ತೇಜೋಹೀನರಲ್ಲ. ನಮ್ಮಲ್ಲಿ ಬ್ರಹ್ಮಚರ್ಯವು ಅಧ್ಯಯನ ತಪಸ್ಸು ದಾನ ಕರ್ಮಾನುಷ್ಠಾನ ಎಂಬ ಈ ಗುಣಗಳೆಲ್ಲವೂ ಇರುವವು ಎಂದು ಋಷಿಯು ಹೇಳಿದ್ದಾನೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಇತಿ ಪಂಚವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೈದನೆಯ ಖಂಡವು ಸಮಾಪ್ತವು

———

## ಷಡ್ವಿಂಶಃ ಖಂಡಃ

### ಇಪ್ಪತ್ತಾರನೆಯ ಖಂಡವು

ಯವಂ ವೃಕೇಣಾಶ್ವಿನಾ ವಪನ್ತೇಷಂ ದುಹನ್ತಾ ಮನುಷಾಯ ದ್ರಸ್ರಾ। ಅಭಿದಸ್ಯುಂ ಬಕುರೇಣಾ ಧಮನ್ತೋರು ಜ್ಯೋತಿಶ್ಚಕ್ರಥು–ರಾರ್ಯ್ಯಾಯ ॥ ಯವಮಿವ ವೃಕೇಣಾಶ್ವಿನೌ ನಿವಪನ್ತೌ ವೃಕೋ ಲಾಂಗಲಂ ಭವತಿ ವಿಕರ್ತ್ತನಾಲ್ಲಾಂಗಲಂ ಲಂಗತೇರ್ಲಾಂಗೂಲವದ್ವಾ ಲಾಂಗೂಲಂ ಲಗತೇರ್ಲಂಗತೇರ್ಲಂಬತೇರ್ವಾನ್ನಂ ದುಹನ್ತೌ ಮನು–ಷ್ಯಾಯ ದರ್ಶನೀಯಾವಭಿಧಮನ್ತೌ ದಸ್ಯುಂ ಬಕುರೇಣ ಜ್ಯೋತಿಷಾ ವೋದಕೇನ ವಾರ್ಯ ಈಶ್ವರಪುತ್ರೋ ಬೇಕನಾಟಾಃ ಖಲು ಕುಸೀ–ದಿನೋ ಭವನ್ತಿ ದ್ವಿಗುಣಕಾರಿಣೋ ವಾ ದ್ವಿಗುಣದಾಯಿನೋ ವಾ ದ್ವಿಗುಣಂ ಕಾಮಯನ್ತ ಇತಿ ವಾ । ಇನ್ದ್ರೋ ವಿಶ್ವಾನ್ ಬೇಕನಾಟಾಂ ಅಹರ್ದೃಶ ಉತ ಕ್ರತ್ವಾ ಪಣೀँರಭಿ। ಇನ್ದ್ರೋ ಯಃ ಸರ್ವಾನ್ ಬೇಕ

ನಾಟಾದಹರ್ದೃಶಃ ಸೂರ್ಯದೃಶೋಯ ಇಮಾನ್ಯಹಾನಿ ಪಶ್ಯನ್ತಿ ನ ಪರಾಣೀತಿ ವಾಭಿಭವತಿ ಕರ್ಮಣಾ ಪಣೇಂಶ್ಚ ವಣಿಜಃ ॥ ೨೬ ॥

———

ಬಕುರಃ ॥೧೦೮॥

ಬಕುರೋ ಭಾಸ್ಕರೋ ಭಯಙ್ಕರೋ ಭಾಸಮಾನೋ ದ್ರವತೀತಿ ವಾ ॥

" ಯವಂ ವೃಕೇಣಾಶ್ವಿನಾ ವಪನ್ತೇಷಂ ದುಹನ್ತಾ ಮನುಷಾಯ ದಸ್ರಾ । ಅಭಿದಸ್ಯುಂ ಬಕುರೇಣಾ ಧಮನ್ತೋರು ಜ್ಯೋತಿಶ್ಚಕ್ರಥು-ರಾರ್ಯಾಯ ॥" ಯವಮಿವ ವೃಕೇಣಾಶ್ವಿನೌ ನಿವಪನ್ತೌ। ವೃಕೋ ಲಾಙ್ಗಲಂ ಭವತಿ ವಿಕರ್ತನಾತ್ । ಲಾಙ್ಗಲಂ ಲಙ್ಗತೇಲಾಙ್ಗೂಲ-ವದ್ವಾ। ಲಾಙ್ಗೂಲಂ ಲಗತೇರ್ಲಂಗತೇರ್ಲಮ್ಬತೇರ್ವಾ । ಅನ್ನಂ ದುಹನ್ತೌ ಮನುಷ್ಯಾಯ ದರ್ಶನೀಯಾವಭಿಧಮನ್ತೌ । ದಸ್ಯುಂ ಬಕುರೇಣ ಜ್ಯೋತಿಷಾ ವೋದಕೇನ ವಾರ್ಯ ಈಶ್ವರಪುತ್ರಃ ॥೧॥

**ಬಕುರಃ**—ಪ್ರಕಾಶವನ್ನುಂಟುಮಾಡುವವನು, ಭಯಂಕರನು ಅಥವಾ ಪ್ರಕಾಶಿಸುತ್ತಿರುವವನು, ದ್ರವವನ್ನು ಸುರಿಸುತ್ತಿರುವವನು.

**ಯವಮಿವ ವೃಕೇಣಾಶ್ವಿನೌ ನಿವಪಂತೌ**—ಎಲೈ ಅಶ್ವೀದೇವತೆಗಳೇ, ನೇಗಲಿನಿಂದ ಉತ್ತು ಯವಧಾನ್ಯವನ್ನು ನೀವು ಯವಧಾನ್ಯವನ್ನು ಬಿತ್ತುವವರು, **ವೃಕ** ಎಂದರೆ ನೇಗಿಲು ಏಕೆಂದರೆ ಅದು ಭೂಮಿಯನ್ನು ಸೀಳಿ ಕತ್ತರಿಸುವುದು **ಲಾಂಗೂಲಂ ಲಂಗತೇರ್ಲಾಂಗೂಲವದ್ವಾ**—ಲಾಂಗೂಲವೆಂದರೆ ಬಾಲವು. ಈ ಶಬ್ದವು ಅಂಟಿಕೊಂಡಿರು (ಶರೀರಕ್ಕೆ) ಎಂಬರ್ಥವುಳ್ಳ **ಲಾಗ್** ಎಂಬ ಧಾತುವಿನಿಂದಾಗಲಿ, ಅಥವಾ ಅಳ್ಳಾಡಿಸು ಎಂಬರ್ಥವುಳ್ಳ **ಲಾಂಗ್** ಧಾತುವಿನಿಂದಾಗಲಿ, ಅಥವಾ ಜೋತಾಡು ಎಂಬರ್ಥವುಳ್ಳ **ಲಂಬ್** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಲಾಂಗಲ (ನೇಗಲು) ಎಂಬ ಶಬ್ದವು ಲಾಂಗೂಲ (ಬಾಲ) ಎಂಬ ಶಬ್ದವೂ ಸಹ ಒಂದೇರೀತಿಯಾಗಿ ನಿಷ್ಪನ್ನವಾಗಿವೆ. (ಎಲೈ ಅಶ್ವಿನೀದೇವತೆಗಳೇ ನೀವು) ಮನುಷ್ಯರಿಗೆ ಅನ್ನ ಅಥವಾ ಆಹಾರವನ್ನು ಒದಗಿಸಿಕೊಡುವವರು ನೀವು ನೋಡುವುದಕ್ಕೆ ಆಕರ್ಷಕವಾದ ರೂಪವುಳ್ಳವರು ಮತ್ತು ನೀವು ಪ್ರಕಾಶದಿಂದ ಬೆಳಗುವವರು, ಅಥವಾ ಸಿಡಿಲಿನಿಂದ ಅಥವಾ ನೀರಿನ ಹೊಡೆತದಿಂದ ಶತ್ರುವನ್ನು ಧ್ವಂಸಮಾಡು ವವರು. **ಆರ್ಯ** ಎಂದರೆ ಸ್ವಾಮಿಯ ಅಥವಾ ಒಡೆಯನ ಪುತ್ರರು.

ಉದಾಹರಣೆಯ ಋಕ್ಕು—

**ಯವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**
**ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ॥**

(ಋ. ಸಂ. ೧-೧೧೭-೨೧)

ಇದರ ಅರ್ಥವು—

ದರ್ಶನೀಯರಾದ ಎಲೈ ಅಶ್ವಿನೀದೇವತೆಗಳೇ, ಜ್ಞಾನಿಯಾದ ಮನುವಿಗೋಸ್ಕರ ನೇಗಲಿನಿಂದ ಉಳಲ್ಪಟ್ಟ ಜಮಾನಿನಲ್ಲಿ ಯವಾದಿ ಧಾನ್ಯನಾಶಕರನ್ನು ವಧಮಾಡಿ ವಿಸ್ತೃತವಾದ ಕೀರ್ತಿಯನ್ನು ಪಡೆದಿರಿ (ಆಹಾರವನ್ನುಂಟುಮಾಡಿ ದಸ್ಯುವಧೆ ಮಾಡಿ) ವಿಸ್ತೃತವಾದ ಸೂರ್ಯ ತೇಜಸ್ಸನ್ನು (ಮನುಷ್ಯನಿಗೋಸ್ಕರ ಉಂಟುಮಾಡಿದಿರಿ).

**ಮನುಷಾಯ—ಮನುಷಶಬ್ದೋ ಮನುಶಬ್ದಪರ್ಯಾಯಃ । ಮನನೇ ಮನೋರರ್ಥಂ ।** ಮನು ಶಬ್ದವು ಯಾವ ಅರ್ಥವನ್ನು ಬೋಧಿಸುವುದೋ ಮನುಷ ಶಬ್ದವೂ ಅದೇ ಅರ್ಥವನ್ನು ಬೋಧಿಸುವಕಾರಣ ಇದು ಮನು ಶಬ್ದದ ಪರ್ಯಾಯಶಬ್ದವಾಗಿರುವುದು, ನಿರುಕ್ತದಲ್ಲಿ **ಮನುಃ । ಮನುರ್ಮನನಾತ್** (ನಿ. ೧೨-೩೪) ಮನನ ಮಾಡುವವನು, ಮನುಷ್ಯನು ಎಂದು ಅರ್ಥವಾಗುತ್ತದೆ ಮನುಷ್ಯನಿಗಾಗಿ ಎಂದು ಅರ್ಥ.

**ಬಕುರೇಣ ಅಭಿ ಧಮಂತಾ—ಬಕುರೋ ಭಾಸಮಾನೋ ವಜ್ರಃ । ಅತ್ರ ನಿರುಕ್ತಂ ಬಕುರೋ—ಭಯಂಕರೋ ಭಾಸಮಾನೋ ದ್ರವತೀತಿ ವಾ** (ನಿ. ೬-೨೫-೨೬) **ಯವಮಿವ ವೃಕೇಣ ಅಶ್ವಿನಾ ನಿವಪನ್ತಾ ವೃಕೋ ಲಾಂಗಲಂ ಭವತಿ ವಿಕರ್ತನಾತ್ ।** ನಿರುಕ್ತದಲ್ಲಿ ಬಕುರಶಬ್ದಕ್ಕೆ ಭಾಸ್ಕರ—ಪ್ರಕಾಶಿಸುವಸೂರ್ಯ, ಭಯವನ್ನು ಉಂಟುಮಾಡುವುದು- ಪ್ರಕಾಶಿಸುವುದು ಎಂಬ ಅರ್ಥಗಳನ್ನು ವಿವರಿಸಿರುವುದರಿಂದ ಇಲ್ಲಿ ಪ್ರಕಾಶಿಸುವ ವಜ್ರಾಯುಧವೆಂದು ಸಾಯಣರು ಅರ್ಥಮಾಡಿರುತ್ತಾರೆ. ವಿಕರ್ತನಾತ್—ವೃಕಃ ಸೀಳುವುದು ಅಥವಾ ಕತ್ತರಿಸುವುದು ಎಂದು ಅರ್ಥವುಳ್ಳದ್ದಾದ ಕಾರಣ ವೃಕಶಬ್ದಕ್ಕೆ ಭೂಮಿಯನ್ನು ಸೀಳುವ ನೇಗಿಲು ಎಂದು ಅರ್ಥವು. ಅಶ್ವಿನೀದೇವತೆಗಳು ವ್ಯವಸಾಯ ಮಾಡಿದ ಭೂಮಿಯಲ್ಲಿ ಬೆಳೆಯುವಂತೆ ಮಾಡಿ, ಅದರ ವೃದ್ಧಿಗೆ ಮಳೆಯು ಬರುವಂತೆ ಮಾಡಿ, ಬೆಳೆಯನ್ನು ಕಳ್ಳರೇ ಮೊದಲಾದವರು ಕದಿಯದಂತೆ ಅವರನ್ನು ವಜ್ರಾಯುಧವೇ ಮೊದಲಾದ ಭಯಂಕರವಾದ ಆಯುಧಗಳಿಂದ ಶಿಕ್ಷೆಯನ್ನು ಮಾಡಿ ಮನುಷ್ಯರನ್ನು ರಕ್ಷಿಸುತ್ತಿರುವರು. ಇದರಿಂದ ಮನುಷ್ಯರಿಗೆ ತಮ್ಮಗಳಲ್ಲಿರುವ ಉತ್ತಮೋತ್ತಮವಾದ ವಿಪುಲವಾದ ಮಹಿಮೆಯನ್ನು ಪ್ರಕಾಶಗೊಳಿಸುವರು. ಎಂದು ಅರ್ಥವನ್ನು ಸಾಯಣರು ಹೇಳಿರುವರು. ಮತ್ತು ಈ ಪ್ರಕಾರವಾದ ಮೂರು ಕರ್ಮಗಳನ್ನೂ ಆಚರಿಸುವುದರಿಂದ ಮನುಷ್ಯನಿಗೆ ಅತ್ಯಂತ ಪ್ರಭಾವದಿಂದ ಇರುವ ಸೂರ್ಯನೆಂದು ಹೆಸರುಳ್ಳ ಜ್ಯೋತಿಸ್ಸು ಅಂದರೆ ವ್ಯಾವಹಾರಿಕ ಮತ್ತು ಆಧ್ಯಾತ್ಮಿಕವಾದ ಪ್ರಕಾಶವು ಬೆಳಗುವಂತೆ ಮಾಡಿ ಮನುಷ್ಯನು ಆರ್ಯ–ಪೂಜ್ಯನಾಗುವಂತೆ ಮಾಡುವರು. ಮನುಷ್ಯನು ಜೀವನಕ್ಕೆ ಕಾರಣವಾದ ಈ ಮೂರು ವಿಧವಾದ ಕರ್ಮಗಳನ್ನೂ ಅಶ್ವಿನೀದೇವತೆಗಳು ಆಚರಿಸಿ ಮನುಷ್ಯನು ಜೀವಿಸುವಂತೆಯೂ, ಜೀವಿಸಿಕೊಂಡು ಇರುತ್ತಾ ಸೂರ್ಯನನ್ನು ಕಾಣುವಂತೆಯೂ ಮಾಡಿರುವರು ಎಂದು ಇನ್ನೊಂದು ಅರ್ಥವನ್ನೂ ಹೇಳಿರುತ್ತಾರೆ. ಸ್ಕಂದಸ್ವಾಮಿಗಳು ಈ ವಿಷಯದಲ್ಲಿ—

**ಯಾಭಿರ್ನರಾ ಶಯವೇ ಯಾಭಿರತ್ರಯೇ ಯಾಭಿಃ ಪುರಾ ಮನವೇ ಗಾತುಮೀಷಥುಃ ।**
**ಯಾಭಿಶ್ಶಾರೀರಾಜತಂ ಸ್ಯೂಮರಶ್ಮಯೇ ತಾಭಿರೂ ಷು ಊತಿಭಿರಶ್ವಿನಾ ಗತಮ್ ॥**
(ಋ. ಸಂ. ೧-೧೧೨-೧೬)

ಎಂಬ ಋಕ್ಕನ್ನು ಉದಹರಿಸಿ **ಮನುಷಶಬ್ದೋಽತ್ರ ಮನೋಃ ಪರ್ಯಾಯಃ ಮನುನಾಮ್ನೋ ರಾಜ್ಞೋ ಅರ್ಥಾಯ** ಮನುಷಶಬ್ದವು ಮನುಶಬ್ದದ ಪರ್ಯಾಯ ಪದವಾಗಿರುತ್ತದೆ. ಮನು ಎಂದು ಹೆಸರುಳ್ಳ ರಾಜನಿಗಾಗಿ ಎಂದು ಅರ್ಥವನ್ನು ಮಾಡಿ ೧-೧೧೭-೬ ನೇ ಋಕ್ಕಿನ ಎರಡನೇ ಪಾದದಿಂದ ಈ ಅರ್ಥವು ವಿವೃತವಾಗಿರುತ್ತದೆ ಎಂದು ವ್ಯಾಖ್ಯಾನಮಾಡಿರುವರು ಮತ್ತು

**ಯುವಾಮಾರ್ಯಸ್ಯಾರ್ಥಾಯ ವಪನವೃಷ್ಟಿದೋಹನದಸ್ಯುಹನನೈಸ್ತ್ರಿಭಿಃ ಕರ್ಮಭಿಃ ಮಹಾಪ್ರಭಾವೌ ಯುವಾಂ ಸಾಧೂನಾಂ ಅನುಗ್ರಹಾರ್ಥಂ ಜಾತೌ। ಅಥವಾ ಅಭಿ ದಸ್ಯುಮಿತಿ ದಸ್ಯುಶಬ್ದೇನ ದುರ್ಭಿಕ್ಷ ಉಚ್ಯತೇ। ಬಕುರೇಶಬ್ದೇನಾತ್ರಾ ಮಹಾನ್ ವೃಷ್ಟ್ಯುದಕಸಮೂಹಃ। ಜ್ಯೋತಿಶ್ಯಬ್ದೇನಾಪಿ ಸುಭಿಕ್ಷಮಿತಿ। ಮಹತ್ತ್ವಾತ್ ಭಯಂಕರೇಣ ವೃಷ್ಟ್ಯುದಕಸಮೂಹೇನಾ ಅಭಿಘ್ನಂತೌ ವಿಸ್ತೀರ್ಣಂ ಸುಭಿಕ್ಷಂ ಕೃತವಂತೌ ಯುವಾಂ ಆರ್ಯಸ್ಯಾರ್ಥಾಯ ॥**

ಅಶ್ವಿನೀದೇವತೆಗಳು ಬೆಳೆಯು ಬೆಳೆಯುವಂತೆ ಬೀಜವನ್ನು ಬಿತ್ತುವುದು. ಬೆಳೆಯು ವೃದ್ಧಿಯಾಗುವುದಕ್ಕೆ (ಮಳೆಯನ್ನು ಹುಯಿಸುವುದು) ವೃಷ್ಟಿಯು ಬರುವಂತೆ ಮಾಡುವುದು, ಅವರವರಿಗೆ ಆ ಬೆಳೆಯು ಸಿಕ್ಕುವಂತೆ ತುಂಟರಾದವರನ್ನು ನಿಗ್ರಹ ಮಾಡುವುದು ಎಂಬ ಈ ಮೂರು ವಿಧ ಕಾರ್ಯಗಳನ್ನೂ ನಿರ್ವಹಿಸಿರುವುದರಿಂದ ಬಹಳವಾದ ಮಹಿಮೆಯುಳ್ಳವರಾಗಿರುವರು' ಇವರು ದುಷ್ಟನಿಗ್ರಹ ಶಿಷ್ಟಪರಿಪಾಲನೆಯನ್ನು ಮಾಡುತ್ತಾ ಪೂಜ್ಯರಾದ ಆರ್ಯರನ್ನು ರಕ್ಷಣೆಮಾಡುವುದಕ್ಕಾಗಿಯೇ ಉತ್ಪನ್ನರಾಗಿರುವರು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸುವರು. ಮತ್ತು ಅಭಿದಸ್ಯು ಶಬ್ದದಿಂದ ದುರ್ಭಿಕ್ಷ ಅಥವಾ ಕ್ಷಾಮವೂ, ಬಕುರಶಬ್ದದಿಂದ ಅತಿಶಯವಾದ ವೃಷ್ಟಿಯೂ, ಜ್ಯೋತಿಶಬ್ದದಿಂದ ಸುಭಿಕ್ಷವೂ ಹೇಳಲ್ಪಡುವ ಕಾರಣ (ದುರ್ಭಿಕ್ಷ) ಕ್ಷಾಮಗಾಲದಲ್ಲಿ ಅನಾವೃಷ್ಟಿ ನಿವಾರಕವಾಗುವಂತೆ ಬಹಳವಾಗಿ ಮಳೆಯು ಹುಯ್ಯುವಂತೆಯೂ ಸುಭಿಕ್ಷವುಂಟಾಗುವಂತೆಯೂ ಮಾಡಿ ಕ್ಷಾಮವನ್ನು ನಾಶಗೊಳಿಸಿ ಸಾಧುಗಳನ್ನು ರಕ್ಷಿಸುವ ಕಾರ್ಯವನ್ನು ಆರ್ಯರಿಗಾಗಿ ಅಶ್ವಿನೀದೇವತೆಗಳು ಆಚರಿಸುತ್ತಿರುವರು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುತ್ತಾರೆ.

ಬೇಕನಾಟಾನ್ ॥೧೦೯॥

ಬೇಕನಾಟಾಃ ಖಲು ಕುಸೀದಿನೋ ಭವನ್ತಿ ದ್ವಿಗುಣಕಾರಿಣೋ ವಾ ದ್ವಿಗುಣದಾಯಿನೋ ವಾ ದ್ವಿಗುಣಂ ಕಾಮಯನ್ತ ಇತಿ ವಾ। "ಇನ್ದ್ರೋ ವಿಶ್ವಾನ್ಬೇಕನಾಟಾँ ಅಹರ್ದೃಶ ಉತ ಕ್ರತ್ವಾ ಪಣೀँರಭಿ ॥" ಇನ್ದ್ರೋ ಯಃ ಸರ್ವಾನ್ ಬೇಕನಾಟಾನಹರ್ದೃಶಃ ಸೂರ್ಯದೃಶೋ ಯ ಇಮಾನ್ಯಹಾನಿ ಪಶ್ಯನ್ತಿ ನ ಪರಾಣೀತಿ, ವಾಽಭಿಭವತಿ ಕರ್ಮಣಾ ಪಣೀಂಶ್ಚ ವಣಿಜಃ ॥೨॥೨೬॥

ಉದಾಹರಣೆಯ ಋಕ್ಕು—

**ಕದೂ ಮಹೀರಧೃಷ್ಟಾ ಅಸ್ಯ ತವಿಷೀಃ ಕದು ವೃತ್ರಘ್ನೋ ಅಸ್ತೃತಂ ।**
**ಇಂದ್ರೋ ವಿಶ್ವಾನ್ಬೇಕನಾಟಾँ ಅಹರ್ದೃಶ ಉತ ಕ್ರತ್ವಾ ಪಣೀँ ರಭಿ ॥**

(ಋ. ಸಂ. ೮-೬೬-೧೦)

ಇದರ ಅರ್ಥವು—

ಇಂದ್ರನ ಶಕ್ತಿಯುತವಾದ ಮಹಾಸೇನೆಗಳು ಯಾವಾಗ ತಾನೇ ಶತ್ರುಗಳನ್ನು ಪ್ರತಿಭಟಿಸದೆ ಆಲಸ್ಯವಾಗಿವೆ ? ವೃತ್ರಹಂತಕನಾದ ಇಂದ್ರನಿಗೆ ದುಷ್ಟವಸ್ತುಗಳಲ್ಲಿ ಯಾವುದು ತಾನೇ ನಾಶವಿಷಯವಾಗುವುದಿಲ್ಲ ? ಇಂದ್ರನು ತನ್ನ ಅಸಾಧಾರಣ

ವಾದ ಕರ್ಮಗಳಿಂದ ಕೇವಲ ಇಹದಲ್ಲಿ ಮಾತ್ರ ಸೂರ್ಯನನ್ನು ನೋಡಬಲ್ಲ ನಾಸ್ತಿಕರೂ ಮೋಸವ್ಯಾಪಾರವುಳ್ಳವರೂ ಆದ ಸಮಸ್ತ ವಂಚಕರನ್ನೂ ಸೋಲಿಸಿ ನಾಶಪಡಿಸುತ್ತಾನೆ.

**ಬೇಕಾನಾಟಾನ್—ಅನೇನ ಕುಸೀದಿನೋ ವೃದ್ಧಿಜೀವಿನೋ ವಾರ್ಧುಷಿಕಾ ಉಚ್ಯಂತೇ ।** ಈ ಶಬ್ದಕ್ಕೆ—ಹಣದ ತೊಂದರೆಗೆ ಒಳಗಾಗಿ ಕಷ್ಟಪಡುತ್ತಿರುವ ಜನರಿಗೆ ದ್ರವ್ಯವನ್ನು ಸಾಲವಾಗಿ ಕೊಟ್ಟು ಆ ದ್ರವ್ಯಕ್ಕೆ ಅಸಲನ್ನೂ ಬಡ್ಡಿಯನ್ನೂ ಅವರಿಂದ ವಸೂಲುಮಾಡಿ ಜೀವಿಸುವ ಲೇವಾದೇವಿ ಮಾಡುವ ಜನರಿಗೆ ಕುಸೀದಿಗಳು ಎಂದರೆ ಬಡ್ಡಿಯಿಂದ ಜೀವಿಸುವವರು ಎಂದರ್ಥವಿರುವುದು. ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಬೇಕನಾಟಾನ್—ಬೇಕನಾಟಾಃ ಖಲು ಕುಸೀದಿನೋ ಭವಂತಿ ದ್ವಿಗುಣಕಾರಿಣೋ ವಾ ದ್ವಿಗುಣ-ದಾಯಿನೋ ವಾ ದ್ವಿಗುಣಂ ಕಾಮಯಂತ ಇತಿ ವಾ ಇಂದ್ರೋ ವಿಶಾನ್ಬೇಕನಾಟಾ ಅಹರ್ದೃಶ ಉತ ಕ್ರತ್ವಾ ಪಣೀರಭಿ । ಇದ್ರೋ ಯಃ ಸರ್ವಾನ್ ಬೇಕನಾಟಾನಹರ್ದೃಶಃ ಸೂರ್ಯದೃಶೋ ಯ ಇಮಾನ್ಯಹಾನಿ ಪಶ್ಯಂತಿ ನ ಪರಾಣೀತಿ ವಾಭಿಭವತಿ ಕರ್ಮಣಾ ಪಣೀಂಶ್ಚ ವಣಿಜಃ ॥** (ನಿ. ೬-೨೬)

**ಬೇಕನಾಟಾಃ** ಎಂಬ ಶಬ್ದಕ್ಕೆ ದುಬಾರಿ ಹಣವನ್ನು ಬಡ್ಡಿರೂಪದಲ್ಲಿ ವಸೂಲು ಮಾಡುವವರು ಎಂದರೆ ಬಡ್ಡಿಯೂ ಸೇರಿ ಸಾಲ ಕೊಟ್ಟ ಹಣಕ್ಕೆ ಎರಡರಷ್ಟನ್ನು ವಸೂಲುಮಾಡುವವರು ಅಥವಾ ಯಾವುದಾದರೂ ಹೆಚ್ಚು ಎಂದರೆ ಸಾಲದ ಎರಡರಷ್ಟು ಬೆಲೆಬಾಳುವ ಸ್ವತ್ತಿನ ಆಧಾರದ ಮೇಲೆ ಸಾಲಕೊಡುವವರು ಅಥವಾ ಕೊಟ್ಟ ಸಾಲದ ಮೊಬಲಗಿನ ಎರಡಷ್ಟು ತಮಗೆ ಬರಬೇಕೆಂದು ಅಪೇಕ್ಷಿಸುವವರು ಎಂದರ್ಥವಿರುವುದು.

ಇಂದ್ರನು ಅತ್ಯಾಶೆಯಿಂದ ಕೂಡಿದ ಲೇವಾದೇವಿ ವ್ಯಾಪಾರವನ್ನು ಮಾಡುವ ಅಪ್ರಮಾಣಿಕ ವರ್ತಕರನ್ನು ಶಿಕ್ಷಿಸುವನು.

ಇಂದ್ರನು ಅತ್ಯಂತ ಹೆಚ್ಚು ಬಡ್ಡಿಯನ್ನು ತೆಗೆದುಕೊಳ್ಳುವ ದಯಾರಹಿತಾರಾದ ದುಷ್ಟವರ್ತಕರನ್ನು ಶಿಕ್ಷಿಸುವನು. ಆ ವರ್ತಕರ ತಮ್ಮ ಆಗಿನಕಾಲದ ಸಂದರ್ಭವನ್ನು ಮಾತ್ರ ಗಮನಿಸಿ ಮುಂದಾಲೋಚನೆಯಿಲ್ಲದೆ ತಮ್ಮ ವ್ಯಾಪರವು ನ್ಯಾಯ ವಾದುದೇ ಅಲ್ಲವೇ ಎಂಬುದನ್ನು ಗಮನಿಸದೆ ಇರುವವರು. ವರ್ತಕರು ಎಂದರೆ ವ್ಯಾಪಾರಮಾಡುವವರು. ಇಂತಹ ದುಷ್ಟ ವ್ಯಾಪಾರಗಾರರನ್ನು ಇಂದ್ರನು ಶಿಕ್ಷಿಸುವನು ಎಂದಭಿಪ್ರಾಯವು.

**ಇತಿ ಷಡ್ವಿಂಶಃ ಖಂಡಃ**

**ಇಲ್ಲಿಗೆ ಇಪ್ಪತ್ತಾರನೆಯ ಖಂಡವು ಸಮಾಪ್ತವು**

---

## ಸಪ್ತವಿಂಶಃ ಖಂಡಃ

**ಇಪ್ಪತ್ತೇಳನೆಯ ಖಂಡವು**

ಜೀವಾನ್ನೋ ಅಭಿಧೇತನಾದಿತ್ಯಾಸಃ ಪುರಾ ಹಥಾತ್ । ಕದ್ಧ ಸ್ಥ ಹವನಶ್ರುತಃ । ಜೀವಿತೋ ನೋಽಭಿಧಾವತಾದಿತ್ಯಾಃ ಪುರಾ ಹನನಾತ್

ಕ್ವ ನು ಸ್ಥ ಹ್ವಾನಶ್ರುತ ಇತಿ ಮತ್ಸ್ಯಾನಾಂ ಜಾಲಮಾಪನ್ನಾನಾಮೇತ-ದಾರ್ಷಂ ವೇದಯನ್ತೇ ಮತ್ಸ್ಯ ಮಧಾ ಉದಕೇ ಸ್ಯಂದಂತೇ ಮಾದ್ಯಂತೇಽನ್ಯೋನ್ಯಂ ಭಕ್ಷಣಾಯೇತಿ ವಾ ಜಾಲಂ ಜಲಚರಂ ಭವತಿ ಜಲೇಭವಂ ವಾ ಜಲೇಶಯಂ ವಾಂಹುರೋಽಂಹಸ್ವಾನಂಹೂರಣ-ಮಿತ್ಯಪ್ಯಸ್ಯ ಭವತಿ । ಕೃಣ್ವನ್ನಂ ಹೂರಣಾದುರ್ವಿತ್ಯಪಿ ನಿಗಮೋ ಭವತಿ । ಸಪ್ತ ಮರ್ಯಾದಾಃ ಕವಯಸ್ತತಕ್ಷುಸ್ತಾಸಾಮೇಕಾಮಿದ-ಭ್ಯಂಹುರೋ ಗಾತ್ । ಸಪ್ತ ಮರ್ಯಾದಾಃ ಕವಯಶ್ಚಕ್ರುಸ್ತಾ-ಸಾಮೇಕಾಮಪ್ಯಧಿಗಚ್ಛನ್ನಂಹಸ್ವಾನ್ ಭವತಿ ಸ್ತೇಯಂ ತಲ್ಪಾರೋಹಣಂ ಬ್ರಹ್ಮಹತ್ಯಾಂ ಭ್ರೂಣಹತ್ಯಾಂ ಸುರಾಪಾನಂ ದುಷ್ಕೃತಸ್ಯ ಕರ್ಮಣಃ ಪುನಃ ಪುನಃ ಸೇವಾಂ ಪಾತಕೇಽನೃತೋದ್ಯಮಿತಿ ಬತ ಇತಿ ನಿಪಾತಃ ಖೇದಾನುಕಂಪಯೋಃ ॥೨೭॥

---

ಅಭಿಧೇತನ ॥ ೧೧೦ ॥

“ಜೀವಾನ್ನೋ ಅಭಿಧೇತನಾದಿತ್ಯಾಸಃ ಪುರಾ ಹಥಾತ್ । ಕದ್ಧ ಸ್ಥ ಹವನಶ್ರುತಃ ॥” ಜೀವತೋ ನೋಽಭಿಧಾವತಾದಿತ್ಯಾಃ ಪುರಾ ಹನನಾತ್ ಕ್ವ ನು ಸ್ಥ ಹ್ವಾನಶ್ರುತ ಇತಿ ॥ ಮತ್ಸ್ಯಾನಾಂ ಜಾಲ-ಮಾಪನ್ನಾನಾಮೇತದಾರ್ಷಂ ವೇದಯನ್ತೇ । ಮತ್ಸ್ಯ ಮಧೌ ಉದಕೇ ಸ್ಯಂದಂತೇ ಮಾದ್ಯಂತೇಽನ್ಯೋನ್ಯಂ ಭಕ್ಷಣಾಯೇತಿ ವಾ । ಜಾಲಂ ಜಲಚರಂ ಭವತಿ ಜಲೇಭವಂ ವಾ ಜಲೇಶಯಂ ವಾ ॥ ೧ ॥

ಉದಾಹರಣೆಯ ಋಕ್ಕು—

**ಜೀವಾನ್ನೋ ಅಭಿ ಧೇತನಾದಿತ್ಯಾಸಃ ಪುರಾ ಹಥಾತ್ ।**
**ಕದ್ಧ ಸ್ಥ ಹವನಶ್ರುತಃ ॥**

(ಋ. ಸಂ. ೮-೬೭-೫)

ಇದರ ಅರ್ಥವು—

ನಮ್ಮ ಮೊರೆಯನ್ನು ಕೇಳತಕ್ಕ ಎಲೈ ಆದಿತ್ಯರೇ, ನಾವು ಮರಣವನ್ನು ಹೊಂದುವುದಕ್ಕೆ ಮುಂಚೆಯೇ ನಾವು ಜೀವಂತರಾಗಿರುವಾಗಲೇ ನಮ್ಮಲ್ಲಿಗೆ ಓಡಿಬನ್ನಿರಿ. ಈಗ ನೀವು ಎಲ್ಲಿದ್ದೀರಿ ?

ಈ ಋಕ್ಕಿನಲ್ಲಿರುವ **ಅಭಿಧೇತನ** ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು—

**ಅಭಿಧೇತನ ॥ ಜೀವಾನ್ನೋ ಅಭಿಧೇತನಾದಿತ್ಯಾಸಃ ಪುರಾ ಹನನಾತ್ । ಕದ್ಧಸ್ಥ ಹವನಶ್ರುತಃ ॥ ಜೀವತೋ ನೋಽಭಿಧಾವತಾದಿತ್ಯಾಃ ಪುರಾ ಹನನಾತ್ । ಕ್ವ ನು ಸ್ಥ ಹ್ವಾನಶ್ರುತ ಇತಿ । ಮತ್ಸ್ಯಾನಾಂ ಜಾಲಮಾಪನ್ನಾನಾಮೇತದಾರ್ಷಂ ವೇದಯಂತೇ। ಮತ್ಸ್ಯಾ ಮಧೌ ಉದಕೇ ಸ್ಯಂದಂತೇ ಮಾದ್ಯಂತೇಽನ್ಯೋನ್ಯಂ ಭಕ್ಷಣಾಯೇತಿ ವಾ । ಜಾಲಂ ಜಲಚರಂ ಭವತಿ ಜಲೇಭವಂ ವಾ ಜಲೇಶಯಂ ವಾ ।**

ಎಂದು ನಿರ್ವಚನವನ್ನು ಹೇಳಿದಾರೆ. ಬಲೆಯಲ್ಲಿ ಸಿಕ್ಕಿಬಿದ್ದಿರುವ ಮೀನುಗಳು ಆದಿತ್ಯರನ್ನು ಮರೆಹೊಕ್ಕು ತಮ್ಮನ್ನು ಬಲೆ-ಯಿಂದ ಬಿಡಿಸಬೇಕೆಂದು ಪ್ರಾರ್ಥಿಸಿರುತ್ತವೆ—ಎಲೈ ಆದಿತ್ಯರೇ, ಬಲೆಯಲ್ಲಿ ಸಿಕ್ಕಿಬಿದ್ದಿರುವ ನಾವುಗಳು ಕೊಲ್ಲಲ್ಪಡುವದಕ್ಕೆ ಮುಂಚಿತವಾಗಿಯೇ ನಮ್ಮನ್ನು ಬಲೆಯಿಂದ ಬಿಡಿಸಿ ಕಾಪಾಡಿ. ನಿಧಾನಮಾಡಿದಲ್ಲಿ ಬೆಸ್ತರು ನಮ್ಮನ್ನು ಕೊಲ್ಲುವರು. ನಮ್ಮ ಆರ್ತನಾದರೂಪವಾದ ಪ್ರಾರ್ಥನೆಯನ್ನು ಕೇಳುತ್ತಿರುವ ನೀವು ಈಗ ಎಲ್ಲಿದ್ದೀರಿ ? ಬೇಗನೆ ನಮ್ಮ ಬಳಿಗೆ ಓಡಿಬನ್ನಿ, ನಮ್ಮನ್ನು ಬಲೆಯಿಂದ ಬಿಡಿಸಿ, ಎಂದು ನಿರ್ವಚನದ ಅಭಿಪ್ರಾಯವು.

ಬಲೆಯಲ್ಲಿ ಸಿಕ್ಕಿಬಿದ್ದ ಮೀನುಗಳು ಆದಿತ್ಯರನ್ನು ಪ್ರಾರ್ಥಿಸಿರುವುದನ್ನು ಇಲ್ಲಿ ಹೇಳಿರುವುದೆಂದು ಋಷಿಯ ಅಭಿಪ್ರಾ-ಯವು.

**ಮತ್ಸ** ಶಬ್ದಕ್ಕೆ—**ಮಧೌ** ಎಂದರೆ ಉದಕದಲ್ಲಿ ತೇಲುತ್ತಿರುವುದರಿಂದಾಗಲಿ ಅಥವಾ ಈ ಮೀನುಗಳು ಒಂದನ್ನೊಂದು ಭಕ್ಷಿಸುವುದರಿಂದಾಗಲಿ ಮೀನುಗಳಿಗೆ ಮತ್ಸ್ಯವೆಂಬ ಹೆಸರು ಬಂದಿದೆ ಎಂದು ರೂಪನಿಷ್ಪತ್ತಿಯು.

**ಜಾಲಂ** ಎಂದರೆ ಬಲೆಯು. ಜಲದಲ್ಲಿ ಈ ಬಲೆಯು ಚಲಿಸುವುದರಿಂದ ಅಥವಾ ನೀರಿನಲ್ಲಿ ಇದನ್ನು ಹಾಕಿರುವುದ ರಿಂದ ಅಥವಾ ನೀರಿನಲ್ಲಿ ಇದು ಬಿದ್ದಿರುವುದರಿಂದ ಬಲೆಗೆ ಜಾಲವೆಂದು ಹೆಸರು ಎಂದು ಜಾಲಶಬ್ದದ ನಿಷ್ಪತ್ತಿಯು.

ಅಂಹುರಃ ॥ ೧೧೧ ॥

ಅಂಹುರೋಂಽಹಸ್ವಾನಂಹೂರಣಮಿತ್ಯಪ್ಯಸ್ಯ ಭವತಿ । " ಕೃಣ್ವನ್ನಂಹೂರಣಾದುರು " ಇತ್ಯಪಿ ನಿಗಮೋ ಭವತಿ ॥ ಸಪ್ತ ಮರ್ಯಾದಃ ಕವಯಸ್ತತಕ್ಷುಸ್ತಾಸಾಮೇಕಾಮಿದಭ್ಯಂಹುರೋ ಗಾತ್"॥ ಸಪ್ತೈವ ಮರ್ಯಾದಾಃ ಕವಯಶ್ಚಕ್ರುಸ್ತಾಸಾಮೇಕಾಮಪ್ಯಭಿಗಚ್ಛನ್ನಂ-ಹಸ್ವಾನ್ ಭವತಿ ಸ್ತೇಯಂ ತಲ್ಪಾರೋಹಣಂ ಬ್ರಹ್ಮಹತ್ಯಾಂ ಭ್ರೂಣಹತ್ಯಾಂ ಸುರಾಪಾನಂ ದುಷ್ಕೃತಸ್ಯ ಕರ್ಮಣಃ ಪುನಃ ಪುನಃ ಸೇವಾಂ ಪಾತಕೇಽನೃತೋದ್ಯಮಿತಿ ॥ ೨ ॥ ೨೭ ॥

ಉದಾಹರಣೆಯ ಋಕ್ಕು—

**ತ್ರಿತಃ ಕೂಪೇಽವಹಿತೋ ದೇವಾನ್ಹವತ ಊತಯೇ ।**
**ತಚ್ಛುಶ್ರಾವ ಬೃಹಸ್ಪತಿಃ ಕೃಣ್ವನ್ನಂಹೂರಣಾದುರು ವಿತ್ತಂ ಮೇ ಅಸ್ಯ ರೋದಸೀ ॥**

(ಋ. ಸಂ. ೧-೧೦೫-೧೭)

**ಇದರ ಅರ್ಥವು—**

ಭಾವಿಯಲ್ಲಿ ತಳ್ಳಲ್ಪಟ್ಟ ತ್ರಿತನೆಂಬ ಋಷಿಯು ರಕ್ಷಣಾರ್ಥವಾಗಿ ದೇವತೆಗಳನ್ನು ಮೊರೆಯಿಟ್ಟು ಕರೆಯುತ್ತಾನೆ. ಬೃಹಸ್ಪತಿಯು ಕೂಪಪತನರೂಪವಾದ ಈ ಪಾಪದಿಂದ ಮೇಲಕ್ಕೆತ್ತಿ ಅಧಿಕವಾಗಿ ಒಳ್ಳೆಯದನ್ನು ಮಾಡುವವನಾಗಿ ಆ ಮೊರೆಯನ್ನು ಕೇಳಿದನು. ಎಲೈ ದ್ಯಾವಾಪೃಥಿವಿಗಳೇ, ನನ್ನ ರೋದನವನ್ನು ಕೇಳಿ ನನ್ನನ್ನು ಮೇಲಕ್ಕೆತ್ತಿರಿ.

**ಅಂಹೂರಣಾತ್—ಅಂಹಸಃ ಪಾಪರೂಪಾದಸ್ಮಾತ್ ಕೂಪಪಾತಾತ್।** ಈ ಕೂಪಪತನರೂಪವಾದ ಪಾಪದಿಂದ. **ಅಂಹುರ**ಶಬ್ದಕ್ಕೆ ನಿರ್ವಚನವನ್ನು ತೋರಿಸುತ್ತಾ ನಿರುಕ್ತಕಾರರು **ಅಂಹುರೋಽಂಹಸ್ವಾನಂಹೂರಣಮಿತ್ಯಪ್ಯಸ್ಯ ಭವತಿ।** (ನಿ. ೬–೨೭) ದುಃಖಪೂರಿತನಾದುದರಿಂದ **ಅಂಹುರ** ಎಂದಾಗಿದೆಯೆಂದು ತೋರಿಸಿದ್ದಾರೆ. ಅದರಂತೆಯೇ ಇಲ್ಲಿಯೂ **ಅಂಹೂರಣ**ವೆಂದರೆ ದುಃಖಪೂರಿತನೆಂದರ್ಥ. ಇದನ್ನು ಸಮರ್ಥಿಸಲು ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿದ್ದಾರೆ. ಅಥವಾ **ದುಃಖ**ವನ್ನೇ ಪಾಪಫಲವಾಗಿಯಾಗಲೀ, ಪಾಪರೂಪದಲ್ಲಿಯಾಗಲಿ ಅರ್ಥಮಾಡಬಹುದು. ಈ ಸಂದರ್ಭದಲ್ಲಿ **ತ್ರಿತನ ಪಾಪವೇನು?** ಎಂಬ ಸಂಶಯದಿಂದ ಸ್ಕಂದಸ್ವಾಮಿಗಳು, **ಯದಿ ರಕ್ಷಣಮತ್ರ ವಿವಕ್ಷಿತಂ ತತಃ ಪಾಪಕರ್ಮಕಾರಿತ್ವಾದ್ವೃಕಃ। ಅಥೋತ್ತರಣಂ ತತ ಉದ್ವೇಗಕರೈಸ್ತೃಣಾದಿಭಿರುಪೇತ್ವಾತ್ಕೂಪಃ। ಪಾಪಕರ್ಮಕಾರಿಣೋ ವೃಕಾತ್ ಉದ್ವೇಗ ಕರತೃಣಾದ್ಯುಪೇತಾತ್ ವಾ ಕೂಪಾದಿತ್ಯರ್ಥಃ।** ವೃಕ್ಷ ಪಾಪಕರ್ಮಕಾರಿಯೆಂದೂ, ಕೂಪವು ಉದ್ವೇಗಕರವೆಂದೂ ಇವೆರಡರಿಂದಲೂ ರಕ್ಷಣೆಯನ್ನು ಪ್ರಾರ್ಥಿಸಿದೆಯೆಂದು ವಿವರಿಸಿದ್ದಾರೆ. ದು:ಖಹೇತುವಾದ ಈ ಪಾಪಕೃತ್ಯದಿಂದ ರಕ್ಷಿಸು ಎಂದು ತ್ರಿತನ ಪ್ರಾರ್ಥನೆ.

**ಅಂಹುರ**ಶಬ್ದಕ್ಕೆ ದುಃಖಹೇತುವಾದ ಪಾಪವೆಂದು ತೋರಿಸಲು ನಿರುಕ್ತಕಾರರು ಋಕ್ಸಂಹಿತೆಯ ಬೇರೊಂದು ವಾಕ್ಯವನ್ನು ಉದಹರಿಸಿದ್ದಾರೆ.

**ಸಪ್ತ ಮರ್ಯಾದಾಃ ಕವಯಸ್ತತಕ್ಷುಸ್ತಾಸಾಮೇಕಾಮಿದಭ್ಯಂಹುರೋ ಗಾತ್।**
(ಋ. ಸಂ. ೧೦–೫–೬)

ಅದು ಏಳುವಿಧವಾಗಿದೆ. ಸ್ತೇಯಂ, ತಲ್ಪಾರೋಹಣಂ, ಬ್ರಹ್ಮಹತ್ಯಾಂ, ಭ್ರೂಣಹತ್ಯಾಂ ಸುರಾಪಾನಂ, ದುಷ್ಕೃತಸ್ಯ ಕರ್ಮಣಃ ಪುನಃ ಪುನಃ ಸೇವಾಂ, ಪಾತಕೇಽನೃತೋದ್ಯಂ ಇತಿ—ಬ್ರಹ್ಮಹತ್ಯೆಯು ಆ ಪಾತಕಗಳಲ್ಲೊಂದೆಂದು ಪ್ರಕೃತವಾದ ಋಕ್ಕಿನಿಂದ ತಿಳಿಯುತ್ತದೆ.

**ಬೃಹಸ್ಪತಿಃ ಶುಶ್ರಾವ**—ತ್ರಿತನ ಪ್ರಾರ್ಥನೆಯು ಇತರ ದೇವತೆಗಳಿಗೆ ಕೇಳಿಸಿದರೂ ಸಹ ಅವರಿಗೆ ಅದು ಯಾರ ಪ್ರಾರ್ಥನೆಯೆಂದು ತಿಳಿಯದೇ ಶ್ರಮಪಟ್ಟರೆಂದೂ ಆಗ ಬೃಹಸ್ಪತಿಯು ಅವರಿಗೆ ತ್ರಿತನ ಮೊರೆಯನ್ನು ತಿಳಿಸಿದನೆಂದೂ ಕಥೆಯಿದೆ.

**ಸಃ ಯಾಗಾರ್ಥಃ ದೇವಾನ್ ಆಜುಹಾವ। ತಾ ಆಹ್ವಾನಕಾರಣಮನವಬುಧ್ಯಮಾನಾ ಆವಿಗ್ನಾ ಬಭೂವುಃ। ಅಥ ತದಾಹ್ವಾನಂ ಬೃಹಸ್ಪತಿಃ ಶುಶ್ರಾವ। ಸ ದೇವಾನುವಾಚ। ತ್ರಿತಸ್ಯ ವರ್ತತೇ ಯಜ್ಞಸ್ತತ್ರ ಗಚ್ಛಾಮಃ। ಅಥ ತತ್ರ ಸರ್ವೇ ದೇವಾ ಜಗ್ಮುಃ।** ಬಾವಿಯಲ್ಲಿ ಬಿದ್ದ ತ್ರಿತನು ಯಾಗಾರ್ಥವಾಗಿ ದೇವತೆಗಳನ್ನು ಕರೆದಾಗ ಅವರು ಇವನ ಆಹ್ವಾನಕಾರಣವನ್ನು ತಿಳಿಯದೇ ಶ್ರಮಪಟ್ಟರು. ಆಗ ಬೃಹಸ್ಪತಿಯು ಆ ಕಾರಣವನ್ನು ವಿವರಿಸಿ ಹೇಳಿದಾಗ ಅವರೆಲ್ಲರೂ ಅಲ್ಲಿಗೆ ಬಂದನು ಎಂದು ಸ್ಕಂದಸ್ವಾಮಿಗಳು ಪೂರ್ವಕಥೆಯಲ್ಲಿ ತಮ್ಮ ಭಾಷ್ಯದಲ್ಲಿ ಉದಹರಿಸಿದ್ದಾರೆ.

ಇನ್ನೊಂದು ಉದಾಹರಣೆಯ ಋಕ್ಕು—

**ಸಪ್ತ ಮರ್ಯಾದಾಃ ಕವಯಸ್ತತಕ್ಷುಸ್ತಾಸಾಮೇಕಾಮಿದಭ್ಯಂಹುರೋಗಾತ್ ।**
**ಆಯೋರ್ಹ ಸ್ಕಂಭ ಉಪಮಸ್ಯ ನೀಳೇ ಪಥಾಂ ವಿಸರ್ಗೇ ಧರುಣೇಷು ತಸ್ಥೌ ॥**
(ಋ. ಸಂ. ೧೦-೫-೬)

ಇದರ ಅರ್ಥವು—

ಮೇಧಾವಿಗಳಾದ ಋಷಿಗಳು ಸುರಾಪಾನ ದ್ಯೂತ ಇತ್ಯಾದಿ ಏಳು ವಿಧವಾದ ಪಾಪಗಳನ್ನು ನಿರ್ದೇಶಿಸಿ ಅವನ್ನು ನಿರೋಧಿಸುವ ನೀತಿಗಳನ್ನು ನಿಯಮಿಸಿದ್ದಾರೆ. ಅವುಗಳಲ್ಲಿ ಒಂದೊಂದನ್ನೇ ಮಾತ್ರ ಆಚರಿಸಿದರೂ ಮಾನವನು ಪಾಪಿಷ್ಠನಾಗಿ ಆಗುತ್ತಾನೆ. ಮಾನವನಿಗೆ ಆ ಪಾಪನಿರೋಧಕನಾದ ಅಗ್ನಿಯು ಸಮೀಪಸ್ಥವಾದ ಸ್ಥಾನದಲ್ಲಿಯೂ ಆದಿತ್ಯನ ರಶ್ಮಿಗಳಿಗೆ ಪ್ರಸರ ಸ್ಥಾನವಾದ ಅಂತರಿಕ್ಷದಲ್ಲಿಯೂ ಸ್ಥಿತನಾಗಿದ್ದಾನೆ.

**ಸಪ್ತಮರ್ಯಾದಾಃ**—ಈ ಮಂತ್ರದಲ್ಲಿ ಮಾನವನು ಆಚರಿಸಬಹುದಾದ ಪಾಪದ ಸ್ವರೂಪವನ್ನೂ ಅದರ ಪ್ರಭೇದಗಳನ್ನೂ ತಿಳಿಸಿ ಇಂತಹ ಪಾಪವನ್ನು ತಡೆಗಟ್ಟುವ ಅಗ್ನಿಯ ಪ್ರಶಂಸೆಯಿರುತ್ತದೆ. ಆಧ್ಯಾತ್ಮಿಕತತ್ತ್ವಕ್ಕೂ ನೀತಿಯುತವಾದ ಮಾನವನ ಜೀವನಕ್ಕೂ ಸಂಬಂಧವನ್ನು ಸೂಚಿಸಿದೆ. ಸದಸದಾತ್ಮಕವಾದ ಸಕಲವಿಶ್ವಕ್ಕೂ ಮೂಲಭೂತನಾದ ಅಗ್ನಿಯು ಸೃಷ್ಟಿಗಿಂತಲೂ ಪೂರ್ವಭಾವಿಯೆಂದು ವರ್ಣಿಸಿ ಆ ಮೂಲತತ್ತ್ವದಿಂದಲೇ ಜಗತ್ತಿನ ಸೃಷ್ಟಿಯೆಂದೂ, ಜಗತ್ತಿನ ವೈವಿಧ್ಯವೆಲ್ಲ ಆ ತತ್ವದ ಆವಿರ್ಭಾವವೇ ಎಂದು ವರ್ಣಿಸಿದೆ. ಈ ಮೂಲತತ್ತ್ವವು ಅಗ್ನಿರೂಪದಲ್ಲಿದ್ದು ಮಾನವನನ್ನು ಪಾಪವನ್ನಾಚರಿಸದಿರುವಂತೆ ತಡೆಯುತ್ತದೆಯೆಂದು ಅಗ್ನಿಯ ಪಾಪನಿರೋಧಕತ್ವವನ್ನು ಪ್ರಕೃತವಾದ ಮಂತ್ರದಲ್ಲಿ ಪ್ರಶಂಸಿಸಿದೆ.

**ಸಪ್ತ ಮರ್ಯಾದಾಃ** ಎಂಬುದರಿಂದ ಪಾಪದ ಪ್ರಭೇದಗಳನ್ನು ತಿಳಿಸಿದೆ. **ಮರ್ಯಾದಾಃ** ಎಂದರೆ **ಪಾಪ**ವೆಂದರ್ಥ ಮಾಡಿದೆ. ಸಾಧಾರಣವಾಗಿ, **ಮರ್ಯಾದಾ** ಎಂಬ ಪದಕ್ಕೆ **ಸೀಮಾ** ಎಲ್ಲೆ (Boundry) ಎಂದು ಲೌಕಿಕವಾದ ಪ್ರಯೋಗದಲ್ಲಿ ತಾತ್ಪರ್ಯವಿರುತ್ತದೆ. ನೀತಿಯನಿಯಮ ಅಥವಾ ಎಲ್ಲೆ ಎಂದರ್ಥವಾಗುತ್ತದೆ. ಪ್ರಕೃತದಲ್ಲಿ ಪಾಪವೆಂದರ್ಥಮಾಡಿದರೆ **ಮರ್ಯ + ಅದ**—ಮಾನವನನ್ನು ತಿನ್ನತಕ್ಕದ್ದು ಎಂದು ತಾತ್ಪರ್ಯವಾಗುತ್ತದೆ.

ಈ ಪಾಪವು ಏಳುವಿಧವೆಂದು ತಿಳಿಸಿದೆ. ಅವು ಯಾವುವೆಂದರೆ :—

೧) **ಪಾನಂ**—ಮದ್ಯಾದಿ ನಿಷಿದ್ಧವಸ್ತುಗಳ ಪಾನವು.
೨) **ಅಕ್ಷಾಃ**—ಪಗಡೆ ಮುಂತಾದ ದ್ಯೂತಕೃತ್ಯ, ತದಂಗವಾದ ಮೋಸ.
೩) **ಸ್ತ್ರಿಯಃ**—ಸ್ತ್ರೀ ವ್ಯಸನ, ತತ್ಪರಿಣಾಮಗಳು.
೪) **ಮೃಗಯಾ**—ಕಾಡಿನ ಜಂತುಗಳನ್ನು ಬೇಟೆಯಾಡಿ ಹಿಂಸಿಸುವುದು.
೫) **ದಂಡಃ**—ಅನ್ಯಾಯವಾಗಿ ಇತರರನ್ನು ಶಿಕ್ಷಿಸುವುದು (ರಾಜದಂಡವಲ್ಲ).
೬) **ಪಾರುಷ್ಯಂ**—ಇತರರ ಮನಃಕ್ಲೇಶವಾಗುವಂತೆ ಕ್ರೂರಭಾಷಣ ಮತ್ತು ವ್ಯವಹಾರ,
೭) **ಅಸ್ಯದೂಷಣಂ**—ಇತರರನ್ನು ಅನ್ಯಾಯವಾಗಿ ದೂಷಿಸುವುದು.

ಸಪ್ತಮರ್ಯಾದೆಗಳೆಂದು ಕರೆಯಲ್ಪಟ್ಟಿವೆ. ಈ ಸಂಖ್ಯೆಗಳನ್ನು ವಿವರಿಸುತ್ತಾ ಸಾಯಣರು ಈ ಸಂದರ್ಭದಲ್ಲಿ ಉಕ್ತವಾಗಿರುವ ನಿರುಕ್ತಕಾರರ ವಾಕ್ಯವನ್ನೂ ಉದಹರಿಸಿದ್ದಾರೆ. ಅಲ್ಲಿರುವ ಪರಿಸಂಖ್ಯಾನವು ಕೊಂಚ ವ್ಯತ್ಯಾಸವಾಗಿದೆ. ನಿರುಕ್ತವಾಕ್ಯದ ಪ್ರಕಾರ ಪಾಪಪ್ರಭೇದಗಳು ಈ ರೀತಿಯಲ್ಲಿರುತ್ತವೆ—

**ಸಪ್ತೈವ ಮರ್ಯಾದಾಃ ಕವಯಶ್ಚಕ್ರುಸ್ತಾಸಾಮೇಕಾಮಪ್ಯಭಿಗಚ್ಛನ್ನಂಹಸ್ವಾನ್ ಭವತಿ । ಸ್ತೇಯಂ ತಲ್ಪಾರೋಹಣಂ ಬ್ರಹ್ಮಹತ್ಯಾಂ ಭ್ರೂಣಹತ್ಯಾಂ ಸುರಾಪಾನಂ ದುಷ್ಕೃತಸ್ಯ ಕರ್ಮಣಃ ಪುನಃಪುನಃ ಸೇವಾಂ ಪಾತಕೇಽನೃತೋದ್ಯಮಿತಿ॥**

(ನಿ. ೬–೨೭)

೧) **ಸ್ತೇಯಂ**—ಕಳ್ಳತನವನ್ನು ಮಾಡುವುದು.

೨) **ತಲ್ಪಾರೋಹಣಂ**—ಗುರುಪತ್ನಿಯನ್ನು ಮೋಹಿಸಿ ಅತಿಕ್ರಮ ಪ್ರವೇಶಮಾಡುವುದು.

೩) **ಬ್ರಹ್ಮಹತ್ಯಾ**—ಬ್ರಾಹ್ಮಣನನ್ನು ಕೊಲ್ಲುವುದು.

೪) **ಭ್ರೂಣಹತ್ಯಾ**—ಗರ್ಭಪಿಂಡವನ್ನು ನಾಶಮಾಡುವುದು.

೫) **ಸುರಾಪಾನಂ**—ಮದ್ಯಾದಿ ನಿಷಿದ್ಧವಸ್ತುಗಳನ್ನು ಸೇವಿಸುವುದು.

೬) **ದುಷ್ಕೃತಸ್ಯ ಕರ್ಮಣಃ ಪುನಃಪುನಃ ಸೇವಾ**—ಕೆಟ್ಟಕೆಲಸವನ್ನು ಆಶ್ರಯಿಸಿ ಅದನ್ನು ಪದೇ ಪದೇ ಮಾಡುತ್ತಿರುವುದು.

೭) **ಅನೃತೋದ್ಯಂ**—ಪಾಪಕರ್ಮವನ್ನು ಸಮರ್ಥಿಸಲು ಸುಳ್ಳನ್ನು ಹೇಳುವುದು.

ಈ ಏಳೂ ಮರ್ಯಾದೆಗಳೆಂದು ಕರೆಯಲ್ಪಟ್ಟವೆಯೆಂದು ನಿರುಕ್ತಕಾರರ ಮತ. ಇವುಗಳಲ್ಲಿ ಒಂದೊಂದು ಪಾಪವನ್ನು ಮಾತ್ರ ಮಾಡಿದರೂ ಅವನು ಮಹಾ ಪಾತಕಿಯೆನಿಸುವನು.

ಛಾಂದೋಗ್ಯಾದಿಗಳಲ್ಲಿ ಪಾತಕವು ಐದು ವಿಧವೆಂದು ನಿರ್ದೇಶಿಸಿದೆ. ಅವು ಯಾವುವೆಂದರೆ,

**ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ (ಚೈತೇ ಪತಂತಿ ಚತ್ವಾರಃ) ಪಂಚಮಶ್ಚಾಚರಂಸ್ತೈಃ ಇತಿ ।**

೧) ಚಿನ್ನವನ್ನು ಕದಿಯುವುದು, ೨) ಸುರಾಪಾನ, ೩) ಗರುಪತ್ನಿಯೊಡನೆ ಅತಿಕ್ರಮಪ್ರವೇಶ, ೪) ಬ್ರಹ್ಮ ಹತ್ಯೆ ಈ ನಾಲ್ಕು ಕರ್ಮವನ್ನು ಮಾಡುವವರು ಪತಿತರು. ಐದನೆಯದಾಗಿ, ೫) ಈ ನಾಲ್ಕು ಕರ್ಮಗಳನ್ನು ಮಾಡುವ ಪತಿತರೊಡನೆ ಸರ್ವದಾ ಸಂಪರ್ಕವನ್ನಿಟ್ಟುಕೊಂಡಿರುವುದು. ಈ ಐವರೂ ಪಾತಕಿಗಳು ಎಂದು ತಿಳಿಸಿದೆ. ಸಾಧಾರಣವಾಗಿ ಈ ಐದುಮಂದಿಗಳೇ ಧರ್ಮಶಾಸ್ತ್ರಾದಿಗಳಲ್ಲಿಯೂ ಪ್ರಸಿದ್ಧವಾಗಿವೆ. ಧರ್ಮಶಾಸ್ತ್ರಾದಿಗಳಲ್ಲಿ ಈ ಪರಿಸಂಖ್ಯಾನಕ್ರಮಗಳನ್ನು ಇಳಿಸುವುದು ಪ್ರಕೃತದಲ್ಲಿ ಅನುಚಿತವಾಗಲಾರದು.

ಮಹಾ ಪಾತಕಗಳು ಸಪ್ತವಿಧಗಳೆಂದು ಕೆಲವೆಡೆಗಳಲ್ಲಿಯೂ ಐದು ವಿಧಗಳೆಂದು ಇನ್ನು ಕೆಲವೆಡೆಗಳಲ್ಲಿಯೂ ಪರಿಗಣಿತವಾಗಿವೆ. ಅವುಗಳಲ್ಲಿ **ಕಾಮಜ, ಕ್ರೋಧಜ** ಎಂಬ ಎರಡು ಪ್ರಭೇದಗಳಿವೆಯೆಂದು ಸಾಯಣರ ವಾಕ್ಯವು ಸೂಚಿಸುತ್ತದೆ. ಧರ್ಮಶಾಸ್ತ್ರಾದಿಗಳಲ್ಲಿಯೂ ಸಹ ಈ ಎರಡು ವಿಧಗಳು ಸ್ಪಷ್ಟವಾಗಿ ತಿಳಸಲ್ಪಟ್ಟವೆ. ಅವುಗಳಲ್ಲಿ ಕಾಮಜವಾವುದು, ಕ್ರೋಧಜವಾವುದು ಎಂಬುದರ ವಿಷಯವನ್ನು ಪರಿಶೀಲಿಸುತ್ತಾ ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಈ ರೀತಿ ತಿಳಿಸಿದೆ.

ಮೇಲೆ ಹೇಳಿದಂತೆ ನಿರುಕ್ತದಲ್ಲಿಯೂ, ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿಯೂ ಮುಖ್ಯವಾದ ಪಾಪಕೃತ್ಯಗಳು ಏಳು ಎಂದು ಹೇಳಿದ್ದರೂ, ಪಾಪಗಳಲ್ಲಿ ಅನೇಕವಿಧವಿರುವುದನ್ನೂ ಪಾಪಮಾಡಿದವನು ಪವಮಾನಸೋಮದೇವತೆಯನ್ನು ಸ್ತುತಿಸುವ ೬೧೦ ಋಕ್ಕುಗಳನ್ನು ಎಂದರೆ ಋಗ್ವೇದಸಂಹಿತೆಯ ೯ ನೆಯ ಮಂಡಲದ ಪ್ರಾರಂಭದಲ್ಲಿರುವ ಗಾಯತ್ರೀ ಛಂದಸ್ಸಿನ

೬೧೦ ಋಕ್ಕುಗಳೆನ್ನೊಳಗೊಂಡಿರುವ ೧–೬೭ ಸೂಕ್ತಗಳನ್ನು ಗುರುಮುಖದಿಂದ ನಿಯಮವಾಗಿ ಅಧ್ಯಯನಮಾಡಿದಲ್ಲಿ ಅಂತಹ ಪುರುಷನ ನಾನಾವಿಧ ಪಾಪಗಳನ್ನು ಪರಿಹಾರಮಾಡಿ ಪರಿಶುದ್ಧನನ್ನಾಗಿ ಮಾಡುತ್ತೇನೆಂದು ವೇದಪುರುಷನೇ ಪರಿಶಿಷ್ಟಮಂತ್ರಗಳಲ್ಲಿ ಹೇಳಿದಾನೆ, ಅವುಗಳನ್ನು ಇಲ್ಲಿ ವಿವರಿಸಲಾಗಿದೆ.

**ಋಷಯಸ್ತು ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ ।**
**ತಪಂತಸ್ತಪಸೋಗ್ರೇಣ ಪಾವಮಾನೀರ್ಋಚೋಽಬ್ರುವನ್ ॥**

(ಪರಿಶಿಷ್ಟ. ೧೮–೬)

ಪೂರ್ವದಲ್ಲಿ ಸ್ವರ್ಗವನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಮಸ್ತ ಋಷಿಗಳೂ ಉಗ್ರವಾದ ತಪಸ್ಸನ್ನು ಮಾಡಿ ಈ ಪಾವಮಾನೀ ಋಕ್ಕುಗಳನ್ನು ಅಧ್ಯಯನಮಾಡಿ ಅವುಗಳ ಪಾಪಪರಿಹಾರಕವಾದ ಪ್ರಶಂಸೆಯನ್ನು ಈ ರೀತಿ ಮಾಡಿರುವರು.

**ಯನ್ಮೇ ಗರ್ಭೇ ವಸತಃ ಪಾಪಮುಗ್ರಂ ಯಜ್ಜಾಯಮಾನಸ್ಯ ಚ ಕಿಂಚಿದನ್ಯತ್ ।**
**ಜಾತಸ್ಯ ಚ ಯಚ್ಚಾಪಿ ಚ ವರ್ಧತೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮-೭)

ಸರ್ವೇಶ್ವರನಾದ ವೇದಪುರುಷನು ಈ ರೀತಿ ಹೇಳಿರುವನು—ಯಾವ ಪುರುಷನು ಗರ್ಭವಾಸದಲ್ಲಿರುವಾಗಲೂ, ಅನಂತರ ಹುಟ್ಟುವಾಗಲೂ, ಹುಟ್ಟಿದ ಮೇಲೆಯೂ ಬೆಳೆಯುತ್ತಿರುವಾಗಲೂ ಅತ್ಯುಗ್ರವಾದ ಪಾಪವನ್ನು ಮಾಡಿದ್ದರೂ ಅವನು ಪಾವಮಾನೀ ಮಂತ್ರಗಳನ್ನು ಅಧ್ಯಯನ ಮಾಡಿದಲ್ಲಿ ಅಂತಹ ಪಾಪಗಳೆಲ್ಲಾ ನಾಶಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಮಾತಾಪಿತ್ರೋರ್ಯನ್ನ ಕೃತಂ ವಚೋ ಮೇ ಯತ್ಸ್ಥಾವರಂ ಜಂಗಮಮಾಬಭೂವ ।**
**ವಿಶ್ವಸ್ಯ ತತ್ಪ್ರಹೃಷಿತಂ ವಚೋ ಮೇ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೮)

ತಂದೆತಾಯಿಗಳ ಮಾತನ್ನು ಮೀರಿದ ಪಾಪವನ್ನು ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಯಾವ ಪ್ರಾಣಿಗಳೇ ಆಗಲಿ ಅಹಿತವನ್ನು ಬಯಸಿ ಆಡುವ ಮಾತಿನಿಂದ ಯಾವ ಪಾಪವು ಉಂಟಾಗುವುದೋ ಅಂತಹ ಪಾಪವನ್ನು ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಗೋಘ್ನಾತ್ ತಸ್ಕರತ್ವಾತ್ಸ್ತ್ರೀವಧಾನ್ಯಚ್ಚ ಕಿಲ್ಬಿಷಂ ।**
**ಪಾಪಕಂ ಚ ಚರಣೇಭ್ಯಸ್ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೯)

ಗೋಹತ್ಯ, ಕಳ್ಳತನ, ಸ್ತ್ರೀಹತ್ಯ, ಕಾಲುಗಳಿಂದ ಪ್ರಾಣಿಗಳನ್ನು ತುಳಿದು ಹಿಂಸಿಸುವ ಕೃತ್ಯ ಇವುಗಳಿಂದ ಉಂಟಾಗಬಹುದಾದ ಪಾಪವನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

ಬ್ರಹ್ಮವಧಾತ್ಸುರಾಪಾನಾತ್ಸ್ವರ್ಣಸ್ತೇಯಾದ್ವೃಷಲೀಗಮನನ್ಮೈಥುನಸಂಗಮಾತ್ ।
ಗುರೋರ್ದಾರಾಧಿಗಮನಾಚ್ಚ ತತ್ಪಾವಮಾನೀಭಿರಹಂ ಪುನಾಮಿ ॥

(ಪರಿ. ೧೮–೧೦)

ಬ್ರಹ್ಮಹತ್ಯ, ಮದ್ಯಪಾನ, ಚಿನ್ನವನ್ನು ಕದಿಯುವುದು, ತಂಗಿಗೆ ಮದುವೆಯಾಗಿದ್ದರೂ ತನಗೆ ಮದುವೆಯಾಗಿರುವ, ವೃಷಲಿ ಎಂಬ ಸ್ತ್ರೀಯನ್ನು ಸಂಗಮಾಡಿದ ಪಾಪ, ಗುರುವಿನ ಪತ್ನಿಯಲ್ಲಿ ಸಂಭೋಗಮಾಡಿದ ಪಾಪ ಇವುಗಳನ್ನೆಲ್ಲಾ ಪರಿಹರಿಸಿ ಶುದ್ಧನನ್ನಾಗಿಮಾಡುತ್ತೇನೆ.

**ಬಾಲಘ್ನಾನ್ಮಾತೃಪಿತೃವಧಾದ್ಭೂಮಿತರಾತ್ಸರ್ವವರ್ಣಗಮನನ್ಮೈಥುನಸಂಗನಾತ್ ।**
**ಪಾಪೇಭ್ಯಶ್ಚ ಪ್ರತಿಗ್ರಹಾತ್ಸದ್ಯಃ ಪ್ರಹರತಿ ಸರ್ವದುಷ್ಕೃತಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೧೧)

ಮಕ್ಕಳನ್ನು ಕೊಲ್ಲುವುದು, ತಂದೆತಾಯಿಗಳನ್ನು ಕೊಲ್ಲುವುದು, ಹೊಲಗದ್ದೆ ಮೊದಲಾದ ಭೂಮಿಯನ್ನು ಮೋಸದಿಂದ ಅಪಹರಿಸುವುದು, ಎಲ್ಲಾ ನೀಚಜಾತಿಯ ಸ್ತ್ರೀಯರೊಂದಿಗೆ ಸಂಗಮಾಡುವುದು, ದುರ್ದಾನವನ್ನು ಸ್ವೀಕರಿಸುವುದು, ಇತರ ಕೆಟ್ಟಕೆಲಸಗಳನ್ನು ಮಾಡುವುದು ಇವುಗಳಿಂದ ಯಾವಯಾವ ಪಾಪಗಳು ಸಂಭವಿಸುವವೋ ಆ ಪಾಪಗಳನ್ನೆಲ್ಲಾ ಪರಿಹರಿಸಿ ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಕ್ರಯವಿಕ್ರಯಾದ್ಯೋನಿದೋಷಾದ್ಭಕ್ಷಾದ್ಭೋಜ್ಯಾತ್ಪ್ರತಿಗ್ರಹಾತ್ ।**
**ಅಸಂಭೋಜನಾಚ್ಚಾಪಿ ನೃಶಂಸಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೧೨)

ಅನ್ಯಾಯರೀತಿಯಿಂದ ಎಂದರೆ ಮೋಸದಿಂದ ಕೊಳ್ಳುವುದು, ಮಾರುವುದು, ಸಿಕ್ಕಿದ ಸ್ತ್ರೀಯರ ಸಂಗಮಾಡುವುದು, ತಿನ್ನಬಾರದ ಪದಾರ್ಥಗಳನ್ನು ತಿನ್ನುವುದು, ಸ್ವೀಕಾರಾರ್ಹವಲ್ಲದ ವಸ್ತುಗಳನ್ನು ಸ್ವೀಕರಿಸುವುದು, ಮನೆಗೆ ಬಂದ ಅತಿಥಿಯನ್ನು ಬಿಟ್ಟು ಭೋಜನಮಾಡುವುದು ಇವುಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸುತ್ತೇವೆ.

**ದುರ್ಹುಷ್ಟಂ ದುರಧೀಶಂ ಪಾಪಂ ಯಚ್ಚಾಜ್ಞಾನತೋ ಕೃತಂ ।**
**ಅಭಿಯಾಜಿತಾಶ್ಚಾಸಂಯಾಜ್ಯಾಸ್ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೧೩)

ವಿಧ್ಯುಕ್ತರೀತಿಯನ್ನು ಬಿಟ್ಟು ಬೇರೆವಿಧವಾಗಿ ಯಜ್ಞಮಾಡುವುದು, ನಿಯಮರಹಿತವಾಗಿ ವೇದಾಧ್ಯಯನಮಾಡುವುದು ಅಜ್ಞಾನದಿಂದ ಮಾಡಿದ ಪಾಪ, ಯಜ್ಞವನ್ನು ಮಾಡಲು ಅರ್ಹರಲ್ಲದವರಿಗೆ ಯಜ್ಞಮಾಡಿಸುವುದು, ಯಜ್ಞಾರ್ಹರಿಗೆ ಮಾಡಿಸದಿರುವುದು ಈ ವಿಧವಾದ ದುಷ್ಕೃತ್ಯಗಳಿಂದ ಸಂಭವಿಸುವ ಪಾಪಗಳನ್ನು ಪರಿಹರಿಸಿ ಶುದ್ಧನನ್ನಾಗಿ ಮಾಡುತ್ತೇನೆ.

**ಅಮಂತ್ರಮನ್ನಂ ಯತ್ಕಿಂಚಿದ್ಹೂಯತೇ ಚ ಹುತಾಶನೇ ।**
**ಸಂವತ್ಸರಕೃತಂ ಪಾಪಂ ತತ್ಪಾವಮಾನೀಭಿರಹಂ ಪುನಾಮಿ ॥**

(ಪರಿ. ೧೮–೧೪)

ವಿಧ್ಯುಕ್ತಮಂತ್ರದಪಠನವಿಲ್ಲದೆ ಅಥವಾ ತಪ್ಪುತಪ್ಪಾಗಿ ಮಂತ್ರವನ್ನು ಪಠಿಸುತ್ತಾ ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುವುದರಿಂದ ಸಂಭವಿಸುವ ಪಾಪವನ್ನೂ, ಸಂವತ್ಸರದಲ್ಲಿ ಯಾವಯಾವ ಪಾಪಗಳನ್ನು ಮಾಡಿದ್ದರೂ ಅವೆಲ್ಲವನ್ನೂ ಪರಿಹಾರಮಾಡಿ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತೇನೆ.

**ಋತಸ್ಯ ಯೋನಯೋಽಮೃತಸ್ಯ ಧಾಮ ವಿಶ್ವಾ ದೇವೇಭ್ಯಃ ಪುಣ್ಯಗಂಧಾಃ ।
ತಾ ನ ಆಪಃ ಪ್ರ ವಹಂತು ಪಾಪಂ ಶುದ್ಧಾ ಗಚ್ಛಾಮಿ ಸುಕೃತಾಮು ಲೋಕಂ ತತ್ಪಾವಮಾನೀ-
ಭಿರಹಂ ಪುನಾಮಿ ॥**

(ಪರಿ. ೧೮–೧೫)

ಸತ್ಯ ಅಥವಾ ಯಜ್ಞಕ್ಕೆ ಮುಖ್ಯ ಆಧಾರಭೂತವೂ, ಶಾಶ್ವತವಾದ ಸ್ವರ್ಗದಲ್ಲಿ ನೆಲೆಸಿರುವವೂ, ದೇವತೆಗಳಿಗೆ ಪ್ರಿಯವನ್ನುಂಟು ಮಾಡುವವೂ ಆದ ಸ್ವರ್ಗೀಯೋದಕಗಳು ಮೇಲೆ ಹೇಳಿದ ಪಾಪಗಳನ್ನು ಕೊಚ್ಚಿಕೊಂಡು ಹೋಗಲಿ. ಆ ಪುರುಷನನ್ನು ಶುದ್ಧನನ್ನಾಗಿ ಮಾಡಿ ಉತ್ತಮ ಲೋಕವನ್ನು ಪಡೆಯುವಂತೆ ಮಾಡುವೆನು.

ಮೇಲೆ ಹೇಳಿದ ಮಂತ್ರಗಳಲ್ಲಿ ನಾನಾವಿಧ ಪಾಪಗಳ ವರ್ಣನೆ ಇದೆ. ಪಾಪಗಳ ಸಂಖ್ಯೆಯು ಇಲ್ಲಿಗೆ ಮುಗಿಯಿತೆಂದು ಯಾರೂ ಭಾವಿಸಬಾರದು. ಇನ್ನು ಎಷ್ಟೋ ವಿಧವಾದ ಪಾಪಗಳಿರುವವು. ಅವುಗಳನ್ನೆಲ್ಲಾ ಇಲ್ಲಿ ವಿವರಿಸುವುದು ಸಾಧ್ಯವಿಲ್ಲ ಮತ್ತು ಆ ರೀತಿ ವಿವರಿಸುವುದು ಅಪ್ರಕೃತ. ಮುಖ್ಯವಾಗಿ ಎಲ್ಲಾ ವಿಧ ಪಾಪಗಳೂ ಮೇಲೆ ಹೇಳಿದ ಏಳು ವಿಧ ಪಾಪಗಳಲ್ಲಿಯೇ ಅಡಗಿರುವವು ಎಂದು ಭಾವಿಸಬೇಕು.

ಬತಃ ॥ ೧೧೨ ॥

ಬತ ಇತಿ ನಿಪಾತಃ ಸ್ವೇದಾನುಕಂಪಯೋಃ ।

**ಬತಃ** ಎಂಬ ಶಬ್ದವು ಅವ್ಯಯವು. ಇದು ಖೇದ (ವಿಷಾದ) ಅಥವಾ ಅನುಕಂಪ (ದಯೆ ಅಥವಾ ಕನಿಕರ) ಎಂಬರ್ಥವನ್ನು ಸೂಚಿಸುವುದು. ಇದರ ಉದಾಹರಣೆಯನ್ನು ಮುಂದಿನ ಋಕ್ಕಿನಲ್ಲಿ (ಮುಂದಿನ ಖಂಡದಲ್ಲಿ) ವಿವರಿಸಲಾಗಿದೆ.

**ಇತಿ ಸಪ್ತವಿಂಶಃ ಖಂಡಃ**

**ಇಲ್ಲಿಗೆ ಇಪ್ಪತ್ತೇಳನೆಯ ಖಂಡವು ಸಮಾಪ್ತವು**

---

## ಅಷ್ಟಾವಿಂಶಃ ಖಂಡಃ

## ಇಪ್ಪತ್ತೆಂಟನೆಯ ಖಂಡವು

ಬತೋ ಬತಾಸಿ ಯಮ ನೈವ ತೇ ಮನೋ ಹೃದಯಞ್ಚಾ- ವಿದಾಮ । ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿಷ್ವಜಾತೇ ಲಿಬುಜೇವವೃಕ್ಷಂ । ಬತೋ ಬಲಾತೀತೋ ಭವತಿ ದುರ್ಬಲೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚ ವಿಜಾನೀಮೋಽನ್ಯಾ ಕಿಲ ತ್ವಾಂ ಪರಿಷ್ವಂ ಕ್ಷ್ಯತೇ ಕಕ್ಷ್ಯೇವ ಯುಕ್ತಂ ಲಿಬುಜೇವ ವೃಕ್ಷಂ ಲಿಬುಜಾ ವ್ರತತಿರ್ಭವತಿ ಲೀಯತೇ ವಿಭಜನ್ತೀತಿ ವ್ರತತಿರ್ವರಣಾಚ್ಚ

ಶಯನಾಚ್ಚ ತತನಾಚ್ಚ ವಾತಾಪ್ಯಮುದಕಂ ಭವತಿ ವಾತ ಏತದಾ-ಪ್ಯಾಯಯತಿ। ಪುನಾನೋ ವಾತಾಪ್ಯಂ ವಿಶ್ವಶ್ಚನ್ದ್ರಮಿತ್ಯಪಿ ನಿಗಮೋ ಭವತಿ। ವನೇ ನ ವಾಯೋ ನ್ಯಧಾಯಿ ಚಾಕನ್। ವನ ಇವ ವಾಯೋ ವೇಃ ಪುತ್ರಶ್ಚಾಯನ್ನಿತಿ ವಾ ಕಾಮಯಮಾನ ಇತಿ ವಾ ವೇತಿ ಚ ಯ ಇತಿ ಚ ಚಕಾರ ಶಾಕಲ್ಯ ಉದಾತ್ತಂ ತ್ವೇವಮಾಖ್ಯಾತ-ಮಭವಿಷ್ಯದಸುಸಮಾಪ್ತಶ್ಚಾರ್ಥೋ ರಥರ್ಯತೀತಿ ಸಿದ್ಧಸ್ತತ್ ಪ್ರೇಪ್ಸೂ ರಥಂ ಕಾಮಯತ ಇತಿ ವಾ। ಏಷ ದೇವೋ ರಥರ್ಯತೀತ್ಯಪಿ ನಿಗಮೋ ಭವತಿ ॥ ೨೮ ॥

———

"ಬತೋ ಬತಾಸಿ ಯಮನೈವ ತೇ ಮನೋ ಹೃದಯಞ್ಚಾವಿದಾಮ।
ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿಷ್ವಜಾತೇ ಲಿಬುಜೇವ ವೃಕ್ಷಮ್ ॥"

ಬತೋ ಬಲಾದತೀತೋ ಭವತಿ। ದುರ್ಬಲೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚ ವಿಜಾನೀಮೋಽನ್ಯಾ ಕಿಲ ತ್ವಾಂ ಪರಿಷ್ವಙ್ಕ್ಷ್ಯತೇ ಕಕ್ಷ್ಯೇವ ಯುಕ್ತಂ ಲಿಬುಜೇವ ವೃಕ್ಷಮ್। ಲಿಬುಜಾ ವ್ರತತಿರ್ಭವತಿ ಲೀಯತೇ ವಿಭಜನ್ತೀತಿ ॥ ವ್ರತತಿರ್ವರಣಾಚ್ಚ ಸಂಯನಾಚ್ಚ ತತನಾಚ್ಚ ॥೧॥

ಉದಾಹರಣೆಯ ಋಕ್ಕು—

**ಬತೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚಾವಿದಾಮ ।**
**ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿ ಷ್ವಜಾತೇ ಲಿಬುಜೇವ ವೃಕ್ಷಂ ॥**

(ಋ. ಸಂ. ೧೦-೧೦-೧೩)

ಇದರ ಅರ್ಥವು—

ಎಲೈ ಯಮನೇ, ನೀನು ಖಂಡಿತವಾಗಿಯೂ ದುರ್ಬಲನಾಗಿ ಆಗಿದ್ದೀಯೆ. ನಿನ್ನ ಮನಸ್ಸನ್ನಾಗಲಿ ನಿನ್ನ ಹೃದಯವನ್ನಾಗಲಿ ನಾವು ಖಂಡಿತ ಅರಿಯಲಾರೆವು. ಹಗ್ಗವು ತನ್ನನ್ನು ಹೊಂದಿರುವ ಅಶ್ವವನ್ನು ಕಟ್ಟಿಕೊಳ್ಳುವಂತೆಯೂ ಲತೆಯು (ಬಳ್ಳಿಯು) ವೃಕ್ಷವನ್ನು ಅಪ್ಪಿಕೊಳ್ಳುವಂತೆಯೂ ಬೇರೊಬ್ಬ ಸ್ತ್ರೀಯು ನಿನ್ನನ್ನಪ್ಪಿಕೊಳ್ಳುತ್ತಾಳೆ.

ಬತ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು ಪ್ರಕೃತ ಋಕ್ಕಿನ ನಿರ್ವಚನವನ್ನು ಹೇಳಿದ್ದಾರೆ—

**ಬತಃ । ಬತ ಇತಿ ನಿಪಾತಃ ಖೇದಾನುಕಂಪಯೋಃ। ಬತೋ ಬತಾಸಿ ಯಮ ನೈವತೇ ಮನೋ ಹೃದಯಂ ಚಾವಿದಾಮ । ಅನ್ಯಾ ಕಿಲ ತ್ವಾಂ ಕಕ್ಷ್ಯೇವ ಯುಕ್ತಂ ಪರಿಷ್ವಜಾತೇ ಲಿಬುಜೇವ ವೃಕ್ಷಂ ॥ ಬತೋ ಬಲಾದದೀತೋ ಭವತಿ । ದುರ್ಬಲೋ ಬತಾಸಿ ಯಮ ನೈವ ತೇ ಮನೋ ಹೃದಯಂ ಚ ವಿಜಾನೀಮೋಽನ್ಯಾ ಕಿಲ ತ್ವಾಂ ಪರಿಷ್ವಂಕ್ಷ್ಯೇತೇ ಕಕ್ಷ್ಯೇವ ಯುಕ್ತಂ ಲಿಬುಜೇವ ವೃಕ್ಷಂ । ಲಿಬುಜಾ ವ್ರತತಿರ್ಭವತಿ ಲೀಯತೇ ವಿಭಜಂತೀತಿ । ವ್ರತತಿರ್ವರಣಾಚ್ಚ ಸಂಯಯನಾಚ್ಚ ತತನಾಚ್ಚ ॥**

(ನಿ. ೬–೨೮)

ಬತ ಎಂಬ ಶಬ್ದವು ಸಖೇದಾಶ್ಚರ್ಯಗಳನ್ನೂ ಅಥವಾ ವ್ಯಸನವನ್ನೂ ಮರುಕವನ್ನೂ ಸೂಚಿಸುವ ನಿಪಾತವು (ಅವ್ಯಯವು). ಎಲೈ ಯಮನೇ, ನಿನ್ನ ಮನಸ್ಸು ಧೈರ್ಯಯುಕ್ತವಾಗಿಲ್ಲ. ಅತಿ ದುರ್ಬಲವಾಗಿರುವುದು ಎಂದರೆ ಮನಸ್ಥಿತಿಯಿಲ್ಲ. ನಿನ್ನ ಮನಸ್ಸನ್ನು ಹೀಗೆಯೇ ಸರಿ ಎಂದು ನಾವು ತಿಳಿಯಲಾರೆವು. ಆಹಾ ಕಷ್ಟ, ಕಷ್ಟ ! ಲತೆಯು ಸಮೀಪದಲ್ಲಿರುವ ವೃಕ್ಷವನ್ನು ಸುತ್ತಿಕೊಳ್ಳುವಂತೆ ಬೇರೊಬ್ಬ ಸ್ತ್ರೀಯು ನಿನ್ನನ್ನು ತನ್ನ ಬಾಹುಗಳಿಂದ ಬಿಗಿದಪ್ಪಿಕೊಳ್ಳುವಳು. ಇವನ್ನು ನೋಡಿ ಸಹಿಸುವುದು ಬಹುಕಷ್ಟವು. ಲಿಬುಜಾ ಎಂದರೆ ಒಂದು ವಿಧ ಬಳ್ಳಿಯು. ಇದು ತನ್ನ ಲತೆಯನ್ನು ವೃಕ್ಷದಲ್ಲೆಲ್ಲಾ ವ್ಯಾಪಿಸುವಂತೆ ಸುತ್ತಿಕೊಳ್ಳುವುದು. ಈ ರೀತಿ ವಿಭಾಗಿಸಿ ಅಥವಾ ವ್ಯಾಪಿಸಿ ವೃಕ್ಷದಲ್ಲಿಯೇ ಸೇರಿಕೊಳ್ಳುವುದರಿಂದ ಲಿಬುಜಾ ಎಂದರೆ ವ್ರತತಿ ಅಥವಾ ಬಳ್ಳಿಗೆ ಹೆಸರು. ಇದರಂತೆಯೇ ವ್ರತತಿಶಬ್ದವೂ ಸಹ ತನಗೆ ಬೇಕಾದ ವೃಕ್ಷವನ್ನು ಆರಿಸಿಕೊಳ್ಳು ಎಂಬರ್ಥವಿರುವ **ವೃ** ಧಾತುವಿನಿಂದಾಗಲಿ, ಅಥವಾ ಸುತ್ತಿಕೊಳ್ಳು ಎಂಬರ್ಥವಿರುವ **ಸಿ** ಧಾತುವಿನಿಂದಾಗಲಿ, ಸುತ್ತಲೂ ಹರಡು ಎಂಬರ್ಥವಿರುವ **ತನು** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದಕ್ಕೆ ಬಳ್ಳಿ, ಲತೆಯೆಂದೇ ಅರ್ಥವಿರುವುದು.

ವಾತಾಪ್ಯಮ್ ॥೧೧೩॥

ವಾತಾಪ್ಯಮುದಕಂ ಭವತಿ ವಾತ ಏತದಾಪ್ಯಾಯಯತಿ ॥ “ಪುನಾನೋ ವಾತಾಪ್ಯಂ ವಿಶ್ವಶ್ಚನ್ದ್ರಮ್” ಇತ್ಯಪಿ ನಿಗಮೋ ಭವತಿ ॥೨॥

**ವಾತಾಪ್ಯಂ** ಎಂದರೆ ಉದಕವು, ನೀರು ಎಂದರ್ಥವು. ಗಾಳಿಯಿಂದ ನೀರು ಅಲ್ಲೋಲಕಲ್ಲೋಲವಾಗಿ ಉಬ್ಬುವುದರಿಂದ ನೀರಿಗೆ ವಾತಾಪ್ಯಂ ಎಂದು ಹೆಸರು ಬಂದಿದೆ.

ಉದಾಹರಣೆಯ ಋಕ್ಕು—

**ಸೂನೋ ರಯಿಮುಪ ಮಾಸ್ವ ನೃವಂತಂ ಪುನಾನೋ ವಾತಾಪ್ಯಂ ವಿಶ್ವಶ್ಚಂದ್ರಂ ।**
**ಪ್ರ ವಂದಿತುರಿಂದೋ ತಾರ್ಯಾಯುಃ ಪ್ರಾತರ್ಮಕ್ಷೂಧಿಯಾವಸುರ್ಜಗಮ್ಯಾತ್ ॥**

(ಋ. ಸಂ. ೯–೯೩–೫)

ಇದರ ಅರ್ಥವು—

ಎಲೈ ಸೋಮದೇವನೇ, ಶುದ್ಧಿಯನ್ನು ಹೊಂದಿದ ನೀನು ಪುತ್ರಾದಿಗಳಿಂದ ಕೂಡಿದ ಧನವನ್ನು ನಮಗೆ ಕ್ಷಿಪ್ರವಾಗಿ ಒದಗಿಸು. ನಮಗೆ ಲೋಕಕ್ಕೆಲ್ಲಾ ಆಹ್ಲಾದಕರವಾದ ಉದಕವನ್ನು ಒದಗಿಸು. ಎಲೈ ಸೋಮದೇವನೇ, ನಿನ್ನನ್ನು ಸ್ತುತಿಸುವವನ ಆಯುಸ್ಸು ದೀರ್ಘವಾಗಿ ಬೆಳೆಯಲಿ. ಕರ್ಮರೂಪವಾದ ಧನವುಳ್ಳ ಸೋಮನು ಪ್ರಾತಃಕಾಲದಲ್ಲಿ ಶೀಘ್ರವಾಗಿ ಯಜ್ಞಗೃಹಕ್ಕೆ ಬರಲಿ.

ಚಾಕನ್ ||೧೧೪||

" ವನೇ ನ ವಾಯೋ ನ್ಯಧಾಯಿ ಚಾಕನ್ ||" ವನ ಇವ ವಾಯೋ ವೇಃ ಪುತ್ರಶ್ಚಾಯನ್ನಿತಿ ವಾ ಕಾಮಯಮಾನ ಇತಿ ವಾ || ವೇತಿ ಚ ಯ ಇತಿ ಚ ಚಕಾರ ಶಾಕಲ್ಯ ಉದಾತ್ತಂ ತ್ವೇವಮಾಖ್ಯಾತಮ- ಭವಿಷ್ಯದಸುಸಮಾಪ್ತಶ್ಚಾರ್ಥಃ ||೩||

ಉದಾಹರಣೆಯ ಋಕ್ಕು—

**ವನೇ ನ ವಾಯೋ ನ್ಯಧಾಯಿ ಚಾಕಞ್ಛುಚಿರ್ವಾಂ ಸ್ತೋಮೋ ಭುರಣಾವಜೀಗಃ |**
**ಯಸ್ಯೇದಿಂದ್ರಃ ಪುರುದಿನೇಷು ಹೋತಾ ನೃಣಾಂ ನರ್ಯೋ ನೃತಮಃ ಕ್ಷಪಾವಾನ್ ||**

(ಋ. ಸಂ. ೧೦-೨೯-೧)

ಇದರ ಅರ್ಥವು—

ಜಗತ್ತಿಗೆ ಭರ್ತೃಗಳಾದ ಎಲೈ ಅಶ್ವಿನೀದೇವತೆಗಳೇ, ಮಾನವರಲ್ಲೆಲ್ಲಾ ಅತ್ಯುತ್ತಮನಾದ ಮಾನವನೂ ಮಾನವನಿಗೆ ಹಿತಕಾರಿಯೂ ರಾತ್ರಿಯವೇಳೆ ಅರ್ಪಿತವಾದ ಸೋಮವುಳ್ಳವನೂ ಆದ ಇಂದ್ರನು ಅನೇಕ ದಿನಗಳಲ್ಲಿ ಯಾವ ಸ್ತೋಮವನ್ನು ಪಡೆಯುವುದಕ್ಕಾಗಿ ಪ್ರಾರ್ಥಿಸಲ್ಪಡುವನೋ ಅಂತಹುದೂ ಪರಿಶುದ್ಧವಾದುದೂ ಆದ ಯಾವ ಸ್ತೋಮವು ನಮ್ಮಲ್ಲಿ ನಿಹಿತವಾಗಿರುವುದೋ ಅದು, ಪಕ್ಷಿಯು ವೃಕ್ಷದಲ್ಲಿ ಮೊಟ್ಟೆಯನ್ನಿಟ್ಟು (ಮರಿಯನ್ನಿಟ್ಟು) ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ನಿಮ್ಮನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತದೆ.

**ಚಾಕನ್**—ಈ ಶಬ್ದದ ನಿರ್ವಚನವನ್ನು ಹೇಳುತ್ತಾ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಈ ರೀತಿ ಹೇಳಿದಾರೆ—

**ಚಾಕನ್ | ವನೇನ ವಾಯೋ ನ್ಯಧಾಯಿ ಚಾಕನ್ | ವನ ಇವ ವಾಯೋ ವೇಃ ಪುತ್ರಶ್ಚಾಯನ್ನಿತಿ ವಾ ಕಾಮಯಮಾನ ಇತಿ ವಾ | ವೇತಿ ಚ ಯ ಇತಿ ಚಕಾರ ಶಾಕಲ್ಯ ಉದಾತ್ತಂ ತ್ವೇವಮಾಖ್ಯಾತಮಭವಿಷ್ಯದಸುಸಮಾಪ್ತಶ್ಚಾರ್ಥಃ ||**

(ನಿ. ೬-೨೮)

ಇಲ್ಲಿ ವನಶಬ್ದಕ್ಕೆ ವೃಕ್ಷವೆಂದರ್ಥವು. ವೃಕ್ಷದಲ್ಲಿ ಕುಳಿತಿರುವ ಪಕ್ಷಿಯು ತನ್ನ ಎಳೆಯ ಮರಿಯನ್ನು ಎಂದರೆ ಇನ್ನೂ ರೆಕ್ಕೆಯು ಹುಟ್ಟದಿರುವ ಸಣ್ಣ ಮರಿಯನ್ನು ವೃಕ್ಷದಲ್ಲಿಟ್ಟು ಅದು ಹಾರುವುದಕ್ಕೆ ಬರದೇ ಇರುವುದರಿಂದ ಕೆಳಕ್ಕೆ ಎಲ್ಲಿ ಬಿದ್ದುಹೋಗುವುದೋ ಎಂದು ಉತ್ಸುಕತೆಯಿಂದ ನೋಡುತ್ತಿರುವಂತೆ ಎಂದು ಈ ವಾಕ್ಯದ ಅಭಿಪ್ರಾಯವು. ಈ ವಾಕ್ಯದಲ್ಲಿರುವ ವಾಯಃ ಎಂಬ ಶಬ್ದವನ್ನು ಶಾಕಲ್ಯಋಷಿಯು **ವಾ ಯಃ** ಎಂದು ಎರಡು ಪದಗಳನ್ನಾಗಿ ಪದವಿಭಾಗ ಮಾಡಿರುವರು. ಹಾಗೆ ಮಾಡಿದಲ್ಲಿ ವಾಕ್ಯದ ಕ್ರಿಯಾಪದಕ್ಕೆ ಉದಾತ್ತವಿರಬೇಕಾಗುತ್ತಿತ್ತು ಮತ್ತು ವಾಕ್ಯದ ಅರ್ಥವು ಅಪೂರ್ಣವಾಗುತ್ತಿತ್ತು, ಎಂದು ನಿರುಕ್ತಕಾರರು ತಮ್ಮ ಅಭಿಪ್ರಾಯವನ್ನು ಸೂಚಿಸಿದಾರೆ.

ಇಲ್ಲಿ **ವಾಯಃ** ಎಂದು ಒಂದೇ ಪದವೆಂದು ಭಾವಿಸಿದರೆ—ವಿ ಎಂದರೆ ಪಕ್ಷಿಯು. ವಾಯಃ ಎಂದರೆ ಪಕ್ಷೀಸಂಬಂಧವಾದ ಎಂದರೆ ಪಕ್ಷಿಯಿಂದ ಹುಟ್ಟಿದ ಪಕ್ಷಿಯ ಮರಿಯು ಎಂದರ್ಥವು. ಈ ಅರ್ಥವೇ ಸಮಂಜಸವಾಗಿರುವುದು. ಆದರೆ ಪದಪಾಠಕಾರರಾದ ಶಾಕಲ್ಯಋಷಿಯು ವಾ ಯಃ ಎಂದು ಬೇರೆ ಬೇರೆ ಪದಚ್ಛೇದಮಾಡಿರುವರು. ಈ ರೀತಿ ಪದವಿಭಾಗಮಾಡಿದರೆ

ಮುಖ್ಯ ಕ್ರಿಯಾಪದವಾದ ನ್ಯಧಾಯಿ ಶಬ್ದವು ಆದ್ಯುದಾತ್ತವಾಗಬೇಕಾಗುತ್ತಿತ್ತು ಮತ್ತು ವಾಕ್ಯದ ಅರ್ಥವು ಸಂಪೂರ್ಣವಾಗುತ್ತಿರಲಿಲ್ಲ. ಆದ್ದರಿಂದ ವಾಯಃ ಎಂಬ ಶಬ್ದವು ಒಂದೇ ಪದವೆಂದು ಭಾವಿಸುವುದೇ ಪರಿಗ್ರಾಹ್ಯವು ಎಂದು ಭಾಷ್ಯಕಾರರು ನಿರುಕ್ತಕಾರರ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ.

ರಥರ್ಯತಿ ॥೧೧೫॥

ರಥರ್ಯತೀತಿ ಸಿದ್ಧಸ್ತತ್ರೇಪ್ಸುಃ, ರಥಂ ಕಾಮಯತ ಇತಿ ವಾ ॥ " ಏಷ ದೇವೋ ರಥರ್ಯತಿ । " ಇತ್ಯಪಿ ನಿಗಮೋ ಭವತಿ ॥ ೪ ॥ ೨೮ ॥

**ರಥರ್ಯತಿ** ರಥವು ಸಿದ್ಧಪಡಿಸಲ್ಪಟ್ಟು ಅದರಲ್ಲಿ ಕುಳಿತು ಹೋಗುವವನು. ಅಥವಾ ರಥವನ್ನು ಅಪೇಕ್ಷಿಸುವವನು. ಉದಾಹರಣೆಯ ಋಕ್ಕು—

**ಏಷ ದೇವೋ ರಥರ್ಯತಿ ಪವಮಾನೋ ದಶಸ್ಯತಿ ।**
**ಆವಿಷ್ಕೃಣೋತಿ ವಗ್ವನುಂ ॥**

(ಋ. ಸಂ. ೯-೩-೫)

ಇದರ ಅರ್ಥವು---

ಪ್ರವಿಸುವುದೂ ದೇವತಾತ್ಮಕವೂ ಆದ ಈ ಸೋಮವು ನಮ್ಮ ಯಾಗಕ್ಕೆ ಬರಲು ರಥವನ್ನು ಇಚ್ಛಿಸುತ್ತದೆ. ನಮ್ಮ ಇಷ್ಟಾರ್ಥವನ್ನು ಒದಗಿಸಿಕೊಡುತ್ತದೆ. ತಾನು ಬರುವ ಶಬ್ದವನ್ನು ಪ್ರಕಟಪಡಿಸುತ್ತದೆ,

**ಇತಿ ಅಷ್ಟಾವಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೆಂಟನೆಯ ಖಂಡವು ಸಮಾಪ್ತವು

---

## ಏಕೋನತ್ರಿಂಶಃ ಖಂಡಃ

### ಇಪ್ಪತ್ತೊಂಭತ್ತನೆಯ ಖಂಡವು

ಧೇನುಂ ನ ಇಷಂ ಪಿನ್ವತಮಸಕ್ರಾಂ । ಅಸಂಕ್ರಮಣೀಯಂ । ಅಥವ ಆಥವನಾತ್ । ಮತೀನಾಂ ಚ ಸಾಧನಂ ವಿಪ್ರಾಣಾಂ ಚಾಥವಮಿತ್ಯಪಿ ನಿಗಮೋ ಭವತ್ಯನವಬ್ರವೋಽನವಕ್ಷಿಪ್ತವಚನಃ । ವಿ ಜೇಷಕೃದಿಂದ್ರ ಇವಾ ನವಬ್ರವ ಇತ್ಯಪಿ ನಿಗಮೋ ಭವತಿ ॥೨೯॥

---

ಅಸಕ್ರಾಮ್ ॥೧೧೬॥

"ಧೇನುಂ ನ ಇಷಂ ಪಿನ್ವತಮಸಕ್ರಾಮ್ ।" ಅಸಂಕ್ರಮಣೀಮ್ ॥೧॥

**ಅಸಕ್ರಾಂ**—ಈ ಶಬ್ದಕ್ಕೆ **ಧೇನುಂ ನ ಇಷಂ ಪಿನ್ವತಮಸಕ್ರಾಂ**—ಎಂದರೆ ಯಾವಾಗಲೂ ಹಾಲು ಕೊಡುವುದನ್ನು ನಿಲ್ಲಿಸದಿರುವ ಗೋವಿನಂತಿರುವ ಅನ್ನವನ್ನು ಎಂದರೆ ಯಾವಾಗಲೂ ಕ್ಷಯಿಸದಿರುವ (ಕಮ್ಮಿಯಾಗದಿರುವ) ಅನ್ನವನ್ನು (ಆಹಾರವನ್ನು) ನಮಗೆ ಒದಗಿಸಿಕೊಡಿ ಎಂದಭಿಪ್ರಾಯವು.

ಉದಾಹರಣೆಯ ಋಕ್ಕು—

**ಪುರು ಹಿ ವಾಂ ಪುರುಭುಜಾ ದೇಷ್ಣಂ ಧೇನುಂ ನ ಇಷಂ ಪಿನ್ವತಮಸಕ್ರಾಂ ।**
**ಸ್ತುತಶ್ಚ ವಾ ಮಾಧ್ವೀ ಸುಷ್ಟುತಿಶ್ಚ ರಸಾಶ್ಚ ಯೇ ವಾಮನು ರಾತಿಮಗ್ಮನ್ ॥**

(ಋ. ಸಂ. ೬-೬೩-೮)

ಇದರ ಅರ್ಥವು—

ಬಹುಜನರ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮಿಂದ ಕೊಡಲ್ಪಡಬೇಕಾದ ಧನವು ಅತ್ಯಧಿಕವಾಗಿದೆ. ಆದುದರಿಂದ ನಮಗೆ ತೃಪ್ತಿಕರವಾದುದೂ ಯಾವಾಗಲೂ ಕಮ್ಮಿಯಾಗದಿರುವುದೂ ಆದ ಅನ್ನವನ್ನು ಒದಗಿಸಿ ಕೊಡಿರಿ, ಸಂತೋಷಕಾರಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಸ್ತೋತೃಗಳು ಸ್ತುತಿಸುತ್ತಾರೆ. ಸ್ತೋತೃಗಳಲ್ಲಿ ಅತ್ಯುತ್ತಮವಾದ ಸ್ತುತಿಯೂ ಇರುತ್ತದೆ. ಯಾವ ಸೋಮರಸಗಳು ನಿಮ್ಮ ದಾನವನ್ನು ಉದ್ದೇಶಿಸಿ ದೇವಗೃಹವನ್ನು ಸೇರಿವೆಯೋ ಅಂತಹ ಸೋಮರಸಗಳೂ ಸಿದ್ಧವಾಗಿವೆ.

ಆಧವಃ ॥೧೧೭॥

ಆಧವ ಆಧವನಾತ್ । "ಮತೀನಾಂ ಚ ಸಾಧನಂ ವಿಪ್ರಾಣಾಂ ಚಾಧವಮ್ ।" ಇತ್ಯಪಿ ನಿಗಮೋ ಭವತಿ ॥೨॥

**ಆಧವಃ**—ಅಲ್ಲೋಲಕಲ್ಲೋಲಮಾಡುವವನು, ಅಲ್ಲಾಡುವಂತೆ ಅಥವಾ ಕಂಪಿಸುವಂತೆ ಮಾಡುವವನು, ಉತ್ಸಾಹಕಾರಕನು.

ಉದಾಹರಣೆಯ ಋಕ್ಕು—

**ಮಂಸೀಮಹಿ ತ್ವಾ ವಯಮಸ್ಮಾಕಂ ದೇವ ಪೂಷನ್ ॥**
**ಮತೀನಾಂ ಚ ಸಾಧನಂ ವಿಪ್ರಾಣಾಂ ಚಾಧವಂ ॥**

(ಋ. ಸಂ. ೧೦-೨೬-೪)

ಇದರ ಅರ್ಥವು—

ಪ್ರಕಾಶಮಾನನಾದ ಎಲೈ ಪೂಷದೇವನೇ, ಸ್ತುತಿಕರ್ತರಾದ ನಾವು ನಮ್ಮ ಸಕಲಸ್ತುತಿಗಳಿಗೂ ಪ್ರೇರಕನೂ, ಮೇಧಾವಿಗಳಾದ ಯಜಮಾನಾದಿಗಳಿಗೆ ಉತ್ಸಾಹಕಾರಕನೂ ಆದ ನಿನ್ನನ್ನು ಸ್ತುತಿಸುತ್ತೇವೆ.

ಅನವಬ್ರವಃ ॥೧೧೮॥

ಅನವಬ್ರವೋಽನವಕ್ಷಿಪ್ತವಚನಃ । "ವಿಜೇಷಕೃದಿಂದ್ರ ಇವಾನವಬ್ರವಃ" ಇತ್ಯಪಿ ನಿಗಮೋ ಭವತಿ ॥೩॥೨೮॥

ಉದಾಹರಣೆಯ ಋಕ್ಕು—

**ವಿಜೇಷಕೃದಿಂದ್ರ ಇವಾನವಬ್ರವೋ೩ ಸ್ಮಾಕಂ ಮನ್ಯೋ ಅಧಿಪಾ ಭವೇಹ ।**
**ಪ್ರಿಯಂ ತೇ ನಾಮ ಸಹುರೇ ಗೃಣೀಮಸಿ ವಿದ್ಮಾ ತಮುತ್ಸಂ ಯತ ಆಬಭೂಥ ॥**
(ಋ. ಸಂ. ೧೦-೮೪-೫)

ಇದರ ಅರ್ಥವು—

ಎಲೈ ಮನ್ಯುದೇವನೇ, ಇಂದ್ರನಂತೆ ವಿಜಯಿಯೂ ನಿಂದಾರಹಿತನೂ ಆದ ನೀನು ಈ ಯಜ್ಞದಲ್ಲಿ ನಮಗೆ ಪೂರ್ಣ ರಕ್ಷಕನಾಗಿರು. ಶತ್ರುನಾಶಕನಾದ ಎಲೈ ಮನ್ಯುವೇ, ನಿನ್ನನ್ನು ಪ್ರಶಂಸಿಸಿ ಹಿತಕರವಾದ ಸ್ತೋತ್ರವನ್ನು ನಾವು ಪಠಿಸುತ್ತೇವೆ. ಯಾವ ಸ್ತುತಿಯಿಂದ ನೀನು ಪುಷ್ಟಿಯನ್ನು ಹೊಂದುವಿಯೋ ಉತ್ತೇಜಕವಾದ ಅದೇ ಸ್ತುತಿಯನ್ನು ನಾವು ಅರಿತಿದ್ದೇವೆ.

**ಅನವಬ್ರವಃ—ಅನವಬ್ರವೋಽನವಕ್ಷಿಪ್ತವಚನಃ ।** ಅನವಬ್ರಃ ಎಂದರೆ ತಾನು ಆಡುವ ಮಾತುಗಳಲ್ಲಿ ದೋಷಗಳಿಲ್ಲದಿರುವವನು. ಉತ್ತಮವಾದ, ನಿರ್ದೋಷವಾದ ಅನಿಂದ್ಯ ಅಥವಾ ಸಭ್ಯವಾದ ಮಾತುಗಳನ್ನಾಡುವವನು ಎಂದಭಿಪ್ರಾಯವು. ಇಂದ್ರನ ವಾಕ್ಯವು ಆರೀತಿ ದೋಷರಹಿತವಾಗಿರುವುದರಿಂದ ಮನ್ಯುದೇವತೆಯ ವಾಕ್ಯವೂ ಆರೀತಿ ಇರುವುದೆಂದು ಇಲ್ಲಿ ಇಂದ್ರನ ಉದಾಹರಣೆಯನ್ನು ಋಷಿಯು ಕೊಟ್ಟಿದಾನೆ.

**ಇತಿ ಏಕೋನತ್ರಿಂಶಃ ಖಂಡಃ**

ಇಲ್ಲಿಗೆ ಇಪ್ಪತ್ತೊಂಭತ್ತನೆಯ ಖಂಡವು ಸಮಾಪ್ತವು

---

## ತ್ರಿಂಶಃ ಖಂಡಃ

## ಮೂವತ್ತನೆಯ ಖಂಡವು

ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ । ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥ ಅದಾಯಿನಿ ಕಾಣೇ ವಿಕಟೇ ಕಾಣೋಽವಿಕ್ರಾನ್ತದರ್ಶನ ಇತ್ಯೌಪಮನ್ಯವಃ ಕಣತೇರ್ವಾ ಸ್ಯಾದಣೂ-ಭಾವಕರ್ಮಣಃ ಕಣತಿಃ ಶಬ್ದಾಣೂಭಾವೇ ಭಾಷ್ಯತೇಽನು ಕಣತೀತಿ ಮಾತ್ರಾಣೂಭಾವಾತ್ಕಣೋ ದರ್ಶನಾಣೂಭಾವಾತ್ಕಾಣೋ ವಿಕಟೋ ವಿಕ್ರಾನ್ತಗತಿರಿತ್ಯೌಪಮನ್ಯವಃ ಕುಟತೇರ್ವಾ ಸ್ಯಾದ್ ವಿಪರೀತಸ್ಯ ವಿಕುಟಿತೋ ಭವತಿ ಗಿರಿಂ ಗಚ್ಛ ಸದಾನೋನುವೇ ಶಬ್ದಕಾರಿಕೇ । ಶಿರಿಂಬಿಠಸ್ಯ ಸತ್ವಭಿಃ । ಶಿರಿಂಬಿಠೋ ಮೇಘಃ ಶೀರ್ಯತೇ ಬಿಠೇ ಬಿಠಮ-ನ್ತರಿಕ್ಷಂ ಬಿಠಂ ಬೀರಿಟೇನ ವ್ಯಾಖ್ಯಾತಂ ತಸ್ಯ ಸತ್ತ್ವೈರುದಕೈರಿತಿ ಸ್ಯಾತ್ತೈಷ್ಟ್ವಾ ಚಾತಯಾಮೋಽಪಿ ವಾ ಶಿರಿಂಬಿಠೋ ಭಾರದ್ವಾಜಃ

ಕಾಲಕರ್ಣೋಪೇತೋಽಲಕ್ಷ್ಮೀರ್ನಿರ್ಣಾತಯಾಂಚಕಾರ ತಸ್ಯ ಸತ್ತ್ವೈಃ ಕರ್ಮಭಿರಿತಿಸ್ಯಾತ್ತೈಸ್ತ್ವಾ ಚಾತಯಾಮಶ್ಚಾತಯತಿರ್ನಾಶನೇ ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ। ಪರಾಶರಃ ಶತಯಾತುರ್ವಸಿಷ್ಠ ಇತ್ಯಪಿ ನಿಗಮೋ ಭವತೀಂದ್ರೋಽಪಿ ಪರಾಶರ ಉಚ್ಯತೇ ಪರಾ ಶಾತಯಿತಾ ಯಾತೂನಾಂ। ಇಂದ್ರೋ ಯಾತೂನಾಮಭವತ್ಪರಾಶರ ಇತ್ಯಪಿ ನಿಗಮೋ ಭವತಿ। ಕ್ರಿವಿರ್ದತೀ ವಿಕರ್ತ್ತನದನ್ತೀ। ಯತ್ರಾ ವೋ ದಿದ್ಯುದ್ರದತಿ ಕ್ರಿವಿರ್ದತೀತ್ಯಪಿ ನಿಗಮೋ ಭವತಿ। ಕರೂಲತೀ ಕೃತ್ತದತೀ ಅಪಿ ವಾ ದೇವಂ ಕಂಚಿತ್ ಕೃತ್ತದನ್ತಂ ದೃಷ್ಟ್ವೈವಮವಷ್ಯತ್ ॥ ೩೦ ॥

———

ಸದಾನ್ವೇ ॥೧೧೯॥ ಶಿರಿಂಬಿಠಃ ॥೧೨೦॥

"ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ। ಶಿರಿಮ್ಬಿಠಸ್ಯ ಸತ್ತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥" ಅದಾಯಿನಿ ಕಾಣೇ ವಿಕಟೇ। ಕಾಣೋಽವಿಕ್ರಾನ್ತದರ್ಶನ ಇತ್ಯೌಪಮನ್ಯವಃ। ಕಣತೇರ್ವಾ ಸ್ಯಾದಣೂಭಾವಕರ್ಮಣಃ ॥ ಕಣತಿಃ ಶಬ್ದಾಣೂಭಾವೇ ಭಾಷ್ಯತೇಽನುಕಣತೀತಿ ॥ ಮಾತ್ರಾಣೂಭಾವಾತ್ಕಣೋ, ದರ್ಶನಾಣೂಭಾವಾತ್ಕಾಣಃ ॥ ವಿಕಟೋ ವಿಕ್ರಾನ್ತಗತಿರಿತ್ಯೌಪಮನ್ಯವಃ ॥ ಕುಟತೇರ್ವಾ ಸ್ಯಾದ್ ವಿಪರೀತಸ್ಯ ವಿಕುಟಿತೋ ಭವತಿ ॥ ಗಿರಿಂ ಗಚ್ಛ ಸದಾನೋನುವೇ ಶಬ್ದಕಾರಿಕೇ ॥ "ಶಿರಿಮ್ಬಿಠಸ್ಯ ಸತ್ತ್ವಭಿಃ ॥" ಶಿರಿಮ್ಬಿಠೋ ಮೇಘಃ। ಶೀರ್ಯತೇ ಬಿಠೇ ॥ ಬಿಠಮನ್ತರಿಕ್ಷಮ್ ಬಿಠಂ ಬೀರಿಠೇನ ವ್ಯಾಖ್ಯಾತಮ್ ॥ ತಸ್ಯ ಸತ್ತ್ವೈರುದಕೈರಿತಿ ಸ್ಯಾತ್ತೈಸ್ತ್ವಾ ಚಾತಯಾಮಃ, ಅಪಿ ವಾ ಶಿರಿಮ್ಬಿಠೋ ಭಾರದ್ವಾಜಃ ॥ ಕಾಳಕರ್ಣೋಪೇತೋಽಲಕ್ಷ್ಮೀರ್ನಿರ್ಣಾಶಯಾಞ್ಚಕಾರ ತಸ್ಯ ಸತ್ತ್ವೈಃ ಕರ್ಮಭಿರಿತಿ ಸ್ಯಾತ್ತೈಸ್ತ್ವಾ ಚಾತಯಾಮಃ ॥ ಚಾತಯಿತಿರ್ನಾಶನೇ ॥೧॥

ಉದಾಹರಣೆಯ ಋಕ್ಕು—

**ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ ।**
**ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥**

(ಋ. ಸಂ. ೧೦-೧೫೫-೧)

ಇದರ ಅರ್ಥವು—

ಎಲೈ ದುರ್ಭಿಕ್ಷ (ಕ್ಷಾಮ) ದೇವತೆಯೇ, ನೀನು ದಾನವಿರೋಧಿಯು, ಕುತ್ಸಿತ ಶಬ್ದವಾಚ್ಯಳು- ಅಥವಾ ಕೆಟ್ಟರೂಪವುಳ್ಳವಳು. ವಿಕಲವಾದ ಅಂಗಗಳುಳ್ಳವಳು ಅಥವಾ ವಿಕಾರವಾದ ಗಮನವುಳ್ಳವಳು. ಯಾವಾಗಲೂ ಅಳುತ್ತಿರುವವಳು ಇಂತಹ ನೀನು ನಿರ್ಜನವಾದ ಪರ್ವತಪ್ರದೇಶಕ್ಕೆ ಹೊರಟುಹೋಗು ನಮಗೆ ತೊಂದರೆ ಮಾಡಬೇಡ. ಮೇಘದಲ್ಲಿರುವ ಉದಕಗಳಿಂದ ನಿನ್ನ ಉಗ್ರತೆಯನ್ನು ನಾಶಮಾಡುತ್ತೇವೆ ಅಥವಾ ಶಿರಿಂಬಿಠಋಷಿಯು ನೆರವೇರಿಸುವ ಸತ್ಕರ್ಮಾನುಷ್ಠಾನಗಳಿಂದ ಅಲಕ್ಷ್ಮಿಯಾದ ನಿನ್ನನ್ನು ನಾಶಮಾಡುತ್ತೇವೆ.

ಈ ಋಕ್ಕಿನಲ್ಲಿ ದುರ್ಭಿಕ್ಷ (ಕ್ಷಾಮ) ದೇವತೆಯಯನ್ನು ವರ್ಣಿಸಲಾಗಿದೆ. ಕ್ಷಾಮಕಾಲದಲ್ಲಿ ಜನರಿಗೆ ತಿನ್ನಲು ಆಹಾರವಿರುವುದಿಲ್ಲವಾದ್ದರಿಂದ ಮತ್ತೊಬ್ಬರಿಗೆ ದಾನಮಾಡುವ ಮನಸ್ಸೇ ಇರುವುದಿಲ್ಲ. ಮನಸ್ಸಿದ್ದರೂ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ಕ್ಷಾಮ ದೇವತೆಯನ್ನು ದಾನವಿರೋಧಿನಿ ಎಂದು ಕರೆಯಲಾಗಿದೆ ; ಆಹಾರವಿಲ್ಲದ್ದರಿಂದ ಜನರು ಈ ಕ್ಷಾಮವನ್ನು ಕೆಟ್ಟಮಾತುಗಳಿಂದ ಶಪಿಸುವರು, ಜನರು ಕೃಶರಾಗಿಯೂ ವಿಕಲಾಂಗವುಳ್ಳವರಾಗಿಯೂ ನಡೆಯುವುದಕ್ಕೆ ಶಕ್ತಿಯಿಲ್ಲದವರಾಗಿಯೂ ಆಹಾರಾರ್ಥವಾಗಿ ರೋದಿಸುತ್ತಲೂ ಇರುವರು. ಆದ್ದರಿಂದ ಈ ದೇವತೆಯನ್ನು ಇಲ್ಲಿ ಕಾಣೇ, ವಿಕಟೇ ಸದಾನ್ವೆ, ಎಂಬ ಶಬ್ದಗಳಿಂದ ವರ್ಣಿಸಲಾಗಿದೆ. ಮತ್ತು ಈ ದುರ್ಭಿಕ್ಷದಿಂದ ಜನರು ತುಂಬಿರುವ ಗ್ರಾಮನಪರಗಳಿಗೆ ತೊಂದರೆಯುಂಟಾಗುವುದರಿಂದ ನಿರ್ಜನ ಪ್ರದೇಶವಾದ ಗಿರಿದುರ್ಗಗಳಿಗೆ ಹೊರಟು ಹೋಗೆಂದು ಆಶಿಸಲಾಗಿದೆ. ಮತ್ತು ಕ್ಷಾಮವು ನಿವಾರಣೆಯಾಗಬೇಕಾದರೆ ಯಥೇಷ್ಟವಾಗಿ ವೃಷ್ಟಿಯಾಗಬೇಕು. ಆದ್ದರಿಂದ ಮೇಘದಲ್ಲಿರುವ ಸಾರಭೂತವಾದ ಉದಕಗಳಿಂದ ವೃಷ್ಟಿಯಮೂಲಕ ಕ್ಷಾಮವನ್ನು ನಾಶಮಾಡುತ್ತೇವೆಂದು ಋಷಿಯು ಹೇಳಿದಾನೆ ಅಥವಾ ಸೂಕ್ತದ್ರಷ್ಟೃವಾದ ಶಿರಿಂಬಿಠಋಷಿಯ ಯಜ್ಞಾದಿ ಕರ್ಮಾಚರಣೆಯಿಂದ ಕ್ಷಾಮವು ನಿವಾರಣೆಯಾಗಲೆಂದು ಆಶಿಸಲಾಗಿದೆ. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿ ಮುಖ್ಯವಾದ ಶಬ್ದಗಳಿಗೆ ನಿರ್ವಚನವನ್ನು ಹೇಳಿದಾರೆ—

**ಸದಾನ್ವೇ । ಶಿರಿಂಬಿಠಃ ॥ ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ । ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥ ಅದಾಯಿನಿ ಕಾಣೇ ವಿಕಟೇ । ಕಾಣೋಽವಿಕ್ರಾಂತದರ್ಶನ ಇತ್ಯೌಪಮನ್ಯವಃ । ಕಣತೇರ್ವಾ ಸ್ಯಾದಣೂಭಾವಕರ್ಮಣಃ । ಕಣತಿಃ ಶಬ್ದಾಣೂಭಾವೇ ಭಾಷ್ಯತೇಽನುಕಣತೀತಿ । ಮಾತ್ರಾಣೂಭಾವಾತ್ಕಣೋ ದರ್ಶನಾಣೂಭಾವಾತ್ಕಾಣಃ ॥ ವಿಕಟೋ ವಿಕ್ರಾಂತಗತಿರಿತ್ಯೌಪಮನ್ಯವಃ । ಕಟತೇರ್ವಾಸ್ಯಾದ್ವಿಪರೀತಸ್ಯ ವಿಕುಟಿತೋ ಭವತಿ । ಗಿರಿಂ ಗಚ್ಛ ಸದಾನೋನುವೇ ಶಬ್ದಕಾರಿಕೇ । ಶಿರಿಂಬಠಸ್ಯ ಸತ್ವಭಿಃ । ಶಿರಿಂಬಿಠೋ ಮೇಘಃ । ಶೀರ್ಯತೇ ಬಿಠೇ । ಬಿಠಮಂತರಿಕ್ಷಂ ಬಿಠಂ ಬೀರಿಠೇನ ವ್ಯಾಖ್ಯಾತಂ ॥ ತಸ್ಯ ಸತ್ವೈರುದಕೈರಿತಿ ಸ್ಯಾತ್ತೈಷ್ಟ್ವಾ ಚಾತಯಾಮಃ, ಅಪಿ ವಾ ಶಿರಿಂಬಿಠೋ ಭಾರದ್ವಾಜಃ । ಕಾಳಕರ್ಣೋಪೇತೋಽಲಕ್ಷ್ಮೀರ್ನಿರ್ಣಾಶಯಾಂಚಕಾರ ತಸ್ಯ ಸತ್ವೈಃ ಕರ್ಮಭಿರಿತಿಸ್ಯಾತ್ತೈಷ್ಟ್ವಾ ಚಾತಯಾಮಃ ॥ ಚಾತಯತಿರ್ನಾಶನೇ ॥**

ಈ ಋಕ್ಕಿನಲ್ಲಿ ಅಲಕ್ಷ್ಮಿಯನ್ನು ಅಥವಾ ದುರ್ಭಿಕ್ಷದೇವತೆಯನ್ನು ವರ್ಣಿಸಲಾಗಿದೆ. ಸದಾನ್ವೇ ಎಂದರೆ ಸದಾ ನೋನುವೇ—ಹಸಿವಿನಿಂದ ರೋದಿಸುತ್ತಿರುವ ಎಂದರ್ಥವು.

**ಅರಾಯಿ—ಅದಾಯಿನಿ** ದಾನವನ್ನು ಕೊಡದಿರುವ ಎಂದರ್ಥವು. ಕ್ಷಾಮಕಾಲದಲ್ಲಿ ಒಬ್ಬರಿಗೊಬ್ಬರಿಗೆ ದಾನಮಾಡು ವುದಕ್ಕೆ ಮನಸ್ಸು ಬರುವುದಿಲ್ಲ. ತಮಗೇ ಇಲ್ಲದ್ದರಿಂದ ಇತರಿಗೆ ಏನು ಕೊಡಲು ಸಾಧ್ಯ ? ಅಲಕ್ಷ್ಮಿ ಎಂದರೆ ದಾರಿದ್ರ ಪೀಡಿತರಾಗಿರುವವರ ವಿಷಯವೂ ಹಾಗೆಯೇ. ತಮಗೇ ಇಲ್ಲದ್ದರಿಂದ ದರಿದ್ರರು ಇತರರಿಗೆ ದಾನ ಮಾಡಲು ಸಾಧ್ಯವಿಲ್ಲ.

**ಕಾಣೇ । ಕಾಣೋಽವಿಕ್ರಾಂತದರ್ಶನ ಇತ್ಯೌಪಮನ್ಯವಃ ।** ಕಾಣ ಎಂದರೆ ಅಂಧಕ. ಕಣ್ಣು ಕಾಣಿಸದಿರುವ ದುರ್ಭಿಕ್ಷದಲ್ಲಿ ಅನ್ನಾಭಾವದಿಂದ ದೃಷ್ಟಿಮಾಂದ್ಯವಾಗುವುದು. ದರಿದ್ರರ ವಿಷಯವೂ ಹಾಗೆಯೇ. ಇದು ಔಪಮನ್ಯವ ಎಂಬ ಆಚಾರ್ಯರ ಅಭಿಪ್ರಾಯವು. **ಕಣತೇರ್ವಾ ಸ್ಯಾದಣೂಭಾವಕರ್ಮಣಃ । ಕಣತಿಃಶಬ್ದಾಣೂಭಾವೇ ಭಾಷ್ಯತೇಽನು ಕಣತೀತಿ । ಮಾತ್ರಾಣೂಭಾವಾತ್ಕಣೋ ದರ್ಶನಾಣೂಭಾವಾತ್ಕಾಣಃ ।ಕಣ್** ಎಂಬ ಧಾತುವು ಅತಿಸ್ವಲ್ಪವಾದ ಎಂದರೆ ಬಹಳ ಮೆತ್ತನೆಯ ಧ್ವನಿಯಲ್ಲಿ ಹೇಳುವ ಶಬ್ದವನ್ನು ಸೂಚಿಸುವುದು. ಅಥವಾ ಸ್ವಲ್ಪವೂ ಕೇಳಿಸದಿರುವ ಎಂಬರ್ಥವನ್ನು ಸೂಚಿಸವಬಹುದು. ಬಹಳ ಸಣ್ಣದಾದ ಆಕಾರದಿಂದಿರುವ ಪುರುಷನನ್ನು **ಕಣ** ಎಂದು ಕರೆಯುವರು. **ಕಾಣ** ಎಂದರೆ ಕಣ್ಣು ಕಾಣಿಸದಿರುವ ಅಥವಾ ಒಂದುಕಣ್ಣು ಮಾತ್ರವಿರುವಪುರುಷನು ಎಂದರ್ಥವು.

**ವಿಕಟೋ ವಿಕ್ರಾಂತಗತಿರಿತ್ಯೌಪಮನ್ಯವಃ । ಕುಟತೇರ್ವಾ ಸ್ಯಾದ್ವಿಪರೀತಸ್ಯ ವಿಕುಟಿತೋ ಭವತಿ । ವಿಕಟ** ಎಂದರೆ ವಿಕಾರವಾದ ಅಂಗವುಳ್ಳ ಕೈ ಸೊಟ್ಟಾಗಿರುವುದು, ಕಾಲು ಕುಂಟಾಗಿರುವುದು ಇತ್ಯಾದಿ. ಅಥವಾ ನಡೆಯುವಾಗ ವಿಕಾರವಾದ ಗತಿಯುಳ್ಳವನು ಎಂದೂ ಅರ್ಥವು ಎಂದು ಔಪಮನ್ಯವರ ಅಭಿಪ್ರಾಯವು. ಸೊಟ್ಟಾಗಿರು ಎಂಬರ್ಥವುಳ್ಳ **ಕುಟ್** ಧಾತುವಿನಿಂದ ವಿಕಟಶಬ್ದವು ನಿಷ್ಪನ್ನವಾಗಿದೆ. ಅಥವಾ **ವಿಕುಟಿತಃ** ಎಂಬ ಶಬ್ದದ ಅಕ್ಷರಗಳು ವ್ಯತ್ಯಸ್ತವಾಗಿ **ವಿಕಟ** ಎಂದಾಗಿರಬಹುದ. ಬಹಳಸೊಟ್ಟಾಗಿರುವ ಎಂದರ್ಥವು.

**ಗಿರಿಂ ಗಚ್ಛ ಸದಾ ನೋನುವೇ ಶಬ್ದ ಕಾರಿಕೇ ।** ಯಾವಾಗಲೂ ಅಳುತ್ತಾ, ಕಿರಿಚುತ್ತಾ ಶಬ್ದಮಾಡುತ್ತ ಇರುವ ಎಲೈ ದುರ್ಭಿಕ್ಷ ದೇವತಯೇ, ನಿರ್ಜನವಾದ ಬೆಟ್ಟಕ್ಕೆ ಹೊರಟುಹೋಗು.

**ಶಿರಿಂಬಿಠಸ್ಯ ಸತ್ವಭಿಃ । ಶಿರಿಂಬಿಠೋ ಮೇಘಃ । ಶೀರ್ಯತೇ ಬಿಠೇ ಬಿಠಮಂತರಿಕ್ಷಂ ಬಿಠಂ ಬೀರಿಠೇನ ವ್ಯಾಖ್ಯಾತಂ । ತಸ್ಯ ಸತ್ತ್ವೈಸ್ತ್ವಾ ಚಾತಯಾಮಃ ।** ಶಿರಿಂಬಿಠವೆಂದರೆ ಮೇಘವು ಬಿಠವೆಂದರೆ ಅಂತರಿಕ್ಷದಲ್ಲಿ ಈ ಮೇಘವು ಶೀಳಲ್ಪಡುವುದರಿಂದ ಎಂದರೆ ಚದುರಿಸಲ್ಪಡುವುದರಿಂದ ಮೇಘಕ್ಕೆ ಶಿರಿಂಬಿಠವೆಂದು ಹೆಸರು. ಬಿಠಂ ಎಂಬ ಶಬ್ದದ ವಿವರಣೆ-ಯನ್ನು ಹಿಂದೆ ಬೀರಿಠಶಬ್ದವನ್ನು ವಿವರಿಸುವಾಗ (ನಿ. ೫-೨೮) ಹೇಳಲಾಗಿದೆ. ಇಂತಹ ಮೇಘದ ಸಾರಭೂತವಾದ ಉದಕಗಳಿಂದ ನಿನ್ನನ್ನು ನಾಶಮಾಡುತ್ತೇವೆ ಎಂದರೆ ವೃಷ್ಟಿವರ್ಷಣದಿಂದ ಕ್ಷಾಮವನ್ನು ನಾಶಮಾಡುತ್ತೇವೆ

**ಅಪಿ ವಾ ಶಿರಿಂಬಿಠೋ ಭಾರದ್ವಾಜಃ । ಕಾಲಕರ್ಣೋಪೇತೋಽಲಕ್ಷ್ಮೀರ್ನಿರ್ಣಾಶಯಾಂಚಕಾರ ತಸ್ಯ ಸತ್ತ್ವೈಃಕರ್ಮಭಿರಿತಿ ಸ್ಯಾತ್ತ್ವೈಸ್ತ್ವಾ ಜಾತಯಾಮಃ । ಚಾತಯತಿರ್ನಾಶನೇ ॥** ಅಥವಾ ಶಿರಿಂಬಿಠ ಎದರೆ ಭರದ್ವಾಜಋಷಿಯ ಪುತ್ರನು. ಇವನು ತನ್ನ ಕಪ್ಪಗಿರುವ ಕಿವಿಗಳಿಂದ ವಿಕಾರರೂಪನಾಗಿ ಅಲಕ್ಷ್ಮಿ ಎಂದರೆ ದರಿದ್ರದೇವತೆಯನ್ನು ನಾಶಮಾಡಿದನು. ಎಂದರೆ ಹೆದರಿಸಿ ಓಡಿಸಿದನು. ಆ ಋಷಿಯ ನಾವು ಈ ದುರ್ಭಿಕ್ಷದೇವತೆಯದ್ನು ನಾಶಮಾಡುತ್ತೇವೆ ಎಂದರೆ ಓಡಿಸುತ್ತೇವೆ. ಚಾತಯತಿ ಧಾತುವಿಗೆ ನಾಶಮಾಡುವುದು, ಹೆದರಿಸಿ ಓಡಿಸುವುದು ಎಂಬರ್ಥವಿರುವುನು.

ಪರಾಶರಃ ||೧೨೧||

ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ || "ಪರಾಶರಃ ಶತಯಾತುರ್ವಸಿಷ್ಠಃ" | ಇತ್ಯಪಿ ನಿಗಮೋ ಭವತಿ || ಇಂದ್ರೋಽಪಿ ಪರಾಶರ ಉಚ್ಯತೇ | ಪರಾ ಶಾತಯಿತಾ ಯಾತೂನಾಮ್ || "ಇಂದ್ರೋ ಯತೂನಾಮಭವತ್ಪರಾಶರಃ |" ಇತ್ಯಪಿ ನಿಗಮೋ ಭವತಿ ||೨||

ಉದಾಹರಣೆಯ ಋಕ್ಕು—

**ಪ್ರ ಯೇ ಗೃಹಾದಮಮದುಸ್ತ್ವಾಯಾ ಪರಾಶರಃ ಶತಯಾತುರ್ವಸಿಷ್ಠಃ |**
**ನ ತೇ ಭೋಜಸ್ಯ ಸಖ್ಯಂ ಮೃಷಂತಾಧಾ ಸೂರಿಭ್ಯಃ ಸುದಿನಾ ವ್ಯುಚ್ಛಾನ್ ||**

(ಋ. ಸಂ. ೭-೧೮-೨೧)

ಇದರ ಅರ್ಥವು—

ಎಲೈ ಇಂದ್ರನೇ, ಅನೇಕ ರಾಕ್ಷಸರ ನಾಶಕನಾದ ಪರಾಶರನೂ ವಸಿಷ್ಠನೂ ಮುಂತಾದ ಯಾವ ಋಷಿಗಳು ನಿನ್ನನ್ನು ಪೂಜಿಸಲಪೇಕ್ಷೆಯಿಂದ ಗೃಹವನ್ನು ಪ್ರವೇಶಿಸಿ ನಿನ್ನನ್ನು ತುಷ್ಟಿಗೊಳಿಸಿದರೋ ಆ ಋಷಿಗಳು ಸರ್ವಪಾಲಕನಾದ ನಿನ್ನ ಸಖಿತ್ವವನ್ನು ಮರೆಯಲಾರರು ಆದುದರಿಂದ ಸ್ತುತಿಕರ್ತರಿಗೆ ಖಂಡಿತ ಒಳ್ಳೆಯ ದಿನಗಳು ಬೆಳಗಿ ಬರುತ್ತವೆ.

**ಪರಾಶರಃ**—ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ | ಪರಾಶರಃ ಶತಯಾತುರ್ವಸಿಷ್ಠಃ ಇತ್ಯಪಿ ನಿಗಮೋ ಭವತಿ | ಇಂದ್ರೋಽಪಿ ಪರಾಶರ ಉಚ್ಯತೇ | ಪರಾ ಶಾತಯಿತಾ ಯಾತೂನಾಂ | ಇಂದ್ರೋ ಯಾತೂನಾಮಭವತ್ಪರಾಶರಃ ಇತ್ಯಪಿ ನಿಗಮೋ ಭವತಿ ||**

(ನಿ. ೬-೩೦)

ಪರಾಶರ ಎಂಬುವನು ಒಬ್ಬ ಋಷಿಯು ; ಜೀರ್ಣವಾದುದೂ, ಶಿಥಿಲವಾದುದೂ ಆದ ಶರೀರವುಳ್ಳ ವಸಿಷ್ಠಋಷಿಯಿಂದ ಉತ್ಪನ್ನನಾದವನು. ವಸಿಷ್ಠನಿಗೆ ಶಕ್ತಿ ಎಂಬ ಪುತ್ರನಿದ್ದನು. ಅವನ ಪುತ್ರನೇ ಪರಾಶರನು ಎಂದರೆ ವಸಿಷ್ಠಋಷಿಗೆ ಈ ಪರಾಶರನು ಮೊಮ್ಮಗನೆಂದಾಯಿತು. ಈ ವಿಷಯವು ಪುರಾಣಾದಿಗಳಲ್ಲಿಯೂ ಹೇಳಿದೆ. **ಪರಾಶರಃ** ಎಂದರೆ ಇಂದ್ರನಿಗೂ ಹೆಸರು ಏತಕ್ಕೆಂದರೆ—**ಪರಾ ಶತಯಿತಾ ಯಾತೂನಾಂ |** ರಾಕ್ಷಸರನ್ನು ಸದೆಬಡಿದು ನಾಶಮಾಡುವವನಾದ್ದರಿಂದ ಇಂದ್ರನಿಗೆ ಪರಾಶರನೆಂದೂ ಹೆಸರು. **ಇಂದ್ರೋ ಯಾತುನಾಮಭವತ್ಪಾರಶರಃ** ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು.

ಇನ್ನೊಂದು ಋಕ್ಕಿನ ಉದಾಹರಣೆಯು—

**ಇಂದ್ರೋ ಯಾತೂನಾಮಭವತ್ಪರಾಶರೋ ಹವಿರ್ಮಥೀನಾಮಭ್ಯಾಃ ವಿವಾಸತಾಂ |**
**ಅಭೀದು ಶಕ್ರಃ ಪರಶುರ್ಯಥಾ ವನಂ ಪಾತ್ರೇವ ಭಿಂದನ್ತ್ಸತ ಏತಿ ರಕ್ಷಸಃ ||**

(ಋ. ಸಂ. ೭-೧೦೪-೨೧)

ಇದರ ಅರ್ಥವು—

ಹವಿಸ್ಸನ್ನು ನಾಶಪಡಿಸಲು ಬರುತ್ತಿರುವ ರಾಕ್ಷಸರಿಗೆ ಇಂದ್ರನು ಹಿಂಸಕನಾಗಿದ್ದಾನೆ. ವನವೃಕ್ಷಗಳನ್ನು ಕೊಡಲಿಯು ಎಷ್ಟು ಸುಲಭವಾಗಿ ಸೀಳಬಲ್ಲದೋ ಕೊಡತಿಯು ಮಣ್ಣಿನಿಂದ ಮಾಡಿದ ಮಡಕೆಯನ್ನು ಸುಲಭವಾಗಿ ಇಂದ್ರನ ಎದುರುಬೀಳುತ್ತಿರುವ ರಾಕ್ಷಸರೆಲ್ಲರನ್ನೂ ಸೀಳುತ್ತಾ ಬರುತ್ತಾನೆ.

**ಪರಾಶರಃ**—ಈ ಶಬ್ದಕ್ಕೆ ಯಾಸ್ಕರು ನಿರುಕ್ತವನ್ನು ಹೇಳಿದ್ದಾರೆ—

**ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ। ಪರಾಶರಃ ಶತಯಾತುರ್ವಸಿಷ್ಠಃ ಇತ್ಯಪಿ ನಿಗಮೋ ಭವತಿ। ಇಂದ್ರೋಽಪಿ ಪರಾಶರ ಉಚ್ಯತೇ। ಪರಾ ಶಾತಯಿತಾ ಯಾತೂನಾಂ। ಇಂದ್ರೋ ಯಾತೂನಾಮಭವತ್ಪರಾಶರಃ ಇತ್ಯಪಿ ನಿಗಮೋ ಭವತಿ ॥**

(ನಿ. ೬-೩೦)

ಪರಾಶರ ಎಂದರೆ ವೃದ್ಧನಾಗಿಯೂ, ಜೀರ್ಣವಾದ ಶರೀರವುಳ್ಳವನಾಗಿಯೂ ಇದ್ದ ವಸಿಷ್ಠಋಷಿಯಿಂದ ಉತ್ಪನ್ನನಾದ ಪರಾಶರನೆಂಬ ಒಬ್ಬ ಋಷಿಯು, ಇಂದ್ರನಿಗೂ ಪರಾಶರನೆಂದು ಹೆಸರು. ಏಕೆಂದರೆ ಇತರ ಯಾತುಧಾನರೆಂಬ ರಾಕ್ಷಸರನ್ನು ನಾಶಮಾಡುವವನಾದ್ದರಿಂದ ಇಂದ್ರನಿಗೆ ಪರಾಶರನೆಂಬ ಹೆಸರು ಬರಲು ಕಾರಣವು. **ಪರಾಶರಃ ಶತಯಾತುರ್ವಸಿಷ್ಠಃ** ಮತ್ತು ಇಂದ್ರೋ **ಯಾತೂನಾಮಭವತ್ಪರಾಶರಃ** ಎಂಬ ಈ ಎರಡು ಶ್ರುತಿವಾಕ್ಯಗಳೇ ಈ ವಿಷಯದಲ್ಲಿ ಉದಾಹರಣೆಯು.

ಕ್ರಿವಿರ್ದತೀ ॥೧೨೨॥

ಕ್ರಿವಿರ್ದತೀ ವಿಕರ್ತನದನ್ತಿ ॥ "ಯತ್ರಾ ವೋ ದಿದ್ಯುದ್ರದತಿ ಕ್ರಿವಿರ್ದತೀ।" ಇತ್ಯಪಿ ನಿಗಮೋ ಭವತಿ ॥೩॥೩೦॥

**ಕ್ರಿವಿರ್ದತೀ**—ಹರಿತವಾದ ಹಲ್ಲುಗಳುಳ್ಳವನು.

ಉದಾಹರಣೆಯ ಋಕ್ಕು—

**ಯೂಯಂ ನ ಉಗ್ರಾ ಮರುತಃ ಸುಚೇತುನಾರಿಷ್ಟಗ್ರಾಮಾಃ ಸುಮತಿಂ ಪಿಪರ್ತನ।**
**ಯತ್ರಾ ವೋ ದಿದ್ಯುದ್ರದತಿ ಕ್ರಿವಿರ್ದತೀ ರಿಣಾತಿ ಪಶ್ವಃ ಸುಧಿತೇವ ಬರ್ಹಣಾ ॥**

(ಋ. ಸಂ. ೧-೧೬೬-೬)

ಇದರ ಅರ್ಥವು—

ಎಲೈ ಮರುದ್ದೇವತೆಗಳೇ, ನಿಮ್ಮ ಆಯುಧವಾದ ವಿದ್ಯುತ್ತು ವಿಕ್ಷೇಪಣಶೀಲವಾದುದು. ಅದು ಮೇಘಮಾಲೆಯನ್ನೂ ಪಶುಗಳನ್ನೂ ಸರಿಯಾಗಿ ಇಸೆಯಲ್ಪಟ್ಟ ಆಯುಧದಂತೆ ಸೀಳುತ್ತದೆ. ಈರೀತಿ ಉಗ್ರರಾದ ನೀವು ನಮ್ಮ ವಿಷಯದಲ್ಲಿ ದಯಶಾಲಿಗಳಾಗಿ ನಮ್ಮನ್ನು ಹಿಂಸಿಸದೆ ಸಮೃದ್ಧಿಯುಳ್ಳವರಾಗಿ.

**ಸುಚೇತುನಾ—ಶೋಭನಚೇತಸಾ** । ಉತ್ತಮವಾದ ಎಂದರೆ ಅನುಗ್ರಹಾತ್ಮಕವಾದ ಬುದ್ಧಿಯಿಂದ, ಈ ಶಬ್ದವು ಋಗ್ವೇದದಲ್ಲಿ ಯಾವಾಗಲೂ ತೃತೀಯಾವಿಭಕ್ತ್ಯಂತವಾಗಿಯೇ ಉಪಯೋಗಿಸಲ್ಪಡುವುದು ಮತ್ತು ದೇವತೆಗಳು ಮನುಷ್ಯರ ವಿಷಯದಲ್ಲಿ ತೋರುವ ಅನುಗ್ರಹವನ್ನು ಸೂಚಿಸುವುದಾಗಿರುವುದು. ಇದಕ್ಕೆ ವಿರುದ್ಧವಾಗಿ **ಸುಮತಿ** ಶಬ್ದವು ದೇವತೆಗಳನ್ನು ಪ್ರಾರ್ಥಿಸುವ **ಮನುಷ್ಯರ** ಉತ್ತಮ ಬುದ್ಧಿಯನ್ನು ಸೂಚಿಸುವುದು. **ಸುಚೇತುನಾ** ಎಂಬ ಶಬ್ದವು—

**ಸ ನೋ ನೇದಿಷ್ಠಂ ದದೃಶಾನ ಆ ಭರಾಗ್ನೇ ದೇವೇಭಿಃ ಸುಚೇತುನಾ ಮಹೋ ರಾಯಃ ಸುಚೇತುನಾ ।**

(ಋ. ಸಂ. ೧-೧೨೭-೧೧)

ಎಂಬ ಋಕ್ಕಿನಲ್ಲಿ—ಎಲೈ ಅಗ್ನಿಯೇ, ನೀನೂ ದೇವತೆಗಳೂ ಸಹ ನಮ್ಮಲ್ಲಿ ನಿನಗೆ ಇರುವ ಅನುಗ್ರಹ ಬುದ್ಧಿಯಿಂದ ಬಹಳವಾದ ಧನವನ್ನು ತಂದು ಕೊಡು—ಎಂದು ಸುಚೇತುನಾ ಎಂಬ ಶಬ್ದವು ಅಗ್ನಿಪರವಾಗಿ ಪ್ರಯುಕ್ತವಾಗಿದೆ.

**ಅಸ್ಮಭ್ಯಂ ದ್ಯಾವಾಪೃಥಿವೀ ಸುಚೇತುನಾ ರಯಿಂ ಧತ್ತಂ ವಸುಮಂತಂ ಶತಗ್ವಿನಂ ।**

(ಋ. ಸಂ. ೧-೧೫೯-೫)

ಎಂಬಲ್ಲಿ—ಎಲೈ ದ್ಯಾವಾಪೃಥಿವಿಗಳೇ ನೀವು ನಮ್ಮಲ್ಲಿ ಅನುಗ್ರಹ ಬುದ್ಧಿಯಿಂದ ನೂರುಗಟ್ಟಲೆ ರತ್ನಾದಿ ಧನಗಳನ್ನೂ ಪಶುಗಳನ್ನೂ ಕೊಡಿ ಎಂದು ದ್ಯಾವಾಪೃಥಿವಿಗಳ ಪರವಾಗಿ ಉಪಯೋಗಿಸಲ್ಪಟ್ಟಿದೆ.

**ಸ್ವಸ್ತಿ ಪೂಷಾ ಅಸುರೋ ದಧಾತು ನಃ ಸ್ವಸ್ತಿ ದ್ಯಾವಾಪೃಥಿವೀ ಸುಚೇತುನಾ ।**

(ಋ. ಸಂ. ೫-೫೧-೧೧)

ಇಲ್ಲಿಯೂ ದ್ಯಾವಾಪೃಥಿವಿಗಳ ಪರವಾಗಿಯೇ ಉಪಯುಕ್ತವಾಗಿದೆ.

**ತಾ ಬಾಹವಾ ಸುಚೇತುನಾ ಪ್ರ ಯಂತಮಸ್ಮಾ ಅರ್ಚತೇ ।**

(ಋ. ಸಂ. ೫-೬೪-೨)

ಎಂಬ ಋಕ್ಕಿನಲ್ಲಿ—ಎಲೈ ಮಿತ್ರಾವರುಣರೇ, ನಿಮ್ಮ ಅನುಗ್ರಹಾತ್ಮಕವಾದ ಬಾಹುಗಳನ್ನು (ಕೈಗಳನ್ನು) ನಿಮ್ಮನ್ನು ಆರಾಧಿಸುತ್ತಿರುವವರಿಗೆ (ನಮಗೆ) ನೀಡಿರಿ ಎಂದು ಮಿತ್ರಾವರುಣರ ಪರವಾಗಿ ಉಪಯೋಗಿಸಲ್ಪಟ್ಟಿದೆ.

**ಆ ರಯಿಮಾ ಸುಚೇತುನಮಾ ಸುಕ್ರತೋ ತನೂಷ್ವಾ । ಪಾಂತಮಾ ಪುರುಸ್ಪೃಹಂ ॥**

(ಋ. ಸಂ. ೯-೬೫-೩೦)

ಎಂಬ ಋಕ್ಕಿನಲ್ಲಿ ಮಾತ್ರ ಸುಚೇತುನಾ ಎಂದು ತೃತೀಯಾವಿಭಕ್ತಿಗೆ ಬದಲಾಗಿ ಸುಚೇತುನಂ ಎಂದು ದ್ವಿತೀಯಾವಿಭಕ್ತಿಯ ಪ್ರಯೋಗವಿರುವುದು. ಆದರೆ ಇದಕ್ಕೆ ತೃತೀಯಾವಿಭಕ್ತಿಯ ಅರ್ಥವನ್ನೇ ಹೇಳಬೇಕಾಗಿರುವುದು.

**ಇತಿ ತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತನೆಯ ಖಂಡವು ಸಮಾಪ್ತವು

---

## ಅಥ ಏಕತ್ರಿಂಶಃ ಖಂಡಃ

## **ಮೂವತ್ತೊಂದನೆಯ ಖಂಡವು**

ವಾಮಂ ವಾಮಂ ತ ಆದುರೇ ದೇವೋ ದದಾತ್ವರ್ಯಮಾ ।
ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಲತೀ ॥
ವಾಮಂ ವನನೀಯಂ ಭವತ್ಯಾದುರಿರಾದರಣಾತ್ತತ್ಕಃ ಕರೂಲತೀ

ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ ಪೂಷೇತ್ಯಪರಂ ಸೋಽದನ್ತ-ಕೋಽದನ್ತಕಃ ಪೂಷೇತಿ ಚ ಬ್ರಾಹ್ಮಣಂ । ದನೋ ವಿಶ ಇಂದ್ರ ಮೃಧ್ರವಾಚಃ ದಾನಮನಸೋ ನೋ ಮನುಷ್ಯಾನಿಂದ್ರ ಮೃದುವಾಚಃ ಕುರು । ಅವೀರಾಮಿವ ಮಾಮಯಂ ಶರಾರುರಭಿಮನ್ಯತೇ । ಅಬಲಾ-ಮಿವ ಮಾಮಯಂ ಬಾಲೋಽಭಿಮನ್ಯತೇ । ಅಬಲಾಮಿವ ಮಾಮ-ಯಂ ಬಾಲೋಽಭಿಮನ್ಯತೇ ಸಂಶಿಶರಿಷುರಿದಂಯುರಿದಂ ಕಾಮಯ-ಮಾನೋ ಅಥಾಪಿ ತದ್ವದರ್ಥೇ ಭಾಷ್ಯತೇ । ವಸೂಯುರಿನ್ದ್ರೋ ವಸುಮಾನಿತ್ಯತ್ರಾರ್ಥಃ । ಅಶ್ವಯುರ್ಗವ್ಯೂರಥ್ಯುರ್ವಸೂಯುರಿತ್ಯಪಿ ನಿಗಮೋ ಭವತಿ ॥೩೧॥

---

ಕರೂಳತಿ ॥ ೧೨೩ ॥

ಕರೂಳತೀ ಕೃತ್ತದತೀ ಅಪಿ ವಾ ದೇವಂ ಕಞ್ಚಿತ್ಕೃತ್ತದನ್ತಂ ದೃಷ್ಟ್ವೈವ-ವಕ್ಷ್ಯತ್ ॥

**ಕರೂಳತೀ** ಎಂದರೆ ಹಲ್ಲುಗಳ ಮಧ್ಯದಲ್ಲಿ ಸಂದಿ ಇರುವವನು. ಅಥವಾ ಹಲ್ಲಿನಲ್ಲಿ ಸಂದಿಯಿರುವ ಒಬ್ಬ ದೇವತೆಯನ್ನು ನೋಡಿದಾಗ ಋಷಿಯು ಈ ವಾಕ್ಯವನ್ನು ಹೇಳಿರಬಹುದು.

ಉದಾಹರಣೆಯ ಋಕ್ಕು—

**ವಾಮಂ ವಾಮಂ ತ ಆದುರೇ ದೇವೋ ದದಾತ್ವರ್ಯಮಾ ।**
**ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಳತೀ ॥**

(ಋ. ಸಂ. ೪-೩೦-೨೪)

ಇದರ ಅರ್ಥವು—

ಶತ್ರುಗಳನ್ನು ಸೀಳಿ ನಾಶಪಡಿಸತಕ್ಕ ಎಲೈ ಇಂದ್ರನೇ, ಸಕಲರಿಗೂ ಪೂಜ್ಯನಾದ ನಿನ್ನ ಯಾವ ಧನಗಳಿವೆಯೋ ಆ ಧನವನ್ನು ಶತ್ರುವನ್ನು ನಿಯಮಿಸಿ ದಂಡಿಸತಕ್ಕ ಅರ್ಯಮನೂ, ಕೃತ್ತದಂತನಾದ (ಹಲ್ಲು ಮುರಿದು ಹೋಗಿರುವ) ಪೂಷನೂ, ಭಗನೂ ಸಹ ನಮ್ಮೆಲ್ಲರಿಗೂ ಹಂಚಿಕೊಡಲಿ.

"ವಾಮಂ ವಾಮಂ ತ ಆದುರೇ ದೇವೋ ದದಾತ್ವರ್ಯಮಾ । ವಾಮಂ ಪೂಷಾ ವಾಮಂ ಭಗೋ ವಾಮಂ ದೇವಃ ಕರೂಳತೀ ॥" ವಾಮಂ ವನನೀಯಂ ಭವತಿ ॥ ಆದುರಿರಾದರಣಾತ್ ॥ ತಕ್ಕಃ ಕರೂಳತಿ? ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಮ್ । ಪೂಷೇತ್ಯಪರಮ್

ಸೋಽದನ್ತಕಃ॥ "ಅದನ್ತಕಃ ಪೂಷಾ" ಇತಿ ಚ ಬ್ರಾಹ್ಮ-
ಣಮ್ ॥೧॥

ಸೂಚನೆ—ಇದರ ಉದಾಹರಣೆಯ ಋಕ್ಕನ್ನೂ ಅದರ ಅರ್ಥವನ್ನೂ ಹಿಂದಿನ ವಾಕ್ಯದಲ್ಲಿ ವಿವರಿಸಲಾಗಿದೆ.

**ವಾಮಂ ವನನೀಯಂ**—ವಾಮವೆಂದರೆ, ಚೆನ್ನಾಗಿರುವುದು, ಆಕರ್ಷಕವಾಗಿರುವುದು. ಏಕೆಂದರೆ ಈ ವಿಧ ವಸ್ತುವನ್ನು ಪ್ರಯತ್ನಪೂರ್ವಕವಾಗಿ ಪಡೆಯಬೇಕಾಗಿರುವುದು.

**ಆದುರಿರಾದರಣಾತ್**—ಆದುರಿ ಎಂದರೆ ನಾಶಕನು, ಧ್ವಂಸಕನು. ಏಕೆಂದರೆ ಇವನು ಶತ್ರುಜನರನ್ನು ನಾಶಪಡಿಸುವವನು.

**ತತ್ಕಃ ಕರೂಳತೀ ? । ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಪೂಷೇತ್ಯಪರಂ ಸೋಽದಂತಕಃ ।** ಈ ವಿಧವಾಗಿ ಹಲ್ಲು ಮುರಿದುಹೋಗಿ ಮಧ್ಯದಲ್ಲಿ ಸಂಧಿ ಬಿಟ್ಟಿರುವ ದೇವನಾರು ? ಎಂದರೆ, ಕೆಲವರು ಭಗನೆಂದು ಹೇಳುವರು. ಮತ್ತೆ ಕೆಲವರು ಪೂಷದೇವನೆಂದು ಹೇಳುವರು. ಏಕೆಂದರೆ ಪೂಷನಿಗೆ ಹಲ್ಲುಗಳೇ ಇಲ್ಲ.

**ಅದಂತಕಃ ಪೂಷಾ ಇತಿ ಚ ಬ್ರಾಹ್ಮಣಂ ।** ಪೂಷದೇವನಿಗೆ ಹಲ್ಲುಗಳೇ ಇಲ್ಲ ಎಂದು **ಅದಂತಕಃ ಪೂಷಾ** ಎಂಬ ಬ್ರಾಹ್ಮಣವಾಕ್ಯವೇ ಹೇಳಿರುವುದು.

(ಶ. ಬ್ರಾ. ೧-೭-೪-೬)

ದನಃ ॥ ೧೨೪ ॥

"ದನೋ ವಿಶ ಇಂದ್ರ ಮೃಧ್ರವಾಚಃ"॥ ದಾನಮನಸೋ ನೋ
ಮನುಷ್ಯಾನಿಂದ್ರ ಮೃದುವಾಚಃ ಕುರು॥೨॥

**ದನಃ** ಎಂದರೆ **ದಾನಮನಸಃ** ಕೊಡಬೇಕೆಂಬ ಇಚ್ಛೆಯುಳ್ಳವನು, ಕೊಡುವವನು ಎಂದರ್ಥವು.

ಉದಾಹರಣೆಯ ಋಕ್ಕು—

**ದನೋ ವಿಶ ಇಂದ್ರ ಮೃಧ್ರವಾಚಃ ಸಪ್ತ ಯತ್ಪುರಃ ಶರ್ಮ ಶಾರದೀರ್ದರ್ತ್ ।**
**ಋಣೋರಪೋ ಅನವದ್ಯಾರ್ಣಾ ಯೂನೇ ವೃತ್ರಂ ಪುರುಕುತ್ಸಾಯ ರಂಧೀಃ ॥**

(ಋ. ಸಂ. ೧-೧೭೪-೨)

ಇದರ ಅರ್ಥವು—

ಎಲೈ ಇಂದ್ರನೇ, ಶತ್ರುಗಳ ಏಳು ಪಟ್ಟಣಗಳನ್ನು ನಾಶಮಾಡಿದಾಗ ಕ್ಷಮಾಯಾಚಕರಾದ ಅಲ್ಲಿಯ ಪ್ರಜೆಗಳನ್ನೂ ನೀನು ನಮ್ರರನ್ನಾಗಿ ಮಾಡಿದೆ. ಮೇಘಗಳನ್ನು ಭೇದಿಸಿ ವೃಷ್ಟಿಯನ್ನುಂಟುಮಾಡಿದೆ. ಅನವದ್ಯನಾದ ಎಲೈ ಇಂದ್ರನೇ, ಪ್ರವಾಹಶೀಲವಾದ ಉದಕಗಳನ್ನು ಹೊರಡಿಸಿದೆ. ತರುಣನಾದ ಪುರುಕುತ್ಸನಿಗೋಸ್ಕರ ವೃತ್ರನೆಂಬ ಅಸುರನನ್ನೂ ನಾಶಮಾಡಿದೆ.

**ದಾನಮನಸೋ ನೋ ಮನುಷ್ಯಾನಿಂದ್ರ ಮೃದುವಾಚಃ ಕುರು**—ಎಲೈ ಇಂದ್ರನೇ, ಮನುಷ್ಯರಾದ ನಮ್ಮನ್ನು ದಾನಕೊಡಲು ಮನಸ್ಸುಳ್ಳವರನ್ನಾಗಿಯೂ, ಮೃದುವಾದ ಒಳ್ಳೆಯಮಾತನಾಡುವಂತೆಯೂ ಮಾಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿರುವುದು.

ಈ ಋಕ್ಕಿನಲ್ಲಿ ಸಾಯಣರು ಐತಿಹಾಸಿಕಪರವಾದ ಒಂದು ವಿಧವಾದ ಅರ್ಥವನ್ನೂ, ನಿರುಕ್ತಪರವಾದ ಇನ್ನೊಂದು ಅರ್ಥವನ್ನೂ ವರ್ಣಿಸಿದ್ದಾರೆ. ಮೊದಲನೆಯ ಅರ್ಥವು ಇತಿಹಾಸಪರವಾಗಿ ಇಲ್ಲಿ ವರ್ಣಿತವಾಗಿದೆ.

**ಮೃಧ್ರವಾಚಃ—ಮರ್ಷಣವಚನಾಃ** । ಈ ಪದವು ವಿಶಃ ಎಂಬ ಪದಕ್ಕೆ ವಿಶೇಷಣದ ರೀತಿಯಿಂದ ಪ್ರಯುಕ್ತವಾಗಿದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಇಂದ್ರನನ್ನು ಸಂಬೋಧಿಸಿ, ಅವನು **ವೃತ್ರಸಂಬಂಧ್ಯಸುರಾಣಾಂ ಪುರಭೇದನಸಮಯೇ ಮರ್ಷಣವಚನಾಃ ತದೀಯಾಃ ಪ್ರಜಾಃ ಸುಖಂ ಯಥಾ ಭವತಿ ತಥಾ ದನಃ ಅದನಮಯಃ**–ವೃತ್ರಾಸುರನ ಸಂಬಂಧಿಗಳಾದ ಅಸುರರ ಪಟ್ಟಣಗಳನ್ನು ನಾಶಮಾಡುವಾಗ ಅಲ್ಲಿಯ ನಿವಾಸಿಗಳಾದ ಪ್ರಜೆಗಳು ಮೃದುವಾದ ವಚನಗಳನ್ನು ಹೇಳಿ ಸುಖವಾಗಿ ಇರುವ ರೀತಿಯಿಂದ ವರ್ತಿಸಿರುವನು ಎಂದೂ, **ಯದ್ವಾ ವರ್ಣವ್ಯತ್ಯಯಃ ಅನದಃ ಅಸುರಪ್ರಜಾಃ ಅತಿಭಯಂಕರಶಬ್ದಮಕರೋಃ** । **ದನಃ** ಎಂಬ ಪದಕ್ಕೆ ದನು ಧಾತುವಿನ ರೂಪವೆಂದು ವ್ಯಾಖ್ಯಾನಮಾಡಿ, ಎರಡನೆಯ ವಾಕ್ಯದಲ್ಲಿ ದನಃ ಎಂಬ ಶಬ್ದ ರೂಪದ ಅಕ್ಷರಗಳನ್ನು ವ್ಯತ್ಯಾಸ ಮಾಡುವುದರಿಂದ ಉಂಟಾದ ನದಃ ಎಂಬ ಪದಕ್ಕೆ ಇಂದ್ರನು ವೃತ್ರಾಸುರನ ಪ್ರಜೆಗಳ ನಗರಗಳನ್ನು ನಾಶಮಾಡುವ ಕಾಲದಲ್ಲಿ ಆ ಪ್ರಜೆಗಳು ಮೃದುವಾದ ಮಾತುಗಳನ್ನಾಡುವ ಹಾಗೆಯೂ, ಅವರಿಗೆ ಸುಖವು ಉಂಟಾಗುವಹಾಗೆಯೂ ಅವರಲ್ಲಿ (ವರ್ತನವು) ಸ್ಥಿತಿಯು ಉಂಟಾಗುವ ಹಾಗೆ ಭಯಂಕರವಾದ ಧ್ವನಿಯನ್ನು ಮಾಡಿರುವನೆಂದೂ ಅರ್ಥವನ್ನು ವರ್ಣಿಸಿದೆ.

**ಶಾರದೀಃ ಸಪ್ತಪುರಃ ದರ್ತ್**—ಶಾರದೀಃ ಎಂಬ ಪದವು ನೂತನ (ಹೊಸದು) ಎಂಬ ಅರ್ಥದಲ್ಲಿಯೂ, ಸಂವತ್ಸರ ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ ಎಂದು ವ್ಯಾಖ್ಯಾನಮಾಡಿದೆ. ಇಂದ್ರನು ಹೊಸದಾಗಿ ನಿರ್ಮಿತವಾಗಿರುವ ಅಥವಾ ಸಂವತ್ಸರದವರಿಗೂ ಭೇದಿಸಲಾಗದಿರುವ ಹಾಗೆ ದೃಢವಾಗಿರುವ ಅಸುರರ ಏಳು ನಗರಗಳನ್ನು ಸೀಳಿ ನಾಶಮಾಡಿರುವನೆಂದು ಅರ್ಥವನ್ನು ವಿವರಿಸಿದೆ.

**ಅನವದ್ಯ ಅರ್ಣಾಃ ಅಪಾಃ ಋಣೋಃ**—ಅನವದ್ಯ ಎಂಬ ಪದವು ಕಾತರತ್ವ (ಭಯ) ರೂಪವಾದ ನಿಂದೆಯು ಇಲ್ಲದಿರುವವನೆಂಬ ಅರ್ಥಬೋಧಕವೆಂದು ಈ ಪದದಿಂದ ಇಂದ್ರನನ್ನು ಸಂಬೋಧಿಸಿದೆ. ಇಂದ್ರನು ಹೆದರಿದಿರುವವನಾಗಿ ಶತ್ರುಗಳ ನಗರಗಳನ್ನು ನಾಶಪಡಿಸಿದನಂತರ **ತದೀಯ ದುರ್ಗಸ್ಥಾನಾನಿ ಉದಕಾಶ್ರಯಾಣಿ ತಟಕಾದೀನ್ ಪ್ರಾವರ್ತಯಃ** ಅಸುರರ ದುರ್ಗಪ್ರದೇಶಗಳನ್ನು ಪ್ರವಹಿಸುವ ಉದಕಗಳಿಂದ ತುಂಬಿರುವಂತೆಯೂ, ಉದಕಗಳಿಗೆ ಆಶ್ರಯವಾದ ಕೆರೆಯೇ ಮೊದಲಾದವುಗಳು ಇರುವ ರೂಪಾಂತರವಾಗಿರುವ ಹಾಗೆ ಮಾಡಿರುವನೆಂದೂ ಅರ್ಥವನ್ನು ವಿವರಿಸಿದೆ.

**ಪುರುಕುತ್ಸಾಯ ವೃತ್ರಂ ರಂಧೀಃ**—ಇಂದ್ರನು ಪುರುಕುತ್ಸನೆಂಬ ರಾಜನಿಗಾಗಿ ವೃತ್ರನೆಂಬ ಅಸುರನನ್ನು ಕೊಂದು ರಾಜನಿಗೆ ಉಪಕಾರವನ್ನು ಮಾಡಿರುವನೆಂದು ವ್ಯಕ್ತಗೊಳಿಸಿದೆ.

ನಿರುಕ್ತಕಾರರು ಹೇಳುವ ಅಭಿಪ್ರಾಯವನ್ನು ಅನುಸರಿಸುವ ಅರ್ಥದಲ್ಲಿ—ಇಂದ್ರನನ್ನು ಸಂಬೋಧಿಸಿ, **ವಿಶಃ** ಎಂಬ ಪದಕ್ಕೆ **ವೃಷ್ಟಿರೂಪಾಃ ಪ್ರಜಾಃ** ವೃಷ್ಟಿರೂಪವಾಗಿರುವ ಪ್ರಜೆಗಳು **ಮೃಧ್ರವಾಚಃ** ಮರ್ಷಣಧ್ವನಿಯಿಂದ ಕೂಡಿದವುಗಳಾಗಿ ಇರುವಂತೆ ಮಾಡಿ, ಅವುಗಳಿಂದ ಧ್ವನಿಯೂ, ವೃಷ್ಟ್ಯುದಕವೂ ಉಂಟಾಗುವಂತೆ ಅವನು ಮಾಡಿರುವನೆಂದು ಅರ್ಥವನ್ನು ವರ್ಣಿಸಿದೆ. **ಸಪ್ತಪುರಃ ಶಾರದೀರ್ದರ್ತ್** ಎಂಬ ವಾಕ್ಯದಲ್ಲಿರುವ ಪದಗಳಿಗೆ **ಸರ್ಪಣಸ್ವಭಾವಾನ್ ಪ್ರತ್ಯಗ್ರಾನ್ ವೃಷ್ಟ್ಯಾಃ ಜಾಗರೂಕಾನ್ ಮೇಘಾನದಾರಯಃ** ಚರಿಸುವ ಸ್ವಭಾವದಿಂದ ಇರುವ ನೂತನವಾದ ವೃಷ್ಟಿಯ ಉದಕಗಳನ್ನು ಸುರಿಸುವುದರಲ್ಲಿ ಜಾಗರೂಕವಾಗಿರುವ ಮೇಘಗಳನ್ನು ಇಂದ್ರನು ಸೀಳಿರುವನು ಎಂದು ಅರ್ಥವನ್ನು ಮಾಡಿದೆ. **ಅನವದ್ಯ ಅರ್ಣಾಃ**

**ಅಪಃ ಋ ಣೋಃ ಅರಣಸ್ವಭಾವಾ ಅಪಃ ಪ್ರಾವರ್ತಯಃ ಕುಲ್ಯಾದಿರೂಪೇಣ** ಅನವದ್ಯ ಎಂಬ ಪದಕ್ಕೆ ಹಿಂದಿನ ಹಾಗೆಯೇ ಅರ್ಥವನ್ನು ವಿವರಿಸಿದೆ. ಇಂದ್ರನು ಪ್ರವಾಹರೂಪದಿಂದ ಚಲಿಸುವ ಸ್ವಭಾವವುಳ್ಳ ಉದಕಗಳು ಕಾಲುವೆಗಳ ರೂಪ ದಿಂದ ಪ್ರವಹಿಸುವಂತೆ ವೃಷ್ಟ್ಯುದಕಗಳನ್ನು ಸುರಿಸಿದನು ಎಂದು ಅರ್ಥವನ್ನು ಹೇಳಿದೆ. **ಯೂನೇ ಪುರುಕುತ್ಸಾಯ ವೃತ್ರಂ ರಂಧೀಃ** ಎಂಬ ವಾಕ್ಯದಲ್ಲಿ ವೃತ್ರ ಶಬ್ದಕ್ಕೆ ಮೇಘವೆಂಬ ಅರ್ಥವನ್ನು ಹೇಳಿದೆ. ಇಂದ್ರನು ಪುರುಕುತ್ಸನೆಂಬ ತರುಣನಾದ ರಾಜನಿಗಾಗಿ ಮೇಘವನ್ನು ಸೀಳಿ ವೃಷ್ಟಿಯು ಉಂಟಾಗುವಂತೆ ಮಾಡಿರುವನು ಎಂಬ ಅರ್ಥವನ್ನು ವರ್ಣಿಸಿದೆ.

**ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ ಪುರೋ ವಜ್ರಿನ್ ಪುರುಕಾತ್ಸಾಯ ದರ್ದಃ ।**
**ಬರ್ಹಿರ್ನ ಯದ್ಸುದಾಸೇ ವೃಥಾ ವರ್ಗಂ ಹೋ ರಾಜನ್ ವರಿವಃ ಪೂರವೇ ಕಃ ॥**

(ಋ. ಸಂ. ೧-೬೩-೭)

ಈ ಋಕ್ಕಿನಲ್ಲಿ ಇದೇ ಅರ್ಥವು ಪ್ರತಿಪಾದಿತವಾಗಿದೆ ಎಂದು ವರ್ಣಿಸಿದೆ.

ನಿರುಕ್ತಕಾರರು ಈ ಋಕ್ಕನ್ನೇ ಉದಹರಿಸಿ **“ದಾನಮನಸೋ ನೋ ಮನುಷ್ಯಾನಿಂದ್ರ ಮೃದುವಾಚಃ ಕುರು”** (ನಿ. ೬-೩೧) ಎಂಬ ಅರ್ಥವನ್ನು ಮೃಧ್ರವಾಚಃ ಎಂಬ ಪದಕ್ಕೆ ವಿವರಿಸಿದ್ದಾರೆ. ಇಂದ್ರನು, ಯಜಮಾನರು ಮೃದುವಾದ ವಾಕ್ಕುಳ್ಳವರಾಗಿ ಇರುವಂತೆಯೂ, ದಾನವನ್ನು ಆಚರಿಸುವ ಮನಸ್ಸುಳ್ಳವರಾಗಿಯೂ ಇರುವಂತೆ ಮಾಡಲಿ ಎಂಬ ಆಶಂಸನೆಯು ನಿರುಕ್ತಕಾರರಿಂದ ವರ್ಣಿತವಾಗಿದೆ.

ಪುರುಕುತ್ಸನೆಂಬ ರಾಜನು ಇಕ್ಷ್ವಾಕುವಂಶದವನೆಂದು ಶತಪಥಬ್ರಾಹ್ಮಣದಿಂದ ತಿಳಿಯಬರುತ್ತಿದೆ.

**ಪುರುಕುತ್ಸೋ ದೌರ್ಗ್ರಹೇಣೇಜ ಐಕ್ಷ್ವಾಕೋ ರಾಜಾ।**

(ಶ. ಬ್ರಾ. ೧೩-೫-೪೦೫)

ಎಂಬ ವಾಕ್ಯವು ಐಕ್ಷ್ವಾಕು ವಂಶದಲ್ಲಿ ಹುಟ್ಟಿದ ಪುರುಕುತ್ಸನೆಂಬ ರಾಜನು **ದೌರ್ಗಹ**ರೂಪವಾದ ಅಶ್ವಮೇಧವನ್ನು ಮಾಡಿದನೆಂದು ಹೇಳಿದೆ. ಇದೇ ವಿಷಯವು

**ಅಸ್ಮಾಕಮತ್ರ ಪಿತರಸ್ತ ಆಸನ್ತ್ಸಪ್ತ ಋಷಯೋ ದೌರ್ಗೃಹೇ ಬಧ್ಯಮಾನೇ ।**

(ಋ. ಸಂ. ೪-೪೨-೮)

ಎಂಬ ಋಕ್ಕಿನಲ್ಲಿ ಸೂಚಿತವಾಗಿದೆ. ಆದರೆ ಉದಾಹೃತವಾದ ಈ ಋಕ್ಕಿನಲ್ಲಿ ಸಾಯಣರು **ದೌರ್ಗಹ** ಎಂಬ ಪದವನ್ನು ಅಂಕಿತನಾಮವನ್ನಾಗಿ ಮಾಡಿ **ದುರ್ಗಹಸ್ಯ ಪುತ್ರೇ ಪುರುಕುತ್ಸೇ** ಎಂದು ಅರ್ಥಮಾಡಿದ್ದಾರೆ.

**ತ್ವಂ ಹ ತ್ಯದಿಂದ್ರ ಸಪ್ತಯುಧ್ಯನ್ಪುರೋ ವಜ್ರನ್ಪುರುಕುತ್ಸಾಯ ದರ್ದಃ ।**
**ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ವರಿವಃ ಪೂರವೇ ಕಃ ॥**

(ಋ. ಸಂ. ೧-೬೩-೭)

ಎಂಬ ಋಕ್ಕಿನ ಆಧಾರದಿಂದ ಇವನು ಸುದಾಸನೆಂಬ ರಾಜನ ಸಮಕಾಲೀನನೆಂದು ತಿಳಿಯಬರುತ್ತದೆ.

**ಸನೇಮ ತೇಽವಸಾ ನವ್ಯ ಇಂದ್ರ ಪ್ರ ಪೂರವಃ ಸ್ತವಂತ ಏನಾ ಯಜ್ಞೈಃ ।**
**ಸಪ್ತ ಯತ್ಪುರಃ ಶರ್ಮ ಶಾರದೀರ್ದರ್ದನ್ ದಾಸೀಃ ಪುರುಕುತ್ಸಾಯ ಶಿಕ್ಷನ್ ॥**

(ಋ. ಸಂ. ೬-೨೦-೧೦)

ಎಂಬಲ್ಲಿ ಪುರುಕುತ್ಸನು **ಪೂರು**ವೆಂಬ ಜನಾಂಗದ ರಾಜನೆಂದು ಹೇಳಿದೆ. ದಾಸರನ್ನೆಲ್ಲಾ ಜಯಿಸಿದವನೆಂದೂ ಹೇಳಿದೆ. ಇವನಿಗೆ ತ್ರಸದಸ್ಯುವೆಂಬ ಪುತ್ರನಿದ್ದನೆಂದೂ ತಿಳಿಯಬರುತ್ತದೆ. ಆದರೆ ಆ ಪುತ್ರನು ಪುರುಕುತ್ಸನ ಮರಣಾನಂತರ ಹುಟ್ಟಿರ ಬಹುದೆಂದು ತಿಳಿಯುತ್ತದೆ.

**ಪುರುಕುತ್ಸಾನೀ ಹ ವಾಮದಾಶದ್ಧವ್ಯೇಭಿರಿಂದ್ರಾವರುಣಾ ನಮೋಭಿಃ ।**
**ಅಥಾ ರಾಜಾನಂ ತ್ರಸದಸ್ಯುಮಸ್ಯಾ ವೃತ್ರಹಣಂ ದದಥುರರ್ಧದೇವಂ ॥**

(ಋ. ಸಂ. ೪-೪೨-೯)

ಎಂಬಲ್ಲಿ ಪುರುಕುತ್ಸನ ಪತ್ನಿಯು ಇಂದ್ರಾವರುಣರನ್ನು ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ತೃಪ್ತಿಪಡಿಸಿದಾಗ **ತ್ರಸದಸ್ಯು** ಎಂಬ ಪುತ್ರನನ್ನು ಹಡೆಯುವಂತೆ ಅವರು ಅನುಗ್ರಹಿಸಿದರು ಎಂದಿದೆ. ಈ ಆಧಾರದ ಮೇಲೆ ಪುರುಕುತ್ಸನು ಯುದ್ಧದಲ್ಲಿ ಮೃತನಾದನಂತರ ಅವನ ಪತ್ನಿಯು ಇಂದ್ರಾವರುಣರನ್ನು ಪ್ರಾರ್ಥಿಸಿ ತ್ರಸದಸ್ಯುವೆಂಬ ಮಗನನ್ನು ಹಡೆದಳೆಂಬ ಕಥೆಯಿದೆ.

ಶರಾರುಃ ॥ ೧೨೫ ॥

" ಅವೀರಾಮಿವ ಮಾಮಯಂ ಶರಾರುರಭಿಮನ್ಯತೇ ॥ " ಅಬಲಾ-
ಮಿವ ಮಾಮಯಂ ಬಾಲೋಽಭಿಮನ್ಯತೇ ಸಂಶಿಶಿರಿಷುಃ ॥ ೩ ॥

ಈ ನೀಚಪ್ರಾಣಿಯು (ವೃಷಾಕಪಿಯು) ನನಗೆ ಶಕ್ತಿ, ಬಲ ಇಲ್ಲವೆಂದು ತಿಳಿದಿರುತ್ತದೆ. ಈ ಸಣ್ಣ ಪ್ರಾಣಿಯು ನನಗೆ ಏನೂ ಶಕ್ತಿಸಾಮರ್ಥ್ಯಗಳಿಲ್ಲವೆಂದು ತಿಳಿದಿದೆ. ನಾನು ಪರಾಕ್ರಮಿಯಲ್ಲವೆಂದೂ ಎಂದು ಇಂದ್ರನು ಹೇಳಿರುವನು.

ಉದಾಹರಣೆಯ ಋಕ್ಕು—

**ಅವೀರಾಮಿವ ಮಾಮಯಂ ಶರಾರುರಭಿಮನ್ಯತೇ ।**
**ಉತಾಹಮಸ್ಮಿ ವೀರಿಣೀಂದ್ರಪತ್ನೀ ಮರುತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೯)

ಇದರ ಅರ್ಥವು—

ಮೃಗರೂಪಿಯಾದ ವೃಷಾಕಪಿಯು ನನ್ನನ್ನು ವೀರಪುರುಷನ ರಕ್ಷಣೆಯೇ ಇಲ್ಲದವಳೆಂದು ತಿಳಿದು ತಿರಸ್ಕರಿಸಿ ಮಾತನಾಡುತ್ತದೆ. ಆದರೆ ನನಗೆ ವೀರನಾದ ಇಂದ್ರನೇ ಪತಿಯು. ನಾನು ಶೂರರಾದ ಪುತ್ರರನ್ನು ಹೊಂದಿದ್ದೇನೆ. ವೀರರಾದ ಮರುತ್ತುಗಳೇ ನನ್ನ ಸಖರು. ನನ್ನ ಪತಿಯಾದ ಇಂದ್ರನು ಸಕಲಜಗತ್ತಿಗಿಂತಲೂ ಅಧಿಕನು.

• ಈ ಸೂಕ್ತಕ್ಕೆ ಋಷಿಯು ಇಂದ್ರಪುತ್ರನಾದ ವೃಷಾಕಪಿ ಎಂದು ಹೇಳಿದೆ. ಈ ಸೂಕ್ತವು, ಇಂದ್ರ, ಇಂದ್ರಾಣೀ, ಇಂದ್ರಪುತ್ರನಾದ ವೃಷಾಕಪಿ ಎಂಬ ಮೂರಿಗೆ ನಡೆದ ಸಂವಾದವಾಗಿರುವುದು. ವೃಷಾಕಪಿಶಬ್ದಕ್ಕೆ ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿರುವರು—

**ವೃಷಾಕಪಿಃ । ಅಥ ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ ವೃಷಾಕಂಪನ ।**

(ನಿ. ೧೨-೨೭)

ಯಾರು ತನ್ನ ರಶ್ಮಿಗಳಿಂದ ಪ್ರತಿಯೊಂದು ವಸುವನ್ನೂ ಕಂಪಿಸುವಂತೆ ಮಾಡುವನೋ ಅವನಿಗೆ ವೃಷಾಕಪಿಯೆಂದು ಹೆಸರು ಎಂದು ಆದಿತ್ಯನನ್ನುದ್ದೇಶಿಸಿ ಅರ್ಥಮಾಡಿದಾರೆ. ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ ಪ್ರಕೃತಸೂಕ್ತದ-

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**
**ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದಾರೆ. ಈ ಋಕ್ಕಿನಲ್ಲಿರುವ ಸ್ವಪ್ನನಂಶನಃ ಎಂಬ ಶಬ್ದಕ್ಕೆ ತನ್ನ ಉದಯದಿಂದ ಪ್ರಾಣಿಗಳ ನಿದ್ರೆಯನ್ನು ಕೊನೆಗಾಣಿಸುವ ಎಂದರೆ ನಾಶಮಾಡುವ ಆದಿತ್ಯನೆಂದು ಅರ್ಥಮಾಡಿದಾರೆ. ಸಾಯಣರು ಆದಿತ್ಯಸ್ವರೂಪನೇ ವೃಷಾಕಪಿಯೆಂದು ಹೇಳಿದಾರೆ. ವೃಷಾಕಪಿ ಶಬ್ದಕ್ಕೆ ಆದಿತ್ಯನೆಂಬ ಅರ್ಥವು ಹೊಂದುವುದಾದರೂ ಪ್ರಕೃತಸೂಕ್ತದಲ್ಲಿ ಉಕ್ತನಾಗಿರುವ ವೃಷಾಕಪಿಯು ಇಂದ್ರನು ಪುತ್ರನೆಂದೇ ತಿಳಿಯಬೇಕು. ಇದಲ್ಲದೆ ಇಂದ್ರನ ಪತ್ನಿಯಾದ ಇಂದ್ರಾಣಿಯ ವಿಷಯವನ್ನು ಹೇಳುವಾಗ ಯಾಸ್ಕರು—

**ನಾಹಮಿಂದ್ರಾಣಿ ರಾರಣ ಸಖ್ಯುರ್ವೃಷಾಕಪೇರ್ಋತೇ ।**
**ಯಸ್ಯೇದಮಪ್ಯಂ ಹವಿಃ ಪ್ರಿಯಂ ದೇವೇಷು ಗಚ್ಛತಿ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೧೨)

ಎಂಬ ಋಕ್ಕನುದಾಹರಿಸಿ ಇಂದ್ರಾಣಿಯು ತನ್ನ ಪತ್ನಿಯೆಂದೂ, ವೃಷಾಕಪಿಯ ತಾಯಿಯೆಂದೂ ಇಂದ್ರನು ಸಂಭೋದಿಸಿದಾನೆ (ನಿ. ೧೧-೩೯) ಇದಲ್ಲದೆ—

**ವೃಷಾಕಪಾಯಿ । ವೃಷಾಕಪಾಯಿ ವೃಷಾಕಪೇಃ ಪತ್ನ್ಯೈಷೈವಾಭಿಸೃಷ್ಟಕಾಲತನಾ ॥**

(ನಿ. ೧೨-೮)

ವೃಷಾಕಪಾಯಿ ಎಂದರೆ ವೃಷಾಕಪಿಯ (ಇಂದ್ರನ) ಪತ್ನಿಯೆಂದೂ, ವೃಷಾಕಪಿಯೆಂದರೆ ಆದಿತ್ಯನೆಂದೂ ಹೇಳಿದಾರೆ.

### ವೃಷಾಕಪಿಃ

ಪ್ರಕೃತವಾದ ಈ ಸೂಕ್ತದಲ್ಲಿ ನಿರ್ದಿಷ್ಟವಾಗಿರುವ **ವೃಷಾಕಪಿಯ** ಸ್ವರೂಪವೇನೆಂಬುದನ್ನು ನಿಷ್ಕೃಷ್ಟವಾಗಿ ಹೇಳುವುದು ಸುಲಭವಲ್ಲ. ಸ್ಥೂಲವಾಗಿ ನೋಡಿದರೆ, ವೃಷಾಕಪಿಯು ಇಂದ್ರನಿಗೆ ಪ್ರಿಯವಾದ ಒಂದು ವಾನರವೆಂದು ಹೇಳಬಹುದು. ಈ ವೃಷಾಕಪಿಯು ಇಂದ್ರಪತ್ನಿಯಾದ ಇಂದ್ರಾಣಿಯ ಮನಸ್ಸಿಗೆ ಒಂದು ಸನ್ನಿವೇಶದಲ್ಲಿ ಖೇದವನ್ನುಂಟುಮಾಡಿದಾಗ ಇಂದ್ರನಿಗೂ, ಇಂದ್ರಾಣಿಗೂ ನಡೆದ ಸಂಭಾಷಣೆ ಮತ್ತು ಮಧ್ಯದಲ್ಲಿ ವೃಷಾಕಪಿಯೂ ಈ ಸಂಭಾಷಣೆಯಲ್ಲಿ ಭಾಗವಹಿಸುವುದು ಇದೇ ಸೂಕ್ತದ ವಿಷಯ. ಇದರಲ್ಲಿ ಮೊದಲನೆಯ ಋಕ್ಕಿನ ಅರ್ಥವು ಎರಡು ವಿಧವಾಗಿ ಹೇಳಲ್ಪಟ್ಟಿದೆ. ಇದು ಇಂದ್ರನ ವಾಕ್ಯವೆಂದು ಒಂದು ಮತ ಇಂದ್ರಾಣಿಯ ವಾಕ್ಯವೆಂದು ಇನ್ನೊಂದು ಮತ.

ತನಗಾಗಿ ನಿರ್ದಿಷ್ಟವಾದ ಸೋಮವನ್ನು ವೃಷಾಕಪಿಯು ಪಾನಮಾಡಿ ತನಗೆ ಆ ಹರ್ಷವನ್ನು ತಪ್ಪಿಸಿದಾಗ್ಯೂ ತಾನೇ ಲೋಕಕ್ಕೆಲ್ಲ ಪ್ರಭುವು ಎಂಬ ಇಂದ್ರನ ಪ್ರಕಟನವು ಮೊದಲನೆಯ ವಿವರಣೆಯ ಪ್ರಕಾರ ತಿಳಿಯುತ್ತದೆ. ಅಲ್ಲದೇ, ಎರಡನೆದಾಗಿ—

ನನ್ನ ಪತಿಯಾದ ಇಂದ್ರನಿಗಾಗಿ ನಿರ್ದಿಷ್ಟವಾದ ಸೋಮವನ್ನು ವೃಷಾಕಪಿಯು ಪಾನಮಾಡಿ ನನ್ನ ಪತಿಗೆ ಈ ಹರ್ಷವನ್ನು ತಪ್ಪಿಸಿತು. ಆದರೂ ನನ್ನ ಪತಿಯಾದ ಇಂದ್ರನೇ ಲೋಕಕ್ಕೆಲ್ಲ ಪ್ರಭುವು ಎಂದು ಇಂದ್ರಾಣಿಯು ತಿಳಿಸಿರುತ್ತಾಳೆಂದು ಒಂದು ತಾತ್ಪರ್ಯ. ಈ ವೃಷಾಕಪಿಯು ಯಾರು, ಇಂದ್ರನಿಗೂ ವೃಷಾಕಪಿಗೂ ಇರುವ ಸಂಬಂಧವನ್ನು ನಿಷ್ಕೃಷ್ಟವಾಗಿತಿಳಿಸಲು ಆಧಾರವಿದೆಯೇ ಇತ್ಯಾದಿಗಳನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿರುತ್ತದೆ.

ನಿರುಕ್ತ ಮತ್ತು ಬೃಹದ್ದೇವತಾವಾಕ್ಯಗಳು ವೃಷಾಕಪಿಯ ಸ್ವರೂಪವನ್ನು ಕೊಂಚಮಟ್ಟಿಗೆ ವಿವರಿಸುತ್ತವೆ. ನಿರುಕ್ತ ಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತ,

**ಯದ್ರಶ್ಮಿಭಿರಭಿಪ್ರಕಂಪಯನ್ನೇತಿ ತದ್ವೃಷಾಕಪಿರ್ಭವತಿ, ವೃಷಾಕಂಪನಃ ॥**

(ನಿ. ೧೨-೨೭)

ತನ್ನ ರಶ್ಮಿಗಳಿಂದ ಯಾರು ಸಮಸ್ತವನ್ನೂ ಕಂಪಿಸುವಂತೆ ಮಾಡುವನೋ ಅವನು ವೃಷಾಕಪಿ ಎಂದು ತಾತ್ಪರ್ಯ ವನ್ನು ಹೇಳಿದ್ದಾರೆ.ಅಲ್ಲದೆ ಋಕ್ಸಂಹಿತೆಯು,

**ಪುನರೇಹಿ ವೃಷಾಕಪೇ ಸುವಿತಾ ಕಲ್ಪಯಾವಹೈ ।**
**ಯ ಏಷ ಸ್ವಪ್ನನಂಶನೋಽಸ್ತಮೇಷಿ ಪಥಾ ಪುನರ್ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೧)

ಎಂಬ ಋಕ್ಕನ್ನುದಹರಿಸಿ ಈ ಋಕ್ಕಿನಲ್ಲಿ ಪ್ರಯುಕ್ತವಾಗಿರುವ ವೃಷಾಕಪಿಪದದ ತಾತ್ಪರ್ಯವನ್ನೂ, ವೃಷಾಕಪಿಯ ಕರ್ಮ ವನ್ನೂ ವಿವರಿಸಿದ್ದಾರೆ. ಈ ಋಕ್ಕಿನಲ್ಲಿ ತಾತ್ಪರ್ಯವು ಹೀಗಿದೆ. ಎಲೈ ವೃಷಾಕಪಿಯೇ, ನೀನು ಸ್ವಪ್ನನಾಶಕನು. ಪುನಃ ನೀನು ಈ ಮಾರ್ಗವಾಗಿ ಸಂಚರಿಸಲು ಬರಬೇಕು. ದಯಮಾಡಿ ಪುನಃ ಬಾ. ನಾವಿಬ್ಬರೂ ಸೇರಿ ಕಲ್ಯಾಣಕಾರಕವಾದ ಕರ್ಮವನ್ನು ನಿರ್ವಹಿಸೋಣ. ಈ ತಾತ್ಪರ್ಯವನ್ನು ಕೊಡುವ ಋಕ್ಕಿನಲ್ಲಿ **ವೃಷಾಕಪಿ**ಯೆಂದರೆ ಯಾರು ಎಂಬುದಕ್ಕೆ ನಿರುಕ್ತಕಾರರ ವಿವರಣವು ಹೀಗಿದೆ—

**ಪುನರೇಹಿ ವೃಷಾಕಪೇ ಸುಪ್ರಸೂತಾನಿ ವಃ ಕರ್ಮಾಣಿ ಕಲ್ಪಯಾವಹೈ । ಯ ಏಷ ಸ್ವಪ್ನ-ದರ್ಶನಃ ಸ್ವಪ್ನಾನ್ ನಾಶಯಸಿ ಆದಿತ್ಯ ಉದಯೇನ ಸೋಽಸ್ತಮೇಷಿ ಯಥಾ ಪುನಃ । ಸರ್ವಸ್ಮಾದ್ಯ ಇಂದ್ರ ಉತ್ತರಸ್ತಮೇತದ್ ಬ್ರೂಮ ಆದಿತ್ಯಂ ॥**

(ನಿ. ೧೨-೨೮)

ಎಲೈ ವೃಷಾಕಪಿಯೇ, ನೀನು ಸ್ವಪ್ನನಾಶಕನು, ಎಂದರೆ, ಪ್ರಾತಃಕಾಲದಲ್ಲಿ ನೀನು ಉದಯಿಸಿದೊಡನೆಯೇ ಸಕಲರ ನಿದ್ರೆಯೂ ನಾಶವಾಗುವುದರಿಂದ ನೀನು ಆದಿತ್ಯನು. ನಿನ್ನ ಕರ್ಮಾನುರೋಧವಾಗಿ ನೀನು ಪುನಃ ಉದಯಿಸಬೇಕು. ನಿನ್ನ ಪುನುರದ ಯಾನಂತರ ನಾವಿಬ್ಬರೂ ಸೇರಿ ಕಲ್ಯಾಣಕಾರಕವಾದ ಕರ್ಮವನ್ನು ನಿರ್ವಹಿಸೋಣ. ಇಂದ್ರರೂಪನಾದ ಸೂರ್ಯನನ್ನು ಉದ್ದೇಶಿಸಿ ಇದೇ ಪ್ರಶಂಸೆಯನ್ನು ಹೇಳುತ್ತಾರೆ ಎಂದು ವೃಷಾಕಪಿ, ಇಂದ್ರ ಇವರಿಬ್ಬರೂ ಆದಿತ್ಯನ ವಿಭೂತಿವೇಷಗಳೆಂದೇ ತಿಳಿಸಿದೆ. ಬೃಹದ್ದೇವತಾಕಾರರೂ ವೃಷಾಕಪಿಯನ್ನು ಆದಿತ್ಯಲೋಕಕ್ಕೆ ಸೇರಿದ ದೇವತೆಯೆಂದು ನಿರ್ದೇಶಿಸಿದ್ದಾರೆ.

**ವೃಷಾಕಪಾಯಿಂ ಸೂರ್ಯಸ್ಯ ತಾಮೇವಾಹುಸ್ತು ನಿಮ್ರುಚಿ ।**
**ತಸ್ಯಾಶ್ರಯೇ ಸರಣ್ಯೂಶ್ಚ ಭಗಃ ಪೂಷಾ ವೃಷಾಕಪಿಃ ॥**

(ಬೃ. ದೇ. ೨-೧೦)

ವೃಷಾಕಪಾಯಿ, ಸೂರ್ಯಾ, ಉಷಸ್ಸು ಇವರು ಸೂರ್ಯನ ಪತ್ನಿಯರು. ಸೂರ್ಯಾಸ್ತಮಯಕಾಲದಲ್ಲಿ ಸೂರ್ಯ ಮತ್ತು ವೃಷಾಕಪಾ ಯಿಯರ ಸಂಬಂಧವು ಅಧಿಕವಾಗಿರುತ್ತದೆ. ಸರಣ್ಯು, ಭಗ, ಪೂಷ ಮತ್ತು ವೃಷಾಕಪಿ ಇವರೆಲ್ಲರೂ ಸೂರ್ಯನ ಆಶ್ರಯಕ್ಕೆ ಸೇರಿದವರು ಎಂದು ನಿರುಕ್ತಕಾರರ ತಾತ್ಪರ್ಯವನ್ನು ಅನುಮೋದಿಸುವ ವಿವರವಿರುತ್ತದೆ. ನಂತರ ಈ ಪದದ ನಿರ್ವಚನವು ಈರೀತಿಯಿರುತ್ತದೆ.

**ವೃಷ್ವೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।**
**ವೃಷಾಕಪಿರಸೌ ತೇನ ವಿಶ್ವಸ್ಮಾದಿಂದ್ರ ಉತ್ತರಃ ।**
**ರಶ್ಮಿಭಿಃ ಕಂಪಯನ್ನೇತಿ ವೃಷಾ ವರ್ಷಿಷ್ಠ ಏವ ಸಃ ॥**

(ಬೃ. ದೇ. ೨-೬೭)

ಕಪಿಲವರ್ಣಾತ್ಮಕವಾದ ವೃಷವು ನಾಕವನ್ನು ಹತ್ತುವುದರಿಂದ ಇದಕ್ಕೆ **ವೃಷಾಕಪಿಯೆಂದು** ಹೆಸರು. ಆದುದರಿಂದ **ವಿಶ್ವಸ್ಮಾದಿಂದ್ರ ಉತ್ತರಃ** ಎಂಬ ವಾಕ್ಯವನ್ನೊಳಗೊಂಡ ಸೂಕ್ತದಲ್ಲಿ ವರ್ಣಿತವಾಗಿರುವ ವೃಷಾಕಪಿಯು ಕಂಪಿಸುವಂತೆ ಮಾಡುವ ಆದಿತ್ಯನೇ ಆಗಿರಬೇಕು.

**ಸಾಯಾಹ್ನಕಾಲೇ ಭೂತಾನಿ ಸ್ವಾಪಯನ್ನಸ್ತಮೇತಿ ಯತ್ ।**
**ವೃಷಾಕಪಿರಿತೋ ವಾ ಸ್ಯಾದಿತಿ ಮಂತ್ರೇಷು ದೃಶ್ಯತೇ ॥**

(ಬೃ. ದೇ. ೨-೬೮)

ಅಲ್ಲದೇ, ಸಾಯಂಕಾಲದಲ್ಲಿ ಸಕಲ ಭೂತಗಳನ್ನೂ ನಿದ್ರೆಮಾಡುವಂತೆ ಮಾಡಿಸಿ ತಾನು ಅಸ್ತನಾಗುತ್ತಾನೆ. **ಧನ್ವ ಚ ಯತ್ಕೃಂತಕ್ರ** ಎಂಬ ಮಂತ್ರದಿಂದ ಹಿಡಿದು **ಯದುದಂಚೋ ವೃಷಾಕಪೇ** ಎಂಬ ಮಂತ್ರದವರೆಗೆ (೨೦-೨೨) ವೃಷಾಕಪಿಗೆ ಇಂದ್ರನ ನಿಷ್ಕೃಷ್ಟವಾದ ನಿರ್ದೇಶವಿರುತ್ತದೆ. ಹೀಗೆ ವೃಷಾಕಪಿಯು ಸೂರ್ಯ ಲೋಕಕ್ಕೆ ಸೇರಿದ ಮತ್ತು ಸೂರ್ಯಾಂಶವನ್ನೂ ಪ್ರತಿಬಿಂಬಿಸುವ ದೇವತೆಗಳೆಂದು ಮೇಲಿನ ವಿವರಣೆಗಳಿಂದ ತಿಳಿಯುತ್ತದೆ.

**ಚಕಾರ ಹರಿತೋ ಮೃಗಃ** (ಋ. ಸಂ. ೧೦-೮೬-೩) ಇತ್ಯಾದಿ ವಾಕ್ಯಗಳಲ್ಲಿರುವ ಮೃಗಶಬ್ದದಿಂದ ವೃಷಾಕಪಿಯು ಮೃಗಜಾತಿಗೆ ಸೇರಿದುದಾಗಿದೆ ಎಂದು ಕೆಲವರ ಮತ. ಆದರೆ ಮೃಗಶಬ್ದಕ್ಕೂ ಆದಿತ್ಯಪರವಾಗಿಯೇ ಅರ್ಥಮಾಡಿದೆ. ನಿರುಕ್ತಕಾರರು ಋಕ್ಸಂಹಿತೆಯ,

**ಯದುದಂಚೋ ವೃಷಾಕಪೇ ಗೃಹಮಿಂದ್ರಾಜಗಂತನ ।**
**ಕ್ವಸ್ಯ ಪುಲ್ವಘೋ ಮೃಗಃ ಕಮಗಂಜನಯೋಪನೋ ವಿಶ್ವಸ್ಮಾದಿಂದ್ರ ಉತ್ತರಃ ॥**

(ಋ. ಸಂ. ೧೦-೮೬-೨೨)

ಎಂಬ ಋಕ್ಕನ್ನುದಾಹರಿಸಿ ಈ ವಿಷಯವನ್ನು ವಿಶದಪಡಿಸುತ್ತಾರೆ. **ತ ಏತದ್ವಃ ಬ್ರೂಮ ಆದಿತ್ಯಂ** ಎಂದು (ನಿ. ೧೩-೩) ಇಲ್ಲಿಯೂ ಆದಿತ್ಯಪರವಾಗಿಯೇ ಅರ್ಥಮಾಡಿದ್ದಾರೆ. ಇಲ್ಲಿ **ಮೃಗ** ಶಬ್ದವನ್ನು ದುರ್ಗಾಚಾರ್ಯರು ವಿವರಿಸುತ್ತ (ನಿ. ೧೩-೩) ಈ ಶಬ್ದಕ್ಕೆ ಆದಿತ್ಯ ಪರವಾದ ಅರ್ಥವು ಹೇಗೆ ಸಾಧ್ಯವೆಂದು ತಿಳಿಸಲು **ಪುಲ್ವಘಃ,** ಎಂಬ ವಿಶೇಷಣವನ್ನು ವಿವರಿಸುತ್ತಾರೆ.

**ಪುಲ್ವಘಃ** ಎಂದರೆ ಅಧಿಕವಾಗಿ ಭಕ್ಷಿಸುವವನು (**ಬಹ್ವಾದೀ**) ಎಂದು ನಿರುಕ್ತಕಾರರೇ ಹೇಳಿದ್ದಾರೆ. ಬಹುವಾಗಿ ಭಕ್ಷಿಸುವವನು ಎಂದರ್ಥ. ಅದು ಹೇಗೆಂದರೆ—**ಬಹ್ವಸೌ ಅತ್ತಿ ಸರ್ವಪ್ರಾಣಿಷ್ವವಸ್ಥಿತಃ—**

**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ**

(ಋ. ಸಂ. ೧-೧೧೫-೧)

ಎಂಬ ವಾಕ್ಯದಲ್ಲಿ ವರ್ಣಿತವಾಗಿರುವಂತೆ ಸೂರ್ಯನೇ ಸಕಲ ಪ್ರಾಣಿಗಳ ಆತ್ಮನಲ್ಲೂ ವ್ಯಾಪಿಸಿರುವುದರಿಂದಲೂ **ಅದ್ಯತೇಽತ್ತಿ ಚ ಭೂತಾನಿ** ಇತ್ಯಾದಿ ಉಪನಿಷದ್ವಾಕ್ಯಗಳು ಆದಿತ್ಯರೂಪನಾದ ಪರಬ್ರಹ್ಮನ ಭಕ್ಷಕಸ್ವರೂಪವನ್ನು ವಿವರಿಸುವುದರಿಂದಲೂ, ಪ್ರಕೃತದಲ್ಲೂ **ಪುಲ್ವಘಃ ಮೃಗಃ** ಎಂಬುದಕ್ಕೆ ಆದಿತ್ಯನೆಂದೇ ಅರ್ಥಮಾಡಿದ್ದಾರೆ.

ಈ ಸೂಕ್ತದಲ್ಲಿ ಇಂದ್ರ, ಇಂದ್ರಾಣೀ, ಇಂದ್ರಪುತ್ರನಾದ ವೃಷಾಕಪಿ ಎಂಬುವರ ಸಂವಾದವು ಉಕ್ತವಾಗಿದೆಯೆಂದು ಹಿಂದೆಯೇ ಹೇಳಿದೆಯಷ್ಟೆ. ಆ ಸಂವಾದವನ್ನೇ ಇಲ್ಲಿ ಸಂಕ್ಷೇಪವಾಗಿ ವಿವರಿಸಿದೇವೆ—

(೧) ಇಂದ್ರ—ನಾನು ಸಮಸ್ತ ಜಗತ್ತಿಗಿಂತಲೂ ಶ್ರೇಷ್ಠನಾದವನು, ಎಲ್ಲರಿಗಿಂತಲೂ ಅಧಿಕನು. ಆದರೂ ನನ್ನಿಂದಲೇ ಆಜ್ಞಪ್ತರಾದ ಋತ್ವಿಕ್ಕುಗಳು ತಾವು ಮಾಡಿದ ಸೋಮಯಾಗದಲ್ಲಿ ನನ್ನ ಪುತ್ರನಾದ ವೃಷಾಕಪಿಯನ್ನೇ ಸ್ತುತಿಸಿದರು. ಆ ಯಾಗದಲ್ಲಿ ಅವನು ಸೋಮಪಾನದಿಂದ ತೃಪ್ತಿಯನ್ನು ಪಡೆದನು. ಆ ಯಾಗದಲ್ಲಿ ನನಗಾಗಿ ಸೋಮರ ಸವನ್ನು ಹಿಂಡಿ ಸಿದ್ಧಪಡಿಸಲಿಲ್ಲ ಮತ್ತು ನನ್ನನ್ನು ಸ್ತುತಿಸಲೂ ಇಲ್ಲ,

(೨) ಇಂದ್ರಾಣೀ (ಇಂದ್ರನ ಪತ್ನಿ)—ಎಲೈ ಇಂದ್ರನೇ, ನಿನ್ನ ಮನಸ್ಸು ವ್ಯಥೆಯಿಂದ ಯಾವಾಗಲೂ ವೃಷಾ ಕಪಿಯ ಕಡೆಗೇ ಓಡುತ್ತಿರುವುದು. ನೀನು ಸೋಮಪಾನಾರ್ಥವಾಗಿ ಮತ್ತೆಲ್ಲಿಗೂ ಹೋಗುವುದೇ ಇಲ್ಲ.

(೩) ಎಲೈ ಇಂದ್ರನೇ, ಕೇವಲ ಪಶುವಿನಂತಿರುವ ಆ ವೃಷಾಕಪಿಯು ನಿನಗೆ ಹಿತಕರವಾದ ಏನು ಉಪಕಾರಮಾಡಿ ದಾನೆ ? ಏನು ಮಾಡದಿದ್ದರೂ ನೀನು ಅವನಿಗೆ ಉದಾರವಾಗಿ ಧನವನ್ನೂ, ಆಹಾರವನ್ನೂ ಒದಗಿಸಿಕೊಡುತ್ತೀಯಲ್ಲವೇ.

(೪) ಎಲೈ ಇಂದ್ರನೇ, ನೀನು ಅತ್ಯಂತ ಪ್ರೀತಿಯಿಂದ ಕಾಪಾಡಬಯಸುವ ನಿನ್ನ ಪುತ್ರನಾದ ಈ ವೃಷಾಕಪಿ ಯನ್ನು, ಬೇಟೆನಾಯಿಯು ಕಾಡುಹಂದಿಯನ್ನು ಕಿವಿಯಿಂದ ಕಚ್ಚಿ ಕೊಂದುತಿನ್ನುವಂತೆ, ಹಿಡಿದು ಭಕ್ಷಿಸಲಿ.

(೫) ಯಜ್ಞದಲ್ಲಿ ಯಜಮಾನರು ನನಗಾಗಿ ಸಿದ್ಧಪಡಿಸಿದ್ದ ಆಜ್ಯಯುಕ್ತವಾದ ಹವಿಸ್ಸನ್ನು ಈ ದುಷ್ಟಕಪಿಯು ಕೆಡಿಸಿ ಹಾಳುಮಾಡಿದೆ. ಇದರ ಶಿರಸ್ಸನ್ನು ಕತ್ತರಿಸಿಹಾಕುತ್ತೇನೆ. ಕೆಟ್ಟಕೆಲಸವನ್ನು ಮಾಡುವವರಿಗೆ ನಾನು ಎಂದಿಗೂ ಸುಖವನ್ನುಂಟುಮಾಡಲು ಬಯಸುವುದಿಲ್ಲ.

(೬) ನನಗಿಂತಲೂ ಅಧಿಕ ಸೌಭಾಗ್ಯವುಳ್ಳ ಸ್ತ್ರೀಯು ಮತ್ತಾರೂ ಇಲ್ಲ. ಒಳ್ಳೆಯ ಪುತ್ರರನ್ನು ಪಡೆದಸ್ತ್ರೀಯು ನನಗಿಂತ ಬೇರೆ ಯಾರೂ ಇಲ್ಲ. ತನ್ನ ಪತಿಯನ್ನು ಅನುಸರಿಸಿ ಅವನೊಡನೆ ಹೊಂದಿಕೊಂಡು ಅವನ ಇಚ್ಛೆಯನ್ನು ಪೂರ್ತಿ ಮಾಡುವ ಸ್ತ್ರೀಯು ನನ್ನನ್ನು ಬಿಟ್ಟರೆ ಯಾರೂ ಇಲ್ಲ.

(೭) ವೃಷಾಕಪಿ—ಎಲೈ ಮಾತೆಯೇ, ನೀನು ಹೇಳಿದಂತೆಯೇ ಎಲ್ಲವೂ ಬೇಗ ನೆರವೇರಲಿ. ನನ್ನ ತಂದೆಯಾದ ಇಂದ್ರನು ನಿನ್ನ ಸಂಗದಿಂದ ಸುಖವನ್ನು ಪಡೆಯಲಿ. ನೀನು ಪತಿಯೊಡನಿರುವಾಗ ಅವನಿಗೆ ಸೌಖ್ಯವುಂಟಾಗಲಿ. ಕೋಕಿಲಾದಿ ಪಕ್ಷಿಗಳ ಗಾನದಂತೆ ನಿನ್ನ ಪ್ರಿಯಾಲಾಪಗಳಿಂದ ನನ್ನ ತಂದೆಯು ಹರ್ಷವನ್ನನುಭವಿಸಲಿ.

(೮) ಇಂದ್ರ—(ಇಂದ್ರಾಣಿಯನ್ನುದ್ದೇಶಿಸಿ) ಎಲೈ ಶೋಭನಾಂಗಿಯೇ, ನೀನು ವೀರಪತ್ನಿಯು, ನಿನ ಬಾಹುಗಳು ಕೋಮಲವಾಗಿವೆ, ನಿನ್ನ ಬೆರಳುಗಳು ಚೆನ್ನಾಗಿವೆ. ನಿನ್ನ ಕೇಶರಾಶಿಗಳು ನೀಳವಾಗಿಯೂ, ಕಪ್ಪಾಗಿಯೂ, ಇವೆ. ನಿನ್ನ ಜಘನಪ್ರದೇಶವು ವಿಸ್ತೃತವಾಗಿದೆ. ಹೀಗಿರುವ ನೀನು ನಮ್ಮ ಪುತ್ರನಾದ ವೃಷಾಕಪಿಯ ಮೇಲೆ ಏಕೆ ಕೋಪಿಸಿಕೊಳ್ಳುವೆ ?

(೯) ಇಂದ್ರಾಣಿ—ಈ ದುಷ್ಟಮೃಗವು ನನ್ನನ್ನು ಪುರುಷರ ರಕ್ಷಣೆಯೇ ಇಲ್ಲದಿರುವವಳಂತೆ ತಿಳಿದು ತಿರಸ್ಕಾರ ಭಾವದಿಂದ ಮಾತನಾಡುತ್ತದೆ. ನನಗೆ ವೀರನಾದ ಇಂದ್ರನೇ ಪತಿಯು, ನನಗೆ ಶೂರರಾದ ಪುತ್ರರಿದ್ದಾರೆ. ವೀರರಾದ ಮರುತ್ತುಗಳೂ ನನ್ನ ಮಿತ್ರರೇ ಆಗಿದ್ದಾರೆ.

(೧೦) ಈ ಇಂದ್ರಾಣಿಯು (ನಾನು) ಸತ್ಯದ ನಿರ್ಮಾತ್ರಿಯು, ವೀರಪುತ್ರರನ್ನು ಪಡೆದಿರುವವಳು, ಶೂರನಾದ ಇಂದ್ರನ ಭಾರ್ಯೆಯು. ಸ್ತೋತೃಜನರಿಂದ ಪ್ರಾರ್ಥಿತಳಾಗಿ ಅವರನ್ನು ಅನುಗ್ರಹಿಸುವುದಕ್ಕಾಗಿ ಅವರು ಮಾಡುವ ಯುದ್ಧಕ್ಕಾಗಲಿ, ಯಜ್ಞಭೂಮಿಗಾಗಲಿ ಹೋಗುತ್ತಾಳೆ.

(೧೧) ಇಂದ್ರ—(ಇಂದ್ರಾಣಿಯನ್ನುದ್ದೇಶಿಸಿ) ಸೌಭಾಗ್ಯಸಂಪನ್ನರಾದ ಸ್ತ್ರೀಯರನ್ನೆಲ್ಲಾ ಈ ಇಂದ್ರಾಣಿಯು ಅತ್ಯಂತ ಸೌಭಾಗ್ಯಯುಕ್ತಳೆಂದು ನಾನು ಕೇಳಿದೇನೆ. ಏಕೆಂದರೆ ಈ ಇಂದ್ರಾಣಿಯ ಪತಿಯಾದ ಇಂದ್ರನು ಯುದ್ಧಕ್ಕಾಗಲಿ, ಯಜ್ಞಭೂಮಿಗಾಗಲಿ ಹೋಗುತ್ತಾಳೆ.

(೧೨) ಎಲೈ ಇಂದ್ರಾಣಿಯೇ, ನನಗೆ ಮಿತ್ರನಂತಿರುವ ನನ್ನ ಪುತ್ರನಾದ ವೃಷಾಕಪಿಯು ನನ್ನೊಡನಿಲ್ಲಿದಿದ್ದರೆ ನನಗೆ ಹರ್ಷವಿರುವುದಿಲ್ಲ. ಆ ವೃಷಾಕಪಿಯಿಂದ ಸಿದ್ಧಗೊಳಿಸಲ್ಪಟ್ಟ ಉದಕದಿಂದ ಸಂಸ್ಕರಿಸಲ್ಪಟ್ಟ ಶುದ್ಧವಾದ ಹವಿಸ್ಸು ದೇವತೆಗಳಿಗೆ ಅತ್ಯಂತ ಪ್ರೀತಿಪಾತ್ರವಾಗಿರುತ್ತದೆ.

(೧೩) ವೃಷಾಕಪಿ—ಎಲೈ (ವೃಷಾಕಪಿಯಾದ ನನ್ನ) ಮಾತೆಯಾದ ವೃಷಾಕಪಾಯಿಯೇ (ಇಂದ್ರಾಣಿಯೇ), ನೀನು ಧನವಂತಳು, ನಿನಗೆ ಶ್ರೇಷ್ಠರಾದ ಪುತ್ರರಿದಾರೆ ಮತ್ತು ಉತ್ತಮ ಸೊಸೆಯುರೂ ಇದಾರೆ. ನೀನು ನಿನ್ನ ಪತಿಯಾದ ಇಂದ್ರನಿಗಾಗಿ ಪ್ರೀತಿಯಿಂದ ಅರ್ಪಿಸುವ ಹವೀರೂಪವಾದುದೂ ಇಂದ್ರನಿಗೆ ಪ್ರಿಯಕರವಾದುದೂ ಆದ ಪಶುಗಳನ್ನು (ಪಶುಗಳ ಮಾಂಸವನ್ನು) ತಿನ್ನಲಿ.

(೧೪) ಇಂದ್ರ—ನನ್ನ ಪತ್ನಿಯಾದ ಇಂದ್ರಾಣಿಯಿಂದ ಪ್ರೇರಿತರಾದ ಯಜ್ಞಕರ್ತರು ನನ್ನ ತೃಪ್ತಿಗಾಗಿ ಹದಿನೈದು ಅಥವಾ ಇಪ್ಪತ್ತು ವೃಷಭ (ಎತ್ತು ಅಥವಾ ಹೋರಿ) ಗಳನ್ನು ಎಂದರೆ ಅವುಗಳ ಮಾಂಸವನ್ನು ಪಕ್ವಮಾಡುತ್ತಾರೆ. ಅವುಗಳನ್ನು ನಾನು ಭಕ್ಷಿಸಿ ಪುಷ್ಟನಾಗುತ್ತೇನೆ. ಅವು ನನ್ನ ಉದರದ ಎರಡು ಪಾರ್ಶ್ವಗಳನ್ನೂ ತುಂಬುತ್ತವೆ ಮತ್ತು ನನ್ನ ಉದರವನ್ನು ಸೋಮರಸದಿಂದ ಯಜಮಾನರು ತುಂಬುತ್ತಾರೆ.

(೧೫) ಇಂದ್ರಾಣೀ—ಎಲೈ ಇಂದ್ರನೇ, ಹರಿತವಾದ ಕೊಂಬುಗಳುಳ್ಳ ವೃಷಭವು ಗೋವುಗಳ ಹಿಂಡಿನಲ್ಲಿ ಗುಟುರು ಹಾಕುತ್ತಾ ಹೇಗೆ ಹರ್ಷದಿಂದಿರುವುದೋ ಅದರಂತೆ ನಾನು ಹರ್ಷಕ್ಕಾಗಿ ಹಿಂಡಿ ಸಿದ್ಧಪಡಿಸುವ ಸೋಮರಸವು ನಿನಗೆ ತೃಪ್ತಿಯನ್ನುಂಟುಮಾಡಿ ಹರ್ಷದಾಯಕವಾಗಿರಲಿ.

(೧೬) ಎಲೈ ಇಂದ್ರನೇ, ಯಾವ ಪುರುಷನ ಜನನೇಂದ್ರಿಯವು ಎರಡು ತೊಡೆಗಳ ಮಧ್ಯದಲ್ಲಿ ನೇತಾಡುತ್ತಾ ಸುಪ್ತಾವಸ್ಥೆಯಲ್ಲಿ ಮಾತ್ರವಿರುತ್ತಾ ಶಕ್ತಿಹೀನವಾಗಿರುವುದೋ ಅಂತಹ ಪುರುಷನು ಸ್ತ್ರೀಯೊಡನೆ ಮೈಥುನಕರ್ಮವನ್ನೆಸಗಲು ಎಂದರೆ ಸ್ತ್ರೀಸಂಭೋಗಮಾಡಲು ಶಕ್ತನಾಗಿರುವುದಿಲ್ಲ. ಆದರೆ ಯಾವ ಪುರುಷನ ಜನನೇಂದ್ರಿಯದ ದಂಡವು ಉದ್ರಿಕ್ತಾವಸ್ಥೆಯಲ್ಲಿ ನೇರವಾಗಿ ನಿಲ್ಲಲು ಶಕ್ತವಾಗುವುದೋ ಅಂತಹ ಪುರುಷನು ಮಾತ್ರ ಸ್ತ್ರೀಯೊಡನೆ ರತಿಕರ್ಮವನ್ನೆಸಗಲು ಸಮರ್ಥನಾಗುತ್ತಾನೆ.

(೧೭) ಇಂದ್ರ—ಎಲೈ ಇಂದ್ರಾಣಿಯೆ, ನೀನು ಹೇಳುವುದು ಸರಿಯಲ್ಲ. ಯಾವ ಪುರುಷನ ಸುಪ್ತಾವಸ್ಥೆಯಲ್ಲಿರುವ ಪುರುಷಲಿಂಗವು ಉದ್ರಿಕ್ತಾವಸ್ಥೆಯಲ್ಲಿ ನೆಟ್ಟಗೆ ನಿಲ್ಲುವುದೋ ಆ ಪುರುಷನು ಸ್ತ್ರೀಸಂಭೋಗಮಾಡಲು ಶಕ್ತನಲ್ಲ; ಯಾವ ಪುರುಷನ ಜನನೇಂದ್ರಿಯದ ಲಿಂಗವು ಎರಡು ತೊಡೆಗಳ ಮಧ್ಯದಲ್ಲಿ ನಿಸ್ಸತ್ವವಾಗಿ ಜೋಲಾಡುತ್ತಿರುವುದೋ ಅಂತಹ ಪುರುಷನೇ ಸ್ತ್ರೀಸಂಗವನ್ನು ಮಾಡಲು ಸಮರ್ಥನು.

(೧೮) ಇಂದ್ರಾಣೀ—ಈ ವೃಷಾಕಪಿಯು ತನ್ನದಲ್ಲದ ಒಂದು ಸತ್ತಪ್ರಾಣಿಯನ್ನು ತೆಗೆದುಕೊಳ್ಳಲಿ. ಅದನ್ನು ಕತ್ತರಿಸಲು ಹರಿತವಾದ ಕತ್ತಿಯನ್ನೂ, ಅದನ್ನು ಪಾಕಮಾಡಲು ಸೌಟನ್ನೂ, ಹೊಸ ಬಾಂಡಲೆಯನ್ನೂ, ಬೇಯಿಸುವುದಕ್ಕಾಗಿ ಒಂದು ಗಾಡಿ ತುಂಬ ಸೌದೆಯನ್ನೂ ಶಿದ್ಧಪಡಿಸಿಕೊಳ್ಳಲಿ.

(೧೯) ಇಂದ್ರ—ಎಲೈ ಇಂದ್ರಾಣಿಯೇ, ಯಜ್ಞಮಾಡುತ್ತಿರುವ ಯಜಮಾನರ ಯಜ್ಞಕರ್ಮವನ್ನು ನೋಡುತ್ತ ಅಲ್ಲಿಗೆ ಬರುತ್ತೇನೆ. ಇವರಲ್ಲಿ ದಾಸಜನರು (ದಸ್ಯುಜನರು ಕಪ್ಪುವರ್ಣದವರು) ಯಾರು, ಆರ್ಯಜನರು ಯಾರು ಎಂಬುದನ್ನು ತಿಳಿದುಕೊಳ್ಳುತ್ತೇನೆ. ಒಳ್ಳೆಯ ಮನಸ್ಸಿನಿಂದ ನನಗಾಗಿ ಯಾರು ಸೋಮರಸವನ್ನು ಸಿದ್ಧಪಡಿಸುವರೋ ಆ ಸೋಮವನ್ನು ಮಾತ್ರ ಪಾನಮಾಡುತ್ತೇನೆ. ಮತ್ತು ಶ್ರೇಷ್ಠನಾದ ಯಜಮಾನನನ್ನು ಅನುಗ್ರಹ ಬುದ್ಧಿಯಿಂದ ನೋಡುತ್ತೇನೆ.

(೨೦) ಎಲೈ ವೃಷಾಕಪಿಯೇ, ನಮ್ಮ ಮನೆಗೂ ಇಲ್ಲಿಗೂ ಮಧ್ಯದಲ್ಲಿ ಅರಣ್ಯವೂ, ಬೆಂಗಾಡು ಪ್ರದೇಶವೂ ಇರುವುದು. ಇದು ಎಷ್ಟು ದೂರದವರಿಗಿರುವುದೋ ? ಇದರಲ್ಲಿ ಶತ್ರುಗಳಿರಬಹುದು. ಆದ್ದರಿಂದ ಇಲ್ಲಿಂದ ಹೊರಟು ನಮ್ಮ ಮನೆಗೆ ಹೋಗಿ ಅಲ್ಲಿರುವ ಯಜ್ಞಗೃಹದ ಸಮಿಾಪಕ್ಕೆ ಹೋಗು,

(೨೧) ಎಲೈ ವೃಷಾಕಪಿಯೆ, ನಮ್ಮ ಮನೆಗೆ ಹಿಂತಿರುಗಿ ಬಾ. ನಾನೂ ಇಂದ್ರಾಣಿಯೂ ನಿನಗೆ ಹಿತವಾದ ಕಾರ್ಯಗಳನ್ನೇ ಮಾಡಬೇಕೆಂದಿರುವೆವು. ಆದ್ದರಿಂದ ತನ್ನ ಉದಯದಿಂದ ಪ್ರಾಣಿಗಳ ನಿದ್ರಾಭಂಗವನ್ನುಂಟುಮಾಡುವ ಆದಿತ್ಯನ ಸ್ವರೂಪವಾದ ನೀನು ನೇರವಾದ ಮಾರ್ಗದಿಂದ ಮನೆಗೆ ಬಾ.

(೨೨) ಇಂದ್ರಾಣಿ—ಎಲೈ ವೃಷಾಕಪಿಯೇ, ಇಂದ್ರನೇ, ಎದ್ದೇಳಿ, ಮನೆಗೆ ಬನ್ನಿ. ವಿನಾಶಕರವಾದ ಆ ಹಾಳು ಮೃಗವು ಎಲ್ಲಿಗೆ ಹೋಯಿತು ?

(೨೩) ವೃಷಾಕಪಿಃ—ಎಲೈ ಇಂದ್ರಬಸೃಷ್ಟವಾದ ಬಾಣವೇ, ಮನುವಿನ ಪುತ್ರಿಯಾದ ಪರ್ಶು ಎಂಬ ಹೆಣ್ಣುಮಗಳು ಏಕಕಾಲದಲ್ಲಿ ಇಪ್ಪತ್ತು ಮಕ್ಕಳನ್ನು ಹಡೆದಳು. ಇಪ್ಪತ್ತು ಮಕ್ಕಳನ್ನು ಏಕಕಾಲದಲ್ಲಿ ತನ್ನ ಗರ್ಭದಲ್ಲಿ ಧರಿಸಿದ್ದ ಆ ಸ್ತ್ರೀಗೆ ಮಂಗಳವುಂಟಾಗಲಿ.

ಈ ಸೂಕ್ತದ ವಿನಿಯೋಗವಿಷಯದಲ್ಲಿ ಶೌನಕೋಕ್ತ ಗ್ರಂಥವಾದ ಋಗ್ವಿಧಾನದಲ್ಲಿ ಈ ರೀತಿ ಹೇಳಿದೆ.

ಇಂದ್ರಾಣ್ಯಾಃ ಕೃತಸಂವಾದಂ ಸ್ನಾನೇ ಸೂಕ್ತಂ ಪ್ರಯೋಜಯೇತ್ ।
ನವವರ್ಗೋತ್ತಮಯುತಂ ಪತಿಸೌಭಾಗ್ಯಪುತ್ರದಂ ॥
ಜಲಪುಷ್ಪೋತ್ಕರಯುತೇ ಚಿತ್ರಕುಂಭಸಮಾವೃತೇ ।
ಕರ್ತವ್ಯೋಽತ್ರ ತಥಾ ಯಾಗಃ ಸೋಮಗಂಧರ್ವವಹ್ನಿನಾಂ ॥
ಭಗಾಯಾಪ್ಸರಸಾಂ ಚೈವ ಯಕ್ಷಾಧಿಪತಯೋಽಪಿ ಚ ।
ಇಂದ್ರಾಣ್ಯೈ ದೇವಪತ್ನೀನಾಂ ರತಿಪ್ರದ್ಯುಮ್ನಯೋಸ್ತಥಾ ॥
ನದೀಸಲಿಲಸಂಪೂರ್ಣೈಃ ಪಂಚಗವ್ಯಸಮಾವೃತೈಃ ।
ಹುತ್ವಾಗ್ನಿಂ ಸ್ನಾಪಯೇತ್ಕನ್ಯಾಂ ಸ್ಥಿತಾಂ ದೇಶೇ ತು ದಕ್ಷಿಣೇ ॥
ಪ್ರಿಯಂಗುವಟನಾಗಾನಾಂ ಕಷಾಯೋದ್ಧೃಷ್ಟಕೇಸರಂ ।
ಸಂಪಾತಾಭಿಹುತಂ ಕೃತ್ವಾ ಸರ್ವೌಷಧಿಸಮನ್ವಿತಂ ॥

**ಅಭಿಮಂತ್ರ್ಯೇಹ ಸೂಕ್ತಾಂತೇ ನವಭಿಸ್ತು ನಿ ಹೀತಿ ವೈ ।**
**ಸ್ಥೇಯಾಭಿರದ್ಭಿಃ ಪೂರ್ಣೇನ ಅಭಿಷಿಂಚೇದುಪೋಷಿತಾಂ ॥**
**ಯಾಃ ಪತಿಘ್ನ್ಯಸ್ತ್ರಿಯಸ್ತನ್ವಃ ಶಾಮ್ಯಂತೇ ತಾಸ್ತ್ವನೇನ ವೈ ।**
**ಸ್ನಾಪಯೇದಾಹನಸ್ಯಾಭಿರ್ವದ್ಯಾದ್ಯಾಂ ವಿಪ್ರವಾಜಿನೀಂ ॥**
**ಸೂಕ್ತಾದುಪೋದ್ಧರೇದೇನಂ ನ ಸೇಶ ಇತಿ ತು ದ್ವ್ಯೃಚಂ ।**
**ಉಪದಿಷ್ಟೋಽಯಮೇಕೇಷಾಂ ಪುಂಸಃ ಕರ್ಮಣಿ ಪೌರುಷೇ॥**

(ಋಗ್ವಿಧಾನ. ಅ. ೩-೧೨೦ ರಿಂದ ೧೨೭)

ಇಂದ್ರ ಮತ್ತು ಇಂದ್ರಾಣಿಯರೊಡನೆ ನಡೆದ ಸಂವಾದವನ್ನೊಳಗೊಂಡಿರುವ ಈ ಸೂಕ್ತವನ್ನು ಸ್ನಾನಕಾಲದಲ್ಲಿ ಪಠಿಸಬೇಕು. ಇದರಿಂದ ಸ್ತ್ರೀಯರಿಗೆ ಸೌಭಾಗ್ಯ, ಪತಿ ಪುತ್ರರು ಮೊದಲಾದುವುಗಳು ಲಭಿಸುವವು. ಚಿತ್ರವಿಚಿತ್ರವಾದ ಕಲಶವನ್ನಿಟ್ಟು ಅದರಲ್ಲಿ ನೀರನ್ನು ತುಂಬಿ ಚಿಗರು, ಎಲೆ ಪುಷ್ಪ ಇವುಗಳನ್ನು ಹಾಕಿ ಸೋಮಾದಿದೇವತೆಗಳನ್ನು ಅದರಲ್ಲಿ ಆಹ್ವಾನಮಾಡಿ ಯಾಗವನ್ನು ಮಾಡಬೇಕು. ಆ ಹೋಮದಲ್ಲಿ ಸೋಮ, ಗಂಧರ್ವ, ಅಗ್ನಿ, ಭಗ, ಅಪ್ಸರಸ್ಸು, ಯಕ್ಷಾಧಿಪತಿ, ಇಂದ್ರಾಣೀ ದೇವಪತ್ನಿಯರು, ರತಿ, ಪ್ರದ್ಯುಮ್ನ ಇವರುಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಬೇಕು. ನದೀಜಲಸಹಿತವಾದ ಪಂಚಗವ್ಯವನ್ನು ಅಭಿಮಂತ್ರಿಸಬೇಕು. ಅಗ್ನಿಯಲ್ಲಿ ಹೋಮಮಾಡಿದನಂತರ ಕಲಶೋದಕದಿಂದ ಕನ್ಯೆಯನ್ನು ದಕ್ಷಿಣದಿಕ್ಕಿನಲ್ಲಿ ಕೂಡಿಸಿ ಸ್ನಾನ ಮಾಡಿಸಬೇಕು. ಪ್ರಿಯಂಗು ಮೊದಲಾದ ಓಷಧಿಗಳಿಂದ ಸಿದ್ಧವಾದ ರಸದಿಂದ ಈ ಸೂಕ್ತಮಂತ್ರಪಠನಪೂರ್ವಕವಾಗಿ ಕನ್ಯೆಯನ್ನು ಪ್ರೋಕ್ಷಿಸಿ ಸೂಕ್ತಪಠನಾನಂತರ ಕಲಶೋದಕದಿಂದ ಸ್ನಾನಮಾಡಿಸಬೇಕು. ಹೀಗೆ ಮಾಡಿದರೆ ಸ್ತ್ರೀಯ ಶರೀರದಲ್ಲಿ ಪ್ರವೇಶಿಸಿರುವ ಭೂತಾದಿಗಳೂ ವ್ಯಾಧಿಗಳೂ ಪರಿಹಾರವಾಗಿ ಆಯುರಾರೋಗ್ಯವು ವೃದ್ಧಿಯಾಗುವುದು. ಈ ಸೂಕ್ತದಲ್ಲಿ **ನ ಸೇಶೇ** ಎಂಬ ೧೬ ಮತ್ತು ೧೭ನೇ ಎರಡು ಋಕ್ಕುಗಳನ್ನು ಉಪದೇಶಮೂಲಕ ಪುರುಷರು ಜಪಿಸಿದಲ್ಲಿ ನಷ್ಟವಾದ ಪುಂಸತ್ವವು ಪುನಃ ಪ್ರಾಪ್ತವಾಗುವುದು.

ಇದಂಯುಃ ॥೧೨೬॥
ಇದಂಯುರಿದಂ ಕಾಮಯಮಾನಃ ॥ ಅಥಾಪಿ ತದ್ವದರ್ಥೇ ಭಾಷ್ಯತೇ ।
ವಸೂಯುರಿನ್ದ್ರೋ ವಸುಮಾನಿತ್ಯತ್ರಾರ್ಥಃ । "ಅಶ್ವಯುರ್ಗವ್ಯೋ
ರಥಯುರ್ವಸೂಯುಃ" ಇತ್ಯಪಿ ನಿಗಮೋ ಭವತಿ ॥೪॥೩೧॥

**ಇದಂಯುಃ—ಇದಂ ಕಾಮಯಮಾನಃ** । ಇದನ್ನು ಅಪೇಕ್ಷಿಸುವವನು ಎಂದು ಅರ್ಥವು. ಯಾವುದಾದರೂ ಶಬ್ದದ ಮುಂದೆ **ಯು** ಎಂಬ ಪ್ರತ್ಯಯವಿದ್ದರೆ ಅದನ್ನು (ಶಬ್ದಾರ್ಥವನ್ನು) ಅಪೇಕ್ಷಿಸುವವನು ಎಂದರ್ಥವಾಗುವುದು. ಆದರೆ **ಅಥಾಪಿ ತದ್ವದರ್ಥೇ ಭಾಷ್ಯತೇ । ವಸೂಯುರಿಂದ್ರೋ ವಸುಮಾನಿತ್ಯತ್ರಾರ್ಥಃ ।** ಶಬ್ದಗಳಿಗೆ ಮೇಲೆ ಹೇಳಿದ ಅರ್ಥವು ಸೂಚಿತವಾದರೂ ಇಂದ್ರನ ವಿಷಯದಲ್ಲಿ **ವಸೂಯುಃ** ಎಂದರೆ **ವಸುಮಾನ್** ಧನವನ್ನು ಹೊಂದಿರುವವನು ಎಂದರ್ಥವು. **ಅಶ್ವಯುರ್ಗವ್ಯೋ ರಥಯುರ್ವಸೂಯುಃ** । ಎಂಬ ವಾಕ್ಯವೂ ಶ್ರುತಿವಾಕ್ಯವು ಇಂದ್ರನಿಗೆ ವಿಶೇಷಣವಾದ ಪದಗಳು. ಇಂದ್ರನು ಅಶ್ವಗಳುಳ್ಳವನು ರಥಗಳುಳ್ಳವನು, ಧನಗಳುಳ್ಳವನು ಎಂದು ಈ ಪದಗಳ ಅರ್ಥವು.

ಉದಾಹರಣೆಯ ಋಕ್ಕು—

**ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ ದುರ್ಯೋ ನ ಯೂಪಃ ।**
**ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇಂದ್ರಾಯಃ ಕ್ಷಯತಿ ಪ್ರಯಂತಾ ॥**
(ಋ. ಸಂ. ೧–೫೧–೧೪)

ಇದರ ಅರ್ಥವು—

ತನ್ನನ್ನು ಸ್ತೋತ್ರಮಾಡುವ ಯಜಮಾನರು ನಿರ್ಧನರಾಗಿದ್ದರೂ ಇಂದ್ರನು ಅವರ ಸ್ತೋತ್ರಗಳನ್ನು ಸ್ವೀಕರಿಸುವನು. ಅದುದರಿಂದ ಅಂಗಿರಾಋಷಿಗಳು ನಿರ್ಧನರಾದರೂ ಅವರು ಮಾಡಿದ ಸ್ತೋತ್ರಗಳು ಬಾಗಿಲಬಳಿ ಹೂಳಿರುವ ಯೂಪ ಸ್ತಂಭದಂತೆ ಸ್ಥಿರವಾಗಿರುವುದರಿಂದ ಇಂದ್ರನು ಆ ಸ್ತೋತ್ರಗಳನ್ನು ಸ್ವೀಕರಿಸುವನು. ಮತ್ತು ಇಂದ್ರನು ಭಕ್ತರಿಗೆ ಕೊಡುವುದಕ್ಕಾಗಿ ಅಶ್ವಗಳು, ಗೋವುಗಳು, ರಥಗಳು, ಧನಗಳು ಮೊದಲಾದವುಗಳನ್ನು ಅಪೇಕ್ಷಿಸುವನು. ಸ್ತೋತ್ರಮಾಡುವವರಿಗೆ ಇಂದ್ರನು ಮಾತ್ರವೇ ಧನಾದಿಗಳನ್ನು ಕೊಡುವವನು.

**ಏತದುಕ್ತಂ ಭವತಿ । ಇಂದ್ರೋ ನ ಕೇವಲಂ ಸತಿ ಧನೇ ಸ್ತೋಪಾಸಕಾನಾಂ ಗೃಹೇ ಸೋಮಪಾನಾಯ ಗಚ್ಛತಿ ತೇ ವಾ ತಮುಪಾಸತೇ ಅಪಿ ತು ಪ್ರಾಪ್ತೇಽಪಿ ನೈರ್ಧನ್ಯೇ ಸ ತೇಷಾಂ ಗೃಹೇ ಗಚ್ಛತಿ ತೇ ತಮುಪಾಸತೇ । ಅತ ಏವ ಪಜ್ರೇಷು ಸತಿ ವಾ ನ ವಾ ಸತಿ ಧನೇ ಇಂದ್ರಸ್ಯ ಸ್ತೋತ್ರಂ ದ್ವಾರಿ ಸ್ಥಿತಾ ಸ್ಥೂಣೇವ ನಿಶ್ಚಲಂ । ಸತತಮಿತಿ ಯಾವತ್ । ಗೀಯತೇ । ಅಪಿ ಚ ಯಜಮಾನೇಭ್ಯೋಽಶ್ವಾದೀನ್ ಸಂಪಾದಯನ್ನಿಂದ್ರ ಏವ ಧನಸ್ಯ ಪ್ರಭುರಸ್ತೀತ್ಯರ್ಥಃ ॥**

**ಸುಧ್ಯಃ**—ಪ್ರಶಸ್ತವಾದ ಕರ್ಮವುಳ್ಳವರು ಅಥವಾ ನಿಷ್ಕಲ್ಮಷವಾದ ಪ್ರಜ್ಞೆಯುಳ್ಳ ಯಜಮಾನರು ಎಂದರ್ಥ.

**ನಿರೇಕೇ**—ಬಡತನವೇ ಮೊದಲಾದುವುಗಳಿಂದ ಪೀಡಿತರಾದಾಗ ಯಜಮಾನರು ಇಂದ್ರನನ್ನು ತೃಪ್ತಿಪಡಿಸಲು ಯಜ್ಞಾದಿಗಳನ್ನಾಚರಿಸುವರು ಎಂಬರ್ಥವನ್ನು ಇದು ಸೂಚಿಸುವುದು.

**ಪಜ್ರೇಷು**–ಪಜ್ರಾ ಎಂಬುದು ಅಂಗಿರಸ್ಸೆಂಬ ಋಷಿಗಳ ಹೆಸರು **ಪಜ್ರಾ ವಾ ಅಂಗಿರಸ್ತಃ ಪಶುಕಾಮಾಸ್ತಪೋಽತಪ್ಯಂತ** ಎಂಬ ಶ್ರುತಿಯು ಇದನ್ನು ತಿಳಿಸುವುದು.

**ಸ್ತೋಮಃ**—ನಿಶ್ಚಲವಾದ ಸ್ತೋತ್ರವು.

**ದುರ್ಯೋ ನ ಯೂಪಃ ದುರೇ ಭವಃ ದುರ್ಯಃ ದ್ವಾರಿ ಇತ್ಯರ್ಥಃ** ಇಲ್ಲಿ ನ ಶಬ್ದಕ್ಕೆ ಯಥಾ ಎಂದರ್ಥ. ಬಾಗಿಲಿನಲ್ಲಿ ನೆಡಲ್ಪಟ್ಟ ಯೂಪಸ್ತಂಭದಂತೆ ಎಂಬುದು ಇದರ ಅರ್ಥ. ಇದು ಹಿಂದಿನ ಯಜಮಾನಾರ್ಥಕವಾದ ಸುಧ್ಯ ಎಂಬ ಪದದಲ್ಲಿ ಅನ್ವಯವನ್ನು ಪಡೆಯುವುದು.

**ಇತಿ ಏಕತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತೊಂದನೆಯ ಖಂಡವು ಸಮಾಪ್ತವು

———

## ದ್ವಾತ್ರಿಂಶಃ ಖಂಡಃ

### ಮೂವತ್ತೆರಡನೆಯ ಖಂಡವು

ಕಿಂ ತೇ ಕೃಣ್ವನ್ತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪನ್ತಿ ಘರ್ಮಂ। ಆ ನೋ ಭರ ಪ್ರಮಗನ್ದಸ್ಯ ವೇದೋ ನೈಚಾಶಾಖಂ ಮಘವನ್ರನ್ಧಯಾ ನಃ॥ ಕಿಂ ತೇ ಕುರ್ವನ್ತಿ ಕೀಕಟೇಷು ಗಾವಃ ಕೀಕಟಾ ನಾಮ ದೇಶೋಽನಾರ್ಯ ನಿವಾಸಃ ಕೀಕಟಾಃ ಕಿಂ ಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ ನೈವ ಚಾಶಿರಂ ದುಹ್ರೇ ನ ತಪನ್ತಿ ಘರ್ಮಂ ಹರ್ಮ್ಯಮಾಹರ ನಃ ಪ್ರಮಗನ್ದಸ್ಯ ಧನಾನಿ ಮಗಂದಃ ಕುಸೀದೀ ಮಾಂಗದೋ ಮಾಮಾಗಮಿಷ್ಯತೀತಿ ಚ ದದಾದಿ ತದಪತ್ಯಂ ಪ್ರಮಗನ್ದೋಽತ್ಯನ್ತಕುಸೀದಿಕುಲೀನಃ ಪ್ರಮದಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ ಪಂಡಕೋ ವಾ ಪಂಡಕಃ ಪಂಡಗಃ ಪ್ರಾರ್ದಕೋ ವಾ ಪಾರ್ದಯತ್ಯಾಂಡಾವಾಂಡಾವಾಣೀ ಇವ ವ್ರೀಡಯತಿ ತಸ್ತಂಭೇ ನೈಚಾಶಾಖಂ ನೀಚಾಶಾಖೋ ನೀಚೈಃ ಶಾಖಃ ಶಾಖಾಃ ಶಕ್ನೋತೇರಾಣಿರರಣಾತ್ತನ್ನೋ ಮಘವನ್ರನ್ಧಯೇತಿ ರಧ್ಯತಿರ್ವಶಗಮನೇ ಬುನ್ದ ಇಷುರ್ಭವತಿ ವುಂದೋ ವಾ ಭಿಂದೋ ವಾ ಭಯದೋ ವಾ ಭಾಸಮಾನೋ ದ್ರವತೀತಿ ವಾ ॥೩೨॥

---

ಕೀಕಟೇಷು ॥೧೨೭॥

"ಕಿಂ ತೇ ಕೃಣ್ವನ್ತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪನ್ತಿ ಘರ್ಮಮ್। ಆನೋ ಭರ ಪ್ರಮಗನ್ದಸ್ಯ ವೇದೋ ನೈಚಾಶಾಖಂ ಮಘವನ್ರನ್ಧಯಾ ನಃ॥" ಕಿಂ ತೇ ಕುರ್ವನ್ತಿ ಕೀಕಟೇಷು ಗಾವಃ॥ ಕೀಕಟಾನಾಮ ದೇಶೋಽನಾರ್ಯ್ಯನಿವಾಸಃ॥ ಕೀಕಟಾಃ ಕಿಂಕೃತಾಃ, ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ॥ ನೈವ ಚಾಶಿರಂ ದುಹ್ರೇ ನ ತಪನ್ತಿ ಘರ್ಮಂ ಹರ್ಮ್ಯಮಾಹರನಃ ಪ್ರಮಗನ್ದಸ್ಯ ಧನಾನಿ॥ ಮಗನ್ದಃ ಕುಸೀದೀ। ಮಾಙ್ಗದೋ ಮಾಮಾಗಮಿಷ್ಯತೀತಿ ಚ ದದಾತಿ

ತದಪತ್ಯಂ ಪ್ರಮಗನ್ದೋಽತ್ಯನ್ತಕುಸೀದಿಕುಲೀನಃ ॥ ಪ್ರಮದ-
ಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ॥
ಪಣ್ಡಕೋ ವಾ । ಪಣ್ಡಕಃ ಪಣ್ಡಗಃ ಪ್ರಾರ್ದಕೋ ವಾ ಪ್ರಾರ್ದ-
ಯತ್ಯಾಣ್ಡಾವಾಣ್ಡಾವಾಣೀ ಇವ ವ್ರೀಡಯತಿ ತತ್ಪರ್ವೈ ॥
ನೈಚಾಶಾಖಂ ನೀಚಾಶಾಖೋ ನೀಚೈಃ ಶಾಖಃ । ಶಾಖಾಃ
ಶಕ್ನೋತೇಃ । ಆಣಿರರಣಾತ್ । ತನ್ನೋ ಮಘವನ್ರಂಧಯೇತಿ
ರಧ್ಯತಿರ್ವಶಗಮನೇ ॥೧॥೩೨॥

ಉದಾಹರಣೆಯ ಋಕ್ಕು—

**ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾ ಶಿರಂ ದುಹ್ರೇ ನ ತಪಂತಿ ಘರ್ಮಂ ।**
**ಆ ನೋ ಭರ ಪ್ರಮಗಂದಸ್ಯ ವೇದೋ ನಚಾಶಾಖಂ ಮಘವನ್ರಂಧಯಾನಃ ॥**

**(ಋ. ಸಂ. ೩-೫೩-೧೪)**

ಇದರ ಅರ್ಥವು—

ಧನವಂತನಾದ ಎಲೈ ಇಂದ್ರನೇ ನಾಸ್ತಿಕರಾದ ಕೀಕಟವೆಂಬ ಜನಾಂಗದವರ ಸಮುದಾಯದಲ್ಲಿರತಕ್ಕ ಗೋವುಗಳು ನಿನ್ನ ಯಜ್ಞಕಾರ್ಯಕ್ಕೆ ಉಪಯುಕ್ತವಾಗುವುದಿಲ್ಲ. ಅವುಗಳ ಹಾಲನ್ನು ಸೋಮಮಿಶ್ರಣಕ್ಕೆ ಉಪಯೋಗಿಸುವುದಿಲ್ಲ. ಮತ್ತು ಅವುಗಳ ಕ್ಷೀರಗಳು ಪ್ರವರ್ಗ್ಯೋಪಯುಕ್ತವಾದ ಮಹಾವೀರಪಾತ್ರೆಯನ್ನು ಪ್ರಕಾಶಿಸುವಂತೆ ಮಾಡುವುದಿಲ್ಲ. ಆದುದರಿಂದ ಯಜ್ಞಾಚರಣೆಯಲ್ಲಿ ನಿನ್ನನ್ನು ಸೇವಿಸುವ ನಮಗೆ ಆ ಗೋವುಗಳನ್ನು ತಂದೊದಗಿಸು. ದುಷ್ಕುಲೀನರಾದ ಪ್ರಮಂಗದ ಸಂತತಿಯವರ ಧನವನ್ನೂ ಇತರ ನೀಚವಂಶೋತ್ಪನ್ನರಾದವರ ಧನವನ್ನು ನಮಗೆ ಸಾಧಿಸಿಕೊಡು—

**ಕೀಕಟೇಷು ಗಾವಃ ತೇ ಕಿಂ ಕೃಣ್ವಂತಿ**—ಎಲೈ ಇಂದ್ರನೇ, ಅನಾರ್ಯರೂ, ನಾಸ್ತಿಕರೂ ಆದ ದುಷ್ಟಜನರಲ್ಲಿರುವ ಗೋವುಗಳು ನಿನಗೆ ಯಾವ ಉಪಯೋಗಕರವಾದ ಕಾರ್ಯವನ್ನೂ ಮಾಡುವುದಿಲ್ಲ ಎಂದರೆ ದುಷ್ಟಜನರೂ ಅನಾರ್ಯರೂ ಇಂದ್ರನನ್ನುದ್ದೇಶಿಸಿ ಯಜ್ಞಾದಿಗಳನ್ನು ಮಾಡುವುದಿಲ್ಲವಾದ್ದರಿಂದ ಅವರಲ್ಲಿರುವ ಗೋವುಗಳೂ, ಅವುಗಳ ಹಾಲೂ ಯಜ್ಞಯಾಗಾದಿಗಳಿಗೆ ಉಪಯೋಗವಾಗದೆ ವ್ಯರ್ಥವಾಗುವವು ಎಂದಭಿಪ್ರಾಯವು. ಆದ್ದರಿಂದ ಆ ಗೋವುಗಳು ಇಂದ್ರನಾದ ನಿನಗೆ ಹೇಗೆ ತಾನೇ ಉಪಯೋಗವಾದಾವು ? ಉಪಯೋಗವಾಗುವುದೇ ಇಲ್ಲ ಎಂದಭಿಪ್ರಾಯವು.

**ಕೀಕಟೇಷು—ಅನಾರ್ಯನಿವಾಸೇಷು ಜನಪದೇಷು । ಯದ್ವಾ । ಕ್ರಿಯಾಭಿರ್ಯಾಗದಾನಹೋಮಲಕ್ಷಣಾಭಿಃ ಕಿಂ ಫಲಿಷ್ಯತೀತ್ಯಶ್ರದ್ಧಧಾನಾಃ ಪ್ರತ್ಯುತ ಪಿಬತ ಖಾದತಾಯಮೇವ ಲೋಕೋ ನ ಪರ ಇತಿ ವದಂತೋ ನಾಸ್ತಿಕಾಃ ಕೀಕಟಾಃ ತೇಷು ।** ಕೀಕಟವೆಂದರೆ ಆರ್ಯವಂಶಕ್ಕೆ ಸೇರದೇ ಇರುವ ಈ ದೇಶದ ಅನಾಗರಿಕರಾದ ಪೂರ್ವನಿವಾಸಿಗಳು ಇವರು ಆರ್ಯರಂತೆ ಯಜ್ಞಯಾಗಾದಿಗಳನ್ನು ಮಾಡದೆ, ಇಂದ್ರಾದಿ ದೇವತೆಗಳನ್ನು ಪೂಜಿಸದೆ ಆರ್ಯರಿಗೂ, ಅವರು ಮಾಡುವ ಯಜ್ಞಾದಿಗಳಿಗೂ ತೊಂದರೆಯನ್ನು ಮಾಡುವ ಅನಾಗರಿಕ ಜನರು. ಅಥವಾ ಆರ್ಯವಂಶದಲ್ಲಿ ಹುಟ್ಟಿದವರಾಗಿದ್ದರೂ ಯಜ್ಞ, ದಾನ, ಹೋಮ ಮೊದಲಾದ ಸತ್ಕರ್ಮಗಳನ್ನು ಮಾಡದೆ ಆ ಸತ್ಕರ್ಮಗಳಿಂದ ಪ್ರಯೋಜನವೇನು ಎಂದು ಹೇಳುತ್ತಾ ಅವುಗಳಲ್ಲಿ ನಂಬಿಕೆಯನ್ನು ಇಡದೆ, ಈ ಲೋಕಬಿಟ್ಟರೆ ಬೇರೆ ಲೋಕವಿಲ್ಲ. ಸ್ವರ್ಗನರಕಾದಿಗಳಿಲ್ಲ.

ಪಾಪಪುಣ್ಯಗಳಿಲ್ಲ. ಅವೆಲ್ಲಾ ಬರೀ ಕಲ್ಪನೆಗಳು ಆದ್ದರಿಂದ ಸುಖಪಡುವುದಕ್ಕಾಗಿ ಬೇಕಾದುದನ್ನು ತಿನ್ನಿರಿ, ಕುಡಿಯಿರಿ ಎಂದು ಹೇಳುತ್ತಾ ನಾಸ್ತಿಕರಾಗಿರುವ ದುರ್ಜನರು ಎಂದು ಅರ್ಥವಿವರಣೆ ಮಾಡಿದಾರೆ.

**ಆಶಿರಂ ನ ದುಹ್ರೇ ನ ತಪಂತಿ ಘರ್ಮಂ—ಸೋಮಮಿಶ್ರಣಯೋಗ್ಯಂ ಪಯಃ ನ ದುಹಂತಿ । ಕಿಂಚ ಪ್ರವರ್ಗ್ಯಕರ್ಮೋಪಯುಕ್ತಂ ಮಹಾವೀರಪಾತ್ರಂ ಸ್ವಪಯಃಪ್ರದಾನದ್ವಾರೇಣ ನ ದೀಪಯಂತಿ । ಏತೇನ ಸಾಂನಾಯ್ಯಾರ್ಥಮಪಿ ನೋಪಯುಜ್ಯಂತ ಇತ್ಯಪಿ ಸೂಚಿತಂ ಭವತಿ ।** ಅನಾರ್ಯರಲ್ಲಿರುವ ಗೋವುಗಳು ಕರೆಯುವ ಹಾಲು ಯಾವ ಸತ್ಕರ್ಮಗಳಿಗೂ ಉಪಯೋಗವಾಗುವುದಿಲ್ಲ. ಸೋಮರಸಕ್ಕೆ ಮಿಶ್ರಮಾಡಲು ಬೇಕಾದ ಹಾಲನ್ನು ಕೊಡುವುದಿಲ್ಲ. ಎಂದರೆ ಗವಾಶಿರವೆಂಬ ಹಾಲನ್ನು ಮಿಶ್ರಮಾಡಿರುವ ಸೋಮರಸಕ್ಕೆ ಈ ಹಸುಗಳ ಹಾಲು ಉಪ್ಯುಕ್ತವಾಗುವುದಿಲ್ಲ. ಇವಲ್ಲದೆ ಪ್ರವರ್ಗ್ಯವೆಂಬ ಯಾಗದಲ್ಲಿ ಮಹಾವೀರಪಾತ್ರೆಯಲ್ಲಿ ಇಡುವ ಹಾಲಿಗಾಗಿಯೂ ಸಾಂನ್ಯಾಯಕ್ಕಾಗಿಯೂ ಈ ಗೋವುಗಳ ಹಾಲು ಉಪಯೋಗಿಸುವಂತಿಲ್ಲ ಎಂದಭಿಪ್ರಾಯವು.

**ನಃ ಆ ಭರ**—ಆದ್ದರಿಂದ ಆ ದುಷ್ಟಜನರಲ್ಲಿರುವ ಗೋವುಗಳನ್ನು ನಮಗೆ ತಂದೊದಗಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

**ಪ್ರಮಗಂದಸ್ಯ ವೇದಃ—ದ್ವೈಗುಣ್ಯಾದಿಲಕ್ಷಣಪರಿಮಾಣಂ ಗತೋಽರ್ಥೋ ಮಾಮೇವ ಗಮಿಷ್ಯತೀತಿ ಬುದ್ಧ್ಯಾ ಪರೇಷಾಂ ದದಾತೀತಿ ಮಗಂದೋ ವಾರ್ಧುಷಿಕಃ । ತಸ್ಯಾಪತ್ಯಂ ಪುತ್ರಾದಿಃ ಪ್ರಮಗಂದಃ । ಪ್ರಸ್ಕಣ್ವಾದಿವದಪತ್ಯಾರ್ಥಃ ಪ್ರಶಬ್ದೇನ ದ್ಯೋತ್ಯತೇ । ತಸ್ಯಾತ್ಯಂತಕುಸೀದಕುಲಸ್ಯ ವೇದಃ ಧನಮಾಹರ ।** ಒಬ್ಬನಿಗೆ ಹಣವನ್ನು ಸಾಲವಾಗಿ ಕೊಟ್ಟರೆ ಅದು ಬಡ್ಡಿಸಹಿತವಾಗಿ ತಾನು ಕೊಟ್ಟ ಹಣಕ್ಕೆ ಎರಡರಷ್ಟು ಹಿಂದಕ್ಕೆ ಬರುತ್ತದೆ ಎಂಬ ದುರಾಲೋಚನೆಯಿಂದ ಇತರರಿಗೆ ಸಾಲಕೊಡುವವನಿಗೆ ಮಗಂದ ಎಂದು ಹೆಸರು. ಅವನ ಪುತ್ರನಿಗೆ **ಪ್ರಮಗಂದ** ಎಂದು ಹೆಸರು. ಕಣ್ವ ಋಷಿಯ ಪುತ್ರನಿಗೆ **ಪ್ರಸ್ಕಣ್ವ** ಎಂದು ಹೆಸರಿರುವುದು ಎಂದರೆ **ಪ್ರ** ಎಂಬ ಉಪಸರ್ಗವು (ಅಪತ್ಯ) ಎಂಬ ಅರ್ಥವನ್ನು ಸೂಚಿಸುವುದು. ಅದರಂತೆ **ಮಗಂದ** ಎಂಬ ಶಬ್ದಕ್ಕೆ **ಪ್ರ** ಎಂಬ ಉಪಸರ್ಗವು ಸೇರಿದರೆ ಪ್ರಮಗಂದ ಅಥವಾ ಮಗಂದನ ಪುತ್ರ ಎಂದರ್ಥವಾಗುವುದು. ಇಂತಹ ಪ್ರಮಗಂದನ ಅನ್ಯಾಯಾರ್ಜಿತವಾದ ಧನವನ್ನು ತಮಗೆ ತಂದುಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ.

**ನೈಚಾಶಾಖಂ—ನೀಚಾಸು ಶೂದ್ರಯೋನಿಷು ಉತ್ಪಾದಿತಾ ಶಾಖಾ ಪುತ್ರಪೌತ್ರಾದಿಪರಂಪರಾ ಯೇನ ಸ ನೀಚಾಶಾಖಃ । ಪತಿತಸ್ಯ ಸಂಬಂಧಿ ಧನಂ ನೈಚ ಶಾಖಂ । ತದ್ಧನಂ ನಃ ಸಾಧಯ । ಏತೇಷಾಂ ತದ್ಧನಂ ತವ ನೋಪಯುಜ್ಯತೇ ಅಸ್ಮಾದಾಯತ್ತಂ ತು ತದ್ಧನಂ ಯಾಗಾದಿದ್ವಾರಾ ತವೋಪಯುಜ್ಯತೇ । ತಸ್ಮಾತ್ತದಸ್ಮಭ್ಯಂ ಪ್ರಯಚ್ಛೇತಿ ಭಾವಃ।** ನೀಚರಾದ ಶೂದ್ರಜಾತಿಯಲ್ಲಿ ಬ್ರಾಹ್ಮಣನೇ ಮೊದಲಾದವರಿಂದ ಉತ್ಪಾದನೆಮಾಡಿದ ಪುತ್ರಪೌತ್ರಾದಿ ಸಂತತಿಗೆ ನೀಚಶಾಖೆಯೆಂದು ಹೆಸರು. ಇವರು ಉಪನಯನ, ವೇದಾಧ್ಯಯನ ಯಜ್ಞ, ದಾನ ಮೊದಲಾದ ಸತ್ಕರ್ಮಗಳಿಗೆ ಅನರ್ಹರಾಗಿ ಅವುಗಳನ್ನು ಆಚರಿಸದೆ ಇರುವುದರಿಂದ ಇವರನ್ನು ಪತಿತರೆಂದು ಹೇಳುವರು. ಇಂತಹ ನೀಚಶಾಖೆಯವರ ಎಂದರೆ ಪತಿತರಾದವರ ಧನವನ್ನೂ ನಮಗೆ ತಂದೊದಗಿಸು ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಏಕೆಂದರೆ, ಹಿಂದೆ ಹೇಳಿದ ಅನಾರ್ಯರು, ಪ್ರಮಗಂದರು, ನೀಚಶಾಖೆಯವರಾದ ಪತಿತರು ಮೊದಲಾದ ಜನರು ಯಜ್ಞಯಾಗಾದಿಗಳನ್ನು ಮಾಡದೆ, ಇಂದ್ರಾದಿ ದೇವತೆಗಳನ್ನು ಪೂಜಿಸದೆ ಇರುವುದರಿಂದ ಅವರಲ್ಲಿರುವ ಗೋವುಗಳೂ, ಧನವೂ ಇಂದ್ರನಿಗೆ ಸಮರ್ಪಿತವಾಗದೆ ವ್ಯರ್ಥವಾಗುವುದು. ಆದರೆ ಆ ಧನಾದಿಗಳನ್ನು ಇಂದ್ರನು ನಮಗೆ ತಂದೊಗಿಸಿದಲ್ಲಿ ನಾವು ಆ ಗೋವುಗಳ ಹಾಲನ್ನೂ, ಅವರ

ಧನವನ್ನೂ ಯಜ್ಞಾದಿಗಳನ್ನು ಮಾಡುವುದಕ್ಕಾಗಿಯೂ, ಇಂದ್ರನನ್ನು ಆರಾಧಿಸುವುದಕ್ಕಾಗಿಯೂ ಉಪಯೋಗಿಸುವುದರಿಂದ ಆ ಧನಾದಿಗಳು ಇಂದ್ರನಿಗೆ ಉಪಯೋಗವಾದಂತೆ ಆಗುವವು. ಆದ್ದರಿಂದ ಅವುಗಳನ್ನು ನಮಗೆ ತಂದೊದಗಿಸು ಎಂಬ ಪ್ರಾರ್ಥನೆಯು ಉಕ್ತವಾಗಿದೆ.

ಯಾಸ್ಕರು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

**ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪಂತಿ ಘರ್ಮಂ ||**
**ಆ ನೋ ಭರ ಪ್ರಮಗಂದಸ್ಯ ವೇದೋ ನೈಚಾಶಾಖಂ ಮಘವನ್ರಂಧಯಾ ನಃ ||**

ಇದಕ್ಕೆ ನಿರ್ವಚನವು—

**ಕಿಂ ತೇ ಕುರ್ವಂತಿ ಕೀಕಟೇಷು ಗಾವಃ | ಕೀಕಟಾ ನಾಮ ದೇಶೋಽನಾರ್ಯನಿವಾಸಃ | ಕೀಕಟಾಃ ಕಿಂಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ | ನೈವ ಚಾಶಿರಂ ದುಹ್ರೇ ನ ತಪಂತಿ ಘರ್ಮಂ ಹರ್ಮ್ಯಮಾ ಹರ ನಃ ಪ್ರಮಗಂದಸ್ಯ ಧನಾನಿ | ಮಗಂದಃ ಕುಸೀದೀ | ಮಾಂಗದೋ ಮಾಮಾಗಮಿಷ್ಯತೀತಿ ಚ ದದಾತಿ ತದಪತ್ಯಂ ಪ್ರಮಗಂದೋಽತ್ಯಂತ-ಕುಸೀದಕುಲೀನಃ | ಪ್ರಮದಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ | ಪಂಡಕೋ ವಾ | ಪಂಡಕಃ ಪಂಡಗಃ ಪ್ರಾರ್ದಕೋ ವಾ ಪ್ರಾರ್ದಯತ್ಯಾಂಡಾ ವಾಂಡಾವಾಣೀ ಇವ ವ್ರೀಡಯತಿ ತತ್ಸ್ತಂಭೇ | ನೈಚಾಶಾಖಂ ನೀಚಾಶಾಖೋ ನೀಚೈಃ ಶಾಖಃ | ಶಾಖಾಃ ಶಕ್ನೋತೇಃ | ಆಣಿರರಣಾತ್ | ತನ್ನೋ ಮಘವನ್ರಂಧಯೇತಿ ರಧ್ಯೈತಿರ್ವಶಗಮನೇ ||**

(ನಿ. ೬–೩೨)

ಎಂದರೆ—ಕೀಕಟಾ ಎಂಬ ಶಬ್ದಕ್ಕೆ ಅನಾರ್ಯರಾದ ಈ ದೇಶದ ಪೂರ್ವವಾಸಿಗಳು ವಾಸಮಾಡುವ ದೇಶವೆಂದು ಹೆಸರು. ಈ ಈ ಅನಾರ್ಯ ನಿವಾಸಿಗಳಿಗೆ ಕೀಕಟಾಃ ಎಂಬ ಹೆಸರು ಹೇಗೆ ಬಂದಿತು ಎಂದರೆ **ಕಿಂ ಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ—**ಯಜ್ಞಾದಿಕರ್ಮಗಳಿಂದ ಏನು ಪ್ರಯೋಜನ ? ಎಂದು ಸತ್ಕರ್ಮಗಳನ್ನು ಅಲಕ್ಷ್ಯಮಾಡಿ ತಿರಸ್ಕಾರಭಾವದಿಂದ ಮಾತನಾಡುತ್ತಾ ಇರುವ ನಾಸ್ತಿಕರಿಗೆ **ಕಿಂಕೃತಾಃ** ಅಥವಾ **ಕೀಕಟಾಃ** ಎಂಬ ಹೆಸರು ಬಂದಿದೆ. ಇಂಥವರಲ್ಲಿರುವ ಗೋವುಗಳ ಸದ್ವಿನಿಯೋಗವಾಗುವುದಿಲ್ಲ. ಏಕೆಂದರೆ, ಇವರು ಯಜ್ಞಾದಿಗಳನ್ನು ಮಾಡದೆ ಇರುವುದರಿಂದ ಇವರ ಗೋವುಗಳ ಹಾಲೂ ಯಜ್ಞಾದಿಗಳಿಗೆ ಉಪಯೋಗವಾಗುವುದಿಲ್ಲ. ಆಶಿರದ್ರವ್ಯ ರೂಪವಾಗಿ ಸೋಮರಸಕ್ಕೆ ಸೇರಿಸಬೇಕಾದ ಹಾಲಿಗಾಗಿಯೂ ಉಪಯೋಗವಿಲ್ಲ. ಇದಲ್ಲದೆ ಹಾಲನ್ನು ಕಾಯಿಸಿ ಅದರಿಂದ ಉತ್ಪನ್ನವಾಗಬಹುದಾದ ಪಯೋ ವಿಕಾರಗಳಿಗೂ ಎಂದರೆ ಮೊಸರು, ತುಪ್ಪ ಮೊದಲಾದವುಗಳೂ ಯಜ್ಞಾರ್ಹವಾಗುವುದಿಲ್ಲ. ಆದುದರಿಂದ ಈ ಅನಾಗರಿಕ ಜನರಲ್ಲಿರುವ ಗೋವುಗಳನ್ನ ನಮಗೆ ತಂದೊದಗಿಸು. ನಮಗೆ ಆ ಗೋವುಗಳು ದೊರೆತಲ್ಲಿ ನಾವು ಯಜ್ಞಾದಿಗಳನ್ನು ಮಾಡಿ ಆ ಮೂಲಕ ಗೋವುಗಳ ಹಾಲು, ಮೊಸರು, ಘೃತ ಮೊದಲಾದವುಗಳನ್ನು ಇಂದ್ರಾದಿದೇವತೆಗಳಿಗೆ ಅರ್ಪಿಸುತ್ತೇವೆ. ಅದಕ್ಕಾಗಿ ಅವರ ಗೋವುಗಳನ್ನೂ, ಧನವನ್ನೂ ನಮಗೆ ಕೊಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಇದಲ್ಲದೆ **ಮಗಂದಃ** ಎಂದರೆ **ಕುಸೀದೀ—**ದ್ರವ್ಯವನ್ನು ಇತರರಿಗೆ ಸಾಲವಾಗಿ ಕೊಟ್ಟು ಕೆಲವುಕಾಲದ ಮೇಲೆ ಆ ಹಣವನ್ನೂ ಅದರ ಬಡ್ಡಿಯನ್ನೂ ತೆಗೆದುಕೊಳ್ಳುವುದೇ ವೃತ್ತಿಯಾಗಿ ಮಾಡಿಕೊಂಡಿರುವ ವ್ಯಾಪಾರಿಯು. ಮಗಂದ ಶಬ್ದಕ್ಕೆ ಪ್ರ ಎಂಬ ಉಪಸರ್ಗ ಸೇರಿರುವುದ

ರಿಂದ ಈ ಪ್ರಮಗಂದ ಶಬ್ದಕ್ಕೆ **ಮಗಂದ** ಅಥವಾ **ಕುಸೀದ** ಕುಲದವನೆಂದು ಅರ್ಥವು. ಅಥವಾ **ಪ್ರ** ಎಂಬ ಉಪಸರ್ಗಕ್ಕೆ ಪ್ರಕರ್ಷವಾಗಿ, ಎಂದರೆ ವಿಶೇಷವಾಗಿ ಅತ್ಯಂತ ಕೆಟ್ಟ ಕುಲದಲ್ಲಿ ಹುಟ್ಟಿದವನೆಂದು ಅರ್ಥವು. ಇವನು ಬಡ್ಡಿಯನ್ನು ಒಂದಕ್ಕೆ ಎರಡಾಗಿ ತೆಗೆದುಕೊಂಡು ಅನ್ಯಾಯವಾಗಿ ಹಣಸಂಪಾದನೆಮಾಡುವುದರಿಂದ ಅದನ ಧನವನ್ನೂ ನಮಗೆ ತಂದೊದಗಿಸು. ಅಥವಾ ಪ್ರಮಗಂದಶಬ್ದಕ್ಕೆ **ಪ್ರಮದಕ** ಎಂದಾದರೂ ಅರ್ಥವಾಗಬಹುದು. **ಪ್ರಮದಕ** ಎಂದರೆ ನಮಗೆ ಕಣ್ಣಿಗೆ ಕಾಣು ತ್ತಿರುವ ಈ ಲೋಕ ಹೊರತು ಬೇರೆ ಸ್ವರ್ಗಾದಿಲೋಕಗಳಿಲ್ಲ. ಆದ್ದರಿಂದ ಪುಣ್ಯಪಾಪಗಳಿಗೆ ಏನೂ ಅರ್ಥವಿಲ್ಲ. ಈಗ ನಾವು ಸುಖಪಟ್ಟದ್ದೇ ಬಂತು. ಏತಕ್ಕಾಗಿ ಕಷ್ಟಪಡಬೇಕು ? ಬೇಕಾದಹಾಗೆ ತಿಂದು ಸುಖವಾಗಿರುವುದೇ ಒಳ್ಳೆಯದು. ಕಷ್ಟಸಾಧ್ಯವಾದ ಯಜ್ಞಯಾಗಾದಿಗಳಿಂದ ಏನೂ ಪ್ರಯೋಜನವಿಲ್ಲ ಎಂದು ಹೇಳುವ ನಾಸ್ತಿಕನು. ಅಥವಾ ಪ್ರಮಗಂದ ಶಬ್ದಕ್ಕೆ **ಪಂಡಕಃ** ಅಥವಾ **ಪಂಡಗಃ** ಅಥವಾ **ಪ್ರಾರ್ದಕ**ನೆಂದೂ ಅರ್ಥವಾಗಬಹುದು. **ಪಂಡಕ** ಅಥವಾ **ಪಂಡಗ**ನೆಂದರೆ ನಪುಂಸಕನು, ಸ್ತ್ರೀಯರಂತೆ ಕೈಲಾಗದವನು. **ಪ್ರಾರ್ದಕ**ನೆಂದರೆ ವ್ಯವಹಾರಾದಿಗಳಲ್ಲಿ ಸ್ತ್ರೀಯರಂತೆ ವರ್ತಿಸುವವನು, ಹೆಣ್ಣಿಗನು, ನಿರ್ಲಜ್ಜನು. ಇಂತವರ ಧನವನ್ನೂ ನಮಗೆ ತಂದೊದಗಿಸಬೇಕೆಂದು ಪ್ರಾರ್ಥಿಸಿದೆ. ಮತ್ತು ಶೂದ್ರಾದಿನೀಚ ಜಾತಿಯವರಲ್ಲಿ ಉತ್ತಮ ಕುಲದವರಿಂದ ಉತ್ಪನ್ನರಾದ ಜನರಿಗೆ ನೀಚಶಾಖೆಯವರೆಂದು ಹೆಸರು. ಇವರು ಪತಿತರಾಗಿ ಯಜ್ಞಾದಿಕರ್ಮಗಳಿಂದ ಬಹಿಷ್ಕೃತರಾಗಿರುವುದರಿಂದ ಇವರ ಧನವು ಸತ್ಕರ್ಮಗಳಿಗೆ ಉಪಯೋಗವಾಗುವುದಿಲ್ಲ. ಆದುದರಿಂದ **ನೈಚಶಾಖಂ ಧನಂ** ಎಂದರೆ ಇಂತಹ ನೀಚಕುಲದ ಜನರಲ್ಲಿರುವ ಧನವನ್ನು ನಮಗೆ ತಂದೊದಗಿಸಬೇಕೆಂದು ಪ್ರಾರ್ಥಿಸಿದೆ. ಇಲ್ಲಿ ರಧ್ಯತಿಧಾತುವಿಗೆ ವಶಮಾಡು ಎಂಬರ್ಥವಿರುವುದರಿಂದ ಈ **ಮಘವನ್ ರಂಧಯ** ಎಂಬ ಶಬ್ದಗಳಿಗೆ ಎಲೈ ಇಂದ್ರನೇ, ಮೇಲೆ ಹೇಳಿದ ಜನರ ಧನವನ್ನು ನಮ್ಮ ವಶವಾಗುವಂತೆ ಮಾಡು ಎಂದಭಿಪ್ರಾಯವು.

ಬುನ್ದಃ ||೧೨೮||
ಬುನ್ದ ಇಷುರ್ಭವತಿ। ಬುನ್ದೋ ವಾ ಭಿನ್ದೋ ವಾ ಭಯದೋ ವಾ
ಭಾಸಮಾನೋ ದ್ರವತೀತಿ ವಾ ||

**ಬುಂದಃ** ಎಂದರೆ ಬಿಲ್ಲಿನ ಬಾಣವು. ಏಕೆಂದರೆ ಇದು ಶತ್ರುವಿನ ಶರೀರವನ್ನು ಕೊರೆದು ಚುಚ್ಚಿ ಗಾಯಪಡಿಸುವುದು. ಅಥವಾ ಬಿಲ್ಲಿದಿಂದ ಹೊರಹೊರಟಾಗ ಅತಿವೇಗವಾಗಿ ಹೋಗಿ ತನ್ನ ಗುರಿಯನ್ನು ಮುಟ್ಟುವುದು.

**ದ್ವಾತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತೆರಡನೆಯ ಖಂಡವು ಸಮಾಪ್ತವು

---

## ಅಥ ತ್ರಯಸ್ತ್ರಿಂಶಃ ಖಂಡಃ

### ಮೂವತ್ತಮೂರನೆಯ ಖಂಡವು

ತುವಿಕ್ಷಂ ತೇ ಸುಕೃತಂ ಸೂಮಯಂ ಧನುಃ ಸಾಧುರ್ಬುಂದೋ
ಹಿರಣ್ಯಯಃ || ಉಭಾ ತೇ ಬಾಹೂ ರಣ್ಯಾ ಸುಸಂಸ್ಕೃತ ಋದೂಪೇ

ಚಿದ್ರುದೂವೃಥಾ ॥ ತುವಿಕ್ಷಂ ಬಹುವಿಕ್ಷೇಪಂ ಮಹಾವಿಕ್ಷೇಪ ವಾ ತೇ ಸುಕೃತಂ ಸೂಮಯಂ ಸುಸುಖಂ ಧನುಃ ಸಾಧಯಿತಾ ತೇ ಬುಂದೋ ಹಿರಣ್ಮಯ ಉಭೌ ತೇ ಬಾಹೂ ರಣ್ಯೌ ರಮಣೀಯೌ ಸಾಂಗ್ರಾಮ್ಯೌ ವರ್ದುಪೇ ಅರ್ದನಪಾತಿನೌ ಗಮನಪಾತಿನೌ ಶಬ್ದಪಾತಿನೌ ದೂರಪಾತಿನೌ ವಾ ಮರ್ಮಣ್ಯರ್ದನವೇಧಿನೌ ಗಮನವೇಧಿನೌ ಶಬ್ದವೇಧಿನೌ ದೂರವೇಧಿನೌ ವಾ ॥೩೩॥

— —

"ತುವಿಕ್ಷಂತೇ ಸುಕೃತಂ ಸೂಮಯಂ ಧನುಃ ಸಾಧುರ್ಬುನ್ದೋ ಹಿರಣ್ಯಯಃ । ಉಭಾತೇ ಬಾಹೂರಣ್ಯಾ ಸುಸಂಸ್ಕೃತ ಋದೂಪೇ ಚಿದ್ರುದೂವೃಥಾ ॥"

ತುವಿಕ್ಷಂ ಬಹುವಿಕ್ಷೇಪಂ ಮಹಾವಿಕ್ಷೇಪಂ ವಾ ॥ ತೇ ಸುಕೃತಂ ಸೂಮಯಂ ಸುಸುಖಂ ಧನುಃ ಸಾಧಯಿತಾ ॥ ತೇ ಬುನ್ದೋ ಹಿರಣ್ಮಯ ಉಭೌ ತೇ ಬಾಹೂ ರಣ್ಯೌ ರಮಣೀಯೌ ಸಂಗ್ರಾಮ್ಯೌ ವಾ ॥ ಋದೂಪೇ ಅರ್ದನಪಾತಿನೌ ಗಮನಪಾತಿನೌ ಶಬ್ದಪಾತಿನೌ ದೂರಪಾತಿನೌ ವಾ ॥ ಮರ್ಮಣ್ಯರ್ದನವೇಧಿನೌ ಗಮನವೇಧಿನೌ ಶಬ್ದವೇಧಿನೌ ದೂರವೇಧಿನೌ ವಾ ॥೧॥೩೩॥

ಉದಾಹರಣೆಯ ಋಕ್ಕು—

**ತುವಿಕ್ಷಂ ತೇ ಸುಕೃತಂ ಸೂಮಯಂ ಧನುಃ ಸಾಧುರ್ಬುಂದೋ ಹಿರಣ್ಯಯಃ ।**
**ಉಭಾ ತೇ ಬಾಹೂ ರಣ್ಯಾ ಸುಸಂಸ್ಕೃತ ಋದೂಪೇ ಚಿದ್ರುದೂ ವೃಥಾ ॥**

(ಋ. ಸಂ. ೮–೭೭–೧೧)

ಇದರ ಅರ್ಥವು—

ಎಲೈ ಇಂದ್ರನೇ, ನಿನ್ನ ಧನುಸ್ಸು ಬಹುದೂರದ ಲಕ್ಷ್ಯವನ್ನು (ಗುರಿಯನ್ನು) ಹೊಡೆಯತಕ್ಕದ್ದೂ, ಉತ್ತಮವಾಗಿ ನಿರ್ಮಿತವಾದುದೂ, ಶೋಭನಯುಕ್ತವಾದುದೂ ಮತ್ತು ನಿನ್ನ ಬಾಣವು ಸುವರ್ಣನಿರ್ಮಿತವಾದುದೂ ಆಗಿವೆ. ನಿನ್ನ ಎರಡು ತೋಳುಗಳೂ ಸಹ ರಮಣೀಯವಾಗಿಯೂ ಉತ್ತಮವಾದ ನಿರ್ಮಾಣವುಳ್ಳದ್ದಾಗಿಯೂ ಶತ್ರುಗಳನ್ನು ಕೆಳಕ್ಕೆ ಉರುಳಿಸುವ ಶಕ್ತಿಯುಳ್ಳದ್ದಾಗಿಯೂ ಮತ್ತು ನಾಶಮಾಡುವ ಶಕ್ತಿಯುಳ್ಳವಾಗಿಯೂ ಇವೆ.

ಬುಂದ ಶಬ್ದದ ಅರ್ಥವಿವರಣೆಮಾಡುವಾಗ ಯಾಸ್ಕರು ಪ್ರಕೃತ ಋಕ್ಕನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ. ಬುಂದಶಬ್ದದ ಅರ್ಥವಿವರಣೆಯನ್ನು ನಾವು ಯಾಸ್ಕರು ಹೇಳಿರುವಂತೆ ಈ ಸೂಕ್ತದ ೬ ನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೇವೆ. (page. 166) ಬುಂದವೆಂದರೆ ಬಾಣವು. ಪ್ರಕೃತ ಋಕ್ಕಿನ ನಿರ್ವಚನವು ಈರೀತಿ ಇದೆ—

**ತುವಿಕ್ಷಂ ಬಹುವಿಕ್ಷೇಪಂ ಮಹಾವಿಕ್ಷೇಪಂ ವಾ ತೇ ಸುಕೃತಂ ಸೂಮಯಂ ಸುಸುಖಂ ಧನುಃ ಸಾಧಯಿತಾ। ತೇ ಬುಂದೋ ಹಿರಣ್ಮಯ ಉಭೌ ತೇ ಬಾಹೂ ರಣ್ಯೌ ರಮಣೀಯೌ ಸಾಂಗ್ರಾಮ್ಯೌ ವಾ । ಋದೂಪೇ ಅರ್ದನಪಾತಿನೌ ಗಮನಪಾತಿನೌ ಶಬ್ದಪಾತಿನೌ ದೂರಪಾತಿನೌ ವಾ ಮರ್ಮಣ್ಯರ್ದನವೇಧಿನೌ ಗಮನ-ವೇಧಿನೌ ದೂರವೇಧಿನೌ ವಾ ॥**

**(ನಿ. ೬–೩೪)**

ಎಲೈ ಇಂದ್ರನೇ, ನಿನ್ನ ಬಾಣವು ಬಹಳ ಶಕ್ತಿಯುಳ್ಳದ್ದಾಗಿದೆ, ಬಹುದೂರದವರೆಗೂ, ಹೋಗಲು ಶಕ್ತಿಯುಳ್ಳದ್ದಾಗಿದೆ ಅಥವಾ ಬಹಳ ಸಾಮರ್ಥ್ಯದಿಂದ ಬಿಡಲ್ಪಟ್ಟು ಹೋಗುವುದಾಗಿದೆ. ನಿನ್ನ ಧನುಸ್ಸಾದರೋ ಚೆನ್ನಾಗಿ ನಿರ್ಮಿತವಾದುದೂ, ಒಳ್ಳೆಯ ಆಕಾರವುಳ್ಳದ್ದೂ ಆಹ್ಲಾದವನ್ನುಂಟುಮಾಡುವುದೂ ಆಗಿದೆ. ನಿನ್ನ ಬಾಣವು ಸುವರ್ಣನಿರ್ಮಿತವಾಗಿದೆ. ನಿನ್ನ ಎರಡು ತೋಳುಗಳೂ ಸುಂದರವಾಗಿಯೂ ಯುದ್ಧಮಾಡಲು ಅತ್ಯಂತ ಶಕ್ತಿಯುಳ್ಳದ್ದಾಗಿಯೂ ಇವೆ. ಈ ಋಕ್ಕಿನಲ್ಲಿ ಉಪಯೋಗಿಸಿರುವ **ಋದೂಪೇ** ಎಂಬ ಶಬ್ದಕ್ಕೆ (ಬಾಣವು) ತನ್ನ ವೇಗವಾದ ಗತಿಯಿಂದ ಲಕ್ಷ್ಯವಸ್ತುವನ್ನು ಹೊಡೆದು ಕೆಡವತಕ್ಕದ್ದೂ ಅಥವಾ ಠೇಂಕಾರಶಬ್ದದಿಂದ ಕೆಡವತಕ್ಕದ್ದೂ ಅಥವಾ ವಸ್ತುವು ದೂರದಲ್ಲಿದ್ದರೂ ಅದನ್ನು ಸಮೀಪಿಸಿ ಹೊಡೆದು ಕೆಡವತಕ್ಕದ್ದೂ ಅಥವಾ ಲಕ್ಷ್ಯವಸ್ತುವಿನ ಮರ್ಮಪ್ರದೇಶಗಳನ್ನು (Vital or valnerable parts) ತನ್ನ ವೇಗವಾದ ಗಮನದಿಂದಲೂ, ಮೊನಚಾದ ತುದಿಯಿಂದಲೂ ಸೀಳುವುದು ಅಥವಾ ತನ್ನ ಭಯಂಕರವಾದ ಶಬ್ದದಿಂದಲಾಗಲಿ ವೇಗಗಮನದಿಂದಾಗಲಿ ದೂರದಲ್ಲಿರುವ ವಸ್ತುವನ್ನು ಚುಚ್ಚಿ ಸೀಳುವುದು ಎಂದು ಅನೇಕವಿಧವಾದ ಅರ್ಥಗಳನ್ನು ಯಾಸ್ಕರು ವಿವರಿಸಿದಾರೆ,

**ಇತಿ ತ್ರಯಸ್ತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತಮೂರನೆಯ ಖಂಡವು ಸಮಾಪ್ತವು

---

## ಅಥ ಚತುಸ್ತ್ರಿಂಶಃ ಖಂಡಃ

### ಮೂವತ್ತನಾಲ್ಕನೆಯ ಖಂಡವು

ನಿರಾವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನಂ। ಇಂದ್ರೋ ಬುಂದಂ ಸ್ವಾತತಂ। ನಿರವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನ-ಮುದಕದಾನಂ ಮೇಘಂ। ಇಂದ್ರೋ ಬುಂದಂ ಸ್ವಾತತಂ ವೃಂದಂ ಬುಂದೇನ ವ್ಯಾಖ್ಯಾತಂ ವೃಂದಾರಕಶ್ಚ ॥೩೪॥

"ನಿರಾವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನಮ್ । ಇನ್ದ್ರೋ ಬುನ್ದಂ ಸ್ವಾತತಮ್ ॥". ನಿರವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನ-ಮುದಕದಾನಂ ಮೇಘಂ । ಇನ್ದ್ರೋ ಬುನ್ದಂ ಸ್ವಾತತಮ್ ॥೧॥

ಉದಾಹರಣೆಯ ಋಕ್ಕು—

**ನಿರಾವಿಧ್ಯದ್ಗಿರಿಭ್ಯ ಆ ಧಾರಯತ್ಪಕ್ವಮೋದನಂ ।**
**ಇಂದ್ರೋ ಬುಂದಂ ಸ್ವಾತತಂ ॥**

(ಋ. ಸಂ. ೮-೭೭-೬)

ಇದರ ಅರ್ಥವು—

ಇಂದ್ರನು ಅತ್ಯಂತ ವಿಸ್ತೃತವಾಗಿರುವ ಬಾಣವನ್ನು ಪ್ರಯೋಗಿಸಿ ಮೇಘಗಳಿಂದ ಅವುಗಳನ್ನು ಸೀಳಿ ವೃಷ್ಟಿಯನ್ನು ಸುರಿಸಿದನು, ಪರಿಪಕ್ವವಾದ ಅನ್ನವನ್ನು ಮಾನವರಿಗಾಗಿ ಒದಗಿಸಿದನು.

**ಬುಂದಃ-ಇಷು ।** ಬಾಣವನ್ನು; ಬುಂದಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದಾರೆ—

**ಬುಂದಃ ।ಬುಂದ ಇಷುರ್ಭವತಿ । ಬುಂದೋ ವಾ ಭಿಂದೋ ವಾ ಭಯದೋ ವಾ ಭಾಸಮಾನೋ ದ್ರವತೀತಿ ವಾ ನಿರವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನಂ । ಇಂದ್ರೋ ಬುಂದಂ ಸ್ವಾತತಂ । ನಿರವಿಧ್ಯದ್ಗಿರಿಭ್ಯ ಆಧಾರಯತ್ಪಕ್ವಮೋದನಮುದಕದಾನಂ ಮೇಘಂ । ಇಂದ್ರೋ ಬುಂದಂ ಸ್ವಾತತಂ ॥**

(ನಿ ೬-೩೪)

**ಬುಂದ** ಎಂದರೆ ಬಾಣವು. ಬಾಣವು ಲಕ್ಷ್ಯವಸ್ತುವನ್ನು ಚುಚ್ಚುವುದರಿಂದ ಅಥವಾ ಶತ್ರುವಿಗೆ ಭಯವನ್ನುಂಟು-ಮಾಡುವುದರಿಂದ ಅಥವಾ ಬಿಲ್ಲಿನಿಂದ ಹೊರಭಾಗ ಪ್ರಕಾಶಿಸುವುದರಿಂದ ಬಾಣಕ್ಕೆ ಬುಂದವೆಂದು ಹೆಸರು ಈ ಶಬ್ದದ ಪ್ರಯೋಗವು ಪ್ರಕೃತ ಋಕ್ಕಿನಲ್ಲಿರುವುದು. ಇಂದ್ರನು ಪರ್ವತಗಳಲ್ಲಿ ನಿಂತು ಅಲ್ಲಿಂದ ಬಿಲ್ಲಿನಲ್ಲಿ ಬಾಣವನ್ನು ಹೂಡಿ ಅದನ್ನು ಆಕರ್ಣಾಂತವಾಗಿ ಎಳೆದು ವೃಷ್ಟಿಯನ್ನು ಸುರಿಸಲು ಸಮರ್ಥವಾಗಿರುವ ಎಂದರೆ ಹೆಚ್ಚಾದ ನೀರಿನಿಂದ ಪೂರ್ಣವಾದ ಮೇಘವನ್ನು ಸೀಳಿ ವೃಷ್ಟಿಯನ್ನು ಸುರಿಸಿದನು ಎಂದು ನಿರ್ವಚನದ ಅಭಿಪ್ರಾಯವು.

ವೃನ್ದಾರಕಾಶ್ಚ ॥೩॥೩೪॥

**ವೃಂದಾರಕಃ** ಎಂಬ ಶಬ್ದಕ್ಕೂ ಬುಂದ ಎಂಬ ಶಬ್ದದ ಅರ್ಥವೇ ಇರುವುದು. ಬುಂದಶಬ್ದವನ್ನು ಹಿಂದಿನ ಖಂಡದಲ್ಲಿಯೇ ವಿವರಿಸಲಾಗಿದೆ.

**ಇತಿ ಚತುಸ್ತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತನಾಲ್ಕನೆಯ ಖಂಡವು ಸಮಾಪ್ತವು

## ಅಥ ಪಂಚತ್ರಿಂಶಃ ಖಂಡಃ

### ಮೂವತ್ತೈದನೆಯ ಖಂಡವು

ಅಯಂ ಯೋ ಹೋತಾ ಕಿರು ಸ ಯಮಸ್ಯ ಕಮಪ್ಯೂಹೇ ಯತ್ಸಮಂಜನ್ತಿ ದೇವಾಃ । ಅಹರಹರ್ಜಾಯತೇ ಮಾಸಿ ಮಾಸ್ಯಥಾ ದೇವಾ ದಧಿರೇ ಹವ್ಯವಾಹಂ ॥ ಅಯಂ ಯೋ ಹೋತಾ ಕರ್ತಾ ಸ ಯಮಸ್ಯ ಕಮಪ್ಯನ್ನಮಾಭಿವಹತಿ ಯತ್ಸಮಶ್ನುವನ್ತಿ ದೇವಾ ಅಹರಹರ್ಜಾಯತೇ ಮಾಸೇ ಮಾಸೇಽರ್ಧಮಾಸೇಽರ್ಧಮಾಸೇ ವಾಥ ದೇವಾ ನಿದಧಿರೇ ಹವ್ಯವಾಹಮುಲ್ಬಮೂರ್ಣೋತೇರ್ವೃಣೋತೇರ್ವಾ । ಮಹತ್ತದುಲ್ಬಂ ಸ್ಥವಿರಂ ತದಾಸೀದಿತ್ಯಪಿ ನಿಗಮೋ ಭವತ್ಯೃಬೀಸಮಪ-ಗತಭಾಸಮಪಹೃತಭಾಸಮನ್ತರ್ಹಿತಭಾಸಂ ಗತಭಾಸಂ ವಾ ॥೩೫॥

---

ಕಿಃ ॥೧೩೦॥

"ಅಯಂ ಯೋ ಹೋತಾ ಕಿರು ಸ ಯಮಸ್ಯ ಕಮಪ್ಯೂಹೇ ಯತ್ಸಮಞ್ಜನ್ತಿ ದೇವಾಃ । ಅಹರಹರ್ಜಾಯತೇ ಮಾಸಿ ಮಾಸ್ಯಥಾ ದೇವಾ ದಧಿರೇ ಹವ್ಯವಾಹಮ್ ॥" ಅಯಂ ಯೋ ಹೋತಾ ಕರ್ತಾ ಸ ಯಮಸ್ಯ ಕಮಪ್ಯನ್ನಮಭಿವಹತಿ ಯತ್ಸಮಶ್ನುವನ್ತಿ ದೇವಾಃ ॥ ಅಹರಹರ್ಜಾಯತೇ ಮಾಸೇಮಾಸೇಽರ್ಧಮಾಸೇಽರ್ಧ-ಮಾಸೇವಾಥ ದೇವಾ ದಧಿರೇ ಹವ್ಯವಾಹಮ್ ॥೧॥

ಉದಾಹರಣೆಯ ಋಕ್ಕು—

**ಅಯಂ ಯೋ ಹೋತಾ ಕಿರು ಸ ಯಮಸ್ಯ ಕಮಪ್ಯೂಹೇ ಯತ್ಸಮಂಜಂತಿ ದೇವಾಃ ।**
**ಅಹರಹರ್ಜಾಯತೇ ಮಾಸಿಮಾಸ್ಯಥಾ ದೇವಾ ದಧಿರೇ ಹವ್ಯವಾಹಂ ॥**

(ಋ. ಸಂ. ೧೦-೫೨-೩)

ಇದರ ಅರ್ಥವು—

ಹೋತೃವಾಗಿರುವ ಈ ಅಗ್ನಿಯ ಸ್ವರೂಪವೇನು ? ಯಜಮಾನನ ಯಾವ ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸುವರೋ ಅಂತಹ ಎಲ್ಲಾ ಹವಿಸ್ಸುಗಳನ್ನೂ ಅಗ್ನಿಯು ವಹಿಸುತ್ತಾನೆ. ಇದೇ ಅಗ್ನಿಯು ಪ್ರತಿದಿನವೂ ಉತ್ಪನ್ನನಾಗುತ್ತಾನೆ. ದುದರಿಂದಲೇ ದೇವತೆಗಳು ಹವಿರ್ವಾಹಕನಾದ ದೂತನನ್ನು (ಅಗ್ನಿಯನ್ನು) ಗೌರವಿಸಿ ಪೂಜಿಸುತ್ತಾರೆ.

ಅಹರಹಃ–ಪ್ರತಿದಿನವೂ ; ಅಗ್ನಿಹೋತ್ರವೆಂಬ ಕರ್ಮವನ್ನು ಪ್ರತಿದಿನವೂ ಮಾಡಬೇಕಾಗಿರುವುದು. ಅದಕ್ಕಾಗಿ ಅಗ್ನಿಯನ್ನು ಪ್ರತಿದಿನವೂ ಉತ್ಪನ್ನಮಾಡುವುದರಿಂದ ಅಥವಾ ಪೂಜಿಸುವುದರಿಂದ ಅಗ್ನಿಯು ಪ್ರತಿದಿನವೂ ಉತ್ಪನ್ನನಾಗುವನೆಂದು ಇಲ್ಲಿ ಹೇಳಿದೆ. ಅದರಂತೆ ಮಾಸಿ ಮಾಸಿ—ಪ್ರತಿ ಮಾಸದಲ್ಲಿಯೂ ದರ್ಶಪೂರ್ಣಮಾಸಾದಿ ಯಾಗಗಳನ್ನು ಮಾಡುವುದರಿಂದ ಅದಕ್ಕಾಗಿ ಅಗ್ನಿಯನ್ನು ಪ್ರತಿ ಯಾಗದಲ್ಲಿಯೂ ಅರಣಿಗಳಲ್ಲಿ ಕಡೆದು ಉತ್ಪನ್ನ ಮಾಡುವುದು ವಿಧಿಯಾದ್ದರಿಂದ ಅಗ್ನಿಯು ಪ್ರತಿ ಮಾಸದಲ್ಲಿಯೂ ಉತ್ಪನ್ನನಾಗುವನೆಂದು ಇಲ್ಲಿ ವಿವರಿಸಿದೆ.

ಉಲ್ಬಮ್ ॥ ೧೩೧ ॥

ಉಲ್ಬಮೂರ್ಣೋತೇರ್ವೃಣೋತೇರ್ವಾ । "ಮಹತ್ತದುಲ್ಬಂ ಸ್ಥವಿರಂ ತದಾಸೀತ್" ಇತ್ಯಪಿ ನಿಗಮೋ ಭವತಿ ॥ ೨ ॥ ೩೫ ॥

ಉದಾಹರಣೆಯ ಋಕ್ಕು—

**ಮಹತ್ತದುಲ್ಬಂ ಸ್ಥವಿರಂ ತದಾಸೀದ್ಯೇನಾವಿಷ್ಟಿತಃ ಪ್ರ ವಿವೇಶಿಥಾಪಃ ।**
**ವಿಶ್ವಾ ಅಪಶ್ಯದ್ಬಹುಧಾ ತೇ ಅಗ್ನೇ ಜಾತವೇದಸ್ತನ್ವೋ ದೇವ ಏಕಃ॥**

(ಋ. ಸಂ. ೧೦-೫೧-೧)

ಇದರ ಅರ್ಥವು—

ದೇವತೆಗಳು—ಎಲೈ ಅಗ್ನಿಯೇ, ಯಾವ ಉಲ್ಬರೂಪವಾದ ಹೊದ್ದಿಕೆಯಿಂದ ನೀನು ಆವರಿಸಲ್ಪಟ್ಟವನಾಗಿ ಉದಕಗಳನ್ನು ಪ್ರವೇಶಿಸಿದಿಯೋ ಆ ಹೊದ್ದಿಕೆಯು ಮಹತ್ಸ್ವರೂಪವುಳ್ಳದ್ದು, ಸ್ಥೂಲವಾದದ್ದೂ ಆಗಿದೆ. ಜಾತವೇದೋರೂಪನಾದ ಎಲೈ ಅಗ್ನಿಯೇ, ನಿನ್ನ ಸಕಲ ಸ್ವರೂಪಗಳನ್ನು ಅನೇಕ ಪ್ರಕಾರವಾಗಿ ಒಬ್ಬ ದೇವನು ಮಾತ್ರ ನೋಡಿದ್ದಾನೆ.

**ಉಲ್ಬಂ**—ಯಾಸ್ಕರು ಈ ಶಬ್ದಕ್ಕೆ **ಉಲ್ಬಮೂರ್ಣೋತೇರ್ವೃಣೋತೇರ್ವಾ । ಮಹತ್ತದುಲ್ಬಂ ಸ್ಥವಿರಂ ತದಾಸೀದಿತ್ಯಪಿ ನಿಗಮೋ ಭವತಿ** (ನಿ. ೬-೩೫) ಎಂದು ನಿರ್ವಚನವನ್ನು ಹೇಳಿದ್ದಾರೆ. ಮುಚ್ಚು, ಆಚ್ಛಾದಿಸು ಎಂಬರ್ಥವುಳ್ಳ **ಊರ್ಣು** ಧಾತುವಿನಿಂದಾಗಲಿ, **ವೃ** ಧಾತುವಿನಿಂದಾಗಲಿ ಉಲ್ಬಶಬ್ದವು ನಿಷ್ಪನ್ನವಾಗಿದೆ ಆವರಣ, ಹೊದ್ದಿಕೆ ಎಂದರ್ಥ. **ಉಲ್ಬಂ ಗರ್ಭೋ ಜರಾಯು** ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಉಲ್ಬ, ಗರ್ಭ, ಜರಾಯು ಎಂಬ ಪದಗಳು ಪರ್ಯಾಯ ನಾಮಗಳು. ಶಿಶುವನ್ನು ಆವರಿಸಿರುವ (ಮುಚ್ಚಿರುವ) ಚರ್ಮದ ಪದರಕ್ಕೆ ಗರ್ಭವೆಂದು ಹೆಸರು. ಉಳಿದ ಶಬ್ದಗಳಿಗೂ ಇದೇ ಅರ್ಥವು.

ಈ ಸೂಕ್ತಕ್ಕೂ ಮುಂದಿನ ಎರಡು ಸೂಕ್ತಗಳಿಗೂ (೫೧,೫೨, ೫೩ ನೇ ಸೂಕ್ತಗಳು) ಸೌಚೀಕೋಽಗ್ನಿಃ ಎಂಬ ಅಗ್ನಿಯು ಋಷಿಯು. ೫೧ ನೇ ಸೂಕ್ತದಲ್ಲಿ ಕಾರಾಣಾಂತರದಿಂದ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯವನ್ನು ಬಿಟ್ಟು ಓಡಿಹೋಗಿ ನೀರಿನಲ್ಲಿ ಅಡಗಿಕೊಂಡಿದ್ದನೆಂದೂ ದೇವತೆಗಳು ಅವನನ್ನು ಕಂಡು ಪುನಃ ನೀರಿನಿಂದ ಬಂದು ತಮಗೆ ಹವಿಸ್ಸನ್ನು ವಹಿಸುವ ಕಾರ್ಯವನ್ನು ವಹಿಸಬೇಕೆಂದು ಪ್ರಾರ್ಥಿಸಿದ ಸಂಭಾಷಣೆ ಇದೆ. ಅಗ್ನಿಯ ಸಂಬಂಧವಾದ ವಿಷಯವನ್ನು ನಾವು ಅಲ್ಲಲ್ಲಿ ವಿಸ್ತಾರವಾಗಿ ವಿವರಿಸಿದ್ದರೂ ಇಲ್ಲಿ ಸಂದರ್ಭಾನುಸಾರ ಸಾಮಾನ್ಯವಿವರಣೆಯನ್ನು ಬರದು ಅನಂತರ ಸೌಚೀಕೋಽಗ್ನಿಯ ವಿಷಯವನ್ನು ವಿವರಿಸುತ್ತೇವೆ.

ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ದೇವತೆಗಳಲ್ಲಿ ಅಗ್ನಿಯೇ ಅತ್ಯಂತ ಪ್ರಧಾನದೇವತೆ. ಇಂದ್ರನ ಸ್ತುತಿವಾಕ್ಯಗಳನ್ನು ಬಿಟ್ಟರೆ ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಯನ್ನು ಪ್ರಶಂಸಿಸಿ ವರ್ಣಿಸುವ ಸೂಕ್ತಗಳೇ ಅತ್ಯಧಿಕವಾಗಿರುತ್ತವೆ. ೮, ೯ ನೆಯ ಮಂಡಲಗಳನ್ನು ಬಿಟ್ಟರೆ ಉಳಿದ ಎಲ್ಲಾ ಮಂಡಲಗಳೂ ಅಗ್ನಿದೇವತಾಕವಾದ ಸೂಕ್ತದಿಂದಲೇ ಪ್ರಾರಂಭವಾಗುವುವು. ಆದುದರಿಂದ ಅಗ್ನಿದೇವತೆಯ ವಿಷಯವಾಗಿ ಅವಶ್ಯಕವಾಗಿ ತಿಳಿದು ಕೊಳ್ಳಬೇಕಾದ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ.

**ಅಗ್ನಿಯ ಕರ್ಮಗಳು**

ಮಾನವನ ವ್ಯವಹಾರಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಯಜ್ಞಕರ್ಮಗಳೊಂದಿಗೆ ಸಾಕ್ಷಾತ್ಸಂಬಂಧವನ್ನು ಹೊಂದಿರುವುದರಿಂದಲೇ ಅಗ್ನಿಗೆ ಅತ್ಯಂತ ಪ್ರಧಾನವಾದುದೂ, ಪೂಜ್ಯವಾದುದೂ ಆದ ಸ್ಥಾನವಿರುತ್ತದೆ. ಅಗ್ನಿಯ ಪ್ರಧಾನಗುಣವು ಅವನ ಅಮರ್ತ್ಯತ್ವ (೧-೪೪-೬; ೧-೫೮-೧; ೨-೧೦-೧, ೨; ೩-೨-೧; ೩-೩-೧; ೩-೧೦-೨; ೩-೨೭-೫; ೩-೨೭-೨; ೬-೯-೪; ೭-೪-೪; ೮-೬೦-೧೧; ೧೦-೭೯-೧)

ಸ್ವಾಭಾವಿಕವಾಗಿ ಮರಣಧರ್ಮರಹಿತನಾದರೂ ಸಹ, ಅಗ್ನಿಯು ಮಾನವರಿಗೆಲ್ಲಾ ಅನುಕೂಲವಾಗಲೆಂದು ಮರ್ತ್ಯರಾದ ಮಾನವರ ಅನುಗ್ರಹಕ್ಕಾಗಿ ಅವರ ಅತಿಥಿಯಾಗಿ ಅವರೊಂದಿಗೆ ಪೃಥ್ವೀಸ್ಥನಾಗಿರುತ್ತಾನೆ. (೧-೪೪-೪; ೧-೫೮-೬; ೨-೪-೧; ೩-೨-೨; ೪-೧-೨೦; ೫-೧-೮; ೫-೮-೨; ೫-೧೮-೧; ೬-೨-೭; ೬-೧೫-೧; ೬-೧೫-೪: ೮-೮-೪; ೮-೭೩-೧; ೧೦-೧-೫; ೧೦-೯೧-೨; ೧೦-೯೨-೧)

ಅಮರ್ತ್ಯನೂ, ಮಾನವರಿಗೆ ಅನುಗ್ರಹಾತ್ಮಕನೂ ಆದ ಅಗ್ನಿಯು ಯಜಮಾನನ ಯಜ್ಞಗೃಹದಲ್ಲಿ ಶಾಶ್ವತನಾದ ಋತ್ವಿಕ್ಕಾಗುತ್ತಾನೆ. **ಪುರೋಹಿತ, ಋತ್ವಿಕ್, ಹೋತೃ, ಬ್ರಹ್ಮ** ಇತ್ಯಾದಿ ವಿಶೇಷಣಗಳಿಂದ ವರ್ಣಿತನಾಗಿದ್ದಾನೆ. ಉಷೋದೇವಿಯೊಡನೆ ಪ್ರಬುದ್ಧನಾಗುವನೆಂದು ಕೆಲವು ವಾಕ್ಯಗಳಲ್ಲಿಯೂ ಉಷಸ್ಸಿಗಿಂತಲೂ ಪೂರ್ವಭಾವಿಯಾಗಿಯೇ ಆವಿರ್ಭೂತನಾಗುವುನೆಂದು ಇನ್ನು ಕೆಲವು ವಾಕ್ಯಗಳಲ್ಲಿಯೂ ಸ್ತುತಿಸಿದೆ. (೧-೧-೧; ೧-೧೨-೧; ೧-೧೩-೧, ೪; ೧-೨೬-೭; ೧-೩೬-೩, ೫; ೧-೪೪-೭; ೧-೪೪-೧೨; ೧-೪೫-೩-೭; ೧-೫೮-೧, ೬; ೧-೬೦-೪; ೧-೬೮-೪, ೭; ೧-೭೬-೨, ೪; ೧-೧೨೭-೧; ೧-೧೪೧-೧೨; ೧-೧೪೯-೪, ೫; ೨-೫-೧; ೨-೬-೬; ೨-೯-೧, ೩-೭-೯; ೩-೧೦-೨, ೭; ೩-೧೧-೧; ೩-೧೪-೧; ೩-೧೯-೧; ೪-೧-೮; ೫-೧೧-೨; ೫-೨೬-೭; ೬-೧೫-೧ ೪, ೧೬; ೬-೧೬-೧; ೭-೭-೫; ೭-೧೦-೫; ೭-೧೧-೧; ೭-೧೬-೫, ೧೨; ೮-೪೪-೬; ೮-೪೯-೧; ೯-೬೬-೨೦; ೧೦-೧-೬; ೧೦-೯೨-೨)

ದೇವಮಾನವಾದಿಗಳಿಂದೆಲ್ಲಾ ಪ್ರಾರ್ಥಿತನೂ, ನಿಯಮಿತನೂ, ಆಗಿ ಸಕಲ ಯಜ್ಞಕರ್ಮಗಳನ್ನೂ ತನ್ನಲ್ಲೇ ಲೀನ ಮಾಡಿಕೊಳ್ಳುತ್ತಾನೆ. ತಾನೇ ನಿಜವಾದ ಕರ್ಮಕರ್ತನಾಗಿ, ಯಜಮಾನರು, ಅಧ್ವರ್ಯು, ಹೋತೃ, ಪೋತೃ ಇತ್ಯಾದಿ ಜೇರೆ ಜೇರೆ ಋತ್ವಿಕ್ಕುಗಳಿಗೆ ನಿಯಮಿಸತಕ್ಕ ಸಕಲವಾದ ಯಜ್ಞಕರ್ಮಗಳನ್ನೂ ತಾನೊಬ್ಬನೇ ನಿರ್ವಹಿಸಲು ಸಮರ್ಥನಾಗುತ್ತಾನೆ.

(೧-೯೪-೬ : ೨-೧-೨; ೨-೫-೨; ೪-೯-೩, ೪; ೧-೦೨-೧) ಈ ನಿರ್ವಹಣಶಕ್ತಿಯಿರುವುದರಿಂದಲೇ. ಯಜಮಾನನಿಂದ ಈರೀತಿ ಪ್ರಾರ್ಥಿತನಾಗಿದ್ದಾನೆ. ಎಲೈ ಅಗ್ನಿಯೇ, ನೀನು ಹೋತೃಗಳಲ್ಲೆಲ್ಲಾ ಅತ್ಯುತ್ತಮವಾದ ಹೋತೃವಾಗಿದ್ದೀಯೇ ನೀನು ನಿತ್ಯತರುಣನು. ದೇವತಾತ್ಮರಾದ ಇತರ ಋತ್ವಿಕ್ಕುಗಳೊಡನೆ ಸೇರಿ, ಋತುಕಾಲಾನುಗುಣವಾದ ಕರ್ಮಗಳನ್ನಾ

ಚರಿಸುತ್ತ ಯಜ್ಞಕಾಮರಾದ ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸು. ಇದೇ ವಿಧವಾಗಿ ಅಗ್ನಿಯ ಮಹದ್ಗುಣಗಳನ್ನು ವರ್ಣಿಸುವ ಇನ್ನೂ ಕೆಲವು ವಾಕ್ಯಗಳನ್ನು ವಿವರಿಸಿ ಕೆಳಗೆ ಉದಾಹರಿಸಲಾಗುತ್ತದೆ.

"ಅಗ್ನಿಯು ಮೇಧಾವಿಯಾದ ಕವಿಯು, ಕವಿಗಳಲ್ಲೆಲ್ಲಾ ದಿವ್ಯರೂಪನು. (ಅಸುರೋ ವಿಪಶ್ಚಿತಾಂ)''

(೩-೩-೪)

"ಇಂತಹ ವಿಪಶ್ಚಿತ್ತಾದ ಅಗ್ನಿಯು ಎಲ್ಲಾ ವಿಧವಾದ ಪೂಜಾಕರ್ಮಗಳನ್ನೂ ಅರಿತಿದ್ದಾನೆ. ಉತ್ತಮನಾದ ನೇತೃವು. ಸುಲಭವಾಗಿ ಸಿದ್ಧಿಯನ್ನು ತರತಕ್ಕವನು. ಸಕಲ ಕರ್ಮಗಳಿಗೂ ರಕ್ಷಕನು. ಭಕ್ತರಿಗೆ ಸುಲಭವಲ್ಲದ ಕರ್ಮಗಳಲ್ಲಿ ಸಹಾಯಮಾಡಿ ಕರ್ಮವನ್ನು ಸಾಂಗಗೊಳಿಸತಕ್ಕವನು."

"ಎಲೈ ಅಗ್ನಿಯೇ, ಯಾವ ಯಜ್ಞವನ್ನು ನೀನು ಸುತ್ತುವರಿದು ನೆರವೇರುವಂತೆ ಮಾಡುತ್ತೀಯೋ ಅದು ಖಂಡಿತ ದೇವತೆಗಳಲ್ಲಿ ಹೋಗಿ ಸೇರುತ್ತದೆ."

(೧-೧-೪)

"ಎಲೈ ಅಗ್ನಿಯೇ, ನೀನು ಅಂಗಿರಾಋಷಿಗಳಲ್ಲಿ ಪ್ರಥಮನು. (ಮುಖ್ಯನು) ದೇವತೆಗಳಿಗೆಲ್ಲಾ ಕಲ್ಯಾಣಕಾರಕನಾದ ಸಖನು.

(೧-೩೧-೧)

"ಎಲೈ ಅಗ್ನಿಯೇ, ನೀನೇ ಯಜ್ಞಕರ್ಮನಿರ್ವಹಣಕ್ಕೆಲ್ಲಾ ಪ್ರಧಾನವಾದ ಸಾಧನವು."

(೩-೩-೩)

"ಎಲೈ ಅತ್ಯುತ್ತಮನಾದ ಋಷಿಯೇ, ನೀನು ಪ್ರಜ್ವಲಿತನಾಗಿದ್ದೀಯೆ. ಯಜ್ಞವನ್ನು ರಕ್ಷಿಸು."

(೪-೨೧-೩)

"ಯಜ್ಞಸಾಧನವಾದವನೂ, ಋಷಿರೂಪನೂ ಆದ ಅಗ್ನಿಯು ಯಜ್ಞವನ್ನು ವೃದ್ಧಿಗೊಳಿಸುತ್ತಾ ಮುಂಭಾಗದಲ್ಲಿ ನೇತ್ರರೂಪನಾಗಿದ್ದಾನೆ."

(೩-೨೭-೨, ೭)

"ಪ್ರಾಜ್ಞರಲ್ಲದವರ ನಡುವೆ ಇರುವ ಅವನೊಬ್ಬನೇ ಪ್ರಾಜ್ಞನಾದ ಕವಿಯು- ಅತ್ಯುತ್ತಮನಾದ ಜ್ಞಾನವುಳ್ಳವನು."

(೭-೪-೪)

"ಎಲೈ ದೇವತೆಗಳೇ ವಿಧಿವಿಹಿತವಾದ ಕರ್ಮಾಚರಣೆಯಲ್ಲಿ ನಾವು ಯಾವ ಲೋಪದೋಷಗಳನ್ನು ಮಾಡಿದರೂ ಸಹ, ಋತುಕಾಲನಿಯಮಗಳನ್ನರಿತವನೂ, ದೇವತೆಗಳಿಗೆ ಯಾವ ರೀತಿ ತೃಪ್ತಿಯನ್ನುಂಟುಮಾಡಬೇಕೆಂಬ ತಿಳುವಳಿಕೆಯುಳ್ಳವನೂ ಆದ ಅಗ್ನಿಯು ನಮ್ಮ ಲೋಪದೋಷಗಳನ್ನೆಲ್ಲಾ ತಿದ್ದಿ ಸರಿಪಡಿಸುತ್ತಾನೆ."

(೧೦-೨-೪)

"ಯಜ್ಞನಿರ್ವಹಣಕ್ಕೆ ಉಪಯುಕ್ತವಾದ ಅನೇಕ ವಿಷಯಗಳು ಮಂದಮತಿಗಳಾದ ನಮ್ಮ ತಿಳುವಳಿಕೆಗೆ ಬಂದಿರುವುದೇ ಇಲ್ಲ. ಆದರೂ ಸಹ ಅಗ್ನಿಯು ಸರ್ವಜ್ಞನಾದುದರಿಂದಲೂ, ಪೂಜ್ಯನಾದ ಋತ್ವಿಕ್ಕಾದುದರಿಂದಲೂ, ಈ ಮಾರ್ಗಗಳನ್ನೆಲ್ಲಾ ಅರಿತು; ದೇವತೆಗಳನ್ನು ಸಕಾಲದಲ್ಲಿ ಪೂಜಿಸಿ ಅವರವರಿಗೆ ಉಪಯುಕ್ತವಾದ ಹವಿರಾದಿಗಳನ್ನರ್ಪಿಸಿ ಎಲ್ಲರಿಗೂ ತೃಪ್ತಿಯನ್ನುಂಟುಮಾಡುತ್ತಾನೆ.

(೧೦-೨-೪)

" ಯಜಮಾನರಾದ ಮಾನವರ ದೃಷ್ಟಿಗಳು ಸೂರ್ಯನಕಡೆ ಯಾವ ರೀತಿ ತಿರುಗುತ್ತವೆಯೋ, ಅದೇ ರೀತಿ ಅಗ್ನ್ಯಭಿಮುಖವಾಗಿಯೂ ತಿರುಗುತ್ತವೆ,"

(೧೦-೯೧-೩)

''ಅಗ್ನಿಯೇ, ಸಕಲ ಯಜಮಾನರಿಗೂ ಪಿತೃವು, ಅವನೇ ಪ್ರಭುವು. ಈಶ್ವರನು ಯಜ್ಞಕ್ಕೆ ಬಾಹ್ಯಾವಿರ್ಭಾವವನ್ನು ಹೊಂದಿದ ಧ್ವಜರೂಪನು, ಸಕಲ ವೈದಿಕಕರ್ಮಗಳಿಗೂ ಅಧ್ಯಕ್ಷನು. " (ಕೇತುಂ ಯಾಜ್ಞಾನಾಂ, ಪಿತಾ ಯಾಜ್ಞಾನಾಂ, ಸಮ್ರಾಜಂ), ೩-೩-೩,೪,೩-೩.೧೧,೧೦-೪-೨, ೪-೩-೧; ೬-೨-೩, ೮-೪೩-೨೪,೧೦-೧-೫, ೧೦-೬-೩.

''ಶೀಘ್ರಸಂಚಾರಿಯಾದ ಅಗ್ನಿಯು **(ರಘುಪತ್ವಃ)** ದೇವತೆಗಳಿಂದ ಪ್ರಾರ್ಥಿತನಾಗಿ. ಪೃಥಿವಿಯಿಂದ ಅಂತರಿಕ್ಷಕ್ಕೂ ಅಂತರಿಕ್ಷದಿಂದ ಪೃಥಿವಿಗೂ ಸಂಚರಿಸುತ್ತಾ, ದೇವದೂತನೂ, ಮಾನವನಾದ ಯಜಮಾನನ ದೂತನೂ ಆಗಿ ದೇವಮಾನವಾದಿಗಳ ನಿತ್ಯಸಂಬಂಧವನ್ನು ಬೆಳೆಸುತ್ತಾನೆ. ಮಾನವರಿಂದ ಅರ್ಪಿತವಾದ ಸ್ತುತಿ ಗಳನ್ನೂ ಹವಿರಾದಿಗಳನ್ನೂ ದೇವತೆಗಳಿಗೆ ಒಪ್ಪಿಸುತ್ತಾನೆ. ಅಪೇಕ್ಷಿತವಾದ ಕಾಲಗಳಲ್ಲೆಲ್ಲಾ ದೇವತೆಗಳನ್ನು ಸ್ವರ್ಗ ದಿಂದ ಪೃಥ್ವಿಯ ಯಜ್ಞಭೂಮಿಗೆ ಕರೆದುಕೊಂಡು ಬರುತ್ತಾನೆ."

(೧೦-೧೦೦-೧೧; ೧೦-೧೫೦-೪)

ಅಗ್ನಿಯ ದೇವದೂತತ್ವವೂ, ಮಾನವದೂತತ್ವವೂ ತೈತ್ತಿರೀಯಸಂಹಿತೆಯಲ್ಲಿ ಈರೀತಿ ವರ್ಣಿತವಾಗಿದೆ—

**''ಅಗ್ನಿರ್ದೇವಾನಾಂ ದೂತ ಆಸೀದುಶನಾ ಕಾವ್ಯೋಽಸುರಾಣಾಂ"**

**(ತೈ. ಸಂ. ೩-೫-೮-೫)**

ಅಗ್ನಿಯು ದೇವದೂತನಾಗಿಯೂ, ಕಾವ್ಯ ಉಶನಸ್ಸು ಅಸುರದೂತನಾಗಿಯೂ ಇದ್ದರು. ಇದೇ ದೂತತ್ವದಿಂದ ದೇವಮಾನವಾದಿಗಳ ಸಂಬಂಧವು ಯಾವರೀತಿ ಬೆಳೆಯಲು ಅವಕಾಶವಾಯಿತೆಂದು ತೈತ್ತಿರೀಯಬ್ರಾಹ್ಮಣದಲ್ಲಿ ಅಗ್ನಿಯ ಈ ಕಾರ್ಯವನ್ನು ಈರೀತಿ ಪ್ರಶಂಸಿಸಿದೆ.

**ಆ ತಂತುಮಗ್ನಿರ್ದಿವ್ಯಂ ತತಾನ । ತ್ವಂ ನಸ್ತಂತುರುತ ಸೇತುರಗ್ನೇ । ತ್ವಂ ಪಂಥಾ ಭವಸಿ ದೇವಯಾನಃ। ತ್ವಯಾ ಅಗ್ನೇ ಪೃಷ್ಠಂ ವಯಮಾರುಹೇಮ । ಅಥ ದೇವೈಃ ಸಧಮಾದಂ ಮದೇಮ ॥**

(ತೈ. ಬ್ರಾ. ೨-೪-೧-೬)

ಎಲೈ ಅಗ್ನಿಯೇ, ದೇವಮಾನವಾದಿಗಳಿಗಿರುವ ಸಂಬಂಧರೂಪವಾದ ತಂತುವನ್ನು ನೀನು ವಿಸ್ತರಿಸುವೆ. ನೀನೇ ನಮಗೆ ತಂತುಪ್ರಾಯನು. ಸ್ವರ್ಗಕ್ಕೆ ಹೋಗಲು ಮುಖ್ಯ ಸೇತುವೆಯು, ದೇವಲೋಕಕ್ಕೆ ಹೋಗುವ ಮುಖ್ಯ ಮಾರ್ಗವು ನೀನೇ. ನಿನ್ನ ಅನುಗ್ರಹದಿಂದ ನಿನ್ನ ಪೂಜಕರಾದ ನಾವೂ ಸ್ವರ್ಗವನ್ನು ಸೇರಿ ಅಲ್ಲಿರುವ ದೇವತೆಗಳು ಯಾವ ಸುಖವನ್ನನುಭವಿಸುವರೋ ಅದೇ ಸುಖವನ್ನು ಅವರೊಡನೆ ನಾವೂ ಅನುಭವಿಸುವಂತಾಗಲಿ.

ಇದೇ ವಿಧವಾಗಿ ದೇವದೂತತ್ವವೂ; ಈ ದೌತ್ಯದಿಂದ ದೇವಮಾನವಾದಿಗಳ ಸಂಬಂಧಾಭಿವೃದ್ಧಿಗೆ ಸಾಧಕತ್ವವೂ ಪ್ರಶಂಸಿತವಾಗಿರುವ ಸನ್ನಿವೇಶಗಳೂ ಋಕ್ಸಂಹಿತೆಯಲ್ಲಿ ಬಹಳ ಹೇರಳವಾಗಿವೆ. "**ಅಗ್ನಿಂ ದೂತಂ ವೃಣೀಮಹೇ**". ಇತ್ಯಾದಿ ವಾಕ್ಯಗಳು ಅಗ್ನಿಯ ಸಹಾಯವನ್ನು ಪ್ರಶಂಸಿಸುವುವಾಗಿವೆ. (೧-೧೨-೧; ೨-೪-೮; ೧-೩೬-೩, ೪, ೫; ೧-೪೪, ೨,೩, ೫,೯,೧೨; ೨-೧೦-೬; ೩-೧೧-೨; ೪-೨-೩; ೫-೨೧-೩; ೭-೧೬-೬; ೮-೩೯-೧,೯; ೧೦-೯೧-೧೧; ೧-೨೭-೪; ೧-೧೪೮-೧; ೩-೫-೨; ೩-೧೭-೪; ೪.೭-೮;೬-೧೫.೮ ರಿಂದ ೧೦; ೮-೧೯-೨೧. ೮.೪೪-೩; ೧೦ ೧೨೨-೭,೧.೫೮-೧; ೨-೬-೬, ೭; ೩-೬.೫; ೩.೨೧-೧,೫; ೪-೮-೨,೪; ೭-೧೧-೪; ೮-೩೨-೧೮, ೧೯; ೧೦-೪-೨,।೧-೭೪-೪, ೭;

೨-೯-೨; ೩-೯-೮; ೪-೧-೮; ೫-೮-೬; ೭-೧೬-೪; ೧೦-೪೬-೧೦ ಇತ್ಯಾದಿ.)

ಇದೇ ಅಗ್ನಿಯು ದ್ಯುಲೋಕದ ಅಂತಸ್ತತ್ವವನ್ನು ಪೂರ್ಣವಾಗಿ ಅರಿತವನಾಗಿ ಸಕಲ ದೇವತೆಗಳನ್ನೂ ಅವರವರ ಯೋಗ್ಯತಾನುಸಾರವಾದ ಯಜ್ಞಭಾಗವನ್ನು ಸೀಕರಿಸಲು ಕರೆತರಲು ಯೋಗ್ಯನಾಗಿದ್ದಾನೆ.

(೪-೮-೨)

ಯಾವ ರಥಗಳಲ್ಲಿ ದೇವತೆಗಳು ಬರುವರೋ, ಅಗ್ನಿಯೂ ಅದೇ ರಥದಲ್ಲಿ ಕುಳಿತು ಬರುತ್ತಾನೆ.

(೩-೪-೧೧; ೭-೧೧-೧)

ಅಥವಾ ಸಮಯವನ್ನರಿತು ಅವರಿಗಿಂತಲೂ ಪೂರ್ವಭಾವಿಯಾಗಿಯೇ ಬರುತ್ತಾನೆ.

(೧೦-೭೦-೨)

ಉಳಿದ ಸಕಲ ದೇವತೆಗಳಿಗೂ ಯಾವ ಪೂಜೆಯುಂಟೋ, ಯಾವ ಯಜ್ಞಭಾಗವುಂಟೋ ಅವೆಲ್ಲವೂ ಅಗ್ನಿಗೂ ಸೇರತಕ್ಕವಾಗಿವೆ ಮತ್ತು ಅರ್ಪಿತವಾಗುತ್ತವೆ.

(೧-೩೬-೪, ೨-೧೨-೧)

ಯಜ್ಞಕ್ಕೆ ವರುಣನನ್ನು ಕರೆತರುತ್ತಾನೆ. ಇಂದ್ರನನ್ನು ದ್ಯುಲೋಕದಿಂದಲೂ, ಮರುತ್ತುಗಳನ್ನು ಅಂತರಿಕ್ಷದಿಂದಲೂ ಕರೆತರುತ್ತಾನೆ.

(೧೦-೭೦-೧೧)

ಯಜ್ಞದಲ್ಲಿ ಅರ್ಪಿತವಾದ ಹವಿಸ್ಸುಗಳನ್ನು ಸುಗಂಧಯುಕ್ತವಾಗುವಂತೆ ಮಾಡುತ್ತಾನೆ. **(ಹವ್ಯಾನೀ ಸುರಭೀಣಿ ಕೃತ್ವೀ)**

(೧೦-೧೫-೧೨; ವಾ. ಸಂ.೧೯-೬೬)

ಯಜ್ಞದಲ್ಲಿ ಅಗ್ನಿಯ ಸಹಾಯವಿಲ್ಲದಿದ್ದರೆ ದೇವತೆಗಳಿಗೆ ಯಾವವಿಧವಾದ ತೃಪ್ತಿಯೂ ಇರುವುದಿಲ್ಲ. ಆದುದರಿಂದ ಆ ದೇವತೆಗಳಿಗೆಲ್ಲಾ ಅಗ್ನಿಯೇ ಸಾಕ್ಷಾತ್ತಾಗಿ ಹವಿಸ್ಸುಗಳನ್ನು ಅರ್ಪಿಸುತ್ತಾನೆ.

(೭-೧೧-೩; ೮-೯೧-೧೬; ೧೦-೭-೬)

ಅಗ್ನಿಯ ಮೂಲಕವೇ ದೇವತೆಗಳು ಹವಿರಾದಿಗಳನ್ನು ಸ್ವೀಕರಿಸುವುದರಿಂದ ಅನೇಕವೇಳೆ ಅಗ್ನಿಯು ದೇವ ಮಾನವಾದಿಗಳಿಂದ ನಿರ್ವಹಿಸಲ್ಪಡುವ ಯಜ್ಞದಲ್ಲಿ ಪ್ರಧಾನ ಪಾತ್ರವಹಿಸಿ ದೇವತೆಗಳ ಮುಖವೆಂದೂ, ಅವರು ಸೋಮಾದಿಗಳನ್ನು ಪಾನ ಮಾಡುವ ಜಿಹ್ವೆಯೇ ಇವನೆಂದೂ ಪ್ರಶಂಸಿತನಾಗಿದ್ದಾನೆ. **(ಅಸ್ಯಂ ತ್ವಾಂ ಜಿಹ್ವಾಂ)** (೨-೧-೧೩; ೨-೧-೧೪) ಇನ್ನು ಕೆಲವೆಡೆಗಳಲ್ಲಿ ಅವನೇ ಸಕಲ ಹವಿಸ್ಸುಗಳನ್ನೂ ಭಕ್ಷಿಸಬೇಕೆಂದೂ ಪ್ರಾರ್ಥಿತನಾಗಿದ್ದಾನೆ ಮತ್ತು ಯಜ್ಞದಲ್ಲಿ ಅರ್ಪಿತವಾದ ಸೋಮವನ್ನು ಪಾನಮಾಡುವುದಕ್ಕೆ ಸಾಕ್ಷಾತ್ತಾಗಿ ಆಹೂತನಾಗಿದ್ದಾನೆ.

(೩-೨೧-೧; ೩-೨೮-೧ ರಿಂದ ೬; ೧-೧೪-೧೦; ೭-೧೯-೯)

## ಅಗ್ನಿಯು ನೀರಿನಲ್ಲಿ ಅವಿತುಕೊಂಡಿದ್ದ ವಿಚಾರ

ಎಲ್ಲಕ್ಕಿಂತಲೂ ಮೊದಲು ಈ ಪ್ರಕರಣದಲ್ಲಿ ಅಗ್ನಿಯಹವ್ಯವಾಹಕತ್ವವು ಪ್ರಶಂಸಿತವಾಗಿದೆ. ಜಗದ್ವ್ಯವಹಾರಕ್ಕೆಲ್ಲಾ ಆಧಾರಭೂತವಾದ ಯಜ್ಞನಿರ್ವಹಣವು ಜಗತ್ತಿನ ಸ್ಥಿತಿಗತಿಗಳಿಗೆ ಅತ್ಯವಶ್ಯಕವಾಗಿದೆ. ಈ ಯಜ್ಞವು ಪರಿಪೂರ್ಣವಾಗಿ ಹಿಸಲ್ಪಡಬೇಕಾದರೆ ಅಗ್ನಿಯೇ ಈ ಕಾರ್ಯಸಾಧಕನಾಗಿರಬೇಕು. ಆದುದರಿಂದ ಅವನೇ ಮುಖ್ಯಹೋತೃವೂ ಹವಿ ನಿರ್ವಾಹಕನೂ ಆಗಿರಬೇಕು. **"ಮನ್ಯೇ ತ್ವಾ ಜಾತವೇದಸಂ ಸ ಹವ್ಯಾವಕ್ಷ್ಯಾನುಷಕ್"**

ಜಾತವೇದೋರೂಪನಾದ ಅಗ್ನಿಯೇ ನಿರಂತರವಾದ ಹವ್ಯವಾಹಕನೆಂದು ನಮ್ಮ ದೃಢವಿಶ್ವಾಸವಿದೆಯೆಂದು ಋಷಿಯು ತನ್ನ ಶ್ರದ್ಧೆಯನ್ನು ಪ್ರಥಮತಃ ವ್ಯಕ್ತಪಡಿಸಿದ್ದಾನೆ (೫-೯-೧).

ಹವಿಸ್ಸನ್ನೇ ಆಹಾರವನ್ನಾಗಿ ನಂಬಿಕೊಂಡಿರುವ ದೇವತೆಗಳು ಯಜ್ಞಹವಿಸ್ಸನ್ನು ಹಂಚುವ ಅಗ್ನಿಯು ಸ್ವಲ್ಪ ಕಣ್ಮರೆಯಾದರೂ ಪ್ರಕ್ಷುಬ್ಧರಾಗುತ್ತಾರೆ. ಅಂತಹ ಸನ್ನಿವೇಶಗಳಲ್ಲಿ ಅಗ್ನಿಯನ್ನು ವಿನಯದಿಂದ ಪ್ರಾರ್ಥಿಸಿ ಹವಿರ್ವಹನ ಕರ್ಮವನ್ನು ನೇರವೇರಿಸುವಂತೆ ಪ್ರಾರ್ಥಿಸುತ್ತಾರೆ. ಇಂತಹ ಕೆಲವು ಸನ್ನಿವೇಶಗಳು ಋಕ್ಸಂಹಿತೆಯಲ್ಲಿಯೇ ವರ್ಣಿತ ವಾಗಿರುತ್ತವೆ. ಉದಾಹರಣೆಗೆ, ಋ.ಸಂ. ೧೦-೫೧ ನೇ ಸೂಕ್ತದ ವಿವರಣೆಯನ್ನು ಇಲ್ಲಿ ಪರಿಶೀಲಿಸಬಹುದು. ಉದಾಹೃತ ವಾಗುವ ಈ ಸೂಕ್ತದಲ್ಲಿ ದೇವತೆಗಳು ಹವಿರ್ವಹನಕರ್ಮಕ್ಕಾಗಿ ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ಅಗ್ನಿಯು ತನ್ನ ಪ್ರಿಯವಾದ ಒಂದು ನಿಯಮವನ್ನು ಸೂಚಿಸಿ ದೇವತೆಗಳು ಆ ನಿಯಮವನ್ನು ಪಾಲಿಸುವುದಾದರೆ ತಾನು ಹವಿರ್ವಹನಕರ್ಮವನ್ನು ನಿರ್ವಹಿಸುವುದಾಗಿ ಭರವಸೆಯನ್ನು ನೀಡುತ್ತಾನೆ.

ಅಗ್ನಿಯು ನೀರಿನಲ್ಲಿ ಏತಕ್ಕೆ ಅಡಗಿಕೊಂಡಿದ್ದನು ಎಂಬ ವಿಷಯದಲ್ಲಿ ಒಂದು ಪೂರ್ವೇತಿಹಾಸವು ಋಗ್ವೇದದ ಪ್ರಕೃತ ಸೂಕ್ತದಲ್ಲಿಯೂ ಯಜುರ್ವೇದದಲ್ಲಿಯೂ ಉಕ್ತವಾಗಿರುವುದು.

**ಅಗ್ನೇ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ ।**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನ ಕ್ಷೇಪ್ನೋರವಿಜೇ ಜ್ಯಾಯಾಃ ।**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ।**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ॥**
**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತಭಾಗಂ ।**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ॥**
**ತವ ಪ್ರಯಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋ ೩ ಯಮಸ್ತು ಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**

(ಋ. ಸಂ. ೧೦-೫೧-೬ ರಿಂದ ೯)

ಈ ಸೂಕ್ತದಲ್ಲಿ ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ. ಮುಖ್ಯವಿಚಾರವೇನೆಂದರೆ—ಅಗ್ನಿಗೆ ಭೂಪತಿಃ, ಭುವನಪತಿಃ ಭೂತಾನಾಂಪತಿಃ ಎಂಬ ಹೆಸರಿನ ಮೂರು ಜೇಷ್ಠಸಹೋದರರಿದ್ದರು. ಅವರೂ ಅಗ್ನಿಯಂತೆಯೇ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ದೇವತೆಗಳ ಬಳಿಗೆ ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮ ಮಾಡುವಾಗ ವಜ್ರಸದೃಶವಾದ ವಷಟ್ಕಾರಶಬ್ದಪೂರ್ವಕವಾದ ಹೋಮಗಳಿಂದ ಈ ಮೂವರು ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ತನಗೂ ಆ ದೆಶೆ ಸಂಭವಿಸಬಹುದು ಭೀತನಾಗಿ ನೀರಿನಲ್ಲಿ ಹೋಗಿ ಅವಿತು ಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಎಲ್ಲಿಯೂ ಕಾಣದೆ ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿರುವನೆಂದು ದೇವತೆಗಳಿಗೆ ತಿಳಿಸಿದವು. ಆಗ ದೇವತೆಗಳು ಅಗ್ನಿಯ ಬಳಿಗೆ ಬಂದು ಅವನೊಡನೆ ಈರೀತಿ ಸಂಭಾಷಿಸಿದರು. ಈ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ. ದೇವತೆಗಳು ಅಗ್ನಿಯನ್ನು ನೀರಿನಿಂದ ಎದ್ದುಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು ಅಗ್ನಿಯು, ತನ್ನ ಸಹೋದರರು ಮೃತರಾದುದರಿಂದ ತನಗೂ ಅದೇ ಗತಿ ಪ್ರಾಪ್ತವಾಗದೆಂದೂ ಆದ್ದರಿಂದ ತಾನು ಬರುವುದಿಲ್ಲವೆಂದೂ ಹೇಳಿದನು. ಅದಕ್ಕೆ ದೇವತೆಗಳು ಮರಣಕ್ಕಾಗಿ ಹೆದರಬೇಡವೆಂದೂ ನಿನಗೆ ಮರಣ

ಭಯವುಂಟಾಗದಂತೆ ಮಾಡುವೆನೆಂದೂ ಹೇಳಲು ಅಗ್ನಿಯು ಪುನಃ ಇಂತೆಂದನು—ಒಳ್ಳೆಯದು, ಮರಣಭಯವನ್ನು ನನಗೆ ತಪ್ಪಿಸುವುದಲ್ಲದೆ ಯಜ್ಞಗಳಲ್ಲಿ ಪ್ರಯಾಜಾ, ಅನುಯಾಜಾ ಉರ್ಜಸ್ವತ್, ಸ್ವಿಷ್ಟಕೃತ್, ಅಜ್ಯಭಾಗ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗಗಳನ್ನು ಕೊಟ್ಟು ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ ಸರ್ವರಿಂದಲೂ ನಮಸ್ಕೃತನಾಗುವಂತೆಯೂ, ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನ ಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು. ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವಾಗಿ ಈರೀತಿ ಇರುವುದು.

**ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮಿಯಂತ ಸೋಽಗ್ನಿರಬಿಭೇದಿತ್ಥಂ ವಾವಸ್ಯ ಅರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮುಪಶಪದ್ಧಿಯಾಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ ಹಿ ತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽ ಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃ ಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದದಾತಿ ರಕ್ಷಸಾಮಪಹತ್ಯೈ॥**

(ತೈ. ಸಂ. ೨-೬-೬-೧, ೨)

ಪೂರ್ವದಲ್ಲಿ ಅಗ್ನಿಗೆ ಮೂರುಮಂದಿ ಜ್ಯೇಷ್ಠಸಹೋದರರಿದ್ದರು. ಅವರು ದೇವತೆಗಳಿಗೆ ಯಜ್ಞಯಾಗಾದಿಗಳಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ಒಯ್ಯುತ್ತಿದ್ದರು. ಅವರು ಮೃತರಾಗಲು ಅಗ್ನಿಯು ತನಗೂ ಆ ಗತಿ ಪ್ರಾಪ್ತವಾಗಬಹುದೆಂದು ಹೆದರಿ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯು ಎಲ್ಲಿಹೋದನೆಂದು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು ಅಗ್ನಿಯು ನೀರಿನಲ್ಲಿ ಅವಿತುಕೊಂಡಿರುವುದನ್ನು ದೇವತೆಗಳಿಗೆ ಹೇಳಿತು. ಮೀನಿನ ಈ ಚಾಡಿಮಾತನ್ನು ಕೇಳಿ ಅಗ್ನಿಗೆ ಕೋಪಬಂದು ಇನ್ನುಮೇಲೆ ನೀರಿನಲ್ಲಿರುವ ಮೀನುಗಳು ಜನರು ಬಲೆ ಮೊದಲಾದ ಸಾಧನಗಳಿಂದ ಹಿಡಿದುಕೊಳ್ಳುವಂತೆ ಶಪಿಸಿದನು. ಅದರಂತೆ ಈಗಲೂ ಜನರು ಮೀನುಗಳನ್ನು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಂಡು ತಿನ್ನುತ್ತಿರುವರು. ಬಳಿಕ ದೇವತೆಗಳು ಅಗ್ನಿಯನ್ನು ಕುರಿತು ಎಲೈ ಅಗ್ನಿಯೇ, ನೀನು ಹಿಂತಿರುಗಿಬಂದು ನಮಗೆ ಹವಿರ್ವಹನಕಾರ್ಯದಲ್ಲಿ ಉದ್ಯುಕ್ತನಾಗಿರು ಎನ್ನಲು ಅದಕ್ಕೆ ಅಗ್ನಿಯು ಯಜ್ಞದಲ್ಲಿ ಹೋಮ ಮಾಡುವಾಗ ಪರಿಧಿಯು (ರಾಕ್ಷಸರು ಬಂದು ಯಜ್ಞಕ್ಕೆ ವಿಘ್ನಮಾಡದಂತೆ ಅಗ್ನಿಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ಇಡುವ ದರ್ಭೆ ವಿಶೇಷಗಳಿಗೆ ಪರಿಧಿ ಎಂದು ಹೆಸರು). ಹೊರಗಡೆ ಎಂದರೆ ಈಚೆ ಬೀಳುವ ಆಜ್ಯವೇ ಮೊದಲಾದ ಆಹುತಿಗಳ ಭಾಗವು ನನ್ನ ಸಹೋದರರಿಗೆ ಹವಿರ್ಭಾಗವಾಗುವಂತೆ ವರವನ್ನು ಕೊಟ್ಟರೆ ತಾನು ನೀರಿನಿಂದ ಎದ್ದುಬಂದು ಪೂರ್ವದಂತೆ ಹವಿಸ್ಸನ್ನು ಒಯ್ಯುವೆನೆಂದು ಹೇಳಿದನು. ಅದಕ್ಕೆ ದೇವತೆಗಳು ಸಮ್ಮತಿಸಿ ಅವನಿಗೆ ಆ ರೀತಿ ವರವನ್ನು ಕೊಟ್ಟರು ಇತ್ಯಾದಿ ಉಪಾಖ್ಯಾನವಿದೆ.

ಯಜ್ಞದಲ್ಲಿ ಪ್ರಾಧಾನ್ಯವನ್ನು ವಹಿಸಿ ದೇವತೆಗಳಿಗೆ ಸಹಾಯಮಾಡಬೇಕೆಂದು ಅಗ್ನಿಯು ಪ್ರಾರ್ಥಿತನಾದಾಗ ಅಗ್ನಿಗೂ ಇತರ ದೇವತೆಗಳಿಗೂ ನಡೆದ ಒಂದು ಸಂಭಾಷಣೆಯು ಅಗ್ನಿಯ ಪ್ರಾಶಸ್ತ್ಯವನ್ನೂ ಅತಿಶಯವಾದ ಶಕ್ತಿಯನ್ನೂ ತಿಳಿಸುತ್ತದೆ. ಪ್ರಕೃತ ಸೂಕ್ತದ ಸಾರಾಂಶವಾದ ಆ ಸಂಭಾಷಣೆಯು ಈರೀತಿಯಿರುತ್ತದೆ.

(೧೦-೫೧)

**ದೇವತೆಗಳು**—ಎಲೈ ಅಗ್ನಿಯೇ, ನೀನು ಮರೆಮಾಡಿಕೊಂಡು ಯಾವ ಆವರಣದೊಂದಿಗೆ ನೀರಿನಲ್ಲಿ ಅಂತರ್ಗತನಾಗಿದ್ದೀಯೋ, ಆ ಆವರಣವು ಬಹಳ ಸ್ಥೂಲವಾದುದೂ, ಪೂರ್ಣವಾಗಿ ಮುಚ್ಚತಕ್ಕದ್ದಾಗಿಯೂ ಇದೆ. ಆದರೆ, ಎಲೈ ಜಾತವೇದಸ್ಸೇ, ಒಬ್ಬ ದೇವನು ಮಾತ್ರ (ಪ್ರಜಾಪತಿ) ನಿನ್ನ ಅನೇಕ ವಿಧವಾದ ಸ್ವರೂಪಗಳನ್ನು ಪೂರ್ಣವಾಗಿ ಅರಿತವನಾಗಿದ್ದಾನೆ.

**ಅಗ್ನಿ**—ನಿಮ್ಮಲ್ಲಿ ನನ್ನ ಸ್ವರೂಪಗಳನ್ನು ಅರಿತಿರುವವನಾರು ? ನನ್ನ ರೂಪವೈವಿಧ್ಯವನ್ನೆಲ್ಲಾ ಪೂರ್ಣವಾಗಿ ಅರಿತಿರುವ ದೇವನಾರು ? ಎಲೈ ಮಿತ್ರಾವರುಣರೇ, ದೇವತೆಗಳಿಗೆ ಹವಿಸ್ಸನ್ನು ವಹಿಸಲು ಸಾಧನವಾದವೂ, ದೀಪ್ತಿಯುತವಾದುವೂ ಆದ ನನ್ನ ಸ್ವರೂಪಗಳನ್ನು ನಿಮ್ಮಲ್ಲಿ ತಿಳಿದಿರುವನೊಬ್ಬನು ಇದ್ದ ಪಕ್ಷದಲ್ಲಿ ಅವೆಲ್ಲವೂ ಎಲ್ಲಿ ಅಡಗಿಕೊಂಡಿವೆ ಎಂಬುದನ್ನು ತಿಳಿಸುವಿರಾ ?

**ದೇವತೆಗಳು**—ಎಲೈ ಅಗ್ನಿಯೇ, ನಾನಾರೂಪಗಳನ್ನು ಧರಿಸಿ ನೀರಿನಲ್ಲಿಯೂ, ಓಷಧಿಗಳಲ್ಲಿಯೂ ಅಂತರ್ಗತನಾದ ನಿನ್ನನ್ನು ಪಡೆಯಲು ನಾವು ನಿನ್ನನ್ನು ಹುಡುಕಿದೆವು. ಆಗ ಯಮನು ಮಾತ್ರ ಪೃಥಿವ್ಯಾದಿ ಹತ್ತುಸ್ಥಾನಗಳಲ್ಲೂ ಅಡಗಿಕೊಂಡಿರುವ ನಿನ್ನ ಮಹಾಜ್ವಾಲೆಗಳನ್ನು ಕಂಡುಕೊಂಡನು.

**ಅಗ್ನಿ**—ಎಲೈ ವರುಣನೇ, ದೇವತೆಗಳು ನನಗೆ ಎಲ್ಲಿ ಹವಿರ್ವಹನಕರ್ಮವನ್ನು ಪುನಃ ಎಲ್ಲಿ ವಹಿಸುವರೋ ಎಂಬ ಭಯದಿಂದ ನಾನು ಇಲ್ಲಿಗೆ ಬಂದು ಮರೆಯಾಗಿದ್ದೇನೆ. ಆದುದರಿಂದಲೇ, ನಾನು ಬೇರೆಬೇರೆ ರೂಪಗಳಿಂದ ಉದಾಕಾಂತರ್ಗತನಾಗಿ ಮರೆಯಾಗಿದ್ದೇನೆ. ಪುನಃ ಆ ಕಾರ್ಯದ ಭಾರವನ್ನು ವಹಿಸಲು ನನಗಿಷ್ಟವಿಲ್ಲ ಎಂಬುದನ್ನು ಮಾತ್ರ ಹೇಳಬಲ್ಲೆ.

**ದೇವತೆಗಳು**—ಎಲೈ ಅಗ್ನಿಯೇ, ಭಕ್ತನಾದ ಮನುವು ನಿನಗೆ ಪೂಜೆಯನ್ನರ್ಪಿಸಿ ಯಜ್ಞವನ್ನು ನಿರ್ವಹಿಸಬೇಕೆಂದು ಕಾದಿದ್ದಾನೆ. ನೀನು ನಿನ್ನನ್ನಲಂಕರಿಸಿಕೊಂಡು ಉದಾಕಾಂತರ್ಗತನಾಗಿದ್ದಿಯೇ. ದೇವತೆಗಳು ಸಂಚರಿಸತಕ್ಕ ಮಾರ್ಗಗಳನ್ನು ಸುರಕ್ಷಿತಗಳನ್ನಾಗಿ ಮಾಡು ಮತ್ತು ಅರ್ಪಿತವಾದ ಹವಿಸ್ಸುಗಳನ್ನು ದೇವತೆಗಳಿಗೆ ತೆಗೆದುಕೊಂಡುಹೋಗು.

**ಅಗ್ನಿ**—ಎಲೈ ವರುಣನೇ, ಇದೇ ಹವಿರ್ವಹನಕರ್ತವ್ಯವನ್ನು ನನ್ನ ಹಿರಿಯ ಸಹೋದರರು ನೆರವೇರಿಸಲು ಒಪ್ಪಿಕೊಂಡರು. ಆದರೆ, ಆ ಕರ್ತವ್ಯನಿರ್ವಣಕಾಲದಲ್ಲಿ ಅವರು ಮೃತಿಗೊಂಡರು. ಆ ಕಾರಣದಿಂದಲೇ ನಾನು ಬೆದರಿ ಇಲ್ಲಿಗೆ ಓಡಿಬಂದೆನು. ಧನ್ವಿಯು ಬಿಲ್ಲುಬಾಣಗಳನ್ನು ನೋಡಿದೊಡನೆಯೇ ಗೌರಮೃಗವು ಬೆದರಿ ಓಡುವಂತೆ ನಾನೂ ನಡಗುತ್ತಾ ಓಡಿಬಂದೆನು. (ಈ ಸಂದರ್ಭವನ್ನು ಹಿಂದೆ ತಿಳಿಸಿದೆ).

**ದೇವತೆಗಳು**—ಎಲೈ ಅಗ್ನಿಯೇ, ನೀನು ಆ ಭೀತಿಯನ್ನಿಡಬೇಕಾಗಿಲ್ಲ. ನಿನಗೆ ಕ್ಷಯರಹಿತವಾದ ಆಯುಸ್ಸನ್ನು ನಾವು ಕೊಡುತ್ತೇವೆ. ಅದರ ಸಹಾಯದಿಂದ ನೀನು ಮೃತ್ಯುವನ್ನು ತಪ್ಪಿಸಿಕೊಳ್ಳಬಹುದು. ಶ್ರೇಷ್ಠನಾದ ಉತ್ಪನ್ನವುಳ್ಳ ಎಲೈ ಅಗ್ನಿಯೇ, ನೀನು ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿ ದೇವತೆಗಳ ಹವಿಸ್ಸನ್ನು ಒಯ್ದು ಅವರಿಗೆ ಅದನ್ನು ಹಂಚುವ ಭಾರವನ್ನು ಪುನಃ ವಹಿಸು.

**ಅಗ್ನಿ**—ಎಲೈ ದೇವತೆಗಳೇ, ವೀರ್ಯವತ್ತಾದ, ಪ್ರಯಾಜ ಮತ್ತು ಅನುಯಾಜರೂಪಗಳಾದ ಹವಿಸ್ಸುಗಳನ್ನು ನನಗಾಗಿಯೇ ಪ್ರತ್ಯೇಕವಾಗಿ ಉದ್ದೇಶಿಸಿ ಇಟ್ಟುಬಿಡಿ. ಉದಕಗಳ ಸಾರವನ್ನೂ (ಘೃತ) ಓಷಧಿಗಳ ಸಾರವನ್ನೂ ನನಗೆ ಅರ್ಪಿಸಿರಿ. ಅಗ್ನಿರೂಪನಾದ ನನ್ನ ಆಯುಸ್ಸು ದೀರ್ಘಕಾಲವಿರುವಂತಾಗಲಿ.

**ದೇವತೆಗಳು**—ಎಲೈ ಅಗ್ನಿಯೇ, ಪ್ರಯಾಜಾನುಯಾಜರೂಪವಾದ ಹವಿಸ್ಸುಗಳನ್ನು ಪ್ರತ್ಯೇಕವಾಗಿ ನಿನ್ನನ್ನುದ್ದೇಶಿಸಿಯೇ ಇಡುತ್ತೇವೆ. ಹವಿಸ್ಸುಗಳಲ್ಲಿ ವೀರ್ಯವತ್ತಾದ ಭಾಗಗಳೆಲ್ಲವೂ ನಿನ್ನದಾಗಿಯೇ ಇರಲಿ. ಎಲೈ ಅಗ್ನಿಯೇ, ಈ ಯಜ್ಞವೂ ನಿನಗೇ ಅರ್ಪಿತವಾಗಲಿ. ನಾಲ್ಕುದಿಕ್ಕುಗಳೂ ನಮ್ರತೆಯಿಂದ ನಿನ್ನ ಮುಂದೆ ತಲೆಬಾಗಿ ನಿನಗೆ ನಮಸ್ಕಾರ ಮಾಡಲಿ ಎಂಬುದಾಗಿ ೧೦-೫೧ ನೇ ಸೂಕ್ತದ ಸಂಭಾಷಣೆಯ ವಿವರಣೆಯಾಗಿರುತ್ತದೆ. ಇದಾದನಂತರವೇ ಮುಂದಿನ ಸೂಕ್ತದಲ್ಲಿ ಅಗ್ನಿಯು ತಾನೇ ಯಜ್ಞಕ್ಕೆಲ್ಲಾ ಪ್ರಭುವೆಂದು ಪ್ರಕಟಿಸಿಕೊಳ್ಳುತ್ತನೆ. ಅಲ್ಲದೇ, ದೇವತೆಗಳಿಗೆ ತನ್ನ ಸಹಕಾರವನ್ನು ನೀಡುವುದಾಗಿಯೂ ತಕ್ಕ ಭರವಸೆಯನ್ನು ಕೊಡುತ್ತಾನೆ. ತಾನು ಯಾವರೀತಿ ಅವರಿಗೆ ಸಹಾಯ ಮಾಡಬಹುದೆಂದೂ ತಿಳಿಸಬೇಕಾಗಿ ಕೇಳಿಕೊಳ್ಳುತ್ತಾನೆ.

ಸೌಚೀಕೋಗ್ನಿಯ ವಿಷಯವಿರುವ ೫೧, ೫೨, ೫೩ ನೆಯ ಸೂಕ್ತಗಳ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಬೃಹದ್ದೇವತಾ ಎಂಬ ಗ್ರಂಥದ ಏಳನೆಯ ಅಧ್ಯಾಯದಲ್ಲಿ ಈರೀತಿ ಹೇಳಿರುತ್ತಾರೆ—

**ವೈಶ್ವಾನರೇ ಗೃಹಪತೌ ಯವಿಷ್ಠೇಽಗ್ನೌ ಚ ಪಾವಕೇ ।**
**ವಷಟ್ಕಾರೇಣ ವೃಕ್ಣೇಷು ಭ್ರಾತೃಷ್ವಗ್ನೌ ಸಹಃಸುತೇ॥ ೬೧ ॥**
**ಅಪಚಕ್ರಾಮ ದೇವೇಭ್ಯಃ ಸೌಚೀಕೋಽಗ್ನಿರಿತಿ ಶ್ರುತಿಃ ।**

ವೈಶ್ವಾನರ, ಗೃಹಪತಿ, ಪಾವಕ ಮೊದಲಾದ ಹೆಸರುಗಳಿಂದ ಪ್ರಸಿದ್ಧನಾದ ಅಗ್ನಿಗೆ ಮೂರುಮಂದಿ ಸಹೋದರರಿದ್ದರು. ಭೂಪತಿ, ಭುವನಪತಿ, ಭೂತಾನಾಂ ಪತಿ ಎಂದು ಅವರ ಹೆಸರು. ಈ ಸಹೋದರರಲ್ಲಿ ಅಗ್ನಿಯೇ ಕಿರಿಯವನು. ಪೂರ್ವದಲ್ಲಿ ಅಗ್ನಿಯ ಮೂರುಮಂದಿ ಹಿರಿಯ ಸಹೋದರರು ಯಜ್ಞಾದಿಗಳಲ್ಲಿ ಯಜಮಾನರು ವಷಟ್ಕಾರಪೂರ್ವಕವಾಗಿ ದೇವತೆಗಳಿಗೆ ಅರ್ಪಿಸುವ ಆಹುತಿಗಳನ್ನು ಒಯ್ದು ಅವರಿಗೆ ತಲಪಿಸುತ್ತಿದ್ದರು. **ವಜ್ರೋ ವೈ ವಷಟ್ಕಾರಃ । ವಜ್ರ ಮೇವಭ್ರಾತೃವ್ಯೇಭ್ಯಃ ಪ್ರಹರತಿ ।** ಎಂಬ ಶ್ರುತಿವಾಕ್ಯದಂತೆ ವಷಟ್ಕಾರಾಹುತಿಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾದರೂ ಅದು ವಜ್ರಾಯುಧದಂತೆ ಮಂತ್ರವನ್ನು ಉಚ್ಚರಿಸುವವರನ್ನೂ, ಹವಿಸ್ಸನ್ನು ಒಯ್ಯುವವರನ್ನೂ ಪ್ರಹರಿಸುವುದು. ಆದುರಿಂದ ವಷಟ್ಕಾರಾಹುತಿಗಳನ್ನು ದೇವತೆಗಳ ಬಳಿಗೆ ಒಯ್ಯುತ್ತಿದ್ದ ಅಗ್ನಿಯ ಹಿರಿಯ ಸಹೋದರರು ವಷಟ್ಕಾರಪ್ರಹಾರದಿಂದ ಮೃತಿಯನ್ನೈದಿದರು. ಇದನ್ನು ಕಂಡ ಕಿರಿಯವನಾದ ಸೌಚೀಕೋಗ್ನಿಯು ತನಗೂ ಅದೇ ಗತಿಯೊದಗುವುದೆಂದು ಹೆದರಿ ದೇವತೆಗಳ ಬಳಿಯಿಂದ ದೂರ ಓಡಿಹೋದನು. ಈ ವಿಷಯವು ಶ್ರುತಿವಾಕ್ಯಗಳಲ್ಲಿಯೇ ಹೇಳಿರುವುದು.

**ಸಪ್ರಾವಿಶದಪಕ್ರಮ್ಯ ಋತೂನಪೋ ವನಸ್ಪತೀನ್ ॥೬೨॥**
**ತತೋಽಸುರಾಃ ಪ್ರಾದುರಾಸನ್ನಷ್ಟೇಽಗ್ನೌ ಹವ್ಯವಾಹನೇ ।**
**ತೇಽಗ್ನಿಮೇವಾನ್ವವೈಕ್ಷಂತ ದೇವಾ ಹತ್ವಾಸುರಾನ್ಮೃಧಿ ॥೬೩॥**
**ತಂ ತು ದೂರಾದ್ಯಮುಶ್ಚೈವ ವರುಣಶ್ಚಾನ್ವಪಶ್ಯತಾಂ।**
**ಉಭಾವೇನಂ ಸಮಾದಾಯ ದೇವಾನೇವಾಭಿಜಗ್ಮತುಃ ॥೬೪॥**

ಅಗ್ನಿಯು ದೇವತೆಗಳನ್ನು ಬಿಟ್ಟು ಓಡಿಹೋಗಿ ಋತುಗಳು, ವೃಕ್ಷಗಳು ಮತ್ತು ನೀರು ಇವುಗಳಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅಡಗಿಕೊಂಡಿದ್ದನು. ಅಗ್ನಿಯು ಹೊರಟುಹೋದಬಳಿಕ ದೇವತೆಗಳಿಗೂ ಅಸುರರಿಗೂ ಯುದ್ಧವು ಪ್ರಾಪ್ತವಾಗಿ ದೇವತೆಗಳು ಅಸುರರನ್ನು ಯುದ್ಧದಲ್ಲಿ ಕೊಂದು ಜಯಶಾಲಿಗಳಾದರು. ಅನಂತರ ತಮ್ಮಬಳಿಗೆ ಹವಿರಾದಿಗಳನ್ನು ಒಯ್ಯುತ್ತಿದ್ದ ಅಗ್ನಿಯನ್ನು ಕಾಣದೆ ಎಲ್ಲಾಸ್ಥಳಗಳಲ್ಲಿ ಹುಡುಕುತ್ತಿದ್ದರು. ಆಗ ದೇವತೆಗಳ ಮಧ್ಯದಲ್ಲಿದ್ದ ಯಮ ಮತು ವರುಣರು ಅಗ್ನಿಯಿರುವ ಸ್ಥಳವನ್ನು ಕಂಡು ಅವನನ್ನು ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ದೇವತೆಗಳ ಬಳಿಗೆ ಹೋದರು.

**ದೃಷ್ಟ್ವಾ ದೇವಾಸ್ತ್ವೇನಮೂಚುರಗ್ನೇ ಹವ್ಯಾನಿ ನೋ ವಹ |**
**ವರಾನ್ ಗೃಹಾಣ ಚಾಸ್ಮತ್ತಶ್ಚಿತ್ರಭಾನೋ ಭಜಸ್ವ ನಃ |**
**ದೇವಯಾನಾನ್ ಸುಗಾನ್ ಪಥಃ ಕುರುಷ್ವ ಸುಮನಾಃ ಸ್ವಯಂ ||೬೫||**
**ಪ್ರತ್ಯುವಾಚ ತಾನಗ್ನಿರ್ವಿಶ್ವೇ ದೇವ ಯದೂಚ ಮಾಂ |**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚ ಜನಾ ಮಮ ||೬೬||**

ಅಗ್ನಿಯು ತಮ್ಮ ಬಳಿಗೆ ಬಂದುದನ್ನು ದೇವತೆಗಳು ಕಂಡು—ಎಲೈ ಅಗ್ನಿಯೇ, ನೀನು ಚಿತ್ರವಿಚಿತ್ರವಾದ ಕಾಂತಿಯಿಂದ ಬೆಳಗುವವನು. ಇನ್ನುಮೇಲೆ ನೀನು ನಮಗೆ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ತಂದೊಯ್ಯಬೇಕು. ನಿನಗೆ ಬೇಕಾದ ವರಗಳನ್ನು ಕೇಳಿಕೊ, ಕೊಡುವೆವು ಎನಲು, ಅಗ್ನಿಯು—ಎಲೈ ದೇವತೆಗಳೇ, ನೀವು ಹೇಳುವಂತೆಯೇ ಮಾಡುತ್ತೇನೆ. ಆದರೆ ಪಂಚಜನರು ನನ್ನ ಹೋತೃತ್ವವನ್ನು ಎಂದರೆ (ಪುರೋಹಿತತ್ವವನ್ನು) ಅಂಗೀಕರಿಸಿ ನನಗೆ ಸಹಾಯಕರಾಗಬೇಕು ಎಂದನು.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ |**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚ ಜನಾಃ ಸ್ಮೃತಾಃ ||೬೭||**

ಇಲ್ಲಿ ಪಂಚಜನರು ಯಾರು ಎಂಬ ವಿಷಯದಲ್ಲಿ ವಿವರಣೆಯು ಅವಶ್ಯಕವಾದ್ದರಿಂದ ಅದನ್ನು ಹೇಳುವರು. ಈ ವಿಷಯದಲ್ಲಿ ಅಭಿಪ್ರಾಯಭೇದಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲಾಗುವುದು. ಸ್ಥಾನಭೇದಗಳಿಂದ ಅಗ್ನಿಯು ಐದುವಿಧವೆಂದು ಪ್ರತೀತಿ ಇರುವುದು. (೧) ಯಾಗಶಾಲೆಯ ದ್ವಾರಸಮೀಪದಲ್ಲಿ ಸ್ಥಾಪಿತವಾಗಿರುವ ಅಗ್ನಿ; (೨) ಅಗ್ನಿಮಥನಸ್ಥಾನದಿಂದ ಉತ್ತರ ವೇದಿಯ ಬಳಿಗೆ ವಿಧ್ಯುಕ್ತವಾಗಿಯೂ, ಮಂತ್ರಪೂರ್ವಕವಾಗಿಯೂ ಕರೆತರಲ್ಪಡುವ ಯಜ್ಞವೇದಿಯಲ್ಲಿ ಪ್ರತಿಷ್ಠಾಪಿತನಾಗುವ ಅಗ್ನಿ, (೩) ಯಜಮಾನರಗೃಹ ಅಥವಾ ಯಜ್ಞಗೃಹದಲ್ಲಿ ಸ್ಥಾಪಿತವಾಗಿರುವ ಗೃಹಪತಿ (ಗೃಹಕ್ಕೆ ಪಾಲಕನು) ಎಂಬ ಅಗ್ನಿ ; (೪) ಉತ್ತರವೇದಿಯಲ್ಲಿರುವ ಆಹವನೀಯಾಗ್ನಿ ; (೫) ದಕ್ಷಿಣಾಗ್ನಿ ಎಂಬ ಅಗ್ನಿ. ಈ ಐದು ವಿಧವಾದ ಅಗ್ನಿಗಳನ್ನೇ ಪಂಚಜನರೆಂದು ಕೆಲವರು ಹೇಳುವರು.

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ |**
**ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ||೬೮||**
**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್|**

ಮನುಷ್ಯರು, ಪಿತೃಗಳು, ದೇವತೆಗಳು ಗಂಧರ್ವರು, ಸರ್ಪಗಳು, ರಾಕ್ಷಸರು—ಅಥವಾ ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ಯಕ್ಷರಾಕ್ಷಸರು ಎಂಬ ಐದು ವಿಧ ಸಂಗಡಗಳೇ ಪಂಚಜನರು ಎಂದು ಯಾಸ್ಕ ಮತ್ತು ಔಪಮನ್ಯವ ಎಂಬ ಆಚಾರ್ಯರ ಮತವು.

ನಿಷಾದಪಂಚಮಾನ್ ವರ್ಣಾನ್ಮನ್ಯಂತೇ ಶಾಕಟಾಯನಃ ॥ ೭೯ ॥
ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।
ಹೋತಾಧ್ವರ್ಯುರ್ಸ್ತಥೋದ್ಗಾತಾ ಬ್ರಹ್ಮಾ ಚೇತಿ ವದಂತಿ ತಾನ್ ॥ ೭೦ ॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ (ಬೇಡರು) ಎಂಬ ಐದು ಜಾತಿಯ ಜನರಿಗೆ ಪಂಚಜನರೆಂದು ಹೆಸರು ಎಂದು ಶಾಕಟಾಯನ ಎಂಬ ಆಚಾರ್ಯರ ಮತವು. ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮಾ, ಯಜಮಾನ ಎಂಬ ಯಜಮಾನ ಸಹಿತರಾದ ನಾಲ್ಕುಮಂದಿ ಋತ್ವಿಕ್ಕುಗಳೇ ಪಂಚಜನರೆಂದು ಶಾಕಪೂಣಿ ಎಂಬುವರ ಮತವು.

ಚಕ್ಷುಃ ಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।
ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥ ೭೧ ॥
ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ।
ಯೇ ಚಾನ್ಯೇ ಪೃಥಿವೀಜಾತಾ ದೇವಾಶ್ಚಾನ್ಯೇಽಥ ಯಜ್ಞಿಯಾಃ ॥ ೭೨ ॥

ಚಕ್ಷುಃ (ಕಣ್ಣು) ಶ್ರೋತ್ರಂ (ಕಿವಿ) ಮನಸ್ಸು, ವಾಕ್ (ಮಾತು) ಪ್ರಾಣ ಎಂಬ ಈ ಐದೂ ಪಂಚಜನರೆಂದು ಆತ್ಮವಾದಿಗಳು ಎಂದರೆ ವೇದಾಂತಿಗಳು ಹೇಳುವರು ; ಗಂಧರ್ವರು ಮತ್ತು ಅಪ್ಸರಸ್ಸುಗಳು, ದೇವತೆಗಳು, ಮನುಷ್ಯರು, ಪಿತೃಗಳು, ಸರ್ಪಗಳು ಎಂಬ ಈ ಐದು ಜಾತಿಗಳೂ ಪಂಚಜನರೆಂದು ಪ್ರಸಿದ್ಧಿಯು ಎಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುವುದು. ಇದಲ್ಲದೆ ಭೂಮಿಯಮೇಲೆ ಉತ್ಪನ್ನರಾಗಿರುವ ಯಜ್ಞಾರ್ಹರಾದ ಯಾವ ಐದು ಪಂಗಡದ ಜನರಾಗಲೀ ಅಥವಾ ಮೇಲೆ ಹೇಳಿದ ಪಟ್ಟಿಯಲ್ಲಿಲ್ಲದ ಇತರ ದೇವತೆಗಳಾಗಲಿ ಪಂಚಜನರೆಂದು ಪರಿಗಣಿಸಲ್ಪಡಬಹುದು.

ಆಯುರಸ್ತು ಚ ಮೇ ದೀರ್ಘಂ ಹವೀಂಷಿ ವಿವಿಧಾನಿ ಚ।
ಅರಿಷ್ಟಿಃ ಪೂರ್ವಜಾನಾಂ ಚ ಭ್ರಾತೃಣಾಮಧ್ವರೇಽಧ್ವರೇ ॥೭೩॥
ಪ್ರಯಾಜಾಶ್ಚಾನುಯಾಜಾಶ್ಚ ಘೃತಂ ಸೋಮೇ ಚ ಯಃ ಪಶುಃ।
ಮದ್ದೈವತ್ಯಾನಿ ವೈ ಸಂತು ಯಜ್ಞೋ ಮದ್ದೇವತೋಽಸ್ತು ಚ ॥೭೪॥

ಅಗ್ನಿಯು ತನಗೆ ಬೇಕಾದ ವರಗಳನ್ನು ಕೇಳುತ್ತಾ ಈರೀತಿ ಮುಂದುವರೆದು ಹೇಳಿದನು–ನಾನು ಬಹಳಕಾಲ ಜೀವಿಸುವಂತಾಗಲಿ ಎಂದರೆ ದೀರ್ಘಾಯುಸ್ಸು ಲಭಿಸಲಿ ಮತ್ತು ನನಗೆ ನಾನಾವಿಧ ಹವಿಸ್ಸುಗಳು ಅರ್ಪಿಸಲ್ಪಡಬೇಕು. ನನ್ನ ಜ್ಯೇಷ್ಠ ಸಹೋದರರಿಗೆ ಅಪಾಯ ಸಂಭವಿಸದಂತೆ ಎಲ್ಲಾ ಯಜ್ಞಗಳಲ್ಲಿಯೂ ರಕ್ಷಣೆಯು ದೊರಕಬೇಕು. ಆಹುತಿಗಳನ್ನರ್ಪಿಸುವಾಗ ನನಗೆ ಮೊದಲು ಅರ್ಪಿತವಾಗುವ ಪ್ರಯಾಜಾಹುತಿಗಳೂ, ಕೊನೆಯಲ್ಲಿ ಅರ್ಪಿತವಾಗುವ ಅನೂಯಾಜಾಹುತಿಗಳೂ, ಘೃತವೂ (ಆಜ್ಯ ಅಥವಾ ತುಪ್ಪ) ಸೋಮಯಾಗದಲ್ಲಿ ಅರ್ಪಿತವಾಗುವ ಪಶುವೂ ಇವೆಲ್ಲವೂ ನನಗೇ ಸೇರಬೇಕು ಮತ್ತು ಇವುಗಳಿಗೆಲ್ಲಾ ನಾನೇ ದೇವತೆಯಾಗಿರಬೇಕು. ಯಜ್ಞದಲ್ಲಿಯೂ ಸಹ ನಾನೇ ದೇವತೆಯಾಗಿ ನನ್ನ ಪ್ರಭಾವವೇ ಹೆಚ್ಚಾಗಿರಬೇಕು ಎಂದು ತನಗೆ ಬೇಕಾದ ವರಗಳನ್ನು ಕೇಳಿದನು.

ತವಾಗ್ನೇ ಯಜ್ಞ ಇತ್ಯೇತತ್ಪ್ರತ್ಯಾರ್ಥಿ ಸ್ವಿಷ್ಟಕೃಚ್ಚ ಸಃ ।
ಯಸ್ಯ ತ್ರೀಣಿ ಸಹಸ್ರಾಣಿ ನವ ತ್ರೀಣಿ ಶತಾನಿ ಚ ॥೭೫॥
ತ್ರಿಂಶಚ್ಚೈವ ತು ದೇವಾನಾಂ ಸರ್ವಾನೇವ ವರಾನ್ದದುಃ ।

ಹಾಗೆಯೇ ಆಗಲೆಂದು ದೇವತೆಗಳು ಒಪ್ಪಿದರು. ಎಲೈ ಅಗ್ನಿಯೇ, ಈ ಯಜ್ಞವು ನಿನಗೆ ಸೇರಲಿ ಎಂದರೆ ನೀನೇ ಅದರಲ್ಲಿ ಪ್ರಧಾನಪಾತ್ರವನ್ನು ವಹಿಸಿ ಅದನ್ನು ಸಾಂಗವಾಗಿ ನೆರವೇರಿಸು ಎಂದು ಮೂರುಸಾವಿರದ ಮುನ್ನೂರ ಮೂವತ್ತೊಂಭತ್ತು ಮಂದಿ ದೇವತೆಗಳೆಲ್ಲಸೂ ಸೇರಿ ಅಗ್ನಿಗೆ ವರವನ್ನು ಕೊಟ್ಟರು.

**ತತೋಽಗ್ನಿಃ ಸುಮನಾಃ ಪೀತೋ ವಿಶ್ವೈರ್ದೇವೈಃ ಪುರಸ್ಕೃತಃ ||೭೬||**
**ವಿಧೂಯಾಂಗಾನಿ ಯಜ್ಞೇಷು ಚಕ್ರೇ ಹೋತ್ರಮತಂದ್ರಿತಃ |**
**ಭ್ರಾತೃಭಿಃ ಸಹಿತಃ ಪ್ರೀತೋ ದಿವ್ಯಾತ್ಮಾ ಹವ್ಯವಾಹನಃ ||೭೭||**

ಅನಂತರ ಸಮಸ್ತ ದೇವತೆಗಳಿಂದಲೂ ಗೌರವಿಸಲ್ಪಟ್ಟ ಆ ಅಗ್ನಿಯು ಮನಸಿನಲ್ಲಿ ಸಮಾಧಾನವನ್ನು ಹೊಂದಿ ಸಂತುಷ್ಟನಾದನು. ಯಾವ ಆತಂಕಗಳೂ ಇಲ್ಲದೆ ಪ್ರೀತಮನಸ್ಕನಾಗಿಯೂ ಇರುವ ಆ ಅಗ್ನಿಯು ತನ್ನ ಸಹೋದರರೊಡನೆ ಸಂತೋಷಬಿಂದಿರುತ್ತಾ ಯಜ್ಞಗಳ ಸಮಸ್ತ ಕರ್ಮಾಂಗಗಳಲ್ಲಿಯೂ ಹೋತೃತ್ವವನ್ನು ಎಂದರೆ ಯಜ್ಞನಿರ್ವಹಣೆಯನ್ನು ವಹಿಸುತ್ತಿದ್ದನು.

**ತಸ್ಯಾಸ್ಥಿ ದೇವದಾರ್ವಾಸೀನ್ಮೇದೋ ಮಾಂಸಂ ಚ ಗುಗ್ಗುಲುಃ |**
**ಸುಗಂಧಿತೇಜನಂ ಸ್ನಾಯು ಶುಕ್ರಂ ರಜತಕಾಂಚನೇ ||೭೮||**
**ರೋಮಾಣಿ ಕಾಶಾಃ ಕೇಶಾಸ್ತು ಕುಶಾಃ ಕೂರ್ಮಾ ನಖಾನಿ ಚ |**
**ಅಂತ್ರಾಣಿ ಚೈವಾಪ್ಯವಕಾ ಮಜ್ಜಾ ಸಿಕತಶರ್ಕರಾಃ ||೭೯||**
**ಅಸೃಕ್ ಪಿತ್ತಂ ಚ ವಿವಿಧಾ ಧಾತವೋ ಗೈರಿಕಾದಯಃ |**
**ಏವಮಗ್ನಿಶ್ಚ ದೇವಾಶ್ಚ ಸೂಕ್ತೈರ್ಮಹದಿತಿ ತ್ರಿಭಿಃ ||೮೦||**

ಯಜ್ಞಕರ್ಮನಿರ್ವಾಹಕನಾದ ಅಗ್ನಿಯ ಅಸ್ಥಿಯು (ಮೂಳೆಯು) ದೇವದಾರು ವೃಕ್ಷವಾಯಿತು. ಅವನ ಕೊಬ್ಬು (ಮೇದಸ್ಸು) ಮತ್ತು ಮಾಂಸವು ಗುಗ್ಗುಲುವಾಗಿ (ಸುಗಂಧದ್ರವ್ಯವಾಗಿ) ಪರಿವರ್ತಿತವಾಯಿತು. ಅವನ ಸ್ನಾಯುಗಳು (ನರಗಳು) ಸುಗಂಧಯುಕ್ತವಾದ ತೇಜನವೆಂಬ ದರ್ಭೆಗಳಾದವು. ಅವನ ರೇತಸ್ಸು ಬೆಳ್ಳಿ ಮತ್ತು ಚಿನ್ನವಾಯಿತು,ರೋಮಗಳು (ಕೂದಲುಗಳು) ಕಾಶವೆಂಬ ಹುಲ್ಲಾಯಿತು. ಶಿರಸ್ಸಿನ ಕೇಶಗಳು ಕುಶವೆಂಬ ದರ್ಭೆಯಾಯಿತು ; ಉಗುರುಗಳು ಆಮೆಗಳಾದವು, ಕರಳುಗಳು (entrails) ಅವಕ ಎಂಬ ಬಳ್ಳಿಗಳಾದವು. ಕೊಬ್ಬು, ಮರಳು ಮತ್ತು ಮಣ್ಣಾಯಿತು, ರಕ್ತ ಮತ್ತು ಪಿತ್ತವು ನಾನಾವಿಧ ಗೈರಿಕಾದಿಧಾತುಗಳೂ ಆದವು. ಈರೀಯಾಗಿ ದೇವತೆಗಳೂ ಅಗ್ನಿಯೂ ಸೇರಿ ನಡೆಸಿದ ಸಂಭಾಷಣೆಯು ಮಹತ್ತತ್ ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೫೧–೫೩ ನೇಸೂಕ್ತಗಳಲ್ಲಿ) ವಿವೃತವಾಗಿದೆ.

ಋಬೀಸಮೃಬೀಸಮ್ ||೧೩೨||

ಋಬೀಸಮಪಗತಭಾಸಮಪಹೃತಭಾಸಮನ್ತರ್ಹಿತಭಾಸಂ ಗತ–
ಭಾಸಂ ವಾ ||

**ಋಬೀಸಂ—ಅಪಗತಭಾಸಂ** ಕಾಂತಿಯ ಅಥವಾ ಬೆಳಕು ಹೋಗಿರುವುದು, ಪ್ರಕಾಶವಿಲ್ಲದಿರುವುದು ಎಂದರ್ಥವು. ಇದರ ಉದಾಹರಣೆಯನ್ನು ಮುಂದಿನ ಋಕ್ಕಿನಲ್ಲಿ ವಿವರಿಸಲಾಗಿದೆ—

**ಇತಿ ಪಂಚತ್ರಿಂಶಃ ಖಂಡಃ**

ಇಲ್ಲಿಗೆ ಮೂವತ್ತೈದನೆಯ ಖಂಡವು ಸಮಾಪ್ತವು

———

## ಅಥ ಷಟ್ತ್ರಿಂಶಃ ಖಂಡಃ

**ಮೂವತ್ತಾರನೆಯ ಖಂಡವು**

ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜ-ಮಸ್ಮಾ ಅಧತ್ತಂ। ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥ ಹಿಮೇನೋದಕೇನ ಗ್ರೀಷ್ಮಾಂತೇಽಗ್ನಿಂ ಘ್ರಂಸ-ಮಹರವಾರಯೇಥಾಮನ್ನವತೀಂ ಚಾಸ್ಮಾ ಊರ್ಜಮಧತ್ತಮಗ್ನಯೇ ಯೋಽಯಮೃಬೀಸೇ ಪೃಥಿವ್ಯಾಮಗ್ನಿರನ್ತರೌಷಧಿವನಸ್ಪತಿಷ್ವಪ್ಸು ತಮು-ನ್ನಿನ್ಯಥುಃ ಸರ್ವಗಣಂ ಸರ್ವನಾಮಾನಂ ಗಣೋ ಗಣನಾದ್ಗುಣಶ್ಚ ಯದ್ವೃಷ್ಟ ಓಷಧಯ ಉದ್ಯನ್ತಿ ಪ್ರಾಣಿನಶ್ಚ ಪೃಥಿವ್ಯಾಂ ತದಶ್ವಿನೋ ರೂಪಂ ತೇನೈತೌ ಸ್ತೌತಿ ಸ್ತೌತಿ ॥ ೩೬ ॥

———

" ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಮ್ । ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ । " ಹಿಮೇನೋದಕೇನ ಗ್ರೀಷ್ಮಾನ್ತೇಽಗ್ನಿಂ ಘ್ರಂಸಮಹರವಾರಯೇಥಾಮನ್ನವತೀಂ ಚಾಸ್ಮಾ ಊರ್ಜಮಧ-ತ್ತಮಗ್ನಯೇ ಯೋಽಯಮೃಬೀಸೇ ಪೃಥಿವ್ಯಾಮಗ್ನಿರನ್ತರೌಷಧಿ-ವನಸ್ಪತಿಷ್ವಪ್ಸು ತಮುನ್ನಿನ್ಯಥುಃ ಸರ್ವಗಣಂ ಸರ್ವನಾಮಾನಮ್ ॥ ಗಣೋ ಗಣನಾದ್ಗುಣಶ್ಚ ॥ ಯದ್ವೃಷ್ಟ ಓಷಧಯ ಉದ್ಯನ್ತಿ ಪ್ರಾಣಿನಶ್ಚ ಪೃಥಿವ್ಯಾಂ ತದಶ್ವಿನೋ ರೂಪಂ ತೇನೈತೌ ಸ್ತೌತಿ ಸ್ತೌತಿ ॥ ॥೧॥೩೬॥

ಉದಾಹರಣೆಯ ಋಕ್ಕು—

**ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ**
**ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥**
(ಋ. ಸಂ. ೧-೧೧೬-೮)

ಇದರ ಅರ್ಥವು—

(ಅತ್ರಿಯ ಹಿಂಸೆಗಾಗಿ ಅಸುರರಿಂದ ಪ್ರೇರಿತವಾದ) ಪ್ರಜ್ವಲಿಸುತ್ತಿದ್ದ ಅಗ್ನಿಯನ್ನು ಹಿಮದಂತೆ ಶೀತಲವಾದ ಉದಕ ದಿಂದ ಆರಿಸಿ (ಅಸುರಪೀಡೆಯಿಂದಕೃಶನಾದ ಅತ್ರಿಗೆ) ಬಲಪ್ರದವಾದ ಕ್ಷೀರಾದಿಗಳನ್ನು ಕೊಟ್ಟು ಅಂಧಕಾರಾವೃತವಾದ (ಪೀಡಾಗೃಹದಲ್ಲಿ) ತಲೆಕೆಳಗಾಗಿ ಎಸೆಯಲ್ಪಟ್ಟಿದ್ದ ಅದನನ್ನು ಎತ್ತಿ. ಅವಿಕಲವಾದ ಸರ್ವಾಂಗಯುಕ್ತನನ್ನಾಗಿ (ಮನೆಗೆ) ಸೇರಿಸಿದಿರಿ.

**ಹಿಮೇನ—ಹಿಮವತ್ ಶೀತೇನ ಉದಕೇನ**-ಹಿಮದಂತೆ ತಣ್ಣಗಿರುವ ಉದಕದಿಂದ, **ಹಿಮೇನ ವೃಷ್ಟ್ಯುದಕೇನ** ಮಳೆಯನೀರಿನಿಂದ **ಘ್ರಂಸಂ—ದೀಪ್ಯಮಾನಂ** ಅಗ್ನಿಯಿಂದ ಉರಿಯುತ್ತಿರುವ ಘ್ರಂಸಂ—ಅಗ್ನಿವತ್ ತೀಕ್ಷ್ಣಮುಗ್ರಂ ನಿದಾಘಕಾಲೀನಂ ಅಹಃ—ಘ್ರಂಸ ಶಬ್ದವು ಹನ್ನೆರಡು ಅಹರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿರುವುದರಿಂದ ಇಲ್ಲಿ ಬೇಸಿಗೆಯಕಾಲದ ಹಗಲು ಎಂದು ಅರ್ಥವನ್ನು ಸಾಯಣರು ಹೇಳಿರುವರು. ಅಸುರರು ಅತ್ರಿಯೆಂಬ ಋಷಿಯನ್ನು ಹಿಡಿದು ಕೊಂಡು ಹೋಗಿ ತೊಂದರೆಯನ್ನುಂಟುಮಾಡುವುದಕ್ಕಾಗಿ ಬಹಳ ದ್ವಾರಗಳುಳ್ಳ ಅಪಾಯಕರವಾದ ಒಂದು ಮನೆಯಲ್ಲಿ ಕೆಳಮುಖನಾಗಿ ಮಲಗಿಸಿ ಅವನನ್ನು ತುಷಾಗ್ನಿಯಲ್ಲಿ (ಹೊಟ್ಟುಬೆರೆಸಿರುವ ಬೆಂಕಿಯಲ್ಲಿ) ಹಾಕಿದರು. ಇದರಿಂದ ಅತ್ರಿಋಷಿಯು (ಅವನ ಶರೀರವು ಬೆಂದು) ಬೆಂಕಿಯ ಪಾಪವನ್ನು ಸಹಿಸಲಾರದೆ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದಾಗ ಅವರು ಹಿಮದಂತೆ ತಣ್ಣಗಿರುವ ನೀರನ್ನು ಸುರಿಸಿ ಅತ್ರಿಋಷಿಯನ್ನು ರಕ್ಷಿಸಿದರು ಎಂದು ಇತಿಹಾಸವು ಈ ಋಕ್ಕಿನಲ್ಲಿರುವ ಈ ಶಬ್ದಗಳಿಂದ ಹೇಳಲ್ಪಟ್ಟಿದೆ. ಮತ್ತು ಸಾಮಾನ್ಯವಾಗಿ ಬೇಸಿಗೆಯಕಾಲದಲ್ಲಿ ಸೂರ್ಯನ ತಾಪದಿಂದ ಹಗಲು ಎಲ್ಲರಿಗೂ ಬೆಂಕಿಯ ಉರಿಯಂತೆ—(ತಾಪವನ್ನು) ಸಂಕಟವನ್ನು ಉಂಟುಮಾಡುತ್ತಿರುವಾಗ ಮಳೆಯನೀರು ಲೋಕಕ್ಕೆ ಬರುವಂತೆ ಮಾಡಿ ಈ ಅಶ್ವಿನೀದೇವತೆಗಳು ಎಲ್ಲರೂ ಸುಖವಾಗಿರುವಂತೆ ಮಾಡುವವರು ಎಂದು ಎರಡು ವಿಧವಾದ ಅರ್ಥವೂ ಇಲ್ಲಿ ಪ್ರತೀಯಮಾನ ವಾಗಿರುತ್ತದೆ. ಸಾಯಣರ ವ್ಯಾಖ್ಯಾನದಲ್ಲಿ ಅತ್ರಿಋಷಿಯ ಮತ್ತು ಅಗ್ನಿಯ ಪರವಾದ ಎರಡುವಿಧ ಅರ್ಥಗಳು ವಿವೃತ ವಾಗಿರುವುವು.

**ಹಿಮೇನ—ಹಿಮಂ ಪುನರ್ಹಂತೇರ್ವಾ ಹಿನೋತೇರ್ವಾ**—ಹನಧಾತುವಿನಿಂದ **ಅಜರಮರಣ ಧರ್ಮಾಣ-ಮನರ್ಥಮಪ್ರತ್ಯೃತಮನ್ಯಸ್ಮಿನ್ ಯತ್ರೇಮಾನಿ ಸರ್ವಾಣಿ ಭೂತಾನ್ಯಭಿಸಂತಿಷ್ಠಂತೇ ॥** (ನಿ. ೪-೨೭) ಹಿಮಶಬ್ದವು ಹನ-ಕೊಲ್ಲುವುದು ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು. ಹಿಮಕಾಲವು ಓಷಧಿ ವನಸ್ಪತಿಗಳನ್ನು ನಾಶಮಾಡುವುವ ರಿಂದ ಎಂದರೆ ಆ ಕಾಲದಲ್ಲಿ ವೃಕ್ಷಾದಿಗಳ ಎಲೆಗಳು ಉದುರಿಹೋಗಿ ಮೃತಪ್ರಾಯವಾಗುವುದರಿಂದ ಹಿಮಶಬ್ದವು ಕೊಲ್ಲುವುದು ನಾಶಮಾಡುವುದು ಎಂಬರ್ಥವನ್ನು ಸೂಚಿಸುವುದು. ಮತ್ತು ಈ ಶಬ್ದವು ಹಿನೋತೇರ್ವಾ ಎಂದರೆ ಯಾಸ್ಕರ ವಿವರಣೆಯ ಪ್ರಕಾರ ಅಭಿವೃದ್ಧಿಪಡಿಸು ಎಂಬರ್ಥವುಳ್ಳ ಹಿನೋತಿ ಧಾತುವಿನಿಂದ ನಿಷ್ಪನ್ನವಾಗಿರುವುದೆಂದೂ ಹೇಳಬಹುದು. ಏಕೆಂದರೆ ಈ ಹಿಮಕಾಲದಲ್ಲಿ ಯವಾದಿಧಾನ್ಯಗಳು ಬೆಳೆದು ವೃದ್ಧಿಗೊಳ್ಳುವುದರಿಂದ ಹಿಮಶಬ್ದಕ್ಕೆ ತರ್ಪಣಾರ್ಥವನ್ನು ಹೇಳಬಹುದೆಂದು ಯಾಸ್ಕರ ವಿವರಣೆ ಇರುವುದು. ಇಲ್ಲಿ ತಣ್ಣಗಿರುವ ನೀರು ಎಂಬರ್ಥವನ್ನು ಹೇಳಬಹುದು. ಇದರಂತೆಯೇ ಘ್ರಂಸ ಶಬ್ದವೂ ಅಹರ್ನಾಮಗಳಲ್ಲಿ ಪಠಿತವಾಗಿರುವುದು. (ನಿ. ೨-೨೦)

**ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ ಸೋಮಂ ಸುನೋತಿ ಭವತಿ ದ್ಯುಮಾ ಅಹ॥**
(ಋ. ಸಂ. ೫-೩೪-೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರಿಂದ ಉದಹರಿಸಲ್ಪಟ್ಟ **ಘ್ರಂಸ ಇತ್ಯಹರ್ನಾಮ । ಗ್ರಸ್ಯಂತೇ ಅಸ್ಮಿನ್ ರಸಾಃ**-(ನಿ. ೭-೧೯) ಘ್ರಂಸವೆಂಬ ಪದವು ಅಹಸ್ಸಿನ (ಹಗಲಿನ) ಹೆಸರು. ಉದಕಗಳು ಇದರಿಂದ ಶೋಷಿಸಲ್ಪಡುತ್ತವೆಯಾದಕಾರಣ ಹಗಲಿಗೆ ಘ್ರಂಸವೆಂದು ಹೆಸರು ಎಂದು ಅರ್ಥವು ವಿವೃತವಾಗಿರುವುದು ಮತ್ತು—

**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್ ॥**
(ಋ. ಸಂ. ೭-೬೮-೪)

ಈ ಋಕ್ಕಿನಲ್ಲಿಯೂ (ನಿ. ೬-೪) ಘ್ರಂಸ ಶಬ್ದವು ಅಹರ್ವಾಚಕವಾಗಿ ಪ್ರಯುಕ್ತವಾಗಿದೆ. ಮತ್ತೂ ನಿರುಕ್ತಕಾರರು ಋಬೀಸ ಪದದ ಅರ್ಥವನ್ನು ವಿವರಿಸುವಾಗ ಈ ಋಕ್ಕನ್ನೇ ಉದಹರಿಸಿ (ನಿ. ೬-೩೬) **ಹಿಮೇನೋದಕೇನ ಗ್ರೀಷ್ಮಾಂತೇ ಅಗ್ನಿಂ ಘ್ರಂಸಮಹರವಾರಯೇಥಾಂ** ॥ ಬೇಸಿಗೆಯ ಕೊನೆಯಲ್ಲಿ ತಾಪವನ್ನುಂಟುಮಾಡಿ ನೀರನ್ನು ಹೀರುತ್ತಿರುವ ಹಗಲಿನ ತೊಂದರೆಯನ್ನು ತಣ್ಣಗಿರುವ ಮಳೆಯನೀರಿನಿಂದ ತಪ್ಪಿಸಿರುವಿರಿ ಎಂದು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು-

**ಹಿಮಮಿತ್ಯುದಕನಾಮ । ವೃಷ್ಟಿಲಕ್ಷಣೇನೋದಕೇನ । ಯತ್ರಾಸುರೈಃ ಪ್ರಕ್ಷಿಪ್ತಃ ತಮಗ್ನಿಂ ಘ್ರಂಸಂ । ಘೃ ಕ್ಷರಣದೀಪ್ತ್ಯೋರಿತ್ಯಸ್ಯಾಯಂ ಕ್ರಿಯಾಶಬ್ದಃ ನ ತ್ವಹರ್ನಾಮ ।**

ಹಿಮಶಬ್ದಕ್ಕೆ ಉದಕವೆಂದು ಅರ್ಥವು. ಮಳೆಯ ನೀರು ಎಂದು ಅರ್ಥ. ಅತ್ರಿಋಷಿಯು ಅಸುರರಿಂದ ಅಗ್ನಿಯಲ್ಲಿ ಹಾಕಲ್ಪಟ್ಟಾಗ ಅಗ್ನಿಯು ಅವನಿಗೆ ತಾಪವನ್ನು ಉಂಟುಮಾಡಿತು. ಘ್ರಂಸಶಬ್ದವು ಕ್ಷರಣ (ಕರಗುವುದು) ದೀಪ್ತಿ (ಕಾಂತಿಯಾಗಿರುವುದು) ಎಂಬ ಅರ್ಥವುಳ್ಳ ಘೃಧಾತುವಿನಿಂದ ನಿಷ್ಪನ್ನವಾದಕಾರಣ ಕ್ರಿಯಾವಾಚಕವಾಗಿರುವುದು. ಇದು ಅಹರ್ನಾಮವಾಗಿರುವುದಿಲ್ಲ ಎಂದು ಅರ್ಥವನ್ನು ವಿವರಿಸಿರುವರು.

ಪಿತುಶಬ್ದವು—(ನಿ. ೩-೯) ಅನ್ನನಾಮಗಳಲ್ಲಿ ಪಠಿತವಾಗಿರುತ್ತದೆ. **ಪಿತುರಿತ್ಯನ್ನನಾಮ ಪಾತೇರ್ವಾ, ಪಿಬತೇರ್ವಾ ಪ್ಯಾಯತೇರ್ವಾ** (ನಿ. ೯-೨೫) ಪಿತುಶಬ್ದವು ಅನ್ನವಾಚಕವಾಗಿರುವುದು. ಈ ಶಬ್ದವು ರಕ್ಷಣಾರ್ಥಕವಾದ ಪಾ ಧಾತುವಿನಿಂದ ಅಥವಾ ಪಾನಾರ್ಥಕವಾದ ಪಾ ಧಾತುವಿನಿಂದ, ವೃದ್ಧ್ಯರ್ಥಕವಾದ ಪ್ಯಾಯಿ ಧಾತುವಿನಿಂದ ಆಗಲಿ ನಿಷ್ಪನ್ನವಾಗಿರುವುದು ಎಂದು ಯಾಸ್ಕರು ವಿವರಿಸಿರುವುದರಿಂದ ಅಗ್ನಿಯಿಂದ ಸಂತಪ್ತನಾಗಿರುವ ಅತ್ರಿಗೆ ವೃದ್ಧಿಯಾಗುವಂತೆ ಅನ್ನವನ್ನೂ ಬಲಕರವಾದ ಕ್ಷೀರಾದಿಗಳನ್ನೂ ಅಶ್ವಿನೀದೇವತೆಗಳು ಅನುಗ್ರಹಿಸಿದರು ಎಂಬ ವಾಕ್ಯದಿಂದ ಅಗ್ನಿಗೆ ಹವಿರ್ಲಕ್ಷಣ ರೂಪವಾದ ಚರುಪುರೋಡಾಶಾದಿರೂಪವಾದ ಅನ್ನವನ್ನೂ, ದ್ರವದ್ರವ್ಯರೂಪವಾದ ಮತ್ತು ಬಲಕರವಾದ ಆಜ್ಯಕ್ಷೀರಾದಿಗಳನ್ನೂ ಅಗ್ನಿಯನ್ನು ಉದ್ದೇಶಿಸಿ ಯಜ್ಞಮಾಡುವುದಕ್ಕಾಗಿ ವೃದ್ಧಿಯಾಗುವಂತೆ ಅಶ್ವಿನೀದೇವತೆಗಳು ವೃಷ್ಟಿಯನ್ನು ಉಂಟುಮಾಡಿದರೆಂದು—ಪಿತುಮತೀಂ ಊರ್ಜಮಸ್ಮಾ ಅಧತ್ತಂ ಎಂಬ ವಾಕ್ಯದಿಂದ ವಿವೃತವಾಗಿರುವುದು.

**ಋಬೀಸೇ—ಅಪಗತತೇಜಸ್ಕೇ ಅಪಗತಪ್ರಕಾಶೇ, ಪೀಡಾಯಂತ್ರಗೃಹೇ**—ತೇಜಸ್ಸಿನ ಸಂಬಂಧವಿಲ್ಲದ ಪ್ರಕಾಶವಿಲ್ಲದಿರುವ (ಕತ್ತಲೆಯುಳ್ಳ) ಅಪಾಯಕರವಾದ ಯಂತ್ರಗಳಿಂದ ಕೂಡಿದ ಮನೆಯಲ್ಲಿ ಎಂದು ಸಾಯಣರು ವಿವರಿಸಿರುವರು. ನಿರುಕ್ತಕಾರರು—**ಋಬೀಸಮೃಬೀಸಂ—ಋಬೀಸಮಪಗತಭಾಸಂ, ಅಪಹೃತಭಾಸಮಂತರ್ಹಿತಭಾಸಂ ಗತಭಾಸಂ ವಾ । ಋಬೀಸ** ಶಬ್ದವು—ಕಾಂತಿಯಿಲ್ಲದಿರುವುದು. (ಕಪ್ಪಾದ ಕಾಂತಿಯುಳ್ಳದ್ದು) ಅಥವಾ ಕತ್ತಲೆಯಿಂದ

ಕೂಡಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಇದು ಪೃಥಿವೀವಾಚಕವಾಗಿರುತ್ತದೆ ಎಂದು ಹೇಳಿರುವರು. ಮತ್ತು **ಹಿಮೇನಾಗ್ನಿಂ** ಎಂಬ ಈ ಋಕ್ಕನ್ನೇ ಉದಹರಿಸಿ,

> **ಹಿಮೇನೋದಕೇನ ಗ್ರೀಷ್ಮಾಂತೇ ಅಗ್ನಿಂ ಘ್ರಂಸಮಹರವಾರಯೇಥಾಮನ್ನವತೀಂ ಚಾಸ್ಮಾ ಊರ್ಜಮಧತ್ತಮಗ್ನಯೇ ಯೋಽಯಮೃಬೀಸೇ ಪೃಥಿವ್ಯಾಮಗ್ನಿರಂತರೌಷಧಿವನಸ್ಪ-ತಿಷ್ವಪ್ಸು ತಮುನ್ನಿನ್ಯಥುಃ ಸರ್ವಗಣಂ ಸರ್ವನಾಮಾನಂ ಗಣೋ ಗಣನಾದ್ಗುಣಶ್ಚ । ಯದ್ವೃಷ್ಟ ಓಷಧಯ ಉದ್ಯಂತಿ ಪ್ರಾಣಿನಶ್ಚ ಪೃಥಿವ್ಯಾಂ ತದಶ್ವಿನೋ ರೂಪಂ ತೇನೈತೌ ಸ್ತೌತಿ ॥**

(ನಿ. ೬-೩೬)

ಈ ಅಶ್ವಿನೀದೇವತೆಗಳು ಗ್ರೀಷ್ಮಋತುವಿನ ಕೊನೆಯಲ್ಲಿ ಅಗ್ನಿಯಿಂದ ಉಂಟಾದ ತಾಪವು ಹಗಲಿಗೆ ಬಾಧಕವಾಗಬಾರದೆಂದು ವೃಷ್ಟಿಯನ್ನು ಉಂಟುಮಾಡಿ ಅದರಿಂದ ಅಗ್ನಿಗೆ ಪ್ರೀತಿಕರವಾದ ಹವಿಸ್ಸುಗಳು ದೊರಕುವ ಯಜ್ಞಗಳಿಗೆ ಅನುಕೂಲವನ್ನು ಉಂಟುಮಾಡಿರುವರ ತೇಜಸ್ಸಿಲ್ಲದೆ ಕತ್ತಲೆಯುಳ್ಳದ್ದಾದ ಭೂಮಿಯ ಒಳಗೆ ಸೆಕೆಯಿಂದ (ಶಾಖದಿಂದ) ಪಕ್ವವಾಗುವ ಔಷಧಿಗಳು ವನಸ್ಪತಿಗಳು ಇವುಗಳಲ್ಲಿಯೂ ಭೂಮಿಯ ಒಳಭಾಗದಲ್ಲಿಯೂ ನೀರುಗಳಲ್ಲಿಯೂ ಇರುವ, (ಎಲ್ಲಾ ಶಬ್ದಗಳಿಂದ ವಾಚ್ಯನಾದ) ಅಗ್ನಿಯನ್ನು ಪ್ರಕಟವಾಗುವ ಹಾಗೆ ಮಾಡಿರುವರು. ಇಂತಹ ಮಹಿಮೆಯುಳ್ಳ ಅಶ್ವಿನೀದೇವತೆಗಳನ್ನು ಆಯಾಯ ರೂಪಗಳಿಂದ ಇರುವವರೆಂದು ಇಲ್ಲಿ ಸ್ತುತಿಮಾಡಿರುತ್ತದೆ ಎಂದು ವ್ಯಾಖ್ಯಾನಮಾಡಿ ಅರ್ಥವನ್ನು ವಿವರಿಸಿರುವರು.

**ಸರ್ವಗಣಂ**—ಅತ್ರಿಋಷಿಯ ಪರವಾದ ಅರ್ಥದಲ್ಲಿ ಸರ್ವಗಣಶಬ್ದವು ಎಲ್ಲಾ ಇಂದ್ರಿಯಗಳಿಂದಲೂ, ಪುತ್ರರೂ ಪೌತ್ರರು ಇವರುಗಳಿಂದಲೂ ಕೂಡಿರುವವನೆಂದು ಅರ್ಥಬೋಧಕವಾಗಿರುವುದು. ಅಗ್ನಿಯ ಪರವಾದ ಅರ್ಥದಲ್ಲಿ ಭೂಮಿಯಲ್ಲಿ ಮೊಳಕೆಯಾಗಲು ಬಿತ್ತಿದ ಬೀಜಗಳು ಭೂಮಿಯವಳಿಗೆ ಇರುವ ಪಾರ್ಥಿವಾಗ್ನಿಯಿಂದ ಪಕ್ವವಾಗಿ ಓಷಧಿ ವನಸ್ಪತಿರೂಪಗಳಿಂದ ಬೆಳೆಯುವ ಕಾರಣ ಅಗ್ನಿಯು ಇವುಗಳನ್ನು ಹವಿಸ್ಸಿನ ರೂಪದಿಂದ ಭಕ್ಷಿಸುವನಾದ್ದರಿಂದ ವ್ರೀಹ್ಯಾದಿ ಓಷಧಿ ಗಣಗಳಿಂದ ಕೂಡಿದವನಾಗಿರುವನು ಎಂದು ಅರ್ಥವು.

**ಸ್ವಸ್ತಿ**—ಸ್ವಸ್ತಿ ಎಂಬ ಪದವು **ಅವಿನಾಶೋ ಯಥಾ ಭವತಿ ತಥಾ** । ನಾಶವಾಗದೆ ಇರುವ ಹಾಗೆ, ಯಾವ ಅಪಾಯವೂ ಇಲ್ಲದೆ ಒಂದೇ ಸಮನಾಗಿ ಉತ್ತಮವಾದ ರೀತಿಯಿಂದ ಇರುವ ಹಾಗೆ ಎಂದು ಕ್ರಿಯಾವಿಶೇಷಣವೆಂದು ಸಾಯಣರು ಅರ್ಥವನ್ನು ಹೇಳಿರುವರು. ಸ್ವಸ್ತಿ ಎಂಬ ಪದವು (ನಿ. ೩-೨೧) **ಸ್ವಸ್ತೀತ್ಯವಿನಾಶಿನಾಮ ಅಸ್ತಿರಭಿ ಪೂಜಿತಃ ಸು ಅಸ್ತೀತಿ**। ಅವಿನಾಶಿ (ನಾಶವನ್ನು ಹೊಂದದೆ ಇರುವ) ಎಂದು ಅರ್ಥವುಳ್ಳದಾಗಿರುವುದು. ಸು + ಅಸ್ತಿ ಎಂದು ಎರಡು ಪದಗಳು ಸೇರಿರುವ ಈ ಶಬ್ದದಲ್ಲಿ ಅಸ್ತಿ ಎಂಬುವುದು ಪೂಜಾರ್ಥವಾಗಿ ಇರುವುದು ಎಂದು ನಿರುಕ್ತಕಾರರಿಂದ ವಿವೃತವಾಗಿರುವುದು. ಈ ಶಬ್ದವು ಇದೇ ಅರ್ಥದಲ್ಲಿ ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿರುತ್ತದೆ—

> **ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸ ಚ ಸ್ವಾನಃ ಸ್ವಸ್ತಯೇ ॥**

(ಋ. ಸಂ. ೧-೧-೯)

ಇಲ್ಲಿ ಸ್ವಸ್ತಯೇ ಎಂದರೆ ನಮ್ಮ ಕ್ಷೇಮಕ್ಕಾಗಿ ಎಂದು ಅರ್ಥ. ಮತ್ತು **ಪಥ್ಯಾ ಸ್ವಸ್ತಿಃ ಪಂಥಾ ಅಂತರಿಕ್ಷಂ ತನ್ನಿವಾಸಾತ್**। (ನಿ. ೧೧-೪೫) ಎಂದು ಸ್ವಸ್ತಿಪದವನ್ನು ಹೇಳಿ—

ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।
ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥

(ಋ. ಸಂ. ೧೦-೬೩-೧೬)

ಎಂಬ ಈ ಋಕ್ಕನ್ನು ಉದಾಹರಿಸಿ—

ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾಭವತು ದೇವೀಗೋ. ಪ್ತ್ರೀ ದೇವಾನ್ ಗೋಪಾಯತ್ವಿತಿ ದೇವಾ ಏನಾಂಗೋಪಾಯಂತ್ವಿತಿ ವಾ ॥

(ನಿ. ೧೧-೪೫)

ಎಂದು ಸ್ವಸ್ತಿಯ ಮಹಿಮೆಯನ್ನು ವ್ಯಾಖ್ಯಾನಮಾಡಿ ವಿವರಿಸಿರುವರು. ಸ್ವಸ್ತಿ ಎಂಬುವುದು ಅಂತರಿಕ್ಷದಲ್ಲಿ ಇರುವುದು. ಎಲ್ಲಾ ದೇವತೆಗಳಿಗಿಂತಲೂ ಪ್ರಶಸ್ಯವಾಗಿರುವುದು. ಧನವತಿಯಾಗಿರುವುದು. ಉದಕಗಳನ್ನು ವರ್ಷಿಸುವುದು. ಅರಣ್ಯದಲ್ಲಿ ವಾಸಮಾಡುವವನಿಗೂ, ಗೃಹದಲ್ಲಿ ವಾಸಮಾಡುವವನಿಗೂ ಕೂಡ ಅರಣ್ಯದಲ್ಲಿಯೂ ಗೃಹದ ಒಳಗೂ ಹೊರಗೂ ಕೂಡ ರಕ್ಷಣೆಯನ್ನು ಉಂಟುಮಾಡಲಿ. ಪ್ರಕಾಶಿಸುತ್ತಿರುವ ಈ ದೇವಿಯು ದೇವತೆಗಳನ್ನೂ, ದೇವತೆಗಳು ಈ ದೇವಿಯನ್ನೂ ಹವಿಸ್ಸುಗಳ ಅರ್ಪಣೆಯಿಂದ ರಕ್ಷಿಸಲಿ. ಅಥವಾ ಹವಿಸ್ಸುಗಳನ್ನು ಅರ್ಪಿಸುವ ನಮ್ಮನ್ನು ಈ ದೇವಿಯು ರಕ್ಷಿಸಲಿ. ದ್ಯುಸ್ಥಾನದಲ್ಲಿ ಇರುವ ರಶ್ಮಿಗಳು ಈ ದೇವಿಯನ್ನು ರಕ್ಷಿಸಲಿ ಎಂದು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು—

ಸ್ವಸ್ತಿ ಅಂತರ್ಣೀತ ಮತ್ವರ್ಥೋಽತ್ರ ಸ್ವಸ್ತಿಶಬ್ದಃ ಸ್ವಸ್ತಿಮತಂ ಅವಿನಷ್ಟ ಜೀವಂತಮಿತ್ಯರ್ಥಃ

ಸ್ವಸ್ತಿ ಎಂಬ ಶಬ್ದವು ಪ್ರೇರಣಾರ್ಥದಲ್ಲಿ ಇಲ್ಲಿ ಉಪಯುಕ್ತವಾಗಿರುವುದರಿಂದ ಅತ್ರಿಋಷಿಯನ್ನು ಜೀವಂತನನ್ನಾಗಿರುವ ಹಾಗೆ ಅಶ್ವಿನಿದೇವತೆಗಳು ರಕ್ಷಿಸಿದರು ಎಂದು ಅರ್ಥವನ್ನು ವಿವರಿಸಿ ಕುತ್ಸನೂ ಹೀಗೆ ಹೇಳಿರುವನೂ ಎಂದು,

ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋಮ್ಯಾವಂತಮತ್ರಯೇ ।
ಯಾಭಿಃ ಪೃಶ್ನಿಗುಂ ಪುರುಕುತ್ಸಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥

(ಋ. ಸಂ. ೧-೧೧೨-೭)

ಎಂದು ಈ ಋಕ್ಕನ್ನು ಉದಹರಿಸಿರುವರು.

ಇತಿ ಷಟ್‌ತ್ರಿಂಶಃ ಖಂಡಃ ಸಮಾಪ್ತಃ

ಇಲ್ಲಿಗೆ ಮೂವತ್ತಾರನೆಯ ಖಂಡವು ಸಮಾಪ್ತವು

---

ಇತಿ ನಿರುಕ್ತೇ ಪೂರ್ವಷಟ್ಕೇ ಷಷ್ಠೋಽಧ್ಯಾಯಃ

ಇತಿ ನೈರುಕ್ತಪೂರ್ವಾರ್ಧಃ ಸಮಾಪ್ತಃ

ಇಲ್ಲಿಗೆ ಯಾಸ್ಕಮಹರ್ಷಿವಿರಚಿತವಾದ ನಿರುಕ್ತಗ್ರಂಥದಲ್ಲಿ
ಪೂರ್ವಷಟ್ಕವೆಂಬ ಪೂರ್ವಾರ್ಧವು ಸಮಾಪ್ತವಾದುದು.

ಶ್ರೀರಸ್ತು



## ಸಂಕೇತಾಕ್ಷರಗಳ ವಿವರಣೆಯು

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನಿಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್‌ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನುಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದಸಂಹಿತಾ ಇತ್ಯಾದಿ.

---

ಕೆ. ವೆಂಕಟಸುಬ್ಬಯ್ಯ, ಪ್ರೊಪ್ರೈಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.